ಪಂಪಮಹಾಕವಿ ವಿರಚಿತ

# ಪಂಪಭಾರತಂ

ಗದ್ಯಾನುವಾದ

ಎನ್. ಅನಂತರಂಗಾಚಾರ್



ಕನ್ನಡ ಸಾಹಿತ್ಯ ಪರಿಷತ್ತು

ಚಾಮರಾಜಪೇಟೆ :: ಬೆಂಗಳೂರು-೧೮

ಪಂಪಮಹಾಕವಿ ವಿರಚಿತ

# ಪಂಪಭಾರತಂ

## [ವಿಕ್ರಮಾರ್ಜುನ ವಿಜಯಂ]

ಗದ್ಯಾನುವಾದ


ಎನ್. ಅನಂತರಂಗಾಚಾರ್





ಕನ್ನಡ ಸಾಹಿತ್ಯ ಪರಿಷತ್ತು

ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ

ಬೆಂಗಳೂರು- ೫೬೦ ೦೧೮

Pampa Mahakavi vi rachita-**PAMPABHARATAM** (Vikramarjuna Vijayam)
Original text with Prose rendering by : **Sri N. Anantharangachar**
Published by : **Kannada Sahitya Parishat**
Pampa Mahakavi Road, Chamarajapet, Bangalore - 560018
Pages : iv + 787 Price : Rs. **200=00** : **2007**

ಮುದ್ರಣದ ವರ್ಷ : ೨೦೦೭
ಪ್ರತಿಗಳು : ೧೦೦೦
ಬೆಲೆ : ಎರಡು ನೂರು ರೂಪಾಯಿಗಳು



ಪ್ರಕಟಣಾ ಸಮಿತಿ

ಅಧ್ಯಕ್ಷರು
ಪ್ರೊ. ಚಂದ್ರಶೇಖರ ಪಾಟೀಲ (ಚಂಪಾ)
ಸಂಚಾಲಕರು
ಶ್ರೀ ಜರಗನಹಳ್ಳಿ ಶಿವಶಂಕರ್
ಸದಸ್ಯರು
ಶ್ರೀ ಪುಂಡಲೀಕ ಹಾಲಂಬಿ
ಡಾ. ಎಚ್.ಜಯಮ್ಮ ಕರಿಯಣ್ಣ
ಶ್ರೀ ವಿಶ್ವನಾಥ ವಂಶಾಕೃತಮಠ
ಶ್ರೀ ಬಾಲಸುಬ್ರಹ್ಮಣ್ಯ ಕಂಜರ್ಪಣೆ
ಶ್ರೀ ವಿಷ್ಣು ನಾಯ್ಕ
ಪ್ರೊ. ಎಲ್.ಎಸ್. ಶೇಷಗಿರಿರಾವ್
ಸಮ್ಮೇಳನಾಧ್ಯಕ್ಷರು
೭೪ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ
ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ

ಮುದ್ರಣ : ಬಿ. ಎಂ. ಶ್ರೀ. ಅಚ್ಚುಕೂಟ ಆಫ್‌ಸೆಟ್ ಕನ್ನಡ ಸಾಹಿತ್ಯ ಪರಿಷತ್ತು,
ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು - ೧೮

# ಅಧ್ಯಕ್ಷರ ನುಡಿ

ಕನ್ನಡ ಸಾಹಿತ್ಯ ಪರಿಷತ್ತು ಕನ್ನಡ ಭಾಷೆ, ಸಂಸ್ಕೃತಿ, ನಾಡು ನುಡಿಯ ಸಂರಕ್ಷಣೆ, ಸಂವರ್ಧನೆಗಾಗಿ ಶ್ರಮಿಸುತ್ತಿರುವ ಸಂಸ್ಥೆ. ೯೨ ವರ್ಷಗಳ ದೀರ್ಘಕಾಲದ ಇತಿಹಾಸ ಹೊಂದಿರುವ ಪರಿಷತ್ತಿಗೆ ಉತ್ತಮ ಹಾಗೂ ಮೌಲಿಕವಾದ ಸಾಹಿತ್ಯ ಕೃತಿಗಳನ್ನು ಮುದ್ರಣ ಮಾಡುವುದು ಪ್ರಧಾನ ಆಶಯವಾಗಿದೆ. ಈ ಹಿಂದಿನ ಹಲವು ಮಹನೀಯರ ಪ್ರಯತ್ನದ ಫಲವಾಗಿ ಸುಮಾರು ೧೦೦೦ಕ್ಕೂ ಹೆಚ್ಚು ಕೃತಿಗಳನ್ನು ಪರಿಷತ್ತು ಈವರೆಗೆ ಹೊರತಂದಿದೆ.

ಸಾಹಿತ್ಯಾಭಿಮಾನಿಗಳ ವಾಚನಾಭಿರುಚಿಯನ್ನು ಬೆಳೆಸುವುದರ ಮೂಲಕ, ಅಕ್ಷರಜ್ಞಾನವನ್ನುಂಟುಮಾಡುವ ಘನ ಉದ್ದೇಶದಿಂದ ಸಾಹಿತ್ಯದ ವಿವಿಧ ಪ್ರಕಾರಗಳಿಗೆ ಸಂಬಂಧಿಸಿದ ಹಲವು ಗ್ರಂಥಗಳನ್ನು ಪರಿಷತ್ತು ಪ್ರಕಟಿಸಿದೆ. ಇವುಗಳಲ್ಲಿ ಹಳಗನ್ನಡ ಮತ್ತು ನಡುಗನ್ನಡ ಕಾವ್ಯಗಳ ಗದ್ಯಾನುವಾದಗಳು, ಕನ್ನಡ ಭಾಷೆ, ಲಿಪಿ, ಸಂಸ್ಕೃತಿ ಬಗೆಗಿನ ಗ್ರಂಥಗಳು, ಕವಿ-ಕಾವ್ಯ ವಿಚಾರ ಸಂಕಿರಣಗಳ ಪ್ರಬಂಧಗಳು, ಜೀವನ ಚರಿತ್ರೆ, ಜಾನಪದ, ಶಾಸನ, ಆರೋಗ್ಯ, ವಿಜ್ಞಾನ, ಮಕ್ಕಳ ಸಾಹಿತ್ಯ- ಹೀಗೆ ವೈವಿಧ್ಯಮಯ ಪ್ರಕಾರಗಳ ಪುಸ್ತಕಗಳು ಸೇರಿವೆ.

**'ಪಂಪಭಾರತಂ'** ಗ್ರಂಥವು ಕನ್ನಡ ಸಾಹಿತ್ಯ ಪರಿಷತ್ತಿನಿಂದ ಮರು ಮುದ್ರಣವಾಗಿರುವುದು ಹೆಮ್ಮೆಯ ಸಂಗತಿ. ಈ ಗ್ರಂಥವನ್ನು ಕನ್ನಡದ ಜನತೆ ಅತ್ಯಂತ ಆದರದಿಂದ ಸ್ವೀಕರಿಸುತ್ತಾರೆ ಎಂದು ನಿರೀಕ್ಷಿಸಿದ್ದೇನೆ.

ಈ ಕೃತಿಯನ್ನು ಅಚ್ಚುಕಟ್ಟಾಗಿ ಮುದ್ರಿಸಿ ಹೊರತಂದಿರುವ ಬಿ.ಎಂ.ಶ್ರೀ. ಅಚ್ಚುಕೂಟದ ಸಿಬ್ಬಂದಿವರ್ಗಕ್ಕೆ ಹಾಗೂ ಈ ಕಾರ್ಯದಲ್ಲಿ ಸಹಕಾರ ನೀಡಿದ ಎಲ್ಲರಿಗೂ ನನ್ನ ಕೃತಜ್ಞತೆಗಳು.

**ಚಂದ್ರಶೇಖರ ಪಾಟೀಲ (ಚಂಪಾ)**
ಅಧ್ಯಕ್ಷರು

## ಪರಿವಿಡಿ

# ಉಪೋದ್ಘಾತ

ಕನ್ನಡ ಸಾಹಿತ್ಯದ ದೃಷ್ಟಿಯಿಂದ ಕ್ರಿ. ಶ. ೯-೧೦ನೇ ಶತಮಾನಗಳು ಬಹು ಪ್ರಶಂಸನೀಯವಾದುವುಗಳು. ಈ ಶತಮಾನಗಳ ಹಿಂದೆ ಕನ್ನಡ ಸಾಹಿತ್ಯವು ಯಾವುದೋ ಒಂದು ರೀತಿಯಲ್ಲಿದ್ದಿರಬೇಕು. ರಾಜ್ಯದ ಆಡಳಿತಗಳ ಸಂಘಟ್ಟದಿಂದಲೂ ಸಾಮಾಜಿಕ ಜೀವನದ ಚಳುವಳಿಗಳಿಂದಲೂ ಸಾಹಿತ್ಯದಲ್ಲಿ ಕ್ರಮೇಣ ಬದಲಾವಣೆಗಳು ತೋರಿ ಬರತೊಡಗಿದವು. ಒಂದು ಕಾಲವು ಇನ್ನೊಂದು ಕಾಲವಾಗಿ ಪರಿವರ್ತನೆಯಾಗುವಾಗ ಇವೆರಡು ಕಾಲಗಳ ಸಂಘಟ್ಟನೆಗಳಿಂದಲೂ ಪರಸ್ಪರ ಸಮಾಗಮಗಳಿಂದಲೂ ಸಮಾಜದಲ್ಲಿ ಅನೇಕ ಹೊಸವಿಚಾರಗಳು ತಲೆದೋರಿ ತತ್ಫಲವಾಗಿ ಕೃತಿಗಳು ಹೊರಬಿದ್ದು ವ್ಯವಹಾರದಲ್ಲಿ ಬರುವುವು. ಆದರೆ ಈ ಎರಡು ಕಾಲಗಳ ಸಂಧಿಸಮಯದಲ್ಲಿ ಸಿಕ್ಕಿಕೊಂಡಿರುವ ಕಾಲದ ಪರಿಸ್ಥಿತಿಯು ಬಹುವಿಲಕ್ಷಣವಾಗಿರುವುದು. ಜನಾಂಗವು ಪೂರ್ವಕಾಲದ ನಡವಳಿಕೆಗಳನ್ನು ಒಂದೇ ಸಲ ಬಿಟ್ಟು ಬಿಡುವುದಿಲ್ಲ. ಇದಕ್ಕೆ ಹೆಚ್ಚು ಕಾಲ ಬೇಕಾಗುತ್ತದೆ. ಈ ಮಧ್ಯೆ ಪೂರ್ವದ ನಡತೆಗಳನ್ನು ಬಿಡದಂತೆಯೂ ಹೊಸ ಚಳವಳಿಗಳನ್ನು ಸಂಪೂರ್ಣವಾಗಿ ನಿರಾಕರಿಸದಂತೆಯೂ ಹಾಗೂ ಹೀಗೂ ಇರತಕ್ಕದ್ದು ಸ್ವಭಾವ. ಕ್ರಮೇಣ ಹಳೆಯ ಚಾಳಿಗಳೆಲ್ಲ ಮಾಯವಾಗಿ ನವೀನ ಪದ್ಧತಿಗಳು ಸಮಾಜದಲ್ಲಿ ಊರಿಕೊಳ್ಳುವುವು. ಆಮೇಲೆ ಅವುಗಳಿಗೆ ಪೂರ್ಣ ಆಶ್ರಯವು ದೊರೆತು ಅವುಗಳು ಸರ್ವತೋಮುಖವಾಗಿ ಬೆಳೆದು ತತ್ಕಾಲದ ಪ್ರಚಲಿತ ಪದ್ಧತಿಗಳಾಗಿ ಪರಿಣಮಿಸುವುವು. ಕರ್ಣಾಟಕದ ಹತ್ತನೆಯ ಶತಮಾನದ ಸ್ಥಿತಿಯೂ ಹೀಗೆಯೇ. ೯-೧೦ ನೆಯ ಶತಮಾನಗಳ ಹಿಂದೆ ಕರ್ಣಾಟಕ ಸಾಹಿತ್ಯವು ಹೇಗಿತ್ತೆಂಬುದನ್ನು ಖಚಿತವಾಗಿ ನಿರ್ಧರಿಸಲು ಸಾಕಷ್ಟು ಸಲಕರಣೆಗಳು ಇನ್ನೂ ದೊರೆತಿಲ್ಲ. ಲಬ್ಧವಾದ ಕೆಲವು ಗ್ರಂಥಗಳ ಸಹಾಯದಿಂದಲೂ ಶಾಸನಗಳ ನೆರವಿನಿಂದಲೂ ಹೇಗಿದ್ದಿತೆಂಬುದನ್ನು ಊಹಿಸಲು ಅವಕಾಶವಿದೆ.

ಸುಮಾರು ಕ್ರಿ. ಪೂ. ಎರಡನೆಯ ಶತಮಾನದಲ್ಲಿ ಉತ್ತರ ದೇಶದಲ್ಲಿ ತಲೆದೋರಿದ ವೀರಕ್ಷಾಮದ ನಿಮಿತ್ತ ದಕ್ಷಿಣಕ್ಕೆ ವಲಸೆ ಬಂದ ಭದ್ರಬಾಹುವಿನ ತಂಡದವರು ಅಲ್ಲಿಂದ ಮುಂದಕ್ಕೆ ತಮ್ಮ ದಿಗಂಬರಪಂಥವನ್ನು ದಕ್ಷಿಣದಲ್ಲಿ ಬೆಳೆಸಿಕೊಂಡು ಬಂದರು. ಶ್ರವಣ ಬೆಳುಗೊಳವು ಅವರ ಕೇಂದ್ರವಾಯಿತು. ಅಲ್ಲಿಂದ ಅವರು ತಮ್ಮ ಧರ್ಮಪ್ರಸಾರವನ್ನು ಉದಾರವಾಗಿ ಮಾಡತೊಡಗಿದರು. ವೈಧಿಕಧರ್ಮಕ್ಕೆ ನೇರವಿರೋಧವಾಗಿದ್ದ ಬೌದ್ಧ ಜೈನಧರ್ಮಗಳಲ್ಲಿ ಬೌದ್ಧಮತವು ಜನರ ಮೇಲೆ ವಿಶೇಷ ಪ್ರಭಾವಶಾಲಿಯಾಗದೆ ೮-೯ನೆಯ ಶತಮಾನದ ವೇಳೆಗೆ ನಾಮಾವಶೇಷವಾಗಿರಬೇಕು. ಜೈನರಿಗೆ ಹಿಂದೆ, ಕರ್ಣಾಟಕದಲ್ಲಿ ದ್ರಾವಿಡಸಂಸ್ಕೃತಿಯೂ ಒಂದು ಬೌದ್ಧಸಾಹಿತ್ಯವೂ ಇದ್ದಿರಬೇಕು. ಇವೆರಡೂ ಆ ಕಾಲಕ್ಕೆ ಹಿಂದೆಯೇ ಮಾಯವಾಗಿರಬೇಕು. ಜೈನರಾದರೋ ಬೌದ್ಧರಂತಲ್ಲದೆ ತಮ್ಮ ಮತ ಧರ್ಮಗಳನ್ನು ದೇಶಕಾಲಕ್ಕೆ ಅನ್ವಯಿಸುವಂತೆ ಮಾರ್ಪಡಿಸಿಕೊಂಡು ಅವುಗಳಿಂದ ತಾವೂ ಪ್ರಭಾವಿತರಾಗಿ ದೇಶೀಯರ ಮನಸ್ಸನ್ನು ಆಕರ್ಷಿಸಿದರು. ಜೈನ ಸಂನ್ಯಾಸಿಗಳು ವಿರಕ್ತರೂ ಆಚಾರಶೀಲರೂ ಆಗಿದ್ದುದರಿಂದ

ಅವರ ಆದರ ಪೋಷಣೆಗೂ ಅವರ ಸಾಮಂತರ ಮತ್ತು ಅಧಿಕಾರಿಗಳ ಗೌರವಕ್ಕೂ ಪಾತ್ರರಾದರು. ಜೈನರ ಪಂಚಾಣುವ್ರತಗಳೂ, ದಾನಧರ್ಮಗಳೂ, ಪ್ರಜಾಸಮೂಹದ ಆದರ ಗೌರವಗಳಿಗೆ ಪಾತ್ರವಾಗಿ ಅವರ ಜೈನಧರ್ಮವು ಮನರಂಜಕವಾಯಿತು. ವೈದಿಕ ಪಂಥಕ್ಕೆ ಸರಿಹೋಗುವ ಅವರ ಆಚಾರ ವ್ಯವಹಾರಗಳೂ, ಜಾತಿಪದ್ಧತಿಗಳೂ ಕಾಲಾನುಕ್ರಮದಲ್ಲಿ ವೈದಿಕ ಆಕಾರಗಳನ್ನೇ ತಾಳಿದವು. ಜೈನಪಂಡಿತರೂ ಪ್ರಾಕೃತ ಮತ್ತು ಅಪಭ್ರಂಶ ಭಾಷೆಗಳಲ್ಲಿದ್ದ ತಮ್ಮ ಮತಗ್ರಂಥಗಳನ್ನು ಸಂಸ್ಕೃತ ಮತ್ತು ದೇಶೀಯ ಭಾಷೆಗಳಿಗೆ ಅಳವಡಿಸಿ ಪರಿವರ್ತಿಸಿ ತಿಮ್ಮ ಶಾಸ್ತ್ರಗ್ರಂಥಗಳನ್ನು ಆಗ ಪ್ರಚಾರದಲ್ಲಿದ್ದ ಇತರ ಶಾಸ್ತ್ರಗ್ರಂಥಗಳ ಮಾದರಿಯಲ್ಲಿ ರಚಿಸಿ ಇತರ ಪಂಡಿತರೊಡನೆ ವಾಕ್ಯಾರ್ಥಮಾಡಿ ಅವರನ್ನು ಜಯಿಸಿ ಅವರಿಂದ ತಾವೂ ಜಯಿಸಲ್ಪಟ್ಟು ತಮ್ಮ ಶಾಸ್ತ್ರಗ್ರಂಥಗಳನ್ನು ಜೀವಂತವಾಗಿ ಬೆಳಸಿಕೊಂಡು ಬಂದರು.

ಜೈನರು ಕರ್ಣಾಟಕದಲ್ಲಿ ಕಾಲೂರಿದ ಮೇಲೆ ಅವರ ಪ್ರಾಬಲ್ಯವು ಕ್ರಮಕ್ರಮವಾಗಿ ಹೆಚ್ಚುತ್ತ ಹೋಗಿ ಕಾಲಕ್ರಮದಲ್ಲಿ ಕರ್ಣಾಟಕವು ಅವರ ಒತ್ತಂಬಕ್ಕೆ ಒಳಪಟ್ಟು ತನ್ನ ನಿಜವಾದ ದ್ರಾವಿಡಸಂಸ್ಕೃತಿಯನ್ನು ತ್ಯಜಿಸಿರಬೇಕೆಂದು ಹೇಳಬಹುದು. ಮತಾಭಿಮಾನಿಗಳಾದ ಜೈನರು ತಮಗಿಂತ ಹಿಂದೆ ಇದ್ದ ಗ್ರಂಥಗಳನ್ನು ಇಲ್ಲದ ಹಾಗೆ ಮಾಡಿದುದರಿಂದಲೋ ಸರಿಯಾಗಿ ರಕ್ಷಿಸದೇ ಇದ್ದುದರಿಂದಲೋ ಆಗಿನ ಗ್ರಂಥಗಳೆಲ್ಲ ನಾಶವಾಗಿರಬೇಕು. ಆದರೆ ಒಂದು ವಿಷಯವನ್ನು ಮಾತ್ರ ಚೆನ್ನಾಗಿ ಜ್ಞಾಪಕದಲ್ಲಿಟ್ಟುಕೊಂಡಿರ ಬೇಕು. ಅದುವರೆಗಿದ್ದ ಗ್ರಂಥಗಳಲ್ಲಿ ಅನಾದರಣೆಯನ್ನು ತೋರಿದರೂ ಜೈನರು ಕನ್ನಡದಲ್ಲಿ ಅನಾದರಣೆಯನ್ನು ತೋರಲಿಲ್ಲ. ಅವರು ಕನ್ನಡಭಾಷೆಯನ್ನು ಮೆಚ್ಚಿ ಅದನ್ನು ಚೆನ್ನಾಗಿ ವ್ಯಾಸಂಗಮಾಡಿ ಅದರಲ್ಲಿ ಪಾಂಡಿತ್ಯವನ್ನು ಪಡೆದು ತನ್ಮೂಲಕವಾಗಿ ತಮ್ಮ ಮತತತ್ತ್ವಗಳನ್ನು ಜನಸಾಮಾನ್ಯರಿಗೆ ಬೋಧಿಸತೊಡಗಿದರು. ಕರ್ಣಾಟಕದ ದ್ರಾವಿಡಸಂಸ್ಕೃತಿಯ ಸ್ಥಾನದಲ್ಲಿ ತಮ್ಮ ಸಂಸ್ಕೃತಿಯನ್ನು ನೆಲೆಗೊಳಿಸಿದರು. ಮೇಲೆಯೇ ತಿಳಿಸಿರುವಂತೆ ತಮ್ಮ ಗ್ರಂಥಗಳನ್ನು ಸಂಸ್ಕೃತ ಮತ್ತು ದೇಶೀಯ ಭಾಷೆಗಳಿಗೆ ಭಾಷಾಂತರಿಸಿ ಪಂಡಿತಪಾಮರರಿಗೆ ಸುಲಭವಾಗಿ ದೊರಕುವಂತೆ ಮಾಡಿದರು. ಸಮಂತಭದ್ರ ಕವಿಪರಮೇಷ್ಠಿ ಪೂಜ್ಯಪಾದ ಮೊದಲಾದವರು ಸಂಸ್ಕೃತಭಾಷೆಯಲ್ಲಿಯೇ ತಮ್ಮ ಗ್ರಂಥಗಳನ್ನು ರಚಿಸಿ ತಮ್ಮ ಪ್ರಭಾವವನ್ನು ನೆಲೆಗೊಳಿಸಿದಂತೆ ಕಾಣುತ್ತದೆ. ಅವರಿಂದ ಮುಂದೆ ಬಂದವರು ಸಂಸ್ಕೃತ ಕನ್ನಡ ಭಾಷೆಗಳೆರಡನ್ನೂ ಮತಪ್ರಚಾರಕ್ಕಾಗಿ ಉಪಯೋಗಿಸಿಕೊಂಡು ಕರ್ಣಾಟಕವನ್ನು ಸ್ವಾಧೀನಪಡಿಸಿಕೊಂಡರು. ಒಂಬತ್ತನೆಯ ಶತಮಾನದಲ್ಲಿದ್ದ ನೃಪತುಂಗನು ಕನ್ನಡದಲ್ಲಿ ಅನೇಕ ಗದ್ಯಪದ್ಯಾತ್ಮಕ ಗ್ರಂಥಗಳು ತನ್ನ ಕಾಲದಲ್ಲಿದ್ದವೆಂದು ಹೇಳಿ ಕೆಲವು ಕವಿಗಳ ಹೆಸರನ್ನು ಸೂಚಿಸಿದ್ದಾನೆ. ಆದರೆ ಆ ಕವಿಗಳ ಕೃತಿಗಳಾವುವೂ ಉಪಲಬ್ಧವಾಗಿಲ್ಲ.

ಕರ್ಣಾಟಕ ರಾಜಮನೆತನಗಳಲ್ಲಿ ಕದಂಬ, ಗಂಗ ಮತ್ತು ರಾಷ್ಟ್ರಕೂಟರು ಜೈನಧರ್ಮದ ಪ್ರಭಾವಕ್ಕೆ ಒಳಪಟ್ಟವರು. ಅವರು ಜೈನಗುರುಗಳಿಗೂ ಬಸದಿಗಳಿಗೂ ಅನೇಕ ವೃತ್ತಿಗಳನ್ನು ಬಿಟ್ಟಿದ್ದಾರೆ. ಅವರ ಪ್ರಭಾವಕ್ಕೆ ಒಳಗಾಗಿ ತಾವೂ

ಜೈನಮತವನ್ನವಲಂಬಿಸಿದ್ದಾರೆ. ಗಂಗರ ದಂಡನಾಯಕನಾದ ರಾಚಮಲ್ಲನೇ ಶ್ರವಣಬೆಳುಗೊಳದ ಗೊಮ್ಮಟವಿಗ್ರಹವನ್ನು ಸ್ಥಾಪಿಸಿದವನು. ನೃಪತುಂಗ ಅಮೋಘವರ್ಷ ಮತ್ತು ಕೃಷ್ಣರು ವೀರಜೈನರೇ ಆಗಿದ್ದರು. ನಾಲ್ಕನೆಯ ಇಂದ್ರನು ಶ್ರವಣಬೆಳುಗೊಳದಲ್ಲಿ ಸಲ್ಲೇಖನವ್ರತದಿಂದ ನಿರ್ವಾಣಹೊಂದಿದಂತೆ ತಿಳಿದುಬರುತ್ತದೆ. ಹತ್ತನೆಯ ಶತಮಾನದಲ್ಲಿ ಚಾಳುಕ್ಯದೊರೆಯಾದ ತೈಲಪನು ಇಮ್ಮಡಿಕಕ್ಕನನ್ನು ಸೋಲಿಸಿ ದಕ್ಷಿಣದಲ್ಲಿ ರಾಜ್ಯಾಧಿಪತ್ಯವನ್ನು ವಹಿಸಿಕೊಂಡು ಪುನಃ ಚಾಳುಕ್ಯರಾಜ್ಯವನ್ನು ಸ್ಥಾಪಿಸಿದನು. ಚಾಳುಕ್ಯರು ಶೈವರೇ ಆದರೂ ಜೈನಮತದಲ್ಲಿ ಪೂರ್ಣವಾದ ಸಹಾನುಭೂತಿಯನ್ನು ತೋರಿದರು.

ಆದಿಕಾಲದ ಕನ್ನಡಕವಿಗಳು ತಮ್ಮ ಕಾವ್ಯರಚನೆಗೆ ಆ ಕಾಲದ ಸಂಸ್ಕೃತಕಾವ್ಯಗಳನ್ನು ಮಾದರಿಯನ್ನಾಗಿ ಅಂಗೀಕಾರ ಮಾಡಿದರು. ಆಗಿನ ಕಾಲಕ್ಕೆ ಸಂಸ್ಕೃತಸಾಹಿತ್ಯದ ಉನ್ನತಿ ಕಾಲ ಆಗಿ ಹೋಗಿತ್ತು. ಕಾವ್ಯಲಕ್ಷಣಗಳನ್ನು ಕುರಿತು ಅನೇಕ ಗ್ರಂಥಗಳು ತಲೆದೋರಿದ್ದವು. ಅವುಗಳ ಕಾವ್ಯಗಳ ದೋಷಗಳನ್ನು ಖಚಿತವಾಗಿ ನಿಷ್ಕರ್ಷೆ ಮಾಡಿದ್ದವು. ಭಾವದ ತೀವ್ರತೆಯೂ ಸರಳತೆಯೂ ಮಾಯವಾಗಿ ರೀತಿ, ಗುಣಾಲಂಕಾರಗಳಿಗೂ ಕವಿಸಮಯಗಳಿಗೂ ಪ್ರಾಶಸ್ತ್ಯವುಂಟಾಗಿದ್ದಿತು. ಆನಂದವರ್ಧನನ ಧ್ವನಿತತ್ತ್ವವು ಪ್ರತಿಪಾದಿತವಾಗಿದ್ದರೂ ರೂಢಿಗೆ ಬಂದಿರಲಿಲ್ಲವೆಂದು ಕಾಣುತ್ತದೆ. ನೃಪತುಂಗನ ಕಾಲಕ್ಕೆ ಕನ್ನಡಭಾಷೆಯಲ್ಲಿ ಒಂದು ಹೊಸ ಪರಿವರ್ತನೆಯು ತಲೆದೋರಿದ್ದಿತು. ಕಾವ್ಯಗಳೂ ಹೊಸರೀತಿಯಲ್ಲಿ ರಚಿತವಾಗುತ್ತಿದ್ದವು. ಕನ್ನಡದಲ್ಲಿ ಕಾವ್ಯಗಳನ್ನು ಬರೆಯುವ ಕವಿಗಳು ಸಂಸ್ಕೃತಭಾಷೆಯಲ್ಲಿ ತಮಗಿದ್ದ ಹೆಚ್ಚಾದ ಪಾಂಡಿತ್ಯದಿಂದ ಕನ್ನಡಭಾಷೆಯಲ್ಲಿ ಸಂಸ್ಕೃತವನ್ನು ವಿಶೇಷವಾಗಿ ತುಂಬ ತೊಡಗಿದರು. ಆ ಭರದಲ್ಲಿ ಕನ್ನಡನುಡಿಯ ಗಡಿಯು ಮರ್ಯಾದೆಯೂ ಮೀರಿ ಕನ್ನಡಕಾವ್ಯಗಳೆಲ್ಲ ಸಂಸ್ಕೃತ ಮಯವಾಗುವುದಕ್ಕೆ ಪ್ರಾರಂಭವಾದುವು. ಈ ಪರಿಸ್ಥಿತಿಯನ್ನು ನೋಡಿ ನೃಪತುಂಗನು ವ್ಯಸನಪಟ್ಟ. ಕನ್ನಡದಲ್ಲಿ ಸಂಸ್ಕೃತವನ್ನು ಎಷ್ಟರಮಟ್ಟಿಗೆ ಮೇಳನ ಮಾಡಬಹುದು; ಬೆರಸುವಾಗ ಯಾವ ನಿಯಮವನ್ನನುಸರಿಸಬೇಕು ಮೊದಲಾದ ವಿಷಯಗಳನ್ನೊಳಗೊಂಡ 'ಕವಿರಾಜಮಾರ್ಗ'ವೆಂಬ ಲಕ್ಷಣಗ್ರಂಥವೊಂದನ್ನು ರಚಿಸಿದನು. ಕನ್ನಡ ಲಕ್ಷಣಗ್ರಂಥಗಳಲ್ಲಿ ಇದೇ ಮೊತ್ತಮೊದಲನೆಯದು. ಈ ಲಕ್ಷಣಗ್ರಂಥವನ್ನನುಸರಿಸಿ ಹೊಸಮಾದರಿಯ ಗ್ರಂಥಗಳು ಹೊರಬೀಳತೊಡಗಿರಬೇಕು. ಕರ್ನಾಟಕದಲ್ಲಿ ಎಲ್ಲೆಲ್ಲಿಯೂ ಸಾಹಿತ್ಯಾಭಿಮಾನವು ತಲೆದೋರಿ ಹತ್ತನೆಯ ಶತಮಾನದ ವೇಳೆಗೆ ಕನ್ನಡದಲ್ಲಿ ಬೆಳ್ಳಿಯ ಬೆಳಸು ತಲೆದೋರಿತು. ವೀರಾಗ್ರೇಸರರೂ ತ್ಯಾಗವೀರರೂ ಆದ ರಾಜರುಗಳೂ ಅವರ ಮಂತ್ರಿ ಸೇನಾಪತಿಗಳೂ ಕವಿಗಳಿಗೆ ಪೋಷಕವಾದುದಲ್ಲದೆ ಸ್ವಯಂ ಕವಿಗಳಾದರು. ರಾಜರುಗಳೇ ಅಲ್ಲದೆ ಧರ್ಮಾಭಿಮಾನಿಗಳನೇಕರು ಕವಿಗಳಿಗೆ ಆಶ್ರಯದಾತರಾದರು. ಕವಿಗಳು ಕಲಿಗಳೂ ಆಗಿ ತಮಗೆ ದೊರೆತ ಆಶ್ರಯವನ್ನು ಸದುಪಯೋಗಿಸಿಕೊಂಡು ಆಶ್ರಯದಾತರ ಕೀರ್ತಿಯನ್ನು ಚಿರಸ್ಥಾಯಿಯನ್ನಾಗಿ ಮಾಡುವುದಕ್ಕೂ ತಮ್ಮ ಧರ್ಮಋಣವನ್ನು ಪೂರ್ಣಮಾಡುವುದಕ್ಕೂ ಲೌಕಿಕ ಮತ್ತು ಧಾರ್ಮಿಕ ಗ್ರಂಥಗಳನ್ನು ರಚಿಸಿದರು. ಆಗಿನ ಕಾಲದ ಗಂಗ, ರಾಷ್ಟ್ರಕೂಟ,

ಚಾಳುಕ್ಯರಾಜರ ವಿಶೇಷ ಪ್ರೋತ್ಸಾಹದಿಂದ ಕನ್ನಡರತ್ನತ್ರಯರೆಂದು ಪ್ರಸಿದ್ಧರಾದ ಪಂಪ ಪೊನ್ನ ರನ್ನರು ವೀರರಸ ಪ್ರಧಾನವಾದ ರಾಮಾಯಣ ಭಾರತ ಕಥೆಗಳ ಮೂಲಕ ತಮ್ಮ ಆಶ್ರಯದಾತರ ಕೀರ್ತಿಯನ್ನು ಚಿರಸ್ಥಾಯಿಯನ್ನಾಗಿಸಿದರೂ ಶಾಂತಿರಸಪ್ರಧಾನವಾದ ತೀರ್ಥಂಕರರ ಚರಿತ್ರೆಗಳನ್ನು ರಚಿಸಿ ತಾವು ಜಿನಸಮಯದೀಪಕರಾದುದೂ ಇದಕ್ಕೆ ಪ್ರತ್ಯಕ್ಷಸಾಕ್ಷಿ. ಇವರ ಕೃತಿಗಳ ಮಣಿವೆಳಗಿನಿಂದಲೇ ಆ ಕಾಲದ ಸಾಹಿತ್ಯಪ್ರಪಂಚವು ಜಾಜ್ವಲ್ಯ ಮಾನವಾಗಿದೆ–

**ಪಂಪ :** ಕನ್ನಡರತ್ನತ್ರಯರಲ್ಲಿ ಮೊದಲಿಗ ಪಂಪ. ಕಾಲದೃಷ್ಟಿಯಿಂದಲ್ಲದಿದ್ದರೂ ಯೋಗ್ಯತೆಯ ದೃಷ್ಟಿಯಿಂದ ಈತನು ಕನ್ನಡದ ಆದಿಕವಿ. ಅಲ್ಲದೆ ಕವಿವೃಷಭ. 'ಪಸರಿಪ ಕನ್ನಡಕ್ಕೊಡೆಯನೊರ್ವನೆ ಸತ್ಕವಿ ಪಂಪಂ' ಎಂಬ ನಾಗರಾಜನ ಉಕ್ತಿಯು ಅಕ್ಷರಶಃ ಸತ್ಯ. ಈತನ ಕಾವ್ಯಗಳು 'ಮುನ್ನಿನ ಕಬ್ಬಗಳೆಲ್ಲವನು ಇಕ್ಕಿ ಮೆಟ್ಟಿದು' ದಲ್ಲದೆ ಅಲ್ಲಿಂದ ಮುಂದೆ ಬಂದವುಗಳಿಗೆ ಮಾರ್ಗದರ್ಶಕವಾದುವು. ಕನ್ನಡಿಗರ ಸುದೈವದಿಂದ ಪಂಪನು ತನ್ನ ಕಾವ್ಯಗಳಲ್ಲಿ ತನ್ನ ಪೋಷಕನ, ತನ್ನ ಮತ್ತು ತನ್ನ ಕಾವ್ಯಗಳ ವಿಷಯಕವಾದ ಪೂರ್ಣವಿವರಗಳನ್ನು ಕೊಟ್ಟಿದ್ದಾನೆ. ಅವುಗಳ ಸಹಾಯದಿಂದ ವಾಚಕರು ಕೃತಿಗಳ, ಕೃತಿಕರ್ತನ, ಮತ್ತು ಕೃತಿಭರ್ತನ ಪೂರ್ಣ ಪರಿಚಯ ಮಾಡಿಕೊಳ್ಳಲು ಸಾಧ್ಯವಾಗಿದೆ.

ಪೂರ್ವಸಮುದ್ರತೀರದಲ್ಲಿದ್ದ ತೆಲುಗುದೇಶಕ್ಕೆ ಸೇರಿದ ವೆಂಗಿಪಟುವಿನಲ್ಲಿ ವಸಂತ, ಕೊಟ್ಟೂರು, ನಿಡುಗುಂದಿ, ವಿಕ್ರಮಪುರ ಎಂಬ ಅಗ್ರಹಾರಗಳಿದ್ದುವು. ಅವುಗಳಲ್ಲಿ ಅಗ್ರಗಣ್ಯನೂ ಊರ್ಜಿತಪುಣ್ಯನೂ ವತ್ಸಗೋತ್ರೋದ್ಭವನೂ ನಯಶಾಲಿಯೂ ಸಕಲಸಾಸ್ತ್ರಾರ್ಥಮತಿಯೂ ಆದ ಮಾಧವಸೋಮಯಾಜಿ ಎಂಬ ಬ್ರಾಹ್ಮಣನಿದ್ದನು. ಆತನು ಅನೇಕ ಯಜ್ಞಗಳನ್ನು ಮಾಡಿ ಸರ್ವಕ್ರತುಯಾಜಿಯಾದನು. ಆತನ ಯಜ್ಞಕುಂಡಗಳಿಂದ ಹೊರಟ ಹೋಮಧೂಮವು ದಿಗ್ವನಿತೆಯರಿಗೆ ಕೃತಕಕುರುಳಿನಂತೆಯೂ ತ್ರಿಭುವನಕಾಂತೆಗೆ ಕಂಠಾಭರಣದಂತೆಯೂ ಶೋಭಿಸುತ್ತಿದ್ದರೂ ಅವುಗಳಲ್ಲಿ ಆಹುತಿ ಮಾಡಿದ ಪಶುಹತ್ಯಾದೋಷದಿಂದ ಆತನ ಧವಳಕೀರ್ತಿ ಕರಿದಾಯಿತೆಂದು ಕವಿಯು ಕೊರಗು. ಆತನ ಮಗ ಅಭಿಮಾನಚಂದ್ರ. ಇವನು ಅರ್ಥಿಗಳು ಯಾಚಿಸಿದ ಸಾರವಸ್ತುಗಳನ್ನೆಲ್ಲ ನಿರ್ಯೋಚನೆಯಿಂದಿತ್ತು ಗುಣದಲ್ಲಿ ಪುರುಷೋತ್ತಮನನ್ನೂ ಮೀರಿಸಿದನು. ಭುವನಭವನಖ್ಯಾತನಾದ ಅಭಿಮಾನಚಂದ್ರನ ಮಗ ಕೊಮರಯ್ಯ. ಈತನು ವೇದವೇದಾಂಗ ಪಾರಗ, ಪುರಾತನಚರಿತ. ಈತನಿಗೆ ಗುಣಮಣಿರತ್ನಾಕರನೂ ಅಜ್ಞಾನತೋಮೀಕರನೂ ಆದ ಅಭಿರಾಮದೇವರಾಯ ನೆಂಬುವನು ತನಯ. ಈತನು 'ಜಾತಿಯೊಳೆಲ್ಲ ಉತ್ತಮಜಾತಿಯ ವಿಪ್ರಕುಲಂಗೆ ನಂಬಲೇಮಾತೋ ಜಿನೇಂದ್ರ ಧರ್ಮಮೆವಲಂ ದೊರೆ ಧರ್ಮದೊಳೆಂದು ನಂಬಿ ತಜ್ಜಾತಿಯನುತ್ತ ರೋತ್ತರಂಮಾಡಿ ನೆಗಟ್ಟಿದನ್.' ಇತ್ತೀಚೆಗೆ ಲಬ್ಧವಾದ ಪಂಪನ ತಮ್ಮನಾದ ಜಿನವಲ್ಲಭನ ಗಂಗಾಧರಂ ಶಾಸನದಿಂದ ಅಭಿರಾಮದೇವರಾಯನಿಗೆ ಭೀಮಪಯ್ಯನೆಂಬ ಹೆಸರೂ ಇದ್ದಂತೆ ತೋರುತ್ತದೆ. ಪಂಪನ ತಾಯಿ ಅಣ್ಣಿಗೇರಿಯ ಸಿಂಘಣ ಜೋಯಿಸನ ಮಗಳಾದ ಅಬ್ಬಣಬ್ಬೆ. ಇವರ ಮಗನೇ ಕವಿತಾ ಗುಣಾರ್ಣವನಾದ ಪಂಪ. ಪಂಪನಿಗೆ ಜಿನವಲ್ಲಭನೆಂಬ ಒಬ್ಬ ತಮ್ಮನಿದ್ದನು. ಇವನು

ಪಂಪನಂತೆಯೇ ಕವಿಯೂ ಪಂಡಿತನೂ ಆಗಿದ್ದನು. ವೆಂಗಿಪಳುವು ತೆಲುಗುದೇಶದ ಒಂದು ಭಾಗವಾಗಿದ್ದರೂ ಅವನು ಆ ಪ್ರಾಂತ್ಯದ ಅಂದರೆ ವೆಂಗಿಮಂಡಲದ - ವೇಮಲ ವಾಡದ ಚಾಳುಕ್ಯರ ಆಶ್ರಯದಲ್ಲಿದ್ದರೂ ಪಂಪನ ತಾಯಿಯ ತವರೂರಾದ ಅಣ್ಣಿಗೇರಿಯು ಕನ್ನಡದೇಶವೇ ಆದುದರಿಂದ ಪಂಪನಿಗೆ ಮೊದಲಿನಿಂದಲೂ ಕನ್ನಡದೇಶದ ನಿಕಟ ಸಂಬಂಧವಿದ್ದಿರಬೇಕು.

ಪಂಪನು ದುಂದುಭಿಗಭೀರನಿನದ, ದುಂದುಭಿಸಂವತ್ಸರೋದ್ಭವ,

**'ಕದಳೀಗರ್ಭಶ್ಯಾಮಂ**
**ಮೃದು ಕುಟಿಲ ಶಿರೋರುಹಂ, ಸರೋರುಹವದನಂ**
**ಮೃದು ಮಧ್ಯಮತನು, ಹಿತಮಿತ**
**ಮೃದುವಚನಂ, ಲಲಿತಮಧುರಸುಂದರವೇಷಂ ॥**
**ವತ್ಸಕುಲತಿಲಕನ್, ಅಭಿಜನ**
**ವತ್ಸಲನ್, ಅಭಿಮಾನಮೂರ್ತಿ, ಕುಕವಿಯಶೋನಿ**
**ರ್ಮತ್ಸರನ್, ಅಮೃತಮಯೋಕ್ತಿ ಶ**
**ರತ್ಸಮಸುಧಾಂಶುವಿಶದಕೀರ್ತಿವಿತಾನಂ'**

ಆತನು ಲಲಿತಾಲಂಕರಣ, ರಸಿಕ, ಶಿಸ್ತುಗಾರ, ಸ್ವಾಭಿಮಾನಿ ಎಂದರೂ ಒಪ್ಪುತ್ತದೆ. ತಾನು ವನಿತಾಕಟಾಕ್ಷಕುವಲಯವನಚಂದ್ರನಾಗಿದ್ದುದನ್ನು, ಕೇರಳವಿಟೀಕಟೀ ಸೂತ್ರಾರುಣಮಣಿಯಾಗಿದ್ದುದನ್ನು, ಮಲಯ ಮತ್ತು ಆಂಧ್ರ ಯುವತಿಯರು ತನ್ನ ರೂಪಕ್ಕೆ ಮಾರುಹೋಗಿ ತನಗೆ ಅಧೀನರಾಗಿದ್ದುದನ್ನು ಆತನು ನಿಸ್ಸಂಕೋಚವಾಗಿ ಹೇಳಿಕೊಂಡಿದ್ದಾನೆ. ಸ್ತ್ರೀಲಾವಣ್ಯದ ಆಕರ್ಷಣೆಯ ಒಳಗುಟ್ಟು ಆತನಿಗೆ ಗೊತ್ತು. ಆದುದರಿಂದಲೇ ಆತನು ತನ್ನ ಕಾವ್ಯದಲ್ಲಿ 'ಸಾರಂ ಅನಂಗಜಂಗಮಲತಾ ಲಲಿತಾಂಗಿಯರಿಂದಮಲ್ತೆ ಸಂಸಾರಂ' ಎಂದು ಘೋಷಿಸಿರುವುದು. ಸಂಸಾರ ಸಾರೋದಯನಾದ ಆತನಿಗೆ ಭೋಗಸಾಮಗ್ರಿಗಳಾದ ಸ್ನಾನ, ಅನುಲೇಪನ, ಪುಷ್ಪಧಾರಣ, ಭೋಜನ, ತಾಂಬೂಲಚರ್ವಣ, ದುಕೂಲಾಚ್ಛಾದನ, ವನವಿಹಾರ, ಜಲಕ್ರೀಡಾದಿ ಸಮಸ್ತ ವಿಷಯಗಳಲ್ಲಿಯೂ ಅತ್ಯತಿಶಯವಾದ ಅನುಭವವೂ ರಸಿಕತೆಯೂ ಇತ್ತೆಂದು ಕಾಣುತ್ತದೆ. ಈ ಅನುಭವದ ವೈಭವವನ್ನು ನೋಡಬೇಕು 'ಆದಿಪುರಾಣದ' ಹನ್ನೊಂದನೆಯ ಆಶ್ವಾಸದಲ್ಲಿ ಬರುವ ಭರತ ಚಕ್ರವರ್ತಿಯ ಚೈತ್ರಯಾತ್ರಾ ಸಂದರ್ಭದಲ್ಲಿ. ಆದರೂ ಪಂಪನಿಗೆ ಭೋಗದ ಮಿತಿಯೂ ತ್ಯಾಗದ ಹಿತವೂ ಚೆನ್ನಾಗಿ ತಿಳಿದಿತ್ತು. ಧರ್ಮಾರ್ಥಕಾಮಗಳ ಇತಿಮಿತಿಯು ಸ್ಪಷ್ಟವಾಗಿತ್ತು. ಅದನ್ನೇ ಅವನು ಮುಂದಿನ ಪದ್ಯಭಾಗದಲ್ಲಿ ವಿಶದಪಡಿಸಿದ್ದಾನೆ.

**ಧರ್ಮಂ ಪ್ರಧಾನಂ, ಅರ್ಥಂ**
**ಧರ್ಮಾಙ್ಘ್ರಿಪಫಳಂ. ಅವರ್ಕೆ ರಸಮದು ಕಾಮಂ ॥**

ಪಂಪನ ಬಾಲ್ಯದ ವಿವರಗಳೇನೂ ತಿಳಿದಿಲ್ಲ. ಈತನ ವಿದ್ಯಾಭ್ಯಾಸವು ಸರ್ವತೋಮುಖವಾಗಿರಬೇಕು. ರಾಮಾಯಣ, ಮಹಾಭಾರತ, ಮತ್ತು ಜೈನಧರ್ಮ

ಗ್ರಂಥಗಳ ಪರಿಚಯ ಈತನಿಗೆ ವಿಶೇಷವಾಗಿತ್ತು. ಪ್ರಾಕೃತ ಸಂಸ್ಕೃತ ಭಾಷೆಗಳಲ್ಲಿಯೂ ಪೂರ್ಣಪಾಂಡಿತ್ಯವಿತ್ತು. ಸಂಗೀತ, ನೃತ್ಯ, ಶಿಲ್ಪ, ವೈದ್ಯ, ಅರ್ಥಶಾಸ್ತ್ರ, ಕಾಮಶಾಸ್ತ್ರ, ನೀತಿಶಾಸ್ತ್ರ ಮೊದಲಾದುವುಗಳನ್ನು ಇವನು ಅಭ್ಯಾಸ ಮಾಡಿದ್ದಿರಬೇಕು. ಈತನ ಗುರು ಕೊಂಡಕುಂದಾನ್ವಯಕ್ಕೆ ಸೇರಿದ ದೇವೇಂದ್ರಮುನಿ. ಈತನಲ್ಲಿ ಪಂಪನಿಗೆ ಬಹಳಭಕ್ತಿ. ಆದುದರಿಂದಲೇ ಅವನು ತನ್ನನ್ನು ಆದಿಪುರಾಣದಲ್ಲಿ 'ದೇವೇಂದ್ರಮುನೀಂದ್ರವಂದ್ಯ ಪರಮಜಿನೇಂದ್ರಮುಖವಾಕ್ಚಂದ್ರಿಕಾಪ್ರಸರಪ್ರಸಾದೋದೀರ್ಣಸೂಕ್ತಿಕಲ್ಲೋಲ ಮಾಲಾಕೀರ್ಣಕವಿತಾಗುಣಾರ್ಣವಂ' ಎಂದು ಕರೆದುಕೊಂಡಿದ್ದಾನೆ. ಈ ದೇವೇಂದ್ರಮುನಿಯು ಶ್ರವಣಬೆಳಗೊಳದಲ್ಲಿದ್ದನೆಂಬುದು ಶಾಸನಗಳಿಂದ ತಿಳಿದು ಬರುತ್ತದೆ. ಪಂಪನು ವೆಂಗಿಪಳುವಿನಿಂದ ಇಲ್ಲಿಗೆ ಬಂದು ನೆಲಸಿ ಈ ಗುರುವಿನ ಪಾದದಡಿಯಲ್ಲಿ ವಿದ್ಯಾಭ್ಯಾಸ ಮಾಡಿರಬೇಕು. ಈ ಕಾಲದಲ್ಲಿಯೇ ಅವನಿಗೆ 'ಅರಂಕುಸಮಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿದೇಶಮಂ' 'ಕೋಗಿಲೆಯಾಗಿ ಮೇಣ್ ಮರಿದುಂಬಿಯಾಗಿ ಪುಟ್ಟುವುದು ನಂದನದೊಳ್ ಬನವಾಸಿದೇಶದೊಳ್' ಎಂಬುದಾಗಿ ಅವನು ನಾನಾ ರೀತಿ ಹಾತೊರೆಯುವ ಬನವಾಸಿದೇಶದ ಸಂಬಂಧ ವುಂಟಾಗಿರಬೇಕು.

ಪಂಪನ ವಿದ್ಯಾವೈದುಷ್ಯದಿಂದ ಆಕರ್ಷಿತನಾದ, ಆಗ ವೆಂಗಿಮಂಡಲದ ಪಶ್ಚಿಮದ ಕಡೆ ಕನ್ನಡಸೀಮೆಗೆ ಸಮೀಪವಾದ ಲೆಂಬುಳಪಾಟಕವೆಂಬ ಪಟ್ಟಣದಲ್ಲಿ ರಾಜ್ಯವಾಳುತ್ತಿದ್ದ ರಾಷ್ಟ್ರಕೂಟರ ಮೂರನೆಯ ಕೃಷ್ಣನ ಸಾಮಂತರಾಜನಾದ ಅರಿಕೇಸರಿಯು ಪಂಪನನ್ನು ತನ್ನ ಆಸ್ಥಾನಕ್ಕೆ ಪ್ರೀತಿಯಿಂದ ಬರಮಾಡಿಕೊಂಡು ವಿಶೇಷವಾಗಿ ಮನ್ನಿಸಿ ಅವನಿಂದ ಗ್ರಂಥಗಳನ್ನು ಬರೆಯಿಸಿ ಪಂಚರತ್ನಗಳನ್ನೂ ಉಡುಗೊರೆಗಳನ್ನೂ ಧರ್ಮಪುರವೆಂಬ ಶಾಸನಾಗ್ರಹಾರವನ್ನೂ ದಯಪಾಲಿಸಿದನು. ಅಲ್ಲದೆ ತನ್ನ ಗುಣಾರ್ಣವನೆಂಬ ಬಿರುದಿಗೆ ಒಪ್ಪುವಂತೆ ಅವನಿಗೆ 'ಕವಿತಾಗುಣಾರ್ಣವ' ನೆಂಬ ಬಿರುದನ್ನು ಕೊಟ್ಟನು. ಅವನ ಆಶ್ರಯದಲ್ಲಿ ಪಂಪನು ಆತ್ಮತೃಪ್ತಿಗಾಗಿಯೂ ತನ್ನ ಧರ್ಮಋಣದ ಪರಿಹಾರಕ್ಕಾಗಿಯೂ ಶಕವರ್ಷ ೮೬೩ಕ್ಕೆ ಸರಿಯಾದ ಪ್ಲವಸಂವತ್ಸರದಲ್ಲಿ ತನ್ನ ೩೯ನೆಯ ವಯಸ್ಸಿನಲ್ಲಿ ಅಂದರೆ ಕ್ರಿ. ಶ. ೯೪೧ರಲ್ಲಿ ಪ್ರಶಸ್ತವಾದ ತಿಥಿವಾರನಕ್ಷತ್ರಗಳಿಂದ ಕೂಡಿದ ಶುಭಮುಹೂರ್ತದಲ್ಲಿ ಆದಿತೀರ್ಥಂಕರನ ಚರಿತ್ರೆಯಾದ 'ಆದಿಪುರಾಣ'ವನ್ನು ಬರೆದು ಮುಗಿಸಿದನು. ಇದಾದ ಕೆಲವು ದಿನಗಳಾದ ಮೇಲೆ ತನ್ನ ಆಶ್ರಯದಾತನ ಕೀರ್ತಿಸ್ಥಾಪನೆಗಾಗಿ 'ವಿಕ್ರಮಾರ್ಜುನ ವಿಜಯ' ಅಥವಾ 'ಪಂಪಭಾರತ'ವೆಂಬ ಮತ್ತೊಂದು ಗ್ರಂಥವನ್ನೂ ರಚಿಸಿದನು. ಒಂದನ್ನು ಮೂರುತಿಂಗಳುಗಳಲ್ಲಿಯೂ ಮತ್ತೊಂದನ್ನು ಆರು ತಿಂಗಳುಗಳಲ್ಲಿಯೂ ರಚಿಸಿದೆನೆಂದೂ ಒಂದರಲ್ಲಿ ಜಿನಾಗಮವನ್ನೂ ಇನ್ನೊಂದರಲ್ಲಿ ಲೌಕಿಕವನ್ನೂ ಬೆಳಗಿರುವೆನೆಂದೂ ಕವಿಯೇ ಹೇಳಿಕೊಂಡಿದ್ದಾನೆ.

ಆದಿಪುರಾಣ-ನಮಗೆ ದೊರೆತಿರುವ ಪಂಪನ ಕೃತಿಗಳಲ್ಲಿ ಇದು ಮೊದಲನೆಯ ಕೃತಿ. (ಇದಕ್ಕೆ ಹಿಂದೆ ಪಂಪನು ಇನ್ನೂ ಕೆಲವು ಕೃತಿಗಳನ್ನು ರಚಿಸಿರಬಹುದು). ಇದು

ಒಂದು ಧಾರ್ಮಿಕ ಗ್ರಂಥ. ಪ್ರಥಮತೀರ್ಥಂಕರನಾದ ಪುರುದೇವನ ಕಥೆ. ಇದರಲ್ಲಿ ಧರ್ಮದ ಜೊತೆಗೆ ಕಾವ್ಯಧರ್ಮವನ್ನೂ ನಿರೂಪಿಸುತ್ತೇನೆಂದು ಪಂಪನೇ ಹೇಳುತ್ತಾನೆ. ಧರ್ಮಗ್ರಂಥವಾದ ಇದರಲ್ಲಿ ಪುರಾಣದ ಅಷ್ಟಾಂಗಗಳಾದ ಲೋಕಾಕಾರಕಥನ, ನಗರ ಸಂಪತ್ಪರಿವರ್ಣನ, ಚತುರ್ಗತಿಸ್ವರೂಪ, ತಪೋಧ್ಯಾನವ್ಯಾವರ್ಣನ ಮೊದಲಾದುವುಗಳನ್ನು ಒಂದೂ ಬಿಡದೆ ಶಾಸ್ತ್ರೀಯವಾದ ರೀತಿಯಲ್ಲಿ ವರ್ಣಿಸಬೇಕು. ಅಲ್ಲದೆ ಪಂಪನ ಆದಿಪುರಾಣಕ್ಕೆ ಮೂಲ, ಜಿನಸೇನಾಚಾರ್ಯರ ಸಂಸ್ಕೃತ ಪೂರ್ವಪುರಾಣ. ಆ ವಿಸ್ತಾರವಾದ ಪುರಾಣವನ್ನು ಅದರ ಮೂಲರೇಖೆ, ಉದ್ದೇಶ, ಸ್ವರೂಪ-ಯಾವುದೂ ಕೆಡದಂತೆ ಸಂಗ್ರಹಿಸುವುದು ಮಾತ್ರ ಅವನ ಕಾರ್ಯ. ಆದುದರಿಂದ ಈ ಗ್ರಂಥದಲ್ಲಿ ಅವನಿಗೆ ತನ್ನ ಪ್ರತಿಭಾಕೌಶಲವನ್ನು ಪ್ರಕಾಶಿಸಲು ವಿಶೇಷ ಅವಕಾಶವಿಲ್ಲ. ಆದರೂ ಪಂಪನು ತನ್ನ ಕಾರ್ಯವನ್ನು ಬಹುಯಶಸ್ವಿಯಾಗಿ ನಿರ್ವಹಿಸಿದ್ದಾನೆ. ಆತನು ಪೂರ್ವಪುರಾಣಕ್ಕೆ ಬಹುಮಟ್ಟಿಗೆ ಋಣಿ. ಜಿನಸೇನಾಚಾರ್ಯರ ಕಥಾಸರಣಿಯನ್ನೇ ಅಲ್ಲದೆ ಭಾವಗಳನ್ನೂ ವಚನಗಳನ್ನೂ ವಚನಖಂಡಗಳನ್ನೂ ಪದ್ಯಭಾಗಗಳನ್ನೂ ವಿಶೇಷವಾಗಿ ಉಪಯೋಗಿಸಿ ಕೊಂಡಿದ್ದಾನೆ. ಆತನ ಗ್ರಂಥದ ಬಹುಭಾಗ ಪೂರ್ವಪುರಾಣದ ಅನುವಾದವಿದ್ದಂತೆಯೇ ಇದೆ. ಅಷ್ಟಾದರೂ ಅಲ್ಲಿ ಪಂಪನ ಕೈವಾಡ ಪ್ರಕಾಶವಾಗದೇ ಇಲ್ಲ. ಧರ್ಮಾಂಗಗಳನ್ನು ಬಿಟ್ಟು ಕಾವ್ಯಾಂಗಗಳನ್ನು ವರ್ಣಿಸುವ ಸಂದರ್ಭದಲ್ಲಿ ಪಂಪನ ಪ್ರತಿಭಾಪಕ್ಷಿ ಗರಿಗೆದರಿ ಗಗನವಿಹಾರಿಯಾಗುತ್ತದೆ. ತನ್ನ ಸ್ವತಂತ್ರವಿಲಾಸದಿಂದ ವಾಚಕರ ಮೇಲೆ ಪ್ರತ್ಯೇಕವಾದ ಸಮ್ಮೋಹನಾಸ್ತ್ರವನ್ನು ಬೀರಿ ಮಂತ್ರಮುಗ್ಧರನ್ನಾಗಿಸುತ್ತದೆ. ಸಂಗ್ರಹ ಮತ್ತು ಅನುವಾದ ಕಾರ್ಯದಲ್ಲಂತೂ ಆತನು ಅತಿನಿಪುಣ. ಆದಿತೀರ್ಥಂಕರನ ಭವಾವಳಿಗಳನ್ನೂ ಪಂಚಕಲ್ಯಾಣಗಳನ್ನೂ ಕವಿಯು ಬಹು ಎಚ್ಚರಿಕೆಯಿಂದ ಸಂಗ್ರಹಿಸಿ ಸುಂದರವಾಗಿ ವರ್ಣಿಸಿದ್ದಾನೆ. ಜಿನಸೇನನ ಮಹಾಸಾಗರದಿಂದ ಆಣಿಮುತ್ತುಗಳನ್ನು ಆಯುವುದರಲ್ಲಿ ತನ್ನ ಕೌಶಲವನ್ನು ಪ್ರದರ್ಶಿಸಿದ್ದಾನೆ. ಕಥೆಗೆ ನೇರ ಸಂಬಂಧ ಪಡೆದ ಭಾಗಗಳನ್ನೆಲ್ಲ ತನ್ನ ವಿವೇಕಯುತವಾದ ಕತ್ತರಿಪ್ರಯೋಗದಿಂದ ತೆಗೆದುಹಾಕಿ ಗ್ರಂಥದ ಪೂರ್ವಾರ್ಧದಲ್ಲಿ ವಿಸ್ತೃತವಾಗಿರುವ ಭವಾವಳಿಗಳಲ್ಲಿ ಏಕಪ್ರಕಾರವಾಗಿ ಹರಿದು ಬರುವ ಸೂತ್ರಧಾರೆಯನ್ನು ಸ್ಪಷ್ಟೀಕರಿಸಿದ್ದಾನೆ. ಮೊದಲನೆಯ ಐದು ಜನ್ಮಗಳಲ್ಲಿ ಜೀವದ ಒಲವು ಐಹಿಕ ಭೋಗ ಸಾಮ್ರಾಜ್ಯದ ಕಡೆ ಅಭಿವೃದ್ಧಿಯಾಗುತ್ತ ಬಂದು ವ್ರತದಿಂದ ತಪಸ್ಸಿನಿಂದ ಕಡೆಯ ಐದು ಭವಗಳಲ್ಲಿ ಕ್ರಮಕ್ರಮವಾಗಿ ಆ ಭೋಗಾಭಿಲಾಷೆಯು ಮಾಯವಾಗಿ ತ್ಯಾಗದಲ್ಲಿ ಲೀನವಾಗಿ ಅನಂತವಾದ ಮೋಕ್ಷ ಸಿದ್ಧಿಯಾಗುವುದನ್ನು ಕವಿಯು ಬಹುರಮಣೀಯವಾಗಿ ವರ್ಣಿಸಿದ್ದಾನೆ. ಗ್ರಂಥದ ಉತ್ತರಾರ್ಧದಲ್ಲಿ ತೀರ್ಥಂಕರನ ಅನೇಕ ಪುತ್ರರಲ್ಲಿ ಪ್ರಸಿದ್ಧರಾದ ಭರತ ಬಾಹುಬಲಿಗಳ ಕಥೆ ಉಕ್ತವಾಗಿದೆ. ಇದರಲ್ಲಿ ಅಧಿಕಾರಲಾಲಸೆಯ, ಕೀರ್ತಿಕಾಮನೆಯ, ವೈಭವಮೋಹದ ಪರಮಾವಧಿಯನ್ನೂ ಅದರಿಂದ ವೈರಾಗ್ಯ ಹುಟ್ಟಬಹುದಾದ ರೀತಿಯನ್ನೂ ಬಹು ಕಲಾಮಯವಾಗಿ ಚಿತ್ರಿಸಿದ್ದಾನೆ. 'ಭೋಗಂ ರಾಗಮನಾಗಿಸಿದೊಡಂ ಹೃದ್ರೋಗಮನುಂಟುಮಾಡುಗುಂ' 'ಅಮರೇಂದ್ರೋನ್ನತಿ,

ದೊಂದೆ ಮುಕ್ತಿಸ್ಥಾನಂ.' ಅದಕ್ಕೆ ಭೋಗವನ್ನು ತ್ಯಾಗದಲ್ಲಿಯೂ ವೈಭವನ್ನು ವೈರಾಗ್ಯದಲ್ಲಿಯೂ ಲೀನಗೊಳಿಸುವುದೇ ಸಾಧನ 'ಜಿನಧರ್ಮಮಾರ್ಮಂ' 'ಜಿನಚರಣಮೆ ಶರಣಂ' ಇದೇ ಕಾವ್ಯದುದ್ದಕ್ಕೂ ಅನುರಣಿತವಾಗುತ್ತಿರುವ ಪಲ್ಲವಿ. ಈ ಭಾವವನ್ನು ವಾಚಕರ ಹೃದಯದಲ್ಲಿ ಪ್ರವೇಶಮಾಡಿಸುವ ಕಾರ್ಯದಲ್ಲಿ ಕವಿ ಕೃತಕೃತ್ಯನಾಗಿದ್ದಾನೆ. ಈ ಗ್ರಂಥದಲ್ಲಿ ಬರುವ ಚಿತ್ರಪರಂಪರೆ, ಭಾವಗಳ ಒಳತೋಟಿ, ಪಾತ್ರಗಳ ವ್ಯಕ್ತಿತ್ವವರ್ಣನಾ ವೈಖರಿ, ನಾಟಕೀಯತೆ ಇವು ಎಂತಹವನನ್ನಾದರೂ ಮುಗ್ಧಗೊಳಿಸುತ್ತದೆ. ಅದರ ಸ್ವಾರಸ್ಯದ ಸವಿಯನ್ನು ಅನುಭವಿಸುವುದಕ್ಕೆ ಕಾವ್ಯವನ್ನು ಸಿಂಹಾವಲೋಕನಕ್ರಮದಿಂದಲಾದರೂ ಪರಿಚಯಮಾಡಿ ಕೊಳ್ಳುವುದೊಂದೇ ಮಾರ್ಗ.

**ಆದಿಪುರಾಣದ ವಿಹಾರವಿಮರ್ಶೆ :** ವೈರಾಗ್ಯಮೂರ್ತಿಯಾದ ಆದಿ ತೀರ್ಥಂಕರನಿಗೆ ಆ ಪರಿಪಾಕವುಂಟಾಗಬೇಕಾದರೆ ಹತ್ತು ಜನ್ಮಗಳಲ್ಲಿ ತೊಳಲಬೇಕಾಯಿತು. ಮೊದಲನೆಯ ಜನ್ಮದಲ್ಲಿ ಆತನು ಸಿಂಹಪುರದಲ್ಲಿ ಶ್ರೀಷೇಣ ಮತ್ತು ಸೌಂದರಿಯರ ಮಗನಾಗಿ ಹುಟ್ಟಿದನು. ಪ್ರಾಪ್ತವಯಸ್ಕನಾಗಲು ತಂದೆಯು ರಾಜ್ಯವನ್ನು ನ್ಯಾಯಪ್ರಾಪ್ತವಾಗಿ ತನಗೆ ಕೊಡದೆ ಜನಪ್ರಿಯನಾದ ಕಿರಿಯ ಮಗನಿಗೆ ಕೊಟ್ಟನು. ಇದರಿಂದ ಜಯವರ್ಮನಿಗೆ ವಿಶೇಷ ನೋವುಂಟಾಯಿತು. ಈ ಜನ್ಮದಲ್ಲಿ ಪಡೆಯಲಾರದ ವೈಭವವನ್ನು ಮುಂದಿನ ಜನ್ಮದಲ್ಲಾದರೂ ಪಡೆದು ಈಗ ನನಗುಂಟಾದ ಅಭಿಭವವನ್ನು ನೀಗುತ್ತೇನೆಂದು, ಸ್ವಯಂಪ್ರಭುಗುರು ಪಾದಮೂಲದಲ್ಲಿ ಜಿನದೀಕ್ಷೆಯನ್ನು ಪಡೆದು ಘೋರತಪಸ್ಸಿನಲ್ಲಿ ನಿರತನಾದನು. ಆ ಕಾಲಕ್ಕೆ ಸರಿಯಾಗಿ ಅಂತರಿಕ್ಷದಲ್ಲಿ ನಲ್ಲಳೊಡಗೂಡಿ ಸಮಸ್ತ ವೈಭವದಿಂದ ಹೋಗುತ್ತಿದ್ದ ವಿದ್ಯಾಧರನ ವಿಲಾಸಕ್ಕೆ ಮಾರುಹೋಗಿ ತಾನೂ ಅದನ್ನು ಪಡೆಯ ಬೇಕೆಂದಾಸೆಪಟ್ಟನು. ತಪಸ್ಸಿನಿಂದ ಪಡೆಯಬೇಕಾಗಿದ್ದ ಅನಲ್ಪಸುಖವನ್ನು ಮಾರಿ ಅಲ್ಪಸುಖಕ್ಕೆ ಮನಸೋತು ಗತಜೀವಿತವಾಗಿ ಅಳಕಾಪುರದ ಅತಿಬಳರಾಜನಿಗೂ ಆತನ ಮಹಾದೇವಿ ನಯನಮನೋಹರಿ ಮನೋಹರಿಗೂ ಮಹಾಬಳನೆಂಬ ಮಗನಾಗಿ ಹುಟ್ಟಿದನು. ತನು ಸಮಸ್ತ ವಿದ್ಯಾಧರ ವಿದ್ಯಾಸಾಗರನೂ ಅಶೇಷ ಶಾಸ್ತ್ರಪರಿಣತನೂ ಯವ್ವನಪರಿಪೂರ್ಣನೂ ಆಗಲಾಗಿ ಪೂರ್ವಜನ್ಮದ ತಪಸ್ಸಿನ ಫಲದಿಂದ.

> **ಮೊಗಮುತ್ಫುಲ್ಲ ಸರೋಜಹಾಸಿ, ನಯನಂ ನೀಲಾಂಬುಜಸ್ಪರ್ಧಿ, ಬಾ**
> **ಹುಗಳಾಜಾನುವಿಳಂಬಿಗಳ್, ತೊಡೆಗಳುಂ ರಂಭಾಮೃದುಸ್ತಂಭ ಶೋ**
> **ಭೆಗಳಂ ಗೆಲ್ದವು, ವಕ್ಷಮಂಬರಚರ ಶ್ರೀ ಗೇಹಮೆಂಬೊಂದೆ ರೂ**
> **ಪೆ ಗಡಂ, ನೋಡಲೊಡಂ ಮರುಳ್ಗೊಳಿಸುಗುಂ ವಿದ್ಯಾಧರಸ್ತ್ರೀಯರಂ ॥**

ಹೀಗೆ ವಿದ್ಯಾರೂಪಬಲಸಂಪನ್ನನಾದ ಕುಮಾರನಿಗೆ ಅತಿಬಳನು ಯುವರಾಜ ಪಟ್ಟವನ್ನು ಕಟ್ಟಲು.

> **ಲಲಿತಾಲಂಕರಣಪ್ರಸನ್ನ ರಸವದ್ಗೇಯಂಗಳೊಳ್ ಮೂಡುತುಂ.**
> **ಮುಲುಗುತ್ತುಂ, ಖಚರೀಜನಾನನವನಾಂಭೋಜಂಗಳೊಳ್ ಕಂಪನೀ**

**ಬೆಳ್ಗೊಳುತುಂ, ನಂದನರಾಜಿಯೊಳ್ ನಲಿಯುತುಂ, ತದ್‌ರಾಜಹಂಸಂ ನಿರಾ**
**ಕುಳಮೀ ಮಲ್ಲಿಗೆಗಳಿಂದೆ, ಪೊಳ್ತುಗಳೆದಂ, ಸಂಸಾರಸಾರೋದಯಂ ॥**

ಹೀಗಿರಲು ಒಂದು ದಿನ ರಾಜನು ಸಕಲವೈಭವದಿಂದ ಸಭಾಸ್ಥಾನದಲ್ಲಿದ್ದಾಗ ಆತನ ಮಂತ್ರಿಯಾದ ಸ್ವಯಂಬುದ್ಧನೆಂಬುವನು ರಾಜನ ಅಭ್ಯುದಯಕಾಂಕ್ಷಿಯಾಗಿ ಅವನನ್ನು ಕುರಿತು.

**'ನಿನ್ನೀ ವಿದ್ಯಾಧರಲಕ್ಷ್ಮಿ ಪುಣ್ಯಜನಿತಂ ವಿದ್ಯಾಧರಾಧೀಶ್ವರಾ'**
**ಭವವಾರಾಶಿನಿಮಗ್ನರಂ ದಯೆ ದಮಂ ದಾನಂ ತಪಂ ಶೀಲಮೆಂ**
**ಬಿವೆ ಮೆಯ್ಯಾಗಿರೆ ಸಂದ ಧರ್ಮಮೆ ವಲಂ ಪೊತ್ತೆತ್ತುಗುಂ, ಮುಕ್ತಿಪ**
**ರ್ಯವಸಾನಂಬರಮಾನುಷಂಗಿಕಫಲಂ, ಭೂಪೇಂದ್ರ, ದೇವೇಂದ್ರ ರಾ**
**ಜ್ಯವಿಲಾಸಂ ಪೆಱತಲ್ತು, ನಂಬು, ಖಚರಕ್ಷ್ಮಾಪಾಲಚೂಡಾಮಣೀ ॥**

ಎಂದು ಧರ್ಮಪ್ರಭಾವವನ್ನು ತತ್ಫಲಸ್ವಭಾವವನ್ನು ತಿಳಿಸಲು ಅಲ್ಲಿಯೇ ಇದ್ದ ಮಹಾಮತಿ ಸಂಭಿನ್ನಮತಿ ಶತಮತಿಗಳೆಂಬ ಇತರ ಮಂತ್ರಿಗಳು ತಮ್ಮ ಲೋಕಾಯತಿಕ ಯೋಗಾಚಾರ ಮಾಧ್ಯಮಿಕಮತಕ್ಕನುಗುಣವಾಗಿ ಜೀವಾಭಾವವನ್ನೂ ಐಹಿಕ ಸುಖಪಾರಮ್ಯವನ್ನೂ ಬೋಧಿಸಲು ಸ್ವಯಂಬುದ್ಧನು ಅನುಭೂತ ಶ್ರುತದೃಷ್ಟಖೇಚರ ಕಥಾನೀಕಗಳಿಂದಲೂ ಯುಕ್ತಿಯಿಂದಲೂ ಜೀವಸಿದ್ಧಿಯನ್ನು ನಿಶ್ಚಯಿಸಿ ಪರಪಕ್ಷದೂಷಣ ಪುರಸ್ಸರವಾಗಿ ಸ್ವಪಕ್ಷವನ್ನು ಸಾಧಿಸಲು ಮಹಾಬಳನು ಸ್ವಯಂಬುದ್ಧನೇ ತನಗೆ ವಿಶ್ವಾಸಭೂಮಿಯಾಗಲು ಆತನ ಮಾರ್ಗವನ್ನೇ ಅನುಸರಿಸಿ ಅನೇಕ ವರ್ಷಕಾಲ ರಾಜ್ಯಭಾರ ಮಾಡಿ ಕೊನೆಯಲ್ಲಿ ಘೋರತಪಶ್ಚರಣೆಯ ಮೂಲಕ ಪ್ರಾಯೋಪಗಮನವಿಧಿಯಿಂದ ಶರೀರಭಾರವನ್ನಿಳಿಸಿ ಅನಲ್ಪಸುಖನಿವಾಸವೆನಿಸಿ ದೀಶಾನುಕಲ್ಪದಲ್ಲಿ ಲಲಿತಾಂಗದೇವನಾಗಿ ಹುಟ್ಟಿದನು. ಅಲ್ಲಿದ್ದ ಅನೇಕ ಮನೋನಯನವಲ್ಲಭೆಯರಲ್ಲಿ

**'ಅದು ಸುಖದೊಂದು ಪಿಂಡಂ, ಅದು ಪುಣ್ಯದ ಪುಂಜಂ, ಅದಂಗಜಂಗೆ**
**ಬಾಳ್ ಮೊದಲದು ಚಿತ್ತಜಂಗೆ ಕುಲದೈವಂ, ಅಂಗಜಚಕ್ರವರ್ತಿಗೆ**
**ತ್ತಿದ ಪೊಸವಟ್ಟಂ, ಅಂತದು ಮನೋಜನ ಕೈಪಿಡಿ.**

ಎಂಬ ರೂಪಿನ ಗಾಡಿಯಿಂದ ಕೂಡಿದ ಸ್ವಯಂಪ್ರಭೆಯು ಅವನ ಮನಸ್ಸನ್ನು ಸೂರೆಗೊಂಡಳು.

**ನೆಗಟ್ದಮರಾಂಗನಾಜನದ ರೂಪುಗಳೆಲ್ಲಮದೀಕೆಯದೊಂದು ದೇ**
**ಸೆಗೆ ನಿಮಿರ್ವೊಂದು ಪುರ್ವಿನ ನಯಕ್ಕಮುಮರ್ವೊಂದ ದಗುಂತಿಗೊಂದು ಭಂ**
**ಗಿಗೆ ನೆಗಟ್ದೊಂದು ಮೆಲ್ಪಿನ ತೊದಳ್ನುಡಿಗಪ್ಪೊಡಮೆಯ್ದವಾರವೇ**
**ನೊಗಸುವಮೆಂದು ತಳ್ತಗಲನಾಕೆಯನಾ ಲಲಿತಾಂಗವಲ್ಲಭಂ ॥**

ವ್ರತದಿಂದ ಪಡೆದ ಇಂದ್ರಲೋಕವೈಭವವು ಮನಕ್ಕಾಹ್ಲದವನ್ನುಂಟುಮಾಡುವ ಆ ಸತಿಯಿಂದ ಸಾರ್ಥಕವಾಯಿತೆಂದು ಲಲಿತಾಗಂದೇವನು ಸಂತೋಷಪಟ್ಟನು.

**ಅಣಿಮಾದ್ಯಷ್ಟುಗುಣಪ್ರಭೂತವಿಭವಂ, ದೇವಾಂಗನಾ ಮನ್ಮಥ**
**ಪ್ರಣಯಪ್ರೀಣಿತಮಾಸಂ, ಸುರವಧೂಲೀಲಾವಧೂತಪ್ರತಿ**

ಅಣಿಮಾದ್ಯಷ್ಟಗುಣಪ್ರಭೂತವಿಭವಂ, ದೇವಾಂಗನಾ ಮನ್ಮಥ
ಪ್ರಣಯಪ್ರೀಣಿತಮಾನಸಂ, ಸುರವಧೂಲೀಲಾವಧೂತಪ್ರತಿ
ಕ್ಷಣ ಚಂಚಚ್ಚಮರೀರುಹಂ, ಪಟುನಟಪ್ರಾರಬ್ಧಸಂಗೀತಕಂ
ತಣಿದಂ ಸಂತತಮಿಂತು ದಿವ್ಯಸುಖದೊಳ್ ಸಂಸಾರಸಾರೋದಯಂ ॥

ಆದರೆ ಈ ತಣಿವು ಎಷ್ಟು ಕಾಲ! ಆತ್ಮಪುಣ್ಯೋಪಾರ್ಜಿತಾಮರಲೋಕವಿಭವ ಮುಗಿಯುತ್ತ ಬಂದು ಆರು ತಿಂಗಳು ಮಾತ್ರ ಉಳಿಯಿತು. ಲಲಿತಾಂಗದೇವನು ಮುಡಿದಿದ್ದ ಹೂಮಾಲೆ ಬಾಡಿತು. ದೇಹಕಾಂತಿ ಮಸುಕಾಯಿತು. ಆಭರಣಗಳು ಕಾಂತಿಹೀನವಾದವು. ತನ್ನ ಅವಸಾನಕಾಲದ ಸೂಚನೆಯುಂಟಾಯಿತು. ಅಲ್ಲಿಯ ಭೋಗವನ್ನು ಬಿಡಲಾರದೆ ಸುತ್ತಲಿನ ಕಲ್ಪವೃಕ್ಷಗಳನ್ನೂ ವಿಮಾನದ ಮಣಿಕಟ್ಟನ್ನೂ ಭೂಮಿಕೆಗಳನ್ನೂ ತನ್ನನ್ನು ಉಳಿಸಿಕೊಳ್ಳಬೇಕೆಂದು ಬೇಡಿದನು. ಕೊನೆಗೆ ತನ್ನ ಕಾಮಸಾಮ್ರಾಜ್ಯಸರ್ವಸ್ವಭೂತೆಯಾದ ನಲ್ಲಳ ಮುಖವನ್ನು ನೋಡಿ 'ಮೆಯ್ಯಗಳೆರಡಾದೊಡಮೇನ್ ಅಸುವೊಂದೆ ನೋಟ್ಪೊ ಡೆಂಬಂತಿರೆ ಕೂಡಿ ನಿನ್ನೊಡನೆ ಭೋಗಿಸಲೀಯದೆ ಕೆಮ್ಮನೆನ್ನನುಯ್ವಂತಕನೆಂಬ ಬೂತನೆಲೆ ಮಾಣಿಸಲಾಗದೆ ಪೇಟ್ ಸ್ವಯಂಪ್ರಭೆ' ಎಂದು ಅಂಗಲಾಚಿದನು. ಆಗ ಆ ಪ್ರಲಾಪವನ್ನು ಕೇಳಿ ಸಾಮಾನಿಕದೇವರು ಬಂದು

ನಿನಗೊರ್ವಂಗಲ್ಲವಸ್ಥಾಂತರಮಮರಜನಕ್ಕೆಲ್ಲಮೀ ಪಾಂಗೆ, ಕಾರು
ಣ್ಯನಿನಾದಂ ನಿನ್ನನಾದಂ ನಗಿಸುಗುಮೆಟಿದುಯ್ವಂತಕಂಗಿಲ್ಲ, ದೇವಾಂ
ಗನೆಯರ್ ಮಾಱಾಂಪರೇ ಪೇಟ್ ಜನನ ಮೃತಿ ಜರಾತಂಕ ಶೋಕಾಗ್ನಿಯಂದಾ
ವನುಮೀ ಸಂಸಾರದೊಳ್ ಬೇಯದನೊಳನೆ, ಶರಣ್ ಧರ್ಮದಿಂದೊಂದುಮುಂಟೆ॥

'ಅಘವೈರಿಯಲ್ಲದುಟಿದಂ ಗೆಲಲಾರ್ಕುಮೆ ಮೃತ್ಯುರಾಜನಂ' ಎಂದು ಎಚ್ಚರಿಸಲು ಲಲಿತಾಂಗನು ತನ್ನ ಉಳಿದ ಆಯುಸ್ಸನ್ನು ಜಿನಾರ್ಚನೆಯಲ್ಲಿಯೇ ಕಳೆದು ಶರತ್ಸಮಯದ ಮೋಡದಂತೆ ಕರಗಿ ಉತ್ಪಲಖೇಟವೆಂಬ ಪುರದಲ್ಲಿ ವಜ್ರಬಾಹು ಮತ್ತು ವಸುಂಧರೆಯರಿಗೆ ವಜ್ರಜಂಘನೆಂಬ ಮಗನಾಗಿ ಹುಟ್ಟಿದನು. ಸ್ವಯಂಪ್ರಭೆಯೂ ಇನಿಯನಗಲ್ಕೆಯನ್ನು ಸಹಿಸಲಾರದೆ

ಮದನನ ಕೈದುವೆಲ್ಲಿದನ್, ಅನಂಗನ ಕೈಪೊಡೆಯೆಲ್ಲಿದಂ, ವಿಳಾ
ಸದ ಕಣಿಯೆಲ್ಲಿದಂ, ಚದುರ ಪುಟ್ಟಿದನೆಲ್ಲಿದನೆಲ್ಲಿದಂ, ವಿನೋ
ದದ ಮೊದಲೆಲ್ಲಿದಂ, ಸೊಬಗಿನಾಗರಮೆಲ್ಲಿದನ್, ಇಟ್ಟೆಯಾಣ್ಮನೆ
ಲ್ಲಿದನ್, ಎರ್ದೆಯಾಣ್ಮನೆನ್ನರಸನೆಲ್ಲಿದನೋ ಲಲಿತಾಂಗವಲ್ಲಭಂ ॥

ಎಂದು ಪ್ರಾಣವಲ್ಲಭವಿಯೋಗಶೋಕೋದ್ರೇಕವ್ಯಾಕುಳೆಯಾಗಿ ಮಹತ್ತರ ದೇವಿಯರ ಸೂಚನೆಯ ಪ್ರಕಾರ ಮರುಭವದಲ್ಲಿ ಇನಿಯನನ್ನು ಪಡೆಯುವುದಕ್ಕಾಗಿ ಜಿನಪತಿಯನ್ನು ಪೂಜಿಸಿ ಗುರುಪಂಚಕವನ್ನು ನೆನೆದು ಉತ್ಸನ್ನಶರೀರೆಯಾಗಿ ಪುಂಡರೀಕಿಣಿಯಲ್ಲಿ ವಜ್ರದಂತನಿಗೂ ಲಕ್ಷ್ಮಿಮತೀಮಹಾದೇವಿಗೂ ಕಾಮನ ಮಂತ್ರ ದೇವತೆಯಂತೆ ಅತ್ಯಂತ ಸೌಂದರ್ಯದಿಂದ ಕೂಡಿದ ಶ್ರೀಮತಿಯೆಂಬ ಮಗಳಾಗಿ ಹುಟ್ಟಿ ನವಯುವ್ವನಲಕ್ಷ್ಮಿಯನ್ನು ತಾಳಿದಳು. ಹಿಂದಿನ ಜನ್ಮದ ವಾಸನೆ ಶ್ರೀಮತಿ

ವಜ್ರಜಂಘರಿಬ್ಬರನ್ನೂ ಬೆನ್ನಟ್ಟಿ ಬರುತ್ತದೆ. ಇಬ್ಬರೂ ಪರಸ್ಪರ ಸಮಾಗಮಕ್ಕೆ ಹಾತೊರೆಯುತ್ತಾರೆ. ಶ್ರೀಮತಿಯು ತನ್ನ ಹಿಂದಿನ ಜನ್ಮದ ನೆನಪುಗಳನ್ನೆಲ್ಲ ಚಿತ್ರಿಸಿದ್ದ ಚಿತ್ರಪಟದ ಸಹಾಯದಿಂದ ಅವಳ ಸಖಿಯಾದ ಪಂಡಿತೆಯೆಂಬುವಳು ಅವರಿಬ್ಬರನ್ನೂ ಒಟ್ಟುಗೂಡಿಸುತ್ತಾಳೆ. ತಂದೆಯಾದ ವಜ್ರದಂತನು ಮಗಳ ವಿವಾಹವನ್ನು ಅತಿ ವಿಜೃಂಭಣೆಯಿಂದ (ಈ ವಿವಾಹದ ವೈಭವವನ್ನು ಮೂಲದಲ್ಲಿಯೇ ಓದಿ ತೃಪ್ತಿಪಡಬೇಕು). ನಡೆಸಿ ಮಗಳನ್ನು ಅಳಿಯನೊಡನೆ ಕಳುಹಿಸುತ್ತಾನೆ. ಇಲ್ಲಿ ಪಂಪನಿಗೆ ಮಹಾಕವಿ ಕಾಳಿದಾಸನ ಶಾಕುಂತಲದ ನಾಲ್ಕನೆಯ ಅಂಕದ ನಾಲ್ಕು ಶ್ಲೋಕಗಳು ಸ್ಮರಣೆಗೆ ಬರುವುವು. ಅವುಗಳಲ್ಲಿ ಒಂದೆರಡರ ಸಾರವನ್ನು ಬಟ್ಟಿಯಿಳಿಸಿದ್ದಾನೆ. ರಾಜಾಧಿರಾಜನಾದ ವಜ್ರದಂತನು ಅಳಿಯನ ಮೊಗವನ್ನು ನೋಡಿ-

> ಬಗೆದುಂ ನಿನ್ನನ್ವವಾಯೋನ್ನತಿಯನ್, ಇವಳ ಸ್ನೇಹಸಂಬಂಧಮಂ ನೀಂ
> ಬಗೆದುಂ, ಸಂದೆಮ್ಮನಣ್ಪಂ ಬಗೆದುಮಱಿಯದೇನಾನುಮೆಂದಾಗಳುಂ ಮೆ
> ಲ್ಲಗೆ ನೀಂ ಕಲ್ಪಿಪ್ಪುದೆಮ್ಮಂ ನೆನೆದರ್ದೆಗಿಡದಂತಾಗೆ ಪಾಲಿಪ್ಪುದಿಂತೀ
> ಮೃಗಶಾಬೇಕ್ಷಾಕ್ಷಿಯಂ ಮನ್ನಿಸುವುದಿನಿತನಾಂ ಬೇಡಿದೆಂ ವಜ್ರಜಂಘಾ ॥

ಎಂದೂ ಲಕ್ಷ್ಮೀಮತಿಮಹಾದೇವಿಯು ಪ್ರಿಯಾತ್ಮಜೆಯ ಮುಖವನ್ನು ಅತಿಪ್ರೀತಿಯಿಂದ ನೋಡಿ-

> ಮನಮಱಿದಂಜಿ ಬೆರ್ಚಿ ಬೆಸಕೆಯ್, ನಿಜವಲ್ಲಭನೇನನೆಂದೊಡಂ
> ಕಿನಿಸದಿರ್, ಒಂದಿದಗ್ರಮಹಿಷೀಪದದಲ್ಲಿ ಪದಸ್ಥೆಯಾಗು, ನಂ
> ದನರನಗಣ್ಯಪುಣ್ಯಧನರಂ ಪಡೆಯೆಂದಮರ್ದಪ್ಪಿಕೊಂಡು ತ
> ತ್ತನುಜೆಯಗಲ್ಕೆಯೊಳ್ ನೆಗಪಿದರ್, ಬಸಮಲ್ಲದ ಬಾಷ್ಪವಾರಿಯಂ ॥

ಅಲ್ಲದೆ ಅನಂತ ಸಾಮಂತಾಂತಃಪುರಪರಿವಾರದೊಡನೆ ಕೂಡಿ ಅವರನ್ನು ಸ್ವಲ್ಪ ದೂರ ಕಳುಹಿಸಿ ಬರುವ ಸಂದರ್ಭದಲ್ಲಿ

> ಪೊಡವಡುವಪ್ಪಿಕೊಳ್ವ, ನೆನೆಯುತ್ತಿರಿಮೆಂಬ, ಸಮಸ್ತವಸ್ತುವಂ
> ಕುಡುವ, ಪಲರ್ಮೆಯಿಂ ಪರಸಿ ಸೇಸೆಯನಿಕ್ಕುವ, ಬುದ್ಧಿವೇೞ್ವ, ಕೈ
> ಯೆಡೆ ನಿಮಗೆಂದೊಡಂಬಡಿಪ, ನಲ್ಲರಗಲ್ಕೆಗೆ ಕಣ್ಣನೀರ್ಗಳಂ
> ಮಿಡಿವ ಬಹುಪ್ರಕಾರಜನಸಂಕಟಮೊಪ್ಪಿದುದಾ ಪ್ರಯಾಣದೊಳ್

ಶ್ರೀಮತಿವಜ್ರಜಂಘರು ತಮ್ಮೂರನ್ನು ಸೇರಿದರು. ಅತಿವೈಭವದಿಂದ ಅನೇಕ ಸಮಸ್ತ ಭೋಗಗಳನ್ನು ಅನುಭವಿಸಿದರು. ಹೀಗಿರುವಲ್ಲಿ ಒಂದು ದಿನ ರಾತ್ರಿ ಶಯ್ಯಾಗೃಹದಲ್ಲಿ ಈ ದಂಪತಿಗಳು ಮಲಗಿರುವಾಗ ಸೆಜ್ಜೆವಳನು ಕೇಶಸಂಸ್ಕಾರಕ್ಕೆಂದು ಧೂಪಗುಂಡಿಗೆಯಲ್ಲಿ ಅಳವರಿಯದೆ ವಾಸನಾದ್ರವ್ಯವನ್ನಿಕ್ಕಿ ಆ ಸೆಜ್ಜೆವನೆಯ ಗವಾಕ್ಷಜಾಲಗಳನ್ನು ತೆರೆದಿಡಲು ಮರೆತುಬಿಟ್ಟನು. ಇದರ ಹೊಗೆ ಸುತ್ತಿ ಶ್ರೀಮತಿ ವಜ್ರಜಂಘರು ಪ್ರಾಣ ಬಿಟ್ಟರು.

> ಮೊದಲೊಳ್ ನೀಳ್ದು ಪೊದಟ್ಟು ಪರ್ವಿ ಪದಪಂ ಕೈಕೊಂಡು ಮಂದೈಸಿ ಮಾ
> ಣದೆ ತನ್ನಂದದೊಳೇಟಗೆಗುಂದದೆ ನಿರುದ್ಧೋಚ್ಛ್ವಾಸಮಪ್ಪನ್ನೆಗಂ
> ಪುದಿದಾ ದಂಪತಿಯಂ ಪುದುಂಗೊಳಿಸಿ, ಲೋಕಾಶ್ಚರ್ಯಮಂ ಮಾಡಿ ಕೊಂ
> ದುದು ಕೃಷ್ಣಾಗರುಧೂಪಧೂಮನಿವಹಂ ಕೃಷ್ಣೋರಗಂ ಕೊಲ್ವವೊಲ್ ॥

**ಭೋಗಾಂಗಮಾಗಿಯುಂ ಕೃ**
**ಷ್ಣಾಗರುಧೂಪಂ ಮುಸುಂಕಿ ಕೊಂದಿಕ್ಕಿದುದಾ**
**ಭೋಗಿಗಳನಿಂತು ಸಂಸೃತಿ**
**ಭೋಗಂಗಳ್ ಭೋಗಿಭೋಗದಿಂ ವಿಷಮಂಗಳ್ ॥**

**ಅನಿತು ಸುಖದನಿತು ಭೋಗದ**
**ಮನುಜಯುಗಂ ನೋಡೆ ನೋಡೆ ತತ್‌ಕ್ಷಣದೊಳ್ ತಾ**
**ನಿನಿತೊಂದು ದೆಸೆಯನೆಯ್ದಿದುದು**

ಆದರೂ 'ತೋಳಂ ಸಡಿಲಿಸದೆ ಆ ಪ್ರಾಣವಲ್ಲಭರ್ ಪ್ರಾಣಮನಂದೊಡೆಗಳೆದರ್ ಓಪರೋಪರೊಳೊಡಸಾಯಲ್‌ಪಡೆದರ್' ಇನ್ನಿದಕ್ಕಿಂತ ಭಾಗ್ಯವೇನು ಬೇಕು'?

ಹೀಗೆ ಸಹಮರಣದಿಂದ ಸತ್ತ ಶ್ರೀಮತಿವಜ್ರಜಂಘರ ಪ್ರೇಮಸಂಬಂಧ ಮುಂದಿನ ಜನ್ಮದಲ್ಲಿಯೂ ಅನುವರ್ತಿಸುತ್ತದೆ. ಅವರ ಭೋಗಕಾಂಕ್ಷೆಯೂ ಕಡಿಮೆಯಾಗುವುದಿಲ್ಲ. ಪುನಃ ಭೋಗಭೂಮಿಯಲ್ಲಿಯೇ ಹುಟ್ಟುತ್ತಾರೆ. ಹಿಂದಿನ ಸ್ವಯಂಬುದ್ಧನೇ ಪ್ರೀತಿಂಕರನೆಂಬ ರೂಪದಿಂದ ಬಂದು

**ಸೂಕ್ತಂ ಭವ್ಯಜನಪ್ರ**
**ವ್ಯಕ್ತಂ ಜೈನಾಗಮೋಕ್ತಮಿಂ ನಿನಗೆ ಮದೀ**
**ಯೋಕ್ತಮಿದೆರ್ದೆಯೊಳ್ ನೆಲಸುಗೆ**
**ಮುಕ್ತಿಶ್ರೀಹಾರವಿಭ್ರಮಂ ಸಮ್ಯಕ್ತ್ವಂ ॥**
**ಎಂದೆಂದೊಡಮ್ಮ ನೀನುಂ**
**ಸಂದಯಮಣಮಲ್ಲದಿದನೆ ನಂಬಿನಿತಂ ನಿ ।**
**ನ್ನೊಂದಿದ ನಾರೀರೂಪದ**
**ದಂದುಗದೊಳ್ ತೊಡರ್ದು ಬಡದೆ ನವೆಯುತ್ತಿರ್ಪ್ಯ ॥**

ಎಂದು ಪ್ರತಿಬೋಧಿಸುತ್ತಾನೆ. ಸಮ್ಯಕ್ತ್ವದ ಮಹಿಮೆಯಿಂದ ಶ್ರೀಮತಿ ವಜ್ರಜಂಘರು ತಮ್ಮ ಭೋಗತೃಷ್ಣೆಯನ್ನು ಕಡಿಮೆಮಾಡಿಕೊಂಡು ಬೇರೆಬೇರೆ ಜನ್ಮಗಳಲ್ಲಿ ಹುಟ್ಟಿ ತಪಶ್ಚರ್ಯೆಗಳಿಂದಲೂ ವ್ರತೋಪವಾಸಾದಿಗಳಿಂದಲೂ ಸಂಸ್ಕೃತರಾಗಿ ಪೂರ್ಣವಾಗಿ ಭೋಗವಿಮುಖರಾಗುತ್ತಾರೆ. ಕೊನೆಗೆ ವಜ್ರಜಂಘನು ಮಹಾಬಳನಿಂದ ಒಂಬತ್ತನೆಯ ಭವದಲ್ಲಿ ಅಹಮಿಂದ್ರನಾಗಿ ಸರ್ವಾರ್ಥಸಿದ್ಧಿಯೆಂಬ ಸ್ವರ್ಗದಿಂದಿಳಿದು ಬಂದು ತೀರ್ಥಂಕರನಾಗಿ ಜನಿಸಲು ಹದಿನಾಲ್ಕನೆಯ ಮನುವಾದ ನಾಭಿರಾಜನ ಪತ್ನಿಯಾದ ಮರುದೇವಿಯ ಗರ್ಭದಲ್ಲಿ ಸೇರುತ್ತಾನೆ. ತೀರ್ಥಂಕರನುದಯಿಸುವುದನ್ನು ಇಂದ್ರನು ತಿಳಿದು ಅಯೋಧ್ಯಾಪುರವನ್ನು ನಿರ್ಮಿಸಿ ಆರುತಿಂಗಳು ಮುಂಚೆಯೇ ವಸುಧಾರೆಯನ್ನು ಕರೆಯಿಸಿ ದೇವತಾಸ್ತ್ರೀಯರಿಂದ ಜಿನಾಂಬಿಕೆಯ ಗರ್ಭಸಂಶೋಧನವನ್ನು ಮಾಡಿಸಿರುತ್ತಾನೆ. ತೀರ್ಥಂಕರನುದಯಿಸುವನು. ಇಂದ್ರನಿಗೆ ಆಸನಕಂಪವಾಗುವುದು. ಸೌಧರ್ಮೇಂದ್ರನು ಶಚಿಯ ಮೂಲಕ ತಾಯಿಯ ಹತ್ತಿರ ಮಾಯಾಶಿಶುವನ್ನಿಡಿಸಿ ಜಿನಶಿಶುವನ್ನು ಐರಾವತದ ಮೇಲೇರಿಸಿಕೊಂಡು ಹೋಗಿ ಸಕಲಾಮರರೊಡನೆ ಮೇರುಪರ್ವತದಲ್ಲಿ ಜನ್ಮಾಭಿಷೇಕವನ್ನು ಮಾಡಿ ಆನಂದನೃತ್ಯವನ್ನು ಮುಗಿಸಿ ಮಗುವನ್ನು

ಅಯೋಧ್ಯೆಗೆ ಕರೆದುತಂದು ತಾಯಿತಂದೆಗಳಿಗೊಪ್ಪಿಸಿ ವೃಷಭಸ್ವಾಮಿಯೆಂದು ಹೆಸರಿಟ್ಟು ತನ್ನ ಲೋಕಕ್ಕೆ ತೆರಳುವನು. ಬಾಲಕನು ಸಹೋತ್ಪನ್ನಮತಿಶ್ರುತಾವಧಿಜ್ಞಾನ ಬೋಧನಾದುದರಿಂದ ಪ್ರತ್ಯಕ್ಷೀಕೃತ ಸಕಲವಾಙ್ಮಯನಾಗಿ ಪ್ರತಿದಿನಪ್ರವೃದ್ಧಮಾನ ತನೂವಯೋವಿಭವನಾಗಲು ಅವನ ಯವ್ವನವು ಅತಿಮನೋಹರವಾಗುವುದು. ಆದರೂ ಚಂಚಲೆಯಾದ ರಾಜ್ಯಲಕ್ಷ್ಮಿಯಲ್ಲಿಯೂ ಸಾರವಿಲ್ಲದ ಸಂಸಾರದಲ್ಲಿಯೂ ಪರಮನಿಗೆ ಅನಾದರಣೆವುಂಟಾಯಿತು. ಆಗ ತಂದೆಯಾದ ನಾಭಿರಾಜನು ಮಗನ ಪರಿಪೂರ್ಣಯವ್ವನಶ್ರೀಯನ್ನು ನೋಡಿ

**ಇದು ದಲ್, ಅವಸ್ತುವೆನ್ನದೆ, ಮದುಕ್ತಿಯನೊಯ್ಯನೆ ಕೇಳ್ವು, ದಿವ್ಯಚಿ**
**ತ್ತದೊಳವಧಾರಿಸೆಂತೆನೆ ಜಗದ್ಗುರು ಲೋಹಿತಾರ್ಥದಿಂದೆ ಸ**
**ಲ್ವುದು ವಲಮಿಂತಿದಂ ಬಗೆದು ಪುತ್ರಕಳತ್ರಪರಿಗ್ರಹಕ್ಕೆ ಮಾ**
**ಣದೆ ಬಗೆದರ್ಪುದು, ಒಲ್ಲೆನಿದನೆಂದೊಡೆ ಸೃಷ್ಟಿಯೆ ಕೆಟ್ಟುಪೋಗದೇ ॥**

**ಶಾಂತಾತ್ಮ ಮದುವೆನಿಲ್ ನೀ**
**ನಿಂತೆನ್ನ ಗೃಹಸ್ಥ ಧರ್ಮದಿಂದಂ ನೀನೆಂ**
**ತಂತೆ ಸಲೆ ನೆಗಳೆ ಜಗತೀ**
**ಸಂತತಿ ನಿನ್ನ ಧರ್ಮಸಂತತಿ ನಿಲ್ಕುಂ ॥**

ಎಂದು ಒತ್ತಾಯಪಡಿಸಲು ಆತನ ಉಪರೋಧಕ್ಕಾಗಿಯೂ ಪ್ರಜಾನುಗ್ರಹಕ್ಕಾಗಿಯೂ ಯಶಸ್ವತೀ ಮತ್ತು ಸುನಂದೆ ಎಂಬ ಎರಡು ಕನ್ಯಾರತ್ನಗಳನ್ನು ಪುರುದೇವನು ವರಿಸುವನು. ಮೊದಲನೆಯವಳಲ್ಲಿ ಭರತನೂ ಬ್ರಹ್ಮಿಯೂ ಎರಡನೆಯವಳಲ್ಲಿ ಬಾಹುಬಲಿ ಸೌಂದರಿಯರಲ್ಲದೆ ಒಟ್ಟು ನೂರುಪುತ್ರರೂ ಇಬ್ಬರು ಪುತ್ರಿಯರೂ ಜನಿಸಿದರು. ವೃಷಭನಾಥನು ಇವರೆಲ್ಲರಿಗೂ ಮತ್ತು ಇತರರಿಗೂ ಸಮಸ್ತ ವಿದ್ಯೆಗಳನ್ನು ಉಪದೇಶಮಾಡಿ ಕೃತಯುಗವನ್ನು ಪ್ರಾರಂಭಿಸಿ ರಾಜ್ಯಾಭಿಷಿಕ್ತನಾಗಿ ವಿವಿಧ ರಾಜವಂಶಗಳನ್ನು ಸ್ಥಾಪಿಸಿ ಅನೇಕ ಸಹಸ್ರವರ್ಷಗಳ ಕಾಲ ಆಳಿ ಭೂಮಂಡಲದಲ್ಲಿ ಸಕಲ ಸಂಪತ್ಸಮೃದ್ಧಿಯನ್ನುಂಟುಮಾಡಿದನು. ಆಗ ಆದಿದೇವನ ಪರಿನಿಷ್ಕ್ರಮಣ ಕಾಲ ಪ್ರಾಪ್ತವಾಯಿತು. ಇದನ್ನರಿತು ದೇವೇಂದ್ರನು ಸಂಗೀತ ಮತ್ತು ನೃತ್ಯಪ್ರಸಂಗದಿಂದ ಪ್ರತಿಬೋಧಿಸಲು ಸಕಲ ದೇವಾನೀಕದ ಜೊತೆಯಲ್ಲಿ ಬಂದು ಪರಮನ ಅಪ್ಪಣೆಯನ್ನು ಪಡೆದು ದೇವಗಣಿಕೆಯಾದ ತನ್ನಿಂದ ನಿಚ್ಚವೂ ಮೆಚ್ಚನ್ನು ಪಡೆಯುತ್ತಿರುವ ನೀಳಾಂಜನೆಯೆಂಬುವಳ ನೃತ್ಯಕ್ಕೆ ಏರ್ಪಡಿಸಿದನು. ಇಲ್ಲಿ ಪಂಪನ ಕೈವಾಡ ಅತ್ಯದ್ಭುತವಾಗಿದೆ. ಇಂತಹ ಚಿತ್ರ ಅಖಂಡ ಕನ್ನಡಸಾಹಿತ್ಯದಲ್ಲಿ ಅತಿ ವಿರಳ. ಇದನ್ನು 'ಆದಿಪುರಾಣ'ದ ಸಾರವೆನ್ನಬಹುದು.

**ಮದನನ ಬಿಲ್ಲೊಳಮಾತನ**
**ಸುದತಿಯ ಬೀಣೆಯೊಳಮೆಸೆವ ದನಿಯುಮನಿಟೆಸಿ**
**ತ್ತಿದು ದಲ್, ಎನಿಸಿದುದು, ಸುರತೂ**
**ರ್ಯದ ರವದೊಳ್ ಪುದಿದ ಸುರವಧೂಗೀತರವಂ ॥**

ಅಮರ್ದಿನ ಮಱೆಯೊಳಗೆಸೆದಪು
ದಮೃತಾಂಬುನಿನದಮೆನಿಸಿ ಸಭೆಯಿನಹೋ ಗೀ
ತಮಹೋ ವಾದಿತಮೆನಿಸಿದು
ದಮರೀಜನಗೀತಮಮರವಾದಿತಮಾಗಳ್ ॥

ಕಲಗೀತಂ ವಾದ್ಯಂ ನೃತ್ಯ
ಲೀಲೆ ಪೆಱರ್ಗೊಪ್ಪದೀಕೆಗಲ್ಲದೆ....

ಎನಿಸಿದ ನೀಲಾಂಜನೆ ಕ
ರ್ಬಿನ ಬಿಲ್ಲಂ ಮಸೆದ ಮದನನಲರ್ಗಣೆ ಬರ್ದುಂಕಿ
ತ್ತೆನಿಸುತ್ತೊಳಪೊಕ್ಕಳ್ ಭೋಂ
ಕನೆ ನಿಖಿಲಜನಾಂತರಂಗಮಂ ರಂಗಮುಮಂ ॥

ರಸ ಭಾವಾನುನಯಂಗಳ್
ಪೊಸವೆ, ಪುಗಿಲ್ ಪೊಸವೆ, ಚೆಲ್ಲಿಗಳ್ ಪೊಸವೆ, ನಯಂ
ಪೊಸವೆ, ಕರಣಂಗಳುಂ ನಿ
ಪ್ಪೊಸವೆನೆ ಪೊಸಯಿಸಿದಳಾಕೆ ನಾಟ್ಯಾಗಮಮಂ ॥

ಕುಡುಪುಂ ಕಯ್ಯುಂ ಜತಿಯೊಳ್
ತಡವಡವರೆ ವಾದಕಂಗೆ ಪುರ್ವಿಂ ಜತಿಯಿಂ
ತೊಡರದೆ ನಡೆಯಿಸಿ ಪುರ್ವನೆ
ಕುಡುಪೆನೆ ನರ್ತಕಿಯೆ ಸಭೆಗೆ ವಾದಕಿಯಾದಳ್ ॥

ಸುರಗಣಿಕಾನಾಟ್ಯರಸಂ
ಪರಮನ ಚಿತ್ತಮುಮನೆಯ್ದೆ ರಂಜಿಸಿದುದು ವಿ
ಸ್ಫುರಿತಸ್ಫಟಿಕಂ ಶುದ್ಧಾಂ
ತರಂಗಮೇನನ್ಯರಾಗದಿಂ ರಂಜಿಸದೇ ॥

ಆದರೇನು? ಆ ಮಧುರಾಕಾರೆಗೂ ಆಯುರಂತವು ತಲೆದೋರಿತು. ಮಿಂಚಿನ ಹಾಗೆ ಇದ್ದಕ್ಕಿದ್ದ ಹಾಗೆಯೇ ಅದೃಶ್ಯಳಾದಳು. ಒಡನೆಯೇ ಇಂದ್ರನು ರಸಭಂಗಭಯದಿಂದ ಅವಳಂತೆಯೇ ಇದ್ದ ಮತ್ತೊಬ್ಬಳನ್ನು ಒಬ್ಬರಿಗೂ ತಿಳಿಯದಂತೆ ಏರ್ಪಡಿಸಿದನು. ಸಭೆಯವರೆಲ್ಲರೂ ನೀಳಾಂಜನೆಯೇ ಅಭಿನಯಿಸುತ್ತಿರುವಳೆಂದು ಭ್ರಾಂತಿಯಿಂದ ನೋಡುತ್ತಿದ್ದರು. ಆದರೆ ವಿದ್ಯಾನಿಳಯನಾದ ಪುರುದೇವನು ತಕ್ಷಣ ಅದನ್ನರಿತು ದೇಹಾನಿತ್ಯತೆಗೆ ಆಶ್ಚರ್ಯಪಟ್ಟು

ನಾರೀರೂಪದ ಯಂತ್ರಂ
ಚಾರುತರಂ ನೋಡೆನೋಡೆ ಕರಗಿದುದೀ ಸಂ
ಸಾರದನಿತ್ಯತೆ ಮನದೊಳ್
ಬೇರೂಱಿದುದೀಗಳಿಂತಿದಂ ಕಡೆಗಣಿಪೆಂ ॥

ಕೋಟಿ ತೆಱದಿಂದಮೆಸೆವೀ
ನಾಟಕಮಂ ತೋಱೆ ಮಾಣ್ದಳಿಲ್ಲಳ್ ಬಗೆಯೊಳ್
ನಾಟುವಿನಮಮರಿ, ಸಂಸೃತಿ
ನಾಟಕಮುಮನೆನಗೆ ನೆಱೆಯೆ ತೋಱಿದಳೀಗಳ್

**ತನು ರೂಪ ವಿಭವ ಯವ್ವನ**
**ಧನ ಸೌಭಾಗ್ಯಾಯುರಾದಿಗಳ್ಗೆಣೆ ಕುಡುಮಿಂ**
**ಚನ ಪೊಳಪು ಮುಗಿಲ ನೆಬಲಿಂ**
**ದ್ರನ ಬಿಲ್ ಬೊಬ್ಬುಳಿಕೆಯುರ್ವು ಪರ್ವಿದ ಭೋಗಂ ॥**

**ಕಷ್ಟಂ ದುಃಖಾನಿಲಪರಿ**
**ಪುಷ್ಟಂ ಚಃ ಗತಿಚತುಷ್ಟಯಂ ಪ್ರಾಣಿಗೆ ಸಂ**
**ತುಷ್ಟತೆಯನೆಯ್ದೆ ಪಡೆದುದ**
**ಭೀಷ್ಟಸುಖಪ್ರದಮದೊಂದೆ ಮುಕ್ತಿಸ್ಥಾನಂ ॥**

ಎಂದು ಸಂಸಾರ ಶರೀರ ಭೋಗ ವಿರಕ್ತಾಂತರಂಗನಾಗಿ ವಸುಂಧರಾ ರಾಜ್ಯವಿಮೋಹಮೆಂಬ ನಿಗಳವನ್ನು ಪರಿದು ಅಯೋಧ್ಯಾ ಪೌದನಪುರಗಳಲ್ಲಿ ಭರತಬಾಹುಬಲಿಗಳನ್ನಿರಿಸಿ ವೃಷಭನಾಥನು ತಾನು ತಪೋರಾಜ್ಯದಲ್ಲಿ ನಿಂತನು. ಇತ್ತ ಭರತನು ಜಗತೀರಾಜ್ಯದಲ್ಲಿ ನಿಂತನು. ಪುರುದೇವನಿಗೆ ಕೇವಲ ಜ್ಞಾನೋತ್ಪತ್ತಿಯಾಯಿತು. ಭರತನಿಗೆ ಆಯುಧಶಾಲೆಯಲ್ಲಿ ಚಕ್ರರತ್ನದ ಉತ್ಪತ್ತಿಯೂ ಭರತನ ಪತ್ನಿಯಾದ ಮಹಾದೇವಿಗೆ ಪುತ್ರರತ್ನದ ಉತ್ಪತ್ತಿಯೂ ಏಕಕಾಲದಲ್ಲುಂಟಾದುವು. ಭರತ ಬಾಹುಬಲಿಗಳು ಪುರುಪರಮೇಶ್ವರನಲ್ಲಿಗೆ ಬಂದು ತತ್ತ್ವೋಪದೇಶವನ್ನು ಪಡೆದರು. ಬ್ರಹ್ಮಿಯೂ ಸೌಂದರಿಯೂ ದೀಕ್ಷೆಗೊಂಡರು. ಆದಿದೇವನ ಸಮವಸರಣ, ತದಂಗವಾದ ಭಗವದ್ವಿಹಾರ, ಜಗತ್ತಿಗೆ ಧರ್ಮವರ್ಷ-ಒಂದಾದಮೇಲೊಂದು ಸಾಂಗವಾಗಿ ನಡೆದುವು.

ಇನ್ನು ಭರತ ಚಕ್ರವರ್ತಿಯು ಚಕ್ರಪೂಜೆಮಾಡಿ ಷಟ್ಖಂಡಮಂಡಳವನ್ನು ಜಯಿಸಲು ದಿಗ್ವಿಜಯಕ್ಕೆ ಹೊರಡುವನು. ಇಲ್ಲಿ ಪಂಪನು ಕಾವ್ಯಧರ್ಮದ ಮರ್ಮವನ್ನು ಪ್ರಕಾಶಿಸಲು ತನ್ನ ಸರ್ವಸ್ವವನ್ನೂ ವ್ಯಯಮಾಡಿದ್ದಾನೆ. ಶರತ್ಕಾಲ, ಪ್ರಸ್ಥಾನಭೇರಿ, ಅಂತಃಪುರಸ್ತ್ರೀವಿಭ್ರಮ, ವಾರನಾರೀವಿಳಾಸ, ಆರೋಗಣೆಯ ವೈಭವ, ತಾಂಬೂಲ ಚರ್ವಣದ ಬೆಡಗು, ಚತುರಂಗಸೈನ್ಯದ ವಿಸ್ತಾರ, ಮಂದಾನಿಳದ ಮಾಧುರ್ಯ, ಗಂಗಾ ನದಿಯ ಸೌಂದರ್ಯ, ತತ್ತೀರಪ್ರದೇಶದ ವನವಿಹಾರ, ಪುಷ್ಪಾಪಚಯ, ಗಾನಲಹರಿ, ಲತಾನರ್ತನ, ಜಲಕ್ರೀಡೆ, ಸೂರ್ಯಾಸ್ತ, ಸಂಧ್ಯಾರಾಗ, ಚಂದ್ರೋದಯ, ಕೌಮುದೀ ಮಹೋತ್ಸವ, ಚಂದ್ರಿಕಾವಿಹಾರ, ಸುಖಶಯನ, ಪ್ರಭಾತ ಕೃತ್ಯ, ಮೊದಲಾದವುಗಳ ವರ್ಣನೆಗಳು ಒಂದಾದ ಮೇಲೊಂದು ಕಣ್ಣೆದುರಿಗೆ ನುಸುಳಿ ಹೃದಯವನ್ನು ಸೂರೆಗೊಂಡು ವಾಚಕರನ್ನು ಬೇರೊಂದು ಪ್ರಪಂಚಕ್ಕೆ ಸೆಳೆಯುತ್ತವೆ.

ಭರತ ಚಕ್ರವರ್ತಿಯು ಮುಂದೆ ನಡೆದು ಷಟ್ಖಂಡಮಂಡಳವನ್ನು ಚಕ್ರದ ಸಹಾಯದಿಂದ ಅನಾಯಾಸವಾಗಿ ಗೆದ್ದು ಗರ್ವೋದ್ದೀಪಿತನಾಗಿ ವೃಷಭಾದ್ರಿಗೆ ನಡೆದು ಅದರ ನೆತ್ತಿಯಲ್ಲಿ ತನ್ನ 'ವಿಶ್ವವಿಶ್ವಂಭರಾವಿಜಯ' ಪ್ರಶಸ್ತಿಯನ್ನು ಕೆತ್ತಿಸಲು ಆಸೆಯಿಂದ ನೋಡಲಾಗಿ

**ಅದಱೊಳನೇಕ ಕಲ್ಪ ಶತಕೋಟಿಗಳೊಳ್ ಸಲೆಸಂದ ಚಕ್ರಿವೃಂ**
**ದದ ಚಲದಾಯದಾಯತಿಯ ಬೀರದ ಚಾಗದ ಮಾತುಗಳ್ ಪೊದ**

ಟಿಱ್ದವಿರೆ ತತ್ಪ್ರಶಸ್ತಿಗಳೊಳಂತವನೊಯ್ಯನೆ ನೋಡಿನೋಡಿ ಪೋ ।
ದುಃದು ಕೊಳೆಗೊಂಡ ಗರ್ವರಸಮಾ ಭರತೇಶ್ವರಚಕ್ರವರ್ತಿಯಾ ॥

ಅವನ ಗರ್ವಮೇರುವು ಚೂರ್ಣೀಕೃತವಾಯಿತು. ಆದರೂ ಸಾಂಪ್ರದಾಯಕವಾಗಿ ಹಿಂದಿನ ದೊರೆಗಳಲ್ಲೊಬ್ಬನ ಪ್ರಶಸ್ತಿಯನ್ನು ತನ್ನ ದಂಡದಿಂದ ಸೀಂಟಿ ಕಳೆದು ಅಲ್ಲಿ ತನ್ನದನ್ನು ಬರೆಸಿ ಮುಂದೆ ಅಯೋಧ್ಯಾಭಿಮುಖವಾಗಿ ನಡೆದನು.

ಅಯೋಧ್ಯೆಯ ಬಾಗಿಲಲ್ಲಿ ಆತನ ಚಕ್ರರತ್ನ ನಿಂತು ಬಿಟ್ಟಿತು. ಭರತನಿಗೆ ಆಶ್ಚರ್ಯವಾಯಿತು. ಪುರೋಹಿತರನ್ನು ಕರೆದು ಕಾರಣವನ್ನು ಕೇಳಲು ಹೊರಗಿನ ಸಮಸ್ತರನ್ನು ಗೆದ್ದರೂ ಒಳಗಿರುವ ಆತನ ತಮ್ಮಂದಿರು ಅಧೀನವಾಗದಿದ್ದುದರಿಂದ ಜೈತ್ರಯಾತ್ರೆ ಪೂರ್ಣವಾಗಲಿಲ್ಲವೆಂದು ತಿಳಿಸಿದರು. ವಿಜಯೋನ್ಮತ್ತನಾದ ಚಕ್ರವರ್ತಿಗೆ ಅವರನ್ನು ಗೆಲ್ಲಬೇಕೆಂಬ ತವಕ. ತನಗೆರಗಬೇಕೆಂದು ಅವರಿಗೆ ಹೇಳಿಕಳುಹಿಸಿದ. ದೂತನ ನುಡಿಯನ್ನು ಕೇಳಿದ ಅವರು

ಪಿರಿಯಣ್ಣಂ, ಗುರು, ತಂದೆಯೆಂದೆಱಗುವಂ ಮುನ್ನೆಲ್ಲಂ, ಇಂತೀಗಳಾ
ಳರಸೆಂಬೊಂದು ವಿಭೇದಮಾದೊಡೆಱಕಂ ಚಿಃ ಕಷ್ಟಮಲ್ತೇ ವಸುಂ
ಧರೆಗಯ್ಯಂ ದಯೆಗೆಯ್ಯೆ ಮುಂ ಪಡೆದುದರ್ಕಿಂತೀತನೊಳ್ ತೊಟ್ಟ ಕಿಂ
ಕರಭಾವಂ ನಮಗಕ್ಕಿಗೊಟ್ಟು ಮಡಗೂಱುಣ್ಬಂದಮಂ ಪೋಲದೇ ॥

ಎಂದು ಜುಗುಪ್ಸೆಗೊಂಡು ರಾಜ್ಯತ್ಯಾಗಮಾಡಿ ತಂದೆಯಲ್ಲಿಗೆ ಹೋಗಿ ದೀಕ್ಷೆಯನ್ನು ಪಡೆದರು. ಇದನ್ನು ಕೇಳಿಯೂ ಭರತನಿಗೆ ವಿವೇಕವುಂಟಾಗಲಿಲ್ಲ. 'ಎನ್ನ ತೇಜಸ್ಫುರಿತಕ್ಕೆ ಸೆಣಸಿನೊಳ್ ಮಾಱುರಿಗುಂ ಸೈರಿಸದು ತೇಜಮಾ ಭುಜಬಲಿಯಾ' 'ಸಾಮದಿಂದಳವಡಿಸಿ ನೋಡುವೆಂ, ಸಾಮದೊಳಂ ಪದವಡದೊಡೆ ಬಟಿಕಿರ್ದಪುದಲ್ತೆ ಪದವಡಿಸಲೆನ್ನ ಬಯಕೆಯ ದಂಡಂ' ಎಂದು ನಿಶ್ಚಯಿಸಿ ಬುದ್ಧಿವೃದ್ಧನೂ ವಯೋವೃದ್ಧನೂ ಆದ ಮಹತ್ತರನ ಕೈಯಲ್ಲಿ ಲೇಖವನ್ನು ಅಟ್ಟಿದನು. ಲೇಖವನ್ನು ನೋಡಿದ ಬಾಹುಬಲಿಯು ಕೋಪಗರ್ಭಸ್ಮಿತನಾಗಿ

ಪಿರಿಯಣ್ಣಂಗೆಱಗುವುದೇಂ
ಪರಿಭವವೇ ಕೀಱ ನೆತ್ತಿಯೊಳ್ ಬಾಳಂ ನಿ
ರ್ನೆರಮೂಱ ಚಲದಿನೆಱಗಿಸ
ಲಿರೆ ಭರತಂಗೆಱಗುವೆಱಕಮಂಜಮೆಯಲ್ತೇ ॥

ಭರತಂ ಷಟ್ಖಂಡಭೂವಲ್ಲಭನೆನೆ ಸಿರಿಯಂ ಗೆಂಟಱೊಳ್ ಕೇಳ್ವ ರಾಗಂ
ಬೆರಸಿರ್ಪೀ ನಣ್ಪೆ ಸಾಲ್ಗುಂ, ಕರೆದೊಡೆ ಬೆಸನೇನೆಂಬ ಜೀಯೆಂಬ ದೇವೆಂ
ಬರಸೆಂಬಾಳೆಂಬ ದೈನ್ಯಕ್ಕೆಲವೊ ತನುವನಾನೊಡ್ಡುವಂತಾದಿದೇವಂ
ಪುರುದೇವಂ ದೇವದೇವಂ ಕುಡೆ ಪಡೆದ ನೆಲಕ್ಕಾರೊಳಂ ಪಂಥಮುಂಟೇ ॥

'ತಾಂ ಚಕ್ರೇಶನಾದೊಡಂ ತನ್ನಾಕ್ರಮಣಮನೆನ್ನೊಳೇಕೆ ಕೆಮ್ಮನೆ ತೋರ್ಪಂ, ಆಜಿಗೆ ಬಂದೊಡ್ಡಲ್ಕೆ ಪೇಳ್, ಸಂಗರನಿಕಷದೊಳೆಮ್ಮಂದಮಂ ನೀನೆ ಕಾಣ್ಬೈ.' ಎಂದು ಹೇಳಿ ಕಳುಹಿಸಿ ಬಿಟ್ಟನು. ಭರತನ ಸಭಾಸದರು 'ಷಟ್ಖಂಡಭೂಮಂಡಲಮೆರಗಿದುದೇ ಸಾಲ್ಗುಂ, ನಿನ್ನ ತಮ್ಮಂ ನಿನಗೆಱಗಂ, ಈ ಆಕ್ಷೇಪಮಂ ಮಾಣ,' ಎಂದು ಎಷ್ಟು ಹೇಳಿದರೂ

ಕೇಳದೆ ಭರತನು 'ಎಮ್ಮ ದಾಯಾದನುಂ ಕೋಪದಿನೆನ್ನೊಳ್ ಕಾದಲೆಂದು ಬರಿಸಿದ ಸಮರಾಟೋಪದಿಂ ನಿಂದೊಡಂ ಮಾಣ್ಬುದು ಸೂಟಿಲ್ತು, ಎಮ್ಮ ಸಾಪತ್ನನ ಭುಜಬಲಮಂ ನೋೞ್ಪಂ' ಎಂದು ಯುದ್ಧವನ್ನೇ ನಿಶ್ಚಯಿಸಿದನು. ಘೋರಸಂಗ್ರಾಮಕ್ಕೆ ಸಿದ್ಧತೆಗಳಾದುವು. ಆಗ ಮಂತ್ರಿಮುಖ್ಯರು ಚರಮದೇಹಧಾರಿಗಳಾದ ಇವರ ಯುದ್ಧದಲ್ಲಿ ಅನೇಕ ಪ್ರಜಾನಾಶವಾಗುವುದರಿಂದ ಅದನ್ನುಳಿದು ಧರ್ಮಯುದ್ಧಗಳಾದ ದೃಷ್ಟಿಯುದ್ಧ, ಜಲಯುದ್ಧ ಮತ್ತು ಬಾಹುಯುದ್ಧಗಳಲ್ಲಿ ಅಣ್ಣತಮ್ಮಂದಿರು ತಮ್ಮ ಜಯಾಪಜಯಗಳನ್ನು ನಿಷ್ಕರ್ಷಿಸಿಕೊಳ್ಳಬೇಕೆಂದು ಪ್ರಾರ್ಥಿಸಿಕೊಂಡರು. ಅದಕ್ಕೆ ಇಬ್ಬರೂ ಒಪ್ಪಿದರು. ದೃಷ್ಟಿಜಲ ಯುದ್ಧಗಳಲ್ಲಿ ಬಾಹುಬಲಿಗೇ ನಿರಾಯಾಸವಾಗಿ ಜಯ ಲಭಿಸಿತು. ಬಾಹುಯುದ್ಧದಲ್ಲಿ ಬಾಹುಬಲಿಯು ಅಣ್ಣನನ್ನು ಒಂದೇ ಸಲ ಮೇಲಕ್ಕೆತ್ತಿ ಬಡಿಯುವಷ್ಟರಲ್ಲಿ ವಿವೇಕಯುತನಾಗಿ

**ಭರತಾವನೀಶ್ವರಂ, ಗುರು**
**ಪಿರಿಯಣ್ಣಂ ಚಕ್ರವರ್ತಿ ಮಹಿಮಾಕರನೀ**
**ದೊರೆಯನುಮಳವಟಿಯೆ ವಸುಂ**
**ಧರೆಯೊಳ್ ತಂದಿಕ್ಕಿ ಭಂಗಮಂ ಮಾಡುವೆನೇ**

ಎಂದು ನಿಧಾನವಾಗಿ ಕೆಳಕ್ಕಿಳಿಸಿದನು. ಭರತನಿಗೆ ಕೋಪವು ಮೇರೆಮೀರಿತು. ತಮ್ಮನ ಮೇಲೆ ಚಕ್ರವನ್ನೇ ಪ್ರಯೋಗಿಸಿ ಬಿಟ್ಟನು. ಚಕ್ರವು ಆತನಿಗೆ ಸ್ವಲ್ಪವೂ ಘಾತ ಮಾಡದೆ ಆತನನ್ನು ಮೂರು ಪ್ರದಕ್ಷಿಣೆ ಮಾಡಿ ಅವನ ಬಲಪಾರ್ಶ್ವದಲ್ಲಿ ನಿಂತಿತು. ದೇವಲೋಕದಿಂದ ಪುಷ್ಪವೃಷ್ಟಿಯಾಯಿತು. ಭರತನು ಮಾಡಬಾರದುದನ್ನು ಮಾಡಿದನೆಂದು ಹೇಳುತ್ತಿದ್ದ ಕುಲವೃದ್ಧರ ಮಾತುಗಳು ಭರತನನ್ನು ನಾಚಿಸಿದುವು. ಭರತನು ತಲೆತಗ್ಗಿಸಿ ನಿಂತುಕೊಂಡನು. ಆಗ ಬಾಹುಬಲಿಗೆ ಅದ್ಭುತವಾದ ವೈರಾಗ್ಯವು ತಲೆದೋರಿತು.

**ಸೋದರರೊಳ್ ಸೋದರರಂ**
**ಕಾದಿಸುವುದು ಸುತನ ತಂದೆಯೆಡೆಯೊಳ್ ಬಡದು**
**ತ್ತಾದಿಸುವುದು ಕೋಪಮನ್ ಅಳ**
**ವೀ ದೊರತೆನೆ ತೊಡರ್ವುದೆಂತು ರಾಜ್ಯಶ್ರೀಯೊಳ್**

**ಕಿಡುವೊಡಲ ಕಿಡುವ ರಾಜ್ಯದ**
**ಪಡೆಮಾತುಗೊಳಲ್ಕಮೆನ್ನ ಮೆಯ್ಯುಗಿದಪುದೀ**
**ಗಡೆ ಜೈನದೀಕ್ಷೆಯಂ ಕೊಂ**
**ಡಡಿಗೆಱಗುವೆಂ ಸಮಸ್ತಸುರಸಮುದಯಮಂ ॥**

ಎಂದು ನಿಶ್ಚಯಿಸಿ ಅಣ್ಣನನ್ನು ಕುರಿತು 'ನೆಲಸುಗೆ ನಿನ್ನ ವಕ್ಷದೊಳ್ ನಿಶ್ಚಲಮಾ ರಾಜ್ಯಲಕ್ಷ್ಮಿ', 'ಭೂವಲಯಮನಯ್ಯನಿತ್ತುದುಮಾಂ ನಿನಗಿತ್ತೆಂ ನೀನೊಲಿದ ಲತಾಂಗಿಗಂ ಧರೆಗಮಾಟಿಸಿದಂದು ನೆಗೞ್ತೆ ಮಾಸದೇ' ಎಂದು ವಿಜ್ಞಾಪಿಸಿ ತಪಸ್ಸಿಗೆ ಹೊರಟು ತಂದೆಯಾದ ಆದಿದೇವನ ಸಮೀಪಕ್ಕೆ ಬಂದು ನಮಸ್ಕರಿಸಿ 'ಹಿಂದೆ ಯುವರಾಜ ಪದವಿಯನ್ನು ದಯಪಾಲಿಸಿದ್ದಿರಿ; ಈಗ ಅಭ್ಯುದಯಕರವಾದ ಪ್ರವ್ರಜ್ಯದ ಪದವಿಯ ಯುವರಾಜಪದವಿಯನ್ನು ದಯಪಾಲಿಸಿ ಎಂದು ಪ್ರಾರ್ಥಿಸಿ ಪಡೆದು ಘೋರತಪಸ್ಸಿನಲ್ಲಿ

ನಿರತನಾದನು. ಆದರೂ ಬಾಹುಬಲಿಯ ಮನಸ್ಸಿನಲ್ಲಿ ತಾನು ಭರತನ ನೆಲದಲ್ಲಿ ನಿಂತಿರುವೆನೆಂಬ ಚಿಂತೆಯಿಂದ ಶಾಂತಿಯುತ್ಪನ್ನವಾಗಿರಲಿಲ್ಲ. ಅದನ್ನರಿತು ಭರತನೇ ಬಂದು 'ಈ ನೆಲಸೀನೆನಗಿತ್ತ ನೆಲ, ನಿನ್ನದೇ ವಿನಾ ನನ್ನದಲ್ಲ' ಎಂದು ಭಕ್ತಿಪೂರ್ವಕವಾಗಿ ತಿಳಿಸಿದ ಮೇಲೆ ಶಾಂತಚಿತ್ತನಾಗಿ ತಪೋನಿಷ್ಠನಾದನು.

ಭರತನ ಬಾಹುಬಲದ ಆಡಂಬರವೆಲ್ಲಿ! ಬಾಹುಬಲಿಯ ವೈರಾಗ್ಯದ ವೈಭವವೆಲ್ಲಿ! ಧರ್ಮಚಕ್ರದ ದಿಗ್ವಿಜಯದ ಮುಂದೆ ಚಕ್ರವರ್ತಿಯ ದಿಗ್ವಿಜಯ ಬೊಬ್ಬುಳಿಕೆ; ನಿಸ್ಸಾರ. ಮುಂದೆ ಭರತನು ಅನೇಕ ಕಾಲ ರಾಜ್ಯವಾಳುತ್ತಾನೆ. ವಿಪ್ರವರ್ಣವನ್ನು ಸ್ಥಾಪಿಸಿ ಅವರ ಕರ್ಮಾದಿಗಳನ್ನು ನಿಷ್ಕರ್ಷೆ ಮಾಡುತ್ತಾನೆ. ಆದರೂ ಜೈನಧರ್ಮದ ಅವನತಿಯ ಅರಿವಾಗುತ್ತದೆ. ಅಷ್ಟರಲ್ಲಿ ಆದಿತೀರ್ಥಂಕರರ ಪರಿನಿರ್ವಾಣಕಲ್ಯಾಣ ಸಮೀಪಿಸುತ್ತದೆ. ಭರತನು ಅಲ್ಲಿಗೆ ಹೋಗಿ ಜಿನಸ್ತೋತ್ರ ಮಾಡುತ್ತಾನೆ. ಧರ್ಮದ ಸಾರವನ್ನು ತಿಳಿಯುತ್ತಾನೆ. ವಿಯೋಗಾಗ್ನಿಯಿಂದ ಬೇಯುತ್ತಿರುವ ಭರತನನ್ನು ವೃಷಭಸೇನಾಗ್ರಹಣಿಗಳು ಸಮಾಧಾನ ಮಾಡುತ್ತಾರೆ. ಭರತನು ತನ್ನ ರಾಜ್ಯವನ್ನು ತ್ಯಜಿಸಿ ತಪೋನಿರತನಾಗಿ ಮೋಕ್ಷಲಕ್ಷ್ಮೀಪತಿಯಾಗುತ್ತಾನೆ.

ಇದುವರೆಗಿನ ಒಂದು ವಿಹಾರವಿಮರ್ಶೆಯಿಂದ ಪಂಪನ ಕೈಚಳಕ ಯಥೋಚಿತವಾಗಿ ಅರ್ಥವಾಗುತ್ತದೆ. ಧರ್ಮ ಮತ್ತು ಕಾವ್ಯಧರ್ಮಗಳ ಮೇಳನ ಪರಿಸ್ಫುಟವಾಗುತ್ತದೆ. ಜೈನರಿಗೆ ಅಲ್ಲದೇ ಜೈನೇತರರಿಗೂ ಅದರ ಸೊಬಗು ಮನವರಿಕೆಯಾಗುತ್ತದೆ. ಆದಿಪುರಾಣದಲ್ಲಿ ಪಂಪನು ಮಾಣಿಕ್ಯಜಿನೇಂದ್ರಬಿಂಬವನ್ನು ಕಡೆದು ದಿವ್ಯಚೈತ್ಯವನ್ನು ಕಟ್ಟಿರುವುದು. ನಿಜ. ಅದಕ್ಕಿಂತಲೂ ಸಾಹಿತ್ಯೋಪಾಸಕರಿಗೆ ಆತನು ನಿರ್ಮಿಸಿರುವ ಭವ್ಯರಸಮಂದಿರಗಳು ಚಿರಸ್ಥಾಯಿಯಾಗಿ ಸರ್ವಾದರಣೀಯವಾಗಿವೆ. ಇದನ್ನೇ ಪಂಪನು ಮುಂದಿನ ಪದ್ಯಗಳಲ್ಲಿ ಬಹು ಸ್ವಾರಸ್ಯವಾಗಿಯೂ ವಿಸ್ತಾರವಾಗಿಯೂ ವಿಶದಪಡಿಸಿದ್ದಾನೆ.

**ಪಂಪಭಾರತ** : ಇದು ಪಂಪನ ದ್ವಿತೀಯ ಕೃತಿ. ಇದಕ್ಕೆ ವ್ಯಾಸ ಮಹಾಮುನಿಯ ಸಂಸ್ಕೃತ ಮಹಾಭಾರತವೇ ಮೂಲವೆಂಬುದು ಅವನೇ ಹೇಳಿಕೊಂಡಿರುವ 'ವ್ಯಾಸಮುನೀಂದ್ರ ರುಂದ್ರವಚನಾಮೃತವಾರ್ಧಿಯನೀಸುವೆಂ' ಎಂಬ ವಾಕ್ಯದಿಂದಲೇ ಪ್ರತಿಪಾದಿತವಾದರೂ ಪಂಪನ ಕಾಲಕ್ಕೆ ಹಿಂದೆ ಕೆಲವು ಕನ್ನಡ ಭಾರತಗಳಿದ್ದು ಅವು ಪಂಪನ ಮೇಲೆ ಪ್ರಭಾವ ಬೀರಿರಬಹುದೆಂದು ಊಹಿಸಬಹುದಾಗಿದೆ. ನಾಗವರ್ಮನ 'ಕಾವ್ಯಾವಲೋಕನ'ದಲ್ಲಿ ಲಕ್ಷ್ಯವಾಗಿ ಕೊಟ್ಟಿರುವ ಕೆಲವು ಪದ್ಯಗಳು ಯಾವುದೋ ಕನ್ನಡ ಭಾರತದಿಂದ ಉದ್ಧರಿಸಲ್ಪಟ್ಟುದಾಗಿ ಕಾಣುತ್ತದೆ. ಅಲ್ಲದೆ ಪಂಪನೇ 'ಮುಂ ಸಮಸ್ತ ಭಾರತಮನಪೂರ್ವಮಾಗೆ ಪೇೞ್ದ ಕವೀಶ್ವರರಿಲ್ಲ' ಎಂದು ಹೇಳಿ ತನ್ನ ಭಾರತವನ್ನು 'ಸಮಸ್ತ ಭಾರತಂ' ಎಂದು ಹೇಳಿಕೊಂಡಿರುವುದರಿಂದ ಇವನಿಗೆ ಹಿಂದೆ ಕೆಲವರು ಭಾರತದ ಕೆಲಕೆಲ ಭಾಗಗಳನ್ನು ಕನ್ನಡದಲ್ಲಿ ರಚಿಸಿದ್ದರೆಂದೂ ಸಂಪೂರ್ಣವಾಗಿ ಭಾರತವನ್ನು ರಚಿಸಿದವರಲ್ಲಿ ಇವನೇ ಮೊದಲಿಗನೆಂದೂ ಊಹಿಸಬಹುದಾಗಿದೆ. 'ಕವಿವ್ಯಾಸನೆಂಬ

ಗರ್ವಮೆನಗಿಲ್ಲ' ಎಂದು ಪಂಪನು ಹೇಳಿರುವುದರಿಂದ ಇವನಿಗೆ ಹಿಂದೆ ಕವಿವ್ಯಾಸನೆಂಬುವನೊಬ್ಬನಿದ್ದು ಭಾರತವನ್ನು ರಚಿಸಿರಬಹುದು. ಆದರೆ ನಮಗೆ ದೊರೆತಿರುವ ಪುರಾತನ ಸಮಗ್ರ ಕನ್ನಡ ಭಾರತ 'ವಿಕ್ರಮಾರ್ಜುನವಿಜಯ'ವೊಂದೇ.

ಪಂಪನಿಗೆ ಧಾರ್ಮಿಕಪುರಾಣವಾದ 'ಆದಿಪುರಾಣ'ಕ್ಕಿಂತ ಲೌಕಿಕಕಾವ್ಯವಾದ 'ವಿಕ್ರಮಾರ್ಜುನ ವಿಜಯ'ದ ರಚನೆಯಲ್ಲಿ ಹೆಚ್ಚು ಸ್ವಾತಂತ್ರ್ಯವಿದೆ. ಅವನ ಪ್ರತಿಭಾಪ್ರಸರಣಕ್ಕೆ ಇಲ್ಲಿ ಹೆಚ್ಚಿನ ಅವಕಾಶವಿದೆ. ಅವನ ಅನಾದೃಶವಾದ ಲೋಕಾನುಭವಸಂಪತ್ತನ್ನು ಪ್ರದರ್ಶಿಸುವ ಗ್ರಂಥವಿದು. ತನ್ನ ಪೋಷಕನಾದ ಅರಿಕೇಸರಿಯ ಕೀರ್ತಿಯನ್ನು ಸ್ಥಿರಪಡಿಸುವುದಕ್ಕಾಗಿಯೂ 'ಸಮಸ್ತ ಭಾರತಮನಪೂರ್ವಮಾಗೆ ವರ್ಣಕಂ ಕತೆಯೊಳೊಡಂಬಡಂ ಪಡೆಯೆ ಪೇಟ್ವೊಡೆ ಪಂಪನೆ ಪೇಟ್ಗುಂ' ಎಂದು ಒತ್ತಾಯ ಮಾಡಿದ ಪಂಡಿತರನ್ನು ಸಂತೋಷಪಡಿಸುವುದಕ್ಕಾಗಿಯೂ ಭಾರತದ ಕಥಾವಸ್ತುವನ್ನು ಆ ಕಾಲದ ವಾತಾವರಣಕ್ಕೆ ಹೊಂದುವಂತೆ ವೀರರಸದಲ್ಲಿ ಎರಕ ಹೊಯ್ದು ಕಾವ್ಯಕ್ಕೆ ತಕ್ಕಂತೆ ಕಥೆಯನ್ನು ಮಾರ್ಪಡಿಸಿ ಕನ್ನಡ ಸಾಹಿತ್ಯದೇವಿಗೆ 'ವಿಕ್ರಮಾರ್ಜುನ ವಿಜಯ'ವೆಂಬ ಒಂದು ರತ್ನಕಂಠಿಯನ್ನು ನಿರ್ಮಿಸಿದನು. ಹೀಗೆ ಅರಿಕೇಸರಿಯ ಕೀರ್ತಿಯನ್ನು ಬೆಳಗುವುದಕ್ಕೆ ಹೊರಟಿದ್ದುದರಿಂದಲೂ 'ಬೆಳಗುವೆನಿಲ್ಲಿ ಲೌಕಿಕಮಂ' ಎಂಬುದನ್ನು ಮನಸ್ಸಿನಲ್ಲಿಟ್ಟುಕೊಂಡುದರಿಂದಲೂ ಪಂಪನು ತನ್ನ ಭಾರತವನ್ನು ಮೂಲಭಾರತದ ಕಥೆಯಂತೆ ನಡೆಸಲು ಸಾಧ್ಯವಿಲ್ಲದೆ ತನ್ನ ಪ್ರತಿಭಾಶಕ್ತಿಯಿಂದ ಕಥೆಯನ್ನು ಕುಗ್ಗಿಸಿಯೂ ಹಿಗ್ಗಿಸಿಯೂ ಮಾರ್ಪಡಿಸಿಯೂ ಕೆಲವೆಡೆಯಲ್ಲಿ ಅಜ್ಞಾತವಾಗಿ ಜೈನಸಂಪ್ರದಾಯಕ್ಕೆಳೆದೂ ಇದ್ದಾನೆ. ಹೀಗೆ ಮಾಡುವುದರಲ್ಲಿ ವಿಸ್ಮರಣೆಯಿಂದ ಕೆಲವೆಡೆಗಳಲ್ಲಿ ಮುಗ್ಗರಿಸಿರುವುದೂ ಉಂಟು. ಮತ್ತೆ ಕೆಲವೆಡೆಗಳಲ್ಲಿ ಮೂಲಭಾರತದ ಕಥೆಗೆ ಮತ್ತಷ್ಟು ಮಿರುಗುಕೊಟ್ಟು ಹೊಳೆಯುವಂತೆಯೂ ಮಾಡಿರುವನು.

ಪಂಪಭಾರತ 'ಸಮಸ್ತ ಭಾರತ'. ಇದನ್ನು ವಿವಿಧ ರೀತಿಯಲ್ಲಿ ವ್ಯಾಖ್ಯಾನ ಮಾಡಬಹುದು. ಅದು ಸಂಪೂರ್ಣ ಅಥವಾ ಸಮಗ್ರಭಾರತ ಎಂಬುದು ಅದರ ಮೊದಲನೆಯ ಅರ್ಥ. ಮೂಲಭಾರತದ ಕಥೆಯ ವಾತಾವರಣಕ್ಕೆ ತನ್ನ ಕಾಲದ ವಾತಾವರಣವನ್ನು ಹೊಂದಿಸಿ ಹೇಳಿರುವುದು ಎಂಬುದು ಮತ್ತೊಂದರ್ಥ. ಹಾಗೆಯೇ ಭಾರತದಲ್ಲಿ ಕಥೆಯ ಜೊತೆಗೆ ತನ್ನ ಪ್ರಭುವಿನ ಕಥೆಯನ್ನೂ ಹಾಸುಹೊಕ್ಕಾಗಿ ಕೂಡಿಸಿ ಕಥಾರಚನೆ ಮಾಡಿರುವ ಗ್ರಂಥ ಎಂಬುದು ಮೂರನೆಯ ವ್ಯಾಖ್ಯಾನ. ಈ ಕೊನೆಯ ಅರ್ಥವು ಹೆಚ್ಚು ಆದರಣೀಯವಾಗಿದೆ. ಅದನ್ನು ಸಮನ್ವಯಗೊಳಿಸುವುದಕ್ಕಾಗಿ ಪಂಪನು ತನ್ನ ಕತೆಗೆ ನಾಯಕರನ್ನು ಆರಿಸುವುದರಲ್ಲಿ ಬಹಳ ಜಾಣ್ಮೆಯನ್ನು ತೋರಿಸಿದ್ದಾನೆ. ವ್ಯಾಸಭಾರತದ ಪ್ರಕಾರ ಮೇಲುನೋಟಕ್ಕೆ ಧರ್ಮರಾಜನೇ ನಾಯಕನೆಂದು ಕಂಡು ಬಂದರೂ ಪಂಚಪಾಂಡವರಲ್ಲಿ ಒಬ್ಬೊಬ್ಬರೂ ಒಂದೊಂದು ದೃಷ್ಟಿಯಿಂದ ಪ್ರಮುಖರಾಗಿ ನಾಯಕಸ್ಥಾನಕ್ಕೆ ಅರ್ಹರಾಗುತ್ತಾರೆ. ಆದುದರಿಂದ ಪಂಪನು ಬಹುವಿವೇಕದಿಂದ ಪಾಂಡವ ಮಧ್ಯಮನೂ ಅತುಲ ಪರಾಕ್ರಮಿಯೂ ಆದ ಅರ್ಜುನನನ್ನು ನಾಯಕನನ್ನಾಗಿ ಮಾಡಿ

ಕಥೆಯನ್ನು ಅವನ ಸುತ್ತಲೂ ನೆಯ್ದಿದ್ದಾನೆ. ಆದುದರಿಂದಲೇ ಗ್ರಂಥಕ್ಕೆ 'ವಿಕ್ರಮಾರ್ಜುನವಿಜಯ'ವೆಂದು ಹೆಸರಿಟ್ಟು ತನ್ನ ಆಶ್ರಯದಾತನಾದ ಇಮ್ಮಡಿ ಅರಿಕೇಸರಿಯನ್ನು ಅರ್ಜುನನೊಂದಿಗೆ ಅಭೇದವಾಗಿ ಸಂಯೋಜಿಸಿ ವರ್ಣಿಸಿದ್ದಾನೆ. ಹೀಗೆ ಮಾಡುವುದರಲ್ಲಿ ಪಂಪನಿಗೆ ಕಾರಣವಿಲ್ಲದೆ ಇಲ್ಲ. ಅರಿಕೇಸರಿಯು ವೀರಾಗ್ರೇಸರ. ಈತನ ವೃತ್ತಾಂತ ಅವನ ವೇಮಲವಾಡದ ಶಿಲಾಶಾಸನದಿಂದಲೂ (ಕ್ರಿ.ಶ. ಸು ೯೨೭) ಅವನ ಮೊಮ್ಮಗನಾದ ಮೂರನೆಯ ಅರಿಕೇಸರಿಯ ಪರಭಣಿ ಶಾಸನದಿಂದಲೂ (ಕ್ರಿ. ಶ. ೯೬೬) ಪಂಪನ ತಮ್ಮನಾದ ಜಿನವಲ್ಲಭನ ಗಂಗಾಧರಂ ಶಾಸನದಿಂದಲೂ ಯಥೋಚಿತವಾಗಿ ವಿಶದವಾಗುತ್ತದೆ. ಪಂಪನ ಮಾತುಗಳು ಈ ವಿಷಯವನ್ನು ದೃಢೀಕರಿಸುತ್ತವೆ. ಅರಿಕೇಸರಿಯು ಅನೇಕ ಯುದ್ಧಗಳಲ್ಲಿ ಭಾಗವಹಿಸಿದ್ದ. ಬಾಲ್ಯದಿಂದಲೂ 'ಪರಬಲದ ನೆತ್ತರ ಕಡಲೊಳಗಣ ಜಿಗುಳೆ ಬಳೆದ ತೆಱದೊಳೆ ಬಳೆದಂ.' ಮುಂದೆ ತನ್ನ ಅಧಿರಾಜನಾದ ಗೋವಿಂದರಾಜನಿಗೆ ವಿರೋಧವಾಗಿ ನಿಂತು ಅವನ ಸಾಮಂತನಾದ ವಿನಯಾದಿತ್ಯನಿಗೆ ಆಶ್ರಯವನ್ನಿತ್ತಿದ್ದ ದುರ್ಮಾರ್ಗಿಯಾದ ಗೋವಿಂದರಾಜನನ್ನು ರಾಜ್ಯಭ್ರಷ್ಟನನ್ನಾಗಿ ಮಾಡುವುದಕ್ಕೆ ಇತರ ಸಾಮಂತರೊಡನೆ ತಾನೂ ಸೇರಿ ಆ ಕಾರ್ಯವನ್ನು ಸಾಧಿಸಿ ಆ ಸ್ಥಾನದಲ್ಲಿ ರಾಷ್ಟ್ರಕೂಟರಲ್ಲಿ ಪ್ರಸಿದ್ಧನಾದ ಮೂರನೆಯ ಕೃಷ್ಣನನ್ನು ಸ್ಥಾಪಿಸಲು ಸಹಾಯಿಮಾಡಿದ್ದ. ಇಂತಹವನ ವಿಷಯದಲ್ಲಿ ಪಂಪನಿಗೆ ಗೌರವವು ಹುಟ್ಟುವುದು ಸಹಜವೇ. ಸಾಲದುದಕ್ಕೆ ಅರಿಕೇಸರಿಯೂ ಪಂಪನೂ ಸ್ನೇಹಿತರು. ಸಮಾನವಾದ ಗುಣಶೀಲಗಳನ್ನುಳ್ಳವರು. ತನ್ನ ಸ್ವಾಮಿಯಂತೆಯೇ ಪಂಪನೂ, ಧಾತ್ರೀವಳಯನಿಳಿಂಪನೂ ಚತುರಂಗಬಲಭಯಂಕರನೂ' ಆಗಿ 'ನಿಜಾಧಿನಾಥನಾಹವದೊಳರಾತಿನಾಯಕರ ಪಟ್ಟಸೆ ಪಾಱಿಸೆಸಂದ' ಪೆಂಪುಳ್ಳವನು. ಸಾಲದುದಕ್ಕೆ ಅರಿಕೇಸರಿಯೂ ಪಂಪನೂ ಸ್ನೇಹಿತರಂತಿದ್ದವರು. ಅವರಿಬ್ಬರಲ್ಲಿ ಎಂದೂ ಸ್ವಾಮಿ ಭೃತ್ಯಭಾವ ತೋರಿಲ್ಲ. ಅದನ್ನು ಪಂಪನು ಪ್ರಕಾರಾಂತರದಿಂದ ದುರ್ಯೋಧನನು ಕರ್ಣನಿಗೆ ಹೇಳುವ ಮಾತಿನಲ್ಲಿ ಸ್ಪಷ್ಟಮಾಡಿದ್ದಾನೆ. ಇಂತಹ ಪ್ರೀತಿಪಾತ್ರನಾದ ಆಶ್ರಯದಾತನನ್ನು ಭಾರತಶ್ರೇಷ್ಠನಾದ ಅರ್ಜುನನಿಗೆ ಹೋಲಿಸಿ ಅವರ ಪರಸ್ಪರ ಗುಣಗಳನ್ನು ಇಬ್ಬರಲ್ಲಿಯೂ ಆರೋಪಿಸಿ ತನ್ನ ಉಪ್ಪಿನ ಋಣವನ್ನು ತೀರಿಸುವುದಕ್ಕಾಗಿ ಅದ್ಭುತವಾದ ಕಾಣಿಕೆಯನ್ನು ಅರ್ಪಿಸಿದ್ದಾನೆ. ಅಂದಮಾತ್ರಕ್ಕೆ ಪಂಪನು ಅರಿಕೇಸರಿಯ ಸಂಬಳದ ವಂದಿಯಲ್ಲ, ಅಭಿಮಾನಮೂರ್ತಿ. 'ಪೆಱರೀವುದೇಂ, ಪೆಱಱ ಮಾಡುವುದೇಂ, ಪೆಱಱಿಂದಮಪ್ಪುದೇಂ' ಎಂದು 'ಆದಿಪುರಾಣ'ದಲ್ಲಿ ಘಂಟಾಘೋಷವಾಗಿ ಸಾರಿದ್ದಾನೆ.

ಪಂಪನು ಅರ್ಜುನ ಅರಿಕೇಸರಿಗಳನ್ನು ಅಭೇದದಿಂದ ವರ್ಣಿಸಿದ್ದಾನೆ. ಅರ್ಜುನನ ಅಪರಾವತಾರವೇ ಅರಿಕೇಸರಿಯೆಂಬುದು ಪಂಪನ ಕಲ್ಪನೆ. ಭಾರತಯುದ್ಧದಲ್ಲಿ ಯಮನಂದನನು ಕರ್ಣನಿಂದ ತಾಡಿತನಾಗಿ ಸೋತು ತನ್ನ ಪಾಳೆಯಕ್ಕೆ ಹಿಂದಿರುಗಿ ಬಂದು ತನಗಾದ ಪರಾಭವಕ್ಕೇವಯಿಸಿ ಅರ್ಜುನನ ಮೇಲೆ ಕೋಪಿಸಿಕೊಳ್ಳುವನು. ಆಗ ಅರ್ಜುನನು-

**ನರಸಿಂಗಂಗಂ ಜಾಕ**
**ಬ್ಬರಸಿಗಮಳವೊದವೆ ಪುಟ್ಟಿ ಪುಟ್ಟಿಯುಮರಿಕೇ**
**ಸರಿಯೆನೆ ನೆಗಟ್ಟುಮರಾತಿಯ**
**ಸರಿದೊರೆಗಂ ಬಂದೆನಪ್ಪೊಡಾಗಳ್ ನಗಿರೇ ।**

ಎಂದು ಹೇಳುವುದನ್ನು ನೋಡಿದರೆ ಈ ಅಭೇದಕಲ್ಪನೆ ವಿಶದವಾಗುವುದು. ಅಲ್ಲದೆ ಕುಂತಿಯೂ ಪಾಂಡುವೂ ಅರ್ಜುನನಿಗೆ ನಾಮಕರಣವನ್ನು ಮಾಡುವಾಗ ಅವನ ಅಷ್ಟೋತ್ತರ ಶತನಾಮಗಳಲ್ಲಿ 'ಚಾಳುಕ್ಯವಂಶೋದ್ಭವಂ', 'ರಿಪುಕುರಂಗ ಕಂಠೀರವಂ', 'ಅಮ್ಮನ ಗಂಧವಾರಣಂ', 'ಸಾಮಂತ ಚೂಡಾಮಣಿ' ಮೊದಲಾದ ಅರಿಕೇಸರಿಯ ನಾಮಾವಳಿಗಳನ್ನು ಇಟ್ಟು ಆಶೀರ್ವದಿಸುವರು. ಪ್ರಪಂಚವನ್ನೆಲ್ಲ ಏಕಚ್ಛತ್ರಾಧಿಪತ್ಯದಿಂದ ಆಳಿದ ಮೂರುಲೋಕದ ಗಂಡನಾದ ಸವ್ಯಸಾಚಿಯು ಒಮ್ಮೊಮ್ಮೆ ಸಾಮಂತ ಚೂಡಾಮಣಿಯಾಗುವನು. ಇದು ಕೆಲವೆಡೆಗಳಲ್ಲಿ ಆಭಾಸವಾಗಿ ಕಾಣುವುದು. ಅರ್ಜುನನು ದೇಶಾಟನೆಗೆ ಹೊರಟು ದ್ವಾರಕಾಪಟ್ಟಣದಲ್ಲಿ ಕೃಷ್ಣನ ಅನುಮತಿಯ ಪ್ರಕಾರ ಸುಭದ್ರೆಯನ್ನು ಅಪಹರಿಸಿಕೊಂಡು ಹೋಗುವನಷ್ಟೆ. ಆ ಸಂದರ್ಭದಲ್ಲಿ ಪಂಪನು ಸುಭದ್ರೆಯನ್ನು ಅರ್ಜುನನು ಕೊಂಡು ಹೋದನೆಂದು ಹೇಳದೆ ಸಾಮಂತಚೂಡಾಮಣಿಯು ಕೊಂಡೊಯ್ದನೆಂದು ಹೇಳುವುದು ಮನಸ್ಸಿಗೆ ಅಷ್ಟು ಸಮರ್ಪಕವಾಗಿಲ್ಲ. ಪಂಪನು ಅರಿಕೇಸರಿಯನ್ನು ಅರ್ಜುನನಲ್ಲಿ ಹೋಲಿಸಿರುವುದು ಮನದೊಲವಿನಿಂದಲ್ಲವೆಂದೂ ಅವನಲ್ಲಿ ನಿಜವಾಗಿಯೂ 'ವಿಪುಳಯಶೋವಿತಾನಗುಣ'ವಿದ್ದಿತೆಂದೂ ಹೇಳುವನಾದರೂ ಮೂರುಲೋಕದ ಗಂಡನು ಸಾಮಂತಚೂಡಾಮಣಿಯಾದುದೇಕೆ ಎಂದು ಯೋಚಿಸಬೇಕಾಗುವುದು. ಅರಿಕೇಸರಿಯಾದ ಅರ್ಜುನನು ಸೋಲುವ ಪ್ರಸಂಗ ಬಂದಾಗಲೂ ಪ್ರತಿಪಕ್ಷದ ಇದುರಲ್ಲಿ ಅವನ ಸಾಹಸವು ಸಾಗದ ಸಂದರ್ಭವೊದಗಿದಾಗಲೂ ಪಂಪನು ಬಹುಕಾಲ ವಿಳಂಬಮಾಡದೆ ಅಲ್ಲಿಂದ ಬಲು ಬೇಗ ನುಸುಳಿಕೊಳ್ಳುವನು. ಆಗ ವೈರಿಗಜಘಟಾರಿಘಟನಂ', 'ವಿದ್ವಿಷ್ಟವಿದ್ರಾವಣಂ', 'ಅರಾತಿಕಾಲಾನಲಂ,' 'ರಿಪುಕುರಂಗ ಕಂಠೀರವಂ' ಎಂಬ ಬಿರುದುಗಳು ಮಾಯವಾಗುವುವು. ಅಷ್ಟಮಾಶ್ವಾಸದಲ್ಲಿ ಯಕ್ಷನ ಮಾಯೆಯಿಂದ ಕೊಳದ ತಡಿಯಲ್ಲಿ ನೀರು ಕುಡಿದು ಆರೂಢಸರ್ವಜ್ಞನು ನಿಶ್ಚೇಷ್ಟಿತನಾಗಿ ನೆಲದಲ್ಲೊರಗಿದಾಗ ಪಂಪನು ಹೇಳುವುದು ಬಹು ಚಮತ್ಕಾರವಾಗಿದೆ.

**ಆ ಕಮಳಾಕರಮಂ ಪೊ**
**ಕ್ಕಾಕಾಶಧ್ವನಿಯನುಜಿದೆ ಕುಡಿದರಿಭೂಪಾ**
**ನೀಕಭಯಂಕರನುಂ ಗಡ**
**ಮೇಕೆಂದಜಿಯೆಂ ಬಟಲ್ದು ಜೋಲ್ದಂ ಧರೆಯೊಳ್'**

ಎಂದು ಹೇಳುವನು. ಹಾಗೆಯೇ ಅರ್ಜುನನ ಸಾಹಸಕಾರ್ಯಗಳನ್ನು ವರ್ಣಿಸುವಾಗ ಅವನ ವಾಗ್ವೈಖರಿ ಪ್ರಜ್ವಲಿತವಾಗುವುದು. ಒಂದೆರಡು ಪದ್ಯಗಳಲ್ಲಾದರೂ ಬಹು ಹೃದಯಂಗಮವಾಗಿ ವರ್ಣಿಸುವನು. ವಿದ್ವಿಷ್ಟ ವಿದ್ರಾವಣನು ಮತ್ಸ್ಯಯಂತ್ರಭೇದನ ಮಾಡಿದುದೂ ಅಂಗಾರವರ್ಮನನ್ನು ಅಂಗದಪರ್ಣನನ್ನೂ ಸೋಲಿಸಿದುದೂ

ದುರ್ಯೋಧನನನ್ನು ಕೋಡಗಗಟ್ಟುಗಟ್ಟಿ ಎಳೆದೊಯ್ಯುತ್ತಿದ್ದ ಚಿತ್ರಸೇನನನ್ನು ಪರಾಭವಿಸಿದುದೂ ಸ್ವಲ್ಪಮಾತಿನಲ್ಲಿ ವರ್ಣಿತವಾದರೂ ಅವನ ಪೂರ್ಣಸಾಹಸವು ವ್ಯಕ್ತವಾಗುವಂತಿವೆ. ಭಾರತಯುದ್ಧದಲ್ಲಿ ಅರ್ಜುನನು ಭೀಷ್ಮದ್ರೋಣ ಕರ್ಣಾದಿಗಳಲ್ಲಿ ಪ್ರದರ್ಶಿಸಿದ ಸಾಮರ್ಥ್ಯವನ್ನಂತೂ ಪಂಪನು ತನ್ನ ಕವಿತಾಶಕ್ತಿಯನ್ನೆಲ್ಲಾ ವೆಚ್ಚಮಾಡಿ ಬಹು ಆಕರ್ಷಕವಾಗಿ ವರ್ಣಿಸಿದ್ದಾನೆ. ಕೊನೆಗೆ ತಾನು ಮಾಡಿದ ವರ್ಣನೆಯಿಂದ ತೃಪ್ತಿಹೊಂದದೆ ಸಾಹಸಾಭರಣನ ಅದ್ಭುತವಾದ ಸಾಹಸವನ್ನು ಪಶುಪತಿಯ ಬಾಯಿಂದಲೇ ಹೊರಡಿಸಿರುವನು. ಕರ್ಣಾರ್ಜುನರು ಯುದ್ಧಮಾಡುತ್ತಿದ್ದುದನ್ನು ನೋಡುತ್ತಿದ್ದ ದೇವೇಂದ್ರನಿಗೂ ದಿವಸೇಂದ್ರನಿಗೂ ತಮ್ಮ ತನಯರ ಕಾರ್ಯದ ವಿಷಯದಲ್ಲಿ ನಡೆಯುತ್ತಿದ್ದ ಜಗಳವು ಹರನ ಕಿವಿಗೂ ಬೀಳಲು ಈಶ್ವರನು ಹೀಗೆನ್ನುವನು.

**ಜಗಳಮಿದೇಂ ದಿನಕರ, ಪೊಣ**
**ರ್ದು ಗೆಲ್ವನೇ ನಿಜತನೂಭವಂ ಹರಿಗನೊಳೇಂ**
**ಬಗೆಗೆಟ್ಟೆಯೊ ಧುರದೊಳವಂ**
**ಮಿಗಿಲೆನಗೆ ನಿನಗೆ ಪಗಲೊಳೇಂ ಕಟ್ಟಲೆಯೇ**

ಕೊನೆಗೆ ಯುದ್ಧದಲ್ಲಿ ಅರಿನೃಪರನ್ನೆಲ್ಲ ನಿರ್ಮೂಲ ಮಾಡಿದ ಮೇಲೆ ಯಥಾವತ್ತಾಗಿ ವಿಕ್ರಮಾರ್ಜುನನಿಗೇ ಪಟ್ಟಾಭಿಷೇಕವಾಗುವುದು. ಧರ್ಮನಂದನನೂ ದೇವಕೀನಂದನನೂ ಇಂದ್ರನಂದನನನ್ನು ಕುರಿತು

**ಪ್ರಾಯದ ಪೆಂಪೆ ಪೆಂಪು, ಎಮಗೆ ಮೀಱಿದರಂ ತವೆ ಕೊಂದ ಪೆಂಪು ಕ**
**ಟ್ಟಾಯದ ಪೆಂಪು ಶಕ್ರನೊಡನೇಱಿದ ಪೆಂಪು, ಇವು ಪೆಂಪುವೆತ್ತು ನಿ**
**ಟ್ಟಾಯುಗಳಾಗಿ ನಿನ್ನೊಳಮರ್ದಿರ್ದುವು ನೀಂ ತಲೆವೀಸದೆ ಉರ್ವರಾ**
**ಶ್ರೀಯನಿದಾಗದೆನ್ನದೆ, ಒಳಕೊಳ್ ಪರಮೋತ್ಸವದಿಂ ಗುಣಾರ್ಣವಾ**

ಎಂದು ಹೇಳಿ ಅವನನ್ನು ಪಟ್ಟಾಭಿಷೇಕಕ್ಕೆ ಒಡಂಬಡಿಸುವರು. ಅದರೊಡನೆ ಸುಭದ್ರೆಗೆ ಮಹಾದೇವಿಪಟ್ಟವಾಗುವುದು. ಇದಕ್ಕೂ ಪಂಪನಿಗೆ ಸಾಕಷ್ಟು ಆಧಾರಗಳಿವೆ. ಅರಿಕೇಸರಿಯ ಹೆಂಡತಿಯಾದ ರೇವಕನಿರ್ಮಡಿಯೆಂಬ ಲೋಕಾಂಬಿಕೆಯು ಸುಭದ್ರೆಯಂತೆಯೇ ಯದುವಂಶಕ್ಕೆ ಸೇರಿದವಳು. ಅರಿಕೇಸರಿಯೂ ಅರ್ಜುನನಂತೆಯೇ ಲೋಕಾಂಬಿಕೆಯನ್ನು ಅವರ ಬಂಧುಗಳ ಇಷ್ಟಕ್ಕೆ ವಿರೋಧವಾಗಿ ಗುಪ್ತವಾಗಿ ಹರಣಮಾಡಿಕೊಂಡು ಬಂದು 'ಪ್ರಿಯಗಳ್ಳ'ನೆಂಬ ಬಿರುದನ್ನು ಪಡೆದಿರಬಹುದು. ಅರಿಕೇಸರಿಗೂ ಲೋಕಾಂಬಿಕೆಯ ಅಣ್ಣನಾದ ಇಂದ್ರನಿಗೂ ಇದ್ದ ವೈಷಮ್ಯವೂ ಅರ್ಜುನ ಬಲರಾಮನ ವೈಮನಸ್ಯದ ಹೋಲಿಕೆಯನ್ನು ಪಡೆದಿರಬಹುದು. ಆದರೂ ಅಖಂಡಭಾರತಕಥಾದೃಷ್ಟಿಯಿಂದ ಸುಭದ್ರಾಮಹಾದೇವಿಯ ಪಟ್ಟಾಭಿಷೇಕ ಅಷ್ಟು ಉಚಿತವಾಗಿ ಕಾಣುವುದಿಲ್ಲ. ಮೊದಲಿನಿಂದಲೂ ವಿಕ್ರಮಾರ್ಜುನನ ಪ್ರೀತಿಗೆ ಪಾತ್ರಳಾಗಿ ಸರ್ವದಾ ಅವನೊಡನಿದ್ದು ವಸ್ತ್ರಾಪಹರಣ ಕೇಶಾಪಕರ್ಷಣಗಳಿಗೆ ಸಿಕ್ಕಿ ಕಾಡುಮೇಡುಗಳಲ್ಲಿ ಅಲೆದು ಅಜ್ಞಾತವಾಸದಲ್ಲಿ ಪರರ ಸೇವೆಯಲ್ಲಿದ್ದು ಪಡಬಾರದ ಕಷ್ಟಪಟ್ಟು ಮಹಾಭಾರತಕ್ಕೆ ಆದಿಶಕ್ತಿಯೂ ಕುರುಕುಲಜೀವಾಕರ್ಷಣಕಾರಣಳೂ ಆಗಿದ್ದ ದ್ರೌಪದಿಯನ್ನು ಬಿಟ್ಟು

ಸುಖವಾಗಿ ಅರಮನೆಯ ಅಂತಃಪುರದಲ್ಲಿದ್ದ ಸುಭದ್ರೆಗೆ ಮಹಾದೇವಿ ಪಟ್ಟಕಟ್ಟುವುದು ಅನುಚಿತವಾಗಿಯೇ ಕಾಣುತ್ತದೆ. ಪಂಪನು ಪ್ರಾರಂಭದಲ್ಲಿ ದ್ರೌಪದಿಯ ವಿಷಯವನ್ನು ಪ್ರಸ್ತಾಪಿಸಿ ಕೊನೆಗೆ ಅವಳ ಹೆಸರನ್ನೇ ಎತ್ತದೆ ಸುಭದ್ರೆಗೆ ಪಟ್ಟಾಭಿಷೇಕ ಮಾಡಿಸುವನು. ವಾಸ್ತವವಾಗಿ ನೋಡುವುದಾದರೆ ದ್ರೌಪದಿಗುಂಟಾದ ಅಪಮಾನವೇ ಭಾರತಯುದ್ಧಕ್ಕೆ ಮೂಲಕಾರಣ. ಅವಳಿಗೆ ಕೊನೆಯಲ್ಲಿ ಸ್ಥಾನವಿಲ್ಲದಿರುವುದು ಸಮರ್ಪಕವಲ್ಲ. ಪಂಪನು ಅರ್ಜುನನನ್ನು ಕಥಾನಾಯಕನನ್ನಾಗಿ ಮಾಡಿಕೊಂಡಾಗ ನಾಯಿಕೆಯ ವಿಷಯದಲ್ಲಿ ಅವನಿಗೆ ಸ್ವಲ್ಪ ತೊಡಕುಂಟಾಗಿರಬೇಕು. ವೀರಾವೇಶವುಳ್ಳವಳೂ ಪಂಚಪತಿತ್ವವನ್ನುಳ್ಳವಳೂ ಕೇಶಾಪಕರ್ಷಣಾದಿ ಅವಮಾನಗಳಿಗೆ ಸಿಕ್ಕಿದವಳೂ ಆದ ದ್ರೌಪದಿಯು ಅವನ ದೃಷ್ಟಿಯಿಂದ ಕಥಾನಾಯಿಕೆಯಾಗಿರುವುದಕ್ಕೆ ಅರ್ಹಳಲ್ಲವೆಂದು ತೋರಿರಬೇಕು. ಆದುದರಿಂದ ಅವನು ಸುಭದ್ರೆಯನ್ನೇ ನಾಯಿಕೆಯನ್ನಾಗಿ ಮಾಡಿರುವನು. ಈ ವಿಷಯವನ್ನು ಸ್ಪಷ್ಟಪಡಿಸುವುದಕ್ಕಾಗಿಯೇ ಪಂಪನು ದ್ರೌಪದಿಯ ವಿವಾಹವನ್ನು ಒಂದೆರಡು ಪದ್ಯಗಳಲ್ಲಿ ಮುಗಿಸಿ ಸುಭದ್ರಾಪರಿಣಯವನ್ನು ಒಂದು ಆಶ್ವಾಸವನ್ನಾಗಿ ವಿಸ್ತರಿಸಿರುವುದು. ಪಂಪನು ಸುಭದ್ರೆಗೆ ರಾಜ್ಞೀಪದವಿಯನ್ನು ಕೊಟ್ಟರೂ ನಮಗೇನೋ ದ್ರೌಪದಿಯೇ ಆ ಸ್ಥಾನಕ್ಕೆ ಅರ್ಹಳೆನ್ನಿಸುತ್ತದೆ.

ಮತ್ತೊಂದು ವಿಷಯ, ದ್ರೌಪದಿಯ ಪಂಚಪತಿತ್ವವೂ ಲೌಕಿಕದೃಷ್ಟಿಯಿಂದ ಅಷ್ಟು ಸಮಂಜಸವಲ್ಲವೆಂದೇನೋ ಪಂಪನು ಅದನ್ನು ಮಾರ್ಪಡಿಸಿರುವನು. ಅವನ ಅಭಿಪ್ರಾಯದಂತೆ ದ್ರೌಪದಿಯನ್ನು ಮದುವೆಯಾಗುವವನು ಅರ್ಜುನನೊಬ್ಬನೇ, ಐವರಲ್ಲಿ ವಿದ್ವಿಷ್ಟವಿದ್ರಾವಣನು ಕೈ ಹಿಡಿದ ಸ್ತ್ರೀಯ ಭೋಗದಲ್ಲಿ ಇತರರು ಭಾಗಿಗಳಾಗುವುದು ಹಾಸ್ಯಾಸ್ಪದವೆಂಬುದಾಗಿ ಆತನಿಗೆ ತೋರಿರಬೇಕು. ದ್ರೌಪದಿಯ ಹೋಲಿಕೆ ಮತ್ತು ರಾಜ್ಞೀಪದವಿ ರಾಣಿಯಾದ ಲೋಕಾಂಬಿಕೆಗೂ ಹಿತವಾಗಿದ್ದಿರಲಾರದು. ಆದುದರಿಂದ ಅದನ್ನು ತಪ್ಪಿಸುವುದಕ್ಕೆ ಪ್ರಯತ್ನಪಟ್ಟು ಅನೇಕ ಕಡೆ ತೊಂದರೆಗೆ ಸಿಕ್ಕಿ ಪೂರ್ವವಾಸನಾ ಬಲದಿಂದ ತನ್ನನ್ನೆ ತಾನು ಮರೆತಿದ್ದಾನೆ.

ಪಾಂಚಾಲಿಗೆ ಬಂದೊದಗುವ ಆಪತ್ಕಾಲಗಳಲ್ಲೆಲ್ಲಾ ಆಕೆಯನ್ನು ಕಾಪಾಡುವುದು ಪಂಪನ ಪ್ರಕಾರ ಆಕೆಯ ಪತಿಯಾದ ಅರ್ಜುನನಿಗಿಂತಲೂ ಭೀಮಸೇನನೇ ಹೆಚ್ಚು. ಕಪಟದ್ಯೂತದಲ್ಲಿ ಧರ್ಮರಾಯನು ಎಲ್ಲರನ್ನೂ ಸೋತ ಮೇಲೆ ದ್ರೌಪದಿಯ ವಿಡಂಬನವಾಗುವ ಕಾಲದಲ್ಲಿ ಆ ಅನ್ಯಾಯವನ್ನು ನೋಡುತ್ತಿದ್ದಾಗ ಪ್ರೇಕ್ಷಕರಿಗೂ ಸಹಿಸಲಸಾಧ್ಯವಾದ ಆಕ್ರೋಶವುಂಟಾಗುವುದು. ಆಗ ಪಾಂಡವರು ಅಣ್ಣನ ನನ್ನಿಗೆ ಸಿಕ್ಕಿಬಿದ್ದು ಸುಮ್ಮನೆ ಕುಳಿತುಕೊಳ್ಳುವರು. ಆ ಸಂದರ್ಭದಲ್ಲಿ ದ್ರೌಪದಿಯು ತನಗಾದ ಅಪಮಾನದ ಸಿಗ್ಗಿನಿಂದ

> ಮುಡಿಯಂ ಪಿಡಿದೆೞೆದವನಂ
> ಮಡಿಯಿಸಿ ಮತ್ತವನ ಕರುಳ ಪಿಣೆಲಿಂದೆನ್ನಂ
> ಮುಡಿಯಿಸುಗೆ, ಆ ಮುಡಿಯಂ ದಲ್
> ಮುಡಿಯೆಂ ಗಳಂ, ಈಗಳಿಂತೆನ್ನಯ ಮುಡಿಯಂ

ಎಂದು ಹೇಳಿದುದನ್ನು ಕೇಳಿ ಭೀಮಸೇನನು ಕೋಪೋದ್ರೇಕವನ್ನು ತಡೆಯಲಾರದೆ ನವಮೇಘನಾದದಿಂದ ಹೀಗೆಂದು ಪ್ರತಿಜ್ಞೆ ಮಾಡುವನು:

ಮುಳಿಸಿಂದಂ ನುಡಿದೊಂದು ನಿನ್ನ ನುಡಿಸಲ್ಲೆ, ಆರಾಗದೆಂಬರ್
ಮಹಾ ಪ್ರಳಯೋಲ್ಕೋಪಮ ಮದ್ಗದಾಹತಿಯಿನ್,
ಅತ್ಯುಗ್ರಾಜಿಯೊಳ್ ಮುನ್ನಮೀ ।
ಖಳ ದುಶ್ಶಾಸನನಂ ಪೊರಳ್ಚಿ ಬಸಿಜಿಂ

ಪೋಳ್ದಿಕ್ಕಿ ಬಂಬಲ್ಗರು
ಳ್ಗಳಿನ್, ಆನಲ್ತೆ ವಿಳಾಸದಿಂ ಮುಡಿಯಿಪೆಂ ಪಂಕೇಜಪತ್ರೇಕ್ಷಣೇ ॥

ಕುಡಿವೆಂ ದುಶ್ಶಾಸನೋರಸ್ಥಳಮನ್, ಅಗಲೆ ಪೋೞ್ದಾರ್ದು ಪೊ
ಕ್ಕುಡಿವೆಂ ಪಿಂಗಾಕ್ಷನೂರುದ್ವಯಮನ್, ಉರುಗದಾಘಾತದಿಂ ನುಚ್ಚುನೂಱಾ
ಗೊಡೆವೆಂ ತದ್ರತ್ನರಶ್ಮಿಪ್ರಕಟಮಕುಟಮಂ ನಂಬು ನಂಬೆನ್ನ ಕಣ್ಬಿಂ
ಕಿಡಿಯುಂ ಕೆಂಡಂಗಳುಂ ಸೂಸಿದಪುವು, ಅಹಿತರಂ ನೋಡಿ ಪಂಕೇಜವಕ್ತ್ರೇ ॥

ಎಂದು ಗರ್ಜಿಸಿ ದಿಕ್ಪಾಲಕರ ಸಾಕ್ಷಿಯಾಗಿ ಪ್ರತಿಜ್ಞೆ ಮಾಡಿ 'ವಿಳಯಕಾಳಜಳಧರ ನಿನಾದದಿಂ' ಮೊಳಗುವನು. ಈ ಕೋಪಾಟೋಪದ ಮಧ್ಯದಲ್ಲಿ ಪಂಪನ ಪ್ರಕಾರ ಪತಿಯಾದ ಅರ್ಜುನನು ಒಂದು ಮಾತನ್ನೂ ಆಡದೆ ಕುಳಿತಿರುವನು. ಇದು ಆಭಾಸವಾಗಿ ಕಾಣುವುದಿಲ್ಲವೆ? ಈ ಸಂದರ್ಭದಲ್ಲಿ ಭೀಮನಾಡಿದ ಮಾತನ್ನೇ ಪ್ರಕಾರಾಂತರವಾಗಿ ಅರ್ಜುನನೇ ಹೇಳಿದ್ದರೆ ಇನ್ನೂ ಹೆಚ್ಚು ಸಮಂಜಸವಾಗುತ್ತಿದ್ದಿತಲ್ಲವೆ? ಈ ಸಮಯದಲ್ಲಿ ಪಂಪನು ತನ್ನ ಮಾರ್ಪಾಟನ್ನು ಮರೆತು ಮೂಲಭಾರತದಲ್ಲಿದ್ದುದನ್ನು ಇದ್ದಂತೆಯೇ ಹೇಳಿ ಬಿಟ್ಟಿದ್ದಾನೆ.

ಮುಂದೆ ಇನ್ನೆರಡು ಸ್ಥಳಗಳಲ್ಲಿ ಪಂಪನು ಹೀಗೆಯೆ ಮುಗ್ಗರಿಸಿರುವನು. ಪಾಂಡವರು ಅಜ್ಞಾತವಾಸದಲ್ಲಿದ್ದಾಗ ಕೀಚಕನು ದ್ರೌಪದಿಯಲ್ಲಿ ಅತ್ಯಾಚಾರನಡೆಸಲು ಪ್ರಯತ್ನ ಪಟ್ಟಾಗ ದ್ರೌಪದಿಯು ರಾತ್ರಿಯ ವೇಳೆಯಲ್ಲಿ, ಅದೂ ಕಟ್ಟೇಕಾಂತದಲ್ಲಿ ದುರುಳದಮನಕ್ಕೆ ಮೊರೆಯಿಟ್ಟದ್ದು ಭೀಮನಲ್ಲಿ; ಅರ್ಜುನನಲ್ಲಲ್ಲ. ಇದು ಮೊದಲಿಗಿಂತಲೂ ಹೆಚ್ಚು ಪಂಪನ ವಿಸ್ಮರಣೆಯನ್ನು ವ್ಯಕ್ತಗೊಳಿಸುತ್ತದೆ. ಅರ್ಜುನನು ಬೃಹನ್ನಳೆಯಾಗಿದ್ದುದರಿಂದ ದ್ರೌಪದಿಯು ಹೀಗೆ ಮಾಡಿದಳೆಂದು ಹೇಳಲಾಗುವುದಿಲ್ಲ. ಇದೇ ರೂಪದಲ್ಲಿದ್ದಾಗಲೇ ಅರ್ಜುನನು ಉತ್ತರಗೋಗ್ರಹಣಕಾಲದಲ್ಲಿ ಯುದ್ಧ ಮಾಡಿ ಎಲ್ಲರನ್ನೂ ಸೋಲಿಸಲಿಲ್ಲವೆ? ತಮ್ಮ ಗುಟ್ಟು ರಟ್ಟಾಗುವುದೆಂದು ಹೀಗೆ ಮಾಡಿದನೆಂದು ಭಾವಿಸಿದರೂ ಆಗಲೂ ಅರ್ಜುನನೇ ಈ ಕೆಲಸವನ್ನು ಮಾಡಿದ್ದರೆ ಹೆಚ್ಚು ಸಮಂಜಸವಾಗಿ ಕಾಣುತ್ತಿತ್ತು. ಇಲ್ಲಿಯೂ ವಿಸ್ಮರಣೆಯೇ ಇದಕ್ಕೆ ಕಾರಣ.

ಕೊನೆಗೆ ಭೀಮಸೇನನು ದುಶ್ಶಾಸನನನ್ನು ಸಂಹರಿಸಿ ತನ್ನ ಪೂಣ್ಕೆಯನ್ನು ಪೂರೈಸಿದ ಮೇಲೆ 'ದ್ರುಪದಾತ್ಮಜೆಗೆ ಬೞಿಯನಟ್ಟೆ ಜಯವನಿತೆ ಬರ್ಪಂತೆ ಬಂದ ತನ್ನ ತಳೋದರಿಯಂ ಕೆಲದೊಳ್ ಕುಳ್ಳಿರಿಸಿ ಪೊಸೆದು ಜಡೆಗೊಂಡಿರ್ದ ಕೇಶಮಂ ಪಸರಿಸಿ ವೈರಿಯ ಪಲ್ಲ ಪಣಿಗೆಯಿಂ ಬಾಚಿ ದುಶ್ಶಾಸನನ ಕರುಳ್ಗಳೆ ಪೊಸ ಬಾಸಿಗಮಾಗೆ ಕೃಷ್ಣೆಯಂ ಮುಡಿಯಿಸಿ

ಅವಳ ಮೊಗಮಂ ನೋಡಿ ಮುಗುಳ್ನಗೆ ನಕ್ಕು' ಅವಳಲ್ಲಿ ಪ್ರಣಯಮೋಹವಂ ಬೀರಿ ಮಾತನಾಡುವನು. ದ್ರೌಪದಿಯಾದರೋ ಭೀಮನಲ್ಲಿ ತನ್ನ ಅನುರಾಗವನ್ನು ವ್ಯಕ್ತಪಡಿಸುವಳು. ಈ ಸಂದರ್ಭಗಳಲ್ಲೆಲ್ಲಾ ಅರ್ಜುನನು ಪ್ರೇಕ್ಷಕನು ಮಾತ್ರನಾಗಿರುವನು. ಸಾಕ್ಷಾತ್‌ಪತಿಯೇ ಇದುರಿನಲ್ಲಿರುವಾಗ, ಅದರಲ್ಲಿಯೂ ಅವನು ಮೂರು ಲೋಕದ ಗಂಡನಾಗಿರುವಾಗ ದ್ರೌಪದಿಯನ್ನು ರಕ್ಷಿಸಲು ಮೈದುನನಾದ ಭೀಮಸೇನನು ಈ ರೀತಿ ನಡೆದುಕೊಂಡುದು ವಿಸ್ಮಯಜನಕವಲ್ಲವೆ? ಈ ಸಮಯಗಳಲ್ಲೆಲ್ಲ ಪಂಪನು ಭೀಮಸೇನನು ದ್ರೌಪದಿಯ ಮೈದುನನೆಂಬುದನ್ನು ಮರೆತು ಪತಿಯೆಂಬ ಪೂರ್ವವಾಸನೆಯಿಂದಲೇ ಭ್ರಾಂತನಾಗಿದ್ದಾನೆ. ಅವನು ಮನಸ್ಸು ಮಾಡಿದ್ದರೆ ಈ ಸಂದರ್ಭಗಳನ್ನು ವ್ಯತ್ಯಾಸಮಾಡಲಾಗದಿರಲಿಲ್ಲ.

ಪಂಪನಲ್ಲಿ ಜೈನ ವೈದಿಕ ಸಂಸ್ಕಾರಗಳು ಮಿಳಿತವಾಗಿವೆ. ಅವನು ಭಾರತವನ್ನು ರಚಿಸುತ್ತಿರುವುದು, ವೈದಿಕನಾದ-ಶೈವನಾದ ಅರಿಕೇಸರಿಗಾಗಿ. ಅವನು ಅದನ್ನು ಜ್ಞಾಪಕದಲ್ಲಿಟ್ಟುಕೊಂಡು ಶಿವಭಕ್ತಿಗೆ, ಪೂಜೆಗೆ, ಸ್ತೋತ್ರಕ್ಕೆ ಅಲ್ಲಲ್ಲೇ ಅವಕಾಶ ವನ್ನುಂಟುಮಾಡಿಕೊಂಡಿದ್ದಾನೆ. ಆದರೂ ತನ್ನ ಜೈನಸಂಸ್ಕಾರ ಅತಿಯಾಗಿಲ್ಲದಿದ್ದರೂ ಆಗಾಗ ಸ್ವಲ್ಪ ಹೆಡೆಯೆತ್ತಿ ಕಥಾಭಿತ್ತಿಯಲ್ಲಿಯೂ ಪಾತ್ರಪರಿಕಲ್ಪನೆಯಲ್ಲಿಯೂ ತನ್ನ ಪ್ರಭಾವವನ್ನು ಬೀರಿದೆ. 'ಪಂಪ ಭಾರತ'ವೂ 'ಜಿನಪದಾಂಭೋಜವರಪ್ರಸನ್ನ'ವಾದುದು. ಪಂಪನಿಗೆ ವ್ಯಾಸರು, ವ್ಯಾಸಭಟ್ಟಾರಕರು. ವಿಷ್ಣು ಕೃಷ್ಣರು ಅಭವ, ಅಜ, ಅಜಿತ, ಅನಂತರು. ಅರ್ಜುನನ ಜನ್ಮೋತ್ಸವದ ವರ್ಣನೆಯಲ್ಲಿ ತೀರ್ಥಂಕರರ ಜನ್ಮೋತ್ಸವದ ಛಾಯೆಯಿದೆ. ಅರ್ಜುನನು ತಪಸ್ಸು ಮಾಡುವಾಗ ಇಂದ್ರನಿಗೆ ಆಸನಕಂಪವಾಗುತ್ತದೆ. ಸಂಸಾರಾಸಾರತೆಯ ಮತ್ತು ಭವಾವಳಿಗಳ ಸೂಚನೆ ಆಗಾಗ ಕಂಡುಬರುತ್ತದೆ. ಜನ್ಮಾಂತರಸ್ಮರಣೆ, ಜಾತಿಸ್ಮರತ್ವ, ಬಲದೇವ ವಾಸುದೇವರ ಜೋಡಿ ಇವೂ ಅಲ್ಲಲ್ಲಿ ಇವೆ. ಇವೆಲ್ಲಕ್ಕಿಂತಲೂ ಪಂಪನ ಜೈನಮತಪ್ರಭಾವ ವಿಶೇಷ ಕಂಡುಬರುವುದು ಶ್ರೀಕೃಷ್ಣನ ಪಾತ್ರರಚನೆಯಲ್ಲಿ. ಹಿಂದುಗಳಿಗೆ ಭಾರತವು ಪಂಚಮವೇದ. ಅದರ ಮೂಲಶಕ್ತಿ ಶ್ರೀಕೃಷ್ಣ. ಕೆಲವು ಕವಿಗಳಂತೂ ಭಾರತವನ್ನು ಕೃಷ್ಣಚರಿತೆಯೆಂದೇ ಕರೆದಿರುವುದೂ ಉಂಟು. ಜೈನರಿಗೆ ಭಾರತದಲ್ಲಾಗಲಿ ಕೃಷ್ಣ ಭಗವಂತನಲ್ಲಾಗಲಿ ಈ ಪೂಜ್ಯಮನೋಭಾವವಿಲ್ಲ. ಅವರ ಪ್ರಕಾರ ಕೃಷ್ಣನು ಗುಣಾವಗುಣಮಿಶ್ರಿತನಾದ ಒಬ್ಬ ಸಾಮಾನ್ಯಮನುಷ್ಯ-ವಾಸುದೇವ. ಈ ಜೈನಮತದ ಪ್ರಭಾವದ ಫಲವಾಗಿ ಪಂಪನು ಮಹಾಭಾರತದ ಬೃಹದ್ದೇವತೆಯಾದ ಶ್ರೀಕೃಷ್ಣನ ವಿಷಯದಲ್ಲಿ ತನ್ನ ಆ ತೀರ್ಥಂಕರನ ವಿಷಯದಲ್ಲಿದ್ದ ಶ್ರದ್ಧಾ ಭಕ್ತಿಗಳಿಲ್ಲದುದರಿಂದ ಅವನನ್ನು ಸಾಮಾನ್ಯವ್ಯಕ್ತಿಯಂತೆ ಚಿತ್ರಿಸಿ ಅವನ ಪ್ರಾಮುಖ್ಯವಿರುವ ಸನ್ನಿವೇಶಗಳನ್ನೆಲ್ಲಾ ತೇಲಿಸಿಬಿಟ್ಟು ಕೊನೆಗೆ ಆತನ ಗೀತೋಪದೇಶವನ್ನು 'ವಿಕ್ರಮಾರ್ಜುನನೊಳಾದ ವ್ಯಾಮೋಹಮಂ ಕಳೆಯಲೆಂದು ಮುಕುಂದಂ ದಿವ್ಯಸ್ವರೂಪಮಂ ತೋಱೆ..ನಿನಗೊಡ್ಡಿ ನಿಂದುದನಿದನೋವದೆ ಕೊಲ್ವೊಡೆ ನೀನುಮೆನ್ನ ಕಜ್ಜದೊಳೆಸಗೆಂದು ಸೈತಜಿತನಾದಿಯ ವೇದರಹಸ್ಯದೊಳ್ ನಿರಂತರದ ಪರಿಚರ್ಯೆಯಿಂ ನೆಱೆಯೆ ಯೋಜಿಸಿದಂ ಕದನತ್ರಿಣೇತ್ರನಂ' ಎಂಬ

ಭಾಗದಿಂದ ಮುಗಿಸಿಬಿಟ್ಟಿದ್ದಾನೆ. ಕೊನೆಗೆ ಮಹಾಭಾರತವು ಲೋಕಪೂಜ್ಯವಾಗುವುದಕ್ಕೆ ಕಾರಣರಾದ ವ್ಯಕ್ತಿಗಳನ್ನು ತಿಳಿಸುವ

ಚಲದೊಳ್ ದುರ್ಯೋಧನಂ ನನ್ನಿಯೊಳಿನತನಯಂ ಗಂಡಿನೊಳ್ ಭೀಮಸೇನಂ
ಬಲದೊಳ್ ಮದ್ರೇಶನತ್ಯುನ್ನತಿಯೊಳಮರಸಿಂಧೂದ್ಭವಂ ಚಾಪವಿದ್ಯಾ
ಬಲದೊಳ್ ಕುಂಭೋದ್ಭವಂ, ಸಾಹಸದ ಮಹಿಮೆಯೊಳ್ ಫಲ್ಗುಣಂ, ಧರ್ಮದೊಳ್ ನಿ
ರ್ಮಲಂ ಚಿತ್ತಂ ಧರ್ಮಪುತ್ರಂ ಮಿಗಿಲ್, ಇವರ್ಗಳಿನೀ ಭಾರತಂ ಲೋಕಪೂಜ್ಯಂ ॥

ಎಂಬ ಪದ್ಯದಲ್ಲಿಯೂ ಕೂಡ ಕೃಷ್ಣನ ಹೆಸರಿಗೆ ಒಂದು ಸ್ಥಾನವಿಲ್ಲ. ವ್ಯಾಸಭಾರತದ ದೃಷ್ಟಿಯಿಂದ ನೋಡುವುದಾದರೆ ಈ ಸಂಗತಿ ಸ್ವಲ್ಪ ಊನವಾಗಿಯೇ ಕಾಣುತ್ತದೆ. (ಇದು ಲೌಕಿಕಕಾವ್ಯವಾದುದರಿಂದ ಲೌಕಿಕವನ್ನು ಮೀರಿದ ಕೃಷ್ಣನ ಹೆಸರನ್ನು ಇದರಲ್ಲಿ ಸೇರಿಸಿಲ್ಲವೆಂದೂ ಭಾರತದ ಕೆಲವೆಡೆಯಲ್ಲಿ ಬರುವ ಕೃಷ್ಣನ ಶಕ್ತಿ ವೈಭವಗಳ ವರ್ಣನೆ ಪಂಪನಿಗೆ ಕೃಷ್ಣನಲ್ಲಿ ಪೂರ್ಣಭಕ್ತಿಯಿತ್ತೆಂದು ಸೂಚಿಸುವುದೆಂದೂ ಕೆಲವರು ಅಭಿಪ್ರಾಯಪಡುವುದು ಅಷ್ಟು ಸಮರ್ಪಕವಾಗಿ ಕಾಣುವುದಿಲ್ಲ)

ಇನ್ನು ಕೆಲವೆಡೆಗಳಲ್ಲಿ ಪಂಪನ ಬದಲಾವಣೆಗಳು ಕಥಾಸಂವಿಧಾನಕ್ಕೆ ವಿಶೇಷ ಹೊಳಪನ್ನು ತರುವುವು. ವ್ಯಾಸಭಾರತದ ವಸ್ತ್ರಾಪಹರಣದ ಕಥೆಯು ಲೌಕಿಕದೃಷ್ಟಿಯಿಂದ ಅನುಚಿತವಾದುದೆಂದು ಭಾವಿಸಿ ಪಂಪನು ಅದನ್ನು ಬಿಟ್ಟು ಕೇಶಾಪಕರ್ಷಣದ ವಿಚಾರವನ್ನು ಮಾತ್ರ ಹೇಳಿ ಕೊನೆಯಲ್ಲಿ ದುಶ್ಶಾಸನನ ವಧಾನಂತರ

ಇದರೊಳ್ ಶ್ವೇತಾತಪತ್ರಸ್ಥಗಿತ ದಶದಿಶಾಮಂಡಲಂ ರಾಜಚಕ್ರಂ
ಪುದಿದಟ್ಟಾಡಿತ್ತು, ಅಡಂಗಿತ್ತಿದಱೊಳೆ ಕುರುರಾಜಾನ್ವಯಂ, ಮತ್ಪ್ರತಾಪ
ಕ್ಕಿದಱೊಳೆ ನೋಡಗುರ್ವುರ್ವಿದುದು, ಇದುವೆ ಮಹಾಭಾರತಕ್ಕಾದಿಯಾಯ್ತು, ಆ
ಬ್ಜದಳಾಕ್ಷಿ ಪೇಟಿ, ಸಾಮಾನ್ಯಮೆ, ಬಗೆಯೆ, ಭವತ್ಕೇಶಪಾಶಪ್ರಪಂಚಂ ॥

ಎಂದು ಹೇಳಿ ವೇಣೀಸಂಹಾರವನ್ನು ಮುಗಿಸುವುದು ಸ್ವಾರಸ್ಯವಾಗಿದೆ.

ಹಾಗೆಯೇ ದ್ರೌಪದಿಯು ದುಶ್ಶಾಸನದಿಂದ ಸಭೆಗೆ ಸೆಳೆಯಲ್ಪಟ್ಟಾಗ ಕರ್ಣನು ನೋಡಿ ನಕ್ಕನೆಂದೂ ಸಲ್ಲದ ಮಾತುಗಳನ್ನಾಡಿದನೆಂದೂ ವ್ಯಾಸಭಾರತದಲ್ಲಿರುವುದನ್ನು ಬಿಟ್ಟಿರುವುದೂ ಕರ್ಣನನ್ನು ರಾಜ್ಯಲಕ್ಷ್ಮಿ ಬಿಡಲಾರಳೆಂಬುವುದೂ 'ಕರ್ಣನ ಪಡೆಮಾತಿನೊಳ್ ಪುದಿದು ಕರ್ಣರಸಾಯನಮಲ್ತೆ ಭಾರತಂ' ಎಂದು ಹೇಳುವುದೂ ಕರ್ಣನ ಪಾತ್ರಕ್ಕೆ ಗೌರವವನ್ನು, ಮಹಿಮೆಯನ್ನು ಕೊಡುವುದಲ್ಲದೆ ಒಟ್ಟಿನಲ್ಲಿ ಬಹಳ ಗಂಭೀರವಾಗಿದೆ.

ಪಂಪಭಾರತದಲ್ಲಿ ಇನ್ನೂ ಕೆಲವು ಹೊಸಸಂಗತಿಗಳಿವೆ. ಯುಧಿಷ್ಠಿರನ ಆಜ್ಞಾನುಸಾರ ಯಕ್ಷನ ವಿಷಸರೋವರಕ್ಕೆ ನೀರು ತರಲು ಹೋದ ಭೀಮಾರ್ಜುನ ನಕುಲ ಸಹದೇವರು ಯಕ್ಷನ ಪ್ರಶ್ನೆಗೆ ಉತ್ತರಕೊಡದೆ ನೀರನ್ನು ಕುಡಿದು ಮೈಮರೆತು ಬೀಳುವರು. ದುರ್ಯೋಧನನ ಪುರೋಹಿತನಾದ ಕನಕಸ್ವಾಮಿಯು ಪಾಂಡವರನ್ನು ಕೊಲ್ಲಲು ಕಳುಹಿಸಿದ ಕೀರ್ತಿಗೆಯು ಬಂದು ಕೊಳದ ತಡಿಯಲ್ಲಿ ಬಿದ್ದಿದ್ದ ನಾಲ್ವರನ್ನೂ ತಿಂದು ಮುಗಿಸುವನೆಂದೆಣಿಸಿ ಕೈಹಾಕುವುದು ಅವರನ್ನು ಆ ಅವಸ್ಥೆಗೆ ತಂದ ದೈವವು ಪ್ರತ್ಯಕ್ಷವಾಗಿ ಆ ಉಗ್ರದೇವತೆಯನ್ನು

ನೀನು ದೂರಹೋಗು ಎನ್ನಲು 'ನಾನು ನನ್ನ ಮಾತಿನಂತೆ ನಡೆದುಕೊಳ್ಳಬೇಕು, ಯಾರನ್ನು ಭಕ್ಷಿಸಲಿ, ಎಂದು ಕೇಳುವುದು. ಆಗ ಯಕ್ಷನು 'ಎಲೈ ಪಿಶಾಚಿಯೇ ನಿನ್ನನ್ನು ಯಾವನು ಹುಟ್ಟಿಸಿದನೋ ಅವನನ್ನೇ ತಿನ್ನು' ಎಂದು ಹೇಳಲು ಆ ದೇವತೆಯು ಹಾಗೆಯೇ ಹಿಂದಿರುಗಿ 'ಕನಕನ ಬೇಳ್ವೆ ಕನಕನಿಗೇ ತಟ್ಟಿತು' ಎಂದು ಜನರಾಡಿಕೊಳ್ಳುವಂತೆ ಅವನನ್ನೇ ತಿಂದು ಬಿಟ್ಟಿತು. ಈ ಕಥೆಯು ಪಂಪಭಾರತದಲ್ಲಿದೆ, ಮೂಲಭಾರತದಲ್ಲಿಲ್ಲ. ಅರ್ಜುನನಿಗೆ 'ಕಿರೀಟಿ'ಯೆಂಬ ಹೆಸರು ಬರಲು ಪಂಪನು ಕೊಟ್ಟಿರುವ ಕಾರಣವೂ ವ್ಯಾಸಭಾರತದಲ್ಲಿಲ್ಲ. ಕೃಷ್ಣಪರಮಾತ್ಮನು ಸಂಧಾನಕ್ಕೆ ಬಂದ ಕಾಲದಲ್ಲಿ ದುರ್ಯೋಧನನು ವಿದುರನನ್ನು ಹೀಯಾಳಿಸಲು ವಿದುರನು ರೇಗಿ-

**ಕಡು ಮುಳಿದು ನಿನ್ನ ತೊಡೆಗಳ**
**ನುಡಿವೆಡೆಯೊಳ್ ಭೀಮಸೇನನಾ ಪದದೊಳ್**
**ಪಿಡಿಯಲ್ಕೆಂದಿರ್ದೆನಿದಂ**
**ಪಿಡಿಯೆಂ ಪೋಗೆಂದು ಸಭೆಯೊಳುಡಿದಂ ಬಿಲ್ಲಂ ॥**

ಎಂದು ಹೇಳುವುದೂ ಪಂಪನದೇ. ಕರ್ಣನು ಕುಂತಿಯ ಮಗನೆಂದು ದುರ್ಯೋಧನನು ತಿಳಿದುಕೊಂಡುದು ಸತ್ಯಂತಪರೆಂಬ ದಿವ್ಯಜ್ಞಾನಿಗಳಿಂದ ಎಂದು ಹೇಳುವ ಕೃಷ್ಣನ ಮಾತುಗಳಿಗೆ ಮೂಲಭಾರತದಲ್ಲಿ ಆಧಾರವಿಲ್ಲ. ಈ ಬದಲಾವಣೆಗಳಿಗೆಲ್ಲ ಸರಿಯಾದ ಕಾರಣವನ್ನು ಊಹಿಸುವುದು ಸಾಧ್ಯವಿಲ್ಲ. ಇವುಗಳನ್ನು ನೋಡಿದರೆ ಪಂಪನೇ ಮೂಲಭಾರತದಿಂದ ಈ ಬದಲಾವಣೆಗಳನ್ನು ಮಾಡಿಕೊಂಡನೋ ಅಥವಾ ಹೀಗೆ ಕಥಾಶರೀರದಲ್ಲಿ ವ್ಯತ್ಯಾಸವನ್ನು ಹೊಂದಿದ್ದ ಬಹುಶಃ ಜೈನಸಂಬಂಧಿಯಾದ ಬೇರೊಂದು ಭಾರತವೇ ಪಂಪನ ಕಾಲದಲ್ಲಿದ್ದಿತೋ ಎಂಬ ಸಂಶಯವು ಹುಟ್ಟುವುದು. ಸರಿಯಾದ ಆಧಾರಗಳು ಸಿಕ್ಕುವವರೆಗೆ ಹೀಗೆ ನಿರ್ಧರಿಸಲು ಸಾಧ್ಯವಿಲ್ಲ.

**'ಪಂಪಭಾರತ'ದಲ್ಲಿ ಪೂರ್ವಕವಿಗಳಿಂದ ಸ್ವೀಕರಣವಿಚಾರ:** ಪಂಪನು ಮೇಲೆ ಹೇಳಿದಂತೆ ಮೂಲಭಾರತದ ಕಥೆಯಲ್ಲಿ ಹಲವು ವ್ಯತ್ಯಾಸಗಳನ್ನು ಮಾಡಿರುವುದಲ್ಲದೆ ಕನ್ನಡದ ಸಂಪತ್ತೂ ಸ್ವಾರಸ್ಯವೂ ಸ್ಫುಟವಾಗುವಂತೆ ಸಂಸ್ಕೃತದ ಶ್ರೇಷ್ಠಕವಿಗಳಾದ ಕಾಳಿದಾಸ, ಭಾರವಿ, ಶ್ರೀಹರ್ಷ, ಭಟ್ಟ ನಾರಾಯಣ ಮೊದಲಾದವರ ಕೃತಿಗಳಿಂದ ಕೆಲವು ಭಾಗಗಳ ಸಾರವನ್ನು ತನ್ನ ಕಾವ್ಯದಲ್ಲಿ ಪ್ರಯೋಗಿಸಿದ್ದಾನೆ. ನಾಲ್ಕನೆಯ ಆಶ್ವಾಸದಲ್ಲಿ ಬರುವ ಮಲಯಪರ್ವತದ ವರ್ಣನೆಯು ನಾಗಾನಂದದ ಮಲಯಪರ್ವತದ ವರ್ಣನೆಯ ಅನುವಾದವಿರಬೇಕು. ಪಂಚಮಾಶ್ವಾಸದಲ್ಲಿ ವಿರಹಜ್ವಾಲೆಯಿಂದ ತಪ್ತಳಾದ ಸುಭದ್ರೆಯನ್ನು ಅರ್ಜುನನು ಮರೆಯಾಗಿ ನಿಂತು ನೋಡುತ್ತ ಅವರ ಸರಸಲ್ಲಾಪಗಳನ್ನು ಕೇಳುವ ಸನ್ನಿವೇಶವನ್ನು ಕಾಳಿದಾಸನ 'ಶಾಕುಂತಲ'ದಿಂದ ತೆಗೆದುಕೊಂಡಿರಬೇಕು. ಸಪ್ತಮಾಶ್ವಾಸದ ಇಂದ್ರಕೀಲಪ್ರಕರಣವು ಭಾರವಿಯ 'ಕಿರಾತಾರ್ಜುನೀಯ'ದ ಸಾರಾಂಶವೆಂದು ಹೇಳಬಹುದು. ಕರ್ಣಾಶ್ವತ್ಥಾಮರ ವಾಗ್ಯುದ್ಧವು 'ವೇಣೀಸಂಹಾರ' ನಾಟಕದ ಛಾಯೆಯಿಂದ ಕೂಡಿದೆ. ಹೀಗೆ ಪಂಪನು ಸಮಯೋಚಿತವಾಗಿ ಸಂಸ್ಕೃತದ ಉದ್ದಾಮಕವಿಗಳ

ಉದಾತ್ತವಾದ ಪ್ರತಿಭೆಯನ್ನು ತನ್ನ ಕಾವ್ಯದಲ್ಲಿ ಪ್ರತಿಬಿಂಬಿಸಿ ಕನ್ನಡವನ್ನು ಸಂಪದ್ಯುಕ್ತವಾಗಿ ಮಾಡಿದ್ದಾನೆ. ಭಾವವನ್ನು ಇತರರಿಂದ ತೆಗೆದುಕೊಂಡಿದ್ದರೂ ನಿರೂಪಣರೀತಿಯನ್ನು ತನ್ನದನ್ನಾಗಿಯೇ ಮಾಡಿಕೊಂಡಿರುವುದು ಅವನ ವೈಶಿಷ್ಟ್ಯ.

**ಪಂಪಭಾರತದ ಕಥಾಸರಣಿ** : ಪಂಪನಿಗೆ ಸಮಗ್ರಭಾರತವನ್ನು ಬರೆಯುವ ಭರದಲ್ಲಿ ಹೆಚ್ಚು ವಿವರಗಳನ್ನು ತುಂಬುವುದಕ್ಕೆ ಅವಕಾಶವಿಲ್ಲ. 'ಪೆಱವುಮುಪಾಖ್ಯಾನ ಕಥೆಗಳೊಳಮೊಂದಂ ಕುಂದಲೀಯದೆ ಪೇೞ್ವೆಂ' ಎಂದು ಹೇಳುವನಾದರೂ ಎಷ್ಟೋ ವಿಷಯಗಳನ್ನು ಬಹುಕೌಶಲದಿಂದ ಕ್ರೋಡೀಕರಿಸಿ ಒಂದೆರಡು ಮಾತುಗಳಲ್ಲಿ ಕಾವ್ಯಕ್ಕೆ ಸರಿಹೋಗುವಂತೆಯೂ ಆಯಾ ಸನ್ನಿವೇಶಗಳ ಮಹತ್ವವೂ ಪಾತ್ರಗಳ ವ್ಯಕ್ತಿತ್ವವೂ ಚೆನ್ನಾಗಿ ಸ್ಫುರಿಸುವಂತೆಯೂ ಮೂಲಗ್ರಂಥದ ಆಶಯ ಕೆಡದಂತೆಯೂ ಮೂಲರೇಖೆಗಳನ್ನು ಮಾತ್ರ ಎಳೆದಿರುವನು. ಮೊದಲು ಪಾಂಡವ ಕೌರವ ಜನನದಿಂದ ಹೊರಟು ಅವರ ಬಾಲಕೇಳಿ, ಭೀಮ ದುರ್ಯೋಧನರ ದ್ವೇಷಕ್ಕೆ ಕಾರಣ, ಲಾಕ್ಷಾಗೃಹದಹನ, ಹಿಡಿಂಬಾಸುರವಧೆ, ದ್ರೌಪದೀಪರಿಣಯ, ಇಂದ್ರಪ್ರಸ್ಥಗಮನ, ಇವುಗಳವರೆಗೆ ಕಥಾಸರಣಿಯಲ್ಲಿ ಎಲ್ಲಿಯೂ ಎಡರು ಬಾರದಂತೆ ಸರಿಪಡಿಸಿಕೊಂಡು ನಿರೂಪಿಸುತ್ತ ಹೋಗಿರುವನು. ಇಲ್ಲಿಂದ ಮುಂದೆ ಮೂಲಭಾರತದ ಪ್ರಕಾರ ನಾರದಾದೇಶದಂತೆ ಅರ್ಜುನನನ್ನು ಭೂಪ್ರದಕ್ಷಿಣೆಗೆ ಕಳುಹಿಸಬೇಕು. ಹಾಗೆ ಇಲ್ಲಿ ಮಾಡಲು ಸಾಧ್ಯವಿಲ್ಲ. ದ್ರೌಪದಿಯ ಪತಿಯು ಅರ್ಜುನನೊಬ್ಬನೇ ಎಂಬ ವಿಷಯದಲ್ಲಿ ಪಂಪನು ಜಾಗರೂಕನಾಗಿರುವನು. ಅಲ್ಲದೆ 'ವರ್ಣಕಂ ಕತೆಯೊಳೊಡಂಬಡಂ ಪಡೆಯೆ' ಹೇಳಬೇಕು ತಾನೆ? ಆದುದರಿಂದ ಅರ್ಜುನನ ಪ್ರಯಾಣಕ್ಕೆ ಪಂಪನು ಬೇರೆಯ ಕಾರಣವನ್ನು ಕಲ್ಪಿಸಿರುವನು. ಅದು 'ದಿಗಂಗನಾ ಮುಖಾವಲೋಕನಕ್ಕಾಗಿ'. ಅರ್ಜುನನು ದಿಗ್ವಿಜಯಾರ್ಥವಾಗಿ ಹೊರಟು ಸಮಸ್ತ ರಾಷ್ಟ್ರಗಳಲ್ಲಿ 'ಆತ್ಮೀಯ ಶಾಸನಾಯತ್ತಂ' ಮಾಡುತ್ತ ಬರುವನು. ಇಲ್ಲಿ ಪಂಪನಿಗೆ ಅನೇಕ ದೇಶಗಳನ್ನು, ತನ್ನ ವಿಸ್ತಾರವಾದ ಅನುಭವವನ್ನು ವರ್ಣಿಸುವುದಕ್ಕೆ ಅವಕಾಶ ಸಿಕ್ಕುವುದು. ಅರ್ಜುನನು ಮುಂದೆ ಹೊರಟು ಗೋಕರ್ಣ ಬನವಾಸಿಗಳನ್ನು ದಾಟಿ ದ್ವಾರಕಾಪುರವನ್ನು ಸೇರಿ 'ಅಲ್ಲಿ ತನ್ನ ಹಲವು ಜನ್ಮಗಳ ಕೆಳೆಯ'ನಾದ ಕೃಷ್ಣನು ತನ್ನನ್ನು ಇದಿರ್ಗೊಳ್ಳಲು ಪುರಪ್ರವೇಶಮಾಡುವನು. ಪುರಸ್ತ್ರೀಯರು ಫಲ್ಗುಣನ ರೂಪಾತಿಶಯವನ್ನು ನೋಡಿ 'ಗುಣಾರ್ಣವನೀತನೇ' ಎಂದು ಬೆರಗುಗೊಂಡು ನೋಡುವರು. ಅಲ್ಲಿಂದ ಮುಂದೆ ಸುಭದ್ರಾರ್ಜುನರ ಅನುರಾಗ, ಸೂರ್ಯಾಸ್ತಮಯ, ರಾತ್ರಿ, ಚಂದ್ರೋದಯ, ಅರ್ಜುನ ಚಂದ್ರಿಕಾವಿಹಾರ, ವೇಶ್ಯಾವಾಟಿಕೆ, ಪಾನಗೋಷ್ಠಿ, ಸುಭದ್ರೆಯ ವಿರಹ, ಸುಭದ್ರಾಪರಿಣಯ-ಮೊದಲಾದವುಗಳಲ್ಲಿ ವರ್ಣಕಕಾವ್ಯದ ಲಕ್ಷಣಗಳನ್ನು ಪೂರ್ತಿಗೊಳಿಸುವುದಕ್ಕೆ ಸಹಾಯಕವಾಗುವುದು. ಇವುಗಳ ವರ್ಣನೆಗಳಿಂದ ಆಶ್ವಾಸಗಳು ತುಂಬಿ ತುಳುಕಾಡುವುವು. ಕಥೆಯ ಬೆಳವಣಿಗೆಗೆ-ಅನುಸ್ಯೂತವಾದ ಪ್ರವಾಹಕ್ಕೆ- ಇದು ಸ್ವಲ್ಪ ಕುಂದನ್ನು, ಅಡಚಣೆಯನ್ನು ಉಂಟುಮಾಡಿದರೂ ಪಂಪನ ಅಪಾರವಾದ ಅನುಭವದ ಪ್ರದರ್ಶನಕ್ಕೂ ಆಳವಾದ ರಸಿಕತೆಗೂ, ಉತ್ತಮವಾದ ವರ್ಣನಾಕೌಶಲಕ್ಕೂ ಇವು

ಕೈಗನ್ನಡಿಯಂತಿವೆ. ಇವುಗಳನ್ನು ಪ್ರತ್ಯೇಕವಾಗಿ ಓದಿದರೆ ಸ್ವತಂತ್ರ ಭಾವಗೀತೆಗಳಂತೆಯೇ ಇವೆ. ಇವನ್ನು ಓದುವಾಗ ಭಾರತವನ್ನು ಓದುತ್ತಿರುವ ಅರಿವೇ ಇರುವುದಿಲ್ಲ. ಚಿತ್ರದ ಮೇಲೆ ಚಿತ್ರ, ಏಕಪ್ರಕಾರವಾದ ಚಿತ್ರಪಟದ ಸುರುಳಿಯನ್ನು ಬಿಚ್ಚಿದಂತೆ ಕಣ್ಣುಮುಂದೆ ಹಾದು ಹೋಗಿ ಕಣ್ಮನಗಳನ್ನು ತೃಪ್ತಿಗೊಳಿಸಿ ವಾಚಕರನ್ನು ಮುಗ್ಧರನ್ನಾಗಿಸುವುವು. ಮುಂದೆ ಅರ್ಜುನನೂ ಸುಭದ್ರೆಯೂ ಇಂದ್ರಪ್ರಸ್ಥವನ್ನು ಪ್ರವೇಶಿಸುವುದು, ಸುಭದ್ರಾವಿವಾಹ, ಅಭಿಮನ್ಯುವಿನ ಜನನ, ಮೃಗಯಾವಿಹಾರ-ಇವೇ ಮೊದಲಾದುವು ಬಹು ರಸಭರಿತವಾಗಿಯೂ ಮಿತಿಯರಿತೂ ವರ್ಣಿತವಾಗಿವೆ.

ಮುಂದೆ ಅರ್ಜುನನ ಅನ್ಯಾದೃಶವಾದ ಪೌರುಷವನ್ನು ವ್ಯಕ್ತಗೊಳಿಸುವ ಖಾಂಡವದಹನದ ದೃಶ್ಯ ಕಣ್ಣಿಗೆ ಬೀಳುವುದು. ಇಲ್ಲಿ ಕವಿಯು ಪ್ರಸ್ತುತವಿಷಯವನ್ನು ಮನದಟ್ಟಾಗುವಂತೆ ವರ್ಣಿಸುವ ವೈಖರಿಯೂ ಗ್ರಹಿಸಲಸಾಧ್ಯವಾದುದನ್ನು ಶಬ್ದಗಳ ಸಂವಿಧಾನದಿಂದ ಚಿತ್ರಿಸುವ ನೈಪುಣ್ಯವೂ ಬಹು ಶ್ಲಾಘನೀಯವಾಗಿವೆ.

ಇನ್ನು ಮೇಲೆ ಕಥೆಯು ಹೆಚ್ಚು ವ್ಯತ್ಯಾಸವಾಗದೆ ಯಥಾಕ್ರಮವಾಗಿ ರಾಜಸೂಯಾರಂಭದಿಂದ ಪಾಂಡವರ ಅರಣ್ಯಪ್ರವೇಶದವರೆಗೆ ಬಹು ಜಾಗ್ರತೆಯಿಂದ ಸಾಗುವುದು. ಮೂಲಭಾರತದ ಪ್ರಕಾರ ಧರ್ಮನಂದನನು ಅರಣ್ಯಪ್ರವೇಶ ಮಾಡಿದೊಡನೆಯೇ ಋಷಿಗಳು ಬಂದು ಧರ್ಮೋಪದೇಶವನ್ನು ಮಾಡಬೇಕು. ಪಂಪನು ಈ ರಗಳೆಯನ್ನು ಬಿಟ್ಟಿದ್ದಾನೆ. ಹೇಗೂ ಹನ್ನೆರಡು ವರ್ಷಗಳು ಕಳೆಯಬೇಕು. ಅದಕ್ಕಾಗಿ ಕೆಲವು ಆಖ್ಯಾನಗಳನ್ನು ಮಾತ್ರ ಪಂಪನು ನಿರೂಪಿಸುವನು. ಇಷ್ಟರಲ್ಲಿ ಅರ್ಜುನನು ಇಂದ್ರಕೀಲದಲ್ಲಿ ತಪಸ್ಸುಮಾಡಿ ಶಿವನಿಂದ ಪಾಶುಪತಾಸ್ತ್ರವನ್ನು ಪಡೆದು ಬರುವನು. ಮುಂದೆ ಅಜ್ಞಾತವಾಸ, ಗೋಗ್ರಹಣ, ಕೃಷ್ಣದೌತ್ಯ, ಯುದ್ಧನಿರ್ಣಯ ಮೊದಲಾದವುಗಳೆಲ್ಲ ಸಂಕ್ಷೇಪವಾಗಿಯೂ ಲಲಿತವಾಗಿಯೂ ನಿರೂಪಿತವಾಗಿವೆ.

ಇವೆಲ್ಲ ಹತ್ತು ಆಶ್ವಾಸಗಳಲ್ಲಿ ಮುಗಿಯುವುವು. ಪಂಪನು ಮುಂದಿನ ಆಶ್ವಾಸಗಳನ್ನು ಪೂರ್ಣವಾಗಿ ಯುದ್ಧಕ್ಕಾಗಿಯೇ ಉಪಯೋಗಿಸಿಕೊಂಡಿರುವನು. ಮನಸ್ಸು ಮಾಡಿದ್ದರೆ ಇದನ್ನು ಇನ್ನೂ ಕಡಮೆಮಾಡಬಹುದಾಗಿತ್ತು. ಆದರೆ ಸಾಹಸಾಭರಣನ ಯುದ್ಧ ಕೌಶಲವನ್ನು ವಿಸ್ತಾರವಾಗಿ ವರ್ಣಿಸಬೇಕೆಂದೋ ಸಮಸ್ತ ಭಾರತವನ್ನು ತಪ್ಪದೇ ಹೇಳಬೇಕೆಂದೋ ಯುದ್ಧರಂಗದಲ್ಲಿ ತನಗಿದ್ದ ಅಪಾರವಾದ ಪರಿಚಯವನ್ನು ಪ್ರದರ್ಶನ ಮಾಡಬೇಕೆಂದೋ ಆ ಭಾಗವನ್ನು ವಿಸ್ತರಿಸಿದ್ದಾನೆ. ಈ ಭಾಗದಲ್ಲಿಯೇ ಭಾರತದ ಪ್ರಭಾವವ್ಯಕ್ತಿಗಳಾದ ಭೀಷ್ಮ, ದ್ರೋಣ, ಕರ್ಣ, ದುರ್ಯೋಧನ, ದುಶ್ಶಾಸನ, ಶಲ್ಯ, ಅರ್ಜುನ, ಭೀಮ, ಧರ್ಮರಾಯ, ಅಭಿಮನ್ಯು, ಸೈಂಧವ, ಶ್ವೇತ ಮೊದಲಾದವರ ಉದ್ದಾಮ ಸಾಹಸದ, ಔನ್ನತ್ಯದ, ಮಹಾನುಭಾವತ್ವದ, ತ್ಯಾಗದ ವಿವಿಧ ಪರಿಚಯಗಳು ಮನದಟ್ಟಾಗುವುದು. ಕೌರವರ ಪಕ್ಷದ ವೀರಾಧಿವೀರರೆಲ್ಲರೂ ಯುದ್ಧರಂಗದಲ್ಲಿ ಮಡಿಯುವರು. ಪಾಂಡವರಿಗೆ ಜಯವು ಲಭಿಸುವುದು. ಅರ್ಜುನನ ಪಟ್ಟಾಭಿಷೇಕದೊಂದಿಗೆ ಕಾವ್ಯವು ಪರಿಸಮಾಪ್ತಿಗೊಳ್ಳುವುದು.

**ಪಂಪನ ಶೈಲಿ**–ಒಬ್ಬ ಕವಿಯ ವ್ಯಕ್ತಿತ್ವವೂ ಮಹತ್ವವೂ ಅವನ ಶೈಲಿಯಲ್ಲಿ ಪ್ರತಿಬಿಂಬಿಸುತ್ತದೆ ಎಂದು ತಿಳಿದವರು ಹೇಳುತ್ತಾರೆ. ಇದು ಬಹುಮಟ್ಟಿಗೆ ನಿಜ. ಅವನ ಆವೇಶ, ಅವನ ಮನೋಭಾವ, ಅವನ ಲೋಕಾನುಭವ, ಅವನ ಪ್ರತಿಭಾಸಂಪನ್ನತೆ, ಜ್ಞಾನ, ವಾಗ್ಧೋರಣೆ ವ್ಯಕ್ತಿತ್ವ-ಪ್ರತಿಯೊಂದೂ ಅವನ ಶೈಲಿಯಲ್ಲಿ ಸ್ಫುಟವಾಗಿ ಎದ್ದು ಕಾಣುತ್ತವೆ. ಕವಿಯು ಹುಲುಗವಿಯಾದರೆ ಹಿಂದಿನ ಕಾವ್ಯಗಳನ್ನೇ ಮಾದರಿಯಾಗಿಟ್ಟುಕೊಂಡು ಅವುಗಳ ಸಾರವನ್ನು ಗ್ರಹಿಸದೆ ನಿರ್ಜೀವವಾದ ಕಟ್ಟಡವನ್ನು ತೆಗೆದುಕೊಂಡು ಶಬ್ದಗಳ ಜೋಡಣೆಯಿಂದ ಶುಷ್ಕವಾಗಿ ಪಡಿಯಚ್ಚನ್ನು ನಿರ್ಮಿಸುತ್ತಾನೆ. ಅದರಲ್ಲಿ ಸತ್ವವಿರುವುದಿಲ್ಲ, ಜೀವವಿರುವುದಿಲ್ಲ, ಮನುಷ್ಯನ ಭಾವನಾಡಿಗಳನ್ನು ಮೀಟುವ ಆವೇಶವಿರುವುದಿಲ್ಲ. ಕವಿಯು ಅರ್ಥವಿಲ್ಲದ ಕವಿಸಮಯಗಳನ್ನು ಒಂದರಮೇಲೊಂದನ್ನು ಮೂಟೆ ಮೂಟೆಯಾಗಿ ತುಂಬಿ ಜುಗುಪ್ಸೆಯನ್ನುಂಟುಮಾಡುತ್ತಾನೆ. ಹಾಗಲ್ಲದೆ ಕವಿಯು ಪ್ರಜ್ಞಾಶಾಲಿಯೂ ಕಲ್ಪನಾಚತುರನೂ ಪ್ರತಿಭಾಸಂಪನ್ನನೂ ಅನುಭವಶಾಲಿಯೂ ಆದರೆ ಕಾವ್ಯದಲ್ಲಿ ಒಂದು ವಿಧವಾದ ಆವೇಶವನ್ನು ತುಂಬಿ ವಾಚಕನ ಮೇಲೆ ತನ್ನದೇ ಆದ ಸಮ್ಮೋಹನಾಸ್ತ್ರವನ್ನು ಬೀರಿ ತನ್ನವನನ್ನಾಗಿ ಮಾಡಿಕೊಳ್ಳುತ್ತಾನೆ. ಸಾಧಾರಣವಾಗಿ ಕನ್ನಡ ಕವಿಗಳನೇಕರಿಗೆ ಈ ಕಾವ್ಯಮರ್ಮ ತಿಳಿಯದೆಂಬ ಅಪಪ್ರಥೆಯಿದೆ. ಆದರೆ ಕವಿತಾಗುಣಾರ್ಣವನಾದ ಪಂಪನ ವಿಷಯವೇ ಬೇರೆ. ಆತನು ಕವಿವೃಷಭ. ಕವಿಯಾಗಿದ್ದಂತೆಯೇ ಕಲಿಯೂ ಆಗಿದ್ದವನು. ಕನ್ನಡ, ಸಂಸ್ಕೃತ, ಪ್ರಾಕೃತ, ಅಪಭ್ರಂಶಗಳ ಪೂರ್ಣಪಾಂಡಿತ್ಯವುಳ್ಳವನು. ಜೀವನದ ವಿವಿಧಕ್ಷೇತ್ರಗಳ ಪ್ರತ್ಯಕ್ಷಾನುಭವವನ್ನುಳ್ಳವನು. ವೈದಿಕ ಮತ್ತು ಜೈನ ಸಂಸ್ಕಾರಗಳ ಮೇಳವನ್ನುಳ್ಳವನು. ರಸಿಕತೆಯನ್ನೂ ರಾಜಾಶ್ರಯವನ್ನೂ ಆತ್ಮಾಭಿಮಾನವನ್ನೂ ಆನಂದಾನುಭವವನ್ನೂ ಉಳ್ಳವನು. ತನ್ನ ಹಿಂದಿನ ಗ್ರಂಥಗಳ ಮಾದರಿಯಲ್ಲಿ ಗ್ರಂಥರಚನೆಗೆ ಹೊರಟಿದ್ದರೂ ಅವುಗಳ ಸಾರವನ್ನು ಉಪಯೋಗಿಸಿಕೊಂಡಿದ್ದರೂ ಮಾರ್ಗ ಮತ್ತು ಶೈಲಿಗಳಲ್ಲಿ ಹೊಸ ಹೊಸ ಪ್ರಯೋಗಗಳನ್ನು ನಡೆಸಿದ್ದಾನೆ. ಮುಂದಿನ ಕವಿಗಳಿಗೆ ಮಾರ್ಗದರ್ಶಕನಾಗಿದ್ದಾನೆ. ಆದುದರಿಂದ ಅವನ ಶೈಲಿಯಲ್ಲಿ ಪ್ರತ್ಯೇಕ ವ್ಯಕ್ತಿತ್ವವಿದೆ. ಒಂದು ಮೋಹಕಶಕ್ತಿಯಿದೆ. ಅವನು ಯಾವುದನ್ನು ಚಿತ್ರಿಸಿದರೂ ಮನದಟ್ಟಾಗುವಂತೆ ಚಿತ್ರಿಸುತ್ತಾನೆ. ಅದನ್ನು ಓದುತ್ತ ಓದುತ್ತ ವಾಚಕನೂ ಮುಗ್ಧನಾಗಿ ಅಲ್ಲಿಯ ಪಾತ್ರಗಳು ಮತ್ತು ಸನ್ನಿವೇಶಗಳಲ್ಲಿ ಐಕ್ಯನಾಗುವನು. ಕಥಾಶರೀರದಲ್ಲಿ ತಾನೂ ಭೂಮಿಕೆಯಾಗಿ ಬಿಡುವನು. ಪಂಪನ ಯಾವ ವರ್ಣನೆಯನ್ನು ತೆಗೆದುಕೊಂಡರೂ ಹೀಗೆಯೇ. ಬನವಾಸಿಯ ವರ್ಣನೆಯನ್ನು ನೋಡಿ. ಅದರ ವೈಭವವನ್ನು ಓದಿದ ಕೂಡಲೆ ವಾಚಕನೂ ಬನವಾಸಿಯಲ್ಲಿ ಮರಿದುಂಬಿಯಾಗಿಯೋ ಕೋಗಿಲೆಯಾಗಿಯೋ ಹುಟ್ಟಬೇಕೆಂದು ಆಶಿಸುವನು. ಸುಭದ್ರಾಪರಿಣಯಕ್ಕೆ ಮುಂಚಿನ ಚಂದ್ರಿಕಾವಿಹಾರದಲ್ಲಿ ವೇಶ್ಯಾವಾಟಿಕೆಯ ವರ್ಣನೆಯನ್ನು ಓದುತ್ತಿದ್ದರೆ ತಾನೂ ಆ ಬೀದಿಯಲ್ಲಿ ಸಂಚರಿಸುತ್ತಿರುವಂತೆ ಭ್ರಾಂತಿಗೊಳ್ಳುವನು. ದುಶ್ಶಾಸನನು ದ್ರೌಪದಿಯ ಕೇಶಗ್ರಹಣ ಮಾಡಿ ಸೆಳೆದುಕೊಂಡು ಬರುವುದನ್ನು ವಾಚಿಸಿದಾಗ ಪಾಪಿ ದುಶ್ಶಾಸನನನ್ನು ಸೀಳಿ ಬಿಡೋಣವೇ

ಎಂಬ ಆಕ್ರೋಶವನ್ನು ತಾಳುವನು. ಭೀಮಸೇನನು ಕಾಲಮೇಘದಂತೆ ಗರ್ಜಿಸಿ ಆರ್ಭಟಮಾಡುವುದನ್ನು ಓದುತ್ತಿದ್ದರೆ ಹೃದಯದಲ್ಲಿ ನಡುಕ ಹುಟ್ಟಿ ಸ್ತಬ್ಧನಾಗುವನು. ಬಿದ್ದ ಚಕ್ರವರ್ತಿಯ ಮುಡಿಯನ್ನು ಭೀಮನು ಒದೆಯುತ್ತಿರುವುದನ್ನು ಓದುತ್ತಿದ್ದರೆ 'ಛೀ ಭೀಮಾ ನಿನಗೆಷ್ಟು ದುರಹಂಕಾರ! ನೀನು ಮೂರ್ಛಿತನಾಗಿದ್ದಾಗ ದುರ್ಯೋಧನನು ನಿನ್ನಲ್ಲಿ ಕರುಣೆಯನ್ನು ತೋರದಿದ್ದಿದ್ದರೆ ನೀನೇನಾಗುತ್ತಿದ್ದೆ, ಅವನು ನಿನ್ನಲ್ಲಿ ತೋರಿಸಿದ ಕರುಣೆಗೆ ಇದೇ ಪ್ರತಿಫಲ'? ಎಂದು ಹೇಳಲುದ್ಯುಕ್ತನಾಗುವನು. ಗದಾಯುದ್ಧದ ಪ್ರಾರಂಭದಲ್ಲಿ ಹಲಾಯುಧನು ದುರ್ಯೋಧನನನ್ನು ಕುರಿತು 'ನೀ ಮರುಳ್ತನಮನೇಕೆ ಮಾಡಿದಯ್' ಎಂಬುದಕ್ಕೆ ಅವನು 'ಪಾಂಡುತನಯರ್ ನಿರ್ದೋಷಿಗಳ್, ಮದ್ಬಂಧು ಶೋಕಾಗ್ನಿಯಿಂದುರಿದಪ್ಪೆಂ' ಎನ್ನುತ್ತಿದ್ದರೆ 'ದುರ್ಯೋಧನ, ನೀನು ನಿಜವಾಗಿಯೂ ಮಹಾನುಭಾವನೇ ಅಹುದು' ಎನ್ನುವನು. ಕೊನೆಗೆ ಪಂಪನು ವಿಕ್ರಮಾರ್ಜುನನ ಪಟ್ಟಾಭಿಷೇಕ ಮಹೋತ್ಸವವನ್ನು ವರ್ಣಿಸುವಾಗ ಅವನೂ ಅದರಲ್ಲಿ ಭಾಗಿಯಾಗಿ ಪಾಂಡವರು ಹಸ್ತಿನಾಪುರವನ್ನು ಪ್ರವೇಶಿಸುವಾಗ ಅವರನ್ನು ಸ್ವಾಗತಿಸುವ ಪಲ್ಲವಿತವಾದ ಆಮ್ರವನವನ್ನು ಕಣ್ಣಾರೆ ನೋಡುವನು. ಗುಡಿತೋರಣಗಳಿಂದ ವಿರಾಜಿಸುವ ಬೀದಿಗಳಲ್ಲಿ ಓಡಾಡುವನು. ಸಂಸಾರಸಾರೋದಯನ ಒಡ್ಡೋಲಗದಲ್ಲಿ ವೈತಾಳಿಕರೂ ಮಂಗಳಪಾಠಕರೂ ಒಂದೇ ಕೊರಳಿನಿಂದ ಮಂಗಳವನ್ನೋದುತ್ತ' 'ಅರಿಗಂಗೀಗೆ ಮಂಗಳಮಂಗಳಮಹಾಶ್ರೀಯಂ ಜಯ ಶ್ರೀಯುಮಂ' ಎಂದು ಘೋಷಿಸುತ್ತಿದ್ದರೆ ತಾನೂ ಅವರೊಡನೆ 'ಅರಿಕೇಸರಿಗೆ ಜೈ' ಎನ್ನುತ್ತಾನೆ. ಇದೆಲ್ಲ ಏತರಿಂದ? ಪಂಪನ ಅನ್ಯಾದೃಶವಾದ ಕಾವ್ಯರಚನಾ ಪ್ರೌಢಿಮೆಯಿಂದಲ್ಲವೇ? ಅವನು ಯಾವುದನ್ನು ವರ್ಣಿಸಿದರೂ ತಾನು ಮೊದಲು ಅದನ್ನು ಚಿತ್ರಿಸಿಕೊಂಡು ಅದರ ಪ್ರತಿಬಿಂಬ ವಾಚಕರಿಗೆ ತೋರುವಂತೆ ಸಹಜವಾದ ಸ್ವಾಭಾವಿಕವಾದ ಮಾತಿನಿಂದ ಹೇಳುತ್ತ ಹೋಗುವುದರಿಂದ ಆಯಾ ವರ್ಣನೆಗಳನ್ನು ಓದುತ್ತಿದ್ದಾಗ ಆಯಾ ಚಿತ್ರಗಳೇ ವಾಚಕರೆದುರಿಗೆ ಜೀವದುಂಬಿ ನಲಿಯುವಂತೆ ಭಾಸವಾಗುತ್ತದೆ.

**ಪಂಪನ ಕಾವ್ಯತತ್ತ್ವ:** ಕವಿತಾಗುಣಾರ್ಣವನು ಉತ್ತಮಕಾವ್ಯದ ತಿರುಳನ್ನೂ ತನ್ನ ಕಾವ್ಯದ ಮೂಲತತ್ವವನ್ನೂ ತಾನೇ ಮುಂದಿನ ಪದ್ಯಗಳಲ್ಲಿ ಶ್ರುತಪಡಿಸಿದ್ದಾನೆ.

**ಮೃದು ಪದಗತಿಯಿಂ ರಸಭಾ**
**ವದ ಪೆರ್ಚಿಂ ಪಣ್ಯವನಿತೆಯೊಲ್ ಕೃತಿಸೌಂದ**
**ರ್ಯದ ಚಾತುರ್ಯದ ಕಣಿಯಿನೆ**
**ವಿದಗ್ಧಬುಧಜನಮನ್, ಅಲೆಯಲೆವೇಡಾ ॥**

**ಕಿವಿಯಂ ಬಗೆವುಗುವೊಡೆ ಕೊಂ**
**ಕುವೆತ್ತ ಪೊಸನುಡಿಯೆ ಪುಗುಗುಂ...**
**ಮೃದುಮಧುರವಚನರಚನೆಯೊಳ್,**
**ಉದಾತ್ತಂ, ಅರ್ಥಪ್ರತೀತಿಯಂ ಕೇಳ್ವ ಜನ**
**ಕ್ಕಿದಿರೊಳ್ ಕುಡದಂದದು..... ಕವಿಯ ಮನದೊಳಿರ್ದಂತೆವಲಂ ॥**

> ಬಗೆ ಪೊಸತಪ್ಪುದಾಗಿ ಮೃದುಬಂಧದೊಳೊಂದುವುದು, ಒಂದಿ ದೇಸಿಯೊಳ್
> ಪುಗುವುದು ಪೊಕ್ಕ ಮಾರ್ಗದೊಳೆ ತಳ್ವುದು ತಳ್ತೊಡೆ ಕಾವ್ಯಬಂಧಂ, ಒಪ್ಪುಗುಂ,
> ಆ ಸಕಳಾರ್ಥಸಂಯುತಂ, ಅಳಂಕೃತಿಯುಕ್ತಂ, ಉದಾತ್ತವೃತ್ತಿ ವಿ-
> ನ್ಯಾಸಂ, ಅನೇಕ ಲಕ್ಷಣಗುಣಪ್ರಭವಂ, ಮೃದುಪಾದಮಾದ ವಾಕ್ಶ್ರೀಸುಭಗಂ ಕಳಾಕಳಿತಂ

ಪಂಪನು ರಾಜದ್ರಾಜಕಮೆನಿಸಿದ ಪುಲಿಗೆರೆಯ ತಿರುಳುಗನ್ನಡದಲ್ಲಿ ತನ್ನ ಕಾವ್ಯಗಳನ್ನು ರಚಿಸಿದ್ದಾನೆ. ಅದರಲ್ಲಿ ಪೊಸದೇಸಿಯಿದೆ, ಬೆಡಂಗಿದೆ, ಅರ್ಥವ್ಯಕ್ತಿಯಿದೆ, ಅದು 'ವಿದಿತಂ ಪ್ರಾತೀತಿಕಂ, ಕೋಮಲಂ, ಅತಿಸುಭಗಂ, ಸುಂದರಂ, ಸೂಕ್ತಿಗರ್ಭಂ, ಮೃದುಸಂದರ್ಭಂ, ವಿಚಾರಕ್ಷಮಂ, ಉಚಿತಪದಂ, ಶ್ರವ್ಯಂ, ಆರ್ಯಾಕುಲಂ, ವ್ಯಾಪ್ತದಿಗಂತಂ ಕಾವ್ಯಂ' ಎಂದು ಕವಿಜನ ಮೆಚ್ಚಿದ್ದಾರೆ. ಇದು ನಿಚ್ಚಂ ಪೊಸತರ್ಣವಂಬೊಲ್ ಅತಿ ಗಂಭೀರಂ, ಲಲಿತಪದವುಳ್ಳುದು, ಪ್ರಸನ್ನ ಕವಿತಾಗುಣ ಪೂರ್ಣವಾದುದು. ಆತನಿಂದ ಮುಂದೆ ಬಂದ ಕವಿಗಳು ಜಾತಿಮತ ಪಕ್ಷಪಾತವಿಲ್ಲದೆ 'ಸುಭಗಕವಿ ಪಂಪನಿಂ ವಾಗ್ವಿಭವೋನ್ನತಿ ನೆಗಟ್ಟುದು, ರಸಿಕಾಗ್ರಣಿ ಹಂಪದೇವಂ,' 'ಸತ್ಕವಿಹಂಪನ ಕೃತಿ ಸೌಂದರೀಸುಭಗಂ', 'ಪಂಪನ ರೀತಿ', 'ಪಂಪನಿಂಪು,' 'ಪಂಪನ ಗುಣಂ', 'ಪಂಪನೊಂದಸದೃಶಮಪ್ಪ ರಸಭಾವಂ,' ಎಂದು ಪಂಪನ ಶೈಲಿಯ ಅಸಾಧಾರಣಶಕ್ತಿಯನ್ನು ತಮ್ಮ ತಮ್ಮ ಅನುಭವಾನುಸಾರವಾಗಿ ಸ್ತೋತ್ರಮಾಡಿದ್ದಾರೆ. ಆ ಒಂದೊಂದು ಗುಣವನ್ನೂ ಪ್ರತ್ಯೇಕವಾಗಿ ನಿರ್ದೇಶಿಸಿ ತೋರಿಸುವುದು ಕಷ್ಟವಾದ ಕಾರ್ಯ. ಕೆಲವು ಪ್ರಧಾನವಾದ ಗುಣಗಳ ಸ್ಥೂಲ ಪರಿಚಯುವನ್ನು ಮಾತ್ರ ಮಾಡಿಸಲು ಪ್ರಯತ್ನಪಡಬಹುದು.

ಪಂಪನ ಶೈಲಿಯ ಪ್ರಧಾನಗುಣ ಪ್ರಸಾದ, ಗಾಂಭೀರ್ಯ, ಅರ್ಥವ್ಯಕ್ತಿ, ಕೊಂಕುನುಡಿ, ಧ್ವನಿ, ಮೃದುಪದರಚನೆ, ಹಿತಮಿತ ಮೃದುವಚನಪೂರ್ಣತೆ ಮತ್ತು ಸಂಯಮ. ಅವನು ಎಂದೂ ಆಡಂಬರಕ್ಕೂ ಆರ್ಭಟಕ್ಕೂ ಪ್ರಯತ್ನಪಡುವುದಿಲ್ಲ. ಆದುದರಿಂದಲೇ ಅವನ ಕಾವ್ಯದಲ್ಲಿ ವಿಶೇಷವಾದ ಓಜಸ್ಸಾಗಲಿ ಪದಮೈತ್ರಿಯಾಗಲಿ ಕಾಣಲಾಗುವುದಿಲ್ಲ. ಈ ಎರಡು ಗುಣಗಳೂ ಶಕ್ತಿಕವಿಯಾದ ರನ್ನನಿಗೆ ಮೀಸಲು. ಚಿತ್ತಸ್ಥೈರ್ಯದಿಂದ ಮೃದುಪದಗತಿಯಿಂದ ಪೂರ್ವನಿಷ್ಠವಾದ ಆದರ್ಶಸಾಧನೆಗಾಗಿ ಸಂಯಮದಿಂದ ಸಾಗುವುದು ಪಂಪನ ಸ್ವಭಾವ. ಬಾಹುಬಲಿಯು ಅಣ್ಣನಾದ ಭರತನಿಗೆ ತಿಳಿಸುವ ಮುಂದಿನ ಪ್ರಾರ್ಥನೆ ಈ ಗುಣಗಳನ್ನು ಉದಹರಿಸುತ್ತದೆ.

> ನೆಲಸುಗೆ ನಿನ್ನ ವಕ್ಷದೊಳೆ ನಿಶ್ಚಳಮೀ ಭಟಖಡ್ಗಮಂಡಳೋ
> ತ್ಪಲವನ ವಿಭ್ರಮ ಭ್ರಮರಿಯಪ್ಪ ಮನೋಹರಿ ರಾಜ್ಯಲಕ್ಷ್ಮಿ ಭೂ
> ವಲಯಮನಯ್ಯನಿತ್ತುದುಮನ್. ಆಂ ನಿನಗಿತ್ತೆನ್. ಇವೇವುದಣ್ಣ ನೀ
> ನೊಲಿದ ಲತಾಂಗಿಗಂ ಧರೆಗಂ. ಆಟಿಸಿದಂದು ನೆಗಟ್ತಿ ಮಾಸದೇ ॥

ಉಭಯಭಾಷಾಪಂಡಿತನಾದ ಪಂಪನಿಗೆ ಸಂಸ್ಕೃತದಲ್ಲಿ ವ್ಯಾಮೋಹ ಹೆಚ್ಚು. ಆತನು ತನ್ನ ಕಾವ್ಯಗಳನ್ನು ರಚಿಸಿದುದು ಪಂಡಿತರನ್ನು ಮೆಚ್ಚಿಸುವುದಕ್ಕಾಗಿಯೂ ಅಹುದು.

ಅಚ್ಚಗನ್ನಡಶೈಲಿಯಲ್ಲಿ ಬರೆಯುವುದು ಇನ್ನೂ ಅವನ ಕಾಲಕ್ಕೆ ರೂಢಿಗೆ ಬಂದಿರಲಿಲ್ಲ. ಅಷ್ಟೇ ಅಲ್ಲದೆ ಸಂಸ್ಕೃತಪಂಡಿತರಾದ ಕನ್ನಡ ಕವಿಗಳು ತಮ್ಮ ಕನ್ನಡ ಕಾವ್ಯಗಳಲ್ಲಿಯೂ ಸಂಸ್ಕೃತವನ್ನು ತುಂಬುವುದು ಒಂದು ಗುಣವೆಂದು ಭಾವಿಸಿದ್ದರು. ಆದುದರಿಂದ ಪಂಪನ ಕಾವ್ಯವು ಸಂಸ್ಕೃತಮಯವಾಗಿರುವುದು ಆಶ್ಚರ್ಯವೇನೂ ಅಲ್ಲ. ಅವನು ಕೆಲವೆಡೆಗಳಲ್ಲಿ ಪೂರ್ಣವಾಗಿ ಸಂಸ್ಕೃತವೃತ್ತಗಳನ್ನೇ ರಚಿಸಿರುವನು. ಮುಂದಿನ ಈಶ್ವರನ ಪ್ರಾರ್ಥನೆಯನ್ನು ನೋಡಿ:

**ಪ್ರಚಂಡಲಯತಾಂಡವ ಕ್ಷುಭಿತಯಾಶು ಯಸ್ಯಾನಯಾ**
**ಸದಿಗ್ವಿಳಯಯಾ ಭುವಾ ಸಗಿರಿ ಸಾಕಾರದ್ವೀಪಯಾ**
**ಕುಲಾಲಕರನಿರ್ಭರ ಭ್ರಮಿತ ಚಕ್ರಲೀಲಾಯಿತಂ**
**ಸಸರ್ವಜಗತಾಂ ಗುರುಃ, ಗಿರಿಸುತಾಪತಿಃ ಪಾತು ವಃ ॥**

ಆದಿಪುರಾಣದಲ್ಲಿ ಬರುವ ಮುಂದಿನ ಆರೋಗಣೆಯ ವರ್ಣನೆಯು ಅವನ ಸಂಸ್ಕೃತ ಗದ್ಯದ ವೈಖರಿಯನ್ನು ವಿಶದಪಡಿಸುವುದು.

**ಭರತಮಹೀಶಂ ಭೋಜನಭೂಮಿಗೆ ರಾಜಹಂಸವಿಳಾಸದಿಂ ಬಿಜಯಂಗೆಯ್ದು ಸಕಲ ವಿದ್ಯಾಪ್ರವೀಣಗುರುಜನಾರ್ಯಜನವಿಳಾಸಿನೀಜನಪರಿವೃತನ್ ಅತಿಮೃದುರಸನಾಮರ್ದನ ಮಾತ್ರ ದ್ರಾವಣೀಯಘೃತಪೂರಮುಮಂ ಅಲ್ಪದಶನದಂಶಮಾತ್ರಖಂಡನೀಯಮಂಡಕಮುಮಂ ಅತ್ಯಂತ ಕೋಮಲತಾಲುತಳಸಂಘಟ್ಟಮಾತ್ರಕ್ಷೋದನೀಯಮೋದಕಮುಮಂ, ಅನಿಷ್ಠುರೋಷ್ಠ ಪುಟಮಧ್ಯ ಸಂಧಾರಣಮಾತ್ರಚೂರ್ಣನೀಯಶಾಕವರ್ತಿಕಮುಮಂ, ಅತಿ ದೂರೋಚ್ಛ್ವಾಸ ವಿಕಾಸನಾಸಾಂಜಲಿಪುಟ ಪೀಯಮಾನದುಗ್ಧ ಹಯ್ಯಂಗವೀನಮುಮಂ, ನೀಹಾರಶಕಲಧವಲಪರಿಣತಕಪಿತ್ಥಫಲಪರಿಮಳ ಮಧುರದಧಿಯುಮಂ, ಏಕೀಭೂತಸಕಲಭುವನಶಿಶಿರ ದ್ರವ್ಯಸಂಚಾರದ್ರವ ಶಂಖಾಕಾರ ಶಿಖರಿಣೀರಮಣೀಯಮುಮಂ ಅಮೃತಪಿಂಡಾಯಮಾನಅಪಿಂಡದುಗ್ಧಸ್ನಿಗ್ಧಮುಮಪ್ಪ ಮನೋ ಹರಾಹಾರಮಂ ॥**

ಪಂಪಭಾರತದಲ್ಲಿಯೇ ಹದಿನಾಲ್ಕನೆಯ ಆಶ್ವಾಸದಲ್ಲಿ ಅರಿಗನಿಗೆ ವಂದಿಮಾಗಧರು ಓದುವ ಮಂಗಳವೃತ್ತಗಳು ಸಂಪೂರ್ಣವಾಗಿ ಸಂಸ್ಕೃತಶ್ಲೋಕಗಳಾಗಿಯೇ ಇವೆ.

ಆದರೂ ಪಂಪನಿಗೆ ಅದರ ಇತಿ ಮಿತಿ ಗೊತ್ತು. ಅದಕ್ಕಾಗಿಯೇ ಅವನು ಪುರಾಣ ಕಾವ್ಯವಾದ 'ಆದಿಪುರಾಣ'ದಲ್ಲಿ ತುಂಬಿರುವಷ್ಟು ಸಂಸ್ಕೃತಶಬ್ದಗಳನ್ನೂ ಪಾರಿಭಾಷಿಕ ನುಡಿಗಟ್ಟನ್ನೂ ಲೌಕಿಕ ಕಾವ್ಯವಾದ 'ವಿಕ್ರಮಾರ್ಜುನ ವಿಜಯ'ದಲ್ಲಿ ತುಂಬಿಲ್ಲ. ಸಂಸ್ಕೃತ ಶಬ್ದಗಳಿಂದ ಒಂದು ವಿಧವಾದ ಘೋಷವೂ, ಆರ್ಭಟವೂ, ಥಣಥಣತ್ಕಾರವೂ ಬರುವುದೆಂಬುದು ಆತನಿಗೆ ತಿಳಿದ ವಿಷಯ. ಆದುದರಿಂದ ವೀರರಸಪ್ರಧಾನವಾದ ಭೇರಿಯ ನಾದ, ಧೀರ ಪ್ರತಿಜ್ಞೆ, ಘೋರಯುದ್ಧ, ಜಯಘೋಷಣ-ಈ ಸಂದರ್ಭಗಳಲ್ಲಿ ಮಾತ್ರ ಸಂಸ್ಕೃತ ಶಬ್ದಗಳನ್ನು ಉಪಯೋಗಿಸಿಕೊಂಡು ಮಿಕ್ಕೆಡೆಗಳಲ್ಲೆಲ್ಲ ಕನ್ನಡ ಪದಗಳನ್ನೇ ಉಪಯೋಗಿಸಿ ಉತ್ಕೃಷ್ಟ ಭಾಷಾಸರಣಿಯಲ್ಲಿ ಕಾವ್ಯವನ್ನು ರಚಿಸಿದ್ದಾನೆ. ಇವನ ಗ್ರಂಥಗಳಲ್ಲಿ-ಅದರಲ್ಲಿಯೂ ಪಂಪಭಾರತದಲ್ಲಿ ಸಿಕ್ಕುವಷ್ಟು ಅಚ್ಚಗನ್ನಡ ಶಬ್ದಗಳು ಮತ್ತಾವ ಕನ್ನಡ ಕೃತಿಗಳಲ್ಲಿಯೂ ಸಿಕ್ಕಲಾರದೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಆದರೂ

ಅವನ ಕೆಲವು ಸಮಾಸಪದಗಳು ಬಹುದೀರ್ಘವಾಗಿ ಅರ್ಥಕ್ಕೆ ತೊಡಕನ್ನುಂಟು ಮಾಡಿ ಉಚ್ಚಾರಣೆಗೂ ಕಷ್ಟವಾಗುವುವು. ಲಘುವಾಗಿ ಸರಳವಾಗಿದ್ದಾಗ ಅರ್ಥಪೂರ್ಣವೂ ಸುಶ್ರಾವ್ಯವೂ ಆಗಿರುತ್ತವೆ.

'ಬಾಣಾಸನ ಬಾಣ ಪಾಣಿ ಕರ್ಣಂ ಬಂದಂ' 'ಕಷ್ಟಂ ದುಃಖಾನಿಳಪರಿ
ಪುಷ್ಟಂ' 'ಸಂಸೃತಿ ಭೋಗಂಗಳ್ ಭೋಗಿ ಭೋಗದಿಂ ವಿಷಮಂಗಳ್.'

ಹಿಂದೆಯೇ ತಿಳಿಸಿರುವಂತೆ ಪಂಪನ ಹಿರಿಮೆ ಅವನ ವಿವಿಧ ರೀತಿಯ ವರ್ಣನೆಗಳು. ಅವನ ಅಸ್ವಾದ್ಯಬಶವಾದ ಲೋಕಾನುಭವವೇ ಇದಕ್ಕೆ ಕಾರಣ. ತನ್ನ ಕಾಲದ ಎಲ್ಲ ಕ್ಷೇತ್ರಗಳ ವಿವಿಧ ಪರಿಚಯವೂ ಅವನಿಗಿದೆ. ಆದುದರಿಂದಲೇ ಅವನು ಪರಮಾಣುವಿನಿಂದ ಪರಮೇಶ್ವರನವರೆಗೆ ಯಾವುದನ್ನಾದರೂ ಪ್ರತ್ಯಕ್ಷೀಕರಿಸಬಲ್ಲ. ಸಾಸಿವೆಯಲ್ಲಿ ಸಾಗರವನ್ನು ತುಂಬಲು ಬಲ್ಲ. ಮಧುವನ್ನು ಮೇರುವಾಗಿಸಲೂ ಬಲ್ಲ. ವ್ಯಕ್ತಿ, ಸನ್ನಿವೇಶ, ಋತು, ಬೇಟೆ, ವೇಶ್ಯಾವಾಟಿ, ಪಾನಗೋಷ್ಠಿ, ಯುದ್ಧ ಮೊದಲಾದ ಯಾವುದರ ವರ್ಣನೆಯಾದರೂ ಮೂರ್ತಿಮತ್ತಾಗಿ ಎದುರಿಗಿರುವಂತೆ ಭಾಸವಾಗುವುದು. ಮಯನನ್ನು ಸನ್ಮಾನಿಸಿ ಕಳುಹಿಸಿದನಂತರ ಧರ್ಮಪುತ್ರನು ತನ್ನ ನಾಲ್ವರು ತಮ್ಮಂದಿರೊಡಗೂಡಿ ಓಲಗಗೊಂಡಿರುವಾಗ ಇಂದ್ರಲೋಕದಿಂದ ಬಂದ ನಾರದರ ಚಿತ್ರವಿದು.

**ಸರಿಗೆಯೊಳ್ ಸಮೆದಕ್ಷಮಾಲಿಕೆ, ಪೊನ್ನ ಮುಂಜಿ, ತೊಳಪ್ಪ ಕ**
**ಪ್ಪುರದ ಭಸ್ಮರಜಸ್ತ್ರಿಪುಂಡ್ರಕಮೊಪ್ಪೆ, ಪಿಂಗಜಟಾಳಿ ತಾ**
**ವರೆಯ ಸೂತ್ರದೊಳಾದ ಜನ್ನವಿರಂ, ದುಕೂಲದ ಕೋವಣಂ**
**ಕರಮೊಡಂಬಡೆ ನೋಟಕರ್ಕಳನಾ ತಪಸ್ವಿ ಮರುಳ್ಚಿದಂ ॥**

ಹಾಗೆಯೇ ಪಾಶುಪತಾಸ್ತ್ರವನ್ನು ಪಡೆಯುವುದಕ್ಕಾಗಿ ತಪಸ್ಸು ಮಾಡುತ್ತಿರುವ ಸೌಮ್ಯ ಭಯಂಕರನಾದ ಅರ್ಜುನನ ಚಿತ್ರ ಮತ್ತೂ ಸ್ಪಷ್ಟವಾಗಿದೆ.

**ಅದಿರದ ಚಿತ್ತಂ, ಅಳ್ಕದ ಮನಂ, ಬಗೆಗೊಳ್ಳದೆ ಮೋಹಂ, ಎತ್ತಿದ ಕ**
**ಟ್ಟಿದ ಜಡೆ, ತೊಟ್ಟ ರತ್ನಕವಚಂ, ಕೊರಲೊಳ್ ಸಲೆ ಕೋದ ಬಿಲ್ ಪ್ರಯ**
**ತ್ನದೆ ಬಗಿದಿರ್ದೆರಟಿಯ್ದೊಡೆ ಮಿಸುಪ್ಪಸಿಖೇಟಕಂ, ಅಂತಿವೊಂದುಗುಂ**
**ದದೆ ನಿಲೆ ನೋಟ್ಟ ನೋಟಕರ್ಗೆ ಸೌಮ್ಯಭಯಂಕರನಾದನರ್ಜುನಂ ॥**

ಪಂಪನ ಸನ್ನಿವೇಶಚಿತ್ರಗಳೂ ಹೀಗೆಯೇ. ವಾಚಕರ ಮುಂದೆ ಪ್ರತ್ಯಕ್ಷವಾಗಿ ಬಂದು ನಿಲ್ಲುವುವು. ಏಕಚಕ್ರಪುರದಲ್ಲಿ ಬಕಾಸುರನಿಗೆ ಆಹಾರವನ್ನು ಕಳುಹಿಸುವುದಕ್ಕೆ ಜನಗಳಿಲ್ಲದೆ ವ್ಯಸನ ಪಡುತ್ತಿರುವ ಬ್ರಾಹ್ಮಣನ ಮನೆಯ ದೃಶ್ಯ ಎಷ್ಟು ಹೃದಯ ವಿದ್ರಾವಕವಾಗಿದೆ!

**ಅಟೆಕುಡಲಾದ ಕೂಸು ನೆಲದೊಳ್ ಪೊರಳುತ್ತಿರೆ, ಧರ್ಮಪತ್ನಿ ಬಾ**
**ಯಟೆದು ಕೊರಲ್ಗೆ ಪಾಯ್ದು ಪರಿದಾಡುವ ಬಾಲಕನಾದ ಶೋಕದಿಂ**
**ಗಳಗಳ ಕಣ್ಣನೀರ್ ಸುರಿಯೆ, ಚಿಂತಿಪ ಪಾರ್ವನ ಶೋಕದೊಂದು ಪೊಂ**
**ಪುಳಿಯನೆ ನೋಡಿ ನಾಡೆ ಕರುಣಾ ತನಗಾಗಿರೆ ಕೊಂತಿ ಚಿಂತೆಯಿಂ ॥**

ದುರ್ಯೋಧನನು ಕಾಲವಂಚನೆಗಾಗಿ ಮುಳುಗಿರಲು ಬಂದ ವೈಶಂಪಾಯನ ಸರೋವರದ ದೃಶ್ಯ ಅತ್ಯಂತ ಭಯಂಕರವಾಗಿದೆ.

> **ಇದು ಪಾತಾಳಬಿಲಕ್ಕೆ ಬಾಗಿಲ್, ಇದು ದಲ್ ಘೋರಾಂಧಕಾರಕ್ಕೆ ಮಾ**
> **ಡಿದ ಕೂಪಂ, ಪೆಱತಲ್ತು, ಇದುಗ್ರಲಯಕಾಳಾಂಭೋಧರಚ್ಛಾಯೆ ತಾ**
> **ನೆ ದಲ್, ಎಂಬಂತಿರೆ ಕಾಚಮೇಚಕಚಯಚ್ಛಾಯಾಂಬುವಿಂ ಗುಣ್ಪಿನಿಂ**
> **ಪುದಿದಿರ್ದತ್ತು ಸರೋವರಂ ಬಕಬಳಾಕಾನೀಕ ರಾವಾಕುಳಂ ॥**

ಮಹಾಕಾವ್ಯಗಳ ಪ್ರಧಾನವಾದ ಅಷ್ಟಾದಶವರ್ಣನೆಗಳಲ್ಲಿ ಋತುವರ್ಣನೆ ಒಂದು ಪ್ರಧಾನವಾದ ಭಾಗ. ಆದುದರಿಂದ ಎಲ್ಲ ಕವಿಗಳೂ ಅವನ್ನು ತಮ್ಮ ಕಾವ್ಯಗಳಲ್ಲಿ ಉಪಯೋಗಿಸದೇ ಇರುವುದಿಲ್ಲ. ಆದರೆ ಅವೆಲ್ಲ ಸಾಂಪ್ರದಾಯಿಕವಾದ ಕವಿಸಮಯಗಳ ಮಾಲೆಯಾಗಿರುತ್ತವೆ. ಆದರೆ ಅವೇ ಋತುವರ್ಣನೆಗಳು ಪಂಪನ ಕಾವ್ಯಗಳಲ್ಲಿ ಬಹುನವೀನವಾಗಿಯೂ ಅನುಭವಯೋಗ್ಯವಾಗಿಯೂ ಇವೆ. ಮುಂದಿನದು ವರ್ಷಾ ಕಾಲದ ವರ್ಣನೆ : 'ಕರಿಯ ಮುಗಿಲ್ಗಳಿಂ ಗಗನಮಂಡಲಮೊಪ್ಪಿರೆ, ಸೋಗೆಯಿಂ ವನಾಂತರಮೆಸೆದೊಪ್ಪೆ, ತೋರ್ಪ ಮೊಳೆವುಲ್ಗಳಿನ್ ಈ ಧರಣೀವಿಭಾಗಮೊಪ್ಪಿರೆ, ಪೊಸವೇಟಕಾಱರ ಎರ್ದೆಗಳು ಪೊಸಕಾರ ಪೊಡರ್ಪು ಕಂಡು ಅದೇಂ ಕರಿತುವು ಅದೇಂ ಕಲಕಿದುವು ಅದೇಂ ಕುಟೆಗೊಂಡವು ಅದೇಂ ಕನಲ್ದವೊ' 'ಪಯೋಧರಕಾಲದೊಳ್ ಎರಡು ತಡಿಯುಮಂ ಪೊಯ್ದು ಪರಿವ ತೊಱೆಗಳುಮಂ ತೊವಲ್ತು ಸೊಗಯಿಸುವ ಅಡವಿಗಳುಮಂ ಪಸಿಯ ನೇತ್ರಮಂ ಪಚ್ಚವಡಿಸುವಂತೆ ಪಸುರ್ಪುವಡೆದ ನೆಲದೊಳ್ ಪದ್ಮರಾಗದ ಪರಲ್ಗಳಂ, ಬಲಿಗೆದಱಿದಂತೆ ಉಪಾಶ್ರಯಂಬಡೆದಲಂಕರಿಸಿದ ಇಂದ್ರಗೋಪಂಗಳುಮಂ, ಕಿಸುಗಾಡ ನೆಲಂಗಳೆಳದಳಿರ ಬಣ್ಣಮಂ ಕೆಯ್ಕೊಂಡು ವಿರಹಿಗಳ ಮನಮನೊಲಿಸುವಂತೆ ಜಲಜಲನೆ ಪರಿವ ಜರಿವೊನಲ್ಗಳುಮಂ ಕಂಡು'.

ಇದು ವಸಂತಋತುವಿನ ವರ್ಣನೆ :

> **ಅಲರ್ವದಿರ್ಮುತ್ತೆ ಪೂತ ಪೊಸಮಲ್ಲಿಗೆ, ಕಂಪನವುಂಕುತಿರ್ಪ ತೆಂ**
> **ಬೆಲರುಮಿದಂ ಗೆಲಲ್ ಬಗೆದ ತುಂಬಿಗಳ ಧ್ವನಿಯಿಂ ಕುಕಿಲ್ವ ಕೋ**
> **ಗಿಲೆ, ನನೆದೋಱೆ ನುಣ್ಪೆಸೆವ ಮಾಮರನ್, ಒರ್ಮೊದಲಿಲ್ಲದುಣ್ಮುವು**
> **ಯ್ಯಲ ಪೊಸಗಾವರಂ ಪುಗಿಲೊಳೇನೆಸೆದತ್ತೊ ಬಸಂತಮಾಸದೊಳ್**

ಅಷ್ಟೇ ಅಲ್ಲ! 'ಬಳ್ವಳ ಬಳೆದ ಮಿಳಿರ್ವಶೋಕೆಯ ತಳಿರ್ಗಳುಮಂ ಮಾಮರಂ ಗಳುಮಂ ಮರದಿಂದ ಮರಕ್ಕೆ ದಾಂಗುಡಿಯಿಡುವ ಮಾಧವೀಲತೆಗಳುಮಂ ನನೆಯ ಬಿರಿಮುಗ್ಗುಳ್ಗಳ ತುಱುಗಲೊಳೆಱಗಿ ತುಱುಗಿದ ಕಲ್ಪಲತೆಗಳುಮಂ ಭೋರ್ಗರೆದು ಮೊರೆವ ತುಂಬಿಗಳುಮಂ, ರಂಗವಲಿಯಿಕ್ಕಿದಂತೆ ಪುಳಿನಸ್ಥಳಗಳೊಳ್ ಉದಿರ್ದ ಕಟೆವೂಗಳುಮಂ ನಿಱೆನಿಱೆಗೊಂಡು ಸೊಗಯಿಸುವ ನಿಱುಗನ ನಿಱುದಳಿರ ಗೊಂಚಲ್ಗಳುಮಂ ಕಳಿಕಾಂಕುರಂ ಗಳುಮಂ ಸೊನೆಯ ಸೋನೆಗಳುಮಂ ಒಳಕೊಂಡು ವನಂಗಳ್ ಅನಂಗಂಗೆ ತೊಟ್ಟುವೆಸಂಗೆಯ್ದುವು.' ಶರತ್ಕಾಲದ ವರ್ಣನೆ ಇನ್ನೂ ಸೊಗಸು. 'ಅಳಿ ಬಿರಿದಿರ್ದ

ಜಾದಿಯೊಳೆ ಪಲ್ಮೊರೆಯುತ್ತಿರೆ ಹಂಸೆ ಪೂತ ಪೂಗೊಳದೊಳೆ ರಾಗಿಸುತ್ತಿರೆ, ಶುಕಾವಳಿ ಬಂಧುರ ಗಂಧಶಾಳಿ ಸಂಕುಳದೊಳೆ ಪಾಯ್ದು ವಾಯ್ದು ನಲಿಯುತ್ತಿರೆ ಚಕೋರಂ ಇಂದು ಮಂಡಳಗಳಿತಾಮೃತಾಸವಮನುಂಡುಸುರುತ್ತಿರೆ ಚೆಲ್ವು ಶಾರದಂ-ಪುಳಿಯೊಳೆ ಕರ್ಚಿದ ಬಾಳ-ಬಣ್ಣಮನೆ ಪೋಲ್ವಾಕಾಶಂ, ಆಕಾಶಮಂಡಳಮಂ ಪರ್ವಿದ ಬೆಳ್ಮುಗಿಲ್ ಮುಗಿಲ ಬೆಳ್ಪು ಒಳ್ಪೊಕ್ಕು ತಳ್ಪೊಯ್ಯ ಬಳ್ವಳ ನೀಳ್ದಿರ್ದ ದಿಶಾಳಿ, ಶಾಳಿವನ ಗಂಧಾಂಧದ್ವಿರೇಫಾಳಿ ಕಣ್ಗೊಳಿಸಿತ್ತು ಒರ್ಮೆಯೆ ಬಂದುದಂದು ಶರದಂ ಲೋಕಕ್ಕೆ ಕಣ್ ಬರ್ಪಿನಂ.'

ಮೃಗಯಾವಿನೋದದಲ್ಲಿಯೂ ಪಂಪನಿಗೆ ವಿಶೇಷ ಪರಿಚಯವಿದ್ದಿರಬೇಕು. ಪೆರ್ವೇಂಟೆ, ಕಿಱುವೇಂಟೆ, ದೀವದ ವೇಂಟೆ, ಪಂದಿವೇಂಟೆ ಮೊದಲಾದವುಗಳ ವೈವಿಧ್ಯವನ್ನೂ ಬೇಂಟೆಯ ನಾಯ್, ಬೇಂಟೆವಸದನಂ, ಬೇಂಟೆಯ ಬಲೆಗಳ ಲಕ್ಷಣಗಳನ್ನೂ ಬೇಂಟೆಯ ಬಿನದ, ಬೇಂಟೆಯ ತಂತ್ರ, ಬೇಂಟೆಯ ಪ್ರಯೋಜನಗಳನ್ನೂ ಕಣ್ಕಟ್ಟುವಂತೆ ವರ್ಣಿಸಿದ್ದಾನೆ. 'ಅವನ ಬೇಟೆಗಾಱಿರು, ನೆಲನುಂ ಗಾಳಿಯುಂ ಕೆಯ್ಯುಂ ಮೃಗಮನಱಿದು ಕಾಲಾಳೊಳಂ ಕುದುರೆಯೊಳಮೊಳಗಂ ಬರಲ್ ಬಲ್ಲರ್' ಪೆರ್ವೇಂಟೆ ಮತ್ತು ದೀವದ ಬೇಂಟೆಯ ವಿಷಯವನ್ನು ತಿಳಿಸುವುದಾದರೆ 'ಗಾಳಿಯುಂ ಕಱುವುಂ ಮುಱುವುಂ ಕಾಪುಂ ಮೇಪುಂ ತೋಡುಂ ಬೀಡುಂ ದೆಸೆಯುಂ ಕೊಸೆಯುಂ ಮೆಚ್ಚುಂ ಬೆಚ್ಚುಂ ಪೋಗುಂ ಮೇಗುಂ ಬೆದಱುಂ ಕೆದಱುಂ ಪೆರ್ಚುಂ ಕುಂದುಮನಱಿದು ಕಾಣಲುಂ ಕಾಣಿಸಲುಂ ಕಡಂಗಲುಂ ಕಡಂಗಿಸಲುಂ ಅಡಂಗಲುಂ ಅಡಂಗಿಸಲುಂ ಒಡ್ಡಲುಂ ಒಡ್ಡಿಸಲುಂ ಪುಗಿಸಲುಂ ಮಿಗಿಸಲುಂ ಕಾಣದುದಂ ಕಾಣಿಸಲುಂ ಮಾಣದುದಂ ಮಾಣಿಸಲುಂ ಏಱಿದುದನ್ ಏಱಿಸಲುಂ ಜಾಣನಾಗಿ ಮೂಱುಕೊಂಬುಮನ್ ಆಱುನಾಸ್ಪೋಗುಮಂ ಎರಟ್ಟಿಜ್ಜೆಯುಮಂ ಮೂರು ಪೊಟ್ಟುಮಂ ಮೃಗದ ಮೂಱೆರವುಮಂ ಆಱುಆರಯ್ಕೆಯುಮಂ ಗಾಳಿಯುಮಂ ಎಱಿಂಕೆಯುಮಂ ಬಲ್ಲರಾಗಿ ನಂಬಿದ ಬರುವುಮಂ ನಂಬದ ಬರವುಮಂ ಅಱಿದುಂ ಅಲೆಯದುದಂ ಅಲೆಯಿಸಲುಂ ಅಲೆದುದಂ ತೊಲಗಿಸಲುಂ ನಂಬದುದಂ ನಂಬಿಸಲುಂ ನಂಬಿದುದಂ ಬಿಡಿಸಲುಂ ಒಳಪುಗುವುದರ್ಕೆಡೆಮಾಡಲುಂ ಎಡೆಯಾಗದ ಮೃಗಮಂ ಅವುಂಕಿಸಲುಂ ಒಲ್ದುಂ ಒಲ್ಲದ ನಲ್ಲರಂತೆ ಮಿಡುಕಿಸಲುಂ ಪಣಮೊಡ್ಡಿದರಂತೆ ಅಡ್ಡಮಾಡಲುಂ ಎಸೆದ ದೆಸೆಗಳ್ಗೆ ಓಡಿಸಲುಂ ಬಲ್ಲರ್'.

ಬೇಟೆಯಿಂದಾಗುವ ಪ್ರಯೋಜನವನ್ನು ಮುಂದಿನ ಪದ್ಯದಲ್ಲಿ ಸೊಗಸಾಗಿ ನಿರೂಪಿಸಿದ್ದಾನೆ-

> **ಪಸಿವು ದೊರೆಕೊಳ್ಗುಂ, ಉಣಿಸುಗಳಿನಿಕೆಯ್ಗುಂ, ಆವಂದದೊಳ್ ಕನಲ್ದಾ ಮೆಯ್ಯನ್**
> **ಅಸಿಯನಾಗಿಪುದು, ಉಳಿದುವಪ್ಪುದು ಬಗೆಗೊಳಲಪ್ಪುದು ಮೃಗದ ಮೆಯ್ಯೊಳ್**
> **ನಿಸದಮೆಸೆವುದಂ ಬಲ್ಲಾಳ ಬಲ್ಪಲ್ಮೆ ತನ್ನೊಳಂ, ಇಸುತೆ ಲೇಸಪ್ಪುದು**
> **ಬಸನಮೆಂದು, ಅಱಿಯದೆ, ಏಳಿಸುವರ್ ಬೇಂಟೆಯಂ, ಬೇಂಟೆಯೆ ಬಿನದಂಗಳರಸಲ್ತೆ**

ಸ್ವಯಂ ಯೋಧನಾಗಿ ಯುದ್ಧರಂಗದ ಪ್ರತ್ಯಕ್ಷಾನುಭವವಿದ್ದ ಪಂಪನಿಗೆ ಯುದ್ಧವರ್ಣನೆ ನೀರು ಕುಡಿದಂತೆ. ಅಲ್ಲಿ ಅವನು ಕಾಣದ ಕಾಣ್ಕೆಯಿಲ್ಲ, ನೋಡದ

ನೋಟವಿಲ್ಲ, ತಿಳಿಯದ ತಂತ್ರವಿಲ್ಲ, ಅರಿಯದ ಆಯುಧಗಳಿಲ್ಲ. ಯುದ್ಧಕ್ಷೇತ್ರಕ್ಕೆ ಸಂಬಂಧಪಟ್ಟ ಹಾಗೆ ಯುದ್ಧ ಪ್ರಯಾಣ ಸಿದ್ಧತೆ, ಭೇರಿ, ವೀರಾಲಾಪ, ಧೀರಪ್ರತಿಜ್ಞೆ, ಬೀಳ್ಕೊಡುಗೆ, ಧ್ವಜಸಂಚಳನ, ರಥಚೀತ್ಕಾರ, ಭಟರ ಸಿಂಹನಾದ, ಉತ್ಕಟಜ್ಯಾರವ, ಶರಾಸಾರದ ತೀವ್ರತೆ, ವೈವಿಧ್ಯ, ಚೋದಕರ ವೇಗ, ಹಸ್ತ್ಯಶ್ವರಥ ಪದಾತಿಗಳ ಯುದ್ಧ ಪ್ರತಿಯುದ್ಧ, ಬಿದ್ದವರ ಕೊರಗು, ಎದ್ದವರ ಮೊಳಗು, ಪ್ರೇಕ್ಷಕರ ಪ್ರೇರಣೆ, ದೇವತೆಗಳ ಪುಷ್ಪವೃಷ್ಟಿ-ಇವು ಒಂದೊಂದರ ಅತಿ ವಿಶದ ವಿವರಗಳನ್ನು ಗ್ರಂಥದಲ್ಲಿ ಕಾಣಬಹುದು. ಕಣಯ, ಕಂಪಣ, ಮುಸಲ, ಮುಸುಂಡಿ, ಮುದ್ಗರ, ತೋಮರ, ಭಿಂಡಿವಾಳ, ಹಂತಿ, ಬಾಳ್, ಕಕ್ಕಡೆ, ಬುಂಧುರ, ಪಂಚರಾಯುಧ, ಆವುತಿ, ಮಾಳಜಿಗೆ, ಜಾಯಿಲ, ಪರಶು, ಶರ, ಸಂಕು, ಇಟ್ಟಿ, ಪಾರುಂಬಳೆ, ಮಾರ್ಗಣೆ-ಇವು ಆಯುಧಗಳು. ನಿರ್ವಾಯ, ಸರುವಾಯ, ಮುಂಮೊನೆ, ನೆರಕೆ, ನಾರಾಚ, ತಗರ್ತಲೆ, ಕಣೆ, ಕಕ್ಕಂಬು, ಪೆಜಿಯಮುರುಗ, ಕಲ್ಲಂಬು, ಬಟ್ಟೆನಂಬು, ಪಾಜಿಯಂಬು, ಮೊಸೆಯಂಬು, ಕಿಳ್ತಂಬು, ಬೆಳ್ಮಸೆಯಂಬು ಇವು ಬಾಣವಿಶೇಷಗಳು. ವಂಚನೆ, ಕೇಣ, ಆಸನ, ಕೊಸೆ, ದೆಸೆ, ದಿಟ್ಟಿ, ಮುಟ್ಟಿ, ಕಲ ಜಿಂಕೆ, ನಿವರ್ತನ, ಜಾಣ್ಮೆ ಏರ್ವೆಸನ್, ಪುಸಿವಂಚನೆ, ಪುಸಿ, ಅಗಲಿತು, ತಕ್ಕುದಕ್ಕುಪಗೆ, ಕಯ್ಪನೆ, ಕೆಯ್‌ಕುಸುರಿ, ನುಸುಳ್, ತಳಗೋಂಟೆ, ಮೊದಲಾದವು ಯುದ್ಧತಂತ್ರಗಳು. ಆಲೀಢ, ಪ್ರತ್ಯಾಲೀಢ, ಸಮಪಾದ ಎಂಬುವು ಆಸನಗಳು. ಮಂಡಳ, ಸವ್ಯ, ಅಪಸವ್ಯ ಭ್ರಾಂತ, ಉದ್ಭ್ರಾಂತ, ಸ್ಥಿತ, ಚಕ್ರ, ಸ್ಪಂದನ ಬಂಧನ ಇವು ರಥಕಲ್ಪಗಳು. ಪಾತ, ಲಕ್ಷ್ಯ, ಶೀಘ್ರ, ಘಾತ, ಬಹುವೇಗ, ವಿದ್ಯಾಧರಕರಣ ಇವು ಗದಾಯುದ್ಧದ ಪಟ್ಟುಗಳು. ಶರಸಂಕರ್ಷಣ, ಆಕರ್ಷಣ, ಹರಣಾದಿಗಳು ವಿವಿಧ ಶರಕಲ್ಪಕಳಾಪರಿಣತಿಗಳು. ಸಂಧಿ, ನಿಗ್ರಹ, ಯಾನ, ಆಸನ, ಸಂಶ್ರಯ, ದ್ವೈಧೀಭಾವಗಳು ಷಾಡ್ಗುಣ್ಯಗಳು. ಮೂಲ, ಭೃತ್ಯ, ಸುಹೃತ್, ಶ್ರೇಣಿ, ಮಿತ್ರ, ಆಟವಿಕ ಇವು ಷಡ್ವಿಧ ಬಲಗಳು. ಪ್ರಭುಸಿದ್ಧಿ, ಮಂತ್ರಸಿದ್ಧಿ ಉತ್ಸಾಹಸಿದ್ಧಿ ಇವು ಸಿದ್ಧಿತ್ರಯಗಳು. ಇವುಗಳನೇಕದರ ರೂಪರೇಖೆಗಳನ್ನು ಇಂದು ನಿಷ್ಕರ್ಷಿಸುವುದು ಸುಲಭಸಾಧ್ಯವಲ್ಲ.

ಯುದ್ಧಕ್ರಿಯೆಗಳ ವರ್ಣನೆಗಳೂ ಬಹುಮುಖವಾಗಿಯೂ ಆಕರ್ಷಕವಾಗಿಯೂ ಇವೆ- 'ಪ್ರಯಾಣಭೇರಿಯಂ ಪೊಯ್ಸಿದಾಗಳ್ ಸುರೇಂದ್ರಾಚಳಂ ನಡುಗಿತ್ತು. ಅರ್ಕನಳುರ್ಕೆಗೆಟ್ಟು ನಭದಿಂ ತೂಳ್ದಂ. ಮರುಳ್ದಪ್ಪಿದಳ್ ಮೃಡನಂ ಗೌರಿ, ಸಮಸ್ತಮೀ ತ್ರಿಭುವನಂ ಪಂಕೇಜಪತ್ರಾಂಬುವೋಲ್ ನಡುಗಿತ್ತು, ವಿಲಯಕಾಲಜಳನಿಧಿ ತಳರ್ವಂತೆ ಸುಯೋಧನನ ಸೇನೆ ತಳರ್ದುದು, ಘೂರ್ಣಿತಾರ್ಣವಮನೊತ್ತರಿಸಿತ್ತು ಚತುರ್ಬಲಂ,' 'ಸೈನ್ಯಪಾದೋತ್ಥಿತರಜಮಂಬರಸ್ಥಳಮಂ ಮುಟ್ಟೆ ತೆಳ್ಪುಗೆಟ್ಟು ಕೆಸರಾಯ್ತಾಕಾಶಗಂಗಾಜಲಂ'. 'ಕರಿಘಟೆಗಳ ಕರ್ಣತಾಳಹತಿಯಿಂ ಕುಲಗಿರಿಗಳಳ್ಳಾಡಿದುವು' ಎರಡುಂ ಬೀಡುಗಳೊಳ್ ಕೊಳ್ಳಿ ವೀಸಿದಾಗಳ್ ಉರಿಮುಟ್ಟಿದರಳೆಯಂತಂಬರಮುರಿದತ್ತು.' 'ಸಿಡಿಲೊಳ್ ತಳ್ತು ಪೋರ್ವ ಸಿಡಿಲಂತೆ ಬಾಳೊಳ್ ಬಾಳ್ ಪಳಂಚಿದುದು. ಪಲರ್ ಪಡವಳ್ಳರ ಮಾತುಗಳೆ ಮಂದರಕ್ಷುಭಿತದುಗ್ಧಪಯೋಧಿಗಭೀರನಾದಮಂ ಕೆಯ್ಕೊಂಡವು' 'ಸಿಡಿಲೇಟಿಗ್ಗಿಯುಮಂ

ಕೋಟಿಸಗಿದ ಪುಲಿಯ ಪಿಂಡುಮನನುಕರಿಸಿದುವು ಸಂದಣಿಗಳ್'. 'ಕಾಟ್ಟಿರುಮಸಗಿದಂತೆ ಮಸಗಿದರ್ ಧನುರ್ಧರರ್' ಭೂತಳಮಳ್ಳಾಡೆ ಕೆಸಱ ಕಡಿತದ ತೆಱದಿಂ ಶ್ವೇತ ಗಂಗಾಸುತನ ಒಡ್ಡಣಂ ನಿಂದವು. ಪ್ರಳಯಕಾಲಜಾತೋತ್ಪಾತವಾತನಿರ್ಘಾತದಿಂದ ತುಳ್ಕಾಡಿ ತಳ್ಳಂಕಗುಟ್ಟುವ ಜಳನಿಧಿಗಳಂತೆ ಉಭಯಸೈನ್ಯಗಳು ಮೇರೆದಪ್ಪಿದವು. ತಿಱಿದಿಕ್ಕಿದಂತೆ ತಲೆಗಳ್ ಪಱಿದುರುಳಿದುವು' 'ಮುಗಿಲ್ಗಳಿಟ್ಟೆಡೆಗಳೊಳ್ ತೊಡದಿರ್ದ ತಲೆಗಳ್ ಜೇನ ಪುಟ್ಟಿಗಳನೆ ಪೋಲ್ತವು'. ಪ್ರಳಯಕಾಲದಂದು ಮೂಡುವ ಪನ್ನಿರ್ವರಾದಿತ್ಯರ ತೇಜಮುಮಂ ಮಹೇಶ್ವರ ಭೈರವಾಡಂಬರಮುಮಂ ಯುಗಾಂತ ಕಾಲಾಂತಕನ ಮಸಕಮುಮಂ ಸುರಾಪಗಾತ್ಮಜಂ ತನ್ನೊಳಳವಡಿಸಿಕೊಂಡಂ' 'ಮಯ್ಯೊಳುಡಿದಂಬು ಗಳುಮನೆಲ್ಲುಮಂ ನಟ್ಟುಡಿದ ಬಾಳಕಕ್ಕಡೆಯುಡಿಗಳುಮನಯಸ್ಕಾಂತಮಂ ತೋಱಿತೋಱಿ ತೆಗೆಯುತ್ತಿರ್ದರ್'. 'ಪೆಂಕುಳಿಗೊಂಡ ಸಿಂಹಮಂ ಮುತ್ತುವಂತೆ ಧರ್ಮಪುತ್ರಂ ಶಿಖಂಡಿಯಂ ಮುಂದಿಟ್ಟು ಭೀಷ್ಮನಂ ಮುತ್ತಿದಂ' 'ನಟ್ಟ ಕೂರ್ಗಣೆಯ ಬಿಣ್ಪೊರೆಯಿಂದೆ ಬಟಲ್ದುನುರ್ವಿ ಪೆರ್ವಿದಿಱ ಸಿಡುಂಬಿನೊಳ್ ಪುದಿದೊಂದು ಕುಳಾಚಳದಂತೆ ಸಿಂಧುಜಂ' 'ಸಿಡುಂಬಿನ ಪೊದಱೊಳಗೆ ಮಱೆದೊಱಗಿದ ಮೃಗರಾಜನಂತೆ ಶರಶಯನದೊಳ್ ತೋರಿದಂ' 'ವಿಳಯಕಾಲ ಜಳಧರಂಗಳೆಲ್ಲವೊಂದಾಗಿ ಕುಲಗಿರಿಯಂ ಮುತ್ತುವಂತೆ ಕಳಿಂಗರಾಜ ಗಜಘಟೆ ಭೀಮಸನಂ ಮುತ್ತಿದುವು. ಗಜಾಸುರನೊಳ್ ಆಸುರಂ ಬೆರಸುತಾಗುವಂಧಕಾರಾತಿಯಂತೆ ಭೀಮಸೇನಂ ಪೊಣರ್ದಂ' 'ಮಹಾಮಕರಂ ಸಮುದ್ರದೊಳ್ ಪರಿವಂತೆವೊಲಾ ಸುಪ್ರತೀಕಗಜಂ ಪರಿದುದು'. 'ಒಣಗಿದುದೊಂದು ಪೆರ್ವಿದಿರ ಪೆರ್ವೊದರಿಂದಮಾಱಿದುರ್ವುವಾ ಶುಶುಕ್ಷಣಿಯವೊಲ್ ಅಭಿಮನ್ಯುವಿನ ಕೂರ್ಗಣೆ ಪಾಯ್ದು ನುಂಗಿದವು' ಅದರ್ವ 'ನೂಱ್ಛಿರುಂ ಪೊನ್ನ ತಾಟ್ಗಿಳ್ ಸೂಱಿಯೊಳ್ ಬೀಳ್ವಂತೆ ಬಿಟ್ಟರ್' ಇವು ಕೆಲವು ಮಾದರಿಗಳು ಮಾತ್ರ. ವರ್ಣನೆಗಳ ವೈಭವವನ್ನು ಮೂಲವನ್ನು ಓದಿಯೇ ಆಸ್ವಾದಿಸಬೇಕು.

ಚುದ್ರಿಕಾವಿಹಾರ, ಮಧುಪಾನ, ವಿಹಾರಗಳೂ ಮಹಾಕಾವ್ಯದ ಅಂಗವಾದ ಅಷ್ಟಾದಶವರ್ಣನೆಗಳ ಭಾಗಗಳು. 'ಲೌಕಿಕ ಕಾವ್ಯ' ವನ್ನು 'ಸಮಸ್ತಭಾರತ'ವನ್ನು ಬರೆಯಲು ಹೊರಟ ಕವಿತಾಗುಣಾರ್ಣವನು ಈ ಭಾಗಗಳಲ್ಲಿ ತತ್ಕಾಲದ ಸಮಾಜಚಿತ್ರದ ಒಂದು ಕಿರುದೃಶ್ಯವನ್ನು ಕೊಡಲು ಪ್ರಯತ್ನಪಟ್ಟಿದ್ದಾನೆ. ಸುಭದ್ರಾಹರಣದ ಹಿಂದಿನ ರಾತ್ರಿ ಅರ್ಜುನನು ತನ್ನ ವಿರಹ ವೇಗವನ್ನು ಆರಿಸಿಕೊಳ್ಳುವುದಕ್ಕಾಗಿ ವಿಟ ವಿದೂಷಕರೊಡನೆ ಚಂದ್ರಿಕಾವಿಹಾರಕ್ಕಾಗಿ ಹೊರಟು, ಮಾಲೆಗೇರಿ, ವೇಶ್ಯಾವಾಟಿ ಮತ್ತು ಪಾನಭೂಮಿಗಳ ಮೂಲಕ ಹಾದು ಹೋಗುವನು. ಅಲ್ಲಿ ಅವನಿಗಾದ ಅನುಭವವನ್ನು ಪಂಪನು ಅತ್ಯಂತ ರೋಮಾಂಚಕಾರಿಯಾಗುವಂತೆ ವರ್ಣಿಸಿದ್ದಾನೆ. ಮೊದಲು ಅರ್ಜುನನು ಪೆಂಡವಾಸಗೇರಿಯನ್ನು ಪ್ರವೇಶಿಸಿದ ತಕ್ಷಣ ಅಲ್ಲಿರುವವರೆಲ್ಲರೂ ಸೌಭಾಗ್ಯದ ಭೋಗದ ಚಾಗದ ರೂಪಾದ ಮಾನಿಸರಂತೆ ಕಾಣುವರು. ಮೊದಲು ಅವನ ಕಣ್ಣಿಗೆ ಬೀಳುವುದು ಹೂವಿನ ಸಂತೆ. 'ಅದು ಆರು ಋತುಗಳ ಪೂಗಳನೊಂದು ಮಾಡಿ ಪೂವಿನಂಬುಗಳಂ ಪಣ್ಣಲೆಂದು ಕಾಮದೇವಂ ಮಾಡಿದೊಱಿನ ಸಾಲೆ'ಯಂತಿದೆ. ಮಾಲೆಗಾರ್ತಿಯರು

ಹೂವನ್ನು ಮಾಲೆ ಹಾಕುತ್ತಿದ್ದಾರೆ. ಅವರ ಜೋಡುಗೆಯ್ತಗಳನ್ನು ನೋಡಿದರೆ ಅದು ಹೂವನ್ನು ಮಾರುವಂದವಲ್ಲ. 'ಮನೆಯಾಣ್ಮನಂ ಮಾಱುವಂದಂ' ಎನ್ನಿಸುತ್ತದೆ ಅರ್ಜುನನಿಗೆ. ಕಣ್ಮುಚ್ಚಿ ಮಲಗಿದ ಗಂಡನೆದುರಿಗೆ ಹೆಂಡತಿಯೊಬ್ಬಳು ಮಿಂಡನೊಡನೆ ಗೊಡ್ಡಾಟವಾಡುತ್ತಿದ್ದಾಳೆ. ಹಾದರದಲ್ಲಿ ಸಂಸಾರಸಾರಸರ್ವಸ್ವವನ್ನೂ ಗೆಲ್ಲುವ ರುಚಿಯಿದ್ದಿರಬೇಕು. ಇಲ್ಲದಿದ್ದರೆ ತಲೆ ಮೂಗುಗಳನ್ನಾದರೂ ಒತ್ತೆಯಿಟ್ಟು ಇಲ್ಲಿಗೆ ಬರುತ್ತಿದ್ದರೆ? ಎನ್ನುತ್ತಾನೆ ಅರಿಗ. ಅವರ ಸಂಭಾಷಣೆಯ ವೈಭವವೆಷ್ಟು! ಕುಹಕಕೇಳಿಗಳೆಷ್ಟು! ಸರಸಸಲ್ಲಾಪಗಳೆಷ್ಟು! ನೋವುನುಲಿತಗಳೆಷ್ಟು! ಎಷ್ಟು ರೀತಿಯ ಬೊಜಂಗರು! ಅರಬೋಜಂಗ, ಕಿರುಕುಳ ಬೊಜಂಗ, ಪೊರ್ಕುಳಿ ಬೊಜಂಗ, ಪೊಟಿಲ ಬೊಜಂಗ, ಕತ್ತುರಿ ಬೊಜಂಗರು,' ಅವರ ಬಿಯದಳವಿಗೆ ಮನಮೆಚ್ಚಿ ಬರುತ್ತಿದ್ದರೆ ಮುಂದೆ 'ಕಳ್ಳಿನೊಳಮರ್ದಿನೊಳಂ ಪುಟ್ಟಿದ ಪೆಂಡಿರಂತೆ ಸೊಗಯಿಸುವ ಪಲರು ಮೊಳ್ವೆಂಡಿರೊಂದೆಡೆಯೊಳಿರ್ದು ಕಾಮದೇವನೆಂಬ ಬಳಮರ್ದುಕಾಱನ ಮಾಡಿದ ಮರ್ದಿನಂತೆ ಬೆಳೆದು ದಳಂಬಡೆದು ಮೂನೂಱಱುವತ್ತು ಜಾತಿಯ ಕಳ್ಗಳಂ ಮುಂದಿಟ್ಟು ಮಧುಮಂತ್ರದಿಂ ಮಧುದೇವತೆಗಳನರ್ಚಿಸಿ ಪೊನ್ನ ಬೆಳ್ಳಿಯ ಪದ್ಮರಾಗದ ಪಚ್ಚೆಯ ಗಿಳಿಯ ಕೋಗಿಲೆಯ ಕೊಂಚೆಯಂಚೆಯ ಕುಂತಳಿಯ ಮಾಳ್ಕೆಯ ಸಿಪ್ಪುಗಳೊಳ್ ತೀವಿ ಮಧುಮಂತ್ರಗಳಂ ಮಂತ್ರಿಸಿ ನೆಲದೊಳೆಱೆದು, ತಲೆಯೊಳ್ ತಳಿದು, ಕಳ್ಳಿನೊಳ್ ಬೊಟ್ಟನಿಟ್ಟುಕೊಂಡು, ಕೆಲದರ್ಗೆಲ್ಲಂ ಬೊಟ್ಟಿಟ್ಟು, ಕಿಱೆಯರ್ಪಿರಿಯರಱೆದು ಪೊಡೆವಟ್ಟು ಧರ್ಮಗಳ್ಗುಡಿವರ್ಗೆಲ್ಲಂ ಮೀಸಲ್ಗಳ್ಳನೆಱೆದು ಪೊನ್ನ ಬೆಳ್ಳಿಯ ಸಿಪ್ಪುಗಳೊಳ್ ಕಿಱೆಕಿಱೆದೆಱೆದು ಕುಡಿಬಿದಿರ ಕುಡಿಯ ಮಾವಿನ ಮಿಡಿಯ ಮಾರುದಿನ ಮೆಣಸುಗಡಲೆಯ ಪುಡಿಯೊಳಡಸಿದಲ್ಲದಲ್ಲಣೆಗೆಯ ಚಕ್ಕಣಂಗಳಂ ಮರೀಚಿ, ಚಿಂತಾಮಣಿ, ಕಕ್ಕರ ಮೊದಲಾದ ಸವಿಸವಿದುವುಗಳ ರುಚಿಯನ್ನು ನಾನಾರೀತಿಯಾಗಿ ವಿಮರ್ಶೆಮಾಡಿ ಕಾಂತೆಯರು ಕಾಮಾಂಗವನ್ನು ಕುಣಿಯುತ್ತಾರೆ. ತೃಪ್ತಿಯಾಗಿ ಕುಡಿದು ಪ್ರಜ್ಞೆತಪ್ಪಿ, ನಿರ್ವಸ್ತ್ರಳಾಗಿ ಕುಣಿಯುತ್ತಾಳೆ, ಹಾಡುತ್ತಾಳೆ, ತೊದಲುತ್ತಾಳೆ. ಸೂಳೆಗೇರಿಗೆ ಹೋಗುವನೊಬ್ಬನನ್ನು ಸ್ನೇಹಿತನೊಬ್ಬನು ತಡೆಯುತ್ತಾನೆ. ಬೇರೊಬ್ಬ ಹೆಂಡತಿಯು ಅಲ್ಲಿಗೆ ಹೋಗುತ್ತಿದ್ದ ಗಂಡನನ್ನು ಕಣ್ಣೀರಿನ ಸಂಕೋಲೆಯಿಂದ ಬಿಗಿಯುತ್ತಿದ್ದಾಳೆ. ಕುಂಟಣಿಯ ಹಿಂಸೆಯಿಂದ ವಿಶೇಷ ಧನವನ್ನು ಸಂಪಾದಿಸುತ್ತಿದ್ದ ಸೂಳೆಯೊಬ್ಬಳು ಪಲ್ಲಿಲಿವಾಯನಾದ ಮುದುಕನೊಬ್ಬನ ಲೋಳೆಪೊನಲ್ಗಳಿಗೆ ಅಸಹ್ಯ ಪಡುತ್ತಿದ್ದಾಳೆ. ಈ ವರ್ಣನೆಗಳು ಮೂಲ ಕಥಾಪ್ರವಾಹಕ್ಕೆ ಅಡ್ಡಿಯಾದರೂ ಆಕರ್ಷಕವಾಗಿ ಆ ಕಾಲದ ಸಮಾಜದ ಚಿತ್ರವನ್ನು ಕೊಡುವುದಕ್ಕೆ ಬಹಳ ಸಹಾಯಕವಾಗಿವೆ.

ಪಂಪನ ಶೈಲಿಯು ದಿಣ್ಣೆಯಿಂದ ತಡೆಯಿಲ್ಲದೆ ಹರಿಯುವ ನದಿಯಂತೆ ಬಹುಶೀಘ್ರಗಾಮಿಯಾಗಿರುತ್ತದೆ. ಮಿತವಾದ ಭಾಷೆಯಿಂದ ವಿಶೇಷವಾದ ಕಥಾಭಾಗವು ಒಂದರ ಹಿಂದೆ ಒಂದು ಓಡುವುದು. ಮುಂದಿನ ವಚನವನ್ನು ಗಮನಿಸಿ :

'ನಿಮ್ಮ ಮನಕ್ಕೆ ಕೊಕ್ಕರಿಕೆಯಾಗೆಯುಂ ಪಾಟೆಗೆ ಗೆಂಟಾಗೆಯುಂ ನೆಗಟ್ದಿಮಲ್ಲೆಂದು

ಪೊಡಮಟ್ಟು ಕುಂತಿಯಂ ವಿದುರನ ಮನೆಯಲಿರಲ್ವೇಟ್ಟು ಸುಭದ್ರೆಯನಭಿಮನ್ಯುವೆರಸು ನಾರಾಯಣನಲ್ಲಿಗೆ ದ್ವಾರಾವತಿಗೆ ಕಳುಪಿ ನಿಜಜನಂಬೆರಸು ಗಂಗೆಯಂ ಪಾಯ್ದಡಜಿ ಪಡುವಣದೆಸೆಯ ಕಾಮ್ಯಕವನದ ಬಟ್ಟೆಯಂ ತಗುಳ್ದು ಪೋಗವೋಗೆ' ಇಲ್ಲಿ ಎಷ್ಟು ವಿಷಯಗಳು ಅಡಕವಾಗಿವೆ!

ಪಂಪನ ಅನೇಕ ಪದ್ಯಗಳು ಛಂದೋಬದ್ಧವಾದ ಗದ್ಯದಂತೆ ಸರಳವಾಗಿ ಹರಿಯುತ್ತಿರುವುದು ಪಂಪನ ಶೈಲಿಯು ಶ್ಲಾಘನೀಯವಾಗುವುದಕ್ಕೆ ಮತ್ತೊಂದು ಕಾರಣ. ಅವನ ಪದ್ಯಗಳು ಒಂದರ ಮುಂದೊಂದು ಬರುವ ವಾಕ್ಯಮಾಲೆಗಳಾಗಿರುವವಲ್ಲದೆ ಅನೇಕ ಕಡೆಗಳಲ್ಲಿ ಪದ್ಯದಲ್ಲಿಯ ವಾಕ್ಯವು ಆ ಪದ್ಯದಲ್ಲಿಯೇ ಮುಗಿಯದೆ ಮುಂದೆ ಬರುವ ಗದ್ಯಪ್ರಾಂತದಲ್ಲವತರಿಸಿ ಪರಿಸಮಾಪ್ತವಾಗುವುದು : ಮುಂದಿನ ಎರಡು ಪದ್ಯಗಳು ಇವಕ್ಕೆ ಉತ್ತಮ ಉದಾಹರಣೆಗಳು.

ಬಲಿಯಂ ಕಟ್ಟಿದನಾವನ್, ಈ ಧರಣಿಯಂ ವಿಕ್ರಾಂತದಿಂದಂ ರಸಾ
ತಲದಿಂದೆತ್ತಿದನಾವನ್, ಅಂದು ನರಸಿಂಹಾಕಾರದಿಂ ದೈತ್ಯನಂ
ಚಲದಿಂ ಸೀಳ್ದವನಾವನ್, ಅಬ್ಧಿಮಥನಪ್ರಾರಂಭದೊಳ್ ಮಂದರಾ
ಚಲಮಂ ತಂದವನಾವನ್, ಆತನೆ ವಲಂ ತಕ್ಕಂ ಪೆಱರ್ ತಕ್ಕರೇ ॥

ದಿವಿಜೇಂದ್ರಂ ಸುಖಮಿರ್ದನೆ, ದಿತಿಸುತವ್ಯಾಬಾಧೆಗಳ್ ದೇವರ್ಗಿ
ಲ್ಲವಲಾ, ಷೋಡಶರಾಜರಿರ್ಪ ತೆಱನೇನ್, ಎಮ್ಮನ್ವಯಕ್ಕಾ ಪ್ಪರಾ
ವವಿಳಾಸಂಗಳೊಳಿರ್ಪರ್, ಏ ದೊರೆತು ತಾನೆಮ್ಮಯ್ಯನೈಶ್ವರ್ಯಮಂ
ತಿವಲ್ಲಂ ತಿಳಿವಂತುಟಾಗಿ ಬೆಸಸಿಂ ಪಂಕೇಜಗರ್ಭಾತ್ಮಜಾ ॥

ಈ ಪದ್ಯಗಳು ಎಷ್ಟು ಸುಲಭವಾಗಿವೆ ! ಸರಳವಾಗಿವೆ!

ಪಂಪನು ಕಥಾಶರೀರದಲ್ಲಿ ಬಹು ಭಾಗವನ್ನು ಸಂವಾದರೂಪದಲ್ಲಿ ಬರೆದಿರುವುದು ಅವನ ಕಾವ್ಯಕ್ಕೆ ಒಂದು ಪ್ರತ್ಯೇಕವಾದ ಚೈತನ್ಯವನ್ನುಂಟುಮಾಡಿದೆ. ಪಾತ್ರಗಳಾಡುವ ಭಾಷೆ ಬಹುಸರಳವಾಗಿದೆ. ಆದರೂ ಪೂರ್ಣವಾದ ತೂಕದಿಂದ ಕೂಡಿದೆ. ಅವು ಶಲ್ಯದ ಮೊನೆಯಂತೆ ನೇರವಾಗಿ ಹೃದಯುವನ್ನು ಭೇದಿಸಿ ಪ್ರವೇಶವಮಾಡುವುವು. ಅಗ್ರಪೂಜಾಸಂದರ್ಭದಲ್ಲಿ ಶಿಶುಪಾಲನು ಧರ್ಮರಾಜನಿಗೆ ಆಡಿದ ಮಾತುಗಳಿವು.

ಮನದೊಲವರಮುಳ್ಳೊಡೆ ಕುಡು
ಮನೆಯೊಳ್ ಹರಿಗಗ್ರಪೂಜೆಯಂ ಯಜ್ಞದೊಳೀ
ಮನುಜಾಧೀಶ್ವರ ಸಭೆಯೊಳ್
ನೆನೆಯಲುಮಾಗದು ದುರಾತ್ಮನಂ ಬೆಸಗೊಳ್ವಾ ॥

ಆಳವಱಿಯದೆಗ್ಗು ಬಳಬಳ
ಬಳೆವಿನೆಗಂ ಪಚ್ಚಪಸಿಯ ತುಱುಕಾಱಿಂಗ
ಗ್ಗಳಿಕೆಯನೆ ಮಾಡಿ ನೀನುಂ
ಪಟ್ಟೆಯಂ ಕಟ್ಟಿದೆಯೊ ಭೂಪಂ ರಿನಿಬರ ಕೊರಲೊಳ್
ದೇವರನಡಿಗೆಱಗಿಸಿ ಸಕ
ಲಾವನಿತಳದಧಟರಂ ಪಡಲ್ವಡಿಸಿದ ಶೌ.

**ರ್‍ಯಾವಷ್ಟಂಭದೊಳಾನಿರೆ**
**ಗೋವಳಿಗಂಗಗ್ರಪೂಜೆಯಂ ನೀಂ ಕುಡುವಾ ॥**

**ಕುಡುವೇೞ್ವನ ಕುಡುವನ ಕುಡೆ**
**ಪಡೆವನ ಪೆಂಪೇಂ ನೆಗೞ್ತೆವಡೆಗುಮೊ ಪೇೞ್ವಂ**
**ಕುಡುವೇೞ್ಗೆಮ ಕುಡುವಣ್ಣಂ**
**ಕುಡುಗೆಮ ಕುಡೆ ಕೊಳ್ವ ಕಲಿಯನಱೆಯಲ್ಕಕ್ಕುಂ ॥**

ಎಂದನಿತಱೊಳೆ ಮಾಣದೆ ಗೀರ್ವಾಣಾರಿಯಸುರಾರಿಯನಿಂತೆಂದಂ-

**ದೊರೆಯಕ್ಕುಮೆ ನಿನಗೆ ಯುಧಿ**
**ಷ್ಠಿರನರ್ಘ್ಯಮನೆತ್ತೆ ಶಂಖದೊಳ್ ಪಾಲೆಱೆದಂ**
**ತಿರೆ ಮಲಿನಮಿಲ್ಲದೊಳ್ಳುಲ**
**ದರಸುಗಳಿರೆ ನೀನುಮಗ್ರಪೂಜೆಯನಾಂಪಾ ॥**

**ಮನೆ ನಿನಗೆ ನಂದಗೋಪಾಲನ**
**ಮನೆ ತುಱುಗಾರ್ತಿ ನಿನಗೆ ಮನೆವೆಂಡಿತಿ ಪ**
**ಚ್ಚನೆ ಪಸಿಯ ಗೋವನ್ನೆ ಕರ**
**ಮನಯದೆ ನಿನ್ನಳವಿಗಳವನಱೆಯದೆ ನೆಗೞ್ವೈ ॥**

**ಮೀನ್, ಆವೆ ಪಂದಿಯೆಂದೆನಿ**
**ತಾನುಂ ತೆಱನಾಗಿ ಡೊಂಬವಿದ್ಯೆಯನಾಡಲ್**
**ನೀನಱೆವೆ, ಉರದಿದಿರ್ಚಿದೊ**
**ಡಾನಱೆವೆಂ ನಿನ್ನನಿಲ್ಲಿ ದೆಸೆವಲಿಗೆಯ್ಯಲ್ ॥**

**ಅಱೆಯದಿದಂ ಮಾಡಿದೆನ್, ಎ**
**ನ್ನಱೆಯಮಿಕೆಗೆ ಸೈರಿಸೆಂದು ನೀಂ ಸಭೆಯೊಳ್ ಕಾ**
**ಲ್ಗೆಱಗು, ಎಱಗು ಕೊಲ್ಲೆನ್**

ಒಂದೆ ಪದ್ಯದಲ್ಲಿ ನಿರೂಪಿತವಾಗಿರುವ ಭೀಮ-ಭಗದತ್ತರ ಸಂಭಾಷಣೆಯನ್ನು ಗಮನಿಸಿ :

**ತೊಲಗು, ಇದು ಸುಪ್ರತೀಕಗಜಂ, ಆಂ ಭಗದತ್ತನೆನ್, ಇಲ್ಲಿ ನಿನ್ನ ತೋ**
**ಳ್ವಲದ ಪೊಡರ್ಪು ಸಲ್ಲದು, ಎಲೆ ಸಾಯದೆ ಪೋಗು, ಎನೆ ಕೇಳ್ದು ಭೀಮನ್ ಆಂ**
**ತೊಲೆಯದಿರ್, ಉರ್ಕಿನೊಳ್ ಸುಡಿವೆ, ಈ ಕರಿಸೂಕರಿಯುಲ್ತು ಪತ್ತಿ ಗಂ**
**ಟಲನೊಡೆಯೊತ್ತಿ ಕೊಂದಪೆನ್, ಇದಲ್ತಿದರಮ್ಮನುಂ, ಎನ್ನನಾಂಪುದೇ ॥**

ಈ ಪದ್ಯಗಳಲ್ಲಿ ಪ್ರಕಾಶಿತವಾದ ದೇಶಿಯ ಸೊಬಗನ್ನು ಯಾರಾದರೂ ಮೆಚ್ಚಬಹುದು.

ಚಂದ್ರಸೂರ್ಯರ ಉದಯಾಸ್ತಗಳನ್ನು ಕಥಾಸಂವಿಧಾನದಲ್ಲಿ ಸೇರಿಸಿ ಉತ್ಪ್ರೇಕ್ಷಿಸಿ ಹೇಳುವುದು ಪಂಪನ ಸಂಪ್ರದಾಯ. ಇವು ಕಥಾಶರೀರದಲ್ಲಿ ಸೇರಿಕೊಂಡು ಉತ್ಪ್ರೇಕ್ಷೆಯೆಂಬ ಭಾವವನ್ನೆ, ಮರಸಿಬಿಡುತ್ತದೆ. ಮುಂದಿನದು ಈ ಮಾದರಿಯ ಸೂರ್ಯೋದಯ ವರ್ಣನೆ-

> ಅದಟಂ ಸಿಂಧುತನೂಭವಂ ವಿಜಯನೊಳ್ ಮಾರ್ಕೊಂಡಣಂ ಕಾದಲಾ
> ಱದೆ ಬೆಂಬಿಟ್ಟೊಡೆ ಕಾದಲೆಂದು ಬೆಸನಂ ಪೂಣ್ದಂ ಗಡಂ ದ್ರೋಣನಂ
> ತದುವಂ ನೋಡುವೆನೆಂದು ಕಣ್ ತಣಿವಿನಂ ನೋಡಲ್ಕೆ ಬರ್ಪಂತೆಬಂ
> ದುದಯಾದ್ರೀಂದ್ರಮನೇಱಿ ಭಾನು ಪೊಱಮಟ್ಟೊಡ್ಡಿತ್ತನೀಕಾರ್ಣವಂ ॥

ಮುಂದಿನ ಕರ್ಣವಧಾನಂತರದ ಸೂರ್ಯಾಸ್ತಮಯದ ವರ್ಣನೆಯೂ ಇಂತಹುದೆ-

> ಪಱಯಿಗೆಯನುಡುಗಿ ರಥಮಂ
> ಪೆಱವನನೆಸಗಲ್ಕೆವೇೞ್ದು ಸುತಶೋಕದ ಪೊಂ
> ಪುೞಿಯೊಳ್ ಮೆಯ್ಯಱಿಯದೆ ನೀ
> ರಿೞಿವಂತೆವೊಲ್, ಇೞಿದನಪರಜಳಧಿಗೆ ದಿನಪಂ ।

ಸಹಜವಾಗಿ ನೀರುಕುಡಿದಂತೆ ಮಾತನಾಡುವುದು ಪಂಪನ ಪದ್ಧತಿಯಾದುದರಿಂದ ಅವನು ಜನಸಾಮಾನ್ಯರಲ್ಲಿ ರೂಢಿಯಲ್ಲಿರುವ ಪದಗಳನ್ನೂ ವಾಕ್ಯಗಳನ್ನೂ ನುಡಿಕಟ್ಟನ್ನೂ ದೇಶೀಯಶಬ್ದಗಳನ್ನೂ ತನ್ನ ಕಾವ್ಯದಲ್ಲಿ ವಿಶೇಷವಾಗಿ ಉಪಯೋಗಿಸಿದ್ದಾನೆ. 'ಪುಣ್ಯಭಾಜನಂನೆಗೆ ನೂಕೆ ಪಾಸು' 'ರಾಜಹಂಸ ಮಾನಸಸರೋವರವನಲ್ಲದೆ ಪೆಱತನೇಕೆ ಬಯಸುಗುಂ' 'ಕಃಕೇನಾರ್ಥೀ ಕೋದರಿದ್ರಃ' ಪನಿಪುಲ್ಲಂ ನಕ್ಕೆ ತೃಷ್ಣೆಪೋದಪುದೇ!' 'ನಿಯತಿಃ ಕೇನಲಂಘ್ಯತೆ' 'ಏನಾಗದೊ ಪಾಪದ ಫಳಂ ಎಯ್ದಿದಂದ ದಿವಸದೊಳಾರ್ಗಂ, 'ಆನೆಯ ಕೋಡುಬಾಗದು' 'ಪಗೆಯಿಱಿಯ ಬಂದರ ಮೂಗನರಿದರೆಂಬಂತೆ' 'ಬೇರೊಳ್ ಬೆನ್ನೀರನೆಱಿಯದಿರ್', 'ಸೆಟ್ಟಿಯ ಬಳ್ಳಂ ಕಿಱಿದು', 'ಕಮ್ಮಱಿಯೋಜಂ ಬಿಲ್ಲೋಜನೆಂಬುದಂ ಮಾಡುವೆನೆ' 'ಬೆಳ್ಳಾಳ್ಗೆ ಪೊಳಪುದೋಱುವುದು ಒಳ್ಳಾಳೊಪೊಡರ್ಪುದೋಱುವುದು' 'ಪೆಣನನಿಱಿದು ಪಗೆಗೊಂಡರ್' 'ಎಂತಪ್ಪರೊಳಂ ಮುಳಿಸಱಿವನಾಗಲೇನಿತ್ತಪುದೇ? 'ಅಪಾಂಡವಂ ಮಾಡದಂದು ಬಿಲ್ಲಱಿಯನ ಪುತ್ರನಲ್ಲೆಂ' 'ಗುರುವಿಯೋಗಭರಂ ಗುರುವಾಗದಿರ್ಕುಮೆ' 'ಪಗೆಯನೇಂ ಗಳ ಪಟ್ಟಮೆ ಪಾರಿ ತಿಂಗುಮೆ', 'ನಿನ್ನ ಕೆಯ್ದುವೆನಿತುಂ ಬಿಸುಟಿರ್ದ ಲೆಕ್ಕಮೆ' 'ವಿಷಮೊಳ್ಳೆಗುಳ್ಳೊಡಂ ಒಳ್ಳೆಯೆ, ಕಾಳಿಯನಾಗನಾಗದು' 'ನೃಪಚಿತ್ತ ವೃತ್ತಿ ಸಂಚಲಂ ಅದಱಿಂದಂ ಓಲಗಿಸಿ ಬಾೞ್ವುದೆ ಕಷ್ಟಂ ಇಳಾಧಿನಾಥರಂ' 'ತೊಟ್ಟಿರ ಮೊಲೆವಾಲನುಂಡ ಗುಣಮನ್ ಆರ್ ಕಡಿಪರಾ ನರೇಂದ್ರರೊಳ್', 'ಮೇಲಪ್ಪ ಪಗೆಗಂಜಿ ಕೊಂದಂತೆ, ಖಳನೊಳವಿಂಗೆ ಕುಪ್ಪೆವರಂ' 'ಪಗೆಗೆ ಸಂತಸಮಾಗಿರೆ ಮಾರಿ ಸುಯ್ಯುಗುಮೆ' 'ಅತ್ಯಾದರಸ್ಸಂಭ್ರಮಮುತ್ಪಾದಯತಿ' 'ಪಡೆ ನೋಡಲ್ ಬಂದವರಂ ಗುಡಿವೊರಿಸಿದರ್ 'ದೈವಮನಾರಯ್ಯ ಮೀಱಿ ಬಾೞಿಲ್ ನೆಱಿವರ್, 'ಮೋಹಮಯನಿಗಳಂ ಕಳತ್ರಂ' 'ಪಾವುಗಳುಳ್ಳ ಪಗೆಯಂ ಮಱಿಯವು' 'ಸಿಂಹಮಾಡುವವರ ಬಾಲಮನಾಡಿದರ್', 'ಏಂ ಮಹಾಪುರುಷರಾಜ್ಞಾಲಂಘನಂ ಗೆಯ್ವರೇ?' ಕೆಯ್ಗಳಿದ ಮನೆವಾರ್ತೆಗೆ ಬುದ್ಧಿಪೇೞಲೆಡೆಯಿಲ್ಲ' 'ಉಪ್ಪಿಕ್ಕಿದೊಡೆ ತುಪ್ಪಕ್ಕೆ ಮೇಳ್ಪಡಿತು' 'ಬಡಿಗಂಡನಿಲ್ಲ ಪಾಲಂ ಕಂಡಂ' 'ಸೋಂತರ ಪಗೆವರನೆಟ್ಟಿಱಿವಂತಾಯ್ತು' 'ಕ್ಲೇಶದ ಫಲಮೆರ್ದೆಗೊಳ್ಳದೆ' 'ಕನಕನ ಬೇಳ್ವೆ ಕನಕಸನ್ ತಿಂದುದು' 'ಪರವೆಣ್ಗೆ ಒಲ್ವಂಗಮೇನಾಗದು' 'ಪಾದರದೊಳ್

ಸತ್ತಂಗಟ್ಟಿನ್ನರಾರ್', 'ಏವುದೊ ಶುಚಿಯಿಲ್ಲದವನ ಗಂಡುಂ ತೊಂಡುಂ' 'ಏಂ ಮಹಪಾಳರೊಳಾದ ಕಾರ್ಯಗತಿಗಳ್ ಬಗೆಯಲ್ಕೆ ಬಹುಪ್ರಕಾರಮೋ' 'ಮೆಲ್ಪು ಬಲ್ಪನಟೆಗುಂ' 'ಕಾಯ್ದ ಬೆನ್ನೀರ್ ಮನೆಸುಡದು' 'ತನ್ನಿಕ್ಕಿದ ತತ್ತಿಯನೆ ಪಾವು ನೊಣೆವಂತಕ್ಕುಂ' 'ಶೂರಂ ಭೇದೇನ ಯೋಜಯೇತ್' 'ಎನಿತಾದೊಡಮೇಂ ಪ್ರಭು ಪೊಲ್ಲಕೆಯ್ಗುಮೆ' 'ಭಾನುವೆ ಸಾಲದೆ ಪಗಲೆನಿತಾನುಂ ದೀವಿಗೆಗಳುರಿದೊಡೇಂ ನಂದಿದೊಡೇಂ' 'ಸೂಜಿಯ ಕೂರ್ಪು ಕುಂಬಳದೊಳಡಂಗುವಂತೆ' 'ನಷ್ಟಂ ನಷ್ಟಂ ಮೃತಂ ಮೃತಂ' 'ಆರ್ಗುಮೇಂ ಬಿದಿಯ ಕಟ್ಟಿದುದಂ ಕಳಿಯಲಾರ್ಗಮೇಂ ತೀರ್ದಪುದೇ' 'ಕಣ್ಕುರುಡಾದೊಡಮೇನೊ ಕುರುಡಾಗಲೆವೇಟ್ಕುಮೆ ನಿಮ್ಮ ಬುದ್ಧಿಯುಂ' 'ಕೊಂದರ್ ಕೊಲೆ ಸಾವರ್' 'ಜಗದ್ವ್ಯಾಪಾರಮೀಶ್ವರೇಚ್ಛೆ' ಇವುಗಳಲ್ಲಿ ಅನೇಕವು ಪ್ರತ್ಯೇಕವಾದ ನಾಣ್ನುಡಿಯಾಗಿ ರಂಜಿಸುವುವು. ಇವುಗಳನ್ನು ಉಪಯೋಗಿಸಿರುವುದರಿಂದ ಕಾವ್ಯಕ್ಕೆ ಒಂದು ಆತ್ಮೀಯತೆಯುಂಟಾಗಿದೆ.

ಪಂಪನು 'ರೂಪಕರಾಜ್ಯದ ಚಕ್ರವರ್ತಿ.' ಅವನ ಉಪಮಾ ರೂಪಕೋತ್ಪ್ರೇಕ್ಷೆಗಳು ಹಲವು ಕ್ಷೇತ್ರಗಳಿಂದ ಆಯ್ದುಕೊಂಡವು. ಅವುಗಳಲ್ಲಿ ಪ್ರತಿಯೊಂದರಲ್ಲಿಯೂ ಜೀವವಿದೆ, ಭಾರವಿದೆ, ಅರ್ಥಪುಷ್ಟಿಯಿದೆ ಮತ್ತು ವೈವಿಧ್ಯವಿದೆ. ಉಪಮಾನಗಳೆಲ್ಲವೂ ಬಹುಮಟ್ಟಿಗೆ ಮನುಷ್ಯನ ಸುತ್ತಮುತ್ತಲಿನ ಆವರಣದಿಂದ ಆರಿಸಿಕೊಂಡವು. ವಾಚಕನು ಪ್ರತಿಯೊಂದನ್ನೂ ಪ್ರತ್ಯಕ್ಷವಾಗಿ ಅನುಭವಿಸಿ ಉಪಮೇಯದ ಸ್ಪಷ್ಟಚಿತ್ರವನ್ನು ಕಾಣಬಹುದು. 'ಪಂದೆಯಂ ಪಾವಡರ್ದಂತೆ' 'ಪೊಳ್ಳುಮರನಂ ಕಿರ್ಚಳುರ್ವಂತೆ' 'ಉರಿಮುಟ್ಟಿದರಳೆಯಂತೆ' 'ತಣಿಯುಂಡಮರ್ದಂ ಗೋಮೂತ್ರದಿಂದೆ ಬಾಯ್ಪೂಸಿದ ವೋಲ್' 'ಡೊಂಬರ ಕೋಡಗದಂತೆ' 'ಕೀಲೊಳ್ ಕಿಚ್ಚುಪುಟ್ಟಿ ಭೋರ್ಗರೆದುರಿವಂತೆ' 'ಆಡದಿರ್ದ ಮಡುವಂ ಪೋಲ್ತಂ' 'ಬಾಳೆಯ ಬನಮಂ ಕಾಡಾನೆವೊಯ್ದಂತೆ' 'ದೇಗುಲಕೆ ಪೆರ್ಮರನಂ ಕಡಿವಂತೆ,' 'ಕುರುಡಂ ಕಣ್ಬೆತ್ತವೊಲ್' 'ಕಯ್ಯಕೂಸನಿಕ್ಕಿದವೋಲ್' 'ಆನೆ ಮೆಟ್ಟಿದ ಕುಳುಂಪೆಯ ನೀರಂತೆ' 'ಪಟಿಯ ಬೇವಿನೆಣ್ಣೆಯೊಳ್ ತೊಯ್ದಿಕ್ಕಿದ ಬೆಳ್ಳುಳ್ಳಿಯ ಕಂಪಿನಂತೆ' 'ಕರಿಕಳಭ ಗರ್ಜನೆಗೇಳ್ದ ಮೃಗರಾಜನಂತೆ' 'ಕೃಶಾನುವ ನೆಟಿಲಳುರದಂತೆ' 'ಕಳಭಂ ವನಪಥಮಂ ಯೂಥಪತಿಗೆ ತೋರ್ಪಂತೆ' 'ಪುಳಿಯೊಳ್ ಕರ್ಚಿದ ಬಾಳ ಬಣ್ಣದಂತೆ'. 'ಬಳೆಯಂ ಪೇರಾನೆ ಮೆಟ್ಟಿದಂತೆ' 'ನೆಯ್ದಿಲ ಕಾವಂ ತುದಿಗೆಯ್ದೆ ಸೀಳ್ವ ತೆಱದಿಂ' 'ಸಿಡಿಲೊಳ್ ಪೋರ್ವ ಸಿಡಿಲಂತೆ'. 'ನೆಲನುಮಾಕಾಶಮುಮೊಂದೊಂದರೊಳ್ ತಾಗಿದಂತೆ' 'ತನ್ನ ಸಗ್ಗಮನೇಱುವುದನನುಕರಿಸುವಂತೆ' 'ಪರ್ದೆಱಗೆ ಸುರುಳ್ದು ಬೀಳ್ವ ಕಿರುವಕ್ಕಿಯವೋಲ್' 'ಕಲ್ಪಟಿಯೊಳ್ ಭೋರ್ಗರೆವ ತೊಱೆಯವೋಲ್' 'ಬಳ್ವಳ ಬಳೆದುರಿವ ಕೇಸುರಿಯಂತೆ' 'ದೃಢಕಠಿಣ ಹೃದಯನಪ್ಪ ಹಿರಣ್ಯಾಕ್ಷಸುರಮಂ ಪೋಳ್ವಂತೆ', 'ಸುಟ್ಟುರೆಯೊಳಗಣ ತರಗೆಲೆಯಂತೆ' 'ಬಡಿಗೊಂಡು ಮಸಗಿ ಭೈತ್ರಮನೊಡೆವ ಮಹಾಮಕರದಂತೆ' 'ದಿನಕರನ ಬಟೆದಪ್ಪಿದ ಕಿರಣಂಗಳ್ ಕಟಿಲ್ತೆಯುಂ ಕಂಡಳ್ಕಿ ತನ್ನ ಮಱೆಯುಂ ಪೊಕ್ಕಂತೆ' 'ಆವುಗೆವುರಿಯಂತೆ' 'ಕೃಪೆಯಂ ಜವಂ ಬಿಸುಟಂತೆ' 'ದಳಂಗಳ್ ಕೋಲಾಟಮಾಡುವಂತೆ,'

'ಪ್ರಳಯದುರಿಯನುರುಳಿಮಾಡಿದಂತೆ' 'ಕಿಡಿಗಳ ಬಳಗಮನೊಳಗುಮಾಡಿದಂತೆ', 'ಕಾರಮುಗಿಲ್ ಬಳ್ಳಿಮಿಂಚಿಂದುಳ್ಕುವವೋಲ್' 'ಚದುರಂಗದ ಮಣೆಯನಲುಗಿದಂತೆ' 'ಚತುರ್ದಶಭುವನಂಗಳೆಲ್ಲಮಂ ತೆರಳ್ಚಿ ತೇರ್ರೈಸಿ ನುಂಗುವಂತೆ', 'ಜವಂಗೆ ಬಿರ್ದಿಕ್ಕುವಂತೆ, ಅರಾತಿಗೆ ಮಿಟ್ಟು ಬರ್ಪಂತೆ' 'ಶಿಖಾಕಳಾಪಂಗಳೊಳ್ ಪುಡಪುಡನಟ್ಟಿ ಸಾಯ್ವ ಪತಂಗದಂತೆ' 'ಪೆಂಕೊಳಿಯ ಸಿಂಹಮಂ ಮುತ್ತುವಂತೆ' 'ಪೆರ್ವಿದಿರ ಸಿಡಿಂಬಿನೊಳ್ ಪುದಿದ ಕುಳಾಚಳದಂತೆ', 'ಸಿಡುಂಬಿನ ಪೊದಱೊಳ್ ಮಱಿದೊಱಗಿದ ಮೃಗರಾಜನಂತೆ', 'ಮಹಾಮಕರಂ ಸಮುದ್ರದೊಳ್ ಪರಿವವೋಲ್' 'ಇಂದ್ರನೀಲಮಂ ಮುತ್ತಿನೋಳಿಯೊಳ್ ಕೋದೆಬಿಲಿಕ್ಕಿದ ಮಾಲೆಯಂತೆ, ಅಟೆಯೆ ನೊಂದ ಸಿಂಗದ ಮೇಲೆ ಬೆರಗಱೆಯದ ಬೆಳ್ನಾಳ್ ಪಾಯ್ವಂತೆ' 'ತೂಱೆಕೊಂಡ ಜೋಳದಂತೆ' 'ಆಗಾಮಿಪ ಸಂಗ್ರಾಮರಂಗಕ್ಕೆ ಪಾತ್ರಗಳಂ ಸಮೆಯಿಸುವ ಸೂತ್ರಧಾರನಂತೆ' 'ತಾರಾಗಣಗಳ ನಡುವಣ ಸಕಲ ಕಳಾಧರನಂತೆ' 'ಮದನನ ಕೆಯ್ಯಿಂ ಬರ್ದುಂಕಿ ಬಂದ ಅರಲಂಬು ಬರ್ಪಂತೆ' 'ಪಲರು ಮಂಬಂತೊಡೆ ನಡುವಿರ್ದೊಂದು ಪುಲ್ಲೆಯಂತೆ' 'ತೆಂಕಣಗಾಳಿಯ ಸೋಂಕಿನೊಳ್ ನಡುಮಂಗುವಶೋಕವಲ್ಲರಿಯ ಪಲ್ಲವದೊಳ್ ನವಚೂತಪಲ್ಲವಂ ತೊಡರ್ದವೋಲ್' 'ಕಾಯ್ದ ಪುಡಿಯೊಳಗೆ ಬಿಸುಟೆಳೆವಾಟಿಯಂತೆ' 'ಏಟ್ಟಿವಾಡಿವದ ಸಸಿಯಂತೆ' 'ಕೃಷ್ಣೋರಗನಂ ಪಿಡಿದ ಬೆಳ್ನಾಳಂತೆ,' 'ಮುತ್ತಂ ಮೆಣಸಂ ಕೋದಂತೆ' ಕಾಮದೇವನೇವಮಂ ಕೆಯ್ಕೊಂಡು ಸೀಂತಂತೆ' 'ಮೋಹರಸಮೆ ಕಣ್ಣಿಂ ತುಳುಕುವಂತೆ' 'ಅಶೇಷಧರಾಭಾರಮಂ ಶೇಷಂ ತಾಳ್ದುವಂತೆ.' 'ಗಾಳಿಗೊಡ್ಡಿದ ಪುಲ್ಲ ಪನಿಗಳಂತೆ' 'ಪುಲ್ಲ ಸೂಡನೀಡಾಡುವಂತೆ'. 'ಮದಾಂಧಗಂಧಸಿಂಧುರಂ ಪೊಯ್ದ ಪೆರ್ಮರದಂತೆ,' ಎಂಬಿವೇ ಮೊದಲಾದ ಉಪಮಾನಗಳೂ 'ಪರಿದುದು ವಸಂತಗಜಂ' ಎಂಬಂತಹ ರೂಪಕಗಳೂ 'ಕಾಸಿದಿಟ್ಟಿಗೆಯ ರಜಂಬೊಲಿರೆ ಸಂಧ್ಯೆ' 'ಚಂದ್ರನು ಸಂಧ್ಯೆಯನ್ನು ಕೂಡಲು ರೋಹಿಣಿಯು ಕೋಪಗೊಂಡು ಒದ್ದುದರಿಂದ ಅವಳ ಕಾಲಿನ ಅಲತಿಗೆಯು ಮೆತ್ತಿಕೊಳ್ಳಲು ಚಂದ್ರಬಿಂಬವು ಕೆಂಪಾಗಿತ್ತು' 'ಕತ್ತಲೆಯೆಂಬ ಆನೆಯ ಕೋಡಿನ ಇರಿತದಿಂದ ಅವನ ಎದೆಯಲ್ಲಿದ್ದ ಹರಿಣವು ಗಾಯಗೊಂಡ ರಕ್ತದಿಂದ ಚಂದ್ರನು ಕೆಂಪಾಗಿ ಕಾಣಿಸಿಕೊಂಡನು' ಎಂಬಂತಹ ಅನೇಕ ಉತ್ಪ್ರೇಕ್ಷೆಗಳೂ ಕಾವ್ಯದ ಮಧ್ಯೆ ಅನೇಕೆಡೆಗಳಲ್ಲಿ ಬಹಳ ಆಕರ್ಷಕವಾಗಿವೆ.

ಪಂಪನ ಸಾಮರ್ಥ್ಯ ನಿಜವಾಗಿ ಎದ್ದು ಕಾಣುವುದು ಆತನ ಪಾತ್ರ-ಚಿತ್ರಣದಲ್ಲಿ. ಆತನ ಪ್ರತಿಯೊಂದು ಪಾತ್ರದಲ್ಲಿಯೂ ಪ್ರತ್ಯೇಕವಾದ ವ್ಯಕ್ತಿತ್ವವಿದೆ, ಪ್ರತಿಯೊಂದೂ ತನ್ನದೇ ಆದ ಗುಣಗಳನ್ನು ವ್ಯಕ್ತಪಡಿಸಿಕೊಂಡು ಆ ಗುಣಗಳಿಂದಲೇ ಮನೋಹರವಾಗಿದೆ. ಒಂದು ಕಡೆ ಮಹಾಭಾರತದ ಸೂತ್ರಧಾರನಂತಿರುವ ಕೃಷ್ಣಪರಮಾತ್ಮ(ಪಂಪನು ಅವನನ್ನು ಭಾರತದ ಪೂಜ್ಯವ್ಯಕ್ತಿಗಳ ಸಾಲಿನಲ್ಲಿ ಸೇರಿಸಿಲ್ಲದಿದ್ದರೂ ಅವನಿಲ್ಲದೆ ಕಥೆ ಮುಂದೆ ಸಾಗುವುದೇ ಇಲ್ಲ) ಮತ್ತೊಂದು ಕಡೆ ಧರ್ಮವೇ ಮೂರ್ತಿವೆತ್ತಂತಿರುವ ಧರ್ಮರಾಜ, ಅಚಲಿತ ಪ್ರತಿಜ್ಞಾರೂಢನಾದ ಗಾಂಗೇಯ, ಧನುರ್ಧರಾಗ್ರಗಣ್ಯನಾದ ದ್ರೋಣಾಚಾರ್ಯ, ಭಾರತಯುದ್ಧಕ್ಕೆ ಆದಿಶಕ್ತಿಯೆನಿಸಿದ ದ್ರೌಪದಿ-ಇವರೊಬ್ಬೊಬ್ಬರೂ ತಮ್ಮ ಒಂದೊಂದು

ಗುಣದಿಂದಲೇ ಪ್ರಪಂಚದಲ್ಲಿ ಆಚಂದ್ರಾರ್ಕವಾದ ಕೀರ್ತಿಯನ್ನು ಪಡೆದಿದ್ದಾರೆ. ಪಂಪನು ಬಹುಶಃ ತನ್ನ ಕಾಲದಲ್ಲಿ ಪ್ರಧಾನ ಮೌಲ್ಯಗಳಾಗಿದ್ದಿರಬಹುದಾದ ಛಲ, ನನ್ನಿ, ಗಂಡು, ಬಲ, ಉನ್ನತಿ, ಚಾಪವಿದ್ಯೆ, ಸಾಹಸ, ಧರ್ಮ ಈ ಗುಣಗಳಿಗೆ ಪ್ರಸಿದ್ಧ ಪ್ರತಿನಿಧಿಗಳಾಗಿದ್ದ ದುರ್ಯೋಧನ, ಕರ್ಣ, ಭೀಮ, ಶಲ್ಯ, ಭೀಷ್ಮ, ದ್ರೋಣ, ಅರ್ಜುನ ಮತ್ತು ಧರ್ಮರಾಜರನ್ನು ಹೆಸರಿಸಿ ಅವರಿಂದ ಭಾರತವು ಲೋಕಪೂಜ್ಯವಾಗಿದೆ ಎಂದು ಹೇಳಿದ್ದಾನೆ. ಇವರೊಡನೆ ಕೃಷ್ಣ, ಅಭಿಮನ್ಯು, ಘಟೋತ್ಕಚ, ಶ್ವೇತ ಮೊದಲಾದವರ ಅದ್ಭುತ ವ್ಯಕ್ತಿತ್ವಗಳು ಕಾವ್ಯದಲ್ಲಿ ಮೂಡಿ ಬಂದಿವೆ. ಇವರಲ್ಲಿ ಪ್ರಧಾನವಾದ ಕೆಲವರ ಪಾತ್ರ ಚಿತ್ರಣವನ್ನು ಪರಿಶೀಲಿಸಬಹುದು.

ಮಹಾಭಾರತದ ಪ್ರಧಾನ ವ್ಯಕ್ತಿ ಶ್ರೀಕೃಷ್ಣ. ಆತನ ಹೆಸರನ್ನು ವಾಚ್ಯವಾಗಿ ಪಂಪನು ಎತ್ತಿ ಸೂಚಿಸದಿರುವುದಕ್ಕೆ ಕಾರಣಗಳನ್ನು ಊಹಿಸುವುದು ಸುಲಭವಲ್ಲ. ಹೆಸರಿಸದಿದ್ದರೂ ಆತನ ಕೈವಾಡ, ಪ್ರಭಾವ, ಪ್ರಾಮುಖ್ಯ ಪಂಪಭಾರತದಲ್ಲಿ ಎಲ್ಲಿಯೂ ಕಡಿಮೆಯಾಗಿಲ್ಲ. ಆತನಿಲ್ಲದಿದ್ದರೆ ಭಾರತದ ಕಥೆಯೇ ನಡೆಯುತ್ತಿರಲಿಲ್ಲವೆಂಬಷ್ಟು ಸ್ಥಾನವನ್ನು ಕವಿ ಅವನಿಗೆ ಕಲ್ಪಿಸಿದ್ದಾನೆ. 'ಮಮ ಪ್ರಾಣಾ ಹಿ ಪಾಂಡವಾಃ' ಎಂಬುದಾಗಿ ಮೂಲಭಾರತದಲ್ಲಿ ಬರುವ ಆತನ ಉಕ್ತಿಗೆ ಇಲ್ಲಿ ಊನ ಬಂದಿರುವಂತೆ ಕಾಣುವುದಿಲ್ಲ. ದ್ರೌಪದೀಸ್ವಯಂವರದಲ್ಲಿ ಪಾಂಡವರನ್ನು ಮೊದಲು ಕಂಡ ಆತನು ಅರ್ಜುನನ ಪಟ್ಟಾಭಿಷೇಕದವರೆಗೆ ಉದ್ದಕ್ಕೂ ಪಾಂಡವರ ಪ್ರಧಾನ ಶಕ್ತಿಯಾಗಿದ್ದಾನೆ. ಪಾಂಡವರು ಯಾವ ಕೆಲಸ ಮಾಡಬೇಕಾದರೂ ಅವನನ್ನು ವಿಚಾರಿಸದೆ ತೊಡಗುವುದಿಲ್ಲ. ಅವರ ಎಲ್ಲ ಸಹಾಯ ಸಂಪತ್ತುಗಳೂ ವಿಪತ್ಪರಿಹಾರಗಳೂ ಅವನಿಂದಲೇ ಉಂಟಾಗುವುವು. ಸುಭದ್ರಾಪರಿಣಯಕ್ಕೆ ಕಾರಣನಾದವನು ಆತನು. ರಾಜಸೂಯವನ್ನು ನಡೆಸಿದವನು ಆತನು, ಖಾಂಡವದಹನ ಪ್ರಸಂಗದಲ್ಲಿ ನೆರವಾಗಿದ್ದವನು, ಪಾಶುಪತಾದಿ ಅಮೌಲ್ಯಅಸ್ತ್ರಗಳನ್ನು ದೊರಕಿಸಿದವನು. ದುರ್ಯೋಧನನಿಗೆ ದೂತನಾಗಿ ಹೋಗಿ ಸಂಧಿಗಾಗಿ ಪ್ರಯತ್ನಪಟ್ಟವನು ಅವನೇ. ಭೇದೋಪಾಯದಿಂದ ಕರ್ಣನ ಶಕ್ತಿಯನ್ನು ಕುಂದಿಸಿದವನೂ, ಕುಂತಿಯ ಮೂಲಕ ಪಾಂಡವರಿಗೆ ಅವನಿಂದ ರಕ್ಷಣೆಯನ್ನು ದೊರಕಿಸಿದವನೂ ಅವನೇ. ಯುದ್ಧದಲ್ಲಿ ವೀರಾಧಿವೀರರಾದ ಭೀಷ್ಮ ದ್ರೋಣ ಕರ್ಣ ಶಲ್ಯ ಮೊದಲಾದ ಎಲ್ಲ ನಾಯಕರನ್ನೂ ಜಯಿಸುವ ಉಪಾಯವನ್ನು ಹೇಳಿಕೊಟ್ಟವನೂ ಅವನೇ. ಪಾಂಡವರಿಗೆ ಯುದ್ಧದಲ್ಲಿ ಉಂಟಾದ ಎಲ್ಲ ವಿಪತ್ತುಗಳೂ ಅವನಿಂದಲೇ ಪರಿಹಾರವಾದುವು. ಅವನು ಅಜಿತ, ಅನಂತ, ಮಧು ಮಥನ, ನಾರಾಯಣ ಎಂಬುದು ಉಭಯಪಕ್ಷಗಳಿಗೂ ತಿಳಿದಿತ್ತು. ಹಾಗೆಯೇ ಎಲ್ಲರಿಗೂ ಅವನಲ್ಲಿ ಪೂರ್ಣವಾದ ಭಕ್ತಿಯಿತ್ತು. ಅವನ ಉಪದೇಶದಂತೆ ನಡೆದುಕೊಳ್ಳಿ ಎಂದು ದ್ರೋಣ ಭೀಷ್ಮಾದಿಗಳು ಪಾಂಡವರಿಗೆ ತಿಳಿಸುತ್ತಾರೆ. ದುರ್ಯೋಧನನಿಗೂ ಕೂಡ ಅವನ ನೆರವು ಅವಶ್ಯಕವೆಂದು ತಿಳಿದಿತ್ತು. ಅವನನ್ನು ಗೆಲ್ಲುವುದು ಕಷ್ಟಸಾಧ್ಯವೆಂಬ ಅರಿವೂ ಇತ್ತು ಎಂದು ಸ್ಪಷ್ಟವಾಗಿ ತಿಳಿಸಿದನು. ಕೊನೆಗೆ ಸಾಯುವಾಗ 'ಆಗದು ಪಾಂಡವರಂ ಗೆಲಲ್ ಪುರಾತನಪುರುಷಂ ಮುರಾರಿ ಕೆಲದೊಳ್

ನಿಲೆ' ಎನ್ನುವನು. ಪಂಪನ ಕೃಷ್ಣನು ಭಗವಂತನೇ ಆದರೂ ಮಾನವನಂತೆಯೇ ಅರ್ಜುನನ ಪರಮಮಿತ್ರನಾಗಿ ಉಚ್ಚರಾಜಕಾರಣಪಟುವಾಗಿ ನಡೆದುಕೊಳ್ಳುತ್ತಾನೆ. ಕೊನೆಗೆ ವಿಬುಧವನಜವನಕಳಹಂಸನಾದ ಧರ್ಮರಾಜನು ಪುರುಷೋತ್ತಮನನ್ನು ಕುರಿತು

> **ನಿನ್ನ ದಯೆಯಿಂದಂ, ಅರಿನೃಪ**
> **ರಂ, ನೆರೆ ಕೊಂದೆಮಗೆ ಸಕಳ ರಾಜ್ಯಶ್ರೀಯುಂ**
> **ನಿನ್ನ ಬಲದಿಂದೆ ಸಾರ್ದುದು**
> **ನಿನ್ನುಪಕಾರಮನದೇತಱೊಳ್ ನೀಗುವೆನೋ ॥**

ಎಂದು ಅನುನಯವಚನ ರಚನಾಪರಂಪರೆಗಳಿಂದ ಮುಕುಂದನನ್ನು ದ್ವಾರಾವತಿಗೆ ಕಳುಹಿಸಿಕೊಡುತ್ತಾನೆ.

ಅರ್ಜುನನು ಪಂಪಭಾರತದ ಕಥಾನಾಯಕ. ಆದುದರಿಂದಲೇ ಅದಕ್ಕೆ 'ವಿಕ್ರಮಾರ್ಜುನ ವಿಜಯ' ಎಂದು ಕವಿ ನಾಮಕರಣ ಮಾಡಿದ್ದಾನೆ. ಅವನ ಅಪರಾವತಾರನೆಂದು ಭಾವಿಸಿದ ಅರಿಕೇಸರಿಯ ವೀರ್ಯ ಶೌರ್ಯ ಔದಾರ್ಯಗಳನ್ನು ಅದ್ದೂರಿಯಿಂದ ಚಿತ್ರಿಸುವುದಕ್ಕಾಗಿಯೇ ಪಂಪನು ಈ ಕಾವ್ಯವನ್ನು ರಚಿಸಿದುದು. ಆದುದರಿಂದ ಅವನ ಪಾತ್ರರಚನೆಯಲ್ಲಿ ಕವಿತಾಗುಣಾರ್ಣವನು ತನ್ನ ಸರ್ವಶಕ್ತಿಯನ್ನು ವ್ಯಯಮಾಡಿದ್ದಾನೆ. ಎರಡು ಮಕ್ಕಳಾಗಿದ್ದರೂ ಕುಂತಿ ಸರ್ವ ಲಕ್ಷಣಸಂಪನ್ನನಾದ ಮತ್ತೊಬ್ಬನಿಗೆ ಆಸೆಪಡುತ್ತಾಳೆ. ವ್ರತೋಪವಾಸವನ್ನು ಮಾಡುತ್ತಾಳೆ. ಇಂದ್ರನನ್ನು ಪ್ರಾರ್ಥಿಸುತ್ತಾಳೆ. ಇಂದ್ರನು 'ಕುಲಗಿರಿಗಳ ಬಿಣ್ಪುಮಂ ಧರಾತಳದ ತಿಣ್ಪುಮಂ ಆದಿತ್ಯನ ತೇಜದಗುಂತಿಯುಮಂ ಚಂದ್ರನ ಕಾಂತಿಯುಮಂ, ಮದನನ ಸೌಭಾಗ್ಯಮುಮಂ ಕಲ್ಪತರುವಿನುದಾರಶಕ್ತಿಯುಮಂ, ಈಶ್ವರನ ಪ್ರಭುಶಕ್ತಿಯುಮಂ, ಜವನ ಬಲ್ಲಾಳ್ತನಮುಮಂ ಸಿಂಹದ ಕಲಿತನಮುಮಂ ಅವರವರ ದೆಸೆಗಳಿಂ ತೆಗೆದೊಂದುಗೂಡಿಸಿ ಕುಂತಿಯ ಗರ್ಭಪುಟೋದರದೊಳ್ ತನ್ನ ದಿವ್ಯಾಂಶವೆಂಬ ಮುಕ್ತಾಫಲಬಿಂದುವಿನೊಡನೆ ಸಂಕ್ರಮಿಸಿ' ಇಡುತ್ತಾನೆ. ಕುಂತಿಗೆ ಷೋಡಶಸ್ವಪ್ನವಾಗುತ್ತದೆ. ಗ್ರಹಗಳೆಲ್ಲವೂ ತಂತಮ್ಮುಚ್ಚಸ್ಥಾನಗಳಲ್ಲಿದ್ದ ಶುಭಮುಹೂರ್ತದಲ್ಲಿ ತೇಜೋಮಯನಾದ ಶಿಶುವುದಿಸಿದನು, ದೇವದುಂದುಭಿ ಮೊಳಗಿತು. ಮೂವತ್ತುಮೂಱುದೇವರೂ ಇಂದ್ರನೊಡಗೂಡಿ ಜನ್ಮೋತ್ಸವವನ್ನು ಮಾಡಿ ಮುಂಪಾಡಿ ನೂರೆಂಟು ನಾಮಗಳಿಂದ ನಾಮಕರಣೋತ್ಸವವನ್ನು ಮಾಡಿದರು. ಭೀಷ್ಮನ ತೋಳ ತೊಟ್ಟಿಲಿನಲ್ಲಿ ಬೆಳೆದನು. ಕುಶಾಗ್ರಬುದ್ಧಿಯಾದ ಗುಣಾರ್ಣವನು ಕೃಪಾಚಾರ್ಯನ ಪಕ್ಕದಲ್ಲಿ ಉಳ್ಳೋದುಗಳನ್ನೆಲ್ಲ ಕಲಿತನು. ದ್ರೋಣಾಚಾರ್ಯರಲ್ಲಿ ಅಭ್ಯಸಿಸಿ ಪಾರಂಗತನಾದನು. ದ್ರುಪದನನ್ನು ಪರಾಭವಿಸಿ ಗುರುದಕ್ಷಿಣೆಯನ್ನಿತ್ತನು. ಅಲ್ಲಿ ಕರ್ಣನ ಪರಿಚಯವಾಯಿತು. ಹಾಗೆಯೇ ಅವನೊಡನೆ ಸ್ಪರ್ಧೆಯೂ ಪ್ರಾರಂಭವಾಯಿತು. ಕೆಲಕಾಲ ಸಹೋದರರೊಡನೆ ವಾರಣಾವತದಲ್ಲಿ ಸುಖವಾಗಿ ವಾಸಿಸಿದನು. ಅರಗಿನ ಮನೆಯ ಪ್ರಸಂಗದಿಂದ ಬೇರೆ ಬೇರೆ ಕಡೆಯಲ್ಲಿದ್ದು ಛತ್ರಪತಿ ಪುರದಲ್ಲಿ ಮತ್ಸ್ಯಭೇದನದಿಂದ ದ್ರೌಪದಿಯನ್ನು ವರಿಸಿದನು. ಅಲ್ಲಿಂದ ಮುಂದೆ ಪಂಪನು ಭಾರತದ ಬಹುಭಾಗವನ್ನು

ಅವನ ಪ್ರಶಂಸೆಗಾಗಿಯೇ ಮೀಸಲಾಗಿಸಿದ್ದಾನೆ. ಸುಭದ್ರಾಹರಣ, ಖಾಂಡವದಹನ, ಇಂದ್ರಕೀಲಗೋಗ್ರಹಣ, ಸೈಂಧವವಧೆ, ಕರ್ಣಾರ್ಜುನರ ಯುದ್ಧಪ್ರಕರಣಗಳಲ್ಲಿ ಅವನ ಸಾಹಸಪರಾಕ್ರಮಗಳು ಅದ್ಭುತವಾಗಿ ವರ್ಣಿತವಾಗಿವೆ. ಇತಿಹಾಸವ್ಯಕ್ತಿಯಾದ ಅರಿಕೇಸರಿಯ ಪ್ರಶಂಸೆಯೇ ಪ್ರಧಾನವಾದ ಗುರಿಯಾದುದರಿಂದ ಅವನ ಪ್ರತಿನಿಧಿಯಾದ-ಪೂರ್ವಾವತಾರವಾದ ಇವನನ್ನು ಅವನ ಬಿರುದು ಬಾವಲಿಗಳಿಂದಲೇ ಸಂದರ್ಭ ಸಿಕ್ಕಿದಾಗಲೆಲ್ಲ ಕವಿ ಹೊಗಳುತ್ತಾನೆ. ಗ್ರಂಥಾದಿಯ ನಾಂದಿ ಪದ್ಯಗಳಲ್ಲಿ ಆಶ್ವಾಸದ ಆದಿ ಅಂತ್ಯ ಪದ್ಯಗಳಲ್ಲಿ ಅವನ ಶ್ಲಾಘನರೂಪವಾದ ವಿಷಯಗಳೇ ಉಕ್ತವಾಗಿವೆ. ಆಚಾರ್ಯರಾದ ದ್ರೋಣರೂ ಪಿತಾಮಹರಾದ ಭೀಷ್ಮರೂ ಅವನನ್ನು ಜಯಿಸುವುದು ಅಸಾಧ್ಯವೆನ್ನುತ್ತಾರೆ. ಅವನಿಗೆ ಗುರುಹಿರಿಯರಲ್ಲಿದ್ದ ವಿಧೇಯತೆ ಬಹು ಶ್ಲಾಘನೀಯವಾದುದು. ಅಣ್ಣನ ಮಾತಿನ ಪ್ರಕಾರ ದುರ್ಯೋಧನನನ್ನು ಗಂಧರ್ವನಿಂದ ಬಿಡಿಸಿ ತರುತ್ತಾನೆ. ಕರ್ಣ ದುರ್ಯೋಧನಾದಿಗಳಿಗೂ ಅವನ ಪರಾಕ್ರಮ ತಿಳಿಯದ ವಿಷಯವಲ್ಲ. ತಮ್ಮ ಕಡೆಯವರಿಗೆ ಆಪತ್ತೊದಗಿದಾಗಲೆಲ್ಲ ಅದನ್ನು ಪರಿಹಾರ ಮಾಡುವವನು ಅವನೇ. ಅವನ ಶಕ್ತಿಸಾಮರ್ಥ್ಯಗಳನ್ನು ಅರಿಯದವರಿಲ್ಲ, ಅವನಿಗೆ ದೈವಾನುಗ್ರಹ ಪೂರ್ಣವಾಗಿದೆ. ಇಂದ್ರನು ಅವನಿಗಾಗಿ ಕರ್ಣನಿಂದ ಕವಚಕುಂಡಲಗಳನ್ನು ಕಸಿದುಕೊಂಡ. ತನ್ನ ಗಂಟಲನ್ನಿಕ್ಕಿದರೂ ಶಿವನು ಇವನಿಗೆ ಪಾಶುಪತಾಸ್ತ್ರವನ್ನು ಇತ್ತನು. ಗೌರಿಯು ತಲ್ಲಟಿಯಾಗಿ ಅಂಜಲಿಕಾಸ್ತ್ರವನ್ನೂ ಕೊಟ್ಟಳು. ಇಂದ್ರನು ಅರ್ಧಾಸನವನ್ನಿತ್ತು ರಾಕ್ಷಸರ ಸಂಹಾರಕ್ಕೆ ಅವನ ನೆರವನ್ನು ಪಡೆದನು. ಅಗ್ನಿ ಅವನಿಂದ ಖಾಂಡವ ವನವನ್ನಪೇಕ್ಷಿಸಿ ತೃಪ್ತಿ ಪಡೆದನು. ಅವನ ಸೌಂದರ್ಯವು ಅತ್ಯಂತ ಮೋಹಕವಾದುದು. ರಂಭಾದಿ ದೇವವೇಶ್ಯೆಯರೂ ಅವನಿಗೆ ಸೋಲುತ್ತಾರೆ. ಆದರೆ ತನ್ನ ಶೌಚಗುಣದಿಂದ ಅವರ ಬಲೆಗೆ ಬೀಳದೆ ರಂಭೆಯಿಂದ ಶಾಪವನ್ನು ಪಡೆದರೂ ತನಗೆ ಅನುಕೂಲವಾದ ಸಂದರ್ಭದಲ್ಲಿ ಅದನ್ನು ಉಪಯೋಗಿಸಿಕೊಳ್ಳುತ್ತಾನೆ. ಮೊದಲಿನಿಂದ ಕೊನೆಯವರೆಗೆ ಪೂರ್ವಜನ್ಮದಲ್ಲಿ ನರ ನಾರಾಯಣರ ಸಂಬಂಧವನ್ನು ಪಡೆದಿದ್ದ ಮುಕುಂದನು ಅವನಿಗೆ ಪ್ರೇರಕನೂ ಪೋಷಕನೂ ಆಗಿ ಅವನ ಪೆಂಪನ್ನು ಪೂರ್ಣವಾಗಿ ಪ್ರದರ್ಶಿಸಿ ಯುದ್ಧಾಂತ್ಯದಲ್ಲಿ ಧರ್ಮರಾಯನು ಅರ್ಜುನನನ್ನು ಕುರಿತು

> **ಪ್ರಾಯದ ಪೆಂಪೆ ಪೆಂಪು, ಎಮಗೆ ಮೀಱಿದರಂ ತವೆ ಕೊಂದ ಪೆಂಪು, ಕ**
> **ಟ್ಟಾಯದ ಪೆಂಪು, ಶಕನೊಡನೇಱಿದ ಪೆಂಪಿವು ಪೆಂಪುವೆತ್ತು, ನಿ**
> **ಟ್ಟಾಯುಗಳಾಗಿ ನಿನ್ನೊಳಮರ್ದಿರ್ದುವು, ನೀಂ ತಲೆವೀಸದೆ, ಉರ್ವರಾ**
> **ಶ್ರೀಯನಿದಾಗದು ಎನ್ನದೆ ಒಳಕೊಳ್ ಪರಮೋತ್ಸವದಿಂ ಗುಣಾರ್ಣವಾ ॥**

ಎಂದಾಗ ದೇವಕೀಪುತ್ರನು 'ಅಶೇಷಧರಾಭಾರಮಂ ಶೇಷಂ ತಾಳ್ದುವಂತೆ ವಿಕ್ರಮಾರ್ಜುನಂಗಲ್ಲದೆ ಪೆಱಂಗೆ ತಾಳಲರಿದು; ಇದರ್ಕಾನುಮೊಡಂಬಡುವೆನ್' ಎಂದು ಹೇಳಿ ಅವನ ಪಟ್ಟಾಭಿಷೇಕಕಾರ್ಯವನ್ನು ತನ್ನ ಮೇಲ್ವಿಚಾರಣೆಯಲ್ಲಿಯೇ ನಡೆಸುವನು. ಪಂಪನು ವಿಕ್ರಮಾರ್ಜುನನ ಪಾತ್ರವನ್ನು ಅದ್ಭುತವಾದ ರೀತಿಯಲ್ಲಿ ಚಿತ್ರಿಸಿ ಕಾವ್ಯದ ನಾಮವಾದ 'ವಿಕ್ರಮಾರ್ಜುನ ವಿಜಯ'ವೆಂಬುದನ್ನು ಸಾರ್ಥಕವನ್ನಾಗಿಸಿದ್ದಾನೆ.

ಹಾಗೆಂದ ಮಾತ್ರಕ್ಕೆ ಅವನಷ್ಟು ಪ್ರಧಾನವಾದ ಇತರ ಪಾತ್ರಗಳಿಗೆ ಪಂಪನು ಸೂಕ್ತಸ್ಥಾನವನ್ನು ದೊರಕಿಸಿಲ್ಲವೆಂದು ತಿಳಿಯಬೇಕಿಲ್ಲ. ಭಾರತದ ಕಥೆಯಲ್ಲಿ ಅರ್ಜುನನಷ್ಟೆ ಪ್ರಾಶಸ್ತ್ಯವುಳ್ಳವನು ಭೀಮಸೇನ. ಕೆಲವೆಡೆಗಳಲ್ಲಿ ಅವನ ಪಾತ್ರ ಅರ್ಜುನನಿಗಿಂತ ಹೆಚ್ಚು ಉಜ್ವಲವಾಗಿದೆ. ವಾಸ್ತವವಾಗಿ ಭಾರತಯುದ್ಧ ಮುಗಿದು ಪಾಂಡವರಿಗೆ ರಾಜ್ಯಪ್ರಾಪ್ತಿಯಾಗುವುದು, ದುರ್ಯೋಧನನ ಊರುಭಂಗ ಕಿರೀಟಭಂಗ ಪ್ರತಿಜ್ಞೆಗಳನ್ನು ಪೂರ್ಣ ಮಾಡುವುದರಿಂದ, ಅದು ಪೂರ್ಣವಾಗುವುದು ಭೀಮನಿಂದ. ಆದುದರಿಂದ ಪಂಪನು ಇದನ್ನು ಜ್ಞಾಪಕದಲ್ಲಿಟ್ಟುಕೊಂಡು ಭೀಮನ ಪೌರುಷಪ್ರದರ್ಶನದ ಸನ್ನಿವೇಶಗಳನ್ನೆಲ್ಲ ಪ್ರಭಾವಶಾಲಿಯಾಗುವ ಹಾಗೆ ವರ್ಣಿಸಿದ್ದಾನೆ. ಲಾಕ್ಷಾಗೇಹದಾಹ, ಹಿಡಿಂಬಾಸುರವಧೆ, ದ್ಯೂತಪ್ರಸಂಗದಲ್ಲಿನ ಭೀಷ್ಮಪ್ರತಿಜ್ಞೆ, ಕೀಚಕವಧೆ, ಭಗದತ್ತ ಯುದ್ಧ, ಸುಪ್ರತೀಕವಧೆ, ಜರಾಸಂಧವಧೆ, ದುಶ್ಶಾಸನ ರಕ್ತಪಾನ, ದುರ್ಯೋಧನನ ಊರುಭಂಗ, (ಗದಾಯುದ್ಧ) ವೇಣೀ ಸಂಹಾರ ಮೊದಲಾದೆಡೆಗಳಲ್ಲಿ ಅವನ ಸಾಹಸ ಎದ್ದು ಕಾಣುವುದು. ಅವನ್ನು ಓದುತ್ತಿರುವಾಗ ನಾವು 'ವಿಕ್ರಮಾರ್ಜುನ ವಿಜಯ' ವನ್ನೋದುತ್ತಿದ್ದೇವೆ ಎಂಬ ಅರಿವೇ ಮರೆವಾಗುವುದು.

ಭೀಮಾರ್ಜುನರ ಪಾತ್ರಗಳ ರಚನೆಯಲ್ಲಿ ಪಂಪನು ಅಷ್ಟು ಶ್ರಮಪಟ್ಟಿರುವಂತೆ ಕಾಣುವುದಿಲ್ಲ. ಏಕೆಂದರೆ ಈ ಪಾತ್ರಗಳ ವಿಷಯದಲ್ಲಿ ಮೂಲ ಭಾರತದಲ್ಲಿಯೇ ಸರಿಯಾದ ಸೌಷ್ಠವವಿದೆ. ದೈವಬಲವೂ ಅವರ ಕಡೆಯೇ ಇದೆ. ಧರ್ಮವೂ ಅವರನ್ನೇ ಆಶ್ರಯಿಸಿದೆ. ಅರ್ಜುನನಿಗೆ ಹೋಲಿಸಿರುವ ಅರಿಕೇಸರಿರಾಜನು ವೀರನೇ ಅಹುದು. ಮೂಲಭಾರತ ದಲ್ಲಿರುವಂತೆ ಇಲ್ಲಿಯ ಭೀಮಾರ್ಜುನರೂ ಆಗಾಗ ಕೃಷ್ಣನ ಬೆಂಬಲಕ್ಕೆ ಕಾಯುತ್ತ ಧರ್ಮದ ಹೆಸರಿನಲ್ಲಿ ಅಧರ್ಮದಲ್ಲಿಯೂ ಕಾಲಿಡುವುದುಂಟು. ಆಗ ಅವರು ವಾಚಕರ ಅಸಮ್ಮತಿಗೂ ಪಾತ್ರವಾಗುವ ಸಂಭವವುಂಟು. ಆಗ ಅವರಲ್ಲಿ ನಮ್ಮ ಪೂರ್ಣಸಹಾನುಭೂತಿ ಯಿರುವುದಿಲ್ಲ.

ಪ್ರತಿನಾಯಕರಾದ ಕರ್ಣ ದುರ್ಯೋಧನರು ಪಂಪನ ಹೃದಯವನ್ನು ಸೂರೆಗೊಂಡಿದ್ದಾರೆ. ಪಂಪನು ಅವರ ಪೌರುಷಕ್ಕೆ ಮೆಚ್ಚಿದ್ದಾನೆ. ಅವರ ದುಃಸ್ಥಿತಿಗೆ ಮರುಗಿದ್ದಾನೆ, ಸಹಾನುಭೂತಿಯಿಂದ ಕಣ್ಣೀರುಗರೆದಿದ್ದಾನೆ. ಅದರಲ್ಲಿಯೂ ಕರ್ಣನ ಸನ್ನಿ, ತ್ಯಾಗ, ಅಣ್ಮುಗಳನ್ನು ಅತ್ಯತಿಶಯವಾಗಿ ಪ್ರಶಂಸಿಸಿದ್ದಾನೆ. ಅವನ ದೃಷ್ಟಿಯಲ್ಲಿ ಕರ್ಣನ ದುರಂತಕಥೆಯೆ ಭಾರತ, ಅದನ್ನೇ ಅವನು 'ಕರ್ಣಂಗೊಂಡಿತ್ತು ದಲ್ ಭಾರತಂ' ಎಂಬ ಅರ್ಜುನನ ಮಾತಿನಲ್ಲಿ ಸ್ಪಷ್ಟಪಡಿಸಿದ್ದಾನೆ. ಕರ್ಣನಲ್ಲಿ ತನಗಿರುವ ಬಹು ಉಚ್ಚಭಾವವೂ ಸಹಾನುಭೂತಿಯೂ ವಾಚಕರಲ್ಲಿ ನಿರರ್ಗಳವಾಗಿ ಕೋಡಿವರಿವಂತೆ ಅವನ ಪಾತ್ರವನ್ನು ಚಿತ್ರಿಸಿದ್ದಾನೆ.

ಕರ್ಣನ ಕಥೆ, ಕರುಣದ ಕಥೆ. ಅವನೊಬ್ಬ ದುರಂತವ್ಯಕ್ತಿ. ಬಾಲೆಯೊಬ್ಬಳ ಹುಡುಗಾಟದ ಅವಿವೇಕದ ಫಲವಾಗಿ ಕರ್ಣನು ಜನಿಸಿದನು. ಕೊಡಗೂಸುತನದ ಭಯದಿಂದ ತಾಯಿ ನಿಧಾನಮನೀಡಾಡುವಂತೆ ಕೈಯ ಕೂಸನ್ನು ಗಂಗೆಯಲ್ಲಿ ಈಡಾಡಿದಳು.

ಗಂಗಾದೇವಿ ಆ ಕೂಸನ್ನು ಮುಳುಗಲೀಯದೆ ತನ್ನ ತೆರೆಗೈಗಳಿಂದ ದಡವನ್ನು ಸೇರಿಸಿದಳು. ಸೂತನೊಬ್ಬನದನ್ನು ಕಂಡು ನಿಧಿ ಕಂಡವನಂತೆ ಸಂತೋಷಿಸಿ ಎತ್ತಿ ಸಲಹಿದ ಆ ಮಗುವಿಗೆ ಸುಷೇಣ, ಕರ್ಣನೆಂಬ ಅನ್ವರ್ಥನಾಮಗಳಾದುವು. ಸೂತಪುತ್ರನಾಗಿಯೇ ಬೆಳೆದನಾದರೂ ಆತನ ಚಾಗದ ಬೀರದ ಮಾತು ದೇವೇಂದ್ರನನ್ನು ಮುಟ್ಟಿತು. ಮುಂದೆ ಅರ್ಜುನನಿಗೂ ಅವನಿಗೂ ಒದಗುವ ದ್ವಂದ್ವಯುದ್ಧವನ್ನು ದಿವ್ಯಜ್ಞಾನದಿಂದ ತಿಳಿದು ಮಗನ ಸಹಾಯಕ್ಕಾಗಿ ಅವನೊಡನೆ ಹುಟ್ಟಿದ ಕವಚಕುಂಡಲಗಳನ್ನು ಇಂದ್ರನು ಯಾಚಿಸಿದನು. ತಾನೆ 'ಕೊಳ್ಳೆಂದರಿದೀಡಾಡಿದನಿಂದ್ರಂಗೆ ರಾಧೇಯಂ' ಬಳಿಕ ರೇಣುಕಾನಂದನನಲ್ಲಿ ವಿದ್ಯಾಪಾರಂಗತನಾದ. ಅಲ್ಲಿಯೂ ಇಂದ್ರನ ಕುತಂತ್ರದಿಂದ ಕರ್ಣನಿಗೆ ಹಿಂಸೆಯಾಯಿತು. ಶಾಪಹತನಾಗಿ ಹಿಂತಿರುಗಿದ. ದ್ರೋಣಾಚಾರ್ಯರ ಅಸ್ತ್ರವಿದ್ಯಾಶಿಕ್ಷಣದ ವೈಭವವು ಅವನ ಕಿವಿಗೂ ಬಿದ್ದಿತು. ಕೌರವರ್ಗೆಲ್ಲಂ ಪ್ರಾಣಂ ಬರ್ಪಾಕೃತಿಯೊಳೆ ಬಾಣಾಸನ ಬಾಣಪಾಣಿ ಕರ್ಣ ಅಲ್ಲಿಗೆ ಹೋದ. ವಿಕ್ರಮಾರ್ಜುನನಿಗೂ ಇವನಿಗೂ ಸೆಣಸು ಮೊದಲಾಯಿತು. ಒಂದು ದಿನ ಬಾಲಕರ ವಿದ್ಯಾಪರೀಕ್ಷಣದ ಸಂದರ್ಭದಲ್ಲಿ ಕರ್ಣನೂ ಶರಪರಿಣತಿಯಿಂದ ಅತಿರಥಮಥನನೊಡನೆ ಸ್ಪರ್ಧಿಸಿದ. ಆಗ ದ್ರೋಣ ಕೃಪಾಚಾರ್ಯರು ಮಧ್ಯೆ ಬಂದು 'ನಿನ್ನ ತಾಯ ತಂದೆಯಂ ಭಾವಿಸದೆ ಕರ್ಣ ನುಡಿವಂತೆ ಆವುದು ಸಮಕಟ್ಟು ನಿನಗಂ ಅರಿಕೇಸರಿಗಂ' ಎಂದು ಅವನ ಕುಲವನ್ನು ಅವಹೇಳನ ಮಾಡಿದರು. ದುರ್ಯೋಧನನಿಗೆ ಅದು ಸಹಿಸಲಿಲ್ಲ. 'ಕುಲಮೆಂಬುದುಂಟೆ, ಬೀರಮೆ ಕುಲಮಲ್ಲದೆ, ಕುಲಮನಿಂತು ಪಿಕ್ಕದಿರಿಂ, ಈಗಳೆ ಕುಲಜನಂ ಮಾಡಿ ತೋರ್ಪೆನ್' ಎಂದು ಅವನಿಗೆ ಅಂಗರಾಜ್ಯಾಭಿಷೇಕವನ್ನು ಮಾಡಿ ಕರ್ಣನನ್ನು ಕುರಿತು 'ನೀನೆನಗೊಂದನೀಯಲ್ವೇಟ್ಟುದು'

> **ಪೊಡಮಡುವರ್, ಜೀಯ ಎಂಬರ್**
> **ಕುಡು, ದಯೆಗೆಯ್, ಏಂ ಪ್ರಸಾದಂ, ಎಂಬಿವು ಪೆಱರೊಳ್**
> **ನಡೆಗೆ, ಎಮ್ಮ ನಿನ್ನ ಯೆಡೆಯೊಳ್**
> **ನಡೆಯಲ್ವೇಡ, ಎನಗೆ ಕೆಳೆಯನೈ ರಾಧೇಯ ॥**

ಎಂದು ಬೇಡಿಕೊಂಡ. ಮುಂದೆ ಅವರ ಮೈತ್ರಿ ಅನ್ಯಾದೃಶವಾಯಿತು. ಕರ್ಣನ ಸ್ವಾಮಿಭಕ್ತಿಯೂ ಕೊನರಿ ಮೊಗ್ಗಾಯ್ತು. ಈ ಮಧ್ಯೆ ಕೌರವ ಪಾಂಡವರ ದ್ವೇಷ ಬೆಳೆದು ವನವಾಸ ಅಜ್ಞಾತವಾಸಗಳು ಮುಗಿದುವು. ಕೃಷ್ಣನ ಸಂಧಿಯ ಪ್ರಯತ್ನವೂ ವಿಫಲವಾಯಿತು. ಇಲ್ಲಿಂದ ಮುಂದೆ ಈಗಾಗಲೇ ತಲೆದೋರಿದ್ದ ಕರ್ಣನ ದುರಂತತೆ ಇಮ್ಮಡಿಯಾಯಿತು. ಸಾಮೋಪಾಯವು ಸಾಗದಿರಲು ಕೃಷ್ಣನು ಕರ್ಣನನ್ನು ಭೇದಿಸಲು ಅವನ ಮನೆಗೇ ಬಂದು ರಥದಿಂದಿಳಿದು ಅವನನ್ನು ಬಹು ಸ್ನೇಹದಿಂದ ಸಂಬೋಧಿಸಿ ಸ್ವಲ್ಪ ದೂರ ದಾರಿ ಕಳುಹಿಸಿ ಬರುವೆಯಂತೆ ಬಾ ಎಂದು ಕರೆದುಕೊಂಡು ಹೋಗಿ ಏಕಾಂತವಾಗಿ ಒಂದು ಕಡೆ ನಿಂತು-

> **ಭೇದಿಸಲೆಂದೆ ದಲ್ ನುಡಿದರ್ ಎನ್ನದಿರು, ಒಯ್ಯನೆ ಕೇಳ ಕರ್ಣ ನಿ**
> **ನ್ನಾದಿಯೊಳಬ್ಬೆ ಕೊಂತಿ, ನಿನಗಮ್ಮನ್ ಅಹರ್ಪತಿ, ಪಾಂಡುನಂದನರ್**
> **ಸೋದರರ್, ಎಯ್ದೆ ಮಯ್ದುನನೆ ನಾನ್, ಪೆಱತೇನ್ ಪಡೆಮಾತೊ ನಿನ್ನದೀ**
> **ಮೇದಿನಿ, ಪಟ್ಟಮುಂ ನಿನತೆ, ನೀನಿರೆ ಮತ್ತೆ ಪೆಱರ್ ನರೇಂದ್ರರೇ?॥**

ದುರ್ಯೋಧನನು ಈ ವೃತ್ತಾಂತವನ್ನು ಸತ್ಯಂತಪರೆಂಬ ದಿವ್ಯಜ್ಞಾನಿಗಳಿಂದ ತಿಳಿದು 'ಪಾಟಿಸುವೆನ್, ಒಯ್ಯನೆ ಮುಳ್ಳೊಳೆ ಮುಳ್ಳನೆಂದು ತಾನ್ ಈ ನಯದಿಂದೆ ಪೆರ್ಚಿ ಪೊರೆದಟ್ಟಿಜಿಯೊಳಂದೊಡನುಂಡನಲ್ಲವೆ?' ಎಂದು ವಿಷಬೀಜವನ್ನು ಬಿತ್ತಿದನು. ಕರ್ಣನಿಗೆ ಎಂತಹ ಧರ್ಮಸಂಕಟ! ಸ್ವಲ್ಪ ಮನಸ್ಸನ್ನಿಳಿಸಿದ್ದರೆ ಭಾರತದ ಗತಿ ಹೇಗೆ ತಿರುಗುತ್ತಿತ್ತು! ಕರ್ಣನೆಂದಿಗೂ ಜಗ್ಗುವವನಲ್ಲ. ಅವನಲ್ಲಿ ಸಂತೋಷವೂ ದುಃಖವೂ ಏಕಕಾಲದಲ್ಲಿ ತಲೆದೋರಿದುವು. 'ಏಕೆ ಪೇೞ್ದಿರೊ' ಸುಯೋಧನನ್, ಎನಗೊಳ್ಳಿತ್ಕೈದ ಕೃತಮಂ ಪೆಜಗಿಕ್ಕಿ ನೆಗೞ್ಚಿ ಮಾಸೆ ನಣ್ಪಿನ ನೆಪದಿಂದೆ ಪಾಂಡವರನ್, ಅನ್ ಒಳಪೊಕ್ಕೊಡೆ ನೀಮೆ ಪೇಸಿರೇ?' 'ಭೂಪೋತ್ತಮನಂ ಬಿಸುಟ್ಟು ಇರದೆ ನಿಮ್ಮೊಳ್ಳೆ ಪೊಕ್ಕೊಡೆ ಬೇಡನಲ್ಲನೇ'? ಎಂದು ಖಡಾಖಂಡಿತವಾಗಿ ತಿಳಿಸಿ ತನ್ನಲ್ಲಿಯೇ 'ಕುರುಪತಿಗಿಲ್ಲ ದೈವಬಲಂ, ಸೋದರರನೆಂತು ಕೊಲ್ವೆಂ? ಅಟ್ಟಜಿಯೊಳೆನ್ನಂ ಪೊರೆದು ಎಯ್ದೆ ನಂಬಿದ ನೃಪಂಗೆಂತಾಜಿಯೊಳ್ ತಪ್ಪುವೆಂ? ಎನ್ನೊಡಲಂ ನಾಂ ತವಿಪೆಂ'. ಈ ಇಬ್ಬಗೆಯಾದ ಸಮಸ್ಯೆಯೂ ಈ ಕಠಿಣ ನಿರ್ಧಾರವೂ ಭಾರತದಲ್ಲಿ ಮತ್ತಾರಿಗೂ ಇಲ್ಲ. ದುರ್ಯೋಧನನ ಪಕ್ಷೀಯರಲ್ಲನೇಕರು ಉಪ್ಪಿನ ಋಣಕ್ಕಾಗಿ ಶರೀರವನ್ನು ಒಡೆಯನಿಗೆ ಒತ್ತೆಯಿಟ್ಟು ಹೃದಯವನ್ನು ಪಾಂಡವರಿಗೆ ಧಾರೆಯೆರೆದಿದ್ದರು. ರಾಜನು ಆಕ್ಷೇಪ ಮಾಡಿದಾಗ ಭರದಿಂದ ಕಾದಿದರೂ ಅವರ ಸಹಾಯದಿಂದಲೇ ಪಾಂಡವರು ಜಯಶಾಲಿಗಳಾದರು; ಕರ್ಣನದು ಹಾಗಲ್ಲ. ಸ್ವಾಮಿಭಕ್ತಿಗೂ ಕರ್ತವ್ಯನಿಷ್ಠೆಗೂ ಸೋದರಪ್ರೇಮಕ್ಕೂ ಮಧ್ಯೆ ನಡೆದ ಹೋರಾಟ. ವಿಧಿಯೇ ಉದ್ದೇಶಪೂರ್ವಕವಾಗಿ ಆ ಸ್ಥಿತಿಯನ್ನು ತಂದೊಡ್ಡಿತೆಂದು ಕಾಣುತ್ತದೆ. ಕರ್ಣವಧಾನಂತರ ಪಾಂಡವರು ದುಃಖ ಪಡುವಾಗ ಹೇಳುವಂತೆ ಮೊದಲೇ ಅವರಿಗೆ ಅವನ ಸಂಬಂಧ ತಿಳಿಸಿದ್ದರೆ ಅವನನ್ನೇ ರಾಜನನ್ನಾಗಿ ಮಾಡಿ ತಾವು ಅವನ ಸೇವೆ ಮಾಡಲು ಸಿದ್ಧರಾಗಿದ್ದರು. ದುರ್ಯೋಧನ ನಾದರೋ ಅದಕ್ಕಿಂತಲೂ ಮಿಗಿಲಾಗಿ ಧರಾತಳಮಂ ಅವನಿಗಿತ್ತು ಅವನು ಕೊಟ್ಟಿದ್ದನ್ನು ಪ್ರಸಾದವೆಂದು ಸ್ವೀಕರಿಸಿ ಮನೋಮುದದಿಂದ ಇರಬೇಕೆಂದಿದ್ದ. ವಿಧಿಯು ಅದಕ್ಕೆ ಅವಕಾಶ ಕೊಡಲಿಲ್ಲ. ಇಲ್ಲದ ತೊಡಕುಗಳನ್ನು ತಂದೊಡ್ಡಿ ಅವನನ್ನೇ ಆಹುತಿಯನ್ನಾಗಿ ತೆಗೆದುಕೊಂಡಿತು.

ಕೃಷ್ಣನು ಅಲ್ಲಿಗೇ ಬಿಡಲಿಲ್ಲ. ಕುಂತಿಯನ್ನು ಕರ್ಣನಲ್ಲಿಗೆ ಕಳುಹಿಸಿದ, ಅವಳು ಬಂದು 'ನಿನ್ನನುಜರ್ ನಿನ್ನಂ ಬೆಸಕೆಯ್ಯೆ ನೀನೆ ನೆಲನನಾಳ್ವುದು ಕಂದ' ಎಂದು ಬೇಡಿದಳು. ತಂದೆಯಾವ ದಿನಪನು ಬಂದು 'ಅಂದಿನಂತೆ ಇಂದೂ ಮೋಸ ಹೋಗಬೇಡ.' ಎಂದು ಎಚ್ಚರಿಸಿದ. ಕರ್ಣನಾದರೋ ಮುಗುಳ್ನಗೆ ನಕ್ಕು

> ಪಾಟಿಯಸೊಕ್ಕು, ಆಳ್ದನ ಗೆಯ್ದ ಸತ್ಕೃತಮುಮಂ ಪಿಂತಿಕ್ಕಿ ಜೋಳಕ್ಕೆ ತ
> ಪ್ಪಿಯುಂ, ಇನ್ ಬಾೞ್ವುದೆ? ಪೂಣ್ಬು ನಿಲ್ಲದಿಕೆಯಂ ಬಾೞ್ವಂತು ವಿಖ್ಯಾತ ಕೀ
> ರ್ತಿಯವೊಲ್, ಈಯೊಡಲ್, ಅೞ್ವೆ ಪೇೞಿಂ ಎನಗೇಂ ಕಲ್ಪಾಂತರಸ್ಥಾಯಿಯೇ
> ಮಿೞಂಗುಲಿಗನಾಗಿಯುಂ, ಅಣಂ,
> ಆಂ ಗುಣಮನೆ ಬಿಸುಟೆನಿಲ್ಲ ನಿಮಗಂ ಮಗನಾ
> ದಂಗೆನಗೆ ಬಿಸುಡಲಕ್ಕುಮೆ
> ನೀಂ ಗಳ ಪಂಬಲನೆ ಬಿಸುಡಿಂ, ಇನ್ ಎನ್ನೆಡೆಯೊಳ್

**ಪಿಡಿಯೆಂ ಪುರಿಗಣೆಯಂ ನರನ್,**
**ಎಡೆಗೊಂಡೊಡಂ, ಉಟಿದ ನಿನ್ನ ಮಕ್ಕಳನ್, ಇರ್, ಪಿ**
**ರ್ದೊಡಂ ಅಟಿಯೆಂ ಪೆರ್ಜಸಮನೆ**
**ಪಿಡಿದು, ಎನ್ನನೆ ರಣದೊಳ್, ಅಟಿವೆಂ ಇರದದಿಯೆತ್ತಿಂ**

ಎಂತಹ ನಿರ್ಧಾರ! ಮುಂದೆ ಯುದ್ಧವೇ ಕೈಗಟ್ಟಿತು. ಕರ್ಣನ ಸ್ವಾಮಿನಿಷ್ಠೆ ಸ್ವಲ್ಪವೂ ಸಡಿಲವಾಗಲಿಲ್ಲ. ಕುರುಕುಲಪಿತಾಮಹರಾದ ಭೀಷ್ಮರಿಗೆ ಪ್ರಥಮ ಸೇನಾಪಟ್ಟಾಭಿಷೇಕ ವಾಯಿತು. ಕರ್ಣನಿಗೆ ಆ ವಿಷಯದಲ್ಲಿ ಬಹಳ ಅಸಮಾಧಾನ. ಅವರು ಈ ಕಾರ್ಯದಲ್ಲಿ ಮನಸ್ಸು ಮಾಡುವುದಿಲ್ಲವೆಂದು, ಸ್ವಾಮಿಗೆ ಜಯ ಲಭಿಸುವುದಿಲ್ಲವೆಂದು ಅವನ ಸಂದೇಹ.

**ಆದಿಯೊಳವರುಂ ಪಿರಿದೊಂ**
**ದಾವರದಿಂ ನಡಪಿದ, ಅಜ್ಜರಪ್ಪರ್, ಆದಱೆಂದಂ**
**ಕಾದರ್, ಇವರವರೊಳ್, ಅವರುಂ**
**ಕಾದರ್ ನೆರೆದಿವರೊಳ್.....॥**

ಸತ್ಯವನ್ನು ಮರೆಮಾಚುವುದರಿಂದೇನು ಪ್ರಯೋಜನ! ಸ್ವಾಮಿಹಿತಕ್ಕೆ ಭಂಗಬಂದರೆ ಕರ್ತವ್ಯಪರಾಙ್ಮುಖನಾದ ಹಾಗಾಗಲಿಲ್ಲವೇ? ಆದುದರಿಂದ ಧೈರ್ಯದಿಂದಲೇ ಕರ್ಣನು 'ಗುರುಗಳಂ ಕುಲವೃದ್ಧರಂ ಆಜಿಗುಯ್ಯು ಕೆಮ್ಮಗೆ ಪಗೆವಾಡಿಯೊಳ್ ನಗಿಸಿಕೊಂಡೊಡೆ ಬಂದಪುದೇಂ ಸುಯೋಧನಾ, ಪಗೆವರ ನಿಟ್ಟೆಲ್ಲಂ ಮುಱಿವೊಡೆನಗೆ ಪಟ್ಟಂಗಟ್ಟಾ' ಎಂದು ನಿಸ್ಸಂಕೋಚದಿಂದ ಹೇಳುತ್ತಾನೆ.

ದ್ರೋಣಾಚಾರ್ಯರು ಕರ್ಣನ ಹೃದಯವನ್ನು ಅರಿಯಲಿಲ್ಲ. ಕುಲಜರೂ ಭುಜಬಲಯುತರೂ ಆದ ಭೀಷ್ಮರನ್ನು ಹೀಗೆ ತೆಗಳಿದನಲ್ಲಾ ಎಂದು 'ಕುಲಜರಂ.... ಈ ಸಭಾಮಧ್ಯದೊಳಗ್ಗಲಿಸಿದ ಮದದಿಂ ನಾಲಗೆ ಕುಲಮಂ ತುಬ್ಬುವವೋಲ್ ಉಱದೆ ನೀಂ ಕೆಡೆನುಡಿದ್ದೈ' ಎಂದು ಅವನ ಕುಲದ ವಿಷಯವಾಗಿ ಕೆಣಕಿದರು. ಕರ್ಣನಿಗೆ ರೇಗಿಹೋಯಿತು.

**ಕುಲಮನೆ ಮುನ್ನಂ, ಉಗ್ಗಡಿಪಿರೇಂ ಗಳ, ನಿಮ್ಮ ಕುಲಂಗಳಾಂತು ಮಾ**
**ರ್ಮಲೆವರನ್, ಅಟ್ಟ ತಿಂಬುವೆ, ಕುಲಂ ಕುಲಮಲ್ತು, ಚಲಂ ಕುಲಂ, ಗುಣಂ**
**ಕುಲಂ, ಅಭಿಮಾನಮೊಂದೆ ಕುಲಂ, ಅಣ್ಮು ಕುಲಂ ಬಗೆವಾಗಳೀಗಳ್ ಈ**
**ಕಲಹದೊಳಣ್ಣ ನಿಮ್ಮ ಕುಲಂ, ಆಕುಲಮಂ, ನಿಮಗುಂಟುಮಾಡುಗುಂ ॥**

**ಗಂಗಾಸುತಂ ಪೃಥಾಸುತ**
**ರಂ ಗೆಲ್ದೊಡೆ ತಪಕೆ ಪೋಪೆನ್, ಅವರ್ಗಳ ಕೈಯೊಳ್**
**ಗಾಂಗೇಯನ್, ಅಟಿದೊಡೆ, ಅಂತರನ್,**
**ಅಂ ಗೆಲೆ ತಳ್ತಿಱಿವೆನ್, ಅನ್ನೆಗಂ ಬಿಲ್ವಿಡಿಯೆಂ.**

ಎಂದು ಪ್ರತಿಜ್ಞೆ ಮಾಡುವನು. ಭೀಷ್ಮರೇನು ಸಾಮಾನ್ಯರೇ? ಮುದಿಸಿಂಹ, ಅನನ್ಯ ಸಾಮಾನ್ಯವಾದ ಅನುಭವ. ಸ್ವಲ್ಪವೂ ಉದ್ರೇಕಗೊಳ್ಳದೆ ನಿಧಾನದಿಂದ

> ಕಲಿತನದುರ್ಕು, ಜವ್ವನದ ಸೊರ್ಕು, ನಿಜೇಶನ ನಚ್ಚು, ಮಿಕ್ಕ ತೋ
> ಳ್ವಲದ ಪೊದರ್ಪು ಕರ್ಣ ನಿನಗುಳ್ಳನಿತು, ಏನ್, ಎನಗುಂಟೆ, ಭಾರತಂ
> ಕಲಹಂ, ಇದಿರ್ಚುವನ್ ಹರಿಗಂ, ಅಪ್ಪೊಡೆ ಮೊಕ್ಕಳಮೇಕೆ, ನೀಂ ಪಳಂ
> ಚಲೆದಪೆಯಣ್ಣ, ಸೂೞ್ ಪಡೆಯಲಪ್ಪುದು ಕಾಣ ಮಹಾಜಿರಂಗದೊಳ್ ॥

ಎಂದು ಬಹು ವ್ಯಂಗ್ಯವಾಗಿ ನುಡಿದು ತಾವು ಅಘಟನ ಘಟನಾಸಾಮರ್ಥ್ಯದಿಂದ ಯುದ್ಧ ಮಾಡುವುದಾಗಿ ಪ್ರತಿಜ್ಞೆ ಮಾಡುವರು. ಈ ಸನ್ನಿವೇಶ ಕರ್ಣನ ಪಾತ್ರದ ಒಂದು ಮುಖಮಾತ್ರ. ಈಗ ಹೀಗೆ ವರ್ತಿಸಿದವನು ಬೇರೊಂದು ಸಮಯದಲ್ಲಿ ಹೇಗೆ ನಡೆದುಕೊಳ್ಳುತ್ತಾನೆ! ಭೀಷ್ಮರು ಶರಶಯ್ಯಾಗತರಾಗಲು ದುರ್ಯೋಧನಾದಿಗಳು ಮುಂದೆ ಕರ್ಣನಿಗೆ ಸೇನಾಪತ್ಯಾಭಿಷೇಕವನ್ನು ನಿರ್ಧರಿಸುತ್ತಾರೆ. ಆಗ ಕರ್ಣನು 'ಸುರಸಿಂಧೂದ್ಭವನಿಂ ಬೞಿಕ್ಕೆ ಪೆಱರಾರ್ ಸೇನಾಧಿಪತ್ಯಕ್ಕೆ ತಕ್ಕರ್, ಲೋಕೈಕಧನುರ್ಧರಂ ಕಳಶಜಂ ತಕ್ಕಂ' ನದೀನಂದನ ಅವರಿಗೆ ಪಟ್ಟವನ್ನು ಕಟ್ಟಿ; ನಾನು ಅವರಿಗೆ ಸಹಾಯಕನಾಗಿ ಯುದ್ಧ ಮಾಡುತ್ತೇನೆ ಎಂದು ಹೇಳಿ, ತನ್ನ ಪ್ರತಿಜ್ಞೆಯನ್ನು ಲಕ್ಷ್ಯ ಮಾಡದೆ ಯುದ್ಧ ಮಾಡಿ ತನಗೆ ಇದಿರಾದ ಧರ್ಮರಾಜ ಭೀಮಸೇನರನ್ನು ಸಾಯಿಸದೆ ಬಡಿದು ತಾಯಿಗೆ ತಾನು ಕೊಟ್ಟ ವಾಗ್ದಾನಕ್ಕನುಗುಣವಾಗಿ ಅವರನ್ನು ಕೊಲ್ಲದೆ ತನ್ನ ಪರಾಕ್ರಮವನ್ನು ಮೆರೆಯುತ್ತಾನೆ. ಧೃಷ್ಟದ್ಯುಮ್ನನಿಂದ ದ್ರೋಣಾಚಾರ್ಯರು ಹತರಾಗುತ್ತಾರೆ. ಸೇನಾಧಿಪತ್ಯಕ್ಕೆ ಕರ್ಣನ ಸರದಿ ಬರುತ್ತದೆ. ಪಟ್ಟಾಭಿಷಿಕ್ತನಾದ ದಿನ ಪ್ರಾತಃಕಾಲ ನಿತ್ಯಕರ್ಮಾನುಷ್ಠಾನವನ್ನು ತೀರಿಸಿಕೊಂಡು ನಿತ್ಯದಾನಕ್ಕೆಂದು ತರಿಸಿದ ಹದಿನೆಂಟು ಕೋಟಿ ಹೊನ್ನುಗಳನ್ನು ದೀನಾನಾಥರಿಗೆ ಕೊಡುಗೈಯಿಂದ ದಾನಮಾಡಿ ಸುವರ್ಣರಥವನ್ನು ಹತ್ತಿ 'ಓರ್ವನೆ ಶರಶಯನದೊಳಿರ್ದ ಗಾಂಗೇಯನಲ್ಲಿಗೆ ಬಂದು ರಥದಿಂದಮಿೞಿದು ಮೂಱು ಸೂಳ್ ಬಲವಂದು ತದೀಯ ಪಾದಪದ್ಮಂಗಳಂ ತನ್ನ ತಲೆಯೆಸೂಳಿಟ್ಟುಕೊಂಡು'

> ಆನ್ ಮಾತಱಿಯದೆ, ಮುಳಿದುಂ
> ನಿಮ್ಮಡಿಯಂ ನುಡಿದೆನ್, ಉಱದೆ, ಏಳಿಸಲ್, ಏನ್
> ಎಮ್ಮಳವೆ? ಮಱೆವುದು, ಆ ಮನ
> ದುಮ್ಮಚ್ಚರಮನ್, ಅಜ್ಜ ನಿಮ್ಮನ್, ಎರೆಯಲೆ ಬಂದೆಂ"
> ಧುರದೊಳ್ ನಿಮ್ಮಡಿಯುಂ ಗೆಲ್ವಲ್,
> ಅರಿಯದರನ್, ಆ ಪಾಂಡುಸುತರನ್, ಎಮ್ಮಂದಿಗರ್, ಅ
> ಚ್ಚರಿಯಲ್ತೆ ಗೆಲ್ವೆವೆಂಬುದು
> ಹರಿಗನೊಳ್, ಉರದೆ, ಎಂತುಂ, ಎನ್ನ ಚಲಮನೆ ಮಱೆವೆಂ

ಎಂದು ಅವರ ಕ್ಷಮೆಯನ್ನು ಬೇಡುವನು. ಅದಕ್ಕೆ ಭೀಷ್ಮಾಚಾರ್ಯರು 'ನುಡಿವುದಂ ಪತಿಭಕ್ತಿಯ ಪೆಂಪಿಂ ನೀಂ ನುಡಿದಯ್ ಪೆಱತಂದದಿಂ ನುಡಿದೆಯಲ್ತೆ, ಎಂದುದೇಂ ತಪ್ಪಾದುದೇ? ಎಮ್ಮೊಳ್ವಜರ್ ಜಸಂಬಡೆದ ಭಾರ್ಗವರಪ್ಪುದಱೆಂದಂ ನಾಂ ನಂಟರುಮಂಗ ಮಹೀಪತಿ ಅಲ್ಲದೆಯುಂ ನೀಂ ನಮಗೆ ಕುಂತಿಯ ಗಾಂಧಾರಿಯ ಮಕ್ಕಳ ಲೆಕ್ಕದೆ ಮೊಮ್ಮನೈಸೆ'

ನಿನ್ನನೆ ನಚ್ಚಿದಂ ಕುರುಮಹೀಪತಿ ನಿನ್ನ ಶರಾಳಿಗಳ್ಗೆ ಮು
ನ್ನಂ, ನಡುಗುತ್ತಮಿರ್ಪುದು ಅರಿಸಾಧನಸಂಪದಂ ಅಂತೆ ಶಸ್ತ್ರಸಂ
ಪನ್ನನೆ ಆಗಿ ಶಲ್ಯನನೆ ಸಾರಥಿಯಾಗಿರೆ ಮಾಡಿ ಕಾದು ನೀಂ

ಎಂದು ತಮ್ಮ ನಣ್ಣನ್ನುಪದೇಶಿಸಿ ಆಶೀರ್ವಾದಮಾಡಿ ಗೆಲ್ಲುವ ಉಪಾಯವನ್ನು ಸೂಚಿಸಿ ಕಳುಹಿಸುತ್ತಾರೆ. ಅದರಂತೆ ದುರ್ಯೋಧನನು ಶಲ್ಯನನ್ನು ಕರ್ಣನ ಸಾರಥಿಯಾಗಿರುವಂತೆ ಪ್ರಾರ್ಥಿಸುತ್ತಾನೆ. ಅದಕ್ಕೆ ಮದ್ರರಾಜನು ಕಿನಿಸಿ ಕಿಂಕಿಱೆ ವೋಗಿ ಹೀಗೆ ಹೇಳುತ್ತಾನೆ.

ಪಿಂದೆ ಕಡಂಗಿ ತೇರನೆಸಗೆಂಬುವನ್ ಅಂಬಿಗನ್, ಆಜಿರಂಗದೊಳ್
ಮುಂದೆ ಸಮಾನನಾಗಿ ಬೆಸದಿರ್ಪವನುಂ ತುಱುಕಾಱನಾಗೆ ಮ
ತ್ಸ್ಯಂದನ ಚೋದನಕ್ರಮಮದುಂ ಪೊಲೆಯಂಗಮದಿರ್ಕುಂ ಅಂತುಟಂ
ನೀ ದಯೆಗೆಯ್ದು ಪೇಳ್ವೆ ಇದನಾರ್ ಪಡೆವರ್ ಫಣಿರಾಜಕೇತನಾ

ಎಂದು ನೊಂದು ನುಡಿದ ಮದ್ರರಾಜನ ನುಡಿಗೆ ಫಣಿರಾಜನಿಕೇತನನಿಂತೆಂದಂ:- ಮಾವ, ಸಾಮಾನ್ಯ ಮನುಜನಲ್ಲನಂಗಮಹೀಶಂ

ಕುಲಹೀನನೆ ಅಪ್ಪೊಡೆ ಕೇ
ವಲಬೋಧಂ ಪರ್ಶುರಾಮನ್, ಏನ್, ಈಗುಮೆ ನಿ
ರ್ಮಲಿನಕುಲಂಗಲ್ಲದೆ ಪಿಡಿ
ಯಲಲ್ಲದಂತಪ್ಪ ದಿವ್ಯ ಬಾಣಾವಳಿಯಂ

ಮಣಿಕುಂಡಲಮುಂ ಕವಚಂ
ಮಣಿಯದ ಚಾರಿತ್ರಮುಗ್ರತೇಜಮುಮೀ, ಒ
ಳ್ಗುಣಮುಂ ಕಲಿತನಮುಂ, ಇವೇಂ
ಪ್ರಣತಾರೀ ಸೂತಸುತನೊಳೊಡವುಟ್ಟುಗುಮೇ

ಕಲಿತನದ ನೆಗಟ್ಟಿ ಕಸವರ
ಗಲಿತನದ ಪೊದಟ್ಟಿ ಪರಮಕೋಟಿಗೆ ಪೆಱರಾರ್
ಸಲೆ ಕರ್ಣನಲ್ಲದೆನಿಸುವ
ಕಲಿತನಮುಂ ಹರಿಗೆ ಕವಚಮಿತ್ತುದೆ ಪೇೞ್ಗುಂ

ಎಂದು 'ಶಲ್ಯನ ಹೃಚ್ಛಲ್ಯಮಂ ಕಱಲೆ' ನುಡಿಯಲು ಅವನ ಸಾರಥ್ಯದಲ್ಲಿ ತನ್ನ ಪರಾಕ್ರಮವನ್ನು ಅದ್ವಿತೀಯನಾಗಿ ಮೆರೆಯುತ್ತಾನೆ. ಕರ್ಣಾರ್ಜುನಕಾಳಗವು ಲೋಕತ್ರಯಕ್ಕೂ ಆಶ್ಚರ್ಯವನ್ನುಂಟುಮಾಡಿತು. ಮೊದಲಿನ ಒಪ್ಪಂದದ ಪ್ರಕಾರ ತನ್ನ ಮಾತಿನಂತೆ ತಲೆಗೆ ಗುರಿಯಿಟ್ಟ ಬಾಣವನ್ನು ಇಳಿಸಿ ಎದೆಗೆ ಹೊಡೆಯದುದರಿಂದ ಶಲ್ಯನು ಕೋಪಗೊಂಡು ಸಾರಥ್ಯವನ್ನು ನಡೆಸದೆ ತೇರನ್ನಿಳಿದು ಹೊರಟುಹೋಗುವನು. ಕರ್ಣನು ತಾನೇ ತೇರನ್ನು ನಡೆಸಿಕೊಂಡು ಏಕಾಂಗಶೌರ್ಯದಿಂದ ಯುದ್ಧ ಮಾಡುವನು. ಧರಿತ್ರಿ ಅವನ ತೇರಿನ ಚಕ್ರವನ್ನು ನುಂಗುವಳು. ರಥದಿಂದಿಳಿದು ಗಾಲಿಯನ್ನೆತ್ತುವಷ್ಟರಲ್ಲಿಯೇ ಅವನನ್ನೆಸುವಂತೆ ಮುಕುಂದನು ಅರ್ಜುನನನ್ನು ಬೋಧಿಸಲು ಅರ್ಜುನನಿಗೆ ಎಂದೂ ಇಲ್ಲದ ಮರುಕತೋರಿ

ಬಱುವಂ, ಸಾರಥಿಯಿಲ್ಲ, ಮೆಯ್ಗೆ ಮಱೆಯುಂ ತಾನಿಲ್ಲ, ಎಂತೀಗಳ್, ಆನ್
ಇಱಿವೆಂ ನೋಡಿರೆ ಮತ್ತನೊಂದನ್, ಎಸಲುಂ ಕಯ್ಯೇಱದು, ಏಕೆಂದುಂ, ಆಂ
ಅಱಿಯೆಂ, ಕೂರ್ಮೆಯೆ ಮಿಕ್ಕು ಬಂದಪುದು, ಇದರ್ಕೇಗೆಯ್ವೆನ್, ಏನೆಂಬೆಂ ಆಂ
ಮಱೆದೆಂ ಮುನ್ನಿನದೊಂದು ವೈರಮನ್, ಇದಿಂತೇ ಕಾರಣಂ ಮಾಧವಾ ॥

ಎಂದು ಅಂಗಲಾಚುವನು. ಕೃಷ್ಣನು ಅವನಿಗೆ ಮರ್ಮೋದ್ಘಾಟನವಾಗುವ ಮಾತುಗಳನ್ನಾಡಿ ರೇಗಿಸುವನು. ಅರ್ಜುನನು ಉತ್ಸಾಹಗೊಂಡು ಕರ್ಣನನ್ನು ಕುರಿತು

ಎನ್ನ ಪೆಸರ್ಗೇಳ್ದು ಸೈರಿಸ
ದನ್ನಯ್, ಅದೆಂತೀಗಳೆನ್ನ ರೂಪಂ ಕಂಡುಂ
ನಿನ್ನರಸನನುಗದಮ್ಮನ
ನಿನ್ನ ತನೂಭವನ ಸಾವುಗಂಡುಂ ಮಾಣ್ಬಾ?.....॥

'ಸೆಟ್ಟಿಯ ಬಳ್ಳಂ ಕಿಱಿದೆಂಬುದೊಂದು ನುಡಿಯಂ ನೀಂ ನಿಕ್ಕುವಂ ಮಾಡಿದೈ! ಮಾನಿಸರೇನಿನ್ನೂಱು ವರ್ಷಮಮಂ ಬಟ್ಟಿಪರೇ' ಎಂದು ತನ್ನನುದ್ಘಾಟಿಸಿ ನುಡಿದೊಡೆ ಉಮ್ಮಚ್ಚರದೊಳ್ ಕರ್ಣನು ಮುಗುಳ್ನಗೆಯೊಡನೆ ಹೀಗೆಂದನು.

ಕಸವರದ ಸವಿಯುಮಂ ಭಯ
ರಸಕದ ಸವಿಯುಮನದೆಂತುಂ ಆನಱಿಯದುದಂ
ವಸುಮತಿಯಱಿವುದು ನೀಂ ಪುರು
ಡಿಸಿ ನುಡಿದೊಡೆ ನಿನ್ನ ನುಡಿದ ಮಾತೇಱುಗುಮೇ?॥

ಒಡಲುಂ ಪ್ರಾಣಮುಮೆಂಬಿವು
ಕಿಡಲಾದುವು; ಜಸಮದೊಂದೆ ಕಿಡದು, ಅದನಾಂ ಬ
ಲ್ವಿಡಿವಿಡಿದು ನೆಗಲ್ದೆನ್, ಉಱಿದಟಿ
ವಡೆಮಾತಂ ಮಾಡಿ ನೀನೆ ಕೆಮ್ಮನೆ ನುಡಿವೈ ॥

ಬದಿವಸದಿಂದೆ ಪುಟ್ಟುವುದು, ಪುಟ್ಟಿಸುವಂ ಬದಿ, ಪುಟ್ಟಿದಂದಿವಂ
ಗಿದು ಬಯಂ, ಒಳ್ಪಿವಂಗಿದು, ವಿನೋದಮಿವಂಗಿದು, ಸಾವ ಪಾಂಗಿವಂ
ಗಿದು, ಪಡೆಮಾತಿವಂಗಿದು ಪರಾಕ್ರಮವೆಂಬುದನ್, ಎಲ್ಲ ಮಾಟ್ಕೆಯಿಂ
ಬದಿ ಸಮಕಟ್ಟಿ ಕೊಟ್ಟೊಡೆ, ಎಡೆಯೊಳ್ ಕೆಡಿಸಲ್ ಕುಡಿಸಲ್ ಸಮರ್ಥರಾರ್ ॥

ಎಂದೀ ಬಾಯ್ಮಾತಿನೊಳ್, ಏ
ವಂದಪುದು, ಅಣ್ಮು ಅಣ್ಮು ಕಾದುಕೊಳ್ಳೆನುತುಂ ಭೋ
ರೆಂದಿಸೆ ಪೊಸಮಸೆಯಂಬಿನ
ತಂದಲ ಬೆಳ್ಸರಿಗಳ್, ಇರದೆ ಕವಿದುವು ನರನಂ ॥

ಪರಬಲಮಥನನಿಗೆ ಆಕ್ರೋಶವು ತಡೆಯದಾಯಿತು. ತಕ್ಷಣವೇ ಭುವನ-ಭವನ ಸಂಹಾರಕಮಪ್ಪ ಅಂಜಲಿಕಾಸ್ತ್ರಮನ್ ಅಮೋಘಾಸ್ತ್ರ ಧನಂಜಯನ್ ಆಕರ್ಣಾಂತಂಬರಂ ತೆಗೆದು ಕರ್ಣನ ಕುಧರಸಂಧಿಯಂ ನಿಟ್ಟಿಸಿ ಇಸಲ್ ಬಿಟ್ಟುದು ಭರದೆ ಸಿಡಿಲ್ದತ್ತ ಕರ್ಣೋತ್ತ ಮಾಂಗಂ' ಆಗ

ಕುಡುಮಿಂಚಿನ ಸಿಡಿಲುರುಳಿಯೊಳ್,
ಒಡಂಬಡಂ ಪಡೆಯೆ ಕರ್ಣನೊಡಲಿಂದಾಗಳ್
ನಡೆ ನೋಡೆನೋಡೆ ದಿನಪನೊಳ್
ಒಡಗೂಡಿದುದೊಂದು ಮೂರ್ತಿ ತೇಜೋರೂಪಂ ॥

ಇಂತಹ ಕರ್ಣನ ಅದ್ಭುತ ಜೀವನ ಪಂಪನ ಹೃದಯವನ್ನು ಸೂರೆಗೊಂಡಿತು. ಅರಾತಿಕಾಲಾನಲನ ಸಮಕ್ಷಮದಲ್ಲಿಯೇ ಮನಮುಟ್ಟುವಂತೆ ನಿರ್ಭಯವಾಗಿ ಆತನ ಚಮರಶ್ಲೋಕವನ್ನು ಹಾಡಿ ಆತನಲ್ಲಿರುವ ಪಕ್ಷಪಾತವನ್ನು ಕವಿತಾಗುಣಾರ್ಣವನು ಪ್ರದರ್ಶಿಸಿದನು.

ನೆನೆಯದಿರಣ್ಣ ಭಾರತದೊಳಿಂ ಪೆಱರಾರುಮನ್, ಒಂದೆಚಿತ್ತದಿಂ
ನೆನೆವೊಡೆ ಕರ್ಣನಂ ನೆನೆಯ, ಕರ್ಣನೊಳ್, ಆರ್ ದೊರೆ, ಕರ್ಣನೇಱು, ಕ
ರ್ಣನ ಕಡು ನನ್ನಿ, ಕರ್ಣನಳವು, ಅಂಕದ ಕರ್ಣನ ಚಾಗಮೆಂದು ಕ
ರ್ಣನ ಪಡೆಮಾತಿನೊಳ್ ಪುದಿದು ಕರ್ಣರಸಾಯನಮಲ್ತೆ ಭಾರತಂ ॥

ಪಂಪನ ದುರ್ಯೋಧನನು ವೀರಾಗ್ರೇಸರ, ಆತ್ಮಾಭಿಮಾನಿ, ಅವನಲ್ಲಿ ಸತ್ಪುರುಷನಲ್ಲಿರಬೇಕಾದ ಅನೇಕಗುಣಗಳಿವೆ. ಆದರೆ ಅವನಲ್ಲಿರುವ ಛಲವೂ ಪಾಂಡವರಲ್ಲಿ ಅವನಿಗಿದ್ದ ದ್ವೇಷ ಮಾತ್ಸರ್ಯಗಳೂ ಅವನ ನಾಶಕ್ಕೆ ಕಾರಣವಾಗುವುವು. ಆದುದರಿಂದಲೇ ಅವನಲ್ಲಿ ವಾಚಕರಿಗೆ ಸಹಾನುಭೂತಿಯುಂಟಾಗುತ್ತದೆ. ಅವನ ಅನ್ಯಾದೃಶವಾದ ಮಿತ್ರಪ್ರೇಮ, ಗುರುಜನವಿಧೇಯತೆ, ಸೋದರಪ್ರೇಮ ಮೊದಲಾದ ಆಭಿಜಾತ್ಯಗುಣಗಳು ಚಿತ್ತಾಕರ್ಷಕವಾಗಿವೆ. ಇವನ್ನು ಪಂಪನು ಅವನ ಪಾತ್ರಚಿತ್ರಣದಲ್ಲಿ ಬಹುಸ್ಪಷ್ಟವಾಗಿ ಚಿತ್ರಿಸಿದ್ದಾನೆ.

ಪ್ರಾರಂಭದಲ್ಲಿ ಭಾರತಯುದ್ಧದವರೆಗೆ ಪಂಪನ ದರ್ಯೋಧನನೂ ಹೆಚ್ಚು ಕಡಿಮೆ ವ್ಯಾಸರ ದುರ್ಯೋಧನನಂತೆಯೇ ಇರುವನು. ಪಂಪನು ದುರ್ಯೋಧನನ ದುರ್ಗುಣಗಳನ್ನು ಎತ್ತಿತೋರಿಸದಿದ್ದರೂ ಮೂಲಭಾರತದಂತೆಯೇ ಇಲ್ಲಿಯೂ ದುರ್ಯೋಧನನಲ್ಲಿ ಒಂದು ವಿಧವಾದ ದ್ವೇಷ, ಮಾತ್ಸರ್ಯ, ಕುಯುಕ್ತಿ, ಅಧರ್ಮ ಪ್ರವರ್ತನೆ ಮೊದಲಾದುವು ಕಂಡು ಬರುವುವು. ಪಂಪನು ಅವನ ಪ್ರಧಾನವಾದ ಗುಣ ಛಲವೆಂದು ಹೇಳಿದ್ದಾನೆ. ಛಲಕ್ಕೆ ಮೂಲಕಾರಣ ಮಾತ್ಸರ್ಯ. ಅವನ ಹುಟ್ಟು ಮಾತ್ಸರ್ಯದಿಂದಲೇ ಪ್ರಾರಂಭವಾಗುವುದು. ಕುಂತಿಗೆ ತನಗಿಂತ ಮೊದಲೇ ಸಂತಾನ ಪ್ರಾಪ್ತಿಯಾಯಿತೆಂಬ ಮಾತ್ಸರ್ಯದಿಂದಲೇ ಕೌರವರ ಅಕಾಲ ಜನನವಾಗುವುದು. ವಿದ್ಯಾಭ್ಯಾಸ ಮತ್ತು ಕ್ರೀಡಾವಿನೋದಗಳಲ್ಲಿ ಪಾಂಡವರ ಕೈ ಮೇಲಾದುದು ಅವರ ಮಾತ್ಸರ್ಯವನ್ನು ಹೆಚ್ಚಿಸುವುದು. ತಂದೆಗೆ ರಾಜ್ಯ ಪ್ರಾಪ್ತವಾಗದಿದ್ದುದೂ ಪಾಂಡವರು ಹೋದೆಡೆಗಳಲ್ಲೆಲ್ಲಾ ಅಭಿವೃದ್ಧಿಯಾಗುತ್ತಿದ್ದುದೂ ಮಾತ್ಸರ್ಯದ ಪರಮಾವಧಿಯಾಗಿ ಪರಿಣಮಿಸಿ ಪಾಂಡವರಲ್ಲಿ ವೈರವೂ ಅವರ ನಿರ್ಮೂಲನಕಾರ್ಯದಲ್ಲಿ ನಾನಾ ರೀತಿಯ ಪ್ರಯತ್ನಗಳೂ ಪ್ರಾರಂಭವಾಗುವುವು. ಮೊದಲು ಅವರಿಗೆ ಬೇರೆಯೆಡೆಯಲ್ಲಿರಲು ಏರ್ಪಾಟು. ಆಮೇಲೆ ಅರಗಿನ ಮನೆಯಲ್ಲಿ ಕೊನೆಗಾಣಿಸುವ ಸಂಚು. ಸಂಚು

ಫಲಿಸದಿರುವಾಗ ವೈರವಾಗಿ ಪರಿಣಮಿಸಿ ಉದ್ದಿಷ್ಟ ಕಾರ್ಯಸಿದ್ಧಿಯಾಗದಿದ್ದಾಗ ಛಲದ ರೂಪವನ್ನು ತಾಳುತ್ತದೆ. ದ್ಯೂತಪ್ರಸಂಗ ದ್ರೌಪದೀಕೇಶಾಪಕರ್ಷಣ ಪಾಂಡವರ ವನವಾಸ ಅಜ್ಞಾತವಾಸಗಳಲ್ಲಿ ಛಲವೂ ಮತ್ತಷ್ಟು ರೂಢಮೂಲವಾಗಿ, ಪಾಂಡವರನ್ನು ಆದಷ್ಟು ಹಿಂಸಿಸುವುದೂ ಅವರ ಕಷ್ಟವನ್ನು ನೋಡಿ ತಾನು ಸುಖಿಸುವುದೂ ದುರ್ಯೋಧನನ ಪರಮಧ್ಯೇಯವಾಗುತ್ತದೆ. ಭೀಷ್ಮದ್ರೋಣಾದಿ ಹಿರಿಯರು ತನ್ನನ್ನೇ ಭರ್ತ್ಸನೆ ಮಾಡುವುದು ಛಲದ ಸಾಧನೆಗೆ ಮತ್ತಷ್ಟು ಪ್ರಚೋದಕವಾಗುವುದು. ಅಂಗಾರವರ್ಮ ಮತ್ತು ಅಂಗದಪರ್ಣರ ಪ್ರಸಂಗವು ಆತ್ಮಾಭಿಮಾನವನ್ನು ತಲೆಯೆತ್ತುವಂತೆ ಮಾಡುತ್ತದೆ. ಕೃಷ್ಣ ದೌತ್ಯವು ನಿಷ್ಫಲವಾಗಲು ಯುದ್ಧವು ಅನಿವಾರ್ಯವಾಗುವುದು. ಭೀಷ್ಮದ್ರೋಣಾದಿನಾಯಕರ ಅವಲಂಬನದಿಂದ ಜಯವನ್ನು ಗಳಿಸಲು ದುರ್ಯೋಧನನು ಪ್ರಯತ್ನಿಸುವನು. ಅಲ್ಪಕಾಲದಲ್ಲಿಯೆ ಅವರೆಲ್ಲ ಪಾಂಡವಪಕ್ಷಪಾತಿಗಳು. ಅಥವಾ ಮರೆಯ ಪಾಂಡವರು ಎಂಬ ಶಂಕೆಹುಟ್ಟುವುದು. ಯುದ್ಧದಲ್ಲಿ ಪುತ್ರಮಿತ್ರ ಬಾಂಧವರೆಲ್ಲ ಅಳಿಯುವರು. ಬಾಲ್ಯದಿಂದ ಒಡಲೆರಡು ಅಸುವೊಂದೆಂಬಂತಿದ್ದ ಕರ್ಣನೂ ದೈವಾಧೀನವಾಗುವನು. ಏಕಾದಶಾಕ್ಷೋಹಿಣಿಯಲ್ಲಿ ತಾನೊರ್ವನೆ ಉಳಿಯುವನು. ಅವನೊಡನೆ ಅವನ ಅಭಿಮಾನವೊಂದೆ ಉಳಿಯುವುದು. ಇಲ್ಲಿಂದ ಮುಂದೆ ಪಂಪನ ದುರ್ಯೋಧನನ ಪಾತ್ರವು ವ್ಯತ್ಯಸ್ತವಾಗುವುದು. ಆ ಪಾತ್ರದ ನಿಜವಾದ ವ್ಯಕ್ತಿತ್ವವು ಪ್ರಕಾಶಕ್ಕೆ ಬರುವುದು. ಕರ್ಣವಧಾನಂತರ ಪಂಪನ ದುರ್ಯೋಧನನು ಸಂಜಯ ದ್ವಿತೀಯನಾಗಿ ರಣರಂಗದಲ್ಲಿ ಹೊರಡುವನು. ಸೂರ್ಯಪುತ್ರನ ಮರಣವಾರ್ತೆಯನ್ನು ಕೇಳಿ ಮೂರ್ಛಿತನಾಗಿ ಎಚ್ಚೆತ್ತು ಅವನಿಗಾಗಿ ದುಃಖಪಡುವನು. ಇವನ ಸ್ನೇಹದ ಉತ್ಕಟಾವಸ್ಥೆಯೆಷ್ಟು!

> **ನೀನುಮಗಲ್ಕೆ, ಇನ್ನೆನಗೆ ಪೇೞಿನ್ ಪೞಿರಾರ್, ಎನಗಾಸೆ, ನಿನ್ನಂ**
> **ನಾನುಂ ಅಗಲ್ದೆನೇ ಕೆಳೆಯ, ಬೆನ್ನನೆ ಬಂದಪೆನ್, ಆಂತರಂ ಯಮ**
> **ಸ್ಥಾನಮನೆಯ್ದುಸುತ್ತ, ಇದುವೆ ದಂದುಗಂ, ಎಂತೆರ್ದೆಮುಟ್ಟೆ ಕೂರ್ತು**
> **ಪೇೞ್ ಮಾನಸವಾೞಿನ್, ಅಂಗವಿಷಯಾಧಿಪ ನೀಂ ಪೊಱಗಾಗೆ ಬಾೞ್ವೆನೇ? ॥**

> **ಒಡಲೆರಡು, ಒಂದೆ ಜೀವಂ, ಇವರ್ಗೆ, ಎಂಬುದನ್, ಎಂಬುದು ಲೋಕಂ, ಈಗಳಾ**
> **ನುಡಿ ಪುಸಿಯಾಯ್ತು, ನಿನ್ನಸು ಕಿರೀಟಿಯ ಶಾತಶರಂಗಳಿಂದೆ ಪೋ**
> **ಪೊಡಂ, ಎನಗಿನ್ನುಂ ಈ, ಒಡಲೊಳಿರ್ದುದು ನಾಣಿಲಿಜೀವಂ, ಎಂದೊಡೆ, ಆ**
> **ವೆಡೆಯೊಳ್ ನಿನ್ನೊಳ್ ಎನ್ನ ಕಡುಗೂರ್ಮೆಯುಂ, ಅೞ್ಕಱುಂ, ಅಂಗವಲ್ಲಭಾ**

> **ಅಱಿಯಂ ಸೋದರರನೆಂದು ಧರ್ಮತನಯಂ ನಿರ್ವ್ಯಾಜದಿಂ ನಿನ್ನನ್, ಆನ್**
> **ಅಱಿವೆಂ, ಮುನ್ನಱಿದಿರ್ದುಂ, ಎನ್ನದಸನ್, ಆನ್, ಏಕಿರ್ತ್ತೆನಿಲ್ಲ, ಏಕೆ, ಪೇೞ್ದು**
> **ಅಱಿಪಲ್ಕೆ, ಒಲ್ದೆನುಮಿಲ್ಲ ಕಾರ್ಯವಶದಿಂ ಕೂರ್ಪಂತೆವೋಲ್ ನಿನ್ನನ್ ಆಂ**
> **ನೆಱೆ ಕೊಂದೆಂ, ಮುಳಿಸಿಂದಂ, ಅಂಗನೃಪತೀ ಕೌಂತೇಯರೇಂ ಕೊಂದರೇ ॥**

ಎಂದು ಕರ್ಣನ ಮರಣಕ್ಕಾಗಿ ಬಾಯಟಿದು ಪಳಯಿಸುವನು.

ಅಷ್ಟರಲ್ಲಿ ದುಃಖಿತಪ್ತನಾದ ಮಗನನ್ನು ನೋಡಲು ಅವನ ಮಾತಾಪಿತೃಗಳಾದ ಧೃತರಾಷ್ಟ್ರಗಾಂಧಾರಿಯರು ಬರುವುದನ್ನು ಕೇಳಿ ಅವರ ಮುಖವನ್ನು ನೋಡುವುದಕ್ಕೆ ನಾಚಿ 'ಸಂಧಿಯನ್ ಒಲ್ಲದೆ ಕಜ್ಜಂ ಎಂಬವರ್ಗಳ ಮಾತುಗೇಳ್ದನಿತನ್, ಇನ್ನೆನಗೆ ಬಿದಿ ಮಾಡಿತಾಗದೇ' ಎಂದು ಹಲುಬುತ್ತಿರುವಷ್ಟರಲ್ಲಿಯೇ ಅಲ್ಲಿಗೆ ತಾಯಿತಂದೆಗಳು ಬರುವರು, ದುರ್ಯೋಧನನು ಬಹು ವಿನಯಪೂರ್ವಕ ನಮಸ್ಕಾರಮಾಡುವನು. ಅವರು ಇವನನ್ನು ಹರಸಿ 'ನೀನಿದ್ದರೆ ಉಳಿದವರೆಲ್ಲ ಇದ್ದಹಾಗೆಯೆ, ದಯವಿಟ್ಟು ನೀನು ಪಾಂಡವರಲ್ಲಿ ಸಂಧಿಮಾಡಿಕೊಂಡು ಸುಖವಾಗಿ ಬಾಳು' ಎನ್ನುವರು. ದುರ್ಯೋಧನನಿಗೆ ಅದು ಸರ್ವಥಾ ಇಷ್ಟವಿಲ್ಲ.

> **ತಲೆದೋಱಲ್ಕೆ, ಅಣಂ, ಅಳ್ಕಿ ವೈರಿನೆಲನಂ - ಪೋಪೊಕ್ಕೆನ್, ಎಂಬನ್ನೆಗಂ**
> **ಚಲದಿಂದೆಯ್ದುವ ಕರ್ಣನುಗ್ರರಥಮಂ ಮುಂ ನುಂಗಿದೀ ದ್ರೋಹಿಯೊಳ್**
> **ನೆಲದೊಳ್ ಪಂಬಲೆ? ಮತ್ತಂ, ಎನ್ನ ಮುಳಿಸಿಂಗೆ, ಆಂ ಕಾದುವೆಂ, ಪೇಸಿದೆಂ**
> **ನೆಲಗಂಡಂತೆ ನೆಲಕ್ಕೆ, ಗೆಲ್ದೊಡಂ, ಅದಂ ಚಃ ಮತ್ತಂ, ಆನಾಳ್ವೆನೇ?॥**
>
> **ತಪ್ಪದು ಕರ್ಣನ ಬಟಿಕೆ ಸಂಧಿಯ ಮಾತೆನಗೆ, ಆತನಿಲ್ಲದೆ, ಎಂ**
> **ತಪ್ಪುದೊ ರಾಜ್ಯಂ, ಈ ಗದೆಯುಂ, ಈ ಭುಜಾದಂಡಮುಳ್ಳಿನಂ ಕೊನ**
> **ರ್ತಪ್ಪುದೊ ಪೇಟಿಂ, ಎನ್ನ ಪಗೆ, ನೋವಜೆದಂಜುವುದೇಕೆ? ನಿಂದರೇಂ**
> **ತಪ್ಪುದೊ ಪೇಟಿಂ, ಅಯ್ಯ ನೊಸಲೊಳ್ ಬರೆದಕ್ಕರಂ, ಆ ವಿಧಾತ್ರನಾ ॥**

ಎಂದು ಸ್ಪಷ್ಟವಾಗಿ ತನ್ನ ಅಭಿಪ್ರಾಯವನ್ನು ಸೂಚಿಸಿ ಅವರನ್ನು ಗೌರವದಿಂದ ಬೀಳ್ಕೊಟ್ಟು ತಾನು ಮಹಾಸತ್ವನಾದುದರಿಂದ ಶಾಂತಿಯುತನಾಗಿ ಶಲ್ಯನಿಗೆ ಸೇನಾಧಿಪತ್ಯಾಭಿಷೇಕವನ್ನು ಮಾಡಿ ಕಳುಹಿಸುವನು, ಶಲ್ಯನೂ ಯುದ್ಧದಲ್ಲಿ ಮಡಿಯುವನು. ಇಲ್ಲಿ ವ್ಯಾಸಭಾರತದ ದುರ್ಯೋಧನನು ಪಲಾಯನದಲ್ಲಿ ಮನಸ್ಸುಮಾಡಿ ಮಡುವನ್ನು ಕುರಿತು ಓಡುವನು. ಆದರೆ ಪಂಪನ ದುರ್ಯೋಧನನಾದರೋ ಮದ್ರನಾಥನು ಭಸ್ಮೀಭೂತನಾದುದನ್ನು ಕೇಳಿ

> **ಆ ದೊರೆಯರ್ ನದೀಜ ಘಟಸಂಭವ ಸೂರ್ಯತನೂಜ ಮದ್ರರಾ**
> **ಜಾದಿ ಮಹೀಭುಜರ್ ಧುರದೊಳ್, ಎನ್ನಯ ದೂಸಱಿನ್ ಆಟೆ ಮಟ್ಗಿದಂ**
> **ತಾದರ್, ಒಂದೆ ಮೆಯ್ಯುಟಿದುದು, ಎನಗಾವುದು ಮೆಳ್ಪದು, ಎಯ್ದೆ ಮುಂ**
> **ದಾದ ವಿರೋಧಿಸಾಧನಮನ್, ಎನ್ನ ಗದಾಶನಿಯಿಂದೆ, ಉರುಳ್ಚುವೆಂ ॥**

ಎಂದು 'ನಿಜಭುಜವಿಕ್ರಮೈಕಸಹಾಯಕನಾಗಿ ಗದೆಯಂ ಕೊಂಡು ಸಂಗ್ರಾಮಕ್ಕೆ ಏಕಾಕಿಯೆಂದೇಳಿಸಿದ ಸಂಜಯನಂ ನೋಡಿ ಮುನಿದು' ನೆಣದ ಪಳ್ಳಗಳನ್ನು ಪಾಯ್ದು ನೆತ್ತರ ತೊಱೆಗಳನ್ನು ದಾಟಿ ಯುದ್ಧರಂಗದಲ್ಲಿ ಹೋಗುತ್ತಿರಲಾಗಿ ಮರುಳುಗಳು ತನ್ನನ್ನು ಮರುಳೆಂದು ಕರೆಯಲು ಅದಕ್ಕೆ ಮುಗುಳ್ನಗೆ ನಕ್ಕು 'ಎನ್ನಂ ವಿಧಾತ್ರಂ ಮರುಳ್ಮಾಡಿದ ಕಾರಣದಿಂದಂ ಈ ಮರುಳ ಕಣ್ಣಿಗೆ ಆಂ ಮರುಳಾಗಿ ತೋಱಿದೆನೆಂದು ನೊಂದುಕೊಂಡು ಮುಂದೆ 'ಧೃಷ್ಟದ್ಯುಮ್ನಕಚಗ್ರಹವಿಲುಳಿತಮೌಳಿಯುಂ ತದೀಯಕೌಕ್ಷೇಯಕಥಾ ವಿದಾರಿತಶರೀರನುಮಾಗಿ ಬಿಟ್ದಿರ್ದ ಶರಾಚಾರ್ಯರಂ' ಕಾಣುವನು. ತತ್‌ಕ್ಷಣವೇ ಅವನ ಗುರುಭಕ್ತಿಯ ಎಲ್ಲೆಯು ಮಿತಿ ಮೀಱುವುದು.

ನೆಗಟ್ಟುದು ಬಿಲ್ಲ ಬಿನ್ನಣಂ, ಇಳಾವಳಯಕ್ಕೆ, ಸಮಸ್ತ ಧಾತ್ರಿ ಕೆ
ಯ್ಮುಗಿವುದು ನಿಮ್ಮದೊಂದು ಪೆಸರ್ಗೇಳ್ದೊಡೆ, ನಿಮ್ಮ ಸರಲ್ಗೆ ದೇವರುಂ
ಸುಗಿವರ್, ಅಯೋನಿಸಂಭವರಿರ್. ಎನ್ನಯ ದೂಸಜೆನ್, ಎನ್ನ ಕರ್ಮದಿಂ
ಪಗೆವರಿನ್, ಅಕ್ಕಟಾ ನಿಮಗಂ, ಈ, ಇರವಾದುದೆ ಕುಂಭಸಂಭವಾ ॥

ಎಂದು ಅವರ ಪರಾಕ್ರಮವನ್ನು ಕೊಂಡಾಡಿ ತನ್ನ ನೈಜವಾದ ಗುರುಭಕ್ತಿಯನ್ನು ಪ್ರದರ್ಶಿಸಿ ಅವರಿಗೆ ನಮಸ್ಕರಿಸುವನು. ಮುಂದೆ 'ವೃಕೋದರನಿಂ ನಿಶ್ಶೇಷಪೀತರುಧಿರನಪ್ಪ' ದುಶ್ಶಾಸನನನ್ನು ಕಂಡು 'ಸೋದರನ, ಅಬಿಲೊಳ್ ಕಣ್ಣ ನೀರ್ಗಳಂ ಸುರಿದು'

ನಿನ್ನಂ ಕೊಂದನ ಬಸಿಱಂ
ನಿನ್ನಂ ತೆಗೆಯದೆಯುಂ, ಆವನ ಕರುಳಂ ಪರ್ದಿಂ
ಮುಂ, ನುಂಗಿಸಿ ನೋಡದೆಯುಂ
ಮುನ್ನಮೆ ಯುವರಾಜ ನಿನ್ನನ್, ಆಂ ನೋಡಿದೆನೇ?॥

ಎಂದು ಮರುಗುವನು. ಮುಂದೆ ವೃಷಸೇನನ ದೇಹವನ್ನು ಕಂಡು ಕರ್ಣನನ್ನೇ ನೆನೆದು ಅವನ ಶರೀರವನ್ನು ಹುಡುಕಿ ಆ ಕಳೇಬರವನ್ನು ನೋಡಿ ಸೈರಿಸಲಾರದೆ ಮೂರ್ಛೆ ಹೋಗಿ ಪುನಃ ಎಚ್ಚೆತ್ತು ಎದೆದೆರೆದು ದುಃಖಿಸಿ ಮುನ್ನಡೆದು ಶರಶಯ್ಯಾಗತರಾಗಿದ್ದ ಭೀಷ್ಮರನ್ನು ಕಾಣಲು ಅವರು ದುರ್ಯೋಧನನು ಬಂದ ಬರವಿನಿಂದಲೇ ಸಮರ ವೃತ್ತಾಂತವನ್ನು ತಿಳಿದು 'ನಿನಗಮೀಯಿರವಾದುದೇ' ಎಂದು ದುಃಖಿಸಿ ನಿನ್ನಗೆಯ್ವ ನಿಯೋಗ ಮಾವುದು ಗೆಯ್ಯಲ್ ಬಗೆದಪೆ ಎನೆ, ಅರಿನೃಪರನ್ನು ತರಿದೊಟ್ಟುವುದಲ್ಲದೆ ಮತ್ತೇನು? ಭವತ್ಪದಸರೋಜಮನಾಂ ಬಲಗೊಂಡು ಮತ್ತಮಾಜಿಗೆ ನಡೆಯಲ್ಕೆ ಬಂದೆಂ' ಎಂದು ಹೇಳಿದ ದುರ್ಯೋಧನನಳವಿಂಗೆ ಮನಗೊಂಡು 'ಮಗನೇ ನಿನಗಪ್ಪೊಡೆ ದೈವ ಪ್ರತಿಕೂಲಂ, ಮೈತ್ರೇಯರ್ ಕೊಟ್ಟ ಊರುಭಂಗಶಾಪಮನಿವಾರಿತಂ, ಎನ್ನ ಪ್ರಾಣಮುಳ್ಳಂತೆ ಸಂಧಿಯಂ ಮಾಡಿ ವಸುಂಧರೆಯಂ ಕೊಂಡು ಕಾಲಮಂ ಕಜ್ಜಮಂ ಅಱಿದು ಬೞಿಯಂ ನಿನ್ನ ನೆಗಟ್ಟುದಂ ನೆಗಟ್ಟುದು' ಎಂದು ನುಡಿದ ಪಿತಾಮಹನ ನುಡಿಗಳಿಗೆ ಕುರುರಾಜನ ಉತ್ತರವಿದು

ಶರತಯ್ಯಾಗ್ರದೊಳಿಂತು ನೀಮಿರೆ, ಘಟಪ್ರೋದ್ಭೂತನಂತಾಗೆ ವಾ
ಸರನಾಥಾತ್ಮಜನ್, ಅಂತು ಸಾಯೆ ರಣದೊಳ್, ದುಶ್ಶಾಸನಂ ತದ್ವೃಕೋ
ದರನಿಂದೆ, ಅಂತಟೆದಟ್ಗೆ ಸೈರಿಸಿಯುಂ ಸಂಧಾನಮಂ ವೈರಿಭೂ
ಪರೊಳಿಂ ಸಂಧಿಸಿ ಪೇೞಿಂ, ಆರ್ಗೆ ಮೆಱೆವೆಂ ಸಂಪತ್ತುಮಂ ಶ್ರೀಯುಮಂ ॥

ಈ ಮಾತನ್ನು ಕೇಳಿ ಭೀಷ್ಮರು ವಿಸ್ಮಿತರಾಗಿ ಅದೊಂದು ದಿವಸ ವೈಶಂಪಾಯನ ಸರೋವರದಲ್ಲಿ ಮುಳುಗಿ ಕಾಲಯಾಪನೆ ಮಾಡುತ್ತಿದ್ದು ಮುಂದೆ ಅವನ ಸಹಾಯಕ್ಕೆ ಕಾದಿ ಗೆಲ್ಲತಕ್ಕದ್ದು ಎಂದು ಹಿತೋಪದೇಶ ಮಾಡಿ ಜಳಮಂತ್ರೋಪದೇಶಮಾಡಲು ಅವರ ಮಾತನ್ನು ಮೀರಲಾರದೆ ಬಹಳ ಕಷ್ಟದಿಂದ ಸರೋವರದಲ್ಲಿ ಹೋಗಿ ಮುಳುಗಿಕೊಳ್ಳುವನು. ವ್ಯಾಸಭಾರತದ ದುರ್ಯೋಧನನಿಗೂ ಪಂಪನ ದುರ್ಯೋಧನನಿಗೂ ಎಷ್ಟು ಅಂತರ!

ಇಷ್ಟರಲ್ಲಿ ಭೀಮನು ದುರ್ಯೋಧನನನ್ನು ಅರಸುತ್ತಾ ಬರುವನು. ಕಿರಾತರು

ಕೊಳದ ತಡಿಯಲ್ಲಿ ದುರ್ಯೋಧನನ ಹೆಜ್ಜೆಯ ಗುರುತನ್ನು ತೋರಿಸಲು ಪಾಂಡವರು ಅಲ್ಲಿಗೆ ಹೋಗಿ ದುರ್ಯೋಧನನನ್ನು ಕೊಳದಿಂದ ಹೊರಗೆ ಹೊರಡಿಸಲು ಮರ್ಮೋದ್ಘಾಟಕವಾಗಿ ಮಾತನಾಡುವರು. 'ಎನ್ನ ಸರಂಗೇಳ್ದಲ್ಲದೆ ಈ ಬೂತು ಪೊಱಮಡುವನಲ್ಲಂ, ಈತಂಗಾನೆ ಬಲ್ಲೆನ್, ಉಸಿರದಿರಿಂ' ಎಂದು ಸಕಳ ದಿಗ್ವಳಯ ಭರಿತ ಮಹಾಸಿಂಹನಾದದಿಂದ ಗರ್ಜಿಸಿದ ಭೀಮಸೇನನ ಆರ್ಭಟವನ್ನು ಕೇಳಿ ಸೈರಿಸಲಾರದೆ 'ಕಿಡುಗುಂ ಮಚ್ಚೌರ್ಯಂ' ಎಂದು ಉದ್ಧತಂ ರೌದ್ರಗದಾದಂಡಮಂ ಪ್ರಚಂಡಮಂ ಆಗಿ ಸೆಱಗಿಲ್ಲದ ಕಲಿತನದಿಂ ಕೊಳದಿಂ ಪೊಱಮಟ್ಟು' ಬರುವನು. ಅವನನ್ನು ನೋಡಿ ಧರ್ಮನಂದನನು ಈಗಲೂ ಭೂಮಿಯನ್ನು ವಿಭಾಗಿಸಿಕೊಂಡು ಸ್ನೇಹದಿಂದಿರೋಣವೆನ್ನುವನು. ಛಲದಂಕಮಲ್ಲನೂ ಅಚಲಿತಮನಸ್ಕನೂ ಆದ ದುರ್ಯೋಧನನಿಗೆ ಇದು ಒಪ್ಪಿಗೆಯಾಗುವುದಿಲ್ಲ. ಒಡನೆಯೇ ರಾಜರಾಜನು ದುಶ್ಶಾಸನನನ್ನು ಕೊಂದ ಭೀಮನು ಇನ್ನೂ ಜೀವದಿಂದಿರುವಾಗ ಸಂಧಿಯೇ? ಯುದ್ಧವನ್ನೆ ಕೈಗೆತ್ತಿಕೊಂಡಿದ್ದೇನೆ' ಎಂದು ಹೇಳುವನು. ಅಷ್ಟರಲ್ಲಿ ತೀರ್ಥಯಾತ್ರೆಯನ್ನು ಮುಗಿಸಿಕೊಂಡು ಅಲ್ಲಿಗೆ ಬಂದ ಬಲದೇವನು ತನಗೆ ನಮಸ್ಕಾರ ಮಾಡಿದ ಕೌರವಚಕ್ರವರ್ತಿಗೆ ಆಶೀರ್ವದಿಸಿ ಅವನನ್ನು ಆ ಸ್ಥಿತಿಗೆ ತಂದ ಮುರಾಂತಕನನ್ನೂ ಪಾಂಡವರನ್ನೂ ನೋಡಿ ಕೋಪಿಸಿಕೊಂಡು ಮಾನಮೇರುವಾದ ದುರ್ಯೋಧನನನ್ನು ಕುರಿತು 'ನೀಂ ಮರುಳ್ತನಮನೇಕೆ ಮಾಡಿದೆ? ಎಂದು ಕೇಳಲು ಅವನು ಹೀಗೆಂದು ಉತ್ತರ ಕೊಡುವನು-

> **ಹರಿಯೆಂದಂದಂ, ಅದಂತೆ, ಪಾಂಡುತನಯರ್ ನಿರ್ದೋಷಿಗಳ್, ತಥ್ಯಮಿಂ**
> **ತು, ರಣಸ್ಥಾನದೊಳ್, ಇನ್ನೆರಬ್ಬುಡಿವೆನೆ? ಮದ್ಬಂಧುಶೋಕಾಗ್ನಿಯಿಂದೆ,**
> **ಉರಿದಪ್ಪೆಂ, ತೊಡರ್ದೆನ್ನನ್, ಇಂ ಬಡು, ವಿರೋಧಿಕ್ಷ್ಮಾಪರ್, ಎನ್ನೀ ಗದಾ**
> **ಪರಿಘಾಘಾತದಿಂ, ಅಲ್ಗೆ ತಲ್ಗೆ ಮಡಿದು, ೯೯, ಅಲ್ಬ್ಯಾಡದೇಂ ಪೋಪರೇ?**

ಎಂತಹ ಮಾತು! ಮಹಾನುಭಾವನಿಗೆ ಮಾತ್ರ ಸಾಧ್ಯ.

ಮುಂದೆ ಗದಾಯುದ್ಧವು ಪ್ರಾರಂಭವಾಗುವುದು. ಭೀಮ ದುರ್ಯೋಧನರಿಬ್ಬರೂ ಸಿಡಿಲೆರಗುವಂತೆ ಎರಗಿ ಯುದ್ಧಮಾಡುವರು. ಭೀಮನು ದುರ್ಯೋಧನನ ಗದಾಪ್ರಹಾರದಿಂದ ಅಚೇತನನಾಗಿ ನೆಲಕ್ಕೆ ಬೀಳುವನು. ಆ ಸಮಯದಲ್ಲಿ ಪಾಂಡವ ವಿರೋಧಿಯಾದ ದುರ್ಯೋಧನನು ಭೀಮನನ್ನು ಹೊಡೆದು ಮುಗಿಸಿ ಬಿಡಬಹುದಾಗಿತ್ತು. ಆದರೆ ಪಂಪನ ಕೌರವ ಧರ್ಮಿಷ್ಠ. ಅಧರ್ಮಯುದ್ಧದಲ್ಲಿ ಕೈ ಹಾಕಲು ಅವನಿಗೆ ಮನಸ್ಸು ಬಾರದು. ಆದುದರಿಂದ ಅವನು 'ಬಿಟ್ಟನನ್ ಇಱಿಯೆನ್' ಎಂದು ಪವಮಾನ ಮಾರ್ಗದೊಳ್ ಅಲ್ಪಾಂತರದೊಳ್ ಗದೆಯಂ ಬೀಸಿದನ್'. ಗದೆಯ ಗಾಳಿಯಿಂದೆಚ್ಚೆತ್ತ ಭೀಮನು ಪುನಃ ಗದಾಯುದ್ಧಕ್ಕೆ ಪ್ರಾರಂಭ ಮಾಡಿ ಕೃಷ್ಣನ ಸೂಚನೆಯ ಪ್ರಕಾರ ಕುರುರಾಜನ ತೊಡೆಗಳೆರಡನ್ನೂ ಒಡೆಯುವನು. ಧಾರ್ತರಾಷ್ಟ್ರನು ಇಳಾತಳದಲ್ಲಿ ಕೆಡೆಯುವನು. 'ಭೀಮಸೇನ ಚರಣಪ್ರಹರಣಗಳಿತ ಶೋಣಿತಾರ್ದ್ರಮೌಳಿಯುಮಾಗಿ ಕೋಟಲೆಗೊಳ್ಳುತ್ತಿದ್ದ ಕೌರವೇಶ್ವರನಲ್ಲಿಗೆ ಅಶ್ವತ್ಥಾಮನು ಬಂದು 'ಎನ್ನಂ ಬಂಚಿಸಿ ಪೋದುದಱಿಕೊಳ್ ನಿನಗೆ

ಪಗೆವರಿಂದಿಸಿತೆಡಱಾಯ್ತು ಆದಿತ್ಯತೇಜ ಬೆಸಸು, ಇದಿರಾದ ಪೃಥಾಸುತನುಟಿಯಲೀಯದೆ ಕೊಲ್ವೆಂ' ಎನ್ನಲು ಫಣಿಕೇತನನು ನೆತ್ತರ ಧಾರೆಯಿಂ ಮೆತ್ತಿದ ಕಣ್ಗಳನೊತ್ತಂಬದಿಂ ತೆಱೆದು ಅಶ್ವತ್ಥಾಮನ ಮೊಗಮಂ ನೋಡಿ

> **ಎನಗಿನಿತೊಂದವಸ್ಥೆ ವಿಧಿಯೋಗದಿನಾದುದು, ಇದರ್ಕೆ ನೀನಟಿ**
> **ಲ್ವು, ಇನಿತು ಮನಃಕ್ಷತಂಬಡದಿರು, ಆಗದು ಪಾಂಡವರಂ ಗೆಲಲ್ ಪುರಾ**
> **ತನಪುರುಷಂ ಮುರಾರಿ ಕೆಲದೊಳ್ ನಿಲೆ, ನೀಂ ಕೊಲಲಾರ್ಪೊಡೆ, ಆಗದಂ**
> **ಬೆನೆ ತಱೆದೊಟ್ಟ ವೈರಿಗಳನ್ ಎನ್ನಸುವುಳ್ಳಿನಂ, ಎಯ್ದೆ ವಾ ಗಡಾ ॥**

ಎಂತಹ ಛಲ! ಅಸಾಧ್ಯವೆಂದು ಚೆನ್ನಾಗಿ ತಿಳಿದಿದ್ದರೂ ಕೊನೆಯ ಆಸೆ! ಅಶ್ವತ್ಥಾಮನು ಪಾಂಡವರ ನಿಕ್ಕಿದೊ, ಒಸಗೆವಾತನೀಗಳ್ ಕೇಳಿಸುವೆನ್ ಎಂದು ಹೋಗಿ ಉಪಪಾಂಡವರನ್ನು ಪಾಂಡವರೆಂದು ಭ್ರಮಿಸಿ ಅವರುತ್ತಮಾಂಗಗಳನ್ನು ಕತ್ತರಿಸಿ ಸೂರ್ಯೋದಯಕ್ಕೆ ಸರಿಯಾಗಿ ದುರ್ಯೋಧನನಲ್ಲಿಗೆ ಬಂದು 'ಕೊಳ್ ನಿನ್ನ ನಚ್ಚಿನ ಪಾಂಡವರ ತಲೆಗಳನ್' ಎಂದು ಮುಂದಿಡಲು ದುರ್ಯೋಧನನು ನೋಡಿ

> **ಬಾಲಕಮಳಂಗಳಂ ಕಮ**
> **ಳಾಲಯದಿಂ ತಿಱೆದು ತರ್ಪವೋಲ್ ತಂದ್ಯೆ ನೀಂ**
> **ಬಾಲಕರ ತಲೆಗಳ್ ಅಕ್ಕಟ**
> **ಬಾಲಕ ವಧದೋಷಮೆಂತು ನೀಂ ನೀಗಿದಪ್ಪೆ ॥**

ಎಂದು ನಿಟ್ಟುಸಿರು ಬಿಟ್ಟು ತನ್ನ ಕೊನೆಯುಸಿರನ್ನೆಳೆಯುವನು. ಈ ವಿಧವಾದ ಸಾವು ಸಾವಲ್ಲ, ಸೋಲು ಸೋಲಲ್ಲ. ಒಂದು ವಿಧವಾದ ವಿಜಯವೇ! ಈ ತೆರನಾದ ಮರಣವು ಅವಮಾನಕರವಾದುದಲ್ಲ, ಕೀರ್ತಿಕರ. ಹೇಡಿಯಂತೆ ಸಂಧಿಮಾಡಿಕೊಂಡು ತನುಜಾನುಜರ ಸಾವಿರ ಮನಃಕ್ಷತದಿಂದ ಸದಾ ಕೊರಗುತ್ತ ಜೀವಿಸುವುದಕ್ಕಿಂತ ವೀರ ಕ್ಷತ್ರಿಯನಂತೆ ಅಭಿಮಾನವನ್ನೇ, ಛಲವನ್ನೇ, ಹಗೆಯನ್ನೇ ಮುಂದಿಟ್ಟು ಧೈರ್ಯದಿಂದ ಕಾದಿ ಸಾಯುವುದು ಎಷ್ಟೋ ಮೇಲು. ಹೀಗೆ ಸತ್ತವನು ಸರ್ವರ ಶ್ಲಾಘನೆಗೂ ಅರ್ಹ. ಅದಕ್ಕಾಗಿಯೇ ಕವಿತಾಗುಣಾರ್ಣವನು ಅಭಿಮಾನಘನತೆಗೆ ಮೆಚ್ಚಿ ಮುಂದಿನ ಅವನ ಚರಮಗೀತೆಯನ್ನು ಹಾಡಿದನು.

> **ನುಡಿದುದನ್, ಎಯ್ದೆ ತುತ್ತತುದಿಯೆಯ್ದುವಿನಂ ನುಡಿದಂ, ವಲಂ ಚಲಂ**
> **ಬಿಡಿಮುದನ್, ಎಯ್ದೆ ಮುಂ ಪಿಡಿದುದಂ ಪಿಡಿದಂ, ಸಲೆ ಪೂಣ್ದ ಪೂಣ್ಕೆ ನೇ**
> **ರ್ಪಡೆ ನಡೆವನ್ನೆಗಂ ನಡೆದನ್, ಅಳ್ಕದೆ ಬಳ್ಕದೆ ತನ್ನೊಡಲ್ ಪಡ**
> **ಲ್ವಡುವಿನಂ, ಅಣ್ಮುಗುಂದನೆ ದಲ್, ಏನಭಿಮಾನಧನಂ ಸುಯೋಧನಂ ॥**

ಹೀಗೆ ಎಲ್ಲ ದೃಷ್ಟಿಯಿಂದಲೂ ಪಂಪನು ಪ್ರತಿಭಾಶಾಲಿಯಾಗಿದ್ದುದರಿಂದಲೇ ಅವನ ತರುವಾಯ ಬಂದ ಕವಿಗಳಿಗೆ ಅವನು ಪ್ರೇರಕನಾದನು. ಪಂಪನ ದುರ್ಯೋಧನನಿಂದ ಆಕರ್ಷಿತನಾದ, ಮುಂದೆ ಬಂದ ಕವಿಚಕ್ರವರ್ತಿ ರನ್ನನು ದುರ್ಯೋಧನನನ್ನೇ ಪ್ರತಿನಾಯಕನನ್ನಾಗಿ ಮಾಡಿ 'ಸಾಹಸಭೀಮ ವಿಜಯ'ವೆಂಬ ಉತ್ತಮ ಗ್ರಂಥವನ್ನು ರಚಿಸಿದನು. ಅವನ ದೃಷ್ಟಿಯಿಂದ ಅದು ಭೀಮವಿಜಯವಾದರೂ ವಾಚಕರಿಗೆ 'ರಾಜರಾಜವಿಜಯ'ದಂತೆಯೇ ಭಾಸವಾಗುವುದು. ರನ್ನನ ಕವಿಚಕ್ರವರ್ತಿತ್ವಕ್ಕೆ ಪಂಪನು

ಬಹುಮಟ್ಟಿಗೆ ಕಾರಣ. ಅವನ 'ಗದಾಯುದ್ಧ'ವು ಪಂಪಭಾರತದ ಹದಿಮೂರನೆಯ ಆಶ್ವಾಸದ ೧೦೮ ಪದ್ಯಗಳಲ್ಲಿ ಶಲ್ಯವಧೆಯ ವಿಚಾರವಾದ ೨೮ ಪದ್ಯಗಳನ್ನುಳಿದ ಭಾಗಗಳ ವಿಸ್ತರಣವೇ ಆಗಿದೆ. ವಸ್ತುವರ್ಣನೆ; ಶೈಲಿ ಮೊದಲಾದವುಗಳಲ್ಲಿ ಬಹುಭಾಗ ಪಂಪನದಾಗಿರುತ್ತದೆ. ರನ್ನನ ದುರ್ಯೋಧನನ ಪಾತ್ರಚಿತ್ರಣ ಪಂಪನ ಪ್ರೇರಣೆಯಿಂದಲೇ ಆಗಿರಬೇಕು.

ಕೊನೆಯಲ್ಲಿ ಈ ಪ್ರಬಂಧವನ್ನು ಮುಗಿಸುವ ಮೊದಲು ಪಂಪನ ದೇಶಾಭಿಮಾನದ ವಿಷಯವಾಗಿ ಒಂದು ಮಾತನ್ನು ಹೇಳುವುದು ಆವಶ್ಯಕ. ಆಂಗ್ಲಭಾಷೆಯ ಗದ್ಯಗ್ರಂಥಕಾರರಲ್ಲಿ ಉದ್ದಾಮನಾದ ಮಯರ್ಸ್ ಎಂಬುವನು ವರ್ಡ್ಸ್‌ವರ್ತ್ ಕವಿಯ ಜೀವನ ಚರಿತ್ರೆಯನ್ನು ಬರೆಯುತ್ತ ಅವನ ದೇಶಾಭಿಮಾನವನ್ನು ಕುರಿತು ಚರ್ಚಿಸುವಾಗ ಹೀಗೆಂದು ಹೇಳುವನು-ಸ್ವದೇಶದ ಹಿತಕ್ಕಾಗಿಯೂ ಏಳಿಗೆಗಾಗಿಯೂ ಶರೀರವನ್ನರ್ಪಿಸಿ ಹೋರಾಡುವ ವೀರರು ಹೇಗೆ ದೇಶಾಭಿಮಾನಿಗಳೋ ಹಾಗೆಯೇ ಕವಿಯು ಅಂತಹ ದೇಶಾಭಿಮಾನಿಯೆಂದು ಕರೆಯಿಸಿಕೊಳ್ಳಲರ್ಹನು. ಇವನು ಕವಚವನ್ನು ಧರಿಸಿ ಬಿಲ್ಲು ಬಾಣಗಳನ್ನು ಹಿಡಿದು ರಥವನ್ನೇರಿ ಯುದ್ಧರಂಗದಲ್ಲಿ ವೈರಿಗಳೊಡನೆ ಯುದ್ಧ ಮಾಡಬೇಕಾಗಿಲ್ಲ. ಕವಿಯಾದವನು ದೇಶಕ್ಕಾಗಿ ಹೋರಾಡುವ ದೇಶಭಕ್ತರ ಸಾಹಸಕಾರ್ಯಗಳನ್ನು ತನ್ನಲ್ಲಿರುವ ಕವಿತಾಶಕ್ತಿಯಿಂದ ಗ್ರಂಥರೂಪದಲ್ಲಿ ಚಿರಸ್ಥಾಯಿಯಾಗಿ ಮಾಡುವುದರಲ್ಲಿ ನಿರತನಾಗುವುದು ತನ್ನ ದೇಶಾಭಿಮಾನದ ಹೆಗ್ಗುರುತು. ಯಾವ ಕವಿಯಲ್ಲಿ ಈ ತೆರನಾದ ದೇಶಾಭಿಮಾನವಿರುವುದಿಲ್ಲವೋ ಅಂತಹವನು ಇಂತಹ ಕಾವ್ಯವನ್ನು ರಚಿಸಲಾರ. ರಚಿಸಿದರೂ ನಿರ್ಜೀವವೂ ಕಲಾರಹಿತವೂ ಆಗುತ್ತದೆ ಎಂದು ಹೇಳಿ ವರ್ಡ್ಸ್‌ವರ್ತ್ ಕವಿಯನ್ನು ದೇಶಾಭಿಮಾನಿಗಳ ಗುಂಪಿನಲ್ಲಿ ಸೇರಿಸಿರುವನು. ಇದು ವಾಸ್ತವವಾದ ಅಂಶ. ಇಂತಹವರು ಯಾವಾಗಲೂ ದೇಶಕ್ಕಾಗಿ ಮಡಿಯಲು ಸಿದ್ಧರಾಗಿರುತ್ತಾರೆ. ಇಂತಹ ದೇಶಾಭಿಮಾನವು ಪಂಪನಲ್ಲಿ ತುಂಬಿ ತುಳುಕುತ್ತಿರುವುದು ಅವನ ಕಾವ್ಯಗಳಲ್ಲಿ ಸ್ವಯಂಪ್ರಕಾಶವಾಗಿದೆ.

ಪಂಪನ ದೇಶವಾತ್ಸಲ್ಯಗಳನ್ನು ವ್ಯಕ್ತಗೊಳಿಸುವ ಪದ್ಯಗಳು ಅವನ ಕಾವ್ಯಗಳಲ್ಲಿ ನಮಗೆ ಹೇರಳವಾಗಿ ಸಿಕ್ಕುವುವು. ಅರ್ಜುನನು ದಿಗ್ವಿಜಯಾರ್ಥವಾಗಿ ಬರುತ್ತಾ ಬನವಾಸಿಯನ್ನು ಸೇರುವನು. ಈ ದೇಶವನ್ನು ನೋಡಿ ಅವನ ಹೃದಯವು ಆನಂದಭರಿತವಾಗುವುದು. ಅಲ್ಲಿ ನೆಲೆಗೊಂಡಿದ್ದ ಬಗೆಬಗೆಯ ಸಂಪತ್ತು, ಪುಷ್ಪವಾಟಿ, ಕಾಸಾರ, ಲತಾಗೃಹ, ನಂದನವನ-ಇವು ಯಾವ ದಾರಿಗನಿಗಾದರೂ ಆನಂದ ವನ್ನುಂಟುಮಾಡುವುದು. ಅಲ್ಲಿಯ ನಿವಾಸಿಗಳು ಸ್ವರ್ಗಸುಖವನ್ನನುಭವಿಸುತ್ತಿರುವರು. ಇಂತಹ ನಾಡಿನಲ್ಲಿ ಒಂದು ಸಲ ಜನ್ಮವೆತ್ತುವುದೂ ಪುಣ್ಯಫಲದಿಂದಲೇ. ಇದಕ್ಕಾಗಿ ಮನುಷ್ಯನು ಎಷ್ಟು ತಪಸ್ಸು ಮಾಡಿದರೂ ಸಾರ್ಥಕವೇ. 'ತುಂಬಿಯಾಗಿ ಮೇಣ್ ಕೋಗಿಲೆಯಾಗಿ ಪುಟ್ಟುವುದು ಬನವಾಸಿ ದೇಶದೊಳ್'! ಇದೇ ಅಲ್ಲವೇ ಹುಟ್ಟಿದುದಕ್ಕೆ ಸಾರ್ಥಕ! ಪಂಪನು ಬಾಲ್ಯದಲ್ಲಿ ಬನವಾಸಿಯಲ್ಲಿ ಬಹುಕಾಲ ಇದ್ದು ಅದರ

ಸವಿಯನ್ನುಂಡಿರಬೇಕು. ಆದುದರಿಂದಲೇ ಅವನೆಲ್ಲಿದ್ದರೂ ಅದರ ನೆನಪು ಬಂದೇ ಬರುತ್ತದೆ. ಅದಕ್ಕಾಗಿಯೇ ಅವನು ಇಂದ್ರಪ್ರಸ್ಥಪುರದಿಂದ ದೇಶಾಟನೆಗೆ ಹೊರಟುಬಂದ ಅರ್ಜುನನ ಬಾಯಲ್ಲಿ ಅದರ ಮೇಲ್ಮೆಯನ್ನು ಹಾಡಿಸಿರುವುದು. ಅಲ್ಲಿರುವವರೆಲ್ಲರೂ 'ಚಾಗದ, ಭೋಗದ, ಅಕ್ಕರದ, ಗೇಯದ, ಗೊಟ್ಟಿಯ, ಅಲಂಪಿನ, ಇಂಪುಗಳ್ಗೆ, ಆಗರಮಾದ ಮಾನಿಸರೆ.' ಅಲ್ಲಿಯ 'ಅಮರ್ದಂ ಮುಕ್ಕುಳಿಪಂತುಟಪ್ಪ ಸುಸಿಲ್ ಬಂದಿಂಪಂ ತಗುಳ್ದೊಂದು ಗೇಯಮುಂ ಆದ ಅಕ್ಕರಗೊಟ್ಟಿಯುಂ ಚದುರರ, ಒಳ್ವಾತುಂ ಕುಳಿರ್ ಕೋಟ್ವಿ ಜೊಂಪಮುಂ' ಎಂತಹವರನ್ನೂ ಆಕರ್ಷಿಸುತ್ತದೆ. ಆದುದರಿಂದಲೇ

**ತೆಂಕಣ ಗಾಳಿ ಸೋಂಕಿದೊಡಂ, ಒಳ್ನುಡಿಗೇಳ್ದೊಡಂ ಇಂಪನಾಳ್ದ ಗೇ**
**ಯಂ ಕಿವಿವೊಕ್ಕೊಡಂ ಬರಿದ ಮಲ್ಲಿಗೆಗಂಡೊಡಂ, ಆದ ಕೆಂದಲಂ**
**ಪಂ ಗೆಡೆಗೊಂಡೊಡಂ ಮಧುಮಹೋತ್ಸವಮಾದೊಡಂ ಏನನೆಂಬೆನ್ ಆ**
**ರಂಕುಸಮಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿದೇಶಮಂ ॥**

ಎಂದು ಪಂಪನು ಹಾತೊರೆಯುತ್ತಿರುವುದು. ಪಂಪನ ದೇಶವಾತ್ಸಲ್ಯದ ಪರಾಕಾಷ್ಠೆ ಇಲ್ಲಿ ಬಹು ಸ್ಪಷ್ಟವಾಗಿ ಎದ್ದು ಕಾಣುತ್ತದೆ.

ಪಂಪನು ಅರಿಕೇಸರಿಯನ್ನು ಕಥಾನಾಯಕನನ್ನಾಗಿ ಮಾಡಿರುವುದೂ ದೇಶಾಭಿಮಾನದಿಂದಲೇ. ಕನ್ನಡನಾಡಿನ ವೀರರ ಕೀರ್ತಿಯನ್ನು ಚಿರಸ್ಥಾಯಿಯನ್ನಾಗಿ ಮಾಡುವುದಕ್ಕಾಗಿಯೇ. ಖಾಂಡವದಹನಪ್ರಕರಣದಲ್ಲಿ ಪಂಪನು ಅರಿಕೇಸರಿಯ ಸತ್ಯಸಂಧತೆಯನ್ನು ವ್ಯಕ್ತಗೊಳಿಸುವ ಮುಂದಿನ ಎರಡು ಪದ್ಯಗಳನ್ನು ಕೊಟ್ಟಿದ್ದಾನೆ.

**ಎರೆದನ ಪೆಂಪು ಪೇೞ್ವೊಡನಲಂ, ಪೊಣರ್ವಾತನ ಪೆಂಪು ಪೇೞ್ವೊಡಾ**
**ಸುರಪತಿ, ಕೊಟ್ಟ ತಾಣದೆಡೆ ಪೇೞ್ವೊಡಂ, ಆ ಯಮುನಾನದೀತಟಾಂ**
**ತರಂ ಒಸೆದಿತ್ತನಾನ್ ಎೞೆಯೆ ಕೇಳ್ದನ್, ಇಳಾಧರ ನೀನ್ ಇದರ್ಕೆ ಮಾ**
**ತೆರಡಣಮಾಡಲಾಗದು, ಇದು ಸೈಪಿನೊಳಲ್ಲದೆ ಕೂಡಿ ಬರ್ಕುಮೇ?**

**ಒತ್ತಿ ತಱುಂಬಿ ನಿಂದ ರಿಪುಭೂಜಸಮಾಜದ ಬೇರ್ಗಳಂ ನಭ**
**ಕೈತ್ತದೆ ಬಂದು ತನ್ನ ಮಱೆವೊಕ್ಕೊಡೆ ಕಾಯದೆ ಚಾಗದೊಳ್ಪಿನ**
**ಚೊತ್ತದೆ ಮಾಣ್ಬು ಬಾೞ್ವ ಪುೞುವಾನಸನೆಂಬನ್, ಅಜಾಂಡಮೆಂಬುದೊಂ**
**ದತ್ತಿಯ ಪಣ್ಣೊಳಿರ್ಪ ಪುೞುವಲ್ಲದೆ ಮಾನಸನೇ ಮುರಾಂತಕಾ ॥**

ಈ ಪದ್ಯಗಳನ್ನು ಬರೆಯುತ್ತಿರುವಾಗ ಪಂಪನ ಆದರ್ಶರಾಜನ ಚಿತ್ರ ಹೇಗಿದ್ದಿರಬೇಕು? ಸರಸ್ವತಿಗೆ ವಿಳಾಸಮಂ ಪೊಸತುಮಾಡುವ ಈ ಪಂಪನ ವಾಗ್ವಿಲಾಸವನ್ನು ಹೋಲುವ ಕವೀಂದ್ರರಾರಿದ್ದಾರೆ? ಆದುದರಿಂದಲೇ ಪಂಪನು ನಾಡೋಜನಾದುದು. ಆದುದರಿಂದಲೇ ಅವನ ಕಾವ್ಯಗಳು ಮುನ್ನಿನ ಕಾವ್ಯಗಳನ್ನು ಇಕ್ಕಿ ಮೆಟ್ಟಿದುದು.

ಒಟ್ಟಿನಲ್ಲಿ 'ಪಂಪನ ಕವಿತಾಧೋರಣೆಯು ಅಸಾಮಾನ್ಯವಾದುದು. ಈತನ ನವೀನ ಕಲ್ಪನೆಗಳ ಪ್ರಾವೀಣ್ಯತೆಯೂ ರಸಾನುಗುಣವಾಗಿ ವಸ್ತುವನ್ನು (ಕಥಾಶರೀರವನ್ನು) ರಚಿಸುವ ಮತ್ತು ವಸ್ತುವಿಗೆ ತಕ್ಕಂತೆ ರಸವನ್ನು ಹಿಳಿದು ಬೆರೆಯಿಸುವ ಕೌಶಲವೂ ರಸಕ್ಕೆ ತಕ್ಕಂತೆ ಛಂದಸ್ಸನ್ನು ಯೋಜಿಸುವ ಪ್ರೌಢಿಮೆಯೂ, ಕಾವ್ಯದ ಒಟ್ಟು ಮೆಯ್ಯ ಅಂದವು ಸ್ವಲ್ಪವೂ

ಕೆಡದಂತೆ ಅಂಗೋಪಾಂಗಗಳನ್ನು ಹೊಂದಿಕೆಗೊಳಿಸುವ ಚತುರತೆಯೂ ಪಾತ್ರಗಳಿಗೆ ಜೀವಕಳೆಯನ್ನು ತುಂಬಿ ಮೈವೆತ್ತು ಎದುರಿಗೆ ನಿಲ್ಲುವಂತೆ ಮಾಡುವ ರಚನಾಚಮತ್ಕಾರವೂ, ಅನೌಚಿತ್ಯಗಳನ್ನು ತಕ್ಕಂತೆ ಮಾರ್ಪಡಿಸಿ ಸಹಜಗೊಳಿಸುವ ಶಕ್ತಿಯೂ, ಪ್ರಾಚೀನಕಾವ್ಯಗಳಲ್ಲಿ ದೊರೆಯುವ ಸಾರವಾದ ಆಶಯಗಳನ್ನು ಆರಿಸಿ ತೆಗೆದು ತಕ್ಕಂತೆ ಮಾರ್ಪಡಿಸಿ ಸೇರಿಸಿಕೊಳ್ಳುವ ಪ್ರಜ್ಞಾವೈಭವವೂ, ಅಭಿಪ್ರಾಯವು ಥಟ್ಟನೆ ಮನಸ್ಸಿಗೆ ಹಿಡಿಯುವಂತೆ ಮಾಡುವ ಸಾಮರ್ಥ್ಯವೂ, ಸನ್ನಿವೇಶಕ್ಕೊಪ್ಪುವಂತೆಯೂ ಮಿತಿಮೀರದಂತೆಯೂ ಓದುಗರಲ್ಲಿ ನಿರ್ಮಲಭಕ್ತಿ ಮೂಡುವಂತೆಯೂ ಮಾಡುವ ಸ್ತೋತ್ರಪಾಠಗಳ ಗಾಂಭೀರ್ಯವೂ, ಬಳಕೆಯಲ್ಲಿರುವ ಗಾದೆಗಳನ್ನು ಒಪ್ಪುವಂತೆ ಅಲ್ಲಲ್ಲಿ ಪ್ರಯೋಗಿಸುವ ಔಚಿತ್ಯವೂ, ಅನೇಕ ವಾಕ್ಯಗಳಲ್ಲಿ ಹೇಳಬೇಕಾದ ವಿಷಯವನ್ನು ಕೆಲವೇ ಮಾತುಗಳಲ್ಲಿ ಅಡಗಿಸಿ ಅರ್ಥವಾಗುವಂತೆ ಅಂದವಾಗಿ ಹೇಳುವ ನೈಪುಣ್ಯವೂ, ಬಹುಪದ ಪ್ರಯೋಗದಕ್ಷತೆಯೂ, ಶೈಲಿಯ ಸರಳತೆಯೂ, ಬಂಧದ ಬಿಕ್ಕಟ್ಟೂ, ವರ್ಣನೆಗಳ ರಮ್ಯತೆಯೂ, ಅಲಂಕಾರಗಳ ಸಹಜಭಾವವೂ ಕಾವ್ಯಾಂಗಗಳಾದ ಇತರ ಸದ್ಭಾವಗಳ ರಚನವಿಚಕ್ಷಣತೆಯೂ ಈ ಕವಿಯನ್ನು 'ಕರ್ಣಾಟಕ ಕವಿತಾ ಸಾರ್ವಭೌಮನನ್ನಾಗಿ ಮಾಡಿರುವುವು' (ಪಂಪಭಾರತದ ಉಪೋದ್ಘಾತ, ಕರ್ಣಾಟಕ ಸಾಹಿತ್ಯಪರಿಷತ್ತಿನ ಪ್ರಕಟಣೆ ೧೯೩೧)

**ಛಂದಸ್ಸಿನ ವಿಚಾರ :–** ಉಭಯಭಾಷಾಪಂಡಿತನಾದ ಪಂಪನು ತನ್ನ ಎರಡು ಕಾವ್ಯಗಳಲ್ಲಿಯೂ ವಿವಿಧ ಜಾತಿಯ ಕನ್ನಡ ಸಂಸ್ಕೃತ ಛಂದಸ್ಸುಗಳನ್ನು ಉಪಯೋಗಿಸಿದ್ದಾನೆ. ಅವುಗಳಲ್ಲಿ ಕನ್ನಡದ ಜಾಯಮಾನಕ್ಕೆ ಹೊಂದಿಕೊಂಡಿರುವ ಸಂಸ್ಕೃತದ ಆರ್ಯಾ ಪ್ರಾಕೃತದ ಸ್ಕಂದಕಕ್ಕೆ ಹೊಂದಿಕೊಂಡಿರುವ ಕಂದಪದ್ಯಗಳೇ ಹೆಚ್ಚಿನ ಭಾಗದವು. ಪಂಪಭಾರತದ ೧೬೦೭ ಮತ್ತು ಆದಿಪುರಾಣದ ೧೬೩೦ ಪದ್ಯಗಳಲ್ಲಿ ಕ್ರಮವಾಗಿ ಅವು ೭೩೦ ಮತ್ತು ೯೫೦ ಆಗಿರುತ್ತವೆ. ಅವುಗಳನ್ನು ಬಿಟ್ಟರೆ ಕನ್ನಡದಲ್ಲಿ ಸುಪ್ರಸಿದ್ಧವಾದ ಆರು ಸಂಸ್ಕೃತವೃತ್ತಗಳಾದ ಉತ್ಪಲಮಾಲೆ, ಶಾರ್ದೂಲ, ಸ್ರಗ್ಧರೆ ಮತ್ತು ಅವುಗಳ ಮಾರ್ಪಾಟೇ ಆಗಿರುವ ಚಂಪಕಮಾಲಾ, ಮತ್ತೇಭವಿಕ್ರೀಡಿತ ಮಹಾಸ್ರಗ್ಧರೆಗಳು ಪ್ರಧಾನಸ್ಥಾನವನ್ನು ಪಡೆದಿರುತ್ತವೆ. ಇವುಗಳಲ್ಲಿಯೂ ಚಂಪಕಮಾಲೆಗೆ ಅಗ್ರಸ್ಥಾನ. ಪಂಪಭಾರತದಲ್ಲಿಯೇ ಸುಮಾರು ೪೧೦ ಸಂಖ್ಯಾಕವಾಗಿವೆ. ಅವುಗಳಲ್ಲರ್ಧ ಮತ್ತೇಭವಿಕ್ರೀಡಿತವೂ ಅದರಲ್ಲರ್ಧ, ಉತ್ಪಲಮಾಲೆಯೂ ಇವೆ. ಈ ಸುಪ್ರಸಿದ್ಧವಾದ ಆರು ವೃತ್ತಗಳಲ್ಲದೆ ಪೃಥ್ವೀ, ತರಳ, ಹರಿಣ, ಮಲ್ಲಿಕಾಮಾಲೆ, ಖಚರಪ್ಲುತ, ಅನವದ್ಯ ಮೊದಲಾದ ವೃತ್ತಗಳು ಉಪಯುಕ್ತವಾಗಿವೆ. ಅಪರೂಪವಾಗಿ ಮಂದಾಕ್ರಾಂತ, ಅನುಷ್ಟುಪ್, ಪುಷ್ಪಿತಾಗ್ರಗಳನ್ನು ಕವಿಯು ಉಪಯೋಗಿಸಿದ್ದಾನೆ.

ಕನ್ನಡ ಅಂಶಛಂದಸ್ಸಾದ ಅಕ್ಕರ ಮತ್ತು ಪಿರಿಯಕ್ಕರಗಳನ್ನು ಯಶಸ್ವಿಯಾಗಿ ಬಳಸಿದ್ದಾನೆ. ಆದರೆ ಇವುಗಳಿಗೆ ವಿಶೇಷ ವ್ಯತ್ಯಾಸ ಕಾಣುವುದಿಲ್ಲ. ಮೂರು ರೀತಿಯ ರಗಳೆಗಳೂ ಇಲ್ಲಿ ಪ್ರಯೋಗವಾಗಿವೆ. ತ್ರಿಪದಿಯು ಬಹು ಅಪರೂಪವಾಗಿ

ಉಪಯುಕ್ತವಾಗಿದೆ. ಪಂಪನ ಛಂದೋವಿಲಾಸದಲ್ಲಿ ಇರುವ ವೈಶಿಷ್ಟ್ಯ, ಅವನಿಗೆ ಎಲ್ಲೆಲ್ಲಿ, ಯಾವ ಯಾವ ಪ್ರಕರಣದಲ್ಲಿ, ಯಾವ ಯಾವ ಛಂದಸ್ಸನ್ನು ಉಪಯೋಗಿಸಬೇಕೆಂಬ ವಿವೇಕ ಜ್ಞಾನ. ಅವನ ಈ ಜಾಣ್ಮೆಯಿಂದ ವರ್ಣಿತ ವಸ್ತುಗಳಿಗೆ ವಿಶೇಷ ಅರ್ಥ ವ್ಯಕ್ತಿತ್ವವೂ ನಾದಮಾಧುರ್ಯವೂ ಉಂಟಾಗುತ್ತದೆ. ಚಂಪೂಕೃತಿಗಳಾದ ಇವನ ಕೃತಿಗಳಲ್ಲಿ ಗದ್ಯಕ್ಕೂ ಪದ್ಯದಷ್ಟೇ ಪ್ರಭಾವವಿರುತ್ತದೆ. ಅನೇಕ ಗದ್ಯಭಾಗಗಳು ಛಂದೋರಹಿತವಾದ ಪದ್ಯಗಳಂತೆ ವಿಶೇಷನಾದಮಯವಾಗಿಯೂ ಇವೆ. ಅವನು ಮಾರ್ಗ ಮತ್ತು ದೇಸಿಗಳೆರಡಕ್ಕೂ ಸಮಾನವಾದ ಸ್ಥಾನವನ್ನೇ ಕೊಟ್ಟಿರುವುದರಿಂದ ಸಂಸ್ಕೃತ ಮತ್ತು ದೇಸೀ ಶಬ್ದಗಳ ಜೋಡಣೆ ಬಹು ರಂಜಕವಾಗಿರುತ್ತದೆ. ಅವನ ಕಾವ್ಯತತ್ತ್ವವನ್ನು ಸಿದ್ಧಾಂತಗೊಳಿಸುತ್ತವೆ. ಆದರೂ ಕಥಾನಿರೂಪಣೆಗೆ ಗದ್ಯವೂ ವರ್ಣನೆಗೆ ಪದ್ಯವೂ ಹೆಚ್ಚು ಹೊಂದಿಕೊಳ್ಳುವಂತೆ ಕಾಣುತ್ತದೆ. ಗದ್ಯಭಾಗದಲ್ಲಿ ಸಂಸ್ಕೃತ ಪದಗಳ ಮತ್ತು ಸಮಾಸಗಳ ಭಾಗ ಹೆಚ್ಚಿರುತ್ತದೆ. ಇಷ್ಟಾದರೂ ಶಾಸ್ತ್ರಗ್ರಂಥವಾದ ಆದಿಪುರಾಣದಲ್ಲಿರುವಷ್ಟು ಗದ್ಯಭಾಗವು ಲೌಕಿಕ ಕಾವ್ಯವಾದ ಪಂಪಭಾರತ ದಲ್ಲಿಲ್ಲ. ಆದುದರಿಂದಲೇ ಇದು ಪುರಾಣಕ್ಕಿಂತ ಹೆಚ್ಚು ಭಾವಪೂರ್ಣವಾಗಿದೆ.

**ಗ್ರಂಥಪಾಠ ಮತ್ತು ಮುದ್ರಣಗಳು** : ಪಂಪಭಾರತವು ಅತ್ಯುತ್ತಮ ಗ್ರಂಥವಾದರೂ ಅದರ ಶುದ್ಧಪಾಠವನ್ನು ನಿಷ್ಕರ್ಷಿಸಲು ಸಾಕಷ್ಟು ಹಸ್ತಪ್ರತಿಗಳು ಲಭ್ಯವಾಗಿಲ್ಲ. ಇದನ್ನು ಪೊತ್ತ ಮೊದಲನೆಯ ಸಲ ಮೈಸೂರುಪ್ರಾಚ್ಯಸಂಶೋಧನೆಯ ಇಲಾಖೆಯ ಮುಖ್ಯಾಧಿಕಾರಿಗಳಾಗಿದ್ದ ಮಿ॥ ರೈಸ್ ಸಿ.ಐ.ಇ. ಅವರು ಪ್ರಾಕ್ತನವಿಮರ್ಶವಿಚಕ್ಷಣರಾದ ಆರ್. ನರಸಿಂಹಾಚಾರ್ಯರ ಸಹಾಯದಿಂದ ೧೮೯೮ರಲ್ಲಿ ಮೊದಲನೆಯ ಸಲ ಪ್ರಕಟಿಸಿದರು. ಆ ಮುದ್ರಣವನ್ನು ಅವರು ಮೈಸೂರು ಅರಮನೆಯ ಸರಸ್ವತೀಭಂಡಾರದ ಓಲೆ ಪ್ರತಿ ಮತ್ತು ಭಂಡಾರ್‌ಕರ್ ಓರಿಯಂಟಲ್ ರಿಸರ್ಚ್ ಸೊಸೈಟಿಯ ಮತ್ತೊಂದು ತಾಳೆಯೋಲೆಯ ಪ್ರತಿಗಳ ಸಹಾಯದಿಂದ ಸಂಶೋಧಿಸಿದರು. ಮುಂದೆ ಬಹು ಕಾಲ ಅದರ ಪುನರ್ಮುದ್ರಣವಾಗಲಿಲ್ಲ. ೧೯೧೭ನೆಯ ವರ್ಷದಲ್ಲಿ ಸರ್ಕಾರದವರ ಅಭಿಪ್ರಾಯದಂತೆ ಕರ್ಣಾಟಕದ ಸಾಹಿತ್ಯ ಪರಿಷತ್ತಿನವರು ಪಂಡಿತರುಗಳ ಸಹಾಯದಿಂದ ಪ್ರಕಟಿಸಲು ಒಪ್ಪಿಕೊಂಡರು. ಮ। ರಾ। ಗಳಾದ ಎಸ್. ತಿಮ್ಮಪ್ಪಯ್ಯಶಾಸ್ತ್ರಿಗಳು, ತಿರುವಳ್ಳೂರು ಶ್ರೀನಿವಾಸ ರಾಘವಾಚಾರ್ಯರು, ಕಾನಕಾನ ಹಳ್ಳಿಯ ವರದಾಚಾರ್ಯರು, ಮೈಸೂರು ಸೀತಾರಾಮಶಾಸ್ತ್ರಿಗಳು-ಇವರುಗಳನ್ನೊಳಗೊಂಡ ಪಂಡಿತಮಂಡಳಿ ಈ ಕಾರ್ಯವನ್ನು ಆರಂಭಿಸಿತು. ಮುಂದೆ ಶ್ರೀ ಬೆಳ್ಳಾವೆ ವೆಂಕಟನಾರಾಯಣಪ್ಪನವರು ಪ್ರಧಾನ ಸಂಪಾದಕರಾದರು. ಅವರಿಗೆ ಪಂಡಿತ ಕೆ. ಭುಜಬಲಿಶಾಸ್ತ್ರಿಗಳು ಉತ್ತರಭಾರತದ ಆರಾ ಎಂಬ ಪುಸ್ತಕ ಭಂಡಾರದಲ್ಲಿದ್ದ ಪ್ರತಿಯನ್ನು ಕಳುಹಿಸಿ ಕೊಟ್ಟರು. ಸಂಪಾದಕರು ಮೇಲಿನ ಪಂಡಿತ ಮಂಡಳಿಯ ಸದಸ್ಯರ ಮತ್ತು ಇತರ ಪ್ರಸಿದ್ಧ ಕನ್ನಡ ಪಂಡಿತರುಗಳಾದ ಬಿ.ಎಂ. ಶ್ರೀಕಂಠಯ್ಯ, ಟಿ. ಎಸ್. ವೆಂಕಣ್ಣಯ್ಯ, ಎ. ಆರ್. ಕೃಷ್ಣಶಾಸ್ತ್ರಿ, ಎ. ಎನ್. ನರಸಿಂಹಯ್ಯ, ಡಿ. ವಿ. ಗುಂಡಪ್ಪ, ಬಿ. ಕೃಷ್ಣಪ್ಪ, ಬಿ. ರಾಮರಾವ್, ಶಾಂತಿರಾಜಶಾಸ್ತ್ರಿಗಳು-ಇವರ ನೆರವಿನಿಂದ ಕಡಬದ ನಂಜುಂಡಶಾಸ್ತ್ರಿಗಳು ಮತ್ತು ಟಿ. ಎಸ್. ವೆಂಕಣ್ಣಯ್ಯ ಇವರುಗಳ

ಸಹಾಯ ಸಂಪಾದಕತ್ವದಲ್ಲಿ ೧೯೩೧ರಲ್ಲಿ ಉತ್ತಮ ಸಂಸ್ಕರಣವೊಂದನ್ನು ಪ್ರಕಟಿಸಿದರು. ಕಾಲಾನುಕಾಲದಲ್ಲಿ ಪ್ರತಿಗಳು ಮುಗಿಯಲು ಮೈಸೂರುವಿಶ್ವವಿದ್ಯಾನಿಲಯದವರು ವಿದ್ಯಾರ್ಥಿಗಳ ಉಪಯೋಗಕ್ಕಾಗಿ ಭಾಗಶಃ ಇದನ್ನು ಮುದ್ರಿಸಿ ಸಹಾಯ ಮಾಡಿದರು. ಈ ಉತ್ತಮಕೃತಿಯ ಪ್ರತಿಗಳ ಲಭ್ಯವೇ ಇಲ್ಲದುದರಿಂದ ವಿಶ್ವವಿದ್ಯಾನಿಲಯದವರು ಪರಿಷತ್ತಿನ ಪ್ರಕಟಣೆಯನ್ನೇ ಆಧಾರವಾಗಿಟ್ಟುಕೊಂಡು ೧೯೭೩ರಲ್ಲಿ ಅದರ ಪುನರ್ಮುದ್ರಣ ಮಾಡಿದರು. ಪ್ರಕೃತ ಅನುವಾದವು ಈ ಮುದ್ರಣದ ಪಾಠವನ್ನು ಅಂಗೀಕರಿಸಿದೆ. ಬೇರೆ ಯಾವ ಕೈ ಬರೆಹಗಳ ಸಹಾಯವೂ ದೊರೆತಿಲ್ಲವಾದುದರಿಂದ ಇದೇ ಮುದ್ರಣದಲ್ಲಿ ಕೊಟ್ಟಿರುವ ಕೆಲವು ಅಡಿ ಟಿಪ್ಪಣಿಯ ಪಾಠಾಂತರಗಳ ಪುನರ್ವಿಮರ್ಶೆಯಿಂದ ಕೆಲವು ಪಾಠಾಂತರಗಳನ್ನು ಉಪಯೋಗಿಸಿಕೊಂಡು ಅನುವಾದಿಸಿದೆ. ಅವರಿಗೆ ಸಂದೇಹಗಳಿದ್ದ ಅನೇಕ ಪಾಠಗಳು ನಮಗೂ ಹಾಗೆಯೇ ಉಳಿದಿರುವುದು ಅನಿವಾರ್ಯವಾಗಿದೆ.

**- ಎಸ್. ಅನಂತರಂಗಾಚಾರ್**

# ಪ್ರಥಮಾಶ್ವಾಸಂ

ಉ॥ ಶ್ರೀಯಸರಾತಿ ಸಾಧನ ಪಯೋನಿಧಿಯೊಳ್ ಪಡೆದುಂ ಧರಿತ್ರಿಯಂ
ಜೀಯೆನೆ ಬೇಡಿಕೊಳ್ಳದೆ ವಿರೋಧಿ ನರೇಂದ್ರರನೊತ್ತಿಕೊಂಡುಮಾ ।
ತ್ಮೀಯ ಸುಪುಷ್ಪಪಟ್ಟಮನೊಡಂಬಡೆ ತಾಳ್ದಿಯುಮಿಂತುದಾತ್ತ ನಾ
ರಾಯಣನಾದ ದೇವನೆಮಗೀಗರಿಕೇಸರಿ ಸೌಖ್ಯಕೋಟಿಯಂ ॥* ೧

ಚಂ॥ ಮುಳಿಸು ಲಲಾಟನೇತ್ರಶಿಖಿ ಮೆಚ್ಚೆ ವಿನೂತ ರಸಪ್ರಸಾದಮು
ಜ್ಜಳ ಜಸಮಂಗಸಂಗತ ಲಸದ್ಭಸಿತಂ ಪ್ರಭುಶಕ್ತಿ ಶಕ್ತಿ ನಿ ।
ರ್ಮಳಮಣಿಭೂಷಣಂ ಫಣಿವಿಭೂಷಣಮಾಗೆ ನೆಗೞ್ತೆಯಂ ಪ್ರದುಂ
ಗೊಳಿಸಿದನೀಶ್ವರಂ ನೆಗೞ್ದುದಾರ ಮಹೇಶ್ವರನೀಗೆ ಭೋಗಮಂ ॥ ೨

೧. ಅಮೃತಮಥನ ಕಾಲದಲ್ಲಿ ಉದ್ಭವಿಸಿದ ಲಕ್ಷ್ಮಿಯನ್ನು ಶ್ರಮವಿಲ್ಲದೆ ಪಡೆದ, ಬಲಿಚಕ್ರವರ್ತಿಯಿಂದ ಬೇಡಿ ಭೂಮಿಯನ್ನು ಪಡೆದ, ಪುಷ್ಪಪಟ್ಟವೆಂಬ ಸಾಮಾನ್ಯ ಶಿರೋಭೂಷಣವನ್ನು ಪಡೆದ ನಾರಾಯಣನಂತಲ್ಲದೆ ಶತ್ರುಸೈನ್ಯವೆಂಬ ಸಮುದ್ರದ ಮಂಥನದಿಂದ ಜಯಲಕ್ಷ್ಮಿಯನ್ನು ಬೇಡದೆ ಶತ್ರುರಾಜರುಗಳನ್ನು ಮೆಟ್ಟಿ ಭೂಮಿಯನ್ನೂ ತನ್ನ ಯೋಗ್ಯತೆಗೆ ಅನುಗುಣವಾದ ಸುಪುಷ್ಪಪಟ್ಟವೆಂಬ ಶಿರೋಭೂಷಣವನ್ನು ಪಡೆದು ಉದಾತ್ತನಾರಾಯಣನೆನಿಸಿಕೊಂಡಿರುವ ದೇವನಾದ ಅರಿಕೇಸರಿಯು ನಮಗೆ ಸೌಖ್ಯರಾಶಿಯನ್ನು ಕೊಡಲಿ. ೨. ಅರಿಕೇಸರಿಯ ಕೋಪವೇ ಈಶ್ವರನ ಹಣೆಗಣ್ಣಿನ ಬೆಂಕಿಯಾಗಿರಲು ಅವನ ಮೆಚ್ಚಿಗೆಯೇ ಶ್ಲಾಘ್ಯವೂ ರಸಯುಕ್ತವೂ ಆದ ಅವನ ಪ್ರಸಾದ. ಅರಿಕೇಸರಿಯ ಯಶಸ್ಸೇ ಈಶ್ವರನು ಶರೀರಕ್ಕೆ ಲೇಪಿಸಿಕೊಂಡಿರುವ ಕಾಂತಿಯುಕ್ತವಾದ ವಿಭೂತಿಯಾಗಿರಲು ಅರಿಕೇಸರಿಯ ಶಕ್ತಿತ್ರಯಗಳಲ್ಲಿ ಒಂದಾದ ಪ್ರಭುಶಕ್ತಿ ಈಶ್ವರನ ಶಕ್ತಿದೇವತೆಯಾಗಿರಲು ಇವನ ನಿರ್ಮಲವಾದ ರತ್ನಭೂಷಣಗಳೇ ಅವನ ನಾಗಭೂಷಣವಾಗಿರಲು ವಿಶೇಷ ಪ್ರಸಿದ್ಧಿಯನ್ನು ತನ್ನಲ್ಲಿ ಆಳವಡಿಸಿಕೊಂಡಿರುವ ಈಶ್ವರನೂ ಉದಾರಮಹೇಶ್ವರನೆಂದು ಪ್ರಸಿದ್ಧಿಯನ್ನು ಪಡೆದಿರುವ ಅರಿಕೇಸರಿಯೂ ಸೌಖ್ಯರಾಶಿಯನ್ನು ಕೊಡಲಿ.

---

* ವಕ್ತವ್ಯವಿಶೇಷ : ಈ ಪದ್ಯದಲ್ಲಿ ಬರುವ 'ಪುಷ್ಪಪಟ್ಟ'ವೆಂಬುದು ಶಿಲ್ಪಶಾಸ್ತ್ರಕ್ಕೆ ಸಂಬಂಧಿಸಿದ ಶಬ್ದ. ರಾಜರೂ ದೇವತೆಗಳೂ ಧರಿಸುವ ಶಿರೋವೇಷ್ಟನಗಳಲ್ಲಿ ಜಟಾ, ಮೌಳಿ, ಕಿರೀಟ, ಕರಂಡ, ಶಿರಸ್ತ್ರಕ, ಕುಂಡಲ, ಕೇಶಬಂಧ, ಧಮ್ಮಿಲ್ಲ, ಅಲಕ, ಚೂಡ, ಮಕುಟ, ಪಟ್ಟ ಎಂಬ ಹನ್ನೆರಡು ವಿಧಾನಗಳಿವೆ. ಅರಿಕೇಸರಿಯು ಸಾಮಾನ್ಯ ಸಾಮಂತ ರಾಜನಲ್ಲದುದರಿಂದ ಸುಪುಷ್ಪಪಟ್ಟವನ್ನು ಧರಿಸಿದ್ದಾನೆ, ಇವುಗಳಲ್ಲಿ ಪಟ್ಟವೆಂಬುದು ಪತ್ರಪಟ್ಟ, ರತ್ನಪಟ್ಟ, **ಪುಷ್ಪವೃಷ್ಟಿ** ಎಂದು ಮೂರು ವಿಧ. ಇಲ್ಲಿಯ **ಪುಷ್ಪವೃಷ್ಟಿ**ಯೆಂಬ ಪಾಠವನ್ನು **ಪುಷ್ಪಪಟ್ಟ** ಎಂದು ತಿದ್ದಿಕೊಳ್ಳಬೇಕು.

ಉ ॥ ಚಂಡ ವಿರೋಧಿಸಾಧನ ತಮಸ್ತಮಮೋಡೆ ವಿಶಿಷ್ಟ ಪದ್ಮಿನೀ
ಷಂಡಮರಲ್ಚು ರಾಗದಿನೊಱಲ್ದಿರೆ ಯಾಚಕ ಭೃಂಗಕೋಟಿ ಕೈ ।
ಕೊಂಡು ನಿರಂತರಂ ತಗುಳ್ವು ಕೀರ್ತಿಸೆ ಮಿಕ್ಕೆಸೆವ ಪ್ರಚಂಡ ಮಾ
ರ್ತಾಂಡನಲರ್ಚುಗೆನ್ನ ಹೃದಯಾಂಬುಜಮಂ ನಿಜ ವಾಙ್ಮರೀಚಿಯಿಂ ॥ ೩

ಚಂ ॥ ಸಹಜದ ಚೆಲ್ವಿನೊಳ್ ರತಿಯ ಸೋಲದ ಕೇಳಿಕೆಯೊಳ್ ಪೊದಱ್ಚು ಸ
ನ್ನಿಹಿತವೆನಿಪ್ಪಪೂರ್ವ ಶುಭಲಕ್ಷಣ ದೇಹದೊಳೊಳ್ಪನಾಳ್ಚು ಸಂ ।
ದಹಿಕಟಕ ಪ್ರಸಾದದ ಮನೋಜನುಮಂ ಗೆಲೆವಂದನಾಗಳುಂ
ಸಹಜಮನೋಜನೋಜನೆಮಗೀಗೆ ವಿಚಿತ್ರ ರತೋತ್ಸವಂಗಳಂ ॥ ೪

ಚಂ ॥ ಕ್ಷಯಮಣಮಿಲ್ಲ ಕೇಳ್ಚು ಕಡೆಗಂಡವನಾವನುಮಿಲ್ಲೆನಲ್ ತವ
ಕ್ಷಯನಿಧಿ ತಾನೆ ತನ್ನನೊಪೆದೋಲಗಿಪಂಗರಿದಿಲ್ಲೆನಿಪ್ಪ ವಾ ।
ಙ್ಮಯಮನಿತರ್ಕಮಂಬಿಕೆ ಸರಸ್ವತಿ ಮನ್ಮುಖಪದ್ಮರಂಗದೇ
ೞ್ಗೆಯನೆಡೆಗೊಂಡು ಕೊಂಡುಕೊನೆದೀಗರಿಗಂಗೆ ವಿಶುದ್ಧ ಬುದ್ಧಿಯಂ ॥ ೫

೩. ಕ್ರೂರಿಗಳಾದ ಶತ್ರುಸೈನ್ಯವೆಂಬ ಕತ್ತಲೆಯ ಮೊತ್ತವು ಓಡಿಹೋಗುತ್ತಿರುವ ವಿಶೇಷ ಗುಣಗಳಿಂದ ಕೂಡಿದ ತಾವರೆಯ ಸಮೂಹವು (ಅರಿಕೇಸರಿಯ ಪರವಾಗಿ ಪದ್ಮಿನೀ ಜಾತಿಯ ಸ್ತ್ರೀಯರ ಸಮೂಹವು) ಅರಳಿ ಪ್ರೀತಿಸಿ ಸಂತೋಷದಿಂದಿರಲು, ತಿರುಕನೆಂಬ ದುಂಬಿಗಳ ಸಮೂಹವು ತೃಪ್ತಿಯಿಂದ ಎಡಬಿಡದೆ ಹಿಂಬಾಲಿಸಿ ಹೊಗಳುತ್ತಿರಲು ಅತ್ಯಧಿಕವಾಗಿ ಪ್ರಕಾಶಿಸುತ್ತಿರುವ ಸೂರ್ಯನೂ ಪ್ರಚಂಡ ಮಾರ್ತಂಡನೆಂಬ ಬಿರುದಿನಿಂದ ಕೂಡಿದ ಅರಿಕೇಸರಿಯೂ ತಮ್ಮ ಮಾತೆಂಬ ಕಿರಣದಿಂದ ನನ್ನ ಹೃದಯಕಮಲವನ್ನು ಅರಳಿಸಲಿ. ೪. ತನ್ನ ಹುಟ್ಟಿನಿಂದಲೇ ಸಹಜವಾಗಿ ಬಂದ ಸೌಂದರ್ಯದಿಂದಲೂ ಎಂದೂ ಸೋಲದ ಸಂಭೋಗಕ್ರೀಡೆಯಿಂದಲೂ ಅಪೂರ್ವವಾದ ಶುಭಲಕ್ಷಣಗಳಿಂದ ಕೂಡಿದ ಶರೀರದ ವೈಭವದಿಂದಲೂ ಸರ್ಪಭೂಷಣನಾದ ಈಶ್ವರನ ಪ್ರಸಾದದಿಂದಲೂ ಕೂಡಿ ಸಹಜಮನ್ಮಥನಿಗೂ ಆಚಾರ್ಯನಾಗಿರುವ ಅರಿಕೇಸರಿಯು ಯಾವಾಗಲೂ ರಮಣೀಯವೂ ವೈವಿಧ್ಯಮಯವೂ ಆದ ಸುಖ ಸಂತೋಷಗಳನ್ನು ದಯಪಾಲಿಸಲಿ. (ಮನ್ಮಥನು ಶರೀರವಿಲ್ಲದವನು; ಈಶ್ವರನ ಕೋಪಕ್ಕೆ ಪಾತ್ರನಾದವನು; ರತಿಯ ಸಂಭೋಗಕ್ರೀಡೆಯಲ್ಲಿ ಸೀಮಿತನಾದವನು. ಅರಿಕೇಸರಿಯಾದರೋ ಸೌಂದರ್ಯದಿಂದ ಕೂಡಿದ ಶರೀರವುಳ್ಳವನೂ ಈಶ್ವರಾನುಗ್ರಹಕ್ಕೆ ಪಾತ್ರವಾದವನೂ ವಿವಿಧ ಸಂಭೋಗಕೇಳಿಯುಳ್ಳವನೂ ಆಗಿರುವುದರಿಂದ ಇವನು ಮನ್ಮಥನಿಗೂ ಆಚಾರ್ಯನಾಗಿದ್ದಾನೆ ಎಂಬುದು ಭಾವ) ೫. ಸ್ವಲ್ಪವೂ ನಾಶವಿಲ್ಲದ, ಯಾರಿಂದಲೂ ಅದರ ಕೊನೆಯನ್ನು ತಿಳಿಯುವುದಕ್ಕಾಗದ, ತನಗೆ ತಾನೆ ಅಕ್ಷಯನಿಧಿಯಾಗಿರುವ, ಅವಳನ್ನು ಸೇವಿಸಿದವರಿಗೆ ಅಸಾಧ್ಯವಾವುದೂ ಇಲ್ಲವೆನಿಸುವ, ಸಮಸ್ತ ವಾಙ್ಮಯಕ್ಕೂ ತಾಯಿಯಾದ ಸರಸ್ವತೀದೇವಿಯು ಕಮಲದಂತಿರುವ ಮುಖವೆಂಬ ರಂಗಸ್ಥಳದ ಏಳಿಗೆಯನ್ನೊಡಗೊಂಡು ಅರಿಕೇಸರಿಗೆ ಸಂತೋಷದಿಂದ ನಿಷ್ಕಲ್ಮಷವಾದ ಬುದ್ಧಿಯನ್ನು

ತಿಸುಳದೊಳುಚ್ಚಳಿಪ್ಪ ಪೊಸ ನೆತ್ತರೆ ಕೆಂದಳಿರಾಗೆ ಕಣ್ಗಗು
ರ್ವಿಸುವಿನಮೊಕ್ಕು ನೇಲ್ವ ಕರುಳೋಳಿಯೆ ಬಾಳಮೃಣಾಳಮಾಗೆ ಮಿ ॥
ಕ್ಕಸುರರ ಮೆಯ್ಯೊಳಾದ ವಿರಹಾಗ್ನಿಯನಾಱಿಸುತಿಂತೆ ತನ್ನ ಕೂ
ರಸಿಯೊಳಡುರ್ತು ಕೊಂದಸಿಯಳಿ[ರ್ಕ]ಸಿಯೊಳ್ ಪಡೆಮೆಚ್ಚೆ ಗಂಡನಾ ॥ ೬

ಮಲ್ಲಿಕಾಮಾಲೆ ॥ ಎನ್ನ ದಾನಮಿದಾಗಳುಂ ಮಧುಪಾಶ್ರಯಂ ಧರೆಗವ್ವವ
ಚ್ಛೆನ್ನ ದಾಸಮಿದಾಗಳುಂ ವಿಬುಧಾಶ್ರಯಂ ಗೆಲೆವಂದನೆ ॥
ನ್ನನ್ನಿಜೋನ್ನತಿಯಿಂದಮಿಾ ಪತಿಯೆಂದು ಮೆಚ್ಚೆ ವಿನಾಯಕಂ ।
ತಾನ್ನಿಮಿರ್ಚುಗೆ ಕಬ್ಬಮಂ ನಯದಿಂ ಗುಣಾರ್ಣವ ಭೂಪನಾ ॥ ೭

ಚಂ ॥ ಬಗೆ ಪೊಸತಪ್ಪುದಾಗಿ ಮೃದುಬಂಧದೊಳೊಂದುವುದೊಂದಿ ದೇಸಿಯೊಳ್।
ಪುಗುವುದು ಪೊಕ್ಕ ಮಾರ್ಗದೊಳೆ ತಳ್ವುದು ತಳ್ತೊಡೆ ಕಾವ್ಯಬಂಧಮೊ ॥
ಪ್ಪುಗುಮೆಳಮಾವು ಕೆಂದಳಿರ ಪೂವಿನ ಬಿಣ್ಪೊಱೆಯಿಂ ಬಬಲ್ಪು ತುಂ
ಬಿಗಳಿನೆ ತುಂಬಿ ಕೋಗಿಲೆಯ ಬಗ್ಗಿಸೆ ಸುಗ್ಗಿಯೊಳೊಪ್ಪುವಂತೆವೋಲ್ । ೮

ದಯಪಾಲಿಸಲಿ. ೬. ತನ್ನ ತ್ರಿಶೂಲದಿಂದ ಮೇಲಕ್ಕೆ ಚಿಮ್ಮುತ್ತಿರುವ ಹೊಸರಕ್ತವೇ ಕೆಂಪಾದ ಚಿಗುರಾಗಿರಲು ಕಣ್ಣಿಗೆ ಭಯವನ್ನುಂಟುಮಾಡುತ್ತ ಹೊರಕ್ಕೆ ಸೂಸಿ ನೇತಾಡುತ್ತಿರುವ ಕರುಳುಗಳ ಸಮೂಹವೇ ಎಳೆಯ ತಾವರೆಯ ದಂಟಾಗಿರಲು ಹದ್ದುಮೀರಿದ ರಾಕ್ಷಸರ ದೇಹದಲ್ಲುಂಟಾದ ಅಗಲಿಕೆಯೆಂಬ ಬೆಂಕಿಯನ್ನು ಅವು ಆರಿಸುತ್ತ ತನ್ನ ಹರಿತವಾದ ಕತ್ತಿಯನ್ನು ಆಶ್ರಯಿಸಿಕೊಂಡಿರುವ ಕೃಶಾಂಗಿಯಾದ ದುರ್ಗಿಯು ಪಡೆಮೆಚ್ಚಗಂಡನೆಂಬ ಬಿರುದುಳ್ಳ ಅರಿಕೇಸರಿಯ ಕತ್ತಿಯನ್ನು ಸೇರಿಕೊಂಡಿರಲಿ. ೭. ಮಧುಪಾಶ್ರಯಂ (ಅಂದರೆ ದುಂಬಿಗಳಿಗೆ ಅವಲಂಬನವಾದುದು- ಬಾಹ್ಯಾರ್ಥದಲ್ಲಿ; ಧ್ವನಿಯಲ್ಲಿ- ಮದ್ಯಪಾನ ಮಾಡುವವರಿಗೆ ಅವಲಂಬನವಾದುದು) ಅರಿಕೇಸರಿಯ ದಾನವು (ವಸ್ತುಗಳನ್ನು ಪ್ರದಾನಮಾಡುವುದು- ಕೊಡುಗೆಯು) ವಿಬುಧಾಶ್ರಯಂ ಅಂದರೆ ವಿದ್ವಾಂಸರಿಗೆ ಅವಲಂಬನವಾದುದು. ಆದುದರಿಂದ ಈ ರಾಜನಾದ ಅರಿಕೇಸರಿಯು ತನ್ನ ಮೇಲ್ಮೆಯಿಂದ ನನ್ನನ್ನು ಗೆದ್ದಿದ್ದಾನೆ ಎಂಬ ಮೆಚ್ಚಿಗೆಯಿಂದ ವಿನಾಯಕನು ಗುಣಾರ್ಣವನೆಂಬ ಬಿರುದಾಂಕಿತನಾದ ಈ ಅರಿಕೇಸರಿಯ ವಿಷಯಕವಾದ ಈ ಕಾವ್ಯವನ್ನು ನಯವಾಗಿ ವಿಸ್ತರಿಸಲಿ. ೮. ಕಾವ್ಯವು ನವನವೋಜ್ವಲವಾಗಿರಬೇಕು. ಮೃದು ಶಬ್ದಗಳ ಜೋಡಣೆಯಿಂದ ಕೂಡಿರಬೇಕು. ಅಚ್ಚಗನ್ನಡ ಶೈಲಿಯಲ್ಲಿ ರಚಿತವಾಗಿರಬೇಕು. ಸಂಸ್ಕೃತ ಶೈಲಿಯೊಂದಿಗೆ ಹೊಂದಿಕೊಂಡಿರಬೇಕು. ಹೀಗೆ ಸೇರಿಕೊಂಡಿದ್ದರೆ ಕಾವ್ಯರಚನೆಯು ವಸಂತಕಾಲದಲ್ಲಿ ಮಾವಿನ ಮರವು ಕೆಂಪಾದ ಚಿಗುರು ಮತ್ತು ಹೂವುಗಳ ಭಾರದಿಂದ ಜೋತುಬಿದ್ದು ತುಂಬಿಗಳಿಂದ ಆವೃತವಾಗಿ ಕೋಗಿಲೆಯ ಕೂಜನದಿಂದ ಪ್ರಕಾಶಿಸುವ ಹಾಗೆ

ಉ ॥ ಆ ಸಕಳಾರ್ಥ ಸಂಯುತಮಳಂಕೃತಿಯುಕ್ತಮುದಾತ್ತ [ವೃತ್ತಿ] ವಿ
ನ್ಯಾಸಮನೇಕ ಲಕ್ಷಣಗುಣಪ್ರಭವಂ ಮೃದುಪಾದಮಾದ ವಾ ।
ಕ್ಶ್ರೀ ಸುಭಗಂ ಕಳಾಕಳಿತಮೆಂಬ ನೆಗಲ್ತೆಯನಾಳ್ದ ಕಬ್ಬಮಂ ।
ಕೂಸುಮನೀವುದೀವುದರಿಕೇಸರಿಗಲ್ಲದವಸ್ತುಗೀವುದೇ ॥ ೯

ಚಂ ॥ ಕವಿಗಳ ನಾಮಧಾರಕ ನರಾಧಿಪರೋಳಿಯೊಳೀತನೊಳ್ಪಿದಂ
ಕವಿ ನೃಪನೀತನೊಳ್ಪಿದನೆನಲ್ ದೊರೆಯಲ್ತು ನೆಗಳ್ತೆವೆತ್ತ ಸ ।
ತ್ಕವಿಗಳ ಷೋಡಶಾವನಿಪರೋಳಿಯೊಳಂ ಕವಿತಾಗುಣಾರ್ಣವಂ
ಕವಿತೆಯೊಳಗ್ಗಳಂ ಗುಣದೊಳಗ್ಗಳಮೆಲ್ಲಿಯುಮೀ ಗುಣಾರ್ಣವಂ ॥ ೧೦

ಚಂ ॥ ಕತೆ ಪಿರಿದಾದೊಡಂ ಕತೆಯ ಮೆಯ್ಗಿಡಲೀಯದೆ ಮುಂ ಸಮಸ್ತ ಭಾ
ರತಮನಪೂರ್ವಮಾಗೆ ಸಲೆ ಪೇಳ್ದ ಕವೀಶ್ವರರಿಲ್ಲ ವರ್ಣಕಂ ।
ಕತೆಯೊಳೊಡಂಬಡಂ ಪಡೆಯೆ ಪೇಳ್ವೊಡೆ ಪಂಪನೆ ಪೇಳ್ಗುಮೆಂದು ಪಂ
ಡಿತರೆ ತಗುಳ್ದು ಬಿಚ್ಚಟಿಸೆ ಪೇಳಲೊಡರ್ಚಿದೆನೀ ಪ್ರಬಂಧಮಂ ॥ ೧೧

ಶೋಭಾಯಮಾನವಾಗಿರುತ್ತದೆ. ೯. ಸಮಸ್ತವಾದ ಅರ್ಥಗಳನ್ನೊಳಗೊಂಡಿರುವುದೂ ಅಲಂಕಾರಗಳಿಂದ ಕೂಡಿದುದೂ ಉತ್ತಮವಾದ ವೃತ್ತಿ ವಿನ್ಯಾಸದಿಂದ ಯುಕ್ತವಾದುದೂ ಮೃದುಪದಪಾದಗಳನ್ನುಳ್ಳ ವಾಕ್ಸಂಪತ್ತಿನಿಂದ ಸುಂದರವಾಗಿ ಕಲಾನ್ವಿತವಾದುದೂ ಎನಿಸಿಕೊಂಡಿರುವ ಕಾವ್ಯವನ್ನೂ ಕನ್ಯೆಯನ್ನೂ ಅರಿಕೇಸರಿಗಲ್ಲದೆ ಅಪಾತ್ರರಾದ ಮತ್ತಾರಿಗೊ ಅರ್ಪಿಸುವುದೇ? (ಕನ್ಯೆಯ ವಿಷಯವಾಗಿ ಅರ್ಥಮಾಡುವಾಗ ಅರ್ಥ ಎಂಬ ಶಬ್ದಕ್ಕೆ ಐಶ್ವರ್ಯವೆಂದೂ ವೃತ್ತಿಯೆಂಬ ಶಬ್ದಕ್ಕೆ ನಡವಳಿಕೆಯೆಂದೂ ಪಾದವೆನ್ನುವುದಕ್ಕೆ ಕಾಲು ಎಂದೂ ತಿಳಿಯಬೇಕು. ಕಾವ್ಯದೃಷ್ಟಿಯಿಂದ ವೃತ್ತಿಯೆಂಬ ಶಬ್ದಕ್ಕೆ ಅಭಿದಾ, ವ್ಯಂಜನಾ ಮತ್ತು ಲಕ್ಷಣಾ ಎಂಬ ಶಕ್ತಿಗಳಾಗಲಿ ಕೃಶಿಕೀ, ಭಾರತೀ, ಸಾತ್ವತೀ, ಆರಭಟೀ ಎಂಬ ವೃತ್ತಿಗಳಾಗಲಿ ಆಗಬಹುದು). ೧೦. ಹೆಸರಿಗೆ ಮಾತ್ರ ಕವಿಗಳೆನಿಸಿಕೊಂಡಿರುವವರ ಸಾಲಿನಲ್ಲಿ ಕವಿಯೆಂದಾಗಲಿ ಸಾಮಾನ್ಯವಾಗಿ ರಾಜರೆಂಬ ಹೆಸರನ್ನು ಮಾತ್ರ ಧರಿಸಿರುವವರ ಗುಂಪಿನಲ್ಲಿ ರಾಜನೆಂದಾಗಲಿ ಕರೆಸಿಕೊಳ್ಳುವುದು ವಿಶೇಷವೇನೂ ಇಲ್ಲ. ಸತ್ಕವಿಗಳ ಸಾಲಿನಲ್ಲಿ ಪಂಪನು ಕವಿತಾಗುಣಾರ್ಣವನೆಂದೂ, ಷೋಡಶರಾಜರ ಶ್ರೇಣಿಯಲ್ಲಿ ಅರಿಕೇಸರಿಯು ಗುಣಾರ್ಣವನೆಂದೂ ಪ್ರಸಿದ್ಧರಾಗಿದ್ದಾರೆ. ೧೧. ಕಥೆಯ ವಸ್ತುವು ಹಿರಿದಾಗಿದ್ದರೂ ಅದರ ವಸ್ತುವಿನ್ಯಾಸವು ನಷ್ಟವಾಗದಂತೆ ಸಮಗ್ರಭಾರತದ ಕತೆಯನ್ನು ಅಪೂರ್ವವಾಗಿ ಹೇಳಿದ ಕವಿಗಳು ಕಳೆದ ಕಾಲದಲ್ಲಿ ಇದುವರೆಗೆ ಯಾರೂ ಇಲ್ಲ. ವರ್ಣನಾಂಶಗಳಾದ ಅಷ್ಟಾದಶ ವರ್ಣನೆಗಳೂ ಕಥಾಂಶಗಳೊಡನೆ ಸಮಂಜಸವಾಗಿ ಹೊಂದಿಕೊಳ್ಳುವಂತೆ ಹೇಳುವುದಾದರೆ ಪಂಪನು ಮಾತ್ರ ಶಕ್ತ ಎಂದು ಪಂಡಿತರು ಒಂದೇ ಸಮನಾಗಿ ಹೇಳಿ ಸ್ತೋತ್ರಮಾಡುತ್ತಿರಲು ಈ ಉತ್ತಮ ಕಾವ್ಯವನ್ನು ಹೇಳಲು ತೊಡಗಿದ್ದೇನೆ.

ಚಂ ॥ ಲಲಿತಪದಂ ಪ್ರಸನ್ನ ಕವಿತಾಗುಣಮಿಲ್ಲದೆ ಪೂಣ್ದು ಪೇೞ್ವ ಬೆ ।
ಳ್ಗಳ ಕೃತಿಬಂಧಮುಂ ಬರೆಪಕಾಱರ ಕೈಗಳ ಕೇಡು ನುಣ್ಣನ ॥
ಪ್ಪಳಕದ ಕೇಡು ಪೇೞಿಸಿದೊಡರ್ಥದ ಕೇಡೆನೆ ಪೇೞ್ದು ಬೀಗಿ ಪೊ ।
ಟ್ಟಳಿಸಿ ನೆಗೞ್ತೆಗಾಟಿಸುವ ದುಷ್ಕವಿಯುಂ ಕವಿಯೆಂಬ ಲೆಕ್ಕಮೇ ॥ ೧೨

ಉ ॥ ವ್ಯಾಸಮುನೀಂದ್ರ ರುಂದ್ರ ವಚನಾಮೃತವಾರ್ಧಿಯನೀಸುವೆಂ ಕವಿ
ವ್ಯಾಸನೆನೆಂಬ ಗರ್ವಮೆನಗಿಲ್ಲ ಗುಣಾರ್ಣವನೊಳ್ಪು ಮನ್ಮನೋ ।
ವಾಸಮನೆಯ್ದೆ ಪೇೞ್ವೆಪೆನದಲ್ಲದೆ ಗರ್ವಮೆ ದೋಷಮಟ್ಟೆಗಂ
ದೋಷಮೆ ಕಾಣೆನೆನ್ನಱಿವ ಮಾೞ್ಕೆಯೆ ಪೇೞ್ವೆನಿದಾವ ದೋಷಮೋ ॥೧೩

ಚಂ ॥ ವಿಪುಳ ಯಶೋವಿತಾನ ಗುಣಮಿಲ್ಲದನಂ ಪ್ರಭು ಮಾಡಿ ಪೂರ್ವ ಭೂ
ಮಿಪರ ಪದಂಗಳಂ ಪುಗಿಸಿ ಪೋಲಿಪೊಡೀತನುದಾತ್ತ ಪೂರ್ವ ಭೂ ।
ಮಿಪರುಮನೊಳ್ಪಿನೊಳ್ ತಗುಳೆವಂದೊಡೆಯಾ ಕಥೆಯೊಳ್ ತಗುಳ್ಚಿ ಪೋ
ಲಿಪೊಡೆನಗಟ್ಟೆಯಾದುದು ಗುಣಾರ್ಣವ ಭೂಭುಜನಂ ಕಿರೀಟಿಯೊಳ್ ॥ ೧೪

ಕಂ ॥ ಶ್ರೀಮಚ್ಚಳುಕ್ಯ ವಂಶ
ವ್ಯೋಮಾಮೃತಕಿರಣನೆನಿಪ ಕಾಂತಿಯನೊಳಕೊಂ ।
ಡೀ ಮಹಿಯೊಳಾತ್ಮವಂಶಶಿ
ಖಾಮಣಿ ಜಸಮೆಸೆಯೆ ಯುದ್ಧಮಲ್ಲಂ ನೆಗೞ್ದಂ ॥ ೧೫

೧೨. ಲಲಿತವಾದ ಶಬ್ದಗಳೂ ಪರಿಶುದ್ಧವಾದ ಗುಣಗಳೂ ಇಲ್ಲದೆ ಕಾವ್ಯವನ್ನು ಬರೆಯಬೇಕೆಂಬ ಒಂದು ಹಟದಿಂದಲೇ ರಚಿಸಿದ ದಡ್ಡರ ಕೃತಿರಚನೆ ಅದೊಂದು ಕಾವ್ಯರಚನೆಯೇನು? ಅದು ಬರಹಗಾರನ ಕೈಗೆ ಶ್ರಮವನ್ನುಂಟುಮಾಡತಕ್ಕದ್ದು; ಬರೆಯಲ್ಪಡಬೇಕಾಗಿರುವ ನಯವಾದ ಓಲೆಗರಿಗಳ ದಂಡ! ವಾಚನಮಾಡಿದರೆ ಅರ್ಥಕ್ಕೆ ಹಾನಿಯನ್ನುಂಟುಮಾಡುವ ಕಾವ್ಯರಚನೆ ಮಾಡಿ ಉಬ್ಬಿ ಅಹಂಕಾರದಿಂದ ಯಶಸ್ಸಿಗಾಗಿ ಹಾತೊರೆಯುತ್ತಿರುವ ಬಣಗುಕವಿಯು ಕವಿಯೆಂಬ ಗಣನೆಗೆ ಬರತಕ್ಕವನೆ? ೧೩. ನಾನು ವ್ಯಾಸಮಹರ್ಷಿಗಳ ವಿಸ್ತಾರವಾದ ಕಾವ್ಯವೆಂಬ ಅಮೃತ ಸಾಗರವನ್ನು ಈಜುತ್ತೇನೆ. ಆದರೆ ಕವಿ ವ್ಯಾಸನೆಂಬ ಗರ್ವ ಮಾತ್ರ ನನಗಿಲ್ಲ. ಗುಣಾರ್ಣವನಾದ ಅರಿಕೇಸರಿಯ ಸತ್ಸ್ವಭಾವವು ನನ್ನ ಮನೋಮಂದಿರವನ್ನು ಪ್ರವೇಶಿಸಿರುವುದರಿಂದ ಈ ಕಾವ್ಯವನ್ನು ಹೇಳುತ್ತಿದ್ದೇನೆ. ಈ ರೀತಿಯಾದ ಪ್ರೀತಿಪ್ರದರ್ಶನವು ದೋಷವಾಗುತ್ತದೆಯೇ? ನನಗೆ ತಿಳಿದಷ್ಟು ನಾನು ಹೇಳುತ್ತೇನೆ. ಇದರಲ್ಲಿ ಯಾವ ದೋಷವಿದೆ? ೧೪. ಹಿಂದಿನ ಕೆಲವು ಕವಿಗಳು ವಿಸ್ತಾರವಾದ ಯಶೋರಾಶಿಯಿಲ್ಲದವನನ್ನು ತಮ್ಮ ಕಾವ್ಯದ ನಾಯಕನನ್ನಾಗಿ ಮಾಡಿ ಪ್ರಾಚೀನ ರಾಜರ ಸದ್ಗುಣಗಳನ್ನೆಲ್ಲ ಅವರಲ್ಲಿ ಆರೋಪಣೆ ಮಾಡಿ ಹೋಲಿಸುತ್ತಾರೆ. ಆದರೆ ಗುಣಾರ್ಣವನಾದ ಅರಿಕೇಸರಿಯು ತನ್ನ ಸದ್ಗುಣಗಳಿಂದ ಪೂರ್ವಕಾಲದ ರಾಜರನ್ನು ಸೋಲಿಸುತ್ತಿರುವುದರಿಂದ ಮಹಾಭಾರತದ ಕಥೆಯಲ್ಲಿ ಅವನ ಕಥೆಯನ್ನು ಸೇರಿಸಿ ಗುಣಾರ್ಣವ ಮಹಾರಾಜನನ್ನು ಅರ್ಜುನನಲ್ಲಿ ಹೊಂದಿಸಿ ವರ್ಣಿಸಲು ನನಗೆ ಪ್ರೀತಿಯಾಯಿತು. ೧೫. ಸಂಪದ್ಯುಕ್ತವಾದ ಚಾಳುಕ್ಯವಂಶವೆಂಬ ಆಕಾಶಕ್ಕೆ

ಆತಂ ನಿಜಭುಜವಿಜಯ
ಖ್ಯಾತಿಯನಾಳ್ದಾಳ್ದನಧಿಕಬಲನವನಿಪತಿ ।
ವ್ರಾತ ಮಣಿಮಕುಟಕಿರಣ
ದ್ಯೋತಿತಪಾದಂ ಸಪಾದಲಕ್ಷ ಕ್ಷಿತಿಯಂ ॥ ೧೬

ಏನಂ ಪೇಳ್ವುದೊ ಸಿರಿಯು
ದ್ದಾನಿಯನೆಣ್ಣೆಯೊಳೆ ತೀವಿ ದೀರ್ಘಿಕೆಗಳನಂ ।
ತಾ ನೃಪತಿ ನಿಚ್ಚಲಯ್ನೂ
ಱಾನೆಯನವಗಾಹಮಿರಿಸುವಂ ಬೋದನದೊಳ್ ॥ ೧೭

ಶ್ರೀಪತಿಗೆ ಯುದ್ಧಮಲ್ಲ ಮ
ಹೀಪತಿಗೆ ನೆಗಳ್ತೆ ಪುಟ್ಟೆ ಪುಟ್ಟಿದನಖಿಳ ।
ಕ್ಷ್ಮಾಪಾಲ ಮೌಳಿಮಣಿ ಕಿರ
ಣಾಪಾಳಿತ ನಖಮಯೂಖರಂಜಿತ ಚರಣಂ ॥ ೧೮

ಅರಿಕೇಸರಿಯೆಂಬಂ ಸುಂ
ದರಾಂಗನತ್ಯಂತ ವಸ್ತುವಂ ಮದಕರಿಯಂ ।
ಹರಿಯಂ ಪಡಿವಡೆಗುರ್ಚಿದ
ಕರವಾಳನೆ ತೋಱಿ ನೃಪತಿ ಗೆಲ್ಲಂಗೊಂಡಂ ॥ ೧೯

ಚಂದ್ರನೆನಿಸುವ ತೇಜಸ್ಸಿನಿಂದ ಕೂಡಿ ತನ್ನ ವಂಶಕ್ಕೆ ಶಿರೋಭೂಷಣನಾಗಿರುವ ಯುದ್ಧಮಲ್ಲನೆಂಬುವನು ಈ ಭೂಮಿಯಲ್ಲಿ ಕೀರ್ತಿವಂತನಾಗಿ ಪ್ರಸಿದ್ಧನಾದನು. ೧೬. ಆತನು ತನ್ನ ಭುಜಬಲದ ವಿಜಯದ ಖ್ಯಾತಿಯನ್ನು ಹೊಂದಿ ಅಧಿಕಬಲಶಾ ರಾಜಸಮೂಹದ ರತ್ನಖಚಿತವಾದ ಕಿರೀಟಗಳ ಕಾಂತಿಯಿಂದ ಬೆಳಗಲ್ಪಟ್ಟ ಪಾದವುಳ್ಳವನೂ ಆಗಿ ಸಪಾದಲಕ್ಷ ಭೂಮಿಯನ್ನು ಆಳಿದನು. ೧೭. ಆತನು ಬೋದನವೆಂಬ ತನ್ನ ರಾಜಧಾನಿಯಲ್ಲಿ ಬಾವಿಗಳನ್ನು ಎಣ್ಣೆಯಲ್ಲಿ ತುಂಬಿ ಪ್ರತಿದಿನವೂ ಐನೂರಾನೆಗಳನ್ನು ಮಜ್ಜನ ಮಾಡಿಸುತ್ತಾನೆ ಎಂದರೆ ಆತನ ಐಶ್ವರ್ಯಾತಿಶಯವನ್ನು ಏನೆಂದು ಹೇಳುವುದೋ. ೧೮. ಐಶ್ವರ್ಯವಂತನಾದ ಈ ಯುದ್ಧಮಲ್ಲ ಮಹಾರಾಜನಿಗೆ ಕೀರ್ತಿ ಹುಟ್ಟಿದ ಹಾಗೆ ಸಮಸ್ತರಾಜರ ಕಿರೀಟಗಳ ರತ್ನಕಾಂತಿಯಿಂದ ಪೋಷಿತವಾದ ಕಾಲಿನುಗುರುಗಳ ಕಿರಣಗಳಿಂದ ಪ್ರಕಾಶಿಸುತ್ತಿರುವ ಪಾದಗಳನ್ನುಳ್ಳ ೧೯. ಅರಿಕೇಸರಿಯೆಂಬ ಸುಂದರಾಂಗನಾದ ಮಗನು ಹುಟ್ಟಿದನು. ಆ ರಾಜನು ತನಗೆ ಪ್ರತಿಭಟಿಸಿದ ಸೈನ್ಯಕ್ಕೆ ತನ್ನ ಒರೆಯಿಂದ ಹೊರಗೆಳೆದ ಕತ್ತಿಯನ್ನೇ ತೋರಿ ವಿಶೇಷ ಬೆಲೆಬಾಳುವ ವಸ್ತುಗಳನ್ನೂ ಮದ್ದಾನೆಗಳನ್ನೂ ಕುದುರೆಗಳನ್ನೂ ಲಾಭವಾಗಿ ಪಡೆದನು. ಈ ಅರಿಕೇಸರಿಯು ರಾಷ್ಟ್ರಕೂಟರಾಜನಾದ ನಿರುಪಮದೇವನ ಆಜ್ಞೆಯಲ್ಲಿ ಮೂರು ಕಳಿಂಗ ದೇಶಗಳ ಸಮೇತವಾಗಿ ವೆಂಗಿಮಂಡಲವನ್ನು ಗೆದ್ದು ಸ್ವಬಾಹುಬಲದಿಂದ ತನ್ನ ಪ್ರತಿಷ್ಠೆಯನ್ನು ಸಮಸ್ತದಿಕ್ಕಿನ ಗೋಡೆಗಳಲ್ಲಿಯೂ

ನಿರುಪಮ ದೇವನ ರಾಜ್ಯದೊ
ಳರಿಕೇಸರಿ ವೆಂಗಿವಿಷಯಮಂ ತ್ರಿ ಕಳಿಂಗಂ ।
ಬೆರಸೊತ್ತಿಕೊಂಡು ಗರ್ವದೆ
ಬರೆಯಿಸಿದಂ ಪೆಸರನಖಿಳ ದಿಗ್ಭಿತ್ತಿಗಳೊಳ್ ॥ ೨೦

ಕ್ಷತ್ರಂ ತೇಜೋಗುಣಮಾ
ಕ್ಷತ್ರಿಯರೊಳ್ ನೆಲಸಿ ನಿಂದುದಾ ನೆಗಱ್ದಾದಿ ।
ಕ್ಷತ್ರಿಯರೊಳಮಿಲ್ಲೆನಿಸಿದು
ದೀ ತ್ರಿಜಗದೊಳೆಸಗಿದೆಸಕಮರಿಕೇಸರಿಯಾ ॥ ೨೧

ಅರಿಕೇಸರಿಗಾತ್ಮಜರರಿ
ನರಪ ಶಿರೋದಳನ ಪರಿಣತೋಗ್ರಾಸಿ ಭಯಂ ।
ಕರಕರರಾಯಿರ್ವರೊಳಾರ್
ದೊರೆಯೆನೆ ನರಸಿಂಹ ಭದ್ರದೇವರ್ ನೆಗೞ್ದರ್ ॥ ೨೨

ಕಂ॥ ಅವರೊಳ್ ನರಸಿಂಗಂಗತಿ
ಧವಳಯಶಂ ಯುದ್ಧಮಲ್ಲನಗ್ರಸುತಂ ತ ।
ದ್ಭುವನ ಪ್ರದೀಪನಾಗಿ
ರ್ದವಾರ್ಯವೀರ್ಯಂಗೆ ಬದ್ದೆಗಂ ಪಿರಿಯ ಮಗಂ ॥ ೨೩

ಪುಟ್ಟದೊಡಾತನೊಳಱಿವೊಡ
ವುಟ್ಟದುದಱಿವಿಂಗೆ ಪೆಂಪು ಪೆಂಪಿನೊಳಾಯಂ ।
ಕಟ್ಟಾಯದೊಳಳವಳವಿನೊ
ಳೊಟ್ಟಜೆ ಪುಟ್ಟದುದು ಪೋಲ್ವರಾರ್ ಬದ್ದೆಗನಂ ॥ ೨೪

ಬರೆಯಿಸಿದನು. ೨೦. ಕ್ಷತ್ರಿಯೋಚಿತವಾದ ಶೌರ್ಯಪ್ರತಾಪಾದಿ ತೇಜೋಗುಣಗಳು ಆ ಕ್ಷತ್ರಿಯರ ವಂಶದಲ್ಲಿ ಸ್ಥಿರವಾಗಿ ನಿಂತುದು ಈ ಅರಿಕೇಸರಿಯ ಮಹತ್ಕಾರ್ಯಗಳಿಂದ. ಇವನ ಕಾರ್ಯಗಳು ಮೂರು ಲೋಕಗಳಲ್ಲಿ ಪ್ರಸಿದ್ಧರಾವ ಪ್ರಾಚೀನ ರಾಜರುಗಳಲ್ಲಿಯೂ ಇಲ್ಲವೆಂದೆನಿಸಿತು. ೨೨. ಆ ಅರಿಕೇಸರಿಗೆ ಶತ್ರುರಾಜರ ತಲೆಯನ್ನು ಸೀಳುವುದರಲ್ಲಿ ಸಮರ್ಥವೂ ಹರಿತವೂ ಆದ ಕತ್ತಿಯಿಂದ ಭಯಂಕರವಾದ ಬಾಹುಗಳನ್ನುಳ್ಳ ಇವರಿಗೆ ಸಮಾನರಾರಿದ್ದಾರೆ ಎನ್ನಿಸಿಕೊಂಡ ನರಸಿಂಹ ಭದ್ರದೇವರೆಂಬ ಇಬ್ಬರು ಮಕ್ಕಳು ಪ್ರಸಿದ್ಧರಾದರು. ೨೩. ಅವರಲ್ಲಿ ನರಸಿಂಹನಿಗೆ ನಿರ್ಮಲಯಶಸ್ಸಿನಿಂದ ಕೂಡಿದ ಇಮ್ಮಡಿ ಯುದ್ಧಮಲ್ಲನು ಹಿರಿಯ ಮಗ. ಪ್ರಪಂಚಕ್ಕೆಲ್ಲ ತೇಜೋವಂತನೂ ಅಸಮಪ್ರತಾಪಶಾಲಿಯೂ ಆಗಿದ್ದ ಆ ಯುದ್ಧಮಲ್ಲನಿಗೆ ಬದ್ದೆಗನು (ಭದ್ರದೇವನು) ಹಿರಿಯ ಮಗ. ೨೪. ಹೀಗೆ ಹುಟ್ಟಿದ ಭದ್ರದೇವನಿಗೆ ಜೊತೆಯಲ್ಲಿಯೇ ಜ್ಞಾನವೂ ಜ್ಞಾನದೊಡನೆ ಹಿರಿಮೆಯೂ ಹಿರಿಮೆಯೊಡನೆ ದ್ರವ್ಯಲಾಭಾದಿಗಳೂ ಅವುಗಳೊಡನೆ ಪರಾಕ್ರಮಾತಿಶಯಾದಿಗಳೂ ಹುಟ್ಟಿದುವು. (ಇಂತಹ) ಭದ್ರದೇವನನ್ನು

ಬಲ್ವರಿಕೆಯೊಳರಿನೃಪರ ಪ
ಡಲ್ವಡೆ ತಳ್ತಿಱಿದು ರಣದೊಳಾ ವಿಕ್ರಮಮುಂ ।
ಸೊಲ್ವಿನಮಾವರ್ಜಿಸಿದಂ
ನಾಲ್ವತ್ತೆರಡಱಿಕೆಗಾಳೆಗಂಗಳೊಳೀತಂ ॥ ೨೫

ಚಂ॥ ವನಧಿಪರೀತ ಭೂತಳದೊಳೀತನೆ ಸೋಲದ ಗಂಡನೆಂಬ ಪೆಂ
ಪಿನ ಪೆಸರಂ ನಿಮಿರ್ಚಿದುದುಮಲ್ಲದೆ ವಿಕ್ರಮದಿಂದೆ ನಿಂದಗು ।
ರ್ವೆನಲಿಱಿದಾಂತರಂ ಮೊಸಳೆಯಂ ಪಿಡಿವಂತಿರೆ ನೀರೊಳೊತ್ತಿ ಭೀ
ಮನನತಿಗರ್ವದಿಂ ಪಿಡಿಯೆ ಮೆಯ್ಗಲಿ ಬದ್ದೆಗನನ್ನನಾವನೋ ॥ ೨೬

ಮ॥ ಮುಗಿಲಂ ಮುಟ್ಟಿದ ಪೆಂಪು ಪೆಂಪನೊಳಕೊಂಡುದ್ಯೋಗಮುದ್ಯೋಗದೊಳ್
ನೆಗೞ್ದಾಜ್ಞಾಫಲಮಾಜ್ಞೆಯೊಳ್ ತೊಡರ್ದಗುರ್ವೊಂದೊಂದಗುರ್ವಿಂದಗು ।
ರ್ವುಗೊಳುತ್ತಿರ್ಪರಿಮಂಡಳಂ ಜಸಕದರ್ಪಪ್ಪನ್ನೆಗಂ ಸಂದನೀ
ಜಗದೊಳ್ ಬದ್ದೆಗನನ್ನನಾವನಿೞಿಕುಂ ಭ್ರೂಕೋಟಿಯಿಂ ಕೋಟಿಯಂ ॥೨೭

ಕಂ ॥ ಮೇರುವ ಪೊನ್ ಕಲ್ಪಾಂಘ್ರಿಪ
ದಾರವೆ ರಸದೊಱವು ಪರುಸವೇದಿಯ ಕಣೆ ಭಂ ।
ಡಾರದೊಳುಂಟೆನೆ ಕುಡುವ ನಿ
ವಾರಿತ ದಾನಕ್ಕೆ ಪೋಲ್ವರಾರ್ ಬದ್ದೆಗನಂ ॥ ೨೮

ಹೋಲುವವರಿದ್ದಾರೆ? ೨೫. ಈ ಭದ್ರದೇವನು ಬಲವಾದ ಧಾಳಿಯಲ್ಲಿ ಶತ್ರುರಾಜರು ಚದುರಿ ಓಡಿಹೋಗುವಂತೆ ಪ್ರತಿಭಟಿಸಿ ತನ್ನ ಶೌರ್ಯವನ್ನು ಜನಗಳೆಲ್ಲ ಕೊಂಡಾಡುವಂತೆ ಯುದ್ಧಮಾಡಿ ನಲವತ್ತೆರಡು ಸುಪ್ರಸಿದ್ಧ ಕಾಳಗಗಳಲ್ಲಿ ತನ್ನ ಪ್ರತಾಪವನ್ನು ಪ್ರಕಟಿಸಿದನು. ೨೬. ಸಮುದ್ರದಿಂದ ಸುತ್ತುವರಿಯಲ್ಪಟ್ಟ ಭೂಮಂಡಲದಲ್ಲಿ ಇವನೊಬ್ಬನೇ ಯಾರಿಗೂ ಸೋಲದ ವೀರ ಎಂಬ ಹಿರಿಮೆಯನ್ನು ಗಳಿಸಿದ್ದಲ್ಲದೆ ತನ್ನನ್ನು ಪ್ರತಿಭಟಿಸಿದವರನ್ನು ಪರಾಕ್ರಮದಿಂದ ಎದುರಿಸಿ ಭಯಂಕರವಾಗಿ ಇರಿದು ಯುದ್ಧಮಾಡಿದ ಭೀಮನೆಂಬ ರಾಜನನ್ನು ನೀರಿನಲ್ಲಿ ಮುಳುಗಿಸಿ ಮೊಸಳೆಯನ್ನು ಹಿಡಿವಂತೆ ವಿಶೇಷ ದರ್ಪದಿಂದ ಹಿಡಿದಿರುವಾಗ ಈ ಶೂರನಾದ ಭದ್ರದೇವನಂತಹ (ಶೂರ) ನಾವನಿದ್ದಾನೆ. ೨೭. (ಈ ಭದ್ರದೇವನ) ಅತ್ಯುನ್ನತವಾದ ಹಿರಿಮೆಯೂ ಹಿರಿಮೆಯಲ್ಲಿ ಕೂಡಿಕೊಂಡ ಕಾರ್ಯಕಲಾಪಗಳಲ್ಲಿ ಹುದುಗಿಕೊಂಡಿರುವ ಅಜ್ಞಾಫಲವೂ ಅದರಲ್ಲಿ ಸೇರಿರುವ ಭಯವೂ ಭಯದಿಂದ ಆಶ್ಚರ್ಯಗೊಳ್ಳುತ್ತಿರುವ ಶತ್ರುಸಮೂಹವೂ ಅವನ ಕೀರ್ತಿಗೆ ಆಶ್ರಯವಾಗುತ್ತಿರಲು ಆ ಭದ್ರದೇವನು ಭೂಮಂಡಲದಲ್ಲಿ ಸುಪ್ರಸಿದ್ಧನಾದನು. ಒಂದು ಸಲ ಹುಬ್ಬುಹಾರಿಸುವುದರಿಂದ ಕೋಟ್ಯಂತರ ಸೈನ್ಯವನ್ನು ಇಳಿಸಿಬಿಡುವ ಅವನಂಥವರು ಬೇರೆ ಯಾರಿದ್ದಾರೆ? ೨೮. ಆ ಭದ್ರದೇವನ ಭಂಡಾರದಲ್ಲಿ ಮೇರುಪರ್ವತದ ಚಿನ್ನವೂ ಕಲ್ಪವೃಕ್ಷದಾರಾಮವೂ ಸಿದ್ಧರಸಮೂಟೆಯೂ ಸ್ಪರ್ಶಶಿಲೆಯ ಗಣಿಯೂ ಇವೆಯೆಂದರೆ ಅವಿಚ್ಛಿನ್ನವಾದ ದಾನಕ್ಕ

ತರಳ ॥ ಸುರಭಿ ದೇವತೆಯೆಂಬ ಕಾಪಿನೆ ಮಾಣ್ಬುದೇಱುವುದೊಂದೆಂ
ದಿರದೆ ಮಾಣ್ಬುದು ದೇವ ವಾರಣವೇಟ್ ಉಂಟವು ಪೋದೊಡಾ ।
ಖರಕರಂಗರಿದೆಂದೆ ಮಾಣ್ದಿರೆ ಮಾಣ್ಬುವಾ ಹರಿ ನೀನೆ ಪೇ
ಱರಿಯವೆಂದಿವು ಭದ್ರದೇವರ ಚಾಗದೊಳ್ಪೊಱಗಾದುವೇ ॥ ೨೯

ಕಂ ॥ ಆ ಬದ್ದೆಗಂಗೆ ವೈರಿತ
ಮೋಬಳ ದಶಶತಕರಂ ವಿರಾಜಿತ ವಿಜಯ ।
ಶ್ರೀ ಬಾಹು ಯುದ್ಧಮಲ್ಲನಿ
ಳಾ ಬಹು ವಿಧರಕ್ಷಣ ಪ್ರವೀಣ ಕೃಪಾಣಂ ॥ ೩೦

ಆತ್ಮಭವನನಾರಾಧಿಪ
ನಾತ್ಮಜನಾ ನಹುಷ ಪೃಥು ಭಗೀರಥ ನಳ ಮಾ ।
ಹಾತ್ಮರನಿಟೆಸಿ ನೆಗಱ್ದ ಮ
ಹಾತ್ಮಂ ನರಸಿಂಹನಱಿವಿನೊಳ್ ಪರಮಾತ್ಮಂ ॥ ೩೧

ಮಾಂಕರಿಸದಱಿವು ಗುರು ವಚ
ನಾಂಕುಶಮಂ ಪಾಟಿಯೆಡೆಗೆ ಪೊಣರ್ದರಿಬಲಮಂ ।
ಕಿಂಕೊಳೆ ಮಾಟ್ಪೆಡೆಗಣಮೆ ನಿ
ರಂಕುಶಮೆನಿಸಿದುದು ಮುನಿಸು ಭದ್ರಾಂಕುಶನಾ ॥ ೩೨

ತಱಿಸಂದು ಲಾಟರೊಳ್ ತ
ಳ್ತಿಱಿದೇಱಿಂ ಪೇಟ್ ಕೇಳ್ದು ಮಂಡಲಮಿನ್ನುಂ ।
ತಿಱುನೀರಿಕ್ಕುವುದೆನಿಸಿದ
ತಱಿಸಲವಿನ ಚಲದ ಬಲದ ಕಲಿ ನರಸಿಂಹಂ ॥ ೩೩

ಭದ್ರದೇವನನ್ನು ಹೋಲುವರಾರಿದ್ದಾರೆ. ೩೦-೩೧. ಆ ಭದ್ರದೇವನಿಗೆ ಶತ್ರುಗಳೆಂಬ ಕತ್ತಲೆಗೆ ಸೂರ್ಯನ ಹಾಗಿರುವವನೂ ಪ್ರಕಾಶಮಾನಳಾದ ವಿಜಯಲಕ್ಷ್ಮಿಯಿಂದ ಕೂಡಿದ ಬಾಹುವುಳ್ಳವನೂ ಭೂಮಿಯನ್ನು ನಾನಾ ರೀತಿಯಲ್ಲಿ ರಕ್ಷಣ ಮಾಡುವ ಸಾಮರ್ಥ್ಯವುಳ್ಳ ಕತ್ತಿಯುಳ್ಳವನೂ ಆದ (ಮೂರನೆಯ) ಯುದ್ಧಮಲ್ಲನು ಮಗನಾದನು. ಆ ಯುದ್ಧಮಲ್ಲ ಮಹಾರಾಜನ ಮಗನಾದ ನರಸಿಂಹನು ಪ್ರಸಿದ್ಧರಾದ ನಹುಷ, ಪೃಥು, ಭಗೀರಥ, ನಳರೆಂಬ ಮಹಾತ್ಮರನ್ನು ಮಹಿಮೆಯಲ್ಲಿ ಮೀರಿಸಿದ ಪ್ರಸಿದ್ಧಿಯುಳ್ಳವನೂ ಜ್ಞಾನದಲ್ಲಿ ಸಾಕ್ಷಾತ್ ಪರಮಾತ್ಮನೂ ಆದವನು. ೩೨. ಭದ್ರ ಜಾತಿಯ ಆನೆಗಳಿಗೆ ಅಂಕುಶಸ್ವರೂಪನಾದ ಆ ನರಸಿಂಹನ ಜ್ಞಾನವು ಕ್ರಮಪರಿಪಾಲನಾ ಸಂದರ್ಭದಲ್ಲಿ ಗುರುವಚನವೆಂಬ ಅಂಕುಶವನ್ನು ನಿರಾಕರಿಸುವುದಿಲ್ಲ. ಆದರೆ ಪ್ರತಿಭಟಿಸಿದ ಶತ್ರುವನ್ನು ಇದಿರಿಸುವ ಸಂದರ್ಭದಲ್ಲಿ ಭದ್ರಾಂಕುಶನ ಕೋಪವು ತಡೆಯಿಲ್ಲದುದು ಎಂದೆನಿಸಿಕೊಂಡಿತು (ಅಂದರ ನ್ಯಾಯ ಪರಿಪಾಲನೆಯಲ್ಲಿ ಅವನ ವಿವೇಕವು ಗುರುಜನರ ಆದೇಶವನ್ನು ಉಲ್ಲಂಘಿಸುತ್ತಿರದಿದ್ದರೂ ಶತ್ರುಸೈನ್ಯ ದೊಡನೆ ಯುದ್ಧಮಾಡುವಾಗ ಅವನ ಕೋಪವು ಯಾವ ಅಂಕೆಗೂ ಸಿಕ್ಕುತ್ತಿರಲಿಲ್ಲ). ೩೩. ನರಸಿಂಹನು ಎಂದೋ ಹಟದಿಂದ ಲಾಟದೇಶದ (ದಕ್ಷಿಣ ಗುಜರಾತು) ಮೇಲೆ

ಸಿಂಗಂ ಮಸಗಿದವೋಲ್ ನರ
ಸಿಂಗಂ ತಳ್ತಿಱಿಯೆ ನೆಗಱ್ದ ನೆತ್ತರ್ ನಭದೊಳ್ ।
ಕೆಂಗುಡಿ ಕವಿದಂತಾದುದಿ
ದೇಂ ಗರ್ವದ ಪೆಂಪೊ ಸಕಲಲೋಕಾಶ್ರಯನಾ ॥ ೩೪

ಏೞುಂ ಮಾಳಮುಮಂ ಪಾ
ಱೇೞೆ ತಗುಳ್ಚಿಱಿದು ನರಗನುರಿಪಿದೊಡೆ ಕರಿಂ ।
ಕೇೞಿಸಿದಾತನ ತೇಜದ
ಬೀೞಲನನುಕರಿಪುವಾದುವೊಗೆದುರಿಪುರಿಗಳ್ ॥ ೩೫

ವಿಜಯಾರಂಭ ಪುರಸ್ಸರ
ವಿಜಯಗಜಂಗಳನೆ ಪಿಡಿದು ಘೂರ್ಜರ ರಾಜ ।
ಧ್ವಜನಿಯನಿಱಿದೋಡಿಸಿ ಭುಜ
ವಿಜಯದೆ ವಿಜಯನುಮನಿೞಿಸಿದಂ ನರಸಿಂಹಂ ॥ ೩೬

ಸಿಡಿಲವೊಲೆಱಗುವ ನರಗನ
ಪಡೆಗಗಿದುಮ್ಮಳದಿನುಂಡೆಡೆಯೊಳುಣ್ಣದೆಯುಂ ।
ಕೆಡೆದೆಡೆಯೊಳ್ ಕೆಡೆಯದೆ ನಿಂ
ದೆಡೆಯೊಳ್ ನಿಲ್ಲದೆಯುಮೋಡಿದಂ ಮಹಿಪಾಲಂ ॥ ೩೭

ಬಿದ್ದು ಯುದ್ಧಮಾಡಿದ ವಿಷಯವನ್ನು ಇಂದು ಹೇಳಲು ಅದನ್ನು ಕೇಳಿ ಆ ಲಾಟದೇಶದವರು ಇನ್ನೂ ಆ ಸತ್ತವರಿಗೆ ತರ್ಪಣೋದಕವನ್ನು ಕೊಡುತ್ತಿದ್ದಾರೆ ಎನ್ನಿಸಿಕೊಳ್ಳುವ ದೃಢಸಂಕಲ್ಪದ, ಛಲದ ಬಲದ ಕಲಿಯಾದವನು ನರಸಿಂಹ. ೩೪. ನರಸಿಂಹನು ಸಿಂಹದಂತೆ ರೇಗಿ ಮೇಲೆ ಬಿದ್ದು ಯುದ್ಧಮಾಡಲು ಆಗ ಚಿಮ್ಮಿದ ರಕ್ತವು ಆಕಾಶದಲ್ಲಿ ಕೆಂಪುಬಾವುಟಗಳು ಮುಚ್ಚಿಕೊಂಡಂತಾಯಿತು. ಸಕಲ ಲೋಕಕ್ಕೂ ಆಶ್ರಯದಾತನಾದ ಆತನ ಗರ್ವದ ಹಿರಿಮೆ ಅದೆಂತಹುದೋ? ೩೫. ನರಸಿಂಹನು ಸಪ್ತಮಾನಲಗಳನ್ನು (ಮಾಳವದೇಶದ ಏಳು ಭಾಗಗಳನ್ನು) ಹಾರಿಹೋಗುವಂತೆ ಪ್ರತಿಭಟಿಸಿ ಕರಿಕೇಳುವಂತೆ ಸುಡಲು ಆಗ ಎದ್ದ ಉರಿಯು ಅವನ ತೇಜಸ್ಸಿನ ಬೀಳಲುಗಳನ್ನು ಅನುಕರಿಸಿದುವು. ೩೬. ನರಸಿಂಹನು ತನ್ನ ಜೈತ್ರಯಾತ್ರೆಯಲ್ಲಿ ವಿಜಯಸೂಚಕವಾದ ಮುಂಗುಡಿಯ ಆನೆಗಳನ್ನು ಹಿಂಬಾಲಿಸಿ ಘೂರ್ಜರದೇಶದ ರಾಜನ ಸೈನ್ಯವನ್ನು ಹೊಡೆದೋಡಿಸಿ ತನ್ನ ಭುಜಬಲದ ಜಯದಿಂದ ಅರ್ಜುನನನ್ನು ಮೀರಿಸುವಂಥವನಾದನು. ೩೭. ಸಿಡಿಲೆರಗುವ ಹಾಗೆ ಎರಗಿದ ನರಸಿಂಹನ ಸೈನ್ಯಕ್ಕೆ ಹೆದರಿ ಮಹಿಪಾಲನೆಂಬ ರಾಜನು ಊಟಮಾಡಿದ ಸ್ಥಳದಲ್ಲಿ ಪುನಃ ಊಟಮಾಡದೆಯೂ ಮಲಗಿದ ಕಡೆಯಲ್ಲಿ ಪುನಃ ಮಲಗದೆಯೂ ನಿಂತೆಡೆಯಲ್ಲಿ

ಗಂಗಾವಾರ್ಧಿಯೊಳಾತ್ಮತು
ರಂಗಮುಮಂ ಮಿಸಿಸಿ ನೆಗಲ್ದ ಡಾಳಪ್ರಿಯನೊಳ್ ।
ಸಂಗತ ಗುಣನಸಿಲತೆಯನ
ಸುಂಗೊಳೆ ಭುಜವಿಜಯಗರ್ವದಿಂ ಸ್ಥಾಪಿಸಿದಂ ॥ ೩೮

ಕಂ ॥ ಆ ನರಸಿಂಹಮಹೀಶ ಮ
ನೋನಯನಪ್ರಿಯೆ ವಿಳೋಳನೀಳಾಳಕೆ ಚಂ ।
ದ್ರಾನನೆ ಜಾಕವ್ವೆ ದಲಾ
ಜಾನಕಿಗಗ್ಗಳಮೆ ಕುಲದೊಳಂ ಶೀಲದೊಳಂ ॥ ೩೯

ಪೊಸತಲರ್ದ ಬಿಳಿಯ ತಾವರೆ
ಯೆಸಟ್ಗಳ ನಡುವಿರ್ಪ ಸಿರಿಯುಮಾಕೆಯ ಕೆಲದೊಳ್ ।
ನಸು ಮಸುಳ್ಕು ತೋರ್ಪಳೆನೆ ಪೋ
ಲಿಸುವೊಡೆ ಜಾಕವ್ವೆಗುಟೆದ ಪೆಂಡಿರ್ ದೊರೆಯೇ ॥ ೪೦

ಆ ಜಾಕವ್ವೆಗಮಾ ವಸು
ಧಾ ಜಯ ಸದ್ವಲ್ಲಭಂಗಮತಿ ವಿಶದ ಯಶೋ ।
ರಾಜಿತನೆನಿಪರಿಕೇಸರಿ
ರಾಜಂ ತೇಜೋಗ್ನಿಮಗ್ನ ರಿಪು ನೃಪಶಲಭಂ ॥ ೪೧

ನಿಲ್ಲದೆಯೂ ಪಲಾಯನ ಮಾಡಿದನು. ೩೮. ಅಲ್ಲದೆ ನರಸಿಂಹನು ಗಂಗಾನದಿಯಲ್ಲಿ ತನ್ನ ಕುದುರೆಯನ್ನು ಮಜ್ಜನಮಾಡಿಸಿ ಪ್ರಸಿದ್ಧವಾದ ಉಜ್ಜಯನಿಯಲ್ಲಿ ಗುಣಶಾಲಿಯಾದ ಅವನು ತನ್ನ ಕತ್ತಿಯನ್ನು[1] ಶತ್ರುಗಳ ಪ್ರಾಣಾಪಹರಣಕ್ಕಾಗಿ ಭುಜವಿಜಯ ಗರ್ವದಿಂದ ಸ್ಥಾಪಿಸಿದನು. ೩೯. ಆ ನರಸಿಂಹರಾಜನ ಮನಸ್ಸಿಗೂ ಕಣ್ಣಿಗೂ ಪ್ರಿಯಳಾದವಳೂ ಚಂಚಲವಾದ ಕರಿಯ ಮುಂಗುರುಳುಳ್ಳವಳೂ ಚಂದ್ರನಂತೆ ಮುಖವುಳ್ಳವಳೂ ಆ ಜಾಕವ್ವೆಯಲ್ಲವೇ! ಆಕೆಯು ಕುಲದಲ್ಲಿಯೂ ಶೀಲದಲ್ಲಿಯೂ ಸೀತಾದೇವಿಗೂ ಅಧಿಕಳಾದವಳೇ ಸರಿ. ೪೦. ಹೊಸದಾಗಿ ಅರಳಿದ ಬಿಳಿಯ ತಾವರೆಯ ದಳದ ಮಧ್ಯದಲ್ಲಿರುವ ಲಕ್ಷ್ಮೀದೇವಿಯೂ ಆಕೆಯ ಪಕ್ಕದಲ್ಲಿ ಸ್ವಲ್ಪ ಕಾಂತಿಹೀನಳಾಗುತ್ತಾಳೆ ಎನ್ನಲು ಉಳಿದ ಸ್ತ್ರೀಯರು ಆ ಜಾಕವ್ವೆಗೆ ಹೋಲಿಸಲು ಸಮಾನರಾಗುತ್ತಾರೆಯೇ. ೪೧-೪೨. ಆ ಜಾಕವ್ವೆಗೆ ಭೂಮಂಡಲಾಧಿಪತಿಶ್ರೇಷ್ಠನಾದ ನರಸಿಂಹನಿಗೂ ತನ್ನ ತೇಜಸ್ಸೆಂಬ ಬೆಂಕಿಯಲ್ಲಿ ಮುಳುಗಿದ ಶತ್ರುರಾಜರೆಂಬ ಪತಂಗಗಳನ್ನುಳ್ಳವನೂ ನಿರ್ಮಲವಾದ ಯಶಸ್ಸಿನಿಂದ ಕೂಡಿದವನೂ ಆದ (ಇಮ್ಮಡಿ) ಅರಿಕೇಸರಿಯೆಂಬ ರಾಜನು ಹುಟ್ಟಿದನು. ಹಾಗೆ ಅವನು ಹುಟ್ಟಿದ ಕೂಡಲೇ ತ್ಯಾಗದ ಪೆಂಪಿನಲ್ಲಿಯೂ ವೀರದ ವೈಭವದಲ್ಲಿಯೂ ಮಗನೆಂದರೆ ಇವನೇ ಮಗ ಎಂದೆಲ್ಲರೂ ಹೊಗಳುವ ಹಾಗೆ ಪ್ರಸಿದ್ಧಿ ಪಡೆಯಲು ಈ ಅರಿಕೇಸರಿಯಿಂದ ಪ್ರಪಂಚವೆಂಬ ಮಂದಿರಕ್ಕೆ ಕೊಂಬು

---

1. ಇಲ್ಲಿ ಡಾಳಪ್ರಿಯನೊಳ್ ಎಂಬ ಪಾಠಕ್ಕೆ ಅರ್ಥವಾಗುವುದಿಲ್ಲ.

ಮಗನಾದನಾಗಿ ಚಾಗದ
ನೆಗೞ್ತೆಯೊಳ್ ಬೀರದೇೞ್ಗೆಯೊಳ್ ನೆಗೞ್ದ ಮಗಂ ।
ಮಗನೆನೆ ಪುಟ್ಟಲೊಡಂ ಕೋ
ೞ್ಮೊಗಗೊಂಡುದು ಭುವನಭವನಮರಿಕೇಸರಿಯೊಳ್ ॥ ೪೨

ತರಳ ॥ ಮದದ ನೀರೊಳೆ ಲೋಕವಾರ್ತೆಗೆ ಬೆಚ್ಚುನೀರ್ದಳಿದಾಗಳಾ
ಮದಗಜಾಂಕುಶದಿಂದೆ ಪೆರ್ಚಿಸಿ ನಾಭಿಯಂ ಮದದಂತಿ ದಂ ।
ತದೊಳೆ ಕಟ್ಟಿದ ತೊಟ್ಟಿಲಂ ನಯದಿಂದಮೇಱಿಸೆ ಬಾಳಕಾ
ಲದೊಳೆ ತೊಟ್ಟಿಲಿಗಂ ಗಜಪ್ರಿಯನಪ್ಪುದಂ ಸಲೆ ತೋಱಿದಂ ॥ ೪೩

ಕಂ॥ ರುಂದ್ರಾಂಭೋಧಿ ಪರೀತ ಮ ।
ಹೀಂದ್ರರದಾರಿನ್ನರೀ ನರೇಂದ್ರಂ ಸಾಕ್ಷಾ ॥
ದಿಂದ್ರಂ ತಾನೆನೆ ಸಲೆ ನೆಗ
ೞ್ದಿಂದ್ರೇಂದ್ರನ ತೋಳೆ ತೊಟ್ಟಲಾಗಿರೆ ಬಳೆದಂ ॥ ೪೪

ಅಮಿತಮತಿ ಗುಣದಿನತಿ ವಿ
ಕ್ರಮಗುಣದಿಂ ಶಾಸ್ತ್ರಪಾರಮುಂ ರಿಪುಬಳ ಪಾ ।
ರಮುಮೊಡನೆ ಸಂದುವೆನಿಸಿದ
ನಮೇಯ ಬಲಶಾಲಿ ಮನುಜ ಮಾರ್ತಾಂಡ ನೃಪಂ ॥ ೪೫

ಉಡೆವಣಿ ಪಱಿಯದ ಮುನ್ನಮೆ
ತೊಡಗಿ ಚಲಂ ನೆಗೞ್ದ ರಿಪುಬಲಂಗಳನೆ ಪಡ ।
ಲ್ವಡಿಸಿ ಪರಬಲದ ನೆತ್ತರ
ಕಡಲೊಳಗಣ ಜಿಗುಳೆ ಬಳೆವ ತೆಱದೊಳೆ ಬಳೆದಂ ॥ ೪೬

ಹುಟ್ಟಿದ ಹಾಗಾಯಿತು. (ಅಂದರೆ ಇವನಿಂದ ಪ್ರಪಂಚಕ್ಕೆಲ್ಲ ಹಿರಿಮೆಯುಂಟಾಯಿತು ಎಂದು ಭಾವ). ೪೩. ಅರಿಕೇಸರಿಯು ಹುಟ್ಟಿದ ಕೂಡಲೆ ಆ ಶಿಶುವಿಗೆ ಆನೆಯ ಮದೋದಕದಿಂದಲೇ ಲೋಕರೂಢಿಯಂತೆ (ಸಂಪ್ರದಾಯಾನುಸಾರವಾಗಿ) ಬೆಚ್ಚನೀರೆರೆದು ಮದಗಜಾಂಕುಶದಿಂದ ಹೊಕ್ಕಳ ಕುಡಿಯನ್ನು ಕತ್ತರಿಸಿ ಮದಗಜದಂತದಿಂದ ಮಾಡಿದ ತೊಟ್ಟಿಲಿನಲ್ಲಿ ಮಲಗಿಸಲು ಅವನು ತೊಟ್ಟಿಲ ಕೂಸಾಗಿದ್ದ ಕಾಲದಿಂದಲೂ ತಾನು 'ಗಜಪ್ರಿಯ'ನಾಗುವುದನ್ನು ಪ್ರಕಾಶಪಡಿಸಿದನು. ೪೪. ಈ ಅರಿಕೇಸರಿಯು ಸಾಕ್ಷಾತ್ ಇಂದ್ರನೇ ತಾನೆಂದು ಪ್ರಸಿದ್ಧಿ ಪಡೆದ ಇಂದ್ರರಾಜನ ತೋಳೆಂಬ ತೊಟ್ಟಿಲಿನಲ್ಲಿ ಬೆಳೆದನು. ವಿಸ್ತಾರವಾದ ಸಮುದ್ರದಿಂದ ಸುತ್ತುವರಿಯಲ್ಪಟ್ಟ ಈ ಭೂಮಿಯಲ್ಲಿ ಇಂಥವರು ಮತ್ತಾರಿದ್ದಾರೆ? ೪೫. ಅಳತೆಗೆ ಸಿಲುಕದ ಭುಜಬಲವುಳ್ಳ ಈ ಮನುಜಮಾರ್ತಾಂಡನೃಪನು (ಮನುಷ್ಯರಲ್ಲಿ ಸೂರ್ಯನಂತಿರುವ ರಾಜನು) ತನ್ನ ವಿಶೇಷವಾದ ಬುದ್ಧಿಗುಣದಿಂದಲೂ ಅಸಾಧ್ಯವಾದ ಪರಾಕ್ರಮದಿಂದಲೂ ಶಾಸ್ತ್ರದ ಎಲ್ಲೆಯನ್ನೂ ಶತ್ರುಬಲದ ಎಲ್ಲೆಯನ್ನೂ ಜೊತೆಯಲ್ಲಿಯೇ ದಾಟಿದನು ಎಂದರೆ ಶಾಸ್ತ್ರವಿದ್ಯೆಯನ್ನೂ ಶಸ್ತ್ರವಿದ್ಯೆಯನ್ನೂ ಏಕಕಾಲದಲ್ಲಿ ಕಲಿತನು. ೪೬. ಈತನು ತನ್ನ ಸೊಂಟಕ್ಕೆ ಕಟ್ಟಿರುವ ಮಣಿಗಳು ಹರಿದು ಹೋಗುವುದಕ್ಕೆ ಮುಂಚಿನಿಂದಲೂ ಅಂದರೆ ಇನ್ನೂ ಬಾಲ್ಯಾವಸ್ಥೆಯಲ್ಲಿದ್ದಾಗಿ

ಮೇಲೆಟ್ಟಿ ಬಲಂ ಕೋಟಿಗೆ
ಮೇಲಪ್ಪೊಡಮನ್ಯವನಿತೆ ನೆಗಬ್ದೂರ್ವಶಿಗಂ ।
ಮೇಲಪ್ಪೊಡಮಕ್ಕೆಂದುಂ
ಸೋಲವು ಕಣ್ ಪರಬಲಾಬ್ಧಿಗಂ ಪರವಧುಗಂ ॥ ೪೭

ಧುರದೊಳ್ ಮೂಱುಂ ಲೋಕಂ
ನೆರೆದಿರೆಯುಂ ಕುಡುವ ಪೊೞ್ತಿಱೊಳ್ ಮೇರುವೆ ಮುಂ ।
ದಿರೆಯುಂ ಬೀರದ ಬಯದಂ
ತರಕ್ಕೆ ಕಿಱಿದೆಂದು ಚಿಂತಿಪಂ ಪ್ರಿಯಗಳ್ಳಂ ॥ ೪೮

ಸಮನೆನಿಸುವರ್ ಪ್ರಶಸ್ತಿ
ಕ್ರಮದೊಳ್ ಸ್ವಸ್ತಿ ಸಮಧಿಗತ ಪಂಚಮಹಾ ಶ ।
ಬ್ದ ಮಹಾ ಸಾಮಂತರೆನಲ್
ಸಮನೆನಿಪರೆ ಗುಣದೊಳರಿಗನೊಳ್ ಸಾಮಂತರ್ ॥ ೪೯

ಉ ॥ ಚಾಗದ ಕಂಬಮಂ ನಿಱಿಸಿ ಬೀರದ ಶಾಸನಮಂ ನೆಗಟ್ಟಿ ಕೋ
ಳ್ಪೋಗದ ಮಂಡಲಂಗಳನೆ ಕೊಂಡು ಜಗತ್ತ್ರಿತಯಂಗಳೊಳ್ ಜಸ ।
ಕ್ಕಾಗರಮಾದ ಬದ್ದೆಗನಿನಾ ನರಸಿಂಹನಿನತ್ತ ನಾಲ್ವೆರಲ್
ಮೇಗು ಪೊದಟ್ಟ ಚಾಗದೊಳಮೊಂದಿದ ಬೀರದೊಳಂ ಗುಣಾರ್ಣವಂ ॥ ೫೦

ನಿಂದಲೂ ಹಟಸ್ವಭಾವದಿಂದ ಕೂಡಿ ಶತ್ರುಸೈನ್ಯಗಳನ್ನೆಲ್ಲ ಕೆಳಗುರುಳುವ ಹಾಗೆ ಮಾಡಿ ಶತ್ರುಸೇನೆಯ ರಕ್ತಸಮುದ್ರದ ಮಧ್ಯದಲ್ಲಿರುವ ಜಿಗುಳೆಯು ಬೆಳೆಯುವ ಹಾಗೆ ಬೆಳೆದನು. ೪೭. ತನ್ನ ಮೇಲೆ ದಂಡೆತ್ತಿ ಬಂದ ಸೈನ್ಯವು ಕೋಟಿಸಂಖ್ಯೆಯನ್ನು ಮೀರಿದ್ದರೂ ಪರಸ್ತ್ರೀಯು ಪ್ರಸಿದ್ಧರೂಪವತಿಯಾದ ಊರ್ವಶಿಯನ್ನು ಮೀರಿದ್ದರೂ ಅವನ ಕಣ್ಣು ಮಾತ್ರ ಯಾವಾಗಲೂ ಶತ್ರುಸೇನಾಸಮುದ್ರಕ್ಕೂ ಪರವನಿತೆಗೂ ಸೋಲುವುದಿಲ್ಲ. ೪೮. ಪ್ರಿಯಗಳ್ಳನೆಂಬ ಬಿರುದಾಂಕಿತನಾದ ಆ ಅರಿಕೇಸರಿಯು ಯುದ್ಧದಲ್ಲಿ ತನಗೆ ಮೂರುಲೋಕವೂ ಒಟ್ಟುಗೂಡಿ ಎಂದು ಎದುರಿಸಿದರೂ ಅದು ತನ್ನ ಪರಾಕ್ರಮದ ವ್ಯಾಪ್ತಿಗೆ ಕಿರಿದೆಂದೇ ಭಾವಿಸುತ್ತಾನೆ. ಹಾಗೆಯೇ ದಾನಮಾಡುವ ಹೊತ್ತಿನಲ್ಲಿ ಸುವರ್ಣ ಪರ್ವತವಾದ ಮೇರುಪರ್ವತವೇ ತನ್ನ ಮುಂದೆ ಇದ್ದರೂ ತನ್ನ ವ್ಯಯಶಕ್ತಿಗೆ ಅಲ್ಪವೆಂದೇ ಎಣಿಸುತ್ತಾನೆ. ೪೯. ಬಿರುದಾವಳಿಗಳನ್ನು ಹೊಗಳುವ ಪ್ರಸ್ತಾಪದಲ್ಲಿ ಮಾತ್ರ ಪಂಚಮಹಾಶಬ್ದಗಳನ್ನು (ಕೊಂಬು, ತಮಟೆ, ಶಂಖ, ಭೇರಿ, ರಾಜಘಂಟ) ಸಂಪಾದಿಸಿರುವ ಮಹಾಸಾಮಂತರು ಅರಿಕೇಸರಿಯೊಡನೆ ಸಮಾನರೆನಿಸಿಕೊಳ್ಳುತ್ತಾರೆಯೇ? ೫೦. ದಾನಶಾಸನಗಳನ್ನೂ ಪೀರಸೂಚಕವಾದ ಪ್ರತಾಪಶಾಸನಗಳನ್ನೂ ಸ್ಥಾಪಿಸಿ ಅಧೀನವಾಗದ ರಾಜ್ಯಸಮೂಹಗಳನ್ನೆಲ್ಲ ವಶಪಡಿಸಿಕೊಂಡು ಮೂರುಲೋಕಗಳನ್ನೂ ತನ್ನ ಕೀರ್ತಿಗೆ ಆವಾಸಸ್ಥಾನ ಮಾಡಿಕೊಂಡ ಭದ್ರದೇವನಿಗಿಂತಲೂ ನರಸಿಂಹನಿಗಿಂತಲೂ ಸರ್ವವ್ಯಾಪಿಯಾದ

ಮ॥ಸ್ರ॥ ಎನೆ ಸಂದುಂ ವೀರವೈರಿಕ್ಷಿತಿಪಗಜಘಟಾಟೋಪಕುಂಭಸ್ಥಳೀಭೇ
ದನನುಗ್ರೋದ್ಭಾಸಿ ಭಾಸ್ವದ್ಭುಜಪರಿಘನನಾರೂಢಸರ್ವಜ್ಞನಂ ವೈ ।
ರಿ ನರೇಂದ್ರೋದ್ದಾಮ ದರ್ಪೋಚ್ಛೇದ್ವಳನನನೆ ಕಥಾನಾಯಕಂ ಮಾಡಿ ಸಂದ
ರ್ಜುನನೊಳ್ ಪೋಲ್ವೀ ಕಥಾಭಿತ್ತಿಯನನುನಯದಿಂ ಪೇಬಲೆಂದೆತ್ತಿಕೊಂಡೆಂ॥
೫೧

ವ ॥ ಅದೆಂತೆನೆ-ಸಮುನ್ಮಿಷ ರತ್ನಮಾಲಾ ಪ್ರಭಾಭೀಲಾರುಣ ಜಲಪ್ಲಾವಿಳ ವಿಲೋಳವೀಚೀರಯ ಪ್ರದಾರಿತ ಕುಳಾಚಲೋದಧಿಪರೀತಮಾಗಿರ್ದ ಜಂಬೂದ್ವೀಪ ದೊಳಗುಂಟು ನಾಡು ಕುರುಜಾಂಗಣನಾಮದಿಂ ಅಂತಾ ಕುರುಜಾಂಗಣ ವಿಷಯದೊಳ್-

ಚಂ ॥ ಜಲಜಲನೊಬ್ಬುಳಿರ್ಪ ಪರಿಕಾಲ್ ಪರಿಕಾಲೊಳಳುರ್ಕೆಗೊಂಡ ನೈ
ದಿಲ ಪೊಸವೂ ಪೊದಟ್ಟ ಪೊಸ ನೈದಿಲ ಕಂಪನೆ ಬೀಱೆ ಕಾಯ್ತ ಕೆಂ ।
ಗೊಲೆಯೊಳೆ ಜೋಲ್ವ ಶಾಳಿ ನವಶಾಳಿಗೆ ಪಾಯ್ವ ಶುಕಾಳಿ ತೋಱೆ ಕೆ
ಯ್ವೊಲಗಳಿನೊಪ್ಪಿ ತೋಱೆ ಸಿರಿ ನೋಡುಗುಮಾ ವಿಷಯಾಂತರಾಳದೊಳ್ ॥
೫೨

ದಾನಗುಣದಲ್ಲಿಯೂ ಅವನಲ್ಲಿ ಸಹಜವಾಗಿರುವ ವೀರ್ಯಗುಣದಲ್ಲಿಯೂ ಗುಣಾರ್ಣವ ಬಿರುದಾಂಕಿತನಾದ ಅರಿಕೇಸರಿಯು ನಾಲ್ಕು ಬೆರಳಷ್ಟು ಮೇಲಾಗಿದ್ದಾನೆ. ೫೧. ಎಂದು ಪ್ರಸಿದ್ಧನಾದವನೂ ಶತ್ರುರಾಜರ ಆನೆಗಳ ಸಮೂಹದ ಬಲಿಷ್ಠವಾದ ಕುಂಭಸ್ಥಳವನ್ನು ಸೀಳುವವನೂ ಭಯಂಕರವೂ ಬಲಿಷ್ಠವೂ ಆದ ಕತ್ತಿಯಿಂದ ಪ್ರಕಾಶಮಾನವಾದ ತೋಳೆಂಬ ಪರಿಘಾಯುಧವುಳ್ಳವನೂ ಆರೂಢಸರ್ವಜ್ಞನೆಂಬ ಬಿರುದುಳ್ಳವನೂ ವೈರಿರಾಜರ ವಿಶೇಷವಾದ ಅಹಂಕಾರವನ್ನು ಅಡಗಿಸುವವನೂ ಆದ ಅರಿಕೇಸರಿಯನ್ನೇ ಈ ಕತೆಗೆ ನಾಯಕನನ್ನಾಗಿ ಮಾಡಿ ಪ್ರಸಿದ್ಧನಾದ ಅರ್ಜುನನೊಡನೆ ಹೋಲಿಸುವ ಈ ಕಥಾಚಿತ್ರವನ್ನು ಹೇಳಬೇಕೆಂದು ಪ್ರೀತಿಯಿಂದ ಅಂಗೀಕಾರ ಮಾಡಿದ್ದೇನೆ. ವ॥ ಅದು ಹೇಗೆಂದರೆ ವಿಶೇಷವಾಗಿ ಪ್ರಕಾಶಿಸುತ್ತಿರುವ ವಿಧವಿಧವಾದ ರತ್ನಗಳ ಕಾಂತಿಯಿಂದ ಭೇದಿಸಲ್ಪಟ್ಟ ಕೆಂಪುನೀರಿನಿಂದ ಕಲುಷಿತವೂ ಚಂಚಲವೂ ಆದ ಅಲೆಗಳ ವೇಗದಿಂದ ಸೀಳಲ್ಪಟ್ಟ ಕುಲಪರ್ವತಗಳನ್ನುಳ್ಳ, ಸಮುದ್ರದಿಂದ ಆವೃತವೂ ಆದ ಜಂಬೂದ್ವೀಪದಲ್ಲಿ ಕುರುಜಾಂಗಣವೆಂಬ ಹೆಸರಿನಿಂದ ಕೂಡಿದ ನಾಡೊಂದುಂಟು. ಹಾಗಿರುವಾಗ ಕುರುಜಾಂಗಣ ದೇಶದಲ್ಲಿ ೫೨. ಜಲಜಲ ಎಂದು ಶಬ್ದ ಮಾಡುತ್ತ ಪ್ರವಾಹವಾಗಿ ಹರಿಯುವ ಕಾಲುವೆಗಳು, ಆ ಕಾಲುವೆಗಳಲ್ಲಿ ಹರಡಿಕೊಂಡಿರುವ ಹೊಸದಾದ ನೆಯ್ದಿಲೆಯ ಹೂವು, ಸುತ್ತಲೂ ವ್ಯಾಪಿಸಿರುವ ಹೊಸನೆಯ್ದಿಲ ಹೂವಿನ ಸುಗಂಧವನ್ನು ಸೂಸಿ ಫಲ ಬಿಟ್ಟಿರುವ ಕೆಂಪುಗೊಂಚಲಿನ ಜೋತುಬಿದ್ದಿರುವ ಬತ್ತ, ಆ ಹೊಸ ಬತ್ತಕ್ಕೆ ಹಾಯ್ದು ಬರುವ ಗಿಣಿಗಳ ಗುಂಪು - ಇವು ಕಾಣುತ್ತಿರಲು ಆ ಗದ್ದೆಗಳಿಂದ ಮನೋಹರವಾಗಿ ತೋರುವ ಆ ದೇಶದಲ್ಲಿ ಲಕ್ಷ್ಮೀದೇವಿಯು ಸದಾ ನಲಿದಾಡುತ್ತಿದ್ದಾಳೆ. ಅಂದರೆ ಆ ಭಾಗವು ಸದಾ

ಬೆಳೆದೆಱಗಿರ್ದ ಕೆಯ್ವೊಲನೆ ಕೆಯ್ವೊಲನಂ ಬಳಸಿರ್ದ ಪೂತ ಪೂ
ಗೊಳಗಳೆ ಪೂತ ಪೂಗೊಳಗಳಂ ಬಳಸಿರ್ದ ವಿಚಿತ್ರ ನಂದನಾ ।
ವಳಿಗಳೆ ನಂದನಾವಳಿಗಳಂ ಬಳಸಿರ್ದ ಮದಾಳಿ ಸಂಕುಲಂ
ಗಳೆ ವಿಷಯಾಂಗನಾಲುಳಿತ ಕುಂತಳದಂತೆವೊಲೊಪ್ಪಿ ತೋಱುಗುಂ ೫೩

ಚಂ ॥ ಲಳಿತ ವಿಚಿತ್ರ ಪತ್ರ ಫಲ ಪುಷ್ಪಯುತಾಟವಿ ಸೊರ್ಕಿದಾನೆಯಂ
ಬೆಳೆವುದು ದೇವಮಾತೃಕಮೆನಿಪ್ಪ ಪೊಲಂ ನವಗಂಧಶಾಳಿಯಂ ।
ಬೆಳೆವುದು ರಮ್ಯ ನಂದನ ವನಾಳಿ ವಿಯೋಗಿಜನಕ್ಕೆ ಬೇಟಮಂ
ಬಳೆವುದು ನಾಡ ಕಾಡ ಬೆಳಸಿಂಬೆಳಸಾ ವಿಷಯಾಂತರಾಳದೊಳ್ ॥ ೫೪

ಕಂ॥ ಆವಲರುಂ ಪಣ್ಣುಂ ಬೀ
ತೋವವು ಗಡ ಬೀಯವಲ್ಲಿ ಮಲ್ಲಿಗೆಗಳುಮಿ ।
ಮ್ಮಾವುಗಳುಮೆಂದೊಡಿನ್ ಪೆಱ
ತಾವುದು ಸಂಸಾರ ಸಾರಸರ್ವಸ್ವ ಫಲಂ ॥ ೫೫

ಮಿಡಿದೊಡೆ ತನಿಗರ್ವು ರಸಂ
ಬಿಡುವುವು ಬರಿದೊಂದು ಮುಗುಳ ಕಂಪಿನೊಳೆ ಮೊಗಂ ।
ಗಿಡುವುವು ತುಂಬಿಗಳಟ್ಟಮೆ
ವಡುವುವು ಕುಡಿದೊಂದು ಪಣ್ಣ ರಸದೊಳೆ ಗಿಳಿಗಳ್ ॥ ೫೬

ಸಂಪದ್ಭರಿತವಾಗಿದೆ ಎಂದು ಭಾವ. ೫೩. (ಆ ದೇಶದಲ್ಲಿ ಎಲ್ಲಿ ನೋಡಿದರೂ) ಬೆಳೆದ ತೆನೆಯ ಭಾರದಿಂದ ಬಾಗಿರುವ ಗದ್ದೆಗಳೇ, ಆ ಗದ್ದೆಗಳನ್ನು ಬಳಸಿಕೊಂಡಿರುವ ಹೂವಿನಿಂದ ಕೂಡಿರುವ ಕೊಳಗಳೇ, ಆ ಹೂಗೊಳಗಳ ಸುತ್ತಲಿರುವ ವಿಚಿತ್ರವಾದ ತೋಟದ ಸಮೂಹಗಳೇ. ಆ ತೋಟವನ್ನು ಆವರಿಸಿಕೊಂಡಿರುವ ಮದಿಸಿದ ದುಂಬಿಗಳ ಗುಂಪುಗಳ ಆ ದೇಶವೆಂಬ ಸ್ತ್ರೀಯ ವಕ್ರವಾದ ಮುಂಗುರುಳಿನಂತೆ ಕಾಣುತ್ತದೆ. ೫೪. ಆ ನಾಡಿನ ಒಳಭಾಗದಲ್ಲಿ ಸುಂದರವೂ ವಿವಿಧವೂ ಆದ ಎಲೆ ಹಣ್ಣು ಹೂವುಗಳಿಂದ ಕೂಡಿದ ಕಾಡು ಮದ್ದಾನೆಗಳನ್ನು ಬೆಳೆಸುತ್ತದೆ. ಮಳೆಯಿಂದಲೇ ಬೆಳೆಯುವ ಹೊಲಗಳು ಸುವಾಸನಾಯುಕ್ತವಾದ ಬತ್ತವನ್ನು ಬೆಳೆಸುತ್ತವೆ. ರಮ್ಯವಾದ ತೋಟದ ಸಾಲುಗಳು ವಿರಹಿಗಳಿಗೆ ಪ್ರೀತಿಯನ್ನು ಹೆಚ್ಚಿಸುತ್ತವೆ. ಆ ದೇಶದ ನಾಡಿನಲ್ಲಿಯೂ ಕಾಡಿನಲ್ಲಿಯೂ ಬೆಳೆಯುವ ಬೆಳಸು ಇನಿದಾದ ಬೆಳಸಾಗಿವೆ. ೫೫. (ಅಲ್ಲಿಯ) ಹೂವು ಹಣ್ಣು ಮಲ್ಲಿಗೆಗಳೂ ರಸಯುಕ್ತವಾದ ಮಾವುಗಳೂ ಎಂದೂ ಮುಗಿದುಹೋಗವು ಎಂದಮೇಲೆ ಸಂಸಾರಸಾರ ಸರ್ವಸ್ವಫಲ ಬೇರೆ ಯಾವುದಿದೆ? ೫೬. ಆ ನಾಡಿನ ರಸಯುಕ್ತವಾದ ಕಬ್ಬು ಬೆರಳಿನಿಂದ ಮಿಡಿದರೇ ರಸವನ್ನು ಚೆಲ್ಲುತ್ತದೆ. ದುಂಬಿಗಳು ಅರಳಿದ ಒಂದು ಹೂವಿನ ವಾಸನೆಯಿಂದಲೇ ತೃಪ್ತಿಹೊಂದಿ ಮುಖವನ್ನು ತಿರುಗಿಸುವುವು. ಗಿಳಿಗಳು ಒಂದು ಹಣ್ಣಿನ ರಸವನ್ನು ಕುಡಿಯುವುದರಿಂದಲೇ ಅಜೀರ್ಣವನ್ನು ಹೊಂದುವುವು. ಅಂದರೆ ಅಲ್ಲಿಯ ಕಬ್ಬು, ಹೂವು, ಹಣ್ಣು ರಸಯುಕ್ತವಾಗಿವೆ.

ಸುತ್ತಿಜಿದ ರಸದ ತೊಱೆಗಳೆ
ಮುತ್ತಿನ ಮಾಣಿಕದ ಪಲವುಮಾಗರಮೆ ಮದೋ ।
ನ್ಮತ್ತ ಮದಕರಿ ವನಂಗಳೆ
ಸುತ್ತಲುಮಾ ನೆಲದ ಸಿರಿಯನೇನಂ ಪೊಗಟ್ಟೆಂ ॥ ೫೭

ವ॥ ಅಂತು ಸೊಗಯಿಸುವ ಕುರುಜಾಂಗಣ ವಿಷಯಕ್ಕೆ ರಾಜದ್ರಾಜಧಾನಿಯಾಗಿರ್ದು ಹರಜಟಾಜೂಟಕ್ಕೆ ಚಂದ್ರಲೇಖೆಯಿರ್ಪಂತೆ ದಿಕ್ಕರಿಕಟತಟಕ್ಕೆ ಮದಲೇಖೆಯಿರ್ಪಂತೆ ಕೈಟಭಾರಾತಿಯ ವಿಶಾಲೋರಸ್ಥಳಕ್ಕೆ ಕೌಸ್ತುಭವಿರ್ಪಂತೆ ಸೊಗಯಿಸುತಿರ್ದುದು ಹಸ್ತಿನಪುರಮೆಂಬುದು ಪೊೞಲಲ್ಲಿ-

ರಗಳೆ ॥ ಅದರ ಪೊಱವೊೞಲ ವಿಶಾಳ ಕನಕ ಕೃತಕ ಗಿರಿಗಳಿಂ ಫಳಪ್ರಕೀರ್ಣತರುಗಳಿಂ
ನನೆಯ ಕೊನೆಯ ತಳಿರ ಮುಗುಳ ವನಲತಾನಿಕುಂಜದಿಂ ಪ್ರಸೂನ ರಜದ ಪುಂಜದಿಂ
ಗಗನತಳಮೆ ಪಱೆದು ಬಿಟ್ಟುದೆನಿಪ ಬಹುತಟಾಕದಿಂ ಕುಕಿಲ್ವ ನಲಿವ ಕೋಕದಿಂ
ಸುರಿವ ಸುರಯಿಯುರಲ ಮುಗುಳ್ಗೆ ಮೊಗಸಿದಳಿಕುಳಂಗಳಿಂ ತೊದಲ್ವ ಶಿಶು ಶುಕಂಗಳಿಂ
ತೆಗೆಯೆ ಬೀರರವದೆ ಮೇಲೆ ಪರಿವ ಮದಗಜಗಳಿಂ ಚಳತ್ತುರಂಗಮಂಗಳಿಂ
ಲವಣ ಜಳಧಿ ಬಳಸಿದಂತೆ ಬಳಸಿದಗೞ ನೀಳದಿಂದುದಗ್ರ ಕನಕಶಾಳದಿಂ

೫೭. ಆ ನಾಡಿನ ಸುತ್ತಲೂ ಸಿದ್ಧರಸದ ಮಡುಗಳೇ, ಮುತ್ತುರತ್ನಗಳಿಂದ ಮಾಡಿದ ಮನೆಗಳೇ, ಮದ್ದಾನೆಗಳಿಂದ ಕೂಡಿದ ಕಾಡುಗಳೇ. ಆ ನೆಲದ ಸಂಪತ್ತನ್ನು ಏನೆಂದು ಹೊಗಳಲಿ. ವ॥ ಹಾಗೆ ಸೊಗಯಿಸುತ್ತಿರುವ ಕುರುಜಾಂಗಣದೇಶಕ್ಕೆ ಪ್ರಕಾಶಮಾನವಾದ ರಾಜಧಾನಿ ಹಸ್ತಿನಾಪುರ. ಅದು ಈಶ್ವರನ ಜಟೆಯ ಸಮೂಹಕ್ಕೆ ಚಂದ್ರಲೇಖೆಯ ಹಾಗೆಯೂ ದಿಗ್ಗಜಗಳ ಗಂಡಸ್ಥಲಕ್ಕೆ ಮದಲೇಖೆಯ ಹಾಗೆಯೂ ವಿಷ್ಣುವಿನ ವಿಶಾಲವಾದ ವಕ್ಷಸ್ಥಳಕ್ಕೆ ಕೌಸ್ತುಭಮಣಿಯ ಹಾಗೆಯೂ ಸೊಗಯಿಸುತ್ತಿದೆ. ಆ ಪಟ್ಟಣದಲ್ಲಿ ೫೮. ಆ ಪಟ್ಟಣದ ಹೊರಭಾಗದಲ್ಲಿರುವ ಚಿನ್ನದಿಂದ ಮಾಡಿದ ಕೃತಕಪರ್ವತಗಳಿಂದಲೂ ಹಣ್ಣುಗಳಿಂದಲೂ ತುಂಬಿರುವ ಗಿಡಗಳಿಂದಲೂ ಹೂವು, ಕುಡಿ, ಚಿಗುರು, ಮೊಗ್ಗುಗಳಿಂದ ಕೂಡಿದ ತೋಟದ ಬಳ್ಳಿಮಾಡಗಳಿಂದಲೂ ಹೂವಿನ ಪರಾಗದ ರಾಶಿಗಳಿಂದಲೂ ಆಕಾಶಪ್ರದೇಶವೇ ಹರಿದು ಕೆಳಗೆ ಬಿದ್ದಿದೆಯೋ ಎನ್ನಿಸಿಕೊಳ್ಳುವ ವಿಶೇಷವಾದ ಸರೋವರಗಳಿಂದಲೂ ಶಬ್ದಮಾಡುತ್ತಿರುವ ಕೋಗಿಲೆಗಳಿಂದಲೂ ತಾನಾಗಿ ಸುರಿಯುತ್ತಿರುವ ಸುರಗಿಯ ಹೂವಿನ ಮೊಗ್ಗುಗಳಿಗೆ ಮುತ್ತಿಕೊಂಡಿರುವ ದುಂಬಿಯ ಸಮೂಹದಿಂದಲೂ ತೊದಲುಮಾತನಾಡುತ್ತಿರುವ ಗಿಳಿಯ ಮರಿಗಳಿಂದಲೂ ವೀರಶಬ್ದಗಳಿಂದ ಮುನ್ನಡೆಸಲು ಮುಂದಕ್ಕೆ ನುಗ್ಗುತ್ತಿರುವ ಮದ್ದಾನೆಗಳಿಂದಲೂ ಚಲಿಸುತ್ತಿರುವ ಕುದುರೆಗಳಿಂದಲೂ ಲವಣಸಮುದ್ರವೇ ಬಳಸಿಕೊಂಡಂತೆ ಸುತ್ತುವರಿದಿರುವ ಕಂದಕಗಳ ಪರವಿನಿಂದಲೂ, ಎತ್ತರವಾದ ಚಿನ್ನದ ಗೋಡೆಯಿಂದಲೂ ಒಳಭಾಗದಲ್ಲಿ

ದೊಳಗೆ ಕುಲನಗಂಗಳೆನಿಪ ದೇವಕುಲದ ಭೋಗದಿಂ ಸರಾಗಮಾದ ರಾಗದಿಂ
ದಿವಮನೇಳಿಪಂತು ಮಿಳಿರ್ವ ವಿವಿಧ ಕೇತನಂಗಳಿಂ ಸದಾನಿಕೇತನಂಗಳಿಂ
ಧನದ ಭವನಮೆನಿಪ ಸಿರಿಯ ಬಚ್ಚರಾಪಣಂಗಳಿಂ ಪೊದಲ್ದ ಕಾವಣಂಗಳಿಂ
ವಿಟಜನಕ್ಕೆ ತೊಡರ್ವ ಚಾರಿಯೆನಿಪ ಸೂಳೆಗೇರಿಯಿಂ ವಿದಗ್ಧ ಹೃದಯಹಾರಿಯಿಂ
ಕನಕ ಗೋಪುರಂಗಳೊಳಗಣೆರಡು ದೆಸೆಯ ಗುಣಣೆಯಿಂ ವಿಳಾಸಿನಿಯರ ಗಡಣೆಯಿಂ
ಸುರತಸುಖದ ಬಳ್ಳವಳ್ಳಿಯೆನಿಪ ಬಳ್ಳಿಮಾಡದಿಂ ಮಹಾ ವಿನೋದನೀಡದಿಂ
ಕನಕಶೈಲಮೆನಿಸಿ ನೆಗಲ್ದ ಭೂಮಿಪಾಲಭವನದಿಂ ಸಮಸ್ತ ವಸ್ತುಭುವನದಿಂ ॥೫೮॥

ವ॥ ಅಂತು ಮೂಱುಲೋಕದ ಚೆಲ್ವೆಲ್ಲಮಂ ವಿಧಾತ್ರನೊಂದೆಡೆಗೆ ತೆರಳ್ಚಿದಂತೆ ಸಮಸ್ತವಸ್ತುವಿಸ್ತಾರಹಾರಮಾಗಿರ್ದ ಹಸ್ತಿನಪುರವೆ ನಿಜವಂಶಾವಳಂಬಮಾಗೆ ನೆಗಲ್ದ ಭರತಕುಲತಿಲಕರ ವಂಶಾವತಾರಮೆಂತಾದುದೆಂದೊಡೆ-

ಕಂ ॥ ಜಳರುಹನಾಭನ ನಾಭಿಯ
ಜಳ ಬುದ್ಬುದದೊಳಗೆ ಸುರಭಿ ಪರಿಮಳ ಮಿಳಿತೋ ।
ಲ್ಲುಳಿತಾಳಿ ಜಲಜಮಾಯ್ತಾ
ಜಳಜದೊಳೊಗೆದಂ ಹಿರಣ್ಯಗರ್ಭ ಬ್ರಹ್ಮಂ । ೫೯

ಕಮಲೋದ್ಭವನಮಳಿನ ಹೃ
ತ್ಕಮಲದೊಳೊಗೆದರ್ ಸುರೇಂದ್ರ ಧಾರಕರಾವಾ ।
ಗಮುಳರ್ ನೆಗಟ್ದಿರ್ದರ್ ಪುಲ
ಹ ಮರೀಚ್ಯತ್ರ್ಯಂಗಿರಃ ಪುಳಸ್ತ್ಯ ಕ್ರತುಗಳ್ ॥ ೬೦

ಕುಲಪರ್ವತವೆನಿಸಿಕೊಳ್ಳುವ ದೇವಸ್ಥಾನಗಳ ಐಶ್ವರ್ಯದಿಂದಲೂ ಸ್ವರ್ಗವನ್ನೇ ಹಾಸ್ಯಮಾಡುವ ಹಾಗೆ ಚಲಿಸುತ್ತಿರುವ ಧ್ವಜಗಳಿಂದಲೂ ದಾನಮಾಡುವವರ ಮನೆಗಳಿಂದಲೂ, ಕುಬೇರಭವನಗಳೆನಿಸಿಕೊಂಡಿರುವ ಸಂಪದ್ಯುಕ್ತವಾದ ವೈಶ್ಯರ ಅಂಗಡಿಗಳಿಂದಲೂ ವ್ಯಾಪಿಸಿಕೊಂಡಿರುವ ಚಪ್ಪರಗಳಿಂದಲೂ ವಿಟ ಜನರು ಸಿಕ್ಕಿಕೊಳ್ಳುವ ಸಂಕೋಲೆಯಂತೆಯೂ ಪಂಡಿತರ ಹೃದಯವನ್ನು ಸೂರೆಗೊಳ್ಳುವಂತೆಯೂ ಇರುವ ಸೂಳೆಗೇರಿಯಿಂದಲೂ ಚಿನ್ನದ ಗೋಪುರ ದೊಳಗಿರುವ ಎರಡು ಕಡೆಯ ನೃತ್ಯಶಾಲೆಗಳಿಂದಲೂ ವಿಲಾಸವತಿಯರಾದ ಸ್ತ್ರೀಯರ ಸಮೂಹದಿಂದಲೂ ಸಂಭೋಗಸುಖಾತಿಶಯದಿಂದ ಕೂಡಿದ ಲತಾಗೃಹಗಳಿಂದಲೂ ಆರಾಮಗೃಹಗಳಿಂದಲೂ ಮೇರುಪರ್ವತವೆನಿಸಿಕೊಂಡು ಪ್ರಸಿದ್ಧಿಯಾಗಿರುವ ಅರಮನೆಗಳಿಂದಲೂ ಭಂಡಾರಗಳಿಂದಲೂ ವ॥ ಮೂರುಲೋಕದ ಸೌಂದರ್ಯವನ್ನು ಬ್ರಹ್ಮನು ಒಂದು ಕಡೆ ರಾಶಿ ಮಾಡಿದ ಹಾಗೆ ಸಮಸ್ತ ವಸ್ತು ವಿಸ್ತಾರದಿಂದ ಮನೋಹರವಾಗಿದ್ದ ಹಸ್ತಿನಾಪಟ್ಟಣದಲ್ಲಿ ಭರತವಂಶಶ್ರೇಷ್ಠರು ರಾಜ್ಯಭಾರ ಮಾಡುತ್ತಿದ್ದರು. ಅವರ ಹುಟ್ಟು ಹೇಗಾಯಿತೆಂದರೆ ೫೯. ವಿಷ್ಣುವಿನ ಹೊಕ್ಕುಳ ನೀರಿನ ಗುಳ್ಳೆಯಲ್ಲಿ ಸುಗಂಧಯುಕ್ತವೂ ದುಂಬಿಗಳಿಂದ ಆವೃತವೂ ಆದ ಕಮಲವು ಹುಟ್ಟಿತು. ಆ ಕಮಲದಲ್ಲಿ ಹಿರಣ್ಯಗರ್ಭ ಬ್ರಹ್ಮನು ಹುಟ್ಟಿದನು. ೬೦. ಬ್ರಹ್ಮನ ಪರಿಶುದ್ಧವಾದ ಹೃದಯಕಮಲದಲ್ಲಿ ಶ್ರೇಷ್ಠವಾದ ನೀರಿನ ಕಮಂಡಲವನ್ನು ಧರಿಸಿದ

ವ॥ ಅಂತು ಹಿರಣ್ಯಗರ್ಭ ಬ್ರಹ್ಮ ಮನಸ್ಸಂಭವದೊಳ್ ಪುಟ್ಟಿದಱುವರ್ಮಕ್ಕಳೊಳಗೆ ಮರೀಚಿಯ ಮಗಂ ಕಶ್ಯಪನನೇಕ ಭುವನೋತ್ಪತ್ತಿ ನಾಟಕಕ್ಕೆ ಸೂತ್ರಧಾರನಾದನಾತನ ಮಗನಪಾರ್ಯವೀರ್ಯಂ ಸೂರ್ಯನಾತನಿಂದವ್ಯವಚ್ಛಿನ್ನಮಾಗಿ ಬಂದ ವಂಶಂ ಸೂರ್ಯವಂಶಮೆಂಬುದಾಯ್ತು-

ಕಂ ॥ ಅತ್ರಿಯ ಪಿರಿಯ ಮಗಂ ಭುವ
ನತ್ರಯ ಸಂಗೀತ ಕೀರ್ತಿ ಸೋಮಂ ಸಕಲ ।
ಕ್ಷತ್ರಕುಲಪೂಜ್ಯನಮಳ ಚ
ರಿತ್ರಂ ಪ್ರೋದ್ದಾಮ ಸೋಮವಂಶಲಲಾಮಂ ॥ ೬೧

ಆ ಸೋಮವಂಶಜರ್ ಪಲ
ರಾಸುಕರಂಬೆರಸು ನೆಗೞ್ದ ಜಸದಿಂ ಜಗಮಂ ।
ಬಾಸಣಿಸಿ ಪೋದೊಡಧಿಕ ವಿ
ಳಾಸಂ ದೌಷ್ಯಂತಿ ಭರತನೆಂಬಂ ನೆಗೞ್ದಂ ॥ ೬೨

ಚಾರುಚರಿತ್ರಂ ಭರತನ
ಪಾರಗುಣಂ ತನ್ನ ಪೆಸರೊಳಮರ್ದೆಸೆಯೆ ಯಶೋ ।
ಭಾರಂ ಕುಲಮುಂ ಕಥೆಯುಂ
ಭಾರತಮೆನೆ ನೆಗೞ್ದನಂತು ನೆಗೞ್ವುದು ಭೂಪರ್ ॥ ೬೩

ಶುದ್ಧ ವಾಕ್ಕುಳ್ಳ ಪುಲಹ, ಮರೀಚಿ, ಅತ್ರಿ, ಅಂಗಿರಸ್, ಪುಲಸ್ತ್ಯ ಮತ್ತು ಕ್ರತು ಎಂಬುವರು ಹುಟ್ಟಿದರು. ವ॥ ಹಾಗೆ ಹಿರಣ್ಯಗರ್ಭ ಬ್ರಹ್ಮನ ಮನಸ್ಸಿನಿಂದ ಹುಟ್ಟಿದ ಆರುಜನ ಮಕ್ಕಳಲ್ಲಿ ಮರೀಚಿಯ ಮಗನಾದ ಕಶ್ಯಪನು ಅನೇಕಲೋಕಗಳ ಉತ್ಪತ್ತಿಯೆಂಬ ನಾಟಕಕ್ಕೆ ಸೂತ್ರಧಾರನಾದನು. ತಡೆಯಿಲ್ಲದ ಪರಾಕ್ರಮದಿಂದ ಕೂಡಿದವನು ಅವನ ಮಗ ಸೂರ್ಯನೆಂಬುವನು. ಆತನಿಂದ ಏಕಪ್ರಕಾರವಾಗಿ ನಡೆದುಬಂದ ವಂಶ ಸೂರ್ಯವಂಶವೆಂಬುದಾಯಿತು. ೬೧. ಮೂರು ಲೋಕದಲ್ಲಿಯೂ ಹಾಡಲ್ಪಟ್ಟ ಕೀರ್ತಿಯುಳ್ಳವನೂ ಸಮಸ್ತಕ್ಷತ್ರಿಯಸಮೂಹದಲ್ಲಿ ಪೂಜ್ಯನಾದವನೂ ಪರಿಶುದ್ಧವಾದ ನಡತೆಯುಳ್ಳವನೂ ಅತ್ಯತಿಶಯವಾದ ಸೋಮವಂಶ ಶ್ರೇಷ್ಠನೂ ಆದ ಸೋಮನೆಂಬುವನು ಅತ್ರಿಯ ಹಿರಿಯ ಮಗ. ೬೨. ಆ ಸೋಮವಂಶದಲ್ಲಿ ಹುಟ್ಟಿದ ಅನೇಕರು ಅತ್ಯತಿಶಯವೂ ಪ್ರಸಿದ್ಧವೂ ಆದ ಕೀರ್ತಿಯಿಂದ ಲೋಕವನ್ನೆಲ್ಲ ಮುಚ್ಚಿ ಮರಣ ಹೊಂದಲಾಗಿ ಅತ್ಯಂತವಿಳಾಸದಿಂದ ಕೂಡಿದ ದುಷ್ಯಂತನ ಮಗನಾದ ಭರತನೆಂಬುವನು ಪ್ರಸಿದ್ಧನಾದನು. ೬೩. ಸಚ್ಚರಿತ್ರನೂ ಅಪಾರಗುಣಯುತನೂ ಯಶಸ್ಸಿನ ಭಾರದಿಂದ ಕೂಡಿದವನೂ ಆದ ಭರತನು ತನ್ನ ಕುಲವೂ ಕಥೆಯೂ ತನ್ನ ಹೆಸರಿನಲ್ಲಿ ಸೇರಿ ಭಾರತವೆಂದು ಪ್ರಸಿದ್ಧಿಯಾಗುವ ಹಾಗೆ

ಭರತನನೇಕಾಧ್ವರ ಭರ
ನಿರತಂ ಜಸಮುೞಿಯೆ ಕೞಿಯೆ ಭೂಪರ್ ಪಲರಾ ।
ದರಿಸಿದ ಧರಣೀಭರಮಂ
ಧರಿಯಿಸಿದಂ ಪ್ರತಿಮನೆಂಬನಪ್ರತಿಮಬಲಂ ॥ ೬೪

ಅಂತಾ ಪ್ರತಿಮಂಗೆ ಸುತರ್
ಶಂತನು ಬಾಹ್ಲಿಕ ವಿನೂತ ದೇವಾಪಿಗಳೋ ।
ರಂತೆ ಧರೆ ಪೊಗೞೆ ನೆಗೞ್ದರ
ನಂತ ಬಳರ್ ಪರಬಳ ಪ್ರಭೇದನ ಶೌರ್ಯರ್ ॥ ೬೫

ವ॥ ಅವರೊಳಗೆ ದೇವಾಪಿ ನಪಯೌವನ ಪ್ರಾರಂಭದೊಳೆ ತಪಶ್ಚರಣ ಪರಾಯಣನಾದಂ ಪ್ರತಿಮನುಂ ಪ್ರತಾಪಪ್ರಸರಪ್ರಕಟಪಟುವಾಗಿ ಪಲವುಕಾಲಮರಸುಗೆಯ್ದು ಸಂಸಾರಾಸಾರತೆಗೆ ಪೇಸಿ ತಪೋವನಕ್ಕಭಿಮುಖನಾಗಲ್ಬಗೆದು-

ಕಂ ॥ ಕಂತು ಶರ ಭವನನಾ ಪ್ರಿಯ
ಕಾಂತಾ ಭ್ರೂವಿಭ್ರಮ ಗ್ರಹಾಗ್ರಹವಶದಿಂ ।
ಭ್ರಾಂತಿಸದುಪಶಾಂತಮನಂ
ಶಂತನುಗಿತ್ತಂ ಸಮಸ್ತ ರಾಜ್ಯಶ್ರೀಯಂ ॥ ೬೬

ಶಂತನುಗಮಮಳ ಗಂಗಾ
ಕಾಂತೆಗಮೆಂಟನೆಯ ವಸು ವಸಿಷ್ಠನ ಶಾಪ ।
ಭ್ರಾಂತಿಯೊಳೆ ಬಂದು ನಿರ್ಜಿತ
ಕಂತುವೆನಲ್ಕಂತು ಪುಟ್ಟಿದಂ ಗಾಂಗೇಯಂ ॥ ೬೭

ಪ್ರಖ್ಯಾತನಾದನು. ರಾಜರು ಹೀಗೆ ಪ್ರಸಿದ್ಧರಾಗಬೇಕು. ೬೪. ಅನೇಕಯಜ್ಞಕಾರ್ಯಗಳಲ್ಲಿ ಆಸಕ್ತನಾದ ಭರತನು ಕೀರ್ತಿಶೇಷನಾಗಿ ಸಾಯಲು ಅನೇಕರಾಜರು ಪ್ರೀತಿಸಿದ ಭೂಭೂರವನ್ನು (ರಾಜ್ಯಭಾರವನ್ನು) ಅಪ್ರತಿಮಬಲನಾದ ಪ್ರತಿಮನೆಂಬುವನು ಧರಿಸಿದನು. ೬೫. ಹಾಗೆ ಆ ಪ್ರತಿಮನಿಗೆ ಕೊನೆಯಿಲ್ಲದ ಬಲವುಳ್ಳವರೂ ಶತ್ರುಸೈನ್ಯವನ್ನು ವಿಶೇಷವಾಗಿ ಭೇದಿಸುವ ಶೌರ್ಯವುಳ್ಳವರೂ ಆದ ಬಾಹ್ಲಿಕ, ವಿನೂತ, ದೇವಾಪಿಗಳೆಂಬ ಮಕ್ಕಳು ಲೋಕವು ಏಕಪ್ರಕಾರವಾಗಿ ಹೊಗಳುವಂತೆ ಪ್ರಸಿದ್ಧರಾದರು. ವ॥ ಅವರಲ್ಲಿ ದೇವಾಪಿಯು ಹೊಸದಾದ ಯವ್ವನಪ್ರಾರಂಭದಲ್ಲಿಯೇ ತಪಸ್ಸು ಮಾಡುವುದರಲ್ಲಿ ಆಸಕ್ತನಾದನು. ಪ್ರತಿಮನೂ ಕೂಡ ಪ್ರತಾಪವನ್ನು ಪ್ರಕಟಿಸುವುದರಲ್ಲಿ ಸಮರ್ಥನಾಗಿ ಅನೇಕಕಾಲ ರಾಜ್ಯಭಾರಮಾಡಿ ಸಂಸಾರದ ಅಸಾರತೆಗೆ ಅಸಹ್ಯಪಟ್ಟು ತಪೋವನಕ್ಕಭಿಮುಖನಾದನು ೬೬. ಮನ್ಮಥನ ಬಾಣಗಳಿಗೆ ವಾಸಸ್ಥಾನವಾದ ಬತ್ತಳಿಕೆಯ ಹಾಗಿದ್ದ ಆ ಪ್ರತಿಮನು ತನ್ನ ಪ್ರೀತಿಪಾತ್ರರಾದ ಸ್ತ್ರೀಯರ ಹುಬ್ಬಿನ ವಿಲಾಸವೆಂಬ ಗ್ರಹಕ್ಕೆ ವಶನಾಗಿ ಭ್ರಮೆಗೊಳ್ಳದೆ ಸಮಾಧಾನಚಿತ್ತನಾಗಿ ಸಮಸ್ತರಾಜ್ಯಸಂಪತ್ತನ್ನೂ ಶಂತನುವಿಗೆ ಕೊಟ್ಟನು. ೬೭. ಶಂತನುವಿಗೂ ಪರಿಶುದ್ಧಳಾದ ಗಂಗಾದೇವಿಗೂ ಎಂಟನೆಯ ವಸುವು ವಸಿಷ್ಠನ ಶಾಪದಿಂದ ರೂಪಿನಲ್ಲಿ ಮನ್ಮಥನನ್ನು ಸೋಲಿಸುವ ಸೌಂದರ್ಯದಿಂದ ಕೂಡಿ ಭೀಷ್ಮನಾಗಿ ಹುಟ್ಟಿದನು.

ವ॥ ಅಂತು ಭುವನಕ್ಕೆಲ್ಲಮಾಯಮುಮಳವುಮಱಿವುಮಣ್ಮುಂ ಪುಟ್ಟುವಂತೆ ಪುಟ್ಟಿ ನವಯೌವನಂ ನೆಱೆಯೆ ನೆಱೆಯೆ-

ಶಾ ॥ ಸಾಲಪ್ರಾಂಶು ವಿಶಾಲಲೋಲನಯನಂ ಪ್ರೋದ್ಯದ್ವೃಷಸ್ಕಂಧನು
ನ್ನೀಲತ್ಪಂಕಜವಕ್ತ್ರನಾಯತ ಸಮುಗ್ರೋರಸ್ಥಳಂ ದೀರ್ಘ ಬಾ ।
ಹಾಲಂಬಂ ಭುಜವೀರ್ಯವಿಕ್ರಮಯುತಂ ಗಂಗಾತ್ಮಜನ್ಮಂ ಜಯ
ಶ್ರೀಲೋಲಂ ಜಮದಗ್ನಿರಾಮಮುನಿಯೊಳ್ ಕಲ್ತಂ ಧನುರ್ವಿದ್ಯೆಯಂ ॥ ೬೮

ವ॥ ಅಂತು ಕಲ್ತು ಮುನ್ನಮೆ ಚಾಪವಿದ್ಯೆಯೊಳಾರಿಂದಮಿೂತನೆ ಭಾರ್ಗವನೆನಿಸಿದ ಭಾರ್ಗವಂಗೆ ತಾನೆ ಭಾರ್ಗವನಾಗಿ ಯುವರಾಜ ಕಂಠಿಕಾಪರಿಕಲಿತ ಕಂಠಲುಂಠನುಮಾಗಿ ಪ್ರಮಾಣನಿಜಭುಜದಂಡದಂಡಿತಾರಾತಿಮಂಡಲನುಮಾಗಿ ಗಾಂಗೇಯಂ ಸುಖದೊಳರಸುಗೆಯ್ಯುತ್ತಿರ್ಪನ್ನೆಗಮಿತ್ತ ಗಂಗಾದೇಶದೊಳುಪರಿಚರವಸುವೆಂಬರಸಂ ಮುಕ್ತಾವತಿಯೆಂಬ ತೊಱೆಯೊಳ್ ವಿಶ್ರಮಿಸಿರ್ದೊಡೆ ಕೋಳಾಹಳಮೆಂಬ ಪರ್ವತಕ್ಕೆ ಪುಟ್ಟಿದ ಗಿರಿಜೆಯೆಂಬ ಕನ್ನೆಯನಾತಂ ಕಂಡು ಕಣ್ಸೋಟಂಗೊಂಡು ಮದುವೆಯಂ ನಿಂದೊಂದು ದಿವಸಮಿಂದ್ರನೋಲಗಕ್ಕೆ ಪೋಗಿ ಋತುಕಾಲಪ್ರಾಪ್ತೆಯಾಗಿರ್ದ ನಲ್ಲಳಲ್ಲಿಗೆ ಬರಲ್ ಪಡೆಯದಾಕೆಯಂ ನೆನೆದಿಂದ್ರಿಯ ಕ್ಷರಣೆಯಾದೊಡದನೊಂದು ಕದಳೀಪತ್ರದೊಳ್ ಪುದಿದು ತನ್ನ ನಡಪಿದ ಗಿಳಿಯ ಕೈಯೊಳೋಪಳಲ್ಲಿಗಟ್ಟಿದೊಡದಂ ತರ್ಪರಗಿಳಿಯನೊಂದು ಗಿಡುಗನೆಡೆಗೊಂಡು ಜಗುನೆಯಂ ಪಾಯ್ವಾಗಳುಗಿಬಗಿ ಮಾಡಿದಾಗಳದಱ ಕೈಯಿಂ ಬರ್ದುಂಕಿ ತೊಱೆಯೊಳಗೆ ಬಿೞ್ದೊಡದನೊಂದು ಬಾಳೆಮಿೂನ್ನುಂಗಿ ಗರ್ಭಮಂ ತಾಳ್ದಿದೊಡೊಂದು ದಿವಸಮಾ ಮಿೂನನೊರ್ವ ಜಾಲಗಾಱಂ

೬೮. ಸಾಲವೃಕ್ಷದಂತೆ ಎತ್ತರವಾಗಿರುವವನೂ ವಿಸ್ತಾರವೂ ವಿಲಾಸದಿಂದ ಕೂಡಿದುದೂ ಆದ ಕಣ್ಣುಳ್ಳವನೂ ಗೂಳಿಯಂತೆ ಎತ್ತರವಾದ ಹೆಗಲುಳ್ಳವನೂ ಉದ್ದವಾದ ತೋಳುಗಳಿಗೆ ಅವಲಂಬನವಾದ ಬಾಹುವೀರ್ಯಪರಾಕ್ರಮವುಳ್ಳವನೂ ವಿಜಯಲಕ್ಷ್ಮಿಯಲ್ಲಿ ಆಸಕ್ತನಾಗಿರುವವನೂ ಆದ ಭೀಷ್ಮನು ಪರಶುರಾಮನಲ್ಲಿ ಬಿಲ್ವಿದ್ಯೆಯನ್ನು ಕಲಿತನು. ವ॥ ಹಾಗೆ ಕಲಿತು ಮೊದಲೇ ಬಿಲ್ವಿದ್ಯೆಯಲ್ಲಿ ಇವನೇ ಎಲ್ಲರಿಗಿಂತಲೂ ಉತ್ತಮನೆನಿಸಿಕೊಂಡ ಪರಶುರಾಮನಿಗೆ ತಾನೇ ಆಚಾರ್ಯನಾಗಿ ಯುವರಾಜಪದವಿಗೆ ಸೂಚಕವಾದ ಕತ್ತಿನ ಹಾರದಿಂದ ಕೂಡಿದ ಕೊರಳ ಚಲನೆಯುಳ್ಳವನೂ ತನ್ನ ನೀಳವೂ ದಪ್ಪವೂ ಆದ ಭುಜದಂಡದಿಂದ ಶಿಕ್ಷಿಸಲ್ಪಟ್ಟ ಶತ್ರುಸಮೂಹವುಳ್ಳವನೂ ಆಗಿ ಭೀಷ್ಮನು ರಾಜ್ಯಭಾರ ಮಾಡುತ್ತಿದ್ದನು. ಈ ಕಡೆ ಗಂಗಾದೇಶದಲ್ಲಿ ಉಪರಿಚರವಸುವೆಂಬುವನು ಮುಕ್ತಾವತಿಯೆಂಬ ನದಿಯಲ್ಲಿ ವಿಶ್ರಾಂತಿ ಪಡೆಯುತ್ತಿದ್ದಾಗ ಕೋಳಾಹಳಪರ್ವತಕ್ಕೆ ಹುಟ್ಟಿದ ಗಿರಿಜೆಯೆಂಬ ಕನ್ಯೆಯನ್ನು ಆತನು ನೋಡಿ, ನೋಡಿದ ಕೂಡಲೇ ದೇಹವಶನಾಗಿ ಪ್ರೀತಿಸಿ ಮದುವೆಯಾದನು. ಒಂದು ದಿವಸ ಆತನು ಇಂದ್ರನ ಸಭೆಗೆ ಹೋಗಿ ಋತುಕಾಲಪ್ರಾಪ್ತೆಯಾಗಿದ್ದ ತನ್ನ ಪ್ರಿಯಳಲ್ಲಿಗೆ ಬರಲು ಸಾಧ್ಯವಾಗದೆ ಅವಳನ್ನು ನೆನೆದು ರೇತಸ್ಖಲನವಾಗಲು ಅದನ್ನು ಒಂದು ಬಾಳೆಯ ಎಲೆಯಲ್ಲಿ ಸುತ್ತಿ ತಾನು ಸಾಕಿದ ಗಿಳಿಯ ಕಯ್ಯಲ್ಲಿ ಕಳುಹಿಸಿದನು. ಅದನ್ನು ತರುತ್ತಿದ್ದ ಅರಗಿಳಿಯನ್ನು ಒಂದು ಗಿಡುಗನು ಅಡ್ಡಗಟ್ಟಿ ಯಮುನಾನದಿಯನ್ನು ದಾಟುವಾಗ ಹಿಂಸೆ ಮಾಡಲು ಅದರ ಕಯ್ಯಿಂದ ಜಾರಿಕೊಂಡು ನೀರಿನಲ್ಲಿ ಬಿದ್ದಿತು. ಅದನ್ನು ಒಂದು ಬಾಳೆಮೀನು ನುಂಗಿ

ಜಾಲದೊಳ್ ಪಿಡಿದಲ್ಲಿಗರಸಪ್ಪ ದಾಶನಲ್ಲಿಗುಯ್ದು ತೋಱಿದೊಡದಂ ವಿದಾರಿಸಿ ನೋೞ್ಪನ್ನೆಗಂ ಬಾಳೆಯ ಗರ್ಭದೊಳಿರ್ದ ಬಾಳೆಯಂ ಬಾಳನುಮಂ ಕಂಡೆತ್ತಿಕೊಂಡು ಮತ್ಸ್ಯಗಂಧಿಯುಂ ಮತ್ಸ್ಯಗಂಧನುಮೆಂದು ಪೆಸರನಿಟ್ಟು ನಡಪಿ ಯಮುನಾನದೀತೀರದೊಳಿರ್ಪನ್ನೆಗಮಲ್ಲಿಗೊರ್ಮೆ ಬ್ರಹ್ಮರ ಮೊಮ್ಮನಪ್ಪ ವೃದ್ಧ ಪರಾಶರ ಮುನೀಂದ್ರನುತ್ತರಾಪಥಕ್ಕೆ ಪೋಗುತ್ತುಂ ಬಂದು ತೊಱೆಯ ತಡಿಯೊಳೋಡಮಂ ನಡೆಯಿಸುವ ಮತ್ಸ್ಯಗಂಧಿಯಂ ಕಂಡೆಮ್ಮನೀ ತೊಱೆಯಂ ಪಾಯಿಸೆಂಬುದುಂ ಸಾಸಿರ್ವರೇಱಿದೊಡಲ್ಲದೀಯೋಡಂ ನಡೆಯದೆಂಬುದುವಾಮುನಿಬರ ಬಿಣ್ಪುವಪ್ಪೆ ಮೇಱಿಸೆಂದೊಡಂತೆ ಗೆಯ್ವೆನೆಂದೋಡಮೇಱಿಸಿ ನಡೆಯಿಸುವಲ್ಲಿ ದಿವ್ಯಕನ್ಯೆಯನಱ್ಕರ್ತು ನೋಡಿ-

ಮ॥ ಮನದೊಳ್ ಸೋಲ್ತು ಮುನೀಂದ್ರನಾಕೆಯೊಡಲೀ ದುರ್ಗಂಧಪ್ಪೋಪಂತೆ ಯೋ
ಜನ ಗಂಧಿತ್ವಮನಿತ್ತು ಕಾಂಡಪಟದಂತಿರ್ಪನ್ನೆಗಂ ಮಾಡಿ ಮಂ ।
ಜನಲಂಪಟ್ಕಿಱನೀಯೆ ಕೂಡುವೆಡೆಯೊಳ್ ಜ್ಞಾನಸ್ವರೂಪಂ ಮಹಾ
ಮುನಿಪಂ ಪುಟ್ಟಿದನಂತು ದಿವ್ಯಮುನಿಗಳ್ಗೇಗೆಯ್ದೊಡಂ ತೀರದೇ ॥ ೬೯

ವ॥ ಅಂತು ನೀಲಾಂಬುದ ಶ್ಯಾಮನುಂ ಕನಕ ಪಿಂಗಳ ಜಟಾಬಂಧಕಳಾಪನುಂ ದಂಡ[ಕಪಾಳ]ಹಸ್ತನುಂ ಕೃಷ್ಣಮೃಗ[ತ್ವಕ್ಪ]ರಿಧಾನನುಮಾಗೆ ವ್ಯಾಸಭಟ್ಟಾರಕಂ ಪುಟ್ಟುವುದು ಮಾತನನೊಡಗೊಂಡು ಸತ್ಯವತಿಗೆ ಪುನಃ ಕನ್ಯಾಭಾವಮಂ ದಯೆಗೆಯ್ದು ಪರಾಶರಂ ಪೋದನಿತ್ತಲ್-

ಗರ್ಭವನ್ನು ಧರಿಸಿತು. ಅದನ್ನು ಒಬ್ಬ ಬೆಸ್ತರವನು ಬಲೆಯಲ್ಲಿ ಹಿಡಿದು ಅಲ್ಲಿಯ ರಾಜನಲ್ಲಿಗೆ ತೆಗೆದುಕೊಂಡುಹೋಗಿ ತೋರಿದನು. ಅವನು ಅದನ್ನು ಸೀಳಿ ನೋಡಿ ಮೀನಿನ ಗರ್ಭದಲ್ಲಿದ್ದ ಬಾಲೆಯನ್ನೂ ಬಾಲಕನನ್ನೂ ಕಂಡು ಎತ್ತಿಕೊಂಡು ಮತ್ಸ್ಯಗಂಧಿ ಮತ್ಸ್ಯಗಂಧನೆಂಬ ಹೆಸರನ್ನಿಟ್ಟು ಸಲಹಿ ಯಮುನಾತೀರದಲ್ಲಿರುತ್ತಿದ್ದನು. ಅಲ್ಲಿಗೆ ಒಂದು ಸಲ ಬ್ರಹ್ಮನ ಮೊಮ್ಮಗನಾದ ವೃದ್ಧಪರಾಶರನೆಂಬ ಋಷಿಯು ಉತ್ತರದೇಶಕ್ಕೆ ಹೋಗುತ್ತ ಒಂದು ನದಿಯ ದಡದಲ್ಲಿ ದೋಣಿಯನ್ನು ನಡೆಸುತ್ತಿದ್ದ ಮತ್ಸ್ಯಗಂಧಿಯನ್ನು ನೋಡಿ ನೀನು ನಮ್ಮನ್ನು ಈ ನದಿಯನ್ನು ದಾಟಿಸು ಎಂದು ಕೇಳಿದನು. ಅದಕ್ಕೆ ಆ ಕನ್ಯೆಯು ಸಾವಿರ ಜನರು ಹತ್ತದ ಹೊರತು ಈ ದೋಣಿಯು ನಡೆಯುವುದಿಲ್ಲ ಎಂದಳು. ಋಷಿಯು ನಾವು ಅಷ್ಟು ಜನರ ಭಾರವಾಗುತ್ತೇವೆ ಏರಿಸು ಎಂದನು. ಹಾಗೆಯೇ ಮಾಡುತ್ತೇನೆ ಎಂದು ಹತ್ತಿಸಿಕೊಂಡು ನಡೆಸುತ್ತಿರುವಾಗ ಆ ದಿವ್ಯಕನ್ಯೆಯನ್ನು ಪ್ರೀತಿಸಿ ನೋಡಿ -೬೯. ಆ ಋಷಿಶ್ರೇಷ್ಠನು ಮನಸ್ಸಿನಲ್ಲಿ ಆಕೆಗೆ ಸೋತು ಆಕೆಯ ಶರೀರದ ಆ ದುರ್ವಾಸನೆಯು ಹೋಗುವ ಹಾಗೆ ಯೋಜನದೂರದವರೆಗೆ ವ್ಯಾಪಿಸುವ ಸುವಾಸನೆಯನ್ನು ಕೊಟ್ಟು ಮಂಜನ್ನೇ ತೆರೆಯನ್ನಾಗಿ ಮಾಡಿ ಪ್ರೀತಿಯಿಂದ ಅವಳೊಡನೆ ಕೂಡಲು ಜ್ಞಾನಸ್ವರೂಪನಾದ ಋಷಿಶ್ರೇಷ್ಠನು ಹುಟ್ಟಿದನು. ಮುನೀಂದ್ರರಾದವರು ಏನು ಮಾಡಿದರೂ ತಡೆಯುತ್ತದೆಯಲ್ಲವೆ? ವ॥ ಹಾಗೆ ಕರಿಯ ಮೋಡದಂತೆ ಕಪ್ಪಾಗಿರುವವನೂ ಹಳದಿ ಮತ್ತು ಕೆಂಪುಮಿಶ್ರವಾದ ಬಣ್ಣದ ಜಟೆಯ ಸಮೂಹವುಳ್ಳವನೂ ಕಯ್ಯಲ್ಲಿ ಯೋಗದಂಡ ಭಿಕ್ಷಾಪಾತ್ರೆಗಳನ್ನು ಧರಿಸಿರುವವನೂ ಕೃಷ್ಣಾಜಿನದ ಹೊದಿಕೆಯುಳ್ಳವನೂ ಆಗಿ ಪೂಜ್ಯನಾದ

ಮ॥ ಮೃಗಯಾವ್ಯಾಜದಿನೊರ್ಮೆ ಶಂತನು ತೊಟಲ್ದರ್ಪಂ ಪಳಂಚಲ್ಕೆ ತ
ನ್ಮೃಗಶಾಬಾಕ್ಷಿಯ ಕಂಪು ತಟ್ಟಿ ಮಧುಪಂಬೋಲ್ ಸೋಲ್ತು ಕಂಡೊಲ್ದು ನ ।
ಲ್ಮೆಗೆ ದಿಬ್ಯಂಬಿಡಿವಂತೆವೋಲ್ ಪಿಡಿದು ನೀನ್ ಬಾ ಪೋಪಮೆಂದಂಗೆ ಮೆ
ಲ್ಲಗೆ ತತ್ಕನ್ಯಕೆ ನಾಣ್ಚಿ ಬೇಡುವೊಡೆ ನೀವೆಮ್ಮಯ್ಯನಂ ಬೇಡಿರೇ ॥ ೭೦

ವ॥ ಎಂಬುದುಂ ಶಂತನು ಪೊಟಲ್ಗೆ ಮಗುಟ್ದು ವಂದವರಯ್ಯನಪ್ಪ ದಾಶರಾಜನಲ್ಲಿಗೆ ಕೂಸಂ ಬೇಡೆ ಪೆರ್ಗಡೆಗಳನಟ್ಟದೊಡೆ ಗಾಂಗೇಯಂ ದೊರೆಯ ಪಿರಿಯ ಮಗನುಂ ಕ್ರಮಕ್ರಮಾರ್ಹನುಮಿರ್ದಂತೆನ್ನ ಮಗಳಂ ಕುಡೆವೆಮ್ಮ ಮಗಳ್ಗೆ ಪುಟ್ಟಿದಾತಂ ರಾಜ್ಯಕ್ಕೊಡೆಯನುಂ ಪಿರಿಯ ಮಗನುಂ ಕ್ರಮಕ್ಕರ್ಹನುಮಪ್ಪೊಡೆ ಕುಡುವೆಮೆನೆ ತದ್ವೃತ್ತಾಂತಮಂ ಮಂತ್ರಿಗಳಿಂ ಶಂತನು ಕೇಳ್ದು-

ಮ॥ ಕ್ರಮಮಂ ವಿಕ್ರಮದಿಂದೆ ತಾಳ್ದುವ ಮಗಂ ಗಾಂಗೇಯನಿರ್ದಂತೆ ನೋ ।
ಡ ಮರುಳ್ ಶಂತನು ತನ್ನದೊಂದು ಸವಿಗಂ ಸೋಲಕ್ಕಮಿತ್ತಂ ನಿಜ ।
ಕ್ರಮಮಂ ತನ್ನಯ ಬೇಟದಾಕೆಯ ಮಗಂಗೆಂಬೊಂದಪಖ್ಯಾತಿ ಲೋ
ಕಮನಾವರ್ತಿಸೆ ಬಟಿಕ್ಟೊಡೆನ್ನ ಕುಲಮುಂ ತಕ್ಕೊರ್ಮೆಯುಂ ಮಾಸದೇ ॥ ೭೧

ವ್ಯಾಸಮಹರ್ಷಿಯು ಹುಟ್ಟಲಾಗಿ ಅವನನ್ನು ತನ್ನ ಜೊತೆಯಲ್ಲಿ ಕರೆದುಕೊಂಡು ಸತ್ಯವತಿಗೆ ಪುನಃ ಕನ್ಯಾಭಾವವನ್ನು ದಯಮಾಡಿ ಕೊಟ್ಟು ಪರಾಶರಋಷಿಯು ಹೊರಟು ಹೋದನು. ಈ ಕಡೆ ೭೦. ಒಂದು ದಿನ ಬೇಟೆಯ ನೆಪದಿಂದ ಸುತ್ತಾಡಿ ಬರುತ್ತಿದ್ದ ಶಂತನುವು ಜಿಂಕೆಯ ಮರಿಯ ಕಣ್ಣಿನಂತೆ ಕಣ್ಣುಳ್ಳ ಯೋಜನಗಂಧಿಯ ವಾಸನೆಯು ಅವನನ್ನು ಮುಟ್ಟಲಾಗಿ (ಅದರಿಂದ ಆಕರ್ಷಿತನಾಗಿ) ದುಂಬಿಯ ಹಾಗೆ ಸೋತು ಹೋಗಿ ಅವಳನ್ನು ಪ್ರೀತಿಸಿದನು. ತನ್ನ ಪ್ರೀತಿಗೆ ಸಾಕ್ಷಿಯಾಗಿ ದಿವ್ಯವನ್ನು ಹಿಡಿಯುವ ಹಾಗೆ ಅವಳ ಕೈಹಿಡಿದು 'ನೀನು ಬಾ ಹೋಗೋಣ' ಎನ್ನಲು ಆ ಕನ್ಯೆಯು ನಾಚಿಕೊಂಡು ಮೆಲ್ಲಗೆ ನೀವು ನನ್ನನ್ನು ಬೇಡುವುದಾದರೆ ನಮ್ಮ ತಂದೆಯನ್ನು ಪ್ರಾರ್ಥಿಸಿ ಎಂದಳು. ವ॥ ಶಂತನು ಪಟ್ಟಣಕ್ಕೆ ಹಿಂದಿರುಗಿ ಬಂದು ಅವಳ ತಂದೆಯಾದ ದಾಶರಾಜನಲ್ಲಿಗೆ ಕನ್ಯೆಯನ್ನು ಬೇಡುವುದಕ್ಕಾಗಿ ಹೆಗ್ಗಡೆಗಳನ್ನು ಕಳುಹಿಸಿದನು. ದಾಶರಾಜನು ಭೀಷ್ಮನು ರಾಜನ ಹಿರಿಯಮಗನೂ ಕ್ರಮಪ್ರಾಪ್ತವಾದ ಹಕ್ಕುದಾರಿಕೆಗೆ ಅರ್ಹನೂ ಆಗಿರುವಾಗ ನಮ್ಮ ಮಗಳನ್ನು (ಶಂತನುವಿಗೆ) ಮದುವೆ ಮಾಡಿಕೊಡು ವುದಿಲ್ಲ. ನನ್ನ ಮಗಳಿಗೆ ಹುಟ್ಟಿದವನು ರಾಜ್ಯಕ್ಕೊಡೆಯನೂ ಹಿರಿಯ ಮಗನೂ ರಾಜ್ಯಕ್ಕೆ ಕ್ರಮವಾದ ಅರ್ಹನೂ ಆಗುವುದಾದರೆ ಕೊಡುವೆವು ಎಂದನು. ಆ ವೃತ್ತಾಂತ ವನ್ನು ಶಂತನುವು ಮಂತ್ರಿಗಳಿಂದ ಕೇಳಿ ೭೧. ಪರಾಕ್ರಮದಿಂದ ಕ್ರಮಪ್ರಾಪ್ತವಾದುದನ್ನು ಧರಿಸುವ (ಧರಿಸಲು ಯೋಗ್ಯನಾದ) ಮಗನಾದ ಭೀಷ್ಮನಿರುವಾಗ, ನೋಡಯ್ಯ, ಅವಿವೇಕಿಯಾದ ಶಂತನುವು ತನ್ನ ಒಂದು ಭೋಗಕ್ಕೂ ಮೋಹಪರವಶತೆಗೂ ತನ್ನ ಕ್ರಮಪ್ರಾಪ್ತವಾದ ರಾಜ್ಯವನ್ನು ತನ್ನ ಮೋಹದಾಕೆಯ ಮಗನಿಗೆ ಕೊಟ್ಟನು ಎಂಬ ಒಂದು ಅಪಯಶಸ್ಸು ಲೋಕವನ್ನು ಆವರ್ತಿಸುವ ಹಾಗೆ ಬಾಳಿದರೆ ನನ್ನ ಕುಲವೂ

ವ॥ ಎಂದು ತನ್ನ ನಾಣ್ಣಾಪನೆ ಬಗೆದತನು ಪರಿತಾಪಿತಶರೀರನುಮಾಗಿ ಶಂತನು ಕರಂಗೆರ್ದೆಗಿಡೆ ತದ್ವೃತ್ತಾಂತಮೆಲ್ಲಮಂ ಗಾಂಗೇಯನಱಿದು-

ಉ ॥ ಎನ್ನಯ ದೂಸಱಿಂ ನೃಪತಿ ಬೇಡಿದುದಂ ಕುಡಲೊಲ್ಲದಂಗಜೋ
ತ್ಪನ್ನ ವಿಮೋಹದಿಂದಟಿದಪಂ ಪತಿ ಸತ್ತೊಡೆ ಸತ್ತ ಪಾಪಮೆ ।
ನ್ನನ್ನರಕಂಗಳೊಳ್ ತಡೆಯದಬ್ದುಗುಮೇವುದು ರಾಜ್ಯಲಕ್ಷ್ಮಿ ಪೋ
ತನ್ನಯ ತಂದೆಯೆಂದುದನೆ ಕೊಟ್ಟು ವಿವಾಹಮನಿಂದೆ ಮಾಡುವೆಂ ॥ ೭೨

ವ॥ ಎಂದು ನಿಶ್ಚಯಿಸಿ ಗಾಂಗೇಯಂ ದಾಶರಾಜನಲ್ಲಿಗೆವಂದಾತನ ಮನದ ತೊಡರ್ಪಂ ಪಿಂಗೆ ನುಡಿದು-

ಉ ॥ ನೀಡಿರದೀವುದೀ ನಿಜ ತನೂಜೆಯನೀ ವಧುಗಾದ ಪುತ್ರರೊಳ್
ಕೂಡುಗೆ ರಾಜ್ಯಲಕ್ಷ್ಮಿ ಮೊಱೆಯಲ್ತೆನಗಂತದು ಪೆಂಡಿರೆಂಬರೊಳ್ ।
ಕೂಡುವನಲ್ಲೆನಿಂದು ಮೊದಲಾಗಿರೆ ನಿಕ್ಕುವಮೆಂದು ರಾಗದಿಂ
ಕೂಡಿದನುಯ್ದು ಸತ್ಯವತಿಯಂ ಸತಿಯಂ ಪತಿಯೊಳ್ ನದೀಸುತಂ ॥ ೭೩

ವ॥ ಅಂತು ಶಂತನುವುಂ ಸತ್ಯವತಿಯುಮನ್ಯೋನ್ಯಾಸಕ್ತಚಿತ್ತರಾಗಿ ಕೆಲವು ಕಾಲಮಿರ್ಪನ್ನೆಗಮವರ ಚೇಟದ ಕಂದಲ್ಗಳಂತೆ ಚಿತ್ರಾಂಗದ ವಿಚಿತ್ರವೀರ್ಯರೆಂಬ ಮಕ್ಕಳ್ ಪುಟ್ಟಿ ಮಹಾಪ್ರಚಂಡರುಂ ಪ್ರತಾಪಿಗಳುಮಾಗಿ ಬಳೆಯುತ್ತಿರ್ಪನ್ನೆಗಂ ಶಂತನು ಪರಲೋಕ

ಅತಿಶಯವಾದ ಯೋಗ್ಯತೆಯೂ ಮಾಸಿಹೋಗುವುದಿಲ್ಲವೇ? ವ॥ಎಂದು ತನ್ನ ಮಾನಸಂರಕ್ಷಣೆಯನ್ನೆ ಯೋಚಿಸಿ ಕಾಮಸಂತಾಪದಿಂದ ಕೂಡಿದ ಶರೀರವುಳ್ಳವನಾಗಿ ಶಂತನು ಕರಗಿ ಎದೆಗೆಟ್ಟಿರಲು ಆ ವೃತ್ತಾಂತವೆಲ್ಲವನ್ನೂ ಭೀಷ್ಮನು ತಿಳಿದು ೭೨. ನನ್ನ ಕಾರಣದಿಂದ ರಾಜನೂ ನನ್ನ ಒಡೆಯನೂ ಆದ ಶಂತನುವು ಬೇಡಿದುದನ್ನು ಕೊಡಲಾರದೆ ಕಾಮದಿಂದುಂಟಾದ ದುಃಖದಿಂದ ಸಾಯುತ್ತಾನೆ. ಪತಿ ಸತ್ತರೆ ಸತ್ತ ಪಾಪವು ನನ್ನನ್ನು ತಡೆಯದೆ ನರಕದಲ್ಲಿ ಮುಳುಗಿಸುತ್ತದೆ. ಈ ರಾಜ್ಯಲಕ್ಷ್ಮಿ ಏನು ಮಹಾದೊಡ್ಡದು, ಹೋಗಲಿ; ಈ ದಿನವೇ ನನ್ನ ತಂದೆಯು ಹೇಳಿದುದನ್ನೇ ಕೊಟ್ಟು ಮದುವೆಯನ್ನು ಮಾಡಿಸುವೆನು. ವ॥ ಎಂದು ನಿಶ್ಚಯಿಸಿ ಭೀಷ್ಮನು ದಾಶರಾಜನಲ್ಲಿಗೆ ಬಂದು ಆತನ ಮನಸ್ಸಿನ ಸಂದೇಹ ನಿವಾರಣೆಯಾಗುವ ಹಾಗೆ ಹೇಳಿ ೭೩. ಸಾವಕಾಶಮಾಡದೆ ನಿಮ್ಮ ಮಗಳನ್ನು (ಎನ್ನ ತಂದೆಯಾದ ಶಂತನುವಿಗೆ) ಕೊಡಿರಿ. ಈ ವಧುವಿಗೆ ಹುಟ್ಟಿದ ಮಕ್ಕಳಲ್ಲಿಯೇ ರಾಜ್ಯಲಕ್ಷ್ಮಿ ಸೇರಲಿ. ಅದರ ಸಂಬಂಧ ನನಗಿಲ್ಲ; ಈ ದಿನ ಮೊದಲಾಗಿ ಹೆಂಗಸು ಎನ್ನುವವರಲ್ಲಿ ಕೂಡುವವನಲ್ಲ; ಇದು ನಿಶ್ಚಯ ಎಂದು ಆತ್ಮಸಂತೋಷದಿಂದ ಸತಿಯಾದ ಸತ್ಯವತಿಯನ್ನು ಕರೆದು ತಂದು ಪತಿಯಾದ ಶಂತನುವಿನಲ್ಲಿ ಭೀಷ್ಮನು ಕೂಡಿಸಿದನು ವ॥ ಹಾಗೆ ಶಂತನುವೂ ಸತ್ಯವತಿಯೂ ಪರಸ್ಪರಾಸಕ್ತಮನಸ್ಸುಳ್ಳವರಾಗಿ ಕೆಲವು ಕಾಲವಿರುವಷ್ಟರಲ್ಲಿ ಅವರ ಪ್ರೇಮದ ಮೊಳಕೆಗಳ ಹಾಗೆ ಚಿತ್ರಾಂಗದ ವಿಚಿತ್ರವೀರ್ಯರೆಂಬ ಮಕ್ಕಳು ಹುಟ್ಟಿ ಮಹಾಪ್ರಚಂಡರೂ ಪ್ರತಾಪಶಾಲಿಗಳೂ ಆಗಿ ಬೆಳೆಯುತ್ತಿರಲು ಶಂತನುವು ಪರಲೋಕಪ್ರಾಪ್ತನಾದನು.

ಪ್ರಾಪ್ತನಾದೊಡೆ ಗಾಂಗೇಯಂ ತದುಚಿತ ಪರಲೋಕ ಕ್ರಿಯೆಗಳಂ ಮಾಡಿ ಮುನ್ನೆ ತನ್ನ ನುಡಿದ ನುಡಿವಳಿಯೆಂಬ ಪ್ರಾಸಾದಕ್ಕಧಿಷ್ಠಾನಂಗಟ್ಟುವಂತೆ ಚಿತ್ರಾಂಗದಂಗೆ ಪಟ್ಟಮಂ ಕಟ್ಟಿ ರಾಜ್ಯಂಗೆಯಿಸುತ್ತುಮಿರ್ಪನ್ನೆಗಮೊರ್ವ ಗಂಧರ್ವನೊಳೆ ಚಿತ್ರಾಂಗದಂ ದ್ವಂದ್ವಯುದ್ಧಮಂ ಪೊಣರ್ಚಿ ಕುರುಕ್ಷೇತ್ರಮಂ ಕಳಂಬೇೞ್ದು ಕಾದಿ ಸತ್ತೊಡೆ ವಿಚಿತ್ರವೀರ್ಯನಂ ಗಾಂಗೇಯಂ ಧರಾಭಾರ ಧುರಂಧರನಂ ಮಾಡಿ-

ಮ॥ ಸಕಳ ಕ್ಷತ್ರಿಯ ಮೋಹದಿಂ ನಿಜಭುಜ ಪ್ರಾರಂಭದಿಂ ಪೋಗಿ ತಾ
ಗಿ ಕೆಲರ್ ನೊಂದೊಡೆ ಕಾದಿ ರಾಜಸುತರೊಳ್ ತನ್ನಂಕದೊಂದುಗ್ರಸಾ ।
ಯಕದಿಂ ನಾಯಕರಂ ಪಡಲ್ವಡಿಸುತುಂ ತಾಂ ತಂದನಂದಂಬೆಯಂ
ಬಿಕೆಯಂಬಾಲೆಯರೆಂಬ ಬಾಲೆಯ[ರನೇಂ] ಭೀಷ್ಮಂ ಯಶೋಭಾಗಿಯೋ ॥

೭೪

ವ॥ ಅಂತು ತಂದು ತನ್ನ ತಮ್ಮಂ ವಿಚಿತ್ರವೀರ್ಯಂಗಾ ಮೂವರ್ಕನ್ನೆಯರಂ ಪಾಣಿ ಗ್ರಹಣಂಗೆಯ್ವಾಗಳೆಲ್ಲರಿಂ ಪಿರಿಯಾಕೆ ನಿನ್ನನಲ್ಲದೆ ಪೆಱರನೊಲ್ಲೆನೆಂದಿರ್ದೊಡೆ ಮತ್ತಿನಿರ್ವರುಮಂ ಮದುವೆಯಂ ಮಾಡಿ ಗಾಂಗೇಯನಂಬೆಯನಿಂತೆಂದಂ-

ಉ॥ ಅತ್ತ ಸುರೇಶ್ವರಾವಸಥಮಿತ್ತ ಮಹೀತಳಮುತ್ತ ಪನ್ನಗೋ
ದಾತ್ತ ಸಮಸ್ತ ಲೋಕಮೞದಂತಿರೆ ಪೂಣ್ದನಗಾಗದಂಗಜೋ ।
ತ್ಪತ್ತಿ ಸುಖಕ್ಕೆ ಸೋಲಲಟೆಗುಂ ಪುರುಷವ್ರತಮಾಗಳಬ್ಜೆಯೆಂ ।
ದತ್ತಿಗೆಯೆಂಬ ಮಾತನೆನಗೇನೆನಲಕ್ಕುಮೊ ಪಂಕಜಾನನೇ ॥ ೭೫

ಭೀಷ್ಮನು ಅವನಿಗುಚಿತವಾದ ಪರಲೋಕ (ಉತ್ತರ) ಕ್ರಿಯೆಗಳನ್ನು ಮಾಡಿ ತಾನು ಮೊದಲೇ ನುಡಿದ ಮಾತುಕಟ್ಟೆಂಬ ಅರಮನೆಗೆ ಅಸ್ತಿಭಾರವನ್ನು ಹಾಕುವ ಹಾಗೆ ಚಿತ್ರಾಂಗದನಿಗೆ ಪಟ್ಟವನ್ನು ಕಟ್ಟಿ ರಾಜ್ಯಭಾರ ಮಾಡಿಸುತ್ತಿದ್ದನು. ಅಷ್ಟರಲ್ಲಿ ಒಬ್ಬ ಗಂಧರ್ವನೊಡನೆ ಚಿತ್ರಾಂಗದನು ದ್ವಂದ್ವಯುದ್ಧವನ್ನುಂಟುಮಾಡಿಕೊಂಡು ಕುರುಕ್ಷೇತ್ರವನ್ನೇ ರಣಭೂಮಿಯನ್ನಾಗಿ ಮಾಡಿ ಕಾದಿ ಸತ್ತನು. ಭೀಷ್ಮನು ವಿಚಿತ್ರವೀರ್ಯನನ್ನು ರಾಜ್ಯಭಾರವನ್ನು ವಹಿಸಲು ಸಮರ್ಥನನ್ನಾಗಿ ಮಾಡಿ ೭೪. ಎಲ್ಲ ಕ್ಷತ್ರಿಯರಿಗೂ ಸಹಜವಾಗಿ ಆಶೆಯಿಂದ ತನ್ನ ಬಾಹುಬಲ ಪ್ರದರ್ಶನಕ್ಕಾಗಿ (ಜೈತ್ರಯಾತ್ರೆಗೆ)ಹೋಗಿ ಮೇಲೆ ಬಿದ್ದ ಕಾಶಿರಾಜನ ಮಕ್ಕಳಲ್ಲಿ ಕೆಲವರು ನೋಯುವ ಹಾಗೆ ತನ್ನ ಪ್ರಸಿದ್ಧವೂ ಭಯಂಕರವೂ ಆದ ಬಾಣದಿಂದ ಸೇನಾನಾಯಕರನ್ನೆಲ್ಲಾ ಬೀಳುವ ಹಾಗೆ ಮಾಡಿ ಅಂಬೆ ಅಂಬಿಕೆ ಅಂಬಾಲಿಕೆಯರೆಂಬ ಬಾಲಿಕೆಯರನ್ನು ಅಪಹರಿಸಿಕೊಂಡು ಬಂದನು. ಭೀಷ್ಮನು ಎಂತಹ ಕೀರ್ತಿಗೆ ಭಾಗಿಯೋ! ವ॥ ಹಾಗೆ ತಂದು ಆ ಮೂವರು ಕನ್ಯೆಯರನ್ನೂ ತನ್ನ ತಮ್ಮನಾದ ವಿಚಿತ್ರವೀರ್ಯನಿಗೆ ಮದುವೆಮಾಡುವಾಗ ಅವರೆಲ್ಲರಲ್ಲಿಯೂ ಹಿರಿಯಳಾದವಳು ನಿನ್ನನ್ನಲ್ಲದೆ ಇತರರನ್ನು ನಾನು ಅಂಗೀಕರಿಸುವುದಿಲ್ಲ ಎಂದಳು. ಉಳಿದಿಬ್ಬರನ್ನೂ ಮದುವೆ ಮಾಡಿ ಭೀಷ್ಮನು ಅಂಬೆಗೆ ಹೀಗೆ ಹೇಳಿದನು-೭೫. ಆ ಕಡೆ ದೇವೇಂದ್ರನು ವಾಸಮಾಡುವ ಸ್ವರ್ಗಲೋಕ, ಈ ಕಡೆ ಭೂಲೋಕ ಮತ್ತೊಂದು ಕಡೆ ಪಾತಾಳಲೋಕವೇ ಮೊದಲಾದುವುಗಳು

ವ|| ಎಂದು ನುಡಿದ ಗಾಂಗೇಯನ ನುಡಿಯೊಳವಸರಮಂ ಪಸರಮಂ ಪಡೆಯದೆ ತನಗೆ ಕಿಱೆಯಂದುಂಗುರವಿಟ್ಟ ಸಾಲ್ವಲನೆಂಬರಸನಲ್ಲಿಗೆ ಪೋಗಿ ನೀನೆನ್ನಂ ಕೈಕೊಳವೇೞ್ಕುಮೆಂದೊಡಾತನಿಂತೆಂದಂ-

ಕಂ || ಬಂಡಣದೊಳೆನ್ನನೋಡಿಸಿ
ಕೊಂಡುಯ್ದಂ ನಿನ್ನನಾ ಸರಿತ್ಸುತನಾನುಂ ।
ಪೆಂಡತಿಯೆನಾದೆನದಱಿಂ
ಪೆಂಡಿರ್ ಪೆಂಡಿರೊಳದೆಂತು ಬೆರಸುವರಬಲೇ ॥ ೭೬

ವ|| ಎಂದು ಸಾಲ್ವಲಂ ತನ್ನ ಪರಿಭವದೊಳಾದ ಸಿಗ್ಗಂ ಸಾಲ್ವಿನಮುಂಟುಮಾಡಿದೊಡಾತನ ಮನಮನೊಡಂಬಡಿಸಲಾಱದೆ ಪರಶುರಾಮನಲ್ಲಿಗೆ ಪೋಗಿ ಭೀಷ್ಮನೆನ್ನ ಸ್ವಯಂವರದೊಳ್ ನೆರೆದರಸುಮಕ್ಕಳೆಲ್ಲರುಮನೋಡಿಸಿ ಕೊಂಡು ಬಂದೆನ್ನ[ಂ] ಮದುವೆಯಂ ನಿಲಲೊಲ್ಲ[ದ]ಟ್ಟ ಕಳೆದೊಡೆನ್ನ ದೆವಸಮುಂ ಜವ್ವನಮುಮಡವಿಯೊಳಗೆ ಪೂತ ಪೂವಿನಂತೆ ಕಿಡಲೀಯದಾತನನೆನ್ನಂ ಪಾಣಿಗ್ರಹಣಂ ಗೆಯ್ವಂತು ಮಾಡು ಮಾಡಲಾಱದೊಡೆ ಕಿಚ್ಚಂ ದಯೆಗೆಯ್ವುದೆಂದಂಬೆ ಕಣ್ಣ ನೀರಂ ತುಂಬೆ-

ಮ|| ನಯಮಂ ನಂಬುವೊಡೆನ್ನ ಪೇೞ್ದ ಸತಿಯಂ ಕೈಕೊಂಡನಂತಲ್ಲದು
ರ್ನಯಮಂ ನಚ್ಚುವೊಡೆನ್ನನುಗ್ರ ರಣದೊಳ್ ಮೇಗ್ ಮೀಱೆ ಮಾರ್ಕೊಂಡನಾ।
ರಯೆ ಕಜ್ಜಂ ಪೆಱತಿಲ್ಲ ಶಂತನು ಸುತಂಗೆನ್ನಂ ಕರಂ ನಂಬಿದಂ
ಬೆಯೊಳೆನ್ನಂಬೆವಲಂ ವಿವಾಹವಿಧಿಯಂ ಮಾೞ್ಪಿಂ ಪೆಱರ್ ಮಾೞ್ಪರೇ ॥ ೭೭

ತಿಳಿದಿರುವ ಹಾಗೆ ಪ್ರತಿಜ್ಞೆ ಮಾಡಿದ ನನಗೆ ಕಾಮಸುಖಕ್ಕೆ ಸೋಲುವುದಾಗದು. ನನ್ನ ಬ್ರಹ್ಮಚರ್ಯವ್ರತವು ನಾಶವಾಗುತ್ತದೆ. ಎಲೆ ಕಮಲಮುಖಿ ಮೊದಲು ತಾಯಿ ಯೆಂದು ಕರೆದು ಆಮೇಲೆ ಪ್ರೀತಿಪಾತ್ರಳಾದವಳೆಂದು ಹೇಳುವುದು ಸಾಧ್ಯವಾಗು ತ್ತದೆಯೇ? ವ|| ಎಂದು ಹೇಳಿದ ಭೀಷ್ಮನ ಮಾತಿನಲ್ಲಿ ಅಂಬೆಯು ಯಾವ ಇಷ್ಟಾರ್ಥ ವನ್ನು ಪಡೆಯಲಾರದೆ ತನ್ನ ಬಾಲ್ಯದಲ್ಲಿ ಮದುವೆಯಾಗುತ್ತೇನೆಂದು ಉಂಗುರವನ್ನು ತೊಡಿಸಿದ್ದ ಸಾಲ್ವಲನೆಂಬ ರಾಜನಲ್ಲಿಗೆ ಹೋಗಿ ನೀನು ನನ್ನನ್ನು ಅಂಗೀಕಾರ ಮಾಡಬೇಕು ಎನ್ನಲು ಆತನು ಹೀಗೆಂದು ಹೇಳಿದನು. ೭೬. ಯುದ್ಧದಲ್ಲಿ ಆ ಭೀಷ್ಮನು ನನ್ನನ್ನು ಓಡಿಸಿ ನಿನ್ನನ್ನು ಅಪಹರಿಸಿಕೊಂಡು ಹೋದನು. ಅದರಿಂದ ನಾನೂ ಹೆಂಗಸಾಗಿದ್ದೇನೆ. ಎಲೆ ಹೆಣ್ಣೆ ಹೆಂಗಸರು ಹೆಂಗಸರಲ್ಲಿ ಸೇರುವುದು ಹೇಗೆ ಸಾಧ್ಯ? ವ|| ಎಂದು ಸಾಲ್ವಲನು ತನಗೆ ಸೋಲಿನಲ್ಲಿ ಉಂಟಾದ ನಾಚಿಕೆಯನ್ನು ಸಾಕಾಗುವಷ್ಟು ಪ್ರದರ್ಶಿಸಲಾಗಿ ಅವನನ್ನು ಒಪ್ಪಿಸಲಾರದೆ ಪರಶುರಾಮನ ಹತ್ತಿರಕ್ಕೆ ಹೋಗಿ ಭೀಷ್ಮನು ಸ್ವಯಂವರದಲ್ಲಿ ಸೇರಿದ್ದ ರಾಜಕುಮಾರರೆಲ್ಲರನ್ನೂ ಓಡಿಸಿ ಅಪಹರಿಸಿಕೊಂಡು ಬಂದು ನನ್ನನ್ನು ಮದುವೆ ಮಾಡಿಕೊಳ್ಳದೆ ಓಡಿಸಿದನು. ನನ್ನ ಯೌವನವು ಕಾಡಿನಲ್ಲಿ ಬಿಟ್ಟ ಹೂವಿನಂತೆ ವ್ಯರ್ಥವಾಗದ ಹಾಗೆ ಆತನು ನನ್ನ ಕಯ್ಯನ್ನು ಹಿಡಿಯುವ ಹಾಗೆ ಮಾಡು; ಹಾಗೆ ಮಾಡಲು ಸಾಧ್ಯವಿಲ್ಲದಿದ್ದರೆ (ಆತ್ಮಹತ್ಯೆ ಮಾಡಿಕೊಳ್ಳುವುದಕ್ಕೆ), ಕಿಚ್ಚನ್ನು ದಯಪಾಲಿಸು ಎಂಬುದಾಗಿ ಅಂಬೆಯು ಕಣ್ಣ ನೀರನ್ನು ತುಂಬಿದಳು. ೭೭. ಅದಕ್ಕೆ ಪರಶುರಾಮನು ಭೀಷ್ಮನು ವಿನಯವನ್ನು ಆಶ್ರಯಿಸುವುದಾದರೆ ನಾನು ಹೇಳಿದ

ವ॥ ಎಂದು ನಾಗಪುರಕ್ಕೆ ವರ್ಪ ಪರಶುರಾಮನ ಬರವಂ ಗಾಂಗೇಯಂ ಕೇಳ್ದಿದಿರ್ವಂದು ಕನಕ ರಜತ ಪಾತ್ರಂಗಳೊಳರ್ಘ್ಯಮಂ ಕೊಟ್ಟು ಪೊಡಮಟ್ಟು-

ಮ॥ ಬೆಸನೇನೆಂದೊಡೆ ಪೇಟ್ವೆನೆನ್ನ ಬೆಸನಂ ಕೈಕೊಳ್ವುದೀ ಕನ್ನೆಯಂ
ಪಸುರ್ವಂದರ್ ಪಸೆಯೆಂಬಿವಂ ಸಮೆದು ನೀಂ ಕೈಕೊಳ್ ಕೊಳಲ್ಕಾಗದೆಂ ।
ಬೆಸಕಂ ಚಿತ್ತದೊಳುಳ್ಳೊಡೀಗಳಿವರೆಮ್ಮಾಚಾರ್ಯರೆಂದೋವದೇ
ವೆಸನಂ ಮಾಣದೆ ಕೈದುಗೊಳ್ಳೆರಡಱೊಳ್ ಮೆಚ್ಚಿತ್ತೆನೇನೆಂದಪಯ್ ॥೭೮

ವ॥ ಎಂದು ನುಡಿದ ಪರಶುರಾಮನ ನುಡಿಯಂ ಗಾಂಗೇಯಂ ಕೇಳ್ದೆನಗೆ ವೀರಶ್ರೀಯುಂ ಕೀರ್ತಿಶ್ರೀಯುಮಲ್ಲದುಟಿದ ಪೆಂಡಿರ್ ಮೊಱೆಯಲ್ಲ ನೀವಿದನೇಕಾಗ್ರಹಂಗೆಯ್ವಿರೆಂದೊಡೆಂತು ಮೆಮ್ಮೊಳ್ ಕಾದಲ್ವೇಳ್ಪುದೆಂದು-

ಮ॥ ಕೆಳರ್ದಂದುಗ್ರ ರಣಾಗ್ರಹ ಪ್ರಣಯದಿಂದಾಗಳ್ ಕುರುಕ್ಷೇತ್ರಮಂ
ಕಳವೇಟ್ಟಿರ್ವರುಮೈಂದ್ರ ವಾರುಣದ ವಾಯವ್ಯಾದಿ ದಿವ್ಯಾಸ್ತ್ರ ಸಂ ।
ಕುಳದಿಂದೊರ್ವರನೊರ್ವರೆಚ್ಚು ನಿಜಪೀಠಾಂಭೋಜದಿಂ ಬ್ರಹ್ಮನು
ಚ್ಚಳಿಪನ್ನಂ ಪಿರಿದೊಂದು ಸಂಕಟಮನೀ ತ್ರೈಲೋಕ್ಯದೊಳ್ ಮಾಡಿದರ್ ॥ ೭೯

ಸ್ತ್ರೀಯನ್ನು ಮದುವೆಯಾಗುತ್ತಾನೆ. ಹಾಗಲ್ಲದೆ ಅವಿನಯವನ್ನೇ (ದುರ್ನೀತಿಯನ್ನೇ) ನಂಬುವುದಾದರೆ ನನ್ನನ್ನು ಮೀರಿ ಭಯಂಕರವಾದ ಯುದ್ಧದಲ್ಲಿ ಪ್ರತಿಭಟಿಸುವವನಾಗುತ್ತಾನೆ. ವಿಚಾರಮಾಡುವುದಾದರೆ ಭೀಷ್ಮನಿಗೆ ಬೇರೆ ಕಾರ್ಯವೇ ಇಲ್ಲ. ನನ್ನನ್ನು ವಿಶೇಷವಾಗಿ ನಂಬಿದ ಅಂಬೆಗೆ ನನ್ನ ಬಾಣದಿಂದಲೇ ಮದುವೆ ಮಾಡಿಸುತ್ತೇನೆ. (ಭೀಷ್ಮನಿಗೆ ಅಂಬೆಯನ್ನು ಮದುವೆಯಾಗುವುದು ಇಲ್ಲವೇ ನನ್ನೊಡನೆ ಯುದ್ಧಮಾಡುವುದು - ಇವೆರಡಲ್ಲದೇ ಬೇರೆ ಮಾರ್ಗವೇ ಇಲ್ಲ ಎಂಬುದು ಇದರ ಭಾವ) ವ॥ ಎಂದು ಹಸ್ತಿನಾಪುರಕ್ಕೆ ಬರುತ್ತಿರುವ ಪರಶುರಾಮನ ಆಗಮನವನ್ನು ಭೀಷ್ಮನು ಕೇಳಿ ಎದುರಾಗಿ ಬಂದು ಚಿನ್ನ ಮತ್ತು ಬೆಳ್ಳಿಯ ಪಾತ್ರೆಗಳಲ್ಲಿ ಅರ್ಘ್ಯವನ್ನು ಕೊಟ್ಟು ನಮಸ್ಕಾರಮಾಡಿ ೭೮. ಅಪ್ಪಣೆಯೇನೆಂದು ಕೇಳಿದನು. ಅದಕ್ಕೆ ಪರಶುರಾಮನು ನನ್ನ ಆಜ್ಞೆಯನ್ನು ನೀನು ಅಂಗೀಕಾರಮಾಡಬೇಕು. ಹಸುರುವಾಣಿ ಚಪ್ಪರ ಮತ್ತು ಹಸೆಮಣೆಗಳನ್ನು ಸಿದ್ಧಪಡಿಸಿ ಈ ಕನ್ಯೆಯನ್ನು ಸ್ವೀಕರಿಸು, ಸ್ವೀಕರಿಸಕೂಡದೆಂಬ ಕಾರ್ಯ (ಅಭಿಪ್ರಾಯ) ಮನಸ್ಸಿನಲ್ಲಿರುವುದಾದರೆ ಈಗಲೇ ಇವರು ನಮ್ಮ ಗುರುಗಳು ಎಂಬ ಭಕ್ತಿಪ್ರದರ್ಶನ ಮಾಡದೆ ಯುದ್ಧೋದ್ಯೋಗವನ್ನು ಕೈಕೊಂಡು ಶಸ್ತ್ರಧಾರಣೆ ಮಾಡು. ಎರಡರಲ್ಲಿ ನಿನಗಿಷ್ಟವಾದುದನ್ನು ಕೊಟ್ಟಿದ್ದೇನೆ; ಏನು ಹೇಳುತ್ತೀಯೆ? ವ॥ ಎಂದು ಹೇಳಿದ ಪರಶುರಾಮನ ಮಾತನ್ನು ಭೀಷ್ಮನು ಕೇಳಿ ನನಗೆ ವೀರಲಕ್ಷ್ಮಿ ಮತ್ತು ಯಶೋಲಕ್ಷ್ಮಿಯರಲ್ಲದೆ ಉಳಿದ ಹೆಂಗಸರಲ್ಲಿ ಸಂಬಂಧವಿಲ್ಲ. ಏಕೆ ಕೋಪಿಸಿ ಕೊಳ್ಳುತ್ತೀರಿ, ಹೇಗೂ ನಮ್ಮೊಡನೆ ಯುದ್ಧಮಾಡುವುದು ಎಂದನು. ೭೯. ಇಬ್ಬರೂ ರೇಗಿ ಭಯಂಕರವಾದ ಯುದ್ಧಮಾಡಬೇಕೆಂಬ ಅಪೇಕ್ಷೆಯಿಂದ ಕುರುಕ್ಷೇತ್ರವನ್ನೇ ಯುದ್ಧಭೂಮಿಯನ್ನಾಗಿ ಮಾಡಿಕೊಂಡು ಐಂದ್ರಾಸ್ತ್ರ ವಾರುಣಾಸ್ತ್ರ ವಾಯವ್ಯಾಸ್ತ್ರಗಳ ಸಮೂಹದಿಂದ ಒಬ್ಬರೊಬ್ಬರೂ ಬ್ರಹ್ಮನು ತನ್ನ ಕಮಲಾಸನದಿಂದ ಮೇಲಕ್ಕೆ

ಶಿಖರಿಣಿ ॥ ಅತರ್ಕ್ಯಂ ವಿಕ್ರಾಂತಂ ಭುಜಬಲಮಸಾಮಾನ್ಯಮಧಿಕಂ
ಪ್ರತಾಪಂ ಪೋಗೀತಂಗೆಣೆಯೆ ದಿವಿಜರ್ ವಾಯುಪಥದೊಳ್।
ಶಿತಾಸ್ತ್ರಂಗಳ್ ಪೊಂಕಂಗಿಡಿಸೆ ಸುಗಿದಂ ಭಾರ್ಗವನಿದೇಂ
ಪ್ರತಿಜ್ಞಾ ಗಾಂಗೇಯಂಗದಿರದಿದಿರ್ನಿಲ್ವನ್ನರೊಳರೇ ॥ ೮೦

ವ॥ ಅಂತು ಗಾಂಗೇಯನೊಳ್ ಪರಶುರಾಮಂ ಕಾದಿ ಬಸವಱಿದುಸಿರಲಪ್ಪೊಡಮಾಱದೆ ಮೂರ್ಛೆವೋಗಿರ್ದನಂ ಕಂಡಂಬೆಯೆಂಬ ದಂಡುರುಂಬೆ ನಿನಗೆ ವಧಾರ್ಥಮಾಗಿ ಪುಟ್ಟುವೆನಕ್ಕೆಂದು ಕೋಪಾಗ್ನಿಯಿಂದಮಗ್ನಿಶರೀರೆಯಾಗಿ ದ್ರುಪದನ ಮಹಾದೇವಿಗೆ ಮಗನಾಗಿ ಪುಟ್ಟಿ ಕಾರಣಾಂತರದೊಳ್ ಶಿಖಂಡಿಯಾಗಿರ್ದಳಿತ್ತ ಭೀಷ್ಮರ ಬೆಂಬಲದೊಳ್ ವಿಚಿತ್ರವೀರ್ಯನು ಮವಾರ್ಯವೀರ್ಯನುಮಾಗಿ ಕೆಲವು ಕಾಲಂ ರಾಜ್ಯಲಕ್ಷ್ಮಿಯಂ ತಾಳ್ದಿ ರಾಜಯಕ್ಷ್ಮ ತಪ್ತಶರೀರನಾತ್ಮಜ ವಿಗತಜೀವಿಯಾಗಿ ಪರಲೋಕಪ್ರಾಪ್ತನಾದೊಡೆ ಗಾಂಗೇಯನುಂ ಸತ್ಯವತಿಯುಮತ್ಯಂತ ಶೋಕಾನಲ ದಹ್ಯಮಾನ ಮಾನಸರ್ಕಳಾಗಿ ಆತಂಗೆ ಪರಲೋಕಕ್ರಿಯೆಗಳಂ ಮಾಡಿ ರಾಜ್ಯಂ ನಷ್ಟರಾ(ಜ)ಮಾದುದರ್ಕೆ ಮಮ್ಮಲಮಱುಗಿ ಯೋಜನಗಂಧಿ ಸಿಂಧುಪುತ್ರನನಿಂತೆಂದಳ್-

ಮ॥ ಮಗನೆಂಬಂತು ಧರಿತ್ರಿ ನಿನ್ನನುಜರಂ ಕೈಕೊಂಡು ಮುಂ ಪೊಣ್ದ ನ
ನ್ನಿಗೆ ಬನ್ನಂ ಬರಲೀಯದಾರ್ತೆಸಗಿದೀ ವಿಖ್ಯಾತಿಯುಂ ಕೀರ್ತಿಯುಂ ।
ಮುಗಿಲಂ ಮುಟ್ಟಿದುದಲ್ತೆ ನಮ್ಮ ಕುಲದೊಳ್ ಮಕ್ಕಳ್ವಿಱರ್ ನೀನೇ ಜ
ಟ್ಟಿಗನ್ನೆ ಮುನ್ನಿನೊರಂಟುವೇಡ ಮಗನೇ ಕೈಕೊಳ್ ಧರಾಭಾರಮಂ ॥ ೮೧

ಹಾರಿಹೋಗುವಂತೆ ಬಾಣಪ್ರಯೋಗಮಾಡಿ ಮೂರುಲೋಕಗಳಲ್ಲಿಯೂ ಹಿರಿದಾದ ಸಂಕಟವನ್ನುಂಟುಮಾಡಿದರು. ೮೦. ಇವನ ಪರಾಕ್ರಮವು ಚರ್ಚೆಗೆ ಮೀರಿದುದು; ಬಾಹುಬಲವು ಅಸಾಧಾರಣವಾದುದು; ಶೌರ್ಯವು ಅತಿಶಯವಾದುದು; ಹೋಗೋ! ಈತನಿಗೆ ದೇವತೆಗಳು ಸಮಾನವೇ! ಆಕಾಶಮಾರ್ಗದಲ್ಲಿ ಹರಿತವಾದ ಬಾಣಗಳನ್ನು ನಿರ್ವೀರ್ಯಮಾಡಲು ಪರಶುರಾಮನೂ ಹೆದರಿದನು. ಪ್ರತಿಜ್ಞೆಮಾಡಿರುವ ಭೀಷ್ಮನಿಗೆ ಹೆದರದೆ ಎದುರಾಗಿ ನಿಲ್ಲುವವರೂ ಇದ್ದಾರೆಯೇ? ವ॥ ಹಾಗೆ ಗಾಂಗೇಯನಲ್ಲಿ ಪರಶುರಾಮನು ಕಾದಿ ಶಕ್ತಿಗುಂದಿ ಮಾತನಾಡುವುದಕ್ಕೂ ಆಗದೆ ಮೂರ್ಛೆಹೋಗಿದ್ದವನನ್ನು ಕಂಡು ಅಂಬೆಯೆಂಬ ಗಯ್ಯಾಳಿ ನಿನ್ನ ಸಾವಿಗೆ ಕಾರಣವಾಗಿ ಹುಟ್ಟುತ್ತೇನೆ, ಆಗಲಿ ಎಂದು ಕೋಪದ ಬೆಂಕಿಯಿಂದ ಅಗ್ನಿಪ್ರವೇಶಮಾಡಿ ದ್ರುಪದನ ಮಹಾರಾಣಿಗೆ ಮಗನಾಗಿ ಹುಟ್ಟಿ ಕಾರಣಾಂತರದಿಂದ ಶಿಖಂಡಿಯಾಗಿದ್ದಳು. ಈ ಕಡೆ ವಿಚಿತ್ರವೀರ್ಯನು ಭೀಷ್ಮರ ಸಹಾಯದಿಂದ ತಡೆಯಿಲ್ಲದ ಪರಾಕ್ರಮವುಳ್ಳವನಾಗಿ ಕೆಲವು ಕಾಲ ರಾಜ್ಯಲಕ್ಷ್ಮಿಯನ್ನು ಧರಿಸಿ ಕ್ಷಯರೋಗದಿಂದ ಸುಡಲ್ಪಟ್ಟವನು, ಮಕ್ಕಳಿಲ್ಲದೆಯೇ ಸತ್ತನು. ಭೀಷ್ಮನೂ ಸತ್ಯವತಿಯೂ ಅತ್ಯತಿಶಯವಾದ ದುಃಖಾಗ್ನಿಯಿಂದ ಸುಡಲ್ಪಟ್ಟ ಮನಸ್ಸುಳ್ಳವರಾಗಿ ಆತನಿಗೆ ಪರಲೋಕಕ್ರಿಯೆಗಳನ್ನು ಮಾಡಿ ರಾಜ್ಯಕ್ಕೆ ರಾಜನೇ ಇಲ್ಲದಂತಾದುದಕ್ಕೆ ವಿಶೇಷವಾಗಿ ದುಃಖಪಟ್ಟು ಯೋಜನಗಂಧಿಯಾದ ಸತ್ಯವತಿಯು ಭೀಷ್ಮನಿಗೆ ಹೀಗೆಂದಳು : ೮೧. ಮಗನೆಂದರೆ ನೀನೆ ಮಗ ಎಂದು ಲೋಕವೆಲ್ಲ ಶ್ಲಾಘಿಸುವ ಹಾಗೆ ನಿನ್ನ ತಮ್ಮಂದಿರನ್ನು ಸ್ವೀಕರಿಸಿ

ವ॥ ಎಂದು ನಿನ್ನನಾನಿನಿತಂ ಕೈಯೊಡ್ಡಿ ಬೇಡಿದೆನೆಂದ ಸತ್ಯವತಿಗಮರಾಪಗಾನಂದನನಿಂತೆಂದಂ

ಕಂ ॥ ಕಿಡುಗುಮೆ ರಾಜ್ಯಂ ರಾಜ್ಯದ
ತೊಡರ್ಪದೇವಾಟಿ್ತ ಬಾಟಿ್ತ ನನ್ನಿಯ ನುಡಿಯಂ ।
ಕಿಡೆ ನೆಗಟಿ ನಾನುಮೆರಡಂ
ನುಡಿದೊಡೆ ಹರಿ ಹರ ಹಿರಣ್ಯಗರ್ಭರ್ ನಗರೇ ॥ ೮೨

ಚಂ ॥ ಹಿಮಕರನಾತ್ಮಶೀತರುಚಿಯಂ ದಿನನಾಯಕನುಷ್ಣದೀಧಿತಿ
ಕ್ರಮಮನಗಾಧ ವಾರಿಧಿಯೆ ಗುಣ್ಪನಿಳಾವಧು ತನ್ನ ತಿಣ್ಪನು ।
ತ್ತಮ ಕುಲಶೈಲಮುನ್ನತಿಯನೇಳಿದವಾಗೆ ಬಿಸುಟಿ್ಪಡಂ ಬಿಸು
ಟ್ಪೆಮ ಬಿಸುಡೆಂ ಮದೀಯ ಪುರುಷವ್ರತಮೊಂದುಮನೀಗಳಂಬಿಕೇ ॥ ೮೩

ವ॥ ಎಂದು ತನ್ನ ನುಡಿದ ಪ್ರತಿಜ್ಞೆಯನೇಗೆಯ್ದು ತಪ್ಪಿದನಿಲ್ಲ-

ಕಂ ॥ ರಂಗತ್ತರಂತ ವಾರ್ಧಿ ಚ
ಯಂಗಳ್ ತಂತಮ್ಮ ಮೇರೆಯಂ ದಾಂಟುವೊಡಂ ।
ಗಾಂಗೇಯನುಂ ಪ್ರತಿಜ್ಞಾ
ಗಾಂಗೇಯನುಮೊರ್ಮೆ ನುಡಿದುದಂ ತಪ್ಪುವರೇ ॥ ೮೪

ಮೊದಲು ಪ್ರತಿಜ್ಞೆ ಮಾಡಿದ ಸತ್ಯಕ್ಕೆ ಭಂಗಬರದ ಹಾಗೆ ಸಮರ್ಥನಾಗಿ ಮಾಡಿದ ನಿನ್ನ ಖ್ಯಾತಿಯೂ ಯಶಸ್ಸೂ ಮುಗಿಲನ್ನು ಮುಟ್ಟಿತಲ್ಲವೇ! ನಮ್ಮ ವಂಶಕ್ಕೆ ಬೇರೆ ಮಕ್ಕಳೇತಕ್ಕೆ? ನೀನೇ ಶೂರನಾಗಿದ್ದೀಯೇ. ಹಿಂದಿನ ಒರಟುತನ ಬೇಡ. ಮಗನೇ ನೀನೇ ರಾಜ್ಯಭಾರವನ್ನು ವಹಿಸಿಕೊ, ವ॥ ಎಂದು ಕೈಯೊಡ್ಡಿ ಬೇಡಿದ ಸತ್ಯವತಿಗೆ ದೇವಗಂಗಾನದಿಯ ಮಗನಾದ ಭೀಷ್ಮನು ಹೀಗೆಂದನು-೮೨. ರಾಜ್ಯವು ಕೆಡತಕ್ಕುದೇ (ಅಶಾಶ್ವತವಾದುದರಿಂದ) ರಾಜ್ಯದ ತೊಡಕು ನನಗೇಕೆ? ನನ್ನ ಬದುಕು ಸತ್ಯಪ್ರತಿಜ್ಞೆಗೆ ವಿರೋಧವಾಗುವಂತೆ ನಡೆದರೆ (ನಾನೂ ಎರಡು ಮಾತನ್ನಾಡಿದರೆ) ತ್ರಿಮೂರ್ತಿಗಳಾದ ಬ್ರಹ್ಮವಿಷ್ಣುಮಹೇಶ್ವರರು ನಗುವುದಿಲ್ಲವೇ? ೮೩. ಚಂದ್ರನು ತನ್ನ ಶೀತಕಿರಣವನ್ನೂ ಸೂರ್ಯನು ತನ್ನ ಬಿಸುಗದಿರ ತೀವ್ರತೆಯನ್ನೂ ಅತ್ಯಂತ ಆಳವಾದ ಸಮುದ್ರವು ತನ್ನ (ಗಾಂಭೀರ್ಯ) ಆಳವನ್ನೂ ಈ ಭೂದೇವಿಯು ತನ್ನ ಭಾರವನ್ನೂ ಶ್ರೇಷ್ಠವಾದ ಕುಲಪರ್ವತಗಳು ತಮ್ಮ ಔನ್ನತ್ಯವನ್ನೂ ಹಾಸ್ಯಾಸ್ಪದವಾಗುವಂತೆ ಬಿಸುಟರೂ ಬಿಸಾಡಲಿ. ಎಲೆ ತಾಯೇ ನಾನು ನನ್ನ ಪುರುಷ (ಬ್ರಹ್ಮಚರ್ಯ) ವ್ರತವೊಂದನ್ನು ಮಾತ್ರ ಬಿಸುಡುವುದಿಲ್ಲ. ೮೪. ಚಂಚಲವಾಗಿ ಕುಣಿಯುತ್ತಿರುವ ಅಲೆಗಳನ್ನುಳ್ಳ ಸಮುದ್ರದ ಸಮೂಹಗಳು ತಮ್ಮ ಎಲ್ಲೆಯನ್ನು ದಾಟಿದರೂ ಭೀಷ್ಮನೂ ಪ್ರತಿಜ್ಞಾಗಾಂಗೇಯನೆಂಬ ಬಿರುದುಳ್ಳ ಅರಿಕೇಸರಿಯೂ ತಾವೂ ಒಂದು ಸಲ ಹೇಳಿದುದನ್ನು ತಪ್ಪುತ್ತಾರೆಯೇ?

ವ|| ಅಂತಚಲಿತ ಪ್ರತಿಜ್ಞಾರೂಢನಾದ ಗಾಂಗೇಯನನೇಗೆಯ್ದುಮೊಡಂಬಡಿಸಲಾಱದೆ ಸತ್ಯವತಿ ತಾನುಮಾತನುಮಾಳೋಚಿಸಿ ನಿಶ್ಚಿತಮಂತ್ರರಾಗಿ ಕೃಷ್ಣದ್ವೈಪಾಯನನಂ ನೆನೆದು ಬರಿಸಿದೊಡೆ ವ್ಯಾಸಮುನೀಂದ್ರನೇಗೆಯ್ವುದೇನಂ ತೀರ್ಚುವುದೆಂದೊಡೆ ಸತ್ಯವತಿಯಿಂತೆಂದಳ್ ಹಿರಣ್ಯಗರ್ಭ ಬ್ರಹ್ಮರಿಂ ತಗುಳ್ದವ್ಯವಚ್ಛಿನ್ನಮಾಗಿ ಬಂದ ಸೋಮವಂಶಮೀಗಳೆಮ್ಮ ಕುಲಸಂತತಿಗಮಾರುಮಿಲ್ಲದೆಡೆವಱಿದು ಕಿಡುವಂತಾಗಿರ್ದುದದು ಕಾರಣದಿಂ ನಿಮ್ಮ ತಮ್ಮಂ ವಿಚಿತ್ರವೀರ್ಯನ ಕ್ಷೇತ್ರದೊಳಂಬಿಕೆಗಮಂಬಾಲೆಗಂ ಪುತ್ರರಪ್ಪಂತು ವರಪ್ರಸಾದಮಂ ದಯೆಗೆಯ್ವುದೆನೆ ಅಂತೆಗೆಯ್ವೆನೆಂದು-

ಚಂ || ತ್ರಿದಶ ನರಾಸುರೋರಗ ಗಣ ಪ್ರಭು ನಿಶ್ಚಿತ ತತ್ತ್ವಯೋಗಿ ಯೋ |
ಗದ ಬಲಮುಣ್ಮಿ ಪೊಣ್ಮಿ ನಿಲೆ ಪುತ್ರ ವರಾರ್ಥಿಗಳಾಗಿ ತನ್ನ ಕ |
ಟ್ಟದಿರೊಳೆ ನಿಂದರಂ ನಯದೆ ನೋಡೆ ಮುನೀಂದ್ರನ ದಿವ್ಯದೃಷ್ಟಿಮಂ
ತ್ರದೊಳೆ ಪೊದಟ್ದುದಾ ಸತಿಯರಿರ್ವರೊಳಂ ನವಗರ್ಭವಿಭ್ರಮಂ || ೮೫

ವ|| ಅಂತು ದಿವ್ಯಸಂಯೋಗದೊಳಿರ್ವರುಂ ಗರ್ಭಮಂ ತಾಳ್ದರ್ ಮತ್ತೊರ್ವ ಮಗನಂ ವರಮಂ ಬೇಡೆಂದಂಬಿಕೆಗೆ ಪೇೞ್ದೊಡಾಕೆಯುಂ ವ್ಯಾಸಭಟ್ಟಾರಕನಲ್ಲಿಗೆ ಪೋಗಲಲಸಿ ತನ್ನ ಸೂೞಾಯ್ತಿಯಂ ತನ್ನವೊಲೆ ಕಯ್ಗೆಯ್ದು ಬರವಂ ಬೇಡಲಟ್ಟಿದೊಡಾಕೆಗೆ ವರದನಾಗಿ

ವ|| ಹಾಗೆ ಸ್ಥಿರಪ್ರತಿಜ್ಞೆಯುಳ್ಳ ಗಾಂಗೇಯನನ್ನು ಏನು ಮಾಡಿದರೂ ಒಪ್ಪಿಸಲಾರದೆ ಸತ್ಯವತಿಯು ತಾನೂ ಆತನೂ ಆಲೋಚಿಸಿ ನಿಷ್ಕೃಷ್ಟವಾದ ಮಂತ್ರಾಲೋಚನೆಮಾಡಿ ಕೃಷ್ಣದ್ವೈಪಾಯನ ವ್ಯಾಸರನ್ನು ನೆನೆದು ಬರಿಸಲಾಗಿ ವ್ಯಾಸಮುನೀಂದ್ರನು ಏನು ಮಾಡಬೇಕು ಏನನ್ನು ಈಡೇರಿಸಬೇಕು ಎನ್ನಲು ಸತ್ಯವತಿಯು ಹೀಗೆಂದಳು - ಹಿರಣ್ಯಗರ್ಭ ಬ್ರಹ್ಮನಿಂದ ಹಿಡಿದು ಏಕಪ್ರಕಾರವಾಗಿ ನಡೆದುಬಂದ ನಮ್ಮ ಸೋಮವಂಶವು ಈಗ ನಮ್ಮ ಸಂತತಿಗೆ ಯಾರೂ ಇಲ್ಲದೆ ಮಧ್ಯೆ ಹರಿದುಹೋಗಿ ನಾಶವಾಗುವಂತಾಗಿದೆ. ಆದಕಾರಣದಿಂದ ನಿನ್ನ ತಮ್ಮನಾದ ವಿಚಿತ್ರವೀರ್ಯನ ಕ್ಷೇತ್ರದಲ್ಲಿ ಅಂಬಿಕೆಗೂ ಅಂಬಾಲಿಕೆಗೂ ಮಕ್ಕಳಾಗುವ ಹಾಗೆ ವರಪ್ರಸಾದವನ್ನು ಕರುಣಿಸಬೇಕು ಎಂದಳು. ವ್ಯಾಸನು ಹಾಗೆಯೇ ಆಗಲೆಂದು ಒಪ್ಪಿದನು. ೮೫. ದೇವತೆಗಳು ಮನುಷ್ಯರು ರಾಕ್ಷಸರು ಮತ್ತು (ಪಾತಾಳಲೋಕದ) ಸರ್ಪಗಳು ಮೊದಲಾದವರ ಗುಂಪಿಗೆ ಪ್ರಭುವೂ ನಿಷ್ಕೃಷ್ಟವಾದ ತತ್ವಜ್ಞಾನಿಯೂ ಯೋಗಿಯೂ ಆದ ವ್ಯಾಸಮಹರ್ಷಿಯು ತನ್ನ ಯೋಗಶಕ್ತಿಯು ಹುಟ್ಟಿ ಅಭಿವೃದ್ಧಿಯಾಗಿ ಸ್ಥಿರವಾಗಿ ನಿಲ್ಲಲು ಮಕ್ಕಳು ಬೇಕೆಂಬ ವರವನ್ನು ಬೇಡುವವರಾಗಿ ತನ್ನ ಎದುರಿನಲ್ಲೇ ನಿಂತಿರುವವರನ್ನು ನಯದಿಂದ ನೋಡಲಾಗಿ ಆ ಋಷಿಶ್ರೇಷ್ಠನ ದಿವ್ಯದೃಷ್ಟಿಮಂತ್ರದಿಂದಲೇ ಆ ಇಬ್ಬರು ಸ್ತ್ರೀಯರಲ್ಲಿಯೂ ನವೀನವಾದ ಗರ್ಭಸೌಂದರ್ಯವು ವ್ಯಾಪಿಸಿತು. (ಇಬ್ಬರೂ ಗರ್ಭಧಾರಣೆ ಮಾಡಿದರು) ವ|| ಹಾಗೆ ದಿವ್ಯವಾದ (ಋಷಿಶ್ರೇಷ್ಠನ) ಸಂಯೋಗದಿಂದ ಇಬ್ಬರೂ ಗರ್ಭವನ್ನು ಧರಿಸಿದರು. ಇನ್ನೊಬ್ಬ ಮಗನ ವರವನ್ನು ಕೇಳು ಎಂದು ಅಂಬಿಕೆಗೆ ಹೇಳಲು ಅವಳು ವ್ಯಾಸಭಟ್ಟಾರಕನ ಹತ್ತಿರ ಹೋಗುವುದಕ್ಕೆ ಆಯಾಸಪಟ್ಟು ತನ್ನ ದಾಸಿಯನ್ನು ತನ್ನ ಹಾಗೆಯೇ ಅಲಂಕರಿಸಿ

ವ್ಯಾಸಮುನೀಂದ್ರಂ ಸತ್ಯವತಿಗಂ ಭೀಷ್ಮಂಗಮಿಂತೆಂದನೆನ್ನ ವರಪ್ರಸಾದ ಕಾಲದೊಳೆನ್ನಂ ಕಂಡಂಬಿಕೆ ಕಣ್ಣಂ ಮುಚ್ಚಿದಳಪ್ಪುದಱಿಂದಾಕೆಗೆ ಧೃತರಾಷ್ಟ್ರನೆಂಬ ಮಗನತ್ಯಂತ ಸುಂದರಾಂಗನಾಗಿಯುಂ ಜಾತ್ಯಂಧನಕ್ಕುಮಂಬಾಲೆ ಮದ್ರೂಪಮಂ ಕಂಡು ಮೊಗಮಂ ಪಾಂಡುರಂ ಮಾಡಿದಳಪ್ಪುದಱಿಂದಾಕೆಗೆ ಪಾಂಡುರೋಗಸಂಗತನುಮನೇಕ ಭದ್ರಲಕ್ಷಣಲಕ್ಷಿತನುಮತ್ಯಂತ ಪ್ರತಾಪನುಮಾಗಿ ಪಾಂಡುರಾಜನೆಂಬ ಮಗನಕ್ಕುಮಂಬಿಕೆಯ ಸೂಳಾಯ್ತಿಯಪ್ಪಾಕೆ ದರಹಸಿತ ವದನಾರವಿಂದೆಯಾಗಿ ಬರವಂ ಕೈಕೊಂಡಳಪ್ಪುದಱಿಂದಾಕೆಯ ಮಗಂ ವಿದುರನೆಂಬ ನನಂಗಾಕಾರನುಮಾಚಾರವಂತನುಂ ಬುದ್ಧಿವಂತನುಮಕ್ಕುಮೆಂದು ಪೇೞ್ದು ಮುನಿಪುಂಗವಂ ಪೋದನಿತ್ತಂ-

ಪೃಥ್ವಿ॥ ವರಂಬಡೆದ ಸಂತಸಂ ಮನದೊಳಾಗಲೊಂದುತ್ತರೋ
ತ್ತರಂ ಬಳೆವ ಮಾೞ್ಕೆಯಿಂ ಬಳೆವ ಗರ್ಭಮಂ ತಾಳ್ದಿಯಾ ।
ದರಂ ಬೆರಸು ಪೆತ್ತರಂದು ಧೃತರಾಷ್ಟ್ರ ವಿಖ್ಯಾತ ಪಾಂ
ಡುರಾಜ ವಿದುರರ್ಕಳಂ ಕ್ರಮದೆ ಮೂವರು ಮೂವರಂ ॥ ೮೬

ಕಂ ॥ ಆ ವಿವಿಧ ಲಕ್ಷಣಂಗಳೊ ।
ಳಾವರಿಸಿದ ಕುಲದ ಬಲದ ಚಲದಳವಿಗಳೊಳ್ ।
ಮೂವರುಮನಾದಿ ಪುರುಷರ್
ಮೂವರುಮೆನಲಲ್ಲದತ್ತ ಮತ್ತೇನೆಂಬರ್ ॥ ೮೭

ವರವನ್ನು ಪ್ರಾರ್ಥಿಸುವಂತೆ ಹೇಳಿ ಕಳುಹಿಸಲು (ವ್ಯಾಸಮಹರ್ಷಿಯು) ಅವಳಿಗೂ ವರವನ್ನು ಕೊಟ್ಟು ಸತ್ಯವತಿ ಮತ್ತು ಭೀಷ್ಮರನ್ನು ಕುರಿತು ನನ್ನ ವರಪ್ರಸಾದಕಾಲದಲ್ಲಿ ನನ್ನನ್ನು ನೋಡಿ ಅಂಬಿಕೆಯು ಕಣ್ಣನ್ನು ಮುಚ್ಚಿದಳಾದುದರಿಂದ ಆಕೆಗೆ ಧೃತರಾಷ್ಟ್ರನೆಂಬ ಮಗನು ಅತ್ಯಂತ ಸುಂದರನಾಗಿಯೂ ಹುಟ್ಟುಗುರುಡನಾಗಿಯೂ ಹುಟ್ಟುತ್ತಾನೆ. ಅಂಬೆಯು ನನ್ನ ರೂಪವನ್ನು ಕಂಡು ಮುಖವನ್ನು ಬೆಳ್ಳಗೆ ಮಾಡಿಕೊಂಡುದರಿಂದ ಆಕೆಯ ಮಗನು ಪಾಂಡುರೋಗದಿಂದ ಕೂಡಿದವನೂ ಅನೇಕ ಶುಭಲಕ್ಷಣಗಳಿಂದ ಗುರುತುಮಾಡಲ್ಪಟ್ಟವನೂ (ಕೂಡಿದವನೂ) ಅತ್ಯಂತ ಶೌರ್ಯಶಾಲಿಯೂ ಆಗಿ ಪಾಂಡುರಾಜನೆಂಬ ಮಗನಾಗುತ್ತಾನೆ. ಅಂಬಿಕೆಯ ದಾದಿಯಾದವಳು ಹುಸಿನಗೆಯಿಂದ ಕೂಡಿದ ಮುಖಕಮಲವುಳ್ಳವಳಾಗಿ ಬಂದುದರಿಂದ ಆಕೆಯ ಮಗನಾದ ವಿದುರನು ಮನ್ಮಥಾಕಾರವುಳ್ಳವನೂ ಆಚಾರವಂತನೂ ಬುದ್ಧಿವಂತನೂ ಆಗುತ್ತಾನೆ ಎಂದು ಹೇಳಿ ಋಷಿಶ್ರೇಷ್ಠನು ಹೊರಟುಹೋದನು. ಈ ಕಡೆ ೮೬. ಆ ಮೂವರು ಸ್ತ್ರೀಯರೂ ವರವನ್ನು ಪಡೆದ ಸಂತೋಷವು ಅಭಿವೃದ್ಧಿಯಾಗಿ ಮೇಲೆ ಮೇಲೆ ಬೆಳೆಯುತ್ತಿರುವ ಹಾಗೆಯೇ ಬೆಳೆಯುತ್ತಿರುವ ಗರ್ಭವನ್ನು ಧರಿಸಿ ಪ್ರೀತಿಯಿಂದ ಕೂಡಿದವರಾಗಿ ಮೂವರೂ ಧೃತರಾಷ್ಟ್ರ, ವಿಖ್ಯಾತನಾದ ಪಾಂಡುರಾಜ, ವಿದುರ ಎಂಬ ಮೂವರನ್ನು ಕ್ರಮವಾಗಿ ಅಂದು ಪಡೆದರು. ೮೭. ಆ ಬಗೆಬಗೆಯ ರಾಜಲಕ್ಷಣಗಳಿಂದ ಕೂಡಿದ ವಂಶದ, ಶೌರ್ಯದ, ಛಲದ ಪ್ರಮಾಣಗಳಲ್ಲಿ ಆ ಮೂವರನ್ನೂ ಆದಿಪುರುಷರೂ ತ್ರಿಮೂರ್ತಿಗಳೂ ಆದ ಬ್ರಹ್ಮವಿಷ್ಣು ಶಿವರೆಂದು ಹೇಳದೆ ಮತ್ತೇನೆಂದು ಹೇಳುವುದು.

ವ|| ಅಂತವರ್ಗೆ ಜಾತಕರ್ಮ ನಾಮಕರಣಾನ್ನಪ್ರಾಶನ ಚೌಲೋಪನಯನಾದಿ ಷೋಡಶಕ್ರಿಯೆಗಳಂ ಗಾಂಗೇಯಂ ತಾಂ ಮುಂತಿಟ್ಟು ಮಾಡಿ ಶಸ್ತ್ರ ಶಾಸ್ತ್ರಂಗಳೊಳತಿ ಪರಿಣತರಂ ಮಾಡಿ ಮದುವೆಯಂ ಮಾಡಲೆಂದು ಧೃತರಾಷ್ಟ್ರಂಗೆ ಗಾಂಧಾರರಾಜ ಸೌಬಲನ ಮಗಳಪ್ಪ ಗಾಂಧಾರಿಯಂ ಶಕುನಿಯೊಡವುಟ್ಟಿದಳಂ ತಂದುಕೊಟ್ಟು-

ಕಂ || ಮತ್ತಿತ್ತ ನೆಗಳ್ತೆಯ ಪುರು
ಷೋತ್ತಮನ ಪಿತಾಮಹಂಗೆ ಶೂರಂಗೆ ಮಗಳ್ ।
ಮತ್ತಗಜಗಮನೆ ಯದುವಂ
ಶೋತ್ತಮೆಯೆನೆ ಕುಂತಿ ಕುಂತಿಭೋಜನ ಮನೆಯೊಳ್ ॥ ೮೮

ಬಳೆಯುತ್ತಿರ್ಪನ್ನೆಗಮಾ
ನಳಿನಾಸ್ಯೆಯ ಗೆಯ್ದುದೊಂದು ಶುಶ್ರೂಷೆ ಮನಂ ।
ಗೊಳೆ ಕೊಟ್ಟಂ ದುರ್ವಾಸಂ
ವಿಳಸಿತ ಮಂತ್ರಾಕ್ಷರಂಗಳಂ ದಯೆಯಿಂದಂ ॥ ೮೯

ವ|| ಅಂತು ಕೊಟ್ಟಯ್ದು ಮಂತ್ರಾಕ್ಷರಂಗಳನಾಹ್ವಾನಂಗೆಯ್ದು ನಿನ್ನ ಬಗೆಗೆ ಬಂದ ಪೋಲ್ವೆಯ ಮಕ್ಕಳಂ ಪಡೆವೆಯೆಂದು ಬೆಸಸಿದೊಡೊಂದು ದಿವಸಂ ಕೊಂತಿ-

ಕಂ || ಪುಚ್ಚವಣಂ ನೋಡುವೆನೆ
ನ್ನಿಚ್ಚೆಯೊಳೀ ಮುನಿಯ ವರದ ಮಹಿಮೆಯನೆನುತಂ ॥
ದುಚ್ಚಸ್ತನಿ ಗಂಗೆಗೆ ಶಫ
ರೋಚ್ಚಳಿತ ತರತ್ತರಂಗೆಗೊರ್ವಳೆ ಬಂದಳ್ ॥ ೯೦

ಅಂದರೆ ಆ ಮೂವರನ್ನೂ ತ್ರಿಮೂರ್ತಿಗಳೆಂದೇ ಕರೆಯುತ್ತಾರೆ ವ|| ಹಾಗೆ ಅವರಿಗೆ ಜಾತಕರ್ಮ, ನಾಮಕರಣ, ಅನ್ನಪ್ರಾಶನ, ಚೌಲ, ಉಪನಯನವೇ ಮೊದಲಾದ ಹದಿನಾರು ಕರ್ಮಗಳನ್ನು ಪ್ರಧಾನವಾಗಿ ಭೀಷ್ಮನು ತಾನೇ ಮುಂದೆ ನಿಂತು ಮಾಡಿ ಅವರನ್ನು ಶಸ್ತ್ರವಿದ್ಯೆಯಲ್ಲಿಯೂ ಶಾಸ್ತ್ರವಿದ್ಯೆಯಲ್ಲಿಯೂ ಪಂಡಿತರನ್ನಾಗಿ ಮಾಡಿದನು. ಧೃತರಾಷ್ಟ್ರನಿಗೆ ಗಾಂಧಾರರಾಜನಾದ ಸೌಬಲನ ಮಗಳೂ ಶಕುನಿಯ ಒಡಹುಟ್ಟಿದವಳೂ ಆದ ಗಾಂಧಾರಿಯನ್ನು ಮದುವೆ ಮಾಡಿದನು. ೮೮-೮೯. ಈ ಕಡೆ ಪ್ರಸಿದ್ಧನಾದ ಶ್ರೀಕೃಷ್ಣನ ತಾತನಾದ ಶೂರನೆಂಬ ಯದುವಂಶದ ರಾಜನಿಗೆ ಮದಗಜಗಮನೆಯೂ ಯದುವಂಶಶ್ರೇಷ್ಠಳೂ ಆದ ಕುಂತಿಯೆಂಬ ಮಗಳು ಕುಂತಿಭೋಜನ ಮನೆಯಲ್ಲಿ ಬೆಳೆಯುತ್ತಿರಲು ಆ ಕಮಲಮುಖಿಯಾದ ಕುಂತಿಯು ಮಾಡಿದ ಶುಶ್ರೂಷೆಯಿಂದ ಮೆಚ್ಚಿದ ದುರ್ವಾಸನೆಂಬ ಋಷಿಯು ಪ್ರಕಾಶಮಾನವಾದ ಅಯ್ದು ಮಂತ್ರಾಕ್ಷರಗಳನ್ನು ದಯಮಾಡಿ ಕೊಟ್ಟನು. ವ|| ಹಾಗೆ ಕೊಟ್ಟು ಈ ಅಯ್ದುಮಂತ್ರಗಳನ್ನು ನೀನು ಉಚ್ಚರಿಸಿ ಕರೆದರೆ ನಿನ್ನ ಮನಸ್ಸಿಗೆ ಬಂದ ಹೋಲಿಕೆಯ ಮಕ್ಕಳನ್ನು ಪಡೆಯುತ್ತೀಯೆ ಎಂದು ಅಪ್ಪಣೆ ಮಾಡಿದನು. ಒಂದು ದಿನ ಕುಂತಿಯು ೯೦. ಈ ಋಷಿಯು ಕೊಟ್ಟ ವರದ ಮಹಿಮೆಯನ್ನು ನನಗೆ ಇಷ್ಟ ಬಂದಂತೆ ಪರೀಕ್ಷೆ ಮಾಡಿ ನೋಡುತ್ತೇನೆಂದು ಮೀನುಗಳಿಂದ ಮೇಲಕ್ಕೆ ಹಾರಿಸಲ್ಪಟ್ಟ ಚಂಚಲವಾದ

ಬಂದು ಸುರನದಿಯ ನೀರೊಳ್
ಮಿಂದಿನನಂ ನೋಡಿ ನಿನ್ನ ದೊರೆಯನೆ ಮಗನ ।
ಕ್ಕೆಂದಾಹ್ವಾನಂಗೆಯ್ಯಲೊ
ಡಂ ದಲ್ ಧರೆಗಿಟಿದನಂದು ದಶಶತಕಿರಣಂ ॥ ೯೧

ವ॥ ಅಂತು ನಭೋಭಾಗದಿಂ ಭೂಮಿಭಾಗಕ್ಕಿೞಿದು ತನ್ನ ಮುಂದೆ ನಿಂದರವಿಂದ ಬಾಂಧವನಂ ನೋಡಿ ನೋಡಿ-

ಕಂ ॥ ಕೊಡಗೂಸುತನದ ಭಯದಿಂ
ನಡುಗುವ ಕನ್ನಿಕೆಯ ಬೆಮರ ನೀರ್ಗಳ ಪೊನಲೊ ।
ಟ್ಟುಡಿಯಲೊಡಗೂಡೆ ಗಂಗೆಯ
ಮಡು ಕರೆಗಣ್ಮಿದುದು ನಾಣ ಪೆಂಪೇಂ ಪಿರಿದೋ ॥ ೯೨

ವ॥ ಆಗಳಾದಿತ್ಯನಾಕೆಯ ಮನದ ಶಂಕೆಯುಮಂ ನಡುಗುವ ಮೆಯ್ಯ ನಡುಕಮುಮಂ ಕಿಡೆನುಡಿದಿಂತೆಂದಂ-

ಕಂ ॥ ಬರಿಸಿದ ಕಾರಣಮಾವುದೊ
ತರುಣಿ ಮುನೀಶ್ವರನ ಮಂತ್ರಮೇ ದೊರೆಯೆಂದಾಂ ॥
ಮರುಳಿಯೆನೆಯಱಿದುಮಱಿಯದೆ
ಬರಿಸಿದೆನಿನ್ನೇೞಿಮೆಂದೊಡಾಗದು ಪೋಗಲ್ ॥ ೯೩

ಮುಂ ಬೇಡಿದ ವರಮಂ ಕುಡ
ದಂಬುಜಮುಖಿ ಪುತ್ರನೆನ್ನ ದೊರೆಯಂ ನಿನಗ ॥
ಕ್ಕೆಂಬುದುಮೊದವಿದ ಗರ್ಭದೊ
ಳಂಬುಜಮಿತ್ರನನೆ ಪೋಲ್ವ ಮಗನೊಗೆತಂದಂ ॥ ೯೪

ಅಲೆಗಳನ್ನುಳ್ಳ ಗಂಗಾನದಿಗೆ ಉನ್ನತಸ್ತನಿಯಾದ ಅವಳು ಒಬ್ಬಳೇ ಬಂದಳು. ೯೧. ಬಂದು ಗಂಗಾನದಿಯ ನೀರನಲ್ಲಿ ಸ್ನಾನಮಾಡಿ ಸೂರ್ಯನನ್ನು ನೋಡಿ ನಿನಗೆ ಸಮನಾದ ಮಗನಾಗಲಿ ಎಂದು ಕರೆದಾಗಲೇ ಸೂರ್ಯನು ಪ್ರತ್ಯಕ್ಷವಾದನು. ೯೨. ತಾನು ಇನ್ನೂ ಕನ್ಯೆಯಲ್ಲಾ ಎಂಬ ಭಯದಿಂದ ನಡುಗುವ ಆ ಕನ್ಯೆಯ ಬೆವರಿನ ನೀರಿನ ಪ್ರವಾಹವು ತುಂಬಿ ಹರಿದು ಒಟ್ಟುಗೂಡಲು ಗಂಗಾನದಿಯ ಮಡುವೂ ದಡವನ್ನು ಮೀರಿ ಹರಿಯಿತು. ಆಕೆಯ ನಾಚಿಕೆಯ ಆಧಿಕ್ಯವು ಎಷ್ಟು ಹಿರಿದೊ! ವ॥ ಆಗ ಸೂರ್ಯನು ಅವಳ ಮನಸ್ಸಿನ ಸಂದೇಹವೂ ನಡುಗುತ್ತಿರುವ ಶರೀರದ ನಡುಕವೂ ಹೋಗುವ ಹಾಗೆ (ನಯದಿಂದ) ಮಾತನಾಡಿ ೯೩-೯೪. ಎಲೆ ತರುಣಿ ನನ್ನನ್ನು ಬರಿಸಿದ ಕಾರಣವೇನು (ಎಂದು ಸೂರ್ಯನು ಪ್ರಶ್ನಿಸಲು ಕುಂತಿಯು) ಆ ಋಷಿಶ್ರೇಷ್ಠನು ಕೊಟ್ಟ ಮಂತ್ರವು ಎಂಥಾದ್ದು ಎಂದು ಪರೀಕ್ಷಿಸಲು (ಬರಿಸಿದೆನು) ನಾನು ಅರಿಯದವಳೂ ಭ್ರಮೆಗೊಂಡವಳೂ ಆಗಿದ್ದೇನೆ. ತಿಳಿದೂ ತಿಳಿಯದೆ ಬರಮಾಡಿದೆನು. ಇನ್ನು ಎದ್ದುಹೋಗಿ ಎಂದಳು. (ಸೂರ್ಯನು) ಎಲೌ ಕಮಲಮುಖಿಯೇ ನೀನು ಮೊದಲು ಬೇಡಿದ ವರವನ್ನು ಕೊಡದೆ ನಾನು

ಒಡವುಟ್ಟಿದ ಮಣಿಕುಂಡಲ
ಮೊಡವುಟ್ಟಿದ ಸಹಜಕವಚಮುಮುರ್ದಿರೆ ತನ್ನೊಳ್ ।
ತೊಡರ್ದಿರೆಯುಂ ಬಂದಾಕೆಯ
ನಡುಕಮನೊಡರಿಸಿದನಾಗಳಾ ಬಾಲಕೆಯಾ ॥ ೯೫

ವ॥ ಅಂತು ನಡನಡನಡುಗಿ ಜಲದೇವತೆಗಳಪ್ಪೊಡಂ ಮನಂಗಾಣ್ಬರೆಂದು ನಿಧಾನಮ ನೀಡಾಡುವಂತೆ ಕೂಸಂ ಗಂಗೆಯೊಳೀಡಾಡಿ ಬಂದಳಿತ್ತ ಗಂಗಾದೇವಿಯುಮಾ ಕೂಸಂ ಮುಳುಗಲೀಯದೆ ತನ್ನ ತೆರೆಗಳೆಂಬ ನಳಿತೋಳ್ಗಳಿನೊಯ್ಯನೊಯ್ಯನೆ ತಬ್ಬಿಸಿ ತರೆ ಗಂಗಾತೀರ ದೊಳಿರ್ಪ ಸೂತನೆಂಬಂ ಕಂಡು-

ಉ॥ ಬಾಳದಿನೇಶಬಿಂಬದ ನೆಬಲ್ ಜಲದೊಳ್ ನೆಲಸಿತ್ತೊ ಮೇಣ್ ಫಣೀಂ
ದ್ರಾಳಯುದಿಂದಮುರ್ಚಿದ ಫಣಾಮಣಿ ಮಂಗಳರಶ್ಮಿಯೋ ಕರಂ ।
ಮೇಳಿಸಿದಪ್ಪುದೆನ್ನೆರ್ದೆಯನೆಂದು ಬೊದಿಲ್ಲೆನೆ ಪಾಯ್ದು ನೀರೊಳಾ
ಬಾಳನನಾದಮಾದರದೆ ಕೊಂಡೊಸೆದಂ ನಿಧಿಗಂಡನಂತೆವೋಲ್ ॥ ೯೬

ವ॥ ಅಂತು ಕಂಡು ಮನಂಗೊಂಡೆತ್ತಿಕೊಂಡು ಮನೆಗೆ ತಂದು ರಾಧೆಯೆಂಬ ತನ್ನ ನಲ್ಲಳ ಸೋಂಕಿಲೊಳ್ ಕೂಸನಿಟ್ಟೊಡಾಕೆ ರಾಗಿಸಿ ಸುತನ ಸೂತಕಮಂ ಕೊಂಡಾಡೆ-

ಹೋಗಲಾಗುವುದಿಲ್ಲ. ನಿನಗೆ ನನ್ನ ಸಮಾನನಾದ ಮಗನಾಗಲಿ ಎಂದನು. ಆಗ ಉಂಟಾದ ಗರ್ಭದಲ್ಲಿ ಕಮಲಸಖನಾದ ಸೂರ್ಯನನ್ನು ಹೋಲುವ ಮಗನು ಹುಟ್ಟಿದನು. ೯೫. ಜೊತೆಯಲ್ಲಿಯೇ ಹುಟ್ಟಿದ ಮಣಿಕುಂಡಲಗಳೂ (ರತ್ನಖಚಿತವಾದ ಕಿವಿಯಾಭರಣ) ಜೊತೆಯಲ್ಲಿಯೇ ಹುಟ್ಟಿದ ಕವಚವೂ ತನ್ನಲ್ಲಿ ಸೇರಿ ಅಮರಿಕೊಂಡಿರಲು ಹುಟ್ಟಿದ ಆ ಮಗನು ಆಗ ಆ ಬಾಲಿಕೆಗೆ ನಡುಕವನ್ನುಂಟು ಮಾಡಿದನು. ವ॥ ಹಾಗೆ ವಿಶೇಷವಾಗಿ ನಡುಗಿ ಜಲದೇವತೆಗಳಾದರೂ ನನ್ನ ಮನಸ್ಸನ್ನು ತಿಳಿದುಕೊಳ್ಳುತ್ತಾರೆ ಎಂದು ತನ್ನ ನಿಧಿಯನ್ನೇ (ಐಶ್ವರ್ಯ) ಬಿಸಾಡುವಂತೆ ಕೂಸನ್ನು ಗಂಗೆಯಲ್ಲಿ ಎಸೆದು ಬಂದಳು. ಈ ಕಡೆ ಗಂಗಾದೇವಿಯು ಆ ಕೂಸನ್ನು ಮುಳುಗುವುದಕ್ಕೆ ಅವಕಾಶಕೊಡದೆ ತನ್ನ ಅಲೆಗಳೆಂಬ ಸುಂದರವಾದ ತೋಳುಗಳಿಂದ ನಿಧಾನವಾಗಿ ತಬ್ಬಿಕೊಂಡು ತರಲು ಗಂಗಾತೀರದಲ್ಲಿದ್ದ ಸೂತನೆಂಬುವನು ಕಂಡು ೯೬. ಬಾಲ ಸೂರ್ಯಮಂಡಲದ ನೆರಳು ನೀರಿನಲ್ಲಿ ನೆಲೆಸಿದೆಯೋ ಅಥವಾ ನಾಗಲೋಕ ದಿಂದ ಭೇದಿಸಿಕೊಂಡು ಬಂದ ಹೆಡೆಮಣಿಗಳ ಮಂಗಳಕಿರಣಗಳೋ! ಇದು ನನ್ನ ಹೃದಯವನ್ನು ವಿಶೇಷವಾಗಿ ಆಕರ್ಷಿಸುತ್ತಿದೆ ಎಂದು ಗಂಗೆಯ ನೀರಿನಲ್ಲಿ ಬೊದಿಲ್ ಎಂದು ಶಬ್ದವಾಗುವ ಹಾಗೆ ಥಟ್ಟನೆ ಹಾರಿ ಅತ್ಯಂತ ಪ್ರೇಮಾತಿಶಯದಿಂದ ಕಂಡು ನಿಧಿಯನ್ನು ಕಂಡವನಂತೆ ವ॥ ಉತ್ಸಾಹದಿಂದೆತ್ತಿಕೊಂಡು ಮನೆಗೆ ತಂದು ರಾಧೆಯೆಂಬ ತನ್ನ ಪ್ರಿಯಳ ಮಡಲಿನಲ್ಲಿ ಕೂಸನ್ನು ಇಡಲಾಗಿ ಆಕೆ ಪ್ರೀತಿಸಿ ಮಗನು ಹುಟ್ಟಿದ

ಕಂ ॥ ಅಗುಳ್ದಿರಲಾ ಕುಟಿಯೊಳ್ ತೊ
ಟ್ಟಗೆ ನಿಧಿಗಂಡಂತೆ ವಸುಧೆಗಸದಳಮಾಯ್ತಾ ।
ಮಗನಂದಮೆಂದು ಲೋಗರ್
ಬಗೆದಿರೆ ವಸುಷೇಣನೆಂಬ ಪೆಸರಾಯ್ತಾಗಳ್ ॥ ೯೭

ಅಂತು ವಸುಷೇಣನಾ ಲೋ
ಕಾಂತಂಬರಮಳವಿ ಬಳೆಯೆ ಬಳದೆಸಕಮದೋ ॥
ರಂತೆ ಜನಂಗಳ ಕರ್ಣೋ
ಪಾಂತದೊಳೊಗೆದೆಸೆಯೆ ಕರ್ಣನೆಂಬನುಮಾದಂ ॥ ೯೮

ವ॥ ಆಗಿಯಾತಂ ಶಸ್ತ್ರಶಾಸ್ತ್ರವಿದ್ಯೆಯೊಳತಿಪರಿಣತನಾಗಿ ನವಯೌವನಾರಂಭದೊಳ್-

ಚಂ ॥ ಪೊಡೆದುದು ಬಿಲ್ಲ ಜೇವೊಡೆಯೆ ಮಿಾಱುವ ವೈರಿ ನರೇಂದ್ರರಂ ಸಿಡಿ
ಲ್ಪೊಡೆದವೊಲಟ್ಟಿ ಮುಟ್ಟೆ ಕಡಿದಿಕ್ಕಿದುದಾದೆಡರಂ ನಿರಂತರಂ ।
ಕಡಿಕಡಿದಿತ್ತ ಪೊನ್ನ ಬುಧ ಮಾಗಧ ವಂದಿಜನಕ್ಕೆ ಕೊಟ್ಟ ಕೋ
ಡೆಡರದೆ ಬೇಡಿಮೋಡಿಮಿದು ಚಾಗದ ಬೀರದ ಮಾತು ಕರ್ಣನಾ ॥ ೯೯

ವ॥ ಅಂತು ಭುವನಭವನಕ್ಕೆಲ್ಲಂ ನೆಗಳ್ದ ಕರ್ಣನ ಪೊಗಳ್ತೆಂ ನೆಗಳ್ತೆಯುಮನೀಂದ್ರಂ ಕೇಳ್ದು ಮುಂದೆ ತನ್ನಂಶದೊಳ್ ಪುಟ್ಟುವರ್ಜುನಂಗಮಾತಂಗಂ ದ್ವಂದ್ವಯುದ್ಧಮುಂಟೆಂಬುದಂ ತನ್ನ ದಿವ್ಯಜ್ಞಾನದಿಂದಮಱಿದುವಿಂತಲ್ಲದೀತನನಾತಂ ಗಲಲ್ ಬಾರದೆಂದು-

ಮೈಲಿಗೆಯನ್ನು ಆಚರಿಸಿದಳು. ೯೭. ತೋಡುತ್ತಿರುವ ಗುಳಿಯಲ್ಲಿ ನಿಧಿ ದೊರತಂತಾಯಿತು ಈ ಮಗುವಿನ ಸೌಂದರ್ಯ ಎಂದು ಜನರಾಡಿಕೊಳ್ಳುತ್ತಿರಲು ಆ ಮಗುವಿಗೆ ವಸುಷೇಣನೆಂಬ ಹೆಸರಾಯಿತು-೯೮. ಹಾಗೆಯೇ ವಸುಷೇಣನ ಪರಾಕ್ರಮವು ಲೋಕದ ಎಲ್ಲೆಯವರೆಗೆ ಬೆಳೆಯಲು ಆ ಬೆಳೆದ ರೀತಿ ಒಂದೇಪ್ರಕಾರವಾಗಿ ಜನಗಳ ಕರ್ಣ(ಕಿವಿ)ಗಳ ಸಮೀಪದಲ್ಲಿ ಹರಡುತ್ತಿರಲು (ಕೂಸು) ಕರ್ಣನೆಂಬ ಹೆಸರುಳ್ಳವನೂ ಆದನು. ವ॥ ಶಸ್ತ್ರ ಮತ್ತು ಶಾಸ್ತ್ರವಿದ್ಯೆಗಳಲ್ಲಿ ಪೂರ್ಣ ಪಾಂಡಿತ್ಯವನ್ನು ಪಡೆಯಲು ಅವನಿಗೆ ಯವ್ವನೋದಯವೂ ಆಯಿತು. ೯೯. ಅವನ ಬಿಲ್ಲಿನ ಟಂಕಾರವೇ ಶತ್ರುರಾಜರನ್ನು ಹೋಗಿ ಅಪ್ಪಳಿಸಿತು. ನಿರಂತರವಾಗಿ ದಾನ ಮಾಡಿದ ಅವನ ಚಿನ್ನದ ರಾಶಿಯೇ - ವಿದ್ವಾಂಸರಿಗೂ ವಂದಿಮಾಗಧರಿಗೂ ಕೊಟ್ಟ ದಾನವೆ ಅವರಿಗಿದ್ದ ದಾರಿದ್ರ್ಯವನ್ನು ಸಿಡಿಲುಹೊಡೆದ ಹಾಗೆ ಅಟ್ಟಿಮೆಟ್ಟಿ ಕತ್ತರಿಸಿಹಾಕಿತು. ಅವನಲ್ಲಿಗೆ ಹೋಗಿ ಎಂಬಂತೆ ಅವನ ತ್ಯಾಗದ ಮತ್ತು ವೀರ್ಯದ ಮೇಲ್ಮೆ ಲೋಕಪ್ರಸಿದ್ಧವಾಯಿತು. ವ॥ ಹೀಗೆ ಲೋಕಪ್ರಸಿದ್ಧವಾದ ಕರ್ಣನ ಹೊಗಳಿಕೆಯನ್ನೂ ಪ್ರಸಿದ್ಧಿಯನ್ನೂ ಇಂದ್ರನು ಕೇಳಿ ಮುಂದೆ ತನ್ನಂಶದಲ್ಲಿ ಹುಟ್ಟುವ ಅರ್ಜುನನಿಗೂ ಈತನಿಗೂ ದ್ವಂದ್ವಯುದ್ಧವುಂಟಾಗುತ್ತದೆ ಎಂದು ತನ್ನ ದಿವ್ಯಜ್ಞಾನದಿಂದ ತಿಳಿದು

ಕಂ ॥ ಬೇಡಿದೊಡೆ ಬಲದ ಬರಿಯುಮ
ನೀಡಾಡುಗುಮುಗಿದು ಕರ್ಣನೆಂದಾಗಳೆ ಕೈ ।
ಗೂಡಿದ ವಟುವಾಕೃತಿಯೊಳೆ
ಬೇಡಿದನಾ ಸಹಜಕವಚಮಂ ಕುಂಡಳಮಂ ॥ ೧೦೦

ಬೇಡಿದುದನರಿದುಕೊಳ್ಳೆನೆ
ಬೇಡಿದುದಂ ಮುಟ್ಟಲಾಗದೆನಗೆನೆ ನೆಗಲ್ದಿ ।
ಲ್ಲಾಡದೆ ಕೊಳ್ಳೆಂದರಿದೀ
ಡಾಡಿದನಿಂದ್ರಂಗೆ ಕವಚಮಂ ರಾಧೇಯಂ ॥ ೧೦೧

ಎಂದುಂ ಪೋಗೆಂದನೆ ಮಾ
ಣೆಂದನೆ ಪೆಱತೊಂದನೀವೆನೆಂದನೆ ನೊಂದಃ ।
ಎಂದನೆ ಸೆರಗಿಲ್ಲದೆ ಪಿಡಿ
ಯೆಂದನಿದೇಂ ಕಲಿಯೊ ಚಾಗಿಯೋ ರವಿತನಯಂ ॥ ೧೦೨

ವ॥ ಅಂತು ತನ್ನ ಸಹಜಕವಚಮಂ ನೆತ್ತರ್ ಪನ ಪನ ಪನಿಯೆ ತಿದಿಯುಗಿವಂತುಗಿದು ಕೊಟ್ಟೊಡಿಂದ್ರನಾತನ ಕಲಿತನಕೆ ಮೆಚ್ಚಿ-

ಕಂ ॥ ಸುರ ದನುಜ ಭುಜಗ ವಿದ್ಯಾ
ಧರ ನರಸಂಕುಲದೊಳಾರನಾದೊಡಮೇನೋ ।
ಗರ ಮುಟ್ಟೆ ಕೊಲ್ಗುಮಿದು ನಿಜ
ವಿರೋಧಿಯಂ ಧುರದೊಳೆಂದು ಶಕ್ತಿಯನಿತ್ತಂ ॥ ೧೦೩

ಹೀಗಲ್ಲದೆ ಆತನು ಈತನನ್ನು ಗೆಲ್ಲಲಾಗುವುದಿಲ್ಲ ಎಂದು ೧೦೦. ಯಾಚಿಸಿದರೆ ಕರ್ಣನು ಬಲಪಾರ್ಶ್ವದ ಪಕ್ಕೆಯನ್ನು ಕತ್ತರಿಸಿ ದಾನವಾಗಿ ಎಸೆಯುತ್ತಾನೆ ಎಂದು ಭಾವಿಸಿ ಆಗಲೇ ಸಿದ್ಧವಾದ ಬ್ರಹ್ಮಚಾರಿಯ ರೂಪದಲ್ಲಿಯೇ ಬಂದು ಇಂದ್ರನು ಕರ್ಣನೊಡನೆ ಹುಟ್ಟಿಬಂದ ಕವಚವನ್ನೂ ಕುಂಡಲವನ್ನೂ ಬೇಡಿದನು. ೧೦೧. ಬೇಡಿದುದನ್ನು ಕತ್ತರಿಸಿಕೊ ಎಂದು ಕರ್ಣನು ಹೇಳಲು ಇಂದ್ರನು ಬೇಡಿದುದನ್ನು ನೀನು ಕೊಡುವುದಕ್ಕೆ ಮೊದಲು ನಾನು ಮುಟ್ಟಲಾಗದು ಎನಲು ಸ್ವಲ್ಪವೂ ಅಲುಗಾಡದೆ ತೆಗೆದುಕೋ ಎಂದು ಹೇಳಿ ಕರ್ಣನು ಕವಚವನ್ನು ಕತ್ತರಿಸಿ ಲಕ್ಷ್ಯವಿಲ್ಲದೆ ನಿರ್ಯೋಚನೆಯಿಂದ ಕೊಟ್ಟನು. ೧೦೨. ಕರ್ಣನು ಬೇಡಿದವರಿಗೆ ಎಂದಾದರೂ ಮುಂದೆ ಹೋಗು ಎಂದು ಹೇಳಿದನೆ? ಸ್ವಲ್ಪ ತಡೆ ಎಂದು ಹೇಳಿದನೆ? (ಕೇಳಿದ ಪದಾರ್ಥವನ್ನಲ್ಲದೆ) ಬೇರೊಂದನ್ನು ಕೊಡುತ್ತೇನೆ ಎಂದನೆ? (ಕತ್ತರಿಸುವಾಗ) ನೋವಿನಿಂದ ಅಃ ಎಂದನೆ? ಪೆವರಿಕೆಯಿಲ್ಲದೆ ಹಿಡಿ ತೆಗೆದುಕೋ ಎಂದನು. ಕರ್ಣನು ಅದೆಂತಹ ಶೂರನೋ ಹಾಗೆಯೇ ತ್ಯಾಗಿಯೂ ಅಲ್ಲವೇ! ವ॥ ಹಾಗೆ ರಕ್ತವು ಪನ ಪನ ಹರಿಯುತ್ತಿರಲು ತನ್ನ ಸಹಜಕವಚವನ್ನು ಚರ್ಮದ ಚೀಲವನ್ನು ಸೀಳುವಂತೆ ಸೀಳಿ, ಕೊಡಲಾಗಿ ಇಂದ್ರನು ಆತನ ಶೌರ್ಯಕ್ಕೆ ಮೆಚ್ಚಿ ೧೦೩. ನಿನ್ನ ಶತ್ರುಗಳಲ್ಲಿ ದೇವತೆಗಳು, ರಾಕ್ಷಸರು, ನಾಗಗಳು, ವಿದ್ಯಾಧರರು, ಮನುಷ್ಯರು ಇವರಲ್ಲಿ ಯಾರಾದರೂ ಸರಿಯೆ ಈ

ವ॥ ಅಂತಿಂದ್ರನಿತ್ತ ಶಕ್ತಿಯಂ ಕೈಕೊಂಡು ನಿಜಭುಜಶಕ್ತಿಯಂ ಪ್ರಕಟಂ ಮಾಡಲೆಂದು ರೇಣುಕಾನಂದನನಲ್ಲಿಗೆ ಪೋಗಿ-

ಕಂ ॥ ಕೊರಿಸೆ ಗುರು ಶುಶ್ರೂಷೆಯೊ
ಳಾ ರಾಮನನುಗ್ರ ಪರಶು ಪಾಟಿತ ರಿಪು ವಂ ।
ಶಾರಾಮನನಿಷುವಿದ್ಯಾ
ಪಾರಗನೆನಿಸಿದುದು ಬಲ್ಮೆ ವೈಕರ್ತನನಾ । ೧೦೪

ವ॥ ಅಂತು ಧನುರ್ಧರಾಗ್ರಗಣ್ಯನಾಗಿರ್ದೊಂದು ದಿವಸಂ ತನ್ನ ತೊಡೆಯ ಮೇಲೆ ತಲೆಯನಿಟ್ಟು ಪರಶುರಾಮಂ ಮಱೆದೊಱಗಿದಾ ಪ್ರಸ್ತಾವದೊಳಾ ಮುನಿಗೆ ಮುನಿಸಂ ಮಾಡಲೆಂದಿಂದ್ರನುಪಾಯದೊಳಟ್ಟಿದ ವಜ್ರಕೀಟಂಗಳ್ ಕರ್ಣನೆರಡುಂ ತೊಡೆಯುಮ ನುಳಿಯನೂಱೆ ಕೊಡಂತಿಯೊಳ್ ಬೆಟ್ಟದಂತತ್ತಮಿತ್ತಮುರ್ಚಿ ಪೋಗೆಯುಮದನಱಿಯದಂತೆ ಗುರುಗೆ ನಿದ್ರಾಭಿಘಾತಮಕ್ಕುಮೆಂದು ತಲೆಯನುಗುರಿಸುತ್ತುಮಿರೆಯಿರೆ-

ಕಂ॥ ಅತಿ ವಿಶದ ವಿಶಾಲೋರು
ಕ್ಷತದಿಂದೊಱೆದನಿತು ಜಡೆಯುಮಂ ನಾಂದಿ ಮನಃ ।
ಕ್ಷತದೊಡನೆಬ್ಬಿಱೆಸಿದುದು
ಕ್ಷಿತಮಾ ವಂದಸ್ರ ಮಿಶ್ರ ಗಂಧಂ ಮುನಿಯಂ ॥ ೧೦೫

ವ॥ ಅಂತೆಟ್ಟುತ್ತು ನೆತ್ತರ ಪೊನಲೊಳ್ ನಾಂದು ನನೆದ ಮೆಯ್ಯುಮಂ ತೊಯ್ದು ತಳ್ತೊಯ್ದ ಜಡೆಯುಮಂ ಕಂಡೀ ಧೈರ್ಯಂ ಕ್ಷತ್ರಿಯಂಗಲ್ಲದಾಗದು ಪಾರ್ವನೆಂದೆನ್ನೊಳ್

ಶಕ್ತ್ಯಾಯುಧವು ಗ್ರಹ ಹಿಡಿದ ಹಾಗೆ ಅವರನ್ನು ಕೊಲ್ಲುತ್ತದೆ ಎಂದು ಅವನಿಗೆ ಶಕ್ತ್ಯಾಯುಧವನ್ನು ಕೊಟ್ಟನು. ವ॥ ಹಾಗೆ ಇಂದ್ರನು ಕೊಟ್ಟ ಶಕ್ತ್ಯಾಯುಧವನ್ನು ಸ್ವೀಕರಿಸಿ ತನ್ನ ಬಾಹುಬಲವನ್ನು ಪ್ರಕಟಮಾಡಬೇಕೆಂದು ಪರಶುರಾಮನ ಹತ್ತಿರಕ್ಕೆ ಹೋದನು. ೧೦೪. ಭಯಂಕರವಾದ ಕೊಡಲಿಯಿಂದ ಸೀಳಲ್ಪಟ್ಟ ವೈರಿಗಳೆಂಬ ತೋಟವನ್ನುಳ್ಳ ಆ ಪರಶುರಾಮನನ್ನು ಕರ್ಣನು ಗುರುಶುಶ್ರೂಷೆಯ ಮೂಲಕ ಪ್ರೀತಿಸುವಂತೆ ಮಾಡಲು ಕರ್ಣನ ಬಿಲ್‌ಬಲ್ಮೆಯು ಅವನನ್ನು ಧನುರ್ವಿದ್ಯೆಯಲ್ಲಿ ಪಾರಂಗತನೆನ್ನುವ ಹಾಗೆ ಮಾಡಿತು. ವ॥ ಹಾಗೆ ಬಿಲ್ಲು ಹಿಡಿದಿರುವವರಲ್ಲೆಲ್ಲ ಮೊದಲಿಗನಾಗಿದ್ದು ಒಂದು ದಿನ ಪರಶುರಾಮನು ತನ್ನ ತೊಡೆಯ ಮೇಲೆ ತಲೆಯನ್ನು ಮಡಗಿ ಎಚ್ಚರತಪ್ಪಿ ಮಲಗಿದ ಸಂದರ್ಭದಲ್ಲಿ ಆ ಋಷಿಗೆ ಕೋಪವನ್ನುಂಟು ಮಾಡಬೇಕೆಂದು ಇಂದ್ರನು ಉಪಾಯದಿಂದ ಕಳುಹಿಸಿದ ವಜ್ರಕೀಟಗಳೇ ಕರ್ಣನೆರಡು ತೊಡಗಳನ್ನೂ ಉಳಿಯನ್ನು ನಾಟಿ ಕೊಡಲಿಯಿಂದ ಹೊಡೆದ ಹಾಗೆ ಆ ಕಡೆಯಿಂದ ಈ ಕಡೆಗೆ ಕೊರೆದುಕೊಂಡು ಹೋದರೂ ಕರ್ಣನು ಅದನ್ನು ತಿಳಿಯದವನಂತೆ ಗುರುವಿಗೆ ನಿದ್ರಾಭಂಗವಾಗುತ್ತದೆಂದು ಗುರುವಿನ ತಲೆಯನ್ನು ತನ್ನ ಉಗುರಿನಿಂದ ಸವರುತ್ತಿದ್ದನು. ೧೦೫. ವಿಶೇಷವೂ ಸ್ಪಷ್ಟವೂ ಅಗಲವೂ ಆದ ತೊಡೆಯ ಗಾಯದಿಂದ ಜಿನುಗಿ ಹೆಚ್ಚುತ್ತಿರುವ ರಕ್ತದಿಂದ ಕೂಡಿದ ದುರ್ಗಂಧವು ಜಡೆಯಷ್ಟನ್ನೂ ಒದ್ದೆಮಾಡಿ ಋಷಿಯನ್ನು ಮನಸ್ಸಿನ ಏರುತ್ತಿರುವ ಕೋಪದೊಡನೆ ಎಚ್ಚರವಾಗುವ ಹಾಗೆ ಮಾಡಿತು.

ಪುಸಿದು ವಿದ್ದೆಯಂ ಕೈಕೊಂಡುದರ್ಕೆ ದಂಡಂ ಪೆಱತಿಲ್ಲ ನಿನಗಾನಿತ್ತ ಬ್ರಹ್ಮಾಸ್ತ್ರಮೆಂಬ ದಿವ್ಯಾಸ್ತ್ರಮವಸಾನಕಾಲದೊಳ್ ಬೆಸಕೆಯ್ಯದಿರ್ಕೆಂದು ಶಾಪಮನಿತ್ತನಂತು ಕರ್ಣನುಂ ಶಾಪಹತನಾಗಿ ಮಗುಬ್ಬು ಬಂದು ಸೂತನ ಮನೆಯೊಳಿರ್ಪನ್ನೆಗಮಿತ್ತಲ್ ಕುಂತಿಗವರ ಮಾವನಪ್ಪ ಕುಂತಿಭೋಜನುಂ ಸ್ವಯಂಬರಂ ಮಾಡೆ-

ಚಂ ॥ ಸೊಗಯಿಪ ತಮ್ಮ ಜವ್ವನದ ತಮ್ಮ ವಿಭೂತಿಯ ತಮ್ಮ ತಮ್ಮ ಚೆ
ಲ್ವುಗಳ ವಿಲಾಸದುರ್ಮೆಗಳೊಳಾವೆವಗಾಗಿಪೆವೆಂದು ಬಂದಂ ಚೆ ।
ನ್ನಿಗರುಮನಾಸೆಕಾಱರುಮನೊಲ್ಲದೆ ಚೆಲ್ವಿಡಿದಿರ್ದ ರೂಪು ದೃ
ಷ್ಟಿಗೆವರೆ ಪಾಂಡುರಾಜನನೆ ಕುಂತಿ ಮನಂಬುಗೆ ಮಾಲೆ ಸೂಡಿದಳ್ ॥ ೧೦೬

ವ॥ ಅಂತು ಸ್ವಯಂಬರದೊಳ್ ನೆಱೆದರಸುಮಕ್ಕಳೊಳಪ್ಪುಕೆಯ್ದು ಕುಂತಿಯೊಡನೆ ಮದ್ರರಾಜನ ಮಗಳ್ ಶಲ್ಯನೊಡವುಟ್ಟಿದ ಮಾದ್ರಿಯುಮನೊಂದೆ ಪಸೆಯೊಳಿರಿಸಿ ಗಾಂಗೇಯಂ ವಿಧಾತ್ರಂ ಮುಂಡಾಡುವಂತೆ ತಾಂ ಮದುವೆಯಂ ಮಾಡಿ-

ಚಂ ॥ ತಳಿರ್ಗಳಸಂ ಮುಕುಂದರವಮೆತ್ತಿದ ಮುತ್ತಿನ ಮಂಟಪಂ ಮನಂ
ಗೊಳಿಪ ವಿತಾನಪಜ್ಕ್ತಿ ಪಸುರ್ವಂದಲೊಳೊಲ್ದೆಡೆಯಾಡುವೆಯ್ದೆಯರ್ ।
ಬಳಸಿದ ವೇದಪಾರಗರ ಸಂದಣಿಯೆಂಬಿವಱಿಂ ವಿವಾಹಮಂ
ಗಳಮದು ಕುಂತಿ ಮಾದ್ರಿಗಳೊಳಚ್ಚರಿಯಾದುದು ಪಾಂಡುರಾಜನಾ ॥ ೧೦೭

ವ॥ ಹಾಗೆ ಎಚ್ಚರಗೊಂಡು ರಕ್ತದ ಪ್ರವಾಹದಲ್ಲಿ ಚೆನ್ನಾಗಿ ನೆನೆದು ಒದ್ದೆಯಾದ ಶರೀರವನ್ನೂ ಜಡೆಯನ್ನೂ ನೋಡಿ ಈ ಧೈರ್ಯವು ಕ್ಷತ್ರಿಯನಲ್ಲದವನಿಗಾಗುವುದಿಲ್ಲ. ಬ್ರಾಹ್ಮಣನೆಂದು ನನ್ನಲ್ಲಿ ಸುಳ್ಳು ಹೇಳಿ ವಿದ್ಯೆಯನ್ನು ಸ್ವೀಕಾರಮಾಡಿದುದಕ್ಕೆ ದಂಡ ಬೇರೇನಿಲ್ಲ. ನಿನಗೆ ನಾನು ಕೊಟ್ಟ ಬ್ರಹ್ಮಾಸ್ತ್ರವೆಂಬ ದಿವ್ಯಾಸ್ತ್ರವು ನಿನ್ನ ಕಡೆಯ ಕಾಲದಲ್ಲಿ ನಿನ್ನ ಆಜ್ಞೆಯನ್ನು ಪಾಲಿಸದಿರಲಿ ಎಂದು ಶಾಪ ಕೊಟ್ಟನು. ಹಾಗೆ ಕರ್ಣನು ಶಾಪಹತನಾಗಿ ಪುನಃ ಬಂದು ಸೂತನ ಮನೆಯಲ್ಲಿರಲು ಈಕಡೆ ಕುಂತಿಗೆ ಅವರ ಮಾವನಾದ ಕುಂತೀಭೋಜನು ಸ್ವಯಂವರಕ್ಕೆ ಏರ್ಪಡಿಸಿದನು. ೧೦೬. ಸೊಗಸಾಗಿರುವ ತಮ್ಮ ಯವ್ವನ, ಐಶ್ವರ್ಯ, ಸೌಂದರ್ಯ ಮತ್ತು ಶೃಂಗಾರಚೇಷ್ಟೆಗಳ ಆಧಿಕ್ಯದಿಂದ ನಾವು ಕುಂತಿಯನ್ನು ನಮ್ಮವಳನ್ನಾಗಿ ಮಾಡಿಕೊಳ್ಳುತ್ತೇವೆ ಎಂಬುದಾಗಿ ಬಂದಿದ್ದ ಸೌಂದರ್ಯಶಾಲಿಗಳನ್ನೂ ಕಾಮುಕರನ್ನೂ ಬಯಸದೆ ಕುಂತಿಯು ಪಾಂಡುವಿನ ಸುಂದರವಾದ ರೂಪವು ತನ್ನ ಕಣ್ಣಿಗೆ ಹಿತವಾಗಿದ್ದು ಮನಸ್ಸನ್ನು ಪ್ರವೇಶಿಸಲು ಪಾಂಡುರಾಜನಿಗೇ ವರಣಮಾಲೆಯನ್ನು ತೊಡಿಸಿದಳು (ಹಾಕಿದಳು). ವ॥ ಹಾಗೆ ಸ್ವಯಂವರದಲ್ಲಿ ತುಂಬಿದ್ದ ರಾಜಕುಮಾರರಲ್ಲಿ ಪಾಂಡುವನ್ನೇ ಆಯ್ದುಕೊಂಡ ಕುಂತಿಯೊಡನೆ ಮದ್ರರಾಜನ ಮಗಳೂ ಶಲ್ಯನೊಡನೆ ಹುಟ್ಟಿದವಳೂ ಆದ ಮಾದ್ರೀದೇವಿಯನ್ನೂ ಒಂದೇ ಹಸೆಮಣೆಯಲ್ಲಿರಿಸಿ ಭೀಷ್ಮನು, ಬ್ರಹ್ಮನೆ ಮೆಚ್ಚಿ ಮುದ್ದಾಡುವಂತೆ ತಾನೇ ಮದುವೆಯನ್ನು ಮಾಡಿದನು. ೧೦೭. ಚಿಗುರಿನಿಂದ ಕೂಡಿದ ಕಳಶ, ತಮಟೆಯ ಧ್ವನಿ (ಮಂಗಳವಾದ್ಯ) ಎತ್ತರವಾಗಿ ಕಟ್ಟಿದ ಮಂಟಪ, ಮನೋಹರವಾಗಿರುವ ಮೇಲುಕಟ್ಟಿನ ಸಾಲುಗಳು, ಹಸಿರುವಾಣಿಯ ಚಪ್ಪರ, ಪ್ರೀತಿಯಿಂದ

ತುಱುಗೆಮೆ ನೀಳ್ದ ಪುರ್ವು ನಿಡುಗಣ್ ಪೊಱೆಯಲ್ಲದೆ ಬಟ್ಟತಪ್ಪ ಬಾ
ಯ್ದೆಱೆ ತನು ರೇಖೆಗೊಂಡ ಕೊರಲೊಡ್ಡಿದ ಪೆರ್ಮೊಲೆ ತೆಳ್ವಸಿಱ್ ಕರಂ ।
ನೆಱೆದ ನಿತಂಬವಿಂಬುವಡೆದೊಳ್ತೊಡೆ ನಕ್ಕರವದ್ದಿ ತಾನೆ ಪೋ
ಕೆಱುದೊಡೆಯೆಂದು ಧಾತ್ರಿ ಪೊಗಟ್ಟುಂ ಪೊಗಟ್ಟನ್ನರೆ ಕುಂತಿ ಮಾದ್ರಿಗಳ್ ॥
೧೦೮

ವ॥ ಅಂತಾಕೆಗಳಿರ್ವರುಮೆರಡುಂ ಕೆಲದೊಳಿರೆ ಕಲ್ಪಲತೆಗಳೆರಡಱ ನಡುವಣ ಕಲ್ಪವೃಕ್ಷ ಮಿರ್ಪಂತಿರ್ದ ಪಾಂಡುರಾಜಂಗೆ ಧೃತರಾಷ್ಟ್ರನಂಗಹೀನನೆಂದು ವಿವಾಹದೊಸಗೆಯೊಡನೆ ಪಟ್ಟಬಂಧದೊಸಗೆಯಂ ಮಾಡಿ ನೆಲನನಾಳಿಸೆ-

ಉ ॥ ಮೀಱುವೆವೆಂಬ ಮಾಂಡಳಿಕರೀಯದರೆಂಬದಟರ್ ವಯಲ್ಗೆ ಮೆ
ಯ್ದೋಱುವೆವೆಂಬ ಪೂಣಿಗರಡಂಗಿ ಕುನುಂಗಿ ಸಿಡಿಲ್ದು ಜೋಲ್ದು ಕಾ ।
ಯ್ದಾಱೆ ನಭಕ್ಕೆ ಪಾಱೆದುದು ಗಂಡರ ನೆತ್ತಿಯೊಳೊತ್ತಿ ಬಾಳನಿ
ನ್ನೂಱುಗುಮೆಂದೊಡೇಂ ಪಿರಿದೊ ತೇಜದ ದಳ್ಳುರಿ ಪಾಂಡುರಾಜನಾ ॥ ೧೦೯

ಮಧ್ಯೆ ಮಧ್ಯೆ ಓಡಾಡುವ ಸುಮಂಗಲಿಯರು, ಮತ್ತು ಸುತ್ತುವರಿದಿದ್ದ ವೇದಪಂಡಿತರ ಸಮೂಹ ಇವುಗಳಿಂದ ಪಾಂಡು ಮತ್ತು ಕುಂತಿ ಮಾದ್ರಿಯರಲ್ಲಿ ಆದ ವಿವಾಹ ಮಂಗಳಕಾರ್ಯವು ಆಶ್ಚರ್ಯಕರವಾಯಿತು. ೧೦೮. ಕುಂತಿ ಮಾದ್ರಿಯರ ದಟ್ಟವಾದ ಕೂದಲಿನಿಂದ ಕೂಡಿದ ರೆಪ್ಪೆ, ಉದ್ದವಾಗಿರುವ ಹುಬ್ಬು, ದೀರ್ಘವಾದ ಕಣ್ಣು, ಹಗುರವಾಗಿಯೂ ದುಂಡಾಗಿಯೂ ಇರುವ ತುಟಿ, ಸಣ್ಣ ರೇಖೆಗಳಿಂದ ಕೂಡಿದ ಕೊರಳು, ಮುಂದಕ್ಕೆ ಚಾಚಿಕೊಂಡಿರುವ ದಪ್ಪವಾದ ಮೊಲೆ, ತೆಳುವಾದ ಹೊಟ್ಟೆ, ವಿಶೇಷವಾಗಿ ತುಂಬಿಕೊಂಡಿರುವ ಪೃಷ್ಠಭಾಗ, ಹೊಂದಿಕೊಂಡಿರುವ ಒಳತೊಡೆ, ಚಿಕ್ಕತೊಡೆ (ನೆರ್ಕೊರೆಪಟ್ಟೆ?) ಇವುಗಳು ಸೊಗಸಾಗಿವೆ ಎಂದು ಲೋಕವೆಲ್ಲ (ಅವರನ್ನು) ಹೊಗಳಿದವು. ವಾಸ್ತವವಾಗಿ ಕುಂತಿ ಮಾದ್ರಿಗಳು ಹೊಗಳಿಸಿಕೊಳ್ಳುವಂಥವರೇ ಸರಿ. ವ॥ ಹಾಗೆ ಅವರಿಬ್ಬರೂ ಎರಡು ಪಕ್ಕಗಳಲ್ಲಿರಲು ಎರಡು ಕಲ್ಪಲತೆಗಳ ಮಧ್ಯೆಯಿರುವ ಕಲ್ಪವೃಕ್ಷದಂತಿದ್ದ ಪಾಂಡುರಾಜನಿಗೆ ಧೃತರಾಷ್ಟ್ರನು ಅಂಗಹೀನನೆಂಬ ಕಾರಣದಿಂದ (ಕುರುಡನಾಗಿದ್ದುದರಿಂದ) ವಿವಾಹಮಂಗಳದೊಡನೆ ಪಟ್ಟಾಭಿಷೇಕಮಹೋತ್ಸವವೂ ನಡೆಯಿತು. ೧೦೯. ಪಾಂಡುರಾಜನ ಆಜ್ಞೆಯನ್ನು ಮೀರಿ ನಡೆಯುತ್ತೇವೆ ಎಂಬ ಸಾಮಂತರಾಜರೂ, ಕಪ್ಪಕಾಣಿಕೆಗಳನ್ನು ಕೊಡುವುದಿಲ್ಲವೆಂದ ಶೂರರೂ, ಕಾಳೆಗದಲ್ಲಿ ಪ್ರತಿಭಟಿಸಿ ಯುದ್ಧಮಾಡುವೆವು ಎಂದು ಪ್ರತಿಜ್ಞೆಮಾಡಿದವರೂ ಕುಗ್ಗಿ ಸಿಡಿದು ಕೆಳಕ್ಕೆ ಬಿದ್ದು ಕೋಪವಿರಹಿತರಾಗಲು ಪಾಂಡುರಾಜನ ತೇಜಸ್ಸೆಂಬ ಜಾಜ್ವಲ್ಯಮಾನವಾದ ಬೆಂಕಿಯು ಆಕಾಶಕ್ಕೆ ಚಿಮ್ಮಿತು. ಪಾಂಡುರಾಜನ ಕತ್ತಿಯು ಇನ್ನೂ ಪರಾಕ್ರಮಿಗಳ ಹಣೆಯಲ್ಲಿ ನಾಟಲ್ಪಡುತ್ತಿವೆ ಎಂದಾಗ ಅವನ ಮಹತ್ವ ಎಷ್ಟು ಹಿರಿದೋ! (ಎಂದರೆ ಅವನ ಪ್ರತಾಪಾಗ್ನಿ ಯಾವ ತಡೆಯೂ ಇಲ್ಲದೆ ಅಭಿವೃದ್ಧಿಯಾಗಿ ಆಕಾಶಕ್ಕೆ ಚಿಮ್ಮುತ್ತಿರುವುದರಿಂದ ಅವನ ಮೇಲ್ಮೆಯು ಅತ್ಯತಿಶಯವಾದುದು ಎಂದು ಭಾವ).

ಮ ॥ ಬೆಸಕೆಯ್ದತ್ತು ಸಮುದ್ರಮುದ್ರಿತಧರಾಚಕ್ರಂ ಪ್ರತಾಪಕ್ಕಗು
ರ್ವಿಸೆ ಗೋಳುಂಡೆಗೊಳುತ್ತುಮಿರ್ದುದು ದಿಶಾಚಕ್ರಂ ಪೊದಟ್ದಾಜ್ಞೆಗಂ ।
ಪೆಸರ್ಗಂ ಮುನ್ನಮೆ ರೂಪುವೋದುದು ವಿಯಚ್ಚಕ್ರಂ ಸಮಂತೆಂಬಿನಂ
ಜಸಮಾ ಪಾಂಡುರಮಾದುದಾ ನೃಪರೊಳಾರಾ ಪಾಂಡುರಾಜಂಬರಂ ॥ ೧೧೦

ವ॥ ಅಂತು ಪಾಂಡುರಾಜನಧಿಕತೇಜನುಮವನತವೈರಿಭೂಭೃತ್ಸಮಾಜನುಮಾಗಿ ನೆಗಟ್ಟುತ್ತಿರ್ದೊಂದು ದಿವಸಂ ತೋಪಿನ ಬೇಂಟೆಯನಾಡಲಟ್ಟಿಯಿಂ ಪೋಗಿ-

ಚಂ ॥ ಇನಿಯಳನಟ್ಟಿಯಿಂದೆ ಮೃಗಿ ಮಾಡಿ ಮನೋಜಸುಖಕ್ಕೆ ಸೋಲ್ತಲಂ
ಪಿನೆ ನೆರೆಯಲ್ಕೆ ದಿವ್ಯಮುನಿಯುಂ ಮೃಗಮಾಗಿ ಮರಲ್ದು ಕೂಡೆ ಮೆ ।
ಲ್ಲನೆ ಮೃಗಮೆಂದು ಸಾರ್ದು ನೆಜಿನಂ ನಡೆ ನೋಡಿ ನರೇಂದ್ರನೆಚ್ಚು ಭೋಂ
ಕನೆ ಮೃಗಚಾರಿಯಂ ತನಗೆ ಮಾಣದೆ ತಂದನದೊಂದು ಮಾರಿಯಂ ॥ ೧೧೧

ವ॥ ಆಗಳ್ ಪ್ರಳಯದುಳ್ಕಮುಳ್ಕುವಂತೆ ತನ್ನೆಚ್ಚಂಬು ಮುನಿಕುಮಾರನ ಕಣ್ಣೊಳಮೆರ್ದೆಯೊಳಮುಕ್ಕೆ ಪೇಟಿಮೆನ್ನನಾವನೆಚ್ಚನೆಂಬ ಮುನಿಯ ಮುನಿದ ಸರಮಂ ಕೇಳ್ದು ಬಿಲ್ಲನಂಬುಮನೀಡಾಡಿ ತನ್ನ ಮುಂದೆ ನಿಂದಿರ್ದ ಭೂಪನಂ ಮುನಿ ನೋಡಿ-

೧೧೦. ಸಮುದ್ರದಿಂದ ಸುತ್ತುವರಿಯಲ್ಪಟ್ಟ ಭೂಮಂಡಲವು ಅವನ ಆಜ್ಞೆಯನ್ನು ಸಂಪೂರ್ಣವಾಗಿ ಪಾಲಿಸಿತು. ಅವನ ಶೌರ್ಯಕ್ಕೆ ಹೆದರಿ ದಿಙ್ಮಂಡಲದಲ್ಲಿದ್ದ ರಾಜರೆಲ್ಲ ಗೋಳುಗುಟ್ಟುತ್ತಿದ್ದರು. ಸಂಪೂರ್ಣವಾಗಿ ಎಲ್ಲ ಕಡೆಗೂ ವ್ಯಾಪಿಸಿದ ಅವನ ಆಜ್ಞೆಗೂ ಯಶಸ್ಸಿಗೂ ಆಕಾಶಮಂಡಲವು ಗೂಡಾಗಿ ಪರಿಣಮಿಸಿತು. (ಆವಾಸಸ್ಥಾನವಾಯಿತು) ಎನ್ನುವಾಗ ಅವನ ಧವಳಕೀರ್ತಿ ಸರ್ವಲೋಕವ್ಯಾಪ್ತಿಯಾಯಿತು. ರಾಜರುಗಳಲ್ಲಿ ಪಾಂಡುರಾಜನಿಗೆ ಸಮನಾಗುವವರಾರಿದ್ದಾರೆ? ವ॥ ಹಾಗೆ ಆ ಪಾಂಡುರಾಜನು ಅಧಿಕತೇಜಸ್ಸುಳ್ಳವನೂ ನಮಸ್ಕರಿಸಲ್ಪಟ್ಟ ಶತ್ರುರಾಜಸಮೂಹವನ್ನುಳ್ಳವನೂ ಆಗಿ ರಾಜ್ಯಭಾರಮಾಡುತ್ತಿದ್ದು ಒಂದು ದಿವಸ ತೋಹಿನ ಬೇಂಟೆಯೆಂಬುದನ್ನು ಆಡಲು ಆಸಕ್ತನಾಗಿ ಕಾಡಿಗೆ ಹೋದನು. ೧೧೧. ಅಲ್ಲಿ ಕಿಂದಮನೆಂಬ ಋಷಿಯೊಬ್ಬನು ತನ್ನ ಪ್ರಿಯಳನ್ನು ಹೆಣ್ಣು ಜಿಂಕೆಯನ್ನಾಗಿ ಮಾಡಿ ಕಾಮವಶನಾಗಿ ಸಂತೋಷದಿಂದ ಅವಳೊಡನೆ ಕೂಡಿ ಋಷಿಶ್ರೇಷ್ಠನಾದ ತಾನೂ ಗಂಡುಜಿಂಕೆಯ ಆಕಾರವನ್ನು ತಾಳಿ ಉತ್ಸಾಹದಿಂದ ವಿಹರಿಸುತ್ತಿದ್ದನು. ಪಾಂಡುರಾಜನು ಅದು ಜಿಂಕೆಯೆಂದು ಮೆಲ್ಲಗೆ ಅದರ ಹತ್ತಿರ ಬಂದು ಅದರ ಮರ್ಮಸ್ಥಾನವನ್ನು ನೋಡಿ ಗುರಿಯಿಟ್ಟು ಆ ಮೃಗರೂಪದಲ್ಲಿದ್ದ ಆ ಋಷಿಯನ್ನು ತಟ್ಟನೆ ಬಾಣದಿಂದ ಹೊಡೆದು ತನಗೆ ಒಂದು ಮಾರಿಯನ್ನು ತಂದುಕೊಂಡನು. ವ॥ ಆಗ ತಾನು ಹೊಡೆದ ಬಾಣವು ಋಷಿಪುತ್ರನ ಕಣ್ಣಿನಲ್ಲಿಯೂ ಎದೆಯಲ್ಲಿಯೂ ಪ್ರಳಯಕಾಲದ ಉಲ್ಕಾಪಾತದಂತೆ ಹೊಳೆಯುತ್ತಿರಲು 'ನನ್ನನ್ನು ಯಾರು ಹೊಡೆದನು ಹೇಳಿ' ಎಂಬ ಋಷಿಯ ಕೋಪಧ್ವನಿಯನ್ನು ಕೇಳಿ ಬಿಲ್ಲು ಬಾಣಗಳನ್ನೆಸೆದು ತನ್ನ ಮುಂದೆ ನಿಂತಿದ್ದ ರಾಜನನ್ನು ಮುನಿ ನೋಡಿ

ಉ॥ ಸನ್ನತದಿಂ ರತಕ್ಕೆಳಸಿ ನಲ್ಲಳೊಳೋತೊಡಗೂಡಿದೆನ್ನನಿಂ
ತನ್ನಯಮೆಚ್ಚುದರ್ಕೆ ಪೆಱತಿಲ್ಲದು ದಂಡಮೊಱಲ್ದು ನಲ್ಲಳೊಳ್ ।
ನೀನ್ನಡೆನೋಡಿಯುಂ ಬಯಸಿ ಕೂಡಿಯುಮಾಗಡೆ ಸಾವೆಯಾಗಿ ಪೋ
ಗಿನ್ನೆನೆ ರೌದ್ರಶಾಪಪರಿತಾಪವಿಳಾಪದೊಳಾ ಮಹೀಶ್ವರಂ ॥ ೧೧೨

ವ॥ ಎನ್ನ ಗೆಯ್ದ ಕಾಮಾಕ್ರಾಂತಕ್ಕೆ ಕಾಮಕೃತಮೇಂ ಪಿರಿದಲ್ತು-

ಕಂ॥ ಎತ್ತ ವನಮೆತ್ತ ಮೃಗಯಾ
ವೃತ್ತಕಮಿಾ ತಪಸಿಯೆತ್ತ ಮೃಗಮೆಂದೆಂತಾ ।
ನೆತ್ತೆಚ್ಚೆನಾತ್ಮಕರ್ಮಾ
ಯತ್ತಂ ಪೆಱತಲ್ತಿದೆಲ್ಲಮಘಟಿತಘಟಿತಂ ॥ ೧೧೩

ವ॥ ಎಂದು ಚಿಂತಿಸುತ್ತುಂ ಪೊೞಲ್ಗೆ ಮಗುಟ್ದುವಂದು ಗಾಂಗೇಯ ಧೃತರಾಷ್ಟ್ರ ವಿದುರರ್ಕಳ್ಗೆ ತದ್ವೃತ್ತಾಂತಮೆಲ್ಲಮಂ ಪೇೞ್ದು ಸಮಸ್ತವಸ್ತುಗಳಂ ದೀನಾನಾಥಜನಂಗಳ್ಗೆ ಸೂಱೆಗೊಟ್ಟು ನಿಜಪರಿವಾರಮಂ ಬರಿಸಿ-

ಉ॥ ಸಾರಮನಂಗ ಜಂಗಮಲತಾ ಲಲಿತಾಂಗಿಯರಿಂದಮಲ್ತೆ ಸಂ
ಸಾರಮಿದೆಂಬುದಿನ್ನೆನಗೆ ತಪ್ಪುದು ತನ್ಮುನಿ ಶಾಪದಿಂದಮಿ ।
ನ್ನಾರುಮಿದರ್ಕೆ ವಕ್ರಿಸದಿರಿಂ ವನವಾಸದೊಳಿರ್ಪೆನೆಂದು ದು
ರ್ವಾರ ಪರಾಕ್ರಮಂ ತಳರೆ ಬಾರಿಸಿವಾರಿಸಿ ಕುಂತಿ ಮಾದ್ರಿಯರ್ ॥ ೧೧೪

೧೧೨. ಸಂಭೋಗಸುಖಕ್ಕಾಸೆಪಟ್ಟು ಪ್ರಿಯಳಲ್ಲಿ ಪ್ರೇಮದಿಂದ ಸೇರಿಕೊಂಡಿದ್ದ ನನ್ನನ್ನು ಹೀಗೆ ಅನ್ಯಾಯದಿಂದ ಹೊಡೆದುದಕ್ಕೆ ನಿನಗೆ ಬೇರೆ ಶಿಕ್ಷೆಯಿಲ್ಲ, ನೀನು ಇನ್ನು ಮೇಲೆ ನಿನ್ನ ಪ್ರಿಯಳಲ್ಲಿ ಪ್ರೀತಿಸಿ ನೋಡಿದಾಗ ಅಥವಾ ಆಸೆಪಟ್ಟು ಕೂಡಿದಾಗ ಸಾಯುತ್ತೀಯೆ ಹೋಗು ಎಂದು ಶಪಿಸಿದನು. ಆ ಭಯಂಕರವಾದ ಶಾಪದಿಂದುಂಟಾದ ದುಃಖದ ಅಳುವಿನಿಂದ ಆ ಪಾಂಡುರಾಜನು ವ॥ ನಾನು ಮಾಡಿದ ಕಾಮಕ್ರೀಡಾವಿಘ್ನಕ್ಕೆ ತಡೆಯಿಲ್ಲದ ಈ ಶಾಪವು ಹಿರಿದೇನಲ್ಲ - ೧೧೩. ಈ ಕಾಡೆಲ್ಲಿಯದು; ಈ ಬೇಟೆಯ ಕಾರ್ಯವೆಲ್ಲಿಯದು, ಈ ತಪಸ್ವಿಯೆಲ್ಲಿಯವನು, ಮೃಗವೆಂದು ನಾನು ಇದನ್ನು ಹೇಗೆ ಹೊಡೆದೆ, ಅಸಂಬದ್ಧವಾದ ಇದೆಲ್ಲ ನನ್ನ ಪ್ರಾಚೀನ ಕರ್ಮಾಧೀನವಲ್ಲದೆ ಬೇರೆಯಲ್ಲ ವ॥ ಎಂದು ಯೋಚಿಸುತ್ತ ಪಟ್ಟಣಕ್ಕೆ ಹಿಂದಿರುಗಿ ಬಂದು ಭೀಷ್ಮ, ಧೃತರಾಷ್ಟ್ರ, ವಿದುರರಿಗೆ ಆ ಸಮಾಚಾರವನ್ನೆಲ್ಲ ಹೇಳಿ ಸಮಸ್ತವಸ್ತುಗಳನ್ನೂ ದೀನರೂ ಅನಾಥರೂ ಆದ ಜನಗಳಿಗೆ ಉದಾರವಾಗಿ ದಾನಮಾಡಿ ತನ್ನ ಪರಿವಾರವನ್ನು ಒರಮಾಡಿ - ೧೧೪. ಸಂಸಾರವು ಸಾರವತ್ತಾಗಿರುವುದು ಮನ್ಮಥನ ನಡೆದಾಡುವ ಬಳ್ಳಿಗಳಂತಿರುವ ಸುಂದರಾಂಗಿಯರಿಂದಲ್ಲವೇ? ಆ ಋಷಿಶಾಪದಿಂದ ಇನ್ನು ಅದು ನನಗೆ ಇಲ್ಲವಾಯಿತು. ವನವಾಸದಲ್ಲಿರುತ್ತೇನೆ. ಇದಕ್ಕೆ ಮತ್ತಾರೂ ಅಡ್ಡಿಮಾಡಬೇಡಿ ಎಂದು ಅಪ್ರತಿಮ ಪರಾಕ್ರಮಿಯಾದ ಆ ಪಾಂಡುರಾಜನು ಕಾಡಿಗೆ ಹೊರಟನು. ಕುಂತಿ ಮಾದ್ರಿಯರು ಅವನನ್ನು ತಡೆದು ತಡೆದು ವ॥ ಹಿಂದೆ ಹಿಂದೆಯೇ ಬಂದರು.

**ವ|| ಬೆನ್ನ ಬೆನ್ನನೆ ಬರೆ ಚೆನ್ನ ಬನ್ನನೆ ಪೋಗಿ-**

**ಖಚರಪ್ಲುತ ತ|| ತುಂಗ ವನ್ಯ ಮತಂಗಜ ದಂತಾಘಾತ ನಿಪಾತಿತ ಸಲ್ಲಕೀ**
**ಭಂಗಮಂ ಮಣಿಮೌಕ್ತಿಕ ನೀಳ ಸ್ಥೂಳ ಶಿಲಾ ಪ್ರವಿಭಾಸಿತೋ ।**
**ತ್ತುಂಗಮಂ ಮುನಿಮುಖಮುಖಾಂಭೋಜೋದರ ನಿರ್ಗತಮಂತ್ರ ಪೂ**
**ತಾಂಗಮಂ ನೃಪನೆಯ್ದಿದನುದ್ಯಚ್ಛೃಂಗಮನಾ ಶತಶೃಂಗಮಂ ॥ ೧೧೫**

**ವ|| ಆ ಪರ್ವತದ ವಿಪುಳ ವನೋಪಕಂಠಂಗಳೊಳ್ ತಾಪಸಕನ್ಯೆಯರ್ ನಡಪಿದೆಳಲತೆಗಳೊಳೆಱಗಿ ತುಱುಗಿ ಸಾಮವೇದಧ್ವನಿಯೊಳ್ ಮೊರೆವ ತುಂಬಿಗಳುಮಂ ಪಣ್ತೆಱಗಿದ ತದಾಶ್ರಮದ ತರುಗಳ ಮೇಗಿರ್ದು ಪುಗಿಲ್ ಪುಗಿಲೆಂದಿತ್ತ ಬನ್ನಿಮಿರಿಮೆಂಬ ಪೊಂಬಣ್ಣದ ಕೋಗಿಲೆಗಳುಮಂ ಮುನಿಕುಮಾರರೋದುವ ವೇದವೇದಾಂಗಂಗಳಂ ತಪ್ಪುವಿಡಿದು ಜಡಿದು ಬಗ್ಗಿಸುವ ಪದುಮರಾಗದ ಬಣ್ಣದರಗಿಳಿಗಳುಮಂ ಸುರಭಿಗಳ ತೊರೆದ ಮೊಲೆಗಳನುಣ್ಬವಱಿ ಮಱಿಗಳಂ ಪೋಗೆ ನೂಂಕಿ ಕೂಂಕಿ ಮೊಲೆಗಳನುಣ್ಬ ಕಿಶೋರ ಕೇಸರಿಗಳುಮಂ ತಮ್ಮೊಡನೆ ನಲಿದಾಡುವ ಕಿಶೋರಕೇಸರಿಗಳಂ ಪಿಡಿದು ತೆಗೆವ ಕರಿಕಳಭಂಗಳುಮನಾಗಳಾಪಳುವಂಗಳಿಂದೆ ಪಾಯ್ವ ಪುಲಿಗಳ ಮಱಿಗಳೊಳ್ ಪರಿದಾಡುವ ತರುಣ ಹರಿಣಂಗಳುಮಂ ಮತ್ತಂ ಮುತ್ತ ಕುರುಡತಪಸಿಗಳ ಕೈಯಂ ಪಿಡಿದುಯ್ದವರ ಗುಹೆಗಳಂ ಪುಗಿಪ ಪೊಱಮಡಿಪ ಚಪಳ ಕಪಿಗಳುಮಂ ಹೋಮಾಗ್ನಿಯನೆಱಂಕೆಯ ಗಾಳಿಯಿಂ ನಂದಲೀಯದುರಿಪುವ ರಾಜಹಂಸೆಗಳುಮಂ**

೧೧೫. ಎತ್ತರವಾದ ಕಾಡಾನೆಯ ದಂತದ ಪೆಟ್ಟಿನಿಂದ ಉರುಳಿಸಲ್ಪಟ್ಟು ಮುರಿದ ಬೇಲದ ಮರಗಳನ್ನುಳ್ಳುದೂ ಮುತ್ತು ಮತ್ತು ರತ್ನಗಳನ್ನೊಳಗೊಂಡ ನೀಲವೂ ಸ್ಥೂಲವೂ ಆದ ಕಲ್ಲುಬಂಡೆಗಳಿಂದ ಪ್ರಕಾಶಮಾನವಾದುದೂ ಬಹಳ ಎತ್ತರವಾದುದೂ ಋಷಿಶ್ರೇಷ್ಠರ ಮುಖಕಮಲಗಳಿಂದ ಹೊರಹೊರಟ ಮಂತ್ರಗಳಿಂದ ಪವಿತ್ರವಾದ ಶರೀರವುಳ್ಳದೂ ಎತ್ತರವಾದ ಲೋಡುಗಳಿಂದ ಕೂಡಿದುದೂ ಆದ ಶತಶೃಂಗ ಪರ್ವತವನ್ನು ಪಾಂಡುರಾಜನು ಬಂದು ಸೇರಿದನು. ವ|| ಆ ಪರ್ವತದ ತಪ್ಪಲು ಪ್ರದೇಶದಲ್ಲಿ ತಾಪಸಕನ್ಯೆಯರು ಸಾಕಿ ಬೆಳೆಸಿದ ಬಳ್ಳಿಗಳನ್ನು ಮುತ್ತಿ ಗುಂಪುಗೂಡೆ ಸಾಮವೇದಧ್ವನಿಯ ಶಬ್ದಮಾಡುತ್ತಿರುವ ದುಂಬಿಗಳನ್ನೂ ಫಲಭಾರದಿಂದ ಬಾಗಿದ ಆ ಆಶ್ರಮದ ಗಿಡಗಳ ಮೇಲಿದ್ದು 'ಪ್ರವೇಶಿಸಿ, ಬನ್ನಿ, ಇಲ್ಲಿ ವಾಸಿಸಿ' ಎನ್ನುತ್ತಿರುವ ಹೊಂಬಣ್ಣದ ಕೋಗಿಲೆಗಳನ್ನೂ ಋಷಿಕುಮಾರರು ಅಧ್ಯಯನ ಮಾಡುತ್ತಿರುವ ವೇಗವೇದಾಂಗಗಳಲ್ಲಿ ತಪ್ಪನ್ನು ಕಂಡುಹಿಡಿದು ಆಕ್ಷೇಪಿಸಿ ಸರಿಪಡಿಸುವ ಪದ್ಮರಾಗವೆಂಬ ರತ್ನದ ಬಣ್ಣದಿಂದ ಕೂಡಿದ ಶ್ರೇಷ್ಠವಾದ ಗಿಳಿಗಳನ್ನೂ ಹಸುಗಳ ಹಾಲು ತುಂಬಿದ ಕೆಚ್ಚಲುಗಳನ್ನು ಉಣ್ಣುತ್ತಿರುವ ಅವುಗಳ ಕರುಗಳನ್ನು ಪಕ್ಕಕ್ಕೆ ತಳ್ಳಿ ಓರೆಯಾಗಿ ಹಾಲುಕುಡಿಯುತ್ತಿರುವ ಸಿಂಹದ ಮರಿಗಳನ್ನೂ ತಮ್ಮೊಡನೆ ನಲಿದಾಡುತ್ತಿರುವ ಸಿಂಹದ ಮರಿಗಳನ್ನು ಹಿಡಿದೆಳೆಯುವ ಆನೆಯ ಮರಿಗಳನ್ನೂ ಆಗಾಗ ಅಲ್ಲಿ ಎಡೆಯಾಡುತ್ತಿರುವ ಹುಲಿಯ ಮರಿಗಳ ಜೊತೆಯಲ್ಲಿ ಹರಿದಾಡುತ್ತಿರುವ ಜಿಂಕೆಯ ಮರಿಗಳನ್ನೂ ಮತ್ತು ಕುರುಡರಾದ ಮುದಿತಪಸ್ವಿಗಳ ಕೈ ಹಿಡಿದು ಅವರ ಗುಹೆಗಳನ್ನು ಪ್ರವೇಶಮಾಡಿಸುವ ಹಾಗೆಯೇ ಅಲ್ಲಿಂದ ಹೊರಡಿಸುವ ಚಪಳವಾದ ಕಪಿಗಳನ್ನೂ ಹೋಮಾಗ್ನಿಯು ನಂದಿಹೋಗದಂತೆ ತಮ್ಮ ರಕ್ಕೆಯ ಗಾಳಿಯಿಂದ ಬೀಸಿ ಉರಿಸುತ್ತಿರುವ

ಮುನಿಗಣೇಶ್ವರರೊಡನೆ ದಾಳಿವೂಗೊಯ್ವೊಡನೆವರ್ಪ ಗೋಳಾಂಗೂಳಂಗಳುಮಂ ನೋಡಿ ತಪೋವನದ ತಪೋಧನರರದ ತಪಃಪ್ರಭಾವಕ್ಕೆ ಚೋದ್ಯಂಬಟ್ಟು-

ಚಂ॥ ವಿನಯದಿನಿತ್ತ ಬನ್ನಿಮಿರಿಮೆಂಬವೊಲಿಂಚರದಿಂದಮೊಯ್ಯನೊ
ಯ್ಯನೆ ಮಱಿದುಂಬಿಗಳ್ ಮೊರೆವುವಬ್ಬಱಿಓಳೊಲ್ದೆಱಪಂತೆ ತಳ್ತ ಪೂ ।
ವಿನ ಪೊಸ ಗೊಂಚಲಿಂ ಮರನಿದೇನೆಸೆದಿರ್ದುವೊ ಕಲ್ತುವಾಗದೇ
ವಿನಯಮನೀ ತಪೋಧನರ ಕೈಯೊಳೆ ಶಾಖಿಗಳುಂ ನಗೇಂದ್ರದಾ ॥ ೧೧೬

ವ॥ ಎಂದು ಮೆಚ್ಚುತ್ತುಮೆನಗೆ ನೆಲಸಿರಲೀ ತಪೋವನಮೆ ಪಾವನಮೆಂದು ತಪೋವನದ ಮುನಿಜನದ ಪರಮಾನುರಾಗಮಂ ಪೆರ್ಚಿಸಿ ಕಾಮಾನುರಾಗಮಂ ಬೆರ್ಚಿಸಿ ತದಾಶ್ರಮದೊಳಾಶ್ರಮಕ್ಕೆ ಗುರುವಾಗೆ ಪಾಂಡುರಾಜನಿರ್ಪನ್ನೆಗಮಿತ್ತ ಧೃತರಾಷ್ಟ್ರನ ಮಹಾದೇವಿಯಪ್ಪ ಗಾಂಧಾರಿ ನೂರ್ವರ್ಮಕ್ಕಳಂ ಪಡೆವಂತು ಪರಾಶರಮುನೀಂದ್ರನೊಳ್ ಬರಂಬಡೆದಳೆಂಬುದಂ ಕುಂತಿ ಕೇಳ್ದು ತಾನುಂ ಪುತ್ರಾರ್ಥಿನಿಯಾಗಲ್ ಬಗೆದು-

ಚಂ ॥ ವಿಸಸನದೊಳ್ ವಿರೋಧಿನೃಪರಂ ತಱಿದೊಟ್ಟಲುಮರ್ಥಿಗರ್ಥಮಂ
ಕಸವಿನ ಲೆಕ್ಕಮೆಂದು ಕುಡಲುಂ ವಿಪುಳಾಯತಿಯಂ ದಿಗಂತದೊಳ್ ।
ಪಸರಿಸಲುಂ ಕರಂ ನೆಱೆವ ಮಕ್ಕಳನೀಯದೆ ನೋಡೆ ನಾಡೆ ನೋ
ಯಿಸಿದಪುದಿಕ್ಕುಪುಷ್ಪದವೊಲೆನ್ನಯ ನಿಷ್ಫಲ ಪುಷ್ಪದರ್ಶನಂ ॥ ೧೧೭

ರಾಜಹಂಸಗಳನ್ನೂ ಮುನೀಂದ್ರ ಸಮೂಹದೊಡನೆ ದಾಳಿಯ ಹೂವನ್ನು ಕುಯ್ಯುವ ಮತ್ತು ಜೊತೆಯಲ್ಲಿ ಬರುವ ಕಪಿಗಳನ್ನೂ ನೋಡಿ ಆ ತಪೋವನದ ತಪಸ್ಸನ್ನೇ ಧನವನ್ನಾಗಿ ಉಳ್ಳ ಆ ಋಷಿಶ್ರೇಷ್ಠರ ತಪ್ಪಿಸಿನ ಪ್ರಭಾವಕ್ಕೆ ಆಶ್ಚರ್ಯಪಟ್ಟನು. ೧೧೬. ಇದೇನು! ಇಲ್ಲಿಯ ದುಂಬಿಯ ಮರಿಗಳು ವಿನಯದಿಂದ ಈ ಕಡೆ ಬನ್ನಿ, ಇಲ್ಲಿರಿ ಎನ್ನುವ ಹಾಗೆ ಮನೋಹರವಾದ ಧ್ವನಿಯಿಂದ ನಿಧಾನವಾಗಿ ಶಬ್ದಮಾಡುತ್ತಿವೆ. ಮರಗಳೂ ತಾವು ಹೊತ್ತಿರುವ ಹೊಸಹೂವಿನ ಗೊಂಚಲಿನ ಭಾರದಿಂದ ಪ್ರೀತಿಯಿಂದ ಒಲಿದು ಬಾಗಿದಂತೆ ಏನು ಸೊಗಸಾಗಿದೆ! ಈ ಪರ್ವತಶ್ರೇಷ್ಠದ ಮರಗಳೂ ಈ ತಪೋಧನರ ಕೈಯಿಂದಲೇ ನಮ್ರತೆಯನ್ನು ಕಲಿತವಾಗಿರಬೇಕಲ್ಲವೇ? ವ॥ ಎಂದು ಮೆಚ್ಚುತ್ತ ನಾನು ವಾಸವಾಗಿರಲು ಈ ತಪೋವನವೇ ಪವಿತ್ರವಾದುದು ಎಂದು ಆ ತಪೋವನದ ಮುನಿಜನರ ವಿಶೇಷಪ್ರೀತಿಯನ್ನು ಹೆಚ್ಚಿಸಿ ಕಾಮದಲ್ಲಿ ತನಗಿದ್ದ ಪ್ರೀತಿಯನ್ನು ಹೆದರಿ ಓಡಿಹೋಗುವ ಹಾಗೆ ಮಾಡಿ ಆ ಆಶ್ರಮದಲ್ಲಿ ಪಾಂಡುರಾಜನು ಆಶ್ರಮದ ಗುರುವಾಗಿ ಇದ್ದನು. ಈ ಕಡೆ ಧೃತರಾಷ್ಟ್ರನ ಮಹಾರಾಣಿಯಾದ ಗಾಂಧಾರಿಯು ನೂರುಮಕ್ಕಳನ್ನು ಪಡೆಯುವಂತೆ ವ್ಯಾಸಮಹರ್ಷಿಗಳಿಂದ ವರವನ್ನು ಪಡೆದಳೆಂಬುದನ್ನು ಕುಂತಿ ಕೇಳಿ ತಾನೂ ಮಕ್ಕಳನ್ನು ಬಯಸುವವಳಾದಳು. ೧೧೭. ಯುದ್ಧದಲ್ಲಿ ಶತ್ರುರಾಜರನ್ನು ಕತ್ತರಿಸಿ ರಾಶಿಹಾಕುವ ಸಾಮರ್ಥ್ಯವುಳ್ಳ, ಯಾಚಕರಿಗೆ ದ್ರವ್ಯವನ್ನು ಕಸಕ್ಕೆ ಸಮನಾಗಿ ಎಣಿಸಿ ದಾನಮಾಡುವ ತಮ್ಮ ಪರಾಕ್ರಮವನ್ನು ದಿಕ್ಕುಗಳ ಕೊನೆಯಲ್ಲಿಯೂ ಪ್ರಸಾರ ಮಾಡಲು ಸಮರ್ಥರಾದ ಮಕ್ಕಳುಗಳನ್ನು ಕೊಡದೆ ನೋಡು ನೋಡುತ್ತಿರುವ ಹಾಗೆಯೇ ನನ್ನ (ತಿಂಗಳ ಮುಟ್ಟು) ರಜಸ್ವಲೆತನವು ಕಬ್ಬಿನ

ವ|| ಎಂದು ಚಿಂತಾಕ್ರಾಂತೆಯಾಗಿರ್ದ ಕುಂತಿಯಂ ಕಂಡು ಪಾಂಡುರಾಜನೇಕಾಂತ ದೊಳಿಂತೆಂದಂ-

ಉ|| ಚಿಂತೆಯಿದೇನೊ ಸಂತತಿಗೆ ಮಕ್ಕಳೆ ನೆಟ್ಟನೆ ಬಾರ್ತೆಯಪ್ಪೊಡಿ
ನ್ನಿಂತಿರವೇಡ ದಿವ್ಯ ಮುನಿಪುಂಗವರಂ ಬಗೆದೀರ್ಪಿನಂ ನಿಜಾ ।
ತ್ಯಂತ ಪತಿವ್ರತಾಗುಣದಿನರ್ಚಿಸಿ ಮೆಚ್ಚಿಸು ನೀಂ ದಿಗಂತ ವಿ
ಶ್ರಾಂತ ಯಶರ್ಕಳಂ ವರ ತನೂಭವರಂ ಪಡೆ ನೀಂ ತಳೋದರೀ|| ೧೧೮

ವ|| ಎಂದೊಡೆ ಕೊಂತಿಯಿಂತೆಂದಳೆನ್ನ ಕನ್ನಿಕೆಯಾ ಕಾಲದೊಳ್ ನಾನೆನ್ನ ಮಾವಂ ಕೊಂತಿಭೋಜನ ಮನೆಯೊಳ್ ಬಳೆವಂದು ದುರ್ವಾಸ ಮಹಾಮುನಿಯರೆಮ್ಮ ಮನೆಗೆ ನಿಚ್ಚಕ್ಕಂ ಬರ್ಪರವರೆನ್ನ ವಿನಯಕ್ಕಂ ಭಕ್ತಿಗಂ ಬೆಸಕೆಯ್ವುದರ್ಕಂ ಮೆಚ್ಚಿ ಮಂತ್ರಾಕ್ಷರಂಗಳನಯ್ದಂ ವರವಿತ್ತರೀಯಯ್ದು ಮಂತ್ರಕಯ್ದುರ್ಮಕ್ಕಳಂ ನಿನ್ನ ಬಗೆಗೆ ಬಂದವರನಾಹ್ವಾನಂ ಗೆಯ್ಯಲವರ ಪೋಲ್ವೆಯ ಮಕ್ಕಳಂ ಪಡೆವೆಯೆಂದು ಬೆಸಸಿದೊಡೀಗಳೆನ್ನ ಪುಣ್ಯದಿಂ ದೊರೆಕೊಂಡು ದೊಳ್ಳಿತ್ತೆಂಬುದಂ ದಿವ್ಯಮುನಿವಾಕ್ಯಮಮೋಘವಾಕ್ಯಮಕ್ಕುಮುದರ್ಕೇನುಂ ಚಿಂತಿಸಲ್ವೇಡೆಂದೊಡಂತೆ ಗೆಯ್ವೆನೆಂದು ತೀರ್ಥಜಲಂಗಳಂ ಮಿಂದು ದಳಿಂಬವನುಟ್ಟು ಮುತ್ತಿನ ತೊಡಿಗೆಗಳಂ ತೊಟ್ಟು ದರ್ಭಶಯನದೊಳಿರ್ದು-

ಹೂವಿನಂತೆ ನಿಷ್ಫಲವಾಯಿತು. ವ|| ಎಂಬ ಚಿಂತೆಯಿಂದ ಕೂಡಿದ್ದ ಕುಂತಿಯನ್ನು ನೋಡಿ ಪಾಂಡುರಾಜನು ರಹಸ್ಯವಾಗಿ ಹೀಗೆಂದು ಹೇಳಿದನು. ೧೧೮. ಕೃಶೋದರಿಯಾದ ಎಲೌ ಕುಂತಿಯೇ ಈ ಚಿಂತೆಯೇಕೆ ನಿನಗೆ? ನಮ್ಮ ವಂಶಕ್ಕೆ ನೇರವಾಗಿ ಪುತ್ರಸಂತಾನದ ಪ್ರಾಪ್ತಿಯಾಗಬೇಕಾದರೆ ಇನ್ನು ಮೇಲೆ ನೀನು ಹೀಗಿರಬೇಡ; ಋಷಿಶ್ರೇಷ್ಠರಿಂದ ನಿನ್ನ ಇಷ್ಟಾರ್ಥಸಿದ್ಧಿಯಾಗುವ ಹಾಗೆ ನಿನ್ನ ವಿಶೇಷವಾದ ಪತಿವ್ರತಾಗುಣದಿಂದ ನೀನು ಪೂಜೆಮಾಡಿ ಅವರನ್ನು ಮೆಚ್ಚಿಸು. ದಿಕ್ಕುಗಳ ಕೊನೆಯವರೆಗೆ ವ್ಯಾಪ್ತಿಯಾದ ಯಶಸ್ಸಿನಿಂದ ಕೂಡಿದ ಶ್ರೇಷ್ಠರಾದ ಮಕ್ಕಳನ್ನು ಪಡೆಯುತ್ತೀಯೆ ವ|| ಎಂದು ಹೇಳಲು ಕುಂತಿಯು ಹೀಗೆಂದಳು - ನಾನು ಕನ್ನಿಕೆಯಾಗಿ ನನ್ನ ಮಾವನಾದ ಕುಂತಿಭೋಜನ ಮನೆಯಲ್ಲಿ ಬೆಳೆಯುತ್ತಿರುವಾಗ ದುರ್ವಾಸ ಮಹರ್ಷಿಗಳು ನಮ್ಮ ಮನೆಗೆ ಪ್ರತಿದಿನವೂ ಬರುತ್ತಿದ್ದವರು ನನ್ನ ವಿನಯಕ್ಕೂ ಭಕ್ತಿಗೂ ಸೇವೆ ಮಾಡಿದುದಕ್ಕೂ ಮೆಚ್ಚಿ ಅಯ್ದು ಮಂತ್ರಾಕ್ಷರಗಳನ್ನು ವರವಾಗಿ ಕೊಟ್ಟರು. ಈ ಅಯ್ದು ಮಂತ್ರಕ್ಕೂ ನಿನ್ನ ಮನಸ್ಸಿಗೆ ಬಂದವರನ್ನು ನೆನೆದು ಆಹ್ವಾನ ಮಾಡಲು ಅವರನ್ನು ಹೋಲುವ ಅಯ್ದು ಮಕ್ಕಳನ್ನು ಪಡೆಯುತ್ತೀಯೆ ಎಂದು ಅಪ್ಪಣೆ ಕೊಡಿಸಿದರು. ಈಗ ಅದು ನನ್ನ ಪುಣ್ಯದಿಂದ ದೊರೆಕೊಂಡುದು ಒಳ್ಳೆಯದಾಯಿತು ಎಂದು ಹೇಳಿದಳು. ಪಾಂಡುವು 'ದಿವ್ಯಋಷಿಗಳ ಮಾತು ಬಹುಬೆಲೆಯುಳ್ಳದ್ದು; ಅದಕ್ಕೇನೂ ಯೋಚಿಸಬೇಡ, ಹಾಗೆಯೇ ಮಾಡು' ಎಂದನು. ಕುಂತಿಯು ಹಾಗೆಯೇ ಮಾಡುತ್ತೇನೆಂದು ಹೇಳಿ ಪವಿತ್ರತೀರ್ಥಗಳಲ್ಲಿ ಸ್ನಾನಮಾಡಿ ಶುಭ್ರವಸ್ತ್ರವನ್ನು ಧರಿಸಿ ಮುತ್ತಿನ ಆಭರಣವನ್ನು ತೊಟ್ಟು ದರ್ಭೆಯಿಂದ ಮಾಡಿದ ಹಾಸಿಗೆ ಮೇಲಿದ್ದು

ಉ|| ಜ್ಞಾನದಿನಿರ್ದು ನಿಟ್ಟಪೊಡೆ ದಿವ್ಯ ಮುನೀಂದ್ರನ ಕೊಟ್ಟ ಮಂತ್ರ ಸಂ
ತಾನಮನೋದಿಯೋದಿ ಯಮರಾಜನನದ್ಭುತತೇಜನಂ ಸರೋ ।
ಜಾನನೆ ಜಾನದಿಂ ಬರಿಸೆ ಬಂದು ಯಮಂ ಬೆಸನಾವುದಾವುದಾ
ತ್ಮಾನುಗತಾರ್ಥಮೆಂದೊಡೆನಗೀವುದು ನಿನ್ನನೆ ಪೋಲ್ವ ಪುತ್ರನಂ ॥ ೧೧೯

ವ|| ಎಂಬುದುಂ ತಥಾಸ್ತುವೆಂದು ತನ್ನಂಶಮನಾಕೆಯ ಗರ್ಭದೊಳವತರಿಸಿ ಯಮಭಟ್ಟಾರಕನಂತರ್ಧಾನಕ್ಕೆ ಸಂದನನ್ನೆಗಮಾ ಕಾಂತೆಗೆ-

ಚಂ ॥ ಹಿಮ ಧವಳಾತಪತ್ರಮನೆ ಪೋಲೆ ಮುಖೇಂದುವ ಬೆಳ್ಪು ಪೂರ್ಣ ಕುಂ
ಭಮನೆ ನಿರಂತರಂ ಗೆಲೆ ಕುಚಂಗಳ ತೋರ್ಪು ಪತಾಕೆಯೊಂದು ವಿ ।
ಭ್ರಮಮನೆ ಪೋಲೆ ಪುರ್ವಿನ ಪೊಡರ್ಪೊಳಕೊಂಡುದದವಳ್ಗೆ ಗರ್ಭ ಚಿ
ಹ್ನಮೆ ಗಳ ಗರ್ಭದರ್ಭಕನ ಸೂಚಿಪ ಮುಂದಣ ರಾಜ್ಯಚಿಹ್ನಮಂ ॥೧೨೦

ವ|| ಅಂತು ಕೊಂತಿಯ ಗರ್ಭಭಾರಮುಂ ತಾಪಸಾಶ್ರಮದನುರಾಗಮುಮೊಡನೊಡನೆ ಬಳೆಯೆ ಬಂಧುಜನದ ಮನೋರಥಂಗಳುಮೊಂಬತ್ತನೆಯ ತಿಂಗಳುಮೊಡನೊಡನೆ ನೆಱೆಯೆ-

ಕಂ|| ವನನಿಧಿಯಿಂದಂ ಚಂದ್ರಂ
ವಿನತೋದರದಿಂ ಗರುತ್ಮನುದಯಾಚಳದಿಂ ।
ದಿನಪನೊಗೆವಂತೆ ಪುಟ್ಟಿದ
ನನಿವಾರ್ಯ ಸುತೇಜನೆನಿಪನಿನಜನ ತನಯಂ ॥ ೧೨೧

೧೧೯. ಋಷಿಶ್ರೇಷ್ಠನಾದ ದುರ್ವಾಸನು ಕೊಟ್ಟ ಮಂತ್ರಸಮೂಹವನ್ನು ಜ್ಞಾನದಿಂದ ಏಕಾಗ್ರಚಿತ್ತದಿಂದ ಪಠನಮಾಡಿ ಕಮಲಮುಖಿಯಾದ ಆ ಕುಂತಿಯು ಅದ್ಭುತವಾದ ತೇಜಸ್ಸಿನಿಂದ ಕೂಡಿದ ಯಮರಾಜನನ್ನು ಆಹ್ವಾನಿಸಿದಳು. ಯಮನು ಬಂದು 'ಮಾಡಬೇಕಾದ ಕಾರ್ಯವಾವುದು ನಿನ್ನ ಇಷ್ಟಾರ್ಥವೇನು' ಎಂದನು. 'ನಿನ್ನನ್ನು ಹೋಲುವ ಮಗನನ್ನು ನನಗ ದಯಪಾಲಿಸಬೇಕು' ಎಂದಳು. ವ|| ಯಮಭಟ್ಟಾರಕನು 'ತಥಾಸ್ತು' ಎಂದು ತನ್ನಂಶವನ್ನು ಅವಳ ಗರ್ಭದಲ್ಲಿ ಇಳಿಸಿಟ್ಟು ಮರೆಯಾದನು. ಆಗ ೧೨೦. ಅವಳ ಮುಖಕಮಲದ ಬಿಳುಪು ಹಿಮದಂತೆ ಬೆಳ್ಳಗಿರುವ ಶ್ವೇತಚ್ಛತ್ರವನ್ನು ಸೂಚಿಸಿತು. ಕಪ್ಪುಸ್ತನಗಳು ಪೂರ್ಣಕುಂಭಗಳ ಆಕಾರವನ್ನು ಪಡೆದವು. ಹುಬ್ಬಿನ ವಿಸ್ತಾರವು ಧ್ವಜದ ವಿಸ್ತಾರವನ್ನು ಪ್ರದರ್ಶಿಸಿತು. ಅವಳ ಗರ್ಭದಲ್ಲಿರುವ ಬಾಲಕನ ಮುಂದಣ ರಾಜ್ಯಚಿಹ್ನವನ್ನು ಸೂಚಿಸುವಂತ ಅವಳಿಗೆ ಗರ್ಭಚಿಹ್ನೆಗಳುಂಟಾದವು. ವ|| ಹಾಗೆ ಕುಂತಿಯ ಗರ್ಭಭಾರವೂ ಆ ತಪಸ್ವಿಗಳ ಆಶ್ರಮದ ಪ್ರೀತಿಯೂ ಜೊತೆಜೊತೆಯಲ್ಲಿಯೇ ಅಭಿವೃದ್ಧಿಯಾಗುತ್ತಿರಲು ಅವಳ ಬಂಧುಜನದ ಇಷ್ಟಾರ್ಥವೂ ಒಂಬತ್ತನೆಯ ತಿಂಗಳೂ ಒಟ್ಟಿಗೆ ಪೂರ್ಣವಾದುವು. ೧೨೧. ಸಮುದ್ರದಿಂದ ಚಂದ್ರನೂ ವಿನತಾದೇವಿಯ ಹೊಟ್ಟೆಯಿಂದ ಗರುಡನೂ ಉದಯಪರ್ವತದಿಂದ ಸೂರ್ಯನೂ ಹುಟ್ಟುವಂತೆ ತೇಜೋಮೂರ್ತಿಯಾದ ಯಮಪುತ್ರನು ಜನಿಸಿದನು.

ಪುಟ್ಟುವುದುಂ ಧರ್ಮಮುಮೊಡ
ವುಟ್ಟಿದುದೀತನೊಳೆ ಧರ್ಮನಂಶದೊಳೀತಂ ।
ಪುಟ್ಟಿದನೆಂದಾ ಶಿಶುಗೊಸೆ
ದಿಟ್ಟುದು ಮುನಿಸಮಿತಿ ಧರ್ಮಸುತನೆನೆ ಪೆಸರುಂ ॥ ೧೨೨

ವ॥ ಅಂತು ಪೆಸರನಿಟ್ಟು ಪರಕೆಯುಂ ಕೊಟ್ಟು-

ಕಂ ॥ ಸಂತಸದಿನಿರ್ದು ಮಕ್ಕಳ
ಸಂತತಿಗೀ ದೊರೆಯರಿನ್ನುಮಾಗದೊಡೆಂತುಂ ।
ಸಂತಸಮೆನಗಿಲ್ಲೆಂದಾ
ಕಾಂತೆ ಸುತಭ್ರಾಂತೆ ಮುನ್ನಿನಂತೆವೊಲಿರ್ದಳ್ ॥ ೧೨೩

ಮಂತ್ರಾಕ್ಷರ ನಿಯಮದಿನಭಿ
ಮಂತ್ರಿಸಿ ಬರಿಸಿದೊಡೆ ವಾಯುದೇವಂ ಬಂದೇಂ ।
ಮಂತ್ರಂ ಪೇೞೆನೆ ಕುಡು ರಿಪು
ತಂತ್ರಕ್ಷಯಕರನನೆನಗೆ ಹಿತನಂ ಸುತನಂ ॥ ೧೨೪

ವ॥ ಎಂಬುದುಮದೇವಿರಿದಿತ್ತೆನೆಂದು ವಿಯತ್ತಳಕ್ಕೊಗೆದೊಡಾತನಂಶಮಾಕೆಯ ಗರ್ಭ ಸರೋವರದೊಳಗೆ ಚಂದ್ರಬಿಂಬದಂತೆ ಸೊಗಯಿಸೆ-

ಚಂ॥ ತ್ರಿವಳಿಗಳುಂ ವಿರೋಧಿ ನೃಪರುತ್ಸವಮುಂ ಕಿಡೆವಂದುವಾನನೇಂ
ದುವ ಕಡುವೆಳ್ಪು ಕೂಸಿನ ನೆಗೞ್ತೆಯ ಬೆಳ್ಪುವೊಲಾಯ್ತು ಮುನ್ನೆ ಬ ।
ಳ್ಕುವ ನಡು ತೋರ್ಪ ಮಯ್ಯನೊಳಕೊಂಡುದು ಪೊಂಗೊಡನಂ ತಮಾಳ ಪ
ಲ್ಲವದೊಳೆ ಮುಚ್ಚಿದಂದದೊಳೆ ಚೂಚುಕಮಾಂತುದು ಕರ್ಪನಾಕೆಯಾ ॥ ೧೨೫

೧೨೨. ಇವನು ಹುಟ್ಟಲಾಗಿ ಇವನೊಡನೆಯೇ ಧರ್ಮವೂ ಹುಟ್ಟಿತು. ಯಮಧರ್ಮನ ಅಂಶದಿಂದ ಈತ ಹುಟ್ಟಿದ್ದಾನೆ ಎಂದು ಆ ಋಷಿಸಮೂಹವು ಆ ಮಗುವಿಗೆ ಪ್ರೀತಿಯಿಂದ ಧರ್ಮಸುತನೆಂಬ ಹೆಸರನ್ನಿಟ್ಟಿತು. ವ॥ ಹಾಗೆ ಹೆಸರಿಟ್ಟು ಹರಕೆಯನ್ನು ಕೊಟ್ಟರು ೧೨೩. ಸಂತೋಷದಿಂದಿದ್ದು ಮಕ್ಕಳ ಸಂತತಿಗೆ ಇವನಿಗೆ ಸಮಾನರಾದ ಇನ್ನೂ ಇತರರೂ ಆಗದಿದ್ದರೆ ಹೇಗೂ ನನಗೆ ಸಂತೋಷವಿಲ್ಲ ಎಂದು ಮಕ್ಕಳ ಭ್ರಮೆಯಿಂದ ಕೂಡಿದ ಆ ಕುಂತಿಯು ಮೊದಲಿನ ಹಾಗೆಯೇ ಇದ್ದಳು. ೧೨೪. (ಅಲ್ಲದೆ) ಮಂತ್ರಾಕ್ಷರವನ್ನು ಜಪಿಸುವ ವಿಧಿಯಿಂದ ವಾಯುದೇವನನ್ನು ಆಹ್ವಾನಿಸಿ ಬರಿಸಲಾಗಿ ಅವನು 'ಇಷ್ಟಾರ್ಥವೇನು ಹೇಳು' ಎನ್ನಲು 'ವೈರಿಸೈನ್ಯವನ್ನು ನಾಶಪಡಿಸುವವನು ಎನ್ನಿಸಿಕೊಳ್ಳುವ ಹಿತನಾದ ಮಗನನ್ನು ಕೊಡು' ಎಂದಳು. ವ॥ ವಾಯುದೇವನು 'ಇದೇನು ಮಹಾ ದೊಡ್ಡದು. ಕೊಟ್ಟಿದ್ದೇನೆ' ಎಂದು ಹೇಳಿ ಆಕಾಶಪ್ರದೇಶಕ್ಕೆ ನೆಗೆಯಲು, ಆತನಂಶವು ಅವಳ ಗರ್ಭಸರೋವರದಲ್ಲಿ ಚಂದ್ರಬಿಂಬದಂತೆ ಸೊಗಯಿಸಿತು. ೧೨೫. ಅವಳ ಹೊಟ್ಟೆಯ ಮೇಲಿನ ಮೂರು ಮಡಿಪು (ರೇಖೆ)ಗಳೂ ವೈರಿರಾಜರ ಸಂತೋಷವೂ (ಒಟ್ಟಿಗೆ) ನಾಶವಾದುವು. ಅವಳ ಮುಖದಲ್ಲಿರುವ ಹೆಚ್ಚಾದ ಬಿಳುಪುಬಣ್ಣವು ಗರ್ಭದಲ್ಲಿರುವ ಮಗುವಿನ ಯಶಸ್ಸಿನ

ಕಂ॥ ಆ ಸುದತಿಯ ಮೃದು ಪದ ವಿ
ನ್ಯಾಸಮುಮಂ ಶೇಷನಾನಲಾರದೆ ಸುಯ್ದಂ ।
ಬೇಸಱಿನೆಂದೊಡೆ ಗರ್ಭದ
ಕೂಸಿನ ಬಳೆದಳವಿಯಳವನಱಿವರುಮೊಳರೇ ॥ ೧೨೬

ವ॥ ಅಂತು ಗರ್ಭನಿರ್ಭರ ಪ್ರದೇಶದೊಳರಾತಿಗಳ್ಗಂತಕಾಲಂ ದೊರೆಕೊಳ್ವಂತೆ ಪ್ರಸೂತಿ ಕಾಲಂ ದೊರೆಕೊಳೆ–

ಕಂ॥ ಶುಭ ತಿಥಿ ಶುಭ ನಕ್ಷತ್ರಂ
ಶುಭ ವಾರಂ ಶುಭ ಮುಹೂರ್ತಮೆನೆ ಗಣಕನಿಳಾ ।
ಪ್ರಭುವೊಗೆದನುದಿತ ಕಾಯ
ಪ್ರಭೆಯೊಗೆದಿರೆ ದಳಿತ ಶತ್ರುಗೋತ್ರಂ ಪುತ್ರಂ ॥ ೧೨೭

ಭೀಮಮುಂ ಭಯಂಕರಮುಂ ಪೆಱ
ತೇ ಮಾತೀ ಕೂಸಿನಂದಮೀತನ ಪೆಸರುಂ ।
ಭೀಮನೆ ಪೋಗೆನೆ ಮುನಿಜನ
ಮಾ ಮಾೞ್ಕೆಯಿನಾಯ್ತು ಶಿಶುಗೆ ಪೆಸರನ್ವರ್ಥಂ ॥ ೧೨೮

ವ॥ ಅಂತು ಭರತಕುಲತಿಲಕರಪ್ಪ ಪೂರ್ವರ್ಮಕ್ಕಳಂ ಪೆತ್ತು ಕೊಂತಿ ಸಂತಸದಂತ ಮನೆಯಿರ್ಪುದುಮತ್ತ ಧೃತರಾಷ್ಟ್ರನ ಮಹಾದೇವಿಯಪ್ಪ ಗಾಂಧಾರಿ ಕೇಳ್ದು ತನ್ನ ಗರ್ಭಂ ತಡೆದುದರ್ಕೆ ಕಿನಿಸಿ ಕಿಂಕಿರಿವೋಗಿ–

ಬಿಳಿಯ ಬಣ್ಣದಂತಾಯಿತು. ಮೊದಲು ಬಳುಕುತ್ತಿದ್ದ ನಡುವು ದಪ್ಪನಾದ ಆಕಾರವನ್ನು ಪಡೆಯಿತು. ಅವಳ ಮೊಲೆಯ ತೊಟ್ಟು ಚಿನ್ನದ ಕಲಶವನ್ನು ಹೊಂಗೆಯ ಚಿಗುರಿನಿಂದ ಮುಚ್ಚಿದಂತೆ ಕಪ್ಪುಬಣ್ಣವನ್ನು ತಾಳಿತು. ೧೨೬. ಸುಂದರವಾದ ದಂತಪಂಕ್ತಿಯಿಂದ ಕೂಡಿದ ಆ ಕುಂತಿಯು ಮೃದುವಾದ ಹೆಜ್ಜೆಯಿಡುವುದನ್ನು ಆದಿಶೇಷನು ತಾಳಲಾರದೆ ಕಷ್ಟದಿಂದ ನಿಟ್ಟುಸಿರು ಬಿಟ್ಟನು, ಎಂದರೆ ಗರ್ಭದಲ್ಲಿರುವ ಕೂಸು ಬೆಳೆದ ಅಳತೆಯ ಪ್ರಮಾಣವನ್ನು ಅಳೆಯುವವರೂ ಇದ್ದಾರೆಯೇ? (ಇಲ್ಲವೆಂದೇ ಅರ್ಥ) ವ॥ ಹಾಗೆ ಗರ್ಭವು ಬೆಳೆಯುತ್ತಿದ್ದೆಡೆಯಲ್ಲಿ ಶತ್ರುಗಳಿಗೆ ಅವಸಾನಕಾಲವುಂಟಾಗುವ ಹಾಗೆ ಹೆರಿಗೆಯ ಕಾಲವು ಸಮೀಪಿಸಲು -೧೨೭. ಜೋಯಿಸನು ಶುಭತಿಥಿ, ಶುಭನಕ್ಷತ್ರ, ಶುಭಮುಹೂರ್ತ ಎಂದು ಹೇಳುತ್ತಿರಲು ಜೊತೆಯಲ್ಲಿಯೇ ಹುಟ್ಟಿದ ಶರೀರಕಾಂತಿಯು ಹರಡುತ್ತಿರಲು ಲೋಕಕ್ಕೆಲ್ಲ ರಾಜನೂ ಶತ್ರುಸಂಹಾರಕನೂ ಆದ ಮಗನು ಹುಟ್ಟಿದನು. ೧೨೮. ಈ ಮಗುವಿನ ರೀತಿ ಅತಿಭಯಂಕರವಾದುದು. ಬೇರೆಯ ಮಾತೇನು? ಅವನ ಹೆಸರು ಕೂಡ ಭೀಮನೆಂದೇ ಆಗಲಿ ಎಂದು ಋಷಿಗಳು ಎನ್ನಲು ಅದೇ ರೀತಿ ಆ ಶಿಸುವಿಗೆ ಹೆಸರು ಅನ್ವರ್ಥವಾಗಿಯೇ (ಅರ್ಥಕ್ಕೆ ಹೊಂದಿಕೊಳ್ಳುವ ಹಾಗೆ) ಭೀಮನೆಂದಾಯಿತು. ವ॥ ಹಾಗೆ ಭರತಕುಲತಿಲಕರಾದ ಇಬ್ಬರು ಮಕ್ಕಳನ್ನು ಹೆತ್ತು (ಪಡೆದು) ಕುಂತಿಯು ಸಂತೋಷದ ಪರಮಾವಧಿಯನ್ನು ಹೊಂದಿರಲು ಆ ಕಡೆ ಧೃತರಾಷ್ಟ್ರನ ಮಹಾರಾಣಿಯಾದ ಗಾಂಧಾರಿಯು ಕೇಳಿ ತನ್ನ ಗರ್ಭವು ತಡವಾದುದಕ್ಕೆ

ಕಂ॥ ಸಂತತಿಗೆ ಪಿರಿಯ ಮಕ್ಕಳ
ನಾಂ ತಡೆಯದೆ ಪಡೆವೆನೆಂದೊಡೆನ್ನಿಂ ಮುನ್ನಂ ।
ಕೊಂತಿಯೆ ಪಡೆದಳ್ ಗರ್ಭದ
ಚಿಂತೆಯದಿನ್ನೇವುದೆಂದು ಬಸಿಱಂ ಪೊಸೆದಳ್ ॥ ೧೨೯

ಪೊಸೆದೊಡೆ ಪಾಲ್ಗಡಲಂ ಮಗು
ಟ್ದಸುರರ್ ಪೊಸೆದಲ್ಲಿ ಕಾಳಕೂಟಾಂಕುರಮಂ ॥
ದಸದಳಮೊಗೆದಂತೊಗೆದುವು
ಬಸಿಱಿಂ ನೂಱೊಂದು ಪಿಂಡಮರುಣಾಕೀರ್ಣಂ ॥ ೧೩೦

ವ॥ ಅವಂ ಕಂಡು ಕಿನಿಸಿ ಪರ್ಚಿಟ್ಟಿವೆಲ್ಲವಂ ಪೊಱಗೆ ಬಿಸುಟು ಬನ್ನಿಮೆಂಬುದುಂ ವ್ಯಾಸಭಟ್ಟಾರಕಂ ಬಂದು ಗಾಂಧಾರಿಯಂ ಬಗ್ಗಿಸಿ-

ಚಂ ॥ ಒದವುಗೆ ನಿನ್ನ ಸಂತತಿಗೆ ನೂರ್ವರುದಗ್ರ ಸುತರ್ಕಳೊಂದೆ ಗ
ರ್ಭದೊಳೆನೆ ಕೆಮ್ಮನಿಂತು ಪೊಸೆದಿಕ್ಕಿದೆ ಪೊಲ್ಲದುಗೆಯ್ದೆಯೆಂದು ಮಾ ॥
ಣದೆ ಮುನಿ ನೂಱುಪಿಂಡಮುಮನಾಗಳೆ ತೀವಿದ ಕಮ್ಮನಪ್ಪ ತು
ಪ್ಪದ ಕೊಡದೊಳ್ ಸಮಂತು ಮಡಗಿಟ್ಟೊಡೆ ಸೃಷ್ಟಿಗೆ ಚೋದ್ಯಮಪ್ಪಿನಂ ॥ ೧೩೧

ವ॥ ಅಂತು ನೂರ್ವರೊಳೊರ್ವನಗುರ್ಬು ಪರ್ಬಿ ಪರಕಲಿಸೆ ಸಂಪೂರ್ಣ ವಯಸ್ಕನಾಗಿ ಘೃತಘಟವಿಘಟನುಮಾಗೆ ಪುಟ್ಟುವುದುಂ-

ಕೋಪಿಸಿ ಕಿರಿಕಿರಿಯಾಗಿ -೧೨೯. ವಂಶಕ್ಕೆ ಹಿರಿಯರಾದ ಮಕ್ಕಳನ್ನು ನಾನು (ಸಾವಕಾಶವಿಲ್ಲದೆ) ಮೊದಲು ಪಡೆಯುತ್ತೇನೆಂದಿದ್ದರೆ ನನಗಿಂತ ಮುಂಚೆ ಕುಂತಿಯೇ ಪಡೆದಳು. ಇನ್ನು ಮೇಲೆ ಗರ್ಭದ ಚಿಂತೆಯದೇಕೆ ಎಂದು ಹೊಟ್ಟೆಯನ್ನು ಕಿವುಚಿದಳು. ೧೩೦. ಕ್ಷೀರಸಮುದ್ರವನ್ನು ಪುನಃ ರಾಕ್ಷಸರು ಕಡೆಯಲು ಅಂದು ಕಾಳಕೂಟವೆಂಬ ವಿಷದ ಮೊಳಕೆ ಅತಿಶಯವಾಗಿ ಹುಟ್ಟಿದ ಹಾಗೆ ಗಾಂಧಾರಿಯ ಗರ್ಭದಿಂದ ರಕ್ತದಿಂದ ತುಂಬಿದ ನೂರೊಂದು ಭ್ರೂಣಗಳು ಹುಟ್ಟಿದುವು. ವ॥ ಅವನ್ನು ನೋಡಿ ಕೋಪಿಸಿ ಬೆಂಕಿಬೆಂಕಿಯಾಗಿ ಇವುಗಳೆಲ್ಲವನ್ನೂ ಹೊರಗೆ ಬಿಸಾಡಿಬನ್ನಿ ಎಂದು ಹೇಳಲು ವ್ಯಾಸಮಹರ್ಷಿಯು ಬಂದು ಗಾಂಧಾರಿಯನ್ನು ಗದರಿಸಿ-೧೩೧. 'ನಿನ್ನ ಸಂತತಿಗೆ ಒಂದೇ ಗರ್ಭದಲ್ಲಿ ನೂರುಜನ ಶ್ರೇಷ್ಠರಾದ ಮಕ್ಕಳು ಹುಟ್ಟಲಿ ಎಂದಿರಲು ನಿಷ್ಪ್ರಯೋಜನವಾಗಿ ಹೀಗೆ ಹೊಟ್ಟೆಯನ್ನು ಕಿವುಚಿಬಿಟ್ಟೆ, ಅಯೋಗ್ಯವಾದುದನ್ನು ಮಾಡಿದೆ' ಎಂದು ಬಿಡದೆ ಆ ಋಷಿಯು ಆ ನೂರು ಭ್ರೂಣಗಳನ್ನು ಆಗಲೇ ಗಮಗಮಿಸುವ ತುಪ್ಪದಿಂದ ತುಂಬಿದ ಕೊಡದಲ್ಲಿ ಸುರಕ್ಷಿತವಾಗಿಡಿಸಿದನು. ಸಮಸ್ತಲೋಕಕ್ಕೂ ಆಶ್ಚರ್ಯವುಂಟಾಗುವ ಹಾಗೆ ಅವುಗಳು ಅಲ್ಲಿ ಬೆಳೆದವು. ವ॥ ಆ ನೂರುಜನರಲ್ಲಿ ಒಬ್ಬನು ಭಯವು ಹಬ್ಬಿ ಹರಡುವ ಹಾಗೆ ತುಂಬಿದ ಪ್ರಾಯವುಳ್ಳವನಾಗಿ ತುಪ್ಪದ ಕೊಡವನ್ನು (ಮಡಕೆ) ಒಡೆದುಕೊಂಡು ಹುಟ್ಟಿ ಬಂದನು.

ಕಂ ॥ ಪ್ರತಿಮೆಗಳಟ್ಟುವು ಮೊಱಗಿದು
ದತಿ ರಭಸದೆ ಧಾತ್ರಿ ದೆಸೆಗಳುರಿದುವು ಭೂತ ।
ಪ್ರತತಿಗಳಾಡಿದುವೊಳಱಿದು
ವತಿ ರಮ್ಯಸ್ಥಾನದೊಳ್ ಶಿವಾ ನಿವಹಂಗಳ್ ॥ ೧೩೨

ವ॥ ಅಂತೊಗೆದನೇಕೋತ್ಪಾತಂಗಳಂ ಕಂಡು ಮುಂದಱಿವ ಚದುರ ವಿದುರನಿಂತೆಂದಂ-

ಕಂ॥ ಈತನೆ ನಮ್ಮ ಕುಲಕ್ಕಂ
ಕೇತು ದಲಾನಱಿವೆನಲ್ಲದಂದೇಕಿನಿತು ।
ತ್ಪಾತಂ ತೋರ್ಪುವು ಬಸುಡುವು
ದೀತನ ಪೞಿಗುಟಿದ ಸುತರೆ ಸಂತತಿಗಪ್ಪರ್ ॥ ೧೩೩

ವ॥ ಎಂದೊಡಂ ಪುತ್ರಮೋಹ ಕಾರಣಮಾಗಿ ಧೃತರಾಷ್ಟ್ರನುಂ ಗಾಂಧಾರಿಯುಮೇಗೆಯ್ದುಮೊಡಂಬಡದಿರ್ದೊಡುತ್ಪಾತ ಶಾಂತಿಕ ಪೌಷ್ಟಿಕ ಕ್ರಿಯೆಗಳಂ ಮಹಾ ಬ್ರಾಹ್ಮಣರಿಂದಂ ಬಳೆಯಿಸಿ ಬದ್ದವಣಮಂ ಬಾಜಿಸಿ ಮಂಗಳಮಂ ಪಾಡಿಸಿ ಕೂಸಿಂಗೆ ದುರ್ಯೋಧನನೆಂದು ಪೆಸರನಿಟ್ಟು ಮತ್ತಿನ ಕೂಸುಗಳ್ಗೆಲ್ಲಂ ದುಶ್ಶಾಸನಾದಿಯಾಗಿ ನಾಮಂಗಳನಿಟ್ಟು ಪರಕೆಯಂ ಕೊಟ್ಟು-

ಮ॥ ಸುಕಮಿರ್ಪನ್ನೆಗಮಿತ್ತ ಕುಂತಿ ಶತಶೃಂಗಾದ್ರೀಂದ್ರದೊಳ್ ದಿವ್ಯ ಬಾ
ಲಕನಿನ್ನೊರ್ವನನುಗ್ರವೈರಿ ಮದವನ್ಮಾತಂಗ ಕುಂಭಾರ್ದ್ರ ಮೌ ।
ಕ್ತಿಕ ಲಗ್ನೋಜ್ಜ್ವಲ ಬಾಣನಂ ಪ್ರವಿಲಸದ್ಗೀರ್ವಾಣ ದಾತವ್ಯ ಸಾ
ಯಕ ಸಂಪೂರ್ಣ ಕಳಾಪವೀಣನನಿಳಾಭಾರ ಕ್ಷಮಾಕ್ಷೂಣನಂ ॥ ೧೩೪

೧೩೨. ಆಗ (ಅರಮನೆಯಲ್ಲಿದ್ದ) ವಿಗ್ರಹಗಳು ರೋದನಮಾಡಿದುವು; ಬಹು ರಭಸದಿಂದ ಭೂಮಿಯು ಗುಡುಗಿತು. ದಿಕ್ಕುಗಳು ಹತ್ತಿ ಉರಿದುವು; ಪಿಶಾಚಿಗಳ ಸಮೂಹವು ಕುಣಿದಾಡಿದುವು. ಅತಿಮನೋಹರವಾದ ಸ್ಥಳಗಳಲ್ಲೆಲ್ಲ ನರಿಯ ಗುಂಪುಗಳು ಕೂಗಿಕೊಂಡವು. ವ॥ ಹಾಗೆ ಉಂಟಾದ ಅನೇಕ ಉತ್ಪಾತ (ಅಪಶಕುನ)ಗಳನ್ನು ಕಂಡು ಭವಿಷ್ಯಜ್ಞಾನಿಯೂ ಬುದ್ಧಿವಂತನೂ ಆದ ವಿದುರನು ಹೀಗೆಂದನು. ೧೩೩. ಈತನೇ ನಮ್ಮ ವಂಶವನ್ನು ಹಾಳುಮಾಡುವ ಕೇತುಗ್ರಹ; ಹಾಗಿಲ್ಲದಿದ್ದರೆ ಏಕೆ ಇಷ್ಟು ದುರ್ನಿಮಿತ್ತಗಳಾಗುತ್ತಿದ್ದುವು. ಇವನನ್ನು ಹೊರಗೆ ಎಸೆಯುವುದು. ಇವನ ಹಿಂದೆಯ ಉಳಿದವರೇ ವಂಶೋದ್ಧಾರಕರಾಗುತ್ತಾರೆ. ವ॥ ಎಂಬುದಾಗಿ ಹೇಳಿದರೂ ಪುತ್ರಮೋಹ ಕಾರಣದಿಂದ ಧೃತರಾಷ್ಟ್ರನೂ ಗಾಂಧಾರಿಯೂ ಏನು ಮಾಡಿದರೂ (ಎಸೆಯುವುದಕ್ಕೆ) ಒಪ್ಪದಿರಲು ಉತ್ಪಾತಶಾಂತಿಗಾಗಿಯೂ ಮಂಗಳವರ್ಧನಕ್ಕಾಗಿಯೂ ಶಾಂತಿಕರ್ಮಗಳನ್ನು ಬ್ರಾಹ್ಮಣರಿಂದ ಮಾಡಿಸಿ ಮಂಗಳ ವಾದ್ಯವನ್ನು ಹಾಡಿಸಿ ಕೂಸಿಗೆ ದುರ್ಯೋಧನನೆಂದು. ಹೆಸರಿಟ್ಟು ಉಳಿದ ಮಕ್ಕಳಿಗೆಲ್ಲ ದುಶ್ಶಾಸನನೇ ಮೊದಲಾದ ಹೆಸರುಗಳನ್ನಿಟ್ಟು ಆಶೀರ್ವಾದ ಮಾಡಿದರು. ೧೩೪. ಈ ಕಡೆ ಶ್ರೇಷ್ಠವಾದ ಶತಶೃಂಗಪರ್ವತದಲ್ಲಿ ಕುಂತಿಯು ಭಯಂಕರನಾದ ಶತ್ರುಗಳೆಂಬ ಮದ್ದಾನೆಗಳ ಒದ್ದೆಯಾದ ಮುತ್ತುಗಳು ಅಂಟಿಕೊಂಡಿರುವ ಉಜ್ವಲವಾದ

ವ|| ಅಂತು ಸರ್ವ ಲಕ್ಷಣ ಸಂಪೂರ್ಣನಪ್ಪ ಮಗನನಮೋಘಂ ಪಡೆವೆನೆಂಬುದ್ಯೋಗಮ ನೆತ್ತಿಕೊಂಡು ಪಾಂಡುರಾಜನುಂ ತಾನುಂ-

ಚಂ|| ಎಱಗಿಯುಮೊರ್ಮೆ ದಿವ್ಯ ಮುನಿಗಾರ್ತುಪವಾಸಮನಿರ್ದುಮೊರ್ಮೆ ಕೊ
ಯ್ದಱಿಕೆಯ ಪೂಗಳಿಂ ಶಿವನನರ್ಚಿಸಿಯುಂ ಬಿಡದೊರ್ಮೆ ನೋಂತುಮೋ ||
ದಱಿವರ ಪೇೞ್ದ ನೋಂಪಿಗಳನೊರ್ಮೆ ಪಲರ್ಮೆಯುಮಿಂತು ತಮ್ಮ ಮೆ
ಯ್ಯೞಿವಿನಮಿರ್ವರುಂ ನಮೆದರೇನವರ್ಗಾದುದೊ ಪುತ್ರದೋಹಳಂ || ೧೩೫

ಅಲಸದೆ ಮಾಡಿ ಬೇಸಱದೆ ಸಾಲ್ಗುಮಿದೆನ್ನದೆ ಮೆಯ್ಯೊಗಕ್ಕೆ ಪಂ
ಬಲಿಸದೆ ನಿದ್ರೆಗೆಟ್ಟು ನಿಡು ಜಾಗರದೊಳ್ ತೊಡರ್ದೇಕ ಪಾದದೊಳ್ ।
ಬಲಿದುಪವಾಸದೊಳ್ ನಮೆದು ನೋಂಪಿಗಳೊಳ್ ನಿಯಮ ಕ್ರಮಂಗಳಂ
ಸರಿಸಿದರಂತು ನೋಂನದೆ ಗುಣಾರ್ಣವನಂ ಪಡೆಯಲ್ಕೆ ತೀರ್ಗುಮೇ ||೧೩೬

ವ|| ಅಂತೊಂದು ವರ್ಷಂಬರಂ ಭರಂಗೆಯ್ದು ನೋಂತು ಪೂರ್ವಕ್ರಮದೊಳೊಂದು ದಿವಸಮುಪವಾಸಮನಿರ್ದಗಣ್ಯ ಪುಣ್ಯತೀರ್ಥಜಲಂಗಳಂ ಮಿಂದು ದಳಿಂಬಮನುಟ್ಟು ದರ್ಭಶಯನದೊಳಿರ್ದು-

ಬಾಣಗಳನ್ನುಳ್ಳವನೂ ದೇವತೆಗಳಿಂದ ಕೊಡಲ್ಪಟ್ಟ ದಿವ್ಯಾಸ್ತ್ರಪ್ರಯೋಗದಲ್ಲಿ ಸಂಪೂರ್ಣ ನಿಪುಣ ನಾಗಿರುವವನೂ ರಾಜ್ಯಭಾರಮಾಡುವ ಶಕ್ತಿಯಲ್ಲಿ ಸ್ವಲ್ಪವೂ ಊನವಿಲ್ಲದವನೂ ವ|| ಹಾಗೆಯೇ ಸರ್ವಲಕ್ಷಣ ಸಂಪೂರ್ಣನೂ ಆದ ಮಗನನ್ನು ಬೆಲೆಯಿಲ್ಲದ ರೀತಿಯಲ್ಲಿ ಪಡೆಯಬೇಕೆಂಬ ಕಾರ್ಯದಲ್ಲಿ ತೊಡಗಿ ಪಾಂಡುರಾಜನೂ ತಾನೂ ೧೩೫. ಒಂದು ಸಲ ದಿವ್ಯಮುನಿಗಳಿಗೆ ನಮಸ್ಕಾರಮಾಡಿಯೂ ಮತ್ತೊಂದು ಸಲ ಉಪವಾಸವಿದ್ದು ಬೇರೊಂದು ಸಲ ಪ್ರಸಿದ್ಧವಾದ ಹೂವುಗಳನ್ನು ಕೊಯ್ದು ಶಿವನನ್ನು ಆರಾಧಿಸಿಯೂ ಇನ್ನೊಂದು ಸಲ ಶಾಸ್ತ್ರಜ್ಞರು ಹೇಳಿದ ವ್ರತಗಳನ್ನು ನಿರಂತರ ನಡೆಯಿಸಿಯೂ ಒಂದುಸಲವೂ ಅನೇಕಸಲವೂ ತಮ್ಮ ಶರೀರವು ಕೃಶವಾಗುವ ಹಾಗೆ ಇಬ್ಬರೂ ನಮೆದರು. ಅವರಿಗೆ ಮಕ್ಕಳನ್ನು ಪಡೆಯಬೇಕೆಂಬ ಆಶೆ ಅತ್ಯಧಿಕವಾಯಿತು. ೧೩೬. ಆಲಸ್ಯವಿಲ್ಲದೆ ವ್ರತಮಾಡಿ, ಬೇಸರಿಕೆಯಿಂದ ಇದು ಸಾಕು ಎನ್ನದೆ, ಶರೀರಸುಖಕ್ಕೆ ಹಂಬಲಿಸದೆ, ನಿದ್ದೆಗೆಟ್ಟು, ದೀರ್ಘವಾದ ಜಾಗರಣೆಗಳಲ್ಲಿ ಸೇರಿಕೊಂಡು, ಒಂದು ಕಾಲಿನಲ್ಲಿ ನಿಂತುಕೊಂಡು, ಉಪವಾಸದಿಂದ ಕೃಶರಾಗಿ ವ್ರತಗಳಲ್ಲಿ ನಿಯಮವನ್ನು ತಪ್ಪದೆ ಪಾಲಿಸಿದರು. ಹಾಗೆ ವ್ರತಮಾಡದೆ ಗುಣಸಮುದ್ರನಾದ ಅರ್ಜುನನನ್ನು (ಆ ಬಿರುದಿನಿಂದ ಕೂಡಿದ ಅರಿಕೇಸರಿಯನ್ನು) ಪಡೆಯಲು ಸಾಧ್ಯವೇ? ವ|| ಹಾಗೆ ಒಂದು ವರ್ಷದವರೆಗೆ ಶ್ರದ್ಧೆಯಿಂದ ವ್ರತಮಾಡಿ ಹಿಂದಿನ ರೀತಿಯಲ್ಲಿಯೇ ಒಂದು ದಿವಸ ಉಪವಾಸವಿದ್ದು ಲೆಕ್ಕವಿಲ್ಲದಷ್ಟು ಪುಣ್ಯತೀರ್ಥಗಳಲ್ಲಿ ಸ್ನಾನಮಾಡಿ ಧೌತವಸ್ತ್ರವನ್ನುಟ್ಟು ದರ್ಭದ ಹಾಸಿಗೆಯ ಮೇಲಿದ್ದು

ಮ॥ ಸುಲಿಪಲ್ ಮಿಂಚಿನ ಗೊಂಚಲುಟ್ಟ ದುಗುಲಂ ಗಂಗಾನದೀ ಫೇನಮು
ಜ್ಜ್ವಲ ಮುಕ್ತಾಭರಣಂ ತರತ್ತರಳ ತಾರೋದಾರ ಭಾ ಭಾರಮಂ ।
ಗಲತಾ ಲಾಲಿತ ಸಾಂದ್ರ ಚಂದನರಸಂ ಬೆಳ್ದಿಂಗಳೆಂಬೊಂದು ಪಂ
ಬಲ ಬಂಬಲ್ಗೆಡೆಯಾಗೆ ಬೆಳ್ಪಸದನಂ ಕಣ್ಗೊಪ್ಪಿತಾ ಕಾಂತೆಯಾ ॥ ೧೩೭

ವ॥ ಅಂತು ತನ್ನ ಕೈಕೊಂಡ ಬೆಳ್ಪಸದನದೊಳ್ ಕೀರ್ತಿಶ್ರೀಯಂ ವಾಕ್ಶ್ರೀಯುಮನನು ಕರಿಸಿ ಮಂತ್ರಾಕ್ಷರ ನಿಯಮದೊಳಿಂದ್ರನಂ ಬರಿಸೆ-

ಕಂ ॥ ನೆನೆದ ಮನಂ ಪೆಱಗುಳಿದ
ತ್ತೆನೆ ಬೆಳಗುವ ರತ್ನದೀಪ್ತಿ ಸುರಧನು ನೆಗೆದ ।
ತ್ತೆನೆ ನೆಯ್ದಿಲ್ಗೊಳನಲರ್ದ
ತ್ತೆನೆ ಕಣ್ಗಳ ಬಳಗಮಾಗಳಿಂದ್ರಂ ಬಂದಂ ॥ ೧೩೮

ಬೆಸನೇನೇಗೆಯ್ವುದೊ ನಿನ
ಗೊಸೆದೇನಂ ಕುಡುವುದೆಂದೊಡೆಂದಳ್ ಮಕ್ಕಳ್ ॥
ಒಸಗೆಯನೆನಗೀವುದು ನಿ
ನ್ನೆಸಕದ ಮಸಕಮನೆ ಪೋಲ್ವ ಮಗನಂ ಮಘವಾ ॥ ೧೩೯

ವ॥ ಎಂಬುದುಮಾಕೆಯ ಬಗೆದ ಬಗೆಯೊಳೊಡಂಬಡುವಂತೆ ಕುಲಗಿರಿಗಳ ಬಿಣ್ಪುಮಂ ಧರಾತಳದ ತಿಣ್ಪುಮನಾದಿತ್ಯನ ತೇಜದಗುಂತಿಯುಮಂ ಚಂದ್ರನ ಕಾಂತಿಯುಮಂ ಮದನನ

ವ್ರತವನ್ನು ಪಾಲಿಸಿದಳು. ೧೩೭. ಅವಳ ಶುಭ್ರವಾದ ಹಲ್ಲೇ ಮಿಂಚಿನ ಗೊಂಚಲು, ಧರಿಸಿರುವ ರೇಷ್ಮೆಯ ವಸ್ತ್ರವೇ ಗಂಗಾನದಿಯ ಬಿಳಿಯ ನೊರೆ, ಚಂಚಲವಾಗಿ ಅಲುಗಾಡುತ್ತಿರುವ ಮುತ್ತಿನ ಹಾರದ ಕಾಂತಿಪ್ರಸರವೂ ಅಂಗಕ್ಕೆ ಲೇಪಿಸಿಕೊಂಡಿರುವ ಗಟ್ಟಿಯಾದ ಶ್ರೀಗಂಧದ ರಸವೂ ಬೆಳುದಿಂಗಳೆಂಬ ಸಂದೇಹಕ್ಕೆ ಅವಕಾಶವಾಗಿರಲು ಆ ಕುಂತೀದೇವಿಯ ಬಿಳಿಯ ಬಣ್ಣದ ಅಲಂಕಾರವು ಕಣ್ಣಿಗೆ ಮನೋಹರವಾಗಿದ್ದಿತು. ವ॥ ಹಾಗೆ ತಾನು ಅಂಗೀಕರಿಸಿದ ಬಿಳಿಯ ಬಣ್ಣದ ಅಲಂಕಾರದಲ್ಲಿ ಯಶೋಲಕ್ಷ್ಮಿಯನ್ನೂ ವಾಕ್‌ಲಕ್ಷ್ಮಿಯಾದ ಸರಸ್ವತಿಯನ್ನೂ ಅನುಕರಿಸಿ ಮಂತ್ರಾಕ್ಷರಗಳನ್ನು ಸಕ್ರಮವಾಗಿ ಪಠಿಸಿ ಇಂದ್ರನನ್ನು ಬರಮಾಡಿದಳು. ೧೩೮. ಧ್ಯಾನಮಾಡಿದ ಮನಸ್ಸು ಹಿಂದೆ ಉಳಿಯಿತು ಎನ್ನುವ ಹಾಗೆಯೂ ಪ್ರಕಾಶಮಾನವಾದ ರತ್ನಕಾಂತಿಯು ಕಾಮನ ಬಿಲ್ಲಾಗಿ ನೆಗೆದು ತೋರಿತು ಎನ್ನುವ ಹಾಗೆಯೂ ಅವನ ಸಾವಿರ ಕಣ್ಣುಗಳ ಸಮೂಹವು ನೆಯ್ದಿಲೆಯ ಕೊಳವು ಅರಳಿತು ಎನ್ನುವ ಹಾಗೆಯೂ ಇರಲು ಆಗ ಇಂದ್ರನು ಬಂದನು. (ಅಂದರೆ ಇಂದ್ರನು ಕುಂತಿಯ ಮನೋವೇಗವನ್ನೂ ಮೀರಿ ರತ್ನಕಿರೀಟಗಳ ಕಾಂತಿಯಿಂದಲೂ ಅರಳಿಸಿಕೊಂಡಿರುವ ಸಾವಿರ ಕಣ್ಣುಗಳಿಂದಲೂ ಬಂದನೆಂಬುದು ಭಾವ). ೧೩೯. ಅಪ್ಪಣೆಯೇನು? ಏನು ಮಾಡಬೇಕು? ನಿನಗೆ ಪ್ರೀತಿಯಿಂದ ಏನನ್ನು ಕೊಡಲಿ? ಎಂದು ಇಂದ್ರನು ಕೇಳಲು ಕುಂತಿಯು ಹೇಳಿದಳು. ಇಂದ್ರದೇವಾ ಮಕ್ಕಳ ನಲಿವನ್ನೂ ನಿನ್ನ ಪರಾಕ್ರಮಕ್ಕೆ ತಕ್ಕ ಶೌರ್ಯವುಳ್ಳ ಮಗನನ್ನು ಕೊಡಬೇಕು ಎಂದಳು. ವ॥ ಅವಳು ಆಶೆಪಟ್ಟಂತೆಯೇ ಒಪ್ಪಿಕೊಂಡು ಕುಲಪರ್ವತಗಳ ಭಾರವನ್ನೂ ಭೂಮಿಯ ತೂಕವನ್ನೂ ಸೂರ್ಯನ ತೇಜಸ್ಸಿನ

ಸೌಭಾಗ್ಯಮುಮಂ ಕಲ್ಪತರುವಿನುದಾರಶಕ್ತಿಯುಮನೀಶ್ವರನ ಪ್ರಭುಶಕ್ತಿಯುಮಂ ಜವನ ಬಲ್ಲಾಳ್ತನಮುಮಂ ಸಿಂಹದ ಕಲಿತನಮುಮನವರವರ ದೆಸೆಗಳಿಂ ತೆಗೆದೊಂದುಮಾಡಿ ಕೊಂತಿಯ ದಿವ್ಯಗರ್ಭೋದರಮೆಂಬ ಶುಕ್ತಿಪುಟೋದರದೊಳ್ ತನ್ನ ದಿವ್ಯಾಂಶಮೆಂಬ ಮುಕ್ತಾಫಲೋದ ಬಿಂದುವನಿಂದ್ರಂ ಸಂಕ್ರಮಿಸಿ ನಿಜನಿವಾಸಕ್ಕೆ ಪೋದನನ್ನೆಗಮಿತ್ತ ಕೊಂತಿಯುಮಂದಿನ ಬೆಳಗಪ್ಪ ಜಾವದೊಳ್ ಸುಖನಿದ್ರೆಯಾಗಿ-

ಚಂ ॥ ಕುಡಿವುದನೇೞುಮಂಬುಧಿಯುಮಂ ಕುಲಶೈಲಕುಳಂಗಳಂ ತಗು<br>
ಳ್ದಡರ್ವುದನೊಂದು ಬಾಳ ರವಿ ತನ್ನಯ ಸೋಗಿಲ ಮೇಗೆ ರಾಗದಿಂ ।<br>
ಪೊಡರ್ವುದನಂತೆ ದಿಕ್ಕರಿಗಳಂಬುಜಪತ್ರ ಪುಟಾಂಬುವಿಂ ಬೆಡಂ<br>
ಗಡಸಿರೆ ಮಜ್ಜನಂಬುಗಿಪುದಂ ಸತಿ ಕಂಡೊಸೆದಳ್ ನಿಶಾಂತದೊಳ್ ॥೧೪೦

ವ॥ ಅಂತು ಕಂಡು ಮುನಿಕುಮಾರರೋದುವ ವೇದನಿನಾದದಿಂ ವಿಗತ ನಿದ್ರೆಯಾಗಿ ಪಾಂಡುರಾಜಂಗಮಲ್ಲಿಯ ಮುನಿಜನಂಗಳ್ಗಮಱಿಪಿದೊಡವರಾ ಕನಸುಗಳ್ಗೆ ಸಂತೋಷಂಬಟ್ಟು-

ಚಂ॥ ಕುಡಿವುದಱಿಂದಮಬ್ಧಿಗಳನಬ್ಧಿಪರೀತ ಮಹೀಶನಂ ತಗು<br>
ಳ್ದಡರ್ವುದಱಿಂ ಕುಲಾದ್ರಿ ಪರಿವೇಷ್ಟಿತನಂ ತರುಣಾರ್ಕನಬ್ಜಱಿಂ ।<br>
ಪೊಡರ್ವುದಱಿಂದಮೆಂದುಮುದಿತೋದಿತನಂ ದಿಗಿಭಂಗಳಿಂತುಮೊ<br>
ಳ್ಪೊಡರಿಸಿ ಮಜ್ಜನಂಬುಗಿಸೆ ಕಂಡುದಱಿಂ ಕಮಲಾಭಿರಾಮನಂ ॥ ೧೪೧

ಆಧಿಕ್ಯವನ್ನೂ ಚಂದ್ರನ ಕಾಂತಿಯನ್ನೂ ಮನ್ಮಥನ ಸೌಭಾಗ್ಯವನ್ನೂ ಕಲ್ಪವೃಕ್ಷದ ಔದಾರ್ಯವನ್ನೂ ಈಶ್ವರನ ಪ್ರಭುಶಕ್ತಿಯನ್ನೂ ಯಮನ ಶೌರ್ಯವನ್ನೂ ಸಿಂಹದ ಪರಾಕ್ರಮವನ್ನೂ ಅವು ಒಂದೊಂದರಿಂದಲೂ ತೆಗೆದು ಒಟ್ಟಿಗೆ ಶೇಖರಿಸಿ ಕುಂತಿಯ ಶ್ರೇಷ್ಠವಾದ ಗರ್ಭವೆಂಬ ಮುತ್ತಿನ ಚಿಪ್ಪಿನ ಒಳಗಡೆ ತನ್ನ ದಿವ್ಯಾಂಶವೆಂಬ ಮುತ್ತಿನ ಹನಿಯನ್ನು ಬೆರಸಿಟ್ಟು ಇಂದ್ರನು ತನ್ನ ವಾಸಸ್ಥಳಕ್ಕೆ ಹೋದನು. ಅಷ್ಟರಲ್ಲಿ ಈ ಕಡೆ ಕುಂತಿಯು ಮುಂದಿನ ಬೆಳಗಿನ ಜಾವದಲ್ಲಿ ಸುಖನಿದ್ರೆಯನ್ನು ಹೊಂದಿ ೧೪೦. ರಾತ್ರಿಯ ಕೊನೆಯ ಭಾಗದಲ್ಲಿ ತಾನು ಸಪ್ತಸಮುದ್ರಗಳನ್ನು ಕುಡಿಯುವುದನ್ನೂ ಸಪ್ತಕುಲಪರ್ವತಗಳನ್ನು ಕ್ರಮವಾಗಿ ಹತ್ತುವುದನ್ನೂ ಬಾಲಸೂರ್ಯನು ತನ್ನ ಮಡಲಿನಲ್ಲಿ ಸಂತೋಷವಾಗಿ ಹೊರಳಾಡುವುದನ್ನೂ ಹಾಗೆಯೇ ದಿಗ್ಗಜಗಳನ್ನೂ ಕಮಲಪತ್ರದ ಮೇಲಿನುವ ನೀರಿನಿಂದ ಸುಂದರವಾಗಿ ಕಾಣುತ್ತಿರುವ ಸರೋವರದಲ್ಲಿ ಸ್ನಾನಮಾಡಿಸುತ್ತಿರುವುದನ್ನೂ ಸ್ವಪ್ನದಲ್ಲಿ ಕಂಡು ಸಂತೋಷಪಟ್ಟಳು. ವ॥ ಹಾಗೆ ಕನಸನ್ನು ಕಂಡು ಋಷಿಕುಮಾರರು ಪಠಿಸುವ ವೇದಘೋಷದಿಂದ ಎಚ್ಚೆತ್ತು ಪಾಂಡುರಾಜನಿಗೂ ಅಲ್ಲಿದ್ದ ಋಷಿಸಮೂಹಕ್ಕೂ ಆ ಕನಸಿನ ವಿಷಯವನ್ನು ತಿಳಿಸಲು ಅವರು ಆ ಕನಸುಗಳಿಗೆ ಸಂತೋಷಪಟ್ಟು ಅದರ ಅರ್ಥವನ್ನು (ಸಂಕೇತ) ವಿವರಿಸಿದರು. ೧೪೧. ಸಪ್ತಸಮುದ್ರಗಳನ್ನು ಕುಡಿಯುವುದರಿಂದ ಸಮುದ್ರವು ಬಳಸಿದ ಭೂಮಿಗೆ ಒಡೆಯುನನ್ನೂ ಕುಲಪರ್ವತಗಳನ್ನು ಹತ್ತುವುದರಿಂದ ಕುಲಪರ್ವತಗಳಿಂದ ಸುತ್ತುವರಿಯಲ್ಪಟ್ಟ ರಾಜ್ಯವನ್ನುಳ್ಳವನನ್ನೂ ಬಾಲಸೂರ್ಯನು ಮಡಿಲಿನಲ್ಲಿ ಹೊರಳಾಡುವುದರಿಂದ ಏಕಪ್ರಕಾರದ ಅಭಿವೃದ್ಧಿಯನ್ನು ಪಡೆಯುವನನ್ನೂ ಎಂಟು

ವ॥ ಇಂತಪ್ಪ ಮಗನಂ ನೀನಮೋಘಂ ಪಡೆವೆಯೆಂದು ಮುನಿಜನಂಗಳ್ ಪೇೞ್ದ ಶುಭ ಸ್ವಪ್ನಫಲಂಗಳೊಡನೊಡನೆ ಗರ್ಭಚಿಹ್ನಂಗಳುಂ ತೋಱೆ ಪಗೆವರ ಪೆಂಡಿರ ಮೊಗಂಗಳುಮಾಕೆಯ ಕುಚಚೂಚುಕಂಗಳುಮೊಡನೊಡನೆ ಕಂದಿದುವಾಕೆಯ ವಳಿತ್ರಯಂಗಳುಂ ಪಗೆವರ ಶಕ್ತಿತ್ರಯಂಗಳುಮೊಡನೊಡನೆ ಕೆಟ್ಟುವಾಕೆಯ ಬಾಸೆಗಳುಂ ಪಗೆವರ ಬಾೞ್ವಾಸೆಗಳುಮೊಡನೊಡನಸಿಯುವಾದುವಾಕೆಯ ಮಂದಗಮನಮುಂ ಪಗೆವರ ಮನಂಗಳುಮೊಡನೊಡನಲಸಿಕೆಯ ಕೈಕೊಂಡುವಾಕೆಯ ನಡುವಿನ ಬಡತನಮುಂ ಪಗೆವರ ಸಿರಿಯುಮೊಡನೊಡನೆ ಕೆಟ್ಟುವಾ ಸಮಯದೊಳ್-

ಉ ॥ ಉರ್ಚಿದ ಬಾಳೊಳಾತ್ಮ ಮುಖಬಿಂಬಮನರ್ತ್ತಿಯೆ ನೋಡಲುಂ ಮನಂ ।
ಪೆರ್ಚೆ ಧನುರ್ಲತಾ ಗುಣ ನಿನಾದಮನಾಲಿಸಿ ಕೇಳಲುಂ ಮನಂ ॥
ಬೆರ್ಚದೆ ಸಿಂಹ ಪೋತಕಮನೋವಲುಮಾಕೆಯ ದೋಹಳಂ ಕರಂ
ಪೆರ್ಚಿದುದಾ ಗುಣಾರ್ಣವನ ಮುಂದಣ ಬೀರಮನಂದೆ ತೋರ್ಪವೋಲ್॥
೧೪೨

ವ॥ ಮತ್ತಮೇೞುಂ ಸಮುದ್ರಂಗಳ ನೀರನೊಂದುಮಾಡಿ ಮಿಾಯಲುಂ ವೇಳಾವನ ಲತಾಗೃಹೋದರ ಪುಳಿನಸ್ಥಳ ಪರಿಸರಪ್ರದೇಶದೊಳ್ ತೊೞಲಲುಮಟ್ಟಿಯಾಗೆ-

ದಿಗ್ಗಜಗಳನ್ನೂ ಶೋಭಾಯಮಾನವಾಗಿ ಸ್ನಾನ ಮಾಡಿಸುವುದನ್ನು ಕಂಡುದರಿಂದ ಕಮಲದಂತೆ ಆಕರ್ಷಕವಾದ ಸೌಂದರ್ಯವುಳ್ಳ ಮಗನನ್ನು ವ॥ ನೀನು ಪಡೆಯುತ್ತೀಯೆ ಎಂದು ಮುನಿಜನಗಳು ಹೇಳಿದ ಶುಭಸ್ವಪ್ನಫಲಗಳ ಜೊತೆಯಲ್ಲಿಯೇ ಗರ್ಭಚಿಹ್ನೆಗಳೂ ತೋರಲಾಗಿ ಶತ್ರುರಾಜರಸ್ತ್ರೀಯರ ಮುಖವೂ ಆಕೆಯ ಮೊಲೆಯ ತೊಟ್ಟುಗಳೂ ಒಟ್ಟಿಗೆ ಕಂದಿದುವು (ಕಪ್ಪಾದವು). ಆಕೆಯ ಹೊಟ್ಟೆಯ ಮೂರು ಮಡಿಪುಗಳೂ ಶತ್ರುರಾಜರ ಪ್ರಭುಶಕ್ತಿ, ಮಂತ್ರಶಕ್ತಿ ಮತ್ತು ಉತ್ಸಾಹಶಕ್ತಿ ಎಂಬ ಶಕ್ತಿತ್ರಯಗಳ ಜೊತೆ ಜೊತೆಯಲ್ಲಿಯೇ ನಾಶವಾದುವು. ಆಕೆಯ ಬಾಸೆಗಳೂ (ಹೊಕ್ಕುಳಿನಿಂದ ಎದೆಯವರೆಗಿರುವ ಕೂದಲಿನ ಸಾಲು) ಶತ್ರುಗಳ ಬಾಳುವ ಆಸೆಗಳೂ ಜೊತೆಜೊತೆಯಲ್ಲಿಯೇ ಕೃಶವಾದುವು. ಆಕೆಯ ಮಂದಗಮನವೂ ಶತ್ರುಗಳ ಮನಸ್ಸೂ ಜೊತೆ ಜೊತೆಯಲ್ಲಿಯೇ ಆಲಸ್ಯವನ್ನು ಹೊಂದಿದುವು. ಆಕೆಯ ನಡುವಿನ ಬಡತನವೂ (ಸಣ್ಣದಾಗಿರುವಿಕೆ-ಕೃಶತೆ) ಶತ್ರುಗಳ ಐಶ್ವರ್ಯವೂ ಜೊತೆಯಲ್ಲಿಯೇ ಕೆಟ್ಟವು; ಆ ಸಮಯದಲ್ಲಿ ೧೪೨. ಮುಂದಿನ ಗುಣಾರ್ಣವನ (ಅರ್ಜುನನ-ಅರಿಕೇಸರಿಯ) ವೀರ್ಯವನ್ನು ಆ ದಿನವೇ ತೋರ್ಪಡಿಸುವಂತೆ ಕುಂತಿಯ ಬಸಿರ ಬಯಕೆಯು ಒರೆಗಳೆದ ಕತ್ತಿಯಲ್ಲಿ ತನ್ನ ಮುಖಮಂಡಲವನ್ನು ನೋಡಿಕೊಳ್ಳುವುದಕ್ಕೂ ಉತ್ಸಾಹದಿಂದ ಬಿಲ್ಲಿನ ಟಂಕಾರಶಬ್ದವನ್ನು ಮನವಿಟ್ಟು ಕೇಳುವುದಕ್ಕೂ ಸ್ವಲ್ಪವೂ ಹೆದರದೆ ಸಿಂಹದ ಮರಿಯನ್ನು ಸಲಹುವುದಕ್ಕೂ ಆಶೆಪಟ್ಟು ವಿಶೇಷವಾಗಿ ಹೆಚ್ಚಿತು ವ॥ ಮತ್ತು ಸಮುದ್ರಗಳ ನೀರನ್ನು ಒಟ್ಟಿಗೆ ಸೇರಿಸಿ ಸ್ನಾನಮಾಡಲೂ ಸಮುದ್ರದ ಅಂಚಿನಲ್ಲಿರುವ ಕಾಡಿನಲ್ಲಿಯೂ ಬಳ್ಳಿವನೆಗಳ ಒಳಭಾಗದಲ್ಲಿಯೂ ಮರಳುದಿಣ್ಣೆಗಳ ಸುತ್ತಲೂ ಎಡೆಯಾಡಲೂ ಆಶೆಯಾಯಿತು.

ಕಂ॥ ಬಳೆದ ನಿತಂಬದೆ ಕಾಂಚೀ
ಕಳಾಪಮಂ ಕಟ್ಟಲಣಮೆ ನೆಱೆಯದಿದೆಂದ ।
ಗ್ಗಳಿಸಿ ಕುಳಿಕೆಗಳಿನೇಂ ಕ
ಣ್ಗೊಳಿಸಿದುದೋ ಸುಭಗೆಯಾದ ಸುದತಿಯ ಗರ್ಭಂ ॥ ೧೪೩

ವ॥ ಅಂತು ತಕ್ಕನೆ ತೀವಿದ ಮೆಯ್ಯೊಳಲರ್ದ ಸಂಪಗೆಯರಲಂತೆ ಬೆಳರ್ತ ಬಣ್ಣಂ ಗುಣಾರ್ಣವಂಗೆ ಮಾಡಿದ ಬಣ್ಣದಂತೆ ಸೊಗಯಿಸಿ ಬೆಳೆದು-

ಕಂ॥ ತುಡುಗೆಗಳೊಳ್ ಸರಿಗೆಯುಮಂ
ಕಡುವಿಣ್ಣಿತ್ತೆನಿಸಿ ನಡೆದುಮೋರಡಿಯನಣಂ ॥
ನಡೆಯಲುಮಾಱದೆ ಕೆಮ್ಮನೆ
ಬಿಡದಾರಯ್ವನಿತುಮಾಗೆ ಬಳೆದುದು ಗರ್ಭಂ ॥ ೧೪೪

ವ॥ ಅಂತಾ ಬಳೆದ ಗರ್ಭದೊಳ್ ಸಂಪೂರ್ಣಪ್ರಸವಸಮಯಂ ದೊರೆಕೊಳೆ ಗ್ರಹಂಗಳೆಲ್ಲಂ ತಂತಮ್ಮುಚ್ಚ ಸ್ಥಾನಂಗಳೊಳಿರ್ದು ಷಡ್ವರ್ಗ ಸಿದ್ಧಿಯನುಂಟುಮಾಡೆ ಶುಭಲಗ್ನೋದಯದೊಳ್-

ಕಂ॥ ಭರತಕುಲ ಗಗನ ದಿನಕರ
ನರಾತಿಕುಳಕಮಳಹಿಮಕರಂ ಶಿಶು ತೇಜೋ ।
ವಿರಚನೆಯುಂ ಕಾಂತಿಯುಮಾ
ವರಿಸಿರೆ ಗರ್ಭೋದಯಾದ್ರಿಯಿಂದುದಯಿಸಿದಂ ॥ ೧೪೫

೧೪೩. ತುಂಬಿ ಬೆಳೆದ ಪೃಷ್ಠಭಾಗದಿಂದ ನಡುಕಟ್ಟನ್ನು ಕಟ್ಟಲೂ ಸ್ವಲ್ಪವೂ ಸಾಧ್ಯವಿಲ್ಲವೆನ್ನುವ ರೀತಿಯಲ್ಲಿ ಆ ಸೌಭಾಗ್ಯಶಾಲಿನಿಯಾದ ಕುಂತಿಯ ಗರ್ಭವು ಬೆಳೆದು ವಿಶೇಷವಾದ ನೂಲಿನ ಕುಳಿಕೆಗಳಿಂದ ಅತಿ ಮನೋಹರವಾಯಿತು. ವ॥ ಹಾಗೆ ಪೂರ್ಣವಾಗಿ ತುಂಬಿಕೊಂಡ ಮೈಯಲ್ಲಿ ಅರಳಿದ ಸಂಪಗೆಯ ಹೂವಿನಂತೆ ಬಿಳುಪಾದ ಬಣ್ಣವು ಗುಣಾರ್ಣವನಿಗೆ ಮಾಡಿದ ಬಣ್ಣದಂತೆಯೇ ಸೊಗಸಾಗಿ ಬಳೆದು ೧೪೪. ಅವಳು ಧರಿಸಿರುವ ಆಭರಣಗಳಲ್ಲಿ ಒಂದು ಸರಿಗೆಯೂ ಬಹುಭಾರವುಳ್ಳದ್ದೆನಿಸಿ ಓಡಾಡಲು ಒಂದು ಹೆಜ್ಜೆಯನ್ನೂ ಇಡಲಾರದೆ ಸುಮ್ಮನೆ ಹಿಂದಿರುಗಿ ನೋಡುವಷ್ಟು ಗರ್ಭವು ಬೆಳೆಯಿತು. ವ॥ ಹಾಗೆ ಬೆಳೆದ ಗರ್ಭದಲ್ಲಿ ತುಂಬಿದ ಹೆರಿಗೆಯ ಕಾಲವು ಪ್ರಾಪ್ತವಾಗಲು ನವಗ್ರಹಗಳೆಲ್ಲ ತಮ್ಮ ತಮ್ಮ ಉಚ್ಚಸ್ಥಾನಗಳಲ್ಲಿದ್ದು ಲಗ್ನ, ಹೋರಾ, ದ್ರೇಕ್ಕಾಣ, ನವಾಂಶ, ದ್ವಾದಶಾಂಶ ಮತ್ತು ತ್ರಿಂಶಾಂಶಗಳೆಂಬ ಷಡ್ವರ್ಗಗಳ ಸಿದ್ಧಿಯನ್ನುಂಟುಮಾಡಿದ ಶುಭಲಗ್ನ ಪ್ರಾಪ್ತವಾದಾಗ ೧೪೫. ಭರತವಂಶವೆಂಬ ಆಕಾಶಕ್ಕೆ ಸೂರ್ಯನೂ ಶತ್ರುಗಳ ವಂಶವೆಂಬ ತಾವರೆಗೆ ಚಂದ್ರನೂ ಆದ ಶಿಶುವು ತೇಜಸ್ಸಿನ ರಚನೆಯೂ ಪ್ರಕಾಶವೂ ತುಂಬಿರಲು ಗರ್ಭವೆಂಬ

ಉದಯಿಸುವುದುಮಮೃತಾಂಶುವಿ
ನುದಯದೊಳಂಭೋಧಿ ವೇಲೆ ಭೋರ್ಗರೆವವೊಲೊ ।
ರ್ಮೊದಲೆಸೆದುವು ಘನಪಥದೊಳ್
ತ್ರಿದಶಕರಾಹತಿಯಿನೊಡನೆ ಸುರದುಂದುಭಿಗಳ್ ॥ ೧೪೬

ವ॥ ಅಂತು ಮೊಱಗುವ ಸುರದುಂದುಭಿಗಳುಂ ಪರಸುವ ಜಯಜಯ ಧ್ವನಿಗಳುಂ ಬೆರಸು ದೇವೇಂದ್ರಂ ಬರೆ ದೇವವಿಮಾನಂಗಳೆಲ್ಲಂ ಶತಶೃಂಗಪರ್ವತಮಮಂ ಮುಸುಕಿಕೊಂಡು-

ಕಂ ॥ ದೇವರ ಪಱೆಗಳ ರವದೊಳ್
ದೇವರ ಸುರಿವರಲ ಸರಿಯ ಬೆಳ್ಸರಿಯೊಳ್ ತ ॥
ದ್ದೇವ ವಿಮಾನಾವಳಿಯೊಳ್
ತೀವಿದುದೊರ್ಮೊದಲೆ ಗಗನದಿಂ ಧರೆ ಮಧ್ಯಂ ॥ ೧೪೭

ವ॥ ಅಂತು ಹಿರಣ್ಯಗರ್ಭಬ್ರಹ್ಮಂ ಮೊದಲಾಗೆ ವ್ಯಾಸ ಕಶ್ಯಪ ವಸಿಷ್ಠ ವಾಲ್ಮೀಕಿ ವಿಶ್ವಾಮಿತ್ರ ಜಮದಗ್ನಿ ಭಾರದ್ವಾಜಾಗಸ್ತ್ಯ ಪುಲಸ್ತ್ಯ ನಾರದ ಪ್ರಮುಖರಪ್ಪ ದಿವ್ಯ ಮುನಿಪತಿಗಳುಮೇಕಾದಶರುದ್ರರುಂ ದ್ವಾದಶಾದಿತ್ಯರುಮಷ್ಟವಸುಗಳುಮಶ್ವಿನೀ ದೇವರುಂ ಮೊದಲಾಗೆ ಮೂವತ್ತಮೂದೇವರುಂ ಇಂದ್ರಂಬೆರಸು ವೈಮಾನಿಕ ದೇವರುಂ ನೆರೆದು ಪಾಂಡುರಾಜನುಮಂ ಕುಂತಿಯುಮಂ ಪರಸಿ ಕೂಸಿಂಗೆ ಜನ್ಮೋತ್ಸವಮಂ ಮಾಡಿ-

ಕಂ ॥ ನೋಡುವನಾ ಬ್ರಹ್ಮಂ ಮುಂ
ಡಾಡುವನಮರೇಂದ್ರನಿಂದ್ರನಚ್ಚರಸೆಯರೆ ।
ಬ್ಬಾಡುವರೆಂದೊಡೆ ಪೊಗಟ
ಲ್ವೇಡ ಗುಣಾರ್ಣವನ ಜನ್ಮದಿನದ ಬೆಡಂಗಂ ॥ ೧೪೮

ಉದಯಪರ್ವತದಿಂದ ಉದಯಿಸಿದನು. ೧೪೬. ಹುಟ್ಟಲಾಗಿ ಚಂದ್ರೋದಯ ಸಮಯದಲ್ಲಿ ಸಮುದ್ರದಲೆಗಳು ಆರ್ಭಟಮಾಡುವ ಹಾಗೆ ಆಕಾಶಮಾರ್ಗದಲ್ಲಿ ದೇವತೆಗಳ ಕೈಚಪ್ಪಾಳೆಗಳೊಡನೆ ದೇವದುಂದುಭಿಗಳೂ (ದೇವತೆಗಳ ಮಂಗಳವಾದ್ಯ) ಕೂಡಲೇ ಒಟ್ಟಿಗೆ ಶಬ್ದಮಾಡಿದುವು ವ॥ ಹಾಗೆ ಭೋರ್ಗರೆಯುತ್ತಿರುವ ದೇವಮುಂದುಭಿಗಳೊಡನೆ ಹರಕೆಯ ಜಯಜಯಶಬ್ದಗಳನ್ನೂ ಸೇರಿಸಿಕೊಂಡು ದೇವೇಂದ್ರನು ಬರಲಾಗಿ ಇತರ ದೇವತೆಗಳ ವಿಮಾನಗಳೆಲ್ಲವೂ ಶತಶೃಂಗಪರ್ವತವನ್ನು ಮುತ್ತಿಕೊಂಡು ೧೪೭. ದೇವತೆಗಳ ವಾದ್ಯಧ್ವನಿಯಿಂದಲೂ ದೇವತೆಗಳು ಸುರಿಸುತ್ತಿರುವ ಪುಷ್ಪವೃಷ್ಟಿಪ್ರವಾಹದಿಂದಲೂ ಆ ದೇವತೆಗಳ ವಿಮಾನಪಂಕ್ತಿಗಳಿಂದಲೂ ಭೂಮ್ಯಾಕಾಶಗಳ ಮಧ್ಯಭಾಗವು ತುಂಬಿಹೋಯಿತು. ವ॥ ಹೀಗೆ ಹಿರಣ್ಯಗರ್ಭ ಬ್ರಹ್ಮನೇ ಮೊದಲಾಗಿ ವ್ಯಾಸ, ಕಶ್ಯಪ, ವಸಿಷ್ಠ, ವಾಲ್ಮೀಕಿ, ವಿಶ್ವಾಮಿತ್ರ, ಜಮದಗ್ನಿ, ಭಾರದ್ವಾಜ, ಅಗಸ್ತ್ಯ, ಪುಲಸ್ತ್ಯ, ನಾರದ ಪ್ರಮುಖರಾದ ದಿವ್ಯಋಷಿಶ್ರೇಷ್ಠರೂ ಏಕಾದಶರುದ್ರರೂ ದ್ವಾದಶಾದಿತ್ಯರೂ ಅಷ್ಟವಸುಗಳೂ ಅಶ್ವಿನೀದೇವತೆಗಳೂ ಮೊದಲಾದ ಮೂವತ್ತು ಮೂರು ದೇವರೂ ಇಂದ್ರನೊಡಗೂಡಿ ವೈಮಾನಿಕದೇವತೆಗಳೂ ಒಟ್ಟಾಗಿ ಸೇರಿ ಪಾಂಡುರಾಜನನ್ನೂ ಕುಂತಿಯನ್ನೂ ಹರಸಿ ಮಗುವಿಗೆ ಜನ್ಮೋತ್ಸವವನ್ನು ಮಾಡಿ ೧೪೮. ಆ ಬ್ರಹ್ಮನು (ತೃಪ್ತಿಯಾಗದೆ) ನೋಡುತ್ತಾನೆ;

**ವ॥ಅಂತು ಪಿರಿದುಮೊಸಗೆಯಂ ಮಾಡಿ ದೇವಸಭೆಯುಂ ಬ್ರಹ್ಮಸಭೆಯುಮೊಡನಿರ್ದು ನಾಮಕರಣೋತ್ಸವ ನಿಮಿತ್ತಂಗಳಪ್ಪ ನಾಮಂಗಳೊಳೀತಂ ಸಕಲ ಭುವನ ಸಂಸ್ತೂಯಮಾನಂ ಚಾಳುಕ್ಯವಂಶೋದ್ಭವಂ ಶ್ರೀಮದರಿಕೇಸರಿ ವಿಕ್ರಮಾರ್ಜುನನುದಾತ್ತನಾರಾಯಣಂ ಪ್ರಚಂಡ ಮಾರ್ತಾಂಡನುದಾರಮಹೇಶ್ವರಂ ಕದನತ್ರಿಣೇತ್ರಂ ಮನುಜ ಮಾಂಧಾತಂ ಪ್ರತಿಜ್ಞಾ ಗಾಂಗೇಯಂ ಶೌಚಾಂಜನೇಯನಕಳಂಕರಾಮಂ ಸಾಹಸಭೀಮಂ ಪ್ರತ್ಯಕ್ಷಜೀಮೂತವಾಹನಂ ಜಗದೇಕಮಲ್ಲಂ ಪರಸೈನ್ಯ ಭೈರವಂ ಅತಿರಥ ಮಥನಂ ವೈರಿಗಜಘಟಾವಿಘಟನಂ ವಿದ್ವಿಷ್ಟ ವಿದ್ರಾವಣನರಾತಿ ಕಾಳಾನಳಂ ರಿಪುಕುರಂಗಕಂಠೀರವಂ ವಿಕ್ರಾಂತತುಂಗಂ ಪರಾಕ್ರಮಧವಳಂ ಸಮರೈಕಮೇರು ಶರಣಾಗತ ಜಲನಿಧಿ ವಿನಯವಿಭೂಷಣಂ ಮನುನಿದಾನನನೂನದಾನಿ ಲೋಕೈಕ ಕಲ್ಪದ್ರುಮಂ**

ದೇವೇಂದ್ರನು ಮುದ್ದಾಡುತ್ತಾನೆ, ಅಪ್ಸರಸ್ತ್ರೀಯರು (ಮಗುವನ್ನು ನೋಡಿ ಸಂತೋಷದಿಂದ) ಎದ್ದು ಕುಣಿದಾಡುತ್ತಾರೆ ಎಂದ ಮೇಲೆ ಗುಣಾರ್ಣವನ ಜನ್ಮೋತ್ಸವದ ಸೊಗಸನ್ನು ಹೊಗಳಬೇಡವೇ? ವ॥ ಹಾಗೆ ವಿಶೇಷೋತ್ಸವವನ್ನು ನಡೆಸಿ ದೇವಸಭೆಯವರೂ ಬ್ರಹ್ಮಸಭೆಯವರೂ ಒಟ್ಟಿಗಿದ್ದು ಹೆಸರಿಡಲು ಕಾರಣವಾದುವುಗಳಲ್ಲಿ ಈತನು ಸಕಲಲೋಕಗಳಿಂದ ಹೊಗಳಲ್ಪಡುವ ಚಾಳುಕ್ಯವಂಶದಲ್ಲಿ ಹುಟ್ಟಿದ ಶ್ರೀಮದರಿಕೇಸರಿ, ವಿಕ್ರಮಾರ್ಜುನ, ಉದಾತ್ತನಾರಾಯಣ, ಪ್ರಚಂಡಮಾರ್ತಾಂಡ (ವಿಶೇಷತೇಜಸ್ಸನ್ನುಳ್ಳ ಸೂರ್ಯ) ಉದಾರಮಹೇಶ್ವರ (ಔದಾರ್ಯದಲ್ಲಿ ಶಿವನ ಹಾಗಿರುವವನು), ಕದನತ್ರಿಣೇತ್ರ (ಯುದ್ಧದಲ್ಲಿ ಮುಕ್ಕಣ್ಣನಂತಿರುವವನು), ಮನುಜಮಾಂಧಾತ (ಮನುಷ್ಯರಲ್ಲಿ ಮಾಂಧಾತ ಚಕ್ರವರ್ತಿಯಂತಿರುವವನು), ಪ್ರತಿಜ್ಞಾಗಾಂಗೇಯ (ಪ್ರತಿಜ್ಞೆ ಮಾಡುವುದರಲ್ಲಿ ಪಣ ತೊಟ್ಟ ಭೀಷ್ಮನಂತಿರುವವನು), ಶೌಚಾಂಜನೇಯ, (ಶುಚಿತ್ವದಲ್ಲಿ ಹನುಮಂತನಂತಿರುವವನು), ಅಕಳಂಕರಾಮ (ಕಲ್ಮಷ ರಹಿತನಾದ ರಾಮನಂತಿರುವವನು), ಸಾಹಸಭೀಮ (ಭಯಂಕರವಾದ ಸಾಹಸವುಳ್ಳವನು), ಜಗದೇಕಮಲ್ಲ (ಜಗತ್ತಿನಲ್ಲೆಲ್ಲ ಶೂರನಾಗಿರುವವನು), ಪ್ರತ್ಯಕ್ಷಜೀಮೂತವಾಹನ (ಎದುರಿಗೇ ಇರುವ ದಾನಶೀಲನೂ ವಿದ್ಯಾಧರ ಚಕ್ರವರ್ತಿಯೂ ಆದ ಜೀಮೂತವಾಹನ), ವಿದ್ವಿಷ್ಟವಿದ್ರಾವಣ (ಶತ್ರುಗಳನ್ನು ಓಡಿಹೋಗುವಂತೆ ಮಾಡುವವನು), ಮನುನಿದಾನ (ಮನುಚಕ್ರವರ್ತಿಯಂತೆ ಆದಿಪುರುಷನಾದವನು), ಪರಸೈನ್ಯಭೈರವ (ಶತ್ರುಸೈನ್ಯಕ್ಕೆ ಭಯಂಕರನಾಗಿರುವವನು), ಅತಿರಥಮಥನ (ಅತಿರಥರನ್ನು ಕಡೆಮುಹಾಕುವವನು), ವೈರಿಗಜಘಟಾವಿಘಟನ (ಶತ್ರುಗಳೆಂಬ ಆನೆಗಳ ಸಮೂಹವನ್ನು ಭೇದಿಸುವವನು), ಅರಾತಿಕಾಲಾನಲ (ಶತ್ರುಗಳಿಗೆ ಕಾಲಾಗ್ನಿಯಂತಿರು ವವನು), ರಿಪುಕುರಂಗಕಂಠೀರವ (ಶತ್ರುಗಳೆಂಬ ಜಿಂಕೆಗೆ ಸಿಂಹದಂತಿರುವವನು), ವಿಕ್ರಾಂತತುಂಗ (ಪರಾಕ್ರಮದ ಔನ್ನತ್ಯವನ್ನುಳ್ಳವನು) ಪರಾಕ್ರಮಧವಳ (ಶೌರ್ಯ ದಿಂದ ಬೆಳಗಿರುವ ಯಶಸ್ಸನ್ನುಳ್ಳವನು), ಸಮರೈಕಮೇರು (ಯುದ್ಧದಲ್ಲಿ ಒಂದು ಮೇರು ಪರ್ವತದಂತಿರುವವನು), ಶರಣಾಗತ ಜಲನಿಧಿ (ಆಶ್ರಿತರಿಗೆ ಸಮುದ್ರದೋಪಾದಿಯಲ್ಲಿರುವವನು), ವಿನಯವಿಭೂಷಣ (ನಮ್ರತೆಯನ್ನೇ

ಗಜಾಗಮ ರಾಜಪುತ್ರನಾರೂಢಸರ್ವಜ್ಞಂ ಗಂಧೇಭ ವಿದ್ಯಾಧರಂ ನೃಪ ಪರಮಾತ್ಮಂ ವಿಬುಧ ವನಜವನ ಕಳಹಂಸಂ ಸುರತಮಕರಧ್ವಜಂ ಸಹಜಮನೋಜಂ ಆಂಧ್ರೀಕುಚಕಳಶ ಪಲ್ಲವಂ ಕರ್ಣಾಟೀ ಕರ್ಣಪೂರಂ ಲಾಟೀಲಲಾಮಂ ಕೇರಳೀಕೇಳಿಕಂದರ್ಪಂ ಸಂಸಾರಸಾರೋದಯಂ ಮಱುವಕ್ಕದಲ್ಲಱಂ ನೋಡುತ್ತೆ ಗೆಲ್ವಂ ಪಾಣ್ಬರಂಕುಸಂ ಅಮ್ಮನ ಗಂಧವಾರಣಂ ಪಡೆಮೆಚ್ಚೆ ಗಂಡಂ ಪ್ರಿಯಗಳ್ಳಂ ಗುಣನಿಧಿ ಗುಣಾರ್ಣವಂ ಸಾಮಂತಚೂಡಾಮಣಿಯೆಂದಿಂತಿವು ಮೊದಲಾಗೆ ಪಲವುಮಷ್ಟೋತ್ತರಶತನಾಮಂಗಳನಿಟ್ಟು ವಿಶೇಷಾಶೀರ್ವಚನಂಗಳಿಂ ಪರಸಿ–

ಆಭರಣವನ್ನಾಗಿ ಉಳ್ಳವನು), ಅನೂನದಾನಿ (ಊನವಿಲ್ಲದೆ ದಾನಮಾಡುವವನು), ಲೋಕೈಕಕಲ್ಪದ್ರುಮ (ಸಮಸ್ತಲೋಕಕ್ಕೂ ಒಂದೇ ಕಲ್ಪವೃಕ್ಷದಂತಿರುವವನು) ಗಜಾಗಮರಾಜಪುತ್ರ (ಹಸ್ತಿಶಾಸ್ತ್ರದಲ್ಲಿ ರಾಜಪುತ್ರನಂತಿರುವವನು), ಆರೂಢಸರ್ವಜ್ಞ (ಅಶ್ವಾರೋಹಣ ವಿದ್ಯೆಯನ್ನು ಸಂಪೂರ್ಣವಾಗಿ ತಿಳಿದವನು), ಗಂಧೇಭವಿದ್ಯಾಧರ (ವಿದ್ಯಾಧರರಲ್ಲಿ ಮದ್ದಾನೆಯಂತಿರುವವನು), ನೃಪಪರಮಾತ್ಮ (ರಾಜರಲ್ಲಿ ಪರಮಾತ್ಮನಂತಿರುವವನು), ಸುರತಮಕರಧ್ವಜ (ಸಂಭೋಗದಲ್ಲಿ ಮನ್ಮಥನಂತಿರುವವನು), ಸಹಜಮನೋಜ (ಸ್ವಭಾವವಾದ ಮನ್ಮಥ), ವಿಬುಧವನಜವನ ಕಳಹಂಸ (ಪಂಡಿತರೆಂಬ ಕಮಲಸರೋವರದ ಕಲಹಂಸದಂತಿರುವವನು), ಆಂಧ್ರೀಕುಚಕಳಶ ಪಲ್ಲವ (ಆಂಧ್ರಸ್ತ್ರೀಯರ ಮೊಲೆಗಳೆಂಬ ಕಳಸಕ್ಕೆ ಚಿಗುರಿನಂತಿರುವವನು), ಕರ್ಣಾಟೀಕರ್ಣಪೂರ (ಕರ್ಣಾಟಸ್ತ್ರೀಯರ ಕಿವಿಯಾಭರಣದಂತಿರುವವನು), ಲಾಟೀಲಲಾಮ (ಲಾಟದೇಶದ ಸ್ತ್ರೀಯರ ಹಣೆಯಾಭರಣ), ಕೇರಳೀಕೇಳಿಕಂದರ್ಪ (ಕೇರಳದೇಶದ ಸ್ತ್ರೀಯರ ಕ್ರೀಡೆಯಲ್ಲಿ ಮನ್ಮಥನ ಹಾಗಿರುವವನು), ಸಂಸಾರಸರೋದಯ (ಸಂಸಾರರಹಸ್ಯವನ್ನು ತಿಳಿದು ಅಭಿವೃದ್ಧಿಯಾಗುತ್ತಿರುವವನು), ಮಱುವಕ್ಕದಲ್ಲಳಂ (ಶತ್ರುಸೈನ್ಯವನ್ನು ಭಯಪಡಿಸುವವನು) ನೋಡುತ್ತೆ ಗೆಲ್ವ (ದೃಷ್ಟಿಯಿಂದಲೇ ಗೆಲ್ಲುವವನು), ಪಾಣ್ಬರಂಕುಸ (ಜಾರರಿಗೆ ಅಂಕುಶಪ್ರಾಯನಾದವನು), ಅಮ್ಮನ ಗಂಧವಾರಣ (ತಂದೆಯ ಮದ್ದಾನೆ) ಪಡೆಮೆಚ್ಚೆಗಂಡ (ಸೈನ್ಯವು ಮೆಚ್ಚುವ ಹಾಗಿರುವ ಶೂರ), ಪ್ರಿಯಗಳ್ಳ (ಪ್ರಿಯಳನ್ನು ಅಪಹರಿಸಿದವನು), ಗುಣನಿಧಿ (ಗುಣಗಳ ಗಣಿ), ಗುಣಾರ್ಣವ (ಗುಣಸಮುದ್ರ) ಸಾಮಂತಚೂಡಾಮಣಿ (ಆಶ್ರಿತರಾಜರಲ್ಲಿ ತಲೆಯಾಭರಣದಂತಿರುವವನು), ಇವೇ

ಉ ॥ ಸಪ್ತ ಸಮುದ್ರ ಮುದ್ರಿತ ಧರಾತಳಮಂ ಬೆಸಕೆಯ್ಸು ಮಿಾಱಿದು
ದ್ದೃಪ್ತ ವಿರೋಧಿ ಸಾಧನಮನಾಹವದೊಳ್ ತಱಿದೊಟ್ಟು ವಿಶ್ವದಿ ।
ಗ್ವ್ಯಾಪ್ತ ಯಶೋವಿಳಾಸಿನಿಗೆ ವಲ್ಲಭನಾಗು ನಿರಂತರ ಸುಖ
ವ್ಯಾಪ್ತಿಗೆ ನೀನೆ ಮೊತ್ತಮೊದಲಾಗರಿಕೇಸರಿ ಲೋಕಮುಳ್ಳಿನಂ ॥

ಇದು ವಿವಿಧ ವಿಬುಧಜನವಿನುತ ಜಿನಪದಾಂಭೋಜ
ವರ ಪ್ರಸಾದೋತ್ಪನ್ನ ಪ್ರಸನ್ನ ಗಂಭೀರವಚನರಚನ
ಚತುರ ಕವಿತಾಗುಣಾರ್ಣವ ವಿರಚಿತಮಪ್ಪ
ವಿಕ್ರಮಾರ್ಜುನ ವಿಜಯದೊಳ್
ಪ್ರಥಮಾಶ್ವಾಸಂ

ಮೊದಲಾದ ನೂರೆಂಟು ಹೆಸರುಗಳನ್ನಿಟ್ಟು ವಿಶೇಷಾಶೀರ್ವಾದಗಳಿಂದ ಹರಸಿದರು. ೧೪೯. ಎಲೈ ಅರಿಕೇಸರಿಯೇ ನೀನು ಲೋಕವಿರುವವರೆಗೆ ಏಳು ಸಮುದ್ರಗಳಿಂದ ಮುದ್ರಿಸಲ್ಪಟ್ಟ (ಸುತ್ತುವರಿಯಲ್ಪಟ್ಟ) ಭೂಮಂಡಲವನ್ನೂ ನಿನ್ನ ಆಜ್ಞಾಧೀನವನ್ನಾಗಿ ಮಾಡು. ನಿನ್ನನ್ನು ಮೀರಿ ಗರ್ವಿಷ್ಠರಾದ ಶತ್ರುರಾಜಸೈನ್ಯವನ್ನು ಯುದ್ಧದಲ್ಲಿ ಕತ್ತರಿಸಿ ಹಾಕು. ಸಮಸ್ತದಿಕ್ಕುಗಳಲ್ಲಿಯೂ ವ್ಯಾಪಿಸಿಕೊಂಡಿರುವ ಯಶೋಲಕ್ಷ್ಮಿಗೆ ಪತಿಯಾಗಿ ನಿರಂತರವಾದ ಸುಖಭೋಗಗಳಿಗೆ ನೀನೆ ಮೊತ್ತಮೊದಲಿಗನಾಗು ಎಂದೂ ಹರಸಿದರು.

# ದ್ವಿತೀಯಾಶ್ವಾಸಂ

ಕಂ॥ ಶ್ರೀಗಗಲುರಮಂ ಕೀರ್ತಿ
ಶ್ರೀಗೆ ದಿಗಂತಮುಮನಹಿತರಂ ಗೆಲ್ವ ಜಯ ।
ಶ್ರೀಗೆ ಭುಜಶಿಖರಮಂ ನೆಲೆ
ಯಾಗಿಸಿ ನೀಂ ನೆಲಸು ನೇಸಱುಳ್ಳಿನಮರಿಗಾ ॥ ೧

ಎಂಬ ಪರಕೆಗಳ ರವದೊಳ್
ತುಂಬೆ ನಭೋವಿವರಮಮರ ಮುನಿಜನಮಮರೇಂ ।
ದ್ರಂ ಬೆರಸು ತಳರ್ದುದಾದುದ
ಱುಂಬಂ ಮನದೊಸಗೆ ಕುಂತಿಗಂ ತತ್ಪತಿಗಂ ॥ ೨

ವ॥ ಅಂತು ಗುಣಾರ್ಣವನ ಪುಟ್ಟಿದೊಸಗೆಯೊಳೊಸಗೆ ಮರುಳ್ಗೊಂಡು ಕುಂತಿಯುಂ ಪಾಂಡುರಾಜನುಮಿರೆ ಮಾದ್ರಿ ತನಗೆ ಮಕ್ಕಳಿಲ್ಲದುದರ್ಕೆ ವಿರಕ್ತೆಯಾಗಿ ಪೊಸೆದು ಬಿಸುಟ ರಕ್ತಾಶೋಕಪಲ್ಲವದಂತೆ ಕರಂ ಕೊರಗಿ ಚಿಂತಿಸುತಿರ್ದೊಡಾಕೆಯ ಬನ್ನನಾದ ಮೊಗದಂದಮಂ ಕಂಡು ಕುಂತಿ ಕರುಣಿಸಿ ಪುತ್ರೋತ್ಪತ್ತಿ ನಿಮಿತ್ತಂಗಳಪ್ಪ ಮಂತ್ರಾಕ್ಷರಂಗಳನುಪದೇಶಂಗೆಯ್ದೊಡಾಕೆಯುಂ ತದುಕ್ತಕ್ರಿಯೆಯೊಳಂ ನಿಯಮನಿಯಮಿತೆಯಾಗಿ–

ಕಂ॥ ಆಹ್ವಾನಂಗೆಯ್ದಶ್ವಿನಿ
ದೇವರನವರಿತ್ತ ವರದೊಳವರಂಶಮೆ ಸಂ ।
ಭಾವಿಸೆ ಗರ್ಭದೊಳಮಳರ
ನಾ ವನಜದಳಾಕ್ಷಿ ಪಡೆದು ಸಂತತಿವೆತ್ತಳ್ ॥ ೩

೧. ಎಲೌ ಅಂಗನೆ ನೀನು ನಿನ್ನ ಅಗಲವಾದ ಎದೆಯನ್ನು ಲಕ್ಷ್ಮಿಗೂ ದಿಗಂತವನ್ನು ಕೀರ್ತಿಲಕ್ಷ್ಮಿಗೂ ಭುಜಶಿಖರವನ್ನು ಶತ್ರುಗಳನ್ನು ಗೆಲುವ ವಿಜಯಲಕ್ಷ್ಮಿಗೂ ನಿವಾಸಸ್ಥಾನವನ್ನಾಗಿಸಿ ಸೂರ್ಯನಿರುವವರೆಗೂ ಸ್ಥಿರವಾಗಿ ನಿಲ್ಲು, ೨. ಎಂಬ ಹರಕೆಯ ಶಬ್ದವು ಆಕಾಶ ಪ್ರದೇಶವನ್ನೆಲ್ಲ ತುಂಬಲು ದೇವತೆಗಳೂ ಋಷಿಗಳೂ ದೇವೇಂದ್ರನೊಡನೆ ಹೊರಟುಹೋದರು. ಕುಂತಿಗೂ ಅವಳ ಪತಿಯಾದ ಪಾಂಡುರಾಜನಿಗೂ ವಿಶೇಷವಾಗಿ ಮನಸ್ಸಂತೋಷವಾಯಿತು. ವ॥ ಹಾಗೆ ಗುಣಾರ್ಣವನ ಜನ್ಮೋತ್ಸವದ ಸಂತೋಷದ ಸಂಭ್ರಮದಲ್ಲಿ ಸೇರಿಕೊಂಡು ಕುಂತಿಯೂ ಪಾಂಡುರಾಜನೂ ಇರಲಾಗಿ ಮಾದ್ರಿಯು ತನಗೆ ಮಕ್ಕಳಿಲ್ಲದುದಕ್ಕೆ ಉತ್ಸಾಹಶೂನ್ಯಳಾಗಿ ಹೊಸೆದು ಬಿಸಾಡಿದ ಅಶೋಕದ ಚಿಗುರಿನಂತೆ ವಿಶೇಷವಾಗಿ ದುಃಖಪಟ್ಟು ಚಿಂತಿಸುತ್ತಿರಲಾಗಿ ಆಕೆಯ ಬಾಡಿದ ಮುಖದ ರೀತಿಯನ್ನು ಕಂಡು ಕುಂತಿಯು ಕರುಣಿಸಿ ಪುತ್ರೋತ್ಪತ್ತಿ ಕಾರಣಗಳಾದ ಮಂತ್ರಗಳನ್ನು ಉಪದೇಶಮಾಡಲಾಗಿ ಅವಳು ಆ ಮಂತ್ರಕ್ಕೆ ವಿಧಿಸಿದ ರೀತಿಯಲ್ಲಿ ನಿಯಮದಿಂದ ೩. ಅಶ್ವಿನೀದೇವತೆಯರನ್ನು ಆಹ್ವಾನಿಸಿ ಬರಿಸಿ ಅವರು ಕೊಟ್ಟ ವರಗಳಿಂದ ಅವರಂಶವೇ ಗರ್ಭದಲ್ಲುಂಟಾಗಲು

ವ॥ ಆಗಳಾ ಪಾಂಡುರಾಜನಾ ಕೂಸುಗಳ್ಗೆ ಜಾತಕರ್ಮಮಂ ಮುನಿಗಳಿಂ ಬಳೆಯಿಸಿ ನಕುಲ ಸಹದೇವರೆಂದವರ್ಗಮಳ್ವೆಸರನಿಟ್ಟು ಪುತ್ರ ಸಂಪೂರ್ಣ ಮನೋರಥನಾಗಿರ್ಪಿನಮಯ್ವರ್ ಕೂಸುಗಳುಮೇಟ್ಗೆಪಾಡಿವದ ಚಂದ್ರನಂತುತ್ತರಾಭಿವೃದ್ಧಿಯೊಳ್ ಸೊಗಯಿಸಿ ಬಳೆಯೆ ಭರತ ಕುಲಕ್ಕೆ ವಿಶದ ಯಶೋಂಕುರಂಗಳುಂ ಬಂಧುಜನಕ್ಕೆ ಪುಣ್ಯಾಂಕುರಂಗಳುಂ ವಂದಜನಕ್ಕೆ ಕಲ್ಪ ವೃಕ್ಷಾಂಕುರಂಗಳುಮರಾತಿಜನಕ್ಕೆ ಕಾಳಕೂಟಾಂಕುರಂಗಳುಮಂ ಪೋಲ್ತು ಪಂಚಾಂಗ ಮಂತ್ರಂ ಸ್ವರೂಪದೊಳ್ ಮೂರ್ತಿಮಂತಂಗಳಾದಂತೆ ಸೊಗಯಿಸಿ ಬಳೆಯೆ-

ಕಂ ॥ ತೊಡರ್ದಮರ್ದ ಬಾಳವಣ್ಣದ
ತುಡುಗೆ ಪಳಂಚಲೆವ ಪಂಚ ಜಡೆ ನೊಸಲೊಳೊಡಂ ।
ಬಡುವರಳೆಲೆಯಿವಿಜೆಂ ಚೆ
ಲ್ವಿಡಿದಿರ್ದುದು ಬಾಳಕೇಳಿ ಧರ್ಮಾತ್ಮಜನಾ ॥ ೪

ವ॥ ಅಂತಾತಂ ಬಳೆಯೆವಳೆಯೆ-

ಕಂ ॥ ನಡೆವ ತಳರ್ನಡೆಯೊಳ್ ಪುಡಿ
ವುಡಿಯಾದುವು ಶಿಲೆಗಳೊಡೆದು ಕರಿಗಳ್ ಭೀಮಂ ।
ಪಿಡಿದಡರ್ದೊಡೆ ಬಾಯ್ಬಿಟ್ಟೆ
ಲ್ವಡಗಾದುವು ಮುದ್ದದಂತು ಸೊಗಯಿಸವೇಡಾ ॥ ೫

ಅವಳಿ ಮಕ್ಕಳನ್ನು ಪಡೆದು ಸಂತಾನವನ್ನು ಊರ್ಜಿತಗೊಳಿಸಿದಳು. ವ॥ ಆಗ ಆ ಪಾಂಡುರಾಜನು ಆ ಶಿಶುಗಳಿಗೆ ಋಷಿಗಳಿಂದ ಜಾತಕರ್ಮಗಳನ್ನು ಮಾಡಿಸಿ ನಕುಲಸಹದೇವರೆಂಬ ಜೋಡಿ ಹೆಸರನ್ನಿಟ್ಟು ಮಕ್ಕಳನ್ನು ಪಡೆಯುವ ಸಂಪೂರ್ಣತೃಪ್ತಿ ಹೊಂದಿರಲು ಆ ಅಯ್ದು ಮಕ್ಕಳೂ ಶುಕ್ಲಪಕ್ಷದ ಪ್ರಥಮೆಯ ವೃದ್ಧಿಚಂದ್ರನಂತೆ ಮೇಲೆಮೇಲೆ ಸೊಗಯಿಸಿ ಬಳೆಯುತ್ತಿದ್ದರು; ಅವರು ಭರತವಂಶಕ್ಕೆ ವಿಸ್ತಾರವಾದ ಯಶಸ್ಸಿನಮೊಳಕೆಗಳೂ ಬಂಧುಜನಗಳಿಗೆ ಪುಣ್ಯದ ಮೊಳಕೆಗಳೂ ಶತ್ರುಜನಕ್ಕೆ ಕಾಳಕೂಟವಿಷದ ಮೊಳಕೆಗಳೂ ಆಗಿ ಪಂಚಾಂಗ ಮಂತ್ರಗಳಾದ ಸ್ತುತಿ, ನೈವೇದ್ಯ, ಅಭಿಷೇಕ, ತರ್ಪಣ, ಸಮಾರಾಧನ ಎಂಬ ವೇದಕ್ಕೆ ಸಂಬಂಧಿಸಿದ ಮಂತ್ರಗಳು ತಮ್ಮ ರೂಪದಲ್ಲಿಯೇ ಪ್ರತ್ಯಕ್ಷವಾಗಿ ಮೂರ್ತಿಮತ್ತುಗಳಾದಂತೆ ಸೊಗಯಿಸಿ ತೋರಿದರು. ೪. ಮೈಯನ್ನು ಚೆನ್ನಾಗಿ ಸೇರಿಕೊಂಡ ಕತ್ತಿಯ ಬಣ್ಣದ (ನೀಲಿಬಣ್ಣದ) ಉಡುಪಿನಿಂದಲೂ ಬೆನ್ನಿಗೆ ಅಪ್ಪಳಿಸುತ್ತಿರುವ ಅಯ್ದು ಜಡೆಗಳಿಂದಲೂ ಒಪ್ಪಿ ತೋರುವ ಅರಳೆಲೆಯ ಆಕಾರದ ಪದಕಗಳಿಂದಲೂ ಧರ್ಮರಾಯನ ಬಾಲಕ್ರೀಡೆಯು ಸುಂದರವಾಗಿದ್ದಿತು. ವ॥ ಹಾಗೆ ಅವನು ಅಭಿವೃದ್ಧಿಯಾಗುತ್ತಿರಲು ೫. ಭೀಮನು ನಡೆಯುವ ತಪ್ಪುಹೆಜ್ಜೆಗಳಿಂದಲೇ ಕಲ್ಲುಗಳು ಒಡೆದು ಪುಡಿಯಾದುವು. ಆನೆಗಳನ್ನು ಹಿಡಿದು ಅವನು ಹತ್ತಲು ಅವು ಬಾಯಿಬಿಟ್ಟು (ಕೂಗಿಕೊಂಡು) ಜಜ್ಜಿ ಎಲುಬುಮಾಂಸಗಳಾದುವು. ಮುದ್ದುಮುದ್ದಾಗಿರುವ ಬಾಲ್ಯಸ್ಥಿತಿ ಹೀಗೆ

ಮುನಿವನ ಮನೆ ಬಿಸುಟುವು ಮುಂ
ಮುನಿಯರ ಸೋಂಕಿಲೊಳೆ ಬಳೆದ ಸಿಂಗಂಗಳ್ ಮು ।
ದ್ದಿನೊಳಡರ್ದ್ದ ಪಿಡಿವ ಗುರ್ದುವ
ಮನೆಗೆೞೆವನಿತರ್ಕಮಲಸಿ ಮರುದಾತ್ಮಜನಾ ॥ ೬

ವ॥ ಅಂತಾತಂ ಬಳೆಯೆ-

ಕಂ ॥ ಬೇಡದುದಂ ಬೇಡುವ ಪುಡಿ
ಯಾಡುವ ತೊದಳೊದವೆ ನುಡಿವ ನಗಿಸುವ ಬಾಲ ।
ಕ್ರೀಡೆ ಮುರಾರಿಯ ಬಾಲ
ಕ್ರೀಡೆಯನನುಕರಿಪುದಾದುದರಿಕೇಸರಿಯಾ ॥ ೭

ಪರೆದಡರ್ದ ಧೂಳಿ ಕಿಱುನಗೆ
ವೆರಸಿದ ತೊದಳೊದವೆ ನುಡಿವ ನುಡಿ ನಗೆಮೊಗದೊಳ್ ।
ಪರಕಲಿಸಿದ ಕಾಡಿಗೆವೆರ
ಸರಿಕೇಸರಿ ತಾಯ ಮನಮನಿಟ್ಟುಳಿಗೊಂಡಂ ॥ ೮

ಒಗೆತರ್ಪ ಪಲ್ಗಳಾ ನಗೆ
ಮೊಗದ ಸರಸ್ವತಿಯನಾಗಳರ್ಚಿಸಿದ ಪೊದ ।
ೞ್ದಗಲದ ಚೆಲ್ವಿನ ಮೊಲ್ಲೆಯ
ಮುಗುಳ್ಗಳನಿಳಿಸಿರೆ ಗುಣಾರ್ಣವಂ ಸೊಗಯಿಸಿದಂ ॥ ೯

ಕರಿಕಳಭಂಗಳ ಶಿಶು ಕೇ
ಸರಿಗಳ ಬೞಿಯಂ ತಗುಳ್ದು ಬಡವುಗಳನವಂ ॥
ತಿರಿಪಿ ಪಿಡಿಯುತ್ತುಮರಿಗಂ
ಪರಿದಾಡುವ ಸಮವಯಸ್ಕರೊಳ್ ಸೊಗಯಿಸಿದಂ ॥ ೧೦

ಸೊಗಯಿಸಬೇಡವೇ? ೬. ಭೀಮನು ಹುಟ್ಟುವುದಕ್ಕೆ ಮುಂಚೆ ಋಷಿಗಳ ಮಡಲಿನಲ್ಲಿಯೇ ಬಳೆದ ಸಿಂಹಗಳು ಈಗ ಭೀಮನು ಆಟಕ್ಕಾಗಿ ಅವುಗಳನ್ನು ಹತ್ತುವ, ಹಿಡಿಯುವ, ಗುದ್ದುವ, ಮನೆಯೊಳಕ್ಕೆ ಎಳೆದುಕೊಂಡುಹೋಗುವ ಹಿಂಸೆಗಳಷ್ಟಕ್ಕೂ ಆಯಾಸಗೊಂಡು ಆ ಋಷಿಗಳ ವನವನ್ನೇ ತೊರೆದುಹೋದವು. ೭. ಬೇಡದುದನ್ನು ಬೇಡುವ ಧೂಳಾಟವಾಡುವ ತೊದಲುಮಾತುಗಳನ್ನಾಡುವ ನಗುವನ್ನುಂಟುಮಾಡುವ ಅರಿಕೇಸರಿಯ ಬಾಲಕ್ರೀಡೆಯು ಶ್ರೀಕೃಷ್ಣನ ಬಾಲಕ್ರೀಡೆಗಳನ್ನು ಅನುಕರಿಸುವುದಾಯಿತು. ೮. ಕೆದರಿ ಮೆಯ್ಗಂಟಿಕೊಂಡಿರುವ ಧೂಳು, ಹುಸಿನಗೆಯಿಂದ ಕೂಡಿದ ತೊದಲುಮಾತು, ನಗುಮುಖದಲ್ಲಿ ಹರಡಿದ ಕಾಡಿಗೆಯೊಡನೆ ಅರಿಕೇಸರಿ ತಾಯಿಯಾದ ಕುಂತಿಯ ಮನಸ್ಸನ್ನು ಆಕರ್ಷಿಸಿದನು. ೯. (ಆಗತಾನೆ) ಹುಟ್ಟುತ್ತಿರುವ ಹಲ್ಲುಗಳು ಆ ನಗೆಮೊಗದ ವಾಗ್ದೇವಿಯನ್ನು ಪೂಜಿಸುವುದಕ್ಕಾಗಿ ಹರಡಿದ ಸುಂದರವಾದ ಮೊಲ್ಲೆಯ ಮೊಗ್ಗಿನ ರಾಶಿಯನ್ನು ತಿರಸ್ಕರಿಸುತ್ತಿರಲು ಗುಣಾರ್ಣವನು ಸೊಗಸಾಗಿ ಕಂಡನು. ೧೦. ಆನೆಯ ಮರಿಗಳನ್ನೂ ಸಿಂಹದ ಮರಿಗಳನ್ನೂ ಬೆನ್ನಟ್ಟಿ ಹೋಗಿ ಆ ಬಡಪ್ರಾಣಿಗಳನ್ನು ಹಿಂತಿರುಗಿಸಿ ಹಿಡಿಯುವ ಅರಿಕೇಸರಿ ಅಲ್ಲಿ ಓಡಾಡುವ

ದೆಯ್ವಬಲಂ ಸೊಗಸಿಕೆ ಮುಂ
ಗೆಯ್ವ ಬಲಂ ಬಾಳಕಾಲದೊಳ್ ತೊಡರ್ದ ಪೊಡ ।
ರ್ದಯ್ವರ ಬಾಲಕ್ರಿಯೆಯುಂ
ಮುಯ್ವಂ ನೋಡಿಸಿತು ತಾಯುಮಂ ತಂದೆಯುಮಂ ॥ ೧೧

ವ॥ ಅಂತಾ ಕೂಸುಗಳ್ ನಿಜ ಜನನೀಜನಕರ ಮನಮನಿಟ್ಟುಳಿಗೊಳಿಸಿಯುಮರಾತಿ ಜನಂಗಳ ಮನಮನಸುಂಗೊಳಿಸಿಯುಂ ಬಳೆಯೆ ಬಳೆಯೆ-

ಚಂ ॥ ಅಲರ್ದಿದಿರ್ಮುತ್ತೆ ಪೂತ ಪೊಸಮಲ್ಲಿಗೆ ಕಂಪನವುಂಕುತಿರ್ಪ ತೆಂ
ಬೆಲರುಮಿದಂ ಗೆಲಲ್ಬಗೆವ ತುಂಬಿಗಳ ಧ್ವನಿಯಿಂ ಕುಕಿಲ್ವ ಕೋ ।
ಗಿಲೆ ನನೆದೋಱೆ ಸುಚ್ಚೆಸೆವ ಮಾಮರನೊರ್ಮೊದಲಲ್ಲದುಣ್ಮುವು
ಯ್ಯಲ ಪೊಸಗಾವರಂ ಪುಗಿಲೊಳೇನೆಸೆದತ್ತೊ ಬಸಂತಮಾಸದೊಳ್ ॥ ೧೨

ವ॥ ಆಗಳಾ ಬಸಂತರಾಜನ ಬರವಿಂಗೆ ಗುಡಿಗಟ್ಟಿದಂತೆ ಬಳ್ವಳ ಬಳೆದ ಮಿಳಿರ್ವಶೋಕೆಯು ತಳಿರ್ಗಳುಮಾತನ ಬರವಿಂಗೆ ತೋರಣಂಗಟ್ಟಿದಂತೆ ಬಂದ ಮಾಮರಂಗಳನಡರ್ದು ತೊಡರ್ದೆಳಗೊಂಬುಗಳ್ವಿಡಿದು ಮರದಿಂ ಮರಕ್ಕೆ ದಾಂಗುಡಿವಿಡುವ ಮಾಧವೀಲತೆಗಳುಮಾತನ ಬರವಿಂಗೆ ನೆಱೆಯೆ ಸೊಗಯಿಸೆ ಕೆಯ್ಗೆಯ್ವ ನಲ್ಲಳಂತೆ ನನೆಯ

ಜೊತೆಗಾರರೊಡನೆ ಸೊಗಸಾಗಿ ಕಂಡಸು. ೧೧. ದೈವಬಲವೂ ಸೊಗಸಿಕೆಯೂ ಮುಂದಿನ ಕಾಲದಲ್ಲಿ ಅವರಿಗುಂಟಾಗಬಹುದಾದ ಸಾಮರ್ಥ್ಯವೂ ಬಾಲಕಾಲದಲ್ಲಿಯೇ ಸೂಚಿತವಾಗಿ ಪ್ರಕಾಶಿತವಾಗಿರುವ ಬಾಲಕ್ರೀಡೆಯು ತಾಯಿಯನ್ನೂ ತಂದೆಯನ್ನೂ ತಮ್ಮ ಭುಜವನ್ನು ತಾವೇ ನೋಡಿಕೊಳ್ಳುವ ಹಾಗೆ ಮಾಡಿತು (ಅಂದರೆ ತಾವೇ ಅದೃಷ್ಟಶಾಲಿಗಳೆಂದು ತಮ್ಮ ಭುಜವನ್ನು ತಾವೇ ನೋಡಿ ಸಂತೋಷಪಡುವ ಹಾಗೆ ಮಾಡಿತು). ವ॥ ಹಾಗೆ ಆ ಮಕ್ಕಳು ತಮ್ಮ ತಾಯಿತಂದೆಯರ ಮನಸ್ಸನ್ನು ಸೂರೆಗೊಳ್ಳುವಂತೆಯೂ ಶತ್ರುಜನರ ಮನಸ್ಸನ್ನು (ಪ್ರಾಣಾಪಹರಣ ಮಾಡುವಂತೆ) ಆಕ್ರಮಿಸುತ್ತಿರುವಂತೆಯೂ ಬಳೆದರು. ೧೨. ಅರಳಿದ ಅದಿರ್ಮುತ್ತೆಯ ಹೂವು, ಹೊಸದಾಗಿ ಬಿಟ್ಟಿರುವ ಮಲ್ಲಿಗೆಯ ಹೂವು, ಸುವಾಸನೆಯನ್ನು ಒತ್ತಿ ಹೊರಡಿಸುತ್ತಿರುವ ದಕ್ಷಿಣದ ಗಾಳಿ, ಇದನ್ನು ಗೆಲ್ಲಲು ಯೋಚಿಸುತ್ತಿರುವ ದುಂಬಿ, ಕೊರಳ ಶಬ್ದದಿಂದ ಕುಕಿಲ್ ಎಂಬ ಧ್ವನಿಯನ್ನು ಹೊರಡಿಸುತ್ತಿರುವ ಕೋಗಿಲೆ, ಹೂವಿನಿಂದ ಕೂಡಿ ನಯವಾಗಿರುವ ಮಾವಿನ ಮರ, ಒಂದೇ ಸಲವಲ್ಲದೆ ಬಾರಿಬಾರಿಗೂ ಹೆಚ್ಚುತ್ತಿರುವ ಉಯ್ಯಾಲೆಯ ಹೊಸನಾದ ಇವು ವಸಂತಋತುವಿನ ಪ್ರವೇಶದಲ್ಲಿ ಏನು ಸೊಗಸಾಗಿ ಕಂಡವೋ! ವ॥ ಆಗ ಆ ವಸಂತರಾಜನ ಬರವಿಗಾಗಿ ಬಾವುಟಗಳನ್ನು ಕಟ್ಟಿದಂತೆ ಕೋಮಲವಾಗಿ ಬೆಳೆದು ಅಲುಗಾಡುವ ಅಶೋಕವೃಕ್ಷಗಳೂ, ಆತನ ಬರವಿಗಾಗಿ ತೋರಣ ಕಟ್ಟಿದಂತೆ ಹಣ್ಣು ಕಾಯಿಗಳನ್ನು ಬಿಟ್ಟಿರುವ ಮಾವಿನ ಮರಗಳನ್ನು ಏರಿ ಅಡ್ಡಲಾಗಿ ಎಳೆಕೊಂಬೆಗಳನ್ನು ಹಿಡಿದು ಮರದಿಂದ ಮರಕ್ಕೆ ಕುಡಿಯನ್ನು ಚಾಚುವ ಮೊಲ್ಲೆಯ ಬಳ್ಳಿಗಳೂ ಆತನ ಬರುವಿಕೆಗೆ ಸಂಪೂರ್ಣ ಸುಂದರವಾಗಿ ಕಾಣುವುದಕ್ಕಾಗಿ ಅಲಂಕಾರವನ್ನು ಮಾಡಿಕೊಳ್ಳುವ ಪ್ರೇಯಸಿಯಂತೆ ಹೂವಿನ ದಪ್ಪ ಮೊಗ್ಗಿನ

**ಬಿರಿಮುಗುಳ್ಗಳ ತುಱುಗಲೊಳೆಱಗಿ ತುಱುಗಿದ ಕಲ್ಪಲತೆಗಳುಮಾತನ ಬರವಿಂಗೆ ಬದ್ದವಣಂ ಬಾಜಿಪಂತೆ ಭೋರ್ಗರೆದು ಮೊರೆವ ತುಂಬಿಗಳುಮಾತನ ಬರವಿಂಗೆ ರಂಗವಲಿಯಿಕ್ಕಿದಂತೆ ಪುಳಿನಸ್ಥಳಂಗಳೊಳುದಿರ್ದ ಕಟಿವೂಗಳುಮಾತನ ಬರವಿಂಗೆ ವನವನಿತೆ ಮೆಚ್ಚಿ ಸೇಸೆಯಿಕ್ಕಿಯೆ ಕೆಯ್ಗೆಯ್ದಂತೆ ನಿಱಿನಿಱಿಗೊಂಡು ಸೊಗಯಿಸುವ ನಿಱಿಗನ ನಿಱಿದಳಿರ ಗೊಂಚಲ್ಗಳುಮಾತನ ಮೇಲ್ವಾಯೆ ರಾಗಿಸಿ ರೋಮಾಂಕುರಮೊಗೆದಂತೊಗೆವ ಕಳಿಕಾಂಕುರಂಗಳುಮಾತನಂಗಸಂಗದೊಳ್ ಕಾಮರಸಮುಗುವಂತುಗುವ ಸೊನೆಯ ಸೋನೆಗಳುಮನೊಳಕೊಂಡು ತದಾಶ್ರಮದ ನಂದನವನಂಗಳ್ ಜನಂಗಳನನಂಗಂಗೆ ತೊೞ್ತುವೆಸಂಗೆಯ್ಸಿದುವು-**

**ಚಂ ॥ ಬಿರಯಿಯ ಮಿೞ್ತುವೆಂ ಮಿದಿದೊಡಲ್ಲದಣಂ ಮುಳಿಸಾಱದೆಂದು ಪ**
**ಲ್ಮೊರೆದಪನಿಲ್ಲಿ ಮನ್ಮಥನಿದಂ ಪುಗಲಿಂಗಡಿಮೊಂದು ಬೇಟಕಾ ।**
**ಱರನಿರದೂಱಿ ಸಾಱಿ ಜಡಿವಂತೆಸೆಗುಂ ಸಹಕಾರ ಕೋಮಳಾಂ**
**ಕುರ ಪರಿತುಷ್ಟ ಪಷ್ಟ ಪರಪುಷ್ಟ ಗಳಧ್ವನಿ ನಂದನಂಗಳೊಳ್ ॥ ೧೬**

**ಚಂ ॥ ಕವಿವ ಮದಾಳಿಯಿಂ ಮಸುಳನಾಗಿ ಪಯೋಜರಜಂಗಳೊಳ್ ಕವಿ**
**ಲ್ಗವಿಲನುಮಾಗಿ ಬಂದ ಮಲಯಾನಿಲನೂದೆ ತೆರಳ್ವ ಚೂತ ಪ ।**
**ಲ್ಲವದ ತೆರಳ್ಕೆ ತದ್ವನ ವಿಳಾಸಿನಿಯುಟ್ಟ ದುಕೂಲದೊಂದು ಪ**
**ಲ್ಲವದ ತೆರಳ್ಕೆಯಂತೆಸೆಯೆ ಕಣ್ಗೆಸೆದಿರ್ದುವು ನಂದನಾಳಿಗಳ್ ॥ ೧೭**

ಗುಂಪುಗಳಿಂದ ಕೂಡಿ ದಟ್ಟವಾಗಿರುವ ಕಲ್ಪಲತೆಗಳೂ ಆತನ ಬರವಿಗೆ ಮಂಗಳವಾದ್ಯವನ್ನು ಬಾಜಿಸುವಂತೆ ಭೋರ್ಗರೆದು ಶಬ್ದಮಾಡುವ ದುಂಬಿಗಳೂ ಆತನ ಬರವಿಗೆ ರಂಗೋಲೆಯನ್ನಿಕ್ಕಿದಂತೆ ಮರಳಿನ ಪ್ರದೇಶದಲ್ಲಿ ಉದುರಿದ್ದ ಕಳಿತಹೂವುಗಳೂ ಆತನ ಬರುವಿಕೆಗೆ ವರಲಕ್ಷ್ಮಿಯು ಸಂತೋಷಪಟ್ಟು ಸಂಪೂರ್ಣವಾಗಿ ಅಲಂಕಾರಮಾಡಿದಂತೆ ನಿರಿಗೆನಿರಿಗೆಯಾಗಿ ಸೊಗಯಿಸುವ ಸಿಹಿಮಾವಿನ ಸಾಲಾಗಿರುವ ಗೊಂಚಲುಗಳೂ ಆತನ ಮೇಲೆ ಪ್ರೀತಿಸಿ ನುಗ್ಗಲು ರೋಮಾಂಚನವಾದಂತೆ ಹುಟ್ಟಿರುರ ಚಿಗುರು ಮತ್ತು ಕಿರುಗೊಂಬೆಗಳ ಮೊಳಕೆಗಳೂ ಆತನ ಶರೀರಸ್ಪರ್ಶದಿಂದ ಕಾಮರಸವು ಜಿನುಗುವಂತೆ ಸ್ರವಿಸುವ ಮರದ ಹಾಲಿನ ಸೋನೆಗಳೂ ಇವುಗಳಿಂದ ಆ ಆಶ್ರಮದ ನಂದನವನಗಳು ಜನಗಳು ಮನ್ಮಥನಿಗೆ ಸೇವೆಗೆಯ್ಯುವ ಹಾಗೆ ಮಾಡಿದುವು. ೧೬. ನಾನು ವಿರಹಿಗಳ ಶತ್ರುವಾಗಿದ್ದೇನೆ. ಅವರನ್ನು ತುಳಿದಲ್ಲದೆ ನನ್ನ ಕೋಪವು ಸ್ವಲ್ಪವೂ ಆರುವುದಿಲ್ಲ ಎಂದು ಇಲ್ಲಿ ಮನ್ಮಥನು ಹಲ್ಗಿಡಿದು ಕೂಗುತ್ತಿದ್ದಾನೆ. ಇಲ್ಲಿಗೆ ವಿರಹಿಗಳು ಪ್ರವೇಶಿಸಲು ಅವಕಾಶಕೊಡಬೇಡಿ ಎಂದು ಒಂದೇ ಸಮನಾಗಿ ಬಲಾತ್ಕಾರದಿಂದ ಕೂಗಿ ಹೇಳಿ ಹೆದರಿಸುವಂತೆ ಮಾವಿನ ಮೃದುವಾದ ಚಿಗುರುಗಳನ್ನು ತೃಪ್ತಿಯಾಗುವಷ್ಟು ತಿಂದು ಕೊಬ್ಬಿ ಬೆಳೆದಿರುವ ಕೋಗಿಲೆಗಳ ಕೊರಳನಾದವು ಆ ತೋಟಗಳಲ್ಲಿ ಪ್ರಕಾಶಿಸುತ್ತದೆ. ೧೭. ಮುತ್ತಿಕೊಳ್ಳುತ್ತಿರುವ ಸೊಕ್ಕಿದ ದುಂಬಿಗಳಿಂದ ಮಾಸಿದವನಾಗಿಯೂ ತಾವರೆಯ ಪರಾಗಗಳಿಂದ ಮಾಸಲುಗೆಂಪುಬಣ್ಣದವನಾಗಿಯೂ ತಲೆದೋರಿದ ಮಲಯಮಾರುತನು ಬೀಸಿದುದರಿಂದ ಅಲ್ಲಾಡುವ ಮಾವಿನಮರದ ಚಿಗುರುಗಳ ಅಲುಗಾಟವು ಆ ವನಲಕ್ಷ್ಮಿಯು ಉಟ್ಟ ರೇಷ್ಮೆಯ ಸೀರೆಯ ಸೆರಗಿನ ಅಲುಗಾಟದಂತೆ

ಉ ॥ ಪೋಗದೆ ಪಾಡುತಿರ್ಪಳಿಯೆ ಬೃಂಹಿತಮಾಗಿರೆ ಚಂದ್ರಕಾಂತಿ ಕಾ
ಯ್ಪಾಗಿರೆ ಬೀಸುವೊಂದೆಲರೆ ಬೀಸುವುದಾಗಿರೆ ಕಾಯ್ಗಳಿಂದಮಿಂ ।
ಬಾಗಿರೆ ಸೋರ್ವ ಸೋನೆ ಮದಮಾಗಿರೆ ಮಾವಿನ ಬಂದ ಕೋಡೆ ಕೋ
ಡಾಗಿರೆ ಕೋಡುಗೊಂಡು ಪರಿದತ್ತು ವಸಂತಗಜಂ ವಿಯೋಗಿಯಂ ॥ ೧೫

ವ॥ ಅಂತು ಬಂದ ಬಸಂತದೊಳ್ ಮಾದ್ರಿ ತಾಂ ಗರ್ವವ್ಯಾಲೆಯುಂ ಕ್ರೀಡಾನುಶೀಲೆಯು ಮಪ್ಪುದಱಿಂ ವನಕ್ರೀಡಾನಿಮಿತ್ತದಿಂ ಪೋಗಿ-

ಚಂ ॥ ವನಕುಸುಮಂಗಳಂ ಬಗೆಗೆವಂದುವನಟ್ಟಿಯೊಳಾಯ್ದು ಕೊಯ್ದು ಮೆ
ಲ್ಲನೆ ವಕುಳಾಳವಾಳ ತಳದೊಳ್ ಸುರಿದಂಬುಜಸೂತ್ರದಿಂದೆ ಮ ।
ತ್ತನಿತಱಿಂ ಮುಗುಳ್ಸರಿಗೆ ತೋಳ್ವಳೆ ಕಂಕಣವಾರಮೆಂದು ಬೇ
ಟ್ಪನಿತನೆ ಮಾಡಿ ತೊಟ್ಟು ಕರಮೊಪ್ಪಿದಳಾಕೆ ಬಸಂತ ಕಾಂತೆವೋಲ್ ॥ ೧೬

ವ॥ ಅಂತು ತೊಟ್ಟ ಪೂದುಡುಗೆ ಮದನನ ತೊಟ್ಟ ಪೂಗಣೆಗೆಣೆಯಾಗಿರೆ-

ಚಂ ॥ ಮಿಳಿರ್ವ ಕುರುಳ್ಗಳೊಳ್ ತೊಡರ್ದು ದೇಸಿಯನಾವಗಮಾವ ಚೆನ್ನ ಪೂ
ಗಳನವನೊಯ್ಯನೋಸರಿಸುತುಂ ವದನಾಬ್ಜದ ಕಂಪನಾಳ್ದುಣಲ್ ।
ಬಳಸುವ ತುಂಬಿಯಂ ಪಿಡಿದ ನೆಯ್ದಿಲೊಳೊಯ್ಯನೆ ಸೋವುತುಂ ಬೆಡಂ
ಗೊಳಕೊಳೆ ಸೊರ್ಕಿದಂಗಜ ಮತಂಗಜದಂತಿರೆ ಬರ್ಪ ಮಾದ್ರಿಯಂ ॥೧೭

ಪ್ರಕಾಶಿಸಲು ಆ ತೋಟದ ಸಾಲುಗಳು ಕಣ್ಣಿಗೆ ಮನೋಹರವಾಗಿದ್ದುವು. ೧೫. ಆ ವನವನ್ನು ಬಿಟ್ಟು ಹೋಗದೆ ಅಲ್ಲಿಯೇ ಹಾರಾಡುತ್ತಿರುವ ದುಂಬಿಯೇ ಆನೆಯ ಘೀಂಕಾರವಾಗಿರಲು, ಬೆಳದಿಂಗಳೇ ಅದರ ಕೋಪವಾಗಿರಲು, ಬೀಸುವ ಗಾಳಿಯೇ ಬೀಸಣಿಗೆಯಾಗಿರಲು, ಕಾಯಿಗಳಿಂದ ಸೊಗಸಾಗಿ ಸೋರುತ್ತಿರುವ ಸೋನೆಯೇ ಮದೋದಕವಾಗಿರಲು ಮಾವಿನ ಮರದಲ್ಲಿ ಹುಟ್ಟಿಬಂದ ಕೊಂಬೆಗಳೇ ಅದರ ಕೊಂಬಾಗಿರಲು ವಸಂತಕಾಲವೆಂಬ ಆನೆಯು ವಿರಹಿಗಳನ್ನು ತನ್ನ ಕೋಡಿನಿಂದ ತಿವಿದು ಹರಿಯಿತು, ಓಡಿತು. ವ॥ ಹಾಗೆ ಬಂದ ವಸಂತಋತುವಿನಲ್ಲಿ ಮಾದ್ರಿಯು ತಾನು ಅಹಂಕಾರದಿಂದ ಕೆಟ್ಟವಳೂ ಆಟವಾಡುವುದರಲ್ಲಿ ಆಸಕ್ತಳಾದವಳೂ ಆಗಿದ್ದುದರಿಂದ ಕಾಡಿನಲ್ಲಿ ಆಟವಾಡುವುದಕ್ಕಾಗಿ ಹೋಗಿ ೧೬. ತನ್ನ ಮನಸ್ಸಿಗೆ ಒಪ್ಪುವಂತಹ ಕಾಡಿನ ಹೂವುಗಳನ್ನು ಪ್ರೀತಿಯಿಂದ ಆರಿಸಿ ಕೊಯ್ದು ಮೃದುವಾಗಿ ಬಕುಳವೃಕ್ಷದ ಪಾತಿಯಪ್ರದೇಶದಲ್ಲಿ ಸುರಿದು ತಾವರೆಯ ಸೂತ್ರದಿಂದಲೂ ಮತ್ತಿತರ ಹೂಗಳಿಂದಲೂ ರಚಿಸಿದ ಮೊಗ್ಗಿನ ಸರಿಗೆ, ತೋಳಬಳೆ, ಕೈಬಳೆ, ಹಾರ ಮೊದಲಾದವುಗಳನ್ನು ತೃಪ್ತಿಯಾಗುವಷ್ಟು ಧರಿಸಿ ಅಲಂಕಾರಮಾಡಿಕೊಂಡು ಮಾದ್ರಿಯು ವಸಂತಲಕ್ಷ್ಮಿಯಂತೆ ವಿಶೇಷವಾಗಿ ಒಪ್ಪಿದಳು. ವ॥ ಹಾಗೆ ಧರಿಸಿದ ಪುಷ್ಪಾಭರಣವೇ ಮನ್ಮಥನು ಪ್ರಯೋಗಿಸಿದ ಪುಷ್ಪಬಾಣಕ್ಕೆ ಸಮಾನವಾಗಿರಲು ೧೭. ಅಲುಗಾಡುತ್ತಿರುವ ಮುಂಗುರುಳುಗಳಲ್ಲಿ ಸಿಕ್ಕಿಕೊಂಡು ವಿಶೇಷ ಸೌಂದರ್ಯವನ್ನುಂಟುಮಾಡುತ್ತಿರುವ ಸೊಗಸಾದ ಹೂವುಗಳನ್ನು ನಿಧಾನವಾಗಿ ಒಂದು ಪಕ್ಕಕ್ಕೆ ಓಸರಿಸುತ್ತ ಮುಖಕಮಲದ ಸುಗಂಧವನ್ನು ಪಡೆದು ಆಸ್ವಾದಿಸುವುದಕ್ಕೋಸ್ಕರ

ವ|| ತಾಪಸಾಶ್ರಮದಿಂ ಪೊಱಮಟ್ಟಂತೆ ಬನಮಂ ತೊಱಲ್ವ ಪಾಂಡುರಾಜಂ ಕಂಡು-

ಚಂ || ಸೊಗಯಿಸೆ ತೊಟ್ಟ ಪೂದುಡುಗೆ ಮೆಲ್ಲೆರ್ದೆಯೊಳ್ ತಡಮಾಡೆ ಗಾಡಿ ದಿ
ಟ್ಟಿಗಳೊಳನಂಗರಾಗರಸಮುಣ್ಮುವಿನಂ ನಡೆ ನೋಡಿ ನೋಡಿ ತೊ ।
ಟ್ಟಗೆ ಕೊಳೆ ಮೇಲೆ ಪಾಯ್ವವಳನಪ್ಪಿದನಾ ವಿಭು ತನ್ನ ಶಾಪಮಂ
ಬಗೆಯದೆ ಮಿೞ್ತುದೇವತೆಯನಟ್ಟಿಱುಕೆಯಿನಪ್ಪುವಂತೆವೋಲ್ || ೧೮

ವ|| ಅಂತಪ್ಪುವುದುಂ ವಿಷಮ ವಿಷವಲ್ಲಿಯನಪ್ಪಿದಂತೆ ತಳ್ತ ನಲ್ಲಳ ಮೃದು ಮೃಣಾಳ ಕೋಮಳ ಬಾಹುಪಾಶಂಗಳೆ ಯಮಪಾಶಂಗಳಾಗೆ-

ಚಂ|| ಬಿಗಿದಮರ್ದಿರ್ದ ತೋಳ್ ಸಡಿಲೆ ಜೋಲೆ ಮೊಗಂ ಮೊಗದಿಂದಮೊಯ್ಯಗೊ
ಯ್ಯಗೆ ನಗೆಗಣ್ಗಳಾಲಿ ಮಗುಳ್ದಂತಿರೆ ಮುಚ್ಚಿರೆ ಸುಯ್ಯಡಂಗೆ ಮೆ ।
ಲ್ಲಗೆ ಮಱಸೊಂದಿದಂದದೊಳೆ ಜೋಲ್ದ ನಿಜೇಶನನಾ ಲತಾಂಗಿ ತೊ
ಟ್ಟಗೆ ಕೊಳೆ ನೋಡಿ ಕೆಟ್ಟೆನಿನಿಯಂ ಮಱಸೊಂದಿದನೋ ಬೞಲ್ದನೋ || ೧೯

ವ|| ಎಂದು ಪಱಪಟ್ಟ ಸುಯ್ಯುಮಂ ಕೋಡುವ ಮೆಯ್ಯುಮಂ ಕಂಡು ಪರಲೋಕ ಪ್ರಾಪ್ತನಾದುದನಱಿತು-

ಮುತ್ತಿಕೊಳ್ಳುತ್ತಿರುವ ದುಂಬಿಯನ್ನು ಕಯ್ಯಲ್ಲಿ ಹಿಡಿದಿದ್ದ ನೆಯ್ದಿಲಪುಷ್ಪದಿಂದ ಮೆಲ್ಲಗೆ ಓಡಿಸುತ್ತ ಬೆಡಂಗಿನಿಂದ ಕೂಡಿ ಸೊಕ್ಕಿದ ಮನ್ಮಥನ ಮದ್ದಾನೆಯಂತೆ ಬರುತ್ತಿದ್ದ ಮಾದ್ರಿಯನ್ನು ವ|| ತಾಪಸಾಶ್ರಮದಿಂದ ಹೊರಗೆಹೊರಟು ಹಾಗೆಯೇ ಕಾಡಿನಲ್ಲಿ ಅಡ್ಡಾಡುತ್ತಿದ್ದ ಪಾಂಡುರಾಜನು ನೋಡಿ ೧೮. ಅವಳು ಧರಿಸಿದ ಪುಷ್ಪಾಲಂಕಾರವು ತನ್ನ ಮೃದುವಾದ ಹೃದಯದಲ್ಲಿ ಸೊಗಯಿಸಲು ಅವಳ ಸೌಂದರ್ಯವು ಅವನ ದೃಷ್ಟಿಯಲ್ಲಿ ಕಾಮರಸವುಕ್ಕುವಷ್ಟು ನಿಧಾನವಾಗಿ ಆಡುತ್ತಿರಲು ಅವಳನ್ನು ತೃಪ್ತಿಯಾಗುವಷ್ಟು ನೋಡಿ ಥಟಕ್ಕನೆ ಹಿಡಿಯಲು ಮೇಲೆ ನುಗ್ಗಿ ಅವಳನ್ನು ರಾಜನಾದ ಪಾಂಡುವು ತನಗಿದ್ದ ಶಾಪವನ್ನು ಯೋಚಿಸದೆ ಪ್ರೀತ್ಯಾತಿಶಯದಿಂದ ಮೃತ್ಯುದೇವತೆಯನ್ನಪ್ಪುವಂತೆ ಆಲಿಂಗನ ಮಾಡಿಕೊಂಡನು. ವ|| ಹಾಗೆ ವಿಷದ ಬಳ್ಳಿಯನ್ನು ಆಲಿಂಗನ ಮಾಡುವಂತೆ ಅವಳನ್ನು ಅಪ್ಪಿಕೊಳ್ಳಲು ಆ ಪ್ರಿಯಳು ಆಲಿಂಗಿಸಿದ ತಾವರೆಯದಂಟಿನಂತೆ ಮೃದುವೂ ಕೋಮಳವೂ ಆದ ಅವಳ ಬಾಹುಪಾಶವೇ ಯಮಪಾಶವಾಗಲು-೧೯. ಬಿಗಿಯಾಗಿ ಅಪ್ಪಿಕೊಂಡಿದ್ದ ತೋಳು ಸಡಿಲವಾಗಲು ಮುಖವು ಜೋತುಬೀಳಲು ಮುಖದಲ್ಲಿದ್ದ ನಗೆಗಣ್ಣಿನ ಪಾಪೆಗಳು ಕಾಂತಿಹೀನವಾಗಿ ಮುಚ್ಚಿರಲು ಉಸಿರಾಟವು ನಿಂತುಹೋಗಲು ನಿಧಾನವಾಗಿ ಪ್ರಜ್ಞೆತಪ್ಪಿದವನಂತೆ ಜೋತು ಬಿದ್ದ ತನ್ನ ಪತಿಯನ್ನು ಆ ಮಾದ್ರಿಯು ದಿಟ್ಟಿಸಿನೋಡಿ, ಕೆಟ್ಟೆನು; ಪತಿಯು ಮೂರ್ಛೆಹೋದನೋ ಇಲ್ಲವೇ ಬಳಲಿದ್ದಾನೋ ವ|| ಎಂದು (ಹರಿದುಹೋದ) ನಿಂತುಹೋದ ಉಸಿರನ್ನೂ ತಣ್ಣಗಾದ ಮೆಯ್ಯನ್ನೂ ನೋಡಿ ಪತಿ

ಕಂ ॥ ತಾಪಸನ ಶಾಪಮೆಂಬುದು
ಪಾಪದ ರೂಪಱಿತುಮಱಿಯದಂತೇಕೆ ಮನಂ ॥
ಗಾಪಟಿದು ಬಂದು ಮುಟ್ಟಿದೆ
ಯೋಪನೆ ನೀನೆನ್ನ ಪಾಪಕರ್ಮಿಯ ಮೆಯ್ಯಂ ॥ ೨೦

ನೀನ್ನಿನ್ನ ಸಾವನದನೆನ
ಸುನ್ನೆನೆಯದೆ ನೆರೆವೆನೆಂಬ ಬಗೆಯೊಳ್ ಬಂದೈ ।
ನಿನ್ನೊಡನೆ ವಂದು ದಿವದೊಳ್
ನಿನ್ನ ಮನೋರಥಮುಸರಸ ನೆಱಪದೆ ಮಾಣೆಂ ॥ ೨೧

ಉನ್ನತ ಧವಳಚ್ಛತ್ರ
ಚ್ಛನ್ನ ವಿಯತ್ತಳನನಿಂದುಕುಳತಿಳಕನನಿಂ ।
ತನ್ನೆಯದಿಂದೀ ಪಟುವಿನೊ
ಳೆನ್ನರಸನನಿಂತು ಬದಿಯೆ ತಂದಿಕ್ಕುವುದೇ ॥ ೨೨

ವ॥ ಎಂದು ವನದೇವತೆಗಳ್ಗೆಲ್ಲಂ ಕರುಣಮಾಗೆ ಪಳಯಿಸುವ ಮಾದ್ರಿಯ ಸರಮಂ ಕುಂತಿ ಕೇಳ್ದು ಭೋಂಕನೆರ್ದೆದೞ್ದಿದು-

ಕಂ॥ ಆ ದೆಸೆಯೊಳ್ ಭೂಭುಜನೋ
ಆ ದೆಸೆಯೊಳ್ ಮಾದ್ರಿ ಬೇವ ಕರುಣಾರವಮಂ ।
ತಾ ದೆಸೆಯೊಳ್ ಭೂಪತಿಗೇ
ನಾದುದೊ ಪೇೞ್ ಬದಿಯೆ ಕೆಟ್ಟೆನಟಿದೆನೆನುತ್ತುಂ ॥ ೨೩

ಸತ್ತನೆಂದು ತಿಳಿದಳು. ೨೦. ಪ್ರಿಯನಾದ ಪಾಂಡುರಾಜನೇ ಋಷಿಯ ಶಾಪವು ಪಾಪದ ರೂಪವನ್ನು ತಾಳಿರುವುದು; ತಿಳಿದೂ ತಿಳಿಯದೆ ನಿನ್ನ ಮನಸ್ಸಿನ ಸಂಯಮವನ್ನು ನಾಶಪಡಿಸಿಕೊಂಡು ಬಂದು ಪಾಪಿಷ್ಠಳಾದ ನನ್ನ ಶರೀರವನ್ನು ಏಕೆ ಮುಟ್ಟಿದೆ? ೨೧. ನೀನು ನಿನ್ನ ಸಾವನ್ನು ಸ್ವಲ್ಪವೂ ಯೋಚಿಸದೆ ನಿನ್ನೊಡನೆ ಕೂಡುತ್ತೇನೆ ಎಂದು ಬಂದಿದ್ದೀಯೇ. (ಹಾಗೆಯೇ) ನಾನೂ ನಿನ್ನೊಡನೆ ಬಂದು ಸ್ವರ್ಗದಲ್ಲಿ ನಿನ್ನಿಷ್ಟಾರ್ಥವನ್ನು ಸಲ್ಲಿಸದೆ ಬಿಡುವುದಿಲ್ಲ ೨೨. ಅಯ್ಯೋ ವಿಧಿಯೇ, ಎತ್ತರವಾದ (ರಾಜಸೂಚಕವಾದ) ತನ್ನ ಶ್ವೇತಚ್ಛತ್ರದಿಂದ ಆಕಾಶಪ್ರದೇಶವನ್ನೆಲ್ಲ ಮುಚ್ಚಿದವನೂ ಚಂದ್ರವಂಶಶ್ರೇಷ್ಠನಾದವನೂ ಆದ ಪತಿಯನ್ನು ಹೀಗೆ ಅನ್ಯಾಯದಿಂದ ಕಾಡಿನಲ್ಲಿ ತಂದೆಸೆಯುವುದೇ? ವ॥ ಎಂದು ವನದೇವತೆಗಳಿಗೆಲ್ಲ ಮರುಕ ಹುಟ್ಟುವ ಹಾಗೆ ಅಳುತ್ತಿದ್ದ ಮಾದ್ರಿಯ ಆ ಧ್ವನಿಯನ್ನು ಕುಂತಿ ಕೇಳಿ ಘಟ್ಟನೆ ಎದೆಬಿರಿದು - ೨೩. ಯಾವ ದಿಕ್ಕಿನಲ್ಲಿ ರಾಜನು ಹೋದನು ಆ ದಿಕ್ಕಿನಿಂದಲೇ ಮಾದ್ರಿಯ ಕರುಣಾಮಯವಾದ ಧ್ವನಿಯೂ (ಕೇಳಿಬರುತ್ತಿದೆ) ಅಯ್ಯೋ ದೈವವೇ ನನ್ನ ರಾಜನಿಗೆ

ಬೞಿಯನೆ ಮಕ್ಕಳ್ ಭೋರ್ಗರೆ
ದೞುತುಂ ಪೆಱ ಪೆಱಗನಂತೆ ಪರಿತರೆ ಮುಡಿ ಬ ।
ಟ್ಟೆಱಲೆ ನಡುನಡುಗೆ ಕಣ್ಣೀರ್
ಗಱಗಱನೊರ್ಮೊದಲೆ ಸುರಿಯೆ ಪರಿತಂದಾಗಳ್ ॥ ೨೪

ವ॥ ಅಂತು ತನ್ನ ನಲ್ಲನ ಕಳೇವರಮಂ ತೞ್ಕೈಸಿಕೊಂಡು ತನ್ನ ಸಾವಂ ಪರಿಚ್ಛೇದಿಸಿ ಪಲ್ಲಂ ಸುಲಿಯುತ್ತುಮಿರ್ದ ಮಾದ್ರಿಯಂ ಕಂಡು ಕುಂತಿ ನೆಲದೊಳ್ ಮಯ್ಯಸೀಡಾಡಿ ನಾಡಾಡಿಯಲ್ಲದೆ ಪಳಯಿಸಿ-

ಕಂ ॥ ಅಡವಿಯೊಳೆನ್ನುಮನೆನ್ನೀ
ನಡಪಿದ ಶಿಶುಗಳುಮನಿರಿಸಿ ನೀಂ ಪೇೞದೆ ಪೋ ।
ದೊಡಮೇನೋ ನಿನ್ನ ಬೞಿಯನೆ
ನಡೆತರ್ಪೆಂ ನಿನ್ನರಸ ಬಿಸುಟೆಂತಿರ್ಪೆಂ ॥ ೨೫

ವ॥ ಎಂದು ನೀನೀ ಕೂಸುಗಳಂ ಕೈಕೊಂಡು ನಡಪು ನಲ್ಲನನೆನಗೊಪ್ಪಿಸಾನಾತ ನಾದುದನಪ್ಪೆನೆನೆ ಮಾದ್ರಿಯಿಂತೆಂದಳ್-

ಕಂ ॥ ಎನಗಿಂದಿನೊಂದು ಸೂಱುಮ
ನಿನಿಯಂ ದಯೆಗೆಯ್ದನೆನ್ನ ಸೂಱಂ ನಿನಗಾ ।
ನೆನಿತಾದೊಡಮೀವೆನೆ ಮ
ತ್ತನಯರ್ ಕೆಯ್ಯೆಡೆ ಪಲುಂಬದಿರ್ ಪೆಱಪೆಱವಂ ॥ ೨೬

ವ॥ ಎಂದು ತಪೋವನದ ಮುನಿಜನಮುಂ ವನದೇವತಾಜನಮುಂ ತನ್ನಣ್ಮಂ ಪೊಗೞೆ ಮಾದ್ರಿ ಪಾಂಡುರಾಜನೊಡನೆ ದಾಹೋತ್ತರದಂತೆ (?) ಕಿರ್ಚಿಂಗೆ ಕುಲದೊಳಂ

ಏನಾಗಿದೆಯೋ ಹೇಳು ಸತ್ತೆ, ಕೆಟ್ಟೆ, ಎಂದು ಚೀರಿದಳು. ೨೪. ಮಕ್ಕಳು ವಿಶೇಷ ಶಬ್ದಮಾಡಿಕೊಂಡು ಅಳುತ್ತಾ ಬೆನ್ನಹಿಂದೆಯೇ ಬರುತ್ತಿರಲು ತಲೆಯ ತುರುಬು ಬಿಚ್ಚಿ ಕೆಳಗೆ ಜೋಲುತ್ತಿರಲು ಸೊಂಟವು ನಡಗುತ್ತಿರಲು ಕಣ್ಣೀರು ಗಳಗಳನೆ ಧಾರಾಕಾರವಾಗಿ ಹರಿಯುತ್ತಿರಲು ಕುಂತಿಯು ಓಡಿಬಂದಳು. ವ॥ ತನ್ನ ಪ್ರಿಯನ ಶರೀರವನ್ನು ತಬ್ಬಿಕೊಂಡು ತನ್ನ ಸಾವನ್ನು ನಿಷ್ಕರ್ಷೆ ಮಾಡಿಕೊಂಡು ಹಲ್ಲನ್ನು ಕಿರಿಯುತ್ತಿದ್ದ(?) ಮಾದ್ರಿಯನ್ನು ಕಂಡು ಕುಂತಿಯು ನೆಲದಲ್ಲಿ ಬಿದ್ದು ಹೊರಳಾಡಿ ವಿಶೇಷವಾಗಿ ಅತ್ತಳು. ೨೫. ಈ ಕಾಡಿನಲ್ಲಿ ನನ್ನನ್ನೂ ನಾನು ಸಾಕಿದ ಈ ಮಕ್ಕಳನ್ನೂ ಬಿಟ್ಟು ನೀನು ಹೋದರೆ ತಾನೆ ಏನು? ನಾನು ನಿನ್ನ ಹಿಂದೆಯೇ ಬರುತ್ತೇನೆ. ರಾಜನೇ ನಿನ್ನನ್ನು ಬಿಟ್ಟು ನಾನು ಹೇಗಿರಬಲ್ಲೆ? ಎಂದು ಮಾದ್ರಿಯನ್ನು ಕುರಿತು ನೀನು ಈ ಕೂಸುಗಳನ್ನು ಸ್ವೀಕರಿಸಿ ಸಲಹು; ಪ್ರಿಯನನ್ನು ನನಗೊಪ್ಪಿಸು, ಅವನಾದುದನ್ನು ನಾನು ಆಗುತ್ತೇನೆ ಎನ್ನಲು ಮಾದ್ರಿ ಹೀಗೆಂದಳು-೨೬. ನನ್ನ ಪತಿಯು ಇಂದಿನ ಸರದಿಯನ್ನು ನನಗೆ ದಯಮಾಡಿ ಕೊಟ್ಟಿದ್ದಾನೆ. ನನ್ನ ಈ ಸರದಿಯನ್ನು ನಿನಗೆ ಏನಾದರೂ ಕೊಡುತ್ತೇನೆಯೇ! ನನ್ನ ಮಕ್ಕಳು ನಿನ್ನ ಅಧೀನ; ಇದಕ್ಕೆ ವಿರೋಧವಾಗಿ ಬೇರೆ ಬೇರೆ ರೀತಿಯಲ್ಲಿ ಹಂಬಲಿಸಬೇಡ ವ॥ ಎಂದು ತಪೋವನದ ಋಷಿಗಳೂ ವನದೇವತಾಸಮೂಹವೂ ತನ್ನ ಸಾಹಸವನ್ನು ಹೊಗಳುತ್ತಿರಲು ಮಾದ್ರಿಯು

ಚಲದೊಳಮಾವ ಕಂದುಂ ಕುಂದುಮಿಲ್ಲದೆ ತನ್ನೊರೆಗಂ ದೊರೆಗಮಾರುಮಿಲ್ಲೆನಿಸಿದಾಗಳ್ ಕುಂತಿ ಶೋಕಾಕ್ರಾಂತೆಯಾಗಿರೆ ತಪೋವನದ ತಪೋವೃದ್ಧರಾ ಕಾಂತೆಯನಿಂತೆಂದು ಸಂತೈಸಿದರ್-

ಚಂ ॥ ಕಟಿದವರ್ಗಳ್ವುದಟಿವೊಡವರೇಟಿವೊಡಮಂತವರಿಂ ಬಟಿಕ್ಕೆ ತಾ
ಮುಟಿವೊಡಮೇಟರಂತವರಣಂ ತಮಗಂ ಬರ್ದುಕಿಲ್ಲ ಧರ್ಮಮುಂ ।
ಗಟಿಯಿಸಿಕೊಳ್ವುದೊಂದೆ ಚದುರಿಂತುಟು ಸಂಸೃತಿ ಧರ್ಮಮೇಕೆ ಬಾ
ಯಟಿವುದಿದೇಕೆ ಚಿಂತಿಸುವುದೇಕೆ ಪಲುಂಬುವುದೇಕೆ ಸೋವುದೋ ॥ ೨೭

ವ॥ ಅಂತುಮಲ್ಲದೆ-

ಕಂ ॥ ಬಿಡದಟಲ್ವ ಬಂಧುಜನದೊ
ಳ್ಪುಡಿಯದ ಕಣ್ಣೀರ ಪೂರಮಾ ಪ್ರೇತಮನೋ ।
ಗಡಿಸದೆ ಸುಡುವುದು ಗಡಮಿ
ನ್ನುಡುಗುವುದೀ ಶೋಕಮಂ ಸರೋಜದಳಾಕ್ಷೀ ॥ ೨೮

ವ॥ ನೀನಿಂತು ಶೋಕಾಕ್ರಾಂತೆಯಾಗಿ ಸಂಸಾರಸ್ಥಿತಿಯನಜೆಯದಜ್ಞಾನಿಗಳಂತೆ ವಿಪುಳಾ ಸಂಗೆಯ್ವುದಯಪ್ಪೊಡೀ ಕೂಸುಗಳ್ ಮನಮಿಕ್ಕಿಯುಮೆರ್ದೆಯಿಕ್ಕಿಯುಂ ಕಿಡುವರೆಂದನೇಕೋಪ ಶಾಂತವಚನಂಗಳಿಂದಮಾಕೆಯುಬ್ಬೆಗಮನಾಜೆ ನುಡಿದುಮಲ್ಲಿಯ ಮುನಿಜನಮೆಲ್ಲಮಾ ಕೂಸುಗಳುಮಂ ಕುಂತಿಯುಮಂ ಮುಂದಿಟ್ಟೊಡಗೊಂಡು ನಾಗಪುರಕ್ಕೆ ವಂದು ಗಾಂಗೇಯ ಧೃತರಾಷ್ಟ್ರ ವಿದುರರ್ಕಳ್ಗಮಂಬಾಲೆಗಂ ಪಾಂಡುರಾಜನ ವೃತ್ತಾಂತಮನಜೆಪಿದೊಡಾಗಳ್-

ದಾಹೋತ್ತರದಂತೆ(?) ತನ್ನನ್ನು ಬೆಂಕಿಗೆ ಅರ್ಪಿಸಿಕೊಂಡು (ಸಹಗಮನ ಮಾಡಿ) ಕುಲದಲ್ಲಿಯೂ ಛಲದಲ್ಲಿಯೂ ಸ್ವಲ್ಪವೂ ದೋಷವೂ ನ್ಯೂನತೆಯೂ ಇಲ್ಲದೆ ತನಗೆ ಸಮಾನರಾದವರಾರೂ ಇಲ್ಲ ಎನ್ನಿಸಿದಳು. ಇತ್ತ ಕುಂತಿಯು ದುಃಖದಿಂದ ಕೂಡಿದವಳಾಗಿರಲು ತಪೋವನದಲ್ಲಿದ್ದ ವೃದ್ಧ ತಾಪಸರು ಅವಳನ್ನು ಹೀಗೆಂದು ಸಮಾಧಾನಮಾಡಿದರು. ೨೭. ಸತ್ತವರು ಏಳುವ ಪಕ್ಷದಲ್ಲಿ ಅವರಿಗಾಗಿ ಅಳಬೇಕು. ಇಲ್ಲ ಅವರಾದ ಮೇಲೆ ಉಳಿದ ನಾವು ಉಳಿಯುವ ಪಕ್ಷದಲ್ಲಿಯೂ (ನಾವು ಅಳಬೇಕು). ಹಾಗೆ ಸತ್ತ ಅವರು ಏಳುವುದಿಲ್ಲ. ನಮಗೂ ಬಾಳುವೆಯಿಲ್ಲ; ಧರ್ಮಸಂಗ್ರಹಮಾಡುವುದೊಂದೇ ಜಾಣತನ. ಇಂತಹುದೇ ಸಂಸಾರಧರ್ಮ. ಹೀಗಿರುವಾಗ ಗೋಳಿಡುವುದೇಕೆ? ಚಿಂತಿಸುವುದೇಕೆ? ಹಲುಬುವುದೇಕೆ? ವ್ಯಥೆಪಡುವುದೇಕೆ? ವ॥ ಹಾಗೂ ಅಲ್ಲದೆ ೨೮. ನಿರಂತರವಾಗಿ ಅಳುವ ಬಂಧುಜನಗಳ ಕಣ್ಣೀರಿನ ಪ್ರವಾಹವು ಆ ಪ್ರೇತವನ್ನು ಅಸಹ್ಯಪಡುವ ರೀತಿಯಲ್ಲಿ ಸುಡುವುದಲ್ಲವೆ? ಕಮಲಪತ್ರದಂತೆ ಕಣ್ಣುಳ್ಳ ಎಲೈ ಕುಂತಿಯೇ ಇನ್ನು ಈ ದುಃಖವನ್ನು ನಿಲ್ಲಿಸತಕ್ಕದ್ದು. ವ॥ ನೀನು ಸಂಸಾರಸ್ಥಿತಿಯನ್ನು ತಿಳಿಯದಜ್ಞಾನಿಯಂತೆ ದುಃಖಾಕ್ರಾಂತಳಾಗಿ ವಿಶೇಷವಾಗಿ ಹಲುಬಿದರೆ ಮಕ್ಕಳು ಉತ್ಸಾಹಶೂನ್ಯರಾಗಿಯೂ ಅಧೈರ್ಯರಾಗಿಯೂ ಕೆಟ್ಟುಹೋಗುವರು ಎಂದು ಅನೇಕವಿಧವಾದ ಸಮಾಧಾನದ ಮಾತುಗಳಿಂದ ಆಕೆಯ ಉದ್ವೇಗವು ಕಡಮೆಯಾಗುವ ಹಾಗೆ ನುಡಿದುದಲ್ಲದೆ ಅಲ್ಲಿಯ ಋಷಿಸಮೂಹವೆಲ್ಲ ಆ ಮಕ್ಕಳನ್ನೂ ಕುಂತಿಯನ್ನೂ ಮುಂದಿಟ್ಟುಕೊಂಡು ಜೊತೆಯಲ್ಲಿ

ಕಂ ॥ ತುಱುಗಿದ ಹಿಮಬಿಂದುಗಳಿಂ
ದೆಱಗಿದ ನವ ವನಜವನದವೋಲ್ ಶೋಕದಿನಂ ।
ದೊಱೆವ ನಯನೋದಬಿಂದುವಿ
ನೆಱಗಿದುದೊರ್ಮೊದಲೆ ಬಂಧುಮುಖ ವನಜವನಂ ॥ ೨೯

ವ॥ ಆಗಳ್ ಪುತ್ರ ಸ್ನೇಹದಿಂದತಿ ಪ್ರಳಾಪಂಗೆಯ್ವಂಬಾಲೆಯುಮಂ ಬಂಧುಜನ ನಿರೀಕ್ಷಣದಿಂ ಶೋಕಂ ಮಱುಕಣಿಸೆ ಬಾಯಟೆದು ಪಳಯಿಸುವ ಕುಂತಿಯುಮಂ ಗಾಂಗೇಯ ಧೃತರಾಷ್ಟ್ರ ವಿದುರರ್ಕಳುಮಂ ಸತ್ಯವತೀದೇವಿಯುಮಂ ಸಂತೈಸಿ ಪಾಂಡುರಾಜಂಗೆ ಜಳದಾನಾದಿಕ್ರಿಯೆಗಳಂ ನಿರ್ವರ್ತಿಸಿ ತದನಂತರದೊಳದುವೆ ನಿರ್ವೇಗಮಾಗೆ ವ್ಯಾಸವಚನ ದೊಳ್ ಸತ್ಯವತಿಯುಮಂಬಿಕೆಯುಮಂಬಾಲೆಯುಂ ಸಂಸಾರವಿಶೀರ್ಣೆಯರಾಗಿ ಮುನಿವನಮನಾಶ್ರಯಿಸಿದರಿತ್ತ ಗಾಂಗೇಯನಯ್ವರ್ ಕೂಸುಗಳುಮಂ ತನ್ನ ತೊಡೆಯೆ ತೊಟ್ಟಿಲಾಗಿ ನಡಪುತ್ತುಮಿರೆ ದುರ್ಯೋಧನ ಪ್ರಭೃತಿಗಳ್ ನೂರ್ವರುಂ ಧರ್ಮಪುತ್ರಾದಿಗಳಯ್ವರುಂ ಸಹಪಾಂಸುಕ್ರೀಡಿತರಾಗಿ-

ಕಂ ॥ ಒಡನಾಡಿಯುಮೊಡನೋದಿಯು
ಮೊಡವಳೆದುಂ ಗುಳ್ಳೆಗೊಟ್ಟ ಬಟ್ಟುಳಿಸೆಂಡುಂ ।
ಪೊಡೆಸೆಂಡೆಂಬಿವನಾಡು
ತ್ತೊಡವಳೆದರ್ ತಮ್ಮೊಳೆಳಸೆ ತಂತಂಗೆಡೆಗಳ್ ॥ ೩೦

ಕರೆದುಕೊಂಡು ಹಸ್ತಿನಾಪಟ್ಟಣಕ್ಕೆ ಬಂದು ಭೀಷ್ಮ, ಧೃತರಾಷ್ಟ್ರ, ವಿದುರರಿಗೂ ಅಂಬಾಲೆಗೂ ಪಾಂಡುರಾಜನ ವೃತ್ತಾಂತವನ್ನು ತಿಳಿಸಿದರು. ೨೯. ದಟ್ಟವಾಗಿ ಬೀಳುವ ಮಂಜಿನಹನಿಗಳಿಂದ (ಬಗ್ಗಿರುವ) ಆವರಿಸಲ್ಪಟ್ಟ ಹೊಸತಾವರೆಯ ತೋಟದಂತೆ ಬಂಧುಜನಗಳ ಮುಖವೆಂಬ ಕಮಲದ ವನವು ಅಂದು ದುಃಖದಿಂದ ಸ್ರವಿಸುತ್ತಿರುವ ಕಣ್ಣಿನ ಹನಿಗಳಿಂದ ಒಟ್ಟಿಗೇ ಬಗ್ಗಿದುವು. ವ॥ ಆಗ ಮಗನ ಮೇಲಿನ ಪ್ರೀತಿಯಿಂದ ಗೋಳಿಡುತ್ತಿದ್ದ ಅಂಬಾಲೆಯನ್ನೂ ನೆಂಟರನ್ನೂ ನೋಡುವುದರಿಂದ ಪುನಃ ಕಾಣಿಸಿ ಕೊಂಡ ದುಃಖದಿಂದ ಬಾಯಿ ಬಿಟ್ಟು ಅಳುತ್ತಿದ್ದ ಕುಂತಿ, ಭೀಷ್ಮ, ಧೃತರಾಷ್ಟ್ರ, ವಿದುರರುಗಳನ್ನೂ ಸತ್ಯವತೀದೇವಿಯನ್ನೂ ಸಮಾಧಾನಮಾಡಿ ಪಾಂಡುರಾಜನಿಗೆ ತರ್ಪಣಾದಿಕ್ರಿಯೆಗಳನ್ನು ಮಾಡಿ ಮುಗಿಸಿ ಆಮೇಲೆ ಆ ದುಃಖವೇ ವಿರಕ್ತಿಗೆ ಕಾರಣ ವಾಗಲು ವ್ಯಾಸರ ಉಪದೇಶದಂತೆ ಸತ್ಯವತಿಯೂ ಅಂಬೆ ಅಂಬಾಲೆಯರೂ ಸಂಸಾರ ತ್ಯಾಗಮಾಡಿ ತಪೋವನವನ್ನು ಆಶ್ರಯಿಸಿದರು. ಈ ಕಡೆ ಭೀಷ್ಮನು ಅಯ್ದು ಮಕ್ಕಳನ್ನೂ ತನ್ನ ಮಡಿಲೇ ತೊಟ್ಟಿಲಾಗಿರುವಂತೆ ಸಾಕುತ್ತಿರಲು ದುರ್ಯೋಧನನೇ ಮೊದಲಾದ ನೂರು ಮಂದಿಯೂ ಧರ್ಮರಾಜನೇ ಮೊದಲಾದ ಅಯ್ದು ಜನಗಳೂ ಒಟ್ಟಿಗೆ ಧೂಳಾಟವನ್ನಾಡುತ್ತಿರುವವರಾದರು. ೩೦. ಒಡನೆ ಆಡಿಯೂ ಒಡನೆ ಓದಿಯೂ ಜೊತೆಯಲ್ಲಿಯೇ ಬೆಳೆದೂ ಗೊಳ್ಳೆಗೊಟ್ಟೆ, ಬಟ್ಟೆ, ಉಳಿಸೆಂಡು, ಪೊಡೆಸೆಂಡು ಎಂಬ ಈ ಆಟಗಳನ್ನಾಡುತ್ತಲೂ ತಮ್ಮ ತಮ್ಮಲ್ಲಿ ಪ್ರತ್ಯೇಕವಾದ ಸ್ನೇಹವನ್ನು ಬೆಳೆಸುತ್ತ

ವ॥ ಅಂತಾ ಕೂಸುಗಳ್ ಕೂಸಾಟವಾಡುತ್ತಿರ್ದೊಂದು ದಿವಸಂ ಮರಗೆರಸಿಯಾಡಲೆಂದು ಮುಂದೆ ತಮ್ಮ ಪಗೆ ಪರ್ವುವಂತೆ ಪನ್ನಿರ್ಮತ್ತರ್ ಪರ್ವಿದಾಲದ ಮರದ ಮೊದಲ್ಗೆ ವಂದು ಭೀಮನಂ ಮಱೆಮಾಡಿ ಕೋಲನೀಡಾಡಿ ಪಲವು ಸೂೞ್ ಕಾಡಿ-

ಕಂ ॥ ಪರಿದನಿಬರುಮೊಡನಡರ್ದಿರೆ
ಮರನಂ ಮುಟ್ಟಲ್ಕೆ ಪಡೆಯದನಿಬರ್ಗಂ ಕಿಂ ।
ಕಿರಿವೋಗಿ ಭೀಮಸೇನಂ
ಮರನಂ ಪಿಡಿದಲ್ಗೆ ಪಣ್ವೊಲನಿಬರುಮುದಿರ್ದರ್ ॥ ೩೧

ವ॥ ಅಂತು ಬಿೞ್ದು ಸುಲಿದ ಮೊೞಕಾಲ್ಗಳುಂ ಕಬಿಲ್ದ ಪಲ್ಗಳುಮೆಲ್ವಡಗಾದ ಮೈಯ್ಗಳು ಮುಡಿದ ಕೆಯ್ಗಳುಮಾಗಿ ಬೆರಸಬೞುತ್ತುಂ ಬಂದು ಗಾಂಗೇಯ ಧೃತರಾಷ್ಟ್ರರ್ಗೆ ಕಾರಣಂಬೇೞೆಲ್ದೊಡವರಿಂದಿತ್ತ ಭೀಮನೊಡನಾಡದಿರಿಮೆಂದು ಮುದುಗಣ್ಗಳ್ ಬಾರಿಸೆ ತಮ್ಮ ನೊಂದ ಸಿಗ್ಗಿಂಗನಿಬರುಮೊಂದಾಗಿ ಪೋಗಿ ಪೊಱವೊೞಲ ಮರದ ಕೆಳಗೆ ಮಱಸೊಂದಿದ ಭೀಮನನಡಸಿ ಪಿಡಿದು ನೂರ್ವರುಂ ಗಂಟಲಂ ಮೆಟ್ಟಿ-

ಕಂ ॥ ಪಾವುಗಳಂ ಕೊಳಿಸಿ ಮಹಾ
ಗ್ರಾವಮನುಱದಡಸಿ ಕಟ್ಟಿ ಕೊರಲೊಳ್ ಗಂಗಾ ।
ದೇವಿಯ ಮಡುವಿನೊಳಟ್ಟಿದ
ರಾವರಿಸದೆ ತಮ್ಮ ಕುಲಮನದಿಗಟ್ಟುವವೋಲ್ ॥ ೩೨

ಜೊತೆಯಲ್ಲಿಯೇ ಬೆಳೆದರು. ವ॥ ಆ ಮಕ್ಕಳು ಮಕ್ಕಳಾಟವನ್ನಾಡುತ್ತಿದ್ದು ಒಂದು ದಿನ ಮರಗೆರಸಿಯೆಂಬ ಆಟವನ್ನು ಆಡಲೆಂದು (ಬಂದು) ಮುಂದಿನ ತಮ್ಮ ಹಗೆತನ ಹಬ್ಬುವುದನ್ನು (ಇಂದೇ) ಸೂಚಿಸುವಂತೆ ಹನ್ನೆರಡುಮತ್ತರಷ್ಟು ಅಗಲವಾಗಿ ಬೆಳೆದ ಆಲದ ಮರದ (ಕೆಳಭಾಗಕ್ಕೆ) ಬಂದ ಭೀಮನನ್ನು ಕಾಣದ ಹಾಗೆ ಇರಿಸಿ ಕೋಲನ್ನೆಸೆದು ಅನೇಕ ಸಲ ಕಾಡಿದನು. ೩೧. ಓಡಿದ ಅಷ್ಟುಮಂದಿಯೂ ಒಟ್ಟಿಗೆ ಮರವನ್ನು ಹತ್ತಿರಲು ಅವರನ್ನು ಮುಟ್ಟುವುದಕ್ಕಾಗದೆ ಅಷ್ಟು ಜನರ ಮೇಲೆಯೂ ರೇಗಿ ಕೋಪಿಸಿಕೊಂಡು ಭೀಮನು ಮರವನ್ನು ಹಿಡಿದು ಅಳ್ಳಾಡಿಸಲು ಹಣ್ಣಿನ ಹಾಗೆ ಅಷ್ಟು ಜನವೂ ಕೆಳಗೆ ಉದುರಿದರು (ಬಿದ್ದರು). ವ॥ ಹಾಗೆ ಬಿದ್ದು ತರೆದುಹೋದ ಮೊಣಕಾಲುಗಳಿಂದಲೂ ಕಳೆದುಹೋದ ಹಲ್ಲುಗಳಿಂದಲೂ ಜಜ್ಜಿಹೋದ ಶರೀರದಿಂದಲೂ ಮುರಿದ ಕಯ್ಯಿಂದಲೂ ಕೂಡಿ ಅಳುತ್ತಾ ಬಂದು ಭೀಷ್ಮಧೃತರಾಷ್ಟ್ರರಿಗೆ ಹಾಗಾಗುವುದಕ್ಕೆ ಕಾರಣ ವನ್ನು ತಿಳಿಸಲು ಅವರು ಅಂದಿನಿಂದ ಮುಂದೆ ಭೀಮನೊಡನಾಡಬೇಡಿ ಎಂದು ವೃದ್ಧರು (ಮುದಿಕಣ್ಣುಗಳು) ನಿವಾರಿಸಲು ತಾವು ನೊಂದ ನಾಚಿಕೆಗಾಗಿ ಅಷ್ಟು ಜನವೂ ಒಟ್ಟುಗೂಡಿಹೋಗಿ ಪಟ್ಟಣದ ಹೊರಭಾಗದಲ್ಲಿ ಮರದ ಕೆಳಗೆ ಮೈಮರೆತು ನಿದ್ದೆಮಾಡುತ್ತಿದ್ದ ಭೀಮನ ಮೇಲೆ ಬಿದ್ದು ಹಿಡಿದು ನೂರುಜನರೂ ಅವನ ಕತ್ತನ್ನು ತುಳಿದು ೩೨. ಹಾವುಗಳಿಂದ ಕಚ್ಚಿಸಿ ದೊಡ್ಡಕಲ್ಲನ್ನು ಕುತ್ತಿಗೆಗೆ ಬಿಗಿಯಾಗಿ ಕಟ್ಟಿ ತಮ್ಮ ವಂಶವನ್ನೇ ತಳಕ್ಕೆ ಅದ್ದುವ ಹಾಗೆ ವಿಚಾರಮಾಡದೆ ಗಂಗಾನದಿಯ ಮಡುವಿನಲ್ಲಿ

ವ।। ಅಂತಟ್ಟುವುದುಂ ಗಂಗಾದೇವಿಯ ವರಪ್ರಸಾದದೊಳ್ ವಿಷಮ ವಿಷಧರಂಗಳ್ ಪರಿಯೆ ಕೊರಲೊಳ್ ತೊಡರ್ದ ಶಿಲೆಯಂ ಪಜಿದೀಡಾಡಿ ಗಂಗೆಯ ನೀರಂ ತೋಳೊಳ್ ತುಳುಂಕಿ ಮಗುಟ್ಟು ಬಂದಂಗೆ ವಿಷದ ಲಡ್ಡುಗೆಯನಿಕ್ಕಿಯುಮೆನಿತಾನುಮುಪದ್ರವಂಗಳೊಳ್ ತೊಡರಿಕ್ಕಿಯುಂ ಗೆಲಲಾಱದೆ ಮನಮಿಕ್ಕಿಯುಮೆರ್ದೆಯಿಕ್ಕಿಯುಮಿರ್ದರಂತಯ್ವರ್ ಕೂಸುಗಳ್ಗಂ ಗಾಂಗೇಯಂ ಚೌಲೋಪನಯನಾದಿ ಕ್ರಿಯೆಗಳಂ ಮಾಡಿ ಸುಖಮಿರ್ಪನ್ನೆಗಮಿತ್ತ ಗಂಗಾದ್ವಾರದೊಳ್ ಮಾಯಾಪುರಮೆಂಬ ಋಷ್ಯಾಶ್ರಮದೊಳ್ ಗೌತಮನೆಂಬಂ ಬ್ರಹ್ಮಋಷಿ ತಪಂ ಗೆಯ್ಯುತಿರ್ಪಿನಮಾ ಋಷಿಗೆ ಬಿಲ್ಲುಮಂಬುಂವೆರಸೊರ್ವ ಮಗಂ ಪುಟ್ಟಿದನಾತಂಗೆ ಶರದ್ವತನೆಂದು ಪೆಸರನಿಟ್ಟು ನಡಪೆ ಬಳೆದು ತಪಂಗೆಯ್ವಾತನಲ್ಲಿಗೆ ಜಲಕ್ರೀಡಾ ನಿಮಿತ್ತದಿಂದಿಂದ್ರನಚ್ಚರಸೆ ಜಲಚರೆಯೆಂಬವಳ್ ಬಂದೊಡಾಕೆಯಂ ಕಂಡು ಕಾಮಾಸಕ್ತಚಿತ್ತನಾಗಿ ಕೂಡಿ-

ಕಂ ।। ಒಗೆದ ಶರಸ್ತಂಬದೊಳಿ
ರ್ಬಗಿಯಾಗಿ ಮನೋಜ ರಾಗರಸಮುಗುತರೆ ತೊ ।
ಟ್ಟಗೆ ಬಿಸುಟು ಬಿಲ್ಲನಂಬುಮ
ನಗಲ್ದನಾಶ್ರಮದಿನುದಿತ ಲಜ್ಜಾವಶದಿಂ ।। ೩೩

ವ।। ಅನ್ನೆಗಮಾ ತಪೋವನಕ್ಕೆ ಬೇಂಟೆಯಾಡಲ್ಬಂದ ಶಂತನುವಿನೊಡನೆಯವರಾ ಶರಸ್ತಂಬದೊಳ್ ಪರಿಕಲಿಸಿರ್ದ ಮುನೀಂದ್ರನಿಂದ್ರಿಯದೊಳೊಗೆದ ಪೆಣ್ಗೂಸುಮಂ ಗಂಡುಗೂಸುಮನವಱ ಕೆಲದೊಳಿರ್ದ ದಿವ್ಯ ಶರಾಸನ ಶರಂಗಳುಮಂ ಕಂಡು ಕೊಂಡುಪೋಗಿ

ಮುಳುಗಿಸಿದರು. ವ।। ಹಾಗೆ ಮುಳುಗಿಸಿದರೂ ಗಂಗಾದೇವಿಯ ವರಪ್ರಸಾದದಿಂದ ವಿಷಯುಕ್ತವಾದ ಹಾವುಗಳು ಹರಿದುಹೋದವು. ಕೊರಳಿನಲ್ಲಿ ಕಟ್ಟಿದ್ದ ಕಲ್ಲನ್ನು ಕಿತ್ತು ಬಿಸಾಡಿ ಗಂಗೆಯ ನೀರನ್ನು ತೋಳಿನಿಂದ ಕಲಕಿ ತಳ್ಳಿ ಪುನಃ ಹಿಂತಿರುಗಿದವನಿಗೆ ವಿಷದ ಲಾಡುಗಳನ್ನು ತಿನ್ನಿಸಿಯೂ ಇನ್ನೂ ಅನೇಕ ವಿಧವಾದ ಕಷ್ಟಗಳಲ್ಲಿ ಸಿಕ್ಕಿಸಿಯೂ ಗೆಲ್ಲಲಾರದೆ ಉತ್ಸಾಹಶೂನ್ಯರಾಗಿಯೂ ಧೈರ್ಯಕುಗ್ಗಿದವರಾಗಿಯೂ ಇದ್ದರು. (ಈ ಕಡೆ) ಭೀಷ್ಮನು ಅಯ್ದು ಜನ ಮಕ್ಕಳಿಗೂ ಚೌಲೋಪನಯನಾದಿ ಕರ್ಮಗಳನ್ನು ಮಾಡಿ ಸುಖವಾಗಿದ್ದನು. (ಈ ಕಡೆ) ಗಂಗಾದ್ವಾರದಲ್ಲಿ ಮಾಯಾಪುರವೆಂಬ ಋಷ್ಯಾಶ್ರಮದಲ್ಲಿ ಗೌತಮನೆಂಬ ಬ್ರಹ್ಮಋಷಿಯು ತಪಸ್ಸು ಮಾಡುತ್ತಿರಲು ಆ ಋಷಿಗೆ ಬಿಲ್ಲುಬಾಣಗಳಿಂದ ಕೂಡಿದ ಒಬ್ಬ ಮಗನು ಹುಟ್ಟಿದನು. ಅವನಿಗೆ ಶರದ್ವತನೆಂದು ಹೆಸರನ್ನಿಟ್ಟು ಸಲಹಿದನು. ಅಭಿವೃದ್ಧಿಯಾದ (ಬೆಳೆದ) ಆ ಋಷಿಯ ಬಳಿಗೆ ಜಲಕ್ರೀಡೆಯ ನೆಪದಿಂದ ಇಂದ್ರನ ಅಪ್ಸರಸ್ತ್ರೀಯಾದ ಜಲಚರೆಯೆಂಬುವಳು ಬರಲು (ಆ ಋಷಿಯು) ಆಕೆಯನ್ನು ನೋಡಿ ಕಾಮಾಸಕ್ತನಾಗಿ ಅವಳೊಡನೆ ಕೂಡಿ -೩೩. ಆ ಜೊಂಡುಹುಲ್ಲಿನಲ್ಲಿ ಚೆಲ್ಲಿದ ರೇತಸ್ಸು ಎರಡು ಭಾಗವಾಗಿ ಸುರಿಯಲು ಆ ಶರದ್ವತನು ತನಗೊದಗಿದ ನಾಚಿಕೆಯಿಂದ ಬಿಲ್ಲುಬಾಣಗಳನ್ನು ಕೂಡಲೆ ಬಿಸಾಡಿ ಋಷ್ಯಾಶ್ರಮವನ್ನು ಬಿಟ್ಟು ಹೋದನು. ವ।। ಅಷ್ಟರಲ್ಲಿ ಆ ತಪೋವನಕ್ಕೆ ಬೇಟೆಯಾಡುವುದಕ್ಕಾಗಿ ಬಂದಿದ್ದ ಶಂತನುವಿನೊಡನಿದ್ದವರು ಆ ಜೊಂಡುಹುಲ್ಲಿನಲ್ಲಿ ಚೆಲ್ಲಿದ್ದ ಋಷಿಶ್ರೇಷ್ಠನ ವೀರ್ಯದಿಂದ (ರೇತಸ್ಸಿನಿಂದ) ಹುಟ್ಟಿದ ಹೆಣ್ಣು ಕೂಸನ್ನೂ ಗಂಡುಕೂಸನ್ನೂ ಅವುಗಳ ಪಕ್ಕದಲ್ಲಿ ಬಿಲ್ಲುಬಾಣಗಳನ್ನೂ ನೋಡಿ ಅವುಗಳನ್ನು ತೆಗೆದುಕೊಂಡು ಹೋಗಿ

ಶಂತನುಗೆ ತೋಱಿದೊಡಾತನುಮಾ ಶಿಶುದ್ವಯಮಂ ನಿಜ ಗಜಪುರಕ್ಕುಯ್ದು ಕೃಪೆಯಿಂ ನಡಪಿದನಪ್ಪುದಱಿಂ ಕೃಪನುಂ ಕೃಪೆಯುಮೆಂದು ಪೆಸರನಿಟ್ಟು ನಡಪುತ್ತಿರ್ಪನ್ನೆಗಮವರಯ್ಯಂ ಶರದ್ವತನಲ್ಲಿಗೆ ಬಂದು ಕಿಱಿಯಾತಂಗೆ ಚೌಲೋಪನಯನಾದಿ ಕ್ರಿಯೆಗಳಂ ಮಾಡಿ ಧನುರ್ವಿದ್ಯೋಪದೇಶಂಗೆಯ್ಯೆ ಸರ್ವವಿದ್ಯಾವಿಶಾರದನಾದನಾ ಕೃಪಾಚಾರ್ಯರ ಪಕ್ಕದೊಳ್ ಕೂಸುಗಳಂ ವಿದ್ಯಾಭ್ಯಾಸಂಗೆಯ್ಸೆ-

ಚಂ ॥ ಬರೆಯದೆ ಬಂದ ಸುದ್ದಗೆಯೆ ಸೂತ್ರಮನೊಂದೆ ಮುಹೂರ್ತಮಾತ್ರದಿಂ
ಬರಿಸಿದುದುಂತು ಸೂತ್ರಿಸಿದ ಸೂತ್ರದ ವೃತ್ತಿ ನಿಜಾತ್ಮವೃತ್ತಿವೋಲ್ ।
ಪರಿಣಮಿಸಿತ್ತು ಮತ್ತುೞಿದ ವಿದ್ಯೆಗಳೋಜರೆ ಚಟ್ಟರೆಂಬಿನಂ
ನೆರೆದುವು ತನ್ನೊಳಾರ್ ಗಳ ಗುಣಾರ್ಣವನಂತು ಕುಶಾಗ್ರಬುದ್ಧಿಗಳ್ ॥ ೩೪

ವ॥ ಅಂತು ಪಂಚಾಂಗ ವ್ಯಾಕರಣದ ವೃತ್ತಿಭೇದಮಪ್ಪ ಛಂದೋವೃತ್ತಿಯೊಳಂ ಶಬ್ದಾಲಂಕಾರ ನಿಷ್ಠಿತಮಪ್ಪಲಂಕಾರದೊಳಂ ವ್ಯಾಸ ವಾಲ್ಮೀಕಿ ಕಶ್ಯಪಪ್ರಭೃತಿ ವಿರಚಿತಂಗಳಪ್ಪ ಮಹಾಕಾವ್ಯಂಗಳೊಳಂ ನಾಂದೀಪುರೋಚನಾಪ್ರಸ್ತಾವನೇತಿವೃತ್ತ ಸಂಧಿ ಪ್ರವೇಶ ವಿಷ್ಕಂಭ ಕಪೋತಿಕಾ ವ್ಯಾಳಿಕಾದಿ ಲಕ್ಷಣೋಪೇತಂಗಳಪ್ಪ ನಾಟಕಂಗಳೊಳಂ ಪದಿನೆಂಟು ಧರ್ಮಶಾಸ್ತ್ರಂಗಳೊಳಂ ನಾಲ್ಕು ವೇದದೊಳಮಾಱುಂಗದೊಳಮಯ್ದು ತೆಱದ ಮಂತ್ರಂಗಳೊಳಮಾಱುಂ ದರ್ಶನದೊಳಂ ಪ್ರತ್ಯಕ್ಷಾನುಮಾನ ಪ್ರಮಾಣಂಗಳೊಳಂ ಭರತಪ್ರಣೀತ ನೃತ್ಯಶಾಸ್ತ್ರದೊಳಂ ನಾರದಾದಿ ಪ್ರಣೀತ

ಶಂತನುವಿಗೆ ತೋರಿಸಿದರು. ಅವನು ಆ ಎರಡು ಮಕ್ಕಳನ್ನೂ ತನ್ನ ಹಸ್ತಿನಾಪುರಕ್ಕೆ (ಕರೆದು) ಕೊಂಡುಹೋಗಿ ಕೃಪೆಯಿಂದ ಕೃಪೆ ಮತ್ತು ಕೃಪ ಎಂದು ಹೆಸರಿಟ್ಟು ಸಾಕಿದನು. ಅವರ ತಂದೆಯಾದ ಶರದ್ವತನು ಅಲ್ಲಿಗೆ ಬಂದು ಚಿಕ್ಕವನಿಗೆ ಚೌಳೋಪನಯನವೇ ಮೊದಲಾದ ಕರ್ಮಗಳನ್ನೂ ಮಾಡಿ ಬಿಲ್ಲಿನ ವಿದ್ಯೆಯನ್ನೂ ಹೇಳಿಕೊಡಲು ಅವನು ಸರ್ವವಿದ್ಯಾವಿಶಾರದನಾದನು. ಭೀಷ್ಮನು ಆ ಕೃಪಾಚಾರ್ಯರ ಬಳಿ ಮಕ್ಕಳನ್ನು ವಿದ್ಯಾಭ್ಯಾಸ ಮಾಡಿಸಿದನು. ೩೪. ಗುಣಾರ್ಣವನ ಹಾಗೆ (ಅರ್ಜುನ-ಅರಿಕೇಸರಿ) ಕುಶಾಗ್ರಬುದ್ಧಿಗಳಾಗಿರುವವರು ಯಾರಿದ್ದಾರೆ? ಏಕೆಂದರೆ ಶುದ್ಧವರ್ಣಮಾಲೆಯ ಸೂತ್ರವನ್ನೂ ಅಭ್ಯಾಸಮಾಡದೆಯೇ ಕ್ಷಣಮಾತ್ರದಲ್ಲಿ ಅಕ್ಷರಗಳನ್ನೂ ಕಲಿತನು. ಹಾಗೆಯೇ ಸೂತ್ರರೂಪದಲ್ಲಿ ಹೇಳಿದವುಗಳು ಅರ್ಥವಿವರಣೆಯಿಲ್ಲದೆಯೇ ತನ್ನ ಸಹಜ ಸ್ವಭಾವದಿಂದಲೇ ಅವನಿಗೆ ಅಧೀನವಾದುವು. ಉಳಿದ ಅನೇಕ ವಿದ್ಯೆಗಳು ಉಪಾಧ್ಯಾಯರೇ ಶಿಷ್ಯರಾದಂತೆ ಅವನಲ್ಲಿ ಸೇರಿಕೊಂಡವು. ವ॥ ಹಾಗೆ ಅಯ್ದು ಅಂಗಗಳಿಂದ ಕೂಡಿದ ವ್ಯಾಕರಣಶಾಸ್ತ್ರ ಮತ್ತು ವೃತ್ತಿಭೇದದಿಂದ ಕೂಡಿದ ಛಂದಶ್ಶಾಸ್ತ್ರಗಳಲ್ಲಿಯೂ ಶಬ್ದಾಲಂಕಾರದಿಂದ ಕೂಡಿದ ಅಲಂಕಾರಶಾಸ್ತ್ರದಲ್ಲಿಯೂ ವ್ಯಾಸ ವಾಲ್ಮೀಕಿ ಕಶ್ಯಪ ಮೊದಲಾದವರಿಂದ ರಚಿತವಾದ ಮಹಾಕಾವ್ಯಗಳಲ್ಲಿಯೂ ನಾಂದಿ, ಪ್ರರೋಚನ, ಪ್ರಸ್ಥಾವನ, ಇತಿವೃತ್ತ, ಸಂಧಿಪ್ರವೇಶ, ನಿಷ್ಕಂಭ, ಕಪೋತಿಕಾ, ವ್ಯಾಳಿಕಾ ಮೊದಲಾದ ಲಕ್ಷಣಗಳಿಂದ ಕೂಡಿದ ನಾಟಕಶಾಸ್ತ್ರದಲ್ಲಿಯೂ ಹದಿನೆಂಟು ಧರ್ಮಶಾಸ್ತ್ರಗಳಲ್ಲಿಯೂ ನಾಲ್ಕು ವೇದಗಳಲ್ಲಿಯೂ ಆರು ಅಂಗಗಳಲ್ಲಿಯೂ ಅಯ್ದು ರೀತಿಯ ಮಂತ್ರಗಳಲ್ಲಿಯೂ ಆರು ದರ್ಶನಗಳಲ್ಲಿಯೂ ಭರತಪ್ರಣೀತವಾದ ನಾಟ್ಯ

ಗಾಂಧರ್ವವಿದ್ಯಾವಿಶೇಷಂಗಳೊಳಂ ಗಜಾಗಮಜ್ಞ ರಾಜಪುತ್ರ ಗೌತಮ ವಾದ್ವಾಕಿ ಪಾಳ ಕಶ್ಯಪ ಸುಪತಿ ಶ್ರೀಹರ್ಷಾದಿ ಪುರಾಣಪುರುಷವಿರಚಿತಂಗಳಪ್ಪ ಹಸ್ತಿಶಾಸ್ತ್ರಂಗಳೊಳಂ ಚಿತ್ರಕರ್ಮ ಪತ್ರಚ್ಛೇದ ಗ್ರಹಗಣಿತ ರತ್ನಪರೀಕ್ಷೆಗಳೊಳಂ ದಾರುಕರ್ಮ ವಾಸ್ತುವಿದ್ಯಾಪೂರ್ವಯಂತ್ರ ಪ್ರಯೋಗ ವಿಷಾಪಹರಣ ಸರಭೇದ ರತಿತಂತ್ರೇಂದ್ರಜಾಲ ವಿವಿಧ ವಿದ್ಯೆಗಳೊಳಮನೇಕಾಕ್ಷರ ಸ್ವರೂಪಂಗಳೊಳಂ ಚಾಪ ಚಕ್ರ ಪರಶು ಕೃಪಾಣ ಶಕ್ತಿ ತೋಮರ ಮುಸಲ ಮುಸುಂಡಿ ಭಿಂಡಿವಾಳ ಮುದ್ಗರ ಗದಾದಿ ವಿವಿಧಾಯುಧಂಗಳೊಳಮತಿ ಪ್ರವೀಣನುಮಾರೂಢಸರ್ವಜ್ಞ ಮಹೇಂದ್ರ ಜಾಣ(?)ನುಮಾಗಿ–

ಕಂ॥ ಉಳ್ಳೋದುಗಳೊಳಗನಿತಜಿ<br>
ವುಳ್ಳರ್ಗಂ ತಿಳಿಪಲರಿಯದೆನಿಪೆಡೆಗಳುಮಂ ॥<br>
ತೆಳ್ಳಗಿರೆ ತಿಳಿಪುಗುಂ ಬೆಸ<br>
ಗೊಳ್ಳ ಗುಣಾರ್ಣವನ ಲೆಕ್ಕಮಂ ಪೊಕ್ಕಮುಮಂ ॥ ೩೫

ವ॥ ಎಂದು ಲೋಕಮೆಲ್ಲಂ ಪೊಗೞೆ ನೆಗೞ್ದ ಪೊಗೞ್ತೆಗಂ ನೆಗೞ್ತೆಗಂ ತಾನೆ ಗುಱಿಯಾಗಿ–

ಕಂ ॥ ಮಾನಸದೊಳ್ ಹಂಸೆಯವೋಲ್<br>
ಮಾನಸ ವಾಗ್ವನಿತೆ ತನ್ನ ಮಾನಸದೊಳಿವಂ ।<br>
ಮಾನಸನೆಂದಗಲದೆ ನಿಲೆ<br>
ಮಾನಸನಾದಂ ಸರಸ್ವತೀ ಕಳಹಂಸಂ ॥ ೩೬

ಶಾಸ್ತ್ರದಲ್ಲಿಯೂ ನಾರದನೇ ಮೊದಲಾದವರಿಂದ ರಚಿತವಾದ ಸಂಗೀತ ವಿದ್ಯಾವಿಶೇಷಗಳಲ್ಲಿಯೂ ಹಸ್ತಿಶಾಸ್ತ್ರಜ್ಞರಾದ ರಾಜಪುತ್ರ ಗೌತಮ, ವಾದ್ವಾಕಿ, ಪಾಳಕಾಪ್ಯ, ಸುಗತಿ, ಶ್ರೀಹರ್ಷನೇ ಮೊದಲಾದ ಪ್ರಾಚೀನರಿಂದ ವಿರಚಿತವಾದ ಹಸ್ತಿಶಾಸ್ತ್ರದಲ್ಲಿಯೂ ಚಿತ್ರಕರ್ಮ, ಪತ್ರಚ್ಛೇದ, ಗ್ರಹಗಣಿತ, ರತ್ನಪರೀಕ್ಷೆಗಳಲ್ಲಿಯೂ ದಾರುಕರ್ಮ, ವಾಸ್ತು - ವಿದ್ಯೆಗಳಿಂದ ಕೂಡಿದ ಯಂತ್ರೋಪಯೋಗದಲ್ಲಿಯೂ ವಿಷಾಪಹರಣ, ಸ್ವರಭೇದ, ರತಿತಂತ್ರ, ಇಂದ್ರಜಾಲ ಮೊದಲಾದ ಬಗೆಬಗೆಯ ವಿದ್ಯೆಗಳಲ್ಲಿಯೂ ಅನೇಕಾಕ್ಷರಸ್ವರೂಪದಲ್ಲಿಯೂ ಚಾಪ, ಚಕ್ರ, ಪರಸು, ಕೃಪಾಣ, ಶಕ್ತಿ, ತೋಮರ, ಮುಸಲ, ಮುಸುಂಡಿ, ಭಿಂಡಿವಾಳ, ಮುದ್ಗರ, ಗದೆಯೇ ಮೊದಲಾದ ವಿಧವಿಧವಾದ ಆಯುಧಗಳ ಪ್ರಯೋಗದಲ್ಲಿಯೂ ಅತಿಪ್ರವೀಣನೂ ಸರ್ವಜ್ಞತ್ವವುಳ್ಳವನೂ ಇಂದ್ರನಂತೆ ಜಾಣನೂ ಆದನು. ೩೫. ಇರುವ ವಿದ್ಯೆಗಳಲ್ಲೆಲ್ಲ ಪೂರ್ಣಪಾಂಡಿತ್ಯಪಡೆದವರಿಗೂ ತಿಳಿಸುವುದಕ್ಕೆ ಅಸಾಧ್ಯವಾದ ಸ್ಥಳಗಳಲ್ಲಿಯೂ ಅರ್ಜುನನು (ಅರಿಕೇಸರಿಯು) ಸರಳವಾಗಿ ತಿಳಿಸುತ್ತಾನೆ. ಅರ್ಜುನನ ಲೆಕ್ಕಪೊಕ್ಕಗಳನ್ನು ವಿಚಾರಮಾಡಿ ನೋಡಯ್ಯಾ ವ॥ ಎಂದು ಲೋಕದ ಜನರೆಲ್ಲ ಹೊಗಳುವ ಹಾಗೆ ಪ್ರಸಿದ್ಧಿಪಡೆದ ಹೊಗಳಿಕೆಗೂ ಪ್ರಸಿದ್ಧಿಗೂ ತಾನೆ ಗುರಿಯಾದನು. ೩೬. ಇವನ ಮನಸ್ಸಿನಲ್ಲಿ ಹುಟ್ಟಿದ ವಾಗ್ದೇವತೆಯು ಇವನು ಮನುಷ್ಯನೆಂದು ಬಿಟ್ಟು ಹೋಗದೆ ಮಾನಸ ಸರೋವರದಲ್ಲಿರುವ ಹಂಸಪಕ್ಷಿಯ ಹಾಗೆ ಸ್ಥಿರವಾಗಿ ನಿಲ್ಲಲು ಸರಸ್ವತಿಯ ವಾಹನವಾದ ಹಂಸದ ಹಾಗಿರುವ ಅರ್ಜುನನು ಮನುಷ್ಯಮಾತ್ರನಾಗಿದ್ದಾನೆ.

ವ॥ ಅಂತಯ್ವರುಂ ಸಮಸ್ತ ಶಸ್ತ್ರ ಶಾಸ್ತ್ರ ಪ್ರಯೋಗ ಪ್ರವೀಣರಾಗೆ ಧರ್ಮಪುತ್ರಂ ಧರ್ಮಶಾಸ್ತ್ರಂಗಳೊಳಂ ಶ್ರುತಿಸ್ಮೃತಿಗಳೊಳಂ ಪ್ರವೀಣನಾದಂ ಭೀಮಸೇನಂ ವ್ಯಾಕರಣದೊಳಾರಿಂದ ಮಗ್ಗಳಂ ಕುಶಲನಾದಂ ನಕುಲಂ ಕುಂತಶಸ್ತ್ರದೊಳತಿ ಪ್ರವೀಣನುಮಾಗಿ ಅಶ್ವವಿದ್ಯೆಯೊಳಾರಿಂದಂ ಪಿರಿಯನಾದಂ ಸಹದೇವಂ ಜ್ಯೋತಿರ್ಜ್ಞಾನದೊಳತಿ ಪರಿಣತನಾದಂ

ಚಂ ॥ ಬಳೆದುವು ತೋಳ್ಗಳೆಕ್ಕೆಯಿನಮಳ್ ಬಳೆವಂತಿರೆ ಮುಯ್ವುಗಳ್ ಕುಳಾ
ಚಳ ಶಿಖರಂಗಳಂ ಮಸುಳಿವಂದುವು ಪರ್ವಿದ ವಕ್ಷಮೀ ಕ್ಷಮಾ ।
ತಳ ಕುಳಲಕ್ಷ್ಮಿಗಾಯ್ತು ಕುಳಮಂದಿರಮೆಂದು ಮಹೀತಳಂ ಮನಂ
ಗೊಳೆ ನೆಱೆದತ್ತುದಾತ್ತ ನವಯೌವನಮೊರ್ಮೆಯೆ ಧರ್ಮಪುತ್ರನಾ ॥ ೩೭

ವ॥ ಅಂತು ಸೊಗಯಿಸುವ ರೂಪಿನೊಳ್ ಪೊನ್ನ ಬಣ್ಣದಂತಪ್ಪ ತನ್ನ ಮೆಯ್ಯ ಬಣ್ಣ ಮಳವಲ್ಲದೊಪ್ಪೆ-

ಚಂ ॥ ಕುಳಗಿರಿಯಂ ಸರೋಜನಿಲಯಂ ಮನುಜಾಕೃತಿಯಾಗೆ ಮಾಡಿದಂ
ತೊಳವೆನಿಪಂತುಟಪ್ಪ ಪೊಸ ಬಣ್ಣದೊಳೊಂದಿದ ಪಾರಿಜಾತಮ ।
ಗ್ಗಳಮೆಸೆದೊಪ್ಪುವಂತೆ ತಳಿರಿಂ ಮುಗುಳಿಂ ನವಯೌವನಂ ಮನಂ
ಗೊಳೆ ಕರಮೊಪ್ಪಿದಂ ದಶ ಸಹಸ್ರ ಮದೇಭ ಬಳಂ ವೃಕೋದರಂ ॥ ೩೮

ವ॥ ಅಂತೊಪ್ಪುವ ಗಂಡಗಾಡಿಯೊಳಿಂದ್ರನೀಲದಂತಪ್ಪ ಬಣ್ಣಂ ಕಣ್ಗೆವರೆ-

ವ॥ ಹಾಗೆ ಅಯ್ದು ಜನರೂ ಸಮಸ್ತಶಸ್ತ್ರಶಾಸ್ತ್ರಪ್ರಯೋಗಗಳಲ್ಲಿಯೂ ನಿಪುಣರಾದರು. ಧರ್ಮರಾಜನು ಧರ್ಮಶಾಸ್ತ್ರಗಳಲ್ಲಿಯೂ ಶ್ರುತಿಸ್ಮೃತಿಗಳಲ್ಲಿಯೂ ಪ್ರವೀಣನಾದನು. ಭೀಮಸೇನನು ವ್ಯಾಕರಣದಲ್ಲಿ ಎಲ್ಲರಿಗಿಂತಲೂ ಮೇಲಾದ ಬುದ್ಧಿವಂತನಾದನು. ನಕುಲನು ಕುಂತಶ್ಯಾಸ್ತ್ರದಲ್ಲಿ ಪ್ರವೀಣನಾಗಿ ಅಶ್ವವಿದ್ಯೆಯಲ್ಲಿ ಎಲ್ಲರಿಗಿಂತಲೂ ಹಿರಿಯನಾದನು. ಸಹದೇವನು ಜ್ಯೋತಿಶ್ಶಸ್ತ್ರದಲ್ಲಿ ಪಂಡಿತನಾದನು. ೩೭. ಧರ್ಮ ರಾಜನ ಎರಡು ತೋಳುಗಳೂ ಅವಳಿಗಳೂ ಬೆಳೆದಂತೆ ಜೊತೆಯಲ್ಲಿಯೇ ಬೆಳೆದುವು. ಹೆಗಲುಗಳು ಕುಲಪರ್ವತಗಳ ಶಿಖರಗಳನ್ನು ತಿರಸ್ಕರಿಸಿದುವು (ಕಾಂತಿಹೀನವನ್ನಾಗಿ ಮಾಡಿದುವು). ವಿಸ್ತಾರವಾದ ಅವನ ಎದೆಯು ಅಸಮಾನಳಾದ ಈ ಭೂದೇವಿಗೆ ವಂಶಪಾರಂಪರ್ಯವಾಗಿ ಬಂದ ನಿವಾಸವಾಯಿತು ಎಂದು ಲೋಕದ ಜನ ಸಂತೋಷಿಸುವ ಹಾಗೆ ಧರ್ಮರಾಜನ ಉದಾತ್ತವಾದ ಹೊಸಯೌವನವು ಒಟ್ಟಿಗೆ ತುಂಬಿ ಬಂದಿತು. ವ॥ ಹಾಗೆ ಸೊಗಯಿಸುವ ಆಕಾಶದಲ್ಲಿ ಚಿನ್ನದ ಬಣ್ಣದ ಹಾಗಿರುವ ತನ್ನ ಶರೀರದ ಬಣ್ಣವು ಅಳತೆಯಿಲ್ಲದೆ ಪ್ರಕಾಶಿಸಿತು. ೩೮. ಬ್ರಹ್ಮನು ಕುಲಪರ್ವತವನ್ನು ಮನುಷ್ಯನ ರೂಪದಲ್ಲಿ ಮಾಡಿದ್ದಾನೆ ಎನಿಸಿಕೊಂಡು ಭೀಮನು ಅದೇ ಬಣ್ಣದ ಪಾರಿಜಾತವು ಚಿಗುರಿನಿಂದಲೂ ಮೊಗ್ಗುಗಳಿಂದಲೂ ಕೂಡಿ ಪ್ರಕಾಶಮಾನವಾಗಿ ಒಪ್ಪುವಂತೆ ಅವನ ಹೊಸಪ್ರಾಯವು ಆಕರ್ಷಕವಾಗಿರಲು ಹತ್ತುಸಾವಿರ ಮದ್ದಾನೆಗಳ ಬಲವುಳ್ಳವನಾಗಿ ಒಪ್ಪಿ ತೋರಿದನು. ವ॥ ಹಾಗೆ ಒಪ್ಪುವ ಸೌಂದರ್ಯದಲ್ಲಿ

ಚಂ ॥ ಶರದದ ಚಂದ್ರನಂ ವಿಮಲ ಚಂದ್ರಿಕೆ ಬಾಳದಿನೇಶನಂ ತಮೋ
ಹರಕಿರಣಂ ಕಿಶೋರ ಹರಿಯಂ ನವಕೇಸರ ರಾಜಿ ಮಿಕ್ಕ ದಿ ॥
ಕ್ಕರಿಯನನೂನ ದಾನ ಪರಿಶೋಭೆ ಮನಂಗೊಳೆ ಪೊರ್ದುವಂತೆ ಸುಂ
ದರ ನವಯೌವನಂ ನೆಱೆಯೆ ಪೊರ್ದೆ ಗುಣಾರ್ಣವನೊಪ್ಪಿ ತೋಱಿದಂ । ೩೯

ವ॥ ಅಂತು ನವಯೌವನಂ ನೆಱೆಯೆ ನಿಱಿನಿಱಿಗೊಂಡ ಗುಣಾರ್ಣವನ ತಲೆ ನವಿರ್ಗಳ್ ಲಾವಣ್ಯರಸಮನಿಡಿದಿಡಿದು ತೀವಿದ ಕಮಲಾಸನನ ಬೆರಲಚ್ಚುಗಳನ್ನವಾದುವು ಮೂಱುಂ ಲೋಕದ ಮೂಱು ಪಟ್ಟಮನಾಳಲ್ಕೆ ತಕ್ಕ ಲಕ್ಷಣ ಸಂಪೂರ್ಣಮಪ್ಪ ಸಹಜಮನೋಜನ ಲಲಾಟಂ ಪಟ್ಟಂಗಟ್ಟಿದ ನೊಸಲ್ಗೆ ಲಕ್ಷಣಮನಱಸಲ್ವೇಡೆಂಬಂತಾದುದು ಕರ್ಬಿನ ಬಿಲ್ಲ ಕೊಂಕಿನಂತೆ ಕೊಂಕಿಯುಂ ಪರವನಿತೆಯರೆರ್ದೆಗೆ ಕೊಂಕಿಲ್ಲದೆಯುಂ ಸೊಗಯಿಸುವ ಸುರತ ಮಕರಧ್ವಜನ ಪುರ್ವುಗಳ್ ಕಾಮದೇವನ ವಿಜಯ ವೈಜಯಂತಿಗಳಂತಾದುವು ನೀಳ್ಪಂ ಬೆಳ್ಪುಮಂ ತಾಳ್ದಿ ಪರವನಿತೆಯರ ದೆಸೆಗೆ ಕಿಸುಗಣ್ಣಿದಂತೆ ಕಿಸು ಸೆರೆವರಿದು ಸೊಗಯಿಸುವ ಶೌಚಾಂಜನೇಯನ ಕಣ್ಗಳೆಂಬಲರಂಬುಗಳ್ ಗಣಿಕಾಜನಂಗಳೆರ್ದೆಯಂ ನಟ್ಟು ಕೆಂಕಮಾದಂತಾದುವು ರಿಪುಜನದ ಪೆರ್ಚಂಗಂ ಪರಾಂಗನಾಜನದ ಮೆಚ್ಚಂಗಂ ಮೂಗಿಱಿವಂತೆ ಸೊಗಯಿಸುವ ಗಂಧೇಭ ವಿದ್ಯಾಧರನ ಮೂಗು ತನ್ನ ಸುಯ್ಯ ಕಂಪನಲ್ಲದೆ ಪೆಱರ ಕಂಪನಾಸೆವಡದಂತಾದುದು ಪೊಸ

ಇಂದ್ರನೀಲಮಣಿಯ ಹಾಗಿರುವ ಬಣ್ಣವು ಮನೋಹರವಾಗಿರಲು ೩೯. ಶರತ್ಕಾಲದ ಚಂದ್ರನನ್ನು ನಿರ್ಮಲವಾದ ಬೆಳದಿಂಗಳೂ ಬಾಲಸೂರ್ಯನನ್ನು ಕತ್ತಲೆಯನ್ನು ಹೋಗಲಾಡಿಸುವ ಕಿರಣಗಳೂ ಸಿಂಹದಮರಿಯನ್ನು ಹೊಸದಾಗಿ ಹುಟ್ಟಿದ ಅದರ ಕತ್ತಿನ ಕೂದಲರಾಶಿಯೂ ಉಳಿದ ದಿಗ್ಗಜಗಳನ್ನೂ ಸ್ವಲ್ಪವೂ ಕಡಿಮೆಯಿಲ್ಲದ ಮದೋದಕದ ಕಾಂತಿಯೂ ಆಕರ್ಷಿಸುವ ರೀತಿಯಲ್ಲಿ ಸೇರಿಕೊಳ್ಳುವಂತೆ ಸುಂದರವಾದ ಹೊಸಯೌವನವು ಪೂರ್ಣವಾಗಿ ಬಂದು ಕೂಡಲು ಗುಣಾರ್ಣವನು ಒಪ್ಪಿ ತೋರಿದನು. ವ॥ ಹಾಗೆ ನವಯೌವನವು ಸಂಪೂರ್ಣವಾಗಲು ಗುಂಗುರುಗುಂಗುರಾದ ಗುಣಾರ್ಣವನ ತಲೆಯ ಕೂದಲು ಸೌಂದರ್ಯರಸವನ್ನು ಮಿದಿದುಮಿದಿದು ತುಂಬಿದ ಬ್ರಹ್ಮನ ಬೆರಳಚ್ಚುಗಳಂತಾದುವು; ಸ್ವರ್ಗ, ಮರ್ತ್ಯ ಪಾತಾಳಗಳೆಂಬ ಮೂರುಲೋಕಗಳ ಮೂರು ರಾಜ್ಯಭಾರವನ್ನು ಮಾಡುವುದಕ್ಕೂ ಯೋಗ್ಯವಾದ ಲಕ್ಷಣಗಳಿಂದ ತುಂಬಿರುವ ಸಹಜಮನೋಜನಾದ ಅರ್ಜುನನ ಹಣೆಯು ಪಟ್ಟಾಭಿಷೇಕಮಾಡಿದ ಹಣೆಗೆ ಯಾವ ಲಕ್ಷಣವಿರಬೇಕೆಂಬುದನ್ನು (ಅನ್ಯಥಾ) ಹುಡುಕಬೇಡ ಎನ್ನುವಂತಾಯಿತು; (ಅಂದರೆ ಆ ಎಲ್ಲ ಲಕ್ಷಣಗಳೂ ಈ ಹಣೆಯಲ್ಲಿಯೇ ಇವೆ ಎಂದರ್ಥ). ಮನ್ಮಥನ ಕಬ್ಬಿನ ಬಿಲ್ಲಿನ ವಕ್ರತೆಯಂತೆ ಬಗ್ಗಿದ್ದರೂ ಅನ್ಯಸ್ತ್ರೀಯರ ಪ್ರೀತಿಗೆ ಬಗ್ಗದೆ ಸೊಗಯಿಸುವ ಸುರತಮಕರಧ್ವಜನ ಹುಬ್ಬುಗಳು ಮನ್ಮಥನ ವಿಜಯದಂತಾದುವು; ದೀರ್ಘತ್ವವನ್ನೂ ಬಿಳಿಯ ಬಣ್ಣವನ್ನೂ ಹೊಂದಿ ಅನ್ಯಸ್ತ್ರೀಯರ ವಿಷಯದಲ್ಲಿ ಕೋಪಿಸಿಕೊಂಡಂತೆ ಕೆಂಪಾದ ರಕ್ತನಾಳಗಳಿಂದ ಕೂಡಿ ಸೊಗಯಿಸುವ ಶೌಚಾಂಜನೇಯನ ಕಣ್ಣುಗಳೆಂಬ ಪುಷ್ಪಬಾಣಗಳು ವೇಶ್ಯಾಸ್ತ್ರೀಯರ ಎದೆಯಲ್ಲಿ ನಾಟಿ ಕೆಂಪಾದಂತಾದುವು; ಶತ್ರುಜನಗಳ ಅಭಿವೃದ್ಧಿಗೂ ಪರಾಂಗನೆಯರ ಮೆಚ್ಚಿಕೆಗೂ ಜುಗುಪ್ಸೆ ಪಡುವ ಹಾಗೆ ಸೊಗಯಿಸುವ ಗಂದೇಭವಿದ್ಯಾಧರನ ಮೂಗು ತನ್ನ ಉಸಿರಿನ

**ಜವ್ವನದ ಮುಂಬಣ್ಣದಂತೆ ಕರ್ಪಂ ಕೈಕೊಂಡು ಕತ್ತುರಿಯಲ್ ಬರೆದಂತಪ್ಪ ವಿಕ್ರಾಂತ ತುಂಗನ ಮೀಸೆಗಳಾತನ ತೀವ್ರ ಪ್ರತಾಪಾನಳ ಧೂಮಲೇಖೆಯಂತಾದುವು ಪುಳಿಯೊಳಲೆದ ಪವಳದ ಬಟ್ಟನಂತೆ ಸೊಗಯಿಸುವ ಸಂಸಾರಸಾರೋದಯನ ಬಿಂಬಾಧರಮನಂಗರಾಗರಸದುರುಳಿ ಯಂತಾದುದು ರಸದಾಡಿಮದ ಬಿತ್ತುಮಂ ಪೊಸ ಮುತ್ತುಮಂ ಮುಕ್ಕುಳಿಸಿದಂತಪ್ಪ ವಿಬುಧವನಜವನ ಕಳಹಂಸನ ದಂತಪಙ್ತಿಗಳಮೃತಕಿರಣನ ಕಾಂತಿಗಳನಿಳಿಸುವಂತಾದುವು ಮಡಿದು ತಂದಿಟ್ಟ ಪೊಸನೆಯ್ದಿಲ ಕಾವನಾವಗಂ ಗೆಲ್ದ ರತ್ನಕುಂಡಲಂಗಳ ಪೊಳಪನೊಳಕೊಂಡಂತೆ ನಸುನೇಲ್ವ ಕರ್ಣಾಟೀ ಕರ್ಣಪೂರನ ಪಾಲೆಗಳುಂ ಸರಸ್ವತಿಯಾಡುವ ಲೀಲಾಂದೋಳದಂತಾದುವು ಬಳ್ವಳ ಬೆಳೆದೆಳಗೌಂಗಿನಂತೆ ಲೋಕದ ಚೆಲ್ವೆಲ್ಲಮನೊಳಕೊಂಡು ರೇಖೆಗೊಂಡ ಲಾಟೀ ಲಲಾಮನ ಪರಿಣದ್ಧ ಕಂಧರಂ ಯುವರಾಜ ಕಂಠಿಕಾಭರಣಮಂ ಕಟ್ಟುವುದರ್ಕೆ ನೋಂತು ತನ್ನ ಚೆಲ್ವನಲ್ಲದೆ ಪೆಱರ ಚೆಲ್ವನಾಸೆವಡದಂತಾದುದು ಕುಲದ ಚಲದ ಮೈಮೆಯೊಳ್ ತನ್ನನೆ ನೋಡಿದ ಸಂತೋಷದೊಳುತ್ಸಾಹಮಾದಂತೆ ಸೊಗಯಿಸುವ ಸಮರೈಕಮೇರುವಿನ ಭುಜಶಿಖರಂಗಳ್ ಕುಲಶಿಖರಿ ಶಿಖರಂಗಳಂತಾದುವು ವ್ಯಾಳ ಗಜಂಗಳು ಮನಂಕದ ಬರ್ದೆಯರುಮನುಗಿಬಗಿಮಾಡಿದ ಸಂತೋಷದೊಳ್ ಬಳ್ವಳ ಬಳೆದ ವಿಕ್ರಾಂತತುಂಗನ ನಿಡುದೋಳ್ಗಳ್ ಗಣಿಕಾಜನಕ್ಕೆ ಕಾಮಪಾಶಂಗಳುಮರಾತಿಜನಕ್ಕೆ ಯಮಪಾಶಂಗಳುಮಾದುವು**

ವಾಸನೆಯಲ್ಲದೆ ಇತರರ ವಾಸನೆಗೆ ಆಸೆಪಡದಂತಾಯಿತು! ಹೊಸಪ್ರಾಯದ ಮೊದಲ ಬಣ್ಣದಂತೆ ಕಪ್ಪಾಗಿ ಕಸ್ತೂರಿಯಿಂದ ಬರೆದಂತಿರುವ ವಿಕ್ರಾಂತತುಂಗನ ಮೀಸೆಗಳು ಅವನ ಭಯಂಕರವಾದ ಪ್ರಾತಾಪಗ್ನಿಯ ಹೊಗೆಯ ರೇಖೆಯಂತಾದುವು; ಹುಳಿಯಿಂದ ತೊಳೆದ ಹವಳದ ಬಟ್ಟಿನಂತೆ ಸೊಗಯಿಸುವ ಸಂಸಾರಸಾರೋದಯನ ಕೆಂಪಾದ ತುಟಿಯು ಕಾಮರಸದ ಉಂಡೆಯಂತಾಯಿತು; ದಾಳಿಂಬದ ಬೀಜಗಳನ್ನೂ ಹೊಸಮುತ್ತುಗಳನ್ನೂ ಉಗುಳುವಂತಿದ್ದ ವಿಬುಧವನಜವನಕಳಹಂಸನ ಹಲ್ಲಿನ ಸಾಲುಗಳು ಚಂದ್ರನ ಕಾಂತಿಯನ್ನು ತಿರಸ್ಕರಿಸುವಂತಾದುವು; ಮಡಿಸಿ ತಂದಿರಿಸಿದ ಹೊಸನೆಯ್ದಿಲೆಯ ಕಾವನ್ನು ಯಾವಾಗಲೂ ಗೆದ್ದಿರುವ ರತ್ನದ ಹತ್ತು ಕಡುಕುಗಳ ಹೊಳಪನ್ನೊಳಕೊಂಡು ಹಾಗೆಯೇ ಸ್ವಲ್ಪ ಜೋಲಾಡುತ್ತಿರುವ ಕರ್ಣಾಟೀಕರ್ಣಪೂರನ ಕಿವಿಯ ಹಾಲೆಗಳು ಸರಸ್ವತಿಯು ತೂಗುತ್ತಿರುವ ಆಟದುಯ್ಯಾಲೆಯಂತಾದುವು; ಬಳಬಳನೆ (ಸೊಂಪಾಗಿ) ಬೆಳೆದ ಎಳೆ ಅಡಿಕೆಯಂತೆ ಲೋಕಸೌಂದರ್ಯವನ್ನೆಲ್ಲ ತನ್ನಲ್ಲಿ ಸೇರಿಸಿಕೊಂಡು ಗೆರೆಯನ್ನು ಹೊಂದಿದ ಲಾಟೀಲಲಾಮನ ತುಂಬುಗೊರಳು ಯುವರಾಜಪಟ್ಟಾಭೀಷೇಕಕ್ಕೆ ಯೋಗ್ಯವಾದ ಒಡವೆಯನ್ನು ಧರಿಸುವುದಕ್ಕೆ ವ್ರತಮಾಡಿ ತನ್ನ ಸೌಂದರ್ಯವನ್ನೇ ಅಲ್ಲದೆ ಇತರ ಸೌಂದರ್ಯಕ್ಕೂ ಆಸೆಪಡುವಹಾಗಾಯಿತು. ಕುಲ ಮತ್ತು ಛಲದ ಮಹಿಮೆಯಲ್ಲಿ ತನ್ನನ್ನೇ ನೋಡಿದ ಸಂತೋಷವು ಉತ್ಸಾಹವಾದ ಹಾಗೆ ಸೊಗಯಿಸುವ ಸಮರೈಕಮೇರುವಿನ ಭುಜದ ಮೇಲುಭಾಗಗಳು ಕುಲಪರ್ವತದ ಶಿಖರಗಳ ಹಾಗೆ ಆದುವು; ದುಷ್ಟ ಆನೆಗಳನ್ನೂ ಸುಪ್ರಸಿದ್ಧರಾದ ಸುಮಂಗಲಿಯರನ್ನೂ (ಕುಲಸ್ತ್ರೀಯರನ್ನೂ) ಹೆದರಿಸಿದ ಸಂತೋಷದಲ್ಲಿ ಸುಪುಷ್ಟವಾಗಿ ಬೆಳೆದ ವಿಕ್ರಾಂತತುಂಗನ ದೀರ್ಘವಾದ ತೋಳುಗಳು ವೇಶ್ಯಾಸ್ತ್ರೀಯರಿಗೆ ಕಾಮಪಾಶವೂ ಶತ್ರುರಾಜರಿಗೆ ಯಮಪಾಶವೂ ಆದುವು; ಕೆಂಪು ಮುಳ್ಳುಮುತ್ತುಗದ ಚಿಗುರಿನ ಹಾಗೆ

ರಕ್ತಾಶೋಕಪಲ್ಲವದಂತೆ ತೊಳತೊಳಗುವಾಂಧ್ರೀ ಕುಚಕಲಶ ಪಲ್ಲವನ ಕರತಳಪಲ್ಲವಂಗಳ್ ಸಮದ ಗಜಕುಂಭಸ್ಥಳಾಸ್ಫಾಳನ ಕರ್ಕಶಂಗಳಾದುವು ಪೊಡರ್ವ ಪಗೆವರನುಱಿದೆ ಕೊಂಡ ಸಂತೋಷದೊಳಂ ಶ್ರೀಯನೊಳಕೊಂಡ ಸಂತೋಷದೊಳಂ ತೆಕ್ಕನೆ ತೀವಿದ ಕೇರಳೀ ಕೇಳಿ ಕಂದರ್ಪನಗಲುರಂ ಲಕ್ಷ್ಮಿಗೆ ಕುಲಭವನಮುಂ ನಿವಾಸಭವನಮುಮಾದುದು ಪೊಡರ್ವ ಮಂಡಳಿಕರ ಮನದಂತೆ ಕರಮಸಿದಾದ ಪರಾಕ್ರಮಧವಳನ ಮಧ್ಯಪ್ರದೇಶಂ ನಾರಾಯಣಂ ತನ್ನಾಳ್ದಂ ಮಾಡಿ ತಾನಾಳ್ಮಾಡಿಯುಂ ತಾನಳ್ಳಾಡೆಯುಂ ಬರ್ದೆಯರ ಮನವನಳ್ಳಾಡಿಸುವಂತಾದುದು ಗಂಭೀರಗುಣದೊಳಮಾವರ್ತನ ಸಿದ್ಧಿಯೊಳಂ ಜಳನಿಧಿಯನೆ ಪೋಲ್ವ ಶರಣಾಗತ ಜಳನಿಧಿಯ ನಿಮ್ನನಾಭಿ ಚೆಲ್ವಿಂಗೆ ತಾನೆ ನಾಭಿಯಾದುದು ಸಿಂಹಕಟಿತಟಮನಿಳಿಸುವ ರಿಪುಕುರಂಗ ಕಂಠೀರವನ ಕಟಿತಟವೊಲ್ದು ನೋಡುವ ಗಾಡಿಕಾರ್ತಿಯರ ಕಣ್ಗೆ ಕಾಮನಡ್ಡಣದಂತೆ ದೊಡ್ಡಿತ್ತಾಗಿ ಮಿಱುವುದ್ವೃತ್ತ ವೃತ್ತತೆಯು ನೀಟ್ಟುಕೊಂಡಂತುದ್ವೃತ್ತಂಗಳಾದುವು ಉದಾತ್ತನಾರಾಯಣನೂರುಯುಗ್ಮಂಗಳ್ ಮಾನಿನಿಯರ ಮನೋಗಜಂಗಳಂ ಕಟ್ಟಲ್ಕಾಲಾನ ಸ್ತಂಭಂಗಳಾದುವು ಅಂತಪೂರ್ವಂಗಳಾಗಿ ತೊಳಗುವ ಕಿಱುದೊಡೆಗಳುಡುವಡರ್ದನ್ನಮಾರೂಢ ಸರ್ವಜ್ಞನ ದೊಡ್ಡ ಮಾರ್ಗಂಗಳೆಳವಾಟೆಯ ದಿಂಡಿನೊಳ್ ಸಾಣೆಗಟ್ಟಿದಂತಾದುವು

ಪ್ರಕಾಶಮಾನವಾಗಿರುವ ಆಂಧ್ರೀಕುಚಕಲಶಪಲ್ಲವನ ಚಿಗುರಿನಂತಿರುವ ಅಂಗೈಗಳು ಮದ್ದಾನೆಗಳ ಕುಂಭಸ್ಥಳವನ್ನು ಅಪ್ಪಳಿಸುವುದರಿಂದ ಒರಟಾದುವು; ಉದ್ಧತರಾದ ಶತ್ರುಗಳನ್ನು ಶೀಘ್ರವಾಗಿ ಸೋಲಿಸಿದ ಸಂತೋಷದಿಂದಲೂ ಐಶ್ವರ್ಯವನ್ನು ಪಡೆದ ಸಂತೋಷದಿಂದಲೂ ಇದ್ದಕ್ಕಿದ್ದ ಹಾಗೆ ತುಂಬಿಕೊಂಡ ಕೇರಳೀಕೇಳೀಕಂದರ್ಪನ ವಿಶಾಲವಾದ ಎದೆಯು ಲಕ್ಷ್ಮೀದೇವಿಗೆ ವಂಶಪಾರಂಪರ್ಯವಾಗಿ ಬಂದ ನೆಲೆಯೂ ನಿತ್ಯವಾಸಸ್ಥಳವೂ ಆಯಿತು; ಉದ್ವೃತ್ತರಾದ (ಮೇಲೆ ಬೀಳುವ) ಸಾಮಂತರಾಜರ ಮನಸ್ಸಿನಂತೆ ಬಹಳ ಕೃಶವಾದ ಪರಾಕರ್ಮಧವಳನ ಸೊಂಟವು ಶ್ರೀಮನ್ನಾರಾಯಣನು ತಾನೇ ಯಜಮಾನನಾಗಿಯೂ ತನ್ನನ್ನೇ ಆಳಾಗಿಯೂ ಮಾಡಿಕೊಂಡೂ ತಾನೇ ನರ್ತನಮಾಡಿ ಕುಲಸ್ತ್ರೀಯರ ಮನಸ್ಸನ್ನು ವಿಚಲಿತವನ್ನಾಗಿ ಮಾಡುವಂತಾಯಿತು. ಗಂಭೀರಗುಣದಲ್ಲಿಯೂ ಸುಳಿಸುಳಿಯಾಗಿರುವ ಇತರ ಗುಣದಲ್ಲಿಯೂ ಸಮುದ್ರವನ್ನು ಹೋಲುವ ಶರಣಾಗತ ಜಲನಿಧಿಯ ಆಳವಾದ ಹೊಕ್ಕುಳು ಸೌಂದರ್ಯಕ್ಕೆ ತಾನೆ ಕೇಂದ್ರವಾಯಿತು; ಸಿಂಹದ ಸೊಂಟದ ಭಾಗವನ್ನೂ ಹಿಯ್ಯಾಳಿಸುವ ರಿಪುಕುರಂಗಕಂಠೀರವನ ಸೊಂಟದ ಭಾಗವು ಪ್ರೀತಿಯಿಂದ ನೋಡುವ ಸುಂದರಸ್ತ್ರೀಯರ ಕಣ್ಣಿಗೆ ಕಾಮನ ಗುರಾಣಿಯಂತೆ ದೊಡ್ಡದಾಗಿ ಬೆಳೆದು ಅತಿಶಯವಾದ ದಪ್ಪವನ್ನು ತಾಳಿದಂತೆ ವಿಶೇಷ ಗುಂಡಾಗಿ ಬೆಳೆದುವು; ಉದಾತ್ತ ನಾರಾಯಣನ ಎರಡು ತೊಡೆಗಳು ಸ್ತ್ರೀಯರ ಮನಸ್ಸೆಂಬ ಆನೆಗಳನ್ನು ಕಟ್ಟುವ ಕಂಬಗಳಾದುವು, ಹಾಗೆಯೇ ಅಪೂರ್ವವಾಗಿ ಪ್ರಕಾಶಿಸುವ ಕಿರುದೊಡೆಗಳು ಉಡುಪತ್ತಿದಂಥವು - ಆರೂಢಸರ್ವಜ್ಞನ ತೊಡೆಯ ಕಿಣ ಅಥವಾ ಜಡ್ಡುಗಳು (ಕುದುರೆಸವಾರಿಮಾಡುವಾಗ ಒತ್ತಿ ಆದ ಜಡ್ಡು) ಎಳೆಯ ಬಾಳೆಯ ದಿಂಡಿನಲ್ಲಿ ಸಾಣೆಯಕಲ್ಲನ್ನು ಕಟ್ಟಿದ ಹಾಗಾದುವು; ಗೂಢವಾದ ಕಾಲಿನ ಹರಡನ್ನು ಹೊಂದಿರುವ

ಗೂಢಗುಲ್ಫಪಾರ್ಷ್ಣಿಗಳನೊಳಕೊಂಡ ಮನುಜಮಾಂಧಾತನ ಪೊಱ ಅಡಿಗಳ್ ವಿರೋಧಿ ಭೂಪಾಳರನಡಿಗೆಱಗಿಸಿದ ಸಂತೋಷದೊಳುನ್ನತಂಗಳಾದಂತೆ ಕೂರ್ಮೋನ್ನತಂಗಳಾದುವು ನೊಸಲಂ ಸುಟ್ಟಿ ತೋರ್ಪನ್ನವಪ್ಪುಂಗುಟಂಗಳೊಳ್ ಮಿಂಚಂ ಕೀಲಿಸಿದಂತೆ ತೊಳಗಿ ಪೊಳೆವ ಪ್ರಚಂಡ ಮಾರ್ತಾಂಡನ ಪಾದನಖಂಗಳ್ ಗಂಡರ ಪೆಂಡಿರಂಜಿದಳ್ಕಿದ ಮೊಗಮಂ ನೋಡಲ್ಕೆ ಕನ್ನಡಿಗಳನ್ನವಾದುವು ಪೊಸತಲರ್ದ ಕೆಂದಾವರೆಯ ಕೆಂಪುಮಂ ಮೆಲ್ಪುಮನಿಟ್ಟುಳಿಗೊಂಡು ತೊಳಗುವರಿಕೇಸರಿಯ ಪಾದತಳಂಗಳಡಿಗೆಱಗಿದರಿನರಪಾಲರ ಮಕುಟಮಾಣಿಕ್ಯಮರೀಚಜಾಲ ಬಾಳಾತಪಂಗಳನಲೆದು ಕೆಂಕಮಾದಂತಾದುವು ಪೊಸವೆಸಱಗೆಯ ಬಣ್ಣದಂತೆ ಸೊಗಯಿಸುವ ಸಾಮಂತಚೂಡಾಮಣಿಯ ಮೆಯ್ಯ ಬಣ್ಣಂ ವಿಧಾತ್ರನೆಂಬ ಚಿತ್ತಾರಿಯ ವರ್ಣಕ್ರಮಂಗೆಯ್ದ ಕದಳೀಗರ್ಭಶ್ಯಾಮಮೆಂಬ ಬಣ್ಣದಂತಾದುದು–

ಚಂ॥ ಮನದೊಳೊಱಲ್ದು ಜೋಲ್ದಳಿಪಿ ನೋಡಲೊಡಂ ಸೆಱೆಗೆಯ್ದು ಕಣ್ಣುಮಂ
ಮನಮುಮನಂಗಜನ್ಮನರಲಂಬುಗಳಿಂದೆ ಮರುಳ್ಚಿ ಬಂದ ಮಾ ।
ವಿನ ಬನದೊಳ್ ತೆರಳ್ಚಿ ಪೊಳೆವಿಂದುಮರೀಚಿಗಳಿಂದುರುಳ್ಚಿ ಪೂ
ವಿನ ಪಸೆಯೊಳ್ ಪೊರಳ್ಚಿದನಳುರ್ಕೆಯ ಬರ್ದೆಯರಂ ಗುಣಾರ್ಣವಂ ॥ ೪೦

ಮನುಜಮಾಂಧಾತನ ಅಡಿಯ ಹೊರಭಾಗಗಳು ಶತ್ರುರಾಜರನ್ನು ಕಾಲಿಗೆ ಬೀಳುವಂತೆ ಮಾಡಿದ ಸಂತೋಷದಲ್ಲಿ ಎತ್ತರವಾದಂತೆ ಹಾಗೆಯೇ ಆಮೆಯ ಚಿಪ್ಪಿನ ಮೇಲುಭಾಗದಂತೆ ಉಬ್ಬಿಕೊಂಡವು. ಮುಖವನ್ನು ಸುಟ್ಟಿ ತೋರಿಸುವಂತಿರುವ ಕಾಲಿನ ಬೆರಳುಗಳಲ್ಲಿ ಸ್ವಲ್ಪ ನೆಟ್ಟಿರುವ ಹಾಗೆ ಪ್ರಕಾಶಮಾನವಾಗಿರುವ ಪ್ರಚಂಡಮಾರ್ತಾಂಡನ ಕಾಲಿನ ಉಗುರುಗಳು ವೀರಪತ್ನಿಯರು ಹೆದರಿದ ತಮ್ಮ ಮುಖವನ್ನು ನೋಡುವುದಕ್ಕೆ (ಉಪಯೋಗಿಸುವ) ಕನ್ನಡಿಯಂತಾದುವು. ಹೊಸದಾಗಿ ಅರಳಿರುವ ಕೆಂಪುದಾವರೆಯಂತೆ ಕೆಂಪುಬಣ್ಣವನ್ನೂ ಬಿಳಿಯಬಣ್ಣವನ್ನೂ ತಿರಸ್ಕರಿಸುವ ಅರಿಕೇಸರಿಯ ಪಾದತಳಗಳು ಕಾಲಿಗೆ ಬಿದ್ದ ಶತ್ರುರಾಜರ ಕಿರೀಟದಲ್ಲಿರುವ ಮಾಣಿಕ್ಯ ಸಮೂಹದ ಕೆಂಬಿಸಿಲನ್ನು ಹಿಯ್ಯಾಳಿಸಿ ಕೆಂಪಾದಂತಾದುವು. ಹೆಸರುಕಾಳಿನ ಹೊಸಮೊಳಕೆಯ ಬಣ್ಣದಂತೆ ಸೊಗಯಿಸುವ ಸಾಮಂತಚೂಡಾಮಣಿಯ ಶರೀರದ ಬಣ್ಣವು ಬ್ರಹ್ಮನೆಂಬ ಬಣ್ಣಗಾರನು ಬಣ್ಣಗಳನ್ನು ಕಲಸಿಮಾಡಿದ ಬಾಳೆಯ ಹೂವಿನ ಮೋತೆಯಂತೆ ಕೆಂಪುಮಿಶ್ರವಾದ ಕಪ್ಪುಬಣ್ಣದಿಂದ ಕೂಡಿತು. ೪೦. ಗುಣಾರ್ಣವನು ದಿಟ್ಟರಾದ ಸ್ತ್ರೀಯರು ತನ್ನನ್ನು ಮನಸ್ಸಿನಲ್ಲಿ ಪ್ರೀತಿಸಿ ತನಗೆ ಅಧೀನವಾಗಿ ಸೋತು ಆಶೆಯಿಂದ ನೋಡಲು ಅವರ ಕಣ್ಣನ್ನೂ ಮನಸ್ಸನ್ನೂ ಮನ್ಮಥನ ಪುಷ್ಪಬಾಣದಿಂದ ಸೆರೆಹಿಡಿದು ಅವರಿಗೆ ಮೋಹವುಂಟಾಗುವ ಹಾಗೆ ಮಾಡಿ ಫಲಭರಿತವಾದ ಮಾವಿನ ತೋಟದಲ್ಲಿ ಸೇರಿಸಿ ಪ್ರಕಾಶಮಾನವಾದ ಬೆಳುದಿಂಗಳಿಂದ ಉರುಳಿಸಿ ಹೂವಿನ ಹಾಸಿಗೆಯಲ್ಲಿ ಹೊರಳುವ ಹಾಗೆ ಮಾಡಿದನು. (ಅವನನ್ನು ನೋಡಿದ ಧೀರಸ್ತ್ರೀಯರೂ ವಿಧವಿಧವಾದ ಕಾಮಬಾಧೆಗೊಳಗಾಗುತ್ತಿದ್ದರು ಎಂದು ಭಾವ).

ವ|| ಅಂತು ನಕುಲ ಸಹದೇವರ್ ಸಹಿತಮಯ್ವರುಂ ನವಯೌವನದ ಪರಮ ಸುಖಮನೆಯ್ದಿ ಸಂತೋಷದಿನಿರ್ದರಿತ್ತ ಗಂಗಾದ್ವಾರದೊಳ್ ಭರದ್ವಾಜನೆಂಬ ಬ್ರಹ್ಮಋಷಿ-

ಕಂ|| ಸ್ನಾನಾರ್ಥಮೊಂದು ಕಳಶಮ
ನಾ ನಿಯಮ ನಿಧಾನನೆಬಲೆ ಪಿಡಿದಮಳಿನ ಗಂ ।
ಗಾ ನದಿಗೆ ವಂದು ಸುರತ ನಿ
ಧಾನಿಯನಮರೇಂದ್ರ ಗಣಿಕೆಯಂ ಮುನಿ ಕಂಡಂ ॥ ೪೧

ವ|| ಅಂತು ಕಾಣ್ಬುದುಮಮೃತಾಬ್ಧಿಯೆಂಬಚ್ಚರಸೆಯ ಕನಕ ಕಾಂಚೀಕಳಾಪದೊಳ್ ತೊಡರ್ದ ದೇವಾಂಗ ವಸ್ತ್ರದುಳ್ಳುಡೆಯೊಳುಲಿವ ಸೂಸಕದ ನೂಲ ತೊಂಗಲ್ವೆರಸೆಬಲ್ದ ಮುಂದಣ ಸೋಗೆ ಕಾರ್ಗಾಲದ ಸೋಗೆಯಂತೆ ಸೊಗಯಿಸೆ-

ಕಂ|| ಆದೆಲರ ಸೋಂಕಿನೊಳ್ ತೆಱ
ಪಾದೊಡೆ ಬೆಳ್ಸೆಯೆ ಮಸೆದ ಮದನನ ಬಾಳಂ ।
ತಾದುವು ಪೊಳೆವೊಳ್ತೊಡೆ ತೆಱ
ಪಾದೆರ್ದೆಯಂ ನಟ್ಟುವಂದು ತನ್ಮುನಿಪತಿಯಾ ॥ ೪೨

ವ|| ಅಂತು ಕಂತುಶರಪರವಶನಾಗಿ ಧೈರ್ಯಕ್ಷರಣೆಯುಮಿಂದ್ರಿಯ ಕ್ಷರಣೆಯುಮೊಡನೊಡನಾಗೆ-

ಕಂ|| ಮಾಣದೆ ಸೋರ್ವಿಂದ್ರಿಯಮಂ
ದ್ರೋಣದೊಳಾಂತಲ್ಲಿಯೊಗೆದ ಶಿಶುವಂ ಕಂಡೀ ।
ದ್ರೋಣದೊಳೆ ಪುಟ್ಟಿದೀತಂ
ದ್ರೋಣನೆ ಪೋಗೆಂದು ಪೆಸರನಿಟ್ಟಂ ಮುನಿಪಂ ॥ ೪೩

ವ|| ಹೀಗೆ ನಕುಲ ಸಹದೇವರೊಡನೆ ಅಯ್ದು ಜನರೂ ಹೊಸಪ್ರಾಯದ ಉತ್ತಮಸುಖವನ್ನು ಹೊಂದಿ ಸಂತೋಷದಿಂದಿದ್ದರು. ಈ ಕಡೆ ಗಂಗಾದ್ವಾರದಲ್ಲಿ ಭರದ್ವಾಜನೆಂಬ ನಿಯಮಿಷ್ಠನಾದ ಋಷಿಯು-೪೧. ಸ್ನಾನಕ್ಕಾಗಿ ಒಂದು ಕೊಡವನ್ನು ಕೆಳಗೆ ಜೋಲುಬೀಳುವ ಹಾಗೆ ಹಿಡಿದು ಪರಿಶುದ್ಧವಾದ ಗಂಗಾನದಿಗೆ ಬಂದು ಸಂಭೋಗಸುಖಕ್ಕೆ ಆವಾಸಸ್ಥಾನಳಾದ ದೇವವೇಶ್ಯೆಯೊಬ್ಬಳನ್ನು ನೋಡಿದನು. ವ|| ಹಾಗೆ ನೋಡಲಾಗಿ ಅಮೃತಾಬ್ಧಿಯೆಂಬ ಹೆಸರಿನ ಆ ಅಪ್ಸರಸ್ತ್ರೀಯ ಚಿನ್ನದ ನಡುಪಟ್ಟಿಯಲ್ಲಿ ಸಿಕ್ಕಿಕೊಂಡಿದ್ದ ರೇಷ್ಮೆಯ ವಸ್ತ್ರದ ಒಳ ಉಡುಪಿನಲ್ಲಿ ಶಬ್ದಮಾಡುವ ಗೆಜ್ಜೆಯ ಕುಚ್ಚಿನ ನೂಲಗೊಂಚಲ ಸಮೇತವಾಗಿ ಇಳಿಬಿದ್ದಿರುವ ಮುಂಭಾಗದ ಸೆರಗು ಮಳೆಗಾಲದ ನವಿಲಿನಂತೆ ಸೊಗಯಿಸಿತು. ೪೨. ಆಗುಂಟಾದ ಗಾಳಿಯ ಸ್ಪರ್ಶದಿಂದ ವಸ್ತ್ರವು ಓಸರಿಸಲು ಅವಳ ಸುಂದರವಾದ ತೊಡೆಯು ಮನ್ಮಥನ ಕತ್ತಿಯ ಹಾಗಾಗಿ ಆ ಋಷಿಯ ತೆರೆದ ಹೃದಯವನ್ನು ನಾಟಿತು. ವ|| ಹಾಗೆ ಮನ್ಮಥನ ಬಾಣಗಳಿಗೆ ಅಧೀನನಾಗಿ ಅವನ ಧೈರ್ಯವೂ ರೇತಸ್ಸೂ ಒಟ್ಟಿಗೆ ಸೋರಿಹೋದವು. ೪೩. ನಿಲ್ಲದೆ ಸೋರುವ ಆ ರೇತಸ್ಸನ್ನು (ವೀರ್ಯವನ್ನು) ಆ ಋಷಿಯು ಒಂದು ದೊನ್ನೆಯಲ್ಲಿ ಹಿಡಿದು ಅದರಿಂದ ಹುಟ್ಟಿದ ಶಿಶುವನ್ನು ನೋಡಿ ದೊನ್ನೆಯಲ್ಲಿ ಹುಟ್ಟಿದ ಮಗುವು

ವ|| ಅಂತು ಭರದ್ವಾಜನಾತ್ಮತನೂಜಂಗೆ ಪೆಸರನಿಟ್ಟು ತನ್ನ ಕೆಳೆಯಂ ಪಾಂಚಾಳ ದೇಶದರಸಂ ಪೃಷತನೆಂಬನಾತನ ಮಗಂ ದ್ರುಪದನುಮಂ ದ್ರೋಣನುಮನೊಡಗೂಡಿ ಯಜ್ಞಸೇನನೆಂಬ ಬ್ರಹ್ಮಋಷಿಯ ಪಕ್ಕದೊಳ್ ಬಿಲ್ವಿದ್ದೆಯಂ ಕಲಲ್ವೇಟ್ಟೊಡೆ ದ್ರೋಣನುಂ ದ್ರುಪದನುಂ ಧನುರ್ಧರಾಗ್ರಗಣ್ಯರಾಗೆ ಭರದ್ವಾಜಂ ದ್ರೋಣಂಗೆ ಕೃಪನ ತಂಗೆಯಪ್ಪ ಶಾರದ್ವತೆಯಂ ತಂದು ಮದುವೆಯಂ ಮಾಡಿದೊಡಾತಂಗಮಾಕೆಗಂ ತ್ರಿಣೇತ್ರನಂಶದೊಳೊರ್ವ ಮಗಂ ಪುಟ್ಟಿ-

ಕಂ|| ದಿವಿಜಾಶ್ವತ್ಥಾಮದೊಳೀ
ಭುವನಂಗಳ್ ನಡುಗೆ ಶಿಶು ಸರಂಗೆಯ್ದೊಡೆ ನ |
ಕ್ಕವಯವದೆ ಕುಂಭಸಂಭವ
ನಿವನಶ್ವತ್ಥಾಮನೆಂದು ಪೆಸರಿಡೆ ನೆಗಳ್ದಂ || ೪೪

ವ|| ಅಂತು ನೆಗಳ್ದು ತಮ್ಮಯ್ಯನ ಕೈಯೊಳ್ ಧನುರ್ವಿದ್ಯೋಪದೇಶದೊಳ್ ಧನುರ್ಧ ರಾಗ್ರಗಣ್ಯನುಮಾಗಿ ಸಂದಂ ದ್ರುಪದನುಂ ತನ್ನ ರಾಜ್ಯದೊಳ್ ನಿಂದಂ ದ್ರೋಣನುಂ ತನಗೆ ಬಡತನಮಡಸೆ ಅಶ್ವತ್ಥಾಮನನೊಡಗೊಂಡು ನಾಡು ನಾಡಂ ತೊಳಲ್ದು ಪರಶುರಾಮನಲ್ಲಿಗೆ ವಂದಂ-

ಚಂ|| ಕ್ಷಿತಿಯೊಳಗುಳ್ಳ ಭೂಭುಜರ ಬಿತ್ತು ಮೊದಲ್ಗಿಡೆ ಮುನ್ನಮೇಕವಿಂ
ಶತಿ ಪರಿಸಂಖ್ಯೆಯಿಂ ತವಿಸಿ ಸರ್ವನಿವೇದಕಮೆಂಬ ಯಜ್ಞದೊಳ್ |
ಕ್ಷಿತಿ ಪೊಗಲ್ವನ್ನಮಿತ್ತು ಗುರುದಕ್ಷಿಣೆಯಾಗಿರೆ ಕಶ್ಯಪ ಪ್ರಜಾ
ಪತಿಗೆ ಸಮುದ್ರಮುದ್ರಿತಧರಿತ್ರಿಯನೊಂದಟೆಯೂರನೀವವೊಲ್ || ೪೫

ದ್ರೋಣನೆಂಬ ಹೆಸರಿನವನೇ ಸರಿ, ಹೋಗು ಎಂದು ಆ ಹೆಸರನ್ನೇ ಅವನಿಗೆ ಇಟ್ಟನು. ವ|| ಭರದ್ವಾಜನು ಹಾಗೆ ತನ್ನ ಮಗನಿಗೆ ಹೆಸರಿಟ್ಟು ತನ್ನ ಸ್ನೇಹಿತನೂ ಪಾಂಚಾಳದೇಶದ ರಾಜನೂ ಪೃಷತನ ಮಗನೂ ಆದ ದ್ರುಪದನನ್ನೂ ದ್ರೋಣನನ್ನೂ ಒಟ್ಟುಗೂಡಿಸಿ ಯಜ್ಞಸೇನನೆಂಬ ಬ್ರಹ್ಮಋಷಿಯ ಪಕ್ಕದಲ್ಲಿ ಬಿಲ್ವಿದ್ಯೆಯನ್ನು ಕಲಿಯಲು ಹೇಳಲಾಗಿ ದ್ರೋಣನೂ ದ್ರುಪದನೂ ಬಿಲ್ಗಾರರಲ್ಲಿ ಮೊತ್ತಮೊದಲಿಗರಾದರು. ಹೀಗಾಗಲು ಭಾರದ್ವಾಜನು ದ್ರೋಣನಿಗೆ ಕೃಪನ ತಂಗಿಯಾದ ಶಾರದ್ವತೆಯನ್ನು ತಂದು ಮದುವೆಮಾಡಲಾಗಿ ಆತನಿಗೂ ಆಕೆಗೂ ಮುಕ್ಕಣ್ಣನಾದ ರುದ್ರನ ಅಂಶದಿಂದ ಒಬ್ಬ ಮಗನು ಹುಟ್ಟಿದನು. ೪೪. ಆ ಮಗುವು ಧ್ವನಿಮಾಡಿದ ತಕ್ಷಣವೇ ಕೂಗಿಕೊಂಡ ದೇವಲೋಕದ ಉಚ್ಚೈಃಶ್ರವವೆಂಬ ಕುದುರೆಯ ಕೆನೆತದಿಂದ ಲೋಕಗಳೆಲ್ಲ ನಡುಗಲು ಅದನ್ನು ನೋಡಿ ದ್ರೋಣನು ನಕ್ಕು ನಿರಾಯಾಸದಿಂದ ಇವನಿಗೆ ಅಶ್ವತ್ಥಾಮನೆಂದು ಹೆಸರಿಡಲು ಅವನು ಪ್ರಸಿದ್ಧನಾದನು. ವ|| ಹಾಗೆ ಪ್ರಸಿದ್ಧನಾಗಿ ತಮ್ಮಯ್ಯನ ಕಯ್ಯಲ್ಲಿ ಧನುರ್ವಿದ್ಯೋಪದೇಶವನ್ನು ಪಡೆದು ಬಿಲ್ಗಾರರಲ್ಲಿ ಅಗ್ರೇಸರನಾದನು. ದ್ರುಪದನೂ ತನ್ನ ರಾಜ್ಯದಲ್ಲಿ ನಿಂತನು. ದ್ರೋಣನು ತನಗೆ ಬಡತನವುಂಟಾಗಲು ಅಶ್ವತ್ಥಾಮನನ್ನೂ ಕರೆದುಕೊಂಡು ದೇಶದೇಶಗಳಲ್ಲೆಲ್ಲ ಸುತ್ತಿ ಪರಶುರಾಮನ ಬಳಿಗೆ ಬಂದನು. ೪೫. ಭೂಮಿಯಲ್ಲಿರುವ ಕ್ಷತ್ರಿಯರು ಬೇರುಸಹಿತ ಹಾಳಾಗುವಂತೆ ಮೊದಲು ಇಪ್ಪತ್ತೊಂದು ಸಲ ನಾಶಪಡಿಸಿ ಲೋಕವೇ ಹೊಗಳುವ ಹಾಗೆ ಸರ್ವನಿವೇದಕವೆಂಬ

ವ॥ ಅಂತು ವಲ್ಕಲಾವೃತ ಕಟಿತಟನುಮಾಗಿರ್ದ ಜಟಾಕಲಾಪನುಮಾಗಿ ತಪೋವನಕ್ಕೆ ಪೋಪ ಭಾರ್ಗವಂ ದ್ರವ್ಯಾರ್ಥಿಯಾಗಿ ಬಂದ ಕುಂಭಸಂಭವನಂ ಕಂಡು ಕನಕ ಪಾತ್ರಕ್ಕುಪಾಯಮಿಲ್ಲಪ್ಪುದಱಿಂ ಮೃತ್ಪಾತ್ರದೊಳರ್ಘ್ಯಮೆತ್ತಿ ಪೂಜಿಸಿ-

ಚಂ॥ ಒಡವೆಯನರ್ಥಿಗಿತ್ತೆನವನೀತಳಮಂ ಗುರುಗಿತ್ತೆನೀಗಳೊಂ
ದಡಕೆಯುಮಿಲ್ಲ ಕೈಯೊಳೆರೆದಂ ಶ್ರುತಪಾರಗನೆಂತು ಸಂತಸಂ
ಬಡಿಸುವೆನಿನ್ನಿದೊಂದು ಧನುವಿರ್ದುದು ದಿವ್ಯಶರಾಳಿಯಿರ್ದುದಿ
ಲ್ಲೊಡಮೆ ಸಮಂತು ಪೇೞೆವಱೊಳಾವುದನೀವುದೊ ಕುಂಭಸಂಭವಾ ॥ ೪೬

ವ॥ ಎಂಬುದುಂ ದ್ರೋಣನೆನಗೆ ವಿದ್ಯಾಧನಮೆ ಧನಮಪ್ಪುದಱಿಂ ದಿವ್ಯಾಸ್ತ್ರಂಗಳಂ ದಯೆಗೆಯ್ವುದೆನೆ ವಾರಣ ವಾಯುವ್ಯಾಗ್ನೇಯ ಪೌರಂದರಾದಿ ಪ್ರಧಾನಾಸ್ತ್ರಂಗಳಂ ಕುಡೆ ಕೊಂಡು ಪರಶುರಾಮನಂ ಬೀೞ್ಕೊಂಡು ತನ್ನೊಡನಾಡಿಯಪ್ಪ ಕೆಳೆಯಂ ದ್ರುಪದಂ ಛತ್ರಾವತಿಯೊಳರಸು ಗೆಯ್ವಪನೆಂದು ಕೇಳ್ದಾ ಪೊೞಲ್ಗೆವಂದು ದ್ರುಪದನರಮನೆಯ ಬಾಗಿಲೊಳ್ ನಿಂದು ಪಡಿಯಱನಂ ಕರೆದು ನಿಮ್ಮೊಡನಾಡಿದ ಕೆಳೆಯಂ ದ್ರೋಣನೆಂಬ ಪಾರ್ವಂ ಬಂದನೆಂದು ನಿಮ್ಮರಸಂಗಱಿಯೆ ಪೇೞೆಂಬುದುಮಾತನಾ ಮಾೞ್ಕೆಯೊಳೆ ಬಂದಱಿಪುವುದುಂ ದ್ರುಪದಂ ರಾಜ್ಯಮದಿರಾ ಮದೋನ್ಮತ್ತನುಂ ಗರ್ವಗ್ರಹ ವ್ಯಗ್ರಚಿತ್ತನುಮಾಗಿ ಮೇಗಿಲ್ಲದೆ-

ಯಜ್ಞವನ್ನು ಮಾಡಿ ಕಶ್ಯಪ ಪ್ರಜಾಪತಿಯೆಂಬ ಬ್ರಹ್ಮಋಷಿಗೆ ಸಮುದ್ರದಿಂದ ಸುತ್ತುವರಿಯಲ್ಪಟ್ಟ ಅಖಂಡಭೂಮಂಡಲವನ್ನು ಒಂದುಸಾಮಾನ್ಯವಾದ ಗ್ರಾಮವನ್ನು ಕೊಡುವಂತೆ ಗುರುದಕ್ಷಿಣೆಯಾಗಿ ಕೊಟ್ಟನು. ವ॥ ಈಗ ನಾರುಮಡಿಯಿಂದ ಕೂಡಿದ ನಡುವನ್ನುಳ್ಳವನೂ ಜಟಾಸಮೂಹದಿಂದ ಕೂಡಿದವನೂ ಆದ ಆ ಪರಶುರಾಮನು ದ್ರವ್ಯವನ್ನು ಬೇಡುವುದಕ್ಕಾಗಿ ಬಂದ ದ್ರೋಣನನ್ನು ಚಿನ್ನದ ಪಾತ್ರೆಗಳಿಲ್ಲದುದರಿಂದ ಮಣ್ಣಿನ ಪಾತ್ರೆಯಲ್ಲಿಯೇ ಅರ್ಘ್ಯವನ್ನು ಕೊಟ್ಟು ಪೂಜಿಸಿದನು. ೪೬. ನನ್ನ ಪದಾರ್ಥಗಳನ್ನೆಲ್ಲ ಬೇಡಿದವರಿಗೆ ಕೊಟ್ಟೆನು. ಭೂಮಂಡಲವನ್ನು ಗುರುಗಳಿಗೆ ಕೊಟ್ಟೆನು. ಈಗ ನನ್ನಲ್ಲಿ ಒಂದಡಕೆಯೂ ಇಲ್ಲ. ಬೇಡುವವನಾದರೋ ವೇದಪಾರಂಗತ. ಹೇಗೆ ಅವನನ್ನು ಸಂತೋಷಪಡಿಸಲಿ? 'ಎಲೈ ದ್ರೋಣನೆ ಈಗ ಇದೊಂದು ಬಿಲ್ಲೂ ಇದೊಂದು ದಿವ್ಯಾಸ್ತ್ರಗಳ ಸಮೂಹವೂ ಇದೆ. ಬೇರೆ ಆಸ್ತಿಯಿಲ್ಲ. ಇವುಗಳಲ್ಲಿ ನಿನಗೆ ಯಾವುದನ್ನು ಕೊಡಲಿ? ಚೆನ್ನಾಗಿ ಯೋಚಿಸಿ ಹೇಳು. ವ॥ ಎಂಬುದಾಗಿ ಹೇಳಲು ದ್ರೋಣನು ನನಗೆ ವಿದ್ಯಾಧನವೇ ಧನವಾಗಿರುವುದರಿಂದ ಆ ದಿವ್ಯಾಸ್ತ್ರಗಳನ್ನು ದಯಪಾಲಿಸಬೇಕು ಎನ್ನಲು ವಾರುಣ, ವಾಯುವ್ಯ, ಆಗ್ನೇಯ, ಐಂದ್ರಾದಿ ಅಸ್ತ್ರಗಳನ್ನು ಕೊಡಲು ಅದನ್ನು ತೆಗೆದುಕೊಂಡು ಪರಶುರಾಮನಿಂದ ಅಪ್ಪಣೆ ಪಡೆದು ತನ್ನ ಒಡನಾಡಿಯೂ ಸ್ನೇಹಿತನೂ ಆದ ದ್ರುಪದನು ಛತ್ರಾವತಿಯಲ್ಲಿ ರಾಜ್ಯಭಾರ ಮಾಡುತ್ತಿದ್ದಾನೆಂದು ಕೇಳಿ ಆ ಪಟ್ಟಣಕ್ಕೆ ಬಂದು ದ್ರುಪದನರಮನೆಯ ಬಾಗಿಲಲ್ಲಿ ನಿಂತು ಬಾಗಿಲು ಕಾಯುವವನನ್ನು ಕರೆದು ನಿಮ್ಮ ಜೊತೆಯಲ್ಲಾಟವಾಡಿದ ಸ್ನೇಹಿತನಾದ ದ್ರೋಣನೆಂಬ ಬ್ರಾಹ್ಮಣನು ಬಂದಿದ್ದಾನೆಂದು ನಿಮ್ಮ ರಾಜನಿಗೆ ತಿಳಿಯಪಡಿಸು ಎಂದನು. ಅವನು ಆ ರೀತಿಯಲ್ಲಿಯೇ ಬಂದು ತಿಳಿಸಲಾಗಿ ದ್ರುಪದನು ರಾಜ್ಯವೆಂಬ

ಕಂ॥ ಅಂತೆಂಬನಾರ್ಗೆ ಪಿರಿದುಂ
ಭ್ರಾಂತು ದಲೇಂ ದ್ರೋಣನೆಂಬನೇಂ ಪಾರ್ವನೆ ಪೇ ।
ಚಿಂತೆನಗೆ ಕೆಳೆಯನೇ ನೂಂ
ಕಂತಪ್ಪನನಱಿಯೆನೆಂದು ಸಭೆಯೊಳ್ ನುಡಿದಂ ॥ ೪೭

ವ॥ ಅಂತು ನುಡಿದುದಂ ಪಡಿಯಱಿಂ ಬಂದಾ ಮಾಟ್ಕೆಯೊಳಱಿಪೆ ದ್ರೋಣನೊತ್ತಂಬದಿಂದೊಳಗಂ ಪೊಕ್ಕು ದ್ರುಪದನಂ ಕಂಡು-

ಚಂ ॥ ಅಱಿಯಿರೆ ನೀಮುಮಾಮುಮೊಡನೋದಿದೆವೆಂಬುದನಣ್ಣ ನಿನ್ನನಾ
ನಱಿಯೆನದೆಲ್ಲಿ ಕಂಡೆಯೊ ಮಹೀಪತಿಗಂ ದ್ವಿಜವಂಶಜಂಗಮೇ ।
ತಱಿ ಕೆಳೆಯಿಂತು ನಾಣಿಲಿಗರಪ್ಪರೆ ಮಾನಸರೆಂಬ ಮಾತುಗಳ್
ನೆಱಿಗೊಳೆ ಕುಂಭಸಂಭವನನಾ ದ್ರುಪದಂ ಕಡು ಸಿಗ್ಗು ಮಾಡಿದಂ ॥ ೪೮

ವ॥ ಅಂತು ಮಾಡಿದುದುಮಲ್ಲದೀ ನಾಣಿಲಿ ಪಾರ್ವನನೆೞೆದು ಕಳೆಯಿಮೆಂಬುದುಂ ದ್ರೋಣ ನಿಂತೆಂದಂ-

ಚಂ ॥ ನುಡಿ ತಡವಪ್ಪುದೊಂದು ಮೊಗದೊಳ್ ಮುಱುಕಂ ನೆರೆಕೊಳ್ವುದೊಂದು ಕಾ
ಣ್ಕೆಡೆಗುಡದಿರ್ಪುದೊಂದು ನುಡಿಗಳ್ ಮೊಱೆಯುಂ ಮಱೆಯಿಪ್ಪುದೊಂದು ತ ।
ಳ್ಗಿಡಿದವರಂದಮಿಂತು ಸಿರಿ ಸಾರ್ತರೆ ಸಾರ್ವುದದರ್ಕೆ ಮಾದೆಯುಂ
ಬಡದೆ ಜಲಕ್ಕಸೀಗಳಱಿದೆಂ ಸಿರಿ ಕಳ್ಳೊಡವುಟ್ಟಿತೆಂಬುದಂ ॥ ೪೯

ಮದ್ಯದಿಂದ ಸೊಕ್ಕಿದವನೂ ಅಹಂಕಾರವೆಂಬ ಗ್ರಹದಿಂದ ಪೀಡಿತನಾದ ಮನಸ್ಸುಳ್ಳವನೂ ಆಗಿ ಒಳ್ಳೆಯ ನಡತೆಯಿಲ್ಲದೆ ೪೭. 'ಹಾಗೆನ್ನುವವನು ಯಾರ ಸಂಬಂಧಿ? ಇದು ವಿಶೇಷ ಭ್ರಮೆಯಲ್ಲವೆ? ದ್ರೋಣನೆಂಬುವವನು ಬ್ರಾಹ್ಮಣನೇ ಹೇಗೆ? ನನಗೆ ಸ್ನೇಹಿತನೇ ಹೇಳು? ಅಂತಹವನನ್ನು ನಾನು ತಿಳಿದಿಲ್ಲ; ಅವನನ್ನು ಹೊರಕ್ಕೆ ತಳ್ಳು' ಎಂದು ಸಭಾಮಧ್ಯದಲ್ಲಿ ಕೆಟ್ಟಮಾತನಾಡಿದನು. ವ॥ ಹೀಗೆ ಹೇಳಿದುದನ್ನು ದ್ವಾರಪಾಲಕನು ಬಂದು ಆ ರೀತಿಯಲ್ಲಿ ತಿಳಿಸಲಾಗಿ ದ್ರೋಣನು ಬಲಾತ್ಕಾರದಿಂದ ಒಳಕ್ಕೆ ಪ್ರವೇಶಿಸಿ ದ್ರುಪದನನ್ನು ನೋಡಿ ೪೮. 'ಅಣ್ಣಾ ನೀನೂ ನಾನೂ ಜೊತೆಯಲ್ಲಿ ವಿದ್ಯಾಭ್ಯಾಸ ಮಾಡಿದುದನ್ನು ತಿಳಿದಿಲ್ಲವೇ' ಎನ್ನಲು ದ್ರುಪದನು ನಿನ್ನನ್ನು ನಾನು ತಿಳಿದಿಲ್ಲ (ನೀನು ನನಗೆ ಅಪರಿಚಿತನು) ನೀನು ನನ್ನನ್ನು ಅದೆಲ್ಲಿ ಕಂಡಿದ್ದೆಯೊ? ರಾಜನಿಗೂ ಬ್ರಾಹ್ಮಣನಿಗೂ ಯಾವ ವಿಧವಾದ ಸ್ನೇಹ? ಮನುಷ್ಯರಾದವರು ಇಷ್ಟು ನಾಚಿಕೆಗೆಟ್ಟವರೂ ಆಗುತ್ತಾರೆಯೇ? ಎಂಬ ಮಾತುಗಳಿಂದ ದ್ರೋಣನಿಗೆ ಮರ್ಮಭೇದಕವಾಗುವಂತೆ ಹೀಯ್ಯಾಳಿಸಿದನು. ವ॥ ಹಾಗೆ ಮಾಡಿದುದೂ ಅಲ್ಲದೆ ಈ ನಾಚಿಕೆಗೆಟ್ಟ ಬ್ರಾಹ್ಮಣನನ್ನು ಎಳೆದು ನೂಕು ಎನ್ನಲು ದ್ರೋಣನು ಹೀಗೆಂದನು-೪೯. ಐಶ್ವರ್ಯ ಬರಲು ಮದ್ಯಪಾನ ಮಾಡಿದವರಂತೆ ಮಾತು ತೊದಲುವುದು; ಮುಖದಲ್ಲಿ ವಕ್ರಚೇಷ್ಟೆಯುಂಟಾಗುವುದು; ಮಾತುಗಳು ನಾಚಿಕೆಯಿಲ್ಲದಾಗುವುವು; ಸಂಬಂಧವನ್ನು ಮರೆಯುವಂತೆ ಮಾಡುವುದು; ಆದುದರಿಂದ

ವ॥ ಎಂದು ಸೈರಿಸದೆ-

ಚಂ॥ ಖಳ ನೊಳವಿಂಗೆ ಕುಪ್ಪೆ ವರಮೆಂಬವೊಲಾಂಬರಮುಂಟೆ ನಿನ್ನದೊಂ
ದಳವೊಡನೋದಿದೊಂದು ಬೆರಗಿಂಗೆ ಕೊಲಲ್ಕೆನಗಾಗದೀ ಸಭಾ ।
ವಳಯದೊಳೆನ್ನನೇಟಿಸಿದ ನಿನ್ನನನಾಕುಳಮೆನ್ನ ಚಟ್ಟರಿಂ
ತಳವೆಳಗಾಗೆ ಕಟ್ಟಿಸದೆ ಮಾಣ್ದೊಡೆ ಕೆಮ್ಮನೆ ಮಾಸೆವೊತ್ತನೇ ॥ ೫೦

ವ॥ ಎಂದಾರೂಢಪ್ರತಿಜ್ಞನಾಗಿ ನಾಗಪುರಕ್ಕೆ ವಂದು ತಮ್ಮ ಭಾವಂ ಕೃಪನ ಮನೆಯೊಳಪ ಗತಪರಿಶ್ರಮನಾಗಿರ್ದೊಂದು ದಿವಸಂ ಪಾಂಡವರುಂ ಕೌರವರುಂ ಪೊಱವೊಟಲೊಳ್-

ಕಂ॥ ನೆರೆದಿಸುತಿರೆ ತೋಲ್ವುಲ್ಲೆಯ
ನಿರದದು ಬಿಟ್ಟೊಡೆ ಪುರಾಣ ಕೂಪದೊಳದನಿ ।
ನ್ನರಿದು ತೆಗೆವಂದಮೆಂದವ
ರಿರೆ ಬಳಸಿಯುಮಲ್ಲಿ ಕಂಡು ನಕ್ಕಂ ದ್ರೋಣಂ ॥ ೫೧

ಭರತಕುಳತಿಳಕರಿರ್ ವರ
ಶರಾಸನ ವ್ಯಗ್ರಹಸ್ತರಿರ್ ಬಳಯುತರಿರ್ ।
ನೆರೆದಿನಿಬರುಮಿಾ ಲಕ್ಷ್ಯಮ
ನಿರದಕ್ಕಟ ಸರದೆ ತೆಗೆಯಲಾರ್ತಿರುಮಿಲ್ಲಾ ॥ ೫೨

ವ॥ ಎಂದು ತನ್ನ ಮಗನಪ್ಪಶ್ವತ್ಥಾಮನಂ ಕರೆದೀ ಲಕ್ಷ್ಯಮಂ ತೆಗೆಯೆಂಬುದುಮಾತ ನಂತೆ ಗೆಯ್ವೆನೆಂದು ನೈಷ್ಠಿಕವೆಂಬ ಮುಷ್ಟಿಯೊಳಂ ಪುಂಖಾನುಪುಂಖವೆಂಬ

ಐಶ್ವರ್ಯವು ಕಳ್ಳಿನೊಡನೆ ಹುಟ್ಟಿತು ಎಂಬುದನ್ನು ನಿಸ್ಸಂಶಯವಾಗಿ ಈಗ ವಿಶದವಾಗಿ ತಿಳಿದೆನು' ವ॥ ಎಂದು ಹೇಳಿ ಅಷ್ಟಕ್ಕೇ ಸಹಿಸಲಾರದೆ ೫೦. 'ಎಲೋ ಖಳನೇ ನೊಣಕ್ಕೆ ಕಸವೇ ಶ್ರೇಷ್ಠವಾದುದು' ಎನ್ನುವ ಗಾದೆಯ ಹಾಗೆ ನಿನ್ನ ಯೋಗ್ಯತೆ ನನ್ನವರೆಗೂ ಉಂಟೆ? ಜೊತೆಯಲ್ಲಿ ವಿದ್ಯಾಭ್ಯಾಸ ಮಾಡಿದೆವೆಂಬ ಒಂದು ಕಾರಣದಿಂದ ನಿನ್ನನ್ನು ಕೊಲ್ಲಲಾರೆ. ಈ ಸಭಾಮಂಡಲದಲ್ಲಿ ನನ್ನನ್ನು ಹಿಯ್ಯಾಳಿಸಿದ ನಿನ್ನನ್ನು ನಿರಾಯಾಸವಾಗಿ ನನ್ನ ಶಿಷ್ಯರಿಂದ ನೀನು ಗಾಬರಿಪಡುವಂತೆ ಕಟ್ಟಿಸದೆ ಬಿಟ್ಟರೆ ನಾನು ಮೀಸೆಯನ್ನು ಹೊತ್ತಿರುವುದು ವ್ಯರ್ಥವಲ್ಲವೆ? ವ॥ ಎಂದು ಪಣತೊಟ್ಟವನಾಗಿ ಹಸ್ತಿನಾಪುರಕ್ಕೆ ಬಂದು ತನ್ನ ಭಾವನಾದ ಕೃಪನ ಮನೆಯಲ್ಲಿ ಶ್ರಮಪರಿಹಾರಮಾಡಿಕೊಂಡನು. ಒಂದು ದಿನ ಪಾಂಡವರೂ ಕೌರವರೂ ಪಟ್ಟಣದ ಹೊರಭಾಗದಲ್ಲಿ ೫೧. ಒಟ್ಟುಗೂಡಿ ಚಕ್ಕಳದ ಜಿಂಕೆಯೊಂದನ್ನು ಬಾಣಗಳಿಂದ ಹೊಡೆಯುತ್ತಿರಲು ಅದು ಹಳೆಯ ಬಾವಿಯಲ್ಲಿ ಬಿದ್ದುಬಿಟ್ಟಿತು. ಅದನ್ನು ತಿಳಿದು ಮೇಲಕ್ಕೆ ತೆಗೆಯುವ ರೀತಿ ಸಾಧ್ಯವಿಲ್ಲವೆಂದವರಿರಲಾಗಿ ಅಲ್ಲಿ ಸುತ್ತಾಡುತ್ತಿದ್ದ ದ್ರೋಣನು ಅದನ್ನು ಕಂಡು ನಕ್ಕನು. ೫೨. 'ಭರತವಂಶತಿಲಕರಾಗಿದ್ದೀರಿ; ಬಿಲ್ವಿದ್ಯೆಯಲ್ಲಿ ಪರಿಣತರಾಗಿದ್ದೀರಿ; ಬಲಿಷ್ಠರಾಗಿದ್ದೀರಿ; ಅಯ್ಯೋ ಒಟ್ಟುಗೂಡಿದ ನೀವಿಷ್ಟು ಜನವೂ ಈ ಗುರಿಯನ್ನು (ಚಕ್ಕಳದ ಜಿಂಕೆಯನ್ನು) ಬಾಣದಿಂದ ಮೇಲಕ್ಕೆ ತೆಗೆಯಲು ಸಮರ್ಥರಾಗಲಿಲ್ಲವೆ? ವ॥ ಎಂದು ತನ್ನ ಮಗನಾದ ಅಶ್ವತ್ಥಾಮನನ್ನು ಕರೆದು ಈ

ಶರಸಂಧಾನದೊಳವಯವದೊಳೆ ತೆಗೆದೊಡನಿಬರುಂ ಚೋದ್ಯಂಬಟ್ಟು ಗಾಂಗೇಯ ಧೃತರಾಷ್ಟ್ರರ್ಗಱಿಪಿದೊಡೆ ನದೀತನೂಜಂ ಭಾರದ್ವಾಜಂಗೆ ಬೞಿಯನಟ್ಟಿ ಬರಿಸಿ ಪೂರ್ವ ಸಂಭಾಷಣಾರ್ಘ್ಯಮೆತ್ತಿ ಮಧುಪರ್ಕ ವೇತ್ರಾಸನ ತಾಂಬೂಲದಾನಾದಿಗಳಿಂ ಸಂತಸಂಬಡಿಸಿ ತದೀಯ ಕುಲ ವಿದ್ಯಾವೃತ್ತಿಗಳಂ ಬೆಸಗೊಂಡು-

ಮ॥ ಮದಮಂ ಮುಕ್ಕುಳಿಸಿರ್ದಿಭಂಗಳನುದಗ್ರಾಶ್ವಂಗಳಂ ತಕ್ಕಿನ
ಗ್ಗದ ಬಾಡಂಗಳನಾಯ್ದು ಕೊಟ್ಟು ತಣಿದೆಂ ಪೋ ಸಾಲ್ಗುಮೆಂಬನ್ನಮಂ ।
ದಿದಿರೊಳ್ ನೂಱುವರ್ ಕುಮಾರರುಮನಿಟ್ಟೀ ಕೂಸುಗಳ್ ಯೋಗ್ಯರ
ಪ್ಪುದನಿನ್ನೊಲ್ದೊಡೆ ಶಸ್ತ್ರವಿದ್ಯೆಗೊವಜಂ ನೀನಾಗು ಕುಂಭೋದ್ಭವಾ ॥ ೫೩

ವ॥ ಎಂಬುದುಮಂತೆಗೆಯ್ವೆನೆಂದು ಕಲಶಜನನಿಬರ ಮೊಗಮಂ ನೋಡಿ-

ಕಂ॥ ಈ ನೆರೆದಿನಿಬರುಮೆಂದುದ
ನೇನೀವಿರೆ ಪೇೞಿಮೆಂದೊಡನಿಬರುಮಿರ್ದರ್ ।
ಮೌನವ್ರತದೆ ಗುಣಾರ್ಣವ
ನಾನೀವೆಂ ನಿಮ್ಮ ಬಯಸಿ ಬೇೞ್ಪುದನೆಂದು ॥ ೫೪

ವ॥ ಎಂಬುದುಮಾ ಮಾತಿಂಗೆ ಮೆಚ್ಚಿ ಜಗದೇಕಮಲ್ಲನಂ ತೊಡೆಯನೇಱಿಸಿಕೊಂಡು ಕುಂಭಸಂಭವಂ ಗಾಂಗೇಯನನಿಂತೆಂದಂ-

ಲಕ್ಷ್ಯವನ್ನು ತೆಗೆ ಎಂದನು. ಅವನು 'ಹಾಗೆಯೇ ಮಾಡುತ್ತೇನೆ' ಎಂದು ನೈಷ್ಠಿಕವೆನ್ನುವ ಮುಷ್ಟಿಯಿಂದ ಬಾಣದ ಒಂದು ಗರಿಯನ್ನನುಸರಿಸಿ ಮತ್ತೊಂದು ಬಾಣಬಿಡುವ ಪ್ರಯೋಗದಿಂದ ನಿರಾಯಾಸವಾಗಿ ಮೇಲಕ್ಕೆತ್ತಿದನು. ಅಷ್ಟುಮಂದಿಯೂ ಆಶ್ಚರ್ಯಪಟ್ಟು (ಆ ವಿಷಯವನ್ನು) ಭೀಷ್ಮ ಧೃತರಾಷ್ಟ್ರರಿಗೆ ತಿಳಿಸಿದರು. ಭೀಷ್ಮನು ದ್ರೋಣಾಚಾರ್ಯರಿಗೆ ಹೇಳಿ ಕಳುಹಿಸಿ ಬರಮಾಡಿ ಕುಶಲ ಸಂಭಾಷಣಾಪೂರ್ವಕ ಅರ್ಘ್ಯವನ್ನು ಕೊಟ್ಟು ಮಧುಪರ್ಕ, ವೇತ್ರಾಸನ, ತಾಂಬೂಲದಾನಾದಿಗಳಿಂದ ಸಂತೋಷಪಡಿಸಿ ಆತನ ಕುಲ, ವಿದ್ಯೆ ಮತ್ತು ವೃತ್ತಿಗಳನ್ನು ಪ್ರಶ್ನೆಮಾಡಿ ತಿಳಿದುಕೊಂಡನು. ೫೩. ಮದವನ್ನು ಉಗುಳುತ್ತಿರುವ ಆನೆಗಳನ್ನೂ (ಮದ್ದಾನೆಗಳನ್ನು) ಉತ್ತಮವಾದ ಕುದುರೆಗಳನ್ನೂ ಯೋಗ್ಯವೂ ಶ್ರೇಷ್ಠವೂ ಆದ ಗ್ರಾಮಗಳನ್ನೂ 'ತೃಪ್ತನಾದೆ, ಸಾಕು, ಹೋಗು' ಎನ್ನುವಷ್ಟು ಕೊಟ್ಟು ಅಂದು ಆ ನೂರಾರು ಮಕ್ಕಳನ್ನು ಅವರಿಗೆ ಒಪ್ಪಿಸಿ 'ಈ ಮಕ್ಕಳು ಯೋಗ್ಯರಾಗಬೇಕು ಎಂಬ ಇಷ್ಟ ನಿಮಗಿರುವುದಾದರೆ ಎಲೈ ದ್ರೋಣನೇ ನೀನು ಇವರಿಗೆ ಶಸ್ತ್ರವಿದ್ಯೆಯ ಉಪಾಧ್ಯಾಯನಾಗು' ವ॥ ಎನ್ನಲು ದ್ರೋಣನು ಹಾಗೆಯೇ ಮಾಡುತ್ತೇನೆಂದು ಕೇಳಿ ಅವರೆಲ್ಲರ ಮುಖವನ್ನು ನೋಡಿ- ೫೪. 'ಇಲ್ಲಿ ಸೇರಿರುವ ಇಷ್ಟುಜನರೂ ನಾನು ಕೇಳಿದ್ದನ್ನು ಕೊಡಬಲ್ಲಿರಾ ಹೇಳಿ' ಎನ್ನಲು ಎಲ್ಲರೂ ಮೌನವಾಗಿದ್ದರು. ಗುಣಾರ್ಣವನು 'ನೀವು ಆಶೆಪಟ್ಟು ಬೇಡಿದುದನ್ನು ನಾನು ಕೊಡುತ್ತೇನೆ' ಎಂದನು. ವ॥ ಹಾಗೆನ್ನಲಾಗಿ ಆ ಮಾತಿಗೆ ಮೆಚ್ಚಿ ಜಗದೇಕಮಲ್ಲನಾದ ಅರ್ಜುನನನ್ನು ತೊಡೆಯ ಮೇಲೇರಿಸಿಕೊಂಡು ದ್ರೋಣನು

ಕಂ॥ ಇನಿಬರೊಳಗೀತನೊರ್ವನೆ
ಧನುರಾಗಮದೆಡೆಗೆ ಕುಶಲನಕ್ಕುಮದರ್ಕೀಂ ।
ಕಿನಿಸದಿರಿಂ ಮುನ್ನಱಿಪಿದೆ
ನೆನೆ ಭೀಷ್ಮನಲಂಪು ಮಿಗೆ ಮುಗುಳ್ನಗೆ ನಕ್ಕಂ ॥ ೫೫

ವ॥ ಅಂತು ದ್ರೋಣಾಚಾರ್ಯನಾಚಾರ್ಯಪದವಿಯುಮಂ ಕೈಕೊಂಡು ಪಾಂಡವ ಕೌರವರ್ಗೆ ಚತುರಂಗ ಧನುರ್ವೇದಮುಮು ದಿವ್ಯಾಸ್ತ್ರಂಗಳುಮಂ ಶಕ್ತಿ ತೋಮರ ಮುಸಲ ಮುಸುಂಡಿ ಭಿಂಡಿವಾಳ ಮುದ್ಗರ ಗದಾದಿ ವಿವಿಧಾಯುಧಂಗಳುಮಂ ಗಜ ರಥ ತುರಗ ಪದಾತಿ ಯುದ್ಧಂಗಳುಮನುಪದೇಶಂಗೆಯ್ಯುತ್ತುಮಿರೆಯಿರೆ-

ಕಂ॥ ಯಾದವ ವಂಶಜರುಂ ನಾ
ನಾ ದೇಶ ನರೇಂದ್ರರುಂ ಘಟೋದ್ಭವನ ಧನು ।
ರ್ವೇದಮನೆ ಕಲಲ್ ಬಂದಾ
ಱಾದರ್ ವಿದ್ಯಾಪ್ರಭಾವಮಾ ದೊರೆತೆ ವಲಂ ॥ ೫೬

ದ್ರೋಣಂ ಗಡಮಿಷುವಿದ್ಯೆಗೆ
ಜಾಣಂ ಗಡಮೆಂದು ಕೇಳ್ದು ಕೌರವರ್ಗೆಲ್ಲಂ ।
ಪ್ರಾಣಂ ಬರ್ಪಾಕೃತಿಯೊಳೆ
ಬಾಣಾಸನ ಬಾಣಪಾಣಿ ಕರ್ಣಂ ಬಂದಂ ॥ ೫೭

ವ॥ ಅಂತು ಬಂದು ವೈರಿಗಜಘಟಾವಿಘಟನನೊಳ್ ವಿಘಟಿಸಿ ಬಿಲ್ಗಲ್ತು-

ಭೀಷ್ಮನಿಗೆ ಹೀಗೆ ಹೇಳಿದನು-೫೫. 'ಇಷ್ಟು ಮಕ್ಕಳಲ್ಲಿ ಇವನೊಬ್ಬನೇ ಬಿಲ್ವಿದ್ಯೆಯಲ್ಲಿ ಪಾರಂಗತನಾಗುತ್ತಾನೆ. ಅದಕ್ಕೆ ಕೋಪಿಸಬೇಡಿ; ಮೊದಲೇ ತಿಳಿಸಿದ್ದೇನೆ' ಎನ್ನಲು ಭೀಷ್ಮನು ಸಂತೋಷಾತಿಶಯದಿಂದ ಮುಗುಳ್ನಗೆ ನಕ್ಕನು. ವ॥ ಹಾಗೆ ದ್ರೋಣಾಚಾರ್ಯನು ಆಚಾರ್ಯಪದವಿಯನ್ನು ಅಂಗೀಕಾರ ಮಾಡಿ ಪಾಂಡವ ಕೌರವರುಗಳಿಗೆ ನಾಲ್ಕು ಭಾಗವಾಗಿರುವ ಬಿಲ್ವಿದ್ಯೆಯನ್ನೂ ದಿವ್ಯಾಸ್ತ್ರಗಳ ಪ್ರಯೋಗಗಳನ್ನೂ ಶಕ್ತಿ, ತೋಮರ, ಮುಸಲ, ಮುಸುಂಡಿ, ಭಿಂಡಿವಾಳ, ಮುದ್ಗರ, ಗದೆಯೇ ಮೊದಲಾದ ಬಗೆಬಗೆಯ ಆಯುಧ ಪ್ರಯೋಗಗಳನ್ನೂ ಆನೆ, ತೇರು, ಕುದುರೆ ಮತ್ತು ಕಾಲಾಳುಗಳ ಯುದ್ಧದ ರೀತಿಯನ್ನೂ ಹೇಳಿಕೊಟ್ಟನು. ೫೬. ಯಾದವ ವಂಶದವರೂ ನಾನಾ ದೇಶದ ರಾಜರೂ ದ್ರೋಣಾಚಾರ್ಯರ ಧನುರ್ವಿದ್ಯೆಯನ್ನು ಕಲಿಯಲು ಬಂದು ಆತನ ಶಿಷ್ಯರಾದರು. ದ್ರೋಣನ ವಿದ್ಯಾಪ್ರಭಾವವು ಅಂತಹ ಮಹಿಮೆಯುಳ್ಳದ್ದಲ್ಲವೆ? ೫೭. ದ್ರೋಣನಲ್ಲವೆ! ಬಾಣವಿದ್ಯೆಯಲ್ಲಿ ಜಾಣನಲ್ಲವೆ! ಎಂಬ ಪ್ರಶಂಸೆಯನ್ನು ಕೇಳಿ ಕೌರವರಿಗೆಲ್ಲ ಪ್ರಾಣ ಬರುವ ರೀತಿಯಲ್ಲಿ ಬಿಲ್ಲುಬಾಣಗಳನ್ನು ಹಿಡಿದು ಕರ್ಣನೂ ಅಲ್ಲಿಗೆ ಬಂದು ಕೂಡಿದನು. ವ॥ ಹಾಗೆ ಬಂದು ಶತ್ರುರಾಜರ ಆನೆಗಳ ಸಮೂಹವನ್ನು ಭೇದಿಸಲು ಸಮರ್ಥನಾದ ಅರ್ಜುನನಲ್ಲಿ (ಅರಿಕೇಸರಿಯಲ್ಲಿ) ಸ್ಪರ್ಧಿಸಿ ಬಿಲ್ವಿದ್ಯೆಯನ್ನು ಕಲಿತನು.

ಕಂ॥ ಕೆಳೆಯುಂ ಗುಜೆಯುಂ ಗೊಟ್ಟಿಯು
ಮಳವಿಗೆ ಪಿರಿದಾಗೆ ತನಗೆ ದುರ್ಯೋಧನನೊಳ್ ।
ಮುಳಿಸುಂ ನೋವುಂ ಕಲುಷಮು
ಮಳುಂಬಮೆನೆ ತನಗರಾತಿಕಾಳಾನಳನೊಳ್ ॥ ೫೮

ವ॥ ಅಂತು ಕರ್ಣಂ ಗುಣಾರ್ಣವನೊಳ್ ಸೆಣಸಿ ಪಗೆಯನಭ್ಯಾಸಂಗೆಯ್ವಂತೆ ವಿದ್ಯಾಭ್ಯಾಸಂಗೆಯ್ಕೆ-

ಕಂ॥ ಮನದೊಳೊಗೆದನ್ಯಜನ್ಮದ
ಮುನಿಸದು ಕಣ್ಣಿಂ ತುಳುಂಕೆ ಸೈರಿಸದವನು ।
ರ್ವಿನ ಕಲಿತನಕ್ಕೆ ದುರ್ಯೋ
ಧನನುಂ ಭೀಮನೊಳೆ ಸೆಣಸಿ ಗದೆಯಂ ಕಲ್ತಂ ॥ ೫೯

ವ॥ ಅಂತು ಭಾರದ್ವಾಜನಾಗಾಮಿಕ ಸಂಗ್ರಾಮರಂಗಕ್ಕೆ ಪಾತ್ರಂಗಳಂ ಸಮೆಯಿಸುವ ಸೂತ್ರಧಾರನಂತೆ ಶಸ್ತ್ರವಿದ್ಯಾಭ್ಯಾಸಂಗೆಯ್ಯುತ್ತಿರೆ ದೇಶಾಧೀಶ್ವರರಪ್ಪ ಪಲಂಬರ್ ರಾಜಕುಮಾರರ ನಡುವೆ ತಾರಾಗಣಂಗಳ ನಡುವಣ ಸಕಳ ಕಳಾಧರನಂತೆ ಶಸ್ತ್ರಕಳಾಧರನಾಗಿ ತನ್ನುಮಂ ಗೆಲೆವಂದ ಸಾಮಂತ ಚೂಡಾಮಣಿಯ ಶರಪರಿಣತಿಯನಾರಯಲೆಂದು-

ಕಂ॥ ಛಾಯಾಲಕ್ಷ್ಯಮನೊಡ್ಡಿಯು
ಮಾಯದ ನೀರೊಳಗೆ ತನ್ನನಡಸಿದ ನೆಗಲಂ ।
ಬಾಯಟೆವಿನಮಿಸಿಸಿಯುಮುರೆ
ಹೋಯಜ ಬಾಪ್ಪೆಂದು ಹರಿಗನಂ ಗುರು ಪೊಗಲ್ದಂ ॥ ೬೦

೫೮. ಕಾಲಕಳೆದಂತೆಲ್ಲ ಕರ್ಣನಿಗೆ ದುರ್ಯೋಧನನಲ್ಲಿ ಸ್ನೇಹವೂ ಗುರಿಯೂ (ಸಹಪಾಠಿತ್ವವೂ) ಅಳತೆಗೆ ಮೀರಿದಂತೆ ಅರಾತಿ ಕಾಲಾನಲನಾದ ಅರ್ಜುನನಲ್ಲಿ ಕೋಪವೂ ವ್ಯಥೆಯೂ ಅಸೂಯೆಯೂ ಅಧಿಕವಾಯಿತು. ವ॥ ಕರ್ಣನು ಗುಣಾರ್ಣವನಲ್ಲಿ ಸ್ಪರ್ಧಿಸಿ ಹಗೆತನವನ್ನಭ್ಯಾಸಮಾಡುವಂತೆಯೇ ವಿದ್ಯೆಯನ್ನು ಅಭ್ಯಾಸಮಾಡಿದನು. ೫೯. ಮನಸ್ಸಿನಲ್ಲಿ ಹುಟ್ಟಿದ ಪೂರ್ವಜನ್ಮದ ಕೋಪವು ಕಣ್ಣಿನಲ್ಲಿ ತುಳುಕುತ್ತಿರಲು ಅವನ ಅಭಿವೃದ್ಧಿಯಾಗುತ್ತಿರುವ ಶೌರ್ಯಕ್ಕೆ ಸಹನೆಯಿಲ್ಲದೆ ದುರ್ಯೋಧನನೂ ಭೀಮನಲ್ಲಿ ಸ್ಪರ್ಧಿಸಿ ಗದೆಯ ಪ್ರಯೋಗವನ್ನು ಕಲಿತನು. ವ॥ ಹಾಗೆ ದ್ರೋಣಾಚಾರ್ಯನು ಮುಂದೆ ಬರುವ ಯುದ್ಧರಂಗಕ್ಕೆ ಪಾತ್ರಗಳನ್ನು ಸಿದ್ಧಪಡಿಸುವ ಸೂತ್ರಧಾರನ ಹಾಗೆ ಶಸ್ತ್ರವಿದ್ಯಾಭ್ಯಾಸವನ್ನು ಮಾಡಿಸುತ್ತಿರಲು ಅನೇಕ ದೇಶದ ಒಡೆಯರಾದ ಹಲವು ರಾಜಕುಮಾರರ ಮಧ್ಯದಲ್ಲಿ ನಕ್ಷತ್ರಸಮೂಹದ ಮಧ್ಯದ ಪೂರ್ಣಚಂದ್ರನ ಹಾಗೆ ಶಸ್ತ್ರಕಲೆಯನ್ನು ಧರಿಸಿ ತನ್ನನ್ನೂ ಗೆದ್ದಿರುವ ಸಾಮಂತಚೂಡಾಮಣಿಯಾದ ಅರ್ಜುನನ (ಅರಿಕೇಸರಿಯ) ಬಾಣಪ್ರಯೋಗ ಪಾಂಡಿತ್ಯವನ್ನು ಪರೀಕ್ಷಿಸಬೇಕೆಂದು-೬೦. ಪ್ರತಿಬಿಂಬದ ಗುರಿಯನ್ನು ಒಡ್ಡಿಯೂ ಆಳವಾದ ನೀರಿನಲ್ಲಿ ತನ್ನನ್ನು ಹಿಡಿದಿದ್ದ ಮೊಸಳೆಯನ್ನು ಅದು ಅರಚಿಕೊಂಡು

ವ|| ಅಂತು ಪೊಗೞ್ದು ತನ್ನ ಪಗೆವನಪ್ಪ ದ್ರುಪದನನೀತನಮೋಘಂ ಗೆಲಲ್ ನೆಱೆಗುಮೆಂದು ನಿಶ್ಚೈಸಿ-

ಚಂ|| ಅಣುಗಿನೊಳೆನ್ನ ಚಟ್ಟರೊಳಗೀತನೆ ಜೆಟ್ಟಿಗನೆಂದು ವಿದ್ದೆಯಂ
ಗುಣಕಱುಗೊಂಡು ಕೊಟ್ಟೆನಗೆ ಸಂತಸಮಪ್ಪನಮಾವ ನಿನ್ನ ದ ।
ಕ್ಷಿಣೆಯದು ಬೇಗಮಾ ದ್ರುಪದನಂ ಗಡ ಕೋಡಗಗಟ್ಟುಗಟ್ಟಿ ತಂ
ದಣಿಯರಮೊಪ್ಪಿಸಿಂತಿದನೆ ಬೇಡಿದೆನಾಂ ಪರಸೈನ್ಯಭೈರವಾ ॥ ೬೧

ವ|| ಎಂಬುದುಮಿದಾ ಬೆಸನದಾವುದು ಗಹನಮೆಂದು ಪೂಣ್ದು ಪೋಗಿ-

ಮ|| ಒಡವಂದಂಕದ ಕೌರವರ್ ದ್ರುಪದನಂಬೇಱಂಗೆ ಮೆಯ್ಯೊಡ್ಡದೊ
ಡ್ಡೊಡೆದೋಡುತ್ತಿರೆ ಸೂಸೆ ಬೀೞ್ವ ತಲೆಗಳ್ ಸೂೞ್ಪಟ್ಟನಾಗಳ್ ಜವಂ ।
ಪಿಡಿದೀಡಾಡುವ ಮಾೞ್ಕೆಯಂತೆ ಪಲರಂ ಕೊಂದಿಕ್ಕಿ ಮೆಯ್ಮುಟ್ಟೆವಂ ।
ದೆಡೆಯೊಳ್ ಮಾಣದುರುಳ್ಚಿ ಕಟ್ಟಿ ರಿಪುವಂ ಮುಂದಿಕ್ಕಿದಂ ದ್ರೋಣನಾ ॥ ೬೨

ವ|| ಆಗಳಾ ಕುಂಭಸಂಭವಂ ಪರಾಕ್ರಮಧವಳನ ಪರಾಕ್ರಮಕ್ಕೆ ಮೆಚ್ಚಿ ಕದಂಪಂ ಕರ್ಚಿ ದ್ರುಪದನಂ ತನ್ನ ಮಂಚದ ಕಾಲೊಳ್ ಕಟ್ಟವೇೞ್ದು ತಲೆಯ ಮೇಲೆ ಕಾಲನವಷ್ಟಂಭದಿಂ ನೀಡಿ-

ಸಾಯುವ ಹಾಗೆ ಬಾಣ ಪ್ರಯೋಗಮಾಡಿಸಿಯೂ ನೋಡಿ 'ಅರೆ, ಹೋ, ಅಜ, ಭಾಪು, ಎಂಬ ಮೆಚ್ಚಿಕೆಯ ಮಾತುಗಳಿಂದ ಗುರುವು ಅರ್ಜುನನನ್ನು ಶ್ಲಾಘಿಸಿದನು. ವ|| ಹಾಗೆ ಹೊಗಳಿ ತನ್ನ ಶತ್ರುವಾದ ದ್ರುಪದನನ್ನು ಈತನು ಸಂಪೂರ್ಣವಾಗಿ ಗೆಲ್ಲಲು ಸಮರ್ಥನಾಗುತ್ತಾನೆಂದು ನಿಷ್ಕರ್ಷಿಸಿ ಅವನನ್ನು ಕುರಿತು ೬೧. 'ಅರ್ಜುನಾ ಭಕ್ತಿಯುಳ್ಳ ನನ್ನ ಶಿಷ್ಯರಲ್ಲಿ ಇವನೇ ಪರಾಕ್ರಮಶಾಲಿ ಎಂದು ವಿದ್ಯೆಯನ್ನು ಪ್ರೀತಿಯಿಂದ ದಾನಮಾಡಿದ ನನಗೆ ಸಂತೋಷವಾಗುವ ಹಾಗೆ ನೀನು ಕೊಡುವ ಗುರುದಕ್ಷಿಣೆಯಾಗಿ ಜಾಗ್ರತೆಯಾಗಿ ಆ ದ್ರುಪದನನ್ನು ಕೋಡಗಗಟ್ಟು ಕಟ್ಟಿ ತಂದು ಅತಿಶಯವಾದ ರೀತಿಯಲ್ಲಿ ಒಪ್ಪಿಸು. ಎಲೈ ಪರಸೈನ್ಯಭೈರವನೇ ಇದನ್ನೇ ನಾನು ನಿನ್ನಿಂದ ಬೇಡಿದುದು, ವ|| ಎನ್ನಲು ಈ ಆಜ್ಞಾಕಾರ್ಯ ಏನು ಮಹಾದೊಡ್ಡದು ಎಂದು ಪ್ರತಿಜ್ಞೆಮಾಡಿ ಹೋಗಿ-೬೨. ಒಡನೆ ಬಂದ ಪ್ರಸಿದ್ಧರಾದ ಕೌರವರು ದ್ರುಪದನ ಬಾಣದ ಪೆಟ್ಟಿಗೆ ಶರೀರವನ್ನು ಒಡ್ಡಲಾರದೆ ಚದುರಿ ಓಡುತ್ತಿರಲು, ಬೀಳುವ ತಲೆಗಳು ಚೆದುರಾಡುತ್ತಿರಲು ತನ್ನ ಸರದಿಯನ್ನು ಪಡೆದ ಅರ್ಜುನನು ಹಲಬರನ್ನು ಯಮನು ಹಿಡಿದು ಬಿಸಾಡುವ ರೀತಿಯಲ್ಲಿ ಸಾಯಿಸಿ, ಶರೀರವನ್ನು ಮುಟ್ಟುವಷ್ಟು ಹತ್ತಿರಕ್ಕೆ ಬಂದವರನ್ನೂ ಉರುಳಿಸಿ ಶತ್ರುವನ್ನು ಕಟ್ಟಿತಂದು ದ್ರೋಣನ ಮುಂದೆ ಇಟ್ಟನು. ವ|| ಆಗ ದ್ರೋಣನು ಪರಾಕ್ರಮಧವಳನಾದ ಅರ್ಜುನನ ಶೌರ್ಯಕ್ಕೆ ಸಂತೋಷಪಟ್ಟು ಕೆನ್ನೆಗೆ ಮುತ್ತಿಟ್ಟು ದ್ರುಪದನನ್ನು ತನ್ನ ಮಂಚದ ಕಾಲಿಗೆ ಕಟ್ಟ ಹೇಳಿ ಅವನ ತಲೆಯ

ಕಂ॥ ಸಿರಿಮೆಯ್ಯೊಳಗಂದಱೆವಿರೆ
ನೆರವಿಯೊಳಾರಱೆವರೊರ್ಮೆ ಕಂಡರನಱೆಯ ।
ಲ್ಕರಿದೆಮ್ಮಂ ಬಡ ಪಾರ್ವರ
ನರಸರೆ ನೀಮಿಗಳಱೆವಿರಱೆಯಿರೊ ಪೇೞಿಂ ॥ ೬೩

ವ॥ ಎಂದು ಸಾಯೆ ಸರಸಂ ನುಡಿದು ಮತ್ತಮಿಂತೆಂದಂ-

ಕಂ ॥ ಆದಿ ಕ್ಷತ್ರಿಯರೇ ನೀ
ಮಾದಿತ್ಯನನಿಳಿಪ ತೇಜರಿರ್ ಪಾರ್ವನ ಕಾಲ್ ।
ಮೋದೆ ನಡುತಲೆಯಲಿರ್ಪುದು
ಮಾದುದು ನಿಮಗೆಂದು ನುಡಿದು ಕಾಯ್ಪಿನೊಳೊದೆದಂ ॥ ೬೪

ವ॥ ಒದೆದು ನಿನ್ನನಿನಿತು ಪರಿಭವಂಬಡಿಸಿದುದು ಸಾಲ್ಗುಂ ನಿನ್ನಂ ಕೊಲಲಾಗದು ಕೊಂದೊಡೆ ಮೇಲಪ್ಪ ಪಗೆಗಂಜಿ ಕೊಂದಂತಾಗಿರ್ಕುಮೆಂದು ಕಟ್ಟಿದ ಕಟ್ಟುಗಳೆಲ್ಲಮಂ ತಾನೆ ಬಟ್ಟು ಕಳೆದು ಪೋಗೆಂಬುದುಂ ದ್ರುಪದಂ ಪರಿಭವಾನಳನಳವಲ್ಲದಳುರೆ ನಿನ್ನಂ ಕೊಲ್ವನ್ನನೊರ್ವ ಮಗನುಮಂ ವಿಕ್ರಮಾರ್ಜುನಂಗೆ ಪೆಂಡತಿಯಪ್ಪನ್ನಳೊರ್ವ ಮಗಳುಮಂ ಪಡೆದಲ್ಲದಿರೆನೆಂದು ಮಹಾ ಪ್ರತಿಜ್ಞಾರೂಢನಾಗಿ ಪೋದನಿತ್ತ ಭಾರದ್ವಾಜಂ ಪಾಂಡವ ಕೌರವರ್ಕಳ ಮೆಯ್ಯೊಳ್ ವಿದ್ದೆಯಂ ನೆಱೆಯೆ ಸಂಕ್ರಮಿಸಿದ ತನ್ನ ವಿದ್ಯಾಮಹಿಮೆಯಂ ಮೆಱೆಯಲ್ಕೆ ಬಾಹ್ಲೀಕ ಭೂರಿಶ್ರವಸ್ಸೋಮದತ್ತ ಗಾಂಗೇಯ ಧೃತರಾಷ್ಟ್ರ ವಿದುರರ್ಕಳ್ಗಿಂತೆಂದಂ-

ಮೇಲೆ ತನ್ನ ಕಾಲನ್ನು ಗರ್ವದಿಂದ ನೀಡಿ-೬೩. 'ಐಶ್ವರ್ಯಸ್ಥಿತಿಯಲ್ಲಿ ಅಂದು ನೀವು ನಮ್ಮನ್ನು ತಿಳಿಯುತ್ತೀರಾ (ಗುರುತಿಸುತ್ತೀರಾ). ಒಂದು ಸಲ ಗುಂಪಿನಲ್ಲಿ ಕಂಡವರನ್ನೂ ಯಾರು ತಾನೆ ಗುರುತಿಸಬಲ್ಲರು. ಬಡಬ್ರಾಹ್ಮಣರಾದ ನಮ್ಮನ್ನೂ ಗುರುತಿಸಲಸಾಧ್ಯ. ರಾಜರೇ ಈಗಲಾದರೂ ಗುರುತಿಸುತ್ತೀರೋ ಇಲ್ಲವೋ ಹೇಳಿ',. ವ॥ ಎಂದು ಪ್ರಾಣಹೋಗುವಷ್ಟು ಪರಿಹಾಸ್ಯ ಮಾಡಿ ಪುನಃ ಹೀಗೆಂದನು-೬೪. 'ನೀವು ಆದಿಕ್ಷತ್ರಿಯರಾಗಿದ್ದೀರಿ; ಸೂರ್ಯನನ್ನೂ ತಿರಸ್ಕರಿಸುವ ತೇಜಸ್ಸುಳ್ಳವರಾಗಿದ್ದೀರಿ. ಹಾರುವನು ಒದ್ದ ಕಾಲು ನಡುನೆತ್ತಿಯಲ್ಲಿರುವದಾಯಿತಲ್ಲಾ' ಎಂದು ಹೇಳಿ ಕೋಪದಿಂದ ಒದೆದನು-ವ॥ ಒದ್ದು 'ನಿನ್ನನ್ನು ಇಷ್ಟು ಅವಮಾನಪಡಿಸಿದುದು ಸಾಕು. ನಿನ್ನನ್ನು ಕೊಲ್ಲಬಾರದು. ಕೊಂದರೆ ಹೆದರಿ ತನಗಿಂತ ಮೇಲಾದ ಶತ್ರುವನ್ನೂ ಕೊಂದಂತಾಗುತ್ತದೆ' ಎಂದು ಕಟ್ಟಿದ ಕಟ್ಟುಗಳೆಲ್ಲವನ್ನೂ ತಾನೇ ಬಿಚ್ಚಿಕಳೆದು ಹೋಗು ಎನ್ನಲು ದ್ರುಪದನು ಅವಮಾನವೆಂಬ ಅಗ್ನಿಯು ವಿಶೇಷವಾಗಿ ಸುಡಲು 'ನಿನ್ನನ್ನೂ ಕೊಲ್ಲುವಂತಹ ಮಗನನ್ನೂ ವಿಕ್ರಮಾರ್ಜುನನಿಗೆ ಹೆಂಡತಿಯಾಗುವಂತಹ ಒಬ್ಬ ಮಗಳನ್ನೂ ಪಡೆಯದಿರುವುದಿಲ್ಲ' ಎಂದು ದೊಡ್ಡ ಪ್ರತಿಜ್ಞೆಯನ್ನೂ ಮಾಡಿಹೋದನು. ಈ ಕಡೆ ಭಾರದ್ವಾಜನು ಪಾಂಡವ ಕೌರವರುಗಳ ಶರೀರದಲ್ಲಿ ವಿದ್ಯೆಯನ್ನು ಪೂರ್ಣವಾಗಿ ಅಳವಡಿಸಿದ ತನ್ನ ಮಹಿಮೆಯನ್ನು ಪ್ರಕಾಶಪಡಿಸುವುದಕ್ಕಾಗಿ ಬಾಹ್ಲೀಕ, ಭೂರಿಶ್ರವ, ಸೋಮದತ್ತ, ಭೀಷ್ಮ, ಧೃತರಾಷ್ಟ್ರ, ವಿದುರರಿಗೆ ಹೀಗೆಂದು ಹೇಳಿದನು.

ಕಂ॥ ನೆಱೆಯೆ ಧನುರ್ವಿದ್ಯೆಯ ಕ
ತ್ತಱಿವಿನೆಗಂ ಕಲ್ತ ನಿಮ್ಮ ಮಕ್ಕಳ ಮೆಯ್ಯೊಳ್ ॥
ಮೆಱೆದಪ್ಪೆನೆನ್ನ ವಿದ್ದೆಯ
ನಱೆದೊಯ್ಯನೆ ನೆರೆದು ನೋೞ್ಪುದನಿಬರುಮೀಗಳ್ ॥ ೬೫

ವ॥ ಎಂದೊಡಂತೆಗೆಯ್ವಮೆಂದನಿಬರುಮೊಡಂಬಟ್ಟು ಪೊಱವೊೞಲೊಳುತ್ತರ ದಿಶಾಭಾಗದೊಳ್ ಸಮಚತುಗಸ್ರಮಾಗೆ ನೆಲನನಳೆದು ಕಲ್ಲುಂ ಪುಲ್ಲುಮಂ ಸೋದಿಸಿ ಶುಭದಿನ ಶುಭಮುಹೂರ್ತದೊಳ್-

ಕಂ॥ ಗಟ್ಟಿಸಿ ಸಿಂಧುರದೊಳ್ ನೆಲ
ಗಟ್ಟಿಸಿ ಚೆಂಬೊನ್ನ ನೆಲೆಯ ಚೌಪಳಿಗೆಗಳೊಳ್ ।
ಕಟ್ಟಿಸಿ ಪಟಯಿಗೆಗಳನಳ
ವಟ್ಟರೆ ಬಯಮುಲ್ಲಿ ಮೊಟಗೆ ಪಲವುಂ ಪಱೆಗಳ್ ॥ ೬೬

ವ॥ ಅಂತು ಸಮೆದ ವ್ಯಾಯಾಮ ರಂಗಕ್ಕೆ ಗಾಂಗೇಯ ಧೃತರಾಷ್ಟ್ರ ವಿದುರ ಸೋಮದತ್ತ ಬಾಹ್ಲೀಕ ಭೂರಿಶ್ರವಾದಿ ಕುಲವೃದ್ಧರುಂ ಕುಂತಿ ಗಾಂಧಾರಿಗಳುಂ ವೆರಸು ಬಂದು ಕುಳ್ಳಿರೆ-

ಕಂ॥ ಅರಸಿಯರನಣುಗರಂ ಬೇ
ೞ್ಪರುಮಂ ಮೊನೆಗಾಱರಂ ಪ್ರಗೀತರನಿಂಬಾ ।
ಗಿರೆ ಚೌಪಳಿಗೆಗಳೊಳ್ ಕು
ಳ್ಳಿರಿಸಿದರೊಡನೆಸೆಯೆ ನೆರೆದ ಪುರಜನ ಸಹಿತಂ ॥ ೬೭

೬೫. 'ಬಿಲ್ವಿದ್ಯೆಯೇ ಆವಿರ್ಭಾವವಾಗುವ ಹಾಗೆ ಸಂಪೂರ್ಣವಾಗಿ ಕಲಿತುಕೊಂಡಿರುವ ನಿಮ್ಮ ಮಕ್ಕಳ ಶರೀರದಲ್ಲಿ ನನ್ನ ವಿದ್ಯೆಯನ್ನು ಪ್ರಕಾಶಪಡಿಸುತ್ತೇನೆ. ಈಗ ಎಲ್ಲರೂ ಒಟ್ಟಾಗಿ ಸೇರಿ ಪ್ರತ್ಯಕ್ಷವಾಗಿ ತಿಳಿದು ನೋಡಬೇಕು'. ವ॥ ಎಂದು ಹೇಳಲಾಗಿ ಹಾಗೆಯೇ ಮಾಡೋಣವೆಂದು ಎಲ್ಲರೂ ಒಪ್ಪಿ ಪಟ್ಟಣದ ಹೊರಗಿನ ಉತ್ತರದಿಗ್ಭಾಗದಲ್ಲಿ ಚಚ್ಚೌಕವಾದ ಭೂಮಿಯನ್ನು ಅಳೆದು ಕಲ್ಲು ಹುಲ್ಲನ್ನು ಶೋಧಿಸಿ ತೆಗೆದು ಶುಭದಿನ ಶುಭಮುಹೂರ್ತದಲ್ಲಿ ೬೬. ನೆಲವನ್ನು ಚಂದ್ರಕಾವಿಯಿಂದ ಧಮ್ಮಸ್ಸುಮಾಡಿ ಅಪರಂಜಿಯಿಂದ ಮಾಡಿದ ಮನೆಗಳ ತೊಟ್ಟಿಗಳಲ್ಲಿ ಬಾವುಟಗಳನ್ನು ಕಟ್ಟಿಸಿ ಸೂಕ್ತ ವೆಚ್ಚದಿಂದ ಹಲವು ವಾದ್ಯಗಳು ಮೊಳಗುತ್ತಿರಲು ವ॥ ಹಾಗೆ ನಿರ್ಮಿಸಿದ ವ್ಯಾಯಾಮರಂಗಕ್ಕೆ ಭೀಷ್ಮ, ಧೃತರಾಷ್ಟ್ರ, ವಿದುರ, ಸೋಮದತ್ತ, ಬಾಹ್ಲೀಕ, ಭೂರಿಶ್ರವರೇ ಮೊದಲಾದ ಕುಲವೃದ್ಧರು ಕುಂತಿಗಾಂಧಾರಿಯರೊಡನೆ ಬಂದು ಕುಳಿತರು. ೬೭. ರಾಣಿಯರನ್ನೂ ಮಕ್ಕಳನ್ನೂ ಬೇಕಾದವರನ್ನೂ ಯೋಧರನ್ನೂ ಗಣ್ಯರನ್ನೂ ಪಟ್ಟಣಿಗರೊಡನೆ ಶೋಭಿಸುವ ಹಾಗೆ ಒಟ್ಟಿಗೆ ಹಜಾರದ ಮೇಲುಭಾಗದಲ್ಲಿ ಆಕರ್ಷಕವಾಗಿರುವ ರೀತಿಯಲ್ಲಿ ಕುಳ್ಳಿರಿಸಿದರು.

ವ|| ಆಗಳ್ ಕುಂಭಸಂಭವಂ-

ಕಂ|| ಪೊಸ ಮುತ್ತಿನ ತುಡಿಗೆ ಪೊದ
ಱ್ದೆಸೆಯೆ ದುಕೂಲಾಂಬರಂ ನಿಜಾಂಗದೊಳಂ ಸಂ ।
ದೆಸೆದಿರೆ ಬೆಳುಗ್ಗಿಲಿಂದಂ
ಮುಸುಕಿದ ನೀಲಾದ್ರಿ ಬರ್ಪ ತೆಱದೊಳ್ ಬಂದಂ ॥ ೬೮

ವ|| ಅಂತು ಬಂದು ರಂಗಭೂಮಿಯ ನಡುವೆ ನಿಂದು-

ಕಂ|| ನೆಗೞ್ದಿರೆ ಪುಣ್ಯಾಹ ಸ್ವರ
ಮೊಗೆದಿರೆ ಪಟು ಪಟಹ ಕಾಹಳಾ ರವವಾಗಳ್ ।
ಪುಗವೇೞ್ದಂ ವಿವಿಧಾಸ್ತ್ರ
ಪ್ರಗಲ್ಭರಂ ತನ್ನ ಚಟ್ಟರಂ ಕಳಶಭವಂ ॥ ೬೯

ಅಂತು ಪುಗವೇೞ್ವುದುಂ ದಿ
ಗ್ದಂತಿಗಳುಂ ಕುಲನಗಂಗಳುಂ ಗಡಣಂಗೊಂ ।
ಡೆಂತು ಕವಿತರ್ಕುಮಂತೆ ನೆ
ಲಂ ತಳರ್ವಿನೆಗಂ ಪ್ರಚಂಡ ಕೋದಂಡಧರರ್ ॥ ೭೦

ವ|| ಅಂತು ಧರ್ಮಪುತ್ರನಂ ಮುಂತಿಟ್ಟು ಭೀಮಾರ್ಜುನ ನಕುಲ ಸಹದೇವರುಂ ದುರ್ಯೋಧನನಂ ಮುಂತಿಟ್ಟು ಯುಯುತ್ಸು ದುಶ್ಶಾಸನ ದುಸ್ಸಹ ದುಸ್ಸಳ ಜರಾಸಂಧ ಸತ್ಯಸಂಧ ನಿಸ್ಸಹ ರಾಜಸಂಧ ವಿಂದ ಅನುವಿಂದ ದುರ್ಮತಿ ಸುಬಾಹು ದುಸ್ಪರ್ಶನ ದುರ್ಮರ್ಷಣ ದುರ್ಮುಖ ದುಷ್ಕರ್ಣ ವಿಕರ್ಣ ವಿವಿಂಶತಿ ಸುಲೋಚನ ಸುನಾಭ ಚಿತ್ರ ಉಪಚಿತ್ರ ನಂದ ಉಪನಂದ ಸುಚಿತ್ರಾಂಗದ ಚಿತ್ರಕುಂಡಲ ಸುಹಸ್ತ ದೃಢಹಸ್ತ ಪ್ರಮಾಥಿ ದೀರ್ಘಬಾಹು ಮಹಾಬಾಹು ಪ್ರತಿಮ ಸುಪ್ರತಿಮ ಸಪ್ರಮಾಥಿ ದುರ್ಧರ್ಷಣ ದುಷ್ಪರಾಜಯ ಮಿತ್ರ ಉಪಮಿತ್ರ ಚೌಳೋಪ

೬೮. ಆಗ ದ್ರೋಣನು ಹೊಸಮುತ್ತಿನ ಆಭರಣಗಳು ವ್ಯಾಪಿಸಿ ಶೋಭಾಯಮಾನವಾಗಿರಲು, ರೇಷ್ಮೆಯ ವಸ್ತ್ರವು ತನ್ನ ಶರೀರವನ್ನು ಸೇರಿ ಸುಂದರವಾಗಿರಲು ಬಿಳಿಯ ಮೋಡದಿಂದ ಮುಚ್ಚಿದ ನೀಲಪರ್ವತವು ಬರುವ ಹಾಗೆ ಬಂದನು. ವ|| ಬಂದು ರಂಗಸ್ಥಳಧ ಮಧ್ಯೆ ನಿಂತುಕೊಂಡು - ೬೯. ಪುಣ್ಯಾಹವಾಚನ ಮಂತ್ರನಾದವೂ ತಮಟೆ ಕೊಂಬು ಮೊದಲಾದ ವಾದ್ಯಧ್ವನಿಗಳೂ ಮೊಳಗುತ್ತಿರಲು ಬಗೆಬಗೆಯಾದ ಶಸ್ತ್ರಾಸ್ತ್ರಗಳಲ್ಲಿ ಪರಿಣತರಾದ ತನ್ನ ಶಿಷ್ಯರನ್ನು ದ್ರೋಣನು ಪ್ರವೇಶಮಾಡಹೇಳಿದನು. ೭೦. ದಿಗ್ಗಜಗಳೂ ಕುಲಪರ್ವತಗಳೂ ಗುಂಪುಕೂಡಿ ಮುತ್ತುವ ಹಾಗೆಯೂ ಭೂಮಿ ನಡುಗುವ ಹಾಗೆಯೂ ಉದ್ದಾಮರಾದ ಬಿಲ್ಗಾರರು ವ|| ಧರ್ಮರಾಯನನ್ನು ಮುಂದಿಟ್ಟುಕೊಂಡು ಭೀಮಾರ್ಜುನ ನಕುಲಸಹದೇವರೂ ದುರ್ಯೋಧನನನ್ನು ಮುಂದಿಟ್ಟುಕೊಂಡು ಯುಯುತ್ಸು, ದುಶ್ಶಾಸನ, ದುಸ್ಸಳ, ಜರಾಸಂಧ, ಸತ್ಯಸಂಧ, ನಿಸ್ಸಹ, ರಾಜಸಂಧ, ವಿಂದ, ಅನುವಿಂದ, ದುರ್ಮತಿ, ಸುಬಾಹು, ದುಸ್ಪರ್ಶನ, ದುರ್ಮರ್ಷಣ, ದುರ್ಮುಖ, ದುಷ್ಕರ್ಣ, ವಿಕರ್ಣ, ವಿವಿಂಶತಿ, ಸುಲೋಚನ, ಸುನಾಭ,ಚಿತ್ರ, ಉಪಚಿತ್ರ, ನಂದ, ಉಪನಂದ, ಸುಚಿತ್ರಾಂಗದ, ಚಿತ್ರಕುಂಡಲ,

ದ್ವಂದ್ವಹಸ್ತ ಪ್ರತೀಪ ಸುಪ್ರತೀಪ ಪ್ರಹಸ್ತ ಪ್ರತಾಪ ಪ್ರಮದ ಸದ್ಬಾಹುಗಳ್ ಮೊದಲಾಗಿ ನೂರ್ವರುಂ ಬಂದು-

ಕಂ|| ಗದೆಯೊಳ್ ಬಿಲ್ಲೊಳ್ ಗಜದೊಳ್
ಕುದುರೆಯೊಳಂ ರಥದೊಳಸ್ತ್ರಕೌಶಲದ ಬೆಡಂ ।
ಗೊದವಿರೆ ತೋಱಿದರವರೊ
ರ್ಮೊದಲೆ ಜನಂ ಪೊಗೞೆ ನೆಗೞೆ ಜಳನಿಧಿ ನಿನದಂ ॥ ೭೧

ವ|| ಅಂತವರಿಂ ಬೞಿಯಂ-

ಕಂ|| ಆದ ಮುಳಿಸಿಂದಮಾಗಳ್
ಮೋದುವ ಬಗೆ ಬಳೆಯೆ ಪಿಡಿದ ಗದೆಗಳಿನಿಳಿಪಂ ।
ತಾದುದು ಸುಯೋಧನೋಗ್ರ ವೃ
ಕೋದರರೊರ್ಮೊದಲೆ ಶಿಖರಮುಳ್ಳೆರಡಗಮುಂ ॥ ೭೨

ವ|| ಅಂತಿರ್ವರುಮೊರ್ವರೊರ್ವರೊಳ್ ಸೆಣಸಿ ಬಹುಪ್ರಯೋಗ ಗದಾ ಕೌಶಲಮಂ ತೋಱಲೆಂದು-

ಕಂ|| ಗೆಡೆವಚ್ಚರ್ವರ್ ಮನಗೊಂ
ಡೊಡನೊಡನೋರಂತು ತಗುಳ್ದು ಝೇಂಕರಿಸಿದೊಡೆ ।
ಲ್ವಡಗಾಗೆ ಮೋದಲೆಂದಿ
ರ್ದೆಡೆಯೊಳ್ ಗುರು ತನ್ನ ಮಗನನೆಡೆವುಗವೇೞ್ದಂ ॥ ೭೩

ಸುಹಸ್ತ, ದೃಢಹಸ್ತ, ಪ್ರಮಾಥಿ, ದೀರ್ಘಬಾಹು, ಮಹಾಬಾಹು, ಪ್ರತಿಮ, ಸುಪ್ರತಿಮ, ಸಪ್ರಮಾಥಿ, ದುರ್ಧರ್ಷಣ, ದುಷ್ಪರಾಜಯ, ಮಿತ್ರ, ಉಪಮಿತ್ರ, ಚೌಳೋಪ, ದ್ವಂದ್ವಹಸ್ತ, ಪ್ರತೀಪ, ಪಹಸ್ತ, ಪ್ರತಾಪ, ಪ್ರಮದ, ಸದ್ಬಾಹುಗಳೇ ಮೊದಲಾದ ನೂರ್ವರೂ ಬಂದು - ೭೧. ಜನರೆಲ್ಲರೂ ಸಮುದ್ರಧ್ವನಿಯಂತೆ ಗಟ್ಟಿಯಾಗಿ ಒಟ್ಟಿಗೆ ಹೊಗಳುವ ಹಾಗೆ ಗದೆಯಲ್ಲಿಯೂ ಬಿಲ್ಲಿನಲ್ಲಿಯೂ ಆನೆಯಲ್ಲಿಯೂ ಕುದುರೆಯಲ್ಲಿಯೂ ರಥದಲ್ಲಿಯೂ ಅಸ್ತ್ರಕೌಶಲದಲ್ಲಿಯೂ ಬೆಡಗುತೋರುವಂತೆ ಜಾಣ್ಮೆಯನ್ನು ಪ್ರದರ್ಶಿಸಿದರು. ವ|| ಅವರಾದ ಮೇಲೆ ೭೨. ಹೆಚ್ಚಿದ ಕೋಪವೂ ಹೊಡೆಯಬೇಕೆಂಬ ಅಭಿಲಾಷೆಯೂ ಬೆಳೆಯಲಾಗಿ ದುರ್ಯೋಧನನೂ ಭೀಮನೂ ಏಕಕಾಲದಲ್ಲಿ ಹಿಡಿದ ಗದೆಗಳು ಶಿಖರದಿಂದ ಕೂಡಿದ ಎರಡು ಬೆಟ್ಟಗಳನ್ನು ಒಟ್ಟಿಗೆ ಇಳಿಸಿದಂತಾದುವು. ವ|| ಅವರಿಬ್ಬರೂ ಪರಸ್ಪರ ಸ್ಪರ್ಧಿಸಿ ಅನೇಕ ಪ್ರಯೋಗಗಳಿಂದ ಕೂಡಿದ ಗದಾಕೌಶಲವನ್ನು ತೋರಿಸಿದರು. ೭೩. ಸಮಾನಬಲರಾದ ಇಬ್ಬರೂ ದೃಢಚಿತ್ತರಾಗಿ ಜೊತೆಜೊತೆಯಲ್ಲಿಯೇ ಬೆನ್ನಟ್ಟಿಕೊಂಡು ಝೇಂಕರಿಸಿ (ಪರಸ್ಪರ ಅವರಿಬ್ಬರ ಶರೀರವು) (ಎಲಬು ಮಾಂಸವಾಗಿ) ಜಜ್ಜಿಹೋಗುವ ಹಾಗೆ ಹೊಡೆಯಬೇಕೆಂದಿದ್ದ ಸಮಯದಲ್ಲಿ ಗುರುವಾದ ದ್ರೋಣನು (ಅವರಿಬ್ಬರನ್ನು ಬೇರ್ಪಡಿಸುವುದಕ್ಕಾಗಿ) ತನ್ನ ಮಗನಾದ ಅಶ್ವತ್ಥಾಮನನ್ನು ಮಧ್ಯೆ

ವ|| ಅಂತು ಮೇರೆದಪ್ಪಲ್ ಬಗೆದ ಮಹಾಸಮುದ್ರಂಗಳೆರಡಱ ನಡುವೆ ಕುಲಗಿರಿಯಿರ್ಪಂತಿರ್ದಶ್ವತ್ಥಾಮನಂ ಕಂಡಿರ್ವರುಮೆರಡುಂ ದೆಸೆಗೆ ತೊಲಗಿ ನಿಂದಾಗಳ್-

ಕಂ|| ಆ ದೂರ್ವಾಂಕುರ ವರ್ಣದೊ
ಳಾದಮೊಡಂಬಟ್ಟ ಕನಕ ಕವಚಂ ರಾಜ |
ತ್ಕೋದಂಡಮುಮರ್ದ ದೊಣೆ ಕ
ಣ್ಗಾದಮೆ ಬರೆ ಬಂದು ಮುಂದೆ ನಿಂದಂ ಹರಿಗಂ || ೭೪

ವ|| ಆಗಳ್ ಕುಂಭಸಂಭವನುಲಿವ ಜನದ ಕಳಕಳ ರವಮುಮಂ ಮೊಱಗುವ ಪಱೆಗಳುಮಂ ಬಾರಿಸಿ-

ಕಂ|| ಈತಂ ಗುಣಾರ್ಣವಂ ವಿ
ಖ್ಯಾತ ಯಶಂ ವೈರಿಗಜಘಟಾವಿಘಟನನಿಂ ||
ತೀತನ ಸಾಹಸಮುಪಮಾ
ತೀತಮಿದಂ ನೋಡಿಮೆಂದು ನೆರವಿಗೆ ನುಡಿದಂ || ೭೫

ವ|| ಆ ಪ್ರಸ್ತಾವದೊಳ್-

ಚಂ|| ಒಡೆಗುಮಜಾಂಡಮಿನ್ನಿನಿಸು ಜೇವೊಡೆದಾಗಳೆ ಬೊಮ್ಮನುಂ ಮನಂ
ಗಿಡುಗುಮದೇವುದೆಂದು ಮಿಡಿದೊಯ್ಯನೆ ಜೇವೊಡೆದಾಗಳಂಬನಂ |
ಬೊಡನೊಡನೀಂಬುವೆಂಬನಿತು ಸಂದೆಯಮಪ್ಪಿನಮಸ್ತ್ರ ಜಾಲದಿಂ
ತಡೆಯದೆ ಪಂಜರಂಬಡೆದನಂದು ವಿಯತ್ತಳದೊಳ್ ಗುಣಾರ್ಣವಂ || ೭೬

ಪ್ರವೇಶಮಾಡಹೇಳಿದನು. ವ|| ಹಾಗೆ ಎಲ್ಲೆಯನ್ನು ಮೀರಲು ಯೋಚಿಸಿದ ಎರಡು ಮಹಾಸಮುದ್ರಗಳ ಮಧ್ಯೆ ಕುಲಪರ್ವತದಂತಿದ್ದ ಅಶ್ವತ್ಥಾಮನನ್ನು ನೋಡಿ ಇಬ್ಬರೂ ಎರಡು ಪಕ್ಕಕ್ಕೆ ಸರಿದು ನಿಂತರು. ೭೪. ಎಳೆಯ ಗರಿಕೆಯ ಬಣ್ಣದಿಂದ ವಿಶೇಷವಾಗಿ ಒಪ್ಪಿ ತೋರುವ ಚಿನ್ನದ ಕವಚ ಪ್ರಕಾಶಮಾನವಾದ ಬಿಲ್ಲು ಮೈಗೆ ಸೇರಿಕೊಂಡಿದ್ದ ಬತ್ತಳಿಕೆ ಇವು ಕಣ್ಣುಗಳಿಗೆ ಮನೋಹರವಾಗಿರಲು ಹರಿಗನು ಮುಂದುಗಡೆ ಬಂದು ನಿಂತನು. ವ|| ಆಗ ದ್ರೋಣನು ಶಬ್ದಮಾಡುತ್ತಿದ್ದ ಜನಗಳ ಕಳಕಳಧ್ವನಿಯನ್ನೂ ಮೊಳಗುತ್ತಿದ್ದ ವಾದ್ಯಗಳನ್ನೂ ನಿಲ್ಲಿಸಿ ೭೫. ವಿಖ್ಯಾತಯಶಸ್ಸುಳ್ಳವನೂ ವೈರಿಗಜ ಘಟಾವಿಘಟನೂ (ಶತ್ರುಗಳೆಂಬ ಆನೆಗಳನ್ನು ಸೀಳುವ ಪರಾಕ್ರಮಿಯಾದ) ಆದ ಗುಣಾರ್ಣವನು ಇವನು. ಈತನ ಸಾಹಸ ಹೋಲಿಕೆಗೆ ಮೀರಿದುದು ಇದನ್ನು ನೋಡಿ ಎಂದು ಆ ಗುಂಪಿಗೆ ತಿಳಿಸಿದನು. ವ|| ಆ ಸಂದರ್ಭದಲ್ಲಿ-೭೬. ಅರ್ಜುನನು ಸ್ವಲ್ಪ ಮಟ್ಟಿಗೆ ಬಿಲ್ಲನ್ನು ಶಬ್ದಮಾಡಿಸಿದರೂ ಬ್ರಹ್ಮಾಂಡವು ಒಡೆದುಹೋಗುತ್ತದೆ; ಬ್ರಹ್ಮನು ಉತ್ಸಾಹಶೂನ್ಯನಾಗುತ್ತಾನೆ. ಅಷ್ಟನ್ನೇಕೆ ಮಾಡುವುದು ಎಂದು ಅವನು ಬಹುನಿಧಾನ ಟಂಕಾರಮಾಡಿದಾಗ ಒಂದು ಬಾಣವು ಮತ್ತೊಂದು ಬಾಣವನ್ನೂ ಹೆರುತ್ತಿದೆಯೋ ಎಂಬ ಸಂದೇಹವನ್ನುಂಟುಮಾಡುತ್ತ ಗುಣಾರ್ಣವನು ಆಕಾಶಪ್ರದೇಶದಲ್ಲಿ ಆ ದಿನ ಅಸ್ತ್ರಗಳ ಸಮೂಹದಿಂದ ಸ್ವಲ್ಪವೂ ಸಾವಕಾಶ ಮಾಡದೆ ಒಂದು (ಬಾಣದ)

ವ॥ ಮತ್ತಮೈಂದ್ರ ವಾರುಣ ವಾಯವ್ಯಾಗ್ನೇಯ ಪಾರ್ವತಾದಿ ಬಾಣಂಗಳಂ ತುಡೆ-

ಚಂ॥ ಕವಿದುವು ಕಾಳ ನೀಳ ಜಳದಾವಳಿ ವಾರಿಧಿಗಳ್ ಧರಿತ್ರಿಯಂ
ಕವಿದುವು ಗಾಳಿಗಳ್ ಪ್ರಳಯಕಾಲಮನಾಗಿಸಲೆಂದೆ ಲೋಕಮಂ ।
ಕವಿದುವು ಮೊಕ್ಕಳಂ ಕವಿದುವುಗ್ರ ಲಯಾಗ್ನಿಗಳಂತೆ ಬೆಟ್ಟುಗಳ್
ಕವಿದುವಿವೆಂಬನಿತ್ತು ಭಯಮಾಯ್ತು ಗುಣಾರ್ಣವನಸ್ತ್ರಕೌಶಲಂ ॥ ೭೭

ವ॥ ಆಗಳಾ ಪರಾಕ್ರಮಧವಳನ ಶರಪರಿಣತಿಯಂ ಕಂಡು ದುರ್ಯೋಧನನ ಮೊಗಂ ತಲೆನವಿರ ಗಂಟಂ ಕಿಱಿದಾಗೆ ದ್ರೋಣ ಭೀಷ್ಮ ಕೃಪ ವಿದುರ ಪ್ರಭೃತಿಗಳ ಮೊಗಮರಲ್ದ ತಾವರೆಯಿಂ ಪಿರಿದಾಗೆ-

ಕಂ॥ ತೊಳಗುವ ತೇಜಂ ತೊಳತೊಳ
ತೊಳಗುವ ದಿವ್ಯಾಸ್ತ್ರಮುಮರ್ದ ಕೋದಂಡಮುಮಂ ।
ಗೊಳಿಸೆ ಮನಂಗೊಳಿಸೆ ಭಯಂ
ಗೊಳಿಸೆ ಸಭಾಸದರನುಱದೆ ಕರ್ಣಂ ಬಂದಂ ॥ ೭೮

ವ॥ ಬಂದು ದ್ರೋಣಾಚಾರ್ಯಂಗೆ ಪೊಡಮಟ್ಟು ಶರಧಿಯಿಂ ದಿವ್ಯಾಸ್ತ್ರಂಗಳನುರ್ಚಿ ಕೊಂಡು-

ಪಂಜರವನ್ನು ಕಟ್ಟಿದನು. ವ॥ ಮತ್ತು ಐಂದ್ರ, ವಾರುಣ, ವಾಯವ್ಯ, ಆಗ್ನೇಯ, ಪಾರ್ವತವೇ ಮೊದಲಾದ ಅಸ್ತ್ರಗಳನ್ನು ಪ್ರಯೋಗಿಸಲು-೭೭. ಪ್ರಳಯಕಾಲದ ಕಪ್ಪುಮೋಡಗಳು ಮುಚ್ಚಿಕೊಂಡವು. ಸಮುದ್ರಗಳು ಭೂಮಿಯನ್ನು ಮುಚ್ಚಿದುವು. ಪ್ರಳಯಕಾಲವನ್ನುಂಟುಮಾಡಬೇಕೆಂದೇ ಬಿರುಗಾಳಿಗಳು ಭೂಮಿಯನ್ನಾವರಿಸಿ ಕೊಂಡವು. ಪ್ರಳಯಕಾಲದ ಬೆಂಕಿಗಳು ವಿಶೇಷವಾಗಿ ಮುಚ್ಚಿಕೊಂಡವು. ಹಾಗೆಯೇ ಬೆಟ್ಟಗಳು ಕವಿದುಕೊಂಡವು ಎನ್ನುವಷ್ಟು ಮಟ್ಟಿಗೆ ಅರ್ಜುನನ ಅಸ್ತ್ರವಿದ್ಯಾ ಕೌಶಲವು ಭಯಂಕರವಾಯಿತು. ವ॥ ಆಗ ಆ ಪರಾಕ್ರಮಧವಳನಾದ ಅರ್ಜುನನ ಬಿಲ್ವಿದ್ಯೆಯ ಪಾಂಡಿತ್ಯವನ್ನು ನೋಡಿ ದುರ್ಯೋಧನನ ಮುಖವು ತಲೆಯಕೂದಲಿನ ಗಂಟಿಗಿಂತ ಚಿಕ್ಕದಾಗಲು, ದ್ರೋಣ, ಭೀಷ್ಮ, ಕೃಪ, ವಿದುರರೇ ಮೊದಲಾದವರ ಮುಖಗಳು ಅರಳಿದ ತಾವರೆಗಿಂತ ಹಿರಿದಾದುವು. ೭೮. ಈ ಮಧ್ಯೆ ಪ್ರಕಾಶಮಾನವಾದ ತೇಜಸ್ಸೂ ಅತ್ಯಂತ ಜಾಜ್ವಲ್ಯಮಾನವಾದ ದಿವ್ಯಾಸ್ತ್ರದಿಂದ ಕೂಡಿಕೊಂಡಿರುವ ಬಿಲ್ಲೂ ಸಭೆಯ ಜನರನ್ನು ಉತ್ಸಾಹಗೊಳಿಸಿ ಆಕರ್ಷಿಸಿ ಭಯವನ್ನುಂಟುಮಾಡುತ್ತಿರಲು ಕರ್ಣನು ವೇಗವಾಗಿ ಬಂದನು. ವ॥ ದ್ರೋಣಾ ಚಾರ್ಯರಿಗೆ ನಮಸ್ಕಾರಮಾಡಿ ಬತ್ತಳಿಕೆಯಿಂದ ದಿವ್ಯಾಸ್ತ್ರಗಳನ್ನು ಸೆಳೆದುಕೊಂಡು

ಕಂ॥ ಅರಿಗನ ಬಿಲ್ಬಲ್ಮೆಯೊಳಂ
ದೆರಡಿಲ್ಲದೆ ಬಗೆದ ಮುಳಿಸುಮೇವಮುಮೆರ್ದೆಯೊಳ್ ॥
ಬರೆದಿರೆ ತೋಳಿದನಾಯತ
ಕರ ಪರಿಘಂ ಕರ್ಣನಾತ್ಮ ಶರಪರಿಣತಿಯಂ ॥ ೭೯

ವ॥ ಅಂತು ತೋಱಿಯುಮೆರ್ದೆಯ ಮುಳಿಸು ನಾಲಗೆಗೆ ವರೆ ಸೈರಿಸಲಾಱದೆ ವಿದ್ವಿಷ್ಟ ವಿದ್ರಾವಣನನಿಂತೆಂದಂ-

ಕಂ॥ ಸಂಗತದಿನೀಗಳಿಂತೀ
ರಂಗಮೆ ರಣರಂಗಮಾಗೆ ಕಾದುವಮಳವಂ ।
ಪೊಂಗದಿರಿದಿರ್ಚದೇಂ ಗಳ
ರಂಗಂಬೊಕ್ಕಾಡುವಂತೆ ಪೆಂಡಿರೆ ಗಂಡರ್ ॥ ೮೦

ವ॥ ಎಂಬುದುಮತಿರಥಮಥನನಿಂತೆಂದಂ-

ಕಂ॥ ಈ ನೆರೆದ ಗುರುಜನಂಗಳ
ಮಾನಿನಿಯರ ಮುಂದೆ ಕರ್ಣ ಪೊಲ್ಲದು ನುಡಿದೈ ।
ನೀನೆನ್ನೀ ನಿಡುದೋಳ್ಗಳ
ತೀನಂ ಮಟ್ಗಿಸುವೆಯಪ್ಪೊಡಾನೊಲ್ಲದನೇ ॥ ೮೧

ವ॥ ಎಂಬುದುಂ ದ್ರೋಣನುಂ ಕೃಪನುಮೆಡೆಗೆ ವಂದು ಕರ್ಣನನಿಂತೆಂದರ್-

ಕಂ॥ ಏವದ ಮುಳಿಸಿನ ಕಾರಣ
ಮಾವುದೊ ನೀಂ ನಿನ್ನ ತಾಯ ತಂದೆಯ ದೆಸೆಯಂ ।
ಭಾವಿಸದೆ ಕರ್ಣ ನುಡಿವಂ
ತಾವುದು ಸಮಕಟ್ಟು ನಿನಗಮರೀಕೇಸರಿಗಂ ॥ ೮೨

೭೯. ಅರ್ಜುನನ ಬಿಲ್ಲಿಗಿಂತ ತನ್ನ ಬಿಲ್ಲಿನ ಪಾಂಡಿತ್ಯವು ಸ್ವಲ್ಪವೂ ಬೇರೆಯಿಲ್ಲವೆಂದು ಭಾವಿಸಿದ ಕೋಪವೂ ಅಸಮಾಧಾನವೂ ಎದೆಯಲ್ಲಿ ಬರೆದಿರಲು ಪರಿಘಾಯುಧದಂತೆ ದೀರ್ಘವಾದ ಬಾಹುಗಳನ್ನುಳ್ಳ ಕರ್ಣನು ತನ್ನ ಅಸ್ತ್ರವಿದ್ಯಾಪ್ರೌಢಿಮೆಯನ್ನು ಪ್ರದರ್ಶಿಸಿದನು. ವ॥ ಹಾಗೆ ತೋರಿಸಿಯೂ ಹೃದಯದ ಕೋಪವು ನಾಲಗೆಗೆ ಬರಲು ಸಹಿಸಲಾರದೆ ವಿದ್ವಿಷ್ಟವಿದ್ರಾವಣನಾದ ಅರ್ಜುನನನ್ನು ಕುರಿತು ಹೀಗೆಂದನು-೮೦ ಎಲ್ಲರೂ ಇಲ್ಲಿ ಸೇರಿರುವುದರಿಂದ ಈ ವ್ಯಾಯಾಮರಂಗವೇ ರಣರಂಗವಾಗಿರಲು ಯುದ್ಧಮಾಡೋಣ. ಪರಾಕ್ರಮದಿಂದ ಉಬ್ಬದೇ (ಅಹಂಕಾರಪಡದೇ) ಇದಿರಿಸು. ಇದೇನಯ್ಯ ನಾಟ್ಯರಂಗವನ್ನು ಪ್ರವೇಶಿಸಿ ನರ್ತನಮಾಡುವುದಕ್ಕೆ ಶೂರರು ಹೆಂಗಸರೇನು? ವ॥ ಎನ್ನಲು ಅದಕ್ಕೆ ಅತಿರಥಮಥನನಾದ ಅರ್ಜುನನು ಹೀಗೆಂದನು. ೮೧. ಕರ್ಣ ನೀನು ಇಲ್ಲಿ ಸೇರಿರುವ ಹಿರಿಯರ ಮತ್ತು ರಾಣಿವಾಸದ ಮುಂದೆ ಕೆಟ್ಟ ಮಾತನ್ನಾಡಿದ್ದೀಯೆ. ನೀನು ನನ್ನ ದೀರ್ಘವಾದ ತೋಳುಗಳ ತೀಟೆಯನ್ನು ಹೋಗಲಾಡಿಸುವುದಾದರೆ ನಾನು ಬೇಡವೆನ್ನುತ್ತೇನೆಯೇ? ವ॥ ಎನ್ನಲು ದ್ರೋಣನು ಕರ್ಣನ ಮಧ್ಯೆ ಪ್ರವೇಶಿಸಿ ಕರ್ಣನಿಗೆ ಹೀಗೆ ಹೇಳಿದರು. ೮೨. ಅಸಮಾಧಾನಕ್ಕೂ ಕೋಪಕ್ಕೂ ಕಾರಣವೇನು? ನಿನ್ನ ತಾಯಿ ತಂದೆಯ ವಿಷಯವನ್ನು ವಿಚಾರಿಸಿ

ವ|| ಎಂಬುದುಮಾ ಮಾತಿಂಗೆ ಮಱುಮಾತುಗುಡಲಱಿಯದೆ ಪಂದೆಯಂ ಪಾವಡರ್ದಂತು ಮಸ್ಗೆ ಬೆಮರುತ್ತುಮಿರ್ದ ಕರ್ಣನಂ ದುರ್ಯೋಧನಂ ಕಂಡು ದ್ರೋಣನುಮಂ ಕೃಪನುಮನಿಂತೆಂದಂ-

ಕಂ|| ಕುಲಮೆಂಬುದುಂಟೆ ಬೀರಮೆ
ಕುಲಮಲ್ಲದೆ ಕುಲಮನಿಂತು ಪಿಕ್ಕದಿರಿಂ ನೀ ।
ಮೊಲಿದೆಲ್ಲಿ ಪುಟ್ಟಿ ಬಳೆದಿರೊ
ಕುಲಮಿರ್ದುದೆ ಕೊಡದೊಳಂ ಶರಸ್ತಂಬದೊಳಂ ॥ ೮೩

ವ|| ಎಂದು ನುಡಿದು ಕರ್ಣನನೀಗಳೆ ಕುಲಜನಂ ಮಾಡಿ ತೋರ್ಪೆನೆಂದು ಕೆಯ್ಯಂ ಪಿಡಿದೊಡಗೊಂಡು ಪೋಗಿ ಕನಕಪೀಠದ ಮೇಲೆ ಕುಳ್ಳಿರಿಸಿ ಕನಕಕಳಶದಲ್ ತೀವಿದಗಣ್ಯಪುಣ್ಯ ತೀರ್ಥೋದಕಂಗಳಂ ಚತುರ್ವೇದಪಾರಗರಿಂದಭಿಷೇಕಂಗೆಯ್ಸಿ-

ಕಂ|| ಮಂಗಳವಱಿಗಳ್ ಶುಭ ವಚ
ನಂಗಳ್ ಚಮರೀರುಹಂಗಳಾ ಶ್ವೇತಚ್ಛ ।
ತ್ರಂಗಳಮರ್ದೆಸೆಯೆ ಕರ್ಣಂ
ಗಂಗಮಹೀತಳ ವಿಭೂತಿಯಂ ನೆಱಿಯಿತ್ತಂ ॥ ೮೪

ವ|| ಅಂತಿತ್ತು ನಿತ್ಯದಾನಕ್ಕೆ ದೇವ ಸಬಳದ ಪದಿನೆಂಟು ಕೋಟಿ ಪೊನ್ನುಮನಿತ್ತು ನೀನೆನಗೊಂದನೀಯಲ್ವೇಟ್ಟುದೆಂದು-

ಮಾತನಾಡುವುದಾದರೆ ನಿನಗೂ ಅರಿಕೇಸರಿಗೂ ಯಾವ ಸಮಾನತೆಯಿದೆ? ವ|| ಎನ್ನಲು ಆ ಮಾತಿಗೆ ಪ್ರತ್ಯುತ್ತರವನ್ನು ಕೊಡಲು ಸಮರ್ಥನಾಗದೆ ಹೇಡಿಯ ಮುಂದೆ ಹಾವು ಅಡ್ಡಬಂದ ಹಾಗೆ ಸುಮ್ಮನೆ ಬೆವರಿ ನಿಂತಿದ್ದ ಕರ್ಣನನ್ನು ದುರ್ಯೋಧನನು ನೋಡಿ ದ್ರೋಣನನ್ನೂ ಕೃಪನನ್ನೂ ಕುರಿತು ಹೀಗೆಂದನು-೮೩. ಶೌರ್ಯವೇ ಕುಲವಲ್ಲದೆ ಕುಲವೆಂಬುದು ಬೇರೆಯುಂಟೇ? ಕರ್ಣನ ಕುಲವನ್ನೂ ಬಿಡಿಸಿ (ವಿಚಾರಮಾಡಿ) ನೋಡಬೇಡಿ; ನೀವು ಪ್ರೀತಿಸಿ ಎಲ್ಲಿ ಹುಟ್ಟಿ ಬೆಳೆದಿರಿ? ಕೊಡದಲ್ಲಿಯೂ ಜೊಂಡಿನ ರಾಶಿಯಲ್ಲಿಯೂ ಕುಲವಿದ್ದಿತೆ? ವ|| ಎಂಬುದಾಗಿ ಹೇಳಿ ಕರ್ಣನನ್ನೂ ಈಗಲೇ ಕುಲಜನನ್ನಾಗಿ ಮಾಡಿ ತೋರಿಸುತ್ತೇನೆ ಎಂದು ಕರ್ಣನ ಕಯ್ಯನ್ನು ಹಿಡಿದುಕೊಂಡು ಹೋಗಿ ಚಿನ್ನದ ಪೀಠದ ಮೇಲೆ ಕುಳ್ಳಿರಿಸಿ ಚಿನ್ನದ ಕಳಶದಲ್ಲಿ ತುಂಬಿದ್ದ ಅಸಂಖ್ಯಾತವಾದ ಪುಣ್ಯತೀರ್ಥೋದಕಗಳಿಂದ ನಾಲ್ಕು ವೇದಗಳಲ್ಲಿ ಪ್ರವೀಣರಾದ ಪಂಡಿತರಿಂದ ಅಭಿಷೇಕಮಾಡಿಸಿದನು. ೮೪. ಮಂಗಳವಾದ್ಯಗಳೂ ಒಳ್ಳೆಯ ಸ್ವಸ್ತಿವಾಚನಗಳೂ ಚಾಮರಗಳೂ ಬಿಳಿಯ ಕೊಡೆಗಳೂ ಒಟ್ಟಿಗೆ ಸೇರಿ ಪ್ರಕಾಶಿಸುತ್ತಿರಲು ಕರ್ಣನಿಗೆ ಅಂಗರಾಜ್ಯದ ವೈಭವವನ್ನು ಸಂಪೂರ್ಣವಾಗಿ ಕೊಟ್ಟನು. ವ|| ಹಾಗೆ ಕೊಟ್ಟು ಪ್ರತಿನಿತ್ಯದ ದಾನಕ್ಕಾಗಿ ದೇವತೆಗಳ ಅಳತೆಯಲ್ಲಿ ಪದಿನೆಂಟುಕೋಟಿ ಸುವರ್ಣನಾಣ್ಯಗಳನ್ನೂ ಕೊಟ್ಟು ನೀನು ನನಗೊಂದನ್ನು

ಕಂ॥ ಪೊಡಮಡುವರ್ ಜೀಯೆಂಬರ್
ಕುಡು ದಯೆಗೆಯ್ಯೆಂ ಪ್ರಸಾದಮೆಂಬಿವು ಪೆಱರೊಳ್ ।
ನಡೆಗೆಮ್ಮ ನಿನ್ನಯೆಡೆಯೊಳ್
ನಡೆಯಲ್ವೇಡೆನಗೆ ಕೆಳೆಯನೈ ರಾಧೇಯಾ ॥ ೮೫

ವ॥ ಎಂದು ಬೇಡಿಕೊಂಡು ಕರ್ಣನಂ ಮುಂದಿಟ್ಟೊಡಗೊಂಡು ಪೋಗಿ ಧೃತರಾಷ್ಟ್ರಂಗಂ ಗಾಂಧಾರಿಗಂ ಪೊಡಮಡಿಸಿದಾಗಳ್-

ಉ॥ ಇಂತು ಸುಯೋಧನಂ ನಿನಗೆ ಮಾಡಿದ ರಾಜ್ಯವಿಭೂತಿಗುಂತೆ ಮು
ಯ್ವಾಂತಿರದಿರ್ ಗುಣಾರ್ಣವನಿನಸ್ತಮಯಕ್ಕಿದು ಸಾಲ್ಗುಮೀಗಳೆಂ ।
ಬಂತೆವೊಲಂದು ಮುಂದಱಿದು ತನ್ನ ಮಗಂಗೆ ಸಮಂತು ಬುದ್ಧಿವೇ
ಳ್ವಂತೆವೊಲತ್ತಲಸ್ತಗಿರಿಯಂ ಮಱೆಗೊಂಡುದು ಸೂರ್ಯಮಂಡಲಂ ॥ ೮೬

ವ॥ ಆಗಳ್ ದುರ್ಯೋಧನನಂ ಮುಂದಿಟ್ಟೊಡಗೊಂಡು ಧೃತರಾಷ್ಟ್ರ ಕರ್ಣ ಶಲ್ಯ ಶಕುನಿ ಸೈಂಧವ ಪ್ರಭೃತಿಗಳ್ ನೆಲಂ ಮೂರಿವಿಟ್ಟಂತೆ ಸಭಾಕ್ಷೋಭಮಾಗೆ ತಳರ್ದು ನಾನಾ ವಿಧ ವಾಹನಂಗಳನೇಱಿ ನಿಜನಿವಾಸಂಗಳ್ಗೆ ಪೋದರಿತ್ತ ಧರ್ಮಪುತ್ರನಂ ಮುಂದಿಟ್ಟು ಭೀಮಾರ್ಜುನ ನಕುಲ ಸಹದೇವರುಂ ಗಾಂಗೇಯ ದ್ರೋಣ ಕೃಪ ವಿದುರ ಪ್ರಭೃತಿಗಳ್ ನಾನಾವಿಧ ವಾಹನಂಗಳ ನೇಱಿ ಬರೆ ಪುರಜನಂಗಳೆಲ್ಲಮೋರೋರ್ವರನೆ ಪಿಡಿಯಚ್ಚುವಿಡಿದು ನುಡಿಯೆ ಕೆಲರನಾಗತಮನಱಿವ ಬುದ್ಧಿಯೊಡೆಯರಿಂತೆಂಬರ್-

ಅನುಗ್ರಹಿಸಬೇಕು ಎಂದನು. ೮೫. ಎಲೈ ರಾಧೇಯನೇ ಇತರರು ನನಗೆ ನಮಸ್ಕಾರ ಮಾಡುತ್ತಾರೆ; ಸ್ವಾಮಿ ಎನ್ನುತ್ತಾರೆ; ಕೊಡಿ, ದಯಪಾಲಿಸಿ, ಏನು ಪ್ರಸಾದ ಎನ್ನುತ್ತಾರೆ. ಇವೆಲ್ಲ ಇತರರಲ್ಲಿ ನಡೆಯಲಿ; ನನ್ನ ನಿನ್ನ ವ್ಯವಹಾರದಲ್ಲಿ ಬೇಡ, ನೀನು ನನಗೆ ಸ್ನೇಹಿತನು ಮಾತ್ರನಾಗಿರುತ್ತೀಯೆ. ವ॥ ಎಂದು ಬೇಡಿಕೊಂಡು ಕರ್ಣನನ್ನು ಮುಂದುಮಾಡಿಕೊಂಡು ಹೋಗಿ ಧೃತರಾಷ್ಟ್ರನಿಗೂ ಗಾಂಧಾರಿಗೂ ನಮಸ್ಕಾರ ಮಾಡಿಸಿದನು. ೮೬. 'ಹೀಗೆ ದುರ್ಯೋಧನನು ಮಾಡಿದ ರಾಜ್ಯವೈಭವಕ್ಕೆ ಸುಮ್ಮನೆ ಉಬ್ಬಿಹೋಗಬೇಡ. ಗುಣಾರ್ಣವನಿಂದ ನೀನು ಸಾಯುವುದಕ್ಕೆ ಈಗ ಇಷ್ಟೇ ಸಾಕು' ಎಂದು ಸೂರ್ಯನು ಮುಂದೆ ತನಗಾಗುವುದನ್ನು ಇಂದೇ ಪೂರ್ಣವಾಗಿ ಬುದ್ಧಿ ಹೇಳುವ ಹಾಗೆ ಅಸ್ತಮಯನಾದನು (ಸೂರ್ಯಮಂಡಲವು ಅಸ್ತಪರ್ವತದ ಹಿಂದೆ ಮರೆಗೊಂಡಿತು). ವ॥ ಆಗ ದುರ್ಯೋಧನನನ್ನು ಮುಂದಿಟ್ಟುಕೊಂಡು ಧೃತರಾಷ್ಟ್ರ, ಕರ್ಣ, ಶಲ್ಯ, ಶಕುನಿ, ಸೈಂಧವ, ಮೊದಲಾದವರು ನೆಲ ಬಿರಿದುಹೋದ ಹಾಗೆ ಸಭಾಮಂಟಪವು ಕಲಕಿಹೋಗುವ ಹಾಗೆ ಹೊರಹೊರಟು ನಾನಾವಿಧವಾದ ವಾಹನಗಳನ್ನು ಹತ್ತಿಕೊಂಡು ತಮ್ಮ ವಾಸಸ್ಥಳಕ್ಕೆ ಹೋದರು. ಈ ಕಡೆ ಧರ್ಮರಾಜನನ್ನು ಮುಂದಿಟ್ಟುಕೊಂಡು ಭೀಮಾರ್ಜುನ ನಕುಲ ಸಹದೇವರೂ ಭೀಷ್ಮ ದ್ರೋಣ, ಕೃಪ, ವಿದುರರೇ ಮೊದಲಾದವರೂ ಬಗೆಬಗೆಯ ವಾಹನಗಳನ್ನು ಹತ್ತಿ ಬರುತ್ತಿರಲು ಪಟ್ಟಣದವರೆಲ್ಲ ಒಬ್ಬೊಬ್ಬರನ್ನೂ ಅವರ ಪ್ರತ್ಯೇಕವಾದ ಸಂಕೇತಗಳಿಂದ ಗುರುತಿಸಿ

ಚಂ॥ ಆಪರಿವರನ್ನರಿನ್ನರೆನವೇಡರಿಕೇಸರಿಗಾಂಪನಿಲ್ಲ ಮಾ
ಱುವ ತಲೆದೋರ್ಪ ಗಂಡರಣಮಿಲ್ಲೆಡೆಯೊಳ್ ಗೆಡೆವಚ್ಚುಗೊಂಡು ಪಾಂ ।
ಡವರನಕಾರಣಂ ಕೆಣಕಿದೀ ಪೊಸ ಪೊಟ್ಟಱಿಸೊಳಾದ ಕಿರ್ಚು ಕೌ
ರವರ್ಗಿದು ನಾಡೆಯುಂ ತಿಣುಕನಾಗಿಸದೇಂ ಗಳ ಸಯ್ತು ಪೋಕುಮೇ ॥ ೮೭

ವ॥ ಎಂದೊರ್ವರೊರ್ವರೊಂದೊಂದನೆ ನುಡಿಯುತ್ತುಂ ಪೋಗೆ ಬೆಳಗುವ ಕೈದೀವಿಗೆಗಳ್ ಕಟ್ಟಲೆಯಂ ತಲೆದೋಱಲೀಯದೆ ಪ್ರಚಂಡ ಮಾರ್ತಾಂಡನ ತೇಜೋಂಕುರಂಗಳ್ ಬೆಳಗುವಂತೆ ಬೆಳಗೆ ಪಾಂಡವರ್ ನಿಜನಿವಾಸಕ್ಕೆ ಪೋದರಾಗಳ್-

ಕಂ॥ ಎಸೆವ ನಿಜವಂಶಮಂ ಪೆ
ರ್ಚಿಸುವ ಗುಣಾರ್ಣವನೊಳುಂತೆ ಸೆಣಸಲ್ಕೆಂದಿ ।
ರ್ಪ ಸುಯೋಧನಂಗೆ ಮುಳಿಸಿಂ
ಕಿಸುಗಣ್ಣಿದ ತೆಱದಿನಮೃತಕರನುದಯಿಸಿದಂ ॥ ೮೮

ವ॥ ಆಗಳ್ ದುರ್ಯೋಧನಂ ಭೀಮಸೇನನ ಬಲ್ಲಾಳ್ತನದಳವುಮಂ ವಿಕ್ರಮಾರ್ಜುನನ ದಿವ್ಯಾಸ್ತ್ರ ಕೌಶಳಮುಮಂ ಕಂಡು ತನ್ನೆರ್ದೆಯುಂ ಪೊಳ್ಳುಮರನಂ ಕಿರ್ಚುರ್ವಂತೊಳಗೊಳಗುರೆ ಸೈರಿಸಲಾಱದೆ ಕರ್ಣನಂ ಕರೆದಾಳೋಚಿಸಿ ತಮ್ಮಯ್ಯನಲ್ಲಿಗೆ ಪೋಗಿ ಪೊಡಮಟ್ಟು ಕಟ್ಟೇಕಾಂತದೊಳಿಂತೆಂದಂ-

ಮಾತನಾಡುತ್ತಿರಲು ಅವರಲ್ಲಿ ಭವಿಷ್ಯಜ್ಞಾನವುಳ್ಳ ಕೆಲವರು ಹೀಗೆಂದರು-೮೭. ಅವರು ಇವರು ಅಂತಹವರು ಇಂತಹವರು ಎನ್ನಬೇಡ. ಅರಿಕೇಸರಿಯನ್ನೆದುರಿಸುವವರಾರೂ ಇಲ್ಲ. ಅರ್ಜುನನ ಆಜ್ಞೆಯನ್ನು ಮೀರಿ ಅವನನ್ನು ಪ್ರತಿಭಟಿಸುವ ವೀರರು ಯಾರೂ ಇಲ್ಲ. ಇಬ್ಬರಿಗೂ ಸಮಾನವಾಗಿದ್ದ ಸ್ನೇಹಭಂಗವಾಗಿ ಪಾಂಡವರನ್ನು ಕಾರಣವಿಲ್ಲದೆ ಕೆಣಕಿದ ಈ ಹೊತ್ತಿನಲ್ಲಿ ಉಂಟಾದ ಬೆಂಕಿಯು (ಮನಸ್ತಾಪವು) ಕೌರವರಿಗೆ ವಿಶೇಷವಾದ ಹಿಂಸೆಯನ್ನುಂಟುಮಾಡದೇ ಸಾಮಾನ್ಯವಾಗಿ ಹೋಗುತ್ತದೆಯೇ? ವ॥ ಎಂದು ಒಬ್ಬೊಬ್ಬರು ಒಂದೊಂದನ್ನು ಆಡುತ್ತ ಹೋಗುತ್ತಿರಲಾಗಿ ಪ್ರಕಾಶಮಾನವಾಗಿದ್ದ ಕೈದೀವಿಗೆಗಳು ಕತ್ತಲೆಯು ಹರಡುವುದಕ್ಕೆ ಅವಕಾಶ ಕೊಡದೆ ಪ್ರಕಾಶಮಾನವಾದ ಸೂರ್ಯಕಿರಣಗಳ ಮೊಳಕೆಯಂತೆ ಬೆಳಗುತ್ತಿರಲು ಪಾಂಡವರು ತಮ್ಮ ನಿವಾಸಕ್ಕೆ ಹೋದರು. ಆಗ-೮೮. ಪ್ರಕಾಶಮಾನವಾದ ತನ್ನ ವಂಶವನ್ನೂ ಅಭಿವೃದ್ಧಿಗೊಳಿಸುವ ಗುಣಾರ್ಣವನಾದ ಅರ್ಜುನನಲ್ಲಿ ನಿಷ್ಕಾರಣವಾಗಿ ಜಗಳವಾಡಬೇಕೆಂದಿರುವ ದುರ್ಯೋಧನನಿಗೆ ಕೋಪದಿಂದ ತನ್ನ ಕಣ್ಣನ್ನು ಕೆರಳಿಸಿದ ರೀತಿಯಲ್ಲಿ ಚಂದ್ರನು ಕೆಂಪಗೆ ಉದಯಿಸಿದನು. ವ॥ ಆಗ ದುರ್ಯೋಧನನು ಭೀಮಸೇನನ ಪರಾಕ್ರಮದ ಪ್ರಮಾಣವನ್ನೂ ಅರ್ಜುನನ ದಿವ್ಯಾಸ್ತ್ರಕೌಶಲವನ್ನೂ ನೋಡಿ ಅವನ ಹೃದಯವು ಪೊಳ್ಳುಮರವನ್ನು ಬೆಂಕಿಯು ಸುಡುವಂತೆ ಒಳಗೊಳಗೆ ಸುಡುತ್ತಿರಲು ಸಹಿಸಲಾರದೆ ಕರ್ಣನನ್ನು ಕರೆದು (ಅವನೊಡನೆ) ಯೋಚನೆಮಾಡಿ ತನ್ನ ತಂದೆಯಾದ ಧೃತರಾಷ್ಟ್ರನ ಸಮೀಪಕ್ಕೆ ಹೋಗಿ ನಮಸ್ಕಾರಮಾಡಿ ಬಹು ರಹಸ್ಯವಾಗಿ ಹೀಗೆ ಹೇಳಿದನು-

ಮ॥ ಪಿರಿಯರ್ ನೀಮಿರೆ ಪಾಂಡುರಾಜನೆ ವಲಂ ಮುಂ ಪಟ್ಟಮಂ ಕಟ್ಟೆ ಭೂ
ಭರಮಂ ತಾಳ್ದಿದನೀಗಳಾತನ ಸುತರ್ ತಾಮಾಗಳೇ ಯೋಗ್ಯರಾ ।
ಗರೆ ಪಟ್ಟಕ್ಕೆ ತಗುಳ್ದು ಪಾಲನೆೞೆವಿರ್ ಪಾವಿಂಗೆ ದಾಯಾದ್ಯರಂ
ಪಿರಿಯರ್ಮಾಡಿದಿರೆಮ್ಮ ಸಾವುಮುೞಿವುಂ ದೈವೇಚ್ಛೆಯಾಯ್ತಾಗದೇ ॥ ೮೯

ವ॥ ಆದಲ್ಲದೆಯುಂ-

ಚಂ॥ ಮಲೆ ತಲೆದೋಱದೆಂದುದನೆ ಕೊಟ್ಟುದಡಂಗಮಡಂಗಿ ಬಂದೊಡೊ
ಕ್ಕಲಿಗವೆಸರ್ಗೆ ಪೂಣ್ದುದು ಕುಱುಂಬು ತಱುಂಬದೆ ಮಿಕ್ಕ ಶತ್ರು ಮಂ ।
ಡಳಿಕರೆ ಮಿತ್ರ ಮಂಡಳಿಕರಾದರನಾಕುಳಮಿಂದು ನಾಳೆ ಮಾ
ರ್ಮಲೆದರನಿಕ್ಕಿ ನಮ್ಮನೆೞೆದಿಕ್ಕುಗುಮೀ ನೆಲೆಯಿಂ ಗುಣಾರ್ಣವಂ ॥ ೯೦

ವ॥ ಅಂತು ವಿಕ್ರಮಾರ್ಜುನಂ ಬಿಲ್ಗೊಳಲುಂ ಭೀಮಸೇನಂ ಗದೆಗೊಳಲುಮಾಱಂ ಪುದರಿದು ಪಾಂಶುವಧದೆ ಕೆಯ್ಗೆ ಮಾಡುವುದುತ್ತಮಪಕ್ಷಮಂತುಮಲ್ಲದೆಯುಂ-

ಶ್ಲೋ ॥ ಸ್ವಾಮ್ಯಾರ್ಥಂ ಸ್ವಾಮ್ಯ ವಿಕ್ರಾಂತಂ ಮರ್ಮಜ್ಞಂ ವ್ಯವಸಾಯಿನಂ
ಅರ್ಧರಾಜ್ಯಹರಂ ಭೃತ್ಯಂ ಯೋನ ಹನ್ಯಾತ್ಸ ಹನ್ಯತೇ ॥

ಎಂಬುದರ್ಥಶಾಸ್ತ್ರ ಸದ್ಭಾವಂ-

೮೯. 'ಹೀಗೆ ಹಿರಿಯರಾದ ನೀವಿದ್ದರೂ ಪಾಂಡುರಾಜನಿಗೆ ಪಟ್ಟವನ್ನು ಕಟ್ಟಲು ಆತನು ರಾಜ್ಯಭಾರವನ್ನು ವಹಿಸಿದನು. ಈಗಲೂ ಅವರ ಮಕ್ಕಳು ತಾವಾಗಲೇ ಪಟ್ಟಕ್ಕೆ ಯೋಗ್ಯರಾಗುತ್ತಿಲ್ಲವೆ? (ನೀವು) ಬೆನ್ನಟ್ಟಿಕೊಂಡು ಹೋಗಿ ಹಾವಿಗೆ ಹಾಲನ್ನೆರೆಯುತ್ತಿದ್ದೀರಿ. ದಾಯಾದಿಗಳನ್ನು ದೊಡ್ಡವರನ್ನಾಗಿ ಮಾಡಿದಿರಿ. ನಮ್ಮ ಸಾವು ಬದುಕುಗಳು ಈಗ ಅದೃಷ್ಟಾಧೀನವಾಗದೇ ಇರುತ್ತದೆಯೇ' (ಅಂದರೆ ರಾಜ್ಯವು ನಮಗೆ ಬಂದೇಬರುತ್ತದೆಯೆಂಬ ನಿಷ್ಕರ್ಷೆಯಿಲ್ಲ. ಅದೃಷ್ಟವಿದ್ದರೆ ಬರಬಹುದು ಎಂಬಂತೆ ಸಂಶಯಾತ್ಮಕವಾಯಿತು ಎಂದರ್ಥ). ವ॥ ಹಾಗೂ ಅಲ್ಲದೆ-೯೦. '(ಶತ್ರುರಾಜರೆಲ್ಲ) ಪ್ರತಿಭಟನೆಯೇ ಇಲ್ಲದೆ ಮನಸ್ಸಿನಲ್ಲಿ ಶತ್ರುತ್ವವನ್ನೂ ಅಡಗಿಸಿಕೊಂಡು ಅವರು ಕೇಳಿದ್ದನ್ನು ಕೊಟ್ಟು ಅವರಿಗೆ ಅಡಿಯಾಳಾಗುವಂತೆ ಪ್ರತಿಜ್ಞೆಮಾಡಿತು. ಸಣ್ಣ ಪಾಳೆಯಗಳೆಲ್ಲ ಅವರ ಅಜ್ಞಾನುವರ್ತಿಯಾಗಿರಲು ನಿಷ್ಕರ್ಷೆಮಾಡಿಕೊಂಡುವು. ಪ್ರತಿಭಟಿಸದೆ ಶತ್ರುಮಂಡಲವೆಲ್ಲ ಮಿತ್ರಮಂಡಳಿಕರಾದರು. ಇಂದೋ ನಾಳೆಯೋ ಗುಣಾರ್ಣವನು ಪ್ರತಿಭಟಿಸಿದವರನ್ನೆಲ್ಲ ಧ್ವಂಸಮಾಡಿ ನಮ್ಮನ್ನೂ ಈ ನೆಲೆಯಿಂದ ಎಳೆದು ಬಿಸಾಡುತ್ತಾನೆ'. ವ॥ ಹಾಗೆ ವಿಕ್ರಮಾರ್ಜುನನು ಬಿಲ್ಲನ್ನು ಹಿಡಿದರೂ ಭೀಮಸೇನನು ಗದೆಯನ್ನು ಧರಿಸಿದರೂ ಪ್ರತಿಭಟಿಸುವುದಸಾಧ್ಯ. ರಹಸ್ಯವಾಗಿ ಮೋಸದ ಕೊಲೆಯಿಂದ ಅಧೀನಪಡಿಸಿಕೊಳ್ಳುವುದು ಉತ್ತಮವಾದ ಮಾರ್ಗ ಹಾಗೂ ಅಲ್ಲದೆ - ವ॥ 'ಭಾಗಕ್ಕೆ ಆಸೆಪಡುತ್ತಿರುವವನೂ ಸ್ವಾಮ್ಯವನ್ನು ಪಡೆಯಲು ಶಕ್ತಿಯುಳ್ಳವನೂ ರಹಸ್ಯವನ್ನು ತಿಳಿದವನೂ ಕಾರ್ಯಶೀಲನಾದವನೂ ಅರ್ಧರಾಜ್ಯವನ್ನು ಅಪಹರಿಸುವವನೂ ಆದ ಆಳನ್ನು ಯಾವನು ಕೊಲ್ಲುವುದಿಲ್ಲವೋ ಅವನು ತಾನೇ ಹತನಾಗುತ್ತಾನೆ.' ವ॥ ಎನ್ನುವುದು ಅರ್ಥಶಾಸ್ತ್ರದ ಸಾರವತ್ತಾದ ಭಾಗ.

ಉ ॥ ಮೇಣ್ಕುಲಮಿಲ್ಲೆಯೋ ನಮಗೆ ದಾಯಿಗರಲ್ಲರೊ ಶಸ್ತ್ರವಿದ್ಯೆಯೊಳ್
ಪೂಣ್ಕೆಗಳಿಲ್ಲೆಯೋ ಧರೆಗೆ ಮುನ್ನವರಯ್ಯನೆ ಮುಖ್ಯನಲ್ಲನೋ ।
ಜಾಣ್ಕೆಜಿದಾಗವೇಡ ಮನದಲ್ ನಿಮಗಯ್ಯ ವಿಧಾತೃಯೋಗದಿಂ
ಕಣ್ಕುರುಡಾದೊಡೇನೊ ಕುರುಡಾಗಲೆವೇಟ್ಟುದೆ ನಿಮ್ಮ ಬುದ್ಧಿಯುಂ ॥ ೯೧

ವ॥ ಎಂದು ತನ್ನ ಮನದೊಳೊಡಂಬಡೆ ನುಡಿದ ಮಗನ ಮಾತಂ ಧೃತರಾಷ್ಟ್ರಂ ಮನದೆಗೊಂಡು-

ಉ ॥ ಏನೆರ್ದೆಗೊಂಡ ಕಜ್ಜಮನೆ ಪೇೞ್ದೆಯೊ ಚಿಂತಿಸುತಿರ್ಪೆನಾನುಮೇ
ನಾನುಮುಪಾಯಮಂ ಬಗೆನರಂತವರ್ಗಳ್ ನಿನಗೆಂದೆ ಕಂದ ಪೇೞ್ ।
ನೀನಿರೆ ಪಟ್ಟಮುಂ ನೆಲನುಮಪ್ಪುದನೊಲ್ವೆನೆ ವೈರಿಗಳ್ಗೆ ನೀ
ನೇಸುಮದರ್ಕೆ ಚಿಂತಿಸದಿರಿಲ್ಲಿರಲೀವೆನೆ ಪಾಂಡುಪುತ್ರರಂ॥ ೯೨

ವ॥ ಎಂದು ದುರ್ಯೋಧನನಂ ಬೀಡಿಂಗೆ ಪೋಗಲ್ವೇೞ್ದು ಪಾಂಡವರಯ್ವರುಮಂ ಬರಿಸಿ ಧೃತರಾಷ್ಟ್ರಂ ತೊಡೆಯನೇಱಿಸಿಕೊಂಡು ದುರ್ಯೋಧನನಪ್ಪೊಡೆ ಪೊಲ್ಲ ಮಾನಸನಾತನುಂ ನೀಮುಮೊಂದೆಡೆಯೊಳಿರೆ ಕಿಸುಱುಂ ಕಲಹಮುಮೆಂದುಂ ಕುಂದದದುಕಾರಣಂ ಗಂಗಾನದಿಯ ದಕ್ಷಿಣ ತಟದೊಳ್ ವಾರಣಾವತಮೆಂಬುದು ಪೊೞಲ್ ಕುರುಜಾಂಗಣ ವಿಷಯಕ್ಕೆ ತಿಳಕಮಪ್ಪಂತಿರ್ದುದಲ್ಲಿಗೆ ಪೋಗಿ ಸುಖಮಿರಿಮೆಂದೊಡಂತೆಗೆಯ್ವೆಮೆಂದು ಬೀೞ್ಕೊಂಡು ಬೀಡಿಂಗೆವಂದು ಗಾಂಗೇಯ ದ್ರೋಣ ಕೃಪ ವಿದುರರ್ಕಳ್ಗಂ ಕುಂತಿಗಂ ತದ್ವೃತ್ತಾಂತಮನಱಿ

೯೧. 'ಅಲ್ಲದೆ ನಮಗೆ ಅವರಿಗೆ ಸಮಾನವಾದ ಕುಲವಿಲ್ಲವೇ? ರಾಜ್ಯಕ್ಕೆ ನಾವು ಭಾಗಿಗಳಲ್ಲವೆ? ನಾವು ಅವರಷ್ಟೇ ಶಸ್ತ್ರವಿದ್ಯೆಯಲ್ಲಿ ಪ್ರಸಿದ್ಧರಲ್ಲವೆ; ಈಗಾಗಲೇ ಅವರಯ್ಯ ರಾಜ್ಯಭಾರಮಾಡಿಯಾಗಲಿಲ್ಲವೆ? ನಿಮ್ಮ ಮನಸ್ಸಿನಲ್ಲಿ ಜಾಣ್ಮೆ ಕಿರಿದಾಗಬೇಕಾಗಿಲ್ಲ. ದುರದೃಷ್ಟವಶದಿಂದ ಕಣ್ಣು ಕುರುಡಾದರೆ ನಿಮ್ಮ ಬುದ್ಧಿಯೂ ಕುರುಡಾಗಬೇಕೆ?' ವ॥ ಎಂದು ತನ್ನ ಮನಸ್ಸಿಗೊಪ್ಪಿದ ಮಾತನ್ನಾಡಿದ ಮಗನ ಮಾತನ್ನು ಧೃತರಾಷ್ಟ್ರನು ಅಂಗೀಕರಿಸಿದನು. ೯೨. ನನ್ನ ಹೃದಯದಲ್ಲಿದ್ದ ಕಾರ್ಯವನ್ನೇ ನೀನು ಹೇಳಿದ್ದೀಯೆ; ಅವರು ನಿನಗೇನಾದರೂ ಕೇಡನ್ನು ಯೋಚಿಸುತ್ತಿದ್ದಾರೆಯೆ ಎಂಬುದಾಗಿಯೇ ನಾನೂ ಚಿಂತಿಸುತ್ತಿದ್ದೇನೆ. ಮಗು, ನೀನಿರುವಾಗ ಪಟ್ಟವೂ ರಾಜ್ಯವೂ ಶತ್ರುಗಳಿಗೆ ಆಗುವುದನ್ನು ನಾನು ಒಪ್ಪುತ್ತೇನೆಯೇ? ಅದಕ್ಕೆ ನೀನು ಚಿಂತಿಸಬೇಡ; ಪಾಂಡುಪುತ್ರರು ಇಲ್ಲಿರಲು ನಾನು ಅವಕಾಶಕೊಡುತ್ತೇನೆಯೇ? ವ॥ ಎಂದು ದುರ್ಯೋಧನನನ್ನು ಬೀಡಿಗೆ ಹೋಗಹೇಳಿ ಧೃತರಾಷ್ಟ್ರನು ಅಯ್ದು ಮಂದಿ ಪಾಂಡವರನ್ನೂ ಬರಮಾಡಿ ತೊಡೆಯಮೇಲೆ ಕುಳ್ಳಿರಿಸಿಕೊಂಡು 'ದುರ್ಯೋಧನನಾದರೆ ಕೆಟ್ಟ ಮನಸ್ಸುಳ್ಳವನು. ಅವನೂ ನೀವೂ ಒಂದೇ ಸ್ಥಳದಲ್ಲಿದ್ದರೆ ಕೋಪವೂ ಜಗಳವೂ ಎಂದೂ ತಪ್ಪುವುದಿಲ್ಲ; ಆದ ಕಾರಣ ಗಂಗಾನದಿಯ ದಕ್ಷಿಣದಲ್ಲಿ ಕುರುಜಾಂಗಣದೇಶಕ್ಕೆ ತಿಲಕದಂತಿರುವ ವಾರಣಾವತವೆಂಬ ಪಟ್ಟಣವಿದೆ; ಅಲ್ಲಿಗೆ ಹೋಗಿ ಸುಖವಾಗಿರಿ ಎನ್ನಲು (ಪಾಂಡವರು) ಹಾಗೆಯೇ ಮಾಡುವೆವು ಎಂದು ಅವರ ಅಪ್ಪಣೆಯನ್ನು ಪಡೆದು ಮನೆಗೆ ಬಂದು ಭೀಷ್ಮದ್ರೋಣ ಕೃಪ ವಿದುರರುಗಳಿಗೂ

ಪಿದರನ್ನೆಗಮಿತ್ತ ದುರ್ಯೋಧನನವರ ಪೋಗನಱಿದು ಪುರೋಚನನೆಂಬ ತನ್ನ ಮನದನ್ನನಪ್ಪ ಪೆರ್ಗಡೆಯೊಳ್ ಲಾಕ್ಷಾಗೃಹೋಪಾಯಮುಂ ಚರ್ಚಿಸಿವಾರಣಾವತಮನೊಂದೇ ದಿವಸದೊಳೆಯ್ದು ವಂತಾಗೆ ರಥಮಂ ಸಮಕಟ್ಟಿ ನಾಲ್ಕುಲಕ್ಕ ಬಲಮಂ ನೆರಂಬೇೞ್ದು ಕಳಿಪಿದನಾಗಳ್-

ಕಂ॥ ಉದಿತೋದಿತನೈ ನೀಂ ನಿನ
ಗುದಯದ ಮೇಲುದಯಮೆಂದು ನೆಗೞ್ದರಿಗಂಗ ।
ಭ್ಯುದಯಮನಱಿಪುವ ತೆಱದಿಂ
ದುದಯಾಚಳಚುಂಬಿಬಿಂಬನಿನನುದಯಿಸಿದಂ ॥ ೬೩

ವ॥ ಆ ಪ್ರಸ್ತಾವದೊಳ್ ಮಂಗಳಪಾಠಕರ ಮಂಗಳವೃತ್ತೋಚ್ಚಾರಣೆಗಳಿಂದಂ ಪಾಂಡವರಯ್ವರುಮುನ್ಮೀಲಿತನಯನರಾಗಿ ನಿತ್ಯನಿಯಮಂಗಳಂ ನಿರ್ವರ್ತಿಸಿ ಮಂಗಳವಸದನಂ ಗೊಂಡು ಮಹಾಬ್ರಾಹ್ಮಣರ್ ಪರಸುವ ಪರಕೆಗಳುಮನಿಕ್ಕುವ ಸೇಸೆಗಳುಮನಾಂತುಕೊಳುತ್ತುಂ ಪಲವುಂ ತೆಱದ ಪ್ರಯಾಣ ಪಟಹಂಗಳೆಸೆಯೆ ಶುಭ ಲಕ್ಷಣ ಲಕ್ಷಿತಂಗಳಪ್ಪಾಜಾನೇಯ ಕಾಂಭೋಜ ವಾಜಿರಾಜಿಗಳೊಳ್ ಪೂಡಿದ ದಿವ್ಯರಥಂಗಳನೇಱಿ ದಿವ್ಯಬಾಣಾಸನ ಬಾಣಪಾಣಿಗಳಾಗಿ ನಿಜಪರಿಜನಂ ಬೆರಸು ಗಾಂಗೇಯ ದ್ರೋಣ ಕೃಪ ವಿದುರರ್ ಕಳಿಪುತ್ತುಂ ಬರೆ ಪುರಜನಂಗಳೆಲ್ಲಂ ನೆರೆದವರ ಪೋಗಿಂಗಲಲ್ದು ಸೈರಿಸಲಾಱದೆ-

ಕುಂತಿಗೂ ಆ ವಿಷಯವನ್ನು ತಿಳಿಸಿದರು. ಅಷ್ಟರಲ್ಲಿ ಇತ್ತಕಡೆ ದುರ್ಯೋಧನನು ಅವರು ಹೋಗುವುದನ್ನು ತಿಳಿದು ಪುರೋಚನನೆಂಬ ತನ್ನ ಆಪ್ತನಾದ ಹೆಗ್ಗಡೆಯಲ್ಲಿ ಅರಗಿನ ಮನೆಯ ಉಪಾಯವನ್ನು ವಿಚಾರ ಚರ್ಚೆಮಾಡಿ ವಾರಣಾವತವನ್ನು ಒಂದೇ ದಿವಸದಲ್ಲಿ ಹೋಗಿ ಸೇರುವ ಹಾಗೆ ರಥವನ್ನು ಸಿದ್ಧಪಡಿಸಿ ನಾಲ್ಕು ಲಕ್ಷ ಸೈನ್ಯವನ್ನೂ ಅವನ ಸಹಾಯಕ್ಕಾಗಿ ಕಳುಹಿಸಿದನು; ಆಗ-೬೩. 'ನೀನು ಅಭಿವೃದ್ಧಿಯಾಗುವವನು, ನಿನಗೆ ವೃದ್ಧಿಯ ಮೇಲೆ ವೃದ್ಧಿಯಾಗುತ್ತದೆ' ಎಂದು ಪ್ರಸಿದ್ಧನಾದ ಅರಿಕೇಸರಿಗೆ ಅವನ ಅಭಿವೃದ್ಧಿಯನ್ನು ಸೂಚಿಸುವ ರೀತಿಯಿಂದ ಉದಯಪರ್ವತಸ್ಪರ್ಶಿಯಾದ ಸೂರ್ಯನು ಉದಯಿಸಿದನು. ವ॥ ಆ ಸಂದರ್ಭದಲ್ಲಿ ಹೊಗಳುಭಟರ ಮಂಗಳಪದ್ಯಪಠನಗಳಿಂದ ಪಾಂಡವರೈದು ಜನರೂ ಅರಳಿದ ಕಣ್ಣುಗಳನ್ನುಳ್ಳವರಾಗಿ ಪ್ರತಿದಿನವೂ ಮಾಡಬೇಕಾದ ನಿತ್ಯಕರ್ಮಗಳನ್ನು ಮುಗಿಸಿ ಮಂಗಳಕರವಾದ ಅಲಂಕಾರವನ್ನು ಮಾಡಿಕೊಂಡು ವೃದ್ಧಬ್ರಾಹ್ಮಣರುಗಳು ಆಶೀರ್ವದಿಸುವ ಹರಕೆಗಳನ್ನೂ ಚೆಲ್ಲುತ್ತಿರುವ ಮಂತ್ರಾಕ್ಷತೆಗಳನ್ನೂ ತಲೆಯಲ್ಲಿ ಧರಿಸಿಕೊಳ್ಳುತ್ತ ನಾನಾರೀತಿಯ ಪ್ರಯಾಣಭೇರಿಗಳು ಪ್ರಕಾಶಿಸುತ್ತಿರಲು ಶುಭಲಕ್ಷಣಗಳಿಂದ ಗುರುತಿಸಲ್ಪಟ್ಟ ಒಳ್ಳೆಯ ತಳಿಯಿಂದ ಕೂಡಿದ ಕಾಂಭೋಜದೇಶದ ಉತ್ತಮ ಕುದುರೆಗಳ ಸಮೂಹದಿಂದ ಸಿದ್ಧಪಡಿಸಿದ ದಿವ್ಯರಥಗಳನ್ನು ಹತ್ತಿ ದೇವದತ್ತವಾದ ಬಿಲ್ಲುಬಾಣಗಳನ್ನು ಕಯ್ಯಲ್ಲಿ ಹಿಡಿದವರಾಗಿ ತಮ್ಮ ಪರಿವಾರದೊಂದಿಗೆ ಸೇರಿಕೊಂಡು ಹಸ್ತಿನಾಪುರದಿಂದ ಹೊರಟರು. ಭೀಷ್ಮ ದ್ರೋಣ ಕೃಪ ವಿದುರರು ದಾರಿ ಕಳುಹಿಸಲು ಬಂದರು. ಪಟ್ಟಣಿಗರೆಲ್ಲರೂ ಸೇರಿ ಅವರು ಹೊರಟುಹೋಗುವಿಕೆಗಾಗಿ ದುಃಖಪಟ್ಟು ಸಹಿಸಲಾರದೆ ಶೋಕಿಸಿದರು.

ಚಂ॥ ಮನದೊಳಲಂಪು ಪೊಣ್ಮೆ ನುಡಿದುಂ ನಡೆ ನೋಡಿಯುಮಾಟಪಾಟಮಂ
ಬಿನದಮುಮಾರುಮಂ ಮಱೆಯಿಸುತ್ತಿರೆ ಬೀದಿಗಳೊಳ್ ವಿಳಾಸದೊ ।
ಡ್ಡೆನಿಸಿ ತೊಟಲ್ವ ಪಾಂಡವರ ಪೋಗಿನೊಳುಂತೆ ಬೆಡಂಗುಗೆಟ್ಟು ಹ
ಸ್ತಿನಪುರಮಿಂದು ರಕ್ಕಸನ ತಿಂದ ಪೊಟಲ್ಗೆಣೆಯಾಗದಿರ್ಕುಮೇ ॥ ೮೪

ವ॥ ಎಂದು ಕಣ್ಣನೀರಂ ನೆಗಪೆ-

ಚಂ॥ ಪರಸುವ ಪೌರವೃದ್ಧರ ಕುಲಾಂಗನೆಯರ್ಕಳ ಸಾಧು ವಾದದೊಳ್
ಬೆರಸಿ ಸಮಂತು ಸೂಸುವ ಜಲಾರ್ದ್ರಲಸದ್ಧವಳಾಕ್ಷತಂಗಳೊಳ್ ।
ಬೆರಸಿದ ತಣ್ಪನೆತ್ತಿ ಕವಿದೆತ್ತಿದ ಬಾಸಿಗದೊಂದು ಕಂಪಿನೊಳ್
ಪೊರೆದು ಮದಾಳಿಗಳ್ವೆರಸು ಬಂದುದದೊಂದನುಕೂಲ ಮಾರುತಂ ॥ ೮೫

ವ॥ ಅಂತು ಪೊಟಲಂ ಪೊಱಮಡೆ ಬಟಿಯನೆ ತಗುಳ್ದು ಬರ್ಪ ತಮ್ಮೊಡನಾಡಿಗಳಪ್ಪ ಮೇಳದ ಸಬ್ಬವದ ನಗೆಯ ತೆಗಟೆನವರನೆಮ್ಮ ಬಟಿಯಟ್ಟಿದಂದು ಬನ್ನಿಮೆಂದು ಪ್ರಿಯಂ ನುಡಿದಿರಿಸಿ ಕಿಱಿದಂತರಂ ಬಂದೊಂದು ತಾವರೆಗೆಱೆಯ ಮೊದಲೊಳ್ ನಿಂದು ಭೀಷ್ಮ ದ್ರೋಣ ಕೃಪ ವಿದುರರ್ಕಳನಮಗೆ ತಕ್ಕ ಬುದ್ಧಿಯಂ ಪೇಟ್ಟು ಮಗುಟಿಮೆನೆ-

೮೪. ಮನಸ್ಸಿನಲ್ಲಿ ಸಂತೋಷವುಕ್ಕುವಂತೆ ಮಾತನಾಡಿಯೂ ದೀರ್ಘದೃಷ್ಟಿಯಿಂದ ನೋಡಿಯೂ ತಮ್ಮ ಆಟಪಾಟವಿನೋದಗಳಿಂದ ಯಾರನ್ನಾದರೂ ಮೈಮರೆಯುವಂತೆ ಮಾಡಿಯೂ ಬೀದಿಗಳಲ್ಲಿ ಸೌಂದರ್ಯದ ಪುಂಜವೆಂದೆನಿಸಿಕೊಂಡು ತಿರುಗಾಡುತ್ತಿದ್ದ ಪಾಂಡವರು ಊರನ್ನು ಬಿಟ್ಟು ಹೋಗುವುದರಿಂದ ಹಸ್ತಿನಾಪಟ್ಟಣವು ವೈಭವಶೂನ್ಯವಾಗಿ ರಾಕ್ಷಸನು ತಿಂದುಳಿದ ಪಟ್ಟಣಕ್ಕೆ ಸಮಾನವಾಗುವುದಿಲ್ಲವೇ ವ॥ ಎಂದು ಕಣ್ಣೀರನ್ನು ಸುರಿಸಿದರು. ೮೫. ಆಶೀರ್ವಾದವನ್ನು ಮಾಡುತ್ತಿರುವ ಊರಹಿರಿಯರ ಮತ್ತು ಕುಲಸ್ತ್ರೀಯರ ಸ್ವಸ್ತಿವಾಚನಗಳಿಂದಲೂ ವಿಶೇಷವಾಗಿ ಚೆಲ್ಲುತ್ತಿರುವ ಮನೋಹರವೂ ಧವಳವರ್ಣಯುಕ್ತವೂ ಆದ ಆರ್ದ್ರಾಕ್ಷತೆಗಳಿಂದಲೂ ತಂಪಿನಿಂದಲೂ ಕಂಪಿನಿಂದಲೂ ಎತ್ತಿ ಕಟ್ಟಿದ ಬಾಸಿಂಗದ ಸುಗಂಧದಿಂದಲೂ ಮದಿಸಿದ ದುಂಬಿಗಳಿಂದಲೂ ಕೂಡಿದ ಹಿತವಾದ ಗಾಳಿಯೊಂದು (ಪಾಂಡವರಿಗೆ ಶುಭಸೂಚಕವಾಗಿ) ಬೀಸಿತು. ವ॥ ಹಾಗೆ ಪಟ್ಟಣವನ್ನು ಬಿಟ್ಟು ಹೊರ ಹೊರಡಲು ತಮ್ಮನ್ನು ಹಿಂಬಾಲಿಸಿ ಬರುತ್ತಿದ್ದ ಸಹಪಾಠಿಗಳನ್ನೂ ನಕಲಿಯವರನ್ನೂ ಹಾಸ್ಯಗಾರರನ್ನೂ ದೂಷಣೆಮಾಡುತ್ತಿದ್ದವರನ್ನೂ ಪಾಂಡವರು 'ನಾವು ಹೇಳಿಕಳುಹಿಸಿದಾಗ ಬನ್ನಿ' ಎಂದು ಒಳ್ಳೆಯ ಮಾತನ್ನಾಡಿ ನಿಲ್ಲಿಸಿ ಕೊಂಚ ದೂರ ಬಂದು ಒಂದು ತಾವರೆಯ ಕೆರೆಯ ಅಂಚಿನಲ್ಲಿ ನಿಂತು ಭೀಷ್ಮ ದ್ರೋಣ ಕೃಪ ವಿದುರರುಗಳನ್ನು 'ನಮಗೆ ಬುದ್ಧಿವಾದಗಳನ್ನು ತಿಳಿಸಿ ದಯಮಾಡಿ' ಎಂದರು.

ಕಂ ॥ ನಡಪಿಯುಮೋದಿಸಿಯುಂ ಬಿ
ಲ್ವಿಡಿಯಿಸಿಯುಂ ಕೆಚ್ಚುವಿರ್ದ ಕೂರ್ಮೆಗಳೆರ್ದೆಯಂ ।
ನಡೆ ಪಾಂಡುಸುತರಗಲ್ಕೆಗೆ
ನಿಡುಸುಯ್ದರ್ ದ್ರೋಣ ಭೀಷ್ಮ ಕೃಪ ವಿದುರರ್ಕಳ್ ॥ ೯೬

ವ॥ ಆಗಳ್ ವಿದುರಂ ಕೆಲನಱಿಯದಂತುಮವರಱಿವಂತುಂ ಸಾಮಾನ್ಯ ಸ್ಥಿತಿಯೊಳೆ ಬಟ್ಟೆಯ ನಂಜಿನ ಕಿರ್ಚಿನ ದೆಸೆಗೆ ಕರಂ ಪ್ರಯತ್ನಪರರಾಗಿಮೆಂದೊಡಂತೆ ಗೆಯ್ವೆಮೆಂದವರನಿರಲ್ವೇಳ್ದು ಪಯಣಂಬೋಗಿ-

ಕಂ॥ ಪೊಳಪಿನ ಕಿರಣದ ಗಾಳಿಯ
ಪೊಳಪನೆ ಸೈರಿಸದ ಕುಸುಮದಳ ಸುಕುಮಾರರ್ ।
ತಳರ್ದು ನೆಲೆಯಿಂದಮಾಗಳ್
ಕೊಳದಿಂ ಪೊಱಮಟ್ಟ ಹಂಸೆಗಳ್ಗೆಣೆಯಾದರ್ ॥ ೯೭

ವ॥ ಆಗಿ ತಾವಾದಿಗರ್ಭೇಶ್ವರರಪ್ಪುದಱಿಂ ತಳರ್ದೆಡೆಯೆಡೆಯ ಮರಂಗಳ ತೊಱೆಗಳ ಬಾಡಂಗಳ ಪೆಸರ್ಗಳಂ ಬೆಸಗೊಳುತ್ತುಂ ಮಹಾಗ್ರಹಾರಂಗಳ ಮಹಾಜನಂಗಳ ಕೊಟ್ಟ ಪೊನ್ನ ಜನ್ನವಿರಂಗಳುಮನವರ ಪರಕೆಯುಮಂ ಕೆಯ್ಕೊಳುತ್ತುಮವರ್ಗೆ ಬಾಧೆಯಾಗದಂತು ಕಾಪಂ ನಿಯಮಿಸುತ್ತುಂ ಕಾಲೂರ್ಗಳ ಗಂಡರ ಪೆಂಡಿರ ನಡೆಯುಡೆಯ ನುಡಿಯ ಮುಡಿಯ ಗಾಂಪಿಂಗೆ ಮುಗುಳ್ನಗೆ ನಗುತ್ತುಮಲ್ಲಿಗಲ್ಲಿಗೊಡೆದ ಕೆಱೆಗಮಳಿದಾಯತನಕ್ಕಂ ಧನಮನಿತ್ತು

೯೬. ಬಾಲ್ಯದಿಂದ ಸಲಹಿಯೂ ವಿದ್ಯಾಭ್ಯಾಸ ಮಾಡಿಸಿಯೂ ಬಿಲ್ವಿದ್ಯೆಯನ್ನು ಕಲಿಸಿಯೂ ನಿಕಟವಾಗಿ ಅಂಟಿಕೊಂಡು ಗಾಢವಾಗಿದ್ದ ಪ್ರೇಮವು ಮನಸ್ಸನ್ನು ನಾಟಿರಲು ಭೀಷ್ಮದ್ರೋಣಕೃಪ ವಿದುರರು ಅವರ ಅಗಲಿಕೆಗಾಗಿ ನಿಟ್ಟುಸಿರನ್ನು ಸೆಳೆದರು. ವ॥ ಆಗ ವಿದುರನು ಪಕ್ಕದವರಿಗೆ ತಿಳಿಯದಂತೆಯೂ ಅವರಿಗರ್ಥವಾಗುವಂತೆಯೂ ಸರಳವಾದ ರೀತಿಯಲ್ಲಿಯೇ 'ದಾರಿಯಲ್ಲಿ ಪ್ರಾಪ್ತವಾಗಬಹುದಾದ ವಿಷ, ಅಗ್ನಿ ಮೊದಲಾದುವುಗಳ ವಿಷಯದಲ್ಲಿ ಎಚ್ಚರಿಕೆಯಾಗಿರಿ' ಎಂದು ಹೇಳಲು ಅವರು ಹಾಗೆಯೇ ಮಾಡುತ್ತೇವೆಂದು ಹೇಳಿ ಅವರನ್ನು ಅಲ್ಲಿಯೇ ನಿಲ್ಲಿಸಿ ಮುಂದೆ ಪ್ರಯಾಣಮಾಡಿದರು. ೯೭. ಕಿರಣದ ಹೊಳಪನ್ನೂ ಗಾಳಿಯ ಸುಳಿವನ್ನೂ ಸೈರಿಸದೆ, ಹೂವಿನೆಸಳಿನಂತೆ ಕೋಮಲವಾಗಿದ್ದ ಆ ಸುಕುಮಾರರು ತಮ್ಮ ವಾಸಸ್ಥಳದಿಂದ ಹೊರಟು ಸರೋವರವನ್ನು ಬಿಟ್ಟು ಹೊರಟ ಹಂಸಗಳಿಗೆ ಸಮಾನರಾದರು. ವ॥ ತಾವು ಆಗರ್ಭ ಶ್ರೀಮಂತರಾದುದರಿಂದ ಅಲ್ಲಿಂದ ಹೊರಟು ಪಕ್ಕಪಕ್ಕದಲ್ಲಿಯೇ ಸಿಕ್ಕಿದ ಮರಗಳ ನದಿಗಳ ಹಳ್ಳಿಗಳ ಹೆಸರುಗಳನ್ನು ವಿಚಾರಮಾಡುತ್ತಲೂ ಶ್ರೇಷ್ಠವಾದ ಅಗ್ರಹಾರದ ಮಹಾಜನಗಳು ಕೊಟ್ಟಂತಹ ಚಿನ್ನದ ಯಜ್ಞೋಪವೀತಗಳನ್ನೂ ಆಶೀರ್ವಾದಗಳನ್ನೂ ಸ್ವೀಕರಿಸುತ್ತಲೂ ಅವರಿಗೆ ಯಾವ ತೊಂದರೆಯೂ ಆಗದಂತೆ ರಕ್ಷಣೆಯನ್ನು ಏರ್ಪಡಿಸುತ್ತಲೂ ಸಣ್ಣ ಹಳ್ಳಿಗಳ ಗಂಡಸರ ಹೆಂಗಸರ ಆಚಾರ, ಉಡುಪು ಮಾತು ಮತ್ತು ತುರುಬುಗಳ ದಡ್ಡತನಕ್ಕೆ ಹುಸಿನಗುತ್ತಲೂ ಅಲ್ಲಲ್ಲಿ ಒಡೆದುಹೋಗಿದ್ದ ಕೆರೆಗೂ ಪಾಳಾಗಿದ್ದ ದೇವಾಲಯಗಳಿಗೂ ಹಣವನ್ನೂ ಕೊಟ್ಟು ಮೊದಲಿದ್ದ ಸ್ಥಿತಿಗೆ

ಜೀರ್ಣೋದ್ಧಾರಂಗಳಂ ಮಾಡಿಸುತ್ತುಂ ಬೀಡುದಾಣಂಗಳೊಳಿಕ್ಕಿದ ಬಳ್ಳಿಗಾವಣಂಗಳೊಳಂ ನನೆಯ ಜೊಂಪಂಗಳೊಳಂ ವಿಶ್ರಮಿಸುತ್ತುಂ ಬಂದು-

ಚಂ॥ ಎಡಜಜೆದೀವ ಕಲ್ಪತರುವೆಂದು ವನೀಪಕಕೋಟಿ ಸಂತಸಂ
ಬಡೆ ಪೊಡೆವೊಂದಕಾಳವಿಳಯಾಶನಿಯೆಂದು ವಿರೋಧಿಗಳ್ ಮನಂ ।
ಗಿಡೆ ಬಿಯಮುಂ ಪರಾಕ್ರಮಮುಮೊಪ್ಪಿರೆ ತನ್ನೊಡವುಟ್ಟಿದರ್ ಸಮಂ
ತೊಡವರೆ ವಾರಣಾವತಮನೆಯ್ದಿದನಸ್ಮನ ಗಂಧವಾರಣಂ ॥ ೯೮

ಇದು ವಿವಿಧ ವಿಬುಧಜನವಿನುತ ಜಿನಪದಾಂಭೋಜ
ವರ ಪ್ರಸಾದೋತ್ಪನ್ನ ಪ್ರಸನ್ನ ಗಂಭೀರವಚನರಚನ
ಚತುರ ಕವಿತಾಗುಣಾರ್ಣವ ವಿರಚಿತಮಪ್ಪ
ವಿಕ್ರಮಾರ್ಜುನ ವಿಜಯದೊಳ್
ದ್ವಿತೀಯಾಶ್ವಾಸಂ

ತರುತ್ತಲೂ ತಾನು ಇಳಿದುಕೊಳ್ಳುವುದಕ್ಕೆ ಹಾಕಿದ್ದ ಬಳ್ಳಿಯ ಚಪ್ಪರಗಳಲ್ಲಿಯೂ ಹೂವಿನ ಗೊಂಚಲುಗಳಲ್ಲಿಯೂ ವಿಶ್ರಮಿಸಿಕೊಳ್ಳುತ್ತಲೂ ಬಂದು ೯೮. ಬಡತನದ ಸ್ವರೂಪವನ್ನು ತಿಳಿದು ದಾನಮಾಡುವ ಕಲ್ಪವೃಕ್ಷವಿದೆಂದು ಯಾಚಕಸಮೂಹವು ಸಂತೋಷಪಡುವಂತಿರುವ ದಾನಗುಣವೂ ಇದೊಂದು ಅಕಾಲದಲ್ಲಿ ಪ್ರಾಪ್ತವಾಗುವ ಪ್ರಳಯಕಾಲದ ಸಿಡಿಲೆಂದು ಶತ್ರುಗಳ ಮನಸ್ಸನ್ನು ಕೆಡಿಸುವ ಪರಾಕ್ರಮವೂ ತನ್ನಲ್ಲಿ ಪ್ರಕಾಶಿಸುತ್ತಿರಲು ತನ್ನ ಸಹೋದರರು ಜೊತೆಯಲ್ಲಿಯೇ ಕೂಡಿ ಬರುತ್ತಿರಲು ಅಮ್ಮನ ಗಂಧವಾರಣನಾದ ಅರ್ಜುನನು (ಅರಿಕೇಸರಿಯು) ವಾರಣಾವತವನ್ನು ಬಂದು ಸೇರಿದನು.

# ತೃತೀಯಾಶ್ವಾಸಂ

ಕಂ॥ ಶ್ರೀಯನರಾತಿಬಳಾಸೃ
ಕ್ರೋಯಧಿಯೊಳ್ ಪಡೆದ ವೀರನುಜಿದರಿಗಳನಾ ।
ತ್ಮೀಯಪದಸ್ಫುರಿತ ನಖ
ಚ್ಛಾಯೆಗಳೊಳ್ ನಜೆಸಿ ನಿಂದ ಗಂಡಂ ಹರಿಗಂ । ೧

ವ॥ ಆ ಪೊಟಲ ಪೊಜವೊಟಲನೆಯ್ದೆ ವರ್ಪಾಗಳ್-

ಕಂ ॥ ಕತ್ತುರಿಯ ಸಗಣ ನೀರ್ ಬಿಡು
ಮುತ್ತಿನ ರಂಗವಲಿ ಮಿಳಿರ್ವ ದುಗುಲದ ಗುಡಿ ಸಂ ।
ಪತ್ತಿನ ಬಿತ್ತರದೆತ್ತಿದ
ಮುತ್ತಿನ ಮಂಡವಿಗೆ ಪೊಟಲ ಮನೆಗಳೊಳೆಲ್ಲಂ ॥ ೨

ವ॥ ಅಂತಾಗಳೊಂದುತ್ತರಂ ಬಳೆಯೆ ಸೊಗಯಿಸುವ ಪೊಟಲೊಳಷ್ಟ ಶೋಭೆಯಂ ಮಾಡಿ ದುರ್ಯೋಧನನ ಸಂಕೇತದೊಳ್ ಮುನ್ನಮೆ ಸಮೆದಿರ್ದ ಪುರೋಚನಂ ಗೋರೋಚನಾ ಸಿದ್ಧಾರ್ಥ ದೂರ್ವಾಂಕುರ ಮಾತುಳುಂಗ ಶೃಂಗಾರದರ್ಪಣ ಪೂರ್ಣ ಕಳಶ ಕಳಮಾವೃತ ಕರಪಲ್ಲವೆಯರಪ್ಪ ಪುರಂಧ್ರಿಯರುಂ ಬದ್ದವಣದ ಪಜೆಗಳುಂಬೆರಸಿದಿರ್ವಂದು ಮೆಯ್ಯಿಕ್ಕಿ ಪೊಡಮಟ್ಟು ಪಾಂಡವರುಮಂ ಮುಂದಿಟ್ಟೊಡಗೊಂಡು ಬಂದು ಪೊಟಲಂ ಪುಗಿಸೆ ಪೊಕ್ಕು ಬೀಡನೆಲ್ಲಿ ಬಿಡುವಮೆನೆ ನಿಮ್ಮಯ್ಯಂ ಧೃತರಾಷ್ಟ್ರನ ಬೆಸದಲ್ ಮುನ್ನಮೆ ಮಾಡಮಂ ಸಮೆದಿಟ್ಟೆನಲ್ಲಿಗೆ ಬಿಜಯಂಗೆಯ್ಯಿಮೆನೆ-

೧. ಶತ್ರುಸೈನ್ಯದ ರಕ್ತಸಮುದ್ರದಲ್ಲಿ ಜಯಲಕ್ಷ್ಮಿಯನ್ನು ಪಡೆದ ವೀರನೂ ತನಗೆ ಅಧೀನರಾಗದ ಶತ್ರುಗಳನ್ನು ತನ್ನ ಕಾಲಿನಲ್ಲಿ ಹೊಳೆಯುತ್ತಿರುವ ಉಗುರಿನ ಕಾಂತಿಯ ನೆರಳಿನಲ್ಲಿ ನಿಲ್ಲಿಸಿದ ಪರಾಕ್ರಮಶಾಲಿಯೂ ಆದ ಅರ್ಜುನನು ಆ ಪಟ್ಟಣದ ವ॥ ಹೊರಭಾಗವನ್ನು ಬಂದು ಸೇರಿದನು. ೨. ಪಟ್ಟಣದ ಮನೆಗಳೆಲ್ಲ ಕಸ್ತೂರಿಯಿಂದ ಕೂಡಿದ ಸಗಣೆನೀರು, ಬಿಡಿಬಿಡಿಯಾದ ಮುತ್ತಿನ ರಂಗೋಲೆ, ಚಲಿಸುತ್ತಿರುವ ರೇಷ್ಮೆಯ ಬಟ್ಟೆಯ ಬಾವುಟಗಳು, ಅತುಲೈಶ್ವರ್ಯದಿಂದ ಕೂಡಿದ ಮುತ್ತಿನ ಮಂಟಪ ಇವುಗಳಿಂದ ಅಲಂಕೃತವಾಗಿದ್ದುವು. ವ॥ ಹಾಗೆ ವೈಭವದಿಂದ ಕೂಡಿ ಸೊಗಯಿಸುತ್ತಿರಲು ಪಟ್ಟಣದಲ್ಲಿ ಕಲಶ, ಕನ್ನಡಿ, ಬಾವುಟ, ತೋರಣ, ಧೂಪ, ದೀಪ, ಭೇರಿ, ಬೀಸಣಿಗೆಯೆಂಬ ಎಂಟು ವಿಧ ಅಲಂಕಾರಗಳಿಂದ ಕೂಡಿ ದುರ್ಯೋಧನನ ಸೂಚನೆಯ ಪ್ರಕಾರ ಮೊದಲೇ ಸಿದ್ಧವಾಗಿದ್ದ ಪುರೋಚನನು ಗೋರಚನ (ಹಸುವಿನ ಎದೆಯಲ್ಲಿರುವ ಒಂದು ಜಾತಿಯ ಕೊಬ್ಬು) ಅಕ್ಷತೆ, ಗರಿಕೆಯ ಚಿಗುರು, ಮಾದಲಹಣ್ಣು, ಕನ್ನಡಿ, ಕಳಮಾಕ್ಷತೆ ಮೊದಲಾದವುಗಳನ್ನು ಕಯ್ಯಲ್ಲಿ ಧರಿಸಿದ್ದ ಸ್ತ್ರೀಯರು ಮಂಗಳವಾದ್ಯಗಳು ಮೊದಲಾದವುಗಳಿಂದ ಕೂಡಿ ಎದುರಿಗೆ ಬಂದು ದೀರ್ಘದಂಡನಮಸ್ಕಾರಮಾಡಿ ಪಾಂಡವರನ್ನು ಮುಂದಿಟ್ಟುಕೊಂಡು ಬಂದು ಪಟ್ಟಣವನ್ನು ಪ್ರವೇಶಮಾಡಿಸಿ 'ಎಲ್ಲಿ ಬೀಡುಬಿಡೋಣ' (ಇಳಿದುಕೊಳ್ಳೋಣ) ಎಂದು ಪಾಂಡವರು ಪ್ರಶ್ನೆಮಾಡಲು ಅವನು ನಿಮ್ಮಯ್ಯನಾದ ಧೃತರಾಷ್ಟ್ರನ ಆಜ್ಞೆಯ ಪ್ರಕಾರ

ಕಂ ॥ ಅರಗು ಮೊದಲಾಗೆ ಘೃತ ಸ
ಜ್ಜರಸಂ ಬೆಲ್ಲಂ ಸಣಂಬಿವೆಂಬಿವಱಿಂ ವಿ ।
ಸ್ತರಿಸಿ ಸಮೆದಿಂದ್ರಭವನಮ
ಧರೆಗವತರಿಸಿರ್ದುದೆನಿಸುವರಗಿನ ಮನೆಯಂ ॥ ೩

ವ॥ ತಾನೆ ಮುಂದಿಟ್ಟೊಡಂಗೊಂಡು ಬಂದು ಪುಗಿಸೆ ಪಾಂಡವರಯ್ವರುಂ ಕೊಂತಿವೆರಸು ಕಿಱಿದಾಸುಂ ಬೇಗಮಿರ್ದು ದಾನ ಸನ್ಮಾನಾದಿಗಳಿಂ ಸಂತಸಂಬಡಿಸಿ ಪುರೋಚನನಂ ಬೀಡಿಂಗೆ ಪೋಗಲ್ವೇೞ್ದು ಧರ್ಮಪುತ್ರನಾ ಮನೆಯಂ ಪರೀಕ್ಷಿಸಿ ನೋಡಲೊಡಮಱಿದು ನಿಜಾನುಜ ಸಹಿತಂ ಕೊಂತಿವೆರಸೇಕಾಂತದೊಳಿಂತೆಂದಂ-

ಚಂ॥ ಇದು ಮನೆಯುಂದವಲ್ತುರಿವ ದಳ್ಳುರಿಯುಗ್ಗಡದಂದಮಾಗಿ ತೋ
ಱಿದಪುದು ಕಣ್ಗೆ ಸಜ್ಜರಸದೆಣ್ಣೆಯ ತುಪ್ಪದ ಕಂಪಿದೆಲ್ಲಮಂ ।
ಬುದೆ ಬಗೆದಲ್ಲಿ ನೋಡುವೊಡಮಿಟ್ಟಗೆ ಕಲ್ಮರನೆಂಬುದಿಲ್ಲ ಕೂ
ರದನಿದನೊಡ್ಡಿದಂ ಪಗೆಗೆ ಸಂತಸಮಾಗಿರೆ ಮಾರಿ ಸುಯ್ಯುಗುಮೇ ॥ ೪

ವ॥ ಅದಲ್ಲದೆಯುಮತ್ಯಾದರಸ್ಸಂಭ್ರಮಮುತ್ಪಾದಯತಿಯೆಂಬುದೀ ಪುರೋಚನನೆಂಬ ಬೂತು ಸುಯೋಧನನ ಬೆಸದಿಂ ನಮಗಿನಿತಾದರಂ ಗೆಯ್ವುದೆಲ್ಲಂ ನಮ್ಮಂ ಮೆಳ್ಪಡಿಸಲೆಂದೆ ಮಾಡಿದಂ ನಾಮಿದನಱಿಯದಂತು ಬೇಂಟೆಯ ನೆವದೊಳ್ ಬಟ್ಟೆಗಳಂ ಸೋದಿಸುವಮೆಂದು

ಮೊದಲೇ ಮನೆಯನ್ನು ಸಿದ್ಧಪಡಿಸಿದ್ದೇನೆ; ಅಲ್ಲಿಗೆ ದಯಮಾಡಿ ಎಂದನು. ೩. ಅರಗು ಮೊದಲಾದ ತುಪ್ಪ, ಸಜ್ಜರಸ, ಬೆಲ್ಲ, ಸೆಣಬು ಇವುಗಳಿಂದ ವಿಸ್ತಾರವಾಗಿ ನಿರ್ಮಿಸಿದ ದೇವೇಂದ್ರನರಮನೆಯೇ ಭೂಮಿಗಿಳಿದು ಬಂದಿದೆಯೋ ಎನಿಸಿದ್ದ ಅರಗಿನ ಮನೆಯನ್ನು ವ॥ ತಾನೆ ಮುಂದಾಗಿ ಒಡಗೊಂಡು ಬಂದು ಪ್ರವೇಶಮಾಡಿಸಲು ಅಯ್ದುಜನ ಪಾಂಡವರೂ ಕುಂತಿಯೊಡಗೂಡಿ ಕೆಲವು ಕಾಲವಿದ್ದು ದಾನಸನ್ಮಾನಾದಿಗಳಿಂದ ಸಂತೋಷಪಡಿಸಿ ಪುರೋಚನನನ್ನು ಅವನ ಮನೆಗೆ ಹೋಗುವ ಹಾಗೆ ಹೇಳಿ ಧರ್ಮರಾಜನು ಆ ಮನೆಯನ್ನು ಪರೀಕ್ಷಿಸಿ ನೋಡಿ ಅದರ ರಹಸ್ಯವನ್ನು ತಿಳಿದು ತಮ್ಮಂದಿರೊಡಗೂಡಿದ ಕುಂತಿಗೆ ರಹಸ್ಯವಾಗಿ ಹೀಗೆ ಹೇಳಿದನು - ೪. ಇದು ಮನೆಯ ಹಾಗೆ ಕಾಣುವುದಿಲ್ಲ. ಉರಿಯುವ ದಾವಾಜ್ವಾಲೆಯ ರಾಶಿಯಂತೆ ಕಣ್ಣಿಗೆ ಕಾಣುತ್ತಿದೆ. ಎಲ್ಲಿ ಪರೀಕ್ಷಿಸಿ ನೋಡಿದರೂ ಸಜ್ಜರಸದ ಎಣ್ಣೆಯ ತುಪ್ಪದ ವಾಸನೆಯೇ ಇದೆ. ಇಟ್ಟಿಗೆ, ಕಲ್ಲು, ಮರ ಎಂಬುವುದಿಲ್ಲ. ಶತ್ರುವಿಗೆ ಸಂತೋಷವಾಗುವುದಕ್ಕೋಸ್ಕರ ಅಹಿತನಾದ ವಿರೋಚನನು ಈ ಉಪಾಯವನ್ನು ಒಡ್ಡಿದ್ದಾನೆ. ಇದಕ್ಕೆ ಮಾರಿದೇವತೆಯು ನಿಟ್ಟುಸಿರು ಬಿಡುತ್ತಾಳೆಯೇ (ಅಂದರೆ ಇಲ್ಲ, ಅದು ಅವಳಿಗೆ ತೃಪ್ತಿಕರವಾಗಿಯೇ ಇರುತ್ತದೆ) ವ॥ ಅಷ್ಟೇ ಅಲ್ಲದೆ 'ವಿಶೇಷವಾದ ಆದರವು ಸಂದೇಹವನ್ನುಂಟುಮಾಡುತ್ತದೆ' ಎಂಬುದುಂಟು. 'ಈ ಪುರೋಚನನೆಂಬ ಭೂತವು ದುರ್ಯೋಧನನ ಆಜ್ಞೆಯ ಪ್ರಕಾರ ನಮಗಿಷ್ಟು ಆದರವನ್ನು ತೋರಿಸುವುದೆಲ್ಲ ನಮ್ಮನ್ನು ಮೋಸಮಾಡುವುದಕ್ಕಾಗಿಯೇ ಮಾಡಿದ್ದಾನೆ. ನಾವು ಇದನ್ನು ತಿಳಿಯದ ಹಾಗೆ ಬೇಟೆಗೆ ಹೋಗುವ ನೆಪದಲ್ಲಿ ದಾರಿಯನ್ನು ಹುಡುಕೋಣ' ಎಂದು ನಿತ್ಯವೂ

**ನಿಚ್ಚಂ ಬೇಂಟೆವೋಗೆ ಪುರೋಚನನುಂ ಪೆಱಗಣ ಕಾಪಂ ಕಣ್ಗಾಪಿನಲೆ ಕಾದಿರ್ಪನ್ನೆಗಂ ವಿದುರನ ವಿಶ್ವಾಸ ದಾಸಂ ಕನಕನೆಂಬಂ ಬಂದು ಪಾಂಡವರಂ ಕಂಡೇಕಾಂತದೊಳ್ ವಿದುರನಟ್ಟಿದ ವಿನ್ನಾಣಂಗಳಂ ಪೇೞ್ದು ನಂಬಿಸಿ ನೀಮೆಂತುಂ ಬಲ್ಲಿರಂತೆ ಪೊಱಮಟ್ಟು ಪೋಗಿಮೆಂದು ಜತುಗೃಹ ಕವಾಟ ಪುಟ ಸಂಧಿಗಳೊಳ್ ಸುರಂಗಮಂ ಗಂಗೆಯೊಳ್ ಮೂಡುವಂತಾಗೆ ಸಮೆದು ಪೇೞ್ದು ಪೋಪುದುಂ ಪಾಂಡವರುಂ ಪುರೋಚನಂ ತಮ್ಮಂ ಮಱುದಿವಸಂ ಭಿದ್ರಿಸುವನೆನಲುಂ ಮುನ್ನಿನ ದಿವಸಮೊಳಗಣ ಪರಿಜನಮೆಲ್ಲಮಂ ಪಾರ್ವರನೂಡುವ ನೆವದೊಳೆ ಪೊಱಮಡಿಸಿ ಸೂರ್ಯಾಸ್ತಮಯದೊಳ್ ಪಾರ್ವರನೂಡಿ ನಿಷಾದಿತಿಯೆಂಬ ಬೇಡಿತಿಗಮಯ್ವರ್ ಮಗಂದಿರ್ಗಮುಣಲಿಕ್ಕಿದೊಡೆ ತಣಿಯುಂಡು ಬೆಂಡುಮರಲ್ದು ಮಱಸುಂದಿದರ್ ಪುರೋಚನನುಮಾ ಮನೆಯೊಳೊಂದೋವರಿಯೊಳ್ ಮಱಕೆಂದಿದನಾ ಪ್ರಸ್ತಾವದೊಳರ್ಧ ರಾತ್ರಿಯಾದಾಗಳ್ ಕೊಂತಿವೆರಸಯ್ವರುಮಂ ಮುನ್ನಮೊಯ್ಯನೊಯ್ಯನೆ ಸುರಂಗದಿ ಪೊಱಮಡಿಸಿ ಭೀಮಸೇನಂ ಪುರೋಚನಂ ಮಱಕೆಂದಿರ್ದೋವರಿಯೊಳ್ ಕಿಚ್ಚಂ ಕೊಳಿಸಲೊಡಂ-**

**ಕಂ ‖ ಅಡಿವೊತ್ತದೆ ಕಿಱಕಿಱದನೆ
ಸುಡದಿನಿಸರೆಪೊರೆಕನಾಗದೆಯು ಸಸಿದಂದೊಂ ।
ದೆಡೆಯೊಳಗೊಟ್ಟಿರ್ದರಳೆಯ
ನೊಡನಳುರ್ವಂತುಳುರ್ದನನಲನರಗಿನ ಮನೆಯಂ । ೫೫**

ಬೇಟೆಗೆ ಹೋಗುತ್ತಿರಲು ಪುರೋಚನನೂ ಇವರ ಹೊರಗಿನ ರಕ್ಷಣೆಯನ್ನು ತನ್ನ ಕಣ್ಣಿನ ಮೇಲುನೋಟದಿಂದಲೇ ನೋಡುತ್ತಿರುವಷ್ಟರಲ್ಲಿ ವಿದುರನ ನಂಬಿಕೆಗೆ ಪಾತ್ರನಾದ ಕನಕನೆಂಬ ಸೇವಕನು ಬಂದು ಪಾಂಡವರನ್ನು ಕಂಡು ರಹಸ್ಯವಾಗಿ ಅವರಿಗೆ ವಿದುರನು ಕಳುಹಿಸಿದ ಸಂಜ್ಞೆಗಳನ್ನು ಹೇಳಿ ನಂಬುವ ಹಾಗೆ ಮಾಡಿ 'ನೀವು ಹೇಗೂ ತಿಳಿದವರಾಗಿದ್ದೀರಿ; ಹಾಗೆಯೇ ಹೊರಟು ಹೋಗಿ ಎಂದು ಅರಗಿನ ಮನೆಯ ಬಾಗಿಲಿನ ಸಂದಿಯಲ್ಲಿ ನೆಲದೊಳಗಿನ ರಂಧ್ರವನ್ನು ಗಂಗೆಯ ಆಚೆಯ ದಡದಲ್ಲಿ ಹೊರಗೆ ಬರುವಂತೆ ಸಿದ್ಧಪಡಿಸಿ ಆ ವಿಷಯವನ್ನು ಅವರಿಗೆ ಹೇಳಿಹೋದನು. ಪಾಂಡವರೂ ಕೂಡ ಪುರೋಚನನು ತಮ್ಮನ್ನು ಮುಂದಿನ ದಿವಸ ಭೇದಿಸುತ್ತಾನೆಂದು ತಿಳಿದು ಮೊದಲ ದಿನವೇ ಬ್ರಾಹ್ಮಣರಿಗೆ ಭೋಜನಮಾಡಿಸುವ ನೆಪದಲ್ಲಿ ತಮ್ಮ ಪರಿವಾರವನ್ನೆಲ್ಲ ಹೊರಗೆ ಹೋಗುವ ಹಾಗೆ ಮಾಡಿದರು. ಸೂರ್ಯನು ಮುಳುಗುವ ಹೊತ್ತಿನಲ್ಲಿ ಬ್ರಾಹ್ಮಣರಿಗೆಲ್ಲ ಊಟ ಮಾಡಿಸಿ ನಿಷಾದಿತಿಯೆಂಬ ಬೇಡರವಳಿಗೂ ಅವಳ ಅಯ್ದು ಜನ ಮಕ್ಕಳಿಗೂ ಊಟ ಮಾಡಿಸಿದರು. ಅವರು ತೃಪ್ತಿಯಾಗಿ ತಿಂದು ಬಳಲಿದಂತವರಾಗಿ ಮೈಮರೆತು ನಿದ್ರಿಸಿದರು. ಪುರೋಚನನೂ ಆ ಮನೆಯ ಒಂದು ಕೋಣೆಯಲ್ಲಿ ಎಚ್ಚರತಪ್ಪಿ ಮಲಗಿದನು. ಆ ಸಂದರ್ಭದಲ್ಲಿ ಅರ್ಧರಾತ್ರಿಯಾದಾಗ ಭೀಮಸೇನನು ಕುಂತಿಯೊಡನೆ ಅಯ್ದುಜನಗಳನ್ನು ಮೊದಲೇ ನಿಧಾನವಾಗಿ ಸುರಂಗದಿಂದ ಹೊರಡಿಸಿ ಪುರೋಚನನು ಮೈಮರೆತು ಮಲಗಿದ್ದ ಕೊಟಡಿಗೆ ಬೆಂಕಿಯನ್ನು ಹಚ್ಚಿದನು. ೫೫. ಅಡಿಯ ಭಾಗ ಹತ್ತಿಕೊಳ್ಳದೆ ಸ್ವಲ್ಪ ಸ್ವಲ್ಪವಾಗಿ ಸುಡದೆ ಸ್ವಲ್ಪವೂ ಅರೆಕರಿಕಾಗದೆ ಬಿಡಿಸಿಟ್ಟಿದ್ದ ಹತ್ತಿಯ ರಾಶಿಯನ್ನು ಒಟ್ಟಿಗೇ ವ್ಯಾಪಿಸುವಂತೆ

ಕಂ॥ ಮೇಲಾದ ಪಾಂಡುಸುತರನು
ಪಾಲಂಭಂಗೆಯ್ಯುತಿರ್ಪ ದುರ್ಯೋಧನನಂ ।
ಲೀಲೆಯೆ ನುಂಗುವ ಮೃತ್ಯುವ
ನಾಲಗೆಯೆನೆ ನೆಗೆದುವುರಿಯ ನಾಲಗೆ ಪಲವುಂ ॥ ೬

ವ॥ ಆಗಳ್ ಭೀಮಸೇನಂ ತನ್ನ ತಲೆಯೊಳಂ ಮೆಯ್ಯೊಳಂ ಕರಗಿ ಸುರಿವರಗಿನುರಿಯ ಬಂಬಲ್ಗಳಂ ಪೊಸೆದು ಬದಿರ್ದು ಕಳೆದು ಸುರಂಗದೊಳಗಣಿಂದಮೆ ತನ್ನೊಡವುಟ್ಟಿದರ್ ಕೂಡೆ ವಂದನನ್ನೆಗಮಿತ್ತಂ-

ಕಂ॥ ಅರಗಿನ ಮನೆಯೊಳ್ ಪಾಂಡವ
ರುರಿದಟ್ಟಿದರಕ್ಕಟಯ್ಯೊ ದುರ್ಯೋಧನನೆಂ ।
ಬೆರಲೆಯಿನೆಂದಬುತುಂ ತ
ತ್ಪುರಜನಮಬಲೊದವೆ ಪರಿದು ನೋಡಿತ್ತಾಗಳ್ । ೭

ವ॥ ನೋಡಿ ರೂಪಜೆಯಲಾಗದಂತು ಕರಿಮುರಿಕನಾಗಿರ್ದ ಬೇಡಿತಿಯು ಮನವಳಯ್ವರ್ ಮಕ್ಕಳುಮಂ ಕೊಂತಿಯುಂ ಪಾಂಡವರುಮಪ್ಪರೇನುಂ ತಪ್ಪಲ್ಲೆಂದು ಪುರಪ್ರಧಾನರ್ಕಳ್ ತದ್ವೃತ್ತಾಂತಮೆಲ್ಲಮಂ ಪೇಟ್ಟು ಧೃತರಾಷ್ಟ್ರಂಗಂ ಪೇಟಲಟ್ಟದೊಡೆ-

ಕಂ॥ ಮನದೊಳ್ ತ್ರೈಭುವನಮನಾ
ಳ್ದನಿತುವರಂ ತನಗೆ ಸಂತಸಂ ಪೆರ್ಚಯುಮಂ ।
ದಿನಿಸಂಧನೃಪಂ ತನ್ನಯ
ಜನದೊಳ್ ಕೆಲನಜೆಯೆ ಕೃತಕ ಶೋಕಂಗೆಯ್ದಂ ॥ ೮

ಅರಗಿನ ಮನೆಯನ್ನು ಅಗ್ನಿಯು ತಕ್ಷಣ ವ್ಯಾಪಿಸಿದನು. ೬ ಉತ್ತಮರಾದ ಪಾಂಡವರನ್ನು ಮೋಸಮಾಡುತ್ತಿರುವ ದುರ್ಯೋಧನನನ್ನು ಆಟದಿಂದಲೇ ನುಂಗುವ ಮೃತ್ಯುದೇವತೆಯ ನಾಲಗೆಯೆನ್ನುವ ಹಾಗೆ ಹಲವು ಅಗ್ನಿಜ್ವಾಲೆಗಳು ಹೊರಟವು. ವ॥ ಆಗ ಭೀಮಸೇನನು ತನ್ನ ತಲೆಯ ಮೇಲೆಯೂ ಶರೀರದ ಮೇಲೆಯೂ ಕರಗಿ ಸುರಿಯುತ್ತಿದ್ದ ಅರಗಿನ ಜ್ವಾಲೆಯ ಸಮೂಹಗಳನ್ನು ಹೊಸದು ಒದರಿ ಕಳೆದು ಸುರಂಗದೊಳಗಿನಿಂದಲೇ ತನ್ನ ಸಹೋದರರ ಜೊತೆಯಲ್ಲಿ ಬಂದನು. ಅಷ್ಟರಲ್ಲಿ ಈ ಕಡೆ- ೭. ದುರ್ಯೋಧನನೆಂಬ ವಿಷದ ಹುಳುವಿನಿಂದ ಪಾಂಡವರು ಅರಗಿನ ಮನೆಯಲ್ಲಿ ಬೆಂದು ನಾಶವಾದರು; ಅಯ್ಯೋ ಅಬ್ಬ ಎಂದು ಅಳುತ್ತ ಆ ಪಟ್ಟಣಿಗರೆಲ್ಲ ಹೆಚ್ಚುತ್ತಿರುವ ದುಃಖದಿಂದ ಬಂದು ನೋಡಿದರು. ವ॥ ನೋಡಿ ಗುರುತಿಸಲಾಗದಷ್ಟು ಕರಿಕುಮುರುಕಾಗಿದ್ದ ಬೇಡಿತಿಯನ್ನೂ ಅವಳ ಅಯ್ದು ಜನ ಮಕ್ಕಳನ್ನೂ ಕುಂತಿ ಹಾಗೂ ಪಾಂಡವರೇ ಆಗಿದ್ದಾರೆ ವ್ಯತ್ಯಾಸವಿಲ್ಲ ಎಂದು ನಿಷ್ಕರ್ಷಿಸಿ ಊರ ಮುಖ್ಯಸ್ಥರು [illegible] ವಿಚಾರವನ್ನೆಲ್ಲ ಧೃತರಾಷ್ಟ್ರನಲ್ಲಿಗೂ ಹೇಳಿ ಕಳುಹಿಸಿದರು. ೮. ಅದನ್ನು ಕೇಳಿ ತನಗೆ ಆ ಟಿ-, ಮೂರುಲೋಕವನ್ನು ಆಳುವಷ್ಟು ಸಂತೋಷ ಹೆಚ್ಚಿದರೂ ಅಕ್ಕಪಕ್ಕದವರು ತಿಳಿಯುವ ಹಾಗೆ ಧೃತರಾಷ್ಟ್ರನು ತನ್ನ ಜನದ ಮಧ್ಯದಲಿ ಕಪಟದುಃಖವನ್ನು

ವ॥ ಆಗಳ್ ನದೀತನೂಜ ಭಾರದ್ವಾಜ ಕೃಪರವಿರಳ ಬಾಷ್ಪವಾರಿ ದುರ್ದಿನ ದೀನಾನನರಾಗಿರೆ ವಿದುರಂ ತಾನಱಿದುಮಱಿಯದಂತೆ ಶೋಕಾಕ್ರಾಂತನಾಗಿ ಧೃತರಾಷ್ಟ್ರನ ಬೆಸದೊಳ್ ವಾರಣಾವತಕ್ಕೆ ಪೋಗಿ ತದರ್ಧ ದಗ್ಧ ಕಳೇವರಂಗಳಂ ಸಂಸ್ಕರಿಸಿ ಜಳದಾನಾದಿಕ್ರಿಯೆಗಳಂ ಮಾಡಿ ಮಗುೞ್ ವಂದನನ್ನೆಗಮಿತ್ತ ಪಾಂಡವರ್ ಸುರಂಗದಿಂ ಪೊಱಮಟ್ಟು ತಾರಾಗಣಂಗಳ್ ನಿಂದ ನೆಲೆಯಿಂ ದೆಸೆಯಂ ಪೊೞ್ತುಮನಱಿದು ತೆಂಕಮೊಗದೆ ಪಯಣಂಬೋಗಿ-

ಮ॥ ತಡಕುಂ ಪಿಟ್ಟೆಯುಮೊತ್ತೆ ಮೆಲ್ಲಡಿಗಳಂ ಬಳ್ಕುತ್ತುಮಳ್ಕುತ್ತುಮೋ
ರಡಿಗೊರ್ಮೊರ್ಮೆ ಕುಳುತ್ತುಮೇೞುತಿರೆ ಕಂಡಿಂತಾಗದಿನ್ನೇೞಿಮೆಂ ।
ದೊಡನಂದಯ್ವರುಮಂ ನಿಜಾಂಸಯುಗದೊಳ್ ಪೊತ್ತೆತ್ತಿ ತಳ್ಪೊತ್ತ ಸೀ
ಱುಡುವಿಂದದ್ಭುತದಾ ಹಿಡಿಂಬವನಮಂ ಪೊಕ್ಕಂ ಮರುನ್ನಂದನಂ ॥ ೯

ಚಂ॥ ಅದು ಮದದಂತಿ ದಂತ ಮುಸಲ ಪ್ರವಿಭಗ್ನ ಮಹಾಮಹೀರುಹಾ
ಸ್ಪದಮದು ಸಿಂಹನಾದಜನಿತ ಪ್ರತಿಶಬ್ದ ಮಹಾ ಭಯಾನಕ ।
ಪ್ರದಮದು ನಿರ್ಝರೋಚ್ಚಳಿತ ಶೀಕರ ಶೀತಳ ವಾತ ನರ್ತಿತೋ
ನ್ನದ ಶಬರೀ ಜನಾಳಕಮದಾಯತ ವೇತ್ರಲತಾವಿತಾನಕಂ ॥ ೧೦

ವ॥ ಆ ವನಾಂತರಾಳ ಮಧ್ಯಸ್ಥಿತ ವಿಶಾಳ ವಟ ವಿಟಪಿಯನೆಯ್ತಂದದಱ ಕೆೞಗಯ್ವರುಮ ನಿೞಿಪಿದೊಡಧ್ವಾನ ಪದ ಪರಿಶ್ರಮ ಶ್ರಾಂತರ್ ನಿದ್ರಾಭರಪರವಶರಾಗಿರೆ ಭೀಮಂ ಜಾವಮಿರ್ದು

ಪ್ರದರ್ಶಿಸಿದನು. ವ॥ ಆಗ ಭೀಷ್ಮ ದ್ರೋಣ ಕೃಪರು ಏಕಪ್ರಕಾರವಾಗಿ ಸುರಿಯುವ ಕಣ್ಣೀರೆಂಬ ಮಳೆಗಾಲದಿಂದ ಬಾಡಿದ ಮುಖವುಳ್ಳವರಾಗಿರಲು ವಿದುರನು ತಾನು ತಿಳಿದಿದ್ದರೂ ತಿಳಿಯದವನಂತೆ ದುಃಖದಿಂದ ಕೂಡಿದವನಾಗಿ ಧೃತರಾಷ್ಟ್ರನ ಆಜ್ಞೆಯ ಪ್ರಕಾರ ವಾರಣಾವತಕ್ಕೆ ಹೋಗಿ ಅಲ್ಲಿ ಅರ್ಧಸುಟ್ಟಿದ್ದ ದೇಹಗಳಿಗೆ ಸಂಸ್ಕಾರಮಾಡಿ ತರ್ಪಣಾದಿಗಳನ್ನು ಕೊಟ್ಟು ಹಿಂತಿರುಗಿದನು. ಅಷ್ಟರಲ್ಲಿ ಈ ಕಡೆ ಪಾಂಡವರು ಸುರಂಗ ಮಾರ್ಗದಿಂದ ಹೊರಟು ನಕ್ಷತ್ರಸಮೂಹಗಳಿದ್ದ ಸ್ಥಾನಗಳಿಂದ ದಿಕ್ಕನ್ನೂ ಹೊತ್ತನ್ನೂ ತಿಳಿದು ಪ್ರಯಾಣ ಮಾಡಿದರು. ೯. ಮೃದುವಾದ ತಮ್ಮ ಕಾಲುಗಳನ್ನು ಕಲ್ಲುಗಳೂ ಹೆಂಟೆಯೂ ಒತ್ತುತ್ತಿರಲು ಬಳುಕುತ್ತಲೂ ಹೆದರುತ್ತಲೂ ಒಂದೊಂದು ಹೆಜ್ಜೆಗೂ ಕೂರುತ್ತಲೂ ಏಳುತ್ತಲೂ ಇರುವುದನ್ನು (ಭೀಮಸೇನನು) ನೋಡಿ 'ಇನ್ನು ಮುಂದೆ ಹೀಗಾಗುವುದಿಲ್ಲ ಏಳಿ ಎಂದು' ಒಟ್ಟಿಗೆ ಆ ಅಯ್ದು ಜನವನ್ನು ತನ್ನ ಎರಡು ಭುಜದ ಮೇಲೆ ಹೊತ್ತು ವ್ಯಾಪಿಸಿ ಶಬ್ದಮಾಡುತ್ತಿರುವ ಜೀರುಂಡೆಯಿಂದ ಅದ್ಭುತವಾಗಿದ್ದ ಹಿಡಿಂಬವನವೆಂಬ ಕಾಡನ್ನು ವಾಯುಪುತ್ರನಾದ ಭೀಮಸೇನನು ಪ್ರವೇಶಿಸಿದನು. ೧೦. ಆ ಹಿಡಿಂಬವನವು ಮದ್ದಾನೆಗಳ ಕೊಂಬೆಂಬ ಒನಕೆಯಿಂದ ಮುರಿಯಲ್ಪಟ್ಟ ದೊಡ್ಡಮರಗಳಿಗೆ ಆಶ್ರಯವಾಗಿದ್ದಿತು. ಸಿಂಹಗರ್ಜನೆಯಿಂದ ಉಂಟಾದ ಪ್ರತಿಧ್ವನಿಯಿಂದ ಭಯಂಕರವಾಗಿ ಕಂಡಿತು. ಬೆಟ್ಟ ಝರಿಗಳಲ್ಲಿ ಮೇಲಕ್ಕೆದ್ದ ತುಂತುರುಗಳಿಂದ ಒದ್ದೆಯಾದ ಗಾಳಿಯಿಂದ ಕುಣಿಸಲ್ಪಟ್ಟ ಮದಿಸಿರುವ ಬೇಡಿತಿಯರ ಮುಂಗುರುಳುಗಳಿಂದ ಮನೋಹರವಾಗಿತ್ತು. ವಿಸ್ತಾರವಾದ ಬೆತ್ತದ ಬಳ್ಳಿಗಳ ಮೇಲ್ಕಟ್ಟುಗಳಿಂದ ತುಂಬಿದ್ದಿತು. ವ॥ ಆ ಕಾಡಿನ ಒಳಭಾಗದ ಮಧ್ಯದಲ್ಲಿ ವಿಸ್ತಾರವಾದ

ತನ್ನೊಡವುಟ್ಟಿದರ್ಗಾದ ಪ್ರವಾಸಾಯಾಸಂಗಳ್ಗಂ ದೆಸೆಗಂ ಮನ್ಯುಮಿಕ್ಕು ಬರೆ ಕಣ್ಣ ನೀರಂ ತುಂಬಿ-

ಚಂ ॥ ಭರತನ ವಂಶದೊಳ್ ನೆಗಳ್ದ ಪಾಂಡುಗೆವುಟ್ಟಿಯುಮೀ ಸಮಸ್ತ ಸಾ
ಗರ ಪರಿವೇಷ್ಟಿತಾವನಿಗೆ ವಲ್ಲಭನಾಗಿಯುಮೀ ಮಹೋಗ್ರ ಕೇ ।
ಸರಿ ಕರಿ ಕಂಠ ಗರ್ಜಿತ ಮಹಾಟವಿಯೊಳ್ ಮಱಕೆಂದಿ ನೀಮುಮೀ
ಮರದಡಿಯೊಳ್ ಶಿವಾಶಿವ ರವಂಗಳಿನೆಚ್ಚಱುವಂತುಟಾದುದೇ ॥ ೧೧

ವ॥ ಎಂದು ನುಡಿಯುತ್ತಿರ್ಪನ್ನೆಗಂ ಕೋಕನದಬಾಂಧವನುದಯಾಚಳಶಿಖರ ಶೇಖರನಾದ ನಾಗಳಾ ಬನಮನಾಳ್ವ ಹಿಡಿಂಬನೆಂಬನವರ ಬರವನಱಿದು ತನ್ನ ತಂಗೆ ಹಿಡಿಂಬೆಯೆಂಬಳಂ ಕರೆದು-

ಕಂ॥ ನಿಡಿಯರ್ ಬಲ್ಲಾಯದ ಬ
ಲ್ಪಡಿಗರ್ ವಂದಿರ್ದರಯ್ವರಾಲದ ಕೆಳಗಿಂ ।
ತೊಡರ್ದರ್ ನಮ್ಮಯ ಭಕ್ಷದೊ
ಳಡು ಪಣ್ಣಿಡು ಪೋಗು ನೀನುಮಾನುಂ ತಿಂಬಂ ॥ ೧೨

ವ॥ ಎಂಬುದುಮಂತೆಗೆಯ್ವೆನೆಂದು-

ಆಲದ ಮರದ ಸಮೀಪಕ್ಕೆ ಬಂದು ಅದರ ಕೆಳಗಡೆ ಆ ಐದು ಜನರನ್ನು ಇಳಿಸಿದನು. ಅವರು ದಾರಿ ನಡೆದ ಬಳಲಿಕೆಯಿಂದ ನಿದ್ರಾಭಾರಕ್ಕೆ ಅಧೀನರಾದರು. ಭೀಮನು ಅವರಿಗೆ ಕಾವಲಾಗಿದ್ದು ತನ್ನ ಒಡಹುಟ್ಟಿದವರಿಗುಂಟಾದ ಪ್ರಯಾಣದಾಯಾಸಕ್ಕೂ ದುರ್ದೆಶೆಗೂ ದುಃಖವು ಉಲ್ಬಣಿಸಿ ಬರಲು ಕಣ್ಣ ನೀರನ್ನು ತುಂಬಿಕೊಂಡನು. ೧೧. ಭರತವಂಶದಲ್ಲಿ ಪ್ರಸಿದ್ಧನಾದ ಪಾಂಡುರಾಜನಿಗೆ ಮಕ್ಕಳಾಗಿ ಹುಟ್ಟಿಯೂ ಸಮುದ್ರದಿಂದ ಸುತ್ತುವರಿಯಲ್ಪಟ್ಟ ಈ ಸಮಸ್ತ ಭೂಮಂಡಲಕ್ಕೆ ಒಡೆಯರಾಗಿಯೂ ಈ ಭಯಂಕರವಾದ ಸಿಂಹ ಮತ್ತು ಆನೆಗಳ ಕೊರಳಿನಿಂದ ಹೊರಟ ಗರ್ಜನೆಗಳಿಂದ ಕೂಡಿದ ಈ ಘೋರಾರಣ್ಯದಲ್ಲಿ ಮೈಮರೆತು ಮಲಗಿ ನೀವೂ ಈ ಮರದಡಿಯಲ್ಲಿ ನರಿಗಳ ಅಮಂಗಳಕರವಾದ ಧ್ವನಿಯಿಂದ ಎಚ್ಚರಗೊಳ್ಳುವ ಹಾಗೆ ಆಯಿತೇ? ವ॥ ಎಂದು ಹೇಳುತ್ತಿರುವಷ್ಟರಲ್ಲಿಯೇ ಕಮಲಸಖನಾದ ಸೂರ್ಯನು ಉದಯಪರ್ವತದ ಕೋಡಿಗೆ ಬಂದು ಸೇರಿದನು (ಸೂರ್ಯನು ಉದಯಿಸಿದನು). ಆಗ ಆ ಅರಣ್ಯಪ್ರದೇಶವನ್ನು ಆಳುವ ಹಿಡಿಂಬನೆಂಬುವನು ಅವರ ಬರವನ್ನು ತಿಳಿದು ತನ್ನ ತಂಗಿಯಾದ ಹಿಡಿಂಬೆಯೆಂಬವಳನ್ನು ಕರೆದು ೧೨. ನೀಳವಾಗಿಯೂ ಬಲುದಪ್ಪನಾಗಿಯೂ ದಾಂಡಿಗರಾಗಿಯೂ ಇರುವ ಐದು ಜನ ಆಲದ ಮರದ ಕೆಳಗೆ ಇದ್ದಾರೆ. ಇನ್ನು ನಮ್ಮ ಆಹಾರಕ್ಕಾಗಿ ಸಿಕ್ಕಿಬಿದ್ದಿದ್ದಾರೆ. ಹೋಗಿ ಬೇಯಿಸಿ ಅಡುಗೆ ಮಾಡಿ ಸಿದ್ಧಪಡಿಸು; ನೀನೂ ನಾನೂ ತಿನ್ನೋಣ. ವ॥ ಎನ್ನಲು ಹಾಗೆಯೇ ಮಾಡುತ್ತೇನೆ

ಕಂ॥ ಆಗಸದೊಳಗೊಂದು ಮಹೀ
ಭಾಗದೊಳಿನ್ನೊಂದು ದಾಡೆಯಾಗಿರೆ ಮನದಿಂ ।
ಬೇಗಂ ಬರ್ಪಳ ದಿಟ್ಟಿಗ
ಳಾಗಳೆ ಪತ್ತಿದುವು ಗೆಂಟಱೊಳ್ ಮಾರುತಿಯಂ ॥ ೧೩

ವ॥ ಅಂತೊಂದಂಬುವೀಡಿನೆಡೆಯೊಳ್ ಕಾಮನಂಬುವೀಡಿಂಗೊಳಗಾಗಿ ತಾಂ ಕಾಮರೂಪೆಯಪ್ಪುದಱಿಂ ದಿವ್ಯಕನ್ಯಕಾಸ್ವರೂಪಮಂ ಕೆಯ್ಕೊಂಡು ತನ್ನತ್ತ ಮೊಗದೆ ಬರ್ಪಳಂ ಕಂಡು-

ಕಂ॥ ಖೇಚರಿಯೋ ಭೂಚರಿಯೊ ನಿ
ಶಾಚರಿಯೋ ರೂಪು ಬಣ್ಣಿಸಲ್ಕಾರ್ಗಮವಾ ।
ಗ್ಗೋಚರಮಿಾ ಕಾನನಮುಮ
ಗೋಚರಮಿವಳಿಲ್ಲಿಗೇಕೆ ಬಂದಳೊ ಪೇೞಿಂ ॥ ೧೪

ವ॥ ಎಂಬನ್ನೆಗಮಾಕೆ ಮದನನ ಕೆಯ್ಯಿಂ ಬರ್ದುಂಕಿದರಲಂಬು ಬರ್ಪಂತೆ ಬಂದು ಭೀಮಸೇನನ ಕೆಲದೊಳ್ ಕುಳ್ಳಿರೆ ನೀನಾರ್ಗೇನೆಂಬೆಯೇಕೆ ಬಂದೆಯೆಂದೊಡಾಕೆಯೆಂಬಳೆರಡಱಿಯ ದೊಲ್ಲು ನಿನ್ನೊಳೆರಡಂ ನುಡಿಯಲಾಗದೆನಗೆ ಯಿಾ ಬನಂ ಹಿಡಿಂಬವನೆಂಬುದಿದನಾಳ್ವಂ ಹಿಡಿಂಬನೆಂಬಸುರನೆಮ್ಮಣ್ಣನಾನುಂ ಹಿಡಿಂಬೆಯೆನೆಂಬೆನಾತನ ಬೆಸದಿಂ ನಿಮ್ಮಿನ್ನಿಬರುಮಂ-

ಎಂದು ೧೩. ಆಕಾಶದಲ್ಲಿ ಒಂದು ಭೂಮಿಯಲ್ಲಿ ಒಂದು ದವಡೆಯಾಗಿರಲು (ಅಂದರೆ ದೊಡ್ಡದಾಗಿ ಬಾಯಿ ತೆರೆದುಕೊಂಡು) ಮನೋವೇಗವನ್ನು ಮೀರಿ ಬರುತ್ತಿದ್ದ ಅವಳ ದೃಷ್ಟಿಗಳು ದೂರದಿಂದಲೇ ಭೀಮನನ್ನು ಸೇರಿಕೊಂಡವು. ವ॥ ಹಾಗೆ ಒಂದು ಬಾಣ ಹೋಗುವಷ್ಟು ದೂರದಲ್ಲಿಯೇ ಕಾಮಬಾಣಕ್ಕೆ ಅಧೀನಳಾಗಿ ತಾನು ಇಷ್ಟ ಬಂದ ರೂಪವನ್ನು ಧರಿಸುವ ಸಾಮರ್ಥ್ಯವುಳ್ಳವಳಾದುದರಿಂದ ಸುಂದರಳಾದ ಕನ್ನಿಕೆಯ ಆಕಾರವನ್ನು ತಾಳಿ ಭೀಮನು ಕಡೆಗೇ ಬಂದಳು. ತನ್ನ ಕಡೆಗೆ ಬರುತ್ತಿದ್ದ ಅವಳನ್ನು ನೋಡಿದನು. ೧೪. ಭೀಮನು ಇವಳು ಅಂತರಿಕ್ಷದಲ್ಲಿ ಸಂಚರಿಸುವ ವಿದ್ಯಾಧರಿಯೋ ಭೂಮಿಯಲ್ಲಿ ಸಂಚಾರಮಾಡುವ ಮನುಷ್ಯಸ್ತ್ರೀಯೋ, ಇಲ್ಲ ರಾತ್ರಿಯಲ್ಲಿ ಸಂಚಾರಮಾಡುವ ರಾಕ್ಷಸಿಯೋ! ಇವಳ ರೂಪವನ್ನು ವರ್ಣಿಸುವುದಕ್ಕೆ ಯಾರಿಗೂ ಮಾತಿನಿಂದ ಸಾಧ್ಯವಿಲ್ಲ. ಈ ಕಾಡೂ ಕೂಡ ಯಾರಿಗೂ ಪರಿಚಿತವಿಲ್ಲದುದು. ಇವಳಿಲ್ಲಿಗೇಕೆ ಬಂದಳು ಎಂದು ಯೋಚಿಸಿದನು. ವ॥ ಅಷ್ಟರಲ್ಲಿ ಅವಳು ಮನ್ಮಥನ ಕಯ್ಯಿಂದ ಬದುಕಿ ಪುಷ್ಪಬಾಣದ ಹಾಗೆ ಭೀಮಸೇನನ ಪಕ್ಕದಲ್ಲಿ ಬಂದು ಕುಳಿತುಕೊಂಡಿರಲು ಭೀಮಸೇನನು ಅವಳನ್ನು ಕುರಿತು ನೀನು ಯಾರ ಮಗಳು? ನಿನ್ನ ಹೆಸರೇನು? ಯಾತಕ್ಕೆ ಬಂದಿದ್ದೀಯೆ ಎನ್ನಲು (ಆಕೆ ಅವನನ್ನು ಕುರಿತು) ಸಂದೇಹವಿಲ್ಲದೆ ದೃಢವಾಗಿ ಪ್ರೀತಿಸಿ ಬಂದ ನಿನ್ನಲ್ಲಿ ಸುಳ್ಳನ್ನು ಹೇಳಬಾರದು. ಈ ಕಾಡು ಹಿಡಿಂಬವನಮೆಂಬುದು. ಇದನ್ನು ಆಳುವ ಹಿಡಿಂಬನೆಂಬ ರಾಕ್ಷಸನು ನಮ್ಮಣ್ಣ; ನನ್ನ ಹೆಸರೂ ಹಿಡಿಂಬೆಯೆಂದು; ಅವನ ಆಜ್ಞೆಯ ಪ್ರಕಾರ ನಿಮ್ಮಿಷ್ಟು ಜನವನ್ನು

ಕಂ॥ ಪಿಡಿದಡಸಿ ತಿನಲ್ ಬಂದಿ
ರ್ದೆಡೆಯೊಳ್ ನಿನಗಾಗಿ ಮದನನೆನ್ನನೆ ತಿನೆ ಕೇಳ್ ।
ಪಡೆನೋಡಲ್ ಬಂದವರಂ
ಗುಡಿವೊಜೆಸಿದರೆಂಬುದಾಯ್ತು ನಿನ್ನೆನ್ನೆಡೆಯೊಳ್ ॥ ೧೫

ವ॥ ಎಂದೀ ಮಱಲುಂದಿದರಾರ್ಗೆಂದೊಡೆನ್ನ ತಾಯ್ವಿರುವೊಡವುಟ್ಟಿದರೆಂದೊಡೆ ಹಿಡಿಂಬಂ ಬಂದವರಂ ತಿಂದೊಡಂ ತಿನ್ಗೆ ನೀನೆನ್ನ ಪೆಗಲನೇಱು ಗಗನತಳಕ್ಕುಯ್ವೆನೆನೆ ಭೀಮಸೇನನಾ ಮಾತಿಂಗೆ ಮುಗುಳ್ನಗೆ ನಕ್ಕು-

ಚಂ॥ ಅಟೆಪಿದೆಯಂತುಮಲ್ಲದೆ ನಿಶಾಚರಿಯೈ ನಿನಗಪ್ಪುದಪ್ಪುದೀ
ಯುಟೆನುಡಿ ಬರ್ಕೆ ನಿನ್ನ ಪಿರಿಯಣ್ಣನೆ ಪಣ್ಣನೆ ನೋೞ್ಪಮಾತನೊ ।
ಡ್ಡಟೆಯುದ ಗಂಡವಾತನೆನುತಂತಿರೆ ತಂಗೆಯ ಮಾಣ್ಬುದರ್ಕವಂ
ಮೊಟಗಿ ಸಿಡಿಲ್ವದೊಂದು ಸಿಡಿಲೇಟ್ಗೆಯಿನೆಯ್ತರೆ ವಂದು ಭೀಮನಂ ॥ ೧೬

ವ॥ ಕಂಡು ಕಣ್ಗಳಿಂ ಕೆಂಡದ ತಂಡಂಗಳುಮುರಿಯ ತಂಡಂಗಳುಂ ಸೂಸೆ ನೀನೊರ್ವಯೆನ್ನೊಳಗೇಂ ಕಾದುವೆ ಈ ಮಱಲುಂದಿದರನೆತ್ತಿನಿಬರುಮನೊರ್ಮೆಯೆ ಪೊಸೆದು ಮುಕ್ಕುವೆನೆನೆ ಸಾಹಸಭೀಮಂ ಮಲ್ಲಂತಿಗೆಯನಪ್ಪೊಡಂ ಸಡಲಿಸದವನನವಯುವದೊಳಿಂತೆಂದಂ-

೧೫. ಹಿಡಿದು ಬಾಯಿಗೆ ತುರಿಕಿಕೊಂಡು ತಿನ್ನಲು ಬಂದ ಸಮಯದಲ್ಲಿ ಮನ್ಮಥನು ನನ್ನನ್ನೇ ತಿಂದುಬಿಟ್ಟಿದ್ದಾನೆ. "ಸೈನ್ಯವನ್ನು ನೋಡಲು ಬಂದವರ ಕೈಯಲ್ಲಿ ಬಾವುಟವನ್ನು ಹೊರಿಸಿದರು" ಎಂಬ ಗಾದೆಗೆ ಅನುಗುಣವಾಯಿತು ನಿನ್ನ ನನ್ನ ಸಂಬಂಧವು ವ॥ ಎಂದು 'ಈ ಮೈಮರೆತು ಮಲಗಿರುವವರಾರು' ಎಂದು ಕೇಳಿದಳು. ಅವರು ನನ್ನ ತಾಯಿ ಮತ್ತು ಸಹೋದರರು ಎಂದು ಉತ್ತರಕೊಡಲು ಹಿಡಿಂಬನು ಬಂದು ಅವರನ್ನು ತಿನ್ನುವುದಾದರೆ ತಿನ್ನಲಿ; ನೀನು ನನ್ನ ಹೆಗಲನ್ನು ಏರಿಕೋ, ಆಕಾಶಪ್ರದೇಶಕ್ಕೆ ಕರೆದುಕೊಂಡು ಹೋಗುತ್ತೇನೆ ಎಂದಳು. ಅದಕ್ಕೆ ಭೀಮಸೇನನು ಹುಸಿನಗೆ ನಕ್ಕು ೧೬. ನೀನು ನನ್ನಲ್ಲಿ ಮೋಹಗೊಂಡಿದ್ದೀಯೆ; ಅಲ್ಲದೆ ನೀನು ರಾಕ್ಷಸಿಯಾಗಿದ್ದೀಯೆ; ಈ ಅಯೋಗ್ಯವಾದ ಮಾತು ನಿನಗೆ ತಕ್ಕುದಾಗಿದೆ. ನಿನ್ನ ಹಿರಿಯಣ್ಣನೇ ಬರಲಿ, ಅವನ ಊನವಾಗದ ವೀರ್ಯಾಲಾಪಗಳನ್ನು ಪರೀಕ್ಷಿಸಿ ನೋಡೋಣ ಎನ್ನುತ ಹಾಗೆಯೇ ಇರಲು ತಂಗಿಯು ಸಾವಕಾಶಮಾಡಿದುದಕ್ಕಾಗಿ ಹಿಡಿಂಬನು ಗರ್ಜನೆ ಮಾಡಿ ಸಿಡಿಲವೇಗದಿಂದ ಹತ್ತಿರಕ್ಕೆ ಬಂದು ಭೀಮನನ್ನು-ವ॥ ನೋಡಿ ಕಣ್ಣುಗಳಿಂದ ಕೆಂಡದ ಸಮೂಹವೂ ಉರಿಯು ಮೊತ್ತವೂ ಚೆಲ್ಲುತ್ತಿರಲು ನೀನೊಬ್ಬನೇ ನನ್ನಲ್ಲಿ ಹೇಗೆ ಕಾದುತ್ತೀಯೆ; ಈ ಮೈಮರೆತು ಮಲಗಿದವರನ್ನೆಲ್ಲ ಎಚ್ಚರಗೊಳಿಸು, ಇವರಿಷ್ಟು ಜನವನ್ನು ಒಂದೇ ಸಲ ಹೊಸೆದು ಮುಕ್ಕುತ್ತೇನೆ ಎಂದನು. ಸಾಹಸಭೀಮನು ತನ್ನ ಚಡ್ಡಿಯನ್ನು (ನಡುಕಟ್ಟು?) ಬಿಚ್ಚದೆ (ಸಡಲಿಸದೆ) ಉದಾಸೀನನಾಗಿಯೇ ಅವನನ್ನು

ಕಂ॥ ಏಂ ಗಾವಿಲನಯೊ ನಿನ್ನಂ
ನಂಗುವುದರ್ಕಿವರನೆತ್ತವೇೞ್ಕುಮೆ ನೆರಮಂ ।
ಸಂಗಳಿಸಲ್ವೇೞ್ಕು ಮಾ
ತಂಗವಿರೋಧಿಗೆ ಕುರಂಗ ಸಂಗರ ಧರೆಯೊಳ್ ॥ ೧೭

ವ॥ ಎಂಬುದುಂ ಹಿಡಿಂಬನಾಡಂಬರಂಗೆಯ್ದು ತುಂಬುರುಕೊಳ್ಳಿಯತಂಬರಂಬರಂ ಸಿಡಿಲ್ದು-

ಚಂ॥ ಕಡುಪಿನೆ ಪೊತ್ತು ಪಾಸಱೆಯನೆಯ್ತರೆ ಭೀಮನುಮೊತ್ತಿ ಕಿೞ್ತು ಬೇ
ರೊಡನೆ ಮಹೀಜಮೊಂದನಿಡೆಯುಂ ಬಿಡೆ ಪೊಯ್ಯೆಯುಮಾ ಬನಂ ಪಡ।
ಲ್ವಡುತಿರೆ ಕಲ್ಲೊಳಂ ಮರದೊಳಂ ಬಡಿದೊಯ್ಯನೆ ಜೋಲ್ದು ದೈತ್ಯನಂ
ಪಿಡಿದು ಮೃಣಾಳನಾಳಮನೆ ಸೀಳ್ವವೊಲೊರ್ಮೆಯೆ ಸೀಳ್ದು ಬೀಸಿದಂ ॥೧೮

ವ॥ ಆಗಳಾ ಕಳಕಳಕ್ಕೆ ಮಱಲುಂದಿದಯ್ವರುಮೆೞ್ಚೆತ್ತಿದೇನೆಂದು ಬೆಸಗೊಳೆ ತದ್ವೃತ್ತಾಂತಮೆಲ್ಲಮನಱೆಪಿ ಹಿಡಿಂಬೆ ಡಂಬಮಿಲ್ಲದೆ ಭೀಮಸೇನನೊಳಪೊಡಂಬಡಂ ನುಡಿಯೆ ಕೊಂತಿಯುಂ ಧರ್ಮಪುತ್ರನುಮಿಾಕೆ ಸಾಮಾನ್ಯವನಿತೆಯಲ್ಲಿವಳ್ ರಾಕ್ಷಸಸ್ತ್ರೀಯೆಂದು ಭಾವಿಸಲ್ವೇಡಿೀಕೆಯಂ ಕೆಯ್ಕೊಳ್ವುದೆ ಕಜ್ಜಮೆಂದಾಕೆಗಂ ಭೀಮಸೇನಂಗಂ ಗಂಧರ್ವವಿವಾಹಮಂ ಮಾಡಿದೊಡೆ ಹಿಡಿಂಬೆ ನೀಮಿಲ್ಲಿರಲ್ವೇಡ ಪರ್ವತದ ಮೇಲೆ ಕಱಂಗಿ ಕಟ್ಟಿಲಿಸಿದ ಮರುದುಱುಗಲ ನಡುವೆ ಸುಧಾ

ಕುರಿತು ಹೀಗೆಂದನು. ೧೭. ಎಂತಹ ದಡ್ಡನೊ ನೀನು? ನಿನ್ನನ್ನು ನುಂಗುವುದಕ್ಕೆ ಇಷ್ಟು ಜನವನ್ನೂ ಎಬ್ಬಿಸಬೇಕೆ? ಜಿಂಕೆಯೊಡನೆ ಯುದ್ಧಮಾಡುವ ರಣರಂಗದಲ್ಲಿ ಗಜವಿರೋಧಿಯಾದ ಸಿಂಹಕ್ಕೆ ಸಹಾಯವನ್ನೂ ಕೊಡಿಸಬೇಕೆ? ಎಂದನು. ವ॥ ಹಿಡಿಂಬನು ಆರ್ಭಟಿಸಿ ತೂಬರಮರದ ಸೌದೆಯ ಕೊಳ್ಳಿಯ ಹಾಗೆ ಆಕಾಶದವರೆಗೆ ನೆಗೆದು-೧೮. ಒಂದು ಹಾಸುಬಂಡೆಯನ್ನು ವೇಗದಿಂದ ಕಿತ್ತು ಹೊತ್ತು ಬರಲು ಭೀಮನೂ ಬಲಾತ್ಕಾರದಿಂದ ಒಂದು ಮರವನ್ನು ಬೇರೊಡನೆಯೇ ಕಿತ್ತು ಅವನ ಮೇಲೆ ಬೀಸುವುದರಿಂದಲೂ ಒಂದೇ ಸಮನಾಗಿ ಹೊಡೆಯುವುದರಿಂದಲೂ ಆ ಕಾಡೆಲ್ಲ ಚೆಲ್ಲಾಪಿಲ್ಲಿಯಾಗುವ ಹಾಗೆ ಕಲ್ಲಿನಿಂದಲೂ ಮರದಿಂದಲೂ ಬಡಿದು ನಿಧಾನವಾಗಿ ಜೋತುಬಿದ್ದ ಆ ರಾಕ್ಷಸನನ್ನು ಹಿಡಿದುಕೊಂಡು ತಾವರೆಯ ದಂಟನ್ನು ಸೀಳುವ ಹಾಗೆ ಒಂದೇ ಸಲ ಸೀಳಿ ಎಸೆದನು. ವ॥ ಆಗ ಆ ಕಲಕಲಶಬ್ದದಿಂದ ಮೈಮರೆತು ನಿದ್ದೆ ಮಾಡುತ್ತಿದ್ದ ಅಯ್ದು ಜನವೂ ಎಚ್ಚೆತ್ತು ಇದೇನೆಂದು ಪ್ರಶ್ನೆಮಾಡಲು ಆ ವಿಷಯವನ್ನೆಲ್ಲ ತಿಳಿಸಿ ಹಿಡಿಂಬೆಯು ಆಡಂಬರವಿಲ್ಲದೆ ಸರಳವಾಗಿ ಭೀಮನ ವಿಷಯದಲ್ಲಿ ತನ್ನ ಒಪ್ಪಿಗೆಯನ್ನು ತಿಳಿಸಲು ಕುಂತಿಯೂ ಧರ್ಮರಾಜನೂ ಇವಳು ಸಾಮಾನ್ಯಳಾದ ಹೆಂಗಸಲ್ಲ; ರಾಕ್ಷಸಸ್ತ್ರೀಯೆಂದು ಭಾವಿಸಬೇಡ, ಅವಳನ್ನು ಸ್ವೀಕರಿಸುವುದೇ (ನಿನಗೆ ಯೋಗ್ಯವಾದ) ಕಾರ್ಯ ಎಂದು ಅವಳಿಗೂ ಭೀಮಸೇನನಿಗೂ ಗಾಂಧರ್ವವಿವಾಹವನ್ನು ಮಾಡಿದರು. ಹಿಡಿಂಬೆಯು ನೀವು ಇಲ್ಲಿರುವುದು ಬೇಡ; ಬೆಟ್ಟದ ಮೇಲೆ ಕಪ್ಪಗೆ ಕಪ್ಪಾಗಿ ಕಾಣುವ ಮರಗಳ ತೋಪಿನ ಮಧ್ಯೆ ಸುಣ್ಣದಿಂದ ಬಿಳುಪಾಗಿ ಮಾಡಲ್ಪಟ್ಟು ಎತ್ತರವೂ ಮನೋಹರವೂ ಆಗಿ ನಿಮ್ಮ ಕಣ್ಣಿಗೆ ಕಾಣುತ್ತಿರುವ

ಧವಳಿತೋತ್ತುಂಗ ರಮ್ಯ ಹರ್ಮ್ಯಂಗಳಂ ಕಾಣ್ಬೆರಪ್ಪೊಡದು ಹಿಡಿಂಬಪುರಮೆಂಬುದೆಮ್ಮ ಪುರಮಲ್ಲಿಗೆ ಪೋಪಂ ಬನ್ನಿಮೆಂದು ಮುಂದಿಟ್ಟೊಡಗೊಂಡು ಪೋಗಿ ಮಹಾವಿಭೂತಿಯಿಂ ಪೊಱಲಂ ಪುಗಿಸಿ ತನ್ನಸಂಪತ್ತುಮಂ ಶ್ರೀಯುಮಂ ಮೆಱೆದು ಮಜ್ಜನ ಭೋಜನ ತಾಂಬೂಲ ಲೇಪನಂಗಳಿಂ ಪಥಪರಿಶ್ರಮಮೆಲ್ಲಮಂ ಕಳೆದು ಭೀಮಸೇನನುಂ ತಾನುಂ-

ಕಂ॥ ಎಲ್ಲಿ ಕೊಳನೆಲ್ಲಿ ತಣ್ಬುಟಿ
ಲೆಲ್ಲಿ ಲತಾಭವನಮೆಲ್ಲಿ ಧಾರಾಗೃಹಮಂ ।
ತಲ್ಲಿಯೆ ತೊಡರ್ದಲ್ಲಿಯೆ ನಿಂ
ದಲ್ಲಿಯೆ ರಮಿಯಿಸಿದಳಾಕೆ ಮರುದಾತ್ಮಜನೊಳ್ ॥ ೧೯

ವ॥ ಅಂತು ರಮಿಯಿಸಿ ಪೊೞಲ್ಗೆ ಮಗುಳ್ದು ಬಂದವೊಡಾಕೆಗಂ ಭೀಮಂಗಂ-

ಕಂ॥ ಕಾರಿರುಳ ತಿರುಳ ಬಣ್ಣಂ
ಕೂರಿದುವೆನೆ ತೊಳಪ ದಾಡೆ ಮಿಳಿರ್ವುರಿಗೇಸಂ ।
ಪೇರೊಡಲೆಸೆದಿರೆ ಪುಟ್ಟಿದ
ನಾರುಮಗುರ್ವಿಸೆ ಮಗಂ ಘಟೋತ್ಕಚನೆಂಬಂ ॥ ೨೦

ವ॥ ಅಂತು ಪುಟ್ಟುವುದುಮಿಾಕ್ಷರಕಲ್ಪಿತದಿಂ ರಾಕ್ಷಸರ್ಗೆ ಸದ್ಯೋಗರ್ಭಮುಂ ಸದ್ಯಃ ಪ್ರಸೂತಿಯುಂ ಸದ್ಯೋಯೌವನಮುಮುಳ್ಳ ಕಾರಣದಿಂದಾಗಳ ಷೋಡಶವರ್ಷದ ಕುಮಾರನಾಗಿರೆ ಪಾಂಡವರುಮಲ್ಲಿ ಮೂಱು ವರುಷಮಿರ್ದು ಕೃಷ್ಣದ್ವೈಪಾಯನೋಪದೇಶದಿಂದೇಕಚಕ್ರಕ್ಕೆ ಪೋಪ ಕಜ್ಜಮನಾಳೋಚಿಸಿ-

ಆ ಉಪ್ಪರಿಗೆ ಮನೆಗಳು ನಮ್ಮ ಪಟ್ಟಣ (ರಾಜಧಾನಿ), ಅಲ್ಲಿಗೆ ಹೋಗೋಣ ಬನ್ನಿ ಎಂದು ಅವರನ್ನು ಮುಂದುಮಾಡಿಕೊಂಡು ಹೋಗಿ ಮಹಾವೈಭವದಿಂದ ಪುರಪ್ರವೇಶಮಾಡಿದಳು. ತನ್ನ ಐಶ್ವರ್ಯವನ್ನೂ ವೈಭವವನ್ನೂ ಅವರಿಗೆ ಪ್ರಕಾಶಪಡಿಸಿ ಸ್ನಾನ, ಭೋಜನ, ತಾಂಬೂಲ ಗಂಧಾದಿಗಳಿಂದ ದಾರಿನಡೆದ ಬಳಲಿಕೆಗಳನ್ನೆಲ್ಲ ಕಳೆದು ಸತ್ಕರಿಸಿದಳು. ಭೀಮಸೇನನೂ ತಾನು ೧೯. ಎಲ್ಲಿ ಸರೋವರಗಳುಂಟೋ ಎಲ್ಲಿ ತಂಪಾದ ತೋಪುಗಳುಂಟೋ ಎಲ್ಲಿ ಬಳ್ಳಿವಾಡಗಳುಂಟೋ ಎಲ್ಲಿ ಏಕಪ್ರಕಾರವಾಗಿ ನೀರು ಹರಿಯುವ ಮನೆಗಳುಂಟೋ ಅಲ್ಲಲ್ಲಿಯೇ ಸೇರಿಕೊಂಡು ಅಲ್ಲಲ್ಲಿಯೇ ನಿಂತು ಹಿಡಿಂಬೆಯು ವಾಯುಪುತ್ರನಲ್ಲಿ ರಮಿಸಿದಳು. ೨೦.ಕಗ್ಗತ್ತಲೆಯಿಂದ ಕೂಡಿದ ರಾತ್ರಿಯ ಬಣ್ಣವು ಇಲ್ಲಿ ಮೊನಚಾಯಿತು (ಬಟ್ಟೆಯಿಳಿಸಿದೆ) ಎನ್ನುವ ಹಾಗೆ ತೊಳಗುತ್ತಿರುವ ಕೋರೆಹಲ್ಲೂ ಅಲುಗಾಡುತ್ತಿರುವ ಕೆಂಗೂದಲೂ ದೊಡ್ಡ ದೇಹವೂ ಪ್ರಕಾಶಮಾನವಾಗಿರಲು ಯಾರಿಗಾದರೂ ಭಯವನ್ನುಂಟುಮಾಡು ವಂತಿರುವ ಘಟೋತ್ಕಚನೆಂಬ ಮಗನು ಹುಟ್ಟಿದನು. ವ॥ ದೈವಸಂಕಲ್ಪದಿಂದ ರಾಕ್ಷಸರಿಗೆ ಕೂಡಲೇ ಗರ್ಭವನ್ನು ಧರಿಸುವುದೂ ಕೂಡಲೇ ಹೆತ್ತು ಕೂಡಲೇ ಯೌವನಪ್ರಾಪ್ತಿಯೂ ಉಂಟಾಗುವುದರಿಂದ ಆಗಲೇ ಹದಿನಾರುವರ್ಷದ ಬಾಲಕನಾಗಿರಲು ಪಾಂಡವರು ಅಲ್ಲಿ ಮೂರುವರ್ಷಕಾಲವಿದ್ದು ವೇದವ್ಯಾಸರ ಉಪದೇಶಪ್ರಕಾರ ಏಕಚಕ್ರಪುರಕ್ಕೆ ಹೋಗುವ ಕಾರ್ಯವನ್ನು ಆಲೋಚಿಸಿದರು.

ಚಂ ॥ ಬರಿಸಿ ಹಿಡಿಂಬೆಯಂ ಕರೆದು ಸಾರೆ ಘಟೋತ್ಕಚನಂ ಮನೋಮುದಂ
ಬೆರಸೊಸೆದಿರ್ದೆವಿನ್ನೆವರಮಿನ್ನಿರಲಾಗದು ಪೋಪೆವೆಂದೊಡಾ ।
ದರದೊಳೆ ಕೊಟ್ಟ ವಸ್ತುಗಳನೊಂದುಮನೊಲ್ಲದೆ ಕೂರ್ತು ಬುದ್ಧಿವೇ
ಳ್ದಿರಿಸಿ ಸುಖಪ್ರಯಾಣದೊಳೆ ಪಾಂಡವರೆಯ್ದಿದರೇಕಚಕ್ರಮಂ ॥ ೨೧

ರಗಳೆ॥ ಅಲ್ಲಿ ಸೊಗಯಿಸುವ ಕೃತಕಗಿರಿಗಳಿಂ
ಕಲ್ಪತರುಗಳನೆ ಪೋಲ್ವ ಮರಗಳಿಂ
ನಂದನಂಗಳೊಳ್ ಸುಳಿವ ಬಿರಯಿಯಿಂ
ಕಂಪು ಕಣ್ಮಲೆಯೆ ಪೂತ ಸುರಯಿಯಿಂ ॥
ಸುತ್ತಲುಂ ಪರಿವ ಜರಿವೊನಲ್ಗಳಿಂ
ದೆತ್ತಲುಂ ನಲಿವ ಪೊಸ ನವಿಲ್ಗಳಿಂ ।
ಬೆಳೆದು ಮಗಮಗಿಪ ಗಂಧಶಾಳಿಯಿಂ
ದಲ್ಲಿ ಸುಳಿವ ಗಿಳಿವಿಂಡಿನೋಳಿಯಿಂ ॥
ಈಂಟುಜಳಧಿಯೆನಿಪಗಟ ನೀಳ್ಪಿನಿಂ

೨೧. ಹಿಡಿಂಬೆಯನ್ನು ಬರಮಾಡಿಕೊಂಡು ಘಟೋತ್ಕಚನನ್ನೂ ಹತ್ತಿರಕ್ಕೆ ಕರೆದು ಇಲ್ಲಿಯವರೆಗೆ ಸುಖವಾಗಿ ಸಂತೋಷವಾಗಿ ಇಲ್ಲಿ ಇದ್ದೆವು. ಇನ್ನು ಇರಬಾರದು ಹೋಗುತ್ತೇನೆ ಎಂದು ಹೇಳಿ ಅವರು ಆದರದಿಂದ ಕೊಟ್ಟ ಯಾವ ಪದಾರ್ಥವನ್ನೂ ಸ್ವೀಕರಿಸದೆ ಅಲ್ಲಿಯೇ ಬಿಟ್ಟು ಪ್ರೀತಿಯಿಂದ ಬುದ್ಧಿಹೇಳಿ ಸುಖಪ್ರಯಾಣದಿಂದ ಪಾಂಡವರು ಏಕಚಕ್ರಪುರವನ್ನು ಸೇರಿದರು. ೨೨. ಅಲ್ಲಿ ಸುಂದರವಾಗಿ ಕಾಣುವ ಕೃತಕಪರ್ವತಗಳಿಂದಲೂ ಕಲ್ಪವೃಕ್ಷವನ್ನೇ ಹೋಲುವ ಮರಗಳಿಂದಲೂ ನಂದನವನಗಳಲ್ಲಿ ಸುಳಿದಾಡುತ್ತಿರುವ ವಿರಹಿಗಳಿಂದಲೂ ಸುಗಂಧ ಬೀರುತ್ತಿರುವ ಹೂವುಗಳನ್ನು ಬಿಟ್ಟಿರುವ ಸುರಗಿಯ ಮರಗಳಿಂದಲೂ, ಸುತ್ತಲೂ ಹರಿಯುತ್ತಿರುವ ಸುಂದರವಾದ ಕೃತಕಪರ್ವತಗಳು, ಕಲ್ಪವೃಕ್ಷದಂತಿರುವ ಮರಗಳು, ನಂದನವನಗಳಲ್ಲಿ ವಿರಹಿಸುವ ವಿರಹಿಗಳು ಮನೋಹರವಾದ ವಾಸನೆಯಿಂದ ಕೂಡಿದ ಸುರಗಿಯ ಹೂವುಗಳು, ಅಲ್ಲಲ್ಲೆ ಹರಿಯುವ ನದಿಗಳು, ಎಲ್ಲೆಡೆಯಲ್ಲಿಯೂ ಕುಣಿಯುತ್ತಿರುವ ನವಿಲುಗಳು, ಕೊಬ್ಬಿ ಬೆಳೆದಿರುವ ಸುಗಂಧಯುಕ್ತವಾದ ಬತ್ತದ ಗದ್ದೆಗಳು, ಅದಕ್ಕೆ ಸುಳಿಯುತ್ತಿರುವ ಗಿಳಿಗಳ ಹಿಂಡು, ಸಮುದ್ರವನ್ನೂ ಹೀಯ್ಯಾಳಿಸುವಷ್ಟು ಆಳವಾದ ಕಂದಕ, ಮೇಲೆದ್ದು ಸೊಗಸುವ ಕೋಟೆ, ವಿವಿಧರೀತಿಯ ದೇವಾಲಯಗಳು, ಬಹಳ ಆಸಕ್ತಿಯಿಂದ ನೋಡುತ್ತಿರುವ ದಾರಿಹೋಕರ ನೋಟಗಳು, ಪಂಚರತ್ನಗಳಿಂದ ತುಂಬಿದ ಅಂಗಡಿಗಳು ಕುಬೇರರನ್ನೂ ಮೀರಿಸುವ ವಣಿಕರು- ಇವುಗಳಿಂದ ಶೋಭಾಯಮಾನವಾದ ಏಕಚಕ್ರಪುರವನ್ನು ಅತ್ಯಂತ ಪರಾಕ್ರಮಿಯಾದ ಅರ್ಜುನನು

ನೆಗೆದು ಸೊಗಯಿಸುವ ಕೋಂಟೆಯೊಳ್ಪಿನಿಂ ।
ವಿವಿಧ ದೇವ ಗೃಹದಾಟಪಾಟದಿಂ
ಮಱುಗಿ ಬಟ್ಟೆಯರ ನೋಟ್ಪ ನೋಟದಿಂ ॥
ಪಂಚರತುನದೊಳೆ ನೆಱೆದ ಪಸರದಿಂ
ತೋರಣಂಗಳೊಳೆ ತೊಡರ್ದ ತಿಸರದಿಂ ।
ಧನದರನ್ನರಿವರೆನಿಪ ಪರದರಿಂ
ದೇವರನ್ನರಿವರೆನಿಪ ಬರುದರಿಂ ॥
ನೆಱೆಯೆ ಸೊಗಯಿಪಾ ಯೇಕಚಕ್ರಮಂ
ಮೆಚ್ಚಿದಂ ಹರಿಗನಮಿತ ವಿಕ್ರಮಂ ।                    ೨೨

ವ|| ಅಂತು ಮೆಚ್ಚಿ ತಮ್ಮುಮೈವರುಮಿನ್ನವು ಪೊೞಲ್ಗಳಿಲ್ಲೀ ಪೊೞಲ್ಗೆ ನಾಲ್ಕು ಯುಗದೊಳಂ ವಸುಮತಿ ಪದ್ಮನಗರಮೇಕಚಕ್ರಂ ಬಹುಧಾನ್ಯಮೆಂಬ ನಾಲ್ಕು ಪೆಸರಾದುದೆಂದು ಮನಂಗೊಂಡು ನೋಡುತ್ತುಂ ಬಂದು ಚತುರ್ವೇದಪಾರಗರ ಮನೆಯ ಮುಂದಣ ಚತುಶ್ಶಾಲೆಯೊಳ್ ಬೀಡಂ ಬಿಟ್ಟು ಧರಾಮರ ವೇಷದೊಳೊಂದು ವರುಷಮಿರ್ಪನ್ನೆಗಮೊಂದುದಿವಸಂ-

ನೋಡಿ ಸಂತೋಷಪಟ್ಟನು. ಝರಿಯ ಪ್ರವಾಹಗಳಿಂದಲೂ ಎಲ್ಲ ಕಡೆಯಲ್ಲಿಯೂ ನಲಿದಾಡುತ್ತಿರುವ ಹೊಸನವಿಲುಗಳಿಂದಲೂ ಕೊಬ್ಬಿ ಬೆಳೆದು ವಾಸನೆಯನ್ನು ಬೀರುತ್ತಿರುವ ಕಂಪು ಬತ್ತದಿಂದಲೂ ಅಲ್ಲಿ ಸಂಚರಿಸುತ್ತಿರುವ ಗಿಳಿಯ ಹಿಂಡುಗಳ ಸಮೂಹದಿಂದಲೂ ಕುಡಿಯುವುದಕ್ಕೆ ಯೋಗ್ಯವಾದ ಸಮುದ್ರವೆನಿಸಿಕೊಂಡಿರುವ ಕಂದಕಗಳ ದೀರ್ಘತೆಯಿಂದಲೂ ಮೇಲಕ್ಕೆ ಹಾರಿ ಕೋಟೆಯ ಸೊಗಸಾಗಿ ಕಾಣುವ ಶ್ರೇಷ್ಠತೆಯಿಂದಲೂ ಬಗೆ ಬಗೆಯ ದೇವಾಲಯ ಕ್ರೀಡಾವಿನೋದಗಳಿಂದಲೂ ದಾರಿಹೋಕರನ್ನು ಕರುಣೆಯಿಂದ ನೋಡುವ ನೋಟದಿಂದಲೂ ಅಯ್ದು ರೀತಿಯ ರತ್ನಗಳಿಂದ ತುಂಬಿದ ಅಂಗಡಿಗಳಿಂದಲೂ ತೋರಣಗಳಲ್ಲಿ ಸೇರಿಕೊಂಡಿರುವ ಮೂರೆಳೆಯಹಾರಗಳಿಂದಲೂ ಕುಬೇರನಂತಹವರಿವರು ಎನ್ನಿಸಿಕೊಂಡ ವ್ಯಾಪಾರಿಗಳಿಂದಲೂ ದೇವರಂತಹರಿವರು ಎನ್ನಿಸಿಕೊಂಡಿರುವ ಬಿರುದಾಂಕಿತರಿಂದಲೂ ಪೂರ್ಣವಾಗಿ ಸೊಗಯಿಸುವ ಏಕಚಕ್ರಪುರವನ್ನು ಎಲ್ಲೆಯಿಲ್ಲದ ಪರಾಕ್ರಮವುಳ್ಳ ಹರಿಗನು (ಅರ್ಜುನ-ಅರಿಕೇಸರಿಯು) ಮೆಚ್ಚಿದನು. ವ|| ಹೀಗೆ ಮೆಚ್ಚಿ ತಾವೈದು ಜನಗಳೂ ಇಂತಹ ಪಟ್ಟಣಗಳೇ ಇಲ್ಲ; ಈ ಪಟ್ಟಣಕ್ಕೆ ನಾಲ್ಕು ಯುಗದಲ್ಲಿಯೂ ಕ್ರಮವಾಗಿ ವಸುಮತಿ, ಪದ್ಮನಗರ, ಏಕಚಕ್ರ, ಬಹುಧಾನ್ಯ ಎಂಬ ಹೆಸರುಗಳಾದುವು. ಎಂದು ಸಂತೋಷಪಟ್ಟು ನೋಡುತ್ತ ಬಂದು ನಾಲ್ಕು ವೇದಗಳಲ್ಲಿಯೂ ಪಂಡಿತರಾದವರೊಬ್ಬರ ಮನೆಯ ಮುಂಭಾಗದ ತೊಟ್ಟಿಯಲ್ಲಿ ಬೀಡುಬಿಟ್ಟು ಬ್ರಾಹ್ಮಣವೇಷದಿಂದ ಒಂದು ವರ್ಷ ಕಾಲವಿದ್ದರು. ಆ ಕಾಲದಲ್ಲಿ ಒಂದು ದಿನ

ಕಂ॥ ತುಂಬಿದ ರಕ್ತತೆಯಿಂ ನಿಜ
ಬಿಂಬಂ ವಾರುಣಿಯನೊಸೆದು ಸೇವಿಸೆ ನಾಣ್ಗೆ ।
ಟ್ಟಂಬೋಲ್ ತೇಜಂ ಮಸುಳ್ವಿನ
ಮಂಬರಮಂ ಬಿಸುಟನಾಗಳಂಬುಜಮಿತ್ರಂ ॥ ೨೩

ವ॥ ಆಗಳ್ ಸಂಧ್ಯಾವಂದನೆಗೆ ಧರ್ಮಪುತ್ರಾರ್ಜುನ ನಕುಲ ಸಹದೇವರ್ ಪೋದರನ್ನೆಗಮಿತ್ತ ಬೀಡಿನೊಳಿರ್ದ ಕೊಂತಿಯ ಭೀಮನ ಕರ್ಣೋಪಾಂತದೊಳ್-

ಕಂ॥ ಸಾರೆಯೊಳಲ್ವ ಮಹಾ ದ್ವಿಜ
ನಾರಿಯ ಮಮತಾವಿಪೂರಿತೋರ್ಜಿತ ರವದಿಂ ।
ಕಾರುಣ್ಯಾಕ್ರಂದನಮನಿ
ವಾರಿತಮೊರ್ಮೊದಲೆ ಬಂದು ತೀಡಿತ್ತಾಗಳ್ ॥ ೨೪

ವ॥ ಅದಂ ಕೇಳ್ದೀನಾನುಮೊಂದು ಕಾರಣಮಾಗಲೆವೇಳ್ಕುಮೀ ಪ್ರಲಾಪಮಂ ಬೆಸಗೊಂಡು ಬರ್ಪೆನೆಂದು ಭೀಮನನಿರಿಸಿ ಕೊಂತಿ ತಾನೆ ಪೋಗಿ-

ಚಂ॥ ಅಟಿ ಕುಡಲಾದ ಕೂಸು ನೆಲದೊಳ್ ಪೊರಳುತ್ತಿರೆ ಧರ್ಮಪತ್ನಿ ಬಾ
ಯಟಿದು ಕೊರಲ್ಗೆ ಪಾಯ್ದು ಪರಿದಾಡುವ ಬಾಲಕನಾದ ಶೋಕದಿಂ ।
ಗಟಗಟ ಕಣ್ಣನೀರ್ ಸುರಿಯೆ ಚಿಂತಿಪ ಪಾರ್ವನ ಶೋಕದೊಂದು ಪೊಂ
ಪುಟಿಯನೆ ನೋಡಿ ನಾಡೆ ಕರುಣಂ ತನಗಾಗಿರೆ ಕೊಂತಿ ಚಿಂತೆಯಿಂ॥ ೨೫

೨೩. ತುಂಬಿಕೊಂಡಿರುವ ಕೆಂಪು ಬಣ್ಣದಿಂದ (ಅನುರಕ್ತತೆಯಿಂದ) ತನ್ನ ಬಿಂಬವು ಪಶ್ಚಿಮದಿಕ್ಕನ್ನು ಪ್ರೀತಿಸಿ ಸೇವೆಮಾಡಲು (ಪ್ರೀತಿಸಿ ಮದ್ಯಪಾನವನ್ನು ಮಾಡಲು) ನಾಚಿಕೆಗೆಟ್ಟವನಂತೆ ಕಾಂತಿ ಮಂಕಾಗುತ್ತಿರಲು ಕಮಲಮಿತ್ರನಾದ ಸೂರ್ಯನು ಅಂಬರವನ್ನು (ಆಕಾಶವನ್ನೂ - ಬಟ್ಟೆಯನ್ನೂ) ಬಿಸಾಡಿದನು. (ಸೂರ್ಯನು ಅಸ್ತಮಿಸಿದನು ಎಂಬುದು ಭಾವ). ವ॥ ಆಗ ಸಂಧ್ಯಾವಂದನೆಗಾಗಿ ಧರ್ಮರಾಜ ಅರ್ಜುನ ನಕುಲ ಸಹದೇವರು ಹೋದರು. ಅಷ್ಟರಲ್ಲಿ ಈ ಕಡೆ ಬೀಡಿನಲ್ಲಿದ್ದ ಕುಂತಿ ಮತ್ತು ಭೀಮನ ಕಿವಿಗೆ ೨೪. ಸಮೀಪದಲ್ಲಿದ್ದ ಮಹಾಬ್ರಾಹ್ಮಣಿತಿಯ ಮಮತೆಯಿಂದಲೂ ಕರುಣೆಯಿಂದಲೂ ಕೂಡಿದ ಅಳುವ ಶಬ್ದವು ತಡೆಯಿಲ್ಲದೆ ಇದ್ದಕ್ಕಿದ್ದ ಹಾಗೆ ಬಂದು ಸೋಂಕಿತು. ವ॥ ಅದನ್ನೂ ಕೇಳಿ ಇದಕ್ಕೆ ಏನಾದರೂ ಕಾರಣವಿದ್ದೇ ಇರಬೇಕು. ಈ ಪ್ರಲಾಪವನ್ನು ವಿಚಾರಮಾಡಿ ಬರುತ್ತೇನೆ ಎಂದು ಭೀಮನನ್ನು ಅಲ್ಲಿ ಬಿಟ್ಟು ಕುಂತಿಯು ಹೋಗಿ ನೋಡಿದಳು. ೨೫. ಮದುವೆಯಿಲ್ಲದ ಅವನ ಮಗಳು ಅಳುತ್ತಿದ್ದಳು, ಅವನ ಹೆಂಡತಿಯು ನೆಲದ ಮೇಲೆ ಹೊರಳಾಡುತ್ತಿದ್ದಳು. ಕೊರಳನ್ನು ತಬ್ಬಿಕೊಂಡು ಅತ್ತು ಓಡಾಡುವ ಬಾಲಕನು ತನಗುಂಟಾದ ದುಃಖದಿಂದ ಗಳಗಳನೆ ಕಣ್ಣೀರನ್ನು ಸುರಿಸುತ್ತಿದ್ದನು. ಚಿಂತಿಸುತ್ತಿದ್ದ ಬ್ರಾಹ್ಮಣನ ದುಃಖಾತಿಶಯವನ್ನು ನೋಡಿ ತನಗೆ ವಿಶೇಷ ಕರುಣೆಯುಂಟಾಗಿರಲು

ವ॥ ನಿನಗಿಂತೀ ಪಿರಿದು ಶೋಕಮೆಂತಾದುದೆಂಬುದುಮಾ ಪಾರ್ವಂ ಕೊಂತಿಗಿಂತೆಂದಂ ಬಕನೆಂಬನೊರ್ವಸುರನೀ ಪೊೞಲ ತೆಂಕಣ ಬೆಟ್ಟದೊಳಿರ್ಪನಾತಂಗೆ ನಿಚ್ಚನೊಂದು ಮನೆಯೊಳೆರಡೆಮ್ಮೆವೋಜೆಯೊಳ್ ಪೂಡಿದ ಪನ್ನಿರ್ಕಂಡುಗದಕ್ಕಿಯ ಕೂೞುಮನದರ್ಕೆ ತಕ್ಕ ಪರಿಕರಮುಮನೊರ್ವ ಮಾನಸಂ ಕೊಂಡು ಪೋಪನಂತಾತಂಬೆರಸದೆಲ್ಲಮಂ ತಿಂದು ತಣಿಯದೆ ಪಲ್ಲಂ ತಿಂಬನದೊಂದು ದಿವಸ ತಪ್ಪಿದೊಡೀ ಪೊೞಲನಿತುಮಂ ತಿಂಬಂ ನಾಳಿನ ಬಾರಿಯೆಮ್ಮ ಮೇಲೆ ಬಂದುದೆಮ್ಮ ಮನೆಯೊಳಾನುಮೆಮ್ಮ ಧರ್ಮಪತ್ನಿಯುಂ ಮಗನುಂ ಮಗಳುಮಿಂತೀ ನಾಲ್ವರೆ ಮಾನಸರೆಮ್ಮ ಪೆಂಡಿತಿಯನೀವೆನಪ್ಪೊಡಾಕೆಯಿಂ ಬೞಿಯಮೀ ಕೂಸುಗಳಂ ನಡಪುವರಿಲ್ಲೀ ಮಗಳನೀವೆನಪ್ಪೊಡೆ ಕೊಡಗೂಸೆಂಬುದು ಪೆಱರೊಡವೆ ಮಗನನೀವೆನಪ್ಪೊಡೆ ಸಂತತಿಚ್ಛೇದಮುಂ ಪಿಂಡಚ್ಛೇದಮುಮಕ್ಕುಮದಱಿಂದೆನ್ನನೆ ಕುಡಲ್ವೇೞ್ಕುಮೆಂಬುದುಂ ಕೊಂತಿಯಿಂತೆಂದಳ್-

ಕಂ॥ ನಿಮ್ಮಾ ನಾಲ್ವರೊಳೊರ್ವರು
ಮಿಮ್ಮಿಡುಕಲ್ವೇಡ ಮಕ್ಕಳೊಳರೆನಗಯ್ವರ್ ।
ತಮ್ಮೊಳಗೆಸೆವಯ್ವರೊಳಂ
ನಾಮ್ಮಾಣದೆ ಬಕನ ಬಾರಿಗೊರ್ವನನೀವೆಂ ॥ ೨೬

ವ॥ ಎಂಬುದುಂ ಪಾರ್ವನಿಂತೆನಲ್ವೇಡ ಮಕ್ಕಳೊಳಾದ ಮೋಹಮೆಲ್ಲಾ ಜೀವಕ್ಕಂ ಸಮಾನಮೆಂಬುದುಂ ನೀಮಱಿಯಿರುಸಿರದಿರಿಮದರ್ಕೆ ತಕ್ಕ ಸವಕಟ್ಟಂ ಮಾಡಿಮೆಂದು ಬಂದು

ಕುಂತಿಯು ದುಃಖದಿಂದ ಬ್ರಾಹ್ಮಣನನ್ನು ಕುರಿತು ಪ್ರಶ್ನಿಸಿದಳು. ವ॥ ನಿನಗೆ ಇಷ್ಟು ದೊಡ್ಡ ದುಃಖ ಹೇಗಾಯಿತು ಎನ್ನಲು ಬ್ರಾಹ್ಮಣನು ಕುಂತಿಗೆ ಹೀಗೆ ಹೇಳಿದನು - ಬಕನೆಂಬ ರಾಕ್ಷಸನೊಬ್ಬನು ಈ ಪಟ್ಟಣಕ್ಕೆ ದಕ್ಷಿಣದಲ್ಲಿರುವ ಬೆಟ್ಟದಲ್ಲಿದ್ದಾನೆ. ಅವನಿಗೆ ನಿತ್ಯವೂ ಒಂದೊಂದು ಮನೆಯಿಂದ ಎರಡು ಕೋಣಗಳನ್ನು ಹೂಡಿರುವ ಗಾಡಿಯಲ್ಲಿ ತುಂಬಿದ ಹನ್ನೆರಡು ಖಂಡಗದಕ್ಕಿಯನ್ನೂ ಅದಕ್ಕೆ ಬೇಕಾಗುವಷ್ಟು ವ್ಯಂಜನಪದಾರ್ಥಗಳನ್ನೂ ಒಬ್ಬ ಮನುಷ್ಯನು ಕೊಂಡುಹೋಗುತ್ತಾನೆ. (ಬಕನು) ಅವನ ಸಮೇತ ಆ ಪದಾರ್ಥವೆಲ್ಲವನ್ನೂ ತಿಂದರೂ ತೃಪ್ತನಾಗದೆ ಕೋಪದಿಂದ ಹಲ್ಲನ್ನು ಕಡಿಯುತ್ತಾನೆ. ಒಂದು ದಿವಸ ತಪ್ಪಿದರೂ ಈ ಪಟ್ಟಣವೆಲ್ಲವನ್ನೂ ತಿಂದುಹಾಕುತ್ತಾನೆ. ನಾಳೆಯ ಸರದಿ ನನ್ನ ಮೇಲೆ ಬಂದಿದೆ. ನಮ್ಮ ಮನೆಯಲ್ಲಿ ನಾನೂ ನನ್ನ ಹೆಂಡತಿಯೂ ಮಗನೂ ಮಗಳೂ ಈ ನಾಲ್ಕೇ ಜನ (ಇರುವವರು). ಹೆಂಡತಿಯನ್ನು ಕೊಡೋಣವೆಂದರೆ ಅವಳು ಹೋದಬಳಿಕ ಈ ಮಕ್ಕಳನ್ನು ಸಾಕುವವರಿಲ್ಲ; ಮಗಳನ್ನು ಕೊಡೋಣವೆಂದರೆ ಕನ್ಯೆ ಪರರ ವಸ್ತು; ಮಗನನ್ನು ಕೊಡೋಣವೆಂದರೆ ಸಂತತಿಯು ಹರಿದು ಹೋಗುತ್ತದೆ ಮತ್ತು ಪಿಂಡದಾನ ಮಾಡುವವರಿಲ್ಲದಾಗುತ್ತಾರೆ. ಆದುದರಿಂದ ನನ್ನನ್ನೇ ಕೊಡಬೇಕಾಗಿದೆ ಎಂದನು. ಅದಕ್ಕೆ ಕುಂತಿಯು ಹೀಗೆಂದಳು-೨೬. ನಿಮ್ಮ ಈ ನಾಲ್ಕು ಜನಗಳಲ್ಲಿ ಯಾರೂ ಇನ್ನು ಮೇಲೆ ಭಯಪಡಬೇಡಿ. ನನಗೆ ಅಯ್ದು ಜನ ಮಕ್ಕಳಿದ್ದಾರೆ. ಪ್ರಸಿದ್ಧರಾದ ಆ ಅಯ್ವರಲ್ಲಿ ಒಬ್ಬನನ್ನು ನಾನು ಬಕನ ಸರದಿಗೆ ತಪ್ಪದೆ ಕೊಡುತ್ತೇನೆ. ವ॥ ಅದನ್ನು ಕೇಳಿ ಬ್ರಾಹ್ಮಣನು 'ಹೀಗೆ ಹೇಳಬೇಡ. ಮಕ್ಕಳ ಮೇಲಿನ ಮೋಹವು ಎಲ್ಲ ಜೀವಕ್ಕೂ ಸಮಾನ ಎಂದನು. ಕುಂತಿಯು ನಿಮಗೆ ತಿಳಿಯದು; ಮಾತನಾಡಬೇಡಿ ಅದಕ್ಕೆ

ತದ್ವೃತ್ತಾಂತಮೆಲ್ಲಮಂ ಭೀಮಸೇನಂಗಱಿಪಿದೊಡೆ ನಾಳಿನುಣಿಸನೆನಗೆ ದೊರೆಕೊಳಿಸಿ ಬಂದುದು ಕರಮೊಳ್ಳಿತಾಯ್ತೆಂದು ನಗುತಿರ್ಪನ್ನೆಗಂ ಮತ್ತಿನ ನಾಲ್ವರುಂ ಬಂದು ತದ್ವೃತ್ತಾಂತಮೆಲ್ಲಮಂ ಕೇಳ್ದು ನಮಗೀ ಪೊೞಲೊಳೊಂದು ಪರೋಪಕಾರಾರ್ಥಂ ಸಯ್ಪಿನಿಂ ದೊರೆಕೊಂಡುದೆಂದಿರುಳೆಲ್ಲಂ ಬಕನ ಪಡೆಮಾತನೆ ನುಡಿಯುತ್ತಿರ್ಪನ್ನೆಗಂ-

ಕಂ॥ ಒಡೆ ತಮೋಬಳಮಗಿದ
ಳ್ಬಡೆ ನಿಶಾಚರಬಲಂ ರಥಾಂಗಯುಗಂಗಳ್ ।
ಕೂಡೆ ಬಗೆ ಕೂಡೆ ನೇಸಱ್
ಮೂಡಿದುದು ಬಕಂಗೆ ಮಿಟ್ತು ಮೂಡುವ ತೆಱದಿಂ ॥ ೨೭

ವ॥ ಆಗಳ್ ಸಾಹಸಭೀಮಂ ತನ್ನ ಸಾಹಸಮಂ ತೋಱಲೆಂದು ಬಂದು ಪಾರ್ವನ ಮನೆಯ ಮುಂದಣ ಬಂಡಿಯ ಕೂೞಂ ಕೆಯ್ಕೊಂಡು ನಿಲ್ವುದುಂ ಪಾರ್ವಂತಿಯುಂ ಪಾರ್ವನುಂ ಪರಸಿ ಸೇಸೆಯನಿಕ್ಕಿ ಕಳಿಪೆ ಪೊೞಲಿಂ ಬಂಡಿಯನಟ್ಟಿಕೊಂಡು ರಕ್ಕಸನಿರ್ದೆಡೆಗೆಯ್ತಂದು-

ಕಂ॥ ದಾಡೆಗಳನಱೆಯೊಳಿಂಬಿಂ
ತೀಡುತ್ತುಂ ತೀವ್ರಮಾಗೆ ಬಂಡಿಯ ಬರವಂ ।
ನೋಡುತ್ತಿರ್ದಾ ಬಕನಂ
ನಾಡೆಯೆ ಅಂತರದೆ ಕಂಡು ಮುಳಿದಂ ಭೀಮಂ ॥ ೨೮

ಕಡೆಗಣ್ಣೊಳೆ ರಕ್ಕಸನಂ
ನಡೆ ನೋಡಿ ಕೊಲಲ್ಕೆ ಸತ್ತ್ವಮಪ್ಪಂತಿರೆ ಮುಂ ।
ಪೊಡೆವೆಂ ಕೂೞಂ ಬೞಿಯಂ
ಪೊಡೆವೆಂ ರಕ್ಕಸನನೆಂದು ಸಾಹಸಭೀಮಂ ॥ ೨೯

ಬೇಕಾದ ಸಿದ್ಧತೆಯನ್ನು ಮಾಡಿ ಎಂದು ಹೇಳಿ ಆ ವಿಷಯವೆಲ್ಲವನ್ನೂ ಭೀಮಸೇನನಿಗೆ ತಿಳಿಸಲು ನಾಳೆಯ ಊಟವನ್ನು ನನಗೆ ಸಿದ್ಧಪಡಿಸಿ ಬಂದುದು ಬಹಳ ಒಳ್ಳೆಯ ದಾಯಿತು ಎಂದು ಸಂತೋಷಿಸಿದರು. ಉಳಿದ ನಾಲ್ಕು ಜನರೂ ಬಂದು ಆ ವಿಷಯವೆಲ್ಲವನ್ನೂ ಕೇಳಿ ಈ ಪಟ್ಟಣದಲ್ಲಿ ಇತರರಿಗೆ ಉಪಕಾರಮಾಡುವ ಸಂದರ್ಭವು ಅದೃಷ್ಟದಿಂದ ಪ್ರಾಪ್ತವಾಯಿತು ಎಂದು ರಾತ್ರಿಯೆಲ್ಲ ಬಕನ ವಿಷಯವಾದ ಮಾತನ್ನೇ ಆಡುತ್ತಿದ್ದರು. ಅಷ್ಟರಲ್ಲಿ ೨೭. ಕತ್ತಲೆಯ ರಾಶಿಯು ಒಡೆಯಿತು ರಾಕ್ಷಸಸಮೂಹವು ಹೆದರಿ ನಡುಗಿತು. ಚಕ್ರವಾಕಮಿಥುನವು ಕೂಡಿಕೊಳ್ಳಲು ಮನಸ್ಸುಮಾಡಿತು. ಬಕನಿಗೆ ಸಾವು ಹುಟ್ಟುವ ರೀತಿಯಲ್ಲಿ ಸೂರ್ಯ ಹುಟ್ಟಿದನು. ವ॥ ಆಗ ಸಾಹಸಭೀಮನು ಪರಾಕ್ರಮವನ್ನು ತೋರಬೇಕೆಂದು ಬಂದು ಬ್ರಾಹ್ಮಣನ ಮನೆಯ ಮುಂಭಾಗದಲ್ಲಿದ್ದ ಗಾಡಿಯ ಅನ್ನವನ್ನು ತೆಗೆದುಕೊಂಡು ನಿಂತನು. ಬ್ರಾಹ್ಮಣಿತಿಯೂ ಬ್ರಾಹ್ಮಣನೂ ಆಶೀರ್ವಾದಮಾಡಿ ತಲೆಯ ಮೇಲೆ ಅಕ್ಷತೆಯನ್ನು ಚೆಲ್ಲಿ ಕಳುಹಿಸಿದರು. ಪಟ್ಟಣದಿಂದ ಬಂಡಿಯನ್ನು ಹೊಡೆದುಕೊಂಡು ರಾಕ್ಷಸನಿದ್ದ ಸ್ಥಳಕ್ಕೆ ಭೀಮನು ಬಂದನು. ೨೮. ತನ್ನ ಕೋರೆಹಲ್ಲುಗಳನ್ನು ಕಲ್ಲಿನ ಮೇಲೆ ಹರಿತವಾಗುವ ಹಾಗೆ ನಿಧಾನವಾಗಿ ಮಸೆಯುತ್ತ ಬಂಡಿಯಬರವನ್ನೇ ಎದಿರುನೋಡುತ್ತಿದ್ದ ಬಕನು ಬಹಳ ದೂರದಿಂದಲೇ ಕಂಡು ರೇಗಿದನು. ೨೯. ಕಡೆಗಣ್ಣಿನಿಂದಲೇ ರಾಕ್ಷಸನನ್ನು ದೃಷ್ಟಿಸಿ ನೋಡಿ ಕೊಲ್ಲುವುದಕ್ಕೆ

ವ॥ ಅಂತು ತನ್ನ ತಂದ ಬಂಡಿಯ ಕೂಟಿಲ್ಲಮಂ ಪತ್ತೆಂಟು ತುತ್ತಿನೊಳೆ ಸಮೆಯೆ ತುತ್ತುವುದಂ ಕಂಡು ರಕ್ಕಸನಿವನ ಪಾಂಗಂ ಮೆಚ್ಚಲಾಱೆನೆನ್ನುಮಿಂತು ಸಮೆಯೆ ತುತ್ತುಗುಮೆಂದು ಬಕಂ ಬಕವೇಷದಿಂ ಪೆಱಗಣ ದೆಸೆಗೆ ಮೆಲ್ಲನೋಸರಿಸಿ ಬಂದು-

ಕಂ॥ ಎರಡುಂ ಕೆಲನುಮನೆರಡುಂ
ಕರ ಪರಿಘದಿನಡಸಿ ಗುರ್ದಿ ಪೆಱಪಿಂಗುವನಂ ।
ಮುರಿದಡಸಿ ಪಿಡಿದು ಘಟ್ಟಿಸಿ
ಪಿರಿಯಱೆಯೊಳ್ ಪೊಯ್ಯನಸಗವೊಯ್ಲಂ ಭೀಮಂ ॥ ೩೦

ವ॥ ಅಂತು ಪೊಯ್ದೊಡೆ ಪೊಡೆಸೆಂಡಂ ಪೊಯ್ದಂತೆ ಮೇಗೊಗೆದು ಸೆಣಸೆ-

ಉ॥ ಬಾರಿಯನಿಟ್ಟು ಕೂಡೆ ಪೊೞಲಂ ತವೆ ತಿಂದನನಾರ್ತರಿಲ್ಲಣಂ
ಬಾರಿಸಲಾರುಮಿನ್ ಜವನ ಬಾರಿಯೊಳಿಕ್ಕುವೆನೆಂದು ಪರ್ವೆ ಭೋ ॥
ರ್ಭೋರೆನೆ ಬೀಸೆ ತದ್ವದನ ಗಹ್ವರದಿಂ ಬಿಸುನೆತ್ತರುಣ್ಮೆ ಭೋ
ರ್ಭೋರೆನೆ ಕೊಂದನಂಕದ ಬಳಾಧಿಕನಂ ಬಕನಂ ವೃಕೋದರಂ॥ ೩೧

ವ॥ ಅಂತು ಕೊಂದು ನೀಲಗಿರಿಯನೆ ಪಿಡಿದೆೞೆವಂತೆ ರಕ್ಕಸನ ಕರಿಯ ಪಿರಿಯೊಡಲ ನೞೆದು ತಂದು ಪೊೞಲ ನಡುವಿಕ್ಕಿದಾಗಳ್ ಪೊೞಲೆಲ್ಲಂ ಚೋದ್ಯಂಬಟ್ಟು ಬದ್ದವಣದ

ಶಕ್ತಿ ಬರುವಂತೆ ಮೊದಲು ಅನ್ನವನ್ನು ಹೊಡೆಯುತ್ತೇನೆ (ತೃಪ್ತಿಯಾಗಿ ತಿನ್ನುತ್ತೇನೆ), ಆಮೇಲೆ ಆ ರಾಕ್ಷಸನನ್ನು ಹೊಡೆಯುತ್ತೇನೆ (ಧ್ವಂಸಮಾಡುತ್ತೇನೆ) ಎಂದು ಸಾಹಸಭೀಮನು ವ॥ ತಾನು ತಂದ ಬಂಡಿಯ ಅನ್ನವೆಲ್ಲವನ್ನೂ ಹತ್ತೆಂಟುತುತ್ತುಗಳಲ್ಲಿಯೇ ಮುಗಿಸುವ ಹಾಗೆ ಬಾಯಿಗೆ ತುಂಬಿಕೊಳ್ಳುವುದನ್ನು ರಾಕ್ಷಸನು ನೋಡಿ ಇವನ ರೀತಿಯನ್ನು ನಾನು ಮೆಚ್ಚಲಾರೆ. ನನ್ನನ್ನು ಇವನು ಪೂರ್ಣವಾಗಿ ನುಂಗಿ ಬಿಡುವಂತಿದೆ ಎಂದು ಬಕಪಕ್ಷಿಯ ರೂಪದಿಂದ ಹಿಂದುಗಡೆಗೆ ಸರಿದು ಬಂದು ೩೦. ಅವನ ಎರಡು ಪಕ್ಕಗಳನ್ನೂ ತನ್ನ ಗದೆಯಿಂತಿದ್ದ ಎರಡು ಕೈಗಳಿಂದ ಒಡಿದು ಗುದ್ದಿ ಹಿಂತಿರುಗಿದನು. ಹಾಗೆ ಹೋಗುತ್ತಿದ್ದವನನ್ನು ಭೀಮನು ಹಿಂತಿರುಗಿ ಘಟ್ಟಿಯಾಗಿ ಹಿಡಿದುಕೊಂಡು ದೊಡ್ಡ ಬಂಡೆಯ ಮೇಲೆ ಬಡಿದು ಅಗಸನ ಬಡಿತದಂತೆ ಬಡಿದನು. ವ॥ ಹಾಗೆ ಹೊಡೆಯಲು, ಬಕನು ಪುಟಚೆಂಡನ್ನು ಹೊಡೆದಂತೆ ಮೇಲಕ್ಕೆ ಹಾರಿದನು. ೩೧. ಭೀಮನು ಸ್ವಲ್ಪ ಅವಕಾಶ ಮಾಡಿಕೊಂಡು ಅಲ್ಪಕಾಲದಲ್ಲಿ ಪಟ್ಟಣವನ್ನೇ ನಾಶಮಾಡಿದ ಇವನನ್ನು ಸ್ವಲ್ಪ ಮಾತ್ರವೂ ತಡೆಯಲು ಶಕ್ತರಾದವರು ಯಾರೂ ಇಲ್ಲ. ಇನ್ನು ಮೇಲೆ ಇವನನ್ನು ನಾನು ಯಮನ ಸರದಿಗೆ ಕಳುಹಿಸುತ್ತೇನೆ ಎಂದು ದೀರ್ಘವಾಗಿ ಭೋರ್ ಎಂದು ಶಬ್ದಮಾಡುತ್ತ ಅವನನ್ನು ಬೀಸಲು ಅವನ ಮುಖವೆಂಬ ಗುಹೆಯಿಂದ ಬಿಸಿರಕ್ತವು ಹರಿಯಿತು. ಪರಾಕ್ರಮಿಯಾದ ಆ ಬಕಾಸುರನನ್ನು ಅತಿಶಯವಾದ ಶಕ್ತಿಯುಳ್ಳ ಭೀಮನು ಕ್ಷಣಮಾತ್ರದಲ್ಲಿ ಕೊಂದುಹಾಕಿದನು. ವ॥ ಹಾಗೆ ಕೊಂದು ನೀಲಪರ್ವತವನ್ನೇ ಹಿಡಿದೆಳೆಯುವಂತೆ ರಾಕ್ಷಸನ ಕರಿಯ ಹಿರಿಯ ಶರೀರವನ್ನು ಭೀಮನು ಎಳೆದುತಂದು ಪಟ್ಟಣದ ಮಧ್ಯಭಾಗವಲ್ಲಿ ಇಟ್ಟನು. ಪಟ್ಟಣವೆಲ್ಲ ಆಶ್ಚರ್ಯಪಟ್ಟು ಮಂಗಳವಾದ್ಯಗಳನ್ನು ಬಾಜನ

ಪಱಿಗಳಂ ಪೊಯ್ಸಿ ಸಾಹಸಭೀಮನ ಸಾಹಸಮನಳವಲ್ಲದೆ ಪೊಗೞ್ದು ತಮ್ಮಾಳ್ದನುಮನಿಷ್ಟ ದೈವಮುಮಂ ಕೊಂಡಾಡುವಂತಯ್ವರುಮಂ ಕೊಂಡಾಡೆ ಕೆಲವು ದಿವಸಮಿರ್ಪನ್ನೆಗಮೊಂದು ದಿವಸಮಶಿಶಿರಕಿರಣನಪರಜಲನಿಧಿತಟನಿಕಟವರ್ತಿಯಾದನಾಗಳೊರ್ವ ಪಾರ್ವಂ ವಿಶೀರ್ಣಜೀರ್ಣ ಕರ್ಪಟಾವೃತಕಟಿತಟನುಮಾಗಿ ಬಂದು ಕಣ್ಮುಚ್ಚಲೆಡೆವೇಡೆ ತನಗವರ್ ಪಾಸಲ್ಕೊಟ್ಟ ಕೃಷ್ಣಾಜಿನನಮಂ ಪಾಸಿ ಪಟ್ಟಿರ್ದನಂ ಧರ್ಮಪುತ್ರನಾವ ನಾಡಿಂ ಬಂದಿರೆಲ್ಲಿಗೆ ಪೋದಪಿರೆಂದೊಡುತ್ತರಾಪಥದ ಹಸ್ತಿನಪುರದಿಂ ಬಂದೆಮೆಂದೊಡಲ್ಲಿ ಪಾಂಡವರ ಪಡೆಮಾತಾವುದು ಧೃತರಾಷ್ಟ್ರ ಸುಯೋಧನ ರಿರ್ಪಂದಮಾವುದೆಂದು ಬೆಸಗೊಳೆ-

ಮ॥ ಮನದೊಳ್ ಕೂರದ ಪಾಂಡುರಾಜಸುತರುಂ ಲಾಕ್ಷಾಗೃಹೋಗ್ರಾಗ್ನಿಯಾ
ನನದೊಳ್ ಮಟ್ಗಿದರೆನ್ನ ಪುಣ್ಯಮಱಿಯರ್ ವೇಮಾಱ(?)ರಿನ್ನಾರೊ ಬೇ ।
ರನೆ ಕಿೞ್ತಿಕ್ಕಿದೆನೀಗಳಾಯ್ತು ಧರೆ ನಿರ್ದಾಯಾದ್ಯಮೆಂದಾ ಸುಯೋ
ಧನನಾಳುತ್ತಿರೆ ಸಂದ ಹಸ್ತಿನಪುರಂ ಸಂತಂ ಬಸಂತಂ ಕರಂ ॥ ೩೨

ವ॥ ಅದಲ್ಲದೆಯುಂ ಯಜ್ಞಸೇನನೆಂಬ ಮೊದಲ ಪೆಸರ ಪಾಂಚಾಳದೇಶದರಸಂ ದ್ರುಪದನೆಂಬಂ ದ್ರೋಣನೊಳಾದ ಪರಿಭವಮಂ ನೆನೆದಾತನಂ ಕೊಲ್ವನ್ನನೊರ್ವ ಮಗನುಮಂ ವಿಕ್ರಮಾರ್ಜನಂಗೆ ಪೆಂಡಿತಿಯಪ್ಪನ್ನಳೊರ್ವ ಮಗಳುಮಂ ಪಡೆದಲ್ಲದಿರೆನೆಂದು ಪೂಣ್ದು ಪೋಗಿ

ಮಾಡಿಸಿ ಸಾಹಸಭೀಮನ ಪರಾಕ್ರಮವನ್ನು ಅಳತೆಯಿಲ್ಲದಷ್ಟು ಹೊಗಳಿ ತಮ್ಮ ಸ್ವಾಮಿಯನ್ನು ಇಷ್ಟದೈವವನ್ನು ಕೊಂಡಾಡುವಂತೆ ಅಯ್ದು ಜನರನ್ನೂ ಕೊಂಡಾಡಿದರು. ಅಲ್ಲಿ ಪಾಂಡವರು ಕೆಲವು ದಿನವಿರುವಷ್ಟರಲ್ಲಿ ಒಂದು ದಿನ ಸೂರ್ಯಾಸ್ತಸಮಯದಲ್ಲಿ ಒಬ್ಬ ಬ್ರಾಹ್ಮಣನು ವಿಶೇಷವಾಗಿ ಹರಿದು ಹೋದ ಬಟ್ಟೆಯಿಂದ ಮುಚ್ಚಿದ ಸೊಂಟ ಪ್ರದೇಶವನ್ನುಳ್ಳವನಾಗಿ ಬಂದು ಮಲಗಲು ಸ್ಥಳವನ್ನು ಕೇಳಿದನು. ಅವರು ಕೊಟ್ಟ ಜಿಂಕೆಯ ಚರ್ಮವನ್ನೇ ಹಾಸಿಕೊಂಡು ಮಲಗಿದ್ದ ಅವನನ್ನು ಧರ್ಮರಾಜನು ಯಾವ ನಾಡಿನಿಂದ ಬಂದಿರಿ, ಎಲ್ಲಿಗೆ ಹೋಗುತ್ತಿದ್ದೀರಿ ಎಂದು ಪ್ರಶ್ನಿಸಿದನು. ಅವನು ಉತ್ತರಾಪಥದ ಹಸ್ತಿನಾಪಟ್ಟಣದಿಂದ ಬಂದೆವು ಎಂದನು. ಧರ್ಮರಾಜನು ಅಲ್ಲಿ ಪಾಂಡವರ ಸುದ್ದಿಯೇನು? ಧೃತರಾಷ್ಟ್ರ ದುರ್ಯೋಧನರಿರುವ ರೀತಿ ಯಾವುದು ಎಂದು ಕೇಳಿದನು. ೩೨. ಅದಕ್ಕೆ ಅವನು ನನ್ನ ಶತ್ರುಗಳಾದ ಪಾಂಡುಸುತರು ಅರಗಿನ ಮನೆಯ ಭಯಂಕರವಾದ ಬೆಂಕಿಯ ಮುಖದಲ್ಲಿ ನಾಶವಾದರು. ಇದು ನನ್ನ ಅದೃಷ್ಟ, ಅಸಾಧ್ಯರಾದವರೂ ಮೋಸಹೋಗದಿರುವವರು ಯಾರಿದ್ದಾರೆ ಎನ್ನುವ ಹಾಗೆ ಈ ವೈರಿಗಳನ್ನು ಬೇರುಸಹಿತ ಕಿತ್ತುಹಾಕಿದ್ದೇನೆ, ಈಗ ಈ ರಾಜ್ಯವು ದಾಯಾದಿಗಳಿಲ್ಲದ ಹಾಗಾಯಿತು- ಎಂದು ದುರ್ಯೋಧನನು ರಾಜ್ಯಭಾರಮಾಡುತ್ತಿದ್ದಾನೆ, ಪ್ರಸಿದ್ಧವಾದ ಹಸ್ತಿನಪುರವು ಯಾವಾಗಲೂ ಪೂರ್ಣವಾಗಿ ಸಂತೋಷಭರಿತವಾಗಿದೆ ಎಂದನು. ವ॥ ಅಷ್ಟೇ ಅಲ್ಲದೆ ಯಜ್ಞಸೇನನೆಂಬ ಮೊದಲಿನ ಹೆಸರಿನಿಂದ ಕೂಡಿದ ಪಾಂಚಾಲದೇಶದ ರಾಜನಾದ ದ್ರುಪದನೆಂಬುವನು ದ್ರೋಣನಿಂದಾದ ಸೋಲನ್ನು ನೆನೆಸಿಕೊಂಡು ಅವನನ್ನು ಕೊಲ್ಲುವಂತಹ ಮಗನನ್ನೂ ವಿಕ್ರಮಾರ್ಜುನನಿಗೆ ಹೆಂಡತಿಯಾಗುವಂತಹ ಒಬ್ಬ ಮಗಳನ್ನೂ ಪಡೆಯದೇ ಇರುವುದಿಲ್ಲ ಎಂದು ಪ್ರತಿಜ್ಞೆ

**ಪಯೋವ್ರತನೆಂಬ ದಿವ್ಯ ಮುನಿಪತಿಯಿಂ ಪುತ್ರಕಾಮೇಷ್ಟಿಗೆಯ್ಸಿ ಹೋಮಕುಂಡದಲ್ಲಿ ಧಗಧಗಿಸುವ ಜ್ವಾಲಾಮಾಲೆಗಳೊಳ್ ಕಿಱ್ತಿಬಾಳುಮತ್ತಪರಮುಮಭೇದ್ಯ ಕವಚಮುಂಬೆರಸೊಗೆದ ಧೃಷ್ಟದ್ಯುಮ್ನನೆಂಬ ಮಗನುಮಂ ಜ್ವಾಳಾಮಾಳಿನಿಯೊಗೆವಂತೊಗೆದ ಕೃಷ್ಣೆಯೆಂಬ ಮಗಳುಮಂ ಪಡೆದನಾ ಹೋಮಾಗ್ನಿಯೊಳ್ ಪುಟ್ಟಿದೊಂದು ದಿವ್ಯ ಚಾಪಮುಮಯ್ದು ದಿವ್ಯ ಶರಮೊಳವಾ ಬಿಲ್ಲನೇಱಿಸಿ ಆ ಸರಲ್ಗಳಿಂದಾತನ ಮನೆಯ ಮುಂದೆ ನಭದೊಳ್ ನಲಿನಲಿದಾಡುವ ಜಂತ್ರದ ಮೀನನೆಚ್ಚನು ಮಾಕೆಗೆ ಗಂಡನಕ್ಕುಮೆಂದಾದೇಶಮಂತಪ್ಪ ಸಾಹಸಪುರುಷಂ ವಿಕ್ರಮಾರ್ಜುನನಲ್ಲದೆ ಪೆಱರಿಲ್ಲೆಂಬರದಱೆಂದಿನ್ನುಂ ಪಾಂಡವರೊಳರೆಂಬ ಮಾತುಗಳಂ ಬುದ್ಧಿಯೊಡೆಯರಾಡಾನುಂ ನುಡಿವರ್ ದ್ರುಪದನುಮೀಗಳಾ ಕೂಸಿಂಗೆ ಸಯಂಬರಮಂ ಮಾಡಲೆಂದು ನೆಲದೊಳುಳ್ಳರಸು ಮಕ್ಕಳೆಲ್ಲರ್ಗಂ ಬೞಿಯನಟ್ಟಿದೊಡೆ ದುರ್ಯೋಧನಾದಿಗಳ್ ಮೊದಲಾದನೇಕ ದೇಶಾಧೀಶ್ವರರೆಲ್ಲಂ ಛತ್ರವತಿಯೆಂಬುದು ದ್ರುಪದನ ಪೊೞಲಾ ಪೊೞಲ್ಗೆ ವಂದಿರ್ದರಾನಲ್ಲಿಂದಂ ಬಂದೆನೆಂದು ಪೇೞೆ ತದ್ವೃತ್ತಾಂತಮೆಲ್ಲಮಂ ಕೇಳ್ದು ತಮ್ಮೊಳಾಳೋಚಿಸಿ-**

**ಮ॥ ತಲೆಯೊಳ್ ಸೀರೆಯನಿಕ್ಕಿ ಕೆಮ್ಮನೆನಿತಂ ಪೂಣ್ದಿರ್ಪಮುಗ್ರಾರಿ ವಂ<br>ಶ ಲತಾವಲ್ಲರಿಗಳ್ಗೆ ದಾವಶಿಖಿವೊಲ್ ಮೆಯ್ದೋಱೆ ತದ್ದ್ರೌಪದೀ ।<br>ಲಲನಾವ್ಯಾಜದಿನೀಗಳೊಂದೆ ಪೊೞಲೊಳ್ ಸಂದಿರ್ದ ಭಾಸ್ವತ್ಸುಹೃ<br>ದ್ದಲಕಂ ಮಾರ್ವಲಕಂ ಗುಣಾರ್ಣವ ಶರಪ್ರಾಗಲ್ಭ್ಯಮಂ ತೋಱುವಂ ॥೩೩**

ಮಾಡಿದನು. ಪಯೋವ್ರತನೆಂಬ ದೇವಋಷಿಯಿಂದ ಪುತ್ರಕಾಮೇಷ್ಟಿಯಾಗವನ್ನು ಮಾಡಿಸಿದನು. ಹೋಮಕುಂಡದಲ್ಲಿ ಧಗಧಗಿಸಿ ಉರಿಯುವ ಜ್ವಾಲೆಗಳ ಸಮೂಹದಲ್ಲಿ ಒರೆಯಿಂದ ಹೊರಸೆಳೆದ ಕತ್ತಿಯನ್ನೂ ಗುರಾಣಿಯನ್ನೂ (ಭೇದಿಸಲಾಗದ) ಒಡೆಯಲಾಗದ ಕವಚವನ್ನೂ ಕೂಡಿಕೊಂಡು ಧೃಷ್ಟದ್ಯುಮ್ನನೆಂಬ ಮಗನೂ ಜ್ವಾಲಾಮಾಲಿನೀದೇವಿಯಂತಿರುವ ಕೃಷ್ಣೆಯೆಂಬ ಮಗಳೂ ಹುಟ್ಟಿದರು. ಆ ಹೋಮಾಗ್ನಿಯಲ್ಲಿಯೇ ಒಂದು ಶ್ರೇಷ್ಠವಾದ ಬಿಲ್ಲೂ ಅಯ್ದು ಶ್ರೇಷ್ಠವಾದ ಬಾಣಗಳೂ ಉದ್ಭವಿಸಿದವು. ಆ ಬಿಲ್ಲನ್ನು ಹೆದೆಯೇರಿಸಿ ಆ ಬಾಣಗಳಿಂದ ಆತನ ಮನೆಯ ಮುಂದೆ ಆಕಾಶದಲ್ಲಿ ನಲಿನಲಿದು ಆಡುವ ಯಂತ್ರದ ಮೀನನ್ನು ಹೊಡೆಯುವವನು ಆಕೆಗೆ ಗಂಡನಾಗುತ್ತಾನೆ ಎಂಬುದು (ಆದೇಶ) ನಿಯಮ. ಅಂತಹ ಸಾಹಸ ಪುರುಷನು ವಿಕ್ರಮಾರ್ಜುನನಲ್ಲದೆ ಬೇರೆಯವರಿಲ್ಲ ಎನ್ನುವುದರಿಂದ ಪಾಂಡವರು ಇನ್ನೂ ಇದ್ದಾರೆ ಎಂಬ ಮಾತುಗಳನ್ನು ಬುದ್ಧಿವಂತರೆಲ್ಲರೂ ಹೇಳುತ್ತಿದ್ದಾರೆ. ಈಗ ದ್ರುಪದನು ಆ ಕನ್ಯೆಗೆ ಸ್ವಯಂವರವನ್ನು ಮಾಡಬೇಕೆಂದು ಭೂಮಿಯಲ್ಲಿರುವ ಎಲ್ಲ ರಾಜಕುಮಾರರಿಗೂ ದೂತರ ಮೂಲಕ ಸಮಾಚಾರವನ್ನು ಕಳುಹಿಸಿದ್ದಾನೆ. ದುರ್ಯೋಧನನೇ ಮೊದಲಾದ ಅನೇಕ ರಾಜರುಗಳೆಲ್ಲ ದ್ರುಪದನ ಆ ಛತ್ರವತಿ ಎಂಬ ಪಟ್ಟಣಕ್ಕೆ ಬಂದಿದ್ದಾರೆ. ನಾನು ಅಲ್ಲಿಂದಲೇ ಬಂದೆ ಎಂದನು. ಆ ವೃತ್ತಾಂತವನ್ನೆಲ್ಲ ಕೇಳಿ ಪಾಂಡವರು ತಮ್ಮಲ್ಲಿ ಆಲೋಚಿಸಿದರು ೩೩. ಅರ್ಜುನ, ನಾವು ತಲೆಯ ಮೇಲೆ ಬಟ್ಟೆಯನ್ನೂ ಹಾಕಿಕೊಂಡು ಎಷ್ಟು ಕಾಲ ಸುಮ್ಮನೆ ಪ್ರತಿಜ್ಞೆ ಮಾಡಿಕೊಂಡಿರುವುದು? ಭಯಂಕರವಾದ ಶತ್ರುಗಳೆಂಬ ಬಳ್ಳಿಯ ಕುಡಿಗಳಿಗೆ ಕಾಡುಗಿಚ್ಚಿನಂತೆ ನಮ್ಮನ್ನು ಪ್ರಕಟಿಸಿಕೊಂಡು ಆ ದ್ರೌಪದೀಕನ್ಯೆಯ ನೆಪದಿಂದ ಈಗ

ವ॥ ಎಂದು ನಿಶ್ಚಯಿಸಿ ತಮ್ಮ ಬಗೆದ ಬಗೆಯೊಳ್ ಪರಾಶರಮುನೀಂದ್ರೋಪದೇಶ ಮೊಡಂಬಡೆ ಪಾಂಡವರೇಕಚಕ್ರದಿಂ ಪೊಱಮಟ್ಟು ಶಕುನಂಗಳೆಲ್ಲಮುತ್ತರೋತ್ತರಂ ತಿರ್ದುವಿನ ಮುತ್ತರಾಭಿಮುಖರಾಗಿ ಪಯಣಂಬೋಗಿ ಕೆಲವಾನುಂ ದಿವಸಕ್ಕೆ ಯಮುನಾನದೀತಟನಿಕಟವರ್ತಿ ಯಪ್ಪಂಗದಪರ್ಣವೆಂಬಡವಿಯೊಳಗನೆ ಬರೆವರೆ ದಿನಕರಬಿಂಬಾಂಬುಜಮಂಬರಸರೋವರದಿಂ ಪತ್ತುವಿಡುವುದುಂ ಕವಿದ ಕಟ್ತಲೆಯಗುರ್ವಾಗೆ ತಮೋಪಶಮನನಿಮಿತ್ತಮುರಿವ ಕೊಳ್ಳಿಯಂ ಪಿಡಿದು ಜಗುನೆಯಂ ಪಾಯ್ವಾಗಳಾ ಬನಮನಾಳ್ವ ಕುಬೇರನಾಯಕನಂಗದಪರ್ಣನೆಂಬ ಗಂಧರ್ವಂ ಜಳಕ್ರೀಡೆಯಾಡುತಿರ್ದನಿಬರಿಂ ಮುಂದೆ ಬರ್ಪ ವಿಕ್ರಮಾರ್ಜುನನ ಪಾದಾಭಿಘಾತದೊಳುಚ್ಚಳಿಸುವ ನೀರ ಸಪ್ಪುಳುಮಂ ಕೇಳ್ದು ಪಿಡಿದ ಕೊಳ್ಳಿಯ ಬೆಳಗುಮಂ ಕಂಡು ಬೆಳಗಂ ಕಂಡ ಪತಂಗದಂತೆ ಮಾಣದೆಯ್ತಂದು–

ಮ॥ ಬನಮೆನ್ನಾಳ್ವ ಬನಂ ನಿಶಾಬಲಮಿದಿಂತಸ್ಮದ್ಬಲಂ ಧೂರ್ತನಯ್
ನಿನಗೀ ಪೊಟ್ತಱೊಳಿತ್ತ ಬರ್ಪದಟನಿಂತಾರಿತ್ತರೆಂದಾಂತೊಡಾ ।
ತನನಾ ಕೊಳ್ಳಿಯೊಳಿಟ್ಟೊಡಂತದು ಲಯಾಂತೋಗ್ರಾಗ್ನಿಯಂತಟ್ಟೆ ಬಂ
ದೆನಸುಂ ಮಾಣದೆ ಬಾಗಿದಂ ಪದಯುಗಕ್ಕಾರೂಢಸರ್ವಜ್ಞನಾ ॥ ೩೪

ವ॥ ಅಂತು ತಾಗಿ ಬಾಗಿದಂತಾಗಿ ಗಂಧರ್ವಂ ಕೊಂತಿವೆರಸಱುವರುಮಂ ತನ್ನ ಬೀಡಿಂಗೊಡಗೊಂಡೊಯ್ದತಿ ಪ್ರೀತಿಯಿಂ ಬಿರ್ದನಿಕ್ಕಿ–

ಒಂದೇ ಪಟ್ಟಣದಲ್ಲಿ ಸೇರಿರುವ ಪ್ರತಾಪಶಾಲಿಗಳಾದ ಮಿತ್ರವರ್ಗಕ್ಕೂ ಶತ್ರುವರ್ಗಕ್ಕೂ ನಮ್ಮ ಬಾಣಕೌಶಲವನ್ನು ತೋರಿಸೋಣ ವ॥ ಎಂದು ನಿಶ್ಚಯಿಸಿಕೊಂಡು ತಾವು ಯೋಚಿಸಿದ ರೀತಿಯಲ್ಲಿಯೇ ವ್ಯಾಸಮಹರ್ಷಿಗಳ ಉಪದೇಶವೂ ಹೊಂದಿಕೊಳ್ಳಲು ಪಾಂಡವರು ಏಕಚಕ್ರಪುರದಿಂದ ಹೊರಟರು. ಶಕುನಗಳೆಲ್ಲ ತಮ್ಮ ಅಭಿವೃದ್ಧಿಯನ್ನೇ ಸೂಚಿಸಿದುವು. ಉತ್ತರದಿಕ್ಕಿಗೆ ಅಭಿಮುಖವಾಗಿ ಪ್ರಯಾಣಮಾಡಿ ಕೆಲವು ದಿವಸವಾದ ಮೇಲೆ ಯಮುನಾನದಿಯ ದಡಕ್ಕೆ ಹತ್ತಿರವಿರುವ ಅಂಗದಪರ್ಣವೆಂಬ ಕಾಡನ್ನು ಪ್ರವೇಶಿಸಿದರು. ಸೂರ್ಯಾಸ್ತವಾಯಿತು. ಕವಿದ ಕತ್ತಲೆಯು ಅತಿಶಯವಾಗಲು ಕತ್ತಲೆಯನ್ನು ಹೋಗಲಾಡಿಸುವುದಕ್ಕಾಗಿ ಉರಿಯುವ ಕೊಳ್ಳಿಯನ್ನು ಹಿಡಿದು ಯಮುನಾನದಿಯನ್ನು ಹಾಯ್ದು ಹೋದರು. ಆ ಕಾಡನ್ನು ಆಳುತ್ತಿದ್ದ ಕುಬೇರನಾಯಕ ನಾಗಿದ್ದ ಅಂಗದಪರ್ಣನೆಂಬ ಹೆಸರಿನ ಗಂಧರ್ವನು ನೀರಾಟವಾಡುತ್ತಿದ್ದನು. ಎಲ್ಲರಿಗಿಂತ ಮುಂದೆ ಬರುತ್ತಿದ್ದ ವಿಕ್ರಮಾರ್ಜುನನ ಕಾಲಿನ ತುಳಿತದಿಂದ ಮೇಲಕ್ಕೆ ಹಾರುವ ನೀರಿನ ಶಬ್ದವನ್ನು ಕೇಳಿ ಅವರು ಹಿಡಿದಿದ್ದ ಕೊಳ್ಳಿಯ ಬೆಳಗನ್ನು ನೋಡಿ ಬೆಳಕನ್ನು ಕಂಡ ಪತಂಗದ ಹುಳುವಿನಂತೆ ತಡೆಯದೆ ಅವರ ಮೇಲೆ ಬಿದ್ದನು. ೩೪. ಈ ಕಾಡು ನಾನು ಆಳುವ ಕಾಡು. ಈ ರಾಕ್ಷಸ ಬಲವಿದು ನನ್ನ ಸೈನ್ಯ, ನೀನು ದುಷ್ಟನಾಗಿದ್ದೀಯೆ; ಈ ಹೊತ್ತಿನಲ್ಲಿ ಹೀಗೆ ಬರುವಷ್ಟು ಪರಾಕ್ರಮವನ್ನು ನಿನಗೆ ಕೊಟ್ಟವರಾರು ಎಂದು ಪ್ರತಿಭಟಿಸಿದನು. ಅರ್ಜುನನು ಅವನನ್ನು ಆ ಕೊಳ್ಳಿಯಿಂದಲೇ ಹೊಡೆದನು. ಅದು ಪ್ರಳಯಕಾಲದ ಘೋರವಾದ ಬೆಂಕಿಯಂತೆ ಸುಟ್ಟಿತು. ಅವನು ಸ್ವಲ್ಪವೂ ಸಾವಕಾಶ ಮಾಡದೆ ಬಂದು ಆರೂಢಸರ್ವಜ್ಞನಾದ ಅರ್ಜುನನ ಎರಡು ಕಾಲುಗಳಿಗೂ ನಮಸ್ಕಾರ ಮಾಡಿದನು. ವ॥ ಹಾಗೆ ಪ್ರತಿಭಟಿಸಿ ಅಧೀನನಾಗಿ ಗಂಧರ್ವನು ಕುಂತಿಯಿಂದ ಕೂಡಿದ ಆರು ಜನವನ್ನೂ ತನ್ನ ಬೀಡಿಗೆ ಜೊತೆಯಲ್ಲಿ

ಕಂ॥ ಇದು ನಿನ್ನ ಕೊಟ್ಟ ತಲೆ ನಿನ
ಗಿದನಿತ್ತಪೆನೆಂದು ನುಡಿಯಲಾಗದು ಮಾರ್ಕೊ ।
ಳ್ಳದಿರೆಂದು ಗಿಳಿಯ ಬಣ್ಣದ
ಕುದುರೆಯನಯ್ನೂರನಿತ್ತನಂಗದಪರ್ಣಂ ॥ ೩೫

ವ॥ ಇತ್ತೊಡಿವನ್ನೆಗಮೆಮಗಾಗಿರ್ಕೆಂದು ಪ್ರಿಯಂ ನುಡಿದಂಗದಪರ್ಣನನಿರವೇೞ್ದು ಮಾರ್ತಾಂಡೋದಯಮೆ ನಿಜೋದಯಮಾಗೆ ಪಯಣಂಬೋಗಿ-

ಕಂ॥ ಪುಣ್ಯನದೀನದ ನಗ [ಲಾ]
ವಣ್ಯ ವಿಭೂಷಣೆಯನೊಲ್ದು ನೋಡುತ್ತುಮಿಳಾ ।
ಪುಣ್ಯ ಸ್ತ್ರೀಯಂ ಸಂಚಿತ
ಪುಣ್ಯರ್ ಪಾಂಚಾಲದೇಶಮಮಂ ಪುಗುತಂದರ್ ॥ ೩೬

ವ॥ ಅಂತು ತದ್ವಿಷಯವಿಳಾಸಿನಿಗೆ ಪಿಡಿದ ಕನಕಚ್ಛತ್ರದಂತೆ ಸೊಗಯಿಸುವ ಛತ್ರವತೀಪುರದ ಪೊಱವೊಟಲನೆಯ್ದುವಾಗಳ್-

ಉ ॥ ಪಾಡುವ ತುಂಬಿ ಕೋಡುವ ಪುಟಿಲ್ ನಡಪಾಡುವ ರಾಜಹಂಸೆ ಬಂ
ದಾಡುವ ತೊಂಡುವೆಣ್ದುರುಳಿ ತೀಡುವ ತೆಂಬೆರಲೊಲ್ದು ನಲ್ಲರೊಳ್ ।
ಕೂಡುವ ನಲ್ಲರಾರ್ದೆಗಮಾರ ಮನಕ್ಕಮನಂಗರಾಗಮಂ
ಮಾಡೆ ಮನಕ್ಕೆ ಬಂದುವರಿಕೇಸರಿಗಲ್ಲಿಯ ನಂದನಾಳಿಗಳ್ ॥ ೩೭

ಕರೆದುಕೊಂಡು ಹೋಗಿ ಪ್ರೀತಿಯಿಂದ ಆತಿಥ್ಯವನ್ನು ಮಾಡಿದನು. ಅಲ್ಲದೆ ೩೫. ಇದು ನೀನು ಕೊಟ್ಟ (ಬದುಕಿಸಿದ-ಉಳಿಸಿದ) ತಲೆ ಇದನ್ನು ನಿನಗೆ ಪ್ರತಿಯಾಗಿ ಕೊಡುತ್ತಿದ್ದೇನೆಂದು ಹೇಳಕೂಡದು. ಪ್ರತಿಮಾತಾಡಬೇಡ ಎಂದು ಅಂಗದಪರ್ಣನು ಗಿಳಿಯ ಬಣ್ಣದ ಅಯ್ನೂರು ಕುದುರೆಗಳನ್ನು ಅರ್ಜುನನಿಗೆ ಕೊಟ್ಟನು. ವ॥ ನಾವು ಅಪೇಕ್ಷಿಸುವವರೆಗೆ ಇವು ನಮ್ಮದಾಗಿ ನಿಮ್ಮಲ್ಲಿರಲಿ ಎಂದು ಪ್ರಿಯವಾದ ಮಾತನಾಡಿ ಅಂಗದಪರ್ಣನನ್ನು ಅಲ್ಲಿರಲು ಹೇಳಿ ಸೂರ್ಯೋದಯವೇ ತಮ್ಮ ಅಭಿವೃದ್ಧಿ ಸೂಚಕವಾಗಿರಲು ಪಾಂಡವರು ಮುಂದೆ ಪ್ರಯಾಣ ಮಾಡಿದರು. ೩೬. ಪವಿತ್ರವಾದ ನದಿ, ನದ, ನಗರ, ಅರಣ್ಯಗಳಿಂದ ಅಲಂಕೃತವೂ ಪುಣ್ಯಭೂಮಿಯೂ ಆದ ಆ ಪ್ರದೇಶಗಳನ್ನು ಪ್ರೀತಿಯಿಂದ ನೋಡುತ್ತ ಪುಣ್ಯಶಾಲಿಗಳಾದ ಪಾಂಡವರು ಪಾಂಚಾಲ ದೇಶವನ್ನು ಪ್ರವೇಶಮಾಡಿದರು. ವ॥ ಆ ದೇಶವೆಂಬ ಸ್ತ್ರೀಗೆ ಹಿಡಿದ ಚಿನ್ನದ ಕೊಡೆಯಂತೆ ಸೌಂದರ್ಯದಿಂದ ಕೂಡಿದ ಛತ್ರವತಿಪುರದ ಹೊರಪಟ್ಟಣ (ಪ್ರದೇಶ)ವನ್ನು ಬಂದು ಸೇರಿದರು. ೩೭. ಅಲ್ಲಿ ಹಾಡುತ್ತಿರುವ ದುಂಬಿ, ತಂಪಾಗಿರುವ ತೋಪು, ನಡೆದಾಡುತ್ತಿರುವ ರಾಜಸಿಂಹ, ಬಂದು ಮಾತನಾಡುವ ತುಂಟಹೆಣ್ಣು ಗಿಳಿ, ಬೀಸುವ ತೆಂಕಣಗಾಳಿ, ಪ್ರೇಯಸಿಯರಲ್ಲಿ ಕೂಡುವ ಪ್ರಿಯರು - ಇವು ಯಾರ ಹೃದಯಕ್ಕೂ ಯಾರ ಮನಸ್ಸಿಗೂ ಕಾಮೋದ್ರೇಕವನ್ನುಂಟುಮಾಡುತ್ತಿರಲು ಅಲ್ಲಿಯ

ವ|| ಅಂತು ನೋಡುತ್ತುಂ ಬರೆವರೆ-

ಚಂ|| ಮದಗಜಬೃಂಹಿತಧ್ವನಿ ತುರಂಗಮಹೇಷಿತಘೋಷಮಾದಮೊ
ರ್ಮೊದಲೆ ಪಯೋಧಿಮಂಥನಮಹಾರವಮಂ ಗೆಲೆ ತಳ್ತ ಬಣ್ಣದ ।
ಣ್ಣದ ಗುಡಿ ತೊಂಬೆಗೊಂಚಲಲೆಲೆಯಿಕ್ಕಿದ ಕಾವಣಮೆಲ್ಲಿಯುಂ ಪೊದ
ಱ್ದೊದವಿರೆ ಕಣ್ಗೆ ಕಂಡುವಖಿಳಾವನಿಪಾಳರ ಬಟ್ಟ ಬೀಡುಗಳ್ ॥ ೩೮

ವ|| ಅಂತು ನೋಡುತ್ತುಂ ಮೆಚ್ಚುತ್ತುಂ ಬರೆವರೆ-

ಉ || ಈ ತ್ರಿಜಗಂಗಳೊಳ್ ನೆಗಟ್ದ ಪೆಂಡಿರುಮಂ ಗೆಲೆವಂದ ಪದ್ಮಿನೀ
ಪತ್ರವಿಚಿತ್ರನೇತ್ರೆಗೆ ಸಯಂಬರದೊಳ್ ವರನಪ್ಪವಾದೊಡೀ ।
ಧಾತ್ರಿಯನಾಳ್ವೆಮಾಮೆ ವಲಮೆಂದು ತೆರಳ್ದ ಸಮಸ್ತ ರಾಜಕ
ಚ್ಛತ್ರದಿನಂದು ಛತ್ರವತಿಯೆಂಬಭಿಧಾನಮನಾಳ್ದುದಾ ಪೊಟಲ್ ॥ ೩೯

ವ|| ಅಂತು ಸೊಗಯಿಸುವ ಪೊಲಂ ಪೊಕ್ಕೆಲ್ಲಿಯುಂ ಬೀಡು ಬಿಡಲೆಡೆವಡೆಯ ದೊಂದು ಭಾರ್ಗವಪರ್ಣಶಾಲೆಯೊಳಿಡೆವಮಾಡಿಕೊಂಡು ಬ್ರಹ್ಮಲೋಕಮಿರ್ಪಂತಿರ್ದ ಬ್ರಹ್ಮಸಭೆಯೊಳಗೆ ದೇವ ಬ್ರಾಹ್ಮಣರಾಗಿರ್ದರನ್ನೆಗಂ ದ್ರುಪದನಿತ್ತಲ್-

ಚಂ|| ನೆರೆದ ಸಮಸ್ತ ರಾಜಕಮನಾದರದಿಂದಿದಿರ್ಗೊಂಡನೇಕ ರ
ತ್ನ ರಚಿತಮಾಗೆ ಮಾಡಿಸಿ ಸಯಂಬರಸಾಲೆಯನೋಳಿಯಿಂ ನರೇ ।
ಶ್ವರರ್ಗಿರಲೆಂದು ಚೌಪಳಿಗೆಗಳ್ ಪಲವಂ ಸಮೆದಲ್ಲಿ ರತ್ನದಿಂ
ಬೆರಸಿದ ಬಣ್ಣದೊಳ್ ಮೆಱೆಯೆ ಕಟ್ಟಿಸಿ ಪುಟ್ಟಿಸಿ ರಂಗಭೂಮಿಯಂ ॥೪೦

ತೋಟದ ಸಾಲುಗಳು ಅರಿಕೇಸರಿಯ ಮನಸ್ಸನ್ನಾಕರ್ಷಿಸಿದುವು. ೩೮. ಮದ್ದಾನೆಗಳ ಘೀಳಿಡುವ ಶಬ್ದ, ಕುದುರೆಗಳ ಕೆನೆತದ ಶಬ್ದ ಅವು ಒಟ್ಟುಗೂಡಿ ಸಮುದ್ರಮಥನದ ದೊಡ್ಡ ಶಬ್ದವನ್ನು ಮೀರಿದ್ದಿತು. ಒತ್ತಾಗಿ ಸೇರಿಕೊಂಡಿರುವ ಬಣ್ಣಬಣ್ಣದ ಬಾವುಟಗಳ ಕುಚ್ಚು, ಹೂಗೊಂಚಲು ಚಿಗುರುಗಳಿಂದ ಕೂಡಿದ ಚಪ್ಪರಗಳು ಎಲ್ಲೆಲ್ಲಿಯೂ ವ್ಯಾಪಿಸಿ ಒಪ್ಪಿದ್ದವು. ಸಮಸ್ತ ರಾಜರು ಇಳಿದುಕೊಂಡಿದ್ದ ಬೀಡುಗಳು ಕಣ್ಣಿಗೆ ಕಂಡವು. ವ|| ಹಾಗೆ ನೋಡುತ್ತಿರಲು ಮೆಚ್ಚುತ್ತಲೂ ಬರುತ್ತಿರಲು-೩೯. ಈ ಮೂರು ಲೋಕವ ಸುಪ್ರಸಿದ್ಧ ಹೆಂಗಸರನ್ನು ಮೀರಿಸಿರುವ ಕಮಲಪತ್ರದಂತೆ ವಿಚಿತ್ರವಾದ ಕಣ್ಣುಳ್ಳ ದ್ರೌಪದಿಗೆ ಸ್ವಯಂವರದಲ್ಲಿ ಪತಿಯಾಗುವುದಾದರೆ ನಾವು ನಿಶ್ಚಯವಾಗಿಯೂ ಈ ಭೂಮಿಯನ್ನು ಆಳುವವರೇ ಸರಿ ಎಂದು ಒಟ್ಟಾಗಿ ಸೇರಿದ ಸಮಸ್ತ ರಾಜರ ಬೆಳ್ಗೊಡೆಗಳಿಂದ ಆ ದಿನ ಆ ಪಟ್ಟಣವನ್ನು ಪ್ರವೇಶಿಸಿ ಎಲ್ಲಿಯೂ ಬೀಡುಬಿಡಲು ಸ್ಥಳ ಸಿಕ್ಕದೆ ಒಂದು ಕುಂಬಾರನ ಗುಡಿಸಲಿನಲ್ಲಿ ಅವಕಾಶವನ್ನು ಮಾಡಿಕೊಂಡು ಬ್ರಹ್ಮಲೋಕದ ಹಾಗಿದ್ದ ಬ್ರಾಹ್ಮಣರ ಸಭೆಯಲ್ಲಿ ದೇವಬ್ರಾಹ್ಮಣರಂತಿರುತ್ತಿದ್ದರು. ೪೦. ಅಲ್ಲಿ ಸೇರಿದ ಎಲ್ಲ ಕ್ಷತ್ರಿಯವರ್ಗವನ್ನು ಆದರದಿಂದ ಇದಿರುಗೊಂಡು ಸ್ವಯಂವರಶಾಲೆಯನ್ನು ಅನೇಕ ರತ್ನಗಳಿಂದ ರಚಿತವಾಗಿರುವ ಹಾಗೆ ಮಾಡಿಸಿ ರಾಜರುಗಳಿರುವುದಕ್ಕಾಗಿ ಸಾಲಾಗಿ ಅನೇಕ ತೊಟ್ಟಿಯ ಮನೆಗಳನ್ನು ನಿರ್ಮಿಸಿ

ವ॥ ಆ ನೆಲೆಯ ಚೌಪಳಿಗೆಗಳೊಳನೇಕ ಪ್ರಾಸಾದದ ಮೇಲೆ ಚಿತ್ರದ ಪಟವಿಗೆಗಳಂ ತುಱುಗಲುಂ ಬಂಬಲ್ಗಳುಮಾಗೆ ಕಟ್ಟಿಸಿ ಪಚ್ಚೆಯ ಹಾರದ ತೋರಣಂಗಳಂ ದುಗುಲದ ಗುಡಿಗಳಂ ಕಟ್ಟಿಸಿ ಕಂಭಂಗಳೊಳೆಲ್ಲಂ ಸುಯ್ಯಾಣದ ಚಿನ್ನದ ಪಟೆಯ ಸಕಳವಟ್ಟೆಗಳಂ ಸುತ್ತಿಸಿ ಮುತ್ತಿನ ಮಂಟವಿಗೆಗಳನೆಡೆಯಱಿದೆತ್ತಿಸಿ ಪೊನ್ನ ಮಾಂಗಾಯ ಗೊಂಚಲ್ಗಳುಮಂ ಮುತ್ತಿನ ಬುಂಭುಕಂಗಳುಮನೆಱಲೆ ಕಟ್ಟಿಸಿ ಮತ್ತಮಾ ಪ್ರಾಸಾದಂಗಳ ಚೌಪಳಿಗಳ ಪೊನ್ನ ಪೊಂಗಱೆಗೆ ನೀಳ್ಪುಂ ಬೆಳ್ಪುಮಂ ತಾಳ್ದಿ ಕರ್ಪಿನೊಳುಪಾಶ್ರಯಂಬಡೆದು-

ಕಂ॥ ತುಱುಗಿದ ಪೂಗೊಂಚಲ ಕಾ
ಯ್ತೆಱಗಿದ ಮಾವುಗಳ ಬೆಳೆದ ಕೌಂಗಿನ ಗೊನೆ ತ ।
ಳ್ತೆಱಗಿರೆ ಮಾಡದೊಳಲ್ಲಿಯೆ
ತಿಱಿದುಕೊಳಲ್ಕಿಂಬಿನೆಸಕಮೆಸೆದುದುಪವನಂ ॥ ೪೧

ನಾಳೆ ಸಯಂಬರಮೆನೆ ಪಾಂ
ಚಾಳಮಹೀಪಾಳನಖಿಳ ಭೂಭೃನ್ನಿಕರ ।
ಕ್ಕೋಳಿಯೆ ಸಾಱಿದೊಡವನೀ
ಪಾಲರ್ ಕೆಯ್ಗೆಯ್ಯಲೆಂದು ಪಱಿವಱಿಯಾದರ್ ॥ ೪೨

ವ॥ ಆಗಿ ಮಱುದಿವಸಂ ನೇಸಱ್ ಮೂಡೆ-

ಕೆಂಪುಬಣ್ಣದಿಂದ ಪ್ರಕಾಶಿಸುವ ಹಾಗೆ ರಂಗಸ್ಥಳವನ್ನು ಸಿದ್ಧಪಡಿಸಿದನು. ವ॥ ಆ ಸ್ಥಿರವಾದ ತೊಟ್ಟಿಯ ಮನೆಗಳ ಉಪ್ಪರಿಗೆಗಳ ಮೇಲೆ ಅನೇಕ ಚಿತ್ರಿತವಾದ ಬಾವುಟಗಳೂ ಗುಂಪುಗುಂಪಾಗಿ ಕಟ್ಟಿಸಿದ ಹಸಿರುಹಾರದಿಂದ ಕೂಡಿದ ತೋರಣಗಳೂ ರೇಷ್ಮೆಯ ಧ್ವಜಗಳೂ ಕಂಬಕ್ಕೆ ಸುತ್ತಿದ್ದ ಕಸೂತಿಯ ಚಿತ್ರಕಾರ್ಯ ಮಾಡಿರುವ ಜರತಾರಿವಸ್ತ್ರಗಳೂ ಚಿತ್ರದಿಂದ ಕೂಡಿದ ಬಟ್ಟೆಗಳೂ ಸೂಕ್ತಸ್ಥಾನಗಳಲ್ಲಿ ನಿರ್ಮಿಸಿದ ಮಂಟಪಗಳಲ್ಲಿ ಜೋಲಾಡುವಂತೆ ಕಟ್ಟಿಸಿದ್ದ ಚಿನ್ನದ ಮಾವಿನ ಕಾಯಿನ ಗೊಂಚಲೂ ಮುತ್ತಿನ ಕುಚ್ಚುಗಳೂ ವಿವಿಧ ಬಣ್ಣಗಳನ್ನುಂಟುಮಾಡಿ ಸುವರ್ಣಚ್ಛಾಯೆಯನ್ನು ಅಳವಡಿಸಿದುವು. ೪೧. ಒತ್ತಾಗಿ ಸೇರಿರುವ ಹೂಗೊಂಚಲೂ ಕಾಯಿಗಳ ಭಾರದಿಂದ ಬಗ್ಗಿರುವ ಮಾವುಗಳೂ ಪುಷ್ಟವಾಗಿ ಬೆಳೆದ ಅಡಿಕೆಯ ಗೊನೆಗಳೂ ಗುಂಪಾಗಿ ಕೂಡಿ ಆ ಉಪ್ಪರಿಗೆಯಲ್ಲಿಯೇ ಸೇರಿ ಬಾಗಿರಲು ಅಲ್ಲಿಯೇ ಅವುಗಳನ್ನು ಕೊಯ್ದುಕೊಳ್ಳಲು ಅನುಕೂಲವಾಗಿರುವ ರೀತಿಯಲ್ಲಿ ಆ ಉಪವನವು ಪ್ರಕಾಶಮಾನವಾಗಿದ್ದಿತು. ೪೨. ಆಗ ಪಾಂಚಾಳನಾದ ದ್ರುಪದನು ಸಮಸ್ತ ರಾಜಮಂಡಳಿಗೆ ಕ್ರಮವಾಗಿ ನಾಳೆಯ ದಿನ ಸ್ವಯಂವರವೆಂದು ಡಂಗುರ ಹೊಡೆಯಿಸಿದನು. ರಾಜರು ತಮ್ಮ ತಮ್ಮ ಶಕ್ತಿಪ್ರದರ್ಶನಮಾಡಲು ವಿಶೇಷ ಉತ್ಸಾಹಗೊಂಡರು. ವ॥ ಮಾರನೆಯ ದಿನ ಸೂರ್ಯೋದಯವಾಯಿತು.

ಕಂ॥ ತಂತಮ್ಮ ರಾಜ್ಯ ಚಿಹ್ನಂ
ತಂತಮ್ಮ ಮಹಾ ವಿಭೂತಿ ತಂತಮ್ಮ ಬಲಂ ।
ತಂತಮ್ಮೆಸೆವ ವಿಳಾಸಂ
ತಂತಮ್ಮಿರ್ಪೆಡೆಯೊಳೋಳಿಯಿಂ ಕುಳ್ಳಿರ್ದರ್ ॥ ೪೩

ವ॥ ಆಗಳ್ ದ್ರುಪದಂ ತನ್ನ ಪುರಕ್ಕಮಂತಃಪುರಕ್ಕಂ ಪರಿವಾರಕ್ಕಂ-

ಕಂ॥ ಸಾಸಿರ ಪೊಂಗೆಯ್ದುಂ ಚಿಃ
ಕಾಸಟಮೆಂದೊಂದು ಲಕ್ಕಗೆಯ್ದುವಿದರ್ಕಂ ।
ಮಾಸರಮುಡಲೆಂದಧಿಕ ವಿ
ಳಾಸದಿನುಡಲಿಕ್ಕಿ ನೆಱೆಯೆ ಬಿಯಮಂ ಮೆಱೆದಂ ॥ ೪೪

ವ॥ ಅಂತು ಮೆಱೆದು ಕೂಸಂ ನೆಱೆಯೆ ಕೆಯ್ಗೆಯ್ವಿಮೆಂದು ಮುನ್ನಂ ಕೆಯ್ಗೆಯ್ವುತಿರ್ದ ತಱಿದ ಗುಱುಗೆಯರಪ್ಪಂತಃಪುರ ಪುರಂಧ್ರಿಯರಂ ಕರೆದು ಪೇೞ್ವುದುಮಂತೆಗೆಯ್ವೆಮೆಂದು-

ಕಂ॥ ಈ ಪೊೞ್ತಿಂಗೀ ಋತುವಿಂ
ಗೀ ಪಸದನಮಿಂತುಟಪ್ಪ ಮೆಯ್ವಣ್ಣಕ್ಕಂ ।
ತೀ ಪೂವಿನೊಳೀ ತುಡುಗೆಯೊ
ಳೀ ಪುಟ್ಟಗೆಯೊಳ್ ಚೆಲ್ವಂಗುವಡೆದೆಸೆದಿರ್ಕುಂ ॥ ೪೫

ವ॥ ಎಂದು ನೆಱೆಯೆ ಪಸದನಂಗೊಳಿಸಿ-

ಚಂ॥ ತುಡಿಸದೆ ಹಾರಮಂ ಮೊಲೆಯ ಬಿಣ್ಪಿನೊಳಂ ನಡು ಬಳ್ಕಿದಪ್ಪುದೀ
ನಡುಗುವುಲ್ಲವೇ ತೊಡೆ ನಿತಂಬದ ಬಿಣ್ಪಿನೊಳೇವುದಕ್ಕ ಪೋ ।
ಬಿಡು ಕಟಿಸೂತ್ರಮಂ ತೊಡೆಯ ಬಿಣ್ಪು ಪದಾಂಬುರುಹಕ್ಕೆ ತಿಣ್ಣಮೆಂ
ತುಡಿಸುವುದಕ್ಕ ನೂಪುರಮನೀ ತೊಡವೇವುದೊ ರೂಪೆ ಸಾಲದೆ ॥ ೪೬

೪೩. ರಾಜರು ತಮ್ಮ ತಮ್ಮ ರಾಜ್ಯಚಿಹ್ನೆ ವೈಭವ ಸೈನ್ಯ ವಿಳಾಸಗಳಿಂದ ಕೂಡಿ ತಾವಿದ್ದ ಸ್ಥಳಗಳಲ್ಲಿ ಸಾಲಾಗಿ ಕುಳಿತರು. ವ॥ ಆಗ ದ್ರುಪದನು ತನ್ನ ಪಟ್ಟಣಕ್ಕೂ ರಾಣಿವಾಸಕ್ಕೂ ಪರಿವಾರಕ್ಕೂ ೪೪. ಸಹಸ್ರಹೊನ್ನನ್ನು ಕೊಟ್ಟರೂ ಇದು ಲಭ್ಯವಾಗುವುದಿಲ್ಲ. ಹತ್ತಿಯ ಬಟ್ಟೆಯಾದರೂ ಇದು ಲಕ್ಷಬೆಲೆಯುಳ್ಳದ್ದು ಎಂಬ ವಸ್ತ್ರಗಳನ್ನು ಮಧುರವಾಗಿ ಧರಿಸಲೂ ಸಂತೋಷದಿಂದ ಉಡಲೂ ಕೊಟ್ಟು ವಿಶೇಷವಾಗಿ ತನ್ನ ಔದಾರ್ಯವನ್ನು ಪ್ರಕಾಶಿಸಿದನು. ವ॥ ಹಾಗೆಯೇ ಕನ್ಯೆಯನ್ನು ಪೂರ್ಣವಾಗಿ ಅಲಂಕರಿಸಿ ಎಂದು ಹೇಳಿದನು. ಹಾಗೆ ಹೇಳುವುದಕ್ಕೆ ಮುಂಚೆಯೇ (ತಾವಾಗಿಯೇ) ಅಲಂಕರಿಸುತ್ತಿದ್ದ ಶಕ್ತರೂ ಅನುಭವಶಾಲಿಗಳೂ ಆದ ರಾಣಿ ವಾಸದ ಸ್ತ್ರೀಯರು ಹಾಗೆಯೇ ಮಾಡುತ್ತೇವೆಂದರು. ೪೫. ಈ ಹೊತ್ತಿಗೆ ಈ ಋತುವಿಗೆ ಇಂತಹ ಅಲಂಕಾರ; ಇಂತಹ ಮೈಬಣ್ಣಕ್ಕೆ ಇಂತಹ ಹೂವು ಈ ಆಭರಣ ಈ ಸೀರೆ ಉಚಿತವಾದುದು ವ॥ ಎಂದು ನಿಷ್ಕರ್ಷಿಸಿ ಪೂರ್ಣವಾಗಿ ಅಲಂಕಾರಮಾಡಿದರು. ೪೬. ಹಾರವನ್ನು ತೊಡಿಸದಿದ್ದರೂ ಮೊಲೆಯ ಭಾರದಿಂದಲೇ ಸೊಂಟವು ಬಳುಕುತ್ತದೆ. ಪಿರ್ರೆ (ಪೃಷ್ಠಭಾಗ)ಯ ಭಾರದಿಂದಲೇ ತೊಡೆ ನಡುಗುವುದಲ್ಲವೇ?

ವ|| ಎಂದೆಂದೋರೋರ್ವರಾಕೆಯ ರೂಪಂ ವಕ್ರೋಕ್ತಿಯೊಳೆ ಪೊಗೞ್ದು ಮಂಗಳವಸದನ ಮಿಕ್ಕೆಯುಂ ಪೊಸ ಮದವಳಿಗೆಯಪ್ಪುದಱಿಂ ತುಡಿಸಲೆವೇೞ್ಕುಮೆಂದು ನೆಱೆಯೆ ಪಸವನಂಗೊಳಿಸಿ

ಕಂ|| ಮಸೆದುದು ಮದನನ ಬಾಳ್ ಕೂ
ರ್ಮಸೆಯಿಟ್ಟುದು ಕಾಮನಂಬು ಬಾಯ್ದೂಱಿದುದಾ ।
ಕುಸುಮಾಸ್ತ್ರನ ಚಕ್ರಮಿದೆಂ
ಬೆಸಕಮನಾಳ್ದತ್ತು ಪಸದನಂ ದ್ರೌಪದಿಯಾ ॥ ೪೭

ವ|| ಅಂತು ನೆಱೆಯೆ ಪಸದನಂಗೊಳಿಸಿ ಬಿಡುಮುತ್ತಿನ ಸೇಸೆಯನಿಕ್ಕಿ ತಾಯ್ಗಂ ತಂದೆಗಂ ಪೊಡಮಡಿಸಿ–

ಕಂ|| ನಿಟ್ಟಿಸೆ ಹೋಮಾನಲನೊಳ್
ಪುಟ್ಟಿದ ನಿನಗಕ್ಕ ಪರಕೆ ಯಾವುದೊ ನಿನ್ನಂ ।
ಪುಟ್ಟಿಸಿದ ಬಿದಿ ನೆಗೞ್ತೆಯ
ಜೆಟ್ಟಿಗನೊಳ್ ನೆರಪುಗೀಗಳರಿಕೇಸರಿಯೊಳ್ ॥ ೪೮

ವ|| ಎಂದು ಪರಸಿ ಕನಕರತ್ನಕಖಚಿತಮುಂ ಮೌಕ್ತಿಕಸ್ತಂಭಮುಮಪ್ಪ ಸರ್ವತೋಭದ್ರಮೆಂಬ ಸಿವಿಗೆಯನೇಱಿಸಿ ಚಾಮರದ ಕುಂಚದಡಪದ ದವಕೆಯ ವಾರ ವಿಳಾಸಿನಿಯರೆಡುಂ ಕೆಲದೊಳ್ ಸುತ್ತಿಱಿದು ಬಳಸಿ ಬರೆ ತಲೆವರಿದೋಜೆಯ ಪಿಡಿಯನೇಱಿ

(ಆದುದರಿಂದ) ಒಡ್ಯಾಣದ ಭಾರ ಬೇರೆಯೇತಕ್ಕೆ? ಅದನ್ನು ತೊಡವೆ ಬಿಡು. ತೊಡೆಯ ಭಾರವೇ ಪಾದಕಮಲಗಳಿಗೆ ಭಾರವಾಗಿದೆ (ಹೀಗಿರುವಾಗ) ಕಾಲಂದಿಗೆಯನ್ನೇಕೆ ತೊಡಿಸುವುದು. ಈಕೆಗೆ ಆಭರಣಗಳೇತಕ್ಕೆ ರೂಪೇ ಸಾಲದೆ? ವ|| ಎಂದು ಒಬ್ಬೊಬ್ಬರೂ ಆಕೆಯ ಸೌಂದರ್ಯವನ್ನು ಹೊಗಳಿ ಮಂಗಳಾಲಂಕಾರಮಾಡಿದರು. ಹೊಸ ಮದುವಣಗಿತ್ತಿಯಾದುದರಿಂದ ಆಭರಣವನ್ನೂ ತೊಡಿಸಲೇಬೇಕೆಂದು ಪೂರ್ಣವಾಗಿ ಅಲಂಕಾರಮಾಡಿದರು. ೪೭. ಆ ದ್ರೌಪದಿಯ ಅಲಂಕಾರವು ಮನ್ಮಥನ ಕತ್ತಿಯು ಮಸೆಯಲ್ಪಟ್ಟಿತು, ಕಾಮನ ಬಾಣವು ಹರಿತವಾಗಿ ಮಾಡಲ್ಪಟ್ಟಿತು, ಪುಷ್ಪಬಾಣನಾದ ಅನಂಗನ ಚಕ್ರಾಯುಧವು ಹರಿತವಾದ ಬಾಯಿಂದ ಕೂಡಿದುದಾಯಿತು ಎನ್ನುವಷ್ಟು ಸೌಂದರ್ಯವನ್ನು ಪಡೆಯಿತು. ವ|| ಹಾಗೆ ಸಂಪೂರ್ಣವಾಗಿ ಅಲಂಕಾರ ಮಾಡಿ ಬಿಡಿಮುತ್ತಿನ ಅಕ್ಷತೆಯನ್ನು ಅವಳ ತಲೆಯ ಮೇಲೆ ಚೆಲ್ಲಿ ತಾಯಿಗೂ ತಂದೆಗೂ ನಮಸ್ಕಾರ ಮಾಡಿಸಿದರು. ೪೮. ವಿಚಾರಮಾಡುವುದಾದರೆ ಹೋಮಾಗ್ನಿಯಲ್ಲಿ (ಯಜ್ಞಕುಂಡದಲ್ಲಿ) ಹುಟ್ಟಿದ ನಿನಗೆ ಪ್ರತ್ಯೇಕವಾದ ಹರಕೆ ಯಾಕಮ್ಮ. ನಿನ್ನನ್ನು ಹುಟ್ಟಿಸಿದ ಆ ವಿಧಿಯು ಸುಪ್ರಸಿದ್ಧ ಪರಾಕ್ರಮಿಯಾದ ಆ ಅರಿಕೇಸರಿಯಲ್ಲಿ ನಿನ್ನನ್ನು ಸೇರಿಸಲಿ ವ|| ಎಂದು ಹರಸಿ ಹೊಳೆಯುವ ಚಿನ್ನದಿಂದ ಕೆತ್ತಲ್ಪಟ್ಟುದೂ ಮುತ್ತಿನ ಕುಂಭಗಳನ್ನುಳ್ಳದೂ ಸರ್ವತೋಭದ್ರವೆಂಬ ಹೆಸರುಳ್ಳುದೂ (ನಾಲ್ಕು ಕಡೆಯೂ ಬಾಗಿಲುಳ್ಳದು) ಆದ ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ಚಾಮರ, ಕುಂಚ, ಎಲೆ ಅಡಿಕೆಯ ಚೀಲ ಮತ್ತು ಪೀಕದಾನಿಗಳನ್ನು ಹಿಡಿದಿದ್ದ ಪರಿವಾರದ ಹೆಂಗಸರು ಎರಡುಪಕ್ಕದಲ್ಲಿಯೂ ಸುತ್ತ

ಪೆಂಡವಾಸದೊಳ್ವೆಂಡಿರ್ ಬಳಸಿ ಬರೆ ತಳ್ತು ಪಿಡಿದ ಕನಕ ಪದ್ಮದ ಸೀಗುರಿಗಳ ನೆಬಿಲೆಡೆವಜೆಯದೆ ಬರೆ ದ್ರುಪದನುಂ ಧೃಷ್ಟದ್ಯುಮ್ನನುಂ ಮುತ್ತಿನ ಮಾಣಿಕದ ಮಂಡನಾಯೋಗಂಗಳೊಳ್ ನೆಱೆಯೆ ಪಣ್ಣಿದ ಮದಾಂಧ ಗಂಧಸಿಂಧುರಂಗಳನೇಱೆ ಬರೆ ಮುಂದೆ ಪರಿವ ಧವಳಚ್ಛತ್ರ ಚಂದ್ರಾದಿತ್ಯ ಪಾಳಿಕೇತನಾದಿ ರಾಜ್ಯ ಚಿಹ್ನಂಗಳುಂ ಮೊಳಗುವ ಮಂಗಳತೂರ್ಯಂಗಳೆಸೆಯೆ ಪೆಱಪೆಱಗೆ ದ್ರೌಪದಿ ಶೃಂಗಾರಸಾಗರಮೆ ಮೇರೆದಪ್ಪಿ ಬರ್ಪಂತೆ ಬರೆ-

ಕಂ॥ ಪರೆದುಗುವ ಪಂಚ ರತ್ನದ
ಪರಲ್ಗಳುದಿರ್ದೆಸೆಯೆ ಸೌಧದೊಳೆ ಕೆದಱಿದ ಕ ।
ಪ್ಪುರವಳ್ಕುಗಳೆಸೆಯೆ ಸಯಂ
ಬರ ಸಾಲೆಯನೆಸೆವ ಲೀಲೆಯಿಂ ಪುಗುತಂದಳ್ । ೪೯

ವ॥ ಆಗಳ್-

ಕಂ॥ ನುಡಿವುದನೆ ಮಱೆದು ಪೆಱತಂ
ನುಡಿಯೆ ಕೆಲರ್ ನೋಡದಂತೆ ನೋಡೆ ಕೆಲರ್ ಪಾ ।
ವಡರ್ದವೊಲಿರೆ ಕೆಲರೊಯ್ಯನೆ
ತುಡುಗೆಯನೋಸರಿಸೆ ಕೆಲರುದಗ್ರಾವನಿಪರ್ ॥ ೫೦

ಒಡನೆ ನೆರೆದರಸುಮಕ್ಕಳ
ನಿಡುಗಣ್ಗಳ ಬಳಗಮೆಱಗೆ ತನ್ನಯ ಮೆಯ್ಯೊಳ್ ।
ನಡೆ ಬಳಸಿ ಪಲರುಮಂಬಂ
ತುಡೆ ನಡುವಿರ್ದೊಂದು ಪುಲ್ಲೆಯಿರ್ಪಂತಿರ್ದಳ್ ॥ ೫೧

ಗುಂಪುಗೂಡಿ ಬಳಸಿ ಬರುತ್ತಿರಲು ಮುಂದೆ ಹೋಗುತ್ತಿರುವ ಕ್ರಮಬದ್ಧವಾದ ಹೆಣ್ಣಾನೆಯನ್ನು ಹತ್ತಿಕೊಂಡು ರಾಣಿವಾಸದ ಸಭ್ಯಸ್ತ್ರೀಯರು ಸುತ್ತ ಬರುತ್ತಿರಲು ಎತ್ತಿ ಹಿಡಿದ ಸೀಗುರಿಗಳು ನೆರಳು ವಿಚ್ಛಿತ್ತಿಯಿಲ್ಲದೆ ಜೊತೆಯಲ್ಲಿಯೇ ಬರುತ್ತಿರಲು ದ್ರುಪದನೂ ಧೃಷ್ಟದ್ಯುಮ್ನನೂ ಮುತ್ತು ಮಾಣಿಕ್ಯಾಭರಣಗಳಿಂದ ಪೂರ್ಣವಾಗಿ ಅಲಂಕಾರಮಾಡಿದ ಮದ್ದಾನೆಗಳನ್ನೇರಿ ಬರುತ್ತಿರಲು ಮುಂಭಾಗದಲ್ಲಿ ಹರಿದುಹೋಗುತ್ತಿದ್ದ ಬಿಳಿಯ ಕೊಡೆ, ಚಂದ್ರ, ಸೂರ್ಯ, ಧ್ವಜಸಮೂಹವೇ ಮೊದಲಾದ ರಾಜ್ಯಚಿಹ್ನಗಳೂ ಶಬ್ದಮಾಡುತ್ತಿದ್ದ ಮಂಗಳವಾದ್ಯಗಳೂ ಪ್ರಕಾಶಿಸುತ್ತಿರಲು ಹಿಂಭಾಗದಲ್ಲಿ ದ್ರೌಪದಿಯು ಶೃಂಗಾರಸಾಗರವೇ ಎಲ್ಲೇ ಮೀರಿ ಬರುವಂತೆ ಬಂದಳು. ೪೯. ಎಲ್ಲೆಲ್ಲಿಯೂ ಹರಡಿದ್ದ ಪಂಚರತ್ನದ ಹರಳುಗಳೂ ಪಚ್ಚಕರ್ಪೂರದ ಹಳುಕುಗಳೂ ಪ್ರಕಾಶಿಸುತ್ತಿರಲು ಸ್ವಯಂವರಶಾಲೆಯನ್ನು ಸರಳವಿಲಾಸದಿಂದ ಪ್ರವೇಶಿಸಿದಳು. ವ॥ ಆಗ ೫೦. (ಅವಳನ್ನು ನೋಡಿ ದಿಗ್ಭ್ರಾಂತರಾಗಿ) ಕೆಲವರು ಹೇಳಬೇಕಾದುದನ್ನು ಮರೆತು ಬೇರೆಯದನ್ನು ನುಡಿದರು, ಕೆಲವರು ನೋಡದಂತೆ ದ್ರೌಪದಿಯನ್ನು ನೋಡುತ್ತಿದ್ದರು, ಮತ್ತೆ ಕೆಲವರು ಹಾವನ್ನು ಏದುರಿಸಿದವರಂತಿದ್ದರು ಮತ್ತೆ ಕೆಲವು ರಾಜಶ್ರೇಷ್ಠರು ಆಭರಣಗಳನ್ನು ಓರೆಮಾಡುತ್ತಿದ್ದರು. ೫೧. ಒಟ್ಟಿಗೆ ಅಲ್ಲಿ ನೆರೆದಿದ್ದ ರಾಜಕುಮಾರರ ನೀಳವಾದ ಕಣ್ಣುಗಳ ಸಮೂಹವು ತನ್ನ ಶರೀರದ ಮೇಲೆ ಎರಗಿ ನಾಟಿಕೊಳ್ಳಲು ಸುತ್ತಲೂ

ಮೊನೆಯಂಬುಗಳೊಳೆ ಪೂಣ್ದಪ
ನನಿಬರುಮಂ ಕಿಜಿದು ಬೇಗದಿಂ ಹರಿಗನದ ।
ರ್ಕೆನಗೆಡೆವೇಟ್ಟುಮೆ ಎಂಬವೊ
ಲನಿಬರುಮಂ ಪೂಣ್ದನತನು ನನೆಯಂಬುಗಳಿಂ ॥ ೫೨

ವ॥ ಆಗಳ್ ಪಾಂಡವರ್ ತಮ್ಮಂ ಪೆಜಿರಜೆಯದಂತು ಬ್ರಾಹ್ಮಣವೇಷದೊಳೆ ಬ್ರಹ್ಮಸಭೆಯೊಳ್ ಬಂದಿರೆ-

ಚಂ॥ ಇಳೆಯೊಳುದಗ್ರ ವೀರ ಭಟ ತುಂಗ ಮತಂಗಜ ವಾಜಿ ರಾಜಿ ಚೌ
ಪಳಿಗೆಗಳೊಳ್ ಧರಾಧರ ಧುರಂಧರ ಬಂಧುರ ರಾಜಕಂ ವಿಯ ।
ತ್ತಳದೊಳನೇಕ ಕಿಂಪುರುಷ ಕಿನ್ನರ ಖೇಚರ ಸಿದ್ಧ ಬೃಂದಮು
ಜ್ವಳಿಸಿರೆ ಮೂಱು ಲೋಕಮನೆ ಪೋಲ್ತುದು ಮೂನೆಲೆಯಿಂ ಸ್ವಯಂಬರಂ ॥ ೫೩

ವ॥ ಆಗಳ್ ವಿದಿತವೃತ್ತಾಂತೆಯಾಗಿ ದ್ರೌಪದಿಯ ಕೆಲದೊಳಿರ್ದ ಸುಂದರ ಮಾಲೆಯೆಂಬ ಚೇಟಿ-

ಮ॥ ಕನಕೋಚ್ಚಾಸನಸಂಸ್ಥಿತಂ ನೃಪನವಂ ಬೆಂಗೀಶನುತ್ತುಂಗ ಪೀ
ನ ನಿಜಾಂಸಾರ್ಪಿತ ಲಂಬಹಾರನವನಾ ಪಾಂಡ್ಯಂ ಮನಂಗೊಂಡು ನಿ ।
ನ್ನನೆ ಕಿಟ್ಟಿಗ್ಗೊಳೆ ನೋಡುತಿರ್ಪವನವಂ ಚೇರಮ್ಮನಾದಿತ್ಯ ತೇ
ಜನವಂ ನೋಡು ಕಳಿಂಗದೇಶದರಸಂ ಪಂಕೇಜ ಪತ್ರೇಕ್ಷಣೇ ॥ ೫೪

ಅನೇಕರು ಪ್ರಯೋಗಮಾಡಿದ ಬಾಣಗಳ ಮಧ್ಯೆ ಸಿಕ್ಕಿದ ಹುಲ್ಲೆಯಂತೆ ದ್ರೌಪದಿ ತೋರಿದಳು. ೫೨. ಅರಿಗನು ಅಲ್ಪಕಾಲದಲ್ಲಿಯೇ ಅಷ್ಟುಜನವನ್ನೂ ಮೊನಚಾದ ಬಾಣಗಳಿಂದ ಹೂಳಿಬಿಡುತ್ತಾನೆ. ಅದಕ್ಕಾಗಿ ನಾನು ಬಾಣಬಿಡುವುದಕ್ಕೆ ಸ್ಥಳಬೇಕಲ್ಲವೇ? ಎನ್ನುವ ಹಾಗೆ ಮನ್ಮಥನು ಅಷ್ಟು ಜನರನ್ನೂ ಪುಷ್ಪಬಾಣಗಳಿಂದ ಹೂಳಿದನು. ವ॥ ಆಗ ಪಾಂಡವರು ತಮ್ಮನ್ನು ಇತರರು ತಿಳಿಯದಂತೆ (ಗುರುತಿಸದಂತೆ) ಬ್ರಾಹ್ಮಣವೇಷದಿಂದಲೇ ಬ್ರಹ್ಮಸಭೆಯಲ್ಲಿ ಬಂದು ಕುಳಿತಿದ್ದರು. ೫೩. ಭೂಮಿಯಲ್ಲಿ (ನೆಲದ ಮೇಲೆ) ಶ್ರೇಷ್ಠರಾದ ಭಟರೂ ಎತ್ತರವಾದ ಮದ್ದಾನೆ ಮತ್ತು ಕುದುರೆಯ ಸಮೂಹಗಳೂ ಚಚ್ಚೌಕವಾದ ಮಂಟಪಗಳಲ್ಲಿ ರಾಜಶ್ರೇಷ್ಠರ ಮನೋಹರವಾದ ಸಮೂಹವೂ ಅಂತರಿಕ್ಷ ಪ್ರದೇಶದಲ್ಲಿ ಕಿಂಪುರುಷ, ಕಿನ್ನರ, ಖೇಚರ, ಸಿದ್ಧಪುರುಷರ ಸಮೂಹವೂ ತುಂಬಿರಲು ಈ ಮೂರುನೆಲೆಗಳಿಂದ ಸ್ವಯಂವರಮಂಟಪವು ಮೂರುಲೋಕವನ್ನೂ ಹೋಲುತ್ತಿತ್ತು. ವ॥ ಆಗ ಅಲ್ಲಿರುವವರ ವಿಷಯವನ್ನು ತಿಳಿದುಕೊಂಡು ಪಕ್ಕದಲ್ಲಿದ್ದ ಸುಂದರಮಾಲೆಯೆಂಬ ಚೇಟಿಯು ದ್ರೌಪದಿಗೆ ಅವರ ಪರಿಚಯ ಮಾಡಿಸಿದಳು. ೫೪. ಎಲೌ ಕಮಲದಳಾಕ್ಷಿಯಾದ ದ್ರೌಪದಿಯೇ ಆ ಎತ್ತರವಾದ ಚಿನ್ನದ ಪೀಠದಲ್ಲಿ ಕುಳಿತಿರುವವನು ವಂಗದೇಶದ ದೊರೆ, ಎತ್ತರವೂ ದಪ್ಪವೂ ಆದ ಭುಜದಲ್ಲಿ ಉದ್ದವಾದ ಹಾರವುಳ್ಳವನು ಪಾಂಡ್ಯ, ವಿಶೇಷ ಆಕರ್ಷಿತನಾಗಿ ಕೆಳಗಣ್ಣಿನಲ್ಲಿ ನಿನ್ನನ್ನೇ ನೋಡುತ್ತಿರುವವನು ಚೇರಮ,

ವ|| ಮತ್ತಿತ್ತ ಬೀಸುವ ಚಾಮರಂಗಳ ಪೊಳಪಿನೊಳಮೆತ್ತಿದ ಬೆಳ್ಗೊಡೆಗಳ ಬೆಳ್ಪಿನೊಳಂ ದೆಸೆಗಳೆಲ್ಲಂ ಧವಳಿಸಿದನ್ನವಾಗೆ ಪೊಗಳುತೆ ವರ್ಪವರ ಸರಂಗಳೊಳಂ ಪಾಡುವ ಪಾಠಕಾಜಿರಿಂ ಚರಂಗಳೊಳೆಲ್ಲಂ ದಿಗ್ಭಿತ್ತಿಗಳ್ ತೆಕ್ಕನೆ ತೀವೆ ಮಣಿಮಯಪೀಠದ ಮೇಲೆ ಕಾಲನವಷ್ಟಂಭದಿಂ ನೀಡಿ-

ಮ|| ಅಲರಂಬಿಂದುಱಿದೆನ್ನ ಮೆಲ್ಲೆರ್ದೆಯನಿಂತುರ್ಚಿತ್ತಿದೆಂಬಂತೆ ನೆ
ಯ್ದಿಲ ಕಾವಂ ತಿರುಪುತ್ತುಮೊಂದನನಿಬರ್ ತಮ್ಮಂದಿರುಂ ತನ್ನೆರ ।
ಟ್ಕೆಲದೊಳ್ ಬಂದಿರೆ ನೋಡಿ ಸೋಲ್ತು ನಿನಗಾ ಗೇಯಕ್ಕೆ ಸೋಲ್ತಂತೆವೋಲ್
ತಲೆಯಂ ತೂಗುವವಂ ಸುಯೋಧನನೃಪಂ ನೀನಾತನಂ ನೋಡುಗೇ ॥ ೫೫

ವ|| ಮತ್ತಿತ್ತ ಮಿಂಚಂ ತಟ್ಟ ಮೆಡಱಿದಂತೆ ಸುತ್ತಿಱಿದ ಕಾಲ್ಗಾಪಿನ ಕಡಿತಲೆಯ ಬಳಸಿದಗಣ್ಯ ಪಣ್ಯಾಂಗನಾಜನದ ನಡುವೆ ಮಣಿಮಯಪೀಠಂಗಳನೇಱಿ-

ಕಂ|| ಆಯತ ಯದುವಂಶ ಕುಲ
ಶ್ರೀಯಂ ತಬ್ಬಿಸಿದದಟರತಿರಥರವರ ।
ತ್ಯಾಯತಭುಜಪರಿಘರ್ ನಾ
ರಾಯಣ ಬಲದೇವರೆಂಬರಂಬುಜವದನೇ ॥ ೫೬

ವ|| ಎಂದು ಕಿಱಿದಂತರಂ ಪೋಗಿ-

ಉ|| ಇಂತಿವರಿನ್ನರೀ ದೊರೆಯರೆಂದಱಿವಂತಿರೆ ಪೇಳ್ದುವೇಳ್ದು ರಾ
ಜಾಂತರದಿಂದೆ ರಾಜಸುತೆಯಂ ನಯದಿಂದವಳುಯ್ದಳಂತು ಸ ।
ದ್ಭ್ರಾಂತ ಸಮೀರಣೋತ್ಥಿತ ವಿಶಾಳ ವಿಲೋಳ ತರಂಗ ರೇಖೆ ಪ
ದ್ಮಾಂತರದಿಂದಮಿಂಬಱಿದು ಮಾನಸಹಂಸಿಯನುಯ್ವಮಾರ್ಗದಿಂ ॥ ೫೭

ಸೂರ್ಯತೇಜಸ್ಸುಳ್ಳ ಆತ ಕಳಿಂಗದೇಶದರಸನು ನೋಡು. ವ|| ಈ ಕಡೆ ಬೀಸುವ ಚಾಮರಗಳ ಹೊಳಪಿನಿಂದಲೂ ಎತ್ತಿದ ಬೆಳುಗೊಡೆಗಳ ಬೆಳುಪಿನಿಂದಲೂ ದಿಕ್ಕುಗಳಲ್ಲಿ ಬಿಳಿಯಬಣ್ಣದಿಂದ ಕೂಡಿದುದಾಗಿರಲು ಹೊಗಳುತ್ತಲಿರುವವರ ಸ್ವರಗಳಿಂದಲೂ ಹಾಡುತ್ತಿರುವವರ ಹೊಗಳುಭಟ್ಟರ ಮಧುರವಾದ ಧ್ವನಿಗಳಿಂದಲೂ ದಿಗಂತಗಳೆಲ್ಲವೂ ಇದ್ದಕ್ಕಿದ್ದ ಹಾಗೆ ತುಂಬಿರಲು ರತ್ನಖಚಿತವಾದ ಆಸನದ ಮೇಲೆ ತನ್ನ ಕಾಲನ್ನು ಠೀವಿಯಿಂದ ನೀಡಿ ೫೫. ನನ್ನ ಮೃದುವಾದ ಹೃದಯವನ್ನು ಪುಷ್ಪಬಾಣವು ಈ ದಿನ ಹೀಗೆ ಚುಚ್ಚುತ್ತಿದೆ ಎನ್ನುವ ಹಾಗೆ ನೆಯ್ದಿಲ ಹೂವಿನ ಕಾವನ್ನು ಒಂದು ಕೈಯಲ್ಲಿ ತಿರುಗಿಸುತ್ತಲೂ ಅಷ್ಟು ಜನ ತಮ್ಮಂದಿರೂ ತನ್ನ ಎರಡು ಪಕ್ಕದಲ್ಲಿಯೂ ಬಂದಿರಲು ನಿನ್ನ ಸೌಂದರ್ಯಕ್ಕೆ ಸೋತಿದ್ದರೂ ಆ ಸಂಗೀತಕ್ಕೆ ಸೋತವನಂತೆ ತಲೆಯನ್ನು ತೂಗುವ ಅವನು ದುರ್ಯೋಧನ ಭೂಪತಿ; ಆತನನ್ನು ನೀನು ನೋಡು. ವ|| ಈ ಕಡೆ ಮಿಂಚನ್ನೇ ಮುಸುಕಿದ್ದಾರೆಯೋ ಎನ್ನುವಂತಿರುವ ಅಸಂಖ್ಯಾತರಾದ ವೇಶ್ಯಾಸ್ತ್ರೀಯರ ಮಧ್ಯೆ ರತ್ನಖಚಿತವಾದ ಪೀಠದ ಮೇಲೆ ೫೬. ಕುಳಿತಿರುವವರು ವಿಸ್ತಾರವಾದ ಯದುಲಕ್ಷ್ಮಿಯನ್ನು ಆಲಿಂಗನಮಾಡಿಕೊಂಡಿರುವ ಶೂರರೂ ಪರಾಕ್ರಮಿಗಳೂ ದೀರ್ಘವಾದ ಪರಿಘಾಯುಧದಂತಿರುವ ತೋಳುಗಳನ್ನುಳ್ಳವರೂ ಆದವರು ಕೃಷ್ಣಬಲರಾಮರೆಂಬುವರು. ವ|| ಎಂದು ಸ್ವಲ್ಪದೂರ ಹೋಗಿ ೫೭. ಇವರು ಇಂತಹವರು, ಈ

ವ|| ಅಂತು ನೆರೆದರಸುಮಕ್ಕಳಾರುಮಂ ಮೆಚ್ಚದೆ ಮಗುೞ್ವರೆ ದ್ರುಪದನಿದಱೊಳೆಲ್ಲ ಮೇಸಿಂ ಹೋಮಾಗ್ನಿಸಂಭವಮಪ್ಪ ದಿವ್ಯಚಾಪಮನೇಱಿಸಿಯುಮಾಯಯ್ದು ಶರದೊಳಾಕಾಶದೊಳ್ ನಲಿದು ಪೊಳೆಯುತ್ತಿರ್ಪ ಜಂತ್ರದ ಮೀನನಿಸಲಾರ್ಪೊಡೆ ಬಂದೇಱಿಸಿಯುಮೆಚ್ಚು ಗೆಲ್ದುಂಗೊಂಡೆನ್ನ ಮಗಳಂ ಮದುವೆಯಪ್ಪವೆಂಬುದುಮಾಮಾಮೆ ಬಿಲ್ಲನೇಱಿಸಿದಪೆವೆಂದನಿಬರಾನುಮರಸುಮಕ್ಕಳ್ ಬಂದು-

ಉ|| ಏಱಿಪೆವೆಂಬರ್ ನೆಲದಿನೆತ್ತಲುಮಾಱದೆ ಬಿೞ್ದು ನೆತ್ತರಂ
ಕಾಱಿಯುಮೆತ್ತಿ ಕಯ್ಮುಡಿದುಮಾಗಳೆ ಕಾಲುಡಿದುಂ ಬೞಲ್ದು ಪ
ಲ್ಗಾಱಿ ಪೊಡರ್ಪುಗೆಟ್ಟುಸಿರಲಪ್ಪೊಡಮಾಱದೆ ಪೋದೊಡಾಗಳಾ
ನೇಱಿಪೆನೆಂದು ಪೊಟ್ಟಱಿಸಿ ಬಂದು ಸುಯೋಧನನುಗ್ರಚಾಪಮಂ || ೫೮

ವ|| ಮೂಱು ಸೂೞ್ ಬಲವಂದು ಪೊಡಮಟ್ಟು-

ಕಂ|| ಪಿಡಿದಾರ್ಪ ಭರದಿನೆತ್ತ
ಲ್ಕೊಡರಿಸಿದೊಡೆ ನೆಲದಿನಣಮೆ ತಳರದೆ ಬಿಲ್ ನಿ |
ಲ್ತೊಡೆ ಗುಡು ಗುಡು ಗುಡು ಗೊಳ್ಳೆಂ
ದೊಡನಾರೆ ಸುಯೋಧನಂ ಕರಂ ಸಿಗ್ಗಾದಂ || ೫೯

ಯೋಗ್ಯತೆಯುಳ್ಳವರು ಎಂದು ಚೆನ್ನಾಗಿ ತಿಳಿಯುವ ಹಾಗೆ ಹೇಳಿ ಹೇಳಿ ರಾಜರೊಬ್ಬರಿಂದ ಮುಂದಕ್ಕೆ ಆ ದ್ರೌಪದಿಯನ್ನು ಬಿರುಸಾಗಿ ಬೀಸಿದ ಗಾಳಿಯಿಂದ ಮೇಲಕ್ಕೆದ್ದ ವಿಶಾಲವೂ ಚಂಚಲವೂ ಆದ ಅಲೆಗಳ ಸಾಲು ಪದವರಿತು ಕಮಲದಿಂದ ಮೇಲಕ್ಕೆ ರಾಜಹಂಸವನ್ನು ಸೆಳೆದೊಯ್ಯುವ ರೀತಿಯಲ್ಲಿ ಈ ಚೇಟಿಯು ಕರೆದುಕೊಂಡು ಹೋದಳು. ವ|| ಹಾಗೆ ಅಲ್ಲಿ ಸೇರಿದ್ದ ರಾಜಕುಮಾರರಲ್ಲಿ ಯಾರನ್ನೂ ಮೆಚ್ಚದೆ ದ್ರೌಪದಿಯು ಹಿಂದಿರುಗಿ ಬರಲು ದ್ರುಪದನು ಇದರಲ್ಲೇನಿದೆ, ಅಗ್ನಿಕುಂಡದಲ್ಲಿ ಹುಟ್ಟಿದ ದಿವ್ಯಧನುವನ್ನು ಹೆದೆಯೇರಿಸಿ ಈ ಅಯ್ದು ಬಾಣಗಳಿಂದ ಆಕಾಶದಲ್ಲಿ ನಲಿದು ಹೊಳೆಯುತ್ತಿರುವ ಯಂತ್ರದ ಮೀನನ್ನು ಹೊಡೆಯಲು ಸಮರ್ಥನಾದರೆ ಬಂದುಬಿಲ್ಲನ್ನು ಹೂಡಿ ಜಯವನ್ನು ಪಡೆದು ನನ್ನ ಮಗಳನ್ನು ಮದುವೆಯಾಗಬಹುದು ಎಂಬುದಾಗಿ ಸಾರಿದನು. ನಾವು ತಾವು ಬಿಲ್ಲನ್ನು ಏರಿಸುತ್ತೇವೆಂದು ಎಷ್ಟೋ ಜನ ರಾಜಕುಮಾರರು ಬಂದರು. ೫೮. ಏರಿಸುತ್ತೇನೆ ಎಂದವರು ಅದನ್ನು ನೆಲದಿಂದೆತ್ತಲೂ ಸಮರ್ಥರಾಗದೆ ಬಿದ್ದು ರಕ್ತವನ್ನು ಕಾರಿ, ಕೈಮುರಿದು ಕಾಲುಮುರಿದು ಬಳಲಿ ಬಾಯೊಣಗಿ ಶಕ್ತಿಗುಂದಿ ಉಸಿರಿಸುವುದಕ್ಕೂ ಆಗದೆ ಹೋಗಲು ದುರ್ಯೋಧನನು ನಾನು ಏರಿಸುತ್ತೇನೆಂದು ಜಂಭದಿಂದ ಬಂದನು. ಆ ಭಯಂಕರವಾದ ಬಿಲ್ಲನ್ನು ವ|| ಮೂರುಸಲ ಪ್ರದಕ್ಷಿಣೆಮಾಡಿ ನಮಸ್ಕರಿಸಿದನು. ೫೯. ಹಿಡಿದುಕೊಂಡು ತನ್ನ ಶಕ್ತಿಯಿದ್ದಷ್ಟನ್ನೂ ಉಪಯೋಗಿಸಿ ವೇಗದಿಂದ ಎತ್ತಲು ಪ್ರಯತ್ನಪಟ್ಟನು, ಅದು ನೆಲದಿಂದ ಸ್ವಲ್ಪವೂ ಅಲುಗದೆ ನಿಂತುಬಿಟ್ಟಿತು. ಗುಡುಗುಡುಗುಡುಗೊಳ್ಳೆಂದು ನೋಡುತ್ತಿದ್ದವರು ಕೂಗಿಕೊಂಡರು, ದುರ್ಯೋಧನನು ವಿಶೇಷವಾಗಿ ಲಜ್ಜಿತನಾದನು.

ವ॥ ಆಗಿ ಪೋಗಿ ಕರ್ಣನ ಮೊಗಮಂ ನೋಡಿದೊಡೆ ಕರ್ಣನಾಳ್ದನ ಸಿಗ್ಗಾದ ಮೊಗಮಂ ಕಂಡು-

ಕಂ॥ ಆನೇಱಿಪೆನೆಂದಾ ಕಾ
ನೀನಂ ಬಂದೆತ್ತಿ ಬಿಲ್ಲನೇಱಿಸಿ ತೆಗೆಯಲ್ ।
ತಾನಾರ್ತನಿಲ್ಲ ತೆಗೆವಂ
ತಾ ನೃಪತಿಗಳರಿಗನಿದಿರೊಳೇಂ ಪುಟ್ಟಿದರೇ ॥ ೬೦

ವ॥ ಅಂತಾ ಬಿಲ್ಲಂ ಪಿಡಿದವರೆಲ್ಲಂ ಬಿಲ್ಲಿಂಬೆಱಗುವಾಗಿ ಸಿಗ್ಗಾಗಿ ಪೋಗಿ ತಂತಮ್ಮಿರ್ಪೆಡೆಯೊಳಿರೆ ಪಾಂಚಾಳರಾಜನೀ ನೆರೆದರಸುಮಕ್ಕಳೊಳಾರುಮೀ ಬಿಲ್ಲನೇಱಿಸಲಾರ್ತ ರಿಲ್ಲಮೀ ಜನವಡೆಯೊಳಾರಾನುಮೀ ಬಿಲ್ಲನೇಱಿಸಲಾರ್ಪೊಡೆ ಬನ್ನಿಮೆಂದು ಸಾಱುವುದುಂ-

ಚಂ॥ ಮುಸುಕಿದ ನೀರದಾವಳಿಗಳಂ ಕಿರಣಂಗಳಿನೊತ್ತಿ ತೇಜಮು
ರ್ವಿಸುವಿನಮಾಗಳೊರ್ಮೊದಲೆ ಮೂಡುವ ಬಾಳ ದಿನೇಶಬಿಂಬದೊಂ ।
ದೆಸಕದಿನಾ ದ್ವಿಜನ್ಮಸಭೆಯಿಂ ಪೊಱಮಟ್ಟೊಡೆ ಮಾಸಿದಂದಮುಂ
ಪಸದನದಂತೆ ಕಣ್ಗೆಸೆದು ತೋಱಿದುದಾ ಕದನತ್ರಿಣೇತ್ರನಾ ॥ ೬೧

ವ॥ ಅಂತು ಪೊಱಮಡುವರಾತಿಕಾಲಾನಲನಂ ಕಂಡು ಕಡ್ಡುವಂದ ದೊಡ್ಡರೆಲ್ಲಂ ಮುಸುಱಿ-

ಕಂ॥ ಸಂಗತಸತ್ವರ್ ಕುರು ರಾ
ಜಂಗಂ ಕರ್ಣಂಗಮೇಱಿಸಲ್ಕರಿದನಿದಂ ।
ತಾಂ ಗಡಮೇಱಿಪನೀ ಪೂ
ರ್ವಂಗಕ್ಕಟ ಮೆಯ್ಯೊಳೊಂದು ಮರುಳುಂಟಕ್ಕುಂ ॥ ೬೨

ವ॥ ದುರ್ಯೋಧನನು ಕರ್ಣನ ಮುಖವನ್ನು ನೋಡಿದನು. ಕರ್ಣನು ಸ್ವಾಮಿಯ ನಾಚಿದ ಮೊಗವನ್ನು ನೋಡಿ ೬೦. ನಾನು ಏರಿಸುತ್ತೇನೆಂದು ಬಂದು ಎತ್ತಿ ಏರಿಸಲು ಶಕ್ತನಾಗಲಿಲ್ಲ. ಹಾಗೆ ಮಾಡುವುದಕ್ಕೆ ಆ ರಾಜರುಗಳು ಅರ್ಜುನನಿಗಿಂತ ಸಮರ್ಥರಾಗಿ ಹುಟ್ಟಿದ್ದಾರೆಯೇನು? ವ॥ ಹಾಗೆ ಆ ಬಿಲ್ಲನ್ನು ಹಿಡಿದವರೆಲ್ಲರೂ ಅಸ್ತವ್ಯಸ್ತವಾಗಿ ಲಜ್ಜಿತರಾಗಿ ಹೋಗಿ ತಾವು ತಾವು ಇದ್ದ ಸ್ಥಳಗಳಲ್ಲಿದ್ದರು. ಆಗ ದ್ರುಪದನು ಇಲ್ಲಿರುವ ರಾಜಕುಮಾರರಲ್ಲಿ ಈ ಬಿಲ್ಲನ್ನೇರಿಸಲು ಯಾರೂ ಶಕ್ತರಾಗಲಿಲ್ಲ. ಈ ಜನದ ಗುಂಪಿನಲ್ಲಿ ಯಾರಾದರೂ ಈ ಬಿಲ್ಲನ್ನೇರಿಸುವ ಶಕ್ತಿಯಿದ್ದರೆ ಬನ್ನಿ ಎಂದು ಸಾರಿದನು. ೬೧. ಮುಚ್ಚಿಕೊಂಡಿರುವ ಮೋಡಗಳ ಸಮೂಹವನ್ನು ಕಿರಣಗಳಿಂದ ಒತ್ತಿ ತೇಜಸ್ಸು ಪ್ರಕಾಶಮಾನವಾಗುತ್ತಿರಲು ಇದ್ದಕ್ಕಿದ್ದ ಹಾಗೆ ಉದಯವಾಗುವ ಬಾಲಸೂರ್ಯ ಬಿಂಬದೊಂದು ರೀತಿಯಲ್ಲಿ ಬ್ರಾಹ್ಮಣಸಭೆಯಿಂದ ಅರ್ಜುನನು ಹೊರಟು ಬಂದನು. ಆ ಕದನತ್ರಿಣೇತ್ರನ ಮಲಿನವಾಗಿದ್ದ ರೀತಿಯೂ ಅಲಂಕಾರಮಾಡಿರುವಂತೆಯೇ ಕಣ್ಣಿಗೆ ರಮಣೀಯವಾಗಿ ತೋರಿತು. ವ॥ ಹಾಗೆ ಹೊರಟು ಬರುವ ಅರಾತಿಕಾಲಾನಲನನ್ನು ಕಂಡು ಗಡ್ಡಬಂದ ವೃದ್ಧರೆಲ್ಲ ಮುತ್ತಿಕೊಂಡು ೬೨. ಸತ್ವಶಾಲಿಗಳಾದ ದುರ್ಯೋಧನಕರ್ಣರಿಗೂ ಏರಿಸುವುದಕ್ಕೆ ಅಸಾಧ್ಯವಾದ

ವ॥ ಎಂದು ಬಾಯ್ಗೆ ವಂದುದನೆ ನುಡಿಯೆ ರಂಗಭೂಮಿಯ ನಡುವೆ ನಿಂದು ದಿವ್ಯಚಾಪಕ್ಕೆ ಪೊಡವಟ್ಟುವಯುವದಿಸೆಡಗೆಯ್ಯೊಳೆತ್ತಿಕೊಂಡು ತನ್ನ ಬಗೆದ ಕಜ್ಜಮಂ ಗೊಲೆಗೊಳಿಸುವಂತಾ ಬಿಲ್ಲ ಗೊಲೆಯನೇಱೆ ನೂಂಕಿ-

ಮ॥ ದೆಸೆ ಕಂಪಂಗೊಳೆ ಕೊಂಡು ದಿವ್ಯಶರಮಂ ಕರ್ಣಾದಿಗಳ್ ಕಂಡು ಬೆ
ಕ್ಕಸಮಾಗಿರ್ಪಿನಮೊಂದೆ ಸೂೞೆ ತೆಗೆದಾಕರ್ಣಾಂತಮಂ ತಾಗೆ ನಿ
ಟ್ಟಿಸಲಾರ್ಗಾರ್ಗಿಸಲಕ್ಕುಮೆಂಬೆಸಕದಾ ಮೀನಂ ಸಮಂತೆಚ್ಚು ಮೆ
ಚ್ಚಿಸಿದಂ ದೇವರುಮಂ ಧನುರ್ಧರರುಮಂ ವಿದ್ವಿಷ್ಟವಿದ್ರಾವಣಂ ॥ ೬೩

ವ॥ ಆಗಳಾ ಪಿಡಿದ ಬಿಲ್ಲೆ ಕಬ್ಬಿನ ಬಿಲ್ಲಾಗೆಯುಮಂಬುಗಳೆ ಪೂವಿನಂಬುಗಳಾಗೆಯು ಮೆಚ್ಚ ಮೀನೆ ಮೀನಕೇತನಮಾಗೆಯುಂ ಸಹಜಮನೋಜನಂ ಮನೋಜನೆಂದ ಬಗೆಮ-

ಚಂ॥ ನವೆ ಕಡೆಗಣ್ ಮನಂ ಬಯಸೆ ತಳ್ತಮರ್ದಪ್ಪಲೆ ತೋಳ್ಗಳಾಸೆಯೊಳ್
ತೊಡರ್ದಿರೆ ಪೊಣ್ಮೆ ಘರ್ಮಜಲಮುಣ್ಮೆ ಭಯಂ ಕಿಡೆ ನಾಣ್ ವಿಕಾರದೊಳ್ ।
ತೊಡರ್ದಿರೆ ಕೆಯ್ಯುಮಳ್ಕಿಪ ಕನ್ನೆಗೆ ಸುಂದರಮಾಲೆ ಮಾಲೆಯಂ
ತಡೆಯದೆ ನೀಡೆ ಮಾಣದೆ ಗುಣಾರ್ಣವನಂ ಸತಿ ಮಾಲೆ ಸೂಡಿದಳ್ ॥ ೬೪

ಇದನ್ನು ಇವನು ಈ ಹಾರುವನು ಪರಿಸುತ್ತಾನಲ್ಲವೇ? ಈ ಬ್ರಾಹ್ಮಣನಿಗೆ, ಅಯ್ಯೋ, ಶರೀರದಲ್ಲಿ ಪಿಶಾಚಿ ಸೇರಿಕೊಂಡಿರಬೇಕು ವ॥ ಎಂದು ಬಾಯಿಗೆ ಬಂದುದನ್ನು ಆಡಿದರು. ಅರ್ಜುನನು ರಂಗಸ್ಥಳದ ಮಧ್ಯಭಾಗದಲ್ಲಿ ನಿಂತುಕೊಂಡು ದಿವ್ಯಧನಸ್ಸಿಗೆ ನಮಸ್ಕಾರಮಾಡಿ ಶ್ರಮವಿಲ್ಲದೆ ಎಡಗೈಯ್ಯಿಂದಲೇ ಎತ್ತಿಕೊಂಡು ತಾನು ಕೈಹಾಕಿದ ಕಾರ್ಯವನ್ನು ಸುಗಮವಾಗಿ ಮುಗಿಸುವಂತೆ ಆ ಬಿಲ್ಲಿನ ತುದಿಯನ್ನು ಎಳೆದು ಕಟ್ಟಿ- ೬೩. ದಿಕ್ಕುಗಳೆಲ್ಲ ನಡುಗುವ ಹಾಗೆ ದಿವ್ಯ ಬಾಣವನ್ನು ತೆಗೆದುಕೊಂಡು ಕರ್ಣನೇ ಮೊದಲಾದವರು ನೋಡಿ ಆಶ್ಚರ್ಯಪಡುತ್ತಿರಲು ಒಂದೇ ಸಲಕ್ಕೆ ಕಿವಿಮುಟ್ಟುವವರೆಗೆ ಸೆಳೆದು ಇದನ್ನು ಯಾರಿಗೆ ನೋಡುವುದಕ್ಕೂ ಹೊಡೆಯುವುದಕ್ಕೂ ಸಾಧ್ಯ ಎಂಬಂತಿದ್ದ ಮೀನನ್ನು ಭೇದಿಸಿ ದೇವತೆಗಳನ್ನೂ ಕುಶಲರಾದ ಬಿಲ್ಗಾರರನ್ನೂ ವಿದ್ವಿಷ್ಟವಿದ್ರಾವಣನಾದ ಅರ್ಜುನನು ಸಂತೋಷಪಡಿಸಿದನು. ವ॥ ಆಗ ಅವನು ಹಿಡಿದ ಬಿಲ್ಲನ್ನೇ ಕಬ್ಬಿನ ಬಿಲ್ಲನ್ನಾಗಿಯೂ ಬಾಣಗಳನ್ನೇ ಪುಷ್ಪಬಾಣಗಳನ್ನಾಗಿಯೂ ಹೊಡೆದ ಮೀನನ್ನೇ ಮೀನಿನ ಬಾವುಟವನ್ನಾಗಿಯೂ ಸಹಜಮನೋಜನಾದ ಅರ್ಜುನನನ್ನೇ ಮನ್ಮಥನನ್ನಾಗಿಯೂ ಭಾವಿಸಿದಳು. ೬೪. ಅವಳ ಕಡೆಗಣ್ಣು ಅವನಲ್ಲಿ ನಾಟಿತು. ಮನಸ್ಸು ಅವನನ್ನು ಬಯಸಿತು, ತೋಳುಗಳು ಅವನ ಗಾಢಾಲಿಂಗನಕ್ಕೆ ಆಶಿಸಿತು. ಬೆವರು ಹೆಚ್ಚುತ್ತಿದ್ದಿತು ಭಯವು ಉಂಟಾಯಿತು ನಾಚಿಕೆ ಮಾಯವಾಯಿತು, ಅಂಗವಿಕಾರಗಳು ಶರೀರದಲ್ಲಿ ತಲೆದೋರಿದುವು. ಸುಂದರಮಾಲೆಯೆಂಬ ಚೇಟಿ ಸ್ವಯಂವರಮಾಲೆಯನ್ನು ಸಾವಕಾಶಮಾಡದೆ ಅವಳ ಕೈಲಿತ್ತಳು. ಸತಿಯಾದ

ವ॥ ಆಗಳ್ ದ್ರುಪದಂ ಬದ್ದವಣದ ಪಱೆಗಳಂ ಬಾಜಿಸಲ್ವೇೞ್ದು ಸುರತ ಮಕರ ಧ್ವಜನಂ ದ್ರೌಪದಿಯೊಡನೆ ಸಿವಿಗೆಯನೇಱಿಸಿ ಧೃಷ್ಟದ್ಯುಮ್ನ ಯುಧಾಮನ್ಯೂತ್ತಮೌಜಶ್ಶಿಖಂಡಿ ಚೇಕಿತಾನರೆಂಬ ತನ್ನ ಮಗಂದಿರುಂ ತಮ್ಮಂದಿರುಂಬೆರಸು ನೆಲಂ ಮೂರಿವಿಟ್ಟಂತೆ ಬರೆ ಮುಂದಿಟ್ಟು ಪೊೞಲ್ಗೊಳಗೊಂಡುವರ್ಪುದುಮಿತ್ತ ದುರ್ಯೋಧನಂ ಕರ್ಣ ಶಲ್ಯ ಶಕುನಿ ದುಶ್ಶಾಸನಾದಿಗಳೊಳಾಲೋಚಿಸಿ ಪೇೞಿಮೇಗೆಯ್ವಮೆನೆ ಕರ್ಣನಿಂತೆಂದಂ-

ಮ॥ ಜನಮೆಲ್ಲಂ ನೆರೆದಕ್ಕಟಣ್ಣರಿವರಿಂದೇವಂದರೇವೋದರೆಂ
ಬಿನಮೇಂ ಪೋಪಮೆ ನಾಡ ಕೂಟಕುಳಿಗಳ್ಗೇದೋಸಮೇಂ ಬನ್ನಮೊಂ ।
ದನೆ ಕೇಳಾಂತರನಿಕ್ಕಿ ಮಿಕ್ಕ ವಿಜಯಶ್ರೀಕಾಂತೆಗಂ ಕಾಂತೆಗಂ
ನಿನಗಂ ದೋರ್ವಲದಿಂದಮೊಂದೆ ಪಸೆಯೊಳ್ ಪಾಣಿಗ್ರಹಂಗೆಯ್ಯೆನೇ ॥೬೫

ವ॥ ಎನೆ ಶಲ್ಯನಿಂತೆಂದಂ-

ಚಂ॥ ಕುಡುವೊಡೆ ನಿಸ್ತ್ರಪಂ ಕುಡುವುದೇಱಿಸಿದಂ ಬೆಸೆಕೋಲನೆಂದು ಪೇೞ್
ಕುಡುವುದೆ ಕನ್ನೆಯಂ ದ್ವಿಜಕುಲಂಗಿದು ವಿಶ್ವನರೇಂದ್ರ ವೃಂದದೊಳ್ ।
ತೊಡರ್ದ ಪರಾಭವಂ ದ್ರುಪದನಂ ತಱಿದೊಟ್ಟದೆ ಕೆಮ್ಮಗಾನಿದಂ
ಕಡೆಗಣಿಸಿರ್ದೊಡೆನ್ನ ಕಡುಗೊರ್ವಿದ ತೋಳ್ಗಳ ಕೊರ್ವದೇವುದೋ ॥ ೬೬

ದ್ರೌಪದಿಯು ಗುಣಾರ್ಣವನಿಗೆ ಮಾಲೆಯನ್ನು ಹಾಕಿದಳು. ವ॥ ಆಗ ದ್ರುಪದನು ಮಂಗಳವಾದ್ಯಗಳನ್ನು ವಾದನಮಾಡಿಸಿ ಸುರತಮಕರಧ್ವಜನಾದ ಅರ್ಜುನನನ್ನು ದ್ರೌಪದಿಯೊಡನೆ ಪಲ್ಲಕ್ಕಿಯನ್ನೇರಿಸಿ ಧೃಷ್ಟದ್ಯುಮ್ನ, ಯುಧಾಮನ್ಯು, ಉತ್ತಮೌಜ, ಶಿಖಂಡಿ ಮತ್ತು ಚೇಕಿತಾನರೆಂಬ ತನ್ನ ಮಕ್ಕಳೂ ಮತ್ತು ತಮ್ಮಂದಿರೊಡಗೂಡಿ ನೆಲವು ಬಾಯಿಬಿಟ್ಟ ಹಾಗೆ ಅರ್ಜುನನನ್ನು ಮುಂದಿಟ್ಟುಕೊಂಡು ಪಟ್ಟಣಕ್ಕೆ ಬಂದನು. ದುರ್ಯೋಧನನು ಕರ್ಣ,ಶಲ್ಯ, ಶಕುನಿ ದುಶ್ಶಾಸನನೇ ಮೊದಲಾದವರಲ್ಲಿ ಆಲೋಚಿಸಿ ಈಗ ಏನು ಮಾಡೋಣ ಹೇಳಿ ಎನ್ನಲು ಕರ್ಣನು ಹೀಗೆ ಹೇಳಿದನು. ೬೫. ಜನವೆಲ್ಲ ಒಟ್ಟುಗೂಡಿ ಅಯ್ಯೋ ಅಣ್ಣಂದಿರು ಈ ದಿನ ಏಕೆ ಬಂದರು ಏಕೆ ಹೋಗುತ್ತಾರೆ ಎನ್ನುವ ಹಾಗೆ ನಾವು ಹೋಗುವುದೇ? ಪರಾಕ್ರಮಿಗಳಾದ ನಮಗೆ ಈ ತೆರನಾದ ಸೋಲು ಅವಮಾನಕರ, ನನ್ನ ಅಭಿಪ್ರಾಯವಿದು : ಎದುರಿಸಿದವರನ್ನು ಸೋಲಿಸಿ ಈಗ ಕೈಮೀರಿರುವ ವಿಜಯಲಕ್ಷ್ಮಿಗೂ ಈ ದ್ರೌಪದಿಗೂ ನಿನಗೂ ನನ್ನ ಬಾಹುಬಲದಿಂದ ಒಂದೇ ಹಸೆಮಣೆಯಲ್ಲಿ ಪಾಣಿಗ್ರಹಣ (ವಿವಾಹ)ವನ್ನು ಮಾಡಲಾರೆನೇ? ಎಂದನು. ೬೬. ಕನ್ಯಾದಾನಮಾಡಬೇಕಾದರೆ ಲಜ್ಜೆಯಾಗದ ರೀತಿಯಲ್ಲಿ ದಾನಮಾಡಬೇಕು. ಹತ್ತಿಯನ್ನು ಎಕ್ಕುವ ಬಿಲ್ಲಿನಂತಿರುವ ಈ ಬಿಲ್ಲನ್ನು ಏರಿಸಿದನೆಂಬ ಕಾರಣದಿಂದ ಬ್ರಾಹ್ಮಣವಂಶದವನಿಗೆ ಕನ್ಯೆಯನ್ನು ಕೊಡುವುದೇ? ಈ ಪರಾಭವವು ಸಮಸ್ತರಾಜವೃಂದಕ್ಕೂ ಸಂಬಂಧಪಟ್ಟುದು, ಆದುದರಿಂದ ಈಗ ನಾನು ಈ ದ್ರುಪದನನ್ನು ತರಿದು ಹಾಕದೆ ಸುಮ್ಮನಿದ್ದರೆ ಕೊಬ್ಬಿ ಬೆಳೆದಿರುವ ನನ್ನ ತೋಳುಗಳಿಗೆ

ವ॥ ಎಂದು ಕೆಳರ್ದು ನುಡಿದು ಸಯಂಬರಕೆ ನೆರೆದರಸುಮಕ್ಕಳೆಲ್ಲರನುತ್ಸಾಹಿಸಿ ನೋಡೆ ನೋಡೆ-

ಉ॥ ಪಕ್ಕರೆಯಿಕ್ಕಿ ಬಂದುವು ಹಯಂ ಘಟೆ ಪಣ್ಣಿದುವಾಯುಧಂಗಳಿಂ
ತೆಕ್ಕನೆ ತೀವಿ ಬಂದುವು ರಥಂ ಪುಲಿವಿಂಡುವೊಲಾದಳುರ್ಕೆ ಕೈ ।
ಮಿಕ್ಕಿರೆ ಬಂದುದೊಂದಣಿ ರಣಾನಕ ರಾವಮಳುಂಬಮಾದುದಾರ್
ಮಿಕ್ಕು ಬರ್ದುಂಕುವನ್ನರಿವರ್ಗೆಂಬಿನೆಗಂ ಮಸಗಿತ್ತು ರಾಜಕಂ ॥ ೬೭

ವ॥ ಅಂತು ನೆಲಂ ಮೂರಿವಿಟ್ಟಂತೆ ತಳರ್ದು-

ಚಂ॥ ತೆರೆಗಳ ಬಂಬಲಂ ಮಿಳಿರ್ವ ಕೇತನರಾಜಿಗಳೋಳಿವಟ್ಟ ಬೆ
ಳ್ನೊರೆಗಳ ಪಿಂಡನೆತ್ತಿಸಿದ ಬೆಳ್ಗೊಡೆಗಳ್ ಮಕರಂಗಳ ಭಯಂ ।
ಕರ ಕರಿಗಳ್ ತೆಱಂಬೊಳೆವ ಮೀಂಗಳನುಳ್ಕುವ ಕೈದುಗಳ್ ನಿರಾ
ಕರಿಸಿರೆ ಮೇರೆದಪ್ಪಿ ಕವಿದತ್ತು ನರಾಧಿಪಸೈನ್ಯಸಾಗರಂ ॥ ೬೮

ವ॥ ಅಂತು ಕವಿದ ರಿಪುಬಳಜಳನಿಧಿಯ ಕಳಕಳರವಮಂ ಕೇಳ್ದು ಪೊೞಲಂ ಪುಗಲೊಲ್ಲದೆ ನಿಂದ ಮನುಜಮಾಂಧಾತನಂ ಪಾಂಚಾಳರಾಜನಿಂತೆಂದಂ-

ಮ॥ ಧನುವಂ ನೀಂ ತೆಗೆದೆಚ್ಚು ಮೀನನಳವಂ ಕೆಯ್ಕೊಂಡುದರ್ಕಂ ಕರಂ
ನಿನಗೀ ಕನ್ನಿಕೆ ಸೋಲ್ತುದರ್ಕಮೆಡೆಯೊಳ್ ಕೋಪಾಗ್ನಿ ಕೈಗಣ್ಮೆ ಬಂ ।
ದಿನಿತುಂ ರಾಜಕುಲಂ ಸಮಸ್ತಭರದಿಂ ಮೇಲೆಟ್ಟಿದಿಸ್ ಕಾವನಾ
ವನೊ ನೀನಲ್ಲದೆ ಕಾವುದೆನ್ನ ತಲೆಯಂ ವಿದ್ವಿಷ್ಟವಿದ್ರಾವಣಾ ॥ ೬೯

ಸಾರ್ಥಕತೆಯೇನು? ವ॥ ಎಂದು ಕೋಪಿಸಿ ನುಡಿದು ಸ್ವಯಂವರಕ್ಕೆ ಸೇರಿದ್ದ ಎಲ್ಲ ರಾಜಕುಮಾರರನ್ನೂ ಪ್ರೋತ್ಸಾಹಿಸಿ ನೋಡುತ್ತಿದ್ದಂತೆಯೇ ೬೭. ಜೀನುಗಳನ್ನು ಧರಿಸಿದ ಕುದುರೆಗಳು ಬಂದುವು. ಆನೆಗಳ ಸಮೂಹವು ಯುದ್ಧಸನ್ನದ್ಧವಾದವು. ಆಯುಧಗಳಿಂದ ತುಂಬಿದ ರಥಗಳು ಬಂದವು. ಕಾಲಾಳುಸೈನ್ಯದ ಪಂಕ್ತಿಯೊಂದು ಹುಲಿಯ ಹಿಂಡಿನ ಹಾಗೆ ಕೈಮೀರಿ ಮುಂದೆ ಬಂದಿತು. ಯುದ್ಧವಾದ್ಯವೂ ವಿಜೃಂಭಿಸಿತು. ಇದನ್ನು ಮೀರಿ ಯಾರು ಬದುಕುತ್ತಾರೆ ಎನ್ನುವ ಹಾಗೆ ರಾಜಸಮೂಹವು ರೇಗಿ ಬಂದಿತು. ವ॥ ಹಾಗೆ ನೆಲವು ಪ್ರಸರಿಸಿದ ಹಾಗೆ ನಡೆದು ೬೮. ಚಲಿಸುತ್ತಿರುವ ಧ್ವಜಗಳ ಸಮೂಹವು ತೆರೆಗಳ ರಾಶಿಗಳನ್ನೂ ಎತ್ತಿ ಹಿಡಿದ ಬಿಳಿಯ ಕೊಡೆಗಳು ಸಾಲಾಗಿರುವ ಬಿಳಿಯ ನೊರೆಗಳ ಸಮೂಹವನ್ನೂ ಭಯಂಕರವಾದ ಆನೆಗಳು ಮೊಸಳೆಗಳನ್ನೂ ಪ್ರಕಾಶಿಸುತ್ತಿರುವ ಆಯುಧಗಳು ಹೊಳೆಯುತ್ತಿರುವ ಮೀನುಗಳನ್ನೂ ತಿರಸ್ಕರಿಸುತ್ತಿರಲು ರಾಜರ ಸೇನಾಸಮುದ್ರವು ಮೇರೆಯನ್ನು ಮೀರಿ ಕವಿಯಿತು. ವ॥ ಹಾಗೆ ಮುತ್ತಿದ ಶತ್ರುಸೇನಾಸಮುದ್ರದ ಕಳಕಳಶಬ್ದವನ್ನು ಕೇಳಿ ಪುರಪ್ರವೇಶಮಾಡದೇ ನಿಂದ ಮನುಜಮಾಂಧಾತನಾದ ಅರ್ಜುನನನ್ನು ಕುರಿತು ಪಾಂಚಾಳರಾಜನಾದ ದ್ರುಪದನು ಹೀಗೆಂದನು-೬೯. ನೀನು ಬಿಲ್ಲನ್ನು ಏರಿಸಿ ಮೀನನ್ನು ಹೊಡೆದು ಪರಾಕ್ರಮವನ್ನು ಪ್ರದರ್ಶಿಸಿದುದಕ್ಕೂ ಈ ಕನ್ಯೆ ನಿನಗೆ ವಿಶೇಷವಾಗಿ ಸೋತು ಅಧೀನಳಾದುದಕ್ಕೂ ಎಡೆಯಲ್ಲಿ ಕೋಪಾಗ್ನಿ ಹೆಚ್ಚಿ ಈ ರಾಜಸಮೂಹವು ವಿಶೇಷ ವೇಗದಿಂದ ನಮ್ಮ

ವ॥ ಎಂಬುದುಮರಾತಿಕಾಳಾನಳನಿದರ್ಕೇನುಂ ಚಿಂತಿಸಲ್ವೇಡ ನೀಮೆನ್ನ ಕಾಳೆಗಮಂ ಪೆಱಗಿರ್ದು ನೋಡಿಮೆಂದು ತಾನುಂ ಭೀಮಸೇನನುಂ ದಿವ್ಯಶರಾಸನಂಗಳಂ ಕೊಂಡು ಪೂಣೆ ಪುಗುವರಾತಿಬಲಮಂ ಮಾರ್ಕೊಂಡು ತೆಗೆನೆಱೆದಿಸೆ-

ಚಂ॥ ಸರಳ ಪೊದಳ್ದ ಬಲ್ಸರಿಯ ಕೋಳ್ಗಿರಲಾಱದೆ ಬಿಲ್ ತೆರಳ್ಪ ದು
ರ್ಧರ ಹಯಮಟ್ಟೆ ಸಂದಣಿಸಿ ಸಂದಣಿ ಕೊಬ್ಬುದಿಗೊಂಡುದಗ್ರ ಭೀ ।
ಕರ ರಥಮಟ್ಟೆ ದಂತಿಘಟೆಗಳ್ ಪೆಱಗಿಟ್ಟೊಡೆ ಕಟ್ಟೆಗಟ್ಟಿದಂ
ತಿರೆ ತಳರ್ದತ್ತರಾತಿಬಲಮಾಂಪವರಾರ್ ಕದನತ್ರಿಣೇತ್ರನಂ ॥ ೭೦

ವ॥ ಆಗಳ್ ಕರ್ಣನರ್ಣವನಿನಾದದಿಂದಾರ್ದು ಗುಣಾರ್ಣವನೊಳ್ ಬಂದು ತಾಗಿ ಶಲ್ಯಂ ಭೀಮಸೇನನೊಳ್ ತಾಗಿ ಕಿಱದುಂ ಪೊಟ್ತು ಕಾದೆ-

ಚಂ॥ ಅರಿದು ಗೆಲಲ್ಕೆ ಪಾರ್ವನ ಶರಾಸನವಿದ್ಯೆಯನೆಂದು ನೊಂದು ನಿ
ತ್ತರಿಸದೆ ಪಾರ್ವನೊಳ್ ಕಲಹಮಾಗದು ಚೀ ದೊರೆಯಲ್ತಿದೆಂದು ಭಾ ।
ಸ್ಕರಸುತನೊಯ್ಯನೋಸರಿಸೆ ಮದ್ರಮಹೀಶನುಮಂ ಮರುತ್ಸುತಂ
ವಿರಥನೆ ಮಾಡಿ ತಳ್ತು ನೆಲಕಿಕ್ಕಿದನೊರ್ಮೆಯೆ ಮಲ್ಲಯುದ್ಧದೊಳ್ ॥ ೭೧

ವ॥ ಆಗಳಾ ಬಲದ ನಡುವಿರ್ದ ನಾರಾಯಣಂ ಬಲದೇವಂಗೆ ಸುಟ್ಟಿತೋಱ ಭೀಮಾರ್ಜುನರ್ಕಳಿವರಮೋಘಮಪ್ಪರೆಂದವರ ಸಾಹಸಕ್ಕೆ ಮೆಚ್ಚಿ ಸಂತಸಂಬಟ್ಟಿರ್ದಾಗಳುಳಿದರಸು ಮಕ್ಕಳೆಲ್ಲಂ ಕರ್ಣ ಶಲ್ಯರ್ ಮೊಗಂದಿರಿದುದಂ ಕಂಡು ಮನಂಗೆಟ್ಟು-

ಮೇಲೆದ್ದಿದೆ. ಇನ್ನು ಮೇಲೆ ನಮ್ಮನ್ನು ರಕ್ಷಣೆ ಮಾಡುವವರು ನೀನಲ್ಲದೆ ಮತ್ತಾರು? ಎಲೈ ವಿದ್ವಿಷ್ಟವಿದ್ರಾವಣನೇ ನನ್ನ ತಲೆಯನ್ನು ಕಾಯಬೇಕು ಎಂದನು. ವ॥ ಅರಾತಿಕಾಲಾನಳನು (ಅರ್ಜುನನು) ಇದಕ್ಕೆ ನೀವು ಏನೂ ಚಿಂತಿಸಬೇಕಾಗಿಲ್ಲ; ನೀವು ನನ್ನ ಕಾಳೆಗವನ್ನು ಹೊರಗಿದ್ದು ನೋಡಿ ಎಂದು ಹೇಳಿ ತಾನೂ ಭೀಮಸೇನನೂ ಉತ್ತಮವಾದ ಬಿಲ್ಲುಗಳನ್ನು ತೆಗೆದುಕೊಂಡು ಪ್ರತಿಜ್ಞೆಮಾಡಿ ಪ್ರವೇಶಮಾಡಿದ ಶತ್ರುಸೈನ್ಯವನ್ನು ಪ್ರತಿಭಟಿಸಿ ದೀರ್ಘವಾಗಿ ಎಳೆದು ಪ್ರಯೋಗಮಾಡಿದರು. ೭೦. ಒಟ್ಟಿಗೆ ಸೇರಿದ ಬಿಲ್ಲಿನ ಮಳೆಯ ಸುರಿತವನ್ನು ತಡೆಯಲಾರದೆ ಬಿಲ್ಲಾಳುಗಳು ಹಿಮ್ಮೆಟ್ಟಿದರು, ಪ್ರತಿಭಟಿಸಲಾಗದೆ ಕುದುರೆಗಳು ನಾಶವಾದವು. ಗುಂಪುಕೂಡಿದ ಬಿಲ್ಲಾಳಿನ ಸಾಲುಗಳು ಬಿಲ್ಲಿನ ಪೆಟ್ಟಿನಿಂದ ಕುದಿದುಹೋಯಿತು. ಎತ್ತರವೂ ಭಯಂಕರವೂ ಆದ ರಥವು ಅಳಿದುಹೋಯಿತು. ಆನೆಯ ಸಮೂಹವು ಹಿಮ್ಮೆಟ್ಟಿ ಓಡಿತು. ಹಿಂದೆ ಇದ್ದ ಆನೆಯ ಗುಂಪುಗಳು ಕಟ್ಟೆಯನ್ನು ಕಟ್ಟಿದ ಹಾಗಿರಲು ಶತ್ರುಸೈನ್ಯವು ಸರಿದೋಡಿತು. ಕದನತ್ರಿಣೇತ್ರನಾದ ಅರ್ಜುನನನ್ನು ಪ್ರತಿಭಟಿಸುವವರಾರಿದ್ದಾರೆ? ವ॥ ಆಗ ಕರ್ಣನು ಸಮುದ್ರಘೋಷದಿಂದ ಆರ್ಭಟಮಾಡಿ ಗುಣಾರ್ಣವನಲ್ಲಿಯೂ ಶಲ್ಯನು ಭೀಮಸೇನನಲ್ಲಿಯೂ ತಾಗಿದರು. ೭೧. ಕರ್ಣನು ಹಾರುವನ ಬಿಲ್ವಿದ್ಯೆಯನ್ನು ಗೆಲುವುದಸಾಧ್ಯ ಎಂದು ದುಃಖಿಸಿ ಚೀಃ ಬ್ರಾಹ್ಮಣರಲ್ಲಿ ಜಗಳವಾಡುವುದು ಯೋಗ್ಯವಲ್ಲ ಎಂದು ನಿಧಾನವಾಗಿ ಹಿಮ್ಮೆಟ್ಟಿದನು, ಭೀಮನೂ ಮದ್ರರಾಜನಾದ ಶಲ್ಯನನ್ನು ರಥದಿಂದ ಕೆಳಕ್ಕಿಳಿಸಿ ಮಲ್ಲಯುದ್ಧದಲ್ಲಿ ಒಂದೇ ಸಲಕ್ಕೆ ನೆಲಕ್ಕುರುಳಿಸಿದನು. ವ॥ ಆಗ ಆ ಸೈನ್ಯದ ಮಧ್ಯೆ ಇದ್ದ ಶ್ರೀಕೃಷ್ಣನು ಬಲರಾಮನಿಗೆ ಇವರು ಭೀಮಾರ್ಜುನರು

ಕಂ॥ ಕರಮೊಸೆದಾ ದ್ರುಪದಜೆಯೊಳ್
ನೆರೆದೊಸಗೆಗೆ ತಮ್ಮ ಬೀರಮಂ ಬಿಂಕಮುಮಂ ।
ತೆಱಪುಂ ತಲ್ಲಂಟಯುಮಂ
ದರಿಕೇಸರಿಗಾಗಳೀವವೋಲ್ ಬೆನ್ನಿತ್ತರ್ ॥ ೭೨

ವ॥ ಆಗಳ್ ವಿಕ್ರಾಂತತುಂಗಂ ಬಿಲ್ಲ ಕೊಪ್ಪಿನ ಮೇಲೆ ಕೆಯ್ಯನೂಱಿ ಮುಗುಳ್ನಗೆ ನಗುತ್ತುಂ ಪಾಂಚಾಳರಾಜತನೂಜೆಗಿಂತೆಂದಂ-

ಕಂ॥ ನಿನ್ನನುಱುಗಿಸಲುಮಾಜಿಯೊ
ಳೆನ್ನಂ ಬೆಂಕೊಂಡು ಕಾದಲುಂ ಬಂದೀಗಳ್ ।
ಬಿನ್ನನೆ ಮೊಗದಿಂ ಬೀರರ್
ಬೆನ್ನಿತ್ತುದನಿನಿಸು ನೋಡ ಸರಸಿರುಹಮುಖೀ ॥ ೭೩

ವ॥ ಎಂಬನ್ನೆಗಂ ದ್ರುಪದಂ ಬಂದವರ್ ಪಾಂಡವರಪ್ಪುದುಮಂ ತನ್ನಳಿಯಂ ವಿಕ್ರಮಾರ್ಜುನನಪ್ಪುದುಮಂ ತಪ್ಪಿಲ್ಲದಱಿದು ಮಹಾವಿಭೂತಿಯಿಂ ಪೊೞಲಂ ಪುಗಿಸಿ-

ಚಂ॥ ಪೊೞಲೊಳಗೊಪ್ಪೆ ಕನ್ನಡಿಯ ಕಂಚಿನ ತೋರಣದೋಳಿಗಳ್ ತಳ
ತ್ತಳಿಸೆ ವಿಚಿತ್ರಕೇತುತತಿಗಳ್ ಮಿಳಿರ್ದಾಡೆ ಪುರಾಂಗನಾಜನಂ ।
ಗಳ ಜಯ ಜೀಯಮಾನ ರವಮಿಕ್ಕುವ ಸೇಸೆ ಮನೋನುರಾಗಮಂ
ಬಳೆಯಿಸೆ ಪೊಕ್ಕನಾ ದ್ರುಪದಮಂದಿರಮಂ ಪರಸೈನ್ಯಭೈರವಂ ॥ ೭೪

ಎಂದು ಬೆರಳಿನಿಂದ ಸುಟ್ಟಿ ತೋರಿಸಿ ಇವರು ಅತಿಸಾಹಸಿಗಳಾಗುತ್ತಾರೆ ಎಂದು ಅವರ ಪರಾಕ್ರಮಕ್ಕೆ ಸಂತೋಷಪಟ್ಟನು. ಉಳಿದ ರಾಜಕುಮಾರರೆಲ್ಲ ಕರ್ಣಶಲ್ಯರು ಮುಖತಿರುಗಿಸಿ ಹಿಮ್ಮೆಟ್ಟಿದುದನ್ನು ನೋಡಿ ಉತ್ಸಾಹಶೂನ್ಯರಾಗಿ ೭೨. ದ್ರೌಪದಿಯನ್ನು ಪಡೆಯಲು ಬಂದು ಸೇರಿದ ಸಂತೋಷಕ್ಕಾಗಿ ತಮ್ಮ ಪರಾಕ್ರಮವನ್ನೂ ಅಹಂಕಾರವನ್ನೂ ತಪ್ಪುಕಾಣಿಕೆಯನ್ನಾಗಿಯೂ ಬಳುವಳಿಯನ್ನಾಗಿಯೂ ಅರಿಕೇಸರಿಗೆ ಕೊಡುವ ಹಾಗೆ ಬೆನ್ನುತಿರುಗಿಸಿ ಪಲಾಯನಮಾಡಿದರು. ವ॥ ಆಗ ವಿಕ್ರಾಂತತುಂಗನಾದ ಅರ್ಜುನನು ಬಿಲ್ಲಿನ ತುದಿಯ ಮೇಲೆ ಕಯ್ಯನ್ನೂರಿಕೊಂಡು ಹುಸಿನಗೆ ನಗುತ್ತ ದ್ರೌಪದಿಗೆ ಹೀಗೆ ಹೇಳಿದನು -೭೩. ಎಲೌ ಕಮಲಮುಖಿಯಾದ ದ್ರೌಪದಿಯೇ ಈ ವೀರರು ನಿನ್ನನ್ನು ಒಲಿಸುವುದಕ್ಕೂ ನನ್ನೊಡನೆ ಜಗಳವಾಡುವುದಕ್ಕೂ ಬಂದು ಈಗ ಪೆಚ್ಚುಮುಖದಿಂದ ಬೆನ್ನು ತಿರುಗಿಸಿ ಹೋಗುತ್ತಿರುವುದನ್ನು ಸ್ವಲ್ಪನೋಡು ಎಂದು ತೋರಿಸಿದನು. ವ॥ ಅಷ್ಟರಲ್ಲಿ ದ್ರುಪದನು ಅಲ್ಲಿಗೆ ಬಂದಿರುವವರು ಪಾಂಡವರಾಗಿರುವುದನ್ನೂ ತನ್ನ ಅಳಿಯನು ವಿಕ್ರಮಾರ್ಜುನನಾಗಿರುವುದನ್ನೂ ನಿಶ್ಚಯವಾಗಿ ತಿಳಿದು ಮಹಾವೈಭವದಿಂದ ಪುರಪ್ರವೇಶಮಾಡಿಸಿದನು. ೭೪. ಪಟ್ಟಣದಲ್ಲಿ ಕನ್ನಡಿ ಮತ್ತು ಕಂಚಿನ ತೋರಣದ ಸಮೂಹಗಳು ಥಳಿಥಳಿಸಿ ಒಪ್ಪಿದುವು. ವಿಧವಿಧವಾದ ಬಾವುಟಗಳ ಸಮೂಹಗಳು ಅಲುಗಾಡಿದುವು. ಪುರದ ಸ್ತ್ರೀಜನರು ಜಯಜಯವೆಂದು ಘೋಷಿಸುವ ಶಬ್ದವೂ ಚೆಲ್ಲುವ ಮಂತ್ರಾಕ್ಷತೆಯೂ ಮನಸ್ಸಿಗೆ ಸಂತೋಷವನ್ನು ಹೆಚ್ಚಿಸಿದುವು. ಪರಸೈನ್ಯಭೈರವನಾದ ಅರ್ಜುನನು ದ್ರುಪದನ ಅರಮನೆಯನ್ನು ಪ್ರವೇಶಿಸಿದನು.

ವ|| ಆಗಳ್ ದ್ರುಪದಂ ಪಚ್ಚೆಯ ನೆಲಗಟ್ಟಿನೊಳಂ ರಾಜಾವರ್ತದ ಕಂಬದೊಳಂ ಪವಳದ ಜಂತೆಯೊಳಂ ಪದ್ಮರಾಗದ ಬೋದಿಗೆಯೊಳಮಿಂದ್ರನೀಲದ ಭದ್ರದೊಳಂ ಕರ್ಕೇತನದ ಜಾಳರಿಗೆಯೊಳಂ ಪಳುಕಿನ ಚಿತ್ರಭಿತ್ತಿಯೊಳಂ ಚಂದ್ರಕಾಂತದ ಚಂದ್ರಶಾಲೆಯೊಳಮೊಪ್ಪುವ ವಿವಾಹಗೇಹಮಂ ಸಮೆಯಿಸಿಯದಱ ನಡುವಣಾರ್ದ್ರಮೃತ್ತಿಕಾವಿರಚಿತಮಪ್ಪ ಚತುರಾಂತರದೊಳ್ ಮುತ್ತಿನ ಚೌಕದ ನಡುವಣ ಚೆಂಬೊನ್ನ ಪಟ್ಟವಣೆಯ ಮೇಗಣ ದುಗುಲದ ಪಸೆಯೊಳ್ ಗುಣಾರ್ಣವನನಾ ದ್ರುಪದಜೆಯನೊಡನೆ ಕುಳ್ಳಿರಿಸಿ ಹಿತ ಪುರೋಹಿತ ಪ್ರಾಜ್ಯಾಜ್ಯಾಹುತಿ ಹುತ ಹುತವಹಸಮಕ್ಷದೊಳ್ ಕೆಯ್ನೀರೆಱೆದು ಪಾಣಿಗ್ರಹಂಗೆಯ್ಸೆ-

ಚಂ|| ಇದಿರಿರೆ ಮಂಜಿನೊಳ್ ತುಱುಗಿ ತೆಂಕಣಗಾಳಿಯೊಳಾದ ಸೋಂಕಿನೊಳ್
ನಡುಗುವಶೋಕವಲ್ಲರಿಯ ಪಲ್ಲವದೊಳ್ ನವಚೂತಪಲ್ಲವಂ ।
ತೊಡರ್ದವೊಲಾಗೆ ಘರ್ಮಜಲದಿಂ ನಡುಪಾಕೆಯ ಪಾಣಿಪಲ್ಲವಂ
ಬಿಡಿದು ಬೆಡಂಗನಾಳ್ದುದು ಗುಣಾರ್ಣವನೊಪ್ಪುವ ಪಾಣಿಪಲ್ಲವಂ ॥ ೭೫

ವ|| ಅಂತೊರ್ವರೊರ್ವರ ಕಿಱುಕುಣಿಕೆಗಳಂ ಪಿಡಿದು ರತಿಯುಂ ಕಾಮದೇವನುಂ ಬರ್ಪಂತೆ ಬೇಳ್ವೆಯ ಕೊಂಡದ ಮೊದಲ್ಗೆ ವಂದು ಕನಕಗಿರಿಯ ಬಲಗೊಳ್ವ ಪತಂಗ ದಂಪತಿಯಂತಾ ದಂಪತಿಗಳ್ ಸಪ್ತಾರ್ಚಿಯಂ ಮೂಱು ಸೂಟ್ ಬಲವಂದು ನಿಂದಿಂ ಬೞಿಯಮಾಕೆ ಪುರೋಹಿತನ ಪೇಟ್ದೋಜೆಯೊಳ್ ಲಾಜೆಯನಗ್ನಿಕುಂಡದೊಳ್ ಸುರಿದು-

ವ|| ಆಗ ದ್ರುಪದನು ಪಚ್ಚೆಯೆಂಬ ರತ್ನದಿಂದ ಮಾಡಿದ ನೆಲಗಟ್ಟಿನಿಂದಲೂ ಎಳೆಯ ಇಂದ್ರನೀಲಮಣಿಯಿಂದ ಮಾಡಿದ ಕಂಭಗಳಿಂಗಲೂ ಹವಳದ ಜಂತಿಗಳಿಂದಲೂ ಪದ್ಮರಾಗದ ಬೋದಿಗೆಗಳಿಂದಲೂ ಇಂದ್ರನೀಲದ ಉಪ್ಪರಿಗೆಗಳಿಂದಲೂ ಚಿನ್ನದ ಜಾಲರಿಗಳಿಂದಲೂ ಸ್ಫಟಿಕದ ಚಿತ್ರಿತವಾದ ಗೋಡೆಗಳಿಂದಲೂ ಚಂದ್ರಕಾಂತ ಶಿಲೆಯಿಂದ ನಿರ್ಮಿಸಿದ ಮೇಲ್ಮಹಡಿಯಿಂದಲೂ ವಿವಾಹಗೃಹವನ್ನು ಸಿದ್ಧಗೊಳಿಸಿದನು. ಅದರ ಮಧ್ಯೆ ಹಸಿಯ ಮಣ್ಣಿನಿಂದ ಮಾಡಿದ ಚಚ್ಚೌಕದ ಹಸೆಯಜಗಲಿಯಲ್ಲಿ ಚಚ್ಚೌಕವಾದ ಮುತ್ತಿನ ಹೊಂಬಣ್ಣದ ಹಸೆಯ ಮಣೆಯ ಮೇಲೆ ರೇಷ್ಮೆಯ ಹಸೆಯಲ್ಲಿ ಗುಣಾರ್ಣವನನ್ನೂ ದ್ರೌಪದಿಯನ್ನೂ ಕುಳ್ಳಿರಿಸಿದನು. ಬಂಧುಗಳು, ಪುರೋಹಿತರು, ಶುದ್ಧವಾದ ತುಪ್ಪದ ಹವಿಸ್ಸನ್ನು ಹೋಮಮಾಡಿಸಿದರು. ದ್ರುಪದನು ಅಗ್ನಿಸಮಕ್ಷಮದಲ್ಲಿ ಧಾರೆಯೆರೆದು ಪಾಣಿಗ್ರಹಣವನ್ನು ಮಾಡಿಸಿದನು. ೭೫. ಒತ್ತಾಗಿ ಕೂಡಿಕೊಂಡಿರುವ ಮಂಜಿನಿಂದ ವ್ಯಾಪ್ತವಾದ ದಕ್ಷಿಣಮಾರುತಸ್ಪರ್ಶದಿಂದ ಅಲುಗಾಡುತ್ತಿರುವ ಅಶೋಕಲತೆಯ ಚಿಗುರಿನಲ್ಲಿ ಹೊಸದಾದ ಮಾವಿನ ಚಿಗುರು ಸೇರಿಕೊಂಡ ಹಾಗೆ ಬೆವರಿನಿಂದ ನಡುಗುತ್ತಿರುವ ಆಕೆಯ ಚಿಗುರಿನಂತಿರುವ ಕಯ್ಯನ್ನು ಹಿಡಿದು ಗುಣಾರ್ಣವನ ಸುಂದರವಾದ ಪಾಣಿಪಲ್ಲವವು ಸೌಂದರ್ಯವನ್ನು ಹೊಂದಿತು. ವ|| ಹಾಗೆ ಒಬ್ಬರು ಇನ್ನೊಬ್ಬರ ಕಿರುಬೆರಳನ್ನು ಹಿಡಿದು ರತಿಯೂ ಕಾಮದೇವನೂ ಬರುವ ಹಾಗೆ ಹೋಮಕುಂಡದ ಅಗ್ರಭಾಗಕ್ಕೆ ಬಂದು ಮೇರುಪರ್ವತವನ್ನು ಪ್ರದಕ್ಷಿಣೆ ಮಾಡುವ ಸೂರ್ಯದಂಪತಿಗಳ ಹಾಗೆ ಅಗ್ನಿಯನ್ನು ಮೂರು ಸಲ ಪ್ರದಕ್ಷಿಣೆಮಾಡಿ ನಿಂತ ಬಳಿಕ ದ್ರೌಪದಿಯು ಆ ಪುರೋಹಿತನು ಹೇಳಿದ ಕ್ರಮದಲ್ಲಿ ಲಾಜಹೋಮವನ್ನು ಮಾಡಿದಳು.

ಚಂ॥ ಆದಱ ಪೊದಳ್ದು ನೀಳ್ದ ಪೊಗೆಯಂ ಲುಳಿತಾಳಕೆ ತನ್ನ ವಕ್ತ್ರ ಪ
ದ್ಮದಿನೊಸೆದಾಂತೊಡಾಕೆಯ ಕಪೋಲದೊಳಾ ನವ ಧೂಮಲೇಖೆ ಬೆ ।
ಳ್ಪಿದಿರ್ಗೊಳೆ ಗಾಡಿವೆತ್ತದರ್ಧ್ವ ಕತ್ತುರಿಯೊಳ್ ಮದವಟ್ಟೆಯಂ ವಿಳಾ
ಸದೆ ತೆಗೆದಂತೆ ಕಣ್ಗೆಸೆದು ತೋಱಿದುದಾ ಕದನತ್ರಿಣೇತ್ರನಾ ॥ ೭೬

ವ॥ ಅಂತು ಸೊಗಯಿಸೆ ಪಾಡುವ ಮಂಗಳರವಂಗಳುಮೋದುವ ಋಚೆಗಳುಂ ಪರಸುವ ಪರಕೆಗಳುಮೆಸೆಯೆ ಪಸೆಯೊಳಿರ್ದು-

ಚಂ॥ ಪರಿಜೆಯನಂಟು (?) ಕೆನ್ನೆಗಳನೊಯ್ಯನೆ ನೀವುವ ಚಿನ್ನಪೂವನೋ
ಸರಿಸುವ ಹಾರಮಂ ಪಿಡಿದು ನೋಡುವ ಕಟ್ಟದ ನೂಲ ತೊಂಗಲಂ ।
ತಿರಿಪುವ ಕೆಯ್ತದೊಂದು ನೆವದಿಂ ಲಲಿತಾಂಗಿಯ ಶಂಕೆಯಂ ಭಯಂ
ಬೆರಸಿದ ನಾಣುಮಂ ಕ್ರಮದೆ ಪಿಂಗಿಸು ಬೇಸಱದಿರ್ ಗುಣಾರ್ಣವಾ ॥† ೭೭

ವ॥ ಎಂದು ಕೆಲದೊಳಿರ್ದ ದಂಡುರುಂಬೆಗಳ್ ಬುದ್ಧಿವೇೞೆ-

ಉ॥ ಕಾಂತೆ ಪೊದಳ್ದ ನಾಣ ಭರದಿಂದಧರೀಕೃತ ಚಂದ್ರಬಿಂಬ ಸ
ತ್ಕಾಂತಿಯನಾನನಾಂಬುಜಮನೊಯ್ಯನೆ ಬಾಗಿರೆ ಕಾದಲಂಗೆ ಸ ।
ಯ್ತಂತಿರು ನಾಣ್ಚದೆಂದಣುಗೆಯರ್ ಪಿಡಿದೆತ್ತಿಱೊಳೆತ್ತಿ ಬುದ್ಧಿ ವೇ
ೞ್ದಂತೆ ಕದಂಪಿನೊಳ್ ಪೊಳೆದುವಾಕೆಯ ಹಾರ ಮರೀಚಿ ಮಾಲೆಗಳ್ ॥ ೭೮

೭೬. ಕೊಂಕುಗೂದಲಿನ ಆ ದ್ರೌಪದಿಯು ದಟ್ಟವೂ ದೀರ್ಘವೂ ಆದ ಅರಳಿನ ಹೊಗೆಯನ್ನು ತನ್ನ ಮುಖಕಮಲದಲ್ಲಿ ಪ್ರೀತಿಯಿಂದ ಧರಿಸಿರುವ ಅವಳ ಕೆನ್ನೆಯಲ್ಲಿ ಆ ಹೊಸಹೊಗೆಯ ರೇಖೆಯು ಸೌಂದರ್ಯದಿಂದ ಕೂಡಿ ಊರ್ಧ್ವಮುಖವಾಗಿ ಕಸ್ತೂರಿಯಿಂದ ರಚಿಸಿದ ಪತ್ರಲೇಖೆ (ಕಪೋಲಪತ್ರ - ಅಲಂಕಾರಕ್ಕಾಗಿ ಕೆನ್ನೆಯ ಮೇಲೆ ಬರೆದುಕೊಳ್ಳುವ ಚಿತ್ರ)ಯಂತೆ ಆ ಕದನತ್ರಿಣೇತ್ರನ ಕಣ್ಣಿಗೆ ಸೊಗಸಾಗಿ ಕಂಡಿತು. ವ॥ ಸೊಗಸಾಗಿರುವ ಹಾಗೆ ಹಾಡುತ್ತಿರುವ ಮಂಗಳಧ್ವನಿಗಳೂ ಪಠಿಸುತ್ತಿರುವ ವೇದಮಂತ್ರಗಳೂ ಹರಸುವ ಹರಕೆಗಳೂ ಪ್ರಕಾಶಿಸುತ್ತಿರಲು ಹಸೆಯಲ್ಲಿದ್ದ ತುಂಟಸಖಿಯರು ಗುಣಾರ್ಣವನಿಗೆ ಹೀಗೆಂದು ಸೂಚಿಸಿದರು. ೭೭. ಕೆನ್ನೆಯನ್ನು ಸವರು, ಚಿನ್ನದ ಹೂವನ್ನು ಓರೆಮಾಡು, ಹಾರವನ್ನು ಹಿಡಿದು ಪರೀಕ್ಷೆಮಾಡು, ಅಲಂಕಾರಕ್ಕಾಗಿರುವ ನೂಲಿನ ಕುಚ್ಚನ್ನು ತಿರುಗಿಸು, ಕಾರ್ಯಗಳ (ಚೇಷ್ಟೆಯ)ನೆಪದಿಂದ ಕೋಮಲಶರೀರೆಯಾದ ಆ ದ್ರೌಪದಿಯ ಸಂಶಯವನ್ನೂ ಭಯದಿಂದ ಕೂಡಿದ ನಾಚಿಕೆಯನ್ನೂ ಗುಣಾರ್ಣವನೇ ನೀನು ಕ್ರಮಕ್ರಮವಾಗಿ ಹೋಗಲಾಡಿಸು. ಈ ಕಾರ್ಯದಲ್ಲಿ ನೀನು ಬೇಸರಪಡಬೇಡ, ವ॥ ಎಂದು ಪಕ್ಕದಲ್ಲಿದ್ದ ತುಂಟದಾಸಿಯರು ಬುದ್ಧಿಹೇಳಲು - ೭೮. ದ್ರೌಪದಿಯು ಲಜ್ಜಾಭಾರದಿಂದ ಚಂದ್ರಬಿಂಬದ ಕಾಂತಿಯನ್ನೂ ಕೀಳುಮಾಡಿದ್ದ ತನ್ನ ಮುಖಕಮಲವನ್ನು ನಿಧಾನವಾಗಿ ಬಗ್ಗಿಸಿರಲು ಅವಳ ಸಖಿಯರು ಪ್ರೀತಿಯಿಂದ ಅವಳ ಮುಖವನ್ನೆತ್ತಿ 'ನಿನ್ನ ಪ್ರಿಯನಿಗೆ ಸರಿಯಾಗಿರು' ಎಂದು ಬುದ್ಧಿಹೇಳುತ್ತಿದ್ದಾರೆಯೋ ಎನ್ನುವ ರೀತಿಯಲ್ಲಿ ಅವಳ ಕೆನ್ನೆಯಲ್ಲಿ ಅವಳ ಹಾರದ

---

† ಇಲ್ಲಿ ಪರಿಜೆಯೆಂಬ ಶಬ್ದಕ್ಕೆ ಅರ್ಥ ದುರವಗಾಹ

ವ॥ ಅಂತೊಪ್ಪುವ ವಿವಾಹಮಂಗಳದೊಸಗೆಯೊಳ್ ಮಂಗಳ ಪಾಠಕರೆೞ್ದು ನಿಂದಿರ್ದು-

ಶಾ॥ ಇಂದ್ರಾನೋಕಹಮೊಪ್ಪುವಿಂದ್ರತುರಂಗಂ ಸಂದಿಂದ್ರಗೇಹಂ ಪೊದ
ಳ್ದಿಂದ್ರಾನೇಕಪಮೊಪ್ಪುವಿಂದ್ರನಖಿಳೇಂದ್ರೈಶ್ವರ್ಯಮಿಂದ್ರಾಣಿ ಸಂ ।
ದಿಂದ್ರಾನರ್ಘ್ಯವಿಭೂಷಣಂಗಳರಿಭೂಪಾಳಾವಳೀದುಸ್ತಮ
ಶ್ಚಂದ್ರಂಗೀಗರಿಗಂಗೆ ಮಂಗಳಮಹಾಶ್ರೀಯಂ ಜಯಶ್ರೀಯುಮಂ ॥ ೭೯

ವ॥ ಎಂದು ಮಂಗಳವೃತ್ತಂಗಳನೋದೆ ಕಿಱಿದುಂ ಬೇಗಮಿರ್ದತ್ತಿದ ಬೋನದೊಳ್ ಕಲ್ಯಾಣಾಮೃತಾಹಾರಮನಾರೋಗಿಸಿ ಬೞಿಯಂ ಯಕ್ಷಕರ್ದಮದ ಕೆಯ್ಗಟ್ಟಿಯೊಳ್ ಕೆಯ್ಯಂ ತಿಮಿರ್ದು ತಂಬುಲಮಂ ಕೊಂಡು-

ಕಂ॥ ಕವಿ ಗಮಕಿ ವಾದಿ ವಾಗ್ಮಿ
ಪ್ರವರರ ಪಂಡಿತರ ನೆಗೞ್ದ ಮಾತಱಿವರ ಸ ।
ಬ್ಬವದವರೊಡನಂತೊಸೆದ
ನ್ನವಾಸದೋಲಗದೊಳಿರ್ದನಾಗಳ್ ಹರಿಗಂ ೮೦

ವ॥ ಆ ಪ್ರಸ್ತಾವದೊಳ್-

ಉ॥ ಬೇಸಱಿ ಲೋಕಮಂ ತಗುಳ್ದು ಸುಟ್ಟೞಲಿಂದೆ ಖರಾಂಶು ನಾರಕಾ
ವಾಸದೊಳಾೞ್ವವೋಲಪರವಾರ್ಧಿಯೊಳಾೞ್ವುದುಮಿತ್ತ ವಂದ ಸಂ ।
ಧ್ಯಾಸಮಯಾತ್ತರಕ್ತರುಚಿ ಪಿಂಗೆ ಬೞಿಕ್ಕುದಯಾದ್ರಿಯೊಳ್ ಪದಂ
ಗಾಸಿದ ಪೊನ್ನ ಪುಂಜಿಯವೊಲಿರ್ದುದು ಕಣ್ಗೆ ಹಿಮಾಂಶುಮಂಡಲಂ ॥ ೮೧

ಕಾಂತಿಸಮೂಹವು ಹೊಳೆಯಿತು. ವ॥ ಹಾಗೆ ಪ್ರಕಾಶಮಾನವಾಗಿದ್ದ ಮದುವೆಯ ಶುಭೋತ್ಸವದಲ್ಲಿ ಹೊಗಳುಭಟರು ಎದ್ದು ನಿಂತು-೭೯. ಇಂದ್ರನ ಮರವಾದ ಕಲ್ಪವೃಕ್ಷವೂ ಪ್ರಕಾಶಮಾನವಾದ ಇಂದ್ರನ ಕುದುರೆಯಾದ ಉಚ್ಚೈಶ್ರವೂ ಸುಪ್ರಸಿದ್ಧವಾದ ಇಂದ್ರನ ಅರಮನೆಯಾದ ಸುಧರ್ಮವೆಂಬ ಸಭಾಮಂಟಪವೂ ಬಲಿಷ್ಠವಾದ ಇಂದ್ರನ ಆನೆಯಾದ ಐರಾವತವೂ ಇಂದ್ರನ ಸಕಳೈಶ್ವರ್ಯಗಳೂ ಇಂದ್ರನ ರಾಣಿಯಾದ ಶಚೀದೇವಿಯೂ ಇಂದ್ರನ ಬೆಲೆಯಿಲ್ಲದ ಆಭರಣಗಳೂ ಶತ್ರುರಾಜರೆಂಬ ಕೆಟ್ಟ ಕತ್ತಲೆಗೆ ಚಂದ್ರನಾಗಿರುವ ಅವನಿಗೆ ಹಿರಿದಾದ ಸುಖಸಂಪತ್ತನ್ನೂ ಅತುಲೈಶ್ವರ್ಯವನ್ನೂ ಕೊಡಲಿ ವ॥ ಎಂದು ಮಂಗಳಗೀತೆಗಳನ್ನು ಓದಲು ಸ್ವಲ್ಪಕಾಲವಾದ ಮೇಲೆ ಬಡಿಸಿದ ಶುಭಕರವಾದ ಅಮೃತಕ್ಕೆ ಸಮಾನವಾದ ಆಹಾರವನ್ನು ಊಟಮಾಡಿ ಪಚ್ಚಕರ್ಪೂರ ಅಗರು ಕಸ್ತೂರಿ ಶ್ರೀಗಂಧ ಕೇಸರಿ ಮೊದಲಾದ ಸುಗಂಧದ್ರವ್ಯಗಳನ್ನು ಮಿಶ್ರ ಮಾಡಿದ ಲೇಪನದ ಕದಡಿನಿಂದ ಕಯ್ಯನ್ನು ಲೇಪಿಸಿಕೊಂಡು ತಾಂಬೂಲವನ್ನು ಸ್ವೀಕರಿಸಿ-೮೦. ಅರ್ಜುನನು ಕವಿಗಳು, ಗಮಕಿಗಳು, ವಾದಿಗಳು, ವಾಗ್ಮಿಗಳು, ಶ್ರೇಷ್ಠರಾದ ಪಂಡಿತರು ಪ್ರಸಿದ್ಧರಾದ ಸಂಭಾಷಣಕಾರರು, ಹಾಸ್ಯಗಾರರು ಇವರೊಡನೆ ಸಂತೋಷದಿಂದ ಭೋಜನಶಾಲೆಯಲ್ಲಿದ್ದನು. ವ॥ ಆ ಸಂದರ್ಭದಲ್ಲಿ-೮೧. ಲೋಕವನ್ನು ಬೆನ್ನಟ್ಟಿ ಅದು ದುಃಖಪಡುವಂತೆ ಸುಟ್ಟ ದುಃಖದಿಂದ ಸೂರ್ಯನು ನರಕವಾಸದಲ್ಲಿ ಮುಳುಗುವ ಹಾಗೆ ಪಶ್ಚಿಮಸಮುದ್ರದಲ್ಲಿ ಮುಳುಗಿದನು.

ವ॥ ಆಗಳ್ ದ್ರುಪದಂ ನಿಜಾಂತಃಪುರಪರಿವಾರಂಬೆರಸುದಾರಮಹೇಶ್ವರನಲ್ಲಿಗೋಲಗಕ್ಕೆ ವಂದು ನೃತ್ಯ ವಾದ್ಯ ಗೀತಾತೋದ್ಯಂಗಳೊಳ್ ಕಿಱಿದುಂ ಬೇಗಮಿರ್ದೋಲಗಮುಮಂ ಪರೆಯಲ್ವೇೞ್ದು ಮತ್ತಿನ ನಾಲ್ವರ್ಗಂ ಕೊಂತಿಗಂ ಬೇಱೆವೇಱೆ ಮಾಡಂಗಳಂ ಬೀಡುವೇೞ್ದು ಗುಣಾರ್ಣವನಂ ಸೆಜ್ಜೆಗೆ ಬಿಜಯಂಗೆಯ್ಯೆಮೆನೆ ಕಾಮಂ ಕಳನೇಱುವಂತೆ ಸೆಜ್ಜೆಯನೇಱೆ ಸೆಡೆದಿರ್ದ ನಲ್ಲಳಂ ನೋಡಿ-

ಉ॥ ನೋಟದೊಳಲ್ಕಱಂಬಡೆದು ಮೆಲ್ನುಡಿಯೊಳ್ ಬಗೆವೊಕ್ಕು ಜಾಣೊಳ
ಳ್ಳಾಟಮನೆಲ್ಲಮಂ ಕಿಡಿಸಿ ಸೋಂಕಿನೊಳೊಯ್ಯನೆ ಮೆಯ್ಯೊಣರ್ಚಿ ಬಾ ।
ಯ್ಗೂಟದೊಳಲ್ಕಱಿಂ ಪಡೆದು ಕೂಟದೊಳುಣ್ಮಿದ ಬೆಚ್ಚ ತಳ್ಕೆಯೊಳ್
ಕೂಟ ಸುಖಂಗಳಂ ಪಡೆದನೇಂ ಚದುರಂ ಗಳ ಬದ್ದೆದಲ್ಲಟಂ ॥ ೮೨

ಬೇಡಿಸುವಪ್ಪುಗಳ್ಗೊಗ್ಗರೆವ ಲಲ್ಲೆಯ ಮೆಲ್ನುಡಿಗಳ್ಗೆ ಕೂಡೆ ನಾ
ಣೂಡಿದ ಕೆಂದುಗಳ್ಗೆ ಬಗೆಗೊಂಡಿನಿಸಂ ತಲೆದೂಗುವಂತೆವೋಲ್ ।
ನಾಡೆ ಪೊದಳ್ದು ನೀಳ್ದವರ ಸುಯ್ಗಳ ಗಾಳಿಯೊಳೊಯ್ಯನೊಯ್ಯನ
ಳ್ಳಾಡುವುದಾಯ್ತು ತತ್ಸುರತಮಂದಿರದುಜ್ಜ್ವಳದೀಪಿಕಾಂಕುರಂ ॥ ೮೩

ಸಂಧ್ಯಾಕಾಲದಲ್ಲುಂಟಾದ ಕೆಂಪುಕಾಂತಿಯು ಹಿಂಜರಿಯಿತು. ಅನಂತರ ಚಂದ್ರಮಂಡಲವು ಹದವಾಗಿ ಕಾಸಿದ (ಶುಭ್ರಮಾಡಿದ) ಶುದ್ಧಚಿನ್ನದಿಂದ ಮಾಡಿದ ಗಂಟೆಯ ಹಾಗೆ ಕಣ್ಣಿಗೆ ಕಾಣಿಸಿತು. ವ॥ ಆಗ ದ್ರುಪದನು ತನ್ನ ಅಂತಃಪುರದ ಪರಿವಾರದವರೊಡನೆ ಉದಾರಮಹೇಶ್ವರನಾದ ಅರ್ಜುನನ ಸಭಾಗೃಹಕ್ಕೆ ಬಂದು ನೃತ್ಯ, ವಾದ್ಯ, ಗೀತ, ಮಂಗಳವಾದ್ಯಗಳಲ್ಲಿ ಭಾಗಿಯಾಗಿ ಸಭೆಯನ್ನು ವಿಸರ್ಜಿಸುವಂತೆ ಹೇಳಿ ಧರ್ಮರಾಜನೇ ಮೊದಲಾದ ಉಳಿದ ನಾಲ್ಕು ಜನಗಳಿಗೂ ಕುಂತೀದೇವಿಗೂ ಬೇರೆಬೇರೆ ಮನೆಗಳನ್ನು ಬಿಡಾರವನ್ನಾಗಿ ಮಾಡಿಸಿ ಗುಣಾರ್ಣವನನ್ನು ಶಯ್ಯಾಸ್ಥಳಕ್ಕೆ ದಯಮಾಡಿಸಿ ಎಂದನು. ಅರ್ಜುನನು ಮನ್ಮಥನು ಯುದ್ಧರಂಗವನ್ನು ಪ್ರವೇಶಮಾಡುವ ಹಾಗೆ ಹಾಸಿಗೆಯ ಮೇಲೆ ಕುಳಿತು ಲಜ್ಜೆಯಿಂದ ಕೂಡಿದ್ದ ತನ್ನ ಪ್ರಿಯಳನ್ನು ನೋಡಿ ೮೨. ನೋಟದಿಂದ ಪ್ರೀತಿಯನ್ನುಂಟುಮಾಡಿ ಮೃದುವಾದ ಮಾತಿನಿಂದ ಅವಳ ಮನಸ್ಸನ್ನು ಗೆದ್ದು ಜಾಣ್ಮೆಯಿಂದ ಅವಳ ನಡುಗುವಿಕೆ (ಕಂಪನ)ಯನ್ನು ಹೋಗಲಾಡಿಸಿ ಮೆಲ್ಲನೆ ಸೋಂಕುವುದರಿಂದ ಅವಳ ಮೈಯಲ್ಲಿ ತನ್ನ ಮೈಯ್ಯನ್ನು ಸೇರಿಸಿ ತುಟಿಗಳೆರಡನ್ನೂ ಸೇರಿಸಿ ಮುತ್ತಿಟ್ಟು ಬಿಗಿಯಾಗಿ ಆಲಿಂಗನಮಾಡಿಕೊಂಡು ರತಿಸುಖವನ್ನೂ ಪಡೆದನು. ಅರ್ಜುನನು ಏನು ಚದುರನೋ? ೮೩. ಆಸೆಪಡುತ್ತಿರುವ ಆಲಿಂಗನಗಳಿಗೂ ಆಡುತ್ತಿರುವ ಪ್ರೀತಿಯ ಮೃದುನುಡಿಗೂ ವಿಶೇಷವಾಗಿ ಲಜ್ಜೆಯಿಂದ ಕೂಡಿದ ಸುರತಕ್ರೀಡೆಗೂ ಮೆಚ್ಚಿ ದೀಪಗಳು ಒಂದಿಷ್ಟು ತಲೆದೂಗುವ ಹಾಗೆ ವಿಶೇಷವಾಗಿ ವ್ಯಾಪಿಸಿ ನೀಳವಾಗಿ ಬೆಳೆದ ಆ ರತಿಕ್ರೀಡಾಮಂದಿರದ ಪ್ರಕಾಶಮಾನವಾದ ದೀಪದ ಕುಡಿಯು ಅವರ ಉಸಿರಿನ ಗಾಳಿಯಿಂದ ನಿಧಾನವಾಗಿ ಅಲ್ಲಾಡುತ್ತಿದ್ದವು. ವ॥ ಆ ರಾತ್ರಿಯ ನಾಲ್ಕು ಜಾವಗಳೂ ಕಾಮನ ಜಾಗರಣೆಯಂತೆ

ವ।। ಅಂತಾ ಯಿರುಳ ನಾಲ್ಕು ಜಾವಮುಂ ಕಾಮನ ಜಾಗರದಂತವರ್ಗೆ ಕೆಂದಿನೊಳೆ ಬೆಳಗಾಗೆ-

ಚಂ।। ನಿನಗಿನಿಸಪ್ರಿಯದಂ ಮನದೊಳೋವದ ಕಟ್ಟಲೆಯೆಂಬ ಪಾಪ ಕ
ರ್ಮನ ಮಱಿಗಳ್ ಕರಂ ಪಲವುಮಂ ಸೆಱೆಗೆಯ್ದಿವಿವೆಂದು ತಮ್ಮ ನ ।
ಣ್ಪಿನೊಳವನೊಪ್ಪಿಪಂತೆ ಮುಗುಳೊಳ್ ಮಱಸುಂದಿದ ತುಂಬಿ ಪಾಱೆ ಕೋ
ಕನದ ಕುಲಂಗಳುಳ್ಳಲರ್ದುವೆಂಬಿನಮಂದೊಗೆದಂ ದಿವಾಕರಂ ।। ೮೪

ವ।। ಅಂತು ಮಾರ್ತಾಂಡನುಂ ಪ್ರಚಂಡ ಮಾರ್ತಾಂಡನುಮುದಿತೋದಿತರಾಗೆ-

ಮ।। ಕಚಭಾರಾಳಸಗಾಮಿನೀಪರಿವೃತಂ ಗಂಗಾತರಂಗೋಪಮಾ
ನ ಚಳಚ್ಚಾಮರ ವಾತ ಪೀತ ನಿಜ ಘರ್ಮಾಂಭಃಕಣಂ ದ್ರೌಪದೀ ।।
ಕುಚಕುಂಭಾರ್ಪಿತ ಕುಂಕುಮದ್ರವ ವಿಲಿಪ್ತೋರಸ್ಥಳಂ ದಾಂಟೆ ಕೀ
ರ್ತಿ ಚತುರ್ವಾರ್ಧಿಯನಿರ್ದನಂದು ಸುಖದಿಂ ವಿದ್ವಿಷ್ಟ ವಿದ್ರಾವಣಂ ।। ೮೫

ಇದು ವಿವಿಧ ವಿಬುಧಜನವಿನುತ ಜಿನಪದಾಂಭೋಜ
ವರ ಪ್ರಸಾದೋತ್ಪನ್ನ ಪ್ರಸನ್ನ ಗಂಭೀರ ವಚನ ರಚನ
ಚತುರ ಕವಿತಾಗುಣಾರ್ಣವವಿರಚಿತಮಪ್ಪ
ವಿಕ್ರಮಾರ್ಜುನವಿಜಯದೊಳ್
ದ್ರೌಪದೀಕಲ್ಯಾಣವರ್ಣನಂ
ತೃತೀಯಾಶ್ವಾಸಂ

ಸುರತಕ್ರೀಡೆಯಲ್ಲಿಯೇ ಕಳೆದವು. ಬೆಳಗಾಯಿತು. ೮೪. ಸ್ವಲ್ಪವಾದರೂ ನಿನಗೆ ಪ್ರಿಯವಲ್ಲದ ಕಳ್ತಲೆಯೆಂಬ ಪಾಪಿಷ್ಠನ ಮರಿಗಳನೇಕವನ್ನು ಇಗೋ ಸೆರೆಹಿಡಿದಿದ್ದೇನೆ. ಇದೋ ಇಲ್ಲಿ ಇದೆ, ಒಪ್ಪಿಸಿಕೋ ಎಂದು ತಮ್ಮ ಸ್ನೇಹದಿಂದ ಒಪ್ಪಿಸುವ ಹಾಗೆ ಮೊಗ್ಗುಗಳಲ್ಲಿ ಮಲಗಿದ್ದ ತುಂಬಿಗಳು ಹಾರಿಹೋಗಲು ಕಮಲಸಮೂಹಗಳು ಚೆನ್ನಾಗಿ ಅರಳಿದುವು, ಸೂರ್ಯೋದಯವಾಯಿತು. ವ।। ಹಾಗೆ ಸೂರ್ಯನೂ ಪ್ರಚಂಡಮಾರ್ತಾಂಡನಾದ ಅರ್ಜುನನೂ ಅಭಿವೃದ್ಧಿಯಾಗುತ್ತಿರಲು-೮೫. ಕೇಶಪಾಶದ ಭಾರದಿಂದ ಬಳಲಿ ನಿಧಾನವಾಗಿ ನಡೆಯುವ ಸ್ತ್ರೀಯರಿಂದ ಸುತ್ತುವರಿಯಲ್ಪಟ್ಟವನೂ ಗಂಗೆಯ ಅಲೆಗಳ ಹಾಗೆ ಅಲುಗಾಡುತ್ತಿರುವ ಚಾಮರದ ಗಾಳಿಯಿಂದ ಕುಡಿಯಲ್ಪಟ್ಟ ತನ್ನ ಬೆವರಿನ ಹನಿಯನ್ನುಳ್ಳವನೂ ದ್ರೌಪದಿಯ ಕುಚಕುಂಭಗಳಿಗೆ ಲೇಪನ ಮಾಡಿದ್ದ ಕುಂಕುಮಕೇಸರಿಯ ದ್ರವದಿಂದ ಕೂಡಿಕೊಂಡಿರುವ ಎದೆಯುಳ್ಳವನೂ ಆದ ಅರ್ಜುನನು ತನ್ನ ಕೀರ್ತಿಯು ನಾಲ್ಕು ಸಮುದ್ರಗಳನ್ನೂ ದಾಟಿರಲು ಆ ದಿನ ಅಲ್ಲಿ ಸುಖವಾಗಿದ್ದನು. ವ।। ಇದು ವಿವಿಧ ವಿದ್ವಾಂಸರಿಂದ ಸ್ತುತಿಸಲ್ಪಟ್ಟ ಜಿನನ ಪಾದಕಮಲದ ವರಪ್ರಸಾದದಿಂದ ಹುಟ್ಟಿದುದೂ ಪ್ರಸನ್ನವೂ ಗಂಭೀರವೂ ಆದ ಮಾತುಗಳನ್ನು ರಚಿಸುವುದರಲ್ಲಿ ಜಾಣನಾದ ಕವಿತಾಗುಣಾರ್ಣವನಿಂದ ವಿರಚಿತವಾದುದೂ ಆದ ವಿಕ್ರಮಾರ್ಜುನವಿಜಯದಲ್ಲಿ ದ್ರೌಪದೀಕಲ್ಯಾಣ ವರ್ಣನಾತ್ಮಕವಾದ ಮೂರನೆಯ ಆಶ್ವಾಸ.

# ಚತುರ್ಥಾಶ್ವಾಸಂ

ಕಂ॥ ಶ್ರೀರಮಣಿಯಂ ದ್ವಿಷದ್ಬಳ
ಪಾರಾವಾರದೊಳುದಗ್ರ ಭುಜ ವಿಜಯ ಮಹಾ ।
ಮೇರುವಿನ ಕಡೆದು ಪಡೆದಳ
ವಾರುಮನಿಟೆಸಿದುದುದಾತ್ತನಾರಾಯಣನಾ ೧

ವ॥ ಅಂತು ದ್ರುಪದನ ಪೊಟಲೊಳ್ ಪಾಂಡವರ್ ಚಾಗಕ್ಕೆ ಬೂತುಂ ಭೋಗಕೆ ಪೊಳ್ತುಂ ನೆಱೆಯದೆನಿಸಿ ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಿರ್ಪನ್ನೆಗಮಿತ್ತಲ್-

ಮ॥ ಚರರಾಗೆಯ್ದಿದರೆಯ್ದಿ ಹಸ್ತಿನಪುರಕ್ಕಾ ಪಾಂಡವರ್ ತಮ್ಮುತ್ತ
ಯ್ವರುಮಿರ್ದರ್ ದ್ರುಪದಾಧಿರಾಜ ಪುರದೊಳ್ ಕೆಯ್ಕೊಂಡು ಪಾಂಚಾಳಿಯಂ ।
ಧುರದೊಳ್ ಕರ್ಣನನಾಂತು ಗೆಲ್ದವನವಂ ಸಂದರ್ಜುನಂ ತಳ್ತು ಸಂ
ಗರದೊಳ್ ಶಲ್ಯನನಿಕ್ಕಿ ಗೆಲ್ದದಟನಾ ಭೀಮಂ ಗಡಂ ಕಾಣಿರೇ ॥ ೨

ವ॥ ಎಂಬ ಮಾತಂ ಧೃತರಾಷ್ಟ್ರ ದುರ್ಯೋಧನಾದಿಗಳ್ ಕೇಳ್ದು ಬಲ್ಲುಂಬೆಱಗುಮಾಗಿ-

ಕಂ॥ ಕಾಯ್ದುಟಲುಱೆ ಜತುಗೃಹದೊಳ
ಗಯ್ವರುಮಮಂ ಮಂತ್ರಬಲದೆ ಸುಟ್ಟೊಡಮವರಂ ।
ದೆಯ್ವಬಲವೊಂದೆ ಕಾದುದು
ದೆಯ್ವಮನಾರಯ್ಯ ಮಿಾಱಿ ಬಾಟಲ್ ನೆಱೆವರ್ ॥ ೩

ವ॥ ಎಂಬುದುಂ ಭೀಷ್ಮ ದ್ರೋಣಾದಿಗಳ್ ನಿಶ್ಚಿತಮಂತ್ರರಾಗಿ ವಿದುರನಂ ಕರೆದಾಳೋಚಿಸಿ ಪೃಥಾತನೂಜರಂ ನಿನ್ನ ಬಲ್ಲ ಮಾಟ್ಕೆಯಿಂ ನುಡಿದೊಡಂಗೊಂಡು ಬರ್ಪುದೆಂದು

೧. ಲಕ್ಷ್ಮೀದೇವಿಯನ್ನು ಶತ್ರುಸೈನ್ಯವೆಂಬ ಸಮುದ್ರದಲ್ಲಿ ತನ್ನ ಬಲಿಷ್ಠವೂ ವಿಜಯಪ್ರದವೂ ಆದ ತೋಳೆಂಬ ಮಹಾಮೇರುಪರ್ವತದಿಂದ ಕಡೆದು ಪಡೆದ ಅರ್ಜುನನ ಪರಾಕ್ರಮವು ಯಾರನ್ನೂ ತಿರಸ್ಕರಿಸಿತು, ಹಾಗೆ ದ್ರುಪದನ ಪಟ್ಟಣದಲ್ಲಿ ಪಾಂಡವರು (ತಾವು ಮಾಡುವ) ದಾನಕ್ಕೆ ಪಾತ್ರರಾದವರು ಒಬ್ಬರೂ ಉಳಿಯ ಲಿಲ್ಲವೆಂಬಂತೆಯೂ ಸೌಖ್ಯಪಡುವುದಕ್ಕೆ ಕಾಲಾವಕಾಶವು ಸಾಲದೆಂಬಂತೆಯೂ ಸೌಖ್ಯದಿಂದ ರಾಜ್ಯವಾಳುತ್ತಿದ್ದರು. ೨. ಗೂಢಚಾರರು ಹಸ್ತಿನಾಪಟ್ಟಣಕ್ಕೆ ಬಂದು ಆ ಪಾಂಡವರೈದುಮಂದಿಯೂ ದ್ರುಪದರಾಜನ ಪಟ್ಟಣದಲ್ಲಿ ಇದ್ದಾರೆ. ದ್ರೌಪದಿಯನ್ನು ಪಡೆದು ಯುದ್ಧದಲ್ಲಿ ಕರ್ಣನನ್ನು ಗೆದ್ದವನು ಪ್ರಸಿದ್ಧನಾದ ಅರ್ಜುನ, ಸಂಧಿಸಿ ಯುದ್ಧದಲ್ಲಿ ಶಲ್ಯನನ್ನೂ ಹೊಡೆದು ಸೋಲಿಸಿದ ಪರಾಕ್ರಮಿಯೇ ಭೀಮ ವ॥ ಎಂಬ ಮಾತನ್ನು ಧೃತರಾಷ್ಟ್ರ ದುರ್ಯೋಧನನೇ ಮೊದಲಾದವರು ಕೇಳಿ ಆಶ್ಚರ್ಯಭರಿತರಾದರು. ೩. ತಮ್ಮ ಮನಸ್ಸನ್ನು ಸುಡುವ ದುಃಖವು ಹೆಚ್ಚಾಗುತ್ತಿರಲು ಅರಗಿನಮನೆಯಲ್ಲಿ ಅಯ್ದುಜನರನ್ನೂ ತಮ್ಮ ಮಂತ್ರಶಕ್ತಿಯಿಂದ ಸುಟ್ಟರೂ ಅವರನ್ನು ದೈವಬಲವೊಂದೇ ರಕ್ಷಿಸಿತು. ದೈವಬಲವನ್ನು ಮೀರಿ ಯಾರು ತಾನೆ ಬದುಕಲು ಸಮರ್ಥರಾಗುತ್ತಾರೆ? ಎಂದು ವ್ಯಥೆಪಟ್ಟರು. ವ॥ ಭೀಷ್ಮ ದ್ರೋಣ ಮೊದಲಾದವರು ನಿಷ್ಕೃಷ್ಟವಾದ ಮಂತ್ರಾಲೋಚನೆಯುಳ್ಳವರಾಗಿ ವಿದುರನನ್ನು ಕರೆದು ಅವನೊಡನೆ ವಿಚಾರಮಾಡಿ

ಪೇಟ್ಟಿಟ್ಟುವುದುಮಾತನಂತೆ ಗೆಯ್ವೆನೆಂದು ರಥಾರೂಢನಾಗಿ ಪಾಂಚಾಳರಾಜಪುರಕ್ಕೆ ವಂದು ಪಾಂಡುಪುತ್ರರಂ ಕಂಡು–

ಚಂ॥ ಅದು ಪಿರಿದುಂ ಪ್ರಮಾದಮದುವುಂ ಕುರುರಾಜನಿನಾಯ್ತು ಪೋಯ್ತು ಸಂ
ದುದು ಮಱೆಯಲ್ಕೆ ವೇಟ್ಟುದದನಾಳ್ವುದು ತಪ್ಪದೆ ಪಾಂಡುರಾಜನಾ ॥
ಳ್ದುದನೆಳೆಯಂ ಮನಂ ಬಸದೆ ಬರ್ಪುದು ನೀಮೆನೆ ಪೋಪ ಕಜ್ಜಮಂ
ವಿದುರನೊಳಯ್ವರುಂ ಸಮೆದು ಪೇಟ್ಟುದುಮಾ ದ್ರುಪದಂಗೆ ರಾಜದಿಂ ॥೪

ವ॥ ಆತನ ಬೞಿವೞಿಗೊಟ್ಟ ಮದಕರಿ ಕರೇಣು ಜಾತ್ಯಶ್ವ ಶಶಿತಾರ ಹಾರ ವಸ್ತುಗಳಂ ಕೆಯ್ಕೊಂಡು ದ್ರುಪದಜೆಯನೊಡಗೊಂಡು ದ್ರುಪದನನಿರವೇಟ್ಟು ಕತಿಪಯ ಪ್ರಯಾಣಂಗಳಿಂ ಮದಗಜಪುರಮನೆಯ್ದೆ ವಂದಾಗಳ್–

ಚಂ॥ ಘನಪಥಮಂ ಪಳಂಚಲೆವ ಸೌಧಚಯಂಗಳಿನಾಡುತಿರ್ಪ ಕೇ
ತನತತಿಯಿಂ ಕರೀಂದ್ರ ಗಳಗರ್ಜನೆಯಿಂ ಪಟಹಪ್ರಣಾದಮಂ ।
ಘನರವಮೆಂದೆ ನರ್ತಿಸುವ ಕೇಕಿಗಳಿಂ ಕಡುರಮ್ಯಮಪ್ಪ ಹ
ಸ್ತಿನಪುರಮಂ ಜಿತೇಂದ್ರಪುರಮಂ ಪರಮೇಶ್ವರರಾಗಳೆಯ್ದಿದರ್ ॥ ೫

ವ॥ ಆಗಳಾ ಪೊೞಲ ಬೀದಿಗಳೊಳೆಲ್ಲಂ ಗಂಧೋದಕ ಪಂಚಗವ್ಯಂಗಳಂ ತಳಿಯಿಸಿ ಗುಡಿಯಂ ತೋರಣಂಗಳುಮಂ ತುಱುಗಲುಂ ಬಂಬಲುಮಾಗೆ ಕಟ್ಟಿಸಿ ಧೃತರಾಷ್ಟ್ರಂ ದುರ್ಯೋಧನ

ಪಾಂಡವರನ್ನು ನಿನಗೆ ತಿಳಿದ ರೀತಿಯಲ್ಲಿ ಬುದ್ಧಿ ಹೇಳಿ ಒಪ್ಪಿಸಿ ಕರೆದುಕೊಂಡು ಬರುವುದು ಎಂದು ಹೇಳಿ ಕಳುಹಿಸಿದರು. ಅವನು ಹಾಗೆಯೇ ಮಾಡುತ್ತೇನೆಂದು ತೇರನ್ನು ಹತ್ತಿ ದ್ರುಪದನ ಪಟ್ಟಣಕ್ಕೆ ಬಂದು ಪಾಂಡುಪುತ್ರರನ್ನು ನೋಡಿ ೪. ಕುರುರಾಜನಿಂದ ದೊಡ್ಡ ತಪ್ಪಾಗಿಹೋಯಿತು. ಆದದ್ದಾಗಿ ಹೋಯಿತು, ಕಳೆದುಹೋದುದನ್ನು ಮರೆತು ಬಿಡಬೇಕು. ಪಾಂಡುರಾಜನು ಆಳಿದ ಭೂಮಿಯನ್ನು ಬಿಡದೆ ನೀವು ಆಳಬೇಕು. ನೀವು ದೃಢಚಿತ್ತದಿಂದ ಬರಬೇಕು ಎಂದು ಹೇಳಲು ಪ್ರಯಾಣಮಾಡುವ ಕಾರ್ಯವನ್ನು ವಿದುರನೊಡನೆಯೇ ಅಯ್ವರೂ ಕೂಡಿ ಆಲೋಚಿಸಿ ಹೊರಡುವ ವಿಷಯವನ್ನು ದ್ರುಪದನಿಗೆ ಸಂತೋಷದಿಂದ ತಿಳಿಸಿದರು. ವ॥ ಅವನು ಬಳುವಳಿಯಾಗಿ ಕೊಟ್ಟ ಮದ್ದಾನೆ, ಹೆಣ್ಣಾನೆ, ಜಾತಿಯ ಕುದುರೆಗಳು ಚಂದ್ರನಂತೆ ಹೊಳೆಯುತ್ತಿರುವ ಮುತ್ತಿನ ಹಾರ ಮೊದಲಾದ ಪದಾರ್ಥಗಳನ್ನು ಸ್ವೀಕರಿಸಿ ದ್ರೌಪದಿಯೊಡಗೂಡಿ ದ್ರುಪದನನ್ನು ಅಲ್ಲಿಯೇ ಇರಹೇಳಿ ಕೆಲವು ದಿನದ ಪ್ರಯಾಣಗಳಿಂದ ಹಸ್ತಿನಾಪುರದ ಸಮೀಪಕ್ಕೆ ಬಂದರು. ೫. ಆಕಾಶವನ್ನೇ ಅಪ್ಪಳಿಸುವ ಉಪ್ಪರಿಗೆಮನೆಗಳ ಸಮೂಹದಿಂದಲೂ ಚಲಿಸುತ್ತಿರುವ ಧ್ವಜಗಳಿಂದಲೂ ಶ್ರೇಷ್ಠವಾದ ಆನೆಯ ಕೊರಳಿನ ಗರ್ಜನೆಯಿಂದಲೂ ತಮಟೆಯ (ವಾದ್ಯದ) ದೊಡ್ಡ ಶಬ್ದವನ್ನು ಗುಡುಗೆಂದೇ ತಿಳಿದು ಕುಣಿದಾಡುತ್ತಿರುವ ನವಿಲುಗಳಿಂದಲೂ ಬಹು ರಮ್ಯವಾದ ಅಮರಾವತಿಯನ್ನು ಗೆದ್ದಿರುವ ಹಸ್ತಿನಾಪುರವನ್ನು ರಾಜಶ್ರೇಷ್ಠರಾದ ಪಾಂಡವರು ಆಗ ಸೇರಿದರು. ವ॥ ಆಗ ಪಟ್ಟಣದ ಬೀದಿಗಳಲ್ಲೆಲ್ಲ ಶ್ರೀಗಂಧದ ನೀರನ್ನೂ ಪಂಚಗವ್ಯವನ್ನೂ (ಹಸುವಿಗೆ ಸಂಬಂಧಪಟ್ಟ ಹಾಲು ಮೊಸರು, ತುಪ್ಪ, ಗಂಜಲ,

ಕರ್ಣ ಶಲ್ಯ ಶಕುನಿ ಸದೀತನೂಜ ಭಾರದ್ವಾಜ ಕೃಪಾದಿಗಳ್ವೆರಸಿದಿರ್ವಂದು ಯಥೋಚಿತ ಪ್ರತಿಪತ್ತಿಗಳಿಂದಯ್ವರುಮಂ ನಿಬಿಡಾಲಿಂಗನಂಗೆಯ್ದು ಮುಂದಿಟ್ಟೊಡಗೊಂಡು ವಂದು ಪೊೞಲಂ ಪುಗಿಸಿ ಮುನ್ನಮೆ ಸಮೆದ ಬೀಡುಗಳೊಳ್ ಬೀಡಂ ಬಿಡಿಸಿ ಸೂೞ್ಸೂೞೊಳೆ ಬರ್ದನಿಕ್ಕಿ ವಿವಿಧ ವಿನೋದಂಗಳಂ ತೋಱೆ ಕೆಲವು ದಿವಸಮಿರ್ದು ದ್ರೋಣ ಭೀಷ್ಮ ಕೃಪ ವಿದುರರ್ಕಳ್ ತಮ್ಮೊಳಾಲೋಚಿಸಿಯೆನ್ನ ನಡಪಿದುದರ್ಕಂ ಕೂರ್ತುದರ್ಕಂ ಪಾಂಡುಪುತ್ರರ್ಗೆ ನೆಲನಂ ಪಚ್ಚುಕೊಟ್ಟು ಪಟ್ಟಮಂ ಕಟ್ಟುವೆಸೆನೆ ದುರ್ಯೋಧನನೇಗೆಯ್ದುಮೊಡಂಬಡದಿರೆ ಭೀಷ್ಮರ್ ಮುನಿದು-

ಚಂ॥ ಒಡೆಯರದೇವರೆಂದು ನಿನಗಿತ್ತೊಡೆ ಪಟ್ಟಮನುರ್ಕಿದಪ್ಪೆ ಪೇೞ್
ಪೊಡವಿಗಧೀಶರಂತವರ್ಗಳಯ್ವರುಮಂ ಕ್ರಮದಿಂದೆ ಪಟ್ಟಮಂ ।
ತಡೆಯದೆ ಕಟ್ಟಿ ಭೂತಳಮನಾಳಿಸದಿರ್ದೊಡದರ್ಕೆ ಸೊರ್ಕಿ ನೀಂ
ನುಡಿಯದಿರಣ್ಣ ನಿನ್ನ ನುಡಿಗಾಂ ತಡೆದಿರ್ಪೆನೆ ಪೇೞ್ ಸುಯೋಧನಾ ॥ ೬

ಕ್ರಮಮಱಿದೆನ್ನ ಕೊಟ್ಟುದನೆ ಕೊಂಡು ಮನೋಮುದದಿಂದೆ ಬಾೞ್ವುದಂ
ತವರಿವರೆಲ್ಲರುಂ ಸಮನದಲ್ಲದೆ ಮಾರ್ಮಲೆದುರ್ಕಿ ಭೀಮನೊಳ್ ।
ಸಮರದೆ ಗರ್ವದಿಂ ಪೊಣರಲಾರ್ಪಿರೆ ಗಾವಿಲರಿನ್ನುಮೆಲ್ಲರಂ
ಯಮಸುತನುಂ ಸುರೇಂದ್ರಸುತನುಂ ಪೊಸದೀಗಳೆ ಮುಕ್ಕಿ ತೋಱಿರೇ ॥೭

ಸಗಣಿ ಇವುಗಳನ್ನು ಮಿಶ್ರಮಾಡಿ ಶುದ್ಧಿಗಾಗಿ ಉಪಯೋಗಿಸುವ ಪದಾರ್ಥ) ಚಿಮುಕಿಸಿ ಧ್ವಜಗಳನ್ನೂ ತೋರಣಗಳನ್ನೂ ಗುಂಪುಗುಂಪಾಗಿ ಕಟ್ಟಿಸಿ ಧೃತರಾಷ್ಟ್ರನು ದುರ್ಯೋಧನ, ಕರ್ಣ, ಶಲ್ಯ, ಶಕುನಿ, ಭೀಷ್ಮ ದ್ರೋಣ, ಕೃಪ ಮೊದಲಾದವರನ್ನೊಳಗೊಂಡು ಎದುರಾಗಿ ಬಂದು ಯಥೋಚಿತವಾದ ಮರ್ಯಾದೆ - ಸತ್ಕಾರಗಳಿಂದ ಅಯ್ದುಜನರನ್ನೂ ಗಟ್ಟಿಯಾಗಿ ಆಲಿಂಗನ ಮಾಡಿಕೊಂಡು ಮುಂದಿಟ್ಟುಕೊಂಡು ಕರೆದುತಂದು ಪಟ್ಟಣವನ್ನು ಪ್ರವೇಶಮಾಡಿದನು. ಮೊದಲೇ ಸಿದ್ಧಮಾಡಿದ್ದ ಮನೆಗಳಲ್ಲಿ ತಂಗುವ ಹಾಗೆ ಮಾಡಿ ಸಲಸಲಕ್ಕೂ ಆತಿಥ್ಯವನ್ನು ಮಾಡಿ ನಾನಾರೀತಿಯ ವಿನೋದಗಳನ್ನು ತೋರಿಸಿ ಸಂತೋಷಪಡಿಸಿದನು. ಕೆಲವು ದಿವಸಗಳಾದ ಮೇಲೆ ದ್ರೋಣ ಭೀಷ್ಮ ಕೃಪರುಗಳು ತಮ್ಮಲ್ಲಿ ಆಲೋಚನೆ ಮಾಡಿ ನಾವು ಸಾಕಿದುದಕ್ಕೂ ಪ್ರೀತಿಸಿದುದಕ್ಕೂ (ಅನುಗುಣವಾಗಿ) ಪಾಂಡವರಿಗೆ ರಾಜ್ಯವನ್ನು ಭಾಗಮಾಡಿಕೊಟ್ಟು ಪಟ್ಟವನ್ನು ಕಟ್ಟೋಣವೆಂದು ಹೇಳಲು ದುರ್ಯೋಧನನು ಏನು ಮಾಡಿದರೂ ಒಪ್ಪಲಿಲ್ಲ. ಭೀಷ್ಮರು ಕೋಪಿಸಿಕೊಂಡು-೬. 'ಒಡೆಯರಾದ ಪಾಂಡವರು ಏನು ಮಾಡಬಲ್ಲರು ಎಂದು ನಿನಗೆ ಪಟ್ಟವನ್ನು ಕೊಟ್ಟರೆ ಕೊಬ್ಬಿಹೋಗಿದ್ದೀಯೆ. ಹೇಳು ಭೂಮಿಗೆ ಒಡೆಯರಾದ ಆ ಅಯ್ದುಜನರಿಗೂ ಸಾವಕಾಶಮಾಡದೆ ಕ್ರಮವಾಗಿ ಪಟ್ಟವನ್ನು ಕಟ್ಟದೆ ರಾಜ್ಯವನ್ನೂ ಆಳಿಸದಿದ್ದುದಕ್ಕಾಗಿ ಸೊಕ್ಕಿ ನೀನು ಮಾತನಾಡಬೇಡವಯ್ಯಾ, ನಿನ್ನ ಮಾತಿಗೆ (ಅಪ್ಪಣೆಗೆ) ನಾನು ಕಾದಿರುತ್ತೇನೆಯೇ ಹೇಳು ಸುಯೋಧನ.' ೭. 'ಕ್ರಮವಾದುದು ಯಾವುದು ಎಂಬುದುನ್ನು ತಿಳಿದುಕೊಂಡು ನಾನು ಕೊಟ್ಟುದುದನ್ನು ಮನಸ್ಸಂತೋಷದಿಂದ (ತೃಪ್ತಿಯಾಗಿ) ಬಾಳುವುದು; ಹಾಗೆ ಅವರು ಇವರು (ಪಾಂಡವರು ಕೌರವರು) ಸಮ ಎಂಬುದನ್ನು ತಿಳಿಯದೆ ಪ್ರತಿಭಟಿಸಿ

ವ|| ಅದಲ್ಲದೆಯುಂ ಪಾಂಡುಪುತ್ರರಪ್ಪೊಡೆ ಪಾಂಡುರಾಜಂಗೆ ಬೆಸಕೆಯ್ಯದುದನೆನಗೆ ಬೆಸಕೆಯ್ವರೆನ್ನೆಂದುದಂ ಮೀಱುವರಲ್ಲರಾನವರ್ಗೆ ಪಟ್ಟಮಂ ಕಟ್ಟಿ ನೆಲನಂ ಪಚ್ಚುಕೊಡುವಾಗಳಡ್ಡಂ ಬರ್ಪ ಗಂಡರಂ ನೋಟ್ಪೆನೆಂದು ಭೀಷ್ಮರ್ ಬಗ್ಗಿಸಿದೊಡೆ ದುರ್ಯೋಧನನತಿ ಸಂಭ್ರಮಾಕುಳಿತನಾಗಿ ನೀಮೆಂದುದನೆಂದು ಬಾಳ್ವೆನೆಂದೊಡಪ್ಪುದೆಂದು-

ಮ|| ಧರಣೀನಾರಿಗೆ ಪಾಂಡುವಿಂ ಬಳಿಯಮಿಲ್ಲಾರುಂ ಪೆಱರ್ ಗಂಡರಂ
ತಿರಲೇವಂ ಬಡೆದಿರ್ದೊಡಟ್ಟು ಕಿಡುಗುಂ ಸಪ್ತಾಂಗಮೀ ರಾಜಕ ।
ಕ್ಕರಸಂ ಧರ್ಮಜನಕ್ಕುಮೆಂದು ನಯದಿಂ ನಿಶ್ಚೈಸಿ ಕಲ್ಯಾಣ ಕಾ
ರ್ಯರತರ್ ಕಟ್ಟಿದರಾ ಯುಧಿಷ್ಠಿರನೃಪಂಗುತ್ಸಾಹದಿಂ ಪಟ್ಟಮಂ ॥ ೮

ವ|| ಕಟ್ಟಿ ಸೇತುಬಂಧಮಂ ತಾಗೆ ಗಂಗಾನದಿಯ ತೆಂಕಣ ಪಡುವಣ ನೆಲನಂ ನೀಮಾಳ್ವುದು ಮೂಡಣ ಬಡಗಣ ನೆಲನಂ ದುರ್ಯೋಧನನಾಳ್ವುದೆಂದು ಧೃತರಾಷ್ಟ್ರಂ ಪೂರ್ವ ಸ್ಥಿತಿಯೊಳ್ ಪಚ್ಚುಕೊಟ್ಟು ದುರ್ಯೋಧನನಪ್ಪೊಡೆ ಪೊಲ್ಲಮಾನಸಂ ನೀಮುಂ ತಾಮುಮೊಂದೆಡೆಯೊಳಿರೆ ಕಿಸುರುಂ ಕಲಹಮುಮೆಂದುಂ ಕುಂದದದು ಕಾರಣದಿಂದಿಲ್ಲಿಗಱುವತ್ತು ಯೋಜನದೊಳಿಂದ್ರಪ್ರಸ್ಥಮೆಂಬುದು ಪೊಲಲ್ಲಲ್ಲಿಗೆ ಪೋಗಿ ಸುಖದಿಂ ರಾಜ್ಯಂಗೆಯ್ಯುತ್ತಿರಿ ಮೆಂಬುದುಮಂತೆಗೆಯ್ವೆಮೆಂದು ಸಮಸ್ತ ಪರಿವಾರ ಪರಿವೃತರಾಗಿ-

ಭೀಮನನ್ನು ಯುದ್ಧದಲ್ಲಿ ಅಹಂಕಾರದಿಂದ ದಡ್ಡರಾದ ನೀವೆಲ್ಲ ಕಾದಬಲ್ಲಿರಾ. ಧರ್ಮರಾಜನೂ ಅರ್ಜುನನೂ ಈಗಲೇ ನಿಮ್ಮನ್ನು ಹೊಸೆದು ತಿಂದು ತೋರಿಸಲಾರರೇ?' ವ|| ಅಷ್ಟೇ ಅಲ್ಲದೆ ಪಾಂಡವರು (ತಮ್ಮ ತಂದೆಯಾದ) ಪಾಂಡುರಾಜನಿಗೆ ಮಾಡದಿದ್ದುದನ್ನು ನನಗೆ ಮಾಡುತ್ತಾರೆ. ನಾನು ಹೇಳಿದುದನ್ನು ಮೀರುವವರಲ್ಲ. ನಾನು ಅವರಿಗೆ ಪಟ್ಟವನ್ನೂ ಕಟ್ಟಿ ರಾಜ್ಯವನ್ನು ಭಾಗಮಾಡಿಕೊಡುವಾಗ ಅಡ್ಡವಾಗಿ ಬರುವ ಶೂರರನ್ನು ನೋಡಿಯೇ ಬಿಡುತ್ತೇನೆ ಎಂದು ಗದರಿಸಲು ದುರ್ಯೋಧನನು ವಿಶೇಷ ಗಾಬರಿಗೊಂಡು ನೀವು ಹೇಳಿದುದನ್ನೇ ಒಪ್ಪಿ ಬಾಳುತ್ತೇನೆ ಎಂದು ಒಪ್ಪಿಕೊಂಡನು. ೮. ಈ ಭೂದೇವಿಗೆ ಪಾಂಡುರಾಜನಾದ ಮೇಲೆ ಬೇರೆ ಒಡೆಯರಾದವರಾರೂ ಇಲ್ಲ. ಹಾಗಿರುವಾಗ ನಿಮ್ಮ ಮಾತ್ಸರ್ಯಕ್ಕೊಳಗಾದರೆ ರಾಜ್ಯದ ಸಪ್ತಾಂಗಗಳೂ ನಾಶವಾಗುತ್ತವೆ. ಈ ರಾಜ್ಯಕ್ಕೆ ಧರ್ಮರಾಯನು ರಾಜನಾಗಲಿ ಎಂದು ರಾಜನೀತಿಗನುಗುಣವಾಗಿ (ಭೀಷ್ಮಾದಿಗಳು) ಆ ಧರ್ಮರಾಜನಿಗೆ ಉತ್ಸಾಹದಿಂದ ಪಟ್ಟವನ್ನು ಕಟ್ಟಿದರು. ವ|| ರಾಮಸೇತುವಿನಿಂದ ಹಿಡಿದು ಗಂಗಾನದಿಯ ದಕ್ಷಿಣಪಶ್ಚಿಮಭಾಗದ ಭೂಮಿಯನ್ನು ನೀವು ಆಳುವುದು. ಪೂರ್ವೋತ್ತರಭಾಗದ ನೆಲವನ್ನು ದುರ್ಯೋಧನನಾಳತಕ್ಕದ್ದು ಎಂದು ಧೃತರಾಷ್ಟ್ರನು ಮೊದಲಿನ ರೀತಿಯಲ್ಲಿಯೇ ಭಾಗಮಾಡಿಕೊಟ್ಟು; ದುರ್ಯೋಧನನಾದರೆ ದುರ್ಬುದ್ಧಿಯವನು. ನೀವೂ ಅವರೂ ಒಂದೇ ಕಡೆ ಇದ್ದರೆ ಅಸೂಯೆಯೂ ಕಲಹವೂ ಎಂದೂ ತಪ್ಪುವುದಿಲ್ಲ. ಆದ ಕಾರಣದಿಂದ ಇಲ್ಲಿಗೆ ಅರವತ್ತುಯೋಜನ ದೂರದಲ್ಲಿ ಇಂದ್ರಪ್ರಸ್ಥವೆಂಬ ಪಟ್ಟಣವಿದೆ. ಅಲ್ಲಿಗೆ ಹೋಗಿ ಸುಖವಾಗಿ ರಾಜ್ಯವಾಳುತ್ತಿರಿ ಎಂದನು. ಹಾಗೆಯೇ ಮಾಡುತ್ತೇವೆ ಎಂದು ಪಾಂಡವರು ಸಮಸ್ತ ಪರಿವಾರ ಸಹಿತರಾಗಿ-

ಮ॥ ಒಡವರ್ಪುಗ್ರ ಮದೇಭ ವಾಜಿ ಗಣಿಕಾನರ್ಘ್ಯಾದಿ ರತ್ನಂಗಳೊಳ್
ತೊಡರ್ದೊಪ್ಪುತ್ತಿರೆ ಲಕ್ಷ್ಮಿ ದಂತಿ ತುರಗಂ ಶ್ರೀ ದಿವ್ಯಕಾಂತಾಜನಂ ।
ತೊಡವೆಂಬೊಂದುಮನಾ ಸುರಾಸುರರಿನಾ ಗೋವಿಂದನಿಂ ಮುನ್ನೆ ಕೋ
ಳ್ಪಡೆದಂಭೋನಿಧಿಯಂತೆ ಬಂದು ನೆಗಳ್ದಿಂದ್ರಪ್ರಸ್ಥಮಂ ಧರ್ಮಜಂ ॥ ೯

ಮುಟ್ಟಿರಗಳೆ॥ ಎಯ್ದುವುದುಂ ತತ್ಪುರದುಪವನಂಗಳವಿರಳ ಮಳಯಾನಿಳಕಂಪಿತಂಗ ।
ಳವಿರಳ ಕುಸುಮಾವಳಿ ಕಂಪುವೇಟಿ ಸೊಗಯಿಪ ಕಿಱು ಮಿಡಿಗಳೊಳೊಪ್ಪಿ ತೋಱಿ ।
ಲವಣಾಬ್ಧಿಯೆ ಬಳಸಿದುದೆನಿಸುವಗಟ ಬಳಸೆಸೆದಿರೆ ಕೋಂಟೆಯ ಚೆಲ್ವು ಪೊಗಟ ।
ಲರಿದೆನಿಸಿರೆ ನೆಗೆದುದು ನಭಮನೆಯ್ದೆ ಮಿಳಿರ್ವ ಪತಾಕಾವಳಿ ದಿವಮನೆಯ್ದೆ
ಬಳಸಿದ ಕೆಂಬೊನ್ನ ಮದಿಲ್ಗಳೊಳಗೆ ಮಣಿಮಯ ಭವನಾವಳಿ ತೊಳಗಿ ಬೆಳಗೆ
ರಸ ರಸದ ಬಾವಿ ಮನೆ ಮನೆಗೆ ಬೇಱಿ ಕಿಸುಗಲ್ಗಳ ರಜದ ಕಣಿವೆರಸು ತೋಱಿ
ಸುರಕುಜದ ನೆಟಲೊಳಂಗಣದೊಳೇನುಮಲಪಿಲ್ಲದೆ ಕಟ್ಟಿರೆ ಕಾಮಧೇನು
ಪರದರ ಪಾರ್ವರ ಸೂಳೆಯರ ಮನೆಗಳವು ಧನದನ ಮನೆಯುಮನೇಟಿಪ ಮನೆಗಳವು
ಪೊಟಲ ಬೆಡಂಗಂ ಮೆಚ್ಚ ಮೆಚ್ಚ ನೋಡಿ ದಿವಿಜೇಂದ್ರ ವಿಳಾಸದೊಳಿಂತು ಕೂಡಿ
ಪರಿತಂದಾಗಳ್ ಪಿರಿದೊಸಗೆವೆರಸಿ ಪುರಕಾಂತೆಯರಾದರದಿಂದೆ ಪರಸಿ

೯. ಜೊತೆಯಲ್ಲಿ ಬರುತ್ತಿದ್ದ ಭಯಂಕರವಾದ ಆನೆ, ಕುದುರೆ, ವೇಶ್ಯೆಯರು, ವಿಶೇಷ ಬೆಲೆಯುಳ್ಳ ರತ್ನ ಇವೆಲ್ಲವೂ ಜೊತೆಯಲ್ಲಿ ಪ್ರಕಾಶಿಸುತ್ತಿರಲು ಆ ಪಾಂಡವರು ದೇವದಾನವರಿಂದಲೂ ಶ್ರೀಕೃಷ್ಣನಿಂದಲೂ ಲಕ್ಷ್ಮಿ, ಐರಾವತ, ಉಚ್ಚೈಶ್ರವಸ್ಸು, ಅಪ್ಸರಸ್ತ್ರೀಯರು, ಚಿಂತಾಮಣಿ ಮೊದಲಾದವುಗಳು ಸೂರೆಯಾಗುವುದಕ್ಕೆ ಮೊದಲಿದ್ದ ಸಮುದ್ರದ ಹಾಗೆ ಸಂಪೂರ್ಣವಾದ ಐಶ್ವರ್ಯದಿಂದ ಬಂದು ಧರ್ಮರಾಯನು ಇಂದ್ರಪ್ರಸ್ಥಪುರವನ್ನು ಸೇರಿದನು. ೧೦. ಆ ಪಟ್ಟಣದ ತೋಟಗಳು ದಟ್ಟವಾದ ಮಲಯಮಾರುತದಿಂದ ಅಲುಗಾಡಿಸಲ್ಪಟ್ಟು ಸಾಂದ್ರವಾದ ಪುಷ್ಪರಾಶಿಯು ಸುಗಂಧವನ್ನು ಬೀರುತ್ತಿತ್ತು. ಸೊಗಸಾಗಿ ಕಾಣುವ ಸಣ್ಣ ಹೀಚುಗಳು ಒಪ್ಪಿ ತೋರುತ್ತಿದ್ದುವು, ಉಪ್ಪಿನ ಸಮುದ್ರವೇ ಸುತ್ತುವರಿದಿದೆಯೋ ಎಂಬಂತಿದ್ದ ಕಂದಕಗಳು ಸುತ್ತಿ ಪ್ರಕಾಶಿಸುತ್ತಿರಲು ಕೋಟೆಯ ಸೌಂದರ್ಯವು ಹೊಗಳುವುದಕ್ಕೆ ಅಸಾಧ್ಯವೆನಿಸಿತ್ತು, ಆಕಾಶದವರೆಗೆ ಮೇಲಕ್ಕೆದ್ದು ಅಲುಗಾಡುತ್ತಿರುವ ಬಾವುಟಗಳ ಸಾಲು ಸ್ವರ್ಗದವರೆಗೂ ಹೋಗಿದ್ದುವು. ಸುತ್ತುವರಿದಿರುವ ಕೋಟೆಯ ಗೋಡೆಗಳೊಳಗೆ ರತ್ನಖಚಿತವಾದ ಅರಮನೆಗಳ ಸಮೂಹಗಳು ತೊಳಗಿ ಬೆಳಗುತ್ತಿದ್ದುವು, ರಸಯುಕ್ತ ಬಾವಿಗಳು ಪ್ರತಿಮನೆಯಿಂದಲೂ ಬೇರೆ ಬೇರೆ ಕೆಂಪುರತ್ನಗಳ ಧೂಳಿನ ಗಣಿಯಿಂದ ಕೂಡಿ ತೋರುತ್ತಿದ್ದುವು. ಕಲ್ಪವೃಕ್ಷದ ನೆರಳಿನಲ್ಲಿ ಕಾಮಧೇನುವು ಯಾವ ಅಲೆತವೂ ಇಲ್ಲದೆ ಸುಖವಾಗಿದ್ದಿತು. ವ್ಯಾಪಾರಿಗಳ, ಬ್ರಾಹ್ಮಣರ, ವೇಶ್ಯಾಜನರ ಮನೆಗಳು ಕುಬೇರನ ಮನೆಯನ್ನು ತಿರಸ್ಕರಿಸುತ್ತಿದ್ದುವು. ಆ ಪಟ್ಟಣದ ಬೆಡಗನ್ನು ವಿಶೇಷವಾಗಿ ಮೆಚ್ಚಿ ದೇವೇಂದ್ರನ ವೈಭವದಿಂದ ಕೂಡಿ ಪಾಂಡವರು ನಡೆದುಬಂದಾಗ ಪಟ್ಟಣದ ಸ್ತ್ರೀಜನರು ವಿಶೇಷಸಂತೋಷದಿಂದ ಕೂಡಿ ಆದರದಿಂದ ಹರಸಿದರು. ಅವರು ಚೆಲ್ಲುವ ಮಂತ್ರಾಕ್ಷತೆಗಳನ್ನೂ ಸಂಪೂರ್ಣವಾಗಿ ಮನಸ್ಸಂತೋಷದಿಂದ ಸ್ವೀಕರಿಸಿ

ಸೂಸುವ ಶೇಷಾಕ್ಷತಮಂ ಸಮಂತು ಪಿರಿದುಂ ಮನ ಸಂತಸದಿಂದಮಾಂತು
ಕರುಮಾಡಮನಾದರದಿಂದಮೇಱೆ ಕೆಲದೊಳ್ಮಾಡಂಗಳನಱಿದು ತೋಱೆ
ಮಣಿ ಕನಕ ರಜತ ವಸ್ತುಗಳನಿತ್ತು ಬೇಡಿದ ನಾಡುಗಳನವಯವದಿಂದಮಿತ್ತು
ಕರಿ ತುರಗ ಬಲಂಗಳ್ ಪೆರ್ಚುವಂತು ಮಲೆಯುಂ ಮಂಡಲಮುಂ ಬೆರ್ಚುವಂತು
ಕೊಂಡಾಡುವ ನಾಲ್ವರುಮನುಜರೊಳಗೆ ನೆಗಟ್ದರಿಗನ ತೇಜಮೆ ತೊಳಗಿ ಬೆಳಗೆ
ನೆಲನಂ ಪ್ರತಿಪಾಲಿಸಿ ಧರ್ಮಸೂನು ಸೂಖಮಿರ್ದಂ ರಿಪುಬಳ ತಿಮಿರಭಾನು ॥ ೧೦

ವ॥ ಅಂತಜಾತಶತ್ರು ಶತ್ರುಪಕ್ಷ ಕ್ಷಯಕರ ಕರವಾಳ ದುಷ್ಪ್ರಾಭೀಳ ಭುಜಂಗಮೂರ್ತಿ ವಿಶ್ವ ವಿಶ್ವಂಭರಾಧಾರಮಪ್ಪರಿಕೇಸರಿಯ ತೋಳ್ವಲದೊಳ್ ರಾಜ್ಯಂಗೆಯ್ಯುತಿರ್ಪನ್ನೆಗಂ ವಿಕ್ರಾಂತತುಂಗ ನೊಂದೆಡೆಯೊಳಿರ್ಪಿರವಿಂಗುಮ್ಮಳಿಸಿ ದಿಗಂಗನಾ ಮುಖಾವಲೋಕನಂಗೆಯ್ಯಲ್ ಬಗೆದು-

ಮ॥ ಸ್ರ॥ ಸೆಣಸುಳ್ಳುದ್ವೃತ್ತರಂ ತಳ್ತಿಱಿಯದೆ ಚತುರಂಭೋಧಿ ಪರ್ಯಂತಮಂ ಧಾ
ರಿಣಿಯಂ ತಾಂ ಪೋಗಿ ಬಾಯ್ಕೇಳಿಸದೆ ಮುನಿಜನಕ್ಕಿಪ್ಪ ವಿಘ್ನಂಗಳಂ ದಾ ।
ರುಣ ದೈತ್ಯರ್ ಮಾಡೆ ನೀಡಿಲ್ಲದೆ ಸಲೆ ಚಲದಾಟಂದು ಕೊಂದಿಕ್ಕದೊರ್ವಂ
ಗುಣಮುಂಟೆಂದುಂಡು ಪಟ್ಟರ್ಪನನಣಮೆ ನಿರುದ್ಯೋಗಿಯಂ ಭೂಪನೆಂಬರ್ ॥ ೧೧

ವ॥ ಎಂದು ವಿಜಿಗೀಷುವೃತ್ತ್ಯೋದ್ಯುಕ್ತನಾಗಲ್ ಬಗೆದು-

ಉಪ್ಪರಿಗೆಯನ್ನು ಆದರದಿಂದ ಹತ್ತಿ ಸುಖವಾಗಿ ನೆಲಸಿದರು. ಪಕ್ಕದಲ್ಲಿದ್ದ ಮಾಡಗಳನ್ನು ಪರಿಚಯಮಾಡಿಕೊಂಡರು. ಅರ್ಥಿಗಳು ಬೇಡಿದ ಚಿನ್ನ, ಬೆಳ್ಳಿ, ರತ್ನಖಚಿತವಾದ ವಸ್ತುಗಳನ್ನೂ ರಾಜ್ಯಗಳನ್ನೂ ಶ್ರಮವಿಲ್ಲದೆ ದಾನಮಾಡಿದರು. ಆನೆ, ಕುದುರೆ, ಕಾಲಾಳಿನ ಬಲಗಳನ್ನೂ ಹೆಚ್ಚಿಸಿಕೊಂಡರು. ಬೆಟ್ಟಗುಡ್ಡಗಳೂ ಸಾಮಂತಮಂಡಲವೂ ಹೆದರುವಂತೆ ಸ್ತೋತ್ರಮಾಡಲ್ಪಟ್ಟರು. ನಾಲ್ಕು ಜನರಲ್ಲಿ ಅರ್ಜನನ ತೇಜಸ್ಸೇ ತೊಳಗಿ ಬೆಳಗುತ್ತಿರಲು ಶತ್ರುಸೈನ್ಯವೆಂಬ ಕತ್ತಲಿಗೆ ಸೂರ್ಯನೋಪಾದಿಯಲ್ಲಿದ್ದ ಧರ್ಮರಾಯನು ರಾಜ್ಯವನ್ನು ಸುಖವಾಗಿ ಪರಿಪಾಲಿಸುತ್ತಿದ್ದನು. ವ॥ ಶತ್ರುಗಳೇ ಹುಟ್ಟಿರದ ಧರ್ಮರಾಯನು ಶತ್ರುಸೈನ್ಯವನ್ನು ನಾಶಪಡಿಸುವ ಕತ್ತಿಯೆಂಬ ಹಲ್ಲಿನಿಂದ ಭಯಂಕರವಾದ ಸರ್ಪದಂತಿರುವ, ಸಮಸ್ತಭೂಮಿಗೂ ಆಶ್ರಯವಾಗಿರುವ ಅರಿಕೇಸರಿಯ ಬಾಹುಬಲದ ಆಶ್ರಯದಿಂದ ರಾಜ್ಯಭಾರಮಾಡುತ್ತಿರಲು ವಿಕ್ರಾಂತತುಂಗನಾದ ಅರ್ಜುನನು ಒಂದೇ ಸ್ಥಳದಲ್ಲಿರುವ ಸ್ಥಿತಿಗೆ ಜುಗುಪ್ಸೆಪಟ್ಟು ಜೈತ್ರಯಾತ್ರೆಯನ್ನು ಮಾಡಲು ಯೋಚಿಸಿದನು. ೧೧. ಅಸೂಯೆಯಿಂದ ಕೂಡಿ ದಾರಿತಪ್ಪಿ ನಡೆಯುವವರನ್ನು ಸಂಧಿಸಿ ಕತ್ತರಿಸದೆ ನಾಲ್ಕು ಸಮುದ್ರದಿಂದ ಸುತ್ತುವರಿಯಲ್ಪಟ್ಟ ಭೂಮಂಡಲವನ್ನು ತನ್ನ ಆಜ್ಞಾಧೀನವನ್ನಾಗಿ ಮಾಡಿಕೊಳ್ಳದೆ ಋಷಿಗಳ ಯಜ್ಞಕ್ಕೆ ವಿಘ್ನಮಾಡುತ್ತಿರುವ ದುಷ್ಟ ರಾಕ್ಷಸರನ್ನು ಸ್ವಲ್ಪವೂ ಸಾವಕಾಶವಿಲ್ಲದೆ ಪ್ರತಿಭಟಿಸಿ ಕೊಂದಿಕ್ಕದೆ ತನ್ನಲ್ಲಿ ಗುಣವುಂಟೆಂದು ಹೇಳುತ್ತ ಊಟಮಾಡಿ ಮಲಗಿರುವ ಒಬ್ಬ ನಿರುದ್ಯೋಗಿಯನ್ನು ರಾಜನೆನ್ನುತ್ತಾರೆಯೇ? ವ॥ ಎಂದು ಯೋಚಿಸಿ ಜೈತ್ರಯಾತ್ರೆಗೆ ಹೊರಡಬೇಕೆಂದು

ಚಂ॥ ಅಱಪಿದೊಡೆನ್ನ ಪೋಗನಿನಿಯಳ್ಗೆ ಮನಂ ಮಱುಕಕ್ಕೆ ನೀಳ್ದ ಕ
ಣ್ಗೊಳ್ಗಱಿದುಗುವಶ್ರುವಾರಿಗೆ ತೊದಳ್ನುಡಿ ಲಲ್ಲೆಗೆ ಪಕ್ಕುಗೊಟ್ಟು ಕಾ ।
ಲ್ಗೆಱಗಿರೆ ಪೋಗು ಕೆಟ್ಟಪುದು ಮೋಹಮಯಂ ನಿಗಳಂ ಕಳತ್ರಮಂ
ದಱಪದೆ ನಟ್ಟಿರುಳ್ ಮಱೆದು ಸಾರ್ಚಿದ ನಲ್ಲಳ ತಳ್ತ ತೋಳ್ಗಳಂ ॥ ೧೨

ವ॥ ಮೆಲ್ಲಮೆಲ್ಲನೆ ಪತ್ತುವಿಡಿಸಿ ತನ್ನ ತೊಟ್ಟ ದಿವ್ಯಾಭರಣಂಗಳೆಲ್ಲಮಂ ಕಳೆದು ದಿವ್ಯಶರಧಿಗಳಂ ಬಗಿದುಕೊಂಡು ದಿವ್ಯಚಾಪಮಂ ಪಿಡಿದು ಪ್ರಥಮ ಚಳಿತ ದಕ್ಷಿಣ ಚರಣನಾಗಿ ನಿಜ ನಿವಾಸದಿಂ ಪೊಱಮಟ್ಟು ಖಾಂಡವಪ್ರಸ್ಥದಿಂದುತ್ತರಾಭಿಮುಖನಾಗಿ ಕಾಮ್ಯಕವನದೊಳಗನೆ ನೀಲಪರ್ವತದ ಮೇಗನೆ ಪೋಗಿ–

ಚಂ॥ ಸಗರರ ಮೇಲೆ ಗಂಗೆಯನನಾಕುಲದಿಂ ತರಲಾ ಭಗೀರಥಂ
ನೆಗಟ್ಟೆ ತಪೋನಿಯೋಗದೊಳವಂಗಮರಾಪಗೆ ಮೆಚ್ಚಿ ಪಾಯ್ವುದುಂ ।
ಗಗನದಿನಂಧಕ ದ್ವಿಪ ಜಟಾಟವಿಯೊಳ್ ಬಟಕಾದ ಶೈಲದೊಳ್
ಸೊಗಯಿಸೆ ಪಾಯ್ದುದಿಂತಿದುವೆ ಬಂಧುರ ಕೂಟ ಕುಳಂ ಹಿಮಾಚಳಂ ॥ ೧೩

ಮ॥ ಸ್ರ ॥ ವಿಲಸತ್ಕಲ್ಲೋಲ ನಾದಂ ನೆಗಟ್ದಿರೆ ನಿಜ ಕೂಟಾಗ್ರದೊಳ್ ಪಾಯ್ವ ಗಂಗಾ
ಜಲದಿಂ ಮೂರ್ಧಾಭಿಷೇಕೋನ್ನತಿ ನಿಲೆ ಚಮರೀ ಲೋಲ ಲಾಂಗೂಲಮಾಲಾ ।
ವಲಿ ವಿಕ್ಷೇಪಂಗಳಿಂ ತಚ್ಚಮರರುಹ ಮಹಾಶೋಭೆ ಕೈಗಣ್ಮೆ ವಿಶ್ವಾ
ಚಲ ಚಕ್ರೇಶತ್ವಮಂ ತಾಳ್ದಿದುದಖಿಳ ಧರಾರಮ್ಯಹೈಮಾಚಳೇ ದ್ರಂ ॥ ೧೪

ನಿಶ್ಚಯಿಸಿದನು. ೧೨. ತನ್ನ ಚೈತ್ರಯಾತ್ರಾಪ್ರಯಾಣ ವಿಷಯವನ್ನು ಪ್ರಿಯಳಾದ ದ್ರೌಪದಿಗೆ ತಿಳಿಸಿದರೆ ಆ ಕಾರ್ಯಕ್ಕೆ ಅಡ್ಡಿಯಾಗುತ್ತದೆ. ಅವಳ ಮನಸ್ಸಿನ ದುಃಖದಿಂದ ಕೂಡಿದ ಕಣ್ಣೀರಿಗೂ ತೊದಳ್ನುಡಿಯ ಪ್ರಿಯವಾರ್ತೆಗೂ ಮನಸೋತು, ಅವಳು ನನ್ನ ಕಾಲಿಗೆರಗಿದರೆ ನನ್ನ ಪ್ರಯಾಣಕ್ಕೆ ವಿಘ್ನವುಂಟಾಗುತ್ತದೆ. ಹೆಂಡತಿಯು ಮೋಹಮಯವಾದ ಸರಪಣಿಯೇ ಸರಿ ಎಂದು ಅವಳಿಗೆ ತಿಳಿಸದೆಯೇ ನಡುರಾತ್ರಿಯಲ್ಲಿ ಮೈಮರೆತು ಮಲಗಿ ತನ್ನ ಸಮೀಪಕ್ಕೆ ನೀಡಿದ್ದ ಅವಳ ತೋಳುಗಳನ್ನು ವ॥ ನಿಧಾನವಾಗಿ ಬಿಡಿಸಿಕೊಂಡು ತಾನು ಧರಿಸಿದ್ದ ಉತ್ತಮ ಒಡವೆಗಳನ್ನೆಲ್ಲ ಕಳೆದಿಟ್ಟು ಶ್ರೇಷ್ಠವಾದ ಬತ್ತಳಿಕೆಯನ್ನು ಬಿಗಿದುಕೊಂಡು ಉತ್ತಮವಾದ ಬಿಲ್ಲನ್ನು ಹಿಡಿದು ಬಲಗಾಲನ್ನು ಮುಂದಿಟ್ಟು ತನ್ನ ಮನೆಯಿಂದ ಹೊರಟು ಖಾಂಡವಪ್ರಸ್ಥದಿಂದ ಉತ್ತರದ ಕಡೆಗೆ ಹೊರಟು ಕಾಮ್ಯಕವನದೊಳಗಿನಿಂದಲೇ ನೀಲಪರ್ವತದ ಮೇಲಕ್ಕೆ ಬಂದನು. ೧೩. ತನ್ನ ಪಿತೃಗಳಾದ ಸಗರರ (ಭಸ್ಮರಾಶಿಯ) ಮೇಲೆ ಗಂಗೆಯನ್ನು ತರಲು ಆ ಭಗೀರಥನು ತಪಸ್ಸಿನಲ್ಲಿ ನಿರತನಾಗಲು ಅವನ ತಪಸ್ಸಿಗೆ ಮೆಚ್ಚಿ ದೇವನದಿಯಾದ ಗಂಗೆಯು ಮೊದಲು ಅಂಧಕಾಸುರನ ಶತ್ರುವಾದ ಶಿವನ ಜಟೆಯೆಂಬ ಕಾಡಿನಲ್ಲಿಯೂ ಬಳಿಕ ಅಡ್ಡವಾದ ಪರ್ವತದಲ್ಲಿಯೂ ಸೊಗಸಿನಿಂದ ಹರಿದಳು. ಅನೇಕ ಶಿಖರಗಳ ಸಮೂಹದಿಂದ ಮನೋಹರವಾಗಿರುವ ಆ ಹಿಮಾಚಲ ಪರ್ವತವೇ ಇದು. ೧೪. ಪ್ರಕಾಶಮಾನವಾದ ಅಲೆಗಳ ಧ್ವನಿಯು ಉಂಟಾಗುತ್ತಿರಲು ತನ್ನ ಶಿಖರಗಳ ತುದಿಯಲ್ಲಿ ಹರಿಯುವ ಗಂಗೋದಕದಿಂದ ಪಟ್ಟಾಭಿಷೇಕದ

ವ॥ ಎಂದು ಮೆಚ್ಚ-

ಕಂ॥ ಚಾರು ವಿವಿಧಾಗ್ನಿಕಾರ್ಯ
ಪ್ರಾರಂಭ ಮಹಾದ್ವಿಜನ್ಮ ಘೋಷದಿನಂಹೋ ।
ದೂರಮುಮವನಿತಳಾಳಂ
ಕಾರಂ ಸಂಸಾರ ಸಾರ ಗಂಗಾದ್ವಾರಂ ॥ ೧೫

ವ॥ ಎನೆ ಸೊಗಯಿಸುವ ಗಂಗಾದ್ವಾರದೊಳ್ ಮುನಿಜನಂಗಳ ಬೇಳ್ವೆಗಳ್ಗುಪದ್ರವಂಗೆಯ್ವ ನಿಶಾಟಕೋಟಿಯಂ ನಿಶಿತ ಶರಕೋಟಿಯಿಂದಮುಚ್ಚಾಟಿಸಿ ಕೆಲವು ದಿವಸಮಿರ್ದಲ್ಲಿ ಪಡೆಮೆಚ್ಚೆ ಗಂಡನ ಗಂಡಗಾಡಿಯಂ ಕಂಡು ಫಣೇಂದ್ರನ ಕನ್ನೆ ಮದನಲತೆಯೆಂಬ ನಾಗಕನ್ನೆ ಕಣ್ಣೇಟಂಗೊಂಡು ತನ್ನ ಲೋಕಕ್ಕೊಡಗೊಂಡು ಪೋಗಲ್-

ಉ॥ ಆಗಳುಮಿಂದು ಸೂರ್ಯರಣಮಿಲ್ಲದೆ ಕಟ್ಟಲೆಯೆಂಬುದಿಲ್ಲ ತ
ದ್ಭೋಗಿ ಫಣಾಮಣಿ ದ್ಯುತಿಯೆ ಕಟ್ಟಲೆಯಂ ತಲೆದೋಱಲೀಯದಾ ॥
ನಾಗರ ನಾಗಕನ್ನೆಯರ ರೂಪುಗಳಿಟ್ಟಳಮಾಗೆ ಭೋಗಿಗಳ್
ಭೋಗಿಗಳೆಂಬ ಭೋಗಿಗಳೆ ಭೋಗಿಗಳಲ್ಲಿಯು ಭೋಗನಾಯಕರ್ ॥ ೧೬

ವ॥ ಎಂದು ನಾಗಕನ್ನೆ ನಾಗಲೋಕದ ವಿಳಾಸಂಗಳಂ ತೋಱುತ್ತುಂ ತನ್ನ ಕೆಱಗಣ ನಾಗವಿಮಾನಕ್ಕೆ ವಂದು ನಾಗಕನ್ನೆಯರುಂ ತಾನುಂ ಮನಂಬುಗಿಸುವಂತೆ ಮಜ್ಜನಂಬುಗಿಸಿ ರಸರಸಾಯನಂಗಳನೂಡುವಂತೆ ದಿವ್ಯಾಹಾರಂಗಳನೂಡಿ-

ಮಾನ್ಯತೆಯುಂಟಾಗಲು ಚಮರೀಮೃಗಗಳ ಮನೋಹರವಾದ ಬಾಲದ ತುದಿಯ ಕೂದಲುಗಳ ಸಮೂಹದ ಬೀಸುವಿಕೆಯಿಂದ ಚಾಮರಗಳನ್ನು ಬೀಸುವ ವೈಭವವು ಅಧಿಕವಾಗುತ್ತಿರಲು ಅಖಂಡ ಪ್ರಪಂಚದಲ್ಲಿರುವ ಎಲ್ಲ ಬೆಟ್ಟಗಳ ಚಕ್ರವರ್ತಿ ಪದವಿಯನ್ನು ಶ್ರೇಷ್ಠವಾದ ಈ ಹಿಮಾಚಲ ಪರ್ವತವು ತಾಳಿತು. ೧೫. ಗಂಗಾದ್ವಾರವೆಂಬ ಪುಣ್ಯಕ್ಷೇತ್ರವು ಮನೋಹರವೂ ನಾನಾ ವಿಧವೂ ಆದ ಮಹಾಬ್ರಾಹ್ಮಣರ ವೇದಘೋಷದಿಂದ ಪಾಪದೂರವೂ ಭೂಮಂಡಲಕ್ಕೆ ಅಲಂಕಾರ ಪ್ರಾಯವೂ ಸಂಸಾರಸಾರವೂ ಆಯಿತು. ವ॥ ಇಂತಹ ಸೊಗಸಾಗಿರುವ ಗಂಗಾದ್ವಾರದಲ್ಲಿ ತಪಸ್ವಿಗಳ ಯಜ್ಞಕಾರ್ಯಕ್ಕೆ ಹಿಂಸೆಯನ್ನು ಮಾಡುವ ರಾಕ್ಷಸ ಸಮೂಹವನ್ನು ಹರಿತವಾದ ಬಾಣಗಳ ರಾಶಿಯಿಂದ ಹೊಡೆದೋಡಿಸುತ್ತ ಅಲ್ಲಿ ಕೆಲವು ದಿವಸವಿದ್ದನು. ಅಲ್ಲಿಯೇ ಪಡೆಮೆಚ್ಚೆಗಂಡನಾದ ಅರ್ಜುನನ ಸೌಂದರ್ಯವನ್ನು ನಾಗಕನ್ಯೆಯಾದ ಮದನಲತೆಯೆಂಬುವಳು ನೋಡಿ ಮೋಹಗೊಂಡು ಅವನನ್ನು ತನ್ನ ನಾಗಲೋಕಕ್ಕೆ ಕೊಂಡುಹೋದಳು. ೧೬. ಚಂದ್ರಸೂರ್ಯರು ಇಲ್ಲದಿದ್ದರೂ ಅಲ್ಲಿ ಕತ್ತಲೆಯೆಂಬುದೇ ಇಲ್ಲ. ಆ ಹಾವುಗಳ ಹೆಡೆಗಳಲ್ಲಿರುವ ರತ್ನಕಾಂತಿಯೇ ಕತ್ತಲೆಯು ತಲೆಹಾಕುವುದಕ್ಕೆ ಅವಕಾಶಕೊಡುವುದಿಲ್ಲ. ಆ ನಾಗರ ಮತ್ತು ನಾಗಕನ್ನಿಕೆಯರ ರೂಪಗಳು ಮನೋಹರವಾಗಿವೆ. ಆದುದರಿಂದಲೇ ಸರ್ಪಗಳು ಭೋಗಿಗಳು ಎನ್ನಿಸಿಕೊಂಡಿವೆ. ಭೋಗಿಗಳೆಂದರೆ ಭೋಗಪಾಲಕರೇ ವ॥ ಎಂದು ಆ ನಾಗಕನ್ನಿಕೆ ಆ ನಾಗಲೋಕದ ವೈಭವಗಳನ್ನು ತೋರಿಸುತ್ತ ಕೆಳಭಾಗದಲ್ಲಿದ್ದ ತನ್ನ ಅಂತಃಪುರಕ್ಕೆ

ಉ॥ ನಾಗವಿಭೂಷಣಪ್ರತತಿ ನಾಗರಖಂಡಮಪೂರ್ವಮಪ್ಪ ಪು
ನ್ನಾಗದ ಬಾಸಿಗಂ ಬಗೆದ ಬಣ್ಣದ ಪುಟ್ಟಗೆ ನಾಗಜಾಲಮೆಂ ।
ದಾಗಡೆ ನಾಗಲೋಕ ವಿಭವಂಗಳೊಳಾಟಿಸಿ ನಾಗಶಯ್ಯೆಯೊಳ್
ನಾಗಿಣಿ ನಾಗಬಂಧದೊಳ್ ತಳ್ತು ಗುಣಾರ್ಣವನಂ ಮರುಳ್ಚಿದಳ್ ॥ ೧೭

ವ॥ ಅಂತಾಕೆಯ ಮುದ್ದುವೆರಸಿದ ತೊದಳ್ನುಡಿಗಂ ಪೂಮಾಲೆವೆರಸಿದ ಬಿಱಲ್ಮುಡಿಗಮಲಂಪುವೆರಸಿದ ನೋಟಕ್ಕಮಿಂಬುವೆರಸಿದ ಕೂಟಕ್ಕಂ ಪುರುಡುವೆರಸಿದ ಕೊಂಕಿಂಗಂ ಕದ್ದವಣೆ(?)ವೆರಸಿದ ಸೋಂಕಿಂಗಂ ಗಾಡಿವೆರಸಿದ ಹಾವಕ್ಕಂ ನಾಣ್ವೆರಸಿದ ಭಾವಕ್ಕಮೊಲ್ದು ಮೊಱಲ್ದುಮಿರೆಯಿರೆ ದೇವೇಂದ್ರಂಗಮಿಂದ್ರಾಣಿಗಂ ಜಯಂತನೆಂತಂತೆ-

ಕಂ॥ ಅಂತಾ ಫಣಿಕಾಂತೆಗಮರಿ
ಕಾಂತಾಳಿಕ ಫಳಕ ತಿಳಕ ಹರನೆನಿಪರಿಗಂ ॥
ಗಂ ತನಯನಧಿಕ ತೇಜೋ
ವಂತನಿಳಾವಂತನಿಂದುಮಂಡಳಕಾಂತಂ ॥ ೧೮

ವ॥ ಅಂತು ಪುಟ್ಟುವುದುಮಾತನ ಬಾಲಕ್ರೀಡೆಯುಮಾಕೆಯ ಸುರತಕ್ರೀಡೆಯುಂ ತನ್ನ ನೋಟಕ್ಕಂ ಕೂಟಕ್ಕಂ ಸೊಗಯಿಸೆ ಕೆಲವು ದಿವಸಮಿರ್ದಲ್ಲಿಂ ಪೊಱಮಟ್ಟು ಬಂದು ಹಿಮವದ್ಗಿರೀಂದ್ರ ತಟ ನಿಕಟವರ್ತಿಗಳಪ್ಪಗಸ್ತ್ಯವಟಮುಂ ವಸಿಷ್ಠಪರ್ವತಂಗಳೆಂಬ

ಬಂದು ತಾನೂ ಆ ನಾಗಕನ್ನಿಕೆಯರೂ ತಮ್ಮ ಮನಸ್ಸಿಗೆ ತೃಪ್ತಿಯಾಗುವಂತೆ ಅವನಿಗೆ ಸ್ನಾನಮಾಡಿಸಿ ರಸಯುಕ್ತವಾದ ರಸಾಯನಗಳನ್ನು ತಿನ್ನಿಸುವಂತೆ ದಿವ್ಯಾಹಾರಗಳನ್ನು ಊಡಿಸಿದರು. ೧೭. ಆ ನಾಗಕನ್ನಿಕೆಯು ಅರ್ಜುನನನ್ನು ನಾಗರ ಒಡವೆಗಳ ಸಮೂಹ; ನಾಗರ ಖಂಡವೆಂಬ ಪ್ರದೇಶ, ಅಪೂರ್ವವಾದ ಪುನ್ನಾಗ ಪುಷ್ಪಗಳ ಹಾರ, ಬಗೆಬಗೆಯ ವಸ್ತ್ರಗಳು, ನಾಗದವಲ್ಲಿ (ತಾಂಬೂಲ) ಮೊದಲಾದ ನಾಗಲೋಕದ ವೈಭವಗಳಲ್ಲಿ ಮುಳುಗಿಸಿ ನಾಗಶಯ್ಯೆಯಲ್ಲಿ ನಾಗಬಂಧವೆಂಬ ರತಿಬಂಧದಲ್ಲಿ ಸೇರಿಕೊಂಡು ಮರುಳು ಮಾಡದಳು. ವ॥ ಆಕೆಯ ಮುದ್ದಿನಿಂದ ಕೂಡಿದ ಲಲ್ಲೆಮಾತಿಗೂ (ತೊದಳ್ನುಡಿ) ಹೂಮಾಲೆಯಿಂದ ಕೂಡಿ ಜೋಲಾಡುತ್ತಿರುವ ತುರುಬಿಗೂ ಪ್ರೀತಿಯಿಂದ ಕೂಡಿದ ನೋಟಕ್ಕೂ ಸುಖಮಯವಾದ ಕೂಡುವಿಕೆಗೂ ಸ್ಪರ್ಧೆಯಿಂದ ಕೂಡಿದ ವಕ್ರತೆಗೂ ಬಿಗಿದಪ್ಪಿದ ಆಲಿಂಗನಕ್ಕೂ ಸೌಂದರ್ಯದಿಂದ ಕೂಡಿದ ಶೃಂಗಾರ ಚೇಷ್ಟೆಗೂ ನಾಚಿಕೆಯಿಂದ ಕೂಡಿದ ಭಾವಗಳಿಗೂ ಒಲಿದು ಪ್ರೀತಿಸಿರಲು ದೇವೇಂದ್ರನಿಗೂ ಶಚೀದೇವಿಗೂ ಜಯಂತನು ಹುಟ್ಟುವ ಹಾಗೆ ೧೮. ಆ ಕನ್ನಿಕೆಗೂ ಶತ್ರುಸ್ತ್ರೀಯರ ಮುಖವೆಂಬ ಹಲಗೆಯಲ್ಲಿರುವ ತಿಲಕವನ್ನು ನಾಶಪಡಿಸುವವನೆಂಬ (ಕೀರ್ತಿಯುನ್ನುಳ್ಳ) ಅರಿಕೇಸರಿಗೂ ಅಧಿಕ ತೇಜಸ್ಸಿನಿಂದ ಕೂಡಿದವನೂ ಚಂದ್ರಮಂಡಳದ ಕಾಂತಿಯುಳ್ಳವನೂ ಆದ ಇಳಾವಂತನೆಂಬ ಮಗನು ಹುಟ್ಟಿದನು. ವ॥ ಆತನ ಬಾಲಕ್ರೀಡೆಯು ತನ್ನ ನೋಟಕ್ಕೂ ಅವಳ ಸುರತಕ್ರೀಡೆಯು ತನ್ನ ಕೂಟಕ್ಕೂ ಸೊಗಯಿಸುತ್ತಿರಲು ಕೆಲವು ದಿವಸವಿದ್ದು ಅಲ್ಲಿಂದ ಹೊರಟುಬಂದು ಶ್ರೇಷ್ಠವಾದ ಹಿಮಾಲಯ ಪರ್ವತದ ತಪ್ಪಲಿನ ಸಮೀಪದಲ್ಲಿರುವ ಅಗಸ್ತ್ಯವಟ ಮತ್ತು

**ತೀರ್ಥಂಗಳೊಳೋಲಾಡುತ್ತುಮಾ ದಿಶಾಭಾಗಮನಾತ್ಮೀಯ ಶಾಸನಾಯತ್ತಂ ಮಾಡುತ್ತುಂ ಬಂದಿಂದುಬಿಂಬವಿಗಳದಮೃತಬಿಂದು ದುರ್ದಿನಾರ್ದ್ರ ಚಂದನಾನ್ವಿತಮುಮಶಿಶಿರ ಕರ ರಥ ತುರಗ ಖುರ ಶಿಖರ ನಿಖಂಡಿತ ಲವಂಗ ಪಲ್ಲವಮುಮೈರಾವತ ಕರಲೂನ ಸಲ್ಲಕೀ ಶಬಳಮುಮಪ್ಪುದಯಗಿರಿಯಿಂ ಸೊಗಯಿಸುವ ಮೂಡಣ ದೆಸೆಗೆ ವಂದು ನಂದೆಯ ಪರನಂದೆಯಶ್ವಿನಿ ಮಹಾನಂದೆಯೆಂಬ ತೀರ್ಥಜಲಂಗಳೊಳೋಲಾಡುತ್ತುಮುದ್ವೃತ್ತ ರಿಪುನೃಪತಿಗಳನೇಸಾಡುತ್ತುಮಲ್ಲಿಂ ತಳರ್ದು ಚಪಳ ಕಪಿಬಳ ವಿಲುಪ್ತ ವಿಗಳಿತ ಲತಾಭವನ ಮುಮಧಿಕ ಬಳ ನಳ ಕರತಳಗಳಿತ ಕುಳಶೈಳ ಸಹಸ್ರ ಸಂತಾನ ಕಳಿತ ಸೇತುಬಂಧುರಮುಮಪ್ಪ ದಕ್ಷಿಣ ಸಮುದ್ರದ ತಡಿವಿಡಿದು ಬಂದು ರಾಮಚಂದ್ರಂ ವಿಹರಿಸಿದೆಡೆಗಳಂ ನೋಡಿ-**

**ಉ॥ ಅಂದಿದು ಸೀತೆಯೊಳ್ ನೆರೆದು ನಿಂದೆಡೆ ತತ್ಖರದೂಷಣರ್ಕಳಂ**
**ಕೊಂದೆಡೆ ಪೋಗಿ ಪೊಮ್ಮರೆಯನೆಚ್ಚೆಡೆ ತಪ್ಪದಿದಪ್ಪುದೆಂದು ಕಾ ।**
**ಯ್ಪಿಂ ದಶಕಂಠನಂ ತ್ರಿದಶ ಕಂಟಕನಂ ಕೊಲಲೆಂದು ರಾಮನಾ**
**ದಂದಿನ ಸಾಹಸಂ ಮನದೊಳಾವರಿಸಿತ್ತಕಳಂಕರಾಮನಾ ॥ ೧೯**

**ವ॥ ಅಂತು ರಾಮ ಜನ್ಮೋತ್ಪತ್ತಿಯೊಳಾದ ತನ್ನಯ ಮುನ್ನಿನ ಸಾಹಸಂಗಳಂ ನೆನೆಯುತ್ತುಂ ಬಂದಗಸ್ತ್ಯತೀರ್ಥಮಂ ಕಂಡು-**

ವಸಿಷ್ಠಪರ್ವತವೆಂಬ ಪವಿತ್ರಕ್ಷೇತ್ರಗಳಲ್ಲಿ ವಿಹರಿಸಿ ಆ ದಿಗ್ಭಾಗ ಪ್ರದೇಶಗಳನ್ನೆಲ್ಲ ತನ್ನ ಆಜ್ಞಾನುವರ್ತಿಗಳನ್ನಾಗಿ ಮಾಡಿಕೊಂಡನು. ಚಂದ್ರಬಿಂಬದಿಂದ ಸ್ರವಿಸುತ್ತಿರುವ ಅಮೃತದ ಹನಿಗಳೆಂಬ ದುರ್ದಿನದಿಂದ ಒದ್ದೆಯಾದ ಶ್ರೀಗಂಧದಿಂದ ಕೂಡಿದುದೂ ಸೂರ್ಯನ ಕುದುರೆಯ ಗೊರಸಿನ ತುದಿಯಿಂದ ಕತ್ತರಿಸಲ್ಪಟ್ಟ ಲವಂಗದ ಬಳ್ಳಿಯ ಚಿಗುರನ್ನುಳ್ಳದ್ದೂ ಐರಾವತವೆಂಬ ಇಂದ್ರನ ಆನೆಯ ಸೊಂಡಲಿನಿಂದ ಮುರಿಯಲ್ಪಟ್ಟ ಆನೆಬೇಲದ ಮರದ ವಿವಿಧ ಬಣ್ಣಗಳಿಂದ ಕೂಡಿದ ಪೂರ್ವದಿಕ್ಕಿಗೆ ಬಂದನು. ನಂದೆ, ಅಪರನಂದೆ, ಅಶ್ವಿನಿ, ಮಹಾನಂದೆಯೆಂಬ ತೀರ್ಥೋದಕಗಳಲ್ಲಿ ವಿಹರಿಸಿ ಪ್ರತಿಭಟಿಸಿದ ರಾಜರುಗಳನ್ನು ಸೋಲಿಸುತ್ತ ಅಲ್ಲಿಂದ ಹೊರಟು ಚಪಳವಾದ ಕಪಿಗಳ ಸಮೂಹದಿಂದ ನಾಶಮಾಡಲ್ಪಟ್ಟ ಬಳ್ಳಿವನೆಗಳಿಂದಲೂ ಅಧಿಕ ಬಳವಂತನಾದ ನಳನು ಸಾವಿರಾರು ಕುಲಪರ್ವತಗಳನ್ನು ಸೇರಿಸಿ ನಿರ್ಮಿಸಿದ ಸೇತುವೆಯಿಂದಲೂ ಅತಿ ರಮಣೀಯವಾದ ದಕ್ಷಿಣಸಮುದ್ರದ ತೀರಪ್ರದೇಶವನ್ನು ಅನುಸರಿಸಿ ಬಂದು (ಹಿಂದೆ) ರಾಮಚಂದ್ರನು ವಿಹರಿಸಿದ ಸ್ಥಳಗಳನ್ನು ನೋಡಿ-೧೯. ಹಿಂದೆ ತ್ರೇತಾಯುಗದಲ್ಲಿ ಸೀತೆಯೊಡನೆ ಸೇರಿ ನಿಂತ ಸ್ಥಳವಿದು, ಆ ಖರದೂಷಣರನ್ನು ಕೊಂದ ಸ್ಥಳವಿದು, ಹೋಗಿ ಚಿನ್ನದ ಜಿಂಕೆಯನ್ನು ಹೊಡೆದ ಸ್ಥಳವಿದು, ಆಗಿರಬೇಕು ಎಂದು ವಿಶೇಷಕೋಪದಿಂದ ದೇವತೆಗಳಿಗೆ ಕಂಟಕನಾಗಿದ್ದ ಆ ಹತ್ತುತಲೆಯ ರಾವಣನನ್ನು ಕೊಲ್ಲಲು ಅವತರಿಸಿದ ರಾಮನ ಅಂದಿನ ಸಾಹಸವು ಅಕಳಂಕರಾಮನಾದ ಅರ್ಜುನನ ಮನಸ್ಸಿನಲ್ಲಿ ಪುನಃ ಅಂಕುರಿಸಿತು ವ॥ ರಾಮಾವತಾರದಲ್ಲಾದ ಅಂದಿನ (ತನ್ನ ಹಿಂದಿನ) ಸಾಹಸಗಳನ್ನು ನೆನೆಯುತ್ತ ಬಂದು ಅಗಸ್ತ್ಯತೀರ್ಥವನ್ನು ಕಂಡನು.

ಮ॥ ಬಳೆಯಲ್ಕಣ್ಮಿದುದಿಲ್ಲ ವಿಂಧ್ಯಗಿರಿಯುಂ ತನ್ನಾಜ್ಞೆಯಿಂದೊರ್ಮೆ ಮು
ಕ್ಕುಳಿಸಲ್ಕಂಬುಧಿ ಸಾಲ್ದುದಿಲ್ಲ ಜಗಮಂ ತಿಂದಿರ್ದ ವಾತಾಪಿ ಪೊ ।
ಕ್ಕಳುರ್ವಾತ್ಮೋದರ ವಹ್ನಿಯಿಂ ಪೊಱಮಡಲ್ ತಾನಾರ್ತನಿಲ್ಲಬ್ಧಿವಿ
ಲ್ಲೆಳೆ ತೇಂಕಿರ್ದುದು ಭಾರದಿಂ ಬಡಗೆನಲ್ ಪೆಂಪಾರ್ಗಗಸ್ತ್ಯಂಬರಂ ॥ ೨೦

ವ॥ ಎಂದಗಸ್ತ್ಯತೀರ್ಥ ಸೌಭದ್ರ ಪೌಳೋಮ ಕಾಂಭೋಜ ಭಾರದ್ವಾಜಮೆಂಬಯ್ದು ತೀರ್ಥಂಗಳೊಳ್ ವರ್ಧಮಾನನೆಂಬ ಋಷಿಯ ಶಾಪದೊಳುಗ್ರಗ್ರಾಹ ಸ್ವರೂಪದೊಳಿರ್ದಚ್ಚರಸೆಯರುಮಂ ವಿಶಾಪೆಯರ್ ಮಾಡಿ ಮಳಯಪರ್ವತಮನೆಯ್ದೆವಂದು-

ಚಂ॥ ಇದು ಮಳಯಾಚಳಂ ಮಳಯಜಂ ಮಳಯಾನಿಳನೆಂದು ಪೆಂಪುವೆ
ತ್ತುದು ಸಿರಿಕಂಡಮುಂ ಪದೆದು ತೀಡುವ ಗಾಳಿಯುಮಿಲ್ಲಿ ಪುಟ್ಟಿ ಪೋ ।
ಗದು ಪೊಸ ಸುಗ್ಗಿ ಮೂಗುವಡದಿಲ್ಲಿಯ ಕೋಗಿಲೆ ಬಂದಮಾವು ಬೀ
ಯದು ಕುಸುಮಾಸ್ತ್ರನಾಜ್ಞೆ ತವದೆಲ್ಲಿಯುಮಿಲ್ಲಿಯ ನಂದನಂಗಳೊಳ್ ॥ ೨೧

ಮ॥ ಇದಱಭ್ರಂಕಷ ಕೂಟ ಕೋಟಗಳೊಳಿರ್ದಂಭೋಜ ಷಂಡಂಗಳಂ
ಪುದಿದುಷ್ಣಾಂಶುವಿನೂರ್ಧ್ವಗಾಂಶುನಿವಹಂ ಮೆಯ್ಯಿಕ್ಕಿಟ್ಟಲರ್ಚುತ್ತುಮಿ ।
ರ್ಪುದು ಮಾದ್ಯದ್ಗಜ ಗಂಡ ಭಿತ್ತಿ ಕಷಣಪ್ರೋದ್ಭೇದದಿಂ ಸಾರ್ದು ಬಂ
ದಿದಿರೊಳ್ ಕೂಡುವುದಿಲ್ಲಿ ಚಂದನ ರಸಂ ಕೆಂಬೊನ್ನ ಟಂಕಂಗಳೊಳ್ ॥ ೨೨

೨೦. ವಿಂಧ್ಯಪರ್ವತವು ತನ್ನಾಜ್ಞೆಯನ್ನು ಮೀರಿ ಬಳೆಯಲಾಗಲಿಲ್ಲ, ಸಮುದ್ರವು ತನಗೆ ಬಾಯುಕ್ಕಳಿಸಲೂ ಸಾಕಾಗಲಿಲ್ಲ. ಜಗತ್ತನ್ನೇ ನುಂಗಿದ ವಾತಾಪಿಯೆಂಬ ರಾಕ್ಷಸನು ಪ್ರವೇಶಮಾಡಿ ಉರಿಯುತ್ತಿದ್ದ ತನ್ನ ಜಠರಾಗ್ನಿಯಿಂದ ಹೊರಟುಬರಲು ಸಮರ್ಥನಾಗಲಿಲ್ಲ. ಭೂಮಿಯು ತನ್ನ ಭಾರಕ್ಕೆ ಮುಳುಗದೆ ಉತ್ತರಕ್ಕೆ ಸರಿಯಿತು ಎಂಬ (ಮಹಿಮೆ) ವೈಭವವು ಅಗಸ್ತ್ಯಋಷಿಗಳಿಗಲ್ಲದೆ ಮತ್ತಾರಿಗುಂಟು ವ॥ ಎಂದು ಆಲೋಚಿಸುತ್ತ ಅಗಸ್ತ್ಯತೀರ್ಥ, ಸೌಭದ್ರ, ಪೌಳೋಮ, ಕಾಂಭೋಜ, ಭಾರದ್ವಾಜವೆಂಬ ಅಯ್ದು ತೀರ್ಥಗಳಲ್ಲಿ ಸಂಚರಿಸಿ ವರ್ಧಮಾನನೆಂಬ ಋಷಿಯ ಶಾಪದಿಂದ ಭಯಂಕರವಾದ ಮೊಸಳೆಯ ಆಕಾರದಲ್ಲಿದ್ದ ಅಪ್ಸರಸ್ತ್ರೀಯರನ್ನು ಶಾಪ ವಿಮೋಚಿತರನ್ನಾಗಿ ಮಾಡಿ ಮಳಯಪರ್ವತಕ್ಕೆ ಬಂದು ಸೇರಿದನು. ೨೧. ಇದು ಮಲಯಪರ್ವತ, ಶ್ರೀಗಂಧಕ್ಕೆ ಮಲಯಜನೆಂದು ತಂಪಾದ ಗಾಳಿಗೆ ಮಲಯಾನಿಲ ಎಂದೂ ಹೆಸರು ಬಂದುದು ಇಲ್ಲಿ ಹುಟ್ಟಿದುದರಿಂದಲೇ, ವಸಂತಋತುವೂ ಇಲ್ಲಿ ಹುಟ್ಟಿ ಮತ್ತೆಲ್ಲಿಗೂ ಹೋಗುವುದಿಲ್ಲ. ಇಲ್ಲಿಯ ಕೋಗಿಲೆಯು ಮೂಕತೆಯನ್ನು ಪಡೆಯುವುದಿಲ್ಲ, ಫಲ ಬಿಟ್ಟ ಮಾವು ಎಂದೂ ಮುನಿದುಹೋಗುವುದಿಲ್ಲ. ಇಲ್ಲಿಯ ನಂದನವನಗಳಲ್ಲಿ ಮನ್ಮಥನ ಆಜ್ಞೆ ಎಂದೂ ತಪ್ಪುವುದಿಲ್ಲ. ೨೨. ಇದರ ಅನೇಕ ಆಕಾಶಗಾಮಿಯಾದ ಶಿಖರಗಳ ಮೇಲಿರುವ ತಾವರೆಗಳ ಸಮೂಹವನ್ನು ಸೂರ್ಯನ ಊರ್ಧ್ವಗಾಮಿಯಾದ ಉಷ್ಣ ಕಿರಣಗಳು ಪ್ರವೇಶಿಸಿ ಅರಳಿಸುತ್ತವೆ. ಮದ್ದಾನೆಗಳ ಗಂಡಸ್ಥಳವೆಂಬ ಗೋಡೆಗಳ ಉಜ್ಜುವಿಕೆಯಿಂದ ಮುರಿದು (ಸ್ರವಿಸುತ್ತಿರುವ) ಶ್ರೀಗಂಧದ ರಸವು ಹರಿದುಬಂದು ಇಲ್ಲಿಯ ಅಪರಂಜಿಯ ಬಣ್ಣದ ಪರ್ವತದ ತಪ್ಪಲುಗಳನ್ನು

ಮ॥ ಸ್ರ॥ ನೆಗಟ್ದೀ ಕರ್ಪೂರ ಕಾಳಾಗರು ಮಳಯ ಮಹೀಜಂಗಳೇಳಾ ಲತಾಳೀ ।
ಸ್ಥಗಿತಂಗಳ್ ಕಣ್ಗೆವಂದಿರ್ದುವನಿವನೆ ವಲಂ ಕೊಂಬುಗೊಂಡಂಗಜಂ ಮೆ ।
ಲ್ಲಗೆ ಪಾರ್ದಾರ್ದಾಗಳುಂ ಕಿನ್ನರ ಯುವತಿ ಮೃಗೀವ್ರಾತಮಂ ತನ್ನ ನಲ್ಲಂ
ಬುಗಳಿಂದೆಚ್ಚೆಚ್ಚು ಮೆಚ್ಚಂ ಸಲಿಸುವನದಱಿಂ ರಮ್ಯಮಿಂತೀ ನಗೇಂದ್ರಂ ॥೨೩

ಮ॥ ಇದಿರೊಳ್ ನಿಂದೊಡೆ ವಜ್ರಿ ಸೈರಿಸನಿರಲ್ವೇಡೆಮ್ಮೊಳೊಳ್ಪೊಕ್ಕು ನಿ
ಲ್ವುದು ನೀನೆಂದು ಕಡಂಗಿ ಕಾಲ್ವಿಡಿವವೋಲ್ ತನ್ನೂರ್ಮಿಗಳ್ ಬಂದುವಂ ।
ದಿದಱಿಂ ಪೋದ ತಪೋಪಳಂ (?) ಗಗನಮಂ ಮಾರ್ಪೊಯ್ಯೆ ಕಣ್ಗೊಪ್ಪಿ ತೋ
ರ್ಪುದಿದುತ್ತ್ರೇಂಖದಸಂಖ್ಯ ಶಂಖ ಧವಳಂ ಗಂಭೀರ ನೀರಾಕರಂ ॥ ೨೪

ಚಂ॥ ಚಳದನಿಳಾಹತ ಕ್ಷುಭಿತ ಭಂಗುರ ತುಂಗ ತರಂಗ ಮಾಳಿಕಾ
ವಳನ ಸಮುಚ್ಚಳನ್ಮಣಿಗಣಾತ್ತ ಮರೀಚಿ ಲತಾ ಪ್ರತಾನ ಸಂ ।
ವಳಯಿತ ವಿದ್ರುಮ ದ್ರುಮ ವಿಳಾಸ ವಿಶೇಷಿತ ಬಾಡವಾನಳಾ
ವಿಳ ಜಳಮಂ ಮನಂ ಬಯಸಿ ನೋಡಿದನರ್ಣವಮಂ ಗುಣಾರ್ಣವಂ ॥ ೨೫

ವ॥ ಅಂತು ನೋಡುತ್ತುಂ ಬಂದು ಮುಂದೊಂದೆಡೆಯೊಳದಭ್ರಾಭ್ರವಿಭ್ರಮ ಭ್ರಾಜಿತೋತ್ತುಂಗಶೈಲಮಂ ಕಂಡು-

ನಂದಿಸುತ್ತದೆ. ೨೩. ಏಲಕ್ಕಿ ಬಳ್ಳಿಗಳಿಂದ ವ್ಯಾಪ್ತವಾಗಿ ಪ್ರಸಿದ್ಧವಾಗಿರುವ ಇಲ್ಲಿಯ ಕರ್ಪೂರ, ಕರಿ ಅಗಿಲು, ಗಂಧದ ಮರಗಳು ಬಹು ರಮಣೀಯವಾಗಿವೆ. ಇದನ್ನೇ ಅಲ್ಲವೇ ಮನ್ಮಥನು ತನ್ನ ಸಂಕೇತಸ್ಥಳವನ್ನಾಗಿ ಮಾಡಿಕೊಂಡು ಮೃದುವಾಗಿ ನೋಡಿ ಆರ್ಭಟಿಸಿ ಕಿನ್ನರಯುವತಿಯೆಂಬ ಜಿಂಕೆಯ ಸಮೂಹವನ್ನು ಯಾವಾಗಲೂ ತನ್ನ ಉತ್ತಮ ಬಾಣಗಳಿಂದ ಹೊಡೆದು ಅವರ ಇಷ್ಟಾರ್ಥವನ್ನು ಸಲ್ಲಿಸುತ್ತಾನೆ. ಆದುದರಿಂದ ಈ ಪರ್ವತಶ್ರೇಷ್ಠವು ರಮಣೀಯವಾಗಿದೆ. ೨೪. ನೀನು ಎದುರುಗಡೆ ನಿಂತರೆ ಇಂದ್ರನು ಸೈರಿಸುವುದಿಲ್ಲ. ಇಲ್ಲಿರಬೇಡ; ನಮ್ಮೊಳಗೆ ಪ್ರವೇಶ ಮಾಡಿ ನಿಲ್ಲತಕ್ಕದ್ದು ಎಂದು ಉತ್ಸಾಹದಿಂದ ಕಾಲನ್ನು ಹಿಡಿಯುವ ಹಾಗೆ ಸಮುದ್ರದ ಅಲೆಗಳು ಪಕ್ಕದಲ್ಲಿರುವ ಪರ್ವತಗಳ ಬುಡವನ್ನು ಆಶ್ರಯಿಸಿವೆ. ಇಲ್ಲಿಂದ ಹೋದ ತಪೋಪಳವು (?) ಗಮನವನ್ನು ಪ್ರತಿಭಟಿಸಲು ಮೇಲೆ ತೇಲುತ್ತಿರುವ ಅಸಂಖ್ಯಾತವಾದ ಶಂಖಗಳಿಂದ ಬೆಳ್ಳಗಿರುವ ಗಂಭೀರವಾದ ಸಮುದ್ರವು ಕಣ್ಣಿಗೆ ಒಪ್ಪಿ ತೋರಿತು. ೨೫. ಚಲಿಸುತ್ತಿರುವ ಗಾಳಿಯ ಹೊಡೆತದಿಂದ ಕದಡಿದುದೂ ಅಸ್ಥಿರವೂ ಎತ್ತರವೂ ಆದ ಅಲೆಗಳ ಹೊರಳಿಕೆಯಿಂದ ಚಂಚಲವಾದುದು. ಮೇಲಕ್ಕೆ ಚಿಮ್ಮಿದ ರತ್ನಕಾಂತಿಗಳಿಂದ ಕೂಡಿದುದೂ ಹವಳದ ಬಳ್ಳಿಗಳ ಸೊಗಸಿನಿಂದ ವಿಶಿಷ್ಟವಾಗಿ ಮಾಡಲ್ಪಟ್ಟುದೂ ಬಡಬಾಗ್ನಿಯ ಬೆಂಕಿಯಿಂದ ಕದಡಲ್ಪಟ್ಟ ನೀರುಳ್ಳದೂ ಆದ ಸಮುದ್ರವನ್ನು ಗುಣಾರ್ಣವನಾದ ಅರ್ಜುನನು ತೃಪ್ತಿಯಿಂದ ನೋಡಿದನು. ವ॥ ಹಾಗೆ ನೋಡುತ್ತ ಬಂದು ಮುಂಭಾಗದಲ್ಲಿ ಅತಿಶಯವಾದ ಮೋಡಗಳ ವಿಲಾಸದಿಂದ ಪ್ರಕಾಶಿತವಾದ

ಮ|| ವಿನತಾಪುತ್ರನ ವಜ್ರತುಂಡಹತಿಗಂ ಮೆಯ್ಯಾಂತು ಕಂಡಂಗಳು
ಳ್ಳಿನಮಂಗಂಗಳನೊಡ್ಡಿಯೊಡ್ಡಿ ತನುವಂ ಕೊಟ್ಟಂತು ಜೀಮೂತವಾ ।
ಹನನೆಂಬಂಕದ ಚಾಗಿ ನಿಚ್ಚಟಿಕೆಯಿಂದೀ ಶೈಳದೊಳ್ ಶಂಖಚೂ
ಡನನಾದಂದದೆ ಕಾದ ಪೆಂಪೆಸೆಯೆ ನಾಗಾನಂದಮಂ ಮಾಡಿದಂ ॥ ೨೬

ವ|| ಎಂದಭಿನವ ಜೀಮೂತವಾಹನಂ ಜೀಮೂತವಾಹನನ ಪರೋಪಕಾರದ ಬೀರದ ಪೆಂಪಂ ಮೆಚ್ಚುತ್ತುಂ ಬಂದು ಗೋಕರ್ಣನಾಥನಂ ಗೌರೀನಾಥನನವನಿ ಪವನ ಗಗನ ದಹನ ತರಣಿ ಸಲಿಲ ತುಹಿನಕರ ಯಜಮಾನ ಮೂರ್ತಿಯಂ ತ್ರಿಲೋಕೈಕ ಸಂಗೀತ ಕೀರ್ತಿಯಂ ಕಂಡು ಕೆಯ್ಗಳಂ ಮುಗಿದು–

ಪೃಥ್ವಿ|| ಪ್ರಚಂಡ ಲಯ ತಾಂಡವ ಕ್ಷುಭಿತಯಾಶು ಯಸ್ಯಾನಯಾ
ಸದಿಗ್ವಳಯಯಾ ಭುವಾ ಸ ಗಿರಿ ಸಾಗರ ದ್ವೀಪಯಾ ।
ಕುಲಾಲ ಕರ ನಿರ್ಭರ ಭ್ರಮಿತ ಚಕ್ರಲೀಲಾಯಿತಂ
ಸ ಸರ್ವ ಜಗತಾಂ ಗುರುರ್ಗಿರಿಸುತಾಪತಿಃ ಪಾತು ನಃ ॥ ೨೭

ವ|| ಎಂದು ಬಾಳೇಂದುಮೌಳಿಯಂ ಸ್ತುತಿಸಿ–

ಚಂ|| ಸೊಗಯಿಸಿ ಬಂದ ಮಾಮರನೆ ತಳ್ತೆಲೆವಳ್ಳಿಯೆ ಪೂತ ಜಾತಿ ಸಂ
ಪಗೆಯೆ ಕುಕಿಲ್ವ ಕೋಗಿಲೆಯೆ ಪಾಡುವ ತುಂಬಿಯೆ ನಲ್ಲರೊಳ್ನೋಗಂ ।
ನಗೆಮೊಗದೊಳ್ ಪಳಂಚಲೆಯೆ ಕೂಡುವ ನಲ್ಲರೆ ನೋಟ್ಪೊಡಾವ ಬೆ
ಟ್ಟುಗಳೊಳಮಾವ ನಂದನವನಂಗಳೊಳಂ ಬನವಾಸಿ ದೇಶದೊಳ್ ॥ ೨೮

ಎತ್ತರವಾದ ಪರ್ವತವನ್ನು ನೋಡಿದನು. ೨೬. ವಿನತೆಯ ಮಗನಾದ ಗರುಡನ ವಜ್ರದಷ್ಟು ಕಠಿಣವಾದ ಪೆಟ್ಟಿಗೂ ಶರೀರವನ್ನೊಡ್ಡಿ ಮಾಂಸಖಂಡಗಳಿರುವವರೆಗೂ ಅವಯವಗಳನ್ನು ಚಾಚಿ ಶರೀರ ದಾನಮಾಡಿ ಪ್ರಸಿದ್ಧನಾದ ಜೀಮೂತವಾಹನನೆಂಬ ಪ್ರಖ್ಯಾತನಾದ ತ್ಯಾಗಿಯು ಮನಸ್ಸಿನ ನಿಶ್ಚಲತ್ವದಿಂದ ಶಂಖಚೂಡನೆಂಬುವವನನ್ನು ರಕ್ಷಿಸಿದ ಹಿರಿಮೆಯನ್ನು ಪ್ರಕಾಶಿಸಿ ನಾಗರಿಗೆ ಆನಂದವನ್ನುಂಟುಮಾಡಿದುದು ಈ ಬೆಟ್ಟದಲ್ಲಿಯೇ ವ|| ಎಂದು ಅಭಿನವ ಜೀಮೂತವಾಹನನಾದ (ಅರ್ಜುನನು) ಅರಿಕೇಸರಿಯು ಜೀಮೂತವಾಹನನ ಪರೋಪಕಾರದ, ವೀರ್ಯದ ಆಧಿಕ್ಯವನ್ನು ಮೆಚ್ಚುತ್ತ ಬಂದು ಗೌರೀನಾಥನೂ ಭೂಮಿ, ವಾಯು, ಆಕಾಶ, ಅಗ್ನಿ, ಸೂರ್ಯ, ಅಪ್, ಚಂದ್ರ, ಯಜಮಾನ ಎಂಬು ಅಷ್ಟಮೂರ್ತಿಯುತನೂ ಮೂರು ಲೋಕ ಗಳಿಂದ ಸ್ತೋತ್ರಮಾಡಲ್ಪಡುವ ಕೀರ್ತಿಯುಳ್ಳವನೂ ಆದ ಗೋಕರ್ಣನಾಥನನ್ನು ಕಂಡು ಕೈ ಮುಗಿದನು. ೨೭. ಯಾರ ಅತಿವೇಗವಾದ ತಾಳಗತಿಯನ್ನುಳ್ಳ ತಾಂಡವ ನೃತ್ಯದಿಂದ ದಿಙ್ಮಂಡಲಗಳಿಂದಲೂ ಪರ್ವತಗಳಿಂದಲೂ ಸಮುದ್ರಗಳಿಂದಲೂ ದ್ವೀಪಗಳಿಂದಲೂ ಕೂಡಿದ ಭೂಮಿಯು ತಿರುಗಿಸಲ್ಪಟ್ಟು ಕುಂಬಾರನ ಕೈ ಚಕ್ರದಂತೆ ವೇಗವಾಗಿ ಸುತ್ತುವ ಲೀಲೆಗೆ ಒಳಗಾಯಿತೋ ಆ ಸರ್ವಜಗತ್ಪತಿಯೂ ಪಾರ್ವತಿ ರಮಣನೂ ಆದ ಶಿವನು ನಮ್ಮನ್ನು ಕಾಪಾಡಲಿ ಎಂದು ವ|| (ಬಾಲಚಂದ್ರನನ್ನು ತಲೆಯಲ್ಲಿ ಉಳ್ಳ) ಈಶ್ವರನನ್ನು ಪ್ರಾರ್ಥಿಸಿ ಮುಂದೆ ಬನವಾಸಿಯ ಸೊಬಗನ್ನು ಸವಿಯಲಾರಂಭಿಸಿ ದನು. ೨೮. ಆ ಬನವಾಸಿ ದೇಶದ ಯಾವ ಬೆಟ್ಟಗಳಲ್ಲಿಯೂ

ಉ|| ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗ
ಳ್ಗಾಗರವಾದ ಮಾನಸರೆ ಮಾನಸರಂತವರಾಗಿ ಪುಟ್ಟಲೇ ।
ನಾಗಿಯುಮೇನೊ ತೀರ್ದಪುದೆ ತೀರದೊಡಂ ಮಱಿದುಂಬಿಯಾಗಿ ಮೇಣ್
ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ ವನವಾಸಿ ದೇಶದೊಳ್ ॥ ೨೯

ತೆಂಕಣ ಗಾಳಿ ಸೋಂಕಿದೊಡಮೊಳ್ನುಡಿಗೇಳ್ದೊಡಮಿಂಪನಾಳ್ದ ಗೇ
ಯಂ ಕಿವಿವೊಕ್ಕೊಡಂ ಬಿರಿದ ಮಲ್ಲಿಗೆಗಂಡೊಡಮಾದ ಕೆಂದಲಂ ।
ಪಂಗೆಡೆಗೊಂಡೊಡಂ ಮಧುಮಹೋತ್ಸವಮಾದೊಡಮೇನನೆಂಬೆನಾ
ರಂಕುಸವಿಟ್ಟೊಡಂ ನೆನೆವುದೆನ್ನ ಮನಂ ವನವಾಸಿ ದೇಶಮಂ ॥ ೩೦

ಮ|| ಅಮರ್ದಂ ಮುಕ್ಕುಳಿಪಂತುಟಪ್ಪ ಸುಸಿಲೊಂದಿಂಪುಂ ತಗುಳ್ದೊಂದು ಗೇ
ಯಮುಮಾದಕ್ಕರಗೊಟ್ಟಿಯುಂ ಚದುರರೊಳ್ವಾತುಂ ಕುಳಿರ್ ಕೋಲ್ಪ ಜೊಂ ।
ಪಮುಮೇವೇಟ್ಟುದನುಳ್ಳ ಮೆಯ್ಸುಕಮುಮಿಂತೆನ್ನಂ ಕರಂ ನೋಡಿ ನಾ
ಡೆ ಮನಂಗೊಂಡಿರೆ ತೆಂಕನಾಡ ಮಱೆಯಲ್ಕಿನ್ನೇಂ ಮನಂ ಬರ್ಕುಮೇ ॥ ೩೧

ವ|| ಎಂದರಿಕೇಸರಿ ತೆಂಕನಾಡಂ ನಾಡಾಡಿಯಲ್ಲದೆ ಮೆಚ್ಚುತ್ತುಮಾ ನಾಡನೊಂದೆ ಬಲ್ಲೊಳುಂಡಿಗೆ ಸಾಧ್ಯಂ ಮಾಡಿ ಪಶ್ಚಿಮ ದಿಗ್ವಿಭಾಗಾಭಿಮುಖನಾಗಿ ಬಂದು–

ಉದ್ಯಾನವನಗಳಲ್ಲಿಯೂ ನೋಡುವುದಾದರೆ ಸೊಗಸಾಗಿ ಫಲ ಬಿಟ್ಟಿರುವ ಮಾವಿನ ಮರಗಳೇ; ದಟ್ಟವಾಗಿ ಸೇರಿಕೊಂಡಿರುವ ವಿಳ್ಳೆಯದೆಲೆಯ ಬಳ್ಳಿಗಳೇ, ಹೂವನ್ನು ಬಿಟ್ಟಿರುವ ಜಾಜಿ ಮತ್ತು ಸಂಪಗೆ ಗಿಡಗಳೇ; ಸುಸ್ವರವಾಗಿ ಧ್ವನಿಮಾಡುವ ಕೋಗಿಲೆ, ಝೇಂಕರಿಸುವ ದುಂಬಿಗಳೇ, ಪ್ರೇಯಸಿಯರ ಒಳ್ಳೆಯ ಮುಖಗಳೇ, ನಗುಮುಖದಲ್ಲಿ ಪ್ರತಿಭಟಿಸಿ ಕೂಡುವ ನಲ್ಲರೇ. ೨೯. ಆ ಬನವಾಸಿ ದೇಶದಲ್ಲಿ ತ್ಯಾಗ, ಭೋಗ, ವಿದ್ಯೆ, ಸಂಗೀತ-ಗೋಷ್ಠಿಗಳ ಸಂತೋಷ ಸೌಖ್ಯಕ್ಕೆ ಅಧೀನರಾಗಿರುವ ಮನುಷ್ಯರೇ ಮನುಷ್ಯರು. ಅಂತಹ ಅದೃಷ್ಟಶಾಲಿಗಳಾದ ಮನುಷ್ಯರಾಗಿ ಹುಟ್ಟಲು ಏನಾದರೂ ತಾನೇ ಸಾಧ್ಯವೆ? ಹಾಗೆ ಸಾಧ್ಯವಾಗದಿದ್ದರೂ ಆ ಬನವಾಸಿ ದೇಶದ ನಂದನವನಗಳಲ್ಲಿ ಮರಿದುಂಬಿಯಾಗಿಯೋ ಅಥವಾ ಕೋಗಿಲೆಯಾಗಿಯೋ ಹುಟ್ಟಬೇಕು. ೩೦. (ಅತಿ ಸುಖಹೇತುಗಳಾದ) ದಕ್ಷಿಣ ದಿಕ್ಕಿನ ತಂಪಾದ ಗಾಳಿಯ ಸ್ಪರ್ಶವಾದರೂ ಒಳ್ಳೆಯ ಮಾತನ್ನು ಕೇಳಿದರೂ ಇಂಪಾದ ಗಾನವು ಕಿವಿಯನ್ನು ಪ್ರವೇಶಿಸಿದರೂ ಅರಳಿದ ಮಲ್ಲಿಗೆಯ ಹೂವನ್ನು ಕಂಡರೂ ನಿದ್ರಾಮುದ್ರಿತವಾದ ರತಿಸೌಖ್ಯಕ್ಕೆ ಪಾತ್ರವಾದರೂ ವಸಂತೋತ್ಸವ ಪ್ರಾಪ್ತವಾದರೂ ಏನು ಹೇಳಲಿ ಯಾರು (ಬೇಡವೆಂದು ತಡೆದು) ಅಂಕುಶದಿಂದ ತಿವಿದರೂ ನನ್ನ ಮನಸ್ಸು ಬನವಾಸಿ ದೇಶವನ್ನು ನೆನೆಯುತ್ತದೆ. ೩೧. ಅಮೃತವನ್ನೂ ಮೀರಿಸುವಷ್ಟು ಹಿತಕರವಾದ ರತಿಕ್ರೀಡೆಯ ಮಾಧುರ್ಯವೂ ಬೆನ್ನಹಿಂದೆಯೇ ಅಟ್ಟಿ ಬರುತ್ತಿರುವ ಸಂಗೀತವೂ ನೆರೆದಿರುವ ವಿದ್ವಾಂಸರ ಗೋಷ್ಠಿಯೂ ಜಾಣರ ಒಳ್ಳೆಯ ಮಾತುಗಳೂ ತಂಪನ್ನುಂಟುಮಾಡುವ ಹೂಗೊಂಚಲುಗಳೂ ಯಾವ ಸುಖವನ್ನುಂಟುಮಾಡುವುವೋ ಆ ಸುಖಗಳು ನನ್ನ ಮನಸ್ಸನ್ನಾಕ್ರಮಿಸಿದ್ದರೂ ದಕ್ಷಿಣ ದೇಶವನ್ನು ಮರೆಯಲು ನನ್ನ ಮನಸ್ಸು ಒಪ್ಪುವುದಿಲ್ಲ. ವ|| ಎಂದು ಅರಿಕೇಸರಿಯು ದಕ್ಷಿಣ ದೇಶವನ್ನು ವಿಶೇಷವಾಗಿ ಮೆಚ್ಚುತ್ತ ಆ ನಾಡನ್ನು ಶ್ರಮ

ಉಚರಪ್ರುತ ॥ ಸಾರ ವಸ್ತುಗಳಿಂ ನೆಱೆದಂಭೋರಾಶಿಯೆ ಕಾದಿಗೆ ಕಾವನುಂ
ಸೀರಪಾಣಿ ವಿಳಾಸದಿನಾಳ್ದಂ ಚಕ್ರಧರಂ ಬಗೆವಂಗೆ ಸಂ ।
ಸಾರಸಾರಮಿದೆಂಬುದನೆಂದೆಯ್ತಂದನಸಂಚಳ ಕಾಂಚನ
ದ್ವಾರ ಬಂಧುರ ಬಂಧ ಗೃಹೋದ್ಯದ್ವಾರವತೀಪುರಮಂ ನರಂ ॥ ೩೨

ವ॥ ಅನ್ನೆಗಂ ತನ್ನ ಮಯ್ದುನನಪ್ಪಮೋಘಾಸ್ತ್ರ ಧನಂಜಯನ ಬರವಿನ ಸಂತಸದೊಸಗೆ ಪಡೆಮಾತಂ ಮುಂದುವರಿದಱಿಪುವಂತೆ-

ಮ॥ ಪಲವುಂ ಜನ್ಮದೊಳಾದ ನಿನ್ನ ಕೆಳೆಯುಂ ಬಂದಪ್ಪನಾತಂಗೆ ಬೆಂ
ಬಲಮಿನ್ನೀಂ ನಿನಗಾತನಾತನನಿಳಾವಿಖ್ಯಾತನಂ ಕೂರ್ತು ನೋ ।
ಡಲುಮಪ್ಪೈರ್ತಮರ್ದಪ್ಪಲುಂ ಪಡೆವೆಯೆಂದೆಂಬಂತೆ ಕೆತ್ತಿತ್ತು ದಲ್
ಬಲಗಣ್ಣುಂ ಬಲದೋಳುಮಾ ಬಲಿ ಬಲಪ್ರಧ್ವಂಸಿಗಂದಿಟ್ಟಳಂ ॥ ೩೩

ವ॥ ಅಂತು ದಕ್ಷಿಣಾಕ್ಷಿ ಸ್ಪಂದನದೊಳಂ ಸೂಚಿಸುವ ಶುಭಸೂಚನೆಯೊಳಂ ನಾರಾಯಣನುದಾತ್ತನಾರಾಯಣನ ಬರವನಱಿದು ಬಲದೇವ ಸಾತ್ಯಕಿ ಕೃತವರ್ಮಾದಿಗಳಪ್ಪ ತನ್ನೊಡವುಟ್ಟಿದರುಂ ವೃಷ್ಣಿಕಾಂಭೋಜಕುಳತಿಳಕರಪ್ಪ ಯಾದವರುಂಬೆರಸು ಮದಕರಿ ಕರೇಣು ತುರಗಾದಿ ನಾನಾವಿಧವಾಹನಂಗಳನೇಱಿ ಮಯ್ದುನಂಗಿದಿರ್ವಂದು ತಮ್ಮಲಂಪಿನಬ್ಬಱಿನ ರೂಪನೆ

ವಿಲ್ಲದೆಯೇ ಜಯಿಸಿ ವಶಪಡಿಸಿಕೊಂಡು ಪಶ್ಚಿಮ ದಿಕ್ಕಿಗೆ ಎದುರಾಗಿ ಬಂದನು. ೩೨. ಸಾರವತ್ತಾದ ಪದಾರ್ಥಗಳಿಂದ ತುಂಬಿದ ಸಮುದ್ರವೇ ಅಗುಳು (ಕಂದಕ) ಅದರ ರಕ್ಷಕ ಬಲರಾಮ, ವೈಭವದಿಂದ ಅದನ್ನು ಆಳುವವನು ಶ್ರೀಕೃಷ್ಣ, ವಿಚಾರ ಮಾಡುವವನಿಗೆ ಇದೇ ಸಂಸಾರಸಾರ ಎಂದೆನಿಸಿಕೊಳ್ಳುವ ಸ್ಥಿರವೂ ಚಿನ್ನದ ಬಾಗಿಲುಗಳಿಂದ ಕೂಡಿದ ಎತ್ತರವಾದ ಉಪ್ಪರಿಗೆಗಳನ್ನುಳ್ಳದೂ ಆದ ದ್ವಾರಾವತೀ ಪಟ್ಟಣವನ್ನು ಅರ್ಜುನನು ಬಂದು ಸೇರಿದನು. ವ॥ ಅಷ್ಟರಲ್ಲಿ ತನ್ನ ಮಯ್ದುನನಾದ ಅಮೋಘಾಸ್ತ್ರಧನಂಜಯನ ಬರುವಿಕೆಯ ಸಂತೋಷ ಸಮಾಚಾರವನ್ನು ತನಗೆ ಮೊದಲೇ ತಿಳಿಸುವಂತೆ ೩೩. ನಿನ್ನ ಹಿಂದಿನ ಅನೇಕ ಜನ್ಮಗಳ ಸ್ನೇಹಿತನು ಬರುತ್ತಾನೆ. ಆತನಿಗೆ ನೀನು ಬಲ, (ಸಹಾಯಕ) ನಿನಗೆ ಆತನು ಸಹಾಯಕ; ಲೋಕಪ್ರಸಿದ್ಧನಾದ ಆತನನ್ನೂ ಕಣ್ತುಂಬ ನೋಡಿ ಪ್ರೀತಿಯಿಂದ ಗಾಢಾಲಿಂಗನ ಮಾಡುವ ಸುಯೋಗವನ್ನು ಪಡೆಯುವೆ (ಎಂಬುದನ್ನು ಸೂಚಿಸುವ) ಎನ್ನುವ ಹಾಗೆ (ಬಲಿ ಚಕ್ರವರ್ತಿಯ ಬಲವನ್ನು ನಾಶಪಡಿಸಿದ) ಕೃಷ್ಣನಿಗೆ ಬಲಗಣ್ಣೂ ಬಲದೋಳೂ ಏಕಪ್ರಕಾರವಾಗಿ ಅದುರಿದುವು. ವ॥ ಹಾಗೆ ಬಲಗಣ್ಣಿನ ಅದುರುವಿಕೆ (ಕುಣಿತ, ಸ್ಪಂದನ) ಯಿಂದಲೂ ಸೂಚಿತವಾದ ಶುಭಶಕುನಗಳಿಂದಲೂ ನಾರಾಯಣನಾದ ಕೃಷ್ಣನು ಉದಾತ್ತ ನಾರಾಯಣನಾದ ಅರ್ಜುನನ ಬರುವಿಕೆಯನ್ನು ತಿಳಿದು ಬಲರಾಮ, ಸಾತ್ಯಕಿ, ಕೃತವರ್ಮ ಮೊದಲಾದ ಒಡಹುಟ್ಟಿದವರನ್ನು ವೃಷ್ಣಿ ಮತ್ತು ಕಾಂಭೋಜಕುಲಶ್ರೇಷ್ಠರಾದ ಯಾದವರನ್ನೂ ಕೂಡಿಕೊಂಡು ಮದ್ದಾನೆ, ಹೆಣ್ಣಾನೆ, ಕುದುರೆ ಮೊದಲಾದ ಅನೇಕ ವಾಹನಗಳನ್ನು ಹತ್ತಿ ಮಯ್ದುನನಿಗೆ ಇದಿರಾಗಿ ಬಂದು ತಮ್ಮ ಸಂತೋಷಕ್ಕೂ ಪ್ರೀತಿಗೂ ಕಾರಣವಾದ

ಕಾಣ್ಬಂತೆ ಕಂಡು ದಿಕ್ಕರಿಕರಾನುಕಾರಿಗಳಪ್ಪ ಬಾಹುಗಳಿಂದಮೋರೊರ್ವರಂ ತೆಗೆದಪ್ಪಿ ನಿಬಿಡಾಲಿಂಗ ನಸಂಗೆಯ್ದಾನಂದಜಳಪರಿಪೂರ್ಣವಿಸ್ತೀರ್ಣವಿಲೋಚನಂಗಳಿಂದಂ ಮುಹುರ್ಮುಹು ರಾಲೋಕನಂ ಗೆಯ್ಯುತ್ತುಮುತ್ತುಂಗ ಮತ್ತವಾರಣಂಗಳನೇಱಿ ಪೊೞಲಂ ಪುಗೆ-

ಚಂ॥ ಸುರ ನರ ಕಿನ್ನರೋರಗ ನಭಶ್ಚರ ಕಾಂತೆಯರೇವರೆಂದು ಮಾಂ
ಕರಿಸುವ ಕೆಯ್ತದಂದದ ಮುರಾರಿಯ ತಂಗೆಯನಪ್ಪುಕೆಯ್ದು ಚ ।
ಚ್ಚರಮೊಳಪೊಯ್ದು ನೀಂ ನಿನಗೆ ಮಾಡುವುದೆಂದಮರೇಂದ್ರಪುತ್ರನಂ
ಕರೆವವೊಲಾದುವಾ ಪುರದ ವಾತ ವಿಧೂತವಿನೂತ ಕೇತುಗಳ್ ॥ ೩೪

ವ॥ ಆಗಳ್ ಮೊೞಗುವ ಬದ್ದವಣದ ಪಱೆಗಳುಂ ಪಿಡಿದ ಕೆಂಬೊನ್ನ ತಳಿಗೆಯೊಳ್ ತೆಕ್ಕನೆ ತೀವಿದ ಬಿಡುಮುತ್ತಿನ ಸೇಸೆಯುಂ ಬೆರಸು-

ಚಂ॥ ಒದವಿದ ನೂಲ ತೊಂಗಲುಲಿ ದೇಸೆಯನಾಂತು ವಿಳಾಸದಿಂದಿೞುಂ
ಕಿದ ನಿಱಿ ಗಂಡರಳ್ಕೆರ್ದೆಗಳಂ ತುೞಿವೋಜೆಯನುಂಟುಮಾಡುವಂ ।
ದದೆ ನಿಡುಗಣ್ಗಳೊಳ್ಪಡೆ ಮನೋಭವನೊಡ್ಡಣದಂತೆ ತಂಡ ತಂ
ಡದೆ ಪರಿತಂದು ಸೂಸಿದುದು ಸೇಸೆಯನಂದು ಪುರಾಂಗನಾಜನಂ ॥ ೩೫

ಮಿಳಿರ್ವ ಕುರುಳ್ಗಳೊಳ್ ಪೊಳೆವ ಕಣ್ಗಳ ಬೆಳ್ಪು ಪಳಂಚಿ ಚನ್ನ ಪೂ
ಗಣೆಗೆಣೆಯಾಗೆ ಪುರ್ವುಮೆಮೆಗಳ್ ಬಿಡದಳ್ಕಿಱಿದಿಕ್ಷುಚಾಪದೊಳ್ ।
ಖಳ ಕುಸುಮಾಸ್ತ್ರನಿಟ್ಟ ಗೊಣೆಯಕ್ಕೆಣೆಯಾಗಿರೆ ನಿಳ್ಕಿ ನಿಳ್ಕಿ ಕೋ
ಮಳೆ ನಡೆ ನೋಡಿದಳ್ ಕರಿಯನೇಱಿದನಂ ಪಡೆಮೆಚ್ಚೆಗಂಡನಂ ॥ ೩೬

ಆಕಾರವನ್ನೇ ಕಾಣುವ ಹಾಗೆ ಕಂಡು ದಿಗ್ಗಜಗಳ ಸೊಂಡಲಿನಂತಿದ್ದ ತೋಳುಗಳಿಂದ ಒಬ್ಬೊಬ್ಬರನ್ನೂ ಬಿಗಿದು ಆಲಿಂಗನ ಮಾಡಿಕೊಂಡರು. ಆನಂದ ಜಲ (ಸಂತೋಷದ ಕಣ್ಣೀರು) ದಿಂದ ತುಂಬಿದ ವಿಸ್ತಾರವಾದ ಕಣ್ಣುಗಳಿಂದ ಪುನಃ ಪುನಃ ನೋಡುತ್ತ ಎತ್ತರವಾದ ಮದ್ದಾನೆಯನ್ನು ಹತ್ತಿ ಪುರಪ್ರವೇಶ ಮಾಡಿದರು. ೩೪. ದೇವ, ಮಾನವ, ಕಿನ್ನರ, ಉರಗ, ಖೇಚರ ಸ್ತ್ರೀಯರು (ಇವಳ ಮುಂದೆ) ಅವರು ಯಾರು ಎಂತಹವರು ಎಂದು ತಿರಸ್ಕರಿಸುವ ರೂಪವುಳ್ಳ ಸೌಂದರ್ಯವತಿಯೂ ಆದ ಶ್ರೀಕೃಷ್ಣನ ತಂಗಿಯಾದ ಆ ಸುಭದ್ರೆಯನ್ನು ಅಂಗೀಕಾರಮಾಡಿ ಜಾಗ್ರತೆಯಾಗಿ ಒಲಿಸಿಕೊಂಡು ನಿನ್ನವಳನ್ನಾಗಿ ಮಾಡಿಕೊ ಎಂದು ಇಂದ್ರಪುತ್ರನಾದ ಅರ್ಜುನನನ್ನು ಕರೆಯುವ ಹಾಗೆ ಆ ನಗರದ ಗಾಳಿಯಿಂದ ಅಲುಗಾಡುತ್ತಿರುವ ಪ್ರಸಿದ್ಧವಾದ ಧ್ವಜಗಳು ತೋರಿದುವು. ವ॥ ಆಗ ಮಂಗಳವಾದ್ಯಗಳು ಭೋರ್ಗರೆಯುತ್ತಿರಲು ಅಪರಂಜಿಯ ಆ ನಗರದ ಸ್ತ್ರೀಯರು ಚಿನ್ನದ ತಟ್ಟೆಯಲ್ಲಿ ಬಿಡಿಮುತ್ತಿನ ಅಕ್ಷತೆಯನ್ನು ತುಂಬಿಕೊಂಡು ೩೫. ಧರಿಸಿದ ನಡುಪಟ್ಟೆಯ ಕುಚ್ಚಿನ ಶಬ್ದಗಳೂ ಸೌಂದರ್ಯದಿಂದ ಕೂಡಿ ವೈಭವದಿಂದ ತೊಡೆಗಳ ಮಧ್ಯೆ ಸೇರಿಸಿಕೊಂಡಿರುವ ಸೀರೆಗಳ ನೆರಿಗೆಗಳೂ ಶೂರರಾದ ಪುರುಷರ ಹೃದಯವನ್ನು ತುಳಿದು ಯಮನಂತಿರಲು ಆಕರ್ಷಕವಾಗಿರುವ ದೀರ್ಘದೃಷ್ಟಿಯಿಂದ ಕೂಡಿ ಮನ್ಮಥನ ಸೈನ್ಯದ ಹಾಗೆ ಗುಂಪುಗುಂಪಾಗಿ ಓಡಿ ಬಂದು ಅರ್ಜುನನಿಗೆ ಅಕ್ಷತೆಯನ್ನು ಚೆಲ್ಲಿದರು (ಆಶೀರ್ವದಿಸಿದರು). ೩೬. ಚಲಿಸುತ್ತಿರುವ ಮುಂಗುರುಳುಗಳಲ್ಲಿ ಹೊಳೆಯುವ

ವ॥ ಮತ್ತೊರ್ವಳತಿ ಸಂಭ್ರಮ ತ್ವರಿತದಿಂ ಮೇಖಳಾಕಳಿತ ರುಚಿರ ಲುಳಿತಾಧರ ಪಲ್ಲವೆ ನೋಳ್ಪ ದಂಡುಗಳೊಳಂಡುಗೊಂಡು ಸೊರ್ಕಿದಾನೆ ಬರ್ಪಂತೆ ಬಂದು-

ಉ॥ ಕಾಯದೆ ಕಾಮನಾರ್ದಿಸೆ ತೊವಲ್ವಿಡಿವಂತೆಡಗಯ್ಯೊಳೊಪ್ಪೆ ತೋ
ರ್ಪಾಯೆಲೆ ನೋಟ ಬೇಟದ ಕೊನರ್ ತಲೆದೋರ್ಪವೊಲಾಗೆ ಬಾಯೊಳಿ
ರ್ದಾಯೆಲೆ ಕಣ್ಗೆವಂದೆಸೆಯೆ ಕಯ್ಯೆಲೆ ಕಯ್ಯೊಳೆ ಬಾಯ ತಂಬುಲಂ
ಬಾಯೊಳೆ ತೋಱೆ ಮೆಯ್ಮಱೆದು ನೋಡಿದಳ್ ಸಮರೈಕಮೇರುವಂ ॥ ೩೭

ವ॥ ಮತ್ತೊರ್ವಳ್ ಕರ್ವಿನ ಬಿಲ್ಲ ತಿರುವಿಂ ಬರ್ದುಂಕಿ ಬರ್ಪಲರಂಬು ಬರ್ಪಂತೆ ಬಂದು -

ಮ॥ ಸ್ಮರನಂ ರೂಪಿನೊಳಿಂದ್ರನಂ ವಿಭವದೊಳ್ ಪೋ ಮೆಚ್ಚೆನಾನಾವ ಗಂ
ಡರುಮಂ ಕಚ್ಚೆಯೊಳಿಟ್ಟು ಕಟ್ಟುವೆನೆನುತ್ತಿರ್ಪಾಕೆ ಗಂಧೇಭ ಕಂ ।
ಧರ ಬಂಧ ಪ್ರವಿಭಾಸಿಯಪ್ಪರಿಗನಂ ಕಾಣುತ್ತೆ ಕಣ್ಸೋಲ್ತು ಕಾ
ಮರಸಂ ಭೋಂಕನೆ ಸೂಸೆ ತಾಳ್ದಲರಿದೆಂದಿರ್ಕಚ್ಚೆಯುಂ ಕಟ್ಟಿದಳ್ ೩೮

ವ॥ ಅಂತು ನೋಡಿದ ಪೆಂಡಿರೆಲ್ಲಂ ಕಾಮದೇವನೆಂಬ ಬೇಂಟೆಕಾಱಂಗೊಡ್ಡಿದ ಪುಲ್ಲೆಗಳಂತರಲಂಬಿನ ಮೊನೆಗೆ ಪೂಣೆ ಪೊಕ್ಕು ಪಕ್ಕಾಗಿರೆ ಪೊೞಲೊಳಗಣಿಂ ಬಂದು ದಿವಿಜೇಂದ್ರ ವಿಳಾಸೋಪಹಾಸಿತಮಪ್ಪ ನಿಜಮಂದಿರಮಂ ಪುಗೆ-

ಕಣ್ಣುಗಳ ಬಿಳಿಯ ಬಣ್ಣವು ಸೇರಿಕೊಂಡು ಚಿನ್ನದ ಪುಷ್ಪಬಾಣಕ್ಕೆ ಸಮಾನವಾಗಿರಲು ಹುಬ್ಬುಗಳೂ ಕಣ್ಣಿನ ರೆಪ್ಪೆಗಳೂ ಒಂದೇ ಸಮನಾಗಿ ಕುಣಿಯುತ್ತ ದುಷ್ಟನಾದ ಮನ್ಮಥನು ಕಬ್ಬಿನ ಬಿಲ್ಲಿನಲ್ಲಿ ಹೂಡಿದ ಬಿಲ್ಲಿನ ಹೆದೆಗೆ ಸಮಾನವಾಗಿರಲು ನೀಡಿನೀಡಿ ನಿಂತು ಆನೆಯ ಮೇಲಿದ್ದ ಅರ್ಜುನನನ್ನು ಸುಂದರಿಯೊಬ್ಬಳು ದೀರ್ಘವಾಗಿ ನೋಡಿದಳು. ವ॥ ನಡುಪಟ್ಟಿಯಿಂದ ಕೂಡಿದ ಮನೋಹರವಾಗಿ ಬಾಗಿರುವ ಚಿಗುರಿನಂತಿರುವ ತುಟಿಯುಳ್ಳ ಮತ್ತೊಬ್ಬಳು ಓಡಿಬಂದು ನೋಡಬೇಕೆಂಬ ಸಂಭ್ರಮದಿಂದ ಆನೆಯು ಬರುವ ಹಾಗೆ ಬರುತ್ತಿದ್ದ ಅರ್ಜುನನ ಹತ್ತಿರಕ್ಕೆ ಬಂದು ೩೭. ಕಾಮನು ಕರುಣೆಯಿಲ್ಲದೆ ಬಾಣಪ್ರಯೋಗ ಮಾಡಲು ಹೆದರಿ ಚಿಗುರನ್ನು ಹಿಡಿಯುವ ಹಾಗೆ ಎಡಗಯ್ಯಲ್ಲಿ ವೀಳೆಯದೆಲೆಯು ಒಪ್ಪಿರಲು ಪ್ರೇಮದ ಚಿಗುರು ಕಾಣಿಸಿಕೊಂಡ ಹಾಗೆ ಬಾಯಲ್ಲಿದ್ದ ತಾಂಬೂಲವು ಮನೋಹರವಾಗಿರಲು, ಕಯ್ಯಿನೆಲೆಯು ಕಯ್ಯಲ್ಲಿಯೂ ಬಾಯಿದಂಬುಲವು ಬಾಯಲ್ಲಿಯೂ ಇರುವ ಹಾಗೆಯೇ ತನ್ನನ್ನು ತಾನು ಮರೆತುಕೊಂಡು ಸಮರೈಕಮೇರುವಾದ ಅರ್ಜುನನನ್ನು ನೋಡಿದಳು. ವ॥ ಮತ್ತೊಬ್ಬಳು ಕಬ್ಬಿನ ಬಿಲ್ಲಿನ ಹೆದೆಯಿಂದ ಬದುಕಿ ಬರುವ ಹೂಬಾಣವು ಬರುವ ಹಾಗೆ ಬಂದು ೩೮. ರೂಪದಲ್ಲಿ ಮನ್ಮಥನನ್ನೂ ವೈಭವದಲ್ಲಿ ಇಂದ್ರನನ್ನೂ ನಾನು ಮೆಚ್ಚುವುದಿಲ್ಲ, ಬಿಡು ಎಂತಹ ಶೂರನನ್ನಾದರೂ ನನ್ನ ಕಚ್ಚೆಯಲ್ಲಿಟ್ಟು ಕಟ್ಟಿಬಿಡುತ್ತೇನೆ ಎನ್ನುತ್ತಿದ್ದವಳೂ ಮದ್ದಾನೆಯ ಕುಂಭಸ್ಥಳದಲ್ಲಿ ಪ್ರಕಾಶಮಾನವಾಗಿದ್ದ ಅರಿಗನನ್ನು ನೋಡಿದ ತಕ್ಷಣವೆ ಅವನಿಗೆ ಅಧೀನಳಾಗಿ ಕಾಮರಸವು ಇದ್ದಕ್ಕಿದ್ದ ಹಾಗೆ ಸೂಸುತ್ತಿರಲು ಸಹಿಸುವುದಕ್ಕಸಾಧ್ಯವೆಂದು ಎರಡು ಕಚ್ಚೆಯನ್ನು ಬಿಗಿಯಾಗಿ ಕಟ್ಟಿದಳು. ವ॥ ಹಾಗೆ ನೋಡಿದ ಹೆಂಗಸರೆಲ್ಲರೂ ಕಾಮದೇವನೆಂಬ ಬೇಟೆಗಾರನಿಗೆ ಒಡ್ಡಿದ ಹುಲ್ಲೆಗಳ

ಮ॥ ಲತೆಗಳ್ ಜಂಗಮರೂಪದಿಂ ನೆರೆದುವೋ ದಿವ್ಯಾಪ್ಸರೋವೃಂದಮಾ
ಕ್ಷಿತಿಗೇನಿಂದ್ರನ ಶಾಪದಿಂದಿಟಿದುವೋ ಪೇಟೆಂಬ ಶಂಕಾಂತರಂ ।
ಮತಿಗಂ ಪುಟ್ಟುವಿನಂ ಕರಂ ಪರಕೆಗಳ್ ತಳ್ವೊಯ್ಯೆ ಸೇಸಿಕ್ಕಿತಿಂ
ದ್ರತನೂಜಂಗಿದಿರ್ವಂದು ಷೋಡಶ ಸಹಸ್ರಾಂತಃಪುರಂ ಕೃಷ್ಣನಾ ॥ ೩೯

ವ॥ ಆಗಳ್ ನಾರಾಯಣನ ತಂಗೆ ಸುಭದ್ರೆಯೆಂಬ ಕನ್ನೆ ಕೆಮ್ಮುಗಿಲ ತೆರೆಯ ಪೊರೆಯೊಳ್ ನೆಗೆದು ಪೊಱಮಡುವ ವಿದ್ಯಾಧರಿಯಂತೆ ತನ್ನ ಚೆಂಬೊನ್ನ ಕನ್ನೆಮಾಡದ ಮೇಗಣ ನೆಲೆಯ ಚೌಪಳಿಗೆಯ ಬಾಗಿಲೊಳ್ ನಿಂದು-

ಚಂ॥ ಬಳಸಿದ ಗುಜ್ಜುಗಳ್ ನೆರೆದ ಮೇಳದ ಕನ್ನೆಯರೆತ್ತಮಿಕ್ಕೆ ಸಂ
ಚಳಿಸುವ ಚಾಮರಂ ಕನಕ ಪದ್ಮದ ಸೀಗುರಿ ತೊಟ್ಟ ಮಾಣಿಕಂ ।
ಗಳ ಬೆಳಗಿಟ್ಟಳಂ ತನಗೊಡಂಬಡೆ ದೇಸೆ ವಿಳಾಸಮಂ ಪುದುಂ
ಗೊಳಿಸೆ ಮರಲ್ದು ಕನ್ನೆ ನಡೆ ನೋಡಿ ಗುಣಾರ್ಣವನೆಂಬನೀತನೇ ॥ ೪೦

ವ॥ ಎಂದು ತನ್ನ ಮೇಳದಾಕೆಗಳಂ ಬೆಸಗೊಂಡೊಡಾಕೆಗಳಾಕೆಯ ಪತ್ತಿದ ಕಣ್ಣುಮನಟ್ಟಿದ ಮನಮುಮಂ ಜೋಲ್ದ ನಾಣುಮಂ ನೇಲ್ದ ಸರಮುಮನಱಿದು ಸಹಜಮನೋಜನ ಕುಲದ ಚಲದ ಚಾಗದ ಬೀರದ ಭಾಗ್ಯದ ಸೌಭಾಗ್ಯದಗುಂತಿಗಳನಂತುಮಳವಲ್ಲದೆ ಪೊಗಟೆ-

ಹಾಗೆ ಪುಷ್ಪಬಾಣದ ತುದಿಗೆ ಪ್ರತಿಜ್ಞೆ ಮಾಡಿ ಪ್ರವೇಶಿಸಿ ಅದಕ್ಕಧೀನವಾಗಿರಲು ಅರ್ಜುನನು ನಗರದ ಒಳಭಾಗದಿಂದ ಬಂದು ದೇವೇಂದ್ರನ ವೈಭವವನ್ನೂ ತಿರಸ್ಕರಿಸುವಂತಿದ್ದ ತನಗಾಗಿ ಏರ್ಪಡಿಸಿದ್ದ ಅರಮನೆಯನ್ನು ಪ್ರವೇಶಿಸಿದನು. ೩೯. ಲತೆಗಳೇ ಜಂಗಮರೂಪದಿಂದ ಸೇರಿಕೊಂಡಿವೆಯೋ ಸ್ವರ್ಗದ ಅಪ್ಸರಸ್ತ್ರೀಯರು ಇಂದ್ರನ ಶಾಪದಿಂದ ಭೂಮಿಗೆ ಇಳಿದಿದ್ದಾರೆಯೋ ಎಂಬ ಸಂದೇಹವನ್ನುಂಟು ಮಾಡುತ್ತಿದ್ದ ಕೃಷ್ಣನ ಅಂತಃಪುರದ ಹದಿನಾರು ಸಾವಿರ ಸ್ತ್ರೀಯರು ಎದುರಾಗಿ ಬಂದು ಅರ್ಜುನನಿಗೆ ವಿಶೇಷವಾದ ಆಶೀರ್ವಾದಪೂರ್ವಕವಾಗಿ ಅಕ್ಷತಾರೋಪಣೆ ಮಾಡಿದರು. ವ॥ ಆಗ ನಾರಾಯಣನ ತಂಗಿಯಾದ ಸುಭದ್ರೆಯೆಂಬ ಕನ್ಯೆಯು ಕೆಂಪಾದ ಮೋಡವೆಂಬ ತೆರೆಯ ಮಧ್ಯಭಾಗದಿಂದ ಹೊರಟು ಬರುವ ವಿದ್ಯಾಧರ ಸ್ತ್ರೀಯ ಹಾಗೆ ತನ್ನ ಸುವರ್ಣಖಚಿತವಾದ ಕನ್ಯಾಮಾಡದ ಮೇಲಂತಸ್ತಿನ ತೊಟ್ಟಿಯ ಬಾಗಿಲಲ್ಲಿ ನಿಂತುಕೊಂಡು- ೪೦. ತನ್ನ ಸುತ್ತಲೂ ಬಳಸಿಕೊಂಡಿರುವ ಕನ್ಯಾಂತಃಪುರದ ಸೇವಕರಾದ ಕುಳ್ಳರೂ ಅಲ್ಲಿ ಸೇರಿಕೊಂಡಿದ್ದ ಜನರೂ ಎಲ್ಲ ಕಡೆಯಿಂದಲೂ ಬೀಸಲು ಚಲಿಸುತ್ತಿರುವ ಚಾಮರವೂ ಚಿನ್ನದ ತಾವರೆಯ ಕೊಡೆಯೂ ಧರಿಸಿದ್ದ ಮಾಣಿಕ್ಯ ರತ್ನದ ಕಾಂತಿಯೂ ಚೆಲುವಾಗಿ ತನಗೆ ಒಪ್ಪಿರಲು ಸೌಂದರ್ಯ ಸೌಭಾಗ್ಯಗಳೂ ಹೊಂದಿಕೊಂಡಿರಲು ಕನ್ಯೆಯಾದ ಸುಭದ್ರೆಯು ದೀರ್ಘದೃಷ್ಟಿಯಿಂದ ನೋಡಿ ಗುಣಾರ್ಣವನೆಂಬುವನೀತನೇ ಎಂದು ತನ್ನ ಸಖಿಯರನ್ನು ಕೇಳಿದಳು. ವ॥ ಅವರು ಅವಳ ನಟ್ಟದೃಷ್ಟಿಯನ್ನೂ ಪ್ರೀತಿಯಿಂದ ಕೂಡಿದ ಮನಸ್ಸನ್ನೂ ಸಡಿಲವಾದ ಲಜ್ಜೆಯನ್ನೂ ಮೆಲ್ಲಗಾದ ಧ್ವನಿಯನ್ನೂ ತಿಳಿದು ಸಹಜಮನ್ಮಥನಾದ ಅರ್ಜುನನ ಕುಲದ, ಛಲದ, ತ್ಯಾಗದ, ವೀರದ, ಭಾಗ್ಯದ, ಸೌಭಾಗ್ಯದ ಅತಿಶಯಗಳನ್ನು ಅಳತೆಯಿಲ್ಲದೆ

ಚಂ॥ ಒದವಿದ ತನ್ನ ಜವ್ವನದ ರೂಪಿನ ಮೆಯ್ಯೊಳೆ ತಪ್ಪುದಪ್ಪು ನೋ
ಟದೊಳೆ ಪೊಡರ್ಪು ತಪ್ಪು ಬಗೆ ತಪ್ಪು ಮನೋಜನ ಪೂವಿನಂಬು ತೀ ।
ವಿದ ದೊಣೆ ತೀವಿ ತನ್ನನಿಸೆ ಜಾಣನೆ ತಪ್ಪದೆ ತಪ್ಪುದಪ್ಪ ನೋ
ಡಿದುವದಱಿಂ ಗುಣಾರ್ಣವನನಾ ಸತಿ ತಪ್ಪದೆ ತಪ್ಪು ನೋಟದೊಳ್ ॥ ೪೧

ವ॥ ಅಂತು ತಳತಳ ತೊಳಗುವ ದುಕೂಲದ ಸಕಳವಟ್ಟೆಯೊಳ್ ನಿಮಿರ್ಚಿದಂತಾನು ಮರಲ್ದ ತಾವರೆಯೆಸಟ್ಗಳೊಳ್ ಪುದಿದು ಪುದುಂಗೊಳಿಸಿದಂತಾನುಮನಂಗಾಮೃತವರ್ಷಮನೊದವಿಸಿದಂತಾನುಮೆರ್ದೆಯೊಳಿಡವಱಿಯದ ಪೊಳಪಿನೊಳ್ ತಳ್ಪೊಯ್ದು ಕಡೆಗಣ್ಣ ಬೆಳ್ಪುಗಳ್ ಸೊಗಯಿಸುವ ಕುವಳಯದಳನಯನೆಯ ನೋಟಂ ತನ್ನ ಮನದೊಳಳ್ಳಾಟಮಂ ಪಡೆಯೆ-

ಮ॥ ಸನೆಯಂಬಂಬನೆ ಕರ್ಚಿ ಪಾಱಿದಪುದೋ ಶೃಂಗಾರ ವಾರಾಶಿ ಭೋಂ
ಕನೆ ಬೆಳ್ಳಂಗೆಡೆದತ್ತೊ ಕಾಮಂ ನೆಱೆ ಮೆಯ್ವೆರ್ಚಿತ್ತೊ ಪೇಟೇಕೆಗಂ ।
ಬಿನೆಗಂ ಸೋಲಮನುಂಟುಮಾಡೆ ಹರಿಗಂ ಕರ್ಣಾಂತ ವಿಶ್ರಾಂತ ಲೋ
ಚನನಾಲೋಚನಗೋಚರಂಬರೆಗಮೊಲ್ದಾ ಕನ್ನೆಯಂ ನೋಡಿದಂ ॥ ೪೨

ವ॥ ಅಂತು ಸುರತಮಕರಧ್ವಜನ ಕಡೆಗಣ್ಣ ನೋಟಂ ಕಾಮನ ಕಿಸುಗಣ್ಣಿದ ನೋಟದಂತೊ ರ್ಮೊದಲೆ ತನ್ನ ಮನದೊಳಳ್ಳಾಟಮಂ ಪಡೆಯೆ-

ಹೊಗಳಿದರು. ೪೧. ಆಗ ಅವಳಿಗೆ ಯವ್ವನಪ್ರಾಪ್ತವಾದ ಶರೀರದ ಸೌಂದರ್ಯವು ಅಸ್ತವ್ಯಸ್ತವಾಯಿತು. ನೋಟದಲ್ಲಿನ ಉತ್ಸಾಹವೂ ಅಸ್ತವ್ಯಸ್ತವಾಯಿತು. ಮನಸ್ಸೂ ಅಸ್ತವ್ಯಸ್ತವಾಯಿತು. ಮನ್ಮಥನು ಪುಷ್ಪಬಾಣದಿಂದ ತುಂಬಿದ ಬತ್ತಳಿಕೆಯಿಂದ ತನ್ನನ್ನು ಹೊಡೆಯುತ್ತಿರಲು ತನ್ನ ಜಾಣ್ಮೆಯೇ ವ್ಯತ್ಯಸ್ತವಾಗಿ ಆ ಸತಿಯು ಗುಣಾರ್ಣವನನ್ನು ತಪ್ಪು ನೋಟಗಳಿಂದ ನೋಡಿದಳು (?) ವ॥ ಹಾಗೆ ತಳತಳನೆ ಪ್ರಕಾಶಿಸುವ ರೇಷ್ಮೆಯ ವಿವಿಧ ಬಣ್ಣಗಳ ಬಟ್ಟೆಯನ್ನು ಹರಡಿದಂತೆಯೂ ಅರಳಿದ ತಾವರೆಯ ದಳದಲ್ಲಿ ಸೇರಿಕೊಂಡು ಹದಗೊಳಿಸಿದಂತೆಯೂ ಕಾಣುವ ಮಳೆಯನ್ನು ಉಂಟುಮಾಡಿದಂತೆಯೂ ಹೃದಯದ ಅವಿಚ್ಛಿನ್ನವಾದ ಕಾಂತಿಯಲ್ಲಿ ಪ್ರತಿಭಟಿಸಿ ಕಡೆಗಣ್ಣಿನ ಬಿಳಿಯ ಬಣ್ಣಗಳು ಸೊಗಯಿಸುತ್ತಿರುವ ಕನ್ನೈದಿಲೆಯ ಎಸಳಿನಂತೆ ಕಣ್ಣುಳ್ಳ ಆ ಸುಭದ್ರೆಯ ನೋಟವು ಅರ್ಜುನನ ಮನಸ್ಸಿನಲ್ಲಿ ತಳಮಳವನ್ನುಂಟುಮಾಡಿತು. ೪೨. ಈ ಸುಭದ್ರೆಗಾಗಿ ಪುಷ್ಪಬಾಣವೇ ಪುಷ್ಪಬಾಣ ಕಚ್ಚಿಕೊಂಡು ಹಾರಿಬರುತ್ತಿದೆಯೋ ಶೃಂಗಾರ ಸಮುದ್ರವು ಇದ್ದಕ್ಕಿದ್ದ ಹಾಗೆ ತಟ್ಟನೆ ಅಧಿಕ ಪ್ರವಾಹದಿಂದ ಹರಿದಿದೆಯೋ ಕಾಮನ ರಸಪ್ರವಾಹವು ಅಧಿಕವಾಯಿತೊ ಹೇಳು ಎನ್ನುವ ಹಾಗೆ ತನಗೆ ಸೋಲನ್ನುಂಟು ಮಾಡಲು ಕರ್ಣಾಂತವಿಶ್ರಾಂತನಾದ ಅರ್ಜುನನು ಕಣ್ಣಿಗೆ ನಿಲುಕಿಸುವವರೆಗೂ ಆ ಕನ್ಯೆಯನ್ನು ಪ್ರೀತಿಯಿಂದ ನೋಡಿದನು. ವ॥ ಸುರತಮಕರಧ್ವಜನಾದ ಅರ್ಜುನನ ಕಡೆಗಣ್ಣಿನ ನೋಟವು ಕಾಮನ ಕೆಂಪೇರಿದ ನೋಟದಂತೆ ತಕ್ಷಣವೇ ತನ್ನ ಮನಸ್ಸಿನಲ್ಲಿ

ಉ॥ ಸೋಲದೊಳೆಯ್ದೆ ಪೀರ್ದ ತೆಱದಿಂದೆಮೆಯಿಕ್ಕದೆ ನೋಟ್ಪ ಕಣ್ಗೆ ಕಣ್
ಪೀಲಿವೊಲಾಗೆ ಬಂದು ಪೆಱತೊಂದು ಮನಂಬುಗೆ ಪತ್ತಿ ಚಿತ್ತದೊಳ್ ।
ಕೀಲಿಸೆ ಕಾವನಂಬವಱ ಬಣ್ಪಿನೊಳೊಯ್ಯನೆ ಜೋಲ್ವವೋಲೆ ತಾಂ
ಬೂಲಕರಂಕವಾಹಿನಿಯ ಮೇಲೆ ನೆಱಲ್ದಿರೆ ಬಾಲೆ ಲೀಲೆಯಿಂ ॥ ೪೩

ವ॥ ಆಗಳಾ ನಾರಾಯಣನುಮುದಾತ್ತನಾರಾಯಣನುಮಾನೆಯಿಂದಮಿೞಿದು ನವ ಕಿಸಲಯ ವಂದನಮಾಳಾಳಂಕೃತಮಪ್ಪ ಸಪ್ತ ತಾಳೋತ್ತುಂಗ ರಮ್ಯ ಹರ್ಮ್ಯದೆರಡನೆಯ ಮೊಗಸಾಲೆಯೊಳಿಟ್ಟ ಪೊನ್ನ ಪಡಿಗಂಗಳೊಳಮಿಕ್ಕಿದ ಪಟೆಯ ಸುಖಾಸನಂಗಳೊಳಂ ಕಟ್ಟಿದ ಚಿನ್ನದ ಬೊಂದರಿಗೆಯೊಳಮೆಸೆದಿರ್ದ ಮಣಿಮಯಪೀಠದೊಳೊಡನೇಱಿ ಕಿಱಿದು ಪೊೞ್ತು ಕುಳ್ಳಿರ್ದು ಮಜ್ಜನ ಭೋಜನ ತಾಂಬೂಲಾನುಲೇಪನ ವಿಭೂಷಣ ಸುರಭಿ ಕುಸುಮ ದಾಮಾದಿಗಳಿಂ ಸಂತಸಂಬಡಿಸಿ ದಾಮೋದರನುದರದೊಳಿಟ್ಟುಕೊಳ್ವನಿತಱ್ಕಱಿಂ ಕೊಳಪಗತ ಪಥ ಪರಿಶ್ರಮನಂ ಮಾಡಿ-

ಕಂ॥ ಈತನ ಬರ್ದಿನನೀತಂ
ಭೂತಳಪತಿಯೆನಿಸಿದರಿಗನೊಡೆಯಂ ಹರಿ ತಾ ।
ನೀತನೆ ಬರ್ದಿನನೆನೆ ವಿ
ಖ್ಯಾತಂಗೆ ನರಂಗೆ ಸೆಱಪುಗೆಯ್ದನನಂತಂ ॥ ೪೪

ವ॥ ಅಂತೆನಿತಾನುಮಂದದೊಳ್ ಸೆಱಪುಗೆಯ್ದು ವಿವಿಧ ವಿನೋದಂಗಳಂ ತೋಱಿ ಮುನ್ನೆ ಬದರಿಕಾಶ್ರಮದೊಳ್-

ನಡುಕವನ್ನುಂಟುಮಾಡಲು ೪೩. ಪ್ರೇಮದಿಂದ ಚೆನ್ನಾಗಿ ಹೀರುವ ರೀತಿಯಲ್ಲಿ ರೆಪ್ಪೆ ಹೊಡೆಯದೇ ನೋಡುವ ಕಣ್ಣಿಗೆ ಬೇರೊಂದು ಕಣ್ಣು (ಅಂದರೆ ಅರ್ಜುನನ ಕಣ್ಣು) ನವಿಲುಗರಿಯ ಕಣ್ಣಿನ ಹಾಗಾಗಿ ಮನಸ್ಸನ್ನು ಪ್ರವೇಶಿಸಲು ಕಾಮಬಾಣವು ಮನಸ್ಸಿನಲ್ಲಿ ನಾಟಿರಲು ಆ ಬಾಣಗಳ ಭಾರದಿಂದ ಮೆಲ್ಲಗೆ ಜೋತುಬಿದ್ದ ಹಾಗೆ ಸುಭದ್ರೆಯು ವಿಲಾಸದಿಂದ ತನ್ನ ತಾಂಬೂಲಕರಂಕವಾಹಿನಿಯು ಮೇಲೆ ಒರಗಿಕೊಂಡು ನಿಂತಳು. ವ॥ ಆಗ ಕೃಷ್ಣನೂ ಅರ್ಜುನನೂ ಆನೆಯಿಂದ ಇಳಿದು ಹೊಸದಾದ ಚಿಗುರುಗಳ ತೋರಣಮಾಲೆಯಿಂದ ಅಲಂಕೃತವಾದ ಎತ್ತರವಾದ ಏಳುತಾಳೆಯ ಮರಗಳಷ್ಟು ಎತ್ತರವೂ ರಮಣೀಯವೂ ಆದ ಉಪ್ಪರಿಗೆಯ ಮುಖಮಂಟಪವನ್ನೇರಿ ಅಲ್ಲಿ ಇಟ್ಟಿದ್ದ ಚಿನ್ನದ ಪೀಕದಾನಿಗಳಲ್ಲಿಯೂ ಬಟ್ಟೆಗಳಿಂದ ಮುಚ್ಚಿದ್ದ ಸುಖಾಸನಗಳಲ್ಲಿಯೂ ಸಿದ್ಧಪಡಿಸಿದ್ದ ಚಿನ್ನದ ದಿಂಬುಗಳಲ್ಲಿಯೂ ಚೆಲುವಾಗಿದ್ದ ರತ್ನಮಯಪೀಠಗಳಲ್ಲಿಯೂ ವಿಶ್ರಮಿಸಿ ಕೆಲವುಕಾಲ ಕುಳಿತಿದ್ದು ಸ್ನಾನ, ಭೋಜನ-ತಾಂಬೂಲ, ಗಂಧಾನುಲೇಪನ, ಆಭರಣ, ಸುಗಂಧಪುಷ್ಪಮಾಲೆಯೇ ಮೊದಲಾದವುಗಳಿಂದ ಸಂತೋಷಪಟ್ಟು ಕೃಷ್ಣನು ತನ್ನ ಹೊಟ್ಟೆಯಲ್ಲಿಯೇ ಅರ್ಜುನನನ್ನು ಮಡಗಿಕೊಳ್ಳುವಷ್ಟು ಪ್ರೀತಿಯಿಂದ ಆಯಾಸಪರಿಹಾರವನ್ನು ಮಾಡಿದನು. ೪೪. ಇವನು ಅತಿಥಿ; ಇವನೇ ಭೂಪತಿಯಾದ ಅರಿಕೇಸರಿ; ಒಡೆಯನಾದ ಕೃಷ್ಣಪರಮಾತ್ಮನೂ (ತಾನೂ) ಈತನೇ. ಇವನೇ ವಾಸ್ತವನಾದ ನೆಂಟ, ಎನ್ನುವ ಹಾಗೆ ಸುಪ್ರಸಿದ್ಧನಾದ ಅರ್ಜುನನಿಗೆ ಕೃಷ್ಣನು ಆತಿಥ್ಯವನ್ನು ಮಾಡಿದನು. ವ॥ ಹಾಗೆ ಅನೇಕರೀತಿಯಲ್ಲಿ ಸತ್ಕಾರಮಾಡಿ ನಾನಾರೀತಿಯ

ಕಂ॥ ಆಯತಿಯಿಂದಂ ನರ ನಾ
ರಾಯಣರೆನೆ ನೆಗೞ್ದವರಿಗ ನಾವಿರ್ವರುಮಿಂ ।
ತೀ ಯುಗದೊಳೀಗಳಾಂ ನಾ
ರಾಯಣನೆಂ ನೀನುದಾತ್ತನಾರಾಯಣನೈ ॥ ೪೫

ವ॥ ಅದಱಿಂ ನಿನಗಮೆನಗಮೇತಱೊಳಂ ವಿಕಲ್ಪಮುಂ ವಿಚ್ಛಿನ್ನಮುಮಿಲ್ಲೆಂದು ನುಡಿಯುತಿರ್ಪನ್ನೆಗಮಿತ್ತಲ್-

ಚಂ॥ ನವ ನಳಿನೀ ವನಂಗಳ ಪರಾಗರಜಂಗಳನುಂಡು ಮುನ್ನಮಂ
ತವನೆ ವಿಯತ್ತಳ ಭ್ರಮಣ ವಿಹ್ವಲನಾಗಿ ಬಟಲ್ದು ಕಾಱುವಂ ।
ತವೊಲಿರೆ ಕೆಂಪು ತತ್ಕಮಳ ಕಾನನ ಕಂಟಕ ಲಗ್ನಪಾದನಾ
ದವೊಲುಡುಗುತ್ತುಮಾತ್ಮ ಕರಮಂ ರವಿ ಪೊರ್ದಿದನಸ್ತಶೈಲಮಂ ॥ ೪೬

ವ॥ ಆ ಪ್ರಸ್ತಾವದೊಳ್-

ಉ॥ ಆ ಸರಸೀಜ ಬಾಂಧವನ ಪಿಂಬಡಿನೊಳ್ ಕಡುವಿನ್ನನಾದುವಿಂ
ತೀ ಸರಸೀರುಹಂಗಳವನೀ ಪದದೊಳ್ ಬಿಸುಟೆಂತು ಪೋಪೆವೆಂ ।
ಬೀ ಸಮುಕಟ್ಟಿನೊಳ್ ನೆಲಸಿದಂತೆಱಗಿರ್ದುವು ಪಟ್ಪದಂಗಳು
ತ್ಕೇಸರ ಕೋಟ ಸಂಕಟ ಕುಶೇಶಯಕೋಶ ಕುಟೀರಕಂಗಳೊಳ್ ॥ ೪೭

ಚಂಡಮರೀಚಿಗಸ್ತಮಯಮಿಲ್ಲದುದೊಂದೆಡೆ ನಿಮ್ಮ ಕೇಳ್ದುದುಂ
ಕಂಡುದುಮುಳ್ಳೊಡಿನ್ ಬೆಸಸಿಮಾಮಿರದಲ್ಲಿಗೆ ಪೋಪೆವೆಂದು ಮೆ ।
ಯ್ಗೊಂಡೊಲವಿಂದಗಲ್ಕೆಗಣಮಾಱದೆ ಪಕ್ಕಿಗಳೆಲ್ಲಮಂ ಮರು
ಳ್ಗೊಂಡವೊಲುಳ್ದು ಕೂಡೆ ಬೆಸಗೊಂಡು ಬಟಲ್ದುವು ಜಕ್ಕವಕ್ಕಿಗಳ್॥ ೪೮

ಆಟಪಾಟಗಳನ್ನು ತೋರಿ ಕೃಷ್ಣನು ಅರ್ಜುನನಿಗೆ ಹೀಗೆಂದನು - ಅರ್ಜುನ! ಹಿಂದೆ ಬದರೀಕಾಶ್ರಮದಲ್ಲಿ-೪೫ ಹಿಂದೆ ನಾವು ಪರಸ್ಪರಾವಲಂಬನದಿಂದ ಸುಪ್ರಸಿದ್ಧರಾದ ನರನಾರಾಯಣರಾಗಿದ್ದೆವು. ಈಗ ನಾವಿಬ್ಬರೂ ಈ ಯುಗದಲ್ಲಿಯೂ ಹಾಗೆಯೇ; ನಾನು ನಾರಾಯಣ (ಶ್ರೀಕೃಷ್ಣ), ನೀನು ಉದಾತ್ತನಾರಾಯಣನಾದ ಅರಿಕೇಸರಿ ವ॥ ಆದುದರಿಂದ ನಿನಗೂ ನನಗೂ ಯಾವ ವಿಧದಲ್ಲಿಯೂ ವ್ಯತ್ಯಾಸವೂ ವಿಚ್ಛಿತ್ತಿ (ವಿಚ್ಛಿನ್ನ)ಯೂ ಇಲ್ಲವೆಂದು ಹೇಳುತ್ತಿರುವಲ್ಲಿ ಸಾಯಂಕಾಲವಾಯಿತು. ೪೬. ಸೂರ್ಯನು ಮೊದಲು ಹೊಸದಾಗಿ ಅರಳಿದ ತಾವರೆಯ ತೋಟದ ಧೂಳನ್ನು (ಪರಾಗವನ್ನು) ತಿಂದು, ಆಕಾಶದಲ್ಲಿ ಸುತ್ತಿದ ಶ್ರಮದಿಂದ ಬಳಲಿ ಆ ತಿಂದ ಧೂಳನ್ನೇ ವಾಂತಿ ಮಾಡುತ್ತಿರುವ ಹಾಗೆ ಸಂಜೆಗೆಂಪು ತೋರುತ್ತಿರಲು ಆ ತಾವರೆಯ ಕಾಡಿನ ಮುಳ್ಳುಗಳಲ್ಲಿ ಕಾಲು ಸಿಕ್ಕಿಕೊಂಡ ಕಿರಣವುಳ್ಳವನಾಗಿ ತನ್ನ ಕಿರಣಗಳನ್ನು ಉಡುಗಿಸಿಕೊಂಡು ಅಸ್ತಾಚಲವನ್ನು ಸೇರಿದನು (ಮುಳುಗಿದನು). ವ॥ ಆ ಸಮಯದಲ್ಲಿ ೪೭. ಕಮಲಬಂಧುವಾದ ಸೂರ್ಯನ ಹಿಂದೆಯೇ ಈ ತಾವರೆಗಳೂ ಬಹಳ ಖಿನ್ನವಾಗಿವೆ (ಬಾಡಿವೆ). ಈ ಸಮಯದಲ್ಲಿ ಇವುಗಳನ್ನು ಬಿಸುಟು ನಾವು ಹೇಗೆ ಹೋಗುವೆವು ಎಂದು ದುರವಸ್ಥೆಯಲ್ಲಿ ನಿಂತಂತೆ ದುಂಬಿಗಳು ಅನೇಕ ಕೇಸರಗಳ ಇಕ್ಕಟ್ಟಿನ ಸಂಕಟಕ್ಕೊಳಗಾಗಿ ತಾವರೆಯ ಮೊಗ್ಗೆಂಬ ಗುಡಿಸಲಿನ ಒಳಗೆ ಸಿಕ್ಕಿಬಿದ್ದುವು. ೪೮. ಸೂರ್ಯನಿಗೆ ಅಸ್ತಮಯವೇ ಇಲ್ಲದ ಸ್ಥಳವೊಂದನ್ನು ನೀವು ಕೇಳಿದ್ದರೆ ಅಥವಾ

ವ|| ಅಂತು ಕಮಳವನಂಗಳಾದಿತ್ಯಂಗೆ ಕೆಯ್ಯಂ ಮುಗಿವಂತೆ ಮುಗಿಯೆ ಜಕ್ಕವಕ್ಕಿಗಳ್ ಸುರತಮಕರಧ್ವಜನ ಸುಭದ್ರೆಯ ವಿರಹಪರಿತಾಪಮಮಂ ಪಚ್ಚುಕೊಂಡಸುಂಗೊಂಡಗಲೆ ಸಂಧ್ಯಾರಾಗಮವರ ಮನದನುರಾಗಮನನುಕರಿಸುವಂತುಟಾಗೆ ಬಟೆಯಂ ಕ್ರಮಕ್ರಮದೊಳ್-

ಮ|| ಮಸಿಯಿಂದಂ ಜಗಮೆಲ್ಲಮಂ ದಿತಿಸುತಂ ಮುಂ ಪೂೞ್ದನೋ ಕಾಲಮೇ
ಘಸಮೂಹಂ ದೆಸೆಯೆಲ್ಲಮಂ ಕವಿದುದೋ ಗಂಧೇಭ ಚರ್ಮಂಗಳಂ ।
ಪಸರಂಗೆಯ್ದನೊ ಶಂಭುವೆಂಬ ಬಗೆಯಿಂ ತಳ್ಪೊಯ್ದು ಕಟ್ಪೇಱೆ ಸೂ
ಚಿಸಲಾರ್ಗಂ ವಶಮಾಗದಂತು ಕವಿದತ್ತುದ್ದಾಮ ಭೀಮಂ ತಮಂ ॥ ೪೯

ವ|| ಆಗಳಾ ತಾರಾಗಣಂಗಳ್ ದಿಶಾವನಿತೆಯರ ಮಕುಟಮಾಣಿಕಂಗಳಂತೆನಿಸು ಬೆಳಗಿಯುಂ ಕಟ್ಟಲೆಯನಲೆಯಲಾಱವಾದುವು ಕನಕ ಪ್ರಾಸಾದ ಪಂಕ್ತಿಗಳ್ ಪಳಪಳನೆ ಬೆಳಗುವ ಸೊಡರ್ಗಳನಾದಿತ್ಯನ ನಂಟರೆಂದು ತಮೋರಾಜಕಂ ಮುಳಿದು ಸೆಱೆಗೆಯ್ದ ಬೆಳಗಿನ ಸೆಱೆಯ ಮನೆಗಳನ್ನವಾದುವು ಮದಗಜ ಗಂಡಸ್ಥಳಂಗಳೊಳೆಱಗಿ ಮೊರೆವ ತುಂಬಿಯ ಬಂಬಲ್ಗಳೆ ವಿಮುಖೀಭೂತಂಗಳಾದುವು ತಂಡತಂಡದೋಲಗಕ್ಕೆ ಪುಗುವ ಪೊಱಮಡುವ ವಾರವಿಳಾಸಿನಿಯರ ನೂಪುರಂಗಳ ರವಂಗಳೊಳ್ ನೃಪಭವನೋಪವನ ದೀರ್ಘಿಕಾಹಂಸಕುಳಂಗಳ್ ತಳವೆಳಗಾದುವು

ಕಂಡಿದ್ದರೆ ಹೇಳಿ; ನಾವು ಸಾವಕಾಶಮಾಡದೆ ಅಲ್ಲಿಗೆ ಹೊರಟುಹೋಗುತ್ತೇವೆ ಎಂದು ಹುಚ್ಚರಂತೆ ಎಲ್ಲ ಪಕ್ಷಿಗಳಿಗೂ ಕೂಗಿ ಹೇಳಿ ತನ್ನಲ್ಲಿ ವ್ಯಾಪ್ತವಾಗಿದ್ದ ಪ್ರೀತಿಯಿಂದ ತಾವು ಬೆರೆಯಲಾರದೆ ಚಕ್ರವಾಕಪಕ್ಷಿಗಳು ವಿಶೇಷವಾಗಿ ಬಳಲಿದುವು. ವ|| ಹಾಗೆ ತಾವರೆಯ ತೋಟಗಳು ಸೂರ್ಯನಿಗೆ ಕೈಮುಗಿಯುವಂತೆ ಮೊಗ್ಗಾಗಲು (ಮುಚ್ಚಿಕೊಳ್ಳಲು), ಚಕ್ರವಾಕಪಕ್ಷಿಗಳು ಅರ್ಜುನ ಸುಭದ್ರೆಯರ ವಿರಹತಾಪದಲ್ಲಿ ತಾವೂ ಭಾಗಿಗಳಾಗಿ (ದುಃಖಪಟ್ಟು?) ತಕ್ಷಣ ಅಗಲಲು ಸಾಯಂಕಾಲದ ಕೆಂಪುಬಣ್ಣವು ಅವರ ಮನಸ್ಸಿನ ಅನುರಾಗವನ್ನು ಅನುಕರಿಸುವಂತೆ ಸಂಧ್ಯಾರಾಗವು ಕಾಣಿಸಿತು. ೪೯. ಸ್ವಲ್ಪಕಾಲದಲ್ಲಿಯೇ ರಾಕ್ಷಸನು ಸಮಸ್ತ ಜಗತ್ತನ್ನು ಕಾಡಿಗೆಯಿಂದ ಹೂಳಿಬಿಟ್ಟಿದ್ದಾನೆಯೋ ಪ್ರಳಯಕಾಲದ ಮೋಡದ ಸಮೂಹಗಳು ದಿಕ್ಕುಗಳನ್ನೆಲ್ಲ ಕವಿದುಕೊಂಡಿದೆಯೋ ಈಶ್ವರನು ಮದ್ದಾನೆಯ ಚರ್ಮವನ್ನು ಹರಡಿದ್ದಾನೆಯೋ ಎಂಬ ಚಿಂತೆಯನ್ನುಂಟುಮಾಡಿ ಕಪ್ಪುಬಣ್ಣವು ವೃದ್ಧಿಯಾಗಿ (ಇದು ಹೀಗೆ ಎಂದು ಸೂಚಿಸುವುದಕ್ಕೆ) ಯಾರಿಗೂ ಶಕ್ಯವಿಲ್ಲದ ರೀತಿಯಲ್ಲಿ ಬಹಳ ಭಯಂಕರವಾದ ಕತ್ತಲೆಯು ಕವಿದುಕೊಂಡಿತು. ವ|| ಆಗ ನಕ್ಷತ್ರಮಂಡಲವು ದಿಗ್ವನಿತೆಯರ ಕಿರೀಟಮಾಣಿಕ್ಯದಷ್ಟು ಪ್ರಕಾಶಮಾನವಾಗಿದ್ದರೂ ಕತ್ತಲೆಯನ್ನು ಹೋಗಲಾಡಿಸಲು ಶಕ್ತವಾಗಲಿಲ್ಲ. ಸುವರ್ಣ ನಿರ್ಮಿತವಾದ ಉಪ್ಪರಿಗೆಯ ಸಾಲುಗಳು ಪಳಪಳನೆ ಬೆಳಗುತ್ತಿದ್ದ ದೀಪಗಳು ಸೂರ್ಯನ ನಂಟರೆಂದು ಕತ್ತಲೆಯೆಂಬ ರಾಜನು ಕೋಪಗೊಂಡು (ಆ ದೀಪಗಳನ್ನು) ಬಂಧಿಸಿದ ಪ್ರಾತಃಕಾಲದ ಸೆರೆಮನೆಗಳಂತೆ ಆದವು. ಮದ್ದಾನೆಗಳ ಕಪೋಲ ಪ್ರದೇಶಗಳಲ್ಲಿ ಎರಗಿ ಝೇಂಕರಿಸುವ ದುಂಬಿಯ ಸಮೂಹಗಳು ಮುಖತಿರುಗಿಸಿದವು. ಗುಂಪುಗುಂಪಾಗಿ ಅರಮನೆಗೆ ಬಂದು ಹೋಗುವ ವೇಶ್ಯೆಯರ ಕಾಲಂದಿಗೆಯ ಶಬ್ದವನ್ನು ಕೇಳಿ ಅರಮನೆಯ ಕೈದೋಟಸರೋವರದಲ್ಲಿದ್ದ

ರಾಜಹಂಸಪಾರಾವತಮಿಥುನಂಗಳುತ್ತುಂಗಪ್ರಾಸಾದಶಿಖರ ಮಣಿಗವಾಕ್ಷಾಂತರಾಳ ವಿವಿಧ ಗೃಹಾಂತರಗತಂಗಳಾದುವು ಉದಯಗಿರಿ ಕಟಕ ಕುಹರ ಪರಿಕರ ನಿಶಾಕರಂ ಹರಿದಳಿತ ನಿಜ ಹರಿಣ ರುಧಿರ ನಿಚಯ ನಿಚಿತಮಾದಂತೆ ಲೋಹಿತಾಂಗನಾಗೆ-

ಮ॥ ನೆರೆದೈ ಸಂಜೆಯೊಳೆಂದು ಕಾಯ್ದೊದೆದೊಡೇನಾತ್ಮಾಂಗದೊಳ್ ರೋಹಿಣೀ
ಚರಣಾಲಕ್ತಕ ರಾಗಮಚ್ಚೞಿದುದೋ ಮೇಣ್ ಕಾಮಿಗಳ್ಗೀವ ರಾ ।
ಗರಸಂ ಪೊರ್ಣ್ಮಿದುದೋ ತಮೋಗಜದ ಕೋಡೇಱಿಂದಮೇಂ ನೊಂದುದೋ
ಹರಿಣಂ ತಾನೆನಿಸಿತ್ತು ರಕ್ತರುಚಿಯಿಂ ಬಿಂಬಂ ಸುಧಾಸೂತಿಯಾ ॥ ೫೦

ವ॥ ಆಗಳ್ ತನ್ನ ರಾಗಮಂ ರಾಗಿಗಳ್ಗೆಲ್ಲಂ ಪಚ್ಚುಕೊಟ್ಟಂತೆ ಕೆಂಪು ಪತ್ತುವಿಟ್ಟಾಗಳ್-

ಮ॥ ಮುನಿದೀಶಂ ತವೆ ಸುಟ್ಟು ಮುಂ ಕರುಣದಿಂದಿತ್ತಂ ಪುನರ್ಜನ್ಮಮಂ
ನಿನಗೆಂದಾ ರತಿ ಪಾಪಮುಂ ಪಡಣಮುಂ ಪೋಪಂತೆ ಕಾಮಂಗೆ ಮಂ ।
ಜ್ಜನಕೆಂದೆತ್ತಿದ ಚಂದ್ರಕಾಂತ ಘಟದೊಳ್ ತಂದಟ್ಟೆಯಿಂ ಪುಷ್ಪ ವಾ
ಸನೆಗೆಂದಿಕ್ಕಿದ ನೀಳ ನೀರರುಹಮಂ ಪೋಲ್ದತ್ತು ಕಟ್ಟಿಂದುವಾ ॥ ೫೧

ಹಂಸಸಮೂಹಗಳು ಅಸ್ತವ್ಯಸ್ತವಾದುವು. ರಾಜಹಂಸ ಮತ್ತು ಪಾರಿವಾಳದ ಜೋಡಿಗಳು ಉಪ್ಪರಿಗೆಯ ತುದಿಯಲ್ಲಿರುವ ರತ್ನಖಚಿತವಾದ ಕಿಟಕಿಗಳ ಮಧ್ಯಭಾಗದ ಮನೆಗಳನ್ನು (ಗೂಡುಗಳನ್ನು) ಹೋಗಿ ಸೇರಿದುವು. ಉದಯ ಪರ್ವತದ ತಪ್ಪಲಿನ ಗುಹೆಗಳ ಸಹಾಯವನ್ನುಳ್ಳ (ಅಂದರೆ ಮೂಡದಿಕ್ಕಿನಲ್ಲಿ ಉದಯಿಸುತ್ತಿದ್ದ) ಚಂದ್ರನು ಸಿಂಹದಿಂದ ಸೀಳಲ್ಪಟ್ಟ ತನ್ನ ಜಿಂಕೆಯ ರಕ್ತರಾಶಿಯಿಂದ ತುಂಬಿದವನಂತೆ ಕೆಂಪು ವರ್ಣದವನಾದನು. ೫೦. ಸಂಜೆಯೆಂಬ (ಅನ್ಯ) ಸ್ತ್ರೀಯಲ್ಲಿ ಕೂಡಿದೆಯಾ ಎಂದು (ಹೆಂಡತಿಯಾದ ರೋಹಿಣಿ ದೇವಿಯು) ಕೋಪದಿಂದ ಒದೆಯಲು ಅವಳ ಕಾಲಿನ ಅರಗಿನ ಬಣ್ಣವು ಚಂದ್ರನ ಶರೀರದಲ್ಲಿ ಎರಕ ಹೊಯ್ದಿದೆಯೋ ಅಥವಾ ಕಾಮಿಗಳಿಗೆ (ಸಹಜವಾಗಿಯೇ) ಕೊಡುವ (ಹೆಚ್ಚುವ) ಕಾಮರಸವು ಅಭಿವೃದ್ಧಿಯಾಯಿತೋ ಅಥವಾ (ಚಂದ್ರನ) ಜಿಂಕೆಯು ಕತ್ತಲೆಯೆಂಬ ಆನೆಯ ಕೊಂಬಿನ ಗಾಯದಿಂದ ಗಾಯಗೊಂಡಿದೆಯೋ ಎನ್ನುವ ಹಾಗೆ ಚಂದ್ರಬಿಂಬದ ಕೆಂಪು ಕಾಂತಿಯು ಎಸ್ಸಿಸಿತು. ವ॥ ಸ್ವಲ್ಪಕಾಲದ ಮೇಲೆ ತನ್ನ ರಾಗ (ಕೆಂಪುಬಣ್ಣ)ವನ್ನು ರಾಗಿಗಳಿಗೆಲ್ಲ (ಪ್ರೀತಿಪಾತ್ರರಾದವರು -ಪ್ರಿಯ ಪ್ರೇಯಸಿಯರು - ವಿರಹಿಗಳು) ಭಾಗಮಾಡಿಕೊಟ್ಟ ಹಾಗೆ ಕೆಂಪುಬಣ್ಣವು ಕಳೆದುಹೋಗಲಾಗಿ ಚಂದ್ರಬಿಂಬವು ಬೆಳ್ಳಗಾಯಿತು. ೫೧. ಈಶ್ವರನೂ ಮನ್ಮಥನ ಮೇಲೆ ಮೊದಲು ಕೋಪಿಸಿಕೊಂಡು (ನೇತ್ರಾಗ್ನಿಯಿಂದ) ಸುಟ್ಟು ಭಸ್ಮಮಾಡಿ ಪುನಃ ಕರುಣೆಯಿಂದ ನಿನಗೆ ಜನ್ಮವಿತ್ತಿದ್ದಾನೆ ಎಂದು ರತಿದೇವಿಯು ಅವನ ಪಾಪವನ್ನು ಪತನವನ್ನು ಹೋಗಲಾಡಿಸುವುದಕ್ಕಾಗಿ ಕಾಮನ ಮಜ್ಜನಕ್ಕೆ ಎತ್ತಿದ ಚಂದ್ರಕಾಂತ ಶಿಲೆಯ ಕಲಶದಲ್ಲಿ ಅದನ್ನು ವಾಸನಾಯುಕ್ತವನ್ನಾಗಿ ಮಾಡುವುದಕ್ಕಾಗಿ ಪ್ರೀತಿಯಿಂದ ತಂದಿಟ್ಟ ಕನ್ನೈದಿಲೆಯ ಪುಷ್ಪವನ್ನು ಚಂದ್ರನ ಕಪ್ಪು (ಕಲೆ-ಕರೆ)

ಕಂ॥ ಆವರಿಸಿತ್ತೊ ನಭೋಂತ
ಭೂರ್ವಿವರಮನಮರ್ದಿನೆಸಕಮೆನೆ ವಿರಹಿಗಳೋ ।
ವೋವಿದು ಮದನನ ಸೋದನ
ದೀವಿಗೆಯೆನೆ ತೊಳಗಿ ಬೆಳಗಿದಂ ತುಹಿನಕರಂ ॥ ೫೨

ವ॥ ಅಂತು ಸೊಗಯಿಸುವಚ್ಚಬೆಳ್ದಿಂಗಳೊಳ್ ಸುಧಾಧವಳಿತೋತ್ತುಂಗ ರಮ್ಯಹರ್ಮ್ಯ ದೆರಡನೆಯ ನೆಲೆಯ ಚೌಪಳಿಗೆಯ ಮುಂದಣ ರಮ್ಯ ಹರ್ಮ್ಯಾಗ್ರದೊಳೆ ಸಿರಿಯೋಲಗಂಗೊಟ್ಟು ವಿನೋದಂಗಳೊಳ್ ವಿಕ್ರಮಾರ್ಜುನಂ ಬೆರಸು-

ಕಂ॥ ಆಗಳನಂತನನಂತಫ
ಣಾಗಣಮಣಿಕಿರಣಮೆಸೆಯೆ ದುಗ್ಧಾರ್ಣವದೊಳ್ ।
ರಾಗದಿನಿರ್ಪಂತಿರ್ದಂ
ಭೋಗಿ ತಲೆತ್ತಲಿಸಿ ಬೆಳಗೆ ಕೆಯ್ದೀವಿಗೆಗಳ್ ॥ ೫೩

ವ॥ ಆಗಳ್-

ಕಂ॥ ಅತ್ತ ಸುಭದ್ರೆಯುಮೊಡಲುರಿ
ಯುತ್ತಿರೆ ಮರವಟ್ಟು ವಿಜಯನಿರ್ದತ್ತಲೆ ನೋ ।
ಡುತ್ತಿರೆ ಸುಸಾಳಭಂಜಿಕೆ
ಗೆತ್ತುದು ಕೆಳದಿಯರ ತಂಡಮಾಕೆಯ ರೂಪಂ ॥ ೫೪

ಹೋಲುತ್ತಿತ್ತು. ೫೨. (ಬೆಳದಿಂಗಳು) ಭೂಮ್ಯಂತರಿಕ್ಷಗಳ ಮಧ್ಯಭಾಗವನ್ನು ಅಮೃತದ ಕಾಂತಿ ಆವರಿಸಿತೊ ಎನ್ನುವ ಹಾಗಿರಲು ವಿರಹಿಗಳು (ಪ್ರೇಮಿಗಳನ್ನು ಅಗಲಿರುವವರು) ಇದು ಮನ್ಮಥನು ನಮ್ಮನ್ನು ಹುಡುಕಲು ತಂದಿರುವ ಹುಡುಕುದೀಪ; ಕಾಪಾಡಿ ಕಾಪಾಡಿ ಎಂದು ಕೂಗಿಕೊಳ್ಳುವಂತೆ ಚಂದ್ರನು ತೊಳಗಿ ಪ್ರಕಾಶಿಸಿದನು. ೫೩. ಹಾಗೆ ಸೊಗಯಿಸುವ ಸ್ವಚ್ಛವಾದ ಬೆಳದಿಂಗಳಿನಲ್ಲಿ ಸುಣ್ಣದಿಂದ ಬಿಳುಪುಮಾಡಲ್ಪಟ್ಟ ಎತ್ತರವೂ ಮನೋಹರವೂ ಆದ ಉಪ್ಪರಿಗೆಯ ಎರಡನೆಯ ಅಂತಸ್ತಿನ ಆಕರ್ಷಕವಾದ ಚಚ್ಚೌಕದ ಮುಂದಿನ ಮಹಡಿಯ ಮುಂಭಾಗದಲ್ಲಿ ವಿಜೃಂಭಣೆಯಿಂದ ಕೃಷ್ಣನು ಓಲಗದಿಂದಿದ್ದು ಅರ್ಜುನನೊಡನೆ ಅನೇಕ ವಿನೋದಗಳಿಂದ ಕೂಡಿದನು. ಆದಿಶೇಷನ ಅನಂತವಾದ ಹೆಡೆಯ ರತ್ನಗಳ ಸಮೂಹವು ಪ್ರಕಾಶಿಸುತ್ತಿರಲು ನಾರಾಯಣನು ಕ್ಷೀರಸಮುದ್ರದಲ್ಲಿ ಸಂತೋಷದಿಂದಿರುವ ಹಾಗೆ (ಇಲ್ಲಿ) ಕೈದೀವಿಗೆಗಳ ಸಮೂಹವು ಪ್ರಕಾಶಿಸಿ ಬೆಳಗುತ್ತಿರಲು ಅರ್ಜುನನು ಸುಖದಿಂದ ಇದ್ದನು. ೫೪. ಆ ಕಡೆ ಸುಭದ್ರೆಯು ಕೂಡ ವಿರಹತಾಪದಿಂದ ಮೈಸುಡುತ್ತಿರಲು ನಿಶ್ಚೇಷ್ಟಳಾಗಿ ಅರ್ಜುನನು ಇದ್ದ ಕಡೆಯೇ ನೋಡುತ್ತಿರಲು ಅವಳ ಸಖಿಯರ ಸಮೂಹವು ಅವಳ ರೂಪವನ್ನು ಸುಂದರವಾದ ಸಾಲುಬೊಂಬೆಯೆಂದು ಭ್ರಮಿಸಿತು. ೫೫. ನಾಚಿಕೆಯು ಕನ್ಯಾಭಾವವನ್ನು ಪ್ರದರ್ಶಿಸಲು ಇಚ್ಛಿಸುತ್ತದೆ. ಮನಸ್ಸಾದರೋ ವಿಶೇಷವಾಗಿ(ಅರ್ಜುನನ ಕಡೆ) ಸೆಳೆದುಕೊಂಡು ಹೋಗಲು ಆಶಿಸುತ್ತದೆ. ತನ್ನ ಪ್ರೇಮವನ್ನು ವಿಶದಪಡಿಸುತ್ತದೆ ಎಂದು ಕನ್ಯೆಯಾದ

ಕನ್ನೆತನಂಗೆಯ್ಕಲ್ ಬಗೆ
ಗುನ್ನಾಣ್ ಮಿಗೆ ಮನಮುಮಿಬ್ಬುವರಿಯಲ್ ಬಗೆಗುಂ ।
ಕನ್ನಡಿಕುಂ ತನ್ನಳಿಪಂ
ತನ್ನಲೆ ತಾನಿಂತು ಕನ್ನೆ ತಳವೆಳಗಾದಳ್ ॥ ೫೫

ನುಡಿಯಿಸಿ ಕೇಳ್ಗುಂ ಹರಿಗನ
ಪಡೆಮಾತನೆ ಮಾತು ತಪ್ಪೊಡಂ ಮತ್ತಮದಂ ।
ನುಡಿಯಿಸುಗುಂ ಮೊದಲಿಂದಾ
ನುಡಿ ಪಱಿಪಡೆ ಮುಳಿದು ನೋಡುಗುಂ ಕೆಳದಿಯರಂ ॥ ೫೬

ಅಱಿ ಮರುಳಂತುಟೆ ಸೊರ್ಕಿನ
ತೆಱದಂತುಟೆ ಮನಮೊಱಲ್ಪುದೆರ್ದೆಯುರಿವುದು ಮೆ ।
ಯ್ಯೆಱಗುವುದು ಪದೆವುದಾನಿದ
ನಱಿಯೆನಿದೇಕೆಂದು ಕನ್ನೆ ತಳವೆಳಗಾದಳ್ ॥ ೫೭

ಉ॥ ಆನೆಯನೇಱಿ ಸೌಷ್ಠವದೆ ಬರ್ಪರಿಕೇಸರಿಯೊಂದು ಗಾಡಿಯು
ದ್ದಾನಿ ತಗುಳ್ದು ಕಣ್ಗೊಳಿ ತೊಟಲ್ದೆರ್ದೆಯೊಳ್ ತಡಮಾಡೆ ಬೇಟದು ॥
ದ್ದಾನಿಯನಾನೆ ಮನ್ಮಥ ಮಹೀಭುಜನೋವದೆ ತೋಱಿಕೊಟ್ಟುದೊಂ
ದಾನೆಯೆ ತನ್ನನಾನೆಗೊಲೆಗೊಂದಪುದೆಂದು ಲತಾಂಗಿ ಬೆರ್ಚಿದಳ್ ॥ ೫೮

ಮ॥ ಮನಮಾರಾಧಿತಹೋಮಭೂಮಿ ಪಶುಗಳ್ ಕಾಮಾತುರರ್ ಬಂದ ಮಾ
ವನಿತುಂ ಸ್ಥಾಪಿತ ಯೂಪಕೋಟಿ ಬಳವತ್ಕಾಮಾಗ್ನಿ ಹೋಮಾಗ್ನಿ ಚಂ ।
ದನ ಕರ್ಪೂರ ಮೃಣಾಳನಾಳಮೆ ಪೊದಳ್ದಿಧ್ಮಂಗಳಿಂತಾಗೆ ತಾ
ನಿನಿತುಂ ಕಾಮನ ಬೇಳ್ವೆಯೆಂದು ಸುಗಿದಳ್ ತನ್ವಂಗಿ ಬೆಳ್ದಿಂಗಳೊಳ್ ॥ ೫೯

ಸುಭದ್ರೆಯು ತನ್ನಲ್ಲಿಯೇ ತಬ್ಬಿಬ್ಬಾದಳು. ೫೬. ಅರ್ಜುನನ ವಿಷಯಕವಾದ ಮಾತನ್ನೇ (ಕೆಳದಿಯರಿಂದ) ಹೇಳಿಸಿ ಕೇಳುತ್ತಾಳೆ. ಆ ಮಾತು ನಿಂತುಹೋದರೆ ಪುನಃ ಆ ಮಾತನ್ನೇ ಮೊದಲಿನಿಂದಲೂ ನುಡಿಯಿಸುತ್ತಾಳೆ. ಅದೂ ನಿಂತುಹೋದರೆ ಸಖಿಯರನ್ನೂ ಕೋಪದಿಂದ ನೋಡುತ್ತಾಳೆ. ೫೭. ಬುದ್ಧಿಭ್ರಮಣೆಯಾಗುತ್ತದೆ. ಸೊಕ್ಕಿನಿಂದ ಮಯ್ ಮರೆದಂತಾಗುತ್ತದೆ. ಮನಸ್ಸು ಪ್ರೀತಿಸುತ್ತದೆ. ಎದೆಯುರಿಯುತ್ತದೆ. ಶರೀರವು (ಅವನ ಕಡೆಯೇ) ಬಾಗುತ್ತದೆ. (ಅವನನ್ನೇ) ಅಪೇಕ್ಷಿಸುತ್ತದೆ. ಇದೇಕೆಂದು ತಿಳಿಯಲಾರದೆ ಕನ್ಯೆಯಾದ ಸುಭದ್ರೆಯು ತಳವೆಳಗಾದಳು. ೫೮. ಆನೆಯನ್ನು ಹತ್ತಿ ಸೊಗಸಾಗಿ ಬರುತ್ತಿರುವ ಅರ್ಜುನನ ಒಂದು ಸೌಂದರ್ಯಾತಿಶಯವು ತನ್ನನ್ನು (ಸುಭದ್ರೆಯನ್ನು) ಹಿಂಬಾಲಿಸಿ ಕಣ್ಣಿನಲ್ಲಿ ಸುತ್ತಾಡಿ ಎದೆಯಲ್ಲಿ ಸ್ಥಿರವಾಗಿ ಪ್ರೇಮಾತಿಶಯವನ್ನುಂಟುಮಾಡಲು ಮನ್ಮಥನೆಂಬ ರಾಜನೇ ತನ್ನಲ್ಲಿ ಸ್ವಲ್ಪವೂ ದಾಕ್ಷಿಣ್ಯವಿಲ್ಲದೆ ತನ್ನ ಆನೆಯನ್ನು ಛೂಬಿಟ್ಟು ಅದರಿಂದ ತನ್ನನ್ನು ಕೊಲ್ಲಿಸುವಂತೆ ಕೊಲ್ಲಿಸುತ್ತಿದ್ದಾನೆ ಎಂದು ಲತಾಂಗಿಯಾದ ಸುಭದ್ರೆಯು ಹೆದರಿದಳು. ೫೯. ಮನಸ್ಸೇ ಪೂಜಿಸಲ್ಪಟ್ಟ ಯಜ್ಞಭೂಮಿ, ಕಾಮಪೀಡಿತರಾದವರೇ ಬಲಿಗಾಗಿರುವ ಪಶುಗಳು, ಫಲಿಸಿ ಬಂದಿರುವ ಮಾವಿನಮರಗಳೇ ನೆಟ್ಟಿರುವ ಬಲಿಗಂಬಗಳು. ಅತಿಶಯವಾದ

ವ|| ಅಂತು ಕಾಮದೇವನೆಂಬ ಮಂತ್ರವಾದಿಯ ದಿವ್ಯಮಂತ್ರದಿಂ ಸ್ತೋಭಂಗೊಂಡ ದಿವ್ಯ ಗ್ರಹದಂತೆ ಕಾಮಗ್ರಹ ಗೃಹೀತೆಯಾಗಿರೆ ಮನೋವೈಕಲ್ಯ ರೋಮಾಂಚಕ ಸ್ತಂಭಕ ಕಂಪ ಸ್ವೇದ ವೈವರ್ಣ್ಯ ಸಂತಾಪನಾಹಾರ ವ್ಯಾಮೋಹ ಗದ್ಗದಾಶ್ರುಮೋಕ್ಷ ಮೂರ್ಛಾದಿ ನಾನಾ ವಿಕಾರಂಗಳನೊಡನೊಡನೆ ತೋಱುವುದುಮಾಕೆಯ ದಾದಿಯ ಮಗಳ್ ಚೂತಲತಿಕೆಯೆಂಬಳ್ ಕಂಡು-

ಚಂ|| ಪದೆವೆರ್ದೆ ಬತ್ತೆ ಕೆತ್ತುವಧರಂ ದೆಸೆಗೆಟ್ಟಲರ್ಗಣ್ಣ ನೋಟಮು
ಣ್ಮಿದ ಬೆಮರೋಳಿವಟ್ಟ ನಿಡುಸುಯ್ ತೊದಳಿಂಗೆಡೆಗೊಂಡ ಮಾತು ಕುಂ ||
ದಿದ ಲತಿಕಾಂಗಮೊಂದಿದ ವಿಕಾರಮದೀಕೆಯೊಳೀಗಳಾದುದಿಂ
ತಿದು ಕುಸುಮಾಸ್ತ್ರನೆಂಬದಟನಿಕ್ಕಿದ ಸೊರ್ಕಿನ ಗೊಡ್ಡಮಾಗದೇ || ೬೦

ವ|| ಎಂದು ತನ್ನೊಳೆ ಬಗೆದು ಮತ್ತಮಿಂತೆಂದಳ್-

ಚಂ|| ಕಟಿಯಲರಾದ ಸಂಪಗೆಯ ಬಣ್ಣದವೋಲೆ ಬೆಳರ್ತ ಬಣ್ಣದೊಳ್
ಗಟಿಯಿಸೆ ಕೆಂಪು ಕಣ್ಗಳ ಮೊದಲ್ಗಳೊಳೊಯ್ಯನೆ ತೋಱೆ ಬಾಡಿ ಪಾ |
ಡಟಿದು ಬಟಲ್ದು ಜೋಲ್ದಿರವು ಮೆಯ್ಯೊಳೆ ಮೆಯ್ಚಿಡಿದೆನ್ನ ಕಣ್ಗಳೊಳ್
ಸುಟಿದುವು ತಾಮೆ ಕನ್ನಡಿಸಿದವ್ವುವು ಕನ್ನೆಯ ಕನ್ನೆವೇಟಮಂ || ೬೧

ಕಾಮಾಗ್ನಿಯೇ ಹೋಮಾಗ್ನಿ, ಶ್ರೀಗಂಧ, ಕರ್ಪೂರ, ತಾವರೆಯ ದಂಟುಗಳೇ ಅಲ್ಲಿ ಹರಡಿರುವ ಸಮಿತ್ತುಗಳ ಕಟ್ಟುಗಳು. ಹೀಗಾಗಲು ಇವಿಷ್ಟೂ ಕಾಮನ ಯಜ್ಞವೆಂದು ಸುಭದ್ರೆಯು ಬೆಳದಿಂಗಳಿನಲ್ಲಿ ಭಯಗೊಂಡಳು. ವ|| ಹಾಗೆ ಕಾಮದೇವನೆಂಬ ಮಂತ್ರವಾದಿಯ ದಿವ್ಯಮಂತ್ರದಿಂದ ಸ್ತಂಭಿತಳಾದ (ತಡೆಯಲ್ಪಟ್ಟ) ದಿವ್ಯಗ್ರಹದ ಹಾಗೆ ಕಾಮಗ್ರಹದಿಂದ ಹಿಡಿಯಲ್ಪಟ್ಟು ಬುದ್ಧಿಭ್ರಮಣೆ, ರೋಮಾಂಚ, ಸ್ತಂಭನ, ನಡುಕ, ಬೆವರುವುದು, ವರ್ಣವ್ಯತ್ಯಾಸ, ಚಿಂತೆ, ಆಹಾರವಿಲ್ಲದಿರುವಿಕೆ, ಪ್ರೇಮಾತಿಶಯ, ಗಂಟಲತಗಿದ ಮಾತು, ಕಣ್ಣೀರುಸುರಿಯುವಿಕೆ, ಮೂರ್ಛೆಹೋಗುವುದು ಮೊದಲಾದ ನಾನಾ ವಿಕಾರಗಳನ್ನು (ಸುಭದ್ರೆಯು) ಮೇಲೆ ಮೇಲೆ ತೋರುತ್ತಿರಲು ಆಕೆಯ ದಾದಿಯ ಮಗಳಾದ ಚೂತಲತಿಕೆಯೆಂಬವಳು ಇದನ್ನು ಕಂಡಳು. ೬೦. ಈಕೆಯ ಬತ್ತಿದ ಎದೆ, ನಡುಗುವ ತುಟಿ, ಹೂವಿನಂತಿರುವ ಕಣ್ಣಿನ ದೆಸೆಗೆಟ್ಟ ದೃಷ್ಟಿ, ಹೆಚ್ಚಾದ ಬೆವರಿನ ಸಾಲಿಂದ ಕೂಡಿದ ದೀರ್ಘಶ್ವಾಸ, (ನಿಟ್ಟುಸಿರು), ತೊದಳಿನಿಂದ ಕೂಡಿದ ಮಾತು, ಕೃಶವಾದ ಲತೆಯಂತಿರುವ ಶರೀರ, ತೋರಿಬರುತ್ತಿರುವ ವಿಕಾರಗಳು ಇವೆಲ್ಲ ಈಗ ಇವಳಲ್ಲಿ ಉಂಟಾಗುತ್ತಿವೆ, ಇವು ಪುಷ್ಪಬಾಣನಾದ ಮನ್ಮಥನೆಂಬ ದುಷ್ಟನು ಉಂಟುಮಾಡಿರುವ ಸೊಕ್ಕಿನ ಚೇಷ್ಟೆಯೇ ಸರಿ ವ|| ಎಂದು ತನ್ನಲ್ಲಿಯೇ ಯೋಚಿಸಿ ಪುನಃ ಹೀಗೆಂದಳು-೬೧. ಕಳಿತುಹೋಗಿರುವ (ಅಜ್ಜಿಯಾದ) ಸಂಪಗೆಯ ಬಣ್ಣದ ಹಾಗೆ ಬೆಳ್ಳಗಿರುವ ಕಣ್ಣಿನ ಮೊದಲಿನಲ್ಲಿ ಕೆಂಪುಬಣ್ಣವು ನಿಧಾನವಾಗಿ ವ್ಯಾಪಿಸಿ ತೋರುತ್ತಿರಲು ಬಾಡಿ ಹಿಂದಿನ ಸ್ಥಿತಿಯನ್ನು ಕಳೆದುಕೊಂಡು ಜೋತುಹೋಗಿ ರುವ ಈಕೆಯ ಶರೀರಸ್ಥಿತಿಯೇ ನನ್ನ ಕಣ್ಣಿನಲ್ಲಿ ಈ ಕನ್ಯೆಯ ಪ್ರೇಮಾತಿಶಯವನ್ನು

ವ।। ಆದಱನೀಕೆಯ ಬಗೆಯನಱಿಯಲ್ವೇೞ್ಕುಮೆಂದು ಮೆಲ್ಲಮೆಲ್ಲನೆ ಕೆಲಕ್ಕೆವಂದು ಕುಂಚದಡಪದ ಡವಕೆಯ ಪರಿಚಾರಿಕೆಯರೆಲ್ಲರುಮಂ ಕಣ್ಸನ್ನೆ ಕಳೆದೇಕಾಂತದೊಳ್ ಕನ್ನೆಯನಿಂತೆಂದಳ್-

ಚಂ।। ಮೃಗಮದ ಪತ್ರರೇಖೆಗಳನೇಕೆಗೆ ತಾಳ್ದಿರದಾದುವೀ ಕದಂ
ಪುಗಳುರಮೇಕೆ ಹಾರ ಮಣಿಮಂಜರಿಯಿಲ್ಲದೆ ಬಿನ್ನಗಿರ್ದುದೀ ।
ಜಗನಮಿದೇಕೆ ಹೇಮರಶನಾಧ್ವನಿಯಿಲ್ಲದೆ ಮೂಗುವಟ್ಟುದೀ
ಬಗೆಯೊಳಲಕ್ತಕ ದ್ರವದೊಳೊಂದದೆ ನಿಂದುವು ಪಾದಪಂಕಜಂ ।। ೬೨

ಮ।। ನಗೆಗಣ್ ಸೋರ್ವ ಕದುಷ್ಣ ವಾರಿಚಯದಿಂ ಬಿಂಬಾಧರಂ ಸುಯ್ಯ ಬೆಂ
ಕೆಗಳಿಂ ನಾಡೆ ಬೆಡಂಗುಗೆಟ್ಟರವಿದಿಂತೇಕಾರಣಂ ಮಜ್ಜನಂ ।
ಬುಗದಾರೋಗಿಸಲೊಲ್ಲದಿರ್ಪಿರವಿದೇಂ ನಾಣಳ್ಕಿದೇಂ ಕಾಮನಂ
ಬುಗಳತ್ತಿತ್ತಡೆಯಾಡೆ ಸೋಂಕವೆ ವಲಂ ನಿನ್ನಂ ಸರೋಜಾನನೇ ।। ೬೩

ವ।। ಎಂದು ಮುನ್ನಮೆ ಮುಟ್ಟೆ ನುಡಿಯದೆ ಪೊಱಪೊಱಗನೆ ಬಳಸಿ ಕನ್ನೆಯ ಶಂಕೆಯಂ ಕಿಡಿಸಿ ಮತ್ತಮಿಂತೆಂದಳ್-

ಮ।। ವನಭೃತ್ಕುಂತಳೆಯಾ ಶಿರೀಷ ಕುಸುಮಾಭಾಂಗಕ್ಕೆ ಕಂದಂ ಕನ
ತ್ಕನಕಾಂಭೋಜನಿಭಾನನಕ್ಕೆ ಪಿರಿದುಂ ದೀನತ್ವಮಂ ನೀಳ್ದ ಮಾ ।
ವಿನ ಪೋೞಂದದ ಕಣ್ಗೆ ಬಾಷ್ಪಜಲಮಂ ಚಿತ್ತಕ್ಕೆ ಸಂತಾಪಮಂ
ನಿನಗಂ ಮಾಡಿದನಾವನಾತನೆ ವಲಂ ಗಂಧೇಭ ವಿದ್ಯಾಧರಂ ।। ೬೪

ಪ್ರಕಟಪಡಿಸುತ್ತದೆ. ವ।। ಆದುದರಿಂದ ಈಕೆಯ ಮನಸ್ಸನ್ನು ತಿಳಿಯಬೇಕು ಎಂದು ನಿಧಾನವಾಗಿ ಪಕ್ಕಕ್ಕೆ ಬಂದು ಕುಂಚದ ಅಡಪದ ಡವಕೆಯ ಸೇವಕಿಯರನ್ನೆಲ್ಲ ಕಣ್ಸನ್ನೆಯಿಂದಲೇ ಕಳುಹಿಸಿ ರಹಸ್ಯವಾಗಿ ಕನ್ಯೆಯನ್ನು ಕುರಿತು ಕೇಳಿದಳು-೬೨. ಈ ನಿನ್ನ ಕೆನ್ನೆಗಳು ಕಸ್ತೂರಿಯಿಂದ ಬರೆದ ಪತ್ರರೇಖೆಗಳನ್ನು ಏಕಮ್ಮ ಧರಿಸಿಲ್ಲವಾಗಿವೆ. ನಿನ್ನ ಎದೆಯೇಕೆ ರತ್ನಹಾರದ ಗೊಂಚಲುಗಳಿಲ್ಲದೆ ಶೂನ್ಯವಾಗಿದೆ? ಈ ನಿನ್ನ ಸೊಂಟವೇಕೆ ಚಿನ್ನದ ಡಾಬಿನ ಗೆಜ್ಜೆಗಳ ಶಬ್ದವಿಲ್ಲದೆ ಮೂಕವಾಗಿದೆ. ನಿನ್ನ ಪಾದಕಮಲಗಳೇಕೆ ಈ ರೀತಿಯಲ್ಲಿ ಅರಗಿನ ರಸದ ಲೇಪನವಾಗದೆ ನಿಂತಿವೆ? ೬೩. ನಿನ್ನ ಕಣ್ಣು ನಸುಬಿಸಿಯಾದ ಕಣ್ಣೀರಿನ ಪ್ರವಾಹವನ್ನು ಸುರಿಸುತ್ತಿರುವುದೂ ತೊಂಡೆಹಣ್ಣಿನಂತಿರುವ ತುಟಿಯು ನಿಟ್ಟುಸಿರಿನ ಬೆಂಕಿಯಿಂದ ತನ್ನ ಬೆಡಗನ್ನು ಹೋಗಲಾಡಿಸಿಕೊಂಡಿರುವ ಈ ಸ್ಥಿತಿಯೂ ಇದೇಕೆ? ಸ್ನಾನ ಮಾಡದೆ ಊಟಮಾಡದೆ ಇರುವುದಕ್ಕೆ ಕಾರಣವೇನು? ಲಜ್ಜೆಯೂ ಭಯವೂ ಇದೇಕೆ? ಕಾಮಬಾಣಗಳು ನಿನ್ನನ್ನು ವ್ಯಾಪಿಸಿ ನಿಜವಾಗಿಯೂ ಮುಟ್ಟುತ್ತಿಲ್ಲವೇ? ವ।। ಎಂದು ಮೊದಲೇ ಒಳಹೊಕ್ಕು (ಅವಳ ಇಂಗಿತವನ್ನೂ ತಿಳಿದು) ಮಾತನಾಡದೆ ಮೇಲೆ ಮೇಲೆ ಬಳಸುಮಾತುಗಳನ್ನಾಡಿ ಅವಳ ಸಂದೇಹವನ್ನು ಹೋಗಲಾಡಿಸಿ ಪುನಃ ಹೀಗೆಂದಳು-೬೪. ಮೋಡದಂತೆ ಕಪ್ಪಾದ ಮುಂಗುರುಳುಳ್ಳ ಬಾಗೆಹೂವಿನ ಬಣ್ಣವುಳ್ಳ ನಿನ್ನ ಶರೀರಕ್ಕೆ ಮಾಸುವಿಕೆಯನ್ನೂ ಕಾಂತಿಯುಕ್ತವಾದ ಹೊಂದಾವರೆಗೆ ಸಮಾನವಾದ

ವ|| ಎಂದು ತನ್ನ ಮನಮನಱಿದು ಮುಟ್ಟ ನುಡಿದ ಕೆಳದಿಯ ನುಡಿಗೆ ಪೆಱತೇನುಮನೆನಲಱಿಯದೆ ನಾಣ್ಚಿ ತಲೆಯಂ ಬಾಗಿ ನೆಲನಂ ಬರೆಯುತ್ತುಂ ನೀರೊಳ್ ಮುಳುಗಿವರಂತುಮ್ಮನೆ ಬೆಮರುತ್ತುಮ್ಮಳಿಕೆ ವಂದು ಬೆಚ್ಚನೆ ಸುಯ್ವೊಡೆ-

ಕಂ|| ಉಸಿರದಿರೆ ಮನದೊಳಿರ್ದೆಯುಂ
ಪಸರಿಸುಗುಂ ಮಱುಕಮದಱಿನೆನಗಿಂತುಟೆ ಎಂ ।
ದುಸಿರುಸಿರ್ದೊಡೆ ಬಗೆ ತೀರ್ಗುಂ
ಬಿಸಿದುಂ ಬೆಟ್ಟಿತ್ತುಮುಸಿರದೇಂ ತೀರ್ದಪುದೇ ॥ ೬೫

ಪೇೞೆಂಬುದುಮಾಂ ನಿನಗೆಡೆ
ವೇೞದೆ ಪೇೞ್ವಾರ್ಗೆ ಪೇೞ್ವೆನಿಂದಿನ ಬಂದಾ ।
ಕಾೞಾದ ವಾೞ್ತೆಗೊಂಡೊಡೆ
ಪಾೞಾದುದು ಮನಮುಮೆರ್ದೆಯುಮೇನಂ ಪೇೞ್ವೆಂ ॥ ೬೬

ಭೋಂಕನೆ ಮನಮಂ ಕದಡಿ ಕ
ಲಂಕಿದಪುದು ಬಿಡದೆ ಮನಮನೊನಲಿಸಿದಪುದಾ ।
ದಂ ಕೆಳದಿ ಪಾಣ್ಬರಂಕುಸ
ನಂಕುಸದಾ ಪೊಳಪುಮವನ ಕಣ್ಗಳ ಬೆಳ್ಪುಂ ॥ ೬೭

ಮುಖಕ್ಕೆ ವಿಶೇಷವಾದ ಬಾಡುವಿಕೆಯನ್ನೂ ನೀಳವಾದ ಮಾವಿನ ಹೋಳಿನಂತಿರುವ ಕಣ್ಣಿಗೆ ಕಣ್ಣೀರನ್ನೂ ಮನಸ್ಸಿಗೆ ದುಃಖವನ್ನೂ ಯಾವನು ನಿನಗುಂಟುಮಾಡಿದನೋ ಅವನೇ ನಿಜವಾಗಿಯೂ ಗಂದೇಭವಿದ್ಯಾಧರನಾದ ಅರ್ಜುನನಲ್ಲವೇ? ವ|| ಎಂದು ತನ್ನ ಮನಸ್ಸನ್ನು ತಿಳಿದು ಹೃದಯಸ್ಪರ್ಶಿಯಾಗಿ ಮಾತನಾಡಿದ ಸಖಿಯ ಮಾತಿಗೆ ಬೇರೆಯೇನನ್ನೂ ಹೇಳಲಾರದೆ ನಾಚಿಕೆಗೊಂಡು ತಲೆಯನ್ನು ಬಗ್ಗಿಸಿ ನೆಲವನ್ನು ಕಾಲಿನಿಂದ ಬರೆಯುತ್ತ ನೀರಿನಲ್ಲಿ ಮುಳುಗಿದವರ ಹಾಗೆ ಸುಮ್ಮನೆ ಬೆವರುತ್ತ ದುಃಖದಿಂದ ನಿಟ್ಟುಸಿರನ್ನು ಬಿಟ್ಟಳು. ೬೫. ಆಗ ಚೂತಲತಿಕೆಯು ಸುಭದ್ರೆಯನ್ನು ಕುರಿತು, ಅಮ್ಮಾ ಸುಭದ್ರೆ ಮನಸ್ಸಿನಲ್ಲಿರುವುದನ್ನು ಬಾಯಿಬಿಟ್ಟು ಹೇಳದಿದ್ದರೆ ದುಃಖವು ಹೃದಯವನ್ನು ಆವರಿಸುತ್ತದೆ. ಆದುದರಿಂದ ನನಗೆ ಹೀಗೆ ಎಂದು ಹೇಳು; ಹೇಳಿದರೆ ಇಷ್ಟಾರ್ಥವು ಕೈಗೂಡುತ್ತದೆ. ಬಿಸಿಯಾಗಿಯೂ ಬಿರುಸಾಗಿಯೂ ಉಸಿರಾಡುವುದರಿಂದ ತೀರುತ್ತದೆಯೇ? (ನಿಟ್ಟುಸಿರಿನಿಂದ ಇಷ್ಟಾರ್ಥವಾಗುತ್ತದೆಯೇ?) ೬೬. ಹೇಳು ಎನಲು ನಾನು ನಿನಗೆ ವಿಷಯವನ್ನು ತಿಳಿಸದೆ ಬೇರೆ ಯಾರಿಗೆ ಹೇಳಲಿ. ಈ ದಿನ ಆ ಕೆಟ್ಟ ಸುದ್ದಿಯನ್ನು ಕೇಳಿದೊಡನೆಯೇ ಮನಸ್ಸೂ ಎದೆಯೂ ಹಾಳಾಯಿತು. ಏನು ಹೇಳಲಿ ೬೭. ಎಲೆ ಸಖಿಯೇ ಪಾಣ್ಬರಂಕುಶನೆಂಬ ಬಿರುದುಳ್ಳ ಅರ್ಜುನನ (ಅರಿಕೇಸರಿಯ) ಅಂಕುಶವೆಂಬ ಹೊಳಪೂ ಅವನ ಕಣ್ಣುಗಳ ಬಿಳುಪೂ ಇದ್ದಕ್ಕಿದ್ದ ಹಾಗೆ ಮನಸ್ಸನ್ನು ಕದಡಿ ಕಲಕಿಸುತ್ತವೆ. ಅಷ್ಟಕ್ಕೆ ಬಿಡದೆ ಮನಸ್ಸನ್ನು ವಿಶೇಷವಾಗಿ ಕೆರಳಿಸುತ್ತವೆ.

ಚಂ॥ ಮನಸಿಜನಂಬರಲ್ದ ಪೊಸ ಮಲ್ಲಿಗೆ ತೆಂಕಣ ಗಾಳಿಯೆಂಬವಿಂ
ತನುಬಲದಿಂದಮೆನ್ನನಲೆದಪ್ಪುವವೆನ್ನನೆ ಪೆಟ್ಟುವೆರ್ಚೆ ಚಂ ।
ದ್ರನ ಬಲದಿಂದಮೆನ್ನ ನಲೆದಪ್ಪುವದರ್ಕೆನಗೀಗಳೊಂದಿ ಚಂ
ದ್ರನ ಬಲಮೊಳ್ಳಿತಾಗಿ ಸಲೆಯಿಲ್ಲದೊಡಾವುದುಮೊಳ್ಳಿಕೆಯ್ದುಮೇ ॥ ೬೮

ವ॥ ಎಂದು ಮನದ ಮಱುಕಮುಮನೆರ್ದೆಯ ಕುದಿಪಮುಮಂ ಬಗೆಯ ಕುಜಿಪಮುಮಂ ಮೆಯ್ಯ ಬಡತನಮುಮನಱಿಯೆ ತೋಱಿ ನುಡಿದೊಡೆ ರಾಜಹಂಸಿ ಮಾನಸ ಸರೋವರಮನಲ್ಲದೆ ಪೆಱತನೇಕೆ ಬಯಸುಗುಂ ಕಳಹಂಸಗಮನೆಯಾ ಸುರತಮಕರಧ್ವಜನನಲ್ಲದೆ ಪೆಱತನೇಕೆ ಬಯಸುಗುಮೆಂದು ಮನದೊಳೆ ಮಂತಣಮಿರ್ದು ಬಗೆಯೊಳೆ ಗುಡಿಗಟ್ಟಿ ಸಂತಸಂಬಟ್ಟಂತೆಂದಳ್-

ಮ॥ ನನೆಯಂಬಂ ತೆಗೆದೆಚ್ಚನಂಗಜನ ತಪ್ಪೇನಾನುಮಂ ತೋಱೆ ಕಾ
ಣ್ಬನಿತಂ ಮಾಡದೆ ಪದ್ಮಜಂ ಮದನನಂ ಬೈದಂತುಟೇ ಬೇಡಮಿಾ
ಬನದಂ ತಪ್ಪಲೆ ಕಲ್ಪಿತಂ ಪರಿಯದಾತಂಗೆಂದು ನಿನ್ನೀ ಮನಂ
ನಿನಗಾತಂ ದೊರೆ ನೆಟ್ಟನಾದಿ ಪುರುಷಂಗೇಕಕ್ಕ ನೀನ್ನಾಣ್ಚುವೈ ॥*

ವ॥ ನೀನಿದರ್ಕೇನುಮಂ ಬಗೆಯಲ್ವೇಡ ನಿನ್ನ ಬಗೆಯಂ ಬಗೆದಂತೆ ತೀರ್ಚುವೆನೆಂದನೇಕ ಪ್ರಕಾರ ವಚನ ರಚನೆಗಳಿಂದಾಕೆಯ ಮನಮನಾಱೆ ನುಡಿಯುತ್ತಿರ್ಪಿನಮಿತ್ತ

೬೮. ಮನ್ಮಥನ ಬಾಣ ಹೊಸಮಲ್ಲಿಗೆ ದಕ್ಷಿಣಗಾಳಿ ಇವು ಪರಸ್ಪರ ಒಟ್ಟುಗೂಡಿ ನನ್ನನ್ನು ಹಿಂಸಿಸುತ್ತವೆ. ಇವು ಚಂದ್ರಬಲದಿಂದ (ಬೆಳದಿಂಗಳಿನಿಂದ) ಮತ್ತಷ್ಟು ಕೊಬ್ಬಿ ನನ್ನನ್ನು ಮತ್ತೂ ಹಿಂಸಿಸುತ್ತವೆ. ಈಗ ನನಗೆ ಚಂದ್ರಬಲವು (ಅದೃಷ್ಟ-ಗ್ರಹಬಲ) ಸರಿಯಾಗಿಲ್ಲದಿದ್ದರೆ ಮತ್ತಾವುದು ತಾನೆ ಒಳ್ಳೆಯದನ್ನು ಮಾಡಬಲ್ಲುದು? ವ॥ ಎಂದು ಮನಸ್ಸಿನ ದುಃಖವನ್ನೂ ಹೃದಯದ ಬೇಗೆಯನ್ನೂ ಮನಸ್ಸಿನ ಗುರಿಯನ್ನೂ ಶರೀರದ ಬಡತನವನ್ನೂ ಸ್ಪಷ್ಟವಾಗಿ ತಿಳಿಯುವ ಹಾಗೆ ನಿರ್ದೇಶನ ಮಾಡಿ ನುಡಿಯಲಾಗಿ ಆ ಸಖಿಯು ತನ್ನ ಮನಸ್ಸಿನಲ್ಲಿಯೇ ರಾಜಹಂಸಪಕ್ಷಿಯು ಮಾನಸಸರೋವರವನ್ನಲ್ಲದೆ ಬೇರೆಯದನ್ನೇಕೆ ಅಪೇಕ್ಷಿಸುತ್ತದೆ. ಕಳಹಂಸಗಮನೆಯಾದ ಸುಭದ್ರೆಯು ಸುರತಮಕರಧ್ವಜನಾದ ಅರ್ಜುನನನ್ನಲ್ಲದೆ ಇತರರನ್ನೇಕೆ ಆಶಿಸುತ್ತಾಳೆ? ಎಂದು ಯೋಚಿಸುತ್ತಿದ್ದು ಮನಸ್ಸಿನಲ್ಲಿ ಉತ್ಸಾಹಗೊಂಡು ಸಂತೋಷಪಟ್ಟು ಹೀಗೆಂದಳು- ೬೯. ಪುಷ್ಪಬಾಣವನ್ನು ಪ್ರಯೋಗಿಸಿದ ತಪ್ಪೇನನ್ನೂ ಪ್ರಕಟವಾಗಿ ತೋರುವಂತೆ ಮಾಡದುದರಿಂದ ಬ್ರಹ್ಮನು ಮನ್ಮಥನನ್ನು ತಪ್ಪಿತಸ್ಥನನ್ನಾಗಿಯೇ ಮಾಡಿದಂತಾಗಿದೆ. ಈ ಆರೋಪಿತವಾದ ವಿನೋದವೂ ತಪ್ಪಾಗುವುದಿಲ್ಲವೇ? ನಿನ್ನ ಮನಸ್ಸು ಆತನನ್ನು ಬಿಟ್ಟು ಹರಿಯದು. ನಿನಗೆ ಅವನೇ ಸರಿಸಮಾನನಾಗಿರುವವನು. ಆದಿಪುರುಷನಾದ ಅರಿಕೇಸರಿಯ ವಿಷಯವಲ್ಲಿ ಏತಕಕ್ಕ ಲಜ್ಜೆಪಡುತ್ತೀಯೇ? ವ॥ ನೀನು ಇದಕ್ಕೆ

* (ಈ ಪದ್ಯದ ಅರ್ಥ ಸ್ಪಷ್ಟವಿಲ್ಲ. ಇದರರ್ಥ ಹೀಗಿದ್ದರೂ ಇರಬಹುದು - ಬ್ರಹ್ಮನು ಸುಭದ್ರೆಗೆ ಅರ್ಜುನನ ವಿಷಯದಲ್ಲಾದ ಮನ್ಮಥಚೇಷ್ಟೆಯನ್ನು ಸ್ವಭಾವಸಹಜವನ್ನಾಗಿ ಮಾಡಿ ಕಲ್ಪಿತವೆನ್ನುವ ಹಾಗೆ ಮಾಡಬಾರದಾಗಿತ್ತು. ಹೇಗಾದರೂ ನಿನಗೆ ಅವನೂ ಅವನಿಗೆ ನೀನೂ ಸಮಾನರಾಗಿರುವವರು.)

ವಿಕ್ರಮಾರ್ಜುನನುಮೋಲಗಂ ಪರೆದಿಂಬಳಿಯಂ ತನ್ನ ಪವಡಿಸುವ ಮಾಡಕ್ಕೊಡನೊಡನೋಲಗಿಸುತ್ತುಂ ಬಂದ ಪಂಡಿತರ್ಕಳುಮನುಚಿತ ಪ್ರತಿಪತ್ತಿಗಳಿಂ ವಿಸರ್ಜಿಸಿ ಸುಭದ್ರೆಯ ರೂಪು ಕಣ್ಣ ಪಾಪೆಯಂತೆ ಕಣ್ಗೊಳೆ ತೊಳಲೆ ಕಣ್ಮುಚ್ಚದೆ ತನ್ನ ಜಸದಂತೆ ಪಸರಿಸಿದಚ್ಚವೆಳ್ದಿಂಗಳನಾಕೆಯ ಕಣ್ಗಳ ಬೆಳ್ಪಿನ ತಳರ್ಪೆನುತ್ತುಂ ಪೆಳ್ವಳಿಸಿ ಚಂದ್ರನಂ ನೋಡಿ-

ಚಂ॥ ಪ್ರಿಯ ಸತಿಯಾನನೇಂದುವೊಳಮಿಂದುವೊಳಂ ಬದಿ ಮುನ್ನಮಾವುದಂ
ನಯದೊಳೆ ನೋಡಿ ಮಾಡಿದನದಾವುದನೆಂದಱಿಯಲ್ಕೆ ನಾಡೆ ಸಂ ।
ದೆಯಮದು ನೀಳ ನೀರಜ ವನಂಗಳ ಚೆಲ್ವುಗಳೆಂಬುವಾ ಲತಾಂ
ಗಿಯ ಕಡೆಗಣ್ಣ ಬೆಳ್ಪುಗಳ ಸಿಲ್ಕಿದ ಸಿಲ್ಕಿನ ಸಿಲ್ಕಿವಲ್ಲವೇ ॥ ೭೦

ವ॥ ಅದಲ್ಲದೆಯುಂ-

ಉ॥ ಆ ನವ ಮಾಳಿಕಾ ಕುಸುಮ ಕೋಮಳೆ ರಾಗ ರಸ ಪ್ರಪೂರ್ಣಂ ಚಂ
ದ್ರಾನನ ಲಕ್ಷ್ಮಿಯಿಂ ನಭದೊಳಿರ್ದಮೃತಾಂಶುವಿಸುದ್ಧಕಾಂತಿ ಸಂ ।
ತಾನಮನಾವಗಂ ತನಗೆ ಮಾಡಿದಳೆಂದೊಡೆ ತದ್ಗೃಹಾಂತರೋ
ದ್ಯಾನಸರಸ್ಸರೋಜರುಚಿಯೆಂಬುದಿದಾಕೆಯ ಕೆಯ್ಯದೆನ್ನಿರೇ॥ ೭೧

ಏನೂ ಚಿಂತಿಸಬೇಡ. ನಿನ್ನ ಇಷ್ಟಾರ್ಥವನ್ನು ಇಷ್ಟಾರ್ಥದಂತೆಯೇ ತೀರಿಸುತ್ತೇನೆ ಎಂದು ಅನೇಕ ರೀತಿಯ ಮಾತಿನ ಚಮತ್ಕಾರಗಳಿಂದ ಅವಳ ಮನಸ್ಸು ತೃಪ್ತಿಪಡುವಂತೆ ನುಡಿಯುತ್ತಿರಲು ಈ ಕಡೆ ವಿಕ್ರಮಾರ್ಜುನನಾದ ಅರಿಕೇಸರಿಯು ಸಭೆಯು ವಿಸರ್ಜನೆಯಾದ ಬಳಿಕ, ಮಲಗುವ ಮನೆಗೆ ಬಂದನು. ತನ್ನ ಜೊತೆಯಲ್ಲಿಯೇ ಅನುಸರಿಸಿ ಬರುತ್ತಿದ್ದ ಪಂಡಿತರುಗಳನ್ನು ಉಚಿತವಾದ ಸತ್ಕಾರಗಳಿಂದ ವಿಸರ್ಜನೆ ಮಾಡಿದನು. ಸುಭದ್ರೆಯ ಸೌಂದರ್ಯವು ತನ್ನ ಕಣ್ಣಿನಲ್ಲಿ ತನ್ನ ಕಣ್ಣಿನ ಗುಡ್ಡೆಯಂತೆಯೇ ಸುತ್ತಾಡುತ್ತಿರಲು ಕಣ್ಣನ್ನು ಮುಚ್ಚದೆ ತನ್ನ ಯಶಸ್ಸಿನಂತೆ ಪ್ರಸರಿಸಿದ್ದ ಸ್ವಚ್ಛವಾದ ಬೆಳುದಿಂಗಳನ್ನು ಆಕೆಯ ಕಣ್ಣುಗಳ ಬಿಳಿಯ ಬಣ್ಣದ ಚಲನೆಯೆಂದೇ ಭಾವಿಸಿ ಹೆದರಿದನು. ಚಂದ್ರನನ್ನು ನೋಡಿ ೭೦. ಚಂದ್ರನೂ ಪ್ರಿಯಸತಿಯಾದ ಸುಭದ್ರೆಯ ಮುಖಚಂದ್ರನೂ ಒಂದೇ ರೀತಿಯಲ್ಲಿವೆ. ಬ್ರಹ್ಮನು ಇವುಗಳಲ್ಲಿ ಯಾವುದನ್ನು ಮಾದರಿಯಾಗಿ ಮೊದಲು ಮಾಡಿದನು.? ತಿಳಿಯುವುದಕ್ಕೆ ಸಂದೇಹವಾಗಿದೆ. ಕನ್ನೈದಿಲೆಯ ತೋಟದ ಸೌಂದರ್ಯವೆಂಬುದು ಲತಾಂಗಿಯಾದ ಆ ಸುಭದ್ರೆಯ ಕಡೆಗಣ್ಣುಗಳ ಬಿಳಿಯ ಕಾಂತಿಯಲ್ಲಿ ಸಿಕ್ಕಿ ಹೆಣೆದುಕೊಂಡಿರುವ ಬಿಡಿಸಲಾಗದ ಸಿಕ್ಕಲ್ಲವೇ? ವ॥ ಅದೂ ಅಲ್ಲದೆ-೭೧. ಆ ಹೊಸದಾದ ಪುಷ್ಪಮಾಲಿಕೆಯ ಹೂವಿನಂತೆ ಕೋಮಲವಾಗಿರುವ ಆ ಸುಭದ್ರೆಯು ತನ್ನ ಪ್ರೀತಿರಸದಿಂದ (ಕೆಂಪು ಬಣ್ಣದಿಂದ) ತುಂಬಿದ ಮುಖಚಂದ್ರನ ಕಾಂತಿಯಿಂದ ಆಕಾಶದಲ್ಲಿರುವ ಚಂದ್ರನ ಉತ್ತಮವಾದ ಕಾಂತಿಯ ಸಮೂಹವನ್ನು ತನ್ನದ್ದನ್ನಾಗಿ ಮಾಡಿಕೊಂಡಿದ್ದಾಳೆ ಎನ್ನುವಾಗ ಅವಳಿರುವ ಮನೆಯ ಉದ್ಯಾನದಲ್ಲಿರುವ ಕೊಳಗಳ ತಾವರೆಯ ಕಾಂತಿಯು ಆಕೆಯ

ವ॥ ಎಂದು ತನ್ನ ಮನಮುಮನೆರ್ದೆಯುಮನುಱೆ ಸೆಱೆವಿಡಿದಿರ್ದಪೂರ್ವ ರೂಪೆಯ ರೂಪುಮಂ ಮನದೊಳೆ ಬಗೆದು ಭಾವಿಸಿ ಮತ್ತಮಿಂತೆಂದಂ-

ಚಂ॥ ಕುಸುರಿಯ ರೂಪನೆಯ್ದೆ ಪೊಗಟಲ್ಕಱಿಯೆಂ ನಡು ಪುರ್ವು ಬಾಸೆ ಕ
ಣ್ಗೊಸಗೆಯನುಂಟುಮಾಟ್ಪ ಜಘನಂ ಬೆಳರ್ವಾಯ್ ಮೊಲೆಗಳ್ ಕದಂಪುಗು ।
ರ್ವಸಿಱಿನೆ ನೋಡೆ ಮೊಕ್ಕಳಮದಾರ್ ನಡೆ ನೋಟ್ಟೊಡಮಂತುಮಿಂತುಂ ಮೂ
ಱಿಸಿಯವು ಮೂಱು ದೊಡ್ಡಿದುವು ಮೂಱಿದೆ ತೆಳ್ಳಿದುವಂಬುಜಾಕ್ಷಿಯಾ ॥೭೨

ಕಂ॥ ಮೃಗಶಿಶುನೇತ್ರೆಯ ನಡುವೆರ್ದೆ
ಯುಗುರ್ಗಳ್ ಕರಮಸಿದು ಕನಕ ಕಾಂಚೀ ನಿನದ ।
ಪ್ರಗಣಿತಮಗಲ್ದ ನಲ್ಲಳ
ಜಗನಮಿದೆನ್ನೆರ್ದೆಯನೆಂತು ಪೊಕ್ಕಳಿಪುವುದೋ ॥ ೭೩

ವ॥ ಎಂದು ಸೈರಿಸದೆ-

ಮ॥ ಮೊಲೆಗಳ್ ಬಟ್ಟದುವಾಗಿ ಕರ್ಗಿದ ಕುರುಳ್ ಕೊಂಕಾಗಿ ಕಣ್ಗೆಯ್ದೆ ನೀ
ಳ್ದಲರ್ಗಣ್ಗಳ್ ಚಪಳಂಗಳಾಗಿ ಜಘನಂ ಕಾಂಚೀ ಕಳಾಪ ಪ್ರಭೋ ।
ಜ್ಜ್ವಲಮುದ್ವೃತ್ತಮುಮಾಗಿ ತಾಮಲೆಗೆ ಮಧ್ಯಸ್ಥಂಗಳಾಗಿರ್ದುವ
ಕ್ಕಲೆಯಲ್ ತಕ್ಕುದೆ ಕೆನ್ನಮಾ ತ್ರಿವಳಿಗಳ್ಗಿನ್ನಂ ಸರೋಜಾಕ್ಷಿಯಾ ॥ ೭೪

ಅಧೀನದಲ್ಲಿರುವ ವಸ್ತು ಎಂದು ಹೇಳಲಾಗುವುದಿಲ್ಲವೇ? ವ॥ ಎಂದು ತನ್ನ ಮನಸ್ಸನ್ನೂ ಹೃದಯವನ್ನೂ ಪೂರ್ಣವಾಗಿ ಸೆರೆಹಿಡಿದಿದ್ದ ಅಪೂರ್ವ ಸೌಂದರ್ಯದಿಂದ ಕೂಡಿದ ಆಕೆಯ ರೂಪವನ್ನು ತನ್ನ ಮನಸ್ಸಿನಲ್ಲಿ ಯೋಚಿಸಿಕೊಂಡು ಪುನಃ ಭಾವಿಸಿ ಹೀಗೆಂದನು-೭೨. ಹೂವಿನ ಸೂಕ್ಷ್ಮ ಕೇಸರಗಳಂತಿರುವ ಅವಳ ಸೌಂದರ್ಯವನ್ನು ಹೊಗಳಲು ನನಗೆ ಶಕ್ಯವಿಲ್ಲ. ಇಷ್ಟುಮಾತ್ರ ಹೇಳಬಲ್ಲೆ: ಅವಳ ಸೊಂಟ, ಹುಬ್ಬು, ಹೊಟ್ಟೆಯ ಮೇಲಿನ ಕೂದಲಿನ ಸಾಲು, ಕಣ್ಣು, ಹಬ್ಬವನ್ನುಂಟುಮಾಡುವ ಪಿರ್ರೆಗಳು, ಬೆಳ್ಳಗಿರುವ ಬಾಯಿ, ಮೊಲೆಗಳು, ಕೆನ್ನೆ, ಉಗುರು, ಹೊಟ್ಟೆ ಇವುಗಳನ್ನು ಯಾರಾದರೂ ದೃಷ್ಟಿಸಿ ನೋಡಿದರೂ ಕಮಲಾಕ್ಷಿಯಾದ ಆ ಸುಭದ್ರೆಯ (ಮೇಲೆ ನಿರೂಪಿಸಿರುವ) ಅಂಗಗಳಲ್ಲಿ ಮೂರು ಕೃಶವಾದುವು, ಮೂರು ದಪ್ಪವಾದುವು, ಮೂರು ತೆಳುವಾದುವು. ೭೩. ಹುಲ್ಲೆಯ ಮರಿಯ ಕಣ್ಣುಗಳಂತೆ ಕಣ್ಣುಳ್ಳ ಸುಭದ್ರೆಯ ಸೊಂಟ, ಎದೆ, ಉಗುರುಗಳು ವಿಶೇಷ ತೆಳುವಾಗಿರುವುವು. ಚಿನ್ನದ ಡಾಬಿನ ಸದ್ದಿನ ಸಮೂಹವಿಲ್ಲದ ಪ್ರಿಯೆಯ ಜಘನಗಳು ನನ್ನ ಹೃದಯವನ್ನು ಪ್ರವೇಶಿಸಿ ಪ್ರೀತಿಯನ್ನುಂಟುಮಾಡುತ್ತಿವೆಯೋ? ವ॥ ಎಂಬುದಾಗಿ ಸೈರಿಸಲಾರದೆ-೭೪. ಅವಳ ದುಂಡುಮೊಲೆಗಳು ಕಪ್ಪಾದ ಕುರುಳುಗಳು ಕಣ್ಣಿನವರೆಗೆ ಕೊಂಕಾಗಿಯೂ ಉದ್ದವಾಗಿಯೂ ಬೆಳೆದು ಹೂವಿನಂತಿರುವ ಚಂಚಲವಾದ ಕಣ್ಣುಗಳು ಡಾಬಿನ ಕಾಂತಿಯ ಸಮೂಹದಿಂದ ಕೊಬ್ಬಿ ಬೆಳೆದ ಜಘನಗಳು ನನ್ನನ್ನು ಪೀಡಿಸುವುದಂತಿರಲಿ; ಕಮಲದಂತಿರುವ ಆ ಸುಭದ್ರೆಯ ಮಧ್ಯಪ್ರದೇಶದ ತ್ರಿವಳಿಗಳು ನನ್ನ ಮನಸ್ಸನ್ನು ವಿಶೇಷವಾಗಿ ಕಲಕಲು ಯೋಗ್ಯವಾಗಿವೆ. ಎಂಬುದಾಗಿ ಸ್ವಲ್ಪ ಹೊತ್ತು

ವ|| ಎಂದು ಕಿಱಿದುಂ ಬೇಗಮಱಿಮರುಳಂತು ಪಲುಂಬಿ ಪಂಬಲಿಸಿ ಮತ್ತಮಾಕೆಯ ಹಾವ ಭಾವ ವಿಳಾಸ ವಿಭ್ರಮ ಕಟಾಕ್ಷೇಕ್ಷಣಂಗಳ್ ಮನಮನೊನಲಿಸೆಯುಮೆರ್ದೆಯಂ ಕನಲಿಸೆಯು ಮನಂಗ ಮತಂಗಜ ಕೋಳಾಹಳಾಕುಳೀಕೃತಾಂತರಂಗನಾಗಿ-

ಮ|| ಜಗಮಂ ಮಾಡಿದ ಪದ್ಮಜಂ ಪಡೆದನಿಲ್ಲೀ ಕನ್ನೆಯಂ ಮಾಡುವ
ಲ್ಲಿಗೆ ಚಂದ್ರಂ ಮಳಯಾನಿಳಂ ಮಳಯಜಂ ನೀರೇಜಮಿಮ್ಮಾವು ಮ ।
ಲ್ಲಿಗೆಯೆಂದಿಂತಿವನಱ್ಕಱಿಂದಮರ್ದಿನೊಳ್ ತಾನಟ್ಟೆಯಿಂ ತೊಯ್ದು ಮೆ
ಲ್ಲಗೆ ಸಂದಂಗಜನೆಂಬಜಂ ಪಡೆದನಂತಾ ಕಾಂತಿಯಿಂ ಕಾಂತೆಯಂ ॥ ೭೫

ವ|| ಅಂತಲ್ಲಪ್ಪಂದಾ ಕಾಂತೆಯಂ ವಿಧಾತ್ರಂ ಮಾಡುವಂದು ಕೊಸಗಿನ ಕೇಸರಂಗಳನಮೃತರಸದೊಳಂ ಶೃಂಗಾರರಸದೊಳಂ ಭಾವಿಸಿ ರಸಸಿದ್ಧಮಪ್ಪ ಪೊನ್ನ ಲತೆಯ ಮೆಯ್ಯುಮಂ ನೀಲದ ತಲೆನವಿರುಮಂ ಪವಳದ ಬಾಯ್ದೆಱೆಯುಮಂ ಮುತ್ತಿನ ಪಲ್ಲುಮಂ ರಾಜಾವರ್ತದ ಸೆಳ್ಳುಗುರುಮಂ ಧೂಪದ ಸುಯ್ಯುಮಂ ರತಿಯ ಸೌಭಾಗ್ಯಮುಮಂ ಸೀತೆಯ ಸೈರಣೆಯುಮನದ್ರಿಜಾತೆಯ ಶೃಂಗಾರಮುಮಂ ಮನೋಮಥನ ಮದನ ಮೋಹನ ಸಂತಾಪನ ವಶೀಕರಣಂಗಳೆಂಬ ಕಾಮದೇವನಯ್ದುಲರಂಬಿನ ಶಕ್ತಿಗಳುಮನೊಂದುಮಾಡಿ ಲೋಕಮೆಲ್ಲಂ ಮರುಳ್ಮಾಡಲೆಂದು ಪೆಣ್ಮಾಡಿದನಕ್ಕುಮೆಂದು ಮತ್ತಮಾಕೆಯ ನೋಡಿದ ನೋಟಮಂ ಭಾವಿಸಿ-

ಜ್ಞಾನಶೂನ್ಯನಾದಂತೆ ಹಲುಬಿ ಹಂಬಲಿಸಿ ಪುನಃ ಹಾವ, ಭಾವ, ವಿಳಾಸ, ವಿಭ್ರಮ, ಕಟಾಕ್ಷ ದೃಷ್ಟಿಗಳು ಮನಸ್ಸನ್ನು ಒಲಿಸಿಯೂ ಎದೆಯನ್ನು ಕಲಕಿಯೂ ಮನ್ಮಥನೆಂಬ ಆನೆಯಿಂದ ಕೋಳಾಹಳ ಮಾಡಲ್ಪಟ್ಟ ಮನಸ್ಸುಳ್ಳವನಾಗಿ ೭೫. ಲೋಕವನ್ನೇ ಸೃಷ್ಟಿಸಿದ ಬ್ರಹ್ಮನು ಈ ಕನ್ಯೆಯನ್ನು ಸೃಷ್ಟಿಸಿರಲಾರ; ಇಷ್ಟು ಕಾಂತಿಯುಕ್ತಳಾದ ಈ ಕನ್ಯೆಯನ್ನು ಮನ್ಮಥನೆಂಬ ಬ್ರಹ್ಮನು ಸೃಷ್ಟಿಸುವಾಗ ಚಂದ್ರ, ಮಲಯಮಾರುತ, ಶ್ರೀಗಂಧ, ತಾವರೆ, ಸಿಹಿಮಾವು, ಮಲ್ಲಿಗೆ ಇವುಗಳನ್ನು ತನಗೆ ತೃಪ್ತಿಯಾಗುವವರೆಗೆ ಒಟ್ಟುಗೂಡಿಸಿ ಪ್ರೀತಿಯಿಂದ ಅಮೃತದಲ್ಲಿ ನೆನೆಯಿಸಿ ಅವಳನ್ನು ಸೃಷ್ಟಿಸಿರಬೇಕು. ವ|| ಹಾಗಿಲ್ಲದ ಪಕ್ಷದಲ್ಲಿ ಈ ಕಾಂತೆಯನ್ನು ಬ್ರಹ್ಮನು ಮಾಡುವರೆ ಬೆಟ್ಟದಾವರೆಯ ಎಸಳುಗಳನ್ನು ಅಮೃತರಸದಲ್ಲಿಯೂ ಶೃಂಗಾರರಸದಲ್ಲಿಯೂ ನೆನೆಯಿಸಿ ರಸವಿದ್ಯೆಯಿಂದ ಸಿದ್ಧವಾಗಿರುವ ಚಿನ್ನದ ಬಳ್ಳಿಯಂತಿರುವ ಮೈಯನ್ನೂ ಕಪ್ಪಗಿರುವ ತಲೆಗೂದಲನ್ನೂ ಹವಳದಂತಿರುವ ತುಟಿಯನ್ನು ಮುತ್ತಿನಂತಿರುವ ಹಲ್ಲನ್ನೂ ಎಳೆನೀಲದಂತಿರುವ ತೆಳುವಾದ ಉಗುರುಗಳನ್ನೂ ಧೂಪದ ವಾಸನೆಯಿಂದ ಕೂಡಿದ ಉಸಿರನ್ನೂ ಸೀತಾದೇವಿಯ ಸಹನ ಸ್ವಭಾವವನ್ನೂ ಗೌರೀದೇವಿಯ ಶೃಂಗಾರವನ್ನೂ ಮನ್ಮಥನ ಮನೋಮಥನ (ಮನಸ್ಸನ್ನು ಕಲಕುವಿಕೆ) ಮದನ (ಕಾಮೋದ್ರೇಕವನ್ನುಂಟುಮಾಡುವಿಕೆ) ಮೋಹನ (ಪರವಶವನ್ನಾಗಿಸುವಿಕೆ) ಸಂತಾಪನ (ದುಃಖವನ್ನುಂಟುಮಾಡುವಿಕೆ) ವಶೀಕರಣ (ತನ್ನದನ್ನಾಗಿ ಮಾಡಿಕೊಳ್ಳುವಿಕೆ) ಎಂಬ ಅಯ್ದು ಪುಷ್ಪಬಾಣಗಳ ಶಕ್ತಿಗಳನ್ನು ಒಂದುಗೂಡಿಸಿ ಲೋಕವನ್ನೆಲ್ಲ ಹುಚ್ಚು ಮಾಡುವುದಕ್ಕೋಸ್ಕರ ಸ್ತ್ರೀಮೂರ್ತಿಯನ್ನಾಗಿ ಮಾಡಿರಬೇಕು ಎಂದು ಭಾವಿಸಿ ಪುನಃ ಆಕೆಯ ನೋಟದ ನೋಟವನ್ನು ಮನಸ್ಸಿನಲ್ಲಿ

ಚಂ॥ ನೆಱೆಗೊಳೆ ಗಾಡಿ ಸೋಲ್ಪ ಬಗೆ ಬರ್ಪುದುಮಾನೆ ದಲಂದು ದಂತಿಯಂ
ನಿಱಿಸಿ ಮರಲ್ದು ನೋಡುವುದುಮೆನ್ನುಮನಾ ಸತಿ ಸೋಲದತ್ತ ಮು ।
ತ್ತೆಱಗಿ ಬಲಿಲ್ದು ಜೋಲ್ದಳಿಪಿ ನೋಡಿದಳಿಂತಲೆ ಸತ್ತ ಪೊತ್ತ ಕ
ಣ್ಣಱಿಯದ ಬೆಳ್ಳನಲ್ಲೆನಱಿದೆಂ ಧವಳಾಕ್ಷಿಯ ನೋಟದಂದಮಂ ॥ ೭೬

ಹರಿಣೀಪ್ಲುತ ॥ ದಳಿತ ಕಮಲಚ್ಛಾಯಾಟೋಪಂ ಮನೋಜ ರಸ ಪ್ರಭಾ
ವಳಯ ನಿಳಯಂ ಪ್ರೋದ್ಯದ್ಭ್ರೂವಿಭ್ರಮಂ ಮುಕುಳೀಕೃತಂ ॥
ಲಳಿತ ಮಧುರಂ ಲಜ್ಜಾಲೋಳಂ ಸ್ಮರಾಕುಳಿತಂ ಮನಂ
ದಳಿತಮುಪಸನ್ಮುಗ್ಧಂ ಸ್ನಿಗ್ಧಂ ವಿಳೋಕನಮೋಪಳಾ ॥ ೭೭

ಚಂ॥ ಉಡಮೊಗಮೆಂಬ ತಾವರೆಯ ನೀಳ್ದೆಸಳೊಳ್ ಮಱಿದುಂಬಿ ಪಾಯ್ದೊಡಂ
ಬಡನೊಳಕೊಂಡು ಕಣ್ಮಲರ ಬೆಳ್ಪುಗಳಾಲಿಯ ಕಪ್ಪಿನೊಳ್ ಪೊದ ।
ಳ್ದೊಡನೊಡನೋಡುವಪ್ಪೆನಗೆ ಸಂತಸಮಂ ಮುಳಿಸಕ್ಕೆ ಮಾಡ್ದಿದೀ
ನಡೆಗಿಡೆ ಸತ್ವಮಂ ತಮಮುಮಂ ಕಡೆಗಣ್ಣೊಳೆ ಕಂಡೆನೋಪಳಾ॥ ೭೮

ಚಂ॥ ಒದವಿದ ಬೇಟವಪ್ಪೊಡೆನಗತ್ತಳಗಂ ಬಗೆವೇೞ್ದೊಡೆನ್ನ ಮೇ
ಳದ ಕೆಳೆಯರ್ಕಳಿಲ್ಲವಳುಮಪ್ಪೊಡೆ ಜವ್ವನಮತ್ತೆ ನಾಣ ಕಾ ।
ಪದು ಪಿರಿದೋತು ಮಾತಡಕಲೊಂದಿದ ದೂದವರಿಲ್ಲ ನೆಟ್ಟನ
ಪ್ಪುದಱೆನದಿಂತರಣ್ಯರುದಿತಂ ವಲವೆನ್ನೊಲವಿಂದುವಕ್ತ್ರೆಯಾ ॥ ೭೯

ಭಾವಿಸಿಕೊಂಡು ೭೬. ಅವಳ ಸೌಂದರ್ಯವು ನನ್ನನ್ನು ಪೂರ್ಣವಾಗಿ ಆಕರ್ಷಿಸಿತು. ನಾನೇ ಆ ಆನೆಯನ್ನು ನಿಲ್ಲಿಸಿ (?) ಪುನಃ ಅವಳನ್ನು ನೋಡಿದೆನು. ಆ ಸ್ತ್ರೀಯು ನನ್ನನ್ನೂ ಪ್ರೇಮದ ಕಡೆಗೆ ಬಾಗಿಸಿ ತಾನೂ ನನಗೆ ಸೋತು ಪ್ರೀತಿಯಿಂದ ನೋಡಿದಳು. ಬೆಳ್ಳಗಿರುವ ಕಣ್ಣುಳ್ಳ ಆ ಸುಭದ್ರೆಯ ದೃಷ್ಟಿಯ ಮರ್ಮವನ್ನು ತಿಳಿಯದ ಜ್ಞಾನ ಶೂನ್ಯನಾದ ಬೆಪ್ಪನು ನಾನಲ್ಲ, ೭೭. ಪ್ರಿಯಳಾದ ಸುಭದ್ರೆಯ ನೋಟವು ಅರಳಿದ ಕಮಲದ ಬಣ್ಣವುಳ್ಳದ್ದು; ಪ್ರೇಮರಸದ ಕಾಂತಿಸಮೂಹಕ್ಕೆ ಆವಾಸಸ್ಥಾನವಾದುದು. ಎತ್ತಿದ ಹುಬ್ಬಿನ ವೈಭವವುಳ್ಳದ್ದು; ಮೊಗ್ಗಾಗಿ ಮಾಡಲ್ಪಟ್ಟುದು; ಸುಂದರವೂ ಮಧುರವೂ ಆದುದು; ಲಜ್ಜೆಯಲ್ಲಿ ಆಸಕ್ತವಾದುದು; ಮನ್ಮಥನಿಂದ ಬಾಧಿಸಲ್ಪಟ್ಟುದು; ಮನಸ್ಸನ್ನು ಸೀಳಿರುವುದು; ಮುಗ್ಧತೆಯಿಲ್ಲದುದು (ಸರಳವಾದುದು) ನಯವಾದುದು. ೭೮. ಬಾಗೆಯ ನಕ್ಷತ್ರದ ಮುಖ ಎಂಬಂತಿರುವ ಅವಳ ಮುಖವೆಂಬ ತಾವರೆಯ ದೀರ್ಘವಾದ ಎಸಳುಗಳಲ್ಲಿ ಮರಿದುಂಬಿಯು ಹೋಗಿ ಸೇರಿ ಸಮನ್ವಯ ಗೊಂಡಿರುವಂತೆ ಹೂವಿನಂತಿರುವ ಅವಳ ಕಣ್ಣಿನ ಬಿಳಿಯ ಬಣ್ಣವು ಗುಡ್ಡೆಯ ಕಪ್ಪು ಬಣ್ಣದಲ್ಲಿ ಹೊಂದಿಕೊಂಡು ಅವಳನ್ನೇ ನೋಡುತ್ತಿರುವ ನನಗೆ ಸಂತೋಷವನ್ನೂ ದುಃಖವನ್ನೂ ಸ್ಥಿರೀಕರಿಸಿರುವುದರಿಂದ ನಾನು ಅವಳ ಕಡೆಗಣ್ಣಿನಲ್ಲಿ ಸತ್ವತಮೋಗುಣ ಗಳನ್ನು ಏಕತ್ರ ನೋಡುತ್ತಿದ್ದೇನೆ.* ೭೯. ನನಗೆ ಈಗ ಉಂಟಾಗಿರುವ

---

* (ಈ ಪದ್ಯದ ಅನ್ವಯವೂ ಅರ್ಥವೂ ಕ್ಲಿಷ್ಟವಾಗಿದೆ)

ವ|| ಎಂದಿಂತು ನಲ್ಲಳಂ ನೆನೆದು ಕಣ್ಗಾಪನೆ ಕಾದು ಚಿಂತಾಸಮುದ್ರಾಂತರ ಪರಿವೃತನಾಗಿ ಸೈರಿಸಲಾಱದೆ ಪೊಱಲಂ ತೊೞಲ್ದು ನೋೞ್ಪ ಬಗೆದಂದು ರಾಜಮಂದಿರದಿಂ ಪೊಱಮಟ್ಟು ಬರೆ ತನ್ನಂ ಕಾಣಲೊಡಮಱಿದು ನುಡಿಯಿಸಿ ಮೆಚ್ಚ ಮೇಳದ ನಾಗರಿಕ ವಿಟ ವಿದೂಷಕ ಪೀಠಮರ್ದಕರ್ಕಳ್ವೆರಸು ಕಾಮದೇವನೋಲಗಕ್ಕೆ ಬರ್ಪಂತೆ ಸೂಳೆಗೇರಿಯೊಳಗನೆ ಬರ್ಪುದುಮಲ್ಲಿ-

ಮ|| ಮೃಗಭೂಯುದ್ಧ ವಿಳಾಸಿನೀ ಕಬರಿಕಾ ಬಂಧಂಗಳಂ ಪೊತ್ತು ಮ
ಲ್ಲಿಗೆಯೊಳ್ ಭಾವಿಸಿ ಧೂಪದೊಳ್ ಪೊರೆದು ತತ್ಕಾಂತಾ ರತಿ ಸ್ವೇದ ಬಿಂ ।
ದುಗಳೊಳ್ ನಾಂದು ಕುರುಳ್ಗಳೊಳ್ ಸುೞಿದು ಮುಂದೊಂದಿರ್ದ ಸೌಭಾಗ್ಯ ಘಂ
ಟೆಗಳೊಂದಿಂಚರದೊಳ್ ಪಳಂಚ ಸುೞಿದತ್ತಂದೊಂದು ಮಂದಾನಿಳಂ ॥ ೪೦

ವ|| ಆಗಳಾಱುಂ ಋತುಗಳ ಪೂಗಳನೊಂದುಮಾಡಿ ಪೂವಿನಂಬುಗಳಂ ಪಣ್ಣಲೆಂದು ಕಾಮದೇವಂ ಮಾಡಿದೋಜನ ಸಾಲೆಯಿರ್ಪಂತಿರ್ದ ಪೂವಿನ ಸಂತೆಯೊಳ್ ವಸಂತಕಾಂತೆಯರಂತೆ-

ಪ|| ಎತ್ತಿದ ತೋಳ ಮೊತ್ತಮೊದಲಂಗಜ ಲಂಪಟ ವಿದ್ದೆಗೆತ್ತಿದಂ
ತೆತ್ತಮಪೂರ್ವಮಾಗೆ ಪೊಸವಾಸಿಗಮಂಗಜ ಚಕ್ರವರ್ತಿಗೆಂ ।
ದೆತ್ತಿದ ಮೀನಕೇತನಮನೊತ್ತರಿಸುತ್ತಿರೆ ಚಲ್ಲವಾಡಿ ಪೂ
ವೆತ್ತುವ ಮಾಲೆಗಾರ್ತಿಯರನೆಂದರಿಕೇಸರಿ ನಿಂದು ನೋಡಿದಂ ॥ ೪೧

ಪ್ರೇಮವಾದರೋ ಸಹಿಸಲಶಕ್ಯವಾದುದು. ಮನಸ್ಸನ್ನವಳಿಗೆ ತಿಳಿಸೋಣವೆಂದರೆ ಆಪ್ತ ಸ್ನೇಹಿತರಿಲ್ಲ; ಸುಭದ್ರೆಯಾದರೋ ಯವ್ವನದಿಂದ ಮದಿಸಿರುವವಳು; ಅವಳಿಗೆ ಲಜ್ಜೆಯ ತಡೆ ವಿಶೇಷವಾಗಿದೆ. ಪ್ರೀತಿಸಿ ಸಂವಾದಸರಣಿಯನ್ನುಂಟು ಮಾಡೋಣವೆಂದರೆ ಮಧ್ಯವರ್ತಿಗಳಾದ ಸಖಿಯರಿಲ್ಲ. ಆದುದರಿಂದ ಸುಭದ್ರೆಗೆ ಸಂಬಂಧಿಸಿದ ನನ್ನ ಪ್ರೇಮವು ನಿಜವಾಗಿಯೂ ಕಾಡಿನಲ್ಲಿ ಅತ್ತಂತೆಯೇ ಆಗಿದೆ. ವ|| ಹೀಗೆ ಅರ್ಜುನನು ಪ್ರಿಯಳನ್ನು ಜ್ಞಾಪಿಸಿಕೊಂಡು ಅವಳು ತನ್ನನ್ನು ನೋಡುವುದನ್ನು ನಿರೀಕ್ಷಿಸುತ್ತಾ ಚಿಂತಾಸಮುದ್ರದ ಮಧ್ಯದಿಂದ ಸುತ್ತುವರಿಯಲ್ಪಟ್ಟವನಾಗಿ ಸಹಿಸಲಾರದೆ (ಮನಃಶಾಂತಿಗಾಗಿ) ನಗರವನ್ನಾದರೂ ಸುತ್ತ ನೋಡಿ ಬರೋಣವೆಂದು ಮನಸ್ಸು ಮಾಡಿದನು. ಅರಮನೆಯಿಂದ ಹೊರಟು ಬರುತ್ತಿದ್ದಂತೆಯೇ ತನ್ನನ್ನು ಕಂಡು ತಕ್ಷಣವೇ ಗುರುತಿಸಿ ಮಾತನಾಡಿ ಮೆಚ್ಚಿದ ಜೊತೆಗಾರರಾದ ನಾಗರಿಕ (ಜಾಣನಾದ ಪಟ್ಟಣದವನು) ವಿಟ (ಸ್ತ್ರೀಲೋಲರಾದ ರಾಜಕುಮಾರರ ಸ್ನೇಹಿತ) ವಿದೂಷಕ (ಹಾಸ್ಯಗಾರ) ಪೀಠಮರ್ದಕ (ಸ್ತ್ರೀ ಸಂಪಾದನೆಯಲ್ಲಿ ರಾಜಕುಮಾರರಿಗೆ ಸಹಾಯ ಮಾಡುವವನು) ರೊಡಗೂಡಿ ಮನ್ಮಥನ ಸಭಾಸ್ಥಾನಕ್ಕೆ ಬರುವಂತೆ ಸೂಳೆಗೇರಿಯೊಳಭಾಗದಲ್ಲಿ ಬಂದನು. ೪೦. ಅಲ್ಲಿಯ ಸುಂದರ ಸ್ತ್ರೀಯರ ತುರುಬಿನಲ್ಲಿ ವಿಶೇಷವಾಗಿ ಲೇಪಿಸಿಕೊಂಡಿದ್ದ ಕಸ್ತೂರಿಯ ಕಂಪನ್ನು ಧರಿಸಿ ಮಲ್ಲಿಗೆಯ ಹೂವಿನ ಸುಗಂಧದಲ್ಲಿ ಸೇರಿಕೊಂಡು ಧೂಪಗಂಧದಲ್ಲಿ ವ್ಯಾಪಿಸಿ ಆ ಸ್ತ್ರೀಯರ ರತಿಕ್ರೀಡೆಯಿಂದಾದ ಬೆವರ ಹನಿಯಲ್ಲಿ ತೊಯ್ದು ಮುಂಗುರುಳುಗಳಲ್ಲಿ ಸುತ್ತಾಡಿ ವೇಶ್ಯಾಗೃಹದ ಮುಂದೆ ಕಟ್ಟಿದ ಇಂಪಾದ ಘಂಟಾನಾದವನ್ನು ತಗುಲಿ ಒಂದು ಮಂದಮಾರುತವು

ವ॥ ನೋಡಿ ನಾಡಾಡಿಯಲ್ಲದಾಕೆಗಳ ಜೋಡೆಗೆಯ್ತಂಗಳಂ ಕಂಡಿದು ಮನೆಯಾಣ್ಮನಂ ಮಾರುವಂದಮಲ್ಲದೆ ಪೂ ಮಾರುವಂದಮಲ್ತೆಂದು ಮುಗುಳ್ನಗೆ ನಗುತುಂ ಬರ್ಪನೊಂದೆಡೆಯೊಳ್ ಮನೆಯಾಣ್ಮನ ಕಣ್ಣೆವೆಯೆ ಕಾಂಡಪಟವಾಗೆಯುಂ ಬಗೆಯಾಣ್ಮನ ಕಣ್ಣೆವೆಯೆ ದೂಡವಿಯಾಗೆಯುಂ ಬಗೆದೆಡೆಯನೆಯ್ದಿ ಬಗೆದ ಬಗೆಯಂ ಬಗೆದಂತೆ ತೀರ್ಚೆ ಪೋಪ ಜೋಡೆಯರಂ ಕಂಡು ವಿಕ್ರಮಾರ್ಜುನನಿಂತೆಂದಂ–

ಮ॥ ಕುಱುಪಂ ಪುರ್ವಿನ ಜರ್ವೆ ತೋಱೆ ಬಗೆಯಂ ಕಣ್ಸನ್ನೆಗಳ್ ಪೇೞೆ ತ
ನ್ನೆಱಕಂ ತನ್ನ ಮನಕ್ಕೆ ಕೂಡೆ ಕೆಲಕಂ ಗಂಡಂಗಮೊಳ್ಪಂ ಕರಂ ।
ಮೆಱೆವಾ ಪ್ರೌಢೆಯೆ ಜೋಡೆಯಕ್ಕುಮೆಡೆಯೊಳ್ ಮೂಂಟಿಂದೆ ದೂಂಟಿಂಗೆ ಪೆ
ರ್ಮೆಱೆಯಂ ಪೊಯ್ಸಿ ಕೆಲಕ್ಕೆ ನಾಣ್ಚಿ ತಲೆಗುತ್ತಿರ್ಪಾಕೆಯೇಂ ಜೋಡೆಯೇ ॥ ೮೨

ಉ॥ ಕೂರಿದುವಪ್ಪ ಕಣ್ಮಲರ್ಗಳಳ್ಕಿರ್ದೆಯೊಳ್ ತಡಮಾಡೆ ತಾಮೆ ಕಣ್
ಪೇರಿಸೆ ಪುರ್ವು ನಾಲಗೆವೊಲಾಗೆ ಮನಂಬುಗಿಸಲ್ಕೆ ಬಲ್ಲೊಡಾ ।
ಜಾರೆಯೆ ಜಾರೆ ಪಾಱೆನೆ ಕರಂ ಪಿರಿದುಂ ಗಱಿಪುತ್ತುಮಿರ್ಪಳಂ
ಸಾರಿಕೆಯೆಂಬರಲ್ಲದಭಿಸಾರಿಕೆಯೆಂಬರೆ ಬುದ್ಧಿಯುಳ್ಳವರ್ ॥ ೮೩

ಸುಳಿದಾಡಿತು. ವ॥ ಆಗ ಆರು ಋತುಗಳ ಹೂವುಗಳನ್ನೂ ಒಟ್ಟುಗೂಡಿಸಿ ತನ್ನ ಪುಷ್ಪಬಾಣಗಳನ್ನು ಸಿದ್ಧಪಡಿಸಬೇಕೆಂದು ಕಾಮದೇವನು ಮಾಡಿದ ಅಕ್ಕಸಾಲೆಯ ಮನೆಯ ಹಾಗಿದ್ದ ಹೂವಿನ ಸಂತೆಯು ಕಂಡಿತು. ಹೂವಿನ ಸಮೂಹದ ಮಧ್ಯೆ ಇರುವ ವಸಂತ ಋತುವಿನ ಅಧಿದೇವತೆಯಂತೆ ಮಾಲೆಗಾತಿಯರು ೮೧. ಎತ್ತಿದ ಬಾಹುಮೂಲವು ಮನ್ಮಥನು ಗಾಳಿಪಟವಾಡಿಸುವಂತೆ ಆಡಿಸಲು ಎತ್ತಿದ ಅಪೂರ್ವ ಸೌಂದರ್ಯದಿಂದ ಕೂಡಿರಲು ಹೊಸದಾಗಿ ಕಟ್ಟಿದ ಹಾರವು ಮನ್ಮಥ ಚಕ್ರವರ್ತಿ ಗೆಂದೆತ್ತಿದ ಮೀನಧ್ವಜವನ್ನು ತಿರಸ್ಕರಿಸುತ್ತಿರಲು ಸರಸಸಲ್ಲಾಪಗಳಿಂದ ಹೂವನ್ನು ಎತ್ತಿ ತೋರಿಸುತ್ತಿರುವ ಅವರನ್ನು ಅರಿಕೇಸರಿಯು ನಿಂತು ನೋಡಿದನು. ವ॥ ಸಾಮಾನ್ಯ ರಲ್ಲದ ಅವರ ಜಾರಕೃತ್ಯವನ್ನು ಕಂಡು ಇದು ಮನೆಯ ಗಂಡನನ್ನು ಮಾರುವ ರೀತಿಯಲ್ಲದೆ ಹೂವನ್ನು ಮಾರುವ ರೀತಿಯಲ್ಲವೆಂದು ಹುಸಿನಗೆಯನ್ನು ನಗುತ್ತ ಮುಂದೆ ನಡೆದನು. ಒಂದು ಕಡೆಯಲ್ಲಿ ಮನೆಯೊಡೆಯನ ಕಣ್ಣರೆಪ್ಪೆಯನ್ನು ತೆರೆಯನ್ನಾಗಿಯೂ ಮನಮೊಲವಿನ ಮಿಂಡನ ಕಣ್ಣ ದೃಷ್ಟಿಯನ್ನೇ ಸಖಿಯನ್ನಾಗಿಯೂ ಭಾವಿಸಿಕೊಂಡು ಸಂಕೇತಸ್ಥಳವನ್ನು ಸೇರಿ ಇಷ್ಟಾರ್ಥವನ್ನು ಯೋಜಿಸಿದಂತೆಯೇ ತೀರಿಸಿಕೊಂಡು ಹೋಗುವ ಜಾರೆಯರನ್ನು ಕಂಡು ವಿಕ್ರಮಾರ್ಜುನನು ಹೀಗೆಂದನು– ೮೨. ತಮ್ಮ ಸಂಕೇತಸ್ಥಳವನ್ನು ಹುಬ್ಬುಹಾರಿಸಿ ಘೋಷಿಸಲೂ ತಮ್ಮ ಮನಸ್ಸಿನ ಬಗೆಯನ್ನು (ಇಷ್ಟಾರ್ಥವನ್ನು) ಕಣ್ಣಿನ ಸನ್ನೆಗಳಿಂದಲೂ ಪ್ರಕಾಶಪಡಿಸುತ್ತ ತನ್ನ ಪ್ರೀತಿಯು ತನ್ನ ಮನಸ್ಸಿಗೆ ತೃಪ್ತಿಯಾಗಿರಲು ತನ್ನ ಪಕ್ಕದವರಲ್ಲಿಯೂ ತನ್ನ ಗಂಡನಲ್ಲಿಯೂ ಸದ್ಭಾವವನ್ನೂ ಪ್ರಕಾಶಪಡಿಸುತ್ತಿರುವ ಆ ಚತುರಳೇ ನಿಜವಾದ ಜಾರೆಯಾಗುವವಳು. ಪಕ್ಕಪಕ್ಕಗಳಲ್ಲಿ ಹೆಜ್ಜೆ ಹೆಜ್ಜೆಗೂ ಡಂಗುರ ಬಡಿಯಿಸಿಕೊಂಡು ಅಕ್ಕಪಕ್ಕದವರಿಗೆ ನಾಚಿಕೊಂಡು ತಲೆತಗ್ಗಿಸುವಾಕೆ ಜಾರೆಯಾಗಬಲ್ಲಳೇ? ೮೩. ತನ್ನ ತೀಕ್ಷ್ಣವಾದ ಕಣ್ಣೆಂಬ ಹೂವುಗಳು ವಿಟನ ದುರ್ಬಲವಾದ ಎದೆಯನ್ನು ನಿಧಾನವಾಗಿ ತನ್ನಷ್ಟಕ್ಕೆ ತಾನೆ

ವ॥ ಎಂದು ಪಾಣ್ಬರಂಕುಸನಾ ಪಾಣ್ಬೆಯರ ಗೆಯ್ವ ಗೆಯ್ತಂಗಳುಮಂ ತೋರ್ಪ ಸನ್ನೆಗಳುಮಂ ಆಡುವ ಮಿಟ್ಟುಗೊಡ್ಡಂಗಳುಮಂ ಕಂಡು ಚೋದ್ಯಂಬಟ್ಟು-

ಮ॥ ಅಲರ್ಗಣ್ಗೊಳ್ ಸ್ಮರನಿರ್ದನಕ್ಕುಮೆಡೆವ್ರೋಪಾ ಜೋಡೆ ಕಾಮಂಗೆ ಕಾ
ದಲೆಯಕ್ಕುಂ ಪೆಜತೇನೊ ಪಾರದರದೊಳ್ ಸಂಸಾರ ಸರ್ವಸ್ವಮಂ ।
ಗೆಲೆವಂದಿಂಪಿನಲಂಪನಾಳ್ದ ಸವಿಯುಂಟಕ್ಕುಂ ಸಮಂತಾವಗಂ
ತಲೆಯಂ ಮೂಗುಮನೊತ್ತೆಯಿಟ್ಟು ನೆರೆವಂತುಂತೇನವರ್ ಗಾಂಪರೇ ॥೮೪

ವ॥ ಎನುತ್ತುಂ ಬರ್ಪನೊಂದೆಡೆಯೊಳ್ ಮನಸಿಜನ ನಡಫಿದ ಜಂಗಮಲತೆಗಳಂತೆ ಮನೋಜನ ಕಾಪಿನ ಕಲ್ಪಲತೆಗಳಂತೆ ಮನೋಜನೆಂಬ ದೀವಗಾಱನ ಪುಲ್ಲೆಗಳಂತೆ ತಂತಮ್ಮ ಮನೆಯ ಮುಂದಣ ಪಚ್ಚೆಯ ಜಗುಲಿಗಳೊಳಂ ಮಣಿಮಯ ಮತ್ತವಾರಣಂಗಳೊಳಮಳವಿಗೞಿದ ವಿಳಾಸಂಗಳೊಳಂ ತಂಡತಂಡದೆ ನೆರೆದಿರ್ದ ಪೆಂಡವಾಸದೊಳ್ವೆಂಡಿರಂ ಕಂಡು-

ಚಂ॥ ಮನಸಿಜನೀಕೆಗಂಡು ರತಿಯಂ ಬಿಸುಟಂ ಹರನೀಕೆಗಂಡು ನೂ
ತನ ಗಿರಿಜಾತೆಯಂ ತೊಱೆದನಾ ನರಕಾಂತಕನೀಕೆಗಂಡು ತೊ ।
ಟ್ಟನೆ ನಿಜಲಕ್ಷ್ಮಿಯಂ ಮಱೆದನೆಂಬ ನೆಗೞ್ತೆಯುನಪ್ಪುಕೆಯ್ಯು ಜ
ವ್ವನದ ವಿಳಾಸದಂಡದ ಬೆಡಂಗಿನ ಪೆಂಡಿರೆ ಪೆಂಡಿರಲ್ಲಿಯಾ ॥ ೮೫

ಚಲಿಸುವಂತೆ ಮಾಡಿ ಹುಬ್ಬುಗಳು ನಾಲಗೆಯಂತೆ ಮಾತನಾಡಿಸಿ ಅವನ ಮನಸ್ಸನ್ನು ಪ್ರವೇಶಿಸುವಂತೆ ಮಾಡಲು ಬಲ್ಲವಳು ನಿಜವಾದ ವೇಶ್ಯೆ. ಜಾರತ್ವವನ್ನು ಕುರಿತು ವಿಶೇಷವಾಗಿ ಹರಟುತ್ತಿರುವಳನ್ನು ಗಣಿಯೆನ್ನುವರಲ್ಲದೆ ಅಭಿಸಾರಿಕೆ (ಪ್ರಿಯವನ್ನು ರಹಸ್ಯವಾಗಿ ಹುಡುಕಿಕೊಂಡು ಹೋಗುವ ಜಾತಿ)ಯೆಂದು ಬುದ್ಧಿಯುಳ್ಳವರು ಅನ್ನುತ್ತಾರೆಯೆ? ವ॥ ಎಂದು ಜಾರೆಯರಿಗೆ ಅಂಕುಶಪ್ರಾಯನಾದ ಅರಿಕೇಸರಿಯು ಆ ಜಾರೆಯರು ಮಾಡುವ ಕಾರ್ಯವನ್ನೂ ತೋರುವ ಸನ್ನೆಗಳನ್ನೂ ಆಡುವ ಮೃತ್ಯುವಿನಂತಹ ಚೇಷ್ಟೆಯ ಮಾತುಗಳನ್ನೂ ಕಂಡು ಆಶ್ಚರ್ಯಪಟ್ಟು ೮೪. (ಜಾರಸ್ತ್ರೀಯರ) ಹೂವಿನಂತಿರುವ ಕಣ್ಣಿನಲ್ಲಿ ಮನ್ಮಥನಿದ್ದಿರಬೇಕು. ಸಂಕೇತಸ್ಥಾನವನ್ನು ಹುಡುಕಿಕೊಂಡು ಹೋಗುವ ಆ ಜಾರೆಯರು ಮನ್ಮಥನ ಪ್ರೀತಿಗೆ ಪಾತ್ರರಾಗಿದ್ದಿರಬೇಕು. ಹಾದರದಲ್ಲಿ ಸಂಸಾರಸಾರಸರ್ವಸ್ವವನ್ನೂ ಮೀರಿರುವ ಸುಖದ ಸೊಂಪನ್ನು ಹೊಂದಿರುವ ರುಚಿಯಿದ್ದಿರಬೇಕು. ಹಾಗಿಲ್ಲದ ಪಕ್ಷದಲ್ಲಿ ಯಾವಾಗಲೂ ಅವರು ತಲೆಯನ್ನೂ ಮೂಗನ್ನೂ ಒತ್ತೆಯಿಟ್ಟು ಸುಮ್ಮನೆ ವಿಟರಲ್ಲಿ ಕೂಡುವಷ್ಟು ದಡ್ಡರೆ? ವ॥ ಎಂದುಕೊಂಡು ಬರುತ್ತಿದ್ದವನು ಒಂದು ಸ್ಥಳದಲ್ಲಿ ಮನ್ಮಥನು ನಾಕಿದ ಜಂಗಮಲತೆಗಳಂತೆಯೂ ಕಾಮನ ರಕ್ಷಣೆಯಲ್ಲಿರುವ ಕಲ್ಪಲತೆಗಳಂತೆಯೂ ಮನೋಜನೆಂಬ ಬೇಟೆಗಾರನ ದೀಹದ (ಒಂದು ಮೃಗವನ್ನು ಹಿಡಿಯುವುದಕ್ಕಾಗಿ ಉಪಯೋಗಿಸುವ ಮತ್ತೊಂದು ಮೃಗ) ಹುಲ್ಲೆಯಂತೆಯೂ ತಮ್ಮ ತಮ್ಮ ಮನೆಯ ಮುಂದಿನ ಪಚ್ಚೆಯ ರತ್ನದಿಂದ ನಿರ್ಮಿತವಾದ ಜಗಲಿಗಳಲ್ಲಿಯೂ ರತ್ನಖಚಿತವಾದ ಮನೆಯ ಮುಂದಿನ ಕೈಸಾಲೆಗಳಲ್ಲಿಯೂ ಅಳತೆಮೀರಿದ (ಅತ್ಯಧಿಕವಾದ) ವೈಭವಗಳಿಂದ ಕೂಡಿ ಗುಂಪು ಗುಂಪಾಗಿ ಕೂಡಿದ್ದ ವೇಶ್ಯಾವಾಟಿಯ (ಸೂಳೆಗೇರಿಯ) ಉತ್ತಮ ಸ್ತ್ರೀಯರನ್ನು ನೋಡಿದನು. ೮೫. ಇವಳ ಸೌಂದರ್ಯವನ್ನು ನೋಡಿ

ತಿಸರಮಿದಾವುದಕ್ಕ ಧರಣೇಂದ್ರನ ಕೊಟ್ಟುದು ವಜ್ರದಾಳಿ ಕ
ಣ್ಗೆಸೆವುದಿದಾವುದೊಲ್ಲದುಟಿದಟ್ಟಿದೊಡಂದು ಕುಬೇರನಿತ್ತುದೆ ।
ಕ್ಕಸರಮಿದಾವುದಾಂ ಮುಳಿಯೆ ಕಾಲ್ವಿಡಿದಿಂದ್ರನ ಕೊಟ್ಟುದಲ್ತೆ ಪೋ
ಪುಸಿಯದಿರೆಂಬ ಸೂಳೆಯರೆ ಸೂಳೆಯರಲ್ಲಿಯ ಪೆಂಡವಾಸದಾ ॥ ೮೬

ವ॥ ಎಂಬುದಂ ಕೇಳುತ್ತುಂ ಬರೆವರೆ ಮತ್ತಮಾ ಪೆಂಡವಾಸಗೇರಿಯೊಳಗೆ ಸೌಭಾಗ್ಯದ ಭೋಗದ ಚಾಗದ ರೂಪುಗಳ್ ಮಾನಸರೂಪಾದಂತೆ-

ಉ॥ ಸೀಗುರಿ ಚಾಪಿ ನಾಣ್ಗುಣಿದು ಮೆಟ್ಟುವ ಗುಜ್ಜರಿಗಟ್ಟಿ ಬೀರಮಂ
ಚಾಗದ ಪೆಂಪುಮಂ ಪೊಗಟ್ಟಿ ಸಂಗಡವರ್ಪವರೊಳ್ಪಿನಿಂದೆ ಮೆ ।
ಯ್ಯೋಗಮಳುಂಬಮಪ್ಪ ಬಿಯಮಾಗೆರ್ದೆಗಂ ಬರೆ ಬರ್ಪ ಪಾಂಗಗು
ರ್ವಾಗಿರೆ ಚೆಲ್ವನಾಯ್ತುರಬೊಜಂಗರ ಲೀಲೆ ಸುರೇಂದ್ರ ಲೀಲೆಯಿಂ ॥ ೮೭

ವ॥ ಮತ್ತಮಲ್ಲಿ ಕೋಟಿ ಪೊಂಗೆ ಘಂಟೆಯಲುಗುವ ಕಿಱುಕುಳ ಬೊಜಂಗರುಮಂ ಸುಣ್ಣದೆಲೆಯನೊತ್ತೆಯಿಟ್ಟು ಮದದಾನೆಯುಮಂ ಮಾಣಿಕಮುಮನೊತ್ತೆವಿಡಿಸಲಟ್ಟುವ ಚಿಕ್ಕ

ಮನ್ಮಥನು (ತನ್ನ ಪ್ರಿಯಪತ್ನಿಯಾದ) ರತಿಯನ್ನೂ ಬಿಸುಟಿದ್ದಾನೆ. ಈಶ್ವರನ್ನು ಇವಳನ್ನು ನೋಡಿ ನೂತನವಧುವಾದ ಪಾರ್ವತಿಯನ್ನು ತೊರೆದಿದ್ದಾನೆ. ಆ ನರಕಾಸುರನಿಗೆ ಮೃತ್ಯುವಾದ ವಿಷ್ಣುವು ಇದ್ದಕ್ಕಿದ್ದ ಹಾಗೆ ತನ್ನ ಲಕ್ಷ್ಮಿಯನ್ನೂ ಮರೆತಿದ್ದಾನೆ ಎಂಬ ಪ್ರಸಿದ್ಧಿಯನ್ನು ಪಡೆದು ಯವ್ವನದ ವಿಳಾಸದ ಬೆಡಗಿನಿಂದ ಕೂಡಿದ ಸ್ತ್ರೀಯರೇ ಅಲ್ಲಿರುವ ಸ್ತ್ರೀಯರೆಲ್ಲ. ಮುಂದಿನ ಅವರ ಸಂಭಾಷಣೆಯು ಈ ರೀತಿಯಲ್ಲಿದ್ದಿತು. ೮೬. ಈ ಮೂರೆಳೆಯ ಹಾರವಾವುದಕ್ಕ? ಧರಣೇಂದ್ರನೆಂಬ ಸರ್ಪರಾಜನು ಕೊಟ್ಟುದು; ಕಣ್ಣಿಗೆ ಪ್ರಕಾಶಮಾನವಾಗಿರುವ ಈ ವಜ್ರದ ತಾಲಿ ಯಾವುದು? ನೀನು ಒಪ್ಪದೆ ತಿರಸ್ಕರಿಸಿ ಕಳುಹಿಸಲು ಆ ದಿನ ಕುಬೇರನು ಕೊಟ್ಟುದು. ಈ ಒಂದೆಳೆಯ ಸರ ಯಾವುದು? ನಾನು ಕೋಪಿಸಿಕೊಳ್ಳಲು ನನ್ನ ಕಾಲನ್ನು ಕಟ್ಟಿಕೊಂಡು ಇಂದ್ರನು ಕೊಟ್ಟುದಲ್ಲವೇ? ಹೋಗು ಸುಳ್ಳು ಹೇಳಬೇಡ ಎಂಬ ಪ್ರಸಿದ್ಧಿಯನ್ನು ಪಡೆದಿರುವ ಸೂಳೆಯರೇ ಆ ಸೂಳೆಗೇರಿಯ ಎಲ್ಲ ಕಡೆಯೂ. ವ॥ ಎನ್ನುವುದನ್ನು ಕೇಳುತ್ತ ಬರುತ್ತಿರಲು ಪುನಃ ಆ ಸೂಳೆಗೇರಿಯೊಳಗೆ ಸೌಭಾಗ್ಯದ, ಭೋಗದ, ತ್ಯಾಗದ ರೂಪಗಳು ಮನುಷ್ಯಾಕಾರವನ್ನು ತಾಳಿದಂತೆ - ೮೭. ಸೀಗುರಿಯೆಂಬ ಛತ್ರಿ, ಅಂಗರಕ್ಷಕರು, ನೆಗೆದು ಹಾರುತ್ತ ಬರುತ್ತಿರುವ ಗುರ್ಜರದೇಶದ ಕತ್ತೆ, ತಮ್ಮ ವೀರದ ಮತ್ತು ತ್ಯಾಗದ ವೈಭವವನ್ನು ಹೊಗಳುತ್ತ ಬರುತ್ತಿರುವ ಸಂಗಡಿಗರು, ಸರಿಯಾದ ರೀತಿಯಲ್ಲಿ ಮಾಡಿಕೊಂಡಿರುವ ದೇಹಾಲಂಕಾರ ಅತ್ಯತಿಶಯವಾದ ದ್ರವ್ಯವ್ಯಯ- ಇವು ಹೃದಯಸ್ಪರ್ಶಿಯಾಗಿರಲು ಆಶ್ಚರ್ಯಕರವಾದ ರೀತಿಯ ಠೀವಿಯಿಂದ ಬರುತ್ತಿರುವ ರಾಜವಿಟರ ಲೀಲೆಯು ದೇವೇಂದ್ರನ ಲೀಲೆಗಿಂತ ಸುಂದರವಾಗಿದ್ದಿತು. ವ॥ ಪುನಃ ಅಲ್ಲಿ ಕೋಟಿಹೊನ್ನುಗಳನ್ನು ಕೊಡುತ್ತೇವೆ ಎಂದು ಸೂಳೆಯರ ಮನೆಯ ಮುಂದಿನ ಗಂಟೆಯನ್ನು ಬಾರಿಸುವ ಸಾಮಾನ್ಯವಿಟರನ್ನೂ ಸುಣ್ಣದೆಲೆಯನ್ನು ಒತ್ತೆಯಿಟ್ಟು ಮದ್ದಾನೆಯನ್ನೂ ಮಾಣಿಕ್ಯವನ್ನೂ ಒತ್ತೆಯಾಗಿಡಲು ಹೇಳಿಕಳುಹಿಸುವ

**ಪೋರ್ಕುಳಿ ಬೊಜಂಗರುಮಂ ಕತ್ತುರಿ ಬಿಯಮಂ ಮೆಱೆದು ಕತ್ತುರಿಯೊಳ್ ಪೂೞ್ದು ಕತ್ತುರಿಮಿಗವಂತಿರ್ಪ ಕತ್ತುರಿ ಬೊಜಂಗರುಮಂ ನೋಡಿ ಪೊೞಲ ಬೊಜಂಗರ ಬಿಯದಳವಿಗೆ ಮನದೊಳ್ ಮೆಚ್ಚುತ್ತುಂ ಬರ್ಪನೊಂದೆಡೆಯೊಳ್ ಕಳ್ಗೊಳಮಮರ್ದಿನೊಳಂ ಪುಟ್ಟಿದ ಪೆಂಡಿರಂತೆ ಸೊಗಯಿಸುವ ಪಲರುಮೊಳ್ವೆಂಡಿರೊಂದೆಡೆಯೊಳಿರ್ದು ಕಾಮದೇವನೆಂಬ ಬಳಮರ್ದುಕಾಱನ ಮಾಡಿದ ಮರ್ದಿನಂತೆ ಬಳೆದು ದಳಂಬಡೆದು ಮೂನೂಱಱುವತ್ತು ಜಾತಿಯ ಕಳ್ಗಳಂ ಮುಂದಿಟ್ಟು ಮಧುಮಂತ್ರದಿಂ ಮಧುದೇವತೆಗಳನರ್ಚಿಸಿ ಪೊನ್ನ ಬೆಳ್ಳಿಯ ಪದ್ಮರಾಗದ ಪಚ್ಚೆಯ ಗಿಳಿಯ ಕೋಗಿಲೆಯ ಕೊಂಚೆಯಂಚೆಯ ಕುಂತಳಿಕೆಯ ಮಾಟ್ಕೆಯ ಸಿಪ್ಪುಗಳೊಳ್ ತೀವಿ ಮಧುಮಂತ್ರಂಗಳಿಂ ಮಂತ್ರಿಸಿ ನೆಲದೊಳೆಱೆದು ತಲೆಯೊಳ್ ತಳಿದು ಕಳ್ಗೊಳ್ ಬೊಟ್ಟನಿಟ್ಟುಕೊಂಡು ಕೆಲದರ್ಗೆಲ್ಲಂ ಬೊಟ್ಟಿಟ್ಟು ಕಿಱಿಯರ್ ಪಿರಿಯರಱಿದು ಪೊಡವಟ್ಟು ಧರ್ಮಗಳ್ಗುದಿವರ್ಗೆಲ್ಲಂ ಮೀಸಲ್ಗಳ್ಳನೆಱೆದು ಪೊನ್ನ ಬೆಳ್ಳಿಯ ಸಿಪ್ಪುಗಳೊಳ್ ಕಿಱಿಕಿಱಿದನೆಱೆದು ಕಡಿಬಿದಿರ ಕುದಿಯಂ ಮಾವಿನ ಮಿಡಿಯಂ ಮಾರುದಿನ ಮೆಣಸುಂಗಡಲೆಯಂ ಪುಡಿಯೊಳಡಸಿದಲ್ಲವಲ್ಲಣೆಗೆಯ ಚಕ್ಕಣಂಗಳಂ ಸವಿಸವಿದು-**

ಚಿಕ್ಕ ಜಗಳಗಂಟ ವಿಟರನ್ನೂ ತಾವು ವಿಶೇಷವಾಗಿ ಕಸ್ತೂರಿಯನ್ನು ಲೇಪನ ಮಾಡಿಕೊಂಡು ಅದರಲ್ಲಿಯೇ ಅದ್ದಿ ಮುಳುಗಿ ಆ ಕಸ್ತೂರಿಯ ವ್ಯಯವನ್ನೇ ಒತ್ತೆಯನ್ನಾಗಿ ತೋರಿಸುತ್ತ ಕಸ್ತೂರಿಯ ಮೃಗದಂತೆ ಕರ್‍ರಗಿರುವ ಕಸ್ತೂರಿ ವಿಟರನ್ನೂ ನೋಡಿ ಆ ಪಟ್ಟಣದ ವಿಟರ ವ್ಯಯದ (ಖರ್ಚುಮಾಡುವ ದ್ರವ್ಯದ) ಪ್ರಮಾಣಕ್ಕೆ ಮನಸ್ಸಿನಲ್ಲಿ ಮೆಚ್ಚುತ್ತ ಮುಂದೆ ಬರಲು ಪಾನಶಾಲೆಯು ಕಣ್ಣಿಗೆ ಬಿದ್ದಿತು. ಒಂದೆಡೆಯಲ್ಲಿ ಕಳ್ಳಿನಲ್ಲಿಯೂ ಅಮೃತದಲ್ಲಿಯೂ ಹುಟ್ಟಿದ ಸ್ತ್ರೀಯರಂತೆ - ಸುರಾದೇವಿ ಮತ್ತು ಲಕ್ಷ್ಮೀದೇವಿಯರಂತೆ ಸೊಗಯಿಸುವ ಅನೇಕ ಸುಂದರಿಯರು ಒಂದು ಕಡೆ ಸೇರಿ ಕಾಮದೇವನೆಂಬ ಮದ್ದುಗಾರನು (ತುಬಾಕಿಯ ಮದ್ದನ್ನು ಮಾಡುವವನು) ಮಾಡಿದ ಮದ್ದಿನಂತೆ ಅಭಿವೃದ್ಧಿಯಾಗಿ ಪುಷ್ಟಿಗೊಂಡಿರುವ ಮುನ್ನೂರರುವತ್ತು ಜಾತಿಯ ಕಳ್ಳುಗಳನ್ನು (ಹೆಂಡಗಳನ್ನು) ತಮ್ಮ ಮುಂದೆ ಇಟ್ಟುಕೊಂಡು ಮಧುಮಂತ್ರದಿಂದಲೇ ಮಧುದೇವತೆಗಳನ್ನು ಪೂಜಿಸಿದರು. ಚಿನ್ನ ಬೆಳ್ಳಿ ಮತ್ತು ಪದ್ಮರಾಗಗಳಿಂದ ಗಿಳಿ, ಕೋಗಿಲೆ, ಕ್ರೌಂಚ, ಹಂಸ ಮತ್ತು ಕುಂತಳಿಕೆಯೆಂಬ ಹಕ್ಕಿಗಳ ಮಾದರಿಗಳಲ್ಲಿ ಮಾಡಿರುವ ಚಿಪ್ಪುಗಳಲ್ಲಿ ತುಂಬಿ (ಮಧುಮಂತ್ರಗಳಿಂದಲೇ ಮಂತ್ರಿಸಿ ನೆಲದಲ್ಲಿ ಸ್ವಲ್ಪ ಸ್ವಲ್ಪ ಚೆಲ್ಲಿ ತಲೆಯಲ್ಲಿ ಪ್ರೋಕ್ಷಿಸಿಕೊಂಡು,) ಕಳ್ಳಿನಿಂದ ಮುಖಕ್ಕೆ ಬೊಟ್ಟನ್ನಿಟ್ಟು ಕಿರಿಯರಾದವರು ಹಿರಿಯರಾದವರನ್ನು ಗುರುತಿಸಿ ಅವರಿಗೆ ನಮಸ್ಕಾರಮಾಡಿ ಉಚಿತವಾಗಿ ದಾನಮಾಡಬೇಕಾದವರಿಗಾಗಿ ಮೀಸಲಾದುದನ್ನು ಅವರಿಗೆ ದಾನಮಾಡಿದರು. ಚಿನ್ನದ ಮತ್ತು ಬೆಳ್ಳಿಯ ಚಿಪ್ಪುಗಳಲ್ಲಿ ಸ್ವಲ್ಪ ಸ್ವಲ್ಪವಾಗಿ ತುಂಬಿಕೊಂಡು ಎಳೆಯ ಬಿದಿರಿನ ಕಳಲೆ, ಮಾವಿನ ಮಿಡಿ, ಬಿಲ್ಪತ್ರೆಯ ಕಾಯಿನ ತಿರುಳು, ಕಾರದ ಕಡಲೆಯ ಪುಡಿಯಿಂದ ಕೂಡಿದ ಹಸಿಯ ಶುಂಠಿಯ ಮಿಶ್ರಣವನ್ನುಳ್ಳ ಚಕ್ಕಣ ಗಳೆಂಬ ನಂಜಿಕೊಳ್ಳುವ ಪದಾರ್ಥಗಳನ್ನು ಸವಿಸವಿದು ಕಳ್ಳುಕುಡಿದರು.

ಮ॥ ಮಧು ಸೀತುಂ ಕಟು ಸೀದು ಪೋ ಪುಳಿತ ಕಳ್ಳಲ್ತುಂ ಕರಂ ಕಯ್ತು ಬ
ರ್ಪುದು ಮಾರೀಚ ತೊಡರ್ಪುಳಿಂದೆ ಸರದಿಂ ಕಂಪಿಲ್ಲ ಸೊರ್ಕಿಪ್ಪಲಾ ।
ಅದು ಚಿಂತಾಮಣಿಗೇವುದಕ್ಕ ದಳಮಿಲ್ಲೀ ಕಕ್ಕರಕ್ಕಿಂತುಟ
ಪ್ಪುದು ಕಳ್ಳಪ್ಪುದು ತಪ್ಪದೆಂದು ಕುಡಿದರ್ ಕಾಮಾಂಗಮಂ ಕಾಂತೆಯರ್ ॥ ೮೮

ವ॥ ಅಂತು ಕುಡಿಯೆ ಕಕ್ಕರಗೆಯ್ತದಿಂ ತುದಿನಾಲಗೆಯೊಳ್ ತೊದಳ್ವೆರಸು ನುಡಿವ ನುಡಿಗಳುಂ ಪೊಡರ್ವ ನಿಡಿಯ ಪುರ್ವುಗಳುಂ ನಿಡಿಯಲರ್ಗಣ್ಗಳೊಳ್ ವಿಕಾರಂ ಬೆರಸು ನೆಗಱ್ದಭಿಸಯಂಗಳುಂ ಮಳಮಳಿಪ ರೂಪು ಕಣ್ಗಳೊಳ್ ಬೆಳ್ಪನಟಿಯೆ ಸೋಂಕುವ ಕೆಂಪುಗಳುಂ ತಮ್ಮ ಕೆಂಪಂ ಕಣ್ಗಳ್ಗೆ ಕೊಟ್ಟು ಕಣ್ಗಳ ಬೆಳ್ಪಂ ತಮಗೆ ಮಾಱುಗೊಂಡಂತೆ ತನಿಗೆತ್ತುವೆರಸು ಬತ್ತಿ ಸೊಗಯಿಸುವ ಬೆಳರ್ವಾಯ್ಗಳೊಳಿಂಪಂ ತಾಳ್ದಿ ಪೊಱಮಡುವ ತಣ್ಗಂಪುಗಳುಮಮೃತಬಿಂದುಗಳಂತೆ ನೆಗಱ್ದ ಬೆಮರ ಬಿಂದುಗಳುಮಳವಲ್ಲದೊಪ್ಪೆ ಪಲರುಮೊಳ್ವೆಂಡಿರೊಂದೆಡೆಯೊಳಿರ್ದಲ್ಲಿ ಯೊರ್ವಳ್—

ಪೃಥ್ವಿ ॥ ಬೆಳರ್ತ ಬೆಳರ್ವಾಯ್ ಕರಂ ಪೊಳೆವ ಪಾಂಗೆ ಕಣ್ಣಿಂದಳು
ರ್ತುಳುಂಕೆ ನಿಡುಪುರ್ವುಗಳ್ ಪೊಡರೆ ಬಾಯ ಕಂಪಿಂಗೆ ಸಾ ।
ರ್ವಳಿಪ್ರಕರಮಂದು ಸೀಗುಡಿವೊಲಾಗೆ ಸಾಣ್ಣೆಟ್ಟು ಮೊ
ಕ್ಕಳಂ ಜತಿಗೆ ಮೆಟ್ಟುವಳ್ ಪಿಡಿದು ಮೆಟ್ಟುವಳ್ ನೋೞ್ಪರಂ ॥ ೮೯

೮೮. ಮಧುವೆಂಬ ಮದ್ಯವು ಸಿಹಿಯಾಗಿದ್ದರೂ ಕಟುವಾದುದು; ಸೀದುವೆಂಬುದು ಹುಳಿಯ ಹೆಂಡವಲ್ಲ, ವಿಶೇಷವಾಗಿ ಸಿಹಿಯಾಗಿರುತ್ತದೆ. ಮಾರೀಚ ತೊಡರ್ಪುಳ್ ಎಂಬ ಮದ್ಯಗಳಿಗಿಂತ ಶರದೆಯೆಂಬುದು ಹೆಚ್ಚು ವಾಸನೆಯಿಲ್ಲ; ಅಷ್ಟು ಸೊಕ್ಕಿಸಲಾರದು; ಚಿಂತಾಮಣಿಯೆಂಬ ಮದ್ಯದ ಸೇವನೆಗೆ ಅಡಿಕೆಯೇಕಕ್ಕ, ಕಕ್ಕರವೆಂಬ ಮದ್ಯಕ್ಕೂ ಹಾಗೆಯೇ (ಬೇಕಿಲ್ಲ) ಇಂತಹವೇ ಸರಿಯಾದ ಹೆಂಡವೆಂಬುದು ಎಂದು ಆ ಸ್ತ್ರೀಯರು ಕಾಮೋದ್ರೇಕವಾದ ಮದ್ಯವನ್ನು ಪಾನಮಾಡಿದರು. ವ॥ ಹಾಗೆ ಕುಡಿಯಲು ಕಕ್ಕರವೆಂಬ ಮದ್ಯಪಾನದ ಸೊಕ್ಕಿನಿಂದ ತುದಿನಾಲಗೆಯಲ್ಲಿ ತೊದಲುಗಳಿಂದ ಕೂಡಿದ ಮಾತುಗಳುಂಟಾದುವು. ದೀರ್ಘವಾದ ಹುಬ್ಬುಗಳು ಅಲುಗಾಡುತ್ತಿದ್ದವು. ಉದ್ದವಾದ ಹೂವಿನಂತಿರುವ ಕಣ್ಣುಗಳಲ್ಲಿ ವಿಕಾರದಿಂದ ಕೂಡಿದ ಚೇಷ್ಟೆಗಳು ಮೂಡಿದವು. ಕೆರಳಿ ಕೆಂಪಾದ ರೂಪವು ಕಣ್ಣುಗಳ ಬಿಳುಪನ್ನು ಸಂಪೂರ್ಣವಾಗಿ ಹೋಗಲಾಡಿಸಿತು. ಆವರಿಸುತ್ತಿರುವ ಕೆಂಪುಬಣ್ಣದ ತುಟಿಗಳು ತಮ್ಮ ಕೆಂಪನ್ನು ಕಣ್ಣುಗಳಿಗೆ ಕೊಟ್ಟು ಅದರ ಬಿಳುಪನ್ನು ತಾವು ಪ್ರತಿಯಾಗಿ ಕೊಂಡಂತೆ ತೋರಿದವು. ವಿಶೇಷವಾಗಿ ಅಲುಗಾಡುತ್ತ ಬತ್ತಿದ ಬಿಳುಪಾದ ಬಾಯಿಗಳಲ್ಲಿ ಇಂಪಿನಿಂದ ತಂಪಾದ ವಾಸನೆಗಳು ಸೂಸಿದವು. ಅಮೃತಬಿಂದುಗಳಂತೆ ಬೆವರ ಹನಿಗಳು ಪ್ರಕಾಶಿಸಿದುವು. ಅಳತೆಯಿಲ್ಲದ ಸೌಂದರ್ಯದಿಂದ ಕೂಡಿದ ಅನೇಕ ಉತ್ತಮ ಸ್ತ್ರೀಯರು ಒಂದೆಡೆ ಸೇರಿದರು. ಆ ಸ್ಥಳದಲ್ಲಿ ಒಬ್ಬಳು— ೮೯. ಬಿಳಿಚಿಕೊಂಡ ತುಟಿಯನ್ನೂ ವಿಶೇಷವಾಗಿ ಹೊಳೆವ ಕಡೆಗಣ್ಣಿನ ನೋಟವನ್ನೂ ಉಳ್ಳ ಒಬ್ಬಳು ತನ್ನ ಕಣ್ಣಿನ ದೃಷ್ಟಿಯು ಎಲ್ಲ ಕಡೆಗೂ ವ್ಯಾಪಿಸುತ್ತಿರಲು ನೀಳವಾದ ಹುಬ್ಬುಗಳು ಕುಣಿಯುತ್ತಿರಲು ಬಾಯ ವಾಸನೆಗೆ ಮುತ್ತುತ್ತಿರುವ ದುಂಬಿಯ ಸಮೂಹವು

ವ|| ಮತ್ತಮೊರ್ವಳೂರ್ವಶಿಯನೆ ಪೋಲ್ವಾಕೆ ತನ್ನ ಗಂಭೀರನವಯೌವನ ಮದದೊಳಂ ಮದಿರಾಮದದೊಳಮಳವಿಗಟೆಯೆ ಸೊರ್ಕಿ-

ಚಂ|| ಮುಡಿ ಮಕರಧ್ವಜಂಬೊಲೆಲೆಬಿಲುತ್ತಿರೆ ಬೆಂಬಡಿದೊಯ್ಯನೊಯ್ಯನು
ಳ್ಳುಡೆ ಕಟಿಸೂತ್ರದೊತ್ತಿನೊಳೆ ಜೋಲ್ದಿರೆ ನಾಣ್ ತಲೆದೋಱೆ ಕೂಡೆ ಕೂ ।
ಕಿಡುವ ಕುಕಿಲ್ವ ಬಿಕ್ಕುಳಿಪ ತೇಗುವ ತನ್ನ ತೊಡಂಕದೆಯ್ದೆ ನೂ
ರ್ಮಡಿ ಮನದೊಳ್ ಪಳಂಚಲೆಯೆ ಡಕ್ಕೆಯೊಳಟ್ಟಜವಾಗೆಯಾಡಿದಳ್ ॥ ೯೦

ವ|| ಅಂತಾಕೆಗಳ್ ತೂಗಿ ತೊನೆವ ತೊನೆಪಂಗಳುಮಂ ಮರಸರಿಗೆವಿಡಿದು ಬಿಲ್ವಿಡಿದಾಡುವ ಬೂತಾಟಂಗಳುಮಂ ನೋಡಿ ಗಂಧೇಭವಿದ್ಯಾಧರನಿಂತೆಂದಂ-

ಚಂ|| ನುಡಿವರೆ ನೋಡ ಕಳ್ಗುಡಿವರೆಂಬುದಿದಾಗದ ಸೂರುಳಂತದಂ
ಕುಡಿವನುಮಂತೆ ಕಳ್ಗುಡಿವರೆಂದೊಡೆ ನಾಣ್ಚುವರಂತುಟಪ್ಪುದಂ ।
ಕುಡಿದುಮಿವಂದಿರಾರ್ದೆಯುಮಂ ಸೆಱೆಗೆಯ್ದಪರೆಯ್ದೆ ದೋಷದೊಳ್
ತೊಡರ್ವುದುಮೊಂದುಪಾಶ್ರಯವಿಶೇಷದೊಳೊಳ್ಪನೆ ತಳ್ಪುದಾಗದೇ ॥ ೯೧

ವ|| ಎನುತುಂ ಬರ್ಪನೊಂದೆಡೆಯೊಳೊರ್ವಂ ಪಟೆಕೆಯ್ದ ನಲ್ಲಳನುಟೆಯಲಾಱದೆ ಸುಟೆಯೆ ಮುಳಿದಾತನ ಕೆಳೆಯನಿಂತೆಂದಂ-

ಸೂರ್ಯಪಾನೆ (ಬಿಸಿಲನ್ನು ಮರೆಮಾಡಲು ಉಪಯೋಗಿಸುವ ಒಂದು ಸಾಧನ) ಯಂತಾಗಲು ಲಜ್ಜೆಯಿಲ್ಲದೆ ನೋಡುವವರನ್ನು ಮೆಟ್ಟಿ ತಾಳಕ್ಕೆ ಸರಿಯಾಗಿ ಕುಣಿದಳು. ವ|| ಊರ್ವಶಿಯನ್ನೇ ಹೋಲುವ ಮತ್ತೊಬ್ಬಳು ಗಂಭೀರವಾದ ತನ್ನ ಹೊಸಯವ್ವನದ ಮದದಿಂದಲೂ ಮದ್ಯಪಾನ ಮದದಿಂದಲೂ ಅಳತೆ ಮೀರಿ ಸೊಕ್ಕಿ- ೯೦. ತನ್ನ ತುರುಬು ಮನ್ಮಥನ ಮೀನಿನ ಬಾವುಟದಂತೆ ಮೆಲ್ಲಮೆಲ್ಲಗೆ ಜೋಲಾಡುತ್ತಿರಲು ಒಳಉಡುಪು ಉಡಿದಾರದ ಹತ್ತಿರವೇ ಸಡಿಲವಾಗಿ ಜೋತುಬಿದ್ದಿರಲು ಮರ್ಮಸ್ಥಳವು ಹೊರಗೆ ಕಾಣಿಸುತ್ತಿರಲು ಒಡನೆಯೇ ಮೇಲಕ್ಕೆ ನೆಗೆದು ಹಕ್ಕಿಯಂತೆ ಶಬ್ದಮಾಡಿ ಬಿಕ್ಕಳಿಸುವ ತೇಗುವ ತನ್ನ ತೊಡಕುಗಳೇ ಮನಸ್ಸನ್ನು ನೂರು ಬಾರಿ ತಗುಲಿ ಹಿಂಸಿಸುತ್ತಿರಲು ಢಕ್ಕಾವಾದ್ಯಕ್ಕನುಗುಣವಾಗಿ ಆಶ್ಚರ್ಯವಾಗುವ ಹಾಗೆ ಕುಣಿದಳು. ವ|| ಹಾಗೆ ಅವರು ಆ ಕಡೆಗೂ ಈ ಕಡೆಗೂ ಅಳ್ಳಾಡುವ ತೂಗಾಟಗಳನ್ನೂ ಮರಸರಿಗೆ(?)ಯನ್ನೂ ಬಿಲ್ಲನ್ನೂ ಹಿಡಿದು ಭೂತಗಳ ಆಟವನ್ನು (ಬೂತಾಟಂ?) ಆಡುವುದನ್ನೂ ಗಂದೇಭವಿದ್ಯಾಧರನಾದ ಅರ್ಜುನನು ನೋಡಿ ಹೀಗೆಂದನು - ೯೧. ಕುಡಿಯುವವರನ್ನು ಕಳ್ ಕುಡಿಯುವವರು ಎಂದು ಹೇಳಬಹುದೇ? ಆಗದು. ಕುಡಿಯುವವರನ್ನು ಹಾಗೆ ಕುಡುಕರೆಂದರೆ ಅವರು ಲಜ್ಜಿತರಾಗುತ್ತಾರೆ. ಹಾಗೆ ಕುಡಿದರೂ ಅವರು ಎಲ್ಲರ ಹೃದಯವನ್ನೂ ಸೆರೆಹಿಡಿಯುತ್ತಾರಲ್ಲವೇ. ದೋಷವಾದುದೂ ಅವಲಂಬನದಿಂದ ಒಳ್ಳೆಯದೇ ಆಗುವುದಿಲ್ಲವೇ? ವ|| ಎನ್ನುತ್ತ ಬರುತ್ತಿದ್ದವನು ಒಂದೆಡೆಯಲ್ಲಿ ತನ್ನನ್ನು ಬಯ್ಯುತ್ತಿದ್ದ ಪ್ರಿಯಳನ್ನು ಬಿಡಲಾರದೆ ಅವಳ ಮನೆಯ ಮುಂದೆಯೇ ಸುಳಿದಾಡುತ್ತಿರಲು ಕೋಪಿಸಿಕೊಂಡ ಅವನ ಸ್ನೇಹಿತನು ಹೀಗೆಂದು

ಚಂ॥ ಬಸನದೊಡಂಬಡಿಂಗಲಸಿ ಮಾಣ್ದೊಡಮಿಂತಿದನೀವೆನೆಂದನಂ
ಪುಸಿದೊಡಮಾಸೆದೋಱಿ ಬಗೆದೋಱಿದೊಡಂ ನೆರದಿರ್ದೊಡಂ ಸಗಾ ।
ಟಸದೊಡಮಾಯಮುಂ ಚಲಮುಮುಳ್ಳೊಡೆ ಪೇಸದವಳ್ಗೆ ಮತ್ತಮಾ
ಟಸುವುದೆ ಮತ್ತಮಂಜುವುದೆ ಮತ್ತಮಬಿಲ್ಗುದೆ ಮತ್ತಮೀವುದೇ ॥ ೯೨

ವ॥ ಎಂದು ನುಡಿದು ಬಸುಡಿಸಿದಂ ಮತ್ತೊರ್ವಂ ತನಗೆರ್ಡಜೆಯದೊಲ್ದ ನಲ್ಲಳನೇತಱೊಳಪ್ಪೊಡಮೇವಮಂ ಮಾಡದೆ ಬೇಟಮಂ ಸಲಿಸುವುದರ್ಕೆ ಸಂತಸಂಬಟ್ಟು ಮುಂತಣ್ಗೆ ಕಾಪನಿಟ್ಟಂತೆಂದಂ-

ಮ॥ ಇನಿಯಂ ನೊಯ್ದುಮೊಡಂಬಡಂ ನುಡಿದೊಡೆಂದೆಂದಪ್ಪೊಡಂ ನಿನ್ನೊಳೆ
ಳ್ಳನಿತುಂ ದೋಷಮನುಂಟುಮಾಡದಿರೆಯುಂ ಕಣ್ಬಿಂತೆ ಸಂದಪ್ಪುದೊಂ ।
ದನೆ ಕೇಳ್ವೋಪಳೆ ಕೂರ್ಮೆಗೆಟ್ಟೆನಗೆ ನೀನೇನಾನುಮೊಂದೇವಮಂ
ಮನದೊಳ್ ಮಾಡಿದೊಡಂದೆ ದೀವಳಿಗೆಯಂ ಮಾನಾಮಿಯಂ ಮಾಡೆನೇ ॥೯೩

ವ॥ ಎಂದು ನುಡಿದಂ ಮತ್ತಮೊಂದೆಡೆಯೊಳೊರ್ವನೊರ್ವಳ ನಡೆಯ ನುಡಿಯ ಮುಡಿಯ ಗಾಂಪಿಂಗೆ ಮುಗುಳ್ನಗೆ ನಕ್ಕು ತನ್ನ ಕೆಳೆಯಂಗೆ ತೋಱಿ-

ಅವನಿಗೆ ಬುದ್ಧಿ ಹೇಳಿದನು. ೯೨. ರತಿಕ್ರೀಡೆಗೆ ಒಪ್ಪದೆ ಜುಗುಪ್ಸೆಯಿಂದ ನಿನ್ನನ್ನು ಅವಳು ತ್ಯಜಿಸಿದರೂ (ನಿನಗೆ ಬೇಕಾದ) ಇಂತಿಂಥಾದ್ದನ್ನೆಲ್ಲ ಕೊಡುವೆನೆಂದ ನಿನಗೆ ಸುಳ್ಳು ಹೇಳಿದರೂ ನೀನು ಆಸೆ ತೋರಿಸಿ ನಿನ್ನ ಮನಸ್ಸನ್ನು ಪ್ರಕಟಿಸಿದರೂ ಅವಳು ತನ್ನ ಮನಸ್ಸನ್ನು (ಪ್ರೇಮವನ್ನೂ) ಪ್ರಕಟಿಸದಿದ್ದರೂ ನೀನು ಅವಳನ್ನು ಕೂಡಿ ಕೊಂಡಿದ್ದರೂ ಅವಳು ತನ್ನ ಪ್ರತಿಪ್ರೇಮವನ್ನು ಪ್ರಕಟಿಸದಿದ್ದರೂ ನಿನಗೆ ಬಲವೂ ಛಲವೂ ಇದ್ದ ಪಕ್ಷದಲ್ಲಿ ಅವಳಿಗೆ ಅಸಹ್ಯಪಡದೆ ಪುನಃ ಅವಳಿಗಾಗಿ ಆಸೆ ಪಡುವುದೇ, ಅಂಜುವುದೇ, ಪುನಃ ವ್ಯಸನ ಪಡುವುದೇ, ಪುನಃ ಅವಳಿಗೆ (ಧನಕನಕಾದಿಗಳನ್ನು) ಕೊಡುವುದೇ? ವ॥ ಎಂಬುದಾಗಿ ಹೇಳಿ (ಅವಳನ್ನು) ಬಿಸಾಡಿದನು. ಮತ್ತೊಬ್ಬನು ತನಗೆ ಕಪಟವಿಲ್ಲದೆ ಪ್ರೀತಿಸುತ್ತಿದ್ದ ಪ್ರಿಯಳನ್ನು ಯಾವುದರಲ್ಲಿಯೂ ಅಸಮಾಧಾನ ವನ್ನುಂಟುಮಾಡದೆ ಪ್ರೀತಿಯನ್ನು ನಿಲ್ಲಿಸಿದುದಕ್ಕೆ ಸಂತೋಷಪಟ್ಟು ಮುಂದಕ್ಕೆ ಕಾವಲಿಟ್ಟು ಹೀಗೆ ಹೇಳಿದನು. ೯೩. ಅಡ್ಡಮಾತನ್ನಾಡಿದರೆ ಪ್ರಿಯನು ನೊಂದುಕೊಳ್ಳುತ್ತಾನೆ ಎಂದು ನನ್ನಲ್ಲಿ ನಾನು ಎಳ್ಳಷ್ಟು ದೋಷವನ್ನುಂಟುಮಾಡಿ ಕೊಳ್ಳದಿದ್ದರೂ ನೀನು ನನ್ನನ್ನು ಸರಿಯಾಗಿ ನೋಡುತ್ತಿಲ್ಲ ಎಂಬ ಭಾವನೆಯೇ ಇದೆ. ಎಲೈ ಪ್ರಿಯಳೇ ಕೇಳು. ಹೀಗೆ ನಿನ್ನ ಪ್ರೀತಿಯನ್ನು ಕಳೆದುಕೊಂಡಿರುವ ನನಗೆ ನೀನೇನಾದರೂ ಬಂದು ಆತನನ್ನು ಮನಸ್ಸಿನಲ್ಲಿ ಮಾಡಿದರೂ ಅಂದೇ ನಾನು ದೀವಳಿಗೆಯನ್ನೂ ಮಹಾನವಮಿಯನ್ನೂ ಮಾಡದಿರುತ್ತೇನೆಯೇ? ವ॥ ಎಂಬುದಾಗಿ ನುಡಿದನು. ಬೇರೊಂದೆಡೆಯಲ್ಲಿ ಒಬ್ಬನು ಒಬ್ಬಳ ನಡತೆಯ ಮಾತಿನ ತುರುಬಿನ ದಡ್ಡತನಕ್ಕೆ ಮುಗುಳ್ನಗೆ ನಕ್ಕು ತನ್ನ ಸ್ನೇಹಿತನಿಗೆ ತೋರಿಸಿ ಹೇಳಿದನು.

ಚಂ॥ ನಯದೊಳೆ ನೋಡಿ ನೋಟದೊಳೆ ಮೇಳಿಸಿ ಮೇಳದೊಳಪ್ಪುಕೆಯ್ದು ಗೊ
ಟ್ಟಯೊಳೊಳಪೊಯ್ದು ಪತ್ತಿಸುವ ಸೂಳೆಯರಂದಮನೆಯ್ದೆ ಪೋಲ್ವ ಸೂ ।
ಳೆಯರ ತುಱುಂಬು ಸೂಳೆಯರ ಮೆಲ್ನುಡಿ ಸೂಳೆಯರಿರ್ಪ ಪಾಂಗು ಸೂ
ಳೆಯರ ನೆಗಳ್ತೆ ನಾಡೆ ತನಗಪ್ಪೆ ದಲಕ್ಕನೆ ಸೂಳೆಯಾಗಳೇ ॥ ೯೪

ವ॥ ಎನೆ ಕೇಳ್ದು ಮುಗುಳ್ನಗೆ ನಗುತ್ತುಂ ಬರ್ಪನೊಂದೆಡೆಯೊಳೊಂದು ಕಂದದ ಮೊದಲುಮಂ ವೃತ್ತದ ತುದಿಯುಮನೊಂದುಮಾಡಿ ಪದಮಿಕ್ಕಿಯೋದಿ ಪಂಡಿತಿಕ್ಕೆಗೆ ಮುಯ್ವಾಂತು ಮಾವ ಕಾಳೆಗದೊಳಂ ತಾನೆ ಓಡಿಯಾರೋಡಿದರೆಂಬಂತೆ ಬೀರಕ್ಕೆ ಮುಯ್ವಾಂತುಮೊಂದು ವೀಸನಪ್ಪೊಡಮಾರ್ಗಮಿತ್ತಱಿಯದೆ ಚಾಗಕ್ಕೆ ಮುಯ್ವಾಂತುಂ ತಮ್ಮಂ ನಗುವರನಱಿಯದೆಣ್ಬರೇಱಿದ ಕಟ್ಟೆಯಂತೆ ದೆಸೆದೆಸೆಗೆ ಬೆಸೆವ ಪಚ್ಚಪಸಿಯೆಗ್ಗರುಮಂ ಕಂಡು

ಚಂ॥ ಇಱಿಯದ ಬೀರಮಿಲ್ಲದ ಕುಲಂ ತಮಗಲ್ಲದ ಚಾಗಮೋದದೋ
ದಱಿಯದ ವಿದ್ದೆ ಸಲ್ಲದ ಚದುರ್ ನೆಱೆ ಕಲ್ಲದ ಕಲ್ಪಿ ಕೇಳ ಮಾ ॥
ತಱಿಯದ ಮಾತು ತಮ್ಮ ಬಱುವಾತುಗಳೊಳ್ ಪುದಿದೆಗ್ಗರೆಯ್ದೆ ಕ
ಣ್ದೆಱೆವಿನಮಾರ್ ಪೞಿಯದೇನೆಳೆಯಂ ಕಿಡಿಸಲ್ಕೆ ಬಲ್ಲರೋ ॥ ೯೫

೯೪. ನಯವಾಗಿ ನೋಡಿ, ನೋಡುವುದರಿಂದಲೇ ಪ್ರೀತಿಯುಂಟಾಗುವಂತೆ ಮಾಡಿ ಪ್ರೀತಿಯಿಂದಲೇ ಆಲಂಗಿಸಿ, ಆಲಿಂಗನದಿಂದಲೇ ಕೂಡಿಕೊಂಡು ಕೂಡುವುದರಿಂದಲೇ ವಶಪಡಿಸಿಕೊಂಡು ತಮ್ಮ ಮನಸ್ಸನ್ನು ಬೆಸೆಯುವ ಸೂಳೆಯರ ರೀತಿಯನ್ನು ಚೆನ್ನಾಗಿ ಹೋಲುವ ಸೂಳೆಯರ ತುರುಬು, ಸೂಳೆಯರ ಮೃದುವಾದ ಮಾತು, ಸೂಳೆಯರು ಇರುವ ಸ್ಥಿತಿ, ಸೂಳೆಯರ ನಡೆವಳಿಕೆ ಇವು ನನಗೆ ವಿಶೇಷವಾಗಿ ಪ್ರೀತಿಕರ ವಾದುವಲ್ಲವೇ? ಈ ಅಕ್ಕನ ಆಟ, ನೋಟ, ತುರುಬು, ರೀತಿ, ಚೇಷ್ಟೆಗಳನ್ನು ನೋಡಿದರೆ ಇವಳೂ ಸೂಳೆಯಾಗಿಯೇ ಇರಬೇಕಲ್ಲವೆ? ವ॥ ಎಂಬುದನ್ನು ಕೇಳಿ ಮುಗುಳ್ನಗೆ ನಗುತ್ತ ಬರುತ್ತಿದ್ದವನು ಒಂದು ಕಡೆಯಲ್ಲಿ ಒಂದು ಕಂದಪದ್ಯದ ಆದಿಯನ್ನೂ ಮತ್ತೊಂದು ವೃತ್ತದ ಅಂತ್ಯವನ್ನೂ ಒಂದುಗೂಡಿಸಿ ಓದಿ ತನ್ನ ಪಾಂಡಿತ್ಯಕ್ಕೆ ಮೆಚ್ಚಿಕೊಳ್ಳುತ್ತಲೂ ಯಾವ ಕಾಳಗದಲ್ಲಿಯೂ ತಾನು ನಿಲ್ಲದೆ ಓಡಿಹೋಗಿ ಹೋರಾಡಿದನು ಎಂಬಂತೆ ತನ್ನ ಪರಾಕ್ರಮವನ್ನು ಹೊಗಳಿಕೊಳ್ಳುತ್ತಲೂ ಒಂದು ವೀಸವನ್ನಾದರೂ ಯಾರಿಗೂ ದಾನಮಾಡದೆ ತಾನು ತ್ಯಾಗಿಯೆಂದು ಜಂಭ ಕೊಚ್ಚಿಕೊಳ್ಳುತ್ತಲೂ ತಮ್ಮನ್ನು ನೋಡಿ ನಗುವವರನ್ನು ತಿಳಿಯದೆ ಎಂಟುಜನ ಹತ್ತಿಕೊಂಡಿರುವ ಕತ್ತೆಯಂತೆ ದಿಕ್ಕುದಿಕ್ಕಿನಲ್ಲಿಯೂ ಗರ್ವವನ್ನು ಪ್ರದರ್ಶಿಸುತ್ತಲೂ ಇರುವ ಶುದ್ಧ ಹಸಿಯ ದಡ್ಡರನ್ನು ನೋಡಿ ೯೫. ಕಾದದ ಶೌರ್ಯ, ಇಲ್ಲದ ಕುಲ, ತಮ್ಮಲ್ಲಿಲ್ಲದ ತ್ಯಾಗ, ತಾವು ಓದದ ಓದು, ತಿಳಿಯದ ವಿದ್ಯೆ, ಸಲ್ಲದ ಜಾಣ್ಮೆ ವಿಶೇಷವಾಗಿ ಕಲಿಯದ ಕಲಿಕೆ, ಆಡಲು ತಿಳಿಯದ ಮಾತು, ಇವು ತಮ್ಮ ವ್ಯರ್ಥಾಲಾಪಗಳಲ್ಲಿ ಸೇರಿರುವ ದಡ್ಡರು ಹೆಚ್ಚುತ್ತಿರಲು - ಗುಂಪಾಗಿರಲು- ಯಾರು ತಾನೆ ಅವರನ್ನು ಹಳಿಯುವುದಿಲ್ಲ? ಅವರು ಲೋಕವನ್ನು ಕೆಡಿಸಲು ಬಲ್ಲರೇನು?

ವ॥ ಎನೆ ನಗುತ್ತುಂ ಬರೆಯೊಂದೆಡೆಯೊಳ್ ನಾಲ್ವರಯ್ವರ್ ಗಾೞಿಗೊಟ್ಟಿರ್ದಲ್ಲಿಗೊರ್ವ ನೆಗ್ಗಂ ಗೊಟ್ಟಿಗೆ ವಂದು ಕಣ್ಣಱಿಯದೆ ಸೋಂಕೆಯುಂ ಮನಮಱಿಯದೆ ನುಡಿಯೆಯುಮಾತನ ನಾಕೆಗಳ್ ಬಾಸೆಯೊಳಿಂತೆಂದರ್-

ಉ॥ ಭಾವಕನೆಂದೊಡಂ ಚದುರನೆಂದೊಡಮಾರ್ ಪೆಱರಾರೊ ನೀನೆ ನಿ
ನ್ನಾವ ಗುಣಂಗಳಂ ಪೊಗೞ್ವೊಡೆಲ್ಲವಱಿಂ ನೆಱೆದೆಮ್ಮೊಳಿಂತು ಸ ।
ದ್ಭಾವದೆ ಗೊಟ್ಟಿರಲ್ ಬಯಸಿ ಬಂದೆಯದೀಗಳಿದೊಳ್ಳಿತಾಯ್ತು ಮಾ
ದೇವರ ಮುಂದಣಾತನೆನಲಲ್ಲದೆ ಪೇೞ್ ಪೆಱತೇನನೆಂಬುದೋ ॥ ೯೬

ವ॥ ಎಂದಾತನನಾಕೆಗಳ್ ಕಾಡಿ ಕೊಱಚಾಡಿ ಕಳೆದರ್ ಮತ್ತಮೊಂದೆಡೆಯೊಳೊರ್ವಳ್ ತನ್ನನುೞಿದ ಪೊಸ ಬೇಟದಾಣ್ಪನನೇಗೆಯ್ದುಂ ಪೋಗಲೀಯದೆ ತನ್ನಳಿಪನೆ ತೋಱೆ-

ಚಂ॥ ಮನೆಯನಿವಂ ಮನೋಭವನಿವಂ ಪೊಸ ಸುಗ್ಗಿಯೊಳಾದದೊಂದು ಕಿ
ತ್ತನಿವನಿದೆನ್ನನೇನುೞಿಯಲೀಗುಮೆ ನೀನುೞಿದಾಗಳೆಂದು ಪೋ ।
ಪನನಿರದೋಪನಂ ಮಿಡುಕಲೀಯದೆ ಕಾಲ್ವಿಡಿದಪ್ಪಿ ತೋರ ಕ
ಣ್ಬನಿಗಳನಿಕ್ಕಿದಳ್ ತರಳಲೋಚನೆ ಸಂಕಲೆಯಿಕ್ಕಿದಂತೆವೋಲ್ ॥ ೯೭

ವ॥ ಮತ್ತೊರ್ವಂ ತನ್ನ ಸೂಳೆಯೊಳಾದ ಬೇಸಱಿಂ ತನ್ನ ಕೆಳೆಯಂಗಿಂತೆಂದಂ-

ವ॥ ಎನ್ನಲು ಅದನ್ನು ಕೇಳಿ ನಗುತ್ತ ಬರುತ್ತಿರಲು ಒಂದು ಕಡೆಯಲ್ಲಿ ನಾಲ್ಕೈದು ಜನ ತಂಟಲುದಾಸಿಯರಿದ್ದ ಕಡೆಗೆ ಒಬ್ಬ ದಡ್ಡನು ಬಂದು ಕೂಡಲು ಅವರ ಅಭಿಪ್ರಾಯವನ್ನು ತಿಳಿಯದೆ ಮುಟ್ಟಿ ಇಷ್ಟವನ್ನು ತಿಳಿಯದೆ ನುಡಿಯಲು ಆ ದಾಸಿಯರು ಅವನನ್ನು ಕುರಿತು ತಮ್ಮ ರಹಸ್ಯಭಾಷೆಯಲ್ಲಿ ಹೀಗೆಂದರು - ೯೬. ನಿನಗಿಂತ ರಸಿಕರೂ ಚತುರರೂ ಯಾರಿದ್ದಾರೆ. ನಿನ್ನ ಎಲ್ಲ ಗುಣಗಳನ್ನೂ ಹೊಗಳಲು ಹೊರಟರೆ ನೀನು ಸರ್ವಗುಣಸಂಪನ್ನನೆನ್ನಲೇಬೇಕು. ನೀನು ಸದ್ಭಾವದಿಂದ ನಮ್ಮಲ್ಲಿ ಕೂಡಲು ಬಯಸಿ ಬಂದಿದ್ದೀಯೆ; ಅದೀಗ ಒಳ್ಳೆಯದಾಯಿತು. ನೀನು ಮಹಾದೇವನಾದ ಶಿವನ ಮುಂದಿರುವ ಬಸವನಲ್ಲದೆ ಮತ್ತೇನೆಂದು ಹೇಳೋಣ-ವ॥ ಎಂದು ಅವರು ಆತನನ್ನು ಕಾಡಿ ಕಡೆಗಣಿಸಿ ಮಾತನಾಡಿ ಕಳುಹಿಸಲು ಬೇರೊಂದೆಡೆಯಲ್ಲಿ ಒಬ್ಬಳು ತನ್ನನ್ನು ಬಿಟ್ಟುಹೋಗುತ್ತಿದ್ದ ಹೊಸ ಪ್ರೇಮದ ಒಡೆಯನನ್ನು ಏನು ಮಾಡಿದರೂ ಹೋಗುವುದಕ್ಕೆ ಬಿಡದೆ ತನ್ನ ಪ್ರೀತಿಯನ್ನು ತೋರಿಸಿ ೯೭. ಇವನು ಮನೆಯ ಯಜಮಾನ, ಇವನ ಮನ್ಮಥ, ಪ್ರಥಮ ಪ್ರೇಮಕಾಲದ ಚಿಕ್ಕ ಹರೆಯದವ; ಇವ ನನ್ನನ್ನು ಬಿಟ್ಟಾಗ ನಾ ಉಳಿಯುವುದು ಸಾಧ್ಯವೇ? ಎಂದು ಹೋಗುತ್ತಿರುವ ಪ್ರಿಯನನ್ನು ಸುಮ ಚಲಿಸುವುದಕ್ಕೂ ಬಿಡದೆ ಕಾಲುಗಳನ್ನು ಕಟ್ಟಿಕೊಂಡು ಅತ್ತು ಸಂಕೋಲೆ ಹಾಕಿದ ಚಂಚಲನೇತ್ರೆಯಾದ ಅವಳು ವಿಶೇಷವಾಗಿ ಕಣ್ಣೀರನ್ನು ಸುರಿಸಿದಳು. ವ॥ ಮತ್ತೊ ತನ್ನ ಸೂಳೆಯಲ್ಲಾದ ಬೇಸರವನ್ನು ತನ್ನ ಸ್ನೇಹಿತನಿಗೆ ಹೀಗೆ ಹೇಳಿದ

ಚಂ|| ಮುಳಿಸಱಿದಂಜಿ ಬಾಳ್ತೆಯಱಿದಿತ್ತು ಮನಂಗೊಳೆಯುಂ ಕನಲ್ಪುದ
ರ್ಕಳವಿಯುಮಂತುಮಿಲ್ಲ ಸನಿಯನ್ನಳೆ ಕುಂಟಣಿ ಪೋದ ಮಾರಿಯ ।
ನ್ನಳೆ ಮನೆದೊಱ್ತು ಸೀರ್ಕರಡಿಯನ್ನಳೆ ನಾದುನಿಯೊಲ್ಪುಮೊಲ್ಲದ
ನ್ನಳೆ ಗಡ ಸೂಳೆಯೆಂದೊಡಿನಿತಂ ತಲೆವೇಸಱನೆಂತು ನೀಗುವೆಂ ॥ ೯೮

ವ|| ಎಂದು ನುಡಿದು ಗೆಂಟಾದಂ ಮತ್ತೊರ್ವ ಬೇಟಕಾರ್ತಿ ತಾಯ ಕಣ್ಣಂ ಬಂಚಿಸಿ ತನ್ನ ಮೋಪಿನಾಕೆಯ ಮನೆಗೆ ಪೋಪ ಬೇಟದಾಣ್ಮನಂ ಪಿಡಿದು-

ಉ|| ತಪ್ಪುದು ಮಾತು ದೂದವರ ಕೆಯ್ಯೊಳೆ ಕಾಲ್ವಿಡಿದಟ್ಟ ಕಣ್ಣ ನೀರ್
ತಪ್ಪುವು ನಿಚ್ಚಮಚ್ಚಗದೊಳಟ್ಟು ಕರಂ ಬಿಸುಸುಯ್ಯೆ ಸುಯ್ದ ಸುಯ್ ।
ತಪ್ಪುದು ತಪ್ಪುದೆನ್ನ ತನು ಬೇಟದ ಕಾಟದೊಳಿಂತು ಕಂಡುಮಿ
ನ್ನಪ್ಪೊಡಮಾಸೆವಾತನೆನಗೋಪನೆ ನೀಂ ದಯೆಗೆಯ್ಯಲಾಗದೇ ॥ ೯೯

ವ|| ಎಂದು ಕರುಣಂಬಡೆ ನುಡಿದೊಡಗೊಂಡು ಪೋದಳ್ ಮತ್ತಮೊಂದೆಡೆ ಯೊಳೊರ್ವಳ್ ಕುಂಟಣಿಯುಪರೋಧಕ್ಕೆ ಪಿರಿದೀವ ಮುದುಪನನುಡೆಯಲಂಜಿ ತನ್ನ ಬೇಸಱಂ ತನ್ನ ಸಬ್ಬವದಾಕೆಗಿಂತೆಂದಳ್-

ಚಂ|| ಕೊರೆವೊಡೆ ಬೆಟ್ಟುಗಳ್ ಬಿರಿವುವುಣ್ಮುವ ಲಾಳೆಯ ಲೋಳೆಗಳ್ ಪೊನ
ಲ್ವರಿವುವು ಕೆಮ್ಮಿ ಕುಮ್ಮಿದೊಡೆ ತೋಳೊಳೆ ಜೀವ ವಿಯೋಗಮಪ್ಪುದೆಂ ।
ದಿರದರ್ದೆಗಪ್ಪುದತ್ತಳಗಮಾ ನೆರೆಪಂ ನೆರೆವಂದು ಪೊಂಗಳಂ
ಸುರಿವೊಡಮಾರೊ ಸೈರಿಸುವರಾತನ ಪಲ್ಲಿಲಿವಾಯ ನಾತಮಂ ॥ ೧೦೦

೯೮. (ಅವಳ) ಕೋಪಕ್ಕೆ ಹೆದರಿ (ಅವಳ) ಅಭಿಪ್ರಾಯವನ್ನು ತಿಳಿದು ಕೊಟ್ಟು ಅವಳ ಮನಸ್ಸನ್ನು ವಶಪಡಿಸಿಕೊಂಡಿದ್ದರೂ ಅವಳು ರೇಗುವುದಕ್ಕೆ ಅಳತೆಯೂ ಅಂತ್ಯವೂ ಅಲ್ಲ. ತಲೆಹಿಡಿಕಿಯೂ ಶನಿಯಂತಹವಳೇ. ಮನೆಕೆಲಸ ಮಾಡುವ ದಾಸಿಯೂ ಮಾರಿಯಂತಹವಳೇ. ನಾದಿನಿಯು ಸೀರ್ಕರಡಿಯಂತಹವಳೇ. ಎಷ್ಟಾದರೂ ಸೂಳೆಯು ಒಲಿದೂ ಒಲ್ಲದಂತಿರುವವಳೆ ತಾನೆ! ಈ ತಲೆಬೇನೆಯನ್ನು ಹೇಗೆ ನೀಗಲಿ. ವ|| ಎಂದು ಹೇಳಿ ಮುಂದೆ ಹೋದನು. ಬೇರೊಬ್ಬ ಪ್ರಿಯಳು ತನ್ನ ತಾಯಿಯ ಕಣ್ಣನ್ನು ವಂಚಿಸಿ ತನ್ನ ಪ್ರಿಯಳ ಮನೆಗೆ ಹೋಗುತ್ತಿರುವ ತನ್ನ ಪ್ರೇಮದೊಡೆಯನನ್ನು ಹಿಡಿದುಕೊಂಡು ೯೯. ದೂದವಿಯರ ಕಯ್ಯಲ್ಲಿ ನಿನ್ನ ಕಾಲುಹಿಡಿದು ಕಳುಹಿಸಿದ ಮಾತುಗಳು ನಾಶವಾಗುತ್ತಿವೆ. (ನಿಷ್ಪ್ರಯೋಜಕವಾಗುತ್ತಿವೆ) ನಿತ್ಯವೂ ದುಃಖಪಟ್ಟು ಅಳುವುದರಿಂದ ಕಣ್ಣೀರು ವ್ಯರ್ಥವಾಗುತ್ತಿದೆ. ನಿಟ್ಟುಸಿರಿನ ಬಿಸಿಯುಸಿರು ಹಾಳಾಗುತ್ತಿದೆ. ನನ್ನ ಶರೀರವು ಬೇಟದ ಕಾಟದಿಂದ ಕ್ಷೀಣಿಸುತ್ತಿದೆ. ಇದನ್ನು ನೋಡಿಯೂ ಇನ್ನು ಮೇಲಾದರೂ ಆಶೆಯ ಮಾತನ್ನು ದಯೆಗೆಯ್ಯಬಾರದೇ? ವ|| ಎಂದು ಕರುಣೆಯು ಬರುವ ಹಾಗೆ ಮಾತನಾಡಿ ಜೊತೆಯಲ್ಲಿ ಕರೆದುಕೊಂಡು ಹೋದಳು. ಬೇರೊಂದು ಕಡೆಯಲ್ಲಿ ಕುಂಟಣಿಯ ಬಲಾತ್ಕಾರಕ್ಕೆ ವಿಶೇಷ ಧನವನ್ನು ಕೊಡುವ ಮುದುಕನನ್ನು ಬಿಡಲು ಅಂಜಿ ತನ್ನ ಬೇಸರವನ್ನು ತನ್ನ ಪ್ರಿಯಸಖಿಗೆ ಹೀಗೆಂದಳು ೧೦೦. (ಆ ಮುದುಕನು) ಗೊರಕೆಹೊಡೆದರೆ ಬೆಟ್ಟಗಳೇ ಬಿರಿದು ಹೋಗುತ್ತವೆ. ಸುರಿಯುವ ಜೊಲ್ಲಿನ ಲೋಳೆಗಳು ಪ್ರವಾಹವಾಗಿ ಹರಿಯುತ್ತವೆ.

ವ॥ ಎಂದು ನಗಿಸುತ್ತಿರ್ದಳ್ ಮತ್ತಮೊಂದೆಡೆಯೊಳೊರ್ವಳ್ ತನ್ನ ನಲ್ಲನಲ್ಲಿಗೆ ದೂದುವೋಗಿ ಬಂದ ದೂದವಿಗೇಗೆಯ್ವ ತೆಱನುಮನಱಿಯದೆ ಪದೆದು ಪಡೆಮಾತಂ ಬೆಸಗೊಳ್ವಳಂ ಕಂಡು-

ಚಂ॥ ಬಿರಯಿಸಿ ಬೇಟದೊಳ್ ಬರಿವ ನಲ್ಲರಗಲ್ದು ಕನಲ್ದೊನಲ್ದು ನ
ಲ್ಲರ ದೆಸೆಯಿಂದಮಟ್ಟೆವರೆ ಕೋಗಿಲೆಯಕ್ಕೆಲರಕ್ಕೆ ತುಂಬಿಯ ।
ಕ್ಕರಗಿಳಿಯಕ್ಕೆ ಬಂದೊಡಮೊಱಲ್ದೆರ್ದೆಯಾಱುವರೆಂದೊಡೋತ ದೂ
ತರೆ ತರೆ ಬಂದ ಸಬ್ಬವದ ಮಾತುಗಳಂ ಗುಡಿಗಟ್ಟಿ ಕೇಳರೇ ೧೦೧

ವ॥ ಅಂತುಮಲ್ಲದೆಯುಂ-

ಚಂ॥ ಮನದೊಳಲಂಪನಾಳ್ದಿನಿಯನಟ್ಟಿದ ದೂದರ ಸೀಯನಪ್ಪ ಮಾ
ತಿನ ರಸದೊಳ್ ಕೊನರ್ವುದು ತಳಿರ್ವುದು ಪೂವುದು ಕಾಯ್ವುದಂತು ಕಾ
ಯ್ದನಿತಱೊಳಂತು ನಿಂದು ಮನದೊಳ್ ತೊದಳಿಲ್ಲದ ನಲ್ಮೆಯೆಂಬ ನಂ
ದನವನಮೋಪರೊಳ್ ನೆರೆದೊಡಂತು ರಸಂ ಬಿಡೆ ಪಣ್ತುದಾಗದೇ ॥ ೧೦೨

ವ॥ ಅಂತುಮಲ್ಲದೆಯುಂ-

ಚಂ॥ ಅನುವಿಸೆ ಬೇಟಕಾಱನೊಲವಿರ್ಮಡಿಯಪ್ಪುದು ಬಯ್ಕೆ ಬೇಟಕಾ
ಱನ ಬಗೆ ನಿಲ್ಲದಿಕ್ಕೆಗೊಳಗಪ್ಪುದು ನಿಟ್ಟಿಸೆ ಬೇಟ ಬೇಟಕಾ ।
ಱನ ರುಚಿ ಬಂಬಲುಂ ತುಱುಗಲುಂ ಕೊಳುತಿರ್ಪುದು ನೂಂಕೆ ಬೇಟಕಾ
ಱನ ಮನವಟ್ಟಿ ಪತ್ತುವುದು ಬೇಟವಿದೇಂ ವಿಪರೀತವೃತ್ತಿಯೋ ॥ ೧೦೩

ಕೆಮ್ಮಿ ಎದುಗುಟ್ಟಿದರೆ ತೋಳಿನಲ್ಲಿಯೇ ಜೀವ ಹೋಗುತ್ತದೆಯೆಂಬ ಭಯ ವುಂಟಾಗುತ್ತದೆ. (ಇಂತಹ) ಆ ಮುದುಕನು (ನನ್ನಲ್ಲಿ) ಕೂಡುವುದಕ್ಕೆ ಬಂದು (ಎಷ್ಟೇ) ಹೊನ್ನುಗಳನ್ನು ಸುರಿದರೂ ಅವನ ಹಲ್ಲಿಲ್ಲದ ಬಾಯಿನ ದುರ್ಗಂಧವನ್ನು ಯಾರು ತಾನೆ ಸಹಿಸುತ್ತಾರೆ. ವ॥ ಎಂದು ನಗಿಸುತ್ತಿದ್ದಳು, ಇನ್ನೊಂದೆಡೆಯಲ್ಲಿ ಒಬ್ಬಳು ತನ್ನ ಪ್ರಿಯನ ಕಡೆಗೆ ಪ್ರೇಮಸಂದೇಶವನ್ನು ಕೊಂಡುಹೋಗಿ ಬಂದ ದೂತಿಗೆ ಏನು ಮಾಡಬೇಕೆಂಬುದನ್ನು ತಿಳಿಯದೆ ಆಶೆಪಟ್ಟು (ಅವನು ಕಳುಹಿಸಿದ) ಪ್ರತ್ಯುತ್ತರವನ್ನು ಕೇಳುವವಳನ್ನು ನೋಡಿ ೧೦೧. ವಿರಹವೇದನೆಯಿಂದ ನರಳುತ್ತಿರುವ ಪ್ರೇಮಿಗಳ ಕೋಪದಿಂದ ಅಗಲಿಹೋದ ತಮ್ಮ ನಲ್ಲರ ಕಡೆಯಿಂದ ಪ್ರೇಮಸಮಾಚಾರವು ಬರಲು ಕೋಗಿಲೆಯಾಗಲಿ, ಗಾಳಿಯಾಗಲಿ, ತುಂಬಿಯಾಗಲಿ, ಗಿಳಿಯಾಗಲಿ, ಬಂದರೂ ನಲಿದು ಮನಸ್ಸಮಾಧಾನವನ್ನು ಪಡೆಯುತ್ತಾರೆ ಎಂದಾಗ ತಮ್ಮ ಪ್ರೀತಿಪಾತ್ರರಾದ ದೂತರೇ ತಂದಿರುವ ಪ್ರಿಯವಾರ್ತೆಯನ್ನು ಪುಳಕಿತರಾಗಿ ಕೇಳುವುದಿಲ್ಲವೇ? ವ॥ ಹಾಗಲ್ಲದೆಯೂ ೧೦೨. ಪ್ರಿಯನು ಮನಸ್ಸಿನಲ್ಲಿ ಸಂತೋಷಗೊಂಡು ಕಳುಹಿಸಿದ ದೂತರ ಸಿಹಿಯಾದ ಮಾತಿನ ರಸದಲ್ಲಿ ಶುದ್ಧಪ್ರೇಮವೆಂಬ ನಂದನವನವು ಕವಲೊಡೆಯುವುದು, ಚಿಗುರುವುದು, ಹೂ ಬಿಡುವುದು. ಹಾಗೆಯೇ ಕಾಯಾಗುವುದು - ಮನಸ್ಸಿನಲ್ಲಿ ನಿಂತು ನಲ್ಲನಲ್ಲರ ಸಮಾಗಮದಲ್ಲಿ ಹಣ್ಣಾಗುವುದಿಲ್ಲವೇ? ವ॥ ಹಾಗಲ್ಲದೆಯೂ ೧೦೩. ಬಲಾತ್ಕಾರ ಮಾಡಿದರೆ ಪ್ರೇಮಿಯ ಪ್ರೀತಿ

ವ॥ ಇಂದುಮಿಾ ದೂದವರೆಂಬರ್ ಬೇಟಕಾಱರ ಬೇಟಮೆಂಬ ಲತೆಗಳರ್ದೆರ್ಪರ್ಪಂತಿರ್ದ ರೆಂತಪ್ಪ ಬೇಟಂಗಳುಮವರ್ ಪೊಸಯಿಸೆ ಪೊಸತಪ್ಪುದು ಕಿಡಿಸೆ ಕಿಡುವುದಂತುಮಲ್ಲದೆಯುಂ-

ಚಂ॥ ನುಡಿಗಳೊಳಾಸೆಯುಂಟೆನಲೊಡಂ ತಳಿದಂತಿರೆ ನಿಲ್ವುದೆಂತುಮಾ
ವೆಡೆಯೊಳಮಾಸೆಗಾಣೆನೆನೆ ತೊಟ್ಟನೆ ಪೋಪುವು ನಲ್ಲರಿರ್ವರೀ ।
ರೊಡಲೊಳಗಿರ್ಪ ಜೀವಮದುಕಾರಣದಿಂದಮೆ ಪೋಪ ಬರ್ಪೊಡಂ
ಬಡನೊಳಕೊಂಡ ದೂದವರ ಕೆಯ್ಯೊಳೆ ಕೆಯ್ಯೆಡೆಯಿರ್ಪುದಾಗದೇ ॥ ೧೦೪

ವ॥ ಎಂದು ನುಡಿಯುತ್ತುಂ ಬರೆವರೆ ಮತ್ತೊಂದೆಡೆಯೊಳೊರ್ವಂ ಗರ್ಭೇಶ್ವರಂ ತನ್ನ ಹೃದಯೇಶ್ವರಿಯನಗಲ್ದು ಬಂದು ಪೆಱರಾರುಮಂ ಮೆಚ್ಚದಾಕೆಯಂ ನೆನೆದು-

ಚಂ॥ ಮಿಱುಗುವ ತೋರಹಾರಮುಮನಪ್ಪಿನ ಕಾಳಸೆಗಡ್ಡಮೆಂಬ ಬೇ
ಸಱೆನೊಳೆ ಕಟ್ಟಲೊಲ್ಲದನಿತಪ್ಪಱನಿಟ್ಟುಳಿಗೊಂಡಲಂಪಿನ ।
ತ್ತೆಱಗಿದ ನಲ್ಲಳಳ್ಳೆರ್ದೆಯೊಳಕ್ಕಟ ಬೆಟ್ಟುಗಳುಂ ಬನಂಗಳುಂ
ತೊಱೆಗಳುಮಿಾಗಳೊಡ್ಡಱೆಯದೊಡ್ಡಿಸೆ ಸೈರಿಸುವಂತುಟಾದುದೇ ॥ ೧೦೫

ವರಡರಷ್ಟಾಗುತ್ತದೆ. ಬಯ್ದರೆ ಪ್ರಿಯನ ಮನಸ್ಸು ಅಸ್ಥಿರವಾಗು[illegible]. ದೃಷ್ಟಿಸಿ ನೋಡಿದರೆ ಪ್ರೇಮವೂ ಬೇಟೆಕಾರನ ಸವಿಯೂ ರಾಶಿರಾಶಿಯಾಗುತ್ತದೆ. ನೂಂಕಿದರೆ ಬೇಟೆಕಾರನ ಮನಸ್ಸು ಬೆನ್ನಟ್ಟಿ ಬರುತ್ತದೆ. ಆದುದರಿಂದ ಈ ಬೇಟವೆಂಬುದು ಎಂಥ ಪರಸ್ಪರ ವಿರೋಧ ಸ್ವಭಾವವುಳ್ಳುದೋ? ವ॥ ಹೀಗೆ ದೂದವಿಯರೆಂಬುವರು ಬೇಟೆಕಾರರ ಬೇಟವೆಂಬ ಲತೆಗೆ ಆಶ್ರಯದಂತಿದ್ದಾರೆ. ಎಂತಹ ಪ್ರೇಮವೂ ಅವರು ಹೊಸದು ಮಾಡಿದರೆ ಹೊಸದಾಗುತ್ತದೆ. ಕೆಡಿಸಿದರೆ ಕೆಟ್ಟುಹೋಗುತ್ತದೆ. ಅಲ್ಲದೆಯೂ ೧೦೪. ಪ್ರೇಮಿಗಳಿಬ್ಬರ ಶರೀರದಲ್ಲಿರುವ ಪ್ರಾಣವು ದೂತರು ತರುವ ಮಾತುಗಳಲ್ಲಿ ಆಸೆಯಿದೆಯೆಂದೊಡನೆ ಜೀವಧಾರಣೆ ಮಾಡಿದ ಹಾಗೆ ಎದ್ದು ನಿಲ್ಲುತ್ತದೆ. ಯಾರ ಕಡೆಯಲ್ಲಿಯೂ ಆಸೆಯಿಲ್ಲವೆಂದೊಡನೆ ತಟಕ್ಕನೆ ಹೊರಟು ಹೋಗುತ್ತದೆ. ಆದುದರಿಂದ ಪ್ರಿಯರಲ್ಲಿಗೆ ಹೋಗಿ ಬಂದು ಅವರ ಒಪ್ಪಿಗೆಯನ್ನು ಪಡೆದಿರುವ ದೂತಿಯರ ಕಯ್ಯಲ್ಲಿಯೇ ಪ್ರಣಯಿಗಳ ಪ್ರಾಣವು ಮೀಸಲಾಗಿರುವುದು ವ॥ ಎಂದು ಮಾತನಾಡುತ್ತ ಬರುತ್ತಿರಲು ಮತ್ತೊಂದು ಕಡೆಯಲ್ಲಿ ಒಬ್ಬ ಆಗರ್ಭ ಶ್ರೀಮಂತನು ತನ್ನ ಪ್ರಾಣಪ್ರಿಯೆಯನ್ನು ಅಗಲಿ ಬಂದು ಬೇರೆ ಯಾರನ್ನೂ ಮೆಚ್ಚದೆ ಆಕೆಯನ್ನು ಜ್ಞಾಪಿಸಿಕೊಂಡು ೧೦೫. ಪ್ರಿಯಳು ಮುತ್ತಿನ ಹಾರವನ್ನು ಧರಿಸಿದರೆ ನಮ್ಮ ಆಲಿಂಗನದ ಬೆಸುಗೆಗೆ ಅಡ್ಡಿಯಾಗುತ್ತದೆಂದು ಅವಳ ಕತ್ತಿನಲ್ಲಿ ಅದನ್ನು ತೊಡಿಸದೇ ಅಷ್ಟು ಪ್ರೇಮವನ್ನು ಸೆಳೆದುಕೊಂಡ ನಾನು ಈಗ ಸುಖದ ಕಡೆಗೇ ಬಾಗಿದ ನಲ್ಲಳ ನಡುಗುವ ಎದೆಗೂ ನನಗೂ ಮಧ್ಯೆ ಅಯ್ಯೋ ಬೆಟ್ಟಗಳೂ ತೊರೆಗಳೂ ಕಾಡುಗಳೂ ರಾಶಿ ರಾಶಿಯಾಗಿ ಅಡ್ಡವಾಗಿರುವಂತೆ ಚಾಚಿಕೊಂಡಿರಲು ಸಹಿಸುವ ಹಾಗಾಯಿತೆ? †

---

† (ಅಷ್ಟು ಗಾಢವಾದ ಪ್ರೇಮವನ್ನು ಅಗಲಿ ನಾನು ದೂರವಿರುವುದನ್ನು ಹೇಗೆ ಸಹಿಸಲಿ ಎಂದು ಭಾವ)

ಮುನಿಸಿನೊಳಾದಮೇವಯಿಸಿ ಸೈರಿಸದಾದಟಲೊಳ್ ಕಸಲ್ದು ಕಂ
ಗನೆ ಕನಲುತ್ತುಮುಮ್ಮಳಿಸಿ ಸೈರಿಸಲಾಱದೆ ಮೇಲೆವಾಯ್ದು ಬ
ಯ್ದನುವಿಸಿ ಕಾಡಿ ನೋಡಿ ತಿಳಿದಟ್ಟಜನಿಟ್ಟುಳಿಗೊಂಡಲಂಪುಗಳ್
ಕನಸಿನೊಳಂ ಪಳಂಚಲೆವುವೆನ್ನೆರ್ದೆಯೊಳ್ ತರಳಾಯತೇಕ್ಷಣೇ ॥ ೧೦೬

ವ॥ ಎಂದು ಸೈರಿಸಲಾರದೆ ತನ್ನ ಪ್ರಾಣವಲ್ಲಭೆಯೊಡನಿರ್ದಂದಿನ ಮುಳಿಸೊಸಗೆಗಳಂ ನೆನೆದು-

ಚಂ॥ ಬಗೆ ಗೆಲಲೆಂದು ಕಾದಿ ಪುಸಿನಿದ್ದೆಯೊಳಾನಿರೆ ಲಲ್ಲೆಗೆಯ್ದು ಲ
ಲ್ಲೆಗೆ ಮಱಿದಿರ್ದೊಡಟ್ಟಜಿನೊಳೊಂದಿ ಮೊಗಂ ಮೊಗದತ್ತ ಸಾರ್ಚ ಬೆ ।
ಚ್ಚಗೆ ನಿಡುಸುಯ್ದ ನಲ್ಲಳ ಮುಖಾಂಬುಜ ಸೌರಭದೊಳ್ ಪೊದಳ್ದದೇಂ
ಮಗಮಗಿಸಿತ್ತೊ ಕತ್ತುರಿಯ ಕಪ್ಪುರದೊಂದು ಕದಂಬದಂಬುಲಂ ॥ ೧೦೭

ವ॥ ಎಂದು ತನ್ನೊಳ್ ಪಲುಂಬುತಿರ್ದನಂ ಕಂಡೀತನುಮೆಮ್ಮಂದಿಗನುಮೆಮ್ಮ ನಂಟನು ಮಕ್ಕುಮೆಂದು ಮುಗುಳ್ನಗೆ ನಗುತ್ತುಂ ಬರ್ಪನೊಂದೆಡೆಯೊಳ್-

ಚಂ॥ ಒಲವಿನೊಳಾದ ಕಾಯ್ದು ಮಿಗೆ ಕಾದಲನಂ ಬಿಸುಟಂತೆ ಪೋಪ ಕಾ
ದಲಳಱುತುಂ ತೆಱಂದಿರಿದು ನೋಡಿದ ನೋಟದೊಳೆಯ್ದೆ ತಳ್ತ ಪೆ ।
ರ್ಮೊಲೆ ಪೊಱಮುಯ್ದು ಬೆನ್ನಿನಿತುಮೊರ್ಮೆಯೆ ನಾಂಬಿನಮುಣ್ಮೆ ಪೊಣ್ಮೆ ಕ
ಣ್ಮಲರ್ಗಳಿನೆಚ್ಚು ಪಾಯ್ದುವರಲಂಬುಗಳಂತೆ ವಿಲೋಚನಾಂಬುಗಳ್ ॥೧೦೮

೧೦೬. ಎಲೌ ಚಂಚಲಾಕ್ಷಿಯೇ ಕೋಪದಲ್ಲಿ ವಿಶೇಷವಾಗಿ ಅಸಮಾಧಾನಗೊಂಡು ಸಹಿಸಲಾರದೆ ವಿಶೇಷ ಕೋಪಿಸುತ್ತ ದುಃಖಿಸಿ ಹೇಗೂ ತಾಳಲಾರದೆ ಮೇಲೆ ಬಿದ್ದು ಬಯ್ದು ಬಲಾತ್ಕರಿಸಿ ಕಾಡಿ ನೋಡಿ ಸಮಾಧಾನವನ್ನು ಹೊಂದಿ ಮುತ್ತನ್ನು ಸೆಳೆದುಕೊಂಡ ಸುಖದ ನೆನಪುಗಳು ಕನಸ್ಸಿನಲ್ಲಿಯೂ ನನ್ನೆದೆಯನ್ನು ತಗುಲಿ ಪೀಡಿಸುತ್ತಿರುವುವು ವ॥ ಎಂದು ಸೈರಿಸಲಾರದೆ ತನ್ನ ಪ್ರಾಣವಲ್ಲಭೆಯ ಜೊತೆಯಲ್ಲಿದ್ದ ಆ ದಿನದ ಕೋಪ ಪ್ರಸಾದಗಳನ್ನು ನೆನೆಸಿಕೊಂಡು ೧೦೭. (ಪ್ರಿಯೆಯೊಡನೆ) ಜಗಳವಾಡಿ ಅವಳ ಮನಸ್ಸನ್ನು ಗೆಲ್ಲಬೇಕೆಂದು ನಾನು ಹುಸಿನಿದ್ದೆಯಲ್ಲಿರಲು ತಾನು ಮುದ್ದುಮಾತುಗಳನ್ನಾಡಿ ಆ ಮುದ್ದುಮಾತಿಗೂ ನಾನು ಮೈಮರೆತವನಂತಿರಲು ಪ್ರೇಮದಿಂದ ಕೂಡಿ ನನ್ನ ಮುಖದೊಡನೆ ತನ್ನ ಮುಖವನ್ನು ಸೇರಿಸಿ ಬಿಸಿಯಾಗಿ ನಿಟ್ಟುಸಿರು ಬಿಟ್ಟ ಪ್ರಿಯಳ ಮುಖಕಮಲದ ಸುಗಂಧದಲ್ಲಿ ಸೇರಿಕೊಂಡ ಪಚ್ಚಕರ್ಪೂರ ಮಿಶ್ರಿತವಾದ ತಾಂಬೂಲದ ಉಂಡೆಯೂ ಎಷ್ಟು ಗಮಗಮಿಸಿತ್ತೊ? ವ॥ ಎಂದು ತನ್ನಲ್ಲಿಯೇ ಹಲುಬುತ್ತಿದ್ದವನನ್ನು ಅರ್ಜುನನು ಕಂಡು ಇವನೂ ನಮ್ಮಂತಹವನೂ ನಮ್ಮ ನಂಟನೂ ಆಗಿದ್ದಾನೆ ಎಂದು ಮುಗುಳ್ನಗೆ ನಗುತ್ತ ಬರುತ್ತಿದ್ದವನು ಒಂದು ಕಡೆಯಲ್ಲಿ ೧೦೮. ಪ್ರಣಯಕಲಹದಲ್ಲಿ ಉಂಟಾದ ಕೋಪವು ಹೆಚ್ಚಾಗಲು ಪ್ರಿಯನನ್ನು ತೊರೆದು ಹೋಗುತ್ತಿರುವ ಪ್ರಿಯಳು ಬಗಬಗೆಯಾಗಿ ಅಳುತ್ತಾ ಹಿಂತಿರುಗಿ ನೋಡಿದ ನೋಟದಲ್ಲಿ ಅವಳ ಗಾಢವಾದ ಪೆರ್ಮೊಲೆಗಳೂ ಹೆಗಲ ಹಿಂಭಾಗವೂ ಬೆನ್ನೂ ಏಕಕಾಲದಲ್ಲಿ ತೊಯ್ದುಹೋಗುವ ಹಾಗೆ ಅವಳ ಹೂವಿನಂತಿರುವ ಕಣ್ಣುಗಳಿಂದ

ವ|| ಮತ್ತಮೊಂದೆಡೆಯೊಳೊಂದು ಕಾಳಾಗರು ಧೂಪ ಧೂಮ ಮಲಿನ ಶ್ಯಾಮಲಾಲಂಕೃತವಿಚಿತ್ರಭಿತ್ತಿವಿರಾಜಿತರಮ್ಯಹರ್ಮ್ಯತಳದೊಳ್ ಪಲಕಾಲಮಗಲ್ದ ನಲ್ಲರಿರ್ವರುಮೊಂದೆಡೆಯೊಳ್ ಕೂಡಿ-

ಮ|| ಸಮಸಂದಬ್ಜಜಲಂಪನೀಯೆ ಶಯನಂ ಘರ್ಮಾಂಬುವಿಂ ನಾನೆ ಮು
ನ್ನಮೆ ನಾಣೊಟ್ಟುದಿವೋಗಿ ಸೂಸುವ ಪವಂ ಗಂಗಾಂಬುವಂ ಪೋಲೆ ವಿ ।
ಭ್ರಮಮಂ ಕಂಠರವಕ್ಕೆ ತಾಡನ ರವಂ ತಂದೀಯೆ ತಳ್ಪಯ್ಯೆಯೊಳ್
ಸಮಹಸ್ತಂಬಿಡಿವಂತುಟಾಯ್ತು ಸುರತ ಪ್ರಾರಂಭ ಕೋಳಾಹಳಂ || ೧೦೯

ವ|| ಅಂತನೇಕಪ್ರಕಾರ ಪುರ ಜನಜನಿತ ವಿಕಾರಂಗಳಂ ತೊಟಲ್ದು ನೋಟ್ಪನ್ನೆಗಂ-

ಚಂ|| ಸೊಡರ್ಗುಡಿಯೊಯ್ಯನಾಗೆ ಪೊಸ ಮಲ್ಲಿಗೆ ಮೆಲ್ಲಗೆ ಕಂಪು ನಾಱೆ ತ
ಣ್ಣಿಡಿದೆಲರೂದೆ ಗಾವರದ ಮೆಲ್ಲುಲಿ ತುಂಬಿಯ ಗಾವರಂಗಳಂ ।
ಗೆಡೆಗೊಳೆ ಚಂದ್ರಿಕಾಪ್ರಭೆ ಮೊದಲ್ಗಿಡೆ ನಾಡೆ ವಿತರ್ಕದಿಂ ಬೆರ
ಲ್ಗಿಡಿದು ಗುಣಾರ್ಣವಂ ನೆಱೆಯೆ ನಿಟ್ಟಿಸಿದಂ ಬೆಳಗಪ್ಪ ಜಾವಮಂ ||೧೧೦

ವ|| ಆಗಳ್ ತನ್ನೊಡನೆ ತೊಟಲ್ವ ನಾಗರಕ ವಿಟ ವಿದೂಷಕ ಪೀಠಮರ್ದಕರ್ಕಳನಿರಲ್ವೇಲ್ದು ರಾಜಮಂದಿರಮಂ ಪೊಕ್ಕು ತನ್ನ ಪವಡಿಸುವ ಮಾಡಕ್ಕೆವಂದು

ಕಣ್ಣೀರು ಪುಷ್ಪಬಾಣಗಳಂತೆ ಹೆಚ್ಚಿ ಚಿಮ್ಮಿ ಸೂಸಿ ಹರಿದುವು. ವ|| ಮತ್ತೊಂದು ಕಡೆಯಲ್ಲಿ ಕಪ್ಪಾದ ಅಗುರು ಧೂಪದ ಹೊಗೆಯಿಂದ ಮಾಸಿದ ಶ್ಯಾಮಲ ವರ್ಣದಿಂದ ಅಲಂಕರಿಸಲ್ಪಟ್ಟು ಚಿತ್ರಮಯವಾದ ಗೋಡೆಗಳಿಂದ ವಿರಾಜಮಾನವಾಗಿರುವ ರಮಣೀಯವಾದ ಉಪ್ಪರಿಗೆಯ ಪ್ರದೇಶದಲ್ಲಿ ಹಲವು ಕಾಲ ಅಗಲಿದ್ದ ಇಬ್ಬರು ಪ್ರೇಮಿಗಳು ಒಂದು ಕಡೆ ಕೂಡಿದ್ದರು. ೧೦೯. ಆ ಪ್ರಿಯ ಪ್ರೇಯಸಿಯರಲ್ಲಿ ಸಮಾನವಾಗಿ ಉಂಟಾದ ಪ್ರೀತಿಯು ಸೌಖ್ಯವನ್ನುಂಟುಮಾಡಲು ಬೆವರಿನಿಂದ ಹಾಸಿಗೆಯು ತೊಯ್ದು ಹೋಯಿತು. ಮೊದಲೇ ಲಜ್ಜೆಯಿಂದ ಪ್ರಸರಿಸಿ ಹರಿಯುವ ಸುರತದ್ರವವು ಗಂಗಾಜಲವನ್ನು ಹೋಲುತ್ತಿತ್ತು. ಕತ್ತಿನ ಗರಗರಿಕೆಯ ಶಬ್ದಕ್ಕೆ ಸುರತಧ್ವನಿ ಸೊಗಸನ್ನುಂಟುಮಾಡುತ್ತಿತ್ತು. ಆ ಹಾಸಿಗೆಯಲ್ಲಿ ರತಿಕ್ರೀಡೆಯ ಪ್ರಾರಂಭದ ಆರ್ಭಟವು ಸಮಾನ ಹಸ್ತವನ್ನು ಹಿಡಿಯುವ ಹಾಗಾಯಿತು. ಪ್ರಿಯ ಪ್ರೇಯಸಿಯರ ಸುರತಕ್ರೀಡೆಯು ಸಮಾನ ಪ್ರಮಾಣವುಳ್ಳದ್ದಾಯಿತು. ವ|| ಹೀಗೆ ಪುರಜನರ ಅನೇಕ ಪ್ರಕಾರವಾದ ವಿಕಾರಗಳನ್ನು ಅರ್ಜುನನು ನೋಡುತ್ತ ಬರುತ್ತಿರಲು ೧೧೦. ದೀಪದ ಕುಡಿಯು ಮಲಿನವಾಯಿತು, ಮಲ್ಲಿಗೆಯು ಮೃದುವಾಗಿ ವಾಸನೆಯನ್ನು ಬೀರಿತು, ತಂಪಾದ ಗಾಳಿ ಬೀಸಿತು. ಪ್ರಾತಃಕಾಲದ ಮೃದುವಾದ ಧ್ವನಿಯು ದುಂಬಿಯ ಧ್ವನಿಯೊಡನೆ ಕೂಡಿಕೊಂಡಿತು. ಬೆಳುದಿಂಗಳಿನ ಕಾಂತಿ ಕಡಮೆಯಾಯಿತು. ವಿಶೇಷವಾದ ತರ್ಕದಿಂದ ಅರ್ಜುನನು ಬೆಳಗಾಗುವ ಹೊತ್ತನ್ನು ಪೂರ್ಣವಾಗಿ ತಿಳಿದನು. ವ|| ಆತ ತನ್ನೊಡನೆ ತೊಳಲುತ್ತಿದ್ದ ನಾಗರಿಕ, ವಿಟ, ವಿದೂಷಕ, ಪೀಠಮರ್ದಕರನ್ನು ಇರಹೇಳಿ ಅರಮನೆಯನ್ನು ಪ್ರವೇಶಿಸಿ ತಾನು ಮಲಗುವ

ಹಂಸ ಧವಳ ಶಯ್ಯಾತಳದೊಳ್ ಗಂಗಾನದೀ ಪುಳಿನ ಪರಿಸರ ಪ್ರದೇಶದೊಳ್ ಮಱಿದೊಱಗುವೈರಾವತದಂತೆ ಪವಡಿಸಿ ಕಿಱಿದಾನುಂ ಬೇಗದೊಳ್ ಸುಭದ್ರೆಯುಂ ಕನಸಿನೊಳ್ ಕಂಡು ನನಸೆಂದು ಬಗೆದು ಮಂಗಳಪಾಠಕರವಂಗಳೊಳ್ ಭೋಂಕನೆಟ್ಟುತ್ತನನ್ನೆಗಂ-

ಚಂ॥ ಪುದಿದ ತಮಂ ಮದೀಯ ಕಿರಣಾಳಿಯನಾನದವೋಲೆ ನಿನ್ನ ನಾ
ವದಟರುಮಾನರೆನ್ನುದಯಮಭ್ಯುದಯಂ ನಿನಗೆಂದು ಕನ್ನೆಯಂ ।
ಪದೆದೊಡಗೊಂಡು ಪೋಗಿರದಿರೆಂದು ಗುಣಾರ್ಣವ ಭೂಭುಜಂಗೆ ಕ
ಟ್ಟಿದಿರೊಳೆ ಬಟ್ಟೆದೋಱುವವೊಲಂದೊಗೆದಂ ಕಮಲೈಕಬಾಂಧವಂ ॥೧೧೧

ಇದು ವಿವಿಧ ವಿಬುಧಜನವಿನುತ ಜಿನಪದಾಂಭೋಜ
ವರ ಪ್ರಸಾದೋತ್ಪನ್ನ ಪ್ರಸನ್ನ ಗಂಭೀರ ವಚನ ರಚನ
ಚತುರ ಕವಿತಾಗುಣಾರ್ಣವ ವಿರಚಿತಮಪ್ಪ
ವಿಕ್ರಮಾರ್ಜುನ ವಿಜಯದೊಳ್
ಚತುರ್ಥಾಶ್ವಾಸಂ

ಉಪ್ಪರಿಗೆಯ ಮನೆಗೆ ಬಂದು ಹಂಸದಷ್ಟು ಬೆಳ್ಳಗಿರುವ ಹಾಸಿಗೆಯಲ್ಲಿ ಗಂಗಾನದಿಯ ಮರಳು ದಿಣ್ಣೆಯ ಪ್ರದೇಶದಲ್ಲಿ ಮರೆತು ಮಲಗಿರುವ ಐರಾವತದ ಹಾಗೆ ಮಲಗಿದ್ದು ಕೆಲವು ಕಾಲದ ಮೇಲೆ ಸುಭದ್ರೆಯನ್ನು ಕನಸಿನಲ್ಲಿ ಕಂಡು ಅದು ಪ್ರತ್ಯಕ್ಷವೇ ಎಂದು ಭಾವಿಸುವಷ್ಟರಲ್ಲಿ ಮಂಗಳವನ್ನು ಹಾಡುವ ಹೊಗಳುಭಟರ ಶಬ್ದಗಳಿಂದ ಇದ್ದಕ್ಕಿದ್ದ ಹಾಗೆ ಎದ್ದನು. ಅಷ್ಟರಲ್ಲಿ ೧೧೧. ವ್ಯಾಪ್ತವಾದ ಕತ್ತಲೆಯು ನನ್ನ ಕಿರಣಸಮೂಹಗಳನ್ನು ಎದುರಿಸಲಾರದು. ಹಾಗೆಯೇ ನಿನ್ನನ್ನು ಯಾವ ಶೂರರೂ ಎದುರಿಸರು. ನನ್ನ ಉದಯವು ನಿನಗೆ ಶ್ರೇಯಸ್ಕರವಾದುದು, ಕನ್ಯೆಯಾದ ಸುಭದ್ರೆಯನ್ನು ಬಯಸಿ ಜೊತೆಯಲ್ಲಿ ಕರೆದುಕೊಂಡು ಹೋಗು (ಹೋಗದೇ ಇರಬೇಡ) ಇಲ್ಲಿರಬೇಡ ಎಂದು ಅರ್ಜುನ ಮಹಾರಾಜನಿಗೆ ಮುಂದಿನ ದಾರಿ ತೋರಿಸುವ ಹಾಗೆ ಸೂರ್ಯನು ಆ ದಿನ ಉದಯವಾದನು. ವ॥ ಇದು ಅನೇಕ ದೇವತೆಗಳಿಂದ ಸ್ತುತಿಸಲ್ಪಟ್ಟ ಜಿನಪಾದ ಕಮಲಗಳ ವರಪ್ರಸಾದದಿಂದ ಹುಟ್ಟಿದುದೂ ತಿಳಿಯೂ ಗಂಭೀರವೂ ಆದ ಮಾತುಗಳ ರಚನೆಯಲ್ಲಿ ಚಾತುರ್ಯವನ್ನುಳ್ಳ ಕವಿತಾ ಗುಣಾರ್ಣವನಿಂದ ರಚಿತವಾದ ವಿಕ್ರಮಾರ್ಜುನ ವಿಜಯದಲ್ಲಿ ನಾಲ್ಕನೆಯ ಆಶ್ವಾಸವು.

# ಪಂಚಮಾಶ್ವಾಸಂ

ಕಂ|| ಶ್ರೀ ವೀರಶ್ರೀ ಕೀರ್ತಿ
ಶ್ರೀ ವಾಕ್‌ಶ್ರೀಯೆಂಬ ಪೆಂಡಿರಗಲದೆ ತನ್ನೊಳ್ ।
ಭಾವಿಸಿದ ಪೆಂಡಿರೆನಿಸಿದ
ಸೌವಾಗ್ಯದ ಹರಿಗನೆಮ್ಮನೇನೊಲ್ದಪನೋ ॥ ೧

ಎಂಬ ಬಗೆಯೊಳ್ ಸುಭದ್ರೆ ಪ
ಲುಂಬಿ ಮನಂಬಸದೆ ತನುವನಾಱಿಸಲಲರಿಂ ।
ತುಂಬಿಗಳಿಂ ತಣ್ಣೆಲರಿಂ
ತುಂಬಿದ ತಿಳಿಗೊಳದಿನೆಸೆವ ಬನಮಂ ಪೊಕ್ಕಳ್ । ೨

ತಳತಳಿಸಿ ಪೊಳೆವ ಮಾವಿನ
ತಳಿರ್ಗಳಶೋಕೆಗಳ ಮಿಸುಪ ಲತೆಗಳ ನೆಲೆ ಬ ।
ಳ್ವಳ ಬಳೆದ ಬೇಟದುರುಳಿಯ
ಬಳಗಮಿದೆಂದೆಳೆಯಳೆಳಸಿ ತಳವೆಳಗಾದಳ್ ॥ ೩

ಕೊಳದ ತಡಿವಿಡಿದು ಬೆಳೆದೆಳ
ದಳಿರ್ಗಳಶೋಕೆಗಳ ಲತೆಯ ಮನೆಗಳೊಳೆ ತೆಱಂ ।
ಬೊಳೆವಲರ ಬಸದೆ ಸುಟೆವಳಿ
ಗಳ ಬಳಗದ ದನಿಗೆ ಕಿನಿಸಿ ಕಿಂಕಿಱಿವೋದಳ್ ॥ ೪

ಸುರಯಿಯ ಬಿರಿಮುಗುಳ್ಗಳ ಪೊರೆ
ವೊರೆಯೊಳ್ ಪೊಱೆವೊರಕನಲ್ಲದಲ್ಲುಗುವ ರಜಂ ।
ಬೊರೆದು ಪರಕಲಿಸಿದಳಿಕುಳ
ಪರಿಕರಮುಮನತನುಶಿಖಿಯ ಕಿಡಿಗಳೆ ಗೆತ್ತಳ್ ॥ ೫

೧. ಲಕ್ಷ್ಮಿ ಜಯಲಕ್ಷ್ಮಿ ಕೀರ್ತಿಲಕ್ಷ್ಮಿ ವಾಕ್‌ಲಕ್ಷ್ಮಿ ಎಂಬ ಸ್ತ್ರೀಯರು ತನ್ನನ್ನು ಯಾವಾಗಲೂ ಧ್ಯಾನಿಸುತ್ತಿರುವ ಸ್ತ್ರೀಯರು ಎಂಬ ಸೌಭಾಗ್ಯವನ್ನುಳ್ಳ ಅರ್ಜುನನು ನನ್ನನ್ನು ಪ್ರೀತಿಸುತ್ತಾನೆಯೋ ಇಲ್ಲವೋ? ೨. ಎಂಬ ಮನಸ್ಸಿನಿಂದ ಕೂಡಿದ ಸುಭದ್ರೆಯು ಹಲುಬಿ ಮನಸ್ಸನ್ನು ಎರಡು ಭಾಗ ಮಾಡದೆ (ಏಕಮನಸ್ಕಳಾಗಿ) ಶರೀರದ (ವಿರಹದ) ಸಂತಾಪವನ್ನು ಆರಿಸಿಕೊಳ್ಳಲು ಹೂವಿನಿಂದಲೂ ದುಂಬಿಗಳಿಂದಲೂ ತಂಗಾಳಿಯಿಂದಲೂ ತುಂಬಿದ ತಿಳಿನೀರಿನ ಕೊಳಗಳಿಂದಲೂ ಸೊಗಯಿಸುವ ವನವನ್ನು ಪ್ರವೇಶಿಸದಳು. ೩. ತಳತಳ ಎಂದು ಹೊಳೆಯುವ ಮಾವಿನ ಚಿಗುರುಗಳ, ಅಶೋಕ ವೃಕ್ಷಗಳ, ಹೊಳೆಯುವ ಬೆಳ್ಳಿ ಮೋಡಗಳ ಈ ಪ್ರದೇಶವು ಅತ್ಯತಿಶಯವಾಗಿ ಬೆಳೆಯುವ ಪ್ರೇಮದುಂಡೆಗಳ ಸಮೂಹವೆಂದು ಬಾಲೆಯಾದ ಸುಭದ್ರೆಯು ತಳವೆಳಗಾದಳು. ೪. ಸರೋವರದ ದಡವನ್ನೇ ಅನುಸರಿಸಿ ಬೆಳೆದ ಎಳೆಯ ಚಿಗುರನ್ನುಳ್ಳ ಅಶೋಕ ಮರಗಳ ಲತಾಗೃಹಗಳಲ್ಲಿಯೇ ವಿಧವಿಧವಾಗಿ ಹೊಳೆಯುವ ಹೂವುಗಳಿಗೆ ಮುತ್ತಿ ಸುತ್ತಾಡುವ ದುಂಬಿಗಳ ಧ್ವನಿಗೆ ಕೋಪಿಸಿ ಕಿರಿಕಿರಿಯಾದಳು. ೫. ಸುರಗಿಯ ಹೂವಿನ ಅರಳಿದ ಮೊಗ್ಗುಗಳ ಒತ್ತಾದ ಪದರಗಳಲ್ಲಿ ಲಘುವಾಗಿ

ವ|| ಅಂತು ನನೆಯ ಕೊನೆಯ ತಳಿರ ನಿಜಿದಳಿರ ಮುಗುಳ ಬರಿಮುಗುಳ ಮಿಡಿಯ ಕಿಱುಮಿಡಿಯ ಬಲ್ಮಿಡಿಗಳೊಳಱಗಿ ತುಱುಗಿದ ಬನಮಂ ಪೊಕ್ಕಲ್ಲಿಯುಂ ಮೆಯ್ಯನಾಱಿಸಲಾಱದೆ ಪೂತ ಚೂತಲತೆಗಳೊಳ್ ತಳ್ತೊಯ್ಯನೆ ಪೊಸ ಮುತ್ತಿನ ಬಾಸಣಿಗೆಯೊಳ್ ಬಾಸಣಿಸಿದ ಬರಿ ಮುಗುಳ್ಗಳೊಳ್ ತುಱುಗಿದದಿಮುರ್ತ್ತೆಯ ಸುತ್ತಿನೊಳಸೆದುಪಾಶ್ರಯಂಬಡೆದ ಸಾಂದ್ರ ಚಂದ್ರಕಾಂತದ ಶಿಲೆಯನೊಳಗುಮಾಡಿ-

ಮ|| ಇದಿರೊಳ್ ಕಟ್ಟಿದ ತೋರಣಂ ನಿಜಿದಳಿರ್ ಪೂಗೊಂಚಲಂದೆತ್ತಮೆ
ತ್ತಿದ ಪೂಮಾಲೆ ಪರಾಗ ರಾಗಮುದಿತಾಶಾ ಭಾ ಸಮುದ್ಯನ್ಮಧೂ ।
ನ್ಮದ ಭೃಂಗಧ್ವನಿ ಮಂಗಳಧ್ವನಿಯೆನಲ್ ಸಾಲ್ವನ್ನೆಗಂ ತಾನೆ ತ
ಕ್ಕುದು ಕಾಮಂಗೆ ವಿವಾಹಮಂಟಪಮೆನಲ್ಕಾ ಮಾಧವೀಮಂಟಪಂ ॥ ೬

ವ|| ಆ ಮಾಧವೀ ಲತಾಮಂಟಪಮಂ ಕಾಮನ ಡಾಮರಕ್ಕಳ್ಕಿ ವನದುರ್ಗಂಬುಗುವಂತೆ ಪೊಕ್ಕದಱೊಳಗೆ ಕಪ್ಪುರವಳುಕಿನ ಜಗಲಿಯನಗಲಿತಾಗಿ ಸಮೆದು ಚಂದನದೆಳದಳಿರ್ಗಳಂ ಪಾಸಿ ಮಲ್ಲಿಗೆಯಲರ್ಗಳಂ ಪೂವಾಸಿ ಮೃಣಾಳನಾಳದೊಳ್ ಸಮೆದ ಸರಿಗೆಗಂಕಣಂಗಳುಮಂ ಯವ ಕಳಿಕೆಗಳೊಳ್ ಸಮೆದ ಕಟಿಸೂತ್ರಮುಮಂ ಸಾರ ಕರ್ಪೂರದೊಳ್ ವಿರಚಿಸಿದ ಹಾರಮುಮಂ

ಹೊರಳಾಡಿ ಅಲ್ಲಿ ಸುರಿಯುವ ಪರಾಗದಿಂದ ಲೇಪಿಸಲ್ಪಟ್ಟು ಹಾರಾಡುತ್ತಿರುವ ದುಂಬಿಯ ಸಮೂಹದ ಪರಿವಾರವನ್ನು ಕೂಡ ಮದನಾಗ್ನಿಯ ಕಿಡಿಗಳೆಂದೇ (ಸುಭದ್ರೆಯು) ಭಾವಿಸಿದಳು. ವ|| ಹಾಗೆ ಹೂವಿನ, ರೆಂಬೆಗಳ, ಚಿಗುರಿನ, ನಿರಿಯಾಗಿರುವ ಚಿಗುರುಗಳ, ಭಾರದಿಂದ ಬಗ್ಗಿ ಕಿಕ್ಕಿರಿದ ವನವನ್ನು ಪ್ರವೇಶಿಸಿ ಅಲ್ಲಿಯೂ ಶರೀರತಾಪವನ್ನು ಆರಿಸಲಾರದೆ ಹೂವನ್ನು ಬಿಟ್ಟಿರುವ ಮಾವಿನ ಬಳ್ಳಿಗಳಿಗೆ ತಗುಲಿಸಿದ ಹೊಸ ಮುತ್ತಿನ ಹೊದಿಕೆಯಲ್ಲಿ ಬಿರಿದ ಮೊಗ್ಗುಗಳಲ್ಲಿ ಸೇರಿಕೊಂಡಿರುವ ಅದಿಮುರ್ತ್ತೆಯ ಹೂವಿನ ಬಳಸಿನಲ್ಲಿ ಪೂರ್ಣವಾದ ಆಶ್ರಯವನ್ನು ಪಡೆದ ಒತ್ತಾಗಿರುವ ಚಂದ್ರಕಾಂತ ಶಿಲೆಯಿಂದ ಕೂಡಿದ ಒಂದು ಮಾಧವೀ ಮಂಟಪವನ್ನು ಕಂಡಳು ೬. ಇದಿರಿನಲ್ಲಿ ಕಟ್ಟಿದ ತೋರಣದಂತೆ ಚಿಗುರು ಕಾಣುತ್ತಿರಲು ಹೂಗೊಂಚಲು, ಎಲ್ಲೆಲ್ಲಿಯೂ ಎತ್ತಿ ಕಟ್ಟಿದ ಹೂವಿನ ಮಾಲೆಯಂತಿರಲು ಹೂವಿನ ಪರಾಗದ ಕೆಂಪು ರಮ್ಯವಾಗಿರುವ ದಿಕ್ಕಿನ ಕಾಂತಿ, ಹಾಗಿರಲು ಮಧುಮತ್ತವಾದ ದುಂಬಿಗಳ ಧ್ವನಿಯೇ ಮಂಗಳವಾದ್ಯ ಎನ್ನುವಂತೆ ಆ ಮಾಧವೀ ಮಂಟಪವು ಇದೇ ಮದನನ ವಿವಾಹ ಮಂಟಪವಾಗುವುದಕ್ಕೆ ಯೋಗ್ಯವಾದುದು ಎನ್ನುವಂತೆ ಪ್ರಕಾಶಮಾನವಾಗಿದ್ದಿತು. ವ|| ಕಾಮನ ಕೋಟಲೆಗೆ ಹೆದರಿ ಕಾಡಿನ ಕೋಟೆಯನ್ನು ಪ್ರವೇಶಿಸುವ ಹಾಗೆ ಆ ಮಾಧವೀ ಲತಾ ಮಂಟಪವನ್ನು ಪ್ರವೇಶಿಸಿ ಅದರಲ್ಲಿ ಕರ್ಪೂರದ ಹಳುಕಿನ ಜಗುಲಿಯನ್ನು ವಿಸ್ತಾರವಾಗಿ ನಿರ್ಮಿಸಿದಳು. ಶ್ರೀಗಂಧದ ಎಳೆಯ ಚಿಗುರುಗಳನ್ನು ಹಾಸಿದಳು. ಮಲ್ಲಿಗೆಯ ಹೂವುಗಳನ್ನು ಹರಡಿದಳು. ತಾವರೆಯ ದಂಟಿನಿಂದ ಮಾಡಿದ ತಂತಿಬಳೆಗಳನ್ನೂ ಗೋದುವೆಯ ಮೊಳಕೆಗಳಿಂದ ಮಾಡಿದ ಉಡಿದಾರವನ್ನೂ ಕರ್ಪೂರದ ತಿರುಳಿನಿಂದ ರಚಿಸಿದ ಹಾರವನ್ನೂ ಕನ್ನೈದಿಲೆಯ

ಕಱಿಯ ನೆಯ್ದಿಲ ಕಾವಿನೊಳ್ ಭಾವಿಸಿದ ನೂಪುರಮುಮನದಱ ಬಿರಿಮುಗುಳ್ಗಳೊಳ್ ಚಿತ್ರಿಸಿದ ಕರ್ಣಪೂರಮುಮಂ ಬಿಳಿಯ ತಾವರೆಯೆಳಗಾವಿನಸಿಯ ನೂಲೊಳ್ ಕೋದ ತೋರ ಮಲ್ಲಿಗೆಯ ಬಿರಿಮುಗುಳ ಸರಿಗೆಯುಮಂ ಕಪ್ಪುರವಳುಕಿನ ಲಂಬಣಮುಮಂ ತೊಟ್ಟು ಕುಳಿರ್ಕೊಳ್ವ ಚಂದನರಸಮನೆರ್ದೆಯೊಳಂ ಮೆಯ್ಯೊಳಂ ತಳ್ಕಿಱಿದು ಕರಿಯ ಕರ್ಬಿನ ಕಾವಿನೆಳ ಮೈಂದವಾೞೆಯೆಲೆಯ ಬಿಜ್ಜಣಿಗೆಗಳಿಂ ಬೀಸಲ್ವೇೞ್ದು ತಣ್ಪುಗೆಯ್ಯೆ ಮನದ ಮೆಯ್ಯ ಸಂತಾಪದೊಳ್ ಬಿಸುಸುಯ್ದು ಬಿಸುಪಿನೊಳನಿತುಮಂ ಗೆಲ್ದು-

ಉ॥ ಕೆಂದಳಿರ್ವಾಸು ಸೇಕದ ತೊವಲ್ಗೆಣೆಯಾಯ್ತು ಮೃಣಾಳ ನಾಳವೊಂ
ದೊಂದಡೆವೊತ್ತಿ ಪತ್ತಿದುವು ಸೂಸುವ ಶೀತಳವಾರಿ ಮೆಯ್ಯನೆ ।
ಯ್ದುಂದಿರದೆತ್ತ ಬತ್ತಿದುವು ತಚ್ಛಶಿಕಾಂತಶಿಳಾತಳಂ ಸಿಡಿ
ಲ್ದಂದೊಡೆದತ್ತಿದೇಂ ಬಿಸಿದೊ ಚೇಟದ ಚೆಂಕೆ ಮೃಗಾಂಕವಕ್ತ್ರೆಯಾ ॥ ೭

ಚಂ॥ ಅರಿಗನ ಚೇಟದೊಂದೆ ಪೊಸಬೇಟದ ಕೇಸುರಿಯಿಂದಮೆಯ್ದೆ ದ
ಳ್ಳುರಿ ನೆಗೆದಂದು ಕೆಂದಳಿರ ಪಾಸುಗಳಿಂ ಕುಳಿರ್ವಾಲಿನೀರ್ಗಳಿಂ ।
ತುರಿಪದೆ ಸೂಸುತುಂ ಕೆಳದಿಯರ್ ನದಿಪುತ್ತಿರೆ ನೋಡೆ ದಾಹಮೊ
ತ್ತರಿಸಿದುದೋಂದು ಪೊನ್ನ ಸಲಗಿರ್ಪವೊಲಿರ್ದುದು ಮೆಯ್ ಸುಭದ್ರೆಯಾ॥ ೮

ಕಾವಿನಲ್ಲಿ ಮೇಳಿಸಿದ ಕಾಲಂದಿಗೆಯನ್ನೂ ಧರಿಸಿದಳು. ಅದರ ಬಿರಿದ (ಅರಳಿದ) ಮೊಗ್ಗುಗಳಲ್ಲಿ ಚಿತ್ರಿಸಿದ ಕಿವಿಯ ಅಲಂಕಾರವನ್ನು ಬಿಳಿಯ ತಾವರೆಯ ಎಳೆಯ ದಂಟಿನ ನೂಲಿನಲ್ಲಿ ಪೋಣಿಸಿದ ದಪ್ಪ ಮಲ್ಲಿಗೆಯ ಬಿರಿ ಮುಗುಳಿನ ಅಡ್ಡಿಕೆಯನ್ನೂ ಕರ್ಪೂರದ ಹಳುಕಿನ ಹಾರವನ್ನೂ ತೊಟ್ಟಳು. ವಿಶೇಷ ತಂಪಾಗಿರುವ ಶ್ರೀಗಂಧದ ರಸವನ್ನು ಶರೀರದಲ್ಲೆಲ್ಲ ಲೇಪಿಸಿಕೊಂಡಳು. ಕರಿಯ ಕಬ್ಬಿನ ಕಾವಿನ ಎಳೆಯದಾದ ಮಹೇಂದ್ರ ಬಾಳೆಯ ಎಲೆಯ ಬೀಸಣಿಗೆಗಳಿಂದ ಬೀಸಹೇಳಿ ತಂಪನ್ನುಂಟುಮಾಡಲು ಮನಸ್ಸಿನ ಮತ್ತು ಶರೀರದ ಸಂತಾಪದಿಂದ ನಿಟ್ಟುಸಿರನ್ನು ಬಿಟ್ಟಳು. ಆ ಶಾಖದಲ್ಲಿ ಅಷ್ಟು ಶೈತ್ಯೋಪಕರಣಗಳನ್ನು ಮೀರಿಸಿ ೭. ಆ ಕೆಂಪು ಚಿಗುರಿನಿಂದ ಮಾಡಿದ ಹಾಸಿಗೆಯು ಬಿಸಿ ನೀರು ಚಿಮುಕಿಸಿದ ಚಿಗುರಿಗೆ ಸಮಾನವಾಯಿತು. ತಾವರೆಯ ದಂಟೊಂದೊಂದು ತಳಹತ್ತಿಕೊಂಡು ಮೈಗೆ ಅಂಟಿಕೊಂಡವು. ಮೇಲೆ ಚೆಲ್ಲಿದ ತಣ್ಣಗಿರುವ ನೀರು ನಿಧಾನವಾಗಿ ಹರಿದು ಎಲ್ಲಿಯೋ ಬತ್ತಿಹೋಯಿತು. ಆ ಚಂದ್ರಕಾಂತ ಶಿಲಾತಳವು ಸಿಡಿದು ಒಡೆದುಹೋಯಿತು. ಆ ಚಂದ್ರವದನೆಯಾದ ಸುಭದ್ರೆಯ ವಿರಹಾಗ್ನಿಯಿದು ಎಷ್ಟು ಬಿಸಿಯಾದುದೋ? ೮. ಅರ್ಜುನನ ಮೇಲಿನ ಪ್ರೇಮದ ಒಂದು ಹೊಸ ಅನುಭವದ ಒಂದು ಕೆಂಪುಜ್ವಾಲೆಯು ಚಿಮ್ಮಿದಾಗ ಅವಳ ಸಖಿಯರು ಕೆಂಪು ಚಿಗುರಿನ ಹಾಸಿಗೆಯಿಂದಲೂ ತಂಪಾಗಿರುವ ಮಂಜಿನ ನೀರಿನಿಂದಲೂ ಆರಿಸಲು ಪ್ರಯತ್ನಿಸಿದರೂ ಎಲ್ಲರೂ ನೋಡುತ್ತಿರುವ ಹಾಗೆಯೇ ಆ ಉರಿಯು ಮತ್ತೂ ಅಭಿವೃದ್ಧಿಯಾಯಿತು. ಸುಭದ್ರೆಯ ಶರೀರವು ಕಾಸಿದ ಚಿನ್ನದ

ಮದನ ದವಾನಲಾರ್ಚಿ ತನುವಂ ಸುಡೆ ತಳ್ತಿಮೆಯೊಳ್ ಪಳಂಚಿ ಜೀ
ಗಿದ ಬೆಳರ್ವಾಯೊಳುಚ್ಚಳಿಸಿ ತುಂಗ ಕುಚಂಗಳ ಪೊಯ್ಲೊಳೆತ್ತಲುಂ ।
ಕೆದಱೆ ವಳಿತ್ರಯಂಗಳ ತೊಡರ್ಪುಗಳೊಳ್ ತೊಡರ್ದೊಯ್ಯನೊಯ್ಯನೆ
ಯ್ದಿಮವು ವಿಲೋಲನೇತ್ರ ಜಲಬಿಂದುಗಳಾಕೆಯ ನಿಮ್ನನಾಭಿಯಂ ॥ ೯

ನಗೆಮೊಗಮಂ ಪೊದಳ್ದಲರ್ದ ತಾವರೆಯೆಂಬ ವಿಮೋಹದಿಂ ಮೊಗಂ
ಬುಗಲೊಡಮಾ ತಳೋದರಿಯ ಸುಯ್ಯಳ ಬೆಂಕೆಯೊಳಿಟ್ಟೆಗೆಟ್ಟು ತೊ ।
ಟ್ಟಗೆ ಕೊಳೆ ಮುಂದೆ ಬಿಟ್ಟು ಮಗುಳ್ದಾ ಸತಿಯಿಕ್ಕಿದ ಕಣ್ಣ ನೀರ ಧಾ
ರೆಗಳೊಳೆ ನಾಂದೆಲರ್ಚಿ ಪೊದಳ್ದೊರ್ಮೆಯೆ ಪಾಱಿದುವುನ್ಮದಾಳಿಗಳ್ ॥೧೦

ವ॥ ಅಂತಾಬಾಲೆ ಕಾಯ್ದ ಪುಡಿಯೊಳಗೆ ಬಿಸುಟ್ಟೆಳವಾೞೆಯಂತೆ ಸುರತ ಮಕರಧ್ವಜನೊಳಾದ ಬೇಟದೊಳ್ ಮಮ್ಮಲ ಮಱುಗುತ್ತಿರ್ದಳತ್ತ ಮನುಜ ಮನೋಜನುಂ ಮದನಪರಿತಾಪಕ್ಕಾಱದುಮ್ಮಳಿಸಿ ಮಧುಮಥನನ ಕಣ್ಣಂ ಬಂಚಿಸಿ ವಿಜೃಂಭಮಾಣ ನವ ನಳಿನ ಪರಿಕಾರ ಕೃಷ್ಟ ಮಧುಕರ ರಮಣೀಯಪುಳಿನ ಪರಿಸರ ಪ್ರದೇಶ ನಿವೇಶಿತ ವಿರಹಿ ಜನನಿಚಯ ನಿಚಿತ ಮಾನಸೋನ್ಮತ್ತ ಕಾಮಿನೀ ಗಂಡೂಷ ಸಿಂಧು ಸೇಕ ಪುಳಕಿತ ವಕುಳ ಮುಕುಳ ವಿದಳಿತ ಮನೋಹರಾಶೋಕಲತಾ ರಮಣೀ ರಮಣೀಯ ನೂಪುರರವ ರಮ್ಯಮನವಿರಳ ಕುಸುಮಧೂಳೀ ಧೂಸರ ಪುಳಿನ ಧವಳಿತ ಧರಾತಳಮನುತ್ಫುಲ್ಲ ಪಲ್ಲವ ಲೀಲಾಯಮಾನ ಮತ್ತಕೋಕಿಲೋಲ್ಲಾಸಿತ ಶೀಕರೋದ್ದಾಮ ದುರ್ದಿನ ವನಮನೆಯ್ದೆವಂದು-

(ಅಪರಂಜಿಯ) ಸಲಾಕೆಯ ಹಾಗಿದ್ದಿತು. ೯. ಕಾಮವೆಂಬ ಕಾಡುಗಿಚ್ಚಿನ ಜ್ವಾಲೆಯು ಶರೀರವನ್ನು ವ್ಯಾಪಿಸಲು ಸುಭದ್ರೆಯ ಚಂಚಲವಾದ ಕಣ್ಣೀರಿನ ಹನಿಗಳು ಮುಚ್ಚಿರುವ ರೆಪ್ಪೆಯನ್ನು ತಗುಲಿ ಬಿಳಿಚಿಕೊಂಡಿರುವ ತುಟಿಯಲ್ಲಿ ಚಿಮ್ಮಿ ನೆಗೆದು ಎತ್ತರವಾದ ಸ್ತನಗಳ ಬಡಿತದಿಂದ ಎಲ್ಲಕಡೆಯೂ ಚೆದುರಿ ತ್ರಿವಳಿಗಳ ತೊಡಕುಗಳಲ್ಲಿ ಸೇರಿಕೊಂಡು ನಿಧಾನವಾಗಿ ಆಕೆಯ ಆಳವಾದ ಹೊಕ್ಕುಳನ್ನು ಸೇರಿದುವು. ೧೦. ಸೊಕ್ಕಿದ ದುಂಬಿಗಳು ಸುಭದ್ರೆಯ ಮುಖವನ್ನು ಚೆನ್ನಾಗಿ ಅರಳಿದ ತಾವರೆಯೆಂಬ ಭ್ರಾಂತಿಯಿಂದ ಪ್ರವೇಶಿಸಲು ಆ ತಳೋದರಿಯಾದ ಸುಭದ್ರೆಯ ಉಸಿರಿನ ಬೆಂಕಿಯಲ್ಲಿ ಆಶಾಭಂಗವಾಗಿ ಕಾವು ಹತ್ತಲು ಮುಂದೆ ಬಿದ್ದು ಪುನಃ ಆ ಸತಿಯು ಸುರಿದ ಕಣ್ಣೀರಿನ ಧಾರೆಗಳಲ್ಲಿ ನೆನೆದು ಚೇತರಿಸಿಕೊಂಡು ಇದ್ದಕ್ಕಿದ್ದ ಹಾಗೆಯೇ ಹಾರಿದುವು. ವ॥ ಹಾಗೆ ಬಾಲೆಯು ಕಾದ ಧೂಳಿನಲ್ಲಿ ಬಿಸುಟ ಎಳೆಯ ಬಾಳೆಯ ಹಾಗೆ ಸುರತಮಕರಧ್ವಜನಾದ ಅರ್ಜುನನಲ್ಲಿ ಉಂಟಾದ ವಿರಹದಿಂದ ಮಮ್ಮಲಮರುಗುತ್ತಿದ್ದಳು. ಆ ಕಡೆ ಮನುಜ ಮನೋಜನಾದ ಅರ್ಜುನನೂ ಕೂಡ ಮದನತಾಪವನ್ನು ಸಹಿಸಲಾರದೆ ದುಃಖಿಸಿ ಕೃಷ್ಣನ ಕಣ್ಣನ್ನು ತಪ್ಪಿಸಿಕೊಂಡು ವಿಜೃಂಭಿಸುತ್ತಿರುವ ಹೊಸತಾವರೆಯ ಸಮೂಹದಿಂದ ಆಕರ್ಷಿಸಲ್ಪಟ್ಟ ದುಂಬಿಗಳಿಂದ ರಮ್ಯವಾದುದೂ ಮರಳಿನ ಸಮೀಪಸ್ಥಳದಲ್ಲಿ ಇಡಲ್ಪಟ್ಟು ವಿರಹಿಜನಗಳ ಸಮೂಹದಲ್ಲಿ ಸೇರಿಕೊಂಡಿರುವ ಮನಸ್ಸುಳ್ಳ ಸ್ತ್ರೀಯರು ಮುಕ್ಕುಳಿಸಿದ ಮದ್ಯದಿಂದ ರೋಮಾಂಚಗೊಂಡ ಬಕುಳದ ಮೊಗ್ಗನ್ನುಳ್ಳುದೂ ಅರಳಿದ ಹೂವುಗಳಿಂದ ಕೂಡಿದ ಅಶೋಕವೃಕ್ಷಗಳನ್ನುಳ್ಳುದೂ ರಮಣಿಯರ ರಮಣೀಯವಾದ ಕಾಲಂದಿಗೆಯ

ಚಂ॥ ಬರಿದಲರೊಳ್ ತೆಱಂಬೊಳೆವ ತುಂಬಿ ತಳಿರ್ತೆಳಮಾವು ಮಾವಿನಂ
ಕುರಮನೆ ಕರ್ಚಿ ಬಿಚ್ಚಟಿಪ ಕೋಗಿಲೆ ಕಂಪನವುಂಕಿ ಪೊತ್ತು ನಿ ।
ತ್ತರಿಪೆರಲೆಂಬಿವೇವುವೊ ಮದೀಯ ಮನೋಗತ ಕಾಮ ರಾಗ ಸಾ
ಗರದೊದವಿಂಗೆ ನಲ್ಲಳ ವಿಲೋಕನಚಂದ್ರಿಕೆಯೊಂದೆ ಸಾಲದೇ ॥ ೧೧

ವ॥ ಎನುತ್ತುಂ ಬಂದು ಬರಿದ ಬರಿಮುಗುಳ್ಗಳೊಳೆಱಗಿ ತುಱುಗಿದಶೋಕ ಲತೆಯನಲ್ಕರ್ತು ನೋಡಿ-

ಚಂ॥ ಅಲರಲರ್ಗಣ್ ಮುಗುಳ್‌ನಗೆ ಮಡಲ್ ತೊಡೆ ತುಂಬಿ ಕುರುಳ್ ತಳಿರ್ ತಳಂ
ಗೊಳೆ ಮೊಲೆ ಕೆಂಪು ಕೆಂಪು ಕೊನೆ ಸೆಳ್ಳುಗುರ್ಗಳ್ ಕುಡಿ ತೋಳ್ ನಯಂ ನಯಂ।
ನೆಲೆ ನೆಲೆ ಭಂಗಿ ಭಂಗಿ ಪದವಣ್ ಬೆಳರ್ವಾಯ್ ಪೆಱತಿಲ್ಲದಂತೆ ಕೋ
ಮಲಲತೆ ಪೇಟಿಮೆನ್ನಿನಿಯಳಂ ಮಱೆಗೊಂಡುದೊ ಸೂಱೆಗೊಂಡುದೋ ॥ ೧೨

ವ॥ ಎಂದು ಕಿಱಿದಾನುಂ ಬೇಗಮಱೆ ಮರುಳಾದಂತಾ ಲತೆಯೊಳ್ ಪಟಿಗಾಳಿಗಂಗಾಡಿ ಬರೆಪರೆ ಕಾಮದೇವನಿಮ್ಮಾವಿನ ಸನೆಯನಂಬುಗಳುಮನವಱ ಬಲ್ಮಿಡಿಯನೆ ಮಿಟ್ಟೆಯುಮಂ ಮಾಡಿ ತನ್ನನೇಸಾಡಿ ಕಾಡೆ-

ಶಬ್ದದಿಂದ ರಮ್ಯವೂ ದಟ್ಟವೂ ಹೂವಿನ ಪರಾಗಗಳಿಂದ ಮಾಸಲಾದ ಮರಳಿನಿಂದ ಬಿಳುಪಾಗಿ ಮಾಡಲ್ಪಟ್ಟ ಭೂಭಾಗವನ್ನುಳ್ಳದೂ ಅರಳಿರುವ ಚಿಗುರುಗಳ ಲೀಲೆಗೊಳಗಾದ ಮದಿಸಿರುವ ಕೋಗಿಲೆಗಳಿಗೆ ಉಲ್ಲಾಸವನ್ನುಂಟುಮಾಡುವುದೂ ತುಂತುರುಮಳೆಯಿಂದ ದೀರ್ಘವಾದ ಮೋಡ ಕವಿದ ದಿನದಂತಿರುವುದೂ ಆದ ವನವನ್ನು ಅರ್ಜುನನು ಸಮೀಪಿಸಿದನು. ೧೧. ಅರಳಿದ ಪುಷ್ಪದಲ್ಲಿ ವಿಧವಿಧವಾಗಿ ಪೊಳೆಯುವ ದುಂಬಿಯೂ ಚಿಗುರಿದ ಎಳೆಮಾವೂ ಮಾವಿನ ಮೊಳಕೆಯನ್ನೇ ಕಚ್ಚಿ ಉತ್ಸಾಹಗೊಳ್ಳುವ ಕೋಗಿಲೆಯೂ ವಾಸನೆಯನ್ನು ತನ್ನಲ್ಲಿ ಅಡಕಿಕೊಂಡು ಹೊತ್ತು ದಾಟಿ ಬರುವ ಗಾಳಿಯೂ (ವಿರಹ ಪರಿಹಾರಕ್ಕೆ) ಏನುಮಾಡಬಲ್ಲವು. ನನ್ನ ಮನಸ್ಸಿನಲ್ಲಿ ಸೇರಿರುವ ಮನ್ಮಥಪ್ರೇಮಸಾಗರದ ಅಭಿವೃದ್ಧಿಗೆ ಸುಭದ್ರೆಯ ನೋಟವೆಂಬ ಬೆಳದಿಂಗಳಿನ ಸಹಾಯವೊಂದೆ ಸಾಲದೆ? ವ॥ ಎನ್ನುತ್ತ ಬಂದು ಅರಳಿದ ಬಿರಿಮುಗುಳಿನಿಂದ ಬಾಗಿ ಕಿಕ್ಕಿರಿದಿದ್ದ ಅಶೋಕದ ಬಳ್ಳಿಯನ್ನು ಪ್ರೀತಿಸಿ ನೋಡಿ ೧೨. ಈ ಬಳ್ಳಿಯ ಹೂವು ಅವಳ ಹೂವಿನಂತಿರುವ ಕಣ್ಣು, ಇದರ ಮೊಗ್ಗು ಅವಳ ನಗೆ, ಇದರ ಬಳ್ಳಿ ಅವಳ ತೊಡೆಗಳು, ಇಲ್ಲಿಯ ದುಂಬಿ ಅವಳ ಮುಂಗುರುಳುಗಳು, ಇಲ್ಲಿಯ ಚಿಗುರು ಅವಳ ಅಂಗೈ, ಗೊಂಚಲು ಸ್ತನಗಳು, ಈ ಬಳ್ಳಿಯ ಕೆಂಪು ಬಣ್ಣ ಅವಳ ಕೆಂಪು ಬಣ್ಣ, ಅವಳ ತೆಳುವಾದ ಉಗುರುಗಳು ಇದರ ಎಳೆಯದಾದ ಕೊನೆಗಳು, ಕುಡಿಗಳು ಅವಳ ತೋಳುಗಳು; ಬಳ್ಳಿಯ ನಯ ಸುಭದ್ರೆಯ ನಯ, ಇದರ ರೀತಿ, ಅವಳ ರೀತಿ, ಇಲ್ಲಿಯ ಹದವಾದ ಹಣ್ಣುಗಳು ಹೊಳೆಯುವ ತುಟಿಗಳು ಬೇರೆಯಿಲ್ಲ, ಈ ಬಳ್ಳಿಯು ನನ್ನ ಪ್ರಿಯೆಯನ್ನು ಮರೆಯಾಗಿಟ್ಟುಕೊಂಡಿದೆಯೋ ಇಲ್ಲವೇ ಅವಳ ಸರ್ವಸ್ವವನ್ನೂ ಸೂರೆಗೊಂಡಿದೆಯೋ? (ಬಳ್ಳಿಗೆ ಸ್ವತಃ ಇಷ್ಟೆಲ್ಲ ಸೌಂದರ್ಯವೆಲ್ಲಿ ಬರಬೇಕು?) ವ॥ ಎಂದು ಸ್ವಲ್ಪಕಾಲ ಜ್ಞಾನಶೂನ್ಯನಾದ ಹುಚ್ಚನಂತೆ

ಚಂ॥ ಅಸಿಯಳನೊಲ್ದು ಮೊಲ್ಲನಣಮೆನ್ನದೆ ರೂಪನೆ ನೋಡಿ ಕೂಡಲಾ
ಟಿಸಿ ಪರಿದೆಯ್ದಿ ಪತ್ತಿದಲರ್ಗಣ್ಗಳನೇನುಮನೆನ್ನದಂತುಪೇ ।
ಕ್ಷಿಸಿ ಮನಮೆಲ್ಲಮಂ ಕವರ್ದಪಂ ತನುವಂ ಬಡಮಾಡಿ ಕಾಡಿ ದಂ
ಡಿಸಿದಪನಂಗಜನ್ಮನ ಕವರ್ತೆಯ ದಂಡದ ಪಾಂಗಿದೆಂತುಟೋ ॥ ೧೩

ವ॥ ಎಂದು ನಂದನವನೋಪಕಂಠಂಗಳೊಳನಂಗಶರವಶನಾಗಿ ತೊಲಲ್ದು ನೋಡುತ್ತುಂ ತನ್ನ ಮನದೊಳಿಂತೆಂದು ಬಗೆಗುಂ-

ಚಂ॥ ಉರಿವೆರ್ದೆಯಾಱೆ ಚಿಂತಿಪ ಮನಂ ಗುಡಿಗಟ್ಟೆ ಮರಲ್ದು ನೋಡುವ
ಚ್ಚರಿಯೊಳೆ ಬೆಚ್ಚ ಕಣ್ಮಲರ್ಗೆ ಸಂತಸದಾಗರಮಾಗೆ ಬೇಟದೊಳ್ ।
ಬರಿವೊಡಲೊಯ್ಯನಂಕುರಿಸೆ ಪೈಪಿನೊಳಿಂತೆನಗೀಗಳೀ ವನಾಂ
ತರದೊಳೆ ಕಾಣಲಕ್ಕುಮೊ ಮದೀಯ ಮನೋರಥ ಜನ್ಮಭೂಮಿಯಂ ॥ ೧೪

ವ॥ ಎಂದು ಬಗೆಯುತ್ತುಮಾಕೆಯಿರ್ದ ಮಾಧವೀಮಂಟಪಕ್ಕೆ ಪೊಗಸಿ ಪಲರ ಪಲವುಂ ತೆಱದ ಬೇಟದ ಪಡೆಮಾತುಗಳಂ ಕೇಳ್ದಲ್ಲಿಯಾರಾನುಮೆಮ್ಮಂದಿಗರಿರ್ದರಕ್ಕುಮೆನುತ್ತುಂ ಬರ್ಪ ಗಂಧೇಭ ವಿದ್ಯಾಧರನಂ ಸುಭದ್ರೆ ಭೋಂಕನೆ ಕಂಡು-

ಆ ಬಳ್ಳಿಯೊಡನೆ ಹುಚ್ಚುಮಾತನಾಡಿ ಬರುತ್ತಿರಲು ಕಾಮದೇವನು ಸಿಹಿಮಾವಿನ ಹೂವುಗಳನ್ನು ಬಾಣಗಳನ್ನಾಗಿಯೂ ಅದರ ಬಲಿತ ಹೀಚುಗಳನ್ನು ಮಣ್ಣುಂಡೆಯನ್ನಾಗಿಯೂ ಮಾಡಿ ಅವನನ್ನು ಹೊಡೆದು ಕಾಡಿದನು. ೧೩. ಕೃಶಾಂಗಿಯಾದ ಸುಭದ್ರೆಯನ್ನು ಇವನು ಪ್ರೀತಿಸುತ್ತಾನೆಯೇ ಇಲ್ಲವೇ ಎಂಬುದೇನನ್ನೂ ಸ್ವಲ್ಪವೂ ಯೋಚಿಸದೇ ರೂಪವನ್ನೇ ನೋಡಿ ಸೇರಿಸಲು ಆಶೆಪಟ್ಟು ಓಡಿಬಂದು ಅಂಟಿಕೊಂಡಿರುವ ಕಣ್ಣುಗಳನ್ನೂ ಏನೂ ಹೇಳದೆ ಉಪೇಕ್ಷಿಸಿ ಮನ್ಮಥನು ಮನಸ್ಸೆಲ್ಲವನ್ನೂ ಸೂರೆಮಾಡುತ್ತಾನೆ. ಶರೀರವನ್ನು ಕೃಶವನ್ನಾಗಿ ಮಾಡಿ ಕಾಡಿ ಶಿಕ್ಷಿಸುತ್ತಾನೆ. ಮನ್ಮಥನ ಈ ಸೂರೆಯ ಈ ಶಿಕ್ಷೆಯ ರೀತಿ ಅದೆಂತಹುದೊ! ವ॥ ಎಂದು ನಂದನವನದ ಸಮೀಪ ಪ್ರದೇಶಗಳಲ್ಲಿ ಮನ್ಮಥನಿಗೆ ಅಧೀನನಾಗಿ ಸುತ್ತಿ ತೊಳಲಿ ನೋಡುತ್ತ ತನ್ನ ಮನಸ್ಸಿನಲ್ಲಿ ಹೀಗೆಂದು ಯೋಚಿಸಿದನು ೧೪. ಉರಿಯುತ್ತಿರುವ ನನ್ನ ಎದೆಯು ಸಮಾಧಾನಗೊಳ್ಳುವ ಹಾಗೆ, ಚಿಂತಿಸುತ್ತಿರುವ ನನ್ನ ಮನಸ್ಸು ಉತ್ಸಾಹಗೊಳ್ಳುವ ಹಾಗೆ, ಪುನಃ ನೋಡಬೇಕೆಂಬ ಆಶ್ಚರ್ಯದಿಂದಲೇ ಮುಚ್ಚಿಕೊಂಡಿರುವ ನನ್ನ ಕಣ್ಣಿಗೆ ಸಂತೋಷಸ್ಥಾನವಾಗುವ ಹಾಗೆ ವಿರಹದಿಂದ ಬರಿಯುತ್ತಿರುವ ಶರೀರವು ಇದ್ದಕ್ಕಿದ್ದ ಹಾಗೆ, ರೋಮಾಂಚಗೊಳ್ಳುವ ಹಾಗೆ ನನ್ನ ಅದೃಷ್ಟದಿಂದ ಹೀಗೆ ಇಲ್ಲಿಯೇ ನನ್ನ ಮನೋರಥಕ್ಕೆ ಜನ್ಮಭೂಮಿಯಾದ ಸುಭದ್ರೆಯನ್ನು ಕಾಣಲು ಸಾಧ್ಯವಾಗುತ್ತದೆಯೇ? ವ॥ ಎಂಬುದಾಗಿ ಯೋಚಿಸುತ್ತ ಆಕೆ ಇದ್ದ ಮಾಧವೀಮಂಟಪದ ಹತ್ತಿರಕ್ಕೆ ಬಂದು ಅಲ್ಲಿ ಅನೇಕರು ನಾನಾ ವಿರಹವಾರ್ತೆಯನ್ನು ಕೇಳಿ ನಮ್ಮಂತಹವರೂ ಇಲ್ಲಿ ಯಾರಾದರೂ ಇದ್ದಿರಬಹುದು ಎನ್ನುತ್ತ ಬರುತ್ತಿರುವ ಅರ್ಜುನನನ್ನು ಸುಭದ್ರೆಯು ಇದ್ದಕ್ಕಿದ್ದ ಹಾಗೆ

ಚಂ॥ ಪಡಿದೆಱೆವಂದದಿಂದಮೆರ್ದೆಯುಂ ತೆಱೆದತ್ತು ಪೊದಳ್ದ ಸಂಕೆಯಿಂ
ನಡುಕಮುಮಾಗಳುಬ್ಬಿಗಮಾದುದು ಸಾಧ್ವಸದಿಂ ಬೆಮರ್ ಬೆಮ ।
ರ್ವೆಡೆಗಳಿನುಣ್ಮೆ ಪೊಣ್ಮಿದುದು ಕಣ್ ನಡೆ ನೋಡದೆ ತಪ್ಪ ನೋಡಿ ನಾ
ಣೆಡೆಯೊಳಮಾದುದಾ ಸತಿಗೆ ನೋಡಲೊಡಂ ಪಡೆಮೆಚ್ಚೆಗಂಡನಂ ॥ ೧೫

ವ॥ ಆಗಳ್ ಸುರತಮಕರಧ್ವಜನುಮನಂಗಾಮೃತ ಪಯೋಧಿಯೊಳ್ ಮೂಡಿ ಮುಱುಗಾಡಿದರಂತೆ ಕಿಱಿದು ಬೇಗಮನಿರ್ದು ತನ್ನಿಂ ತಾನೆ ಚೇತರಿಸಿ ಸುಭದ್ರೆಯ ರೂಪನಾಪಾದಮಸ್ತಕಂಬರಮೆಯ್ದೆ ನೋಡಿ ತನ್ನೊಳಾದ ಬೇಟದೊಳ್ ಬಡವಟ್ಟುಮೇಲ್ಗಿವಾಡಿವದ ಸಸಿಯಂತೆ ಸೊಗಯಿಸುವಸಿಯಳಂ ಕಂಡು–

ಚಂ॥ ಸರಸ ಮೃಣಾಳನಾಳವಳಯಂಗಳೊಳುಜ್ವಳ ವೃತ್ತ ಮೌಕ್ತಿಕಾ
ಭರಣ ಗಣಂಗಳೊಳ್ ಶಶಿಕರಂಗಳೊಳಾಱದೆ ಬೇಟದೊಳ್ ಕನ ।
ಲ್ದುರಿವೆರ್ದೆ ನೋಡ ನೋಡಲೊಡನಾಱಿದುದೇನಮರ್ದಿಂದೆ ತೊಯ್ದು ಕ
ಪ್ಪುರವಳುಕಿಂದಜಂ ಕಡೆದು ಕಂಡರಿಪಂ ವಲಮೆನ್ನ ನಲ್ಲಳಂ ॥ ೧೬

ಉ॥ ವೃತ್ತಕುಚಂಗಳಿಂದುದಿರ್ದ ಚಂದನದೊಳ್ ತಳಿರ್ವಾಸು ಬೆಳ್ಪನಾ
ಳ್ದತ್ತು ದುಕೂಲದೊಂದು ಮಡಿವಾಸಿದ ಮಾಟ್ಕೆವೊಲಾಯ್ತು ಮೆಯ್ಯನಿ ।
ಕ್ಕುತ್ತಿರೆ ಪತ್ತಿ ಕೆಂದಳಿರ್ಗಳಚ್ಚುಗಳಚ್ಚಱಿದಂತೆ ಕಾಮನ
ಚೊತ್ತಿದ ಬೇಟದಚ್ಚುಗಳ ಮಾಟ್ಕೆಯೊಳಿರ್ದುದು ಮೆಯ್ ಸುಭದ್ರೆಯಾ ॥ ೧೭

ನೋಡಿದಳು. ೧೫. ಪಡೆಮೆಚ್ಚೆಗಂಡನಾದ ಅರ್ಜುನನನ್ನು ನೋಡಿದ ತಕ್ಷಣವೇ ಆ ಸತಿಗೆ ಬಾಗಿಲು ತೆರೆಯುವಂತೆ ಎದೆಯು ತೆರೆಯಿತು, ಉಂಟಾದ ಸಂದೇಹದಿಂದ ನಡುಕವೂ ವಿಶೇಷವಾಗಿ ತಲೆದೋರಿತು; ಸಡಗರದಿಂದ ಬೆವರು, ಬೆವರುವ ಕಡೆಗಳಿಂದ ಹೆಚ್ಚಿ ಹೊರಸೂಸಿತು; ಕಣ್ಣುಗಳ ಲಜ್ಜೆಯಿಂದ ನೇರವಾಗಿ ನೋಡದೆ ತಪ್ಪು (ಓರೆ) ದೃಷ್ಟಿಯಿಂದ ನೋಡಿದುವು. ವ॥ ಆಗ ಸುರತಮಕರಧ್ವಜನಾದ ಅರ್ಜುನನೂ ಕೂಡ ಮನ್ಮಥನ ಅಮೃತಸಮುದ್ರದಲ್ಲಿ ಮೂಡಿ ಮುಳುಗಿದವರ ಹಾಗೆ ಕೆಲವು ಕಾಲವಿದ್ದು ತನ್ನಷ್ಟಕ್ಕೆ ತಾನೇ ಚೇತರಿಸಿಕೊಂಡು ಸುಭದ್ರೆಯ ರೂಪವನ್ನು ಕಾಲಿನಿಂದ ತಲೆಯವರೆಗೆ ನೋಡಿ ತನ್ನಲ್ಲುಂಟಾದ ವಿರಹದಿಂದ ಕೃಶನಾಗಿ ಶುಕ್ಲಪಕ್ಷದ ಪಾಡ್ಯದ ಚಂದ್ರನ ಹಾಗೆ ಸೊಗಯಿಸುವ ಕೃಶಾಂಗಿಯನ್ನು ಕಂಡು–೧೬. ಚಂದ್ರ ಕಿರಣಗಳಿಂದ ಕಡಮೆಯಾಗದೆ ವಿರಹದಿಂದ ಕೆರಳಿ ಉರಿಯುತ್ತಿದ್ದ ನನ್ನ ಎದೆಯು ರಸಯುಕ್ತವಾದ ತಾವರೆಯ ದಂಟಿನ ಕಂಕಣಗಳಿಂದಲೂ ಹೊಳೆಯುವ ದುಂಡು ಮುತ್ತಿನ ಒಡವೆ ಗಳಿಂದಲೂ ಕೂಡಿದ ಸುಭದ್ರೆಯನ್ನು ನೋಡಿದೊಡನೆಯೇ ಆರಿ ಹೋಯಿತು; ನಿಜವಾಗಿಯೂ ಬ್ರಹ್ಮನು ಈ ನನ್ನ ಪ್ರಿಯಳನ್ನು ಅಮೃತದಲ್ಲಿ ನೆನೆಸಿ ಕರ್ಪೂರದ ಹಳುಕಿನಿಂದ ಕಡೆದು ಕೊರೆದಿದ್ದಿರಬೇಕು. ೧೭. ದುಂಡಾದ ಮೊಲೆಗಳಿಂದ ಉದುರಿದ ಶ್ರೀಗಂಧದಿಂದ ಚಿಗುರಿನ ಹಾಸಿಗೆಯು ಬಿಳಿಯ ಬಣ್ಣವನ್ನು ತಾಳಿದೆ. ರೇಷ್ಮೆಯ ಮಡಿವಸ್ತ್ರವು ಮಾಸಿದ ವಸ್ತ್ರದಂತಾಗಿದೆ. (ಹಾಸಿಗೆಯ ಮೇಲ) ಮೈಯನ್ನಿಟ್ಟಿರಲಾಗಿ ಆ ಸುಭದ್ರೆಯ ಮೈಯಿ ಕೆಂಪು ಚಿಗುರುಗಳು ಮುದ್ರೆಗಳಿಂದ

ವ॥ ಅದಱೆನೀಕೆಯುಮೆನಗೆರಡಱೆಯದ ನಲ್ಲ ಮನಂದೋಱುವುದು ಸಲೆಗೆದೋಱುವುದು ಮಾವುದು ದೋಸಮೆಂದಾಕೆ ಕುಳ್ಳಿರ್ದ ತಳಿರ ಸಜ್ಜೆಯೊಡನೆ ಕುಳ್ಳಿರ್ಪುದುಂ ನಾಣ್ಚಿ ಪೋಗಲೆಂದೆೞ್ದ ಕನ್ನೆಯುಂ ಚೂತಲತಿಕೆಯೆಂಬ ಕೆಳದಿ ಜಡಿದು ಕುಳ್ಳಿರಿಸಿ ಗಂಧೇಭ ವಿದ್ಯಾಧರನನಿಂತೆಂದಳ್-

ಚಂ॥ ಮದನನ ಕಾಯ್ಪು ಮಾಣ್ಗೆ ಸರಸೀರುಹಜನ್ಮನ ಮೆಚ್ಚು ತೀರ್ಗೆ ಕೊ
ೞ್ಪದಿ ಮನದಿಂದಮಿಂದು ಪೊಱಮಾಱುಗೆ ಚಂದ್ರಕರಂಗಳಿಂದು ತ ।
ಣ್ಣಿಮವೆರ್ದೆಗಕ್ಕೆ ಕೆಂದಳಿರ ಸೆಜ್ಜೆಯ ಜಂಜೆಗೆ ಪೋಕೆ ನಿನ್ನ ಕೂ
ಟದೊಳಿನಿದಕ್ಕೆ ಮತ್ಸಖಿಗೆ ಬೇಱೆ ಪಳಾಳದೊಳೇಂ ಗುಣಾರ್ಣವಾ ॥ ೧೮

ಬೆಳಗುವ ಸಾಂದ್ರಚಂದ್ರಕಿರಣಾಳಿಗಳೋಳಿಗಳಿಂದಮೆತ್ತಮು
ಜ್ಜ್ವಳಿಸುವಿರುಳ್ಗಳಂ ಕಳೆದುಮೆಯ್ದೆ ತಳಿರ್ತೆಳಮಾವುಮಂ ಮನಂ ।
ಗೊಳೆ ನಡೆ ನೋಡಿಯುಂ ಕಿವಿಯನಿಂದೊಳದಿಂಚರಕಾಂತುಮಿಂತು ಕೋ
ಮಳೆಯಸು ಮತ್ತಮಿಾಯೊಡಲೊಳಿರ್ದುದಿದೆಮ್ಮಯ ಸೈಪು ಭೂಪತೀ ॥ ೧೯

ವ॥ ಎಂಬನ್ನೆಗಂ ಸುರತಮಕರಧ್ವಜನ ಸುಭದ್ರೆಯ ವಿರಹ ಪರಿತಾಪದೊಳಾದ ಪಡೆಮಾತಂ ಕರ್ಣಪರಂಪರೆಯಿಂ ಕೇಳ್ದು ಸಂತಸಂಬಟ್ಟು ಚಕ್ರಿ ಚಕ್ರಿಕಾವರ್ತಿಯಪ್ಪುದಱೆಂದಾ ವನಾಂತರಾಳಕ್ಕೊರ್ವನೆ ಬಂದು ಮಾಧವೀಮಂಟಪಮಂ ಪೊಕ್ಕು ಅವರಿರ್ವರ ನಾಣುಮಂ ನಡುಕಮುಮಂ ಪತ್ತುವಿಟ್ಟು ನುಡಿದು-

ಅಚ್ಚೊತ್ತಿದ ಹಾಗೆ ಅಂಟಿಕೊಂಡು ಮನ್ಮಥನು ಮುದ್ರಿಸಿದ ಪ್ರೇಮಮುದ್ರೆಗಳಂತಿವೆ. ವ॥ ಆದುದರಿಂದ ಈಕೆಯು ನನಗೆ ನೈಜವಾದ ಮನಸ್ಸನ್ನು ತೋರಿಸುವುದರಲ್ಲಿಯೂ ಸಲಿಗೆಯನ್ನು ತೋರಿಸುವುದರಲ್ಲಿಯೂ ದೋಷವೇನಿದೆ? ಎಂದು ಆಕೆ ಕುಳಿತಿದ್ದ ಚಿಗುರುಹಾಸಿಗೆಯಲ್ಲಿಯೇ ಕುಳಿತನು. ಲಜ್ಜೆಪಟ್ಟು ಹೋಗಲೆಂದು ಎದ್ದ ಕನ್ಯೆಯನ್ನು ಚೂತಲತಿಕೆಯೆಂಬ ಸಖಿಯು ಗದರಿಸಿ ಕುಳ್ಳಿರಿಸಿ ಗಂಧೇಭವಿದ್ಯಾಧರನಾದ ಅರ್ಜುನನನ್ನು ಕುರಿತು ಹೀಗೆಂದಳು - ೧೮. ಮನ್ಮಥನ ಕೋಪ ನಿಲ್ಲಲಿ; ಬ್ರಹ್ಮನ ಆಸೆ ತೀರಲಿ, ಹೃದಯದ ವಿರಹತಾಪ ಮನಸ್ಸಿನಿಂದ ಹೊರಹೋಗಲಿ, ಚಂದ್ರಕಿರಣಗಳು ಇಂದು ಹೃದಯಕ್ಕೆ ತಂಪನ್ನುಂಟುಮಾಡುವುದಾಗಲಿ. ಕೆಂದಳಿರ ಹಾಸಿಗೆಯ ತಾಪವು ಹೋಗಲಿ. ನಿನ್ನನ್ನು ಸೇರುವುದರಿಂದ ನನ್ನ ಸಖಿಗೆ ಸವಿಯುಂಟಾಗಲಿ, ಗುಣಾರ್ಣವನೇ ಇತರ ವ್ಯರ್ಥಾಲಾಪದಿಂದ ಏನು ಪ್ರಯೋಜನ? ೧೯. ಅರ್ಜುನ! ಪ್ರಕಾಶಮಾನವೂ ದಟ್ಟವೂ ಆದ ಚಂದ್ರಕಿರಣಗಳ ಸಮೂಹದಿಂದ ಎಲ್ಲೆಡೆಯೂ ವಿಜೃಂಭಿಸುವ ರಾತ್ರಿಗಳನ್ನು ಕಳೆದು ಸಂಪೂರ್ಣವಾಗಿ ಚಿಗುರಿದ ಎಳೆಯ ಮಾವಿನ ಮರಗಳನ್ನು ತೃಪ್ತಿಯಾಗುವ ಹಾಗೆ ದೀರ್ಘವಾಗಿ ನೋಡಿಯೂ ಹಿಂದೋಳರಾಗದ ಇಂಪಾದ ಧ್ವನಿಗೆ ಕಿವಿಗೊಟ್ಟೂ ಈ ಕೋಮಳೆಯಾದ ಸುಭದ್ರೆಯ ಪ್ರಾಣವು ಈ ಶರೀರದಲ್ಲಿಯೇ ಇದ್ದುದು ನಮ್ಮ ಅದೃಷ್ಟವೆಂದೇ ಹೇಳಬೇಕು. ವ॥ ಎನ್ನುವಷ್ಟರಲ್ಲಿ ಅರ್ಜುನ ಸುಭದ್ರೆಯರ ವಿರಹತಾಪಕ್ಕೆ ಸಂಬಂಧಪಟ್ಟ ಮಾತುಗಳನ್ನು ಕಿವಿಯಿಂದ ಕಿವಿಗೆ ಕೇಳಿ ಸಂತೋಷಪಟ್ಟು ಶ್ರೀಕೃಷ್ಣನು ಕಪಟೋಪಾಯವುಳ್ಳವನಾದುದರಿಂದ ಆ ವನದ ಮಧ್ಯಭಾಗಕ್ಕೆ ಒಬ್ಬನೇ ಬಂದು ಮಾಧವೀಮಂಟಪವನ್ನು ಪ್ರವೇಶಿಸಿ ಅವರಿಬ್ಬರ

ಮ|| ಕುಡಲಿರ್ಪಂ ಬಲದೇವನೆನ್ನನುಜೆಯಂ ದುರ್ಯೋಧನಂಗಾನೊಡಂ
ಬಡೆನೀವಟ್ಟೆಯದಾಗಳುಂ ನಿನಗೆ ದಲ್ ಪದ್ಮಾಸನಂ ತಾನೆ ನೇ ।
ರ್ಪಡಿಸಲ್ ಕೂಡಿದನಿರ್ಪುದಲ್ತು ನಯಮಿನ್ನೀ ಪೊೞ್ತೆ ಪೊೞ್ತಾಗೆ ನೀ
ನೊಡಗೊಂಡುಯ್ವುದು ಕನ್ನೆಯಂ ತಡೆಯದಿರ್ ವಿದ್ವಿಷ್ಟವಿದ್ರಾವಣಾ || ೨೦

ವ|| ಅಂತು ಪೋಗೆವೋಗೆ ಬಲದೇವನನುಮತದೊಳ್ ಪೆಱಗಂ ತಗುಳ್ವ ಯಾದವ ಬಲಮುಂಟಪ್ಪೊಡದನಂಬುಗಾಣಿಸಲ್ ನೀನೆ ಸಾಲ್ವೆಯುೞಿದುದಂ ಮಾಣಿಸಲಾನೆ ಸಾಲ್ವೆನಿದುವೆ ಮುಹೂರ್ತಮಾಗೆ ನಡೆವುದೆಂದು ಶೈಬ್ಯ ಬಳಾಹಕ ಮೇಘವರ್ಣ ಸುಗ್ರೀವಂಗಳೆಂಬ ನಾಲ್ಕು ಕುದುರೆಗಳೊಳ್ ಪೂಡಿದ ದಿವ್ಯರಥಮನೆಸಗಲ್ ದಾರುಕನೆಂಬ ಸಾರಥಿಯನೀವುದುಮಾ ರಥಮಂ ಮನೋರಥಂ ಬೆರಸೇಱಿ ಚೂತಲತಿಕೆವೆರಸು ಸುಭದ್ರೆಯನೇಱಿಲ್ವೇೞ್ದುದಾತ್ತನಾರಾಯಣಂ ನಾರಾಯಣನ ಪರಸಿದ ಪರಕೆಗಳುಮಂ ಕೆಯ್ಕೊಂಡು ಬೀೞ್ಕೊಂಡಿಂದ್ರಪ್ರಸ್ಥದ ಬಟ್ಟೆಯೊಳ್ ಸುಖಪ್ರಯಾಣಂಗೆಯ್ವನನ್ನೆಗಮಿತ್ತ ಬಲದೇವಂ ಸುಭದ್ರೆಯಂ ಸಾಮಂತಚೂಡಾಮಣಿಯುಯ್ದ ನೆಂಬುದಂ ಕೇಳ್ದು-

ಮ|| ಉಱಿದೆನ್ನಂ ಕುಡಲಿರ್ದ ಕೂಸನೊಡಗೊಂಡುಯ್ವಾತನಂ ತಾಗಿ ತ
ಳ್ತೆಱೆಯಲ್ ಕೋಡಗಗಟ್ಟುವಗಟ್ಟ ತರಲಿನ್ನಾರಾರ್ಪರಂತಪ್ಪ ಪೊ ।
ಚ್ಚಱಿಸಾಮಂತರೆ ಪೋಗಿಮೆಂದು ಪಲರಂ ಪೇೞ್ವಾಗಳೆಯ್ತಂದರಂ
ತೊಱೆಕೊಳ್ವಂತಿರೆ ಕೊಂಡುವಂದರಿಗನೆಚ್ಚುಗ್ರೇಷು ಧಾರಾಜಳಂ || ೨೧

ಲಜ್ಜೆಯನ್ನೂ ನಡುಕವನ್ನೂ ಹೋಗಲಾಡಿಸಿ ಹೇಳಿದನು. ೨೦. ಬಲರಾಮನು ನನ್ನ ತಂಗಿಯನ್ನು ದುರ್ಯೋಧನನಿಗೆ ದಾನಮಾಡಲಿದ್ದಾನೆ. ನಾನು ಅದಕ್ಕೆ ಒಪ್ಪುವುದಿಲ್ಲ. ನಿನಗೇ ದಾನಮಾಡಬೇಕೆಂಬುದು ನನ್ನ ನಿಶ್ಚಯ. ಇದನ್ನು ಸರಿಪಡಿಸಿ ಕೊಳ್ಳುವುದಕ್ಕಾಗಿಯೇ ಬ್ರಹ್ಮನು ನಿಮ್ಮಿಬ್ಬರನ್ನೂ ಒಟ್ಟಿಗೆ ಸೇರಿಸಿದ್ದಾನೆ. ಇನ್ನು ಮೇಲೆ ಇಲ್ಲಿರುವುದು ನೀತಿಯಲ್ಲ. ಈ ಹೊತ್ತೆ ಹೊತ್ತಾಗಿ ಅಂದರೆ ಈಗಲೇ ಕನ್ಯೆಯನ್ನು ಜೊತೆಯಲ್ಲಿ ಕರೆದುಕೊಂಡು ಹೊರಟುಹೋಗು, ವಿದ್ವಿಷ್ಟವಿದ್ರಾವಣನಾದ ಅರ್ಜುನನೇ ತಡಮಾಡಬೇಡ. ವ|| ಹಾಗೆ ಹೋಗುವಾಗಲೂ ಬಲರಾಮನ ಅಭಿಪ್ರಾಯದಂತೆ ಬೆನ್ನಟ್ಟಿಬರುವ ಯಾದವ ಬಲವುಂಟಾದರೂ ಅದಕ್ಕೆ ಬಾಣಪ್ರಯೋಗಮಾಡಲು ನೀನು ಶಕ್ತನಾಗಿದ್ದೀಯೆ. ಉಳಿದುದನ್ನು ತಪ್ಪಿಸಲು ನಾನು ಬಲ್ಲೆ, ಇದನ್ನೇ ಸುಮುಹೂರ್ತವನ್ನಾಗಿ ಎಣಿಸಿ ಹೊರಡು ಎಂದು ಶೈಬ್ಯ, ಬಳಾಹಕ, ಮೇಘವರ್ಣ, ಸುಗ್ರೀವಗಳೆಂಬ ನಾಲ್ಕು ಕುದುರೆಗಳನ್ನು ಹೂಡಿದ್ದ ದಿವ್ಯರಥವನ್ನೂ ಅದನ್ನು ನಡೆಯಲು ದಾರುಕನೆಂಬ ಸಾರಥಿಯನ್ನೂ ಕೊಟ್ಟನು. ಆ ರಥವನ್ನು ಅರ್ಜುನನು ಸಂತೋಷದಿಂದ ಚೂತಲತಿಕೆಯೊಡಗೂಡಿ ಸುಭದ್ರೆಯನ್ನು ಹತ್ತಲು ಹೇಳಿ ನಾರಾಯಣನು ಹರಸಿದ ಹರಕೆಗಳನ್ನು ಅಂಗೀಕರಿಸಿ ಅವನಿಂದ ಅಪ್ಪಣೆಪಡೆದು ಇಂದ್ರಪ್ರಸ್ಥದ ದಾರಿಯಲ್ಲಿ ಸುಖಪ್ರಯಾಣಮಾಡಿದನು. ಅಷ್ಟರಲ್ಲಿ ಈ ಕಡೆ ಬಲರಾಮನು ಸುಭದ್ರೆಯನ್ನು ಸಾಮಂತಚೂಡಾಮಣಿಯಾದ ಅರ್ಜುನನು ಕರೆದುಕೊಂಡು ಹೋದನೆಂಬುದನ್ನು ಕೇಳಿ-೨೧. "ನನ್ನನ್ನು ಲಕ್ಷ್ಯಮಾಡದೆ ದಾನಮಾಡಲಿದ್ದ ಹೆಣ್ಣನ್ನು ಜೊತೆಯಲ್ಲಿ ಕೊಂಡು ಹೋದವನನ್ನು ಎದುರಿಸಿ ಹೋರಾಡಲೂ ಕಪಿಯನ್ನು ಕಟ್ಟುವ ಹಾಗೆ ಕಟ್ಟಿ ತರಲೂ

ವ॥ ಆಗಳ್ ತನ್ನ ಪೇೞ್ದ ನಾಯಕರ ಸಾವಂ ಕೇಳ್ದು ಯಾದವಬಲ ಜಳನಿಧಿವೆರಸು ಪ್ರಳಯಕಾಲ ಜಳನಿಧಿಯಂತೆ ತೆರಳಲ್ ಬಗೆದ ಬಲದೇವನಂ ವಾಸುದೇವನಿಂತೆಂದಂ-

ಮ॥ ಕುಲಮಂ ಪೇೞ್ವೊಡೆ ಸೋಮವಂಶತಿಲಕಂ ಬಿಲ್ಲಾಳ್ತನಂಬೇೞ್ವೊಡು
ಜ್ವಲ ತೀವ್ರಾಸ್ತ್ರನಿಘಾತಪಾತಿತ ರಿಪುವ್ಯೂಹಂ ಬಲಂಬೇೞ್ ದೋ ।
ರ್ವಲದೊಳ್ ಕೇಳ್ ನಿನಗಂ ಬಲಿಷ್ಠನೊಡೆಯಂ ಕೂಸಿಂಗೆ ಕೊಂಡುಯ್ವುದೇ
ಚಲಮೇ ದೋಷಮದರ್ಕೆ ನೀನ್ ಮುಳಿವುದೇ ನೀನ್
ಪೇೞ್ವೊಡಾನ್ ಸಾಲೆನೇ ॥ ೨೨

ವ॥ ಎಂದು ಬಲದೇವನ ಮನದೊಳಾದ ಮುಳಿಸೆಂಬ ಕಿಚ್ಚಂ ತನ್ನ ಮೃದು ಮಧುರ ವಚನರಚನಾಜಲಂಗಳಂ ತಳಿದು ನದಿಪಿದನಿತ್ತ ರಿಕ್ರಮಾರ್ಜುನನುಂ ಕತಿಪಯ ದಿನಂಗಳಿಂದನೇಕ ಸಹಕಾರಾಶೋಕಾನೋಕಹನಂದನವನಪ್ರಸ್ಥಮನಿಂದ್ರ ಪ್ರಸ್ಥಮನೆಯ್ದೆವಂದು ಮುನ್ನಮೆ ತನ್ನ ಬರವನಱಿದು ಪೊೞಲೊಳಷ್ಟಶೋಭೆಯಂ ಮಾಡಿ ತನಗಿದಿರ್ವಂದ ಕೊಂತಿಯ ಧರ್ಮಪುತ್ರ ಭೀಮಸೇನಾದಿಗಳ ಪಾದ ಪದ್ಮಂಗಳಂ ತನ್ನ ಕರಕಮಲಂಗಳಿಂದರ್ಚಿಸಿ ತದೀಯಾಶೀರ್ವಚನಂಗಳನಾಂತು ತನಗೆ ಪೊಡಮಟ್ಟ ನಕುಲ ಸಹದೇವರಂ ಪರಸಿ

ಯಾರು ಸಮರ್ಥರಾಗಿರುತ್ತಾರೆ, ಅಂತಹ ಪರಾಕ್ರಮವುಳ್ಳ ಶೂರಸಾಮಂತರೇ ಹೋಗಿ" ಎಂದು ಹಲವರನ್ನು ನೇಮಿಸಲು (ಹಾಗೆ ಬಂದು) ಎದುರಿಸಿದವರನ್ನು ಅರ್ಜುನನು ಪ್ರಯೋಗಿಸಿದ ಭಯಂಕರವಾದ ಬಾಣಗಳ ಧಾರಾಪ್ರವಾಹವು ನದಿಯು ನುಗ್ಗುವ ಹಾಗೆ ಆಕ್ರಮಿಸಿ ಕೊಂದಿತು. ವ॥ ಆಗ ತಾನು ನಿಯಮಿಸಿದ ನಾಯಕರ ಸಾವನ್ನು ಕೇಳಿ ಯಾದವ ಬಲಸಮುದ್ರದೊಡಗೂಡಿ ಪ್ರಳಯಕಾಲದ ಸಮುದ್ರದಂತೆ ಹೊರಡಲು ಯೋಚಿಸಿದ ಬಲರಾಮನನ್ನು ವಾಸುದೇವನು ಹೀಗೆಂದನು-೨೨. ಕುಲವನ್ನು ಹೇಳುವುದಾದರೆ ಚಂದ್ರವಂಶದಲ್ಲಿ ಶ್ರೇಷ್ಠನಾದವನಾಗಿದ್ದಾನೆ. ಪರಾಕ್ರಮವನ್ನು ಹೇಳುವುದಾದರೆ ತನ್ನ ತೀಕ್ಷ್ಣಬಾಣಗಳ ಹೊಡೆತದಿಂದ ಶತ್ರುವ್ಯೂಹವನ್ನು ಕೆಡವಿದ ಸಾಮರ್ಥ್ಯವುಳ್ಳವನಾಗಿದ್ದಾನೆ. ಬಲವನ್ನು ಹೇಳುವುದಾದರೆ ಬಾಹುಬಲದಲ್ಲಿ ನಿನಗಿಂತಲೂ ಬಲಿಷ್ಠನಾದವನು; ನಮ್ಮ ಕೂಸಿಗೆ ಒಡೆಯನಾಗಿ ಕೊಂಡುಹೋಗಲಿ, ಹಟವೇತಕ್ಕೆ? ದೋಷವೇನು? ಅದಕ್ಕೆ ನೀನು ಕೋಪಿಸುವುದೇ? ನೀನು ಹೋರಾಡು ಎಂದು ಆಜ್ಞೆ ಮಾಡುವುದಾದರೆ ಅವನೊಡನೆ ಯುದ್ಧಮಾಡಲು ನಾನೇ ಸಮರ್ಥನಲ್ಲವೇ? ವ॥ ಎಂದು ಬಲರಾಮನ ಮನಸ್ಸಿನಲ್ಲುಂಟಾದ ಕೋಪವೆಂಬ ಬೆಂಕಿಯನ್ನು ತನ್ನ ಮೃದುಮಧುರವಚನರಚನಾಜಲಗಳನ್ನು ಸಿಂಪಿಸಿ ನಂದಿಸಿದನು. ಈ ಕಡೆ ವಿಕ್ರಮಾರ್ಜುನನು ಕೆಲವು ದಿವಸಗಳಲ್ಲಿ ಅನೇಕ ಮಾವಿನ ಮತ್ತು ಅಶೋಕಮರಗಳುಳ್ಳ ವನಗಳಿಂದ ಕೂಡಿದ ಇಂದ್ರಪ್ರಸ್ಥಪುರವನ್ನು ಸೇರಿದನು. ಮೊದಲೇ ತಾನು ಬರುವುದನ್ನು ತಿಳಿದು ಪಟ್ಟಣವನ್ನು ಎಂಟು ವಿಧವಾದ ಅಲಂಕಾರಗಳಿಂದ ಅಲಂಕರಿಸಿತ್ತು. ತನಗಿದಿರಾಗಿ ಬಂದ ಕುಂತೀದೇವಿ, ಧರ್ಮರಾಜ, ಭೀಮಸೇನನೇ ಮೊದಲಾದವರ ಪಾದಕಮಲಗಳನ್ನು ತನ್ನ ಕಮಲಹಸ್ತಗಳಿಂದ ಪೂಜೆಮಾಡಿ ಅವರ ಆಶೀರ್ವಾದಗಳನ್ನು ಪಡೆದನು. ತನಗೆ ನಮಸ್ಕಾರ ಮಾಡಿದ ನಕುಲ ಸಹದೇವರನ್ನು

ಪುನಃಪುನರಾಲಿಂಗನಂಗೆಯ್ದು ಮುಹುರ್ಮುಹುರಾಳೋಕನಂಗೆಯ್ಯುತ್ತುಂ ಬಂದು ದಿವಿಜೇಂದ್ರ ವಿಳಾಸದಿಂ ಪೊೞಲಂ ಪುಗೆ-

ಕಂ॥ ಪರಸುವ ಪುರಜನದೊದವಿದ
ಪರಕೆಗಳಂಬುಧಿನಿನಾದಮಂ ಮಿಗೆ ತಮ್ಮ ।
ಯ್ವರುಮೊಡನೆ ಮೆಱೆದು ಪರಮಾ
ನುರಾಗದಿಂ ಬಂದು ಪೊಕ್ಕರಂದರಮನೆಯಂ ॥ ೨೩

ವ॥ ಅಂತು ರಾಜಮಂದಿರಮಂ ಪೊಕ್ಕು ಧರ್ಮಪುತ್ರನನಗಲ್ದ ಪನ್ನೆರಡು ಮಾಸದೊಳಾದ ದಿಗ್ವಿಜಯ ಪ್ರಪಂಚಮುಮಂ ಸುಭದ್ರಾಹರಣಮುಮಂ ಪುರುಷೋತ್ತಮನ ಪರಮ ಮಿತ್ರತ್ವಮು ಮನಱೆದು ಸಂತಸಂಬಟ್ಟು ತಮ್ಮನಿಬರುಮೇಕಸ್ಥರಾಗಿ-

ಮ॥ ಎರೆದಿಂತಟ್ಟಲೆವೇೞ್ಪ ಕನ್ನೆ ಬೞಿಯಂ ಬಂದಳ್ ಮರುಳ್ದಂಬುಜೋ
ದರನಿಂತಟ್ಟಿದನಿಂತು ನೋಂತರೊಳರೇ ಸೈಪಿಂಗೆ ನಾಮಿನ್ನಿಳಾ ।
ಧರನುಂ ಯಾದವ ವಂಶಜರ್ವೆರಸು ಬರ್ಪಂತಟ್ಟಿ ಮಾೞ್ಪಂ ಮನೋ
ಹರಮಪ್ಪಂತು ವಿವಾಹಮಂಗಳಮನೆಂದಂದಟ್ಟಿದರ್ ದೂತರಂ ॥ ೨೪

ವ॥ ಅಟ್ಟಿದೊಡವರ್ ಪೋಗಿ ಬಲದೇವನುಮಂ ವಾಸುದೇವನುಮಂ ಕಂಡು ತಮ್ಮ ಬಂದ ಕಜ್ಜಮನೊಡಂಬಡಿಸಿ ಯಾದವರ್ವೆರಸು ಮುಂದಿಟ್ಟೊಡಗೊಂಡು ಬರೆ ಬರವನಱಿದು ಪಾಂಡವರಯ್ವರುಮಿದಿರ್ವೋಗಿ ಯಥೋಚಿತ ಪ್ರತಿಪತ್ತಿಗಳಿಂ ಕಂಡು ಪೊೞಲ್ಗೊಡಗೊಂಡು ಬಂದು ಶುಭದಿನ ನಕ್ಷತ್ರ ಯೋಗಕರಣಂಗಳಂ ನಿಟ್ಟಿಸಿ-

ಹರಸಿ ಪುನಃ ಪುನಃ ಆಲಿಂಗನಮಾಡಿಕೊಂಡು ಪುನಃಪುನಃ ನೋಡುತ್ತ ದೇವೇಂದ್ರ ವೈಭವದಿಂದ ಪಟ್ಟಣವನ್ನು ಪ್ರವೇಶಿಸಿದನು-೨೩. ಆಗ ಪಟ್ಟಣಿಗರು ಹರಸಿದ ಹರಕೆಗಳು ಸಮುದ್ರಘೋಷವನ್ನು ಮೀರಿರಲು ತಾವಯ್ದುಜನರೂ ಅತ್ಯಂತ ಸಂತೋಷದಿಂದ ಅರಮನೆಯನ್ನು ಪ್ರವೇಶಿಸಿದರು. ವ॥ ಹಾಗೆ ಅರಮನೆಯನ್ನು ಪ್ರವೇಶಿಸಿ ಧರ್ಮರಾಜನನ್ನು ಅಗಲಿಹೋದ ಹನ್ನೆರಡುತಿಂಗಳುಗಳಲ್ಲಿ ನಡೆದ ದಿಗ್ವಿಜಯದ ವಿಷಯವನ್ನೂ ಸುಭದ್ರಾಪಹರಣವನ್ನೂ ಎಲ್ಲರೂ ಕೇಳಿದರು. ಪುರುಷೋತ್ತಮನಾದ ಶ್ರೀಕೃಷ್ಣನ ಉತ್ತಮ ಸ್ನೇಹಸ್ವಭಾವವನ್ನು ತಿಳಿದು ಸಂತೋಷಪಟ್ಟರು. ತಾವೈದು ಜನವೂ ಒಮ್ಮನಸ್ಸಿನಿಂದ. ೨೪. ನಮಗೆ ದಾನವಾಗಿ ಕೊಡಿ ಎಂದು ದೂತರ ಮೂಲಕ ಪ್ರಾರ್ಥಿಸಿ ಪಡೆಯಬೇಕಾದ ಕನ್ಯೆಯು ತಾನಾಗಿಯೇ ಜೊತೆಯಲ್ಲಿಯೇ ಬಂದಿದ್ದಾಳೆ. ಕೃಷ್ಣನೇ ಹೀಗೆ ಕಳುಹಿಸಿಕೊಟ್ಟಿದ್ದಾನೆ. ಇಂತಹ ಅದೃಷ್ಟಶಾಲಿಗಳಾದವರು (ವ್ರತ ಮಾಡಿರುವವರು) ಬೇರೆ ಯಾರಿದ್ದಾರೆ. ನಾವು ಇನ್ನು ಯಾದವರೊಡಗೂಡಿ ಕೃಷ್ಣನು ಬರುವ ಹಾಗೆ ದೂತರನ್ನು ಕಳುಹಿಸಿ ಮನೋಹರವಾಗಿರುವ ರೀತಿಯಲ್ಲಿ ಮದುವೆಯ ಮಂಗಳವನ್ನು ಮಾಡೋಣ ಎಂದು ದೂತರನ್ನು ಅಟ್ಟಿದರು. ವ॥ ಅವರು ಹೋಗಿ ಬಲರಾಮನನ್ನೂ ವಾಸುದೇವನನ್ನೂ ಕಂಡು ತಾವು ಬಂದ ಕಾರ್ಯಕ್ಕೆ ಅವರು ಒಪ್ಪುವ ಹಾಗೆ ಮಾಡಿ ಯಾದವರೊಡಗೂಡಿ ಅವರನ್ನೇ ಮುಂದುಮಾಡಿಕೊಂಡು ಬಂದರು. ಅವರು ಬರುವುದನ್ನು ತಿಳಿದು ಪಾಂಡವರೈದು ಮಂದಿಯೂ ಅವರಿಗಿದಿರಾಗಿ ಹೋಗಿ ಸೂಕ್ತವಾದ ಸತ್ಕಾರಗಳಿಂದ

ಮ॥ ಪಸುರ್ವಂದರ್ ಪರೆ ವೇದಪಾರಗರವಂ ಕಣ್ಗೆೞ್ಟಿದುದ್ಧ್ವಾನಿಯಂ
ಪಸರಂ ಗೆಯ್ವವೊಲಪ್ಪ ಪೊಳ್ಚಜಿ ಮಹಾ ಸಾಮಂತ ಸೀಮಂತಿನೀ ।
ಪ್ರಸರಂ ಮಂಗಳ ತೂರ್ಯನಾದಮೆಸೆಯುತ್ತಿರ್ಪನ್ನೆಗಂ ಚಕ್ರಿ ರಾ
ಗಿಸಿ ಕೆಯ್ನೀರೆಱೆದಂ ಗುಣಾರ್ಣವ ಮಹೀಪಾಲಂಗಮಾ ಕನ್ನೆಯಂ ॥ ೨೫

ವ॥ ಅಂತವರಿರ್ವರ ಬೇಟಮೆಂಬ ಲತೆಯ ಬೆಳಸಿಂಗೆ ಪೊಯ್ನೀರೆಱೆವಂತೆ ಕೆಯ್ನೀರೆಱೆದು ಬಿಯಮಂ ಮೆಱೆದು-

ಪಿರಿಯಕ್ಕರಂ ॥ ತೊಟ್ಟ ತುಡುಗೆಗಳ್ ಕೌಸ್ತುಭರತ್ನಮನೋರೊಂದೆ ಮಸುಳಿಸೆ ಪಾಲ್ಗಡಲೊಳ್
ಪುಟ್ಟಿದಾನೆಯನಾನೆಗಳ್ ಗೆಲೆವರೆ ಕುದುರೆಗಳ್ ಕುದುರೆಯಂ ಕೀೞ್ಮಾಡೆ ।
ತೊಟ್ಟ ಮದನನ ಪೂಗಣೆಗೆಣೆಯಾಗೆ ಗಣಿಕೆಯರ್ ಗಣಿದಮಂ ಬಗೆಯದಿಂತು
ಕೊಟ್ಟಂ ತಂಗೆಗೆ ಬಳಿವಳಿಯೆಂದಿಂತು ಸರ್ವಸ್ವಮೆಲ್ಲಮಂ ಪುರುಷೋತ್ತಮಂ ॥ ೨೬

ವ॥ ಅಂತು ಬಳಿವಳಿಗೊಟ್ಟಂಬಳಿಯಂ ಧರ್ಮಪುತ್ರಂ ಬಲದೇವನನೆನಿತಾನುಮುಚಿತ ಪ್ರತಿಪತ್ತಿಗಳಿಂ ಸಂತಸಂಬಡಿಸಿ ದ್ವಾರಾವತಿಗೆ ಕಳಿಪಿದನಾ ವಿವಾಹೋತ್ಸವಾನಂತರದೊಳ್-

ಚಂ॥ ತಳಿರ್ಗಳ ಪಾಸಿನೊಳ್ ಪೊರಳುತಿರ್ದಬಲಂ ಕಿಡೆ ಸೋಂಕೆ ಸೋಂಕುಗಳ್
ಕಳೆದುವು ಮೆಯ್ಯ ಸುಯ್ಯ ಪದವೆಂಕೆಗಳಂ ಬಗಿಯಪ್ಪಿದಪ್ಪುಗಳ್ ।
ಕಳೆದುವು ನಾಣುಮಂ ಕಿಜೆದು ಜಾಣುಮನಟ್ಟಿಜನೀವ ಚುಂಬನಂ
ಕಳೆದುವು ಗರ್ವಮಂ ಕಳೆದುವಂತವರಿರ್ವರ ಮನ್ಮಥದ್ರವಂ ॥ ೨೭

ಕಂಡು ಪಟ್ಟಣಕ್ಕೆ ಜೊತೆಯಲ್ಲಿ ಕರೆದುಕೊಂಡು ಬಂದರು. ಶುಭಕರವಾದ ದಿನ, ನಕ್ಷತ್ರಯೋಗ ಕರಣಗಳನ್ನು ನೋಡಿ-೨೫. ಹಸಿರುವಾಣಿಯ ಚಪ್ಪರ, ಹಸೆಯಮಣೆ, ಪಂಡಿತರ ವೇದಘೋಷ ಇವು ಕಣ್ಣಿಗೆ ತೃಪ್ತಿಯನ್ನುಂಟುಮಾಡುತ್ತಿರಲು ಅಂಗಡಿಯ ಸಾಲಿನ ಹಾಗೆ ಶೂರರ, ಮಹಾ ಸಾಮಂತರ, ಸುಮಂಗಲೀಸ್ತ್ರೀಯರ ಸಮೂಹವು ಓಳಿಗೊಂಡಿರಲು ಮಂಗಳವಾದ್ಯ ಧ್ವನಿ ಘೋಷಿಸುತ್ತಿರಲು ಶ್ರೀಕೃಷ್ಣನು ಪ್ರೀತಿಯಿಂದ ಗುಣಾರ್ಣವ ಮಹಾರಾಜನಿಗೆ (ಅರ್ಜುನನಿಗೆ) ಕನ್ಯೆಯಾದ ಸುಭದ್ರೆಯನ್ನು ಧಾರಾಪೂರ್ವಕ ದಾನಮಾಡಿಕೊಟ್ಟನು. ವ॥ ಹಾಗೆ ಅವರಿಬ್ಬರ ಪ್ರೇಮವೆಂಬ ಬಳ್ಳಿಗೆ ಹೊಯ್ ನೀರೆರೆಯುವಂತೆ ಧಾರಾಜಲವನ್ನು ಕೊಟ್ಟು ಯಥೇಚ್ಛವಾಗಿ ದ್ರವ್ಯವನ್ನು ದಾನಮಾಡಿದನು. ೨೬. ವಿಷ್ಣುವಿನ ಹೃದಯದಲ್ಲಿರುವ ಕೌಸ್ತುಭರತ್ನವನ್ನೂ ಕಾಂತಿಹೀನವನ್ನಾಗಿ ಮಾಡುವ ಅನೇಕ ಅಭರಣಗಳನ್ನೂ ಐರಾವತವನ್ನೂ ಕೀಳ್ಮಾಡುವ ಆನೆಗಳನ್ನೂ ಉಚ್ಚೈಶ್ರವಸ್ಸನ್ನು ತಿರಸ್ಕರಿಸುವ ಕುದುರೆಗಳನ್ನೂ ಮನ್ಮಥನ ಪುಷ್ಪಬಾಣಗಳಂತಿರುವ ವೇಶ್ಯಾಸ್ತ್ರೀಯರನ್ನೂ ಅಸಂಖ್ಯಾತವಾಗಿ ಕೃಷ್ಣನು ತಂಗಿಗೆ ಬಳುವಳಿಯಾಗಿ ಕೊಟ್ಟನು. ವ॥ ಹಾಗೆ ಬಳುವಳಿ ಕೊಟ್ಟ ಬಳಿಕ ಧರ್ಮರಾಜನು ಬಲರಾಮನನ್ನು ಅನೇಕ ಉಚಿತ ಸತ್ಕಾರಗಳಿಂದ ಸಂತೋಷಪಡಿಸಿ ದ್ವಾರಕಾಪಟ್ಟಣಕ್ಕೆ ಕಳುಹಿಸಿಕೊಟ್ಟನು. ಆ ಮದುವೆಯ ಮಹೋತ್ಸವವಾದ ಮೇಲೆ ೨೭. ಅರ್ಜುನ ಸುಭದ್ರೆಯರ ಸಂತೋಷಕ್ಕೆ ಪಾರವೇ ಇಲ್ಲದಾಯಿತು. ಚಿಗುರಿನ ಹಾಸಿಗೆಯಲ್ಲಿ

ಮಾಲಿನಿ ॥ ಅಭಿನವ ಮದಲೇಖಾ ಲಾಲಿತಂ ವಿಭ್ರಮ ಭ್ರೂ
ರಭಸ ಗತಿವಿಳಾಸಂ ದೀಪ್ತ ಕಂದರ್ಪ ದರ್ಪ ॥
ಕ್ಷುಭಿತ ಗಳನಿನಾದಂ ಪ್ರಸ್ಫುರದ್ಘರ್ಮವಾರಿ
ಪ್ರಭವಮೆಸೆದುದಂತಾ ಕಾಂತೆಗಾ ಕಾಂತಸಂಗಂ ॥ ೨೮

ವ॥ ಅಂತು ಕಾಮದೇವನುಂ ರತಿಯುಂ ವಸಿಷ್ಠನುಮರುಂಧತಿಯುಮೀಶ್ವರನುಂ ಪಾರ್ವತಿಯುಮೆನಿಸಿ ಸಮರೂಪ ಸಮಸತ್ವ ಸಮರತಂಗಳೊಳೆ ಸಮಾನುರಾಗಮಂ ಪಡೆಯೆ ಸುಖಮಿರ್ಪನ್ನೆಗಂ ಸುಭದ್ರೆಗೆ ಗರ್ಭಚಿಹ್ನಂಗಳ್ ತೋಱೆ-

ಕಂ॥ ಒಟ್ಟಜೆಯಿಂ ಭಾರತದೊಳ್
ಕಟ್ಟಾಳ್ಗಳನಿಱಿದು ತವಿಸಲಾ ಜೆಟ್ಟಿಗರಂ ।
ಪುಟ್ಟಿದನೆಂಬವೊಲದಟಂ
ಪುಟ್ಟಿದನಭಿಮನ್ಯು ಕಲಿತನಂ ಪುಟ್ಟುವವೋಲ್ ॥ ೨೯

ವ॥ ಅಂತಾತಂ ಪುಟ್ಟುವುದುಂ ತಮಗೆ ಸಂತಸಂ ಪುಟ್ಟ ಸುಖಮಿರ್ಪನ್ನೆಗಂ-

ಚಂ॥ ಅಗರುವ ಮೆಚ್ಚುವಚ್ಚ ಸಿರಿಕಂಡದೊಳಗ್ಗಲಿಸಿತ್ತು ಸೂಡು ಶ
ಯ್ಯೆಗಳ ಬಯಕ್ಕೆ ಜೊಂಪದಲರ್ವಾಸುಗಳೊಳ್ ನೆಲಸಿತ್ತು ಪೂತ ಗೊ ।
ಜ್ಜಗೆಗಳ ಸಿಂದುರಂಗಳೊಳಗೋಗರಗಂಪನೆ ಬೀಱುತಿರ್ಪ ಮ
ಲ್ಲಿಗೆಯೊಳರಲ್ದ ಸಂಪಗೆಯೊಳಗ್ಗಲಿಸಿತ್ತು ಬಸಂತಮಾಸದೊಳ್ ॥ ೩೦

ಹೊರಳುತ್ತಿದ್ದ ದುಃಖವನ್ನು ಅವರ ಪರಸ್ಪರ ಸ್ಪರ್ಶಗಳು ಕಳೆದುವು; ಶರೀರದ ಉಸುರಿನ ಬೆಂಕಿಯನ್ನು ಅವರ ಬಿಗಿಯಾಗಿ ಅಪ್ಪಿದ ಆಲಿಂಗನಗಳು ಕಳೆದುವು. ಲಜ್ಜೆಯನ್ನೂ ಜಾಣ್ಮೆಯನ್ನೂ ಅವರ ಪರಸ್ಪರ ಪ್ರೀತಿಯಿಂದ ಕೊಡುತ್ತಿರುವ ಮುತ್ತುಗಳು ಹೋಗಲಾಡಿಸಿದುವು. ಅವರಿಬ್ಬರ ಮದನೋದಕವು ಅವರ ಹೆಮ್ಮೆಯನ್ನು ಕಳೆದವು. ೨೮. ಹೊಸದಾದ ಮದಲೇಖೆಯಿಂದ ಲಾಲಿಸಲ್ಪಟ್ಟ, ಸುಂದರವಾದ ಹುಬ್ಬಿನ ವೇಗವಾದ ವಿಲಾಸವನ್ನುಳ್ಳ ಹೆಚ್ಚಾದ ಕಾಮಗರ್ವದಿಂದ ಕೆರಳಿದ ಕೊರಳಿನ ಶಬ್ದವನ್ನುಳ್ಳ ಪ್ರಕಾಶಮಾನವಾದ ಬೆವರುಗಳನ್ನು ಹುಟ್ಟಿಸುವ ಆ ಪ್ರಿಯನ ಸಮಾಗಮವು ಆ ಸುಭದ್ರೆಗೆ ಸಂತೋಷವನ್ನುಂಟುಮಾಡಿತು. ವ॥ ಮನ್ಮಥನೂ ರತಿಯೂ, ವಸಿಷ್ಠನೂ ಅರುಂಧತಿಯೂ ಈಶ್ವರನೂ ಪಾರ್ವತಿಯೂ ಎನ್ನಿಸಿ ಸಮಾನವಾದ ರೂಪ, ಸಮಾನವಾದ ಶಕ್ತಿ, ಸಮಾನವಾದ ಸುರತಕ್ರೀಡೆಗಳಲ್ಲಿ ಸಮಾನವಾದ ಪ್ರೀತಿಯನ್ನು ಪಡೆಯುತ್ತಾ ಸುಖವಾಗಿರಲು ಸುಭದ್ರೆಗೆ ಗರ್ಭ ಚಿಹ್ನೆಗಳು ತೋರಿದುವು. ೨೯. ಪರಾಕ್ರಮದಿಂದ ಭಾರತ ಯುದ್ಧದಲ್ಲಿ ಅತ್ಯಂತ ಶೂರರಾದ ವೀರರನ್ನು ಕತ್ತರಿಸಿ ನಾಶಪಡಿಸುವುದಕ್ಕೇ ಹುಟ್ಟಿದನೆಂಬ ಹಾಗೆ ಪರಾಕ್ರಮಶಾಲಿಯಾದ ಅಭಿಮನ್ಯುವು ಪರಾಕ್ರಮವೇ ಮೂರ್ತಿವತ್ತಾಗಿ ಹುಟ್ಟುವ ಹಾಗೆ ಹುಟ್ಟಿದನು. ವ॥ ಆತನು ಹುಟ್ಟಲಾಗಿ ತಮಗೆ ಸಂತೋಷವೂ ಹುಟ್ಟಿ ಸುಖವಾಗಿರುವಷ್ಟರಲ್ಲಿ ೩೦. ವಸಂತಋತು ಪ್ರಾಪ್ತವಾಯಿತು. ಚಳಿಗಾಲದಲ್ಲಿ ಶಾಖಕ್ಕಾಗಿ ಉಪಯೋಗಿಸುತ್ತಿದ್ದ ಅಗರುವಿನಲ್ಲಿದ್ದ ತೃಪ್ತಿಯು ಸ್ವಚ್ಛವಾದ ಶ್ರೀಗಂಧದ ಲೇಪನದಲ್ಲಿ ಅತಿಶಯವಾಯಿತು. ಬೆಚ್ಚನೆಯ

ಉ॥ ಮುಂ ಮಹಿಯೆಲ್ಲಮಂ ಶಿಶಿರರಾಜನೆ ಬಿಚ್ಚತಮಾಳ್ದನೀಗಳಾ
ತಂ ಮಿಡುಕಲ್ಕೆ ಸಲ್ಲಿರದೆ ಪೋಪುದದೇಕೆನೆ ಕಾಮದೇವನಿ ।
ತ್ತಂ ಮಧು ಪೆತ್ತನೀ ನೆಲಸನಿಂತಿದು ಪತ್ತಳೆಯೆಂದು ಸಾಱುವಂ
ದಂ ಮಿಗೆ ಕರ್ಚಿ ಪಾಱಿದುವು ಕೆಂದಳಿರಂ ಗಿಳಿವಿಂಡಿನೋಳಿಗಳ್ ॥ ೩೧

ಚಂ॥ ಕೆಳಗಣ ಕೆಂದಳಿರ್ ಪುದಿದ ಮೇಗಣ ಪಂದಳಿರೊಂದಿದೊಂದು ಕೆ
ಯ್ಗಟಿದ ಪಸುರ್ಪುಮಂ ಪೊಳೆವ ಕೆಂಪುಮನಾಳ್ದಿರೆ ಬೇಟದೊಳ್ ಕನ ।
ಲ್ದುಟಿದ ವಿಯೋಗಿಯಳ್ಳೆರ್ದೆಯನಾಯ್ದುದನಾಟಿಸಲೆಂದೆ ಮನ್ಮಥಂ
ಘಟಿಯಿಸಿ ಕೆಂಪುವಾಸಿದವೊಲಿರ್ದುವು ಮಾಮರಗಳ್ ಬಸಂತದೊಳ್ ॥ ೩೨

ಚಂ॥ ಪರೆಯೆ ಪಸುರ್ಪು ಬೆಳ್ಪಡರೆ ಬಲ್ಮುಗುಳೊಳ್ ಪೊರೆದೋಱೆ ತೆಂಬೆರಲ್
ಪೊರೆವೊರೆಯಂ ಸಡಿಲ್ಪೆ ನಡು ಪೊಂಗಿರೆ ಮಲ್ಲಿಗೆಗಳ್ ಬಸಂತದೊಳ್ ।
ಬರಿದೊಡೆ ನಲ್ಲರಂ ನೆನೆದ ನಲ್ಲರ ಮೆಲ್ಲೆರ್ದೆಗಳ್ ಬಸಂತದೊಳ್
ಬಿರಿದುವದೆಂತೊ ಮಲ್ಲಿಗೆಗೆ ನಲ್ಲರ ಮೆಲ್ಲೆರ್ದೆ ವೇಳೆಗೊಂಡುದೋ ॥ ೩೩

ನನೆಯೆಳಗಂಪನೆತ್ತಿಯುಮಣಂ ನನೆ ನಾಱದರಲ್ದನೇಕ ಕೋ
ಕನದ ವನಂಗಳೊಳ್ ಸುಟಿದು ತಣ್ಣಸಮಾಗದೆ ಕೂಡೆ ಬಂದ ಮಾ ।
ವಿನ ಪೊಸ ಪೂವಿನೊಳ್ ಪೊರೆದು ಪೊಣ್ಮಿದ ಕಂಪು ಮೊಗಂಗಳಂ ಚಳಿ
ಲ್ಲೆನೆ ಕೊಳೆ ಪೊಯ್ಯೆ ತೀಡಿದುದು ತೆಂಕಣ ಗಾಳಿ ವಸಂತಮಾಸದೊಳ್ ॥ ೩೪

ಹಾಸಿಗೆಯಲ್ಲಿದ್ದ ಬಯಕೆಯು ಗೊಂಚಲಾಗಿರುವ ಹೂವಿನ ಹಾಸಿಗೆಯಲ್ಲಿ ನೆಲೆಸಿತು. ಹೂಬಿಟ್ಟಿದ್ದ ಸೇವಂತಿಗೆ ಮತ್ತು ಸಿಂಧುವಾರ ಹೂವುಗಳಲ್ಲಿದ್ದ ಆಸಕ್ತಿ ಮಿಶ್ರಗಂಧವನ್ನು ಬೀರುತ್ತಿರುವ ಮಲ್ಲಿಗೆಯಲ್ಲಿಯೂ ಅರಳಿದ ಸಂಪಗೆಯಲ್ಲಿಯೂ ಅತಿಶಯವಾಯಿತು. ೩೧. ಮೊದಲು ಭೂಮಿಯನ್ನೆಲ್ಲ ಮಾಗಿಯ ಕಾಲವೆಂಬ ರಾಜನು ತಾನೇ ತಾನಾಗಿ ಆಳಿದನು. ಈಗ ಆತನು ಚಲಿಸಲು ಸಾಧ್ಯವಿಲ್ಲ ಇರದೆಹೋಗಬೇಕು. ಅದೇಕೆಂದರೆ ಈ ಭೂಮಿಯನ್ನು ಮನ್ಮಥನು ಕೊಟ್ಟನು, ವಸಂತರಾಜನು ಪಡೆದನು. ಇದು ಹೀಗೆ ರಾಜಶಾಸನ (ಓಲೆಯಪತ್ರ) ಎಂದು ಡಂಗುರ ಹೊಡೆಯುವ ರೀತಿಯಲ್ಲಿ ಗಿಳಿಯ ಹಿಂಡಿನ ಸಾಲುಗಳು ಕೆಂಪಾದ ಚಿಗುರುಗಳನ್ನು ಕಚ್ಚಿಕೊಂಡು ಹಾರಿದುವು. ೩೨. ಕೆಳಭಾಗದ ಕೆಂಪು ಚಿಗುರಿನಿಂದ ಕೂಡಿದ ಮೇಲುಭಾಗದ ಹಸರು ಚಿಗುರು ಒಂದಕ್ಕೊಂದು ಕೂಡಿಸಿಕೊಂಡು ಅತಿಶಯವಾದ ಹಸಿರು ಬಣ್ಣವನ್ನೂ ಹೊಳೆಯುವ ಕೆಂಪು ಬಣ್ಣವನ್ನೂ ಹೊಂದಿರಲು ವಿರಹದಿಂದ ಕೆರಳಿ ಉಳಿದುಕೊಂಡ ವಿರಹಿಯ ನಡುಗುವ ಎದೆಯನ್ನು ಆಯ್ದುಕೊಂಡು ಅದನ್ನು ಬಯಸಲಿ ಎಂದೇ ಮನ್ಮಥನು ಅದನ್ನು ಸೇರಿಸಿ ಕೆಂಪು ಬಣ್ಣವನ್ನು ಹಾಸಿದ ಹಾಗೆ ಮಾವಿನ ಮರಗಳು ವಸಂತ ಕಾಲದಲ್ಲಿ ರಮ್ಯವಾಗಿದ್ದುವು. ೩೩. ವಸಂತಕಾಲದಲ್ಲಿ ಮಲ್ಲಿಗೆಯ ಹಸಿರು ಬಣ್ಣ ಹೋಗಿ ಬಲಿತ ಮೊಗ್ಗುಗಳಲ್ಲಿ ಬಿಳಿಯ ಬಣ್ಣವು ಕೂಡಿದವು. ದಳದ ಪದರಗಳು ತೋರುತ್ತಿರಲು ತಂಗಾಳಿಯು ಆ ದಳದ ಪದರಗಳನ್ನು ಸಡಲಿಸಿದವು. ಮೊಗ್ಗಿನ ಮಧ್ಯಭಾಗವು ಉಬ್ಬಿ ಮಲ್ಲಿಗೆಯು ಅರಳಿರಲು ಪ್ರಿಯರನ್ನು ನೆನಸಿಕೊಂಡ ವಿರಹಿಗಳ ಹೃದಯಗಳು ಒಡೆದುವು. ಮಲ್ಲಿಗೆಯ ಅರಳುವಿಕೆಗೆ ಪ್ರಿಯರ ಮೃದುಹೃದಯವೂ ಸಮಯಪಾಲನೆ ಮಾಡಿವೆ! ೩೪. ಹೂವಿನ ಎಳೆಯ ವಾಸನೆಯನ್ನು ಧರಿಸಿಯೂ

ಮುಗುಳ್ವವನಾದ ಸಂಪಗೆ ಮಡಲ್ತದಿರ್ಮುತ್ತೆ ಮರಲ್ದರಲ್ದ ಮ
ಲ್ಲಿಗೆ ನನೆಗರ್ಚಿ ಕಾಕಳಿಯೊಳಾಣತಿಗೆಯ್ವ ಮದಾಳಿ ಪೋ ಪುಗಲ್ ।
ಪುಗಲೆನುತಿರ್ಪ ಪಕ್ಕಿ ಮನಮಂ ಕವರುತ್ತಿರೆ ಯೋಗಿಗಂ ವಿಯೋ
ಗಿಗಮರಿದಾಯ್ತು ಪೊಕ್ಕ ಪುಗಿಲಿಂತು ವಸಂತಕ ಚಕ್ರವರ್ತಿಯಾ ॥ ೩೫

ವ॥ ಅಂತು ಭುವನಕ್ಕೆಲ್ಲವೊಸಗೆವರ್ಪಂತೆ ಬಂದ ವಸಂತದೊಳೊಂದು ದಿವಸಮನ್ನವಾಸದೋಲಗದೊಳುದಾತ್ತನಾರಾಯಣನುಂ ನಾರಾಯಣನುಮಿರ್ದಲ್ಲಿಗೊರ್ವಂ-

ಕಂ॥ ತೊಟ್ಟೆಕ್ಕವಡಂ ಮರವಿಲ್
ಕಟ್ಟಿದ ಪಣೆಕಟ್ಟು ಬೇಂಟೆವಱೆ ದೊರೆಯೊಳೊಡಂ ॥
ಬಟ್ಟಸಿಯ ಸುರಗಿ ದಳಿವದ
ತೊಟ್ಟಂಗಿಗೆ ತನ್ನೊಳಮರೆ ಬೇಂಟೆಯನೊರ್ವಂ ॥ ೩೬

ಬಂದು ಪೊಡವಟ್ಟು ಕಂಡಿಂ
ತೆಂದಂ ಪೊಲನುಡುಗಿ ಬಂದುದುಡಿದುದು ಪುಲ್ ಕಾ ।
ಡುಂ ದಲೆಲೆಯಿಕ್ಕಿ ಘಳಿಲೆನೆ
ನಿಂದುವು ತಣಿದುವು ಮೃಗಂಗಳೆತ್ತಲುಮೀಗಳ್ ॥ ೩೭

ಸುಟೆಯುದು ಗಾಳಿ ಮೃಗಂ ಕೆ
ಯ್ವಱೆಗಳ ಮೇತದೊಳೆ ತಣಿದಪುವು ಪಂದಿಗಳುಂ ।
ಪಟ ನವಿರಿಕ್ಕಿದುವಾಳಂ
ಪಟು ಪರಿದಾಡಲ್ ಕರಂ ಬೆಡಂಗವನಿಪತೀ ॥ ೩೮

ಹೂವಿನ ವಾಸನೆಯಿಂದ ಗಂಧಯುಕ್ತವಾಗದೆ ಅರಳಿದ ತಾವರೆಯ ವನಗಳಲ್ಲಿ ಸುತ್ತಾಡಿಯೂ ತಂಪಾಗಿ ಆಗದೆ ಕೂಡಲೆ ಬಂದ ಹಣ್ಣಾದ ಮಾವಿನ ಮರದ ಹೊಸ ಹೂಗಳಲ್ಲಿ ಸೇರಿಕೊಂಡು ಆದರಿಂದ ಹೊರಹೊಮ್ಮಿದ ಸುವಾಸನೆಯು ಮುಖಗಳನ್ನು ಚಳಿಲ್ಲನೆ ಆಕ್ರಮಿಸಿ ಅಪ್ಪಳಿಸುವಂತೆ ವಸಂತಮಾಸದಲ್ಲಿ ತೆಂಕಣಗಾಳಿ ಬೀಸಿತು. ೩೫. ಮೊಗ್ಗಿನ ಹದಕ್ಕೆ ಬಂದ ಸಂಪಗೆಯೂ ಹಬ್ಬಿದ ಅದಿಮುರ್ತ್ತೆಯೂ ಚೆನ್ನಾಗಿ ಅರಳಿದ ಮಲ್ಲಿಗೆಯೂ ಹೂವನ್ನು ಕಚ್ಚಿಕೊಂಡು ಇಂಪಾದ ಧ್ವನಿಯಲ್ಲಿ ಆಲಾಪನೆ ಮಾಡುತ್ತಿರುವ ಸೊಕ್ಕಿದ ದುಂಬಿಯೂ, ಹೋಗಿ ಪ್ರವೇಶಿಸಿರಿ, ಪ್ರವೇಶಿಸಿರಿ ಎನ್ನುತ್ತಿರುವ ಕೋಗಿಲೆಪಕ್ಷಿಯೂ ಮನಸ್ಸನ್ನು ಸೂರೆಗೊಳ್ಳುತ್ತಿರಲು ಯೋಗಿಗೂ ವಿಯೋಗಿಗೂ ವಸಂತ ಚಕ್ರವರ್ತಿಯ ಪ್ರವೇಶವು ಸಹಿಸಲಸಾಧ್ಯವಾಯಿತು. ವ॥ ಹಾಗೆ ಲೋಕಕ್ಕೆಲ್ಲ ಹಬ್ಬ ಬರುವ ಹಾಗೆ ಬಂದ ವಸಂತ ಕಾಲದಲ್ಲಿ ಒಂದು ದಿವಸ ಭೋಜನಶಾಲೆಯ ಸಭೆಯಲ್ಲಿ ಅರ್ಜುನನೂ ಕೃಷ್ಣನೂ ಇದ್ದ ಸ್ಥಳಕ್ಕೆ ೩೬. ತೊಟ್ಟ ಎಕ್ಕಡ, ಕಟ್ಟಿದ ಮರದ ಬಿಲ್ಲು, ಕಟ್ಟಿದ ಹಣೆಯ ಕಟ್ಟು, ಬೇಟೆಯ ಪರೆ (ತಮಟೆ) ಸರಿಯಾಗಿ ಹೊಂದಿಕೊಂಡಿರುವ ಸಣ್ಣ ಕತ್ತಿ, ಉತ್ತರೀಯದಿಂದ ಕೂಡಿದ ಅಂಗಿ ಇವುಗಳಿಂದ ಕೂಡಿದ ಬೇಟೆಗಾರನೊಬ್ಬನು ೩೭. ಬಂದು ನಮಸ್ಕಾರ ಮಾಡಿ ಹೀಗೆಂದನು : ಹೊಲಗಳಲ್ಲಿ ಕಾಳು ಕಡ್ಡಿಗಳನ್ನು ಬಿಡಿಸಿಯಾಯಿತು.ಹುಲ್ಲೊಕ್ಕಣೆಯೂ ಆಯಿತು. ಕಾಡು ನಿಜವಾಗಿಯೂ ಎಲೆ ಬಿಟ್ಟು ಚಿಗುರಿ ನಿಂತಿವೆ. ಎಲ್ಲ ಕಡೆಯಲ್ಲಿಯೂ ಈಗ ಮೃಗಗಳು ತೃಪ್ತಿಪಟ್ಟಿವೆ. ೩೮. ರಾಜನೇ ಈಗ ಗಾಳಿ ಬೀಸುವುದಿಲ್ಲ, ಮೃಗಗಳು

ಬರವಂ ಕಾಡಂ ಬೇಗೆಗೆ
ಕರಮಱಿದೆರಡುಂ ಮೃಗಂಗಳುಂ ತಣ್ಬುೞಿಲೊಳ್ ।
ನೆರೆದೊಡವಂದುವು ತಪ್ಪದಿ
ದರಿಕೇಸರಿ ಕಂಡು ಮೆಚ್ಚುವೈ ಕೋಳ್ವಾಂಗಂ ॥* ೩೯

ಕಾಡೊಡಮ ವೇಳೆ ಸಲೆ ಕೆ
ಯ್ಗೂಡಿದುದೆನೆ ನೆಲದೊಳಿರ್ದ ನೆಲ್ಲಿಯ ಕಾಯುಂ ।
ನೋಡ ನೆಲಮುಟ್ಟಲಟ್ಟೆಯೊ
ಳಾಡುವೊಡೀ ದೆವಸಮಲ್ತೆ ಬೇಂಟೆಯ ದೆವಸಂ ॥† ೪೦

ವ॥ ಮತ್ತಂ ಬೇಂಟೆ ಜಾಱಿಲ್ಲದೆ ಬೇಂಟೆಯ ಮಾತಂ ಬಿನ್ನಪಂಗೆಯ್ವೆಂ-

ಪಿರಿಯಕ್ಕರ ॥ ಆಡಲಾಡಿಸಲ್ ಪಾಟಿಯಂ ನಿಱಿಸಲುಂ ಪರಿಗೊಳಲ್ ತೊವಲಿಕ್ಕ
ಲೊಳಗಂಬರಲ್
ಕಾಡ ಬೀಲಿಯಂ ಮಾರ್ಕಾಡನಱಿಯಲುಂ ಮೂಡಿಗೆ ಕಕ್ಕುಂಬಂ ಸುೞಿಸಿ ಜೊಂಪಂ ।
ಬೀಡು ಬಿಡುವಿಂಬು ಕದಳಿ ತೆಂಗಿನ ತಾಣಂ ಜಾಣಿಂ ನೀರ್ದಾಣಮೆಂದೆಡೆಯಱಿದುಂ
ಮಾಡಲ್ ಮಾಡಿಸಲ್ ಪಡೆ ಮೆಚ್ಚೆ ನೀಂ ಬಲ್ಲೆ ನೀಂ ಮೆಚ್ಚೆ ಹರಿಗ ಕೇಳಾನೆ
ಬಲ್ಲೆಂ॥ ೪೧

ಹೊಲದ ದಾರಿಯಲ್ಲಿರುವ ಮೇವುಗಳಿಂದಲೇ ತೃಪ್ತಿಪಡುತ್ತಿವೆ. ಹಂದಿಗಳೂ ತಮ್ಮ ಹಳಿಯ ಕೂದಲುಗಳನ್ನು ವಿಶೇಷವಾಗಿ ಬೀಳಿಸಿಕೊಂಡಿವೆ. ಕಾಡು ಈಗ ಓಡಾಡಲು ಅತ್ಯಂತ ಸೊಗಸಾಗಿದೆ. ೩೯. ಮೃಗಗಳ ಬರುವಿಕೆಯನ್ನೂ ಕಾಡಿನ ಸ್ವರೂಪವನ್ನೂ ಚೆನ್ನಾಗಿ ತಿಳಿದು ಎರಡು ಜಿಂಕೆಗಳೂ ತಂಪಾದ ಮರಗಳ ತೋಪಿನಲ್ಲಿ ಸೇರಿ ಜೊತೆಗೂಡಿ ಬಂದಿವೆ. ಇದು ಸುಳ್ಳಲ್ಲ ಅರ್ಜುನನೇ ಮೃಗವು ಸಿಕ್ಕಿಬೀಳುವ ರೀತಿಯನ್ನು ನೀನು ಮೆಚ್ಚುತ್ತೀಯೆ.* ೪೦. ಕಾಡಿನಲ್ಲಿ ಸಂಗ್ರಹಿಸಬೇಕಾದ ವಸ್ತು, ಅದನ್ನು ಸಂಗ್ರಹಿಸಬೇಕಾದ ಕಾಲ ಇವೆರಡೂ ಕೈಗೂಡಿದೆಯೆನ್ನಲು ನೆಲದಲ್ಲಿ ಬಿದ್ದಿರುವ ನೆಲ್ಲಿಯ ಕಾಯೇ ಸಾಕ್ಷಿ. ನೆಲವನ್ನು ಮುಟ್ಟಿ ಆಟ ಆಡುವ ಪಕ್ಷದಲ್ಲಿ ಬೇಟೆಗೆ ಈ ದಿನವೇ ಯೋಗ್ಯವಾದ ದಿನವಲ್ಲವೇ? ವ॥ ಬೇಟೆಯ ವಿಷಯವಾದ ಸುಳ್ಳು ಸಂದೇಶಗಳಿಲ್ಲದ ಬೇಟೆಯ ಫಲಾಫಲಗಳನ್ನು ಜ್ಞಾಪಿಸಿಕೊಳ್ಳುತ್ತೇನೆ. ೪೧. ಬೇಟೆಯಾಡುವುದಕ್ಕೂ ಆಡಿಸುವುದಕ್ಕೂ ಕ್ರಮವನ್ನು ಸ್ಥಾಪಿಸುವುದಕ್ಕೂ ಓಡುವುದಕ್ಕೂ ಚಿಗುರನ್ನು ಹಾಕುವುದಕ್ಕೂ ಒಳಗೆ ಪ್ರವೇಶಿಸುವುದಕ್ಕೂ ಕಾಡಿನ ಎಲ್ಲೆಯನ್ನೂ ಎದುರು ಕಾಡನ್ನೂ ತಿಳಿಯುವುದಕ್ಕೂ ಬತ್ತಳಿಕೆ ಕಕ್ಕುಂಬ(?) ಗಳನ್ನು ಸುಳಿಸಿ ಇದು ಜೊಂಪ (?) ಇದು ಬೀಡುಬಿಡಲು ಯೋಗ್ಯವಾದ ಸ್ಥಳ, ಇದು ಬಾಳೆ, ತೆಂಗು ಇರುವ ಸ್ಥಳ ಇದು, ಮೃಗಗಳು ನೀರು ಕುಡಿಯಲು ಬರುವ ಸ್ಥಳ ಎಂದು ಜಾಣ್ಮೆಯಿಂದರಿದು ಸೈನ್ಯವೆಲ್ಲ ಮೆಚ್ಚುವ ಹಾಗೆ ಮಾಡುವುದಕ್ಕೂ ಕೂಡಿಸುವುದಕ್ಕೂ ಸಮರ್ಥನಾಗಿದ್ದೀಯೆ. ಎಲೈ

* ಈ ಪದ್ಯದ ಅರ್ಥ ಮತ್ತು ಅನ್ವಯ ಸ್ಪಷ್ಟವಾಗಿಲ್ಲ. ಏನೋ ಪಾಠದೋಷವಿರಬೇಕು.

† ಈ ಪದ್ಯವೂ ಸರಿಯಾಗಿ ಅರ್ಥವಾಗುತ್ತಿಲ್ಲ.

ಕಂ॥ ಮೃಗದೊಲವರಮುಮನರಸನ
ಬಗೆಯುಮನಱಿದಲಸದೆಳಸಲೋಲಗಿಸಲ್ ನೆ ।
ಟ್ಟಗೆ ಬಲ್ಲನುಳ್ಳೊಡವನ
ಲ್ತೆ ಗುಣಾರ್ಣವ ಬೇಂಟೆಕಾಱನೋಲಗಕಾಱಂ ॥ ೪೨

ಪಿರಿಯಕ್ಕರ ॥ ಮೃಗಮಂ ಗಾಳಿಯನಿರ್ಕೆಯಂ ಪಕ್ಕೆಯಂ ಗಣಿದಮಂ ಕಂಡಿಯಂ
ಮಾರ್ಕಂಡಿಯಂ
ಪುಗಿಲಂ ಪೋಗಂ ಬಾರಿಯಂ ಸನ್ನೆಯಂ ನೂಱುವಮುರ್ಚುವ ನಿಲ್ವೆಡೆಯುಂ ।
ಬಗೆಯಂ ತೆಗೆಯನಲ್ಲಾಟಮಂ ಕಾಟಮಂ ನೋವುದಂ ಸಾವುದನೆಲ್ಲಂದದಿಂ
ಬಗೆದಾಗಳರಸರೊಳೆಲ್ಲ ಕೇಳ್ ನೀಂ ಬಲ್ಲೆ ಬೇಂಟೆಕಾಱರೊಳೆಲ್ಲವಾನೆ ಬಲ್ಲೆಂ ॥ ೪೩

ವ॥ ಮತ್ತಂ ನೆಲನುಂ ಗಾಳಿಯುಂ ಕೆಯ್ಯುಂ ಮೃಗಮುಮನಱಿದು ಕಾಲಾಳೊಳಂ ಕುದುರೆಯೊಳಮೊಳಗಂ ಬರಲಾನೆ ಬಲ್ಲೆನಿದು ಪೆರ್ವೇಂಟೆಯಂದಂ ದೀವದ ಬೇಂಟೆಯಂ ಬಿನ್ನಪಂಗೆಯ್ವೊಡೆ ಗಾಳಿಯುಂ ಕಟಿವುಮುಟಿವುಂ ಕಾಪುಂ ಮೇಪುಂ ತೋಡುಂ ಬೀಡುಂ ದೆಸೆಯುಂ ಮೆಚ್ಚುಂ ಬೆಚ್ಚುಂ ಪೋಗುಂ ಮೇಗುಂ ಬೆದಱುಂ ಕೆದಱುಂ ಪೆರ್ಚುಂ ಕುಂದುಮನಱಿದು ಕಾಣಲುಂ ಕಾಣಿಸಲುಂ ಕಡಂಗಲುಂ ಕಡಂಗಿಸಲುಮುಡಂಗಲುಮುಡಂಗಿಸಲುಮೊಡ್ಡಲುಮೊಡ್ಡಿಸಲುಂ ಪುಗಿಸಲುಂ ಮಿಗಿಸಲುಂ ಕಾಣದುದಂ ಕಾಣಿಸಲುಂ ಮಾಣದುದಂ

ಅಱಿಗನೇ ನೀನು ಮೆಚ್ಚುವ ಹಾಗೆ ಮಾಡಲು ನಾನು ಬಲ್ಲೆ. ೪೨. ಪ್ರಾಣಿಗಳ ಮನಸ್ಸಿನ ಪಕ್ಷಪಾತವನ್ನೂ ಅರಸನ ಅಭಿಪ್ರಾಯವನ್ನೂ ತಿಳಿದು ಉದಾಸೀನ ಮಾಡದೆ ನೇರವಾಗಿ ಸೇವೆಮಾಡುವುದನ್ನು ತಿಳಿದಿರುವವನಲ್ಲವೇ ನಿಜವಾದ ಬೇಟೆಗಾರನೂ ಸೇವಾಳುವೂ ಆಗಿರುವವನು! ೪೩. ಪ್ರಾಣಿಗಳ ಸ್ವಭಾವವನ್ನೂ ಗಾಳಿ ಬೀಸುವ ದಿಕ್ಕನ್ನೂ ಪ್ರಾಣಿಗಳಿರುವ ಸ್ಥಳವನ್ನೂ ಅವು ಮಲಗುವ ಎಡೆಯನ್ನೂ ಅವುಗಳ ಸಂಖ್ಯೆಯನ್ನೂ ಅವು ನುಸುಳುವ ಕಂಡಿ ಪ್ರತಿಕಂಡಿಗಳನ್ನೂ ಅವುಗಳ ಪ್ರವೇಶ ಮತ್ತು ನಿರ್ಗಮನಗಳನ್ನೂ ಅವುಗಳಿಗೆ ಉಪಯೋಗಿಸಬೇಕಾದ ಸಂಜ್ಞೆಗಳನ್ನೂ ಅವುಗಳು ಸೇರುವ ನಿಲ್ಲುವ ಸ್ಥಳವನ್ನೂ ಅವುಗಳ ಆಸಕ್ತಿ ವಿರಕ್ತಿಗಳನ್ನೂ ಅವುಗಳ, ಚಲನೆ, ಹಿಂಸೆ, ಯಾತನೆ ಸಾವುಗಳನ್ನೂ ಎಲ್ಲ ರೀತಿಯಿಂದಲೂ ಯೋಚಿಸಿದಾಗ ರಾಜರುಗಳಲ್ಲೆಲ್ಲ ನೀನೂ ಬೇಟೆಗಾರರಲ್ಲೆಲ್ಲ ನಾನೂ ಸಮರ್ಥರಾದವರೆಂಬುದನ್ನು ನೀನೆ ತಿಳಿದಿದ್ದೀಯೆ. ವ॥ ಅಲ್ಲದೆ ನೆಲದ ಏರು ತಗ್ಗುಗಳನ್ನೂ ಗಾಳಿಯು ಬರುವ ದಿಕ್ಕನ್ನೂ ಹೆಜ್ಜೆಯ ಗುರುತುಗಳನ್ನೂ ಮೃಗಗಳನ್ನೂ ತಿಳಿದು ಪದಾತಿಸೈನ್ಯ ಮತ್ತು ಕುದುರೆಯ ಸೈನ್ಯಗಳ ಮಧ್ಯೆ ನಾನು ಬರಲು ಸಮರ್ಥ. ಇದು ಹೆಬ್ಬೇಟೆಯ ರೀತಿ; ಮೃಗಗಳನ್ನು ಒಡ್ಡಿ ಆಕರ್ಷಿಸುವ ದೀವಕ ಬೇಟೆಯನ್ನು ವಿಜ್ಞಾಪಿಸಿಗೊಳ್ಳುವುದಾದರೆ ಗಾಳಿಯ ದಿಕ್ಕನ್ನೂ ಪ್ರಾಣಿಗಳ ಹೋಗುವಿಕೆ ಮತ್ತು ಉಳಿಯುವಿಕೆಗಳನ್ನೂ ರಕ್ಷಣೆ ಮತ್ತು ಮೇವುಗಳನ್ನೂ ತೊಡುವುದನ್ನೂ ಬಿಡುವುದನ್ನೂ ದಿಕ್ಕುಗಳನ್ನೂ ಸಂಕೇತಸ್ಥಳಗಳನ್ನೂ ಆಸಕ್ತಿ ಭಯಗಳನ್ನೂ ಪೋಗುಮೇಗುಗಳನ್ನೂ (?) ಹೆದರಿಕೆ ಬೆದರಿಕೆಗಳನ್ನೂ ಹೆಚ್ಚು ಕುಂದುಗಳನ್ನೂ ತಿಳಿದು ಅವುಗಳನ್ನು ಕಾಣಲು ಕಾಣಿಸಲು ಅವುಗಳ ಮೇಲೆ ರೇಗಲೂ

ಮಾಣಿಸಲುಮೇಱದುದನೇಱಿಸಲುಂ ಜಾಣನಾಗಿ ಮೂಱು ಕೊಂಬುಮನಾಱು ನಾಣ್ಪೋಗುಮನೆರಡುಪೆಜ್ಜೆಯುಮಂ ಮೂಱು ಪೊೞ್ತುಮಂ ಮೃಗದ ಮೂಱೆರವುಮ ನಾಱಾರಯ್ಕೆಯುಮಂ ಗಾಳಿಯುಮನೆಱಂಕೆಯುಮಂ ಬಲ್ಲನಾಗಿ ನಂಬಿದ ಬರವುಮಂ ನಂಬದ ಬರವುಮನಱಿದು ಮಲೆಯದುದಂ ಮಲೆಯಿಸಲುಂ ಮಲೆದುದಂ ತೊಲಗಿಸಲುಂ ನಂಬದುದಂ ನಂಬಿಸಲುಂ ನಂಬಿದುದಂ ಬಿಡಿಸಲುಮೊಳಪುಗುವುದರ್ಕೆಡೆ ಮಾಡಲುಮೆಡೆಯಾಗದ ಮೃಗಮನವುಂಕಿಸಲುಮೊಲ್ದುಮೊಲ್ಲದ ನಲ್ಲರಂತೆ ಮಿಡುಕಿಸಲುಂ ಪಣಮುಡಿದರಂತಡ್ಡಂ ಮಾಡಲುಮೆಸೆದ ದೆಸೆಗಳ್ಗೋಡಿಸಲುಂ ಕುಮಾರಸ್ವಾಮಿಯ ನಿಮ್ಮಡಿಯ ಕೆಲದೊಳಾನೆ ಬಲ್ಲೆಂ-

ಕಂ|| ಬರೆದಂತೆ ಬೆನ್ನ ಕರ್ಪೆಸೆ
ದಿರೆ ಸೊಚಮನುರ್ಚಿ ಪುಲ್ಲೆಗಾಟಿಸಿ ಮಲೆತ ।
ಪೆರ್ಱಲೆಯ ಸೋಲಮನಟ್ಟೆಯೊ
ಳರಿಕೇಸರಿ ನಿಂದು ನೋೞ್ಪುದೊಂದರಸಲ್ತೇ ।। ೪೪

ಪದಮುಮನಿಂಬುಮನಣಮಱಿ
ಯದದೇವುದು ಬದ್ದೆ ಬೆಳ್ಮೆಗಂ ಪಜ್ಜೆದಲೆಂ ।
ಬುದನೆರಡುಮನಱಿವಾತನೆ
ಚದುರಂ ಚದುರಂಗೆ ಬದ್ದೆ ವಜ್ಜೆಗಳೊಳವೇ ।। ೪೫

ಅವುಗಳನ್ನು ರೇಗಿಸಲೂ ಅವಿತುಕೊಳ್ಳಲೂ ಅವಿತುಕೊಳ್ಳಿಸಲೂ ಒಡ್ಡಲೂ ಒಡ್ಡಿಸಲೂ ಪ್ರವೇಶಮಾಡಿಸಲೂ ಬೇರೆಡೆಯಲ್ಲಿ ಉಳಿಯುವ ಹಾಗೆ ಮಾಡಲೂ ಕಾಣದಿರುವುದನ್ನು ಕಾಣಿಸಲೂ ತಡೆಯುವುದಕ್ಕಾಗದುದನ್ನು ತಡೆಯಲೂ ಹತ್ತದೆ ಇರುವುದನ್ನು ಹತ್ತಿಸಲೂ ಚಾತುರ್ಯದಿಂದ ಅವುಗಳ ಮೂರು ಸಂಕೇತಸ್ಥಳಗಳನ್ನೂ ಆರು ಬಗೆಯ ರತಿಕ್ರೀಡೆಯನ್ನೂ ಎರಡು ಹೆಜ್ಜೆಯನ್ನೂ ಮೂರು ಹೊತ್ತನ್ನೂ ಮೃಗದ ಮೂರು ಸ್ಥಿತಿಗಳನ್ನೂ ಆರು ಪೋಷಣಾಕ್ರಮವನ್ನೂ ಗಾಳಿಯನ್ನೂ ರಕ್ಕೆಯನ್ನೂ ತಿಳಿದವನಾದ ಕಾರಣ ಅಪಾಯವಿಲ್ಲವೆಂದು ನಂಬಿ ಬರುವ ಪ್ರಾಣಿಯನ್ನೂ ಸಂದೇಹದಿಂದ ಬರುವ ಪ್ರಾಣಿಯನ್ನೂ ತಿಳಿದು ಕೆರಳದೇ ಇರುವುದನ್ನು ಕೆರಳಿಸಲೂ ಕೆರಳಿರುವುದನ್ನು ತೊಲಗಿಸಲೂ ನಂಬದೇ ಇರುವುದನ್ನು ನಂಬಿಸಲೂ ನಂಬಿದುದನ್ನು ಬಿಡಿಸಲೂ ಒಳಗೆ ಪ್ರವೇಶಮಾಡುವುದಕ್ಕೆ ಅವಕಾಶಮಾಡಲೂ ಅಧೀನವಾಗದ ಮೃಗವನ್ನು ಅಧೀನ ಮಾಡಿಕೊಳ್ಳಲೂ ಪ್ರೀತಿಸಿಯೂ ಪ್ರೀತಿಸದ ಪ್ರೇಮಿಗಳ ಹಾಗೆ ವ್ಯಥೆಪಡಿಸಲೂ ಜೂಜಿನಲ್ಲಿ ಒತ್ತೆಯನ್ನು ಸೋತವರಂತೆ ಅಡ್ಡಗಟ್ಟಲೂ ಎಸೆದ ದಿಕ್ಕಿಗೆ ಓಡಿಸಲೂ ಕುಮಾರಸ್ವಾಮಿಯ (ಷಣ್ಮುಖನ) ಮತ್ತು ನಿಮ್ಮ ಸಾಕ್ಷಿಯಾಗಿ ನಾನೇ ಸಮರ್ಥನಾಗಿದ್ದೇನೆ. ೪೪. ಅರ್ಜುನನೇ ಚಿತ್ರಿಸಿದ ಹಾಗೆ ಬೆನ್ನಿನ ಮಚ್ಚೆಯು ಪ್ರಕಾಶಿಸುತ್ತಿರಲು ಹುಲ್ಲಿನ ಊಬುಗಳನ್ನು ಮುರಿದು ಹೆಣ್ಣಿನ ಜಿಂಕೆಗಾಗಿ ಬಯಸಿ ಔದ್ಧತ್ಯದಿಂದ ಬರುತ್ತಿರುವ ಗಂಡುಜಿಂಕೆಯ ಮೋಹವನ್ನು ಪ್ರೀತಿಯಿಂದ ನೋಡುವುದು ರಾಜರಿಗೆ ಯೋಗ್ಯವಾದ ವಿನೋದವಲ್ಲವೇ? ೪೫. ಪಾದವನ್ನೂ ಅದರ ವಿಸ್ತಾರವನ್ನೂ ಸ್ವಲ್ಪವೂ ತಿಳಿಯದ ಆ ಪ್ರೌಢಿಮೆಯೆಂತಹುದು? ಅಂಜುವ ಮೃಗ ಅವರ ನಿಜವಾದ

ವ|| ಮತ್ತಂ ಪಂದಿವೇಂಟೆಯ ಮಾತಂ ಬಿನ್ನಪಂಗೆಯ್ವಂ-

ಪಿರಿಯಕ್ಕರ || ನೆಲನಂ ನಿಱುಗೆಯುಂ ನಡೆವೊಂದು ಪದಮುಮಂ ಸೋವಳಿ ಮೇವಳಿ ಬಿಸುವಳಿಯುಂ
ಬಲಮಂ ಶಕುನಮನೊಳ್ಳಿತ್ತುಪಾಯಮಂ ಪಿಡಿವಂದೀತನೆ ಪಂದಿ ಕುರುಡು ಕುಂಟೆಂ |
ದಲಸದಱಿದಿಂತು ಬಲ್ಮೆಗೆ ಬೆರಲೆತ್ತಿ ಪಜ್ಜೆಯುಂ ನೆಲೆಗಳಂ ಕಿಡಲೀಯದೆ
ಸಿಲೆಯ ಮೇಲಾದೊಡಂ ಶಕುನಮಂ ನಿಱಿಪಂತೆ ನಿಱಿಸುವೆಂ ಪಂದಿಯಂ ನೀಂ ಮೆಚ್ಚಲುಂ || ೪೬

ವ|| ಮತ್ತಂ ಪಂದಿವೇಂಟೆಯ ನಾಯೆಂತಪ್ಪುವೆಂದೊಡಸಿಯ ನಡುವುಮಗಲುರಮುಂ ತಳ್ತು ಕಟ್ಟಿದ ಕಿವಿಯುಂ ಪುರ್ವುಂ ತೋರಮಾಗಿ ನಿರ್ಮಾಂಸಮಪ್ಪ ಕಾಲ್ಗಳುಂ ನೆಲನಂ ಮುಟ್ಟದುಗುರ್ಗಳುಮನುಳ್ಳುದಾಗಿ ಜಾತ್ಯಶ್ವದಂತೆ ಬೇಗಮಾಗಿ ಕೋಳಿ ಕಾಳಿಕಾಜಿನಂತೆ ಬಱಿಯಱಿವಿಡಿದು ತುಂಬಿನ ನೀರಸುರ್ಚಿದಾಗಳಡೆ ಪರಿದು ಮನ್ನೆಯರಂತೆ ಕಾದಿಯಲಸದೆ ಸೂಳೆಯಂತೆ ಕೋಳಂ ಪಟ್ಟಟ್ಟಸದೆ ತಕ್ಕನಂತೆ ನಂಬಿಸಿಯು ಮೊತ್ತರದಂತೊತ್ತಿಯು ಮುರಿಯಳುರ್ವಂತಳುರ್ದುಕೊಳ್ವುದಿದು ಪಂದಿವೇಂಟೆಯ ನಾಯ್ ಮತ್ತಂ ಕಿಱುವೇಂಟೆಯ ನಾಯುಂ ಕೊಂಡುಂ ಜಾಡಿಯುಂ ನೆಲನುಂ ಪೊೞ್ತುಂ ಪೊಲನುಮನಱಿದು ಬೞಿಯೊಳ್

ಹೆಜ್ಜೆ ಎರಡನ್ನೂ ತಿಳಿದವನೇ ಚತುರ. ಜಾಣನಿಗೂ ತಿಳಿಯದ ಪ್ರೌಢವಾದ ಹೆಜ್ಜೆಯ ಗುರುತುಗಳುಂಟೆ? ವ|| ಇನ್ನು ಹಂದಿಯ ಬೇಟೆಯ ಮಾತನ್ನು ವಿಜ್ಞಾಪಿಸಿಕೊಳ್ಳುತ್ತೇನೆ - ೪೬. ಹಂದಿಯನ್ನು ಹಿಡಿಯುವಾಗ ನೆಲವನ್ನೂ ನಿಂತ ಸ್ಥಳವನ್ನೂ ನಡೆಯುವ ರೀತಿಯನ್ನೂ ಹಿಡಿಯುವ ಕ್ರಮವನ್ನೂ ಮೇಯುವಿಕೆಯನ್ನೂ ಒಟ್ಟುಗೂಡಿಸುವಿಕೆಯನ್ನೂ ಶಕ್ತಿಯನ್ನೂ ಶಕುನಸಂಕೇತಗಳನ್ನೂ ಒಳ್ಳೆಯ ಉಪಾಯಗಳನ್ನೂ (ಉಳ್ಳವನು) ಇವನೇ (ಎಂಬ ಪ್ರೌಢಿಮೆಯನ್ನು ಪಡೆದಿದ್ದೇನೆ). ಹಂದಿಯು ಕುರುಡು ಅಥವಾ ಕುಂಟು ಎಂದು ಉದಾಸೀನಮಾಡದೆ ನನ್ನ ಶಕ್ತಿಯನ್ನು ಪ್ರದರ್ಶಿಸಿ ಹೆಜ್ಜೆಯ ಗುರುತುಗಳನ್ನು ಅವುಗಳ ವಸತಿಗಳನ್ನು ಕೆಡಿಸದೆ ಕಲ್ಲಿನ ಮೇಲಾದರೂ ಸಂಕೇತವನ್ನು ಸ್ಥಾಪಿಸುವ ಹಾಗೆ ನೀನು ಮೆಚ್ಚುವಂತೆ ಹಂದಿಯನ್ನು ನಿಲ್ಲಿಸುತ್ತೇನೆ. ವ|| ಮತ್ತು ಹಂದಿಯ ಬೇಟೆಯ ನಾಯಿಯು ಎಂತಹುದು ಎಂದರೆ ತೆಳುವಾದ ಸೊಂಟ, ಅಗಲವಾದ ಎದೆ, ನೆಟ್ಟಗೆ ನಿಂತಿರುವ ಕಿವಿಗಳು ಬಾಗಿದ ಹುಬ್ಬು, ದಪ್ಪವಾಗಿ ಮಾಂಸವಿಲ್ಲದ ಕಾಲುಗಳು, ನೆಲವನ್ನು ಮುಟ್ಟದ ಉಗುರು ಇವುಗಳಿಂದ ಕೂಡಿ ಜಾತಿಯ ಕುದುರೆಯಂತೆ ವೇಗವಾಗಿ ನಡೆದು ಶಾಕ್ತೇಯಮತದ ವಂಚಕನಂತೆ ತನ್ನ ಮಾರ್ಗವನ್ನು ಹಿಡಿದು, ತೂಬಿನ ನೀರಿನ ಹಾಗೆ ಸಡಿಲ ಮಾಡಿದ ತಕ್ಷಣವೇ ಅಡ್ಡವಾಗಿ ಸರಿದು, ಮಾನ್ಯರ ಸೇವಕನಂತೆ ಕಾದಲು ಆಲಸ್ಯ ಪಡದೆ ಸೂಳೆಯಂತೆ ಸುಲಿಗೆಗೊಂಡು ಓಡಿಸದೆ, ಯೋಗ್ಯನಂತೆ ನಂಬಿಸಿ ಒತ್ತರದಂತೆ (?) ಒತ್ತಿ ಉರಿಯು ಹರಡುವಂತೆ ಹರಡಿಕೊಳ್ಳುವುದು. ಇದು ಹಂದಿಬೇಟೆಯಲ್ಲಿ ಉಪಯೋಗಿಸುವ ನಾಯಿಯ ಲಕ್ಷಣ. ಇನ್ನು ಕಿರುಬೇಟೆಯ ನಾಯನ್ನು ತೆಗೆದುಕೊಂಡು ಸಡಿಲ ಮಾಡಿದ ನೆಲದ ಸ್ವರೂಪವನ್ನು ಹೊತ್ತನ್ನೂ ಹೊಲವನ್ನೂ ತಿಳಿದು

ಪೊಸತುಂ ಪೞದುಮನಱಿದು ಪರಿಯಿಸಲ್ ನೀನೆ ಬಲ್ಲೆಯದನಾನೆ ಬಲ್ಲೆನೆಂದು ಬಿನ್ನಪಂಗೆಯ್ವನಂತುಮಲ್ಲದೆ ಬಲ್ಮೆಗಂ ಬಸನಕ್ಕಂ ಸವಿಯಪ್ಪ ಕಿಱುವೇಂಟೆಯುಂ ಪೆರ್ವೇಂಟೆಯುಮಲ್ಲದುೞಿದ ಬೇಂಟೆಯಂ ಬೇಂಟೆಯೆನ್ನೆಂ–

ಪಿರಿಯಕ್ಕರ ॥ ಪಸಿವು ದೊರೆಕೊಳ್ಳುಮುಣಿಸುಗಳಿನಿಕೆಯ್ದುಮಾವಂದದೊಳ್ ಕನಲ್ದಾದ ಮೆಯ್ಯು

ನಸಿಯಸಾಗಿವುದುಳಿದುವಪ್ಪುವು ಬಗೆಗೊಳಲಪ್ಪುದು ಮೃಗದ ಮೆಯ್ಯೊಳ್ ।
ನಿಸದಮೆಸೆವುದಂ ಬಲ್ಲಾಳ ಬಿಲ್ಬಲ್ಮೆ ತನ್ನೊಳಮಿಸುತೆ ಲೇಸಪ್ಪುದು
ಬಸನಮೆಂದಱಿಯದೇಳಿಸುವರ್ ಬೇಂಟೆಯಂ ಬೇಂಟೆಯೆ ಬಿನದಂಗಳರಸಲ್ತೇ॥ ೪೭

ವ॥ ಎಂದು ಬಿನ್ನಪಂಗೆಯ್ದು ಬೇಂಟೆಯಾತಂಗೆ ಮೃಗ ವ್ಯಾಯಾಮ ಕಾರ್ತಿಕೇಯಂ ಮೆಚ್ಚಿ ಮೆಚ್ಚುಗೊಟ್ಟು ತೊವಲನಿಕ್ಕೆಂದು ಮುಂದೆ ಪೇೞ್ದಟ್ಟಿ ನಾರಾಯಣನುಂ ತಾನುಮಂತಃಪುರ ಪರಿವಾರಂಬೆರಸು ಬೇಂಟೆಗೆ ಪೊಱಮಟ್ಟು ಪರಿಯ ತಾಣಕ್ಕೆ ವಂದು ಬೇಲಿಯ ಕೆಲದೊಳಲ್ಲದೆ ಪೆಱಗಣುಲಿಪಿಂಗಮುಳ್ಳೊಳಕ್ಕಂ ಗೆಂಟಾಗಿ ಬೀಡು ಬಿಡಿಸಿ ಬೇಂಟೆಕಾಱನ ಸಮೆದ ಮಕರತೋರಣಮುಮಂ ಗುಣಣೆಯ ಬಾಣಸಿನ ಮಜ್ಜನದ ರಾಣಿವಾಸದ ಮನೆಗಳುಮಂ ನನೆಯ ಪಂದರುಮಂ ತಳಿರ ಕಾವಣಂಗಳುಮಂ ಮಾಡದ ನೆಲೆಯ ಚೌಪಳಿಗೆಗಳುಮನವಱ ಮೇಲಿರ್ದೆಲೆಯಡಕೆಯುಮಂ ತೆಂಗಿನೆಳನೀರುಮಂ ಕೊಳಲಿಂಬಪ್ಪಂತಿರೆ ಮಾಡಿ ನಟ್ಟ ಕೌಂಗಿನ

ದಾರಿಯಲ್ಲಿಯೇ ಹೊಸದು ಹಳೆಯದೆಂಬುದನ್ನು ತಿಳಿದು ಹರಿಯಿಸಲು ನೀನೇ ಶಕ್ತನೆಂಬುದನ್ನು ನಾನು ಬಲ್ಲೆ. ಅಲ್ಲದೆ ಶಕ್ತಿಪ್ರದರ್ಶನಕ್ಕೂ ಸವಿಯಾಗಿರುವ ಕಿರುಬೇಟೆಯನ್ನೂ ಹೆಬ್ಬೇಟೆಯನ್ನೂ ಬಿಟ್ಟು ಉಳಿದ ಬೇಟೆಯನ್ನು ಬೇಟೆಯೆಂದೇ ನಾನು ಕರೆಯುವುದಿಲ್ಲ. ೪೭. ಬೇಟೆಯಿಂದ ಹಸಿವುಂಟಾಗುತ್ತದೆ. ಆಹಾರ ರುಚಿಯಾಗುತ್ತದೆ. ಯಾವ ರೀತಿಯಲ್ಲಾದರೂ ಕೆರಳಿ ಕೊಬ್ಬಿದ ಬೊಜ್ಜು ಕರಗುತ್ತದೆ. ಉಳಿದುವೂ ಆಗುತ್ತದೆ. ಮೃಗಗಳ ಶರೀರ ಮತ್ತು ಮನಸ್ಸಿನ ಅರಿವುಂಟಾಗುತ್ತದೆ. ಪರಾಕ್ರಮಶಾಲಿಯ ಬಿಲ್ಲಿನ ಪ್ರೌಢಿಮೆ ನಿಶ್ಚಯವಾಗಿಯೂ ಪ್ರಕಾಶಿಸುತ್ತದೆ. ಬಾಣಪ್ರಯೋಗ ಮಾಡುವುದರಿಂದ ತನಗೂ ಒಳ್ಳೆಯದಾಗುತ್ತದೆ. ತಿಳಿಯದವರು ಬೇಟೆಯನ್ನು ವ್ಯಸನವೆಂದು ಕರೆಯುತ್ತಾರೆ. ಬೇಟೆಯು ವಿನೋದಗಳ ರಾಜನಲ್ಲವೆ? ವ॥ ಎಂದು ವಿಜ್ಞಾಪನಮಾಡಿದ ಬೇಟೆಯವನಿಗೆ ಮೃಗಗಳಿಗೆ ವ್ಯಾಯಾಮ ಮಾಡಿಸುವುದರಲ್ಲಿ ಷಣ್ಮುಖನಂತಿರುವ ಅರ್ಜುನನು (ಅರಿಕೇಸರಿಯು) ಬಹುಮಾನವನ್ನಿತ್ತು ಚಿಗುರನ್ನು ಹಾಕು ಎಂದು ಮೊದಲು ಹೇಳಿಕಳುಹಿಸಿದನು. ಕೃಷ್ಣನೂ ತಾನೂ ರಾಣಿವಾಸದ ಪರಿವಾರದೊಡನೆ ಹೊರಟು ಬೇಟೆಯ ಪ್ರವೇಶಸ್ಥಳಕ್ಕೆ ಬಂದರು. ಬೇಲಿಯ ಪಕ್ಕದಲ್ಲಿಯೇ ಅಲ್ಲದೆ ಹಿಂದುಗಡೆಯ ಸದ್ದಿಗೂ ಗಲಭೆಗೂ ದೂರವಾಗಿ ಪಾಳೆಯವನ್ನು ಬಿಡಿಸಿದರು. ಬೇಟೆಗಾರನು ಸಿದ್ಧ ಮಾಡಿದ್ದ ಮಕರತೋರಣ, ನೃತ್ಯಶಾಲೆ, ಪಾಕಶಾಲೆ, ಸ್ನಾನಗೃಹ, ಅಂತಃಪುರ, ಹೂವಿನ ಚಪ್ಪರ, ಚಿಗುರಿನ ಹಂದರ, ಉಪ್ಪರಿಗೆಯ ಮನೆಯ ತೊಟ್ಟಿಗಳು, ಅವುಗಳ ಮೇಲಿದ್ದ, ಎಲೆಯಡಿಕೆ, ತೆಂಗಿನ ಎಳನೀರುಗಳನ್ನು ತೆಗೆದುಕೊಳ್ಳಲು ಅನುಕೂಲವಾಗುವ ಹಾಗೆ

ತೆಂಗಿನ ಮರಂಗಳುಮಂ ಪಣ್ವೆರಸು ನಟ್ಟ ಮ್ಯೆಂದವಾಳೆಗಳುಮಂ ತೊವಲ್ವೆರಸು ನಟ್ಟಾಲಂಗಳುಮನಮರೆ ಮಾಡಿದ ಬಟ್ಟುಳಿಯ ಕಕ್ಕುಂಬ ತೊಡಂಬೆಯ ಮೂಡಿಗೆಯ ಕದಳಿಕೆಯ ಕಂಡಪಟಂಗಳುಮಂ ಪಲವುಂ ತೆಱದ ಪಲವುಂ ಪೊಱೆಯಾಗಿ ಕಟ್ಟಿದ ಬಲೆಗಳುಮಂ ಪಡಿಗಳಸಮರ್ಚೆ ಬಿಲ್ಲುಂ ಕುದುರೆಯುಂ ಕಾಲಾಳುಂ ನಾಯ್ಗಳುಮಂ ತಿಣ್ಣಮಿರಿಸಿ ಕೆಯ್ಯುಂ ನೇಣುಮನಳವಿಯೊಳ್ ಕೂಡಿ ನಡೆಯಲ್ವೇೞ್ದು ಬೇಂಟೆವಸದನಂಗೊಂಡು ಕಂಡಿಯ ಬಾಗಿಲೊಳುದಾತ್ತನಾರಾಯಣನುಂ ನಾರಾಯಣನುಮಿರ್ದು ಪುಗಿಲ ಪುಲ್ಲೆಯ ಮೊದಲುರಮುಮಂ ಪೆಱಗಣ ಪುಲ್ಲೆಯ ನಡುವುಮನಯ್ದಱೊಳ್ ಮೂಱುಮಂ ಮೂಱಱೊಳೆರಡು ಮನೆರಡಱೊಳೊಂದುಮನೆಚ್ಚು ಬಿಲ್ಲ ಬಲ್ಮೆಯುಂ ಮೆಱೆದು-

ಕಂ॥ ಮುಂದಣ ಮಿಗಮುಂ ಕಱೆಪದೆ
ಸಂದಿಸಿ ಬೞೆಗೊಳ್ವ ಮಿಗಮುಮಂ ಕಱೆಪದೆ ತಾ ।
ನೊಂದಳವಿದಪ್ಪದೆಚ್ಚು ಬ
ಲಿಂದಮನಿಂ ಬಿಲ್ಲ ಬಲ್ಮೆಯುಂ ಪೊಗೞೆಸಿದಂ ॥ ೪೮

ವ॥ ಮತ್ತಂ ಬೆರ್ಚಿ ಪೊಳೆದು ಪರಿವ ಪೊಳೆವುಲ್ಲೆಗಳುಮಂ ತಲೆಯುಂ ಕುತ್ತಿ ವಿಶಾಲಂಬರಿವ ಕರಡಿಗಳುಮನಡಂಗಿ ಪರಿವ ಪುಲಿಗಳುಮಂ ಸೋಂಕಿ ಪರಿಪೆಯ್ಗ ಳುಮಂ ತಡಂವೊಟ್ಟಿ ಪರಿವ ಕಡವಿನ ಕಾಡೆಮ್ಮೆಯ ಮರೆಯ ಪಿಂಡುಗಳು

ಮಾಡಿ ನೆಟ್ಟಿರುವ, ಅಡಕೆ ಮತ್ತು ತೆಂಗಿನ ಮರಗಳು ಹಣ್ಣಿನಿಂದ ಕೂಡಿ ನೆಟ್ಟಿರುವ ಮಹೇಂದ್ರ ಬಾಳೆ, ಚಿಗುರಿನಿಂದ ಕೂಡಿ ನೆಟ್ಟಿರುವ ಆಲದ ಮರ, ಗಾಢವಾಗಿ ಸೇರಿಕೊಂಡಿರುವ ಬಟ್ಟುಳಿಯ (?) ಕಕ್ಕುಂಬದ (?) ಗೊಂಚಲುಗಳಿಂದ ಮಾಡಿದ ಬತ್ತಳಿಕೆ ಬಾವುಟ ತೆರೆಗಳು ಹಲವು ರೀತಿಯ ಹಲವು ಹೊರೆಗಳಾಗಿ ಕಟ್ಟಿದ ಬಲೆಗಳು ಬಾಗಿಲುಗಳನ್ನು (ಭದ್ರಪಡಿಸಿ) ಸೇರಿಸಿ,ಬಿಲ್ಲು, ಕುದುರೆ ಕಾಲಾಳು ನಾಯಿ ಹೆಚ್ಚುಸಂಖ್ಯೆಯ ಕೋಲು ಹಗ್ಗ ಮೊದಲಾದುವನ್ನೆಲ್ಲ ಸರಿಯಾದ ಪ್ರಮಾಣದಲ್ಲಿ ಸೇರಿಸಿ ನಡೆಯಹೇಳಿ ಬೇಟೆಯ ಉಡುಪನ್ನು (ಅಲಂಕಾರವನ್ನು) ತೊಟ್ಟು ಮೃಗವು ಹೊರಗೆ ಬರುವ ಸ್ಥಳದಲ್ಲಿ ಬಾಗಿಲಲ್ಲಿ ಅರ್ಜುನ ಕೃಷ್ಣರು ನಿಂತು ಬೇಟೆಗೆ ಪ್ರಾರಂಭಮಾಡಿದರು. ಪ್ರವೇಶಮಾಡುವ ಜಿಂಕೆಯ ಎದೆಯ ಮೊದಲ ಭಾಗವನ್ನು ಹೊರಗಣ ಹುಲ್ಲೆ ಮಧ್ಯಭಾಗವನ್ನೂ ಅಯ್ದರಲ್ಲಿ ಮೂರನ್ನೂ ಮೂರಲ್ಲಿ ಎರಡನ್ನೂ ಎರಡಲ್ಲಿ ಒಂದನ್ನೂ ಹೊಡೆದು ತಮ್ಮ ಬಿಲ್ವಿದ್ಯೆಯ ಪ್ರೌಢಿಮೆಯನ್ನು ಪ್ರಕಾಶಪಡಿಸಿದರು. ೪೮. ಮುಂದೆ ಬಂದ ಮೃಗವನ್ನೂ ಸಾಯಿಸದೆ ಅದನ್ನು ಅನುಸರಿಸಿ ಹಿಂದೆಬಂದ ಮೃಗವನ್ನೂ ಕೊಲ್ಲದೆ ತಾನು ಒಂದು ಅಳತೆಯನ್ನೂ ತಪ್ಪದೆ ಅರ್ಜುನನು ಬಾಣಪ್ರಯೋಗಮಾಡಿ ಕೃಷ್ಣನು ತನ್ನ ಬಿಲ್ವಿದ್ಯೆಯನ್ನು ಹೊಗಳುವ ಹಾಗೆ ಮಾಡಿದನು. ವ॥ ಪುನಃ ಹೆದರಿ ಹೊಳೆದು ಹರಿಯುವ ಜಿಂಕೆಗಳನ್ನೂ ತಲೆತಗ್ಗಿಸಿಕೊಂಡು ದೂರವಾಗಿ ಹರಿಯುವ ಕರಡಿಗಳನ್ನೂ ಅಡಗಿಸಿ ಹರಿಯುವ ಹುಲಿಗಳನ್ನೂ ಮೆಟ್ಟಿ ಓಡಿಹೋಗುವ ಮುಳ್ಳು ಹಂದಿಗಳನ್ನೂ ಅಡ್ಡಗಟ್ಟಿ ಉದ್ದವಾಗಿ ಕಾಲಿಟ್ಟು ಹರಿಯುವ ಕಡವೆ ಮತ್ತು ಕಾಡೆಮ್ಮೆಯ ಮರಿಗಳ ಹಿಂಡುಗಳನ್ನೂ ಅಳತೆದಪ್ಪದೆ ಒಂದೊಂದನ್ನೂ

ಮನಳವಿದಪ್ಪದೊಂದೊಂದನಿಸುವಂತೆ ಪಲವನೆಚ್ಚು ನೆಲಂ ಬಿರಿಯೆ ಗಜಱಿ ಗರ್ಜಿಸಿ ಪಾಯ್ವ ಸಿಂಗಂಗಳುಮಂ ಕಂಡು–

ಕಂ॥ ಆಸುಕರಂ ಗಡ ತಮಗತಿ
ಭಾಸುರ ಮೃಗರಾಜ ನಾಮಮುಂ ಗಡಮೆಂದಾ ।
ದೋಸಕ್ಕೆ ಮುಳಿದು ನೆಗಳ್ದರಿ
ಕೇಸರಿ ಕೇಸರಿಗಳನಿತುಮಂ ತಳ್ತಿಱಿದಂ ॥ ೪೯

ಇಱಿದವಱ ನೆತ್ತರೊಳ್ ತ
ಳ್ತಿಱಿದಂ ತನ್ನುರಮನುರು ಗಜಂಗಳನಾಟಂ ।
ದಱಿಸಿ ಕೊಲುತಿರ್ಪವೆಂಬೀ
ಕಱುಪಿನೊಳರಿಗಂಬರಂ ಗಜಪ್ರಿಯರೊಳರೇ ॥ ೫೦

ವ॥ ಅಂತು ನರ ನಾರಾಯಣರಿರ್ವರುಮನವರತ ಶರಾಸಾರ ಶೂನ್ಯೀಕೃತ ಕಾನನಮಾಗೆಚ್ಚು ಮೃಗವ್ಯ ವ್ಯಾಪಾರದಿಂ ಬಟಲ್ದು ಮನದಂತೆ ಪರಿವ ಜಾತ್ಯಶ್ವಂಗಳನೇಱಿ ಬರೆವರೆ–

ಚಂ॥ ಜವಮುಟಿದೊಂದು ಸೋಗೆನವಿಲೊಯ್ಯನೆ ಕರ್ಕದೆಗಾಸಿಯಾಗಿ ಪಾ
ಱುವುದುಮಿದೆನ್ನ ನಲ್ಲಳ ರತಿಶ್ರಮವಿಶ್ಲಥ ಕೇಶಪಾಶದೊಳ್ ।
ಸವಸವನಾಗಿ ತೋಱಿದಪುದೆಂಬುದೆ ಕಾರಣದಿಂದಮಂ ಗುಣಾ
ರ್ಣವನಿಡಲೊಲ್ಲನಿಲ್ಲ ಹಯವಲ್ಗನಸಂಚಳ ರತ್ನಕುಂಡಳಂ ॥ ೫೧

ಹೊಡೆಯುವ ಹಾಗೆ ಹಲವನ್ನು ಹೊಡೆದು ಕೆಡವಿದನು. ಭೂಮಿಯು ಬಿರಿದುಹೋಗುವ ಹಾಗೆ ಆರ್ಭಟದಿಂದ ಘರ್ಜನೆಮಾಡಿಕೊಂಡು ಮುನ್ನುಗ್ಗುತ್ತಿರುವ ಸಿಂಹಗಳನ್ನು ಕಂಡು-೪೯. ಇವು ಅತಿಕ್ರೂರವಾದುವು ಆದರೂ ಬಹು ಪ್ರಸಿದ್ಧವಾದ ಮೃಗರಾಜನೆಂಬ ಹೆಸರು ಇವಕ್ಕೆ ಇದೆಯಲ್ಲವೆ? ಎಂದು ಆ ದೋಷಗಳಿಗಾಗಿ ಕೋಪಿಸಿಕೊಂಡು ಪ್ರಸಿದ್ಧನಾದ ಅರಿಕೇಸರಿಯು ಕೇಸರಿ (ಸಿಂಹ)ಗಳಷ್ಟನ್ನೂ ಎದುರಿಸಿ ಕೊಂದನು (ಕತ್ತರಿಸಿದನು). ೫೦. ಅವುಗಳ ರಕ್ತದಿಂದ ತನ್ನ ಎದೆಯನ್ನು ಲೇಪನ ಮಾಡಿಕೊಂಡನು. ಈ ಸಿಂಹಗಳು ಶ್ರೇಷ್ಠವಾದ ಆನೆಗಳನ್ನೂ ಮೇಲೆಬಿದ್ದು ಹಿಂಸಿಸಿ ಕೊಲ್ಲುತ್ತಿವೆ ಎಂಬ ಈ ಕೋಪದಲ್ಲಿ ಅರಿಕೇಸರಿಯ ಮಟ್ಟಕ್ಕೆ ಬರುವ ಗಜಪ್ರಿಯರು (ಆನೆಯನ್ನು ಪ್ರೀತಿಸುವವರು) ಇದ್ದಾರೆಯೇ? ವ॥ ಹಾಗೆ ನರನಾರಾಯಣರಿಬ್ಬರೂ ಎಡಬಿಡದ ಬಾಣಗಳ ಮಳೆಯಿಂದ ಕಾಡುಗಳನ್ನೆಲ್ಲ ಬರಿದು ಮಾಡಿ ಹೊಡೆದು ಬೇಟೆಯ ಕಾರ್ಯದಿಂದ ಬಳಲಿ ತಮ್ಮ ಮನಸ್ಸಿನಷ್ಟೇ ವೇಗದಿಂದ ಹರಿಯುವ ಜಾತಿಕುದುರೆಗಳನ್ನು ಹತ್ತಿಬಂದರು. ೫೧. ಅಲ್ಲಿ ಕಕ್ಕಡೆ (ಮುಳ್ಳುಗೋಲು)ಯೆಂಬ ಆಯುಧದಿಂದ ಪೆಟ್ಟುತಿಂದು ಶಕ್ತಿಗುಂದಿ ಒಂದು ಗಂಡುನವಿಲು ನಿಧಾನವಾಗಿ ಹಾರುತ್ತಿತ್ತು. ಅದನ್ನು ನೋಡಿ ಅರ್ಜುನನು ಇದು ನನ್ನ ಪ್ರಿಯಳಾದ ಪ್ರಿಯಳಾದ ಸುಭದ್ರೆಯ ರತಿಕ್ರೀಡೆಯ ಕಾಲದಲ್ಲಿ ಬಿಚ್ಚಿಹೋದ ತುರುಬಿನ ಗಂಟಿಗೆ ಸಮಾವಾಗಿ ತೋರುತ್ತಿದೆ ಎಂಬ ಕಾರಣದಿಂದ ಕುದುರೆಯ ಅಲುಗಾಟದಿಂದ ಅಲುಗಾಡುವ ರತ್ನದ ಕುಂಡಲವನ್ನುಳ್ಳ ಅರ್ಜುನನು ಅದನ್ನು ಹೊಡೆಯಲು ಒಪ್ಪಲಿಲ್ಲ ವ॥ ಹಾಗೆ

ವ॥ ಅಂತು ಬೇಂಟೆಯನಾಡಿ ಬಟಲ್ದು ಬೇಸಗೆಯ ನಡುವಗಲೊಳ್ ವನಕ್ರೀಡೆಗಂ ಜಲಕ್ರೀಡೆಗಮಾಸಕ್ತರಾಗಿ ಯಮುನಾನದೀತಟ ನಿಕಟವರ್ತಿಗಳಾದರಲ್ಲಿ

ಚಂ॥ ಸರಳ ತಮಾಳ ತಾಳ ಹರಿಚಂದನ ನಂದನ ಭೂಜರಾಜಿಯಿಂ
ಸುರಿವಲರೋಳಿ ತದ್ವನಲತಾಂಗಿಯ ಸೂಸುವ ಸೇಸೆಯಾಯ್ತು ಭೃಂ ।
ಗರವಮದೊಂದು ಮಂಗಳರವಕ್ಕೆಣೆಯಾಯ್ತು ಮನೋನುರಾಗದಿಂ
ಕರೆವವೊಲಾಯ್ತು ಮತ್ತ ಕಳಹಂಸರವಂ ಪಡೆಮೆಚ್ಚೆಗಂಡನಂ ॥ ೯೨

ಕಂ ॥ ಯಮುನಾನದೀ ತರಂಗಮ
ನಮುಂಕಿ ವನಲತೆಯ ಮನೆಗಳಂ ಸೋಂಕಿ ವನ ।
ಭ್ರಮಣ ಪರಿಶ್ರಮಮಂ ಮು
ನ್ನಮೆ ಕಳೆದುದು ಬಂದದೊಂದು ಮಂದಶ್ವಸನಂ ॥ ೯೩

ವ॥ ಅಂತು ಕಾಳಿಂದೀಜಲ ಶಿಶಿರಶೀಕರವಾರಿ ಚಾರಿಯುಂ ಮೃಗಯಾ ಪರಿಭ್ರಮ ಶ್ರಮೋತ್ಥಿತ ಸ್ವೇದಜಲ ಲವಹಾರಿಯುಮಾಗಿ ಬಂದ ಮಂದಾನಿಲಕ್ಕೆ ಮೆಯ್ಯನಾಜೆಸುತ್ತುಮಾ ಪುಣ್ಯನದಿಯನೆಯ್ದೆವಂದು ತನ್ನ ಬಾಳ ನೀರಂತೆ ಕಱಂಗಿ ಕರ್ಗಿದ ನೀರಂ ನೋಡಿ ವಿಕ್ರಮಾರ್ಜುನಂ ಕಾಳಾಹಿಮಥನನ ಮೊಗಮಂ ನೋಡಿ-

ಕಂ॥ ತನ್ನೊಳಗಣ ಪನ್ನಗನಂ
ಮುನ್ನೀನ್ ಪಿಡಿದೊಗೆಯೆ ಕಾಯಲಾಜದೆ ಪಿರಿದುಂ ।
ಬನ್ನದ ಕರ್ಪೆಸೆದುದು ತೊಱೆ
ಗಿನ್ನುಂ ಹರಗಳ ತಮಾಳ ನೀಳಚ್ಛವಿಯಿಂ ॥ ೯೪

ಬೇಟೆಯಾಡಿ ಬಳಲಿ ಆ ಬೇಸಗೆಯ ನಡುಹಗಲಿನಲ್ಲಿ ವನಕ್ರೀಡೆಗೂ ಜಲಕ್ರೀಡೆಗೂ ಆಸೆಪಟ್ಟವರಾಗಿ ಯಮುನಾನದೀದಡಕ್ಕೆ ಬಂದರು. ಅಲ್ಲಿ, ೯೨. ತೇಗು, ಹೊಂಗೆ, ತಾಳೆ, ಶ್ರೀಗಂಧ ಮತ್ತು ನಂದನವೃಕ್ಷಗಳ ಸಮೂಹಗಳಿಂದ ಸುರಿಯುತ್ತಿರುವ ಪುಷ್ಪರಾಶಿಯು ಆ ವನಲಕ್ಷ್ಮಿಯು ಚೆಲ್ಲುತ್ತಿರುವ ಅಕ್ಷತೆಯಾಯಿತು. ದುಂಬಿಗಳ ಧ್ವನಿಯು ಮಂಗಳವಾದ್ಯಕ್ಕೆ ಸಮಾನವಾಯಿತು. ಮದಿಸಿದ ಕಳಹಂಸಧ್ವನಿಯು ಪಡೆಮೆಚ್ಚೆ ಗಂಡನಾದ ಅರ್ಜುನನನ್ನು ಪ್ರೀತಿಯಿಂದ ಕರೆಯುವ ಹಾಗಾಯಿತು. ೯೩. ಯಮುನಾ ನದಿಯ ಅಲೆಗಳನ್ನು ಅದುಮಿ ಕಾಡಿನ ಬಳ್ಳಿ ಮನೆಗಳನ್ನು ಮುಟ್ಟಿ ಬಂದ ಒಂದು ಮಂದಮಾರುತವು (ಅವರು) ಕಾಡಿನಲ್ಲಿ ಅಲೆದ ಆಯಾಸವನ್ನು ಮೊದಲೇ ಪರಿಹರಿಸಿತು. ವ॥ ಯಮುನಾನದಿಯ ನೀರಿನ ತಂಪಾದ ತುಂತುರುಗಳ ಮೇಲೆ ಸಂಚಾರಮಾಡಿದುದೂ ಬೇಟೆಯ ಅಲೆದಾಟದ ಆಯಾಸದಿಂದುಂಟಾದ ಬೆವರಿನ ಕಣಗಳನ್ನು ಹೋಗಲಾಡಿಸಿದುದೂ ಆಗಿ ಬಂದ ಮಂದಮಾರುತಕ್ಕೆ ಶರೀರವನ್ನು ಒಡ್ಡುತ್ತಾ ಆ ಪುಣ್ಯನದಿಯ ಸಮೀಪಕ್ಕೆ ಬಂದು ತನ್ನ ಕತ್ತಿಯ ಕಾಂತಿಯಂತೆ ಕಪ್ಪಾಗಿ ಕರ್‍ರಗಿದ್ದ ನೀರನ್ನು ನೋಡಿ ವಿಕ್ರಮಾರ್ಜುನನು ಕಾಳಿಂಗಮರ್ದನನಾದ ಕೃಷ್ಣನನ್ನು ಕುರಿತು-೯೪. ತನ್ನಲ್ಲಿದ್ದ ಕಾಳಿಂಗಸರ್ಪವನ್ನು ಮೊದಲು ನೀನು ಹಿಡಿದೆತ್ತಿ ಎಸೆಯಲು ಅದನ್ನು ರಕ್ಷಿಸಲಾರದೆ ಆ ನದಿಗೆ ವಿಶೇಷವಾಗಿ ಅಂದುಂಟಾದ ಸೋಲಿನ ಕರಿಯಬಣ್ಣವು ಇಂದೂ ಇನ್ನೂ ಶಿವನ ಕಂಠದಂತೆಯೂ ಹೊಂಗೆಯ ಮರದಂತೆಯೂ ಈ ನದಿಯಲ್ಲಿ

ತಡಿವಿಡಿದು ಪೂತ ಲತೆಗಳ
ನೊಡನೊಡನೆಲರಲೆಯೆ ಬಿಡದೆ ಸುರಿವಲರ್ಗಳನಂ ।
ದೆಡೆಗುಡದೆ ನೂಂಕಿ ಮೆಲ್ಲನೆ
ತಡಿಯಂ ಸಾರ್ಚಿದಪುದಿದಱ ಬಂಬಲ್ದೆರೆಗಳ್ ॥ ೫೫

ವಿದಳಿತ ನುತ ಶತಪತ್ರದ
ಪುದುವಿನೊಳಿರದಗಲೆವೋದ ಹಂಸನನಱಸಲ್ ।
ಪದೆದೆಳಸುವ ಪೆಣ್ಣಂಚೆಯ
ಪದ ಕೊರಲಿಂಚರದ ಸರಮೆ ಸವಿ ಕಿವಿಗಿದಱೊಳ್ ॥ ೫೬

ಕಂ॥ ನೆಱೆಯಲರ್ದಂಭೋರುಹದಲ
ರ್ದುಱುಗಲನೆಲೆದೊಗೆದುವೆಸೆಯೆ ಜಲದೇವತೆಗಳ್ ॥
ನಿಱಿವಿಡಿದುಡಲ್ ನಿಮಿರ್ಚಿದ
ಕುಱುವಡಿಯ ತರಂಗದಂತೆ ಬಂಬಲ್ದೆರೆಗಳ್ ॥ ೫೭

ಚಂ॥ ತುರಗಚಯಂಗಳಂತಿರೆ ತರಂಗಚಯಂ ಚಮರೀರುಹಂಗಳಂ
ತಿರೆ ಕಳಹಂಸೆ ಬೆಳ್ಗೊಡೆಗಳಂತಿರೆ ಬೆಳ್ನೊರೆ ಗೊಟ್ಟಿ ಗಾಣರಂ ।
ತಿರೆ ಮಱಿದುಂಬಿ ಮೇಳದವರಂತಿರೆ ಸಾರಿಕೆ ರಾಜಗೇಹದಂ
ತಿರೆ ಕೊಳನಲ್ಲಿ ತಾಮರಸರಂತಿರೆ ತಾಮರಸಂಗಳೊಪ್ಪುಗುಂ ॥ ೫೮

ವ॥ ಎಂದು ಭಾಸ್ಕರತನೂಜೆಯನುಭಯತಟ ನಿಕಟ ಕುಸುಮನಿವಹ ತತ್ಪರಾಗ ಪಟಳ ಪಿಶಂಗ ತರತ್ತರಂಗ ಸರೋಜೆಯಂ ಮೆಚ್ಚಿ ಪೊಗಟ್ಟು ಜಲಕ್ರೀಡೆಯಾಡಲ್ ಬಗೆದು ತಾನುಮನಂತನುಮಂತಃಪುರಪರಿವಾರಂ ಬೆರಸು-

ಕಪ್ಪುಕಾಂತಿಯಿಂದ ಪ್ರಕಾಶಿಸುತ್ತಿದೆ. ೫೫. ದಡವನ್ನನುಸರಿಸಿ ಹೂಬಿಟ್ಟಿರುವ ಲತೆಗಳನ್ನು ಆಗಾಗ ಗಾಳಿಯು ಅಲುಗಿಸಲು ಅದರಿಂದ ಸುರಿಯುವ ಹೂವುಗಳನ್ನು ಒಂದೇ ಸಮನಾಗಿ ಇದರ ಸಾಲಾದ ಅಲೆಗಳು ಮೃದುವಾಗಿ ದಡವನ್ನು ಸೇರಿಸುತ್ತವೆ. ೫೬. ಅರಳಿದ ಪ್ರಸಿದ್ಧವಾದ ತಾವರೆಯ ಹುದುವಿನ ಆಶ್ರಯದಲ್ಲಿರದೆ ಅಗಲಿಹೋದ ಗಂಡು ಹಂಸಪಕ್ಷಿಯನ್ನು ಹುಡುಕಲು ಆಶೆಪಟ್ಟು ಕೂಗುವ ಹೆಣ್ಣುಹಂಸದ ಹದವಾದ ಕೊರಲಿನ ಇಂಪಾದಧ್ವನಿಯೇ ಇಲ್ಲಿ ಕಿವಿಗಿಂಪಾದ ಸ್ವರವಾಗಿದೆ. ೫೭. ಜಲದೇವತೆಗಳು ಉಡಲು ಎತ್ತಿದ ಸೀರೆಯ ನಿರಿಗೆಗಳು ಚಿಮ್ಮುವಂತೆ ಅಲೆಗಳ ಸಮೂಹವು ತಾವರೆಗಳ ಮೇಲಿಂದ ಹಾರಿದುವು. ೫೮. ಅಲೆಗಳ ಸಮೂಹವು ಕುದುರೆಗಳ ಸಮೂಹದಂತಿರಲು ಕಳಹಂಸವು ಚಾಮರಗಳಂತಿರಲು ಬಿಳಿಯ ನೊರೆ ಶ್ವೇತಛತ್ರಿಯಂತಿರಲು ದುಂಬಿಯ ಮರಿಗಳು ಗಾಯಕಗೊಷ್ಠಿಯಂತಿರಲು ಹೆಣ್ಣುಗಿಳಿಯು ಸಖಿಯಂತಿರಲು ಅಲ್ಲಿಯ ಕೊಳವು ಅರಮನೆಯಂತಿರಲು ತಾವರೆಗಳು ತಾವೇ ಅರಸರಾಗಿರುವ ಹಾಗೆ ಪ್ರಕಾಶಿಸುತ್ತಿವೆ. ವ॥ ಎಂದು ಎರಡು ಸಮೀಪದ ಮರಗಳಿಂದ ಉದುರಿದ ಹೂವಿನ ಪರಾಗರಾಶಿಯಿಂದ ಪಿಶಂಗ (ಕಪ್ಪುಮಿಶ್ರವಾದ ಕೆಂಪುಬಣ್ಣ)ವಾಗಿ ಮಾಡಲ್ಪಟ್ಟ ಚಂಚಲವಾದ ಅಲೆಗಳಿಂದ ಕೂಡಿದ ಕಮಲವನ್ನು ಸೂರ್ಯಪುತ್ರಿಯಾದ

ಕಂ॥ ಒತ್ತಿದ ತಳ್ಕೆತ್ತಿದ ತಟಿ
ಮುತ್ತಿನ ಪೊಸದುಡಿಗೆ ತಳಿರ ಸೋರ್ಮುಡಿ ಮನಮಂ ।
ಪತ್ತಿಸಿ ಜೊತ್ತಿಸೆ ಮದನೋ
ನ್ಮತ್ತೆಯರವಯವದೆ ಬಂದರರಸಿಯರರೆಬರ್ ॥ ೫೯

ಇದು ಮೃದು ಕಳಹಂಸದ ರವ
ಮಿದು ನೂಪುರ ನಿನದಮಿದು ರಥಾಂಗಯುಗಂ ಮ ।
ತ್ತಿದು ಕುಚಯುಗಮಿದು ಸರಸಿಜ
ಮಿದು ಮೊಗಮೆನಿಸಿದುದು ನೆರೆದ ಪೆಂಡಿರ ತಂಡಂ ॥ ೬೦

ವ॥ ಅಂತು ಮದನನ ಮನೋರಾಜ್ಯಮೆ ಬರ್ಪಂತೆ ಬಂದು ತಂಡತಂಡದೆ ರಮಣೀಯ ರಮಣೀಜನಂ ಬೆರಸು ಪಂಚರತ್ನಂಗಳಂ ಕೆದಱಿಸಿ ಸಾಂದಿನ ಸೌಸವದ ಕುಂಕುಮದ ಕತ್ತುರಿಯ ಕದಡಂ ಕದಡಿ-

ಕಂ ॥ ನೀಲದ ಬೆಳ್ಳಿಯ ಗಾಡಿಯು
ಮೀ ಲಲಿತಾಂಗಿಯರ ಕಣ್ಗೆ ಪೋಲ್ತುಂ ನಾಂ ಕ ।
ಣ್ಗೇಳಿದಮಾಗಿರೆವೆಂದೆಳ
ವಾಳೆಗಳೋಡಿದುವು ಬಾಲೆಯರ್ ಪುಗುವಾಗಳ್ ॥ ೬೧

ವ॥ ಅಂತು ಪೊಕ್ಕಾಗಳ್-

ಯಮುನಾನದಿಯನ್ನು ಮೆಚ್ಚಿ ಹೊಗಳಿ ತಾನೂ ಕೃಷ್ಣನೂ ಅಂತಃಪುರಪರಿವಾರದೊಡನೆ ಕೂಡಿ ನೀರಾಟವಾಡಲು ಬಯಸಿದರು. ೫೯. ಲೇಪನಮಾಡಿಕೊಂಡಿರುವ ಶ್ರೀಗಂಧಾದಿಲೇಪನವೂ ಎತ್ತಿ ಹಿಡಿದಿರುವ ಛತ್ರಿಗಳೂ ಮುತ್ತಿನ ಹೊಸಒಡವೆಗಳೂ ಚಿಗುರಿನಿಂದ ಅಲಂಕರಿಸಿದ ಜಾರುಗಂಟೂ ಮನಸ್ಸನ್ನು ಪ್ರವೇಶಿಸಿ ಆಕರ್ಷಿಸುತ್ತಿರಲು ಕಾಮದಿಂದ ಹುಚ್ಚೆದ್ದ ಕೆಲವರು ರಾಣಿಯರು ಲೀಲೆಯಿಂದ ಅಲ್ಲಿಗೆ ಬಂದರು. ೬೦. ಅಲ್ಲಿ ನೆರೆದ ಹೆಂಗಸರ ಸಮೂಹವು ಇದು ಮೃದುವಾದ ಕಳಹಂಸಧ್ವನಿ; ಇದು ಕಾಲ್ಗಡಗದ ಶಬ್ದ; ಇದು ಚಕ್ರವಾಕಪಕ್ಷಿಗಳ ಜೋಡಿ, ಇದು ಮೊಲೆಗಳ ಜೋಡಿ, ಇದು ಕಮಲ, ಇದು ಮುಖ ಎನ್ನಿಸಿತು. ವ॥ ಹಾಗೆ ಮನ್ಮಥನ ಮನೋರಾಜ್ಯವೇ ಬರುವಂತೆ ಬಂದು ಗುಂಪು ಗುಂಪಾದ ರಮಣೀಯರಾದ ಆ ಸ್ತ್ರೀಜನರೊಡನೆ ಕೂಡಿ ನೀರಿಗೆ ಪಂತರತ್ನಗಳನ್ನು ಹರಡಿಸಿ ಶ್ರೀಗಂಧದ ವಾಸನೆಯನ್ನು ಕುಂಕುಮಕೇಸರಿ ಮತ್ತು ಕಸ್ತೂರಿಯ ಬಗ್ಗಡಗಳನ್ನು ಕದಡಿ ನದಿಯನ್ನು ಪ್ರವೇಶಿಸಿದರು. ೬೧. ನೀಲರತ್ನದ, ಬೆಳ್ಳಿಯ, ಸೌಂದರ್ಯವನ್ನು ಹೋಲುವ ಕಣ್ಣುಗಳನ್ನುಳ್ಳ ಈ ಕೋಮಲೆಯರ ಮುಂದೆ ನಾವು ಹೀನವಾಗಿ ಕಾಣಿಸಿಕೊಳ್ಳಲಾರೆವು ಎಂದು ಅಲ್ಲಿದ್ದ ಎಳೆಯ ಮೀನುಗಳು ಆ ಬಾಲೆಯರು ಕೊಳವನ್ನು ಪ್ರವೇಶಿಸಿದಾಗ ಓಡಿಹೋದುವು.

ಕಂ॥ ಆದಲೆ ನೀರ್ ಗುಂಡಿತ್ತಂ
ದೀದಲೆಯೊಳ್ ನಿಂದು ಸತಿಗೆ ಹರಿಗಂ ತೋಱು ।
ತ್ತಾದರದೆ ಜಾನುದಘ್ನಮು
ರೋದಘ್ನಂ ಕಂಠದಘ್ನಮೆಂಬಳವಿಗಳಂ ॥ ೬೨

ವ॥ ಅಂತು ಜಗುನೆಯ ಮಡುವಂ ತಮ್ಮರಸಿಯರ ವಿಕಟ ನಿತಂಬಬಿಂಬಂಗಳ ಘಟ್ಟಣೆಯೊಳವುರೆ ಬಗಿದೊಗೆದ ವೊಲೆಗಳಳ್ಳೆಱಿನೊಳಳ್ಳಾಡಿ ತಳ್ಳಂಕಗುಟ್ಟ ನೀರಾಟಮಾಡುವಾಗಳ್-

ಚಂ॥ ಪೊಸತಲರ್ದೊಂದು ತಾವರೆಯೆಗೆತ್ತು ಮುಖಾಬ್ಜಮನೊಂದು ತುಂಬಿ ಚುಂ
ಬಿಸೆ ಸತಿ ಬೆರ್ಚಿ ಪೆಳ್ಪಳಿಸಿ ನೋೞ್ಪುದುಮಾಕೆಯ ಕಣ್ಣ ಬೆಳ್ಪುಗಳ್ ।
ಪಸರಿಸೆ ತುಂಬಿಗಳ್ ಕುವಲಯಂಗಳರಲ್ದುವೆ ಗೆತ್ತು ಮತ್ತೆಯುಂ
ಮುಸುಱುವುದುಂ ಗುಣಾರ್ಣವನನಾಗಳವಳ್ ಭಯದಿಂದಮಪ್ಪಿದಳ್ ॥೬೩

ಅಸಿಯಳವುಂಕಿ ಕೆಂದಳದೊಳೊತ್ತುವ ನೀರ್ ಮೊಗಮಂ ಪಳಂಚೆ ಬಂ
ಚಿಸಲಿನಿಸಾನುಮಂ ಮುಳುಗಿದಾಗಡೆ ಭೋಂಕನೆ ಬಂದು ಬಾಳೆಮೀನ್ ।
ಮುಸುಱೆ ನಿರಂತರಂ ಕರ್ದುಕೆ ಸತ್ಕವಿಯೊಳ್ ಸಮನಾಗಿ ಮಾರ್ಗಮಂ
ಪೊಸಯಿಸಿ ದೇಸಿಯಂ ಪೊಸತುಮಾಡಿದಳೊರ್ವಳಪೂರ್ವರೂಪದಿಂ* ॥ ೬೪

ವ॥ ಹಾಗೆ ಪ್ರವೇಶಿಸಿದಾಗ -೬೨. ಆ ಕಡೆಯಲ್ಲಿ ನೀರು ಆಳವಾಗಿದೆ ಎಂದು ಅರ್ಜುನನು ಈ ಕಡೆಯಲ್ಲಿಯೇ ನಿಂತು ಸುಭದ್ರೆಗೆ ಮೊಳಕಾಲವರೆಗೆ ಮುಳುಗುವ ಎದೆಯವರೆಗೆ ಮುಳುಗುವ ಕತ್ತಿನವರೆಗೆ ಮುಳುಗುವ ಪ್ರಮಾಣಗಳನ್ನು ಆದರದಿಂದ ತೋರಿಸಿದನು. ವ॥ ಯಮುನಾನದಿಯ ಮಡುವನ್ನು ಆ ರಾಣಿಯರು ತಮ್ಮ ದಪ್ಪವಾದ ಪಿರ್ರೆಗಳ ತಾಗುವಿಕೆಯಿಂದ ಭಾಗಮಾಡಿ ಮೊಲೆಗಳ ಘಟ್ಟಣೆಯಿಂದ ತುಳುಕಾಡಿ ಜಲಕ್ರೀಡೆಯಾಡಿದರು. ೬೩. ಮುಖಕಮಲವನ್ನು ಒಂದು ದುಂಬಿಯು ಒಂದು ಹೊಸದಾಗಿ ಅರಳಿದ ಕಮಲವೆಂದೇ ಭ್ರಮಿಸಿ ಮುತ್ತಿಡಲು ಆ ಸತಿಯು ಹೆದರಿ ಭಯದಿಂದ ನೋಡುತ್ತಿರಲು ಅವಳ ಕಣ್ಣಿನ ಬಿಳಿಯ ಬಣ್ಣವು ಪ್ರಸರಿಸಲು ಅದನ್ನು ದುಂಬಿಗಳ ಅರಳಿದ ಕನ್ನೈದಿಲೆಗಳೆಂದೇ ಭ್ರಾಂತಿಗೊಂಡು ಪುನಃ ಮುತ್ತಲು ಅವಳು ಭಯದಿಂದ ಗುಣಾರ್ಣವನನ್ನು ಆಲಿಂಗನಮಾಡಿಕೊಂಡಳು, ೬೪. ಕೃಶಾಂಗಿಯಾದ ಒಬ್ಬಳು ಕೆಂಪಾದ ತನ್ನ ಅಂಗೈಯಿಂದ ಅಮುಕಿ ಚೆಲ್ಲಿದ ನೀರು ತನ್ನ ಮುಖವನ್ನು ತಗುಲಲು ಮತ್ತೊಬ್ಬಳು ಅದನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಒಂದಿಷ್ಟು ಮುಳುಗಿದಾಗಲೆ ಒಂದು ಬಾಳೆಯ ಮೀನು ಇದ್ದಕ್ಕಿದ್ದ ಹಾಗೆ ಬಂದು ಮುತ್ತಿಕೊಂಡು ಒಂದೇ ಸಮನಾಗಿ ಕಚ್ಚಲು ಅವಳು ಸತ್ಕವಿಗೆ ಸಮನಾಗಿ ಮಾರ್ಗಶೈಲಿಯನ್ನು ಹೊಸದಾಗಿಸಿ ದೇಸೀಶೈಲಿಯ ಸೌಂದರ್ಯವನ್ನು ಅಪೂರ್ವರೀತಿಯಿಂದ ಹೊಸತುಮಾಡಿದಳು.*

---

* ಈ ಪದ್ಯದ ಅರ್ಥವು ಸ್ಪಷ್ಟವಾಗಿಲ್ಲ.

ಕಂ॥ ಆ ಸಕಳ ಸ್ತ್ರೀ ನಿವಹದ
ಪೂಸಿದ ಮೃಗಮದದ ಮುಡಿಯ ಪೂವಿನ ರಜದಿಂ ।
ವಾಸಿಸಿದ ನೀರ ಕದದಿಂ
ದಾಸವದೊಳ್ ಸೊರ್ಕಿ ಬೆಂಡುಮಗುಬ್ಬುವು ಮೀಂಗಳ್ ॥ ೬೫

ಮುಡಿ ಬಿಡೆ ಪರೆದೆಸಟ್ಗಳ ಪೊಸ
ದುಡುಗೆಯ ಮುತ್ತುಗಳ ಕುಚದ ಸಿರಿಕಂಡದ ಬೆ ।
ಳ್ಪೊಡನೊಡನೆಸೆದಿರೆ ಜಗುನೆಯ
ಮಡು ಗಂಗೆಯ ಮಡುವನಿನಿಸನನುಕರಿಸಿರ್ಕುಂ ॥ ೬೬

ವ॥ ಅಂತು ನಾಡೆಯುಂ ಪೊಬ್ತು ಜಲಕೇಳೀ ಲೀಲೆಯೊಳ್ ಮೞೆದು ನಿಮಿರ್ದ ಕುರುಳ್ಗಳುಂ ಕೆಂಪೇಱಿದ ಕಣ್ಗಳುಂ ಬೆಳ್ಪೇಱಿದ ಬಾಯ್ದೆಱೆಗಳುಂ ಪಳಂಚಿದ ಬಣ್ಣಂಗಳುಮೆಸೆಯೆ ಸೊಗಯಿಸುವ ನಿಜ ವಧೂಜನಂ ಬೆರಸು ಪೊಱಮಟ್ಟಾಗಳ್-

ಕಂ॥ ತೆಱಪುವಡೆದಂಗಜಂ ಕೆ
ಯ್ಸೆಱೆಗೊಳೆ ನೋಟಕರ ಮನಮನಾಗಳ್ ಕೊಳದಿಂ ।
ಪೊಱಮಡೆ ಜಗಿಲ್ತು ಪತ್ತಿದ
ಕುಱುವಡಿಗಳೆ ಮೆಱೆದುವವರ ನಾಣ್ಗಳ ತೆಱಪಂ ॥ ೬೭

ವ॥ ಆಗಳ್ ಮಡಿಯ ಭಂಡಾರದ ಮಾಣಿಕ್ಯ ಭಂಡಾರದ ನಿಯೋಗಿಗಳ್ ತಂದು ಮುಂದಿಟ್ಟ ಪೊನ್ನ ಪಡಲಿಗೆಗಳೊಳೊಟ್ಟಿದ ದೇವಾಂಗವಸ್ತ್ರಂಗಳುಮನನೇಕವಿಧದ ತುಡುಗೆಗಳು

೬೫. ಆ ಸಮಸ್ತಸ್ತ್ರೀಸಮೂಹವು ಲೇಪನ ಮಾಡಿಕೊಂಡಿದ್ದ ಕಸ್ತೂರಿಯಿಂದಲೂ ತುರುಬಿನ ಹೂಗಳ ಪರಾಗಗಳಿಂದಲೂ ವಾಸನೆ ಮಾಡಲ್ಪಟ್ಟ ನೀರಿನ ಕದಡವೆಂಬ ಮದ್ಯಸೇವನೆಯಿಂದ ಮೀನುಗಳು ಸೊಕ್ಕಿ ಬೆಂಡಿನಂತೆ ಅಸ್ತವ್ಯಸ್ತವಾದುವು. ೬೬. ಆ ಸ್ತ್ರೀಯರ ಬಿಚ್ಚಿ ಹೋದ ತುರುಬಿನಿಂದ ಚೆದುರಿದ ಹೂವಿನ ದಳಗಳಿಂದಲೂ, ಹೊಸಬಡವೆಗಳ ಮುತ್ತುಗಳಿಂದಲೂ ಮೊಲೆಗೆ ಲೇಪನ ಮಾಡಿಕೊಂಡಿದ್ದ ಶ್ರೀಗಂಧದಿಂದಲೂ ಬಿಳಿಯ ಬಣ್ಣವನ್ನು ಹೊಂದಿ ಯಮುನೆಯ ಮಡು (ಬಿಳುಪಾಗಿರುವ) ಗಂಗೆಯ ಮಡುವನ್ನು ಸ್ವಲ್ಪ ಹೋಲುತ್ತಿತ್ತು. ವ॥ ಹಾಗೆ ಬಹಳಹೊತ್ತು ಜಲಕ್ರೀಡೆಯ ಆಟದಲ್ಲಿ ಮೆರೆದು ನೇರವಾಗಿ ನಿಂತ ಕೂದಲುಗಳೂ ಕೆಂಪು ಹತ್ತಿದ ಕಣ್ಣುಗಳೂ ಬಿಳಿಚಿಕೊಂಡಿರುವ ತುಟಿಗಳೂ ತಗಲಿ ಅಂಟಿಕೊಂಡಿರುವ ಬಣ್ಣದ ಸೀರೆಗಳೂ ರಮಣೀಯವಾಗಿರಲು ಸೊಗಸಾಗಿ ಕಾಣುತ್ತಿರುವ ತಮ್ಮ ಸ್ತ್ರೀಜನಗಳೊಡನೆ ಕೃಷ್ಣಾರ್ಜುನರು (ನೀರಿನಿಂದ) ಹೊರಟುಬಂದರು. ೬೭. ಮನ್ಮಥನು ಅವಕಾಶವನ್ನು ಪಡೆದು ನೋಟಕರ ಮನಸ್ಸನ್ನು ಸೆರೆಹಿಡಿಯುತ್ತಿರಲು ಕೊಳದಿಂದ ಸ್ತ್ರೀಯರು ಹೊರಗೆ ಬಂದರು. ಅವವ ಶರೀರಕ್ಕೆ ಅಂಟಿಕೊಂಡಿದ್ದ ಚಿಕ್ಕಸ್ನಾನಶಾಟಿಗಳೇ ಅವರ ರಹಸ್ಯಸ್ಥಾನಗಳ ವಿಸ್ತಾರವನ್ನು ಪ್ರಕಟಿಸಿದುವು. ವ॥ ಆಗ ವಸ್ತ್ರಭಂಡಾರ ಮಾಣಿಕ್ಯ ಭಂಡಾರಗಳ ಅಧಿಕಾರಿಗಳು ತಂದು ಮುಂದೆ ಚಿನ್ನದ ತಟ್ಟೆಗಳಲ್ಲಿ ರಾಶಿ ಹಾಕಿದ ರೇಷ್ಮೆ ವಸ್ತುಗಳನ್ನೂ ಅನೇಕ ವಿಧವಾದ ಆಭರಣಗಳನ್ನೂ ಎಷ್ಟೋ ರೀತಿಯ

ಮನೆನಿತಾನುಂ ತೆಱದ ಸುಗಂಧದ್ರವ್ಯಂಗಳುಮನರಸಿಯರ್ಗಮರಸುಮಕ್ಕಳ್ಗುಮಿತ್ತು ತಾಮಿರ್ವರುಂ ಉಟ್ಟುಂ ತೊಟ್ಟುಂ ಪೂಸಿಯುಂ ನೆಱೆಯೆ ಕೆಯ್ಗೆಯ್ದು ದಿವ್ಯಾಹಾರಂಗಳನಾರೋಗಿಸಿ ಕೆಯ್ಗಟ್ಟಿಕೊಂಡು ತಂಬುಲಂಗೊಂಡಿಂ ಬೞೆಯಮಚ್ಯುತಂ ವಿಕ್ರಮಾರ್ಜುನನ ಕೆಯ್ಯಂ ಪಿಡಿದುಕೊಂಡು ತನ್ನ ಬಾಲಕ್ರೀಡೆಯ ಸಾಹಸಂಗಳಂ ತೋಱಲೆಂದು-

ಉ॥ ಕೊಂದೆನವುಂಕಿ ಸಂದ ಖರಧೇನುಕರಂ ಮುಳಿಸಿಂದಮಿಲ್ಲಿ ಕಾ
ಳಿಂದಿಯ ಪಾವನಪ್ಪಳಿಸಿದೆಂ ಪಿಡಿದೀ ಸಿಲೆಯಲ್ಲಿ ಮತ್ತಮಾ ।
ಟಂದರನುಗ್ರದೈತ್ಯರನಳುರ್ಕೆಯಿನಿಕ್ಕಿದೆನಿಲ್ಲಿ ಮುನ್ನಮೆಂ
ದಂದು ಗುಣಾರ್ಣವಂಗೆ ಮಧು ಕೈಟಭಹಾರಿ ತೊೞಲ್ದು ತೋಱಿದಂ ॥೬೮

ವ॥ ಅಂತಾ ವನಾಂತರಾಳಮಂ ತೊೞಲ್ದು ತೋಱುತ್ತಿರ್ಪನ್ನೆಗಮನೂನದಾನಿಯ ದಾನದುದ್ದಾನಿಯ ದಾನಮನಾನಲಾನಲ್ಲದೆ ಪೆಱರ್ ನೆಱೆಯರೆಂಬಂತೆ ತೊಟ್ಟನೆ ಕಟ್ಟಿದಿರೊಳ್-

ಕಂ॥ ಉರಿವುರಿಯನೆ ತಲೆನವಿರನು
ಕರಿಸಿರೆ ಸಂತಪ್ತ ಕನಕವರ್ಣಮುಮುರಿಯೊಂ ।
ದುರುಳಿವೊಲಿರೆ ಜಠರಾನಳ
ನುರಿವಿನಮಂತೊರ್ವನುರಿಯ ಬಣ್ಣದ ಪಾರ್ವಂ ॥ ೬೯

ವ॥ ಅಂತು ಪರ್ಪನಂ ಕಂಡು ಸಾಮಂತಚೂಡಾಮಣಿ ತನ್ನೊಳಿಂತೆಂದು ಬಗೆದಂ-

ಸುಗಂಧದ್ರವ್ಯಗಳನ್ನೂ ರಾಣಿಯರಿಗೂ ರಾಜಕುಮಾರರಿಗೂ ಕೊಟ್ಟು ತಾವಿಬ್ಬರೂ ವಸ್ತ್ರಗಳನ್ನು ತೊಟ್ಟು ವಾಸನಾದ್ರವ್ಯವನ್ನು ಲೇಪಿಸಿಕೊಂಡು ಸಂಪೂರ್ಣವಾಗಿ ಅಲಂಕಾರ ಮಾಡಿಕೊಂಡರು. ಆಹಾರಗಳನ್ನು ಭುಂಜಿಸಿ ಕೈಗಂಧವನ್ನೂ ಲೇಪಿಸಿ ತಾಂಬೂಲ ಸ್ವೀಕರಿಸಿದ ಮೇಲೆ ಕೃಷ್ಣನು ಅರ್ಜುನನ ಕಯ್ಯನ್ನು ಹಿಡಿದುಕೊಂಡು ತನ್ನ ಬಾಲಕ್ರೀಡೆಯ ಸಾಹಸಗಳನ್ನು ತೋರಲೆಂದು ಹೊರಟನು. ೬೮. ಪ್ರಸಿದ್ಧರಾದ ಖರಧೇನು ಕುಂಭರೆಂಬ ರಾಕ್ಷಸರನ್ನು ಇಲ್ಲಿ ಒತ್ತಿ ಕೋಪದಿಂದ ಕೊಂದೆನು. ಯಮುನಾನದಿಯಲ್ಲಿದ್ದ ಕಾಳಿಂಗನೆಂಬ ಹಾವನ್ನು ಹಿಡಿದು ಈ ಕಲ್ಲಿನ ಮೇಲೆ ಅಪ್ಪಳಿಸಿದೆನು. ಮತ್ತು ಹಿಂದಿನ ಕಾಲದಲ್ಲಿ ಮೇಲೆಬಿದ್ದ ಭಯಂಕರರಾದ ರಾಕ್ಷಸರನ್ನು ಪರಾಕ್ರಮದಿಂದ ಇಲ್ಲಿ ಇಕ್ಕಿದೆನು ಎಂದು ಆ ದಿನ ಗುಣಾರ್ಣವನಾದ ಅರ್ಜುನನಿಗೆ, ಮಧುಕೈಟಭರಿಗೆ ಶತ್ರುವಾದ ಕೃಷ್ಣನು ಸುತ್ತಾಡಿ ತೋರಿಸಿದನು. ವ॥ ಹಾಗೆ ವನದ ಒಳಭಾಗವನ್ನು ತೊಳಲಿ ತೋರುತ್ತಿರುವಷ್ಟರಲ್ಲಿ ಕುಂದಿಲ್ಲದೆ ದಾನಮಾಡುವವನ ದಾನವನ್ನು ಸ್ವೀಕರಿಸಿದುದಕ್ಕೆ ನಾನಲ್ಲದೆ ಬೇರೆಯವರು ಸಮರ್ಥರಾಗಲಾರರು ಎನ್ನುವ ಹಾಗೆ ಕಟ್ಟಿದಿರಿನಲ್ಲಿ - ೬೯. ಉರಿಯುತ್ತಿರುವ ಜ್ವಾಲೆಯನ್ನೇ ತಲೆಯ ಕೂದಲು ಅನುಕರಿಸುತ್ತಿರಲು ಅವನ ಪುಟವಿಟ್ಟ ಚಿನ್ನದ ಹೊಂಬಣ್ಣವು ಬೆಂಕಿಯ ಒಂದು ಉಂಡೆಯಂತಿರಲು ಜಠರಾಗ್ನಿಯ ಉರಿಯಿಂದ ಕೂಡಿ (ಹಸಿವಿನಿಂದ ಕೂಡಿದ) ಬೆಂಕಿಯ ಬಣ್ಣದ ಬ್ರಾಹ್ಮಣನೊಬ್ಬನು ವ॥ ಬರುತ್ತಿರುವುದನ್ನು ಕಂಡು ಸಾಮಂತಚೂಡಾಮಣಿ ತನ್ನಲ್ಲಿ ಹೀಗೆಂದು

ಕಂ॥ ತಪ ನಿಯಮ ನಿಯತನೀ ಬ
ರ್ಪ ಪಾರ್ವನೇನಟ್ಟೆ ತನಗದಂ ಬೇಡಿದೊಡಿ ।
ನ್ನಪಗತದುರಿತರ್ ಸಂಪೂ
ರ್ಣಪುಣ್ಯರಾಸಲ್ಲದಿಲ್ಲ ಪೇಟ್ ಪೞರೊಳರೇ ॥ ೭೦

ವ॥ ಎಂಬನ್ನೆಗಂ ಸಾಮಂತ ಚೂಡಾಮಣಿಯನೆಯ್ದೆವಂದು ನಾಲ್ಕುಂ ವೇದಂಗಳೊಳ್ ನಾಲ್ಕುಂ ಋಚಂಗಳಂ ಪೇೞ್ದು ಸಿತ ದೂರ್ವಾಂಕುರ ವಿಮಿಶ್ರಂಗಳಪ್ಪ ಶೇಷಾಕ್ಷತೆಗಳಂ ಕೊಟ್ಟು ಮುಂದೆ ನಿಂದನಂ ನಿಮಗೆ ಬಾೞ್ತೆಯಪ್ಪುದಂ ಬೇಡಿಕೊಳ್ಳಿಮೆನೆ-

ಚಂ॥ ಮಣಿ ಕನಕಾದಿ ವಸ್ತುಗಳನೊಂದುಮನೊಲ್ಲೆನವೇವುವಾದವಿ
ನ್ನುಣಿಸೆನಗಟ್ಟೆ ಮೆಯ್ ಪಸಿದು ಜೊಮ್ಮನೆ ಪೋದಪುದೆನ್ನ ವೇೞ್ಪುದಂ ।
ತಣಿಯುಣಲೀವೊಡೀವುದೆನೆ ಪಾರ್ಥನದೇವಿರಿದಿತ್ತೆನಾವುದು
ಣ್ಬುಣಿಸೆನೆ ಪೇೞ್ವೆನೆಂಬ ಪದದೊಳ್ ನರಕಾಂತಕನಗ್ನಿದೇವನಂ ॥ ೭೧

ವ॥ ಕಾಣಲೊಡಮಱಿದು ಶರಣಾಗತಜಳನಿಧಿಯನೆಯ್ದೆ ವಂದನೀ ಬಕವೇಷಿ ನಿನ್ನನೇನಂ ಬೇಡಿದಂ ನೀನೀತಂಗೇನನಿತ್ತೆಯೆನೆ-

ಚಂ॥ ಪಸಿದುಣವೇಡಿದಂ ಬಡವನಾನುಣಲಿತ್ತೆನದಲ್ಲದಿಲ್ಲಿ ದಲ್
ಕುಸುರಿಯ ಮಾತುಗಾಣೆನೆನೆ ಕೇಳ್ದು ಮುರಾಂತಕನೇಂ ತಗುಳ್ದೆ ಯಿ ।
ನ್ನುಸಿರದಿರೀವ ಮಾತನಿವನುಣ್ಬುದು ಖಾಂಡವಮೀತನಗ್ನಿ ಮುಂ
ಪುಸಿದಿವನಿಂತೆ ಪಾಯಿಸಿದನಿಂದ್ರನೊಳಾದಿ ನರೇಂದ್ರರೆಲ್ಲರಂ ॥ ೭೨

ಯೋಚಿಸಿದನು. ೭೦. ತಪಸ್ಸಿನ ನಿಯಮದಲ್ಲಿ ಆಸಕ್ತನಾದ, ಎದುರಿಗೆ ಬರುತ್ತಿರುವ ಈ ಬ್ರಾಹ್ಮಣನು ತನ್ನ ಇಷ್ಟಾರ್ಥವೇನೆಂಬುದನ್ನು ನನ್ನಲ್ಲಿ ತಿಳಿಸುವುದಾದರೆ ನನಗಿಂತ ಪುಣ್ಯಶಾಲಿಗಳು ಮತ್ತಾರೂ ಇಲ್ಲ. ವ॥ ಎನ್ನುವಷ್ಟರಲ್ಲಿ ಅವನು ಸಾಮಂತ ಚೂಡಾಮಣಿಯಾದ ಅರ್ಜುನನ ಸಮೀಪಕ್ಕೆ ಬಂದು ನಾಲ್ಕು ವೇದಗಳಿಂದಲೂ ನಾಲ್ಕು ಋಕ್ಕುಗಳನ್ನು ಹೇಳಿ ಬಿಳಿಯ ಗರಿಕೆಯ ಮೊಳಕೆಯಿಂದ ಕೂಡಿದ ಆಶೀರ್ವಾದರೂಪವಾದ ಶೇಷಾಕ್ಷತೆಯನ್ನು ಕೊಟ್ಟು ಮುಂದೆ ನಿಂತನು. ಅರ್ಜುನನು ನಿಮ್ಮಿಷ್ಟಾರ್ಥವೇನು ಕೇಳಿಕೊಳ್ಳಿ ಎಂದನು. ೭೧. ಮಣಿಕನಕಾದಿ ವಸ್ತುಗಳಾವುದನ್ನೂ ಅಪೇಕ್ಷಿಸುವುದಿಲ್ಲ; ಅವು ಏನು ಮಹಾದೊಡ್ಡವು; ಸಂಪೂರ್ಣವಾದ ರುಚಿಕರವಾದ ಊಟ ನನಗೆ ಈಗ ಬೇಕು, ಶರೀರವು ಹಸಿವಿನಿಂದ ಜೊಮ್ಮುಹಿಡಿದು ಹೋಗಿದೆ; ನನಗೆ ಬೇಕಾದ ತೃಪ್ತಿಕರವಾದ ಊಟವನ್ನು ಕೊಡುವುದಾದರೆ ಕೊಡಿ ಎನ್ನಲು ಪಾರ್ಥನು ಇದೇನು ದೊಡ್ಡದು, ಕೊಟ್ಟಿದ್ದೇನೆ. ಯಾವುದು ನೀವು ಊಟಮಾಡುವ ಆಹಾರ ಎಂದು ಕೇಳಿದನು. 'ಹೇಳುತ್ತೇನೆ' ಎನ್ನುವಷ್ಟರಲ್ಲಿ ನರಕಾಂತಕನಾದ ಶ್ರೀಕೃಷ್ಣನು ಅಗ್ನಿದೇವನನ್ನು ವ॥ ಕಂಡು, ತಕ್ಷಣವೇ ಗುರುತಿಸಿ ಶರಣಾಗತ ಸಮುದ್ರನಾದ ಅರ್ಜುನನ ಸಮೀಪಕ್ಕೆ ಬಂದು 'ಈ ಬಕವೇಷಿಯು ನಿನ್ನನ್ನು ಏನು ಬೇಡಿದನು, ನೀನು ಇವನಿಗೆ ಏನನ್ನು ಕೊಡುತ್ತೇನೆಂದೆ' ಎಂದು ಕೇಳಿದನು. ೭೨. 'ಬಡವನು ಹಸಿದು ಊಟವನ್ನು ಬೇಡಿದನು; ನಾನು ಕೊಡುತ್ತೇನೆಂದೆ, ಅದಲ್ಲದೆ ಇನ್ನು ಮತ್ತಾವ

ವ॥ ಈತನಜಮುಖವ್ಯಾಘ್ರಂ ಶ್ವೇತ ಕೃಷ್ಣಕಾರಕನೀತನ ಮಾತು ಮಾತಲ್ಲವೆಂದೊಡಾ ಮಾತು ತನ್ನಂ ಮೂದಲಿಸಿದಂತಾಗೆ ವಿದ್ವಿಷ್ಟವಿದ್ರಾವಣನಿಂತೆಂದಂ-

ಚಂ॥ ಎರೆದನ ಪೆಂಪುವೇೞ್ದೊಡನಲಂ ಪೊಣರ್ವಾತನ ಪೆಂಪುವೇೞ್ದೊಡಾ
ಸುರಪತಿ ಕೊಟ್ಟ ತಾಣದೆಡೆವೇೞ್ದೊಡಮಾ ಯಮುನಾನದೀ ತಟಾಂ ।
ತರಮೊಸೆದಿತ್ತನಾನೆರೆಯೆ ಕೇಳ್ದನಿಳಾಧರನೀನದರ್ಕೆ ಮಾ
ತೆರಡಣಮಾಡಲಾಗದಿರು ಸೈಪಿನೊಳಲ್ಲದೆ ಕೂಡಿ ಬರ್ಕುಮೇ ॥ ೭೩

ಮ॥ ದನುಜಾರೀ ದಿವಿಜೇಂದ್ರ ಶಾಶ್ವತಗುಣಾ ನಿನ್ನಳ್ಕದೇಂ ಬೇಡಿದಾ
ನನಲಂ ತೀರ್ಥ ಸಮೀಪಮಂಬುನಿವಹ ವ್ಯಾಲೋಳ ಕಾಳಿಂದಿಯಾ ।
ವನಮುಂ ಕೇಳ್ದುವು ಭೂತಮಯ್ದುಮಱಿಗುಂ ಕೊಟ್ಟರ್ದುದಾದಂತಱಿಂ
ದೆನಗಿಂ ಮಾಣ್ಬುದು ಸೂೞ್ ಖಾಂಡವಮನಾಂ ತಳ್ವಿಲ್ಲದಿಂದೂಡುವೆಂ ॥೭೪

ಉ॥ ಒತ್ತಿ ತಱುಂಬಿ ನಿಂದ ರಿಪು ಭೂಜ ಸಮಾಜದ ಬೇರ್ಗಳಂ ನಭ
ಕ್ಕೆತ್ತದೆ ಬಂದು ತನ್ನ ಮಱೆವೊಕ್ಕೊಡೆ ಕಾಯದೆ ಚಾಗದೊಳ್ಪಿನ ।
ಚೊತ್ತದೆ ಮಾಣ್ಬ ಬಾೞ್ವ ಪುೞುವಾನಸನೆಂಬನಜಾಂಡಮೆಂಬುದೊಂ
ದತ್ತಿಯ ಪೆಣ್ಣೊಳಿರ್ಪ ಪುೞುವಲ್ಲದೆ ಮಾನಸನೇ ಮುರಾಂತಕಾ ॥ ೭೫

ಚಮತ್ಕಾರದ ಮಾತನ್ನೂ ಕಾಣೆ ಎಂದನು. ಕೃಷ್ಣನು "ನೀನು ಏನುಮಾಡಿದೆ? ಇನ್ನು ಮೇಲೆ ಕೊಡುವ ಮಾತನ್ನೇ ಆಡಬೇಡ. ಇವನು ಊಟಮಾಡುವುದು ಖಾಂಡವವನವನ್ನು, ಈತನು ಅಗ್ನಿದೇವ; ಹಿಂದೆ ಇವನು ಹೀಗೆಯೇ ಸುಳ್ಳು ಹೇಳಿ ಆದಿಕಾಲದ ರಾಜರನ್ನೆಲ್ಲ ದೇವೇಂದ್ರನಲ್ಲಿ ಹೋರಾಡುವಂತೆ ಮಾಡಿದನು. ವ॥ ಈತನು ಹೋತನ ಮುಖದ ಹುಲಿ (ಕಪಟಿ). ಬಿಳಿಯದನ್ನು ಕರಿಯದನ್ನಾಗಿ ಮಾಡುವವನು (ಮೋಸಗಾರ) ಈತನ ಮಾತು ಮಾತಲ್ಲ" ಎಂದನು. ಆ ಮಾತು ತನ್ನನ್ನು ಮೂದಲಿಸಿದ ಹಾಗಾಗಲು ವಿದ್ವಿಷ್ಟವಿದ್ರಾವಣನಾದ ಅರ್ಜುನನು ಹೀಗೆಂದನು. ೭೩. ಬೇಡಿದವನ ಹಿರಿಮೆಯನ್ನು ಹೇಳುವುದಾದರೆ ಅಗ್ನಿದೇವ, ಯುದ್ಧಮಾಡುವವನ ಹಿರಿಮೆಯನ್ನು ಹೇಳುವುದಾದರೆ ಸಾಕ್ಷಾತ್ ದೇವೇಂದ್ರ, ಕೊಟ್ಟ ಸ್ಥಳವನ್ನು ಹೇಳುವುದಾದರೆ ಪವಿತ್ರವಾದ ಯಮುನಾನದೀದಡಪ್ರದೇಶ; ಪ್ರೀತಿಯಿಂದ ಕೊಟ್ಟವನು ನಾನು; ಪ್ರಾರ್ಥನೆಯನ್ನು ಕೇಳುವಾಗ ಸಾಕ್ಷಿಯಾಗಿದ್ದವನು ಭೂಧರನಾದ ನೀನು; ಅದಕ್ಕೆ ಸ್ವಲ್ಪವೂ ಎರಡುಮಾತನಾಡಕೂಡದು; ಇಂತಹ ಸಂದರ್ಭವು ಅದೃಷ್ಟದಿಂದಲ್ಲದೆ ಕೂಡಿಬರುತ್ತದೆಯೇ? ೭೪. ರಾಕ್ಷಸವೈರಿಯಾದ ಶ್ರೀಕೃಷ್ಣನೇ, ದೇವೇಂದ್ರನಂತೆ ಶಾಶ್ವತವಾದ ಗುಣಗಳುಳ್ಳವನೇ, ನಿನ್ನ ಹೆದರಿಕೆಯೇನು? ಬೇಡಿದವನು ಅಗ್ನಿ, ಪುಣ್ಯತೀರ್ಥಕ್ಕೆ ಸಮೀಪದಲ್ಲಿ, ಜಲರಾಶಿಯಿಂದ ಸಂಚರಿಸುತ್ತಿರುವ ಯಮುನಾನದಿಯ ಸಮೀಪವಿರುವ ಈ ಕಾಡುಗಳೂ ನಾನಾಡಿದ ಮಾತುಗಳನ್ನು ಕೇಳಿವೆ. ನಾನು ಮಾತುಕೊಟ್ಟಿರುವುದನ್ನು ಪಂಚಭೂತಗಳೂ ತಿಳಿದಿವೆ. ಆದುದರಿಂದ ಅದನ್ನು ತಪ್ಪುವುದು ನನಗೆ ಕ್ರಮವೇ? ಖಾಂಡವವನವನ್ನು ನಾನು ತಡೆಯಿಲ್ಲದೆ ಉಣಿಸುತ್ತೇನೆ. ೭೫. ಮೇಲೆಬಿದ್ದು ಅಡ್ಡಗಟ್ಟಿ ನಿಂತ ಶತ್ರುಗಳೆಂಬ ಮರಗಳ ಸಮೂಹದ

ವ|| ಎಂದು ಮಱುಮಾತಿಂಗೆಡೆಯಿಲ್ಲದಂತಿರೆ ನುಡಿದ ಪಡೆಮೆಚ್ಚೆ ಗಂಡನ ಗಂಡವಾತುಮಂ ನನ್ನಿವಾತುಮಮಂ ಮುರಾಂತಕಂ ಮೆಚ್ಚಿ-

ಮ|| ಸಮಕಟ್ಟಂಗೊರೆಗಾರುಮಿಲ್ಲರಿಗ ಕೇಳ್ ನಿನ್ನೊಳ್ ಸಮಂ ಧಾತ್ರಿಯೊಳ್
ಹಿಮಕೃದ್ಭೂಧರದಂತೆ ನಿನ್ನ ಗುಣಸಂದೋಹಂಗಳಂ ಕಾಣಲ ।
ಕ್ಕುಮೆ ಮತ್ತೊರ್ವನೊಳಾಗದೆಂತೆನೆ ಸಮಸ್ತೋರ್ವೀಧರಾಶೇಷ ಶೇ
ಷ ಮಹಾ ನಾಗ ಫಣಾಮಣಿ ದ್ಯುತಿಯನೇಂ ಖದ್ಯೋತದೊಳ್ ಕಾಣ್ಬರೇ ||೭೬

ಚಂ|| ಮುನಿಯಿಸಿದಂ ಕರಂ ರಿಡಿಯನಪ್ಪುದು ಬೇಳ್ಪನ ಬೇಳ್ಪ ವಸ್ತು ಕಾಂ
ಚನಗಿರಿಯಿಂದಮುಗ್ಗಳಮೆನಿಪ್ಪುದದಾದೊಡಮೇನೊ ಜೀವಮು ।
ಳ್ಳಿನಮಿಜೆದರ್ಥಮುಳ್ಳಿನೆಗಮಿತ್ತು ನೆಗಳ್ತೆಯನಾಂಪುದೆಂಬ ಪೆಂ
ಪಿನ ಸಮಕಟ್ಟು ಕಣ್ಗೆ ದೊರೆಯಾರರಿಕೇಸರಿ ನಿನ್ನವೋಲ್ ಪೆಱಂ || ೭೭

ವ|| ಎಂದು ತನಗೆ ಕೊಟ್ಟ ಕೋಡಿಂಗೊಡಂಬಟ್ಟ ದಿತಿಜಕುಲದಾವಾನಲನುಮನರಾತಿ ಕಾಲಾನಲನುಮನನಲನಿಷ್ಟಾರ್ಥಸಿದ್ಧಿಯಕ್ಕುಮೆಂದು ಪರಸಿ ಮನಃಪವನವೇಗದಿಂ ಪಾಲ್ಗಡಲ ನೆಯ್ದಿ ತನ್ನ ಬಯಿಸಿಟ್ಟ ದಿವ್ಯ ಸಂಭವಂಗಳಪ್ಪ ಶ್ವೇತಾಶ್ವಂಗಳೊಳ್ ಪೂಡಿದ ದಿವ್ಯ ರಥಮುಮಂ ದಧೀಚ ಗಂಡಸ್ಥಮಪ್ಪ ಗಾಂಡೀವಮೆಂಬ ಬಿಲ್ಲುಮಂ ದಿವ್ಯಶರಂಗಳೊಳ್ ತೆಕ್ಕನೆ ತೀವಿದ

ಬೇರುಗಳನ್ನು ಮೂಲೋತ್ಪಾಟನೆ ಮಾಡದೆ, ಬಂದು ತನಗೆ ಶರಣಾಗತರಾದವರನ್ನು ರಕ್ಷಿಸದೆ, ತ್ಯಾಗದ ಒಳ್ಳೆಯ ಗುಣವನ್ನು ಮುದ್ರಿಸದೆ ತಪ್ಪಿ ಬಾಳುವ ಹುಳುವಿಗೆ ಸಮಾನವಾದ ಮನುಷ್ಯನು ಬ್ರಹ್ಮಾಂಡವೆಂಬ ಅತ್ತಿಯ ಹಣ್ಣಿನಲ್ಲಿರುವ ಹುಳುವಲ್ಲದೇ ಮನುಷ್ಯನೇ ಮುರಾಂತಕಾ? ವ|| ಎಂದು ಪ್ರತ್ಯುತ್ತರ ಕೊಡುವುದಕ್ಕೆ ಅವಕಾಶವಿಲ್ಲದಂತೆ ಮಾತನಾಡಿದ ಪಡೆಮೆಚ್ಚೆಗಂಡನಾದ ಅರ್ಜುನನ ಪರಾಕ್ರಮದ ಮಾತನ್ನೂ ಸತ್ಯವಾಕ್ಯನ್ನೂ ಮುರಾಂತಕನು ಮೆಚ್ಚಿದನು. ವ|| ಎಲೈ ಅರಿಗನೇ ಕೇಳು, ಈ ಭೂಮಿಯಲ್ಲಿ ನಿನ್ನ ಹೋಲಿಕೆಗೂ ಸಮಾನತೆಗೂ ಬರುವವರು ಯಾರೂ ಇಲ್ಲ; ಹಿಮವತ್ಪರ್ವತದಂತಿರುವ ನಿನ್ನ ಗುಣರಾಶಿಯನ್ನು ಮತ್ತೊಬ್ಬನಲ್ಲಿ ಕಾಣಲಾಗುವುದಿಲ್ಲ ಸಮಸ್ತ ಭೂಮಂಡಲವನ್ನು ಧರಿಸಿರುವ ಆದಿಶೇಷನೆಂಬ ಮಹಾಸರ್ಪದ ಹೆಡೆಯಲ್ಲಿರುವ ರತ್ನಕಾಂತಿಯನ್ನು ಮಿಂಚುಹುಳುವಿನಲ್ಲಿ ಕಾಣಬಹುದೇ? ೭೭. ನಿನ್ನನ್ನು ರೇಗಿಸಿದವನು ವಿಶೇಷ ದೊಡ್ಡವನಹುದು. ಬೇಡುವವನು ಬೇಡಿದ ವಸ್ತು ಮೇರುಪರ್ವತಕ್ಕಿಂತಲೂ ಅತಿಶಯವಾದುದು. ಆದರೇನು? ಪ್ರಾಣವಿರುವವರೆಗೂ ಶೌರ್ಯಪ್ರದರ್ಶನಮಾಡಿ ಧನವಿರುವವರೆಗೂ ದಾನಮಾಡಿ ಪ್ರಸಿದ್ಧಿಯನ್ನು ಪಡೆಯಬೇಕೆಂಬ ಹಿರಿಯ ಗುರಿ ನಿನ್ನ ದೃಷ್ಟಿಗಿದೆ. ನಿನಗೆ ಸಮಾನರಾದವರು ಯಾರಿದ್ದಾರೆ? ವ|| ಎಂದು ತನಗೆ ಕೊಟ್ಟ ದಾನಕ್ಕೆ ಒಡಂಬಟ್ಟು ರಾಕ್ಷಸರ ಕುಲಕ್ಕೆ ಕಾಡುಗಿಚ್ಚಿನಂತಿರುವ ಕೃಷ್ಣನನ್ನೂ ಶತ್ರುಗಳಿಗೆ ಪ್ರಳಯಾಗ್ನಿಯಂತಿರುವ ಅರ್ಜುನನನ್ನೂ ಅಗ್ನಿಯು 'ನಿಮ್ಮ ಇಷ್ಟಾರ್ಥಸಿದ್ಧಿಯಾಗಲಿ' ಎಂದು ಹರಸಿ ಮನೋವಾಯುವೇಗದಿಂದ ಕ್ಷೀರಸಮುದ್ರವನ್ನು ಸೇರಿ ಅಲ್ಲಿ ತಾನು ಬಚ್ಚಿಟ್ಟಿದ್ದ ದೈವಾಂಶಸಂಭೂತಗಳಾದ ಬಿಳಿಯ ಕುದುರೆಗಳನ್ನು ಹೂಡಿದ ದಿವ್ಯರಥವನ್ನೂ ದಧೀಚಿಯ ಕಪೋಲಪ್ರದೇಶದಿಂದ

ತವದೊಣೆಗಳುಮಂ ತಂದೆನ್ನ ಪ್ರತಿಜ್ಞೆಯಂ ತೀರ್ಚುವೊಡಮಿಂದ್ರನಂ ಗೆಲ್ವೊಡಮಿವನಮೋಘಂ ಕೆಯ್ಕೊಳಲ್ವೇೞ್ಕುಮೆಂದೊಡತಿರಥಮಥನನಗ್ನಿದೇವಂಗೆ ಪೊಡವಟ್ಟು ಕೆಯ್ಕೊಂಡು ಬೃಹಂದಳನೆಂಬ ಸಾರಥಿವೆರಸು ರಥಮನೇಱಲೊಡಂ-

ಉ॥ ಪಾವಕನಟ್ಟೆ ಖಾಂಡವಮನುಂಡಪನರ್ಜುನನೂಡಿದಪ್ಪನೈ
ರಾವತವಾಹನಂ ನೆಱೆದು ಸಾಧನ ಸಂಯುತನಾಂಪನಲ್ಲಿ ನಾ ।
ನಾ ವಿಧ ಯುದ್ಧಮುಂಟೆನುತೆ ಶೈಬ್ಯ ಬಳಾಹಕ ಮೇಘವರ್ಣ ಸು
ಗ್ರೀವ ಹಯಂಗಳಿಂದೆಸೆವುದಂ ರಥಮಂ ಹರಿ ತಾನುಮೇಱೆದಂ ॥ ೭೮

ವ॥ ಅಂತು ದಾರುಕಂ ರಥಮಂ ಚೋದಿಸಲೊಡಂ-

ಕಂ॥ ಚೋದಿಸುವುದುಮಿರ್ವರ ರಥ
ಚೋದಕರವರೆರಡು ರಥದ ಗಾಲಿಯ ಕೋಳಿಂ ।
ದಾದ ರಜಃಪಟಲಂ ಕವಿ
ದಾದಮೆ ತೀವಿದುದು ದಿವಿಜವಧುವಿರ ಕಣ್ಗಳ್ ॥ ೭೯

ವ॥ ಅಂತೆಯ್ದಿ ಯಮುನಾನದಿಯ ತೆಂಕಣ ದೆಸೆಯೊಳ್ ನೂಱು ಯೋಜನದಗಲದೊಳ ಮನಿತೆ ನೀಳದೊಳಂ ನೆಱೆದು-

ಮ॥ ಕಕುಭಾಶೋಕ ಕದಂಬ ಲುಂಗ ಲವಲೀ ಭೂಜಾರ್ಜುನಾನೋಕಹ
ಪ್ರಕರಂ ಪುಷ್ಪಿತ ಹೇಮಪಂಕಜ ರಜಸ್ಸಂಸಕ್ತ ಭೃಂಗಾಂಗನಾ ।
ನಿಕರಂ ಸಾರಸ ಹಂಸ ಕೋಕಿಳ ಕುಳಧ್ವಾನೋತ್ಕರಂ ಚೆಲ್ವನಾ
ಯ್ತು ಕರಂ ಸಕ್ತನಿಳಿಂಪ ದಂಪತಿಗಳಿಂದಾ ನಂದನಂ ನಂದನಂ ॥ ೮೦

ರಚಿತವಾದ ಗಾಂಡೀವವೆಂಬ ಬಿಲ್ಲನ್ನೂ ದಿವ್ಯವಾದ ಬಾಣಗಳಿಂದ ಪೂರ್ಣವಾಗ
ತುಂಬಿದ ಅಕ್ಷಯತೂಣೀರಗಳನ್ನೂ (ಬತ್ತಳಿಕೆಗಳನ್ನೂ) ತಂದು ತನ್ನ ಪ್ರತಿಜ್ಞೆಯನ್
ತೀರಿಸುವುದಕ್ಕೂ ಇಂದ್ರನನ್ನು ಗೆಲ್ಲುವುದಕ್ಕೂ ಅಮೋಘವಾದ ಇವುಗಳನ್
ಸ್ವೀಕರಿಸಬೇಕು ಎಂದು ಹೇಳಲು ಅತಿರಥಮಥನನಾದ ಅರ್ಜುನನು ಅಗ್ನಿದೇವನಿ
ನಮಸ್ಕಾರಮಾಡಿ ಅವನ್ನು ಸ್ವೀಕರಿಸಿ ಬೃಹಂದಳನೆಂಬ ಸಾರಥಿಯೊಡನೆ ರಥವನ
ಹತ್ತಿದನು. ೭೮. ಅಗ್ನಿಯು ಖಾಂಡವವನ್ನು ಸುಟ್ಟು ಉಣ್ಣುತ್ತಾನೆ, ಅರ್ಜುನನ
ಉಣಿಸುತ್ತಾನೆ. ಐರಾವತವಾಹನನಾದ ಇಂದ್ರನು ಸೈನ್ಯಸಮೇತನಾಗಿ ಪ್ರತಿಭಟಿಸುತ್ತಾ
ಇಲ್ಲಿ ನಾನಾವಿಧವಾದ ಯುದ್ಧವುಂಟು ಎನ್ನುತ್ತ ಶೈಬ್ಯ, ಬಳಾಹಕ, ಮೇಘವಣ
ಸುಗ್ರೀವವೆಂಬ ಕುದುರೆಗಳಿಂದ ಪ್ರಕಾಶಮಾನವಾದ ರಥವನ್ನು ಕೃಷ್ಣನು ತಾನ
ಹತ್ತಿದನು. ವ॥ ದಾರುಕನು ರಥವನ್ನು ನಡೆಸಿದನು. ೭೯. ಸಾರಥಿಗಳು ಚೋದಿಸ
ಎರಡು ರಥದ ಗಾಲಿಗಳ ಆಕ್ರಮಣದಿಂದಾದ ಧೂಳಿನ ಸಮೂಹವು ಮುತ್ತಿ ಮುಸ
ದೇವಸ್ತ್ರೀಯರ ಕಣ್ಣಲ್ಲಿ ವಿಶೇಷವಾಗಿ ತುಂಬಿತು. ವ॥ ಯಮುನಾನದಿಯ ದಕ್ಷಿಣದಿಕ್ಕಿ
ನೂರು ಯೋಜನದಗಲವೂ ಅಷ್ಟೆ ಉದ್ದವೂ ಆಗಿತ್ತು ಆ ಖಾಂಡವವ
೮೦. ಕೆಂಪುಮತ್ತಿ, ಅಶೋಕ, ಕದಂಬ, ಮಾತುಲುಂಗ, ಅರನೆಲ್ಲಿ, ಬಿಳಿಯ
ಮೊದಲಾದ ಮರಗಳ ಸಮೂಹಗಳಿಂದಲೂ ಪುಷ್ಪಭರಿತವಾದ ಹೊಂದಾವ

ವ॥ ಎನೆ ಸೊಗಯಿಸುವ ಖಾಂಡವವನಮಂ ವನರುಹನಾಭಂ ವಿಕ್ರಮಾರ್ಜುನಂಗೆ ತೊೞಲ್ದು ತೋಱೆ -

ಮ॥ ಅಲರಂ ನೋಯಿಸದೊಯ್ಯನೊಯ್ಯನಳಿಗಳ್ ಬಂದುಣ್ಬುವಾಟಂದು ಬಂ
ದಲೆಯಲ್ಕಣ್ಮದು ಗಾಳಿ ಸೂರ್ಯಕಿರಣಾನೀಕಕ್ಕಮೆಂದಪ್ಪೊಡಂ ।
ಸಲವಿಲ್ಲುದ್ಧತ ಸಿದ್ಧ ಖೇಚರರೆ ತಾಮಾಳ್ವೇರಿಯಾಗಿಂತು ನಿ
ಚ್ಚಲುಮೋರಂತಿರೆ ಕಾವರೀ ದೊರೆತು ಕಾಪೀ ನಂದನಕ್ಕಿಂದ್ರನಾ ॥ ೮೧

ಉ॥ ಒಮ್ಮೆ ತೊೞಲ್ದು ನೋಡಿ ಬನಮಂ ಮಘವಂ ಶಚಿ ಪೂತ ಚೂತಮಂ
ನೆರ್ಮಿದಶೋಕವಲ್ಲರಿಯ ಪಲ್ಲವಮೊಂದನೆ ಕೊಯ್ದು ರಾಗದಿಂ ।
ಸೋರ್ಮುಡಿಯೊಳ್ ತಗುಳ್ಚಿದೊಡೆ ಸೂೞನೆ ಬಾರಿಸಿದಂ ದಲೆಂದೊಡಿಂ
ಕೂರ್ಮೆಯ ಮಾತು ಮೆಚ್ಚುವನಿತರ್ಕೆ ಬಳಾರಿ ಮುರಾಸುರಾರಿಯೇಂ ॥ ೮೨

ಕಂ॥ ಇಂತಪ್ಪ ಬನಮನಿದನಿ
ನ್ನೆಂತನಲನನೂಡಲೆಂದು ಪೂಣ್ದಯ್ ಮುಂ ಪೂ ।
ಣ್ದಂತೂಡು ಪೂಡು ಶಿತಶರ
ಸಂತತಿಯಂ ಬಿಲ್ಲೊಳೇಕೆ ನೀಂ ತಡೆದಿರ್ಪಯ್ ॥ ೮೩

ಧೂಳಿನಲ್ಲಿ ಹೊರಳಾಡಿರುವ ಹೆಣ್ಣುದುಂಬಿಗಳ ಗುಂಪುಗಳಿಂದಲೂ ಬಕ, ಹಂಸ, ಕೋಗಿಲೆ ಮೊದಲಾದ ಪಕ್ಷಿಸಮೂಹದ ಶಬ್ದರಾಶಿಯಿಂದಲೂ ಆನಂದ ವನ್ನುಂಟುಮಾಡುವ ಆ ಖಾಂಡವವನವು ಪರಸ್ಪರ ಆಸಕ್ತರಾದ ದೇವದಂಪತಿ ಗಳಿಂದಲೂ ಸುಂದರವಾಗಿ ಕಂಡಿತು. ವ॥ ಖಾಂಡವವನವನ್ನು ಶ್ರೀಕೃಷ್ಣನು ವಿಕ್ರಮಾರ್ಜುನನಿಗೆ ಸುತ್ತಾಡಿ ತೋರಿಸಿದನು. ೮೧. ಇಲ್ಲಿ ದುಂಬಿಗಳು ಹೂವನ್ನು ನೋಯಿಸದೆ ಮಕರಂದಪಾನಮಾಡುತ್ತವೆ. ಗಾಳಿಯು ನುಗ್ಗಿ ವೇಗವಾಗಿ ಬೀಸುವುದಿಲ್ಲ, ಸೂರ್ಯನ ಕಿರಣಸಮೂಹಗಳೂ ಎಂದೂ ಇಲ್ಲಿಗೆ ಪ್ರವೇಶಿಸುವುದಿಲ್ಲ. ಗರ್ವಿಷ್ಠರಾದ ಸಿದ್ಧಖೇಚರರೇ ರಕ್ಷಕರಾಗಿ ಇದನ್ನು ನಿತ್ಯವೂ ಒಂದೇ ಕ್ರಮದಿಂದ ಕಾಯುತ್ತಿದ್ದಾರೆ. ಇಂದ್ರನ ಖಾಂಡವವನಕ್ಕೆ ರಕ್ಷಣೆ ಈ ರೀತಿಯಾಗಿ ಬಲಿಷ್ಠವಾಗಿದೆ. ೮೨. ಒಂದು ಸಲ ಇಂದ್ರನು ಶಚೀದೇವಿಯೊಡಗೂಡಿ ವನವನ್ನು ಸುತ್ತಾಡಿ ಬರುತ್ತಿದ್ದಾಗ ಹೂವಿನಿಂದ ಕೂಡಿದ ಮಾವಿನ ಮರವನ್ನು ಆಶ್ರಯಿಸಿದ್ದ ಅಶೋಕ ಬಳ್ಳಿಯನ್ನು ನೋಡಿ ಅದರ ಚಿಗುರನ್ನು ಶಚಿಯು ಕೊಯ್ದು ಪ್ರೀತಿಯಿಂದ ತನ್ನ ದೀರ್ಘವಾದ ತುರುಬಿನಲ್ಲಿ ಮುಡಿದುಕೊಳ್ಳಲು ಇಂದ್ರನು ಸೂಳ್ ಎಂದು ಶಬ್ದಮಾಡಿ ತಡೆದನು ಎಂಬುದು ನಿಜ ಎಂದು ಹೇಳುವಾಗ ಆ ವನದ ವಿಷಯದಲ್ಲಿ ಅವನ ಅಭಿಮಾನ ಎಷ್ಟಿರಬೇಕು? ಪ್ರೀತಿಯ ಮಾತನ್ನು ಕೇಳಿ ಮೆಚ್ಚುವುದಕ್ಕೆ ಇಂದ್ರನು ಕೃಷ್ಣನೆಂದು ತಿಳಿದೆಯಾ? ೮೩. ಹೀಗಿರುವ ಈ ವನವನ್ನು ಅಗ್ನಿ ಉಣಲೆಂದು ಹೇಗೆ ಪ್ರತಿಜ್ಞೆಮಾಡಿದೆ? ಮೊದಲು ಪ್ರತಿಜ್ಞೆಮಾಡಿದ ಹಾಗೆ ಉಣಿಸು, ಏಕೆ ತಡಮಾಡುತ್ತೀಯೆ? ಬಿಲ್ಲಿನಲ್ಲಿ ಹರಿತವಾದ

ಪರಮಾಣುವನಿತು ಬಸದೊಳ್
ಚರಾಚರಂ ಪೋಗೆ ತಣಿಯನನಲನದರ್ಕಾಂ ।
ನೆರಮಪ್ಪೆನುಗ್ರ ಕಿನ್ನರ
ಸುರ ದನುಜೋರಗರ ಕದನಮೇಂ ನಿನಗರಿದೇ ॥ ೮೪

ವ॥ ಎಂಬುದುಮಂತೆ ಗೆಯ್ವೆನೆನ್ನ ಸಾಹಸಮಂ ನೋಡಿಮೆಂದು ವಿಕ್ರಾಂತ ತುಂಗನುತ್ತುಂಗ ಭುಜಪರಿಘದೆರಡು ದೆಸೆಯೊಳಂ ತವದೊಣೆಗಳಂ ಬಿಗಿದು ಗಾಂಡೀವಮನೇಱಿಸಿ ನೀವಿ ಜೇವೊಡೆದು ದಿವ್ಯಾಸ್ತ್ರಂಗಳಂ ಪಿಡಿದು ಕೆಯ್ಯೆಕೊಂಡಗ್ನಿದೇವನಂ ನೋಡಿ-

ಉ॥ ಓಡುಗೆ ನಿಮ್ಮ ಮೆಯ್ಯ ಪಸಿವಾಂತ ವಿರೋಧಿಗಳೆನ್ನ ಕೆಯ್ಯೊಳ
ಟ್ಟಾಡುಗೆ ಕೊಳ್ಳಿಮುಣ್ಣಿಮೆನೆ ಕೇಳ್ದನಲಂ ಪರಸುತ್ತಮಾ ಲಯ ।
ಕ್ರೀಡೆಯೊಳೀ ಚರಾಚರಮುಮಂ ಸುಡುವಂದಿನ ಮೆಯ್ಯುಮಗ್ಗಳಂ
ಮಾಡಿ ತಗುಳ್ದು ನೀಳ್ದು ಬಳೆದರ್ವಿಸೆ ಪರ್ವಿದನಾ ವನಾಂತಮಂ ॥ ೮೫

ಮ॥ ಫಳ ಕರ್ಪೂರ ಲವಂಗ ಲುಂಗ ಲವಳೀ ಹಿಂತಾಳ ತಾಳೀ ತಮಾ
ಳ ಲತಾ ಸುಂದರ ನಂದನಕ್ಕುಱೆ ಮುಂ ತನ್ನರ್ಚಿಗಳ್ ಬಂದು ಮೊ ।
ಕ್ಕಳಮೆತ್ತಂ ಸುರಿಯುತ್ತುಮಿರ್ಪ ರಸಮಂ ಮುಂ ಪೀರ್ದುಕೊಂಡಂ ಮನಂ
ಗೊಳೆ ಸಪ್ತಾರ್ಚಿ ಪೊದಳ್ದು ನೀಳ್ದೊಸಗೆಯಿಂದಾಪೋಶನಂಗೊಳ್ವವೋಲ್ ॥ ೮೬

ಬಾಣಸಮೂಹವನ್ನು ಸಂಧಾನಮಾಡು. ೮೪. ಈ ವನದಲ್ಲಿ ಪರಮಾಣುವಷ್ಟು ಚರಾಚರ ಪ್ರಾಣಿಗಳು ಹೊರಗೆ ಹೋದರೂ ಅಗ್ನಿಯು ತೃಪ್ತಿಪಡಲಾರ. ಅದಕ್ಕೆ ನಾನು ಸಹಾಯಕನಾಗಿದ್ದೇನೆ. ಭಯಂಕರರಾದ ಕಿನ್ನರರು, ದೇವತಗಳು, ರಾಕ್ಷಸರು, ನಾಗರು ಇವರೊಡನೆ ಯುದ್ಧಮಾಡುವುದು ನಿನಗೆ ಅಸಾಧ್ಯವೇ? ವ॥ ಅರ್ಜುನನು ಹಾಗೆಯೇ ಮಾಡುತ್ತೇನೆಂದನು. ನನ್ನ ಪರಾಕ್ರಮವನ್ನು ನೋಡಿ ಎಂದು ಉತ್ತಮಪರಾಕ್ರಮಿಯಾದ ಅರ್ಜುನನು ತನ್ನ ಎತ್ತರವಾದ ಗದೆಯಂತಿರುವ ಎರಡು ಭುಜಗಳಲ್ಲಿಯೂ ಅಕ್ಷಯತೂಣೀರಗಳನ್ನು ಬಿಗಿದುಕೊಂಡು ಗಾಂಡೀವವೆಂಬ ಬಿಲ್ಲಿಗೆ ಹೆದೆಯೇರಿಸಿ ನೀವಿ ಜಡ್ಡಿದು ಶಬ್ದಮಾಡಿನೋಡಿ ದಿವ್ಯಾಸ್ತ್ರಗಳನ್ನು ಕಯ್ಯಲ್ಲಿ ಹಿಡಿದು ಅಗ್ನಿದೇವನನ್ನು ನೋಡಿ -೮೫. ನಿಮ್ಮ ಶರೀರದ ಹಸಿವು ಓಡಲಿ; ಪ್ರತಿಭಟಿಸಿರ ನಿಮ್ಮ ಶತ್ರುಗಳು ನಮ್ಮ ಕಯ್ಯಲ್ಲಿ ನಾಶವಾಗಲಿ; ತೆಗೆದುಕೊಳ್ಳಿ, ಉಣ್ಣಿ ಎನ್ನಲ ಅವರನ್ನು ಹರಸುತ್ತ ಪ್ರಳಯಕಾಲದಲ್ಲಿ ಈ ಚರಾಚರವನ್ನೆಲ್ಲ ಸುಡುವ ಅಂದಿ ಶರೀರವನ್ನೂ ಮೀರಿದ ಆಕಾರವನ್ನು ಧರಿಸಿ ನೀಳವಾಗಿ ಬೆಳೆದು ಸುಡುವುದಕ್ಕಾ ಆ ವನದ ಒಳಭಾಗವನ್ನೆಲ್ಲ ಆಕ್ರಮಿಸಿದನು. ೮೬. ಫಲಿಸಿರುವ ಕರ್ಪೂರ, ಲವಂ ಮಾದಲ, ಅರನೆಲ್ಲಿ, ಹಿಂತಾಳ, ತಾಳೆ, ಹೊಂಗೆಯಬಳ್ಳಿ ಇವುಗಳಿಂದ ಸುಂದರವಾಗಿ ವನವನ್ನು ಮೊದಲೇ ತನ್ನ ಉರಿಯ ಜ್ವಾಲೆಗಳು ಹರಡಿರಲು ಮುಂದುವರಿ ದೀರ್ಘವಾಗಿ ಬೆಳೆದು ಸಂತೋಷದಿಂದ ಆಪೋಶನವನ್ನು ತೆಗೆದುಕೊಳ್ಳುವ ಹ ವಿಶೇಷವಾಗಿ ಸುರಿಯುತ್ತಿರುವ ಮರದ ರಸವನ್ನು ಅಗ್ನಿಯು ತೃಪ್ತಿಯಾಗುವ

ಕಂ॥ ನನೆಕೊನೆಯ ತಳಿರ ಪೂವಿನ
ಬನಮನಿತುಂ ಶಿಖೆಗಳಳುರೆ ಬೆಂಕೆಯ ಪೊಯ್ದು ।
ರ್ವಿನೊಳೆ ಕೊರಗಿರ್ದ ಲತೆಗಳ
ಕೊನೆಗೊನೆಯನೆ ದಹನನಳುರ್ದು ಕೊನೆಗೊನೆಗೊಂಡಂ ॥ ೮೭

ವ॥ ಆಗಳಾ ಬನಮನಿಂದ್ರನ ಬೆಸದೊಳ್ ಕಾವ ಕಿನ್ನರ ಕಿಂಪುರುಷ ಗರುಡ ಗಂಧರ್ವ ಸಿದ್ಧ ವಿದ್ಯಾಧರ ಬಲಮನಿತುಮೊಂದಾಗಿ ವಿಕ್ರಮಾರ್ಜುನನೊಳ್ ತಾಗೆ-

ಕಂ॥ ಕೊಂಡಪುದುರಿ ಬನಮನದಂ
ಕಂಡೆಂತಿರಲಕ್ಕುಮೆಂದು ತಾಗಿದ ನೆಗಳ್ದಾ ।
ಖ್ಗಂಡರ ಗಂಡೋಡುವಿನಂ
ಕೊಂಡುವು ಗಾಂಡೀವಮುಕ್ತ ಬಾಣಗಣಂಗಳ್ ॥ ೮೮

ವ॥ ಅಂತು ಕಾದ ವಿದ್ವಿಷ್ಟವಿದ್ರಾವಣನ ಮೊನೆಯಂಬಿನಂಬೇಜೆಂಗಳ್ಕಿ ಹತವಿಹತ ಕೋಳಾಹಳರಾಗಿ ಸಿದ್ಧರಸಿದ್ಧರಾಗೆಯುಂ ಕಿನ್ನರರಿನ್ನಾರ ಮಱೆಯಂ ಪುಗುವಮೆನೆಯುಂ ಕಿಂಪುರುಷರ್ ಕಾಪುರುಷರಂತೆ ಬಾಯಂ ಬಿಡೆಯುಂ ಗಂಧರ್ವರ್ ಗರ್ವಮನುೞಿದೊಂದೊರ್ವರಂ ಮಿಗೆಯೋಡೆಯುಂ ವಿದ್ಯಾಧರರಧರರಾಗೆಯುಂ ಪನ್ನಗರ್ ಪನ್ನತಿಕೆಯಿಂ ಬಂದಾಂತೊಡೆ-

ಕಂ॥ ನಾಗರ ಖಂಡಂಗಳನಾ
ನಾಗರ ಖಂಡದೊಳೆ ತೊಡರೆ ನರನಿಸುವುದುಮಾ ।
ನಾಗರ ಖಂಡಂಗಳುಮಂ
ನಾಗರ ಖಂಡಮುಮನಳುರ್ದು ಕೊಂಡಂ ದಹನಂ ॥ ೮೯

ಹೀರಿದನು. ೮೭. ಮೊಗ್ಗಿನ, ಟಿಸಿಲಿನ, ಚಿಗುರಿನ, ಹೂವಿನ ಆ ವನವನ್ನೆಲ್ಲ ಬೆಂಕಿಯ ಜ್ವಾಲೆಗಲು ವ್ಯಾಪಿಸಲು ಬೆಂಕಿಯು ಹೊಡೆದ ರಭಸದಲ್ಲಿಯೇ ಬಾಡಿದ ಬಳ್ಳಿಗಳ ಕವಲು ಕವಲುಗಳನ್ನೇ ಅಗ್ನಿಯು ಸುಟ್ಟು ತುತ್ತತುದಿಯನ್ನೂ ಆಕ್ರಮಿಸಿದನು. ವ॥ ಆಗ ಅವನನ್ನು ಇಂದ್ರನ ಆಜ್ಞೆಯಂತೆ ರಕ್ಷಿಸುತ್ತಿದ್ದ ಕಿನ್ನರ ಕಿಂಪುರುಷ ಗರುಡ ಗಂಧರ್ವ ಸಿದ್ಧ ವಿದ್ಯಾಧರ ಸೈನ್ಯವಷ್ಟೂ ಒಂದಾಗಿ ವಿಕ್ರಮಾರ್ಜುನನನ್ನು ಬಂದು ತಾಗಿದುವು. ೮೮. ಬೆಂಕಿಯು ವನವನ್ನು ಸುಡುತ್ತಿದೆ. ಅದನ್ನು ನೋಡಿಯೂ ಹೇಗೆ ಸುಮ್ಮನಿರುವುದು ಎಂದು ಪ್ರತಿಭಟಿಸಿದ ಪ್ರಸಿದ್ಧವಾದ ಶೂರರ ಪೌರುಷವು ಪಲಾಯನಮಾಡುವ ಹಾಗೆ ಗಾಂಡೀವದಿಂದ ಬಿಡಲ್ಪಟ್ಟ ಬಾಣಸಮೂಹಗಳು ಅವರನ್ನು ಆಹುತಿಗೊಂಡವು. ವ॥ ಹಾಗೆ ಕಾದಲು ವಿದ್ರಾವಣನ ಮೊನಚಾದ ಬಾಣದ ಬಿಲ್ಲಿನ ಯುದ್ಧದ ನಾನಾ ವಿಧವಾದ ಹೊಡೆತ ಮರುಹೊಡೆತಗಳ ಕೋಲಾಹಲದಲ್ಲಿ ಸಿದ್ಧರು ಸಿದ್ಧತೆಯಿಲ್ಲದವರಾದರು, ಕಿನ್ನರರು ಇನ್ನು ಯಾರ ಮರೆಯನ್ನು ಹೋಗೋಣವೆಂದು ಯೋಚಿಸಿದರು, ಕಿಂಪುರುಷರು ಅಲ್ಪಮನುಷ್ಯರಂತೆ ಹಾಹಾಕಾರಪಟ್ಟರು. ಗಂಧರ್ವರು ತಮ್ಮ ಆತ್ಮಗರ್ವವನ್ನು ಬಿಟ್ಟು ಒಬ್ಬೊಬ್ಬರನ್ನೂ ಮೀರಿಸಿ ಓಡಿದರು. ವಿದ್ಯಾಧರರು ತಿರಸ್ಕೃತರಾದರು. ಪನ್ನಗರು ಪರಾಕ್ರಮದಿಂದ ಬಂದು ಎದುರಿಸಿದರು. ೮೯. ಅಲ್ಲಿ ಬೆಳೆದ ಹಸಿಯ ಶುಂಠಿಯ ಚೂರುಗಳೂ ಆ ಸರ್ಪಗಳ ಚೂರುಗಳಲ್ಲಿಯೇ

ವಿರಹಿಗಳ ಸುಯ್ಯ ಬೆಂಕೆಯೊ
ಳಿರದೊಣಗಿದುವಕ್ಕುಮಿಾಗಳೆನಲುರಿವುರಿಯಿಂ ।
ಕರಿಮುರಿಕನಾದುವುನ್ಮದ
ಪರಭೃತ ಷಟ್ಚರಣ ರಾಜಕೀರಕುಲಂಗಳ್ ॥ ೯೦

ಉರಿ ಕೊಳೆ ವೆಸೆಗಾಣದೆ ದೆಸೆ
ವರಿವರಿದು ಕುಜಂಗಳಂ ಪಡಲ್ವಡಿಸಿ ಭಯಂ ।
ಬೆರಸೊಳಜಿ ನೆಗೆದುದಾ ವನ
ಕರಿ ಶರಭ ಕಿಶೋರ ಕಂಠಗರ್ಜನೆ ಬನದೊಳ್ ॥ ೯೧

ಸಂಗತ ಧೂಮಾವಳಿಯನಿ
ಭಂಗಳೆ ಗೆತ್ತೊಳಜಿ ಪಾಯ್ದು ಪೊಗೆ ಪುಗೆ ಕಣ್ಣಿಂ ।
ಸಿಂಗಂಗಳಳುರೆ ಗರ್ಜಿಸಿ
ಲಂಗಿಸಿ ಪುಡಪುಡನೆ ಪುಟ್ಟೆ ಸತ್ತುವು ಪಲವುಂ ॥ ೯೨

ವ॥ ಮತ್ತಮಲ್ಲಿ ಕೆಲವು ಲತಾಗೃಹಂಗಳೊಳಂ ಧಾರಾಗೃಹಂಗಳೊಳಂ-

ಕಂ॥ ಒಡನಳುರೆ ಕಿರ್ಚು ತೋಳಂ
ಸಡಿಲಿಸದಾ ಪ್ರಾಣವಲ್ಲಭರ್ ಪ್ರಾಣಮನಂ ।
ದೊಡಗಳೆದರೋಪರೋಪರೊ
ಳೊಡಸಾಯಲ್ ಪಡೆದರಿನ್ನವುಂ ಸಯ್ಪೊಳವೇ ॥ ೯೩

ವ॥ ಅಂತು ಖಾಂಡವವನಮೆಲ್ಲಮನನಲಂ ಪ್ರಳಯಕಾಳಾನಳನಂತಳುರ್ದು ಕೊಳೆ ಬಳಸಿ ಬಂದು ಕಾವ ನಾರಾಯಣನ ಸುದರ್ಶನಮೆಂಬ ಚಕ್ರದ ಕೋಳುಮಂ ವಿಕ್ರಮಾರ್ಜುನನ

ಸಿಕ್ಕಿಕೊಳ್ಳುವಂತೆ ಅರ್ಜುನನು ಬಾಣಪ್ರಯೋಗಮಾಡಲು ಆ ಹಸಿಯ ಶುಂಠಿಯ ಚೂರುಗಳನ್ನೂ ಸರ್ಪಗಳ ಚೂರುಗಳನ್ನೂ ಅಗ್ನಿಯು ವ್ಯಾಪಿಸಿ ಸುಟ್ಟನು. ೯೦. ಮದಿಸಿದ ಕೋಗಿಲೆ ದುಂಬಿ ಮತ್ತು ಅರಗಿಳಿಗಳ ಸಮೂಹಗಳು ತಮ್ಮನ್ನು ಅಗಲಿದ ಪ್ರೇಮಿಗಳ ಬಿಸಿಯುಸಿರಿನ ಬೆಂಕಿಯಲ್ಲಿ ಒಣಗಿದುವೋ ಎನ್ನುವ ಹಾಗೆ ಉರಿಯುವ ಬೆಂಕಿಯ ಜ್ವಾಲೆಯಿಂದ ಸುಟ್ಟು ಕರಿಮುರುಕಾದುವು. ೯೧. ಬೆಂಕಿಯು ಆಕ್ರಮಿಸಲು ಏನುಮಾಡಬೇಕೆಂದು ತೋಚದೆ ದಿಕ್ಕುದಿಕ್ಕಿಗೆ ಓಡಿ ಮರಗಳನ್ನು ಕೆಳಗುರುಳಿಸಿ ಭಯದಿಂದ ಕೂಗಿಕೊಳ್ಳಲು ಕಾಡಾನೆಯ ಶರಭಗಳ ಮರಿಗಳ ಕೊರಳ ಗರ್ಜನೆ ಆ ಕಾಡಿನಲ್ಲಿ ಚಿಮ್ಮಿ ಹಾರಿದುವು. ೯೨. ಒಟ್ಟಾದ ಹೊಗೆಯ ಸಮೂಹವನ್ನು ಆನೆಯೆಂದು ಭ್ರಾಂತಿಸಿ ಸಿಂಹಗಳು ಕೂಗಿಕೊಂಡವು. ಮೇಲೆಹಾಯ್ದು ಹೊಗೆಯು ಕಣ್ಣನ್ನು ವ್ಯಾಪಿಸಲು ಗರ್ಜನೆಮಾಡಿ ನೆಗೆದು ಪುಡಪುಡನೆ ಸುಟ್ಟು ಸತ್ತುಹೋದವು. ವ॥ ಅಲ್ಲಿಯ ಕೆಲವು ಬಳ್ಳಿ ಮನೆಯಲ್ಲಿಯೂ ಧಾರಾಗೃಹಗಳಲ್ಲಿಯೂ ೯೩. ಉರಿಯು ತಮ್ಮನ್ನು ಒಟ್ಟಿಗೆ ಸುಡಲು ತಮ್ಮ ತೋಳುಗಳನ್ನು ಸಡಿಲಿಸದೆ ಆ ಪ್ರಿಯಪ್ರೇಯಸಿಯರು ಜೊತೆಯಲ್ಲಿಯೇ ಪ್ರಾಣವನ್ನು ಕಳೆದರು. ಪ್ರಿಯರು ಪ್ರಿಯರೊಡನೆ ಸಾಯುವ ಅದೃಷ್ಟವನ್ನು ಪಡೆದರು. ಇದಕ್ಕಿಂತ ಬೇರೆ ಅದೃಷ್ಟವೂ ಉಂಟೇ? ವ॥ ಹಾಗೆ ಖಾಂಡವವನವೆಲ್ಲವನ್ನೂ ಅಗ್ನಿಯು ಪ್ರಳಯಕಾಲದ ಬೆಂಕಿಯಂತೆ ಸುಟ್ಟು ತಾನು ಭುಂಜಿಸುತ್ತಿರಲು ಸುತ್ತಲೂ

ದಿವ್ಯಾಸ್ತ್ರಂಗಳ ಕೋಳುಮನಗ್ನಿದೇವನ ಶಿಖಾಕಳಾಪದ ಕೋಳುಮನೆಂತಾನುಂ ಬಂಚಿಸಿ ಬಲೆ ಪಜಿದ ಕೋಕನಂತೊರ್ವ ವನಪಾಲಕಂ ಪೋಗಿ ದೇವೇಂದ್ರನಂ ಕಂಡು-

ಮಲ್ಲಿಕಾಮಾಲೆ ॥ ದೇವ ಬಿನ್ನಪಮಿಂದು ಖಾಂಡವಮಂ ಕೃಶಾನು ತಗುಳ್ದು ನಾ
ನಾ ವಿಧಂ ಸುಡೆ ನೋಡಲಾರದೆ ತಳ್ತ ದೇವರ ಕಾಪಿನಾಳ್ ।
ದೇವ ಕಿನ್ನರ ಪನ್ನಗಾವಳಿ ಮೊಟ್ಟನಪ್ಪಿನಮಚ್ಚು ಕೊಂ
ದೇವರೆಂದಜಿದಿರ್ದನೊರ್ವನಗುರ್ವು ಪರ್ವಿರೆ ದೇವರಂ ॥ ೯೪

ಕಂ॥ ಎರಡು ರಥಮೊಳವು ನೋಟ
ಕ್ಕೆರಡಜಿೞೊಳವನೊಂದು ರಥಮೆ ತೋಟಿಗೆ ಪಲವಾ ।
ಗಿರೆ ಪರಿದು ಕಣ್ಗೊಳಿಸ್ನುಂ
ತಿರಿದಪುದುರಿದಪುದು ನಮ್ಮ ಬಸಮೆನಿತನಿತುಂ ॥ ೯೫

ವ॥ ಎಂಬುದುಂ ಪೌಳೋಮೀ ಪತಿ ತನ್ನ ದಿವ್ಯಜ್ಞಾನದೊಳ್ ನೋಡಿ ಚಕ್ರಿಯುಂ ವಿಕ್ರಮಾರ್ಜುನನುಮಪ್ಪುದನಜಿದು ಗಜಿಜೆ ಗರ್ಜಿಸಿ ಪ್ರಳಯ ಕಾಳಾಂಬುದದಂತೆ ಮೊಜಗುಮಂ ಸಿಡಿಲ ಬಳಗಮನೊಳಕೊಂಡ ದ್ರೋಣ ಮಹಾದ್ರೋಣ ಪುಷ್ಕಳಾವರ್ತ ಸುವರ್ತಕಂಗಳೆಂಬ ಮುಗಿಲ್ಗಳಂ ಬೆಸಸಿದಾಗಳವು ವಿಂಧ್ಯಾಚಳಕೂಟ ಕೋಟಿಗಳ್ ಕಿೞ್ತೆೞ್ದುಬರ್ಪಂತೆ ಬಂದು ದೆಸೆಗಳೆಲ್ಲಮಂ ಮುಸುರಿ ಕಟ್ಟಿಲಿಸಿ ಕವಿದು-

ಬಳಸಿ ಬಂದು ರಕ್ಷಣೆಮಾಡುತ್ತಿರುವ ಕೃಷ್ಣನ ಸುದರ್ಶನವೆಂಬ ಚಕ್ರದ ಆಕ್ರಮಣವನ್ನೂ ವಿಕ್ರಮಾರ್ಜುನನ ದಿವ್ಯಾಸ್ತ್ರಗಳ ಆಕ್ರಮಣವನ್ನೂ ಅಗ್ನಿದೇವನ ಜ್ವಾಲೆಗಳ ಸಮೂಹದ ಆಕ್ರಮಣವನ್ನೂ ಹೇಗೋ ವಂಚಿಸಿ ಬಲೆಯಿಂದ ತಪ್ಪಿಸಿಕೊಂಡ ಕೋಕಪಕ್ಷಿಯಂತೆ ಆ ತೋಟದ ಕಾವಲುಗಾರನೊಬ್ಬನು ಹೋಗಿ ದೇವೇಂದ್ರನನ್ನು ಕಂಡು - ೯೪. ಸ್ವಾಮಿ ವಿಜ್ಞಾಪನೆ, ಈ ದಿನ ಖಾಂಡವವನವನ್ನು ಅಗ್ನಿಯು ವ್ಯಾಪಿಸಿ ನಾನಾ ರೀತಿಯಾಗಿ ಸುಡಲು ನೋಡಲಾರದೆ ಎದುರಿಸಿದ ಸ್ವಾಮಿಯ ಕಾವಲುಗಾರರಾದ ದೇವ ಕಿನ್ನರ ಪನ್ನಗಾವಳಿಯನ್ನು ನಾಶವಾಗುವ ಹಾಗೆ ಹೊಡೆದು ಕೊಂದು ಪ್ರಭುವಾದ ನಿಮ್ಮನ್ನು 'ಏನು ಮಾಡಬಲ್ಲರವರು' ಎಂದು ಅಹಂಕಾರಮಗ್ನನಾಗಿ ನಿಂತಿದ್ದಾನೆ. ೯೫. ನೋಟಕ್ಕೆ ಎರಡು ರಥಗಳಿವೆ. ಅದರಲ್ಲಿ ಒಂದು ರಥವೇ ಯುದ್ಧದಲ್ಲಿ ಅನೇಕರಥವಾಗಿರುವಂತೆ ಹರಿದು ಇನ್ನೂ ಕಣ್ಣಿನಲ್ಲಿ ತಿರುಗುತ್ತದೆ. ನಮ್ಮ ತೋಟವೆಷ್ಟಿತ್ತೊ ಅಷ್ಟೂ ಉರಿಯುತ್ತಿದೆ. ವ॥ ಎಂದು ಹೇಳಲು ಶಚೀಪತಿಯಾದ ಇಂದ್ರನು ತನ್ನ ದಿವ್ಯಜ್ಞಾನದಿಂದ ನೋಡಿ ಅವರಿಬ್ಬರೂ ಶ್ರೀಕೃಷ್ಣಾರ್ಜುನರಾಗಿದ್ದುದನ್ನು ತಿಳಿದು ರೇಗಿ ಗರ್ಜಿಸಿ ಪ್ರಳಯಕಾಲದ ಮೋಡದಂತೆ ಗುಡುಗು ಸಿಡಿಲುಗಳ ಸಮೂಹವನ್ನೊಳಗೊಂಡ ದ್ರೋಣ, ಮಹಾದ್ರೋಣ, ಪುಷ್ಕಳಾವರ್ತ, ಸಂವರ್ತಕಗಳೆಂಬ ಮೋಡಗಳಿಗೆ ಅಗ್ನಿಯನ್ನು ನಾಶಪಡಿಸಲು ಆಜ್ಞೆಮಾಡಿದನು. ಅವು ವಿಂಧ್ಯಪರ್ವತದ ಕೋಟ್ಯಂತರ ಶಿಖರಗಳೇ ಕಿತ್ತೆದ್ದು ಬರುವ ಹಾಗೆ ಬಂದು ದಿಕ್ಕುಗಳೆಲ್ಲವನ್ನೂ ಮುಸುಕಿ

ಚಂ॥ ಕವಿದುವು ಸಪ್ತಸಾಗರ ಜಲಂಗಳೆ ಲೋಕಮನೀಗಳೆಂಬಿನಂ
ಕವಿದು ಮುಗಿಲ್ಗಳಲ್ಲಿ ಕಱೆಯುತ್ತಿರೆ ಪಾವಕನುರ್ಕುಗೆಟ್ಟದೆಂ ।
ತುವೊ ತೊದಳಾಯ್ತು ದಾನಮೆನೆ ಮಾರುತಬಾಣದೆ ಮೇಘಮಾಲಿಕಾ
ನಿವಹಮನೆಚ್ಚು ಕೂಡೆ ಶರಪಂಜರಮುಂ ಪಡೆದಂ ಗುಣಾರ್ಣವಂ ॥ ೯೬

ವ॥ ಅಂತು ಪುಂಖಾನುಪುಂಖಮಾಗೆ ಪಾಯ್ವ ಶರಸಂಧಾನದೊಳೆಡೆವಱಿಯದಂತೆರಡುಂ ಕೆಯ್ಯೊಳ್ ತೋಡುಂ ಬೀಡುಂ ಕಾಣಲಾಗದಂತಿಸೆ ತುಱುಗಿ ಕವಿವಂಬಿನ ಮೞೆಯೆ ಮೞೆಯಂ ಮಾಣಿಸೆ ದಿವ್ಯಾಸ್ತ್ರಂಗಳಿಂ ನೂಱು ಯೋಜನದಳವಿಯ ಖಾಂಡವವನಮೆಲ್ಲಮುಂ ತಟ್ಟ ಮೆಡಱೆ ಮಶಕ ಮಾತ್ರಮಪ್ಪೊಡಂ ಮಿಸುಕಲ್ ಛಿದ್ರಮಿಲ್ಲದಂತಾಗೆ ಶರಪಂಜರಮೊಳ್ ಮುಚ್ಚಿ ಮುಸುಕಿದಾಗಳಭಿನವ ಜೀಮೂತವಾಹನನ ದಿವ್ಯಾಸ್ತ್ರದ ಕೋಳ್ಗಿರಲಾಱದೆ ಜೀಮೂತಂಗಳೆಲ್ಲಂ ತೆರಳ್ದೋಡಿದೊಡಗ್ನಿದೇವನಾವಗೆಯ ಕಿರ್ಚಿನಂತೊಳಗೊಳಗಳುರ್ದು-

ಕಂ॥ ವನ ಖಗ ವನ ಮೃಗ ವನ ತರು
ವನಚರ ವನ ವನಜ ನಿವಹಮುಳ್ಳನಿತುಂ ಸೀ ।
ರನಿತುಮಣಮುೞಿದುದಿಲ್ಲೆಂ
ಬಿನಮುಂತಂ ದಹನನಳುರ್ದು ಖಾಂಡವವನಮಂ ॥ ೯೭

ವ॥ ಅಂತಾ ವನಗಹನಮೆಲ್ಲಂ ದಹನಮಯಮಾದ ಪ್ರಸ್ತಾವದೊಳ್ ವಿಸ್ಮಯಮಾಗೆ ಮಯನೆಂಬ ದಾನವವಿಶ್ವಕರ್ಮಂ ನೆಗೆದುರಿವುರಿಮಾಲೆಗಳಂ ಗದೆಯೊಳ್ ಬೀಸುತ್ತುಂ ಪೊಱಮಡೆ ಪೊಱಮಡಲೀಯದೆ-

ಕತ್ತಲಿಸಿ ಕವಿದು-೯೬. ಲೋಕವನ್ನೆಲ್ಲ ಏಳುಸಾಗರಗಳ ನೀರುಗಳೇ ಮುಚ್ಚಿಕೊಂಡವೊ ಎನ್ನುವ ಹಾಗೆ ಮೋಡಗಳು ಮಳೆಯನ್ನು ಸುರಿಸಿದುವು. ಅಗ್ನಿಯು ಶಕ್ತಿಗುಂದಿ ಹೇಗೋ ದಾನವು ಸುಳ್ಳಾಯಿತು ಎನ್ನಲು ಅರ್ಜುನನು ವಾಯವ್ಯಾಸ್ತ್ರದಿಂದ ಮೇಘಮಾಲೆಗಳ ಸಮೂಹವನ್ನು ಹೊಡೆದೋಡಿಸಿ ತಕ್ಷಣವೇ ಒಂದು ಬಾಣದ ಪಂಜರವನ್ನು ನಿರ್ಮಿಸಿದನು. ವ॥ ಪುಂಖಾನುಪುಂಖವಾಗಿ ತೋಡುಬೀಡುಗಳು ಕಾಣದಷ್ಟು ವೇಗದಿಂದ ಎರಡುಕೈಗಳಿಂದಲೂ ಏಕಪ್ರಕಾರವಾಗಿ ಪ್ರಯೋಗಮಾಡಿದ ಬಾಣಗಳಿಂದ ಮಳೆಯನ್ನು ಅರ್ಜುನನ್ನು ನಿಲ್ಲಿಸಿದನು. ದಿವ್ಯಾಸ್ತ್ರದಿಂದ ನೂರುಯೋಜನವಿಸ್ತಾರವುಳ್ಳ ಖಾಂಡವವನವೆಲ್ಲವನ್ನೂ ತಟ್ಟೆಯ ಹಾಗೆ ಹೆಣೆದು ಸೊಳ್ಳೆಯಂತಹ ಪ್ರಾಣಿಯೂ ಚಲಿಸಲು ರಂಧ್ರವಿಲ್ಲದ ಹಾಗೆ ಬಾಣದ ಪಂಜರದಲ್ಲಿ ಮುಚ್ಚಿ ಮುಸುಕಿದನು. ಅಭಿನವ ಜೀಮೂತವಾಹನನಾದ ಅರ್ಜುನನ ದಿವ್ಯಾಸ್ತ್ರದ ಆಕ್ರಮಣವನ್ನು ಸಹಿಸಲಾರದೆ ಮೋಡಗಳೆಲ್ಲವೂ ಚಲಿಸಿ ಹೋದವು. ಅಗ್ನಿದೇವನು ಕುಂಬಾರರ ಆವಿಗೆಯ ಬೆಂಕಿಯಂತೆ ಒಳಗೊಳಗೇ ವ್ಯಾಪಿಸಿ ಸುಟ್ಟನು-೯೭. ಕಾಡಿನಪಕ್ಷಿ, ಮೃಗ, ಮರ, ಪ್ರಾಣಿ, ತಾವರೆಗಳ ಸಮೂಹದಲ್ಲಿ ಒಂದು ಸಣ್ಣ ಸೀರಿನಷ್ಟೂ ಉಳಿಯಲಿಲ್ಲವೆನ್ನುವ ಹಾಗೆ ಅಗ್ನಿಯು ವ್ಯಾಪಿಸಿ ಖಾಂಡವವನವನ್ನೆಲ್ಲ ತಿಂದು ಬಿಟ್ಟನು. ವ॥ ಹಾಗೆ ಆ ವನಪ್ರದೇಶವೆಲ್ಲ ಉರಿಗೆ ಅಧೀನವಾದ ಸಂದರ್ಭದಲ್ಲಿ ಆಶ್ಚರ್ಯವಾಗುವ ಹಾಗೆ ಮಯನೆಂಬ ರಾಕ್ಷಸ ಶಿಲ್ಪಿಯು ಮೇಲೆದ್ದು ಹಾರಿ ಚಿಮ್ಮುತ್ತಿದ್ದ ಜ್ವಾಲೆಗಳ ಸಮೂಹಗಳನ್ನು ತನ್ನ ಗದೆಯಿಂದ

ಕಂ॥ ಒಂದು ದೆಸೆಯೊಳ್ ತಗುಳ್ವ ಮು
ಕುಂದನ ಕರಚಕ್ರಮೊಂದು ದೆಸೆಯೊಳ್ ನರನೆ ।
ಚ್ಚೊಂದು ಶರಮೊಂದು ದೆಸೆಯೊಳ್
ಕುಂದದೆ ದಹನಾರ್ಚಿ ಸುತ್ತಿ ಮುತ್ತುವ ಪದದೊಳ್ ॥ ೯೮

ಶರಣಕ್ಕೆನಗರಿಕೇಸರಿ
ಯೆರಡು ಪದಾಂಬುಜಮುಮಿೀಗಳೆಂಬುದುಮಾಗಳ್ ।
ಹರಿ ಚಕ್ರಂ ಕೊಳ್ಳದೆ ನರ
ಶರಮುರ್ಚದೆ ದಹನಶಿಖೆಗಳಳುರದೆ ಅವನಂ ॥ ೯೯

ವ॥ ಆಗಳ್ ಮಯಂ ವಿಸ್ಮಯಂಬಟ್ಟು ಪೊಡವಟ್ಟು ಪೋದನಾಗಳಾ ವನಾಂತರಾಳದೊಳಿರ್ಪ ತಕ್ಷಕನ ಮಗನಪ್ಪಶ್ವಸೇನನೆಂಬ ಪನ್ನಗಂ ತನ್ನ ತಾಯಂ ತನ್ನ ಬಾಲಮಂ ಕರ್ಚಲ್ವೇಟ್ಟು ದಹನಾರ್ಚಿಗಳಿಂ ಬರ್ದುಂಕಿ ನೆಗೆದು ಪಾಱುವಾಗಳದನೆರಳ್ಬಂಡಮಪ್ಪಿನಮಾಖಂಡಳ ತನಯನಿಸುವುದುಂ ತನ್ನ ಬಾಲಂಬೆರಸುರಿಯೊಳ್ ಬಿಟ್ಟು ಮಿಡುಮಿಡುಮಿಡುಕುತಿರ್ದ ಜನನಿಯಂ ಕಂಡು ಪಾವುಗಳುಳ್ಳ ಪಗೆಯಂ ಮಱೆಯವೆಂಬುದಂ ನನ್ನಿಮಾಡಿ-

ಕಂ॥ ಪಗೆ ಸಾಱುವುದುಂ ಕೊಲ್ಲೆಂ
ಪಗೆ ಸಾಱಿದ ನಿನ್ನನಾರ ಮಱೆಯಂ ಪೊಕ್ಕುಂ ।
ಪಗೆಯಂ ನೆಱಪೆನೆ ನೆಱಪುವ
ಬಗೆಯೊಳೆ ಪೊಕ್ಕಂ ಕಡಂಗಿ ಕರ್ಣನ ದೊಣೆಯಂ ॥ ೧೦೦

ಬೀಸುತ್ತ ಹೊರಗೆ ಬಂದನು. ಅದಕ್ಕೆ ಅವಕಾಶಕೊಡದೆ-೯೮. ಒಂದು ಕಡೆ ಅಟ್ಟಿಬರುವ ಕೃಷ್ಣನ ಕಯ್ಯ ಸುದರ್ಶನಚಕ್ರವೂ ಮತ್ತೊಂದು ಕಡೆ ಅರ್ಜುನನು ಹೂಡಿದ ಬಾಣವೂ ಬೇರೊಂದೆಡೆಯಲ್ಲಿ ಸ್ವಲ್ಪವೂ ಕಡಿಮೆಯಾಗದ ಉರಿಯ ಜ್ವಾಲೆಯೂ ಸುತ್ತಿ ಮುತ್ತಿದುವು. ೯೯. ತಕ್ಷಣವೇ ಮಯನು 'ಅರಿಕೇಸರಿಯ ಎರಡು ಪಾದಕಮಲಗಳೆ ನನಗೆ ಶರಣು ಎಂದನು. ಒಡನೆಯೇ ಕೃಷ್ಣನ ಸುದರ್ಶನವು ಪ್ರಯೋಗವಾಗದೆ ನಿಂತಿತು. ಅರ್ಜುನನ ಬಾಣಗಳು ಭೇದಿಸಲಿಲ್ಲ. ಅಗ್ನಿಜ್ವಾಲೆಗಳು ಸುಡಲಿಲ್ಲ. ವ॥ ಮಯನು ಆಶ್ಚರ್ಯಪಟ್ಟು ನಮಸ್ಕಾರ ಮಾಡಿ ಹೊರಟು ಹೋದನು. ಆಗ ಆ ಕಾಡಿನ ಮಧ್ಯದಲ್ಲಿದ್ದ ತಕ್ಷಕನ ಮಗನಾದ ಅಶ್ವಸೇನನೆಂಬ ಹಾವು ತನ್ನ ತಾಯಿಯನ್ನು ತನ್ನ ಬಾಲವನ್ನು ಕಚ್ಚಿಕೊಳ್ಳುವಂತೆ ಹೇಳಿ ಬೆಂಕಿಯ ಜ್ವಾಲೆಯಿಂದ ತಪ್ಪಿಸಿಕೊಂಡು ನೆಗೆದು ಹಾರುವಾಗ ಅದನ್ನು ಇಂದ್ರನಂದನನಾದ ಅರ್ಜುನನು ಎರಡುತುಂಡಾಗುವ ಹಾಗೆ ಹೊಡೆದನು. ಬಾಲದೊಡನೆ ಬೆಂಕಿಯಲ್ಲಿ ಬಿದ್ದು ಮಿಡುಮಿಡುಕುತ್ತಿದ್ದ ತನ್ನ ತಾಯಿಯನ್ನು ಕಂಡು ಕೆರಳಿತು. ಹಾವುಗಳು ತಮ್ಮಲ್ಲಿರುವ ದ್ವೇಷವನ್ನು ಮರೆಯುವುದಿಲ್ಲ ಎಂಬುದನ್ನು ಸತ್ಯವನ್ನಾಗಿ ಮಾಡುವಂತೆ ೧೦೦. ತನ್ನ ಶತ್ರುತ್ವವನ್ನು ಸಾರಿ ಹೇಳಲು ಅರ್ಜುನನು ಅದನ್ನು ಕುರಿತು 'ದ್ವೇಷವನ್ನು ಸಾರಿದ ನಿನ್ನನ್ನು ಕೊಲ್ಲುವುದಿಲ್ಲ. ಯಾರ ಆಶ್ರಯವನ್ನಾದರೂ ಪಡೆದು ದ್ವೇಷವನ್ನು ತೀರಿಸು' ಎಂದನು. ಅದನ್ನು ಪೂರೈಸುವ

ವ॥ ಅಂತಶ್ವಸೇನನರ್ಧಾವಲಿಕಮೆಂಬಮೋಘಾಸ್ತ್ರಮಾಗಿ ಕರ್ಣನ ದೊಣೆಯೊಳಿರ್ದನಿತ್ತ ಖಾಂಡವವನದೊಳಗೆ ಮಂದಪಾಲನೆಂಬ ಮುನಿಗಮೊಂದು ಲಾವಗೆಗಂ ಪುಟ್ಟಿದ ನಾಲ್ಕುಂ ಲಾವಗೆಗಳಗ್ನಿಸೂಕ್ತಂಗಳನೋದುತ್ತುಮದಿರದಿದಿರಂ ಬರೆ ಮೆಚ್ಚಿ ಬರಪನಗ್ನಿದೇವಂ ಬೇಡಿಕೊಳ್ಳಿ ಮೆಂದೊಡೆಮ್ಮನ್ವಯಕ್ಕೆ ನೀನ್ ತಣ್ಣಿದೆಯಾಗೆಂದು ಬೇಡುವುದುಂ ತದಸ್ತುವೆಂದನಿತ್ತಲಿಂದ್ರಂ ತನ್ನ ಬಲಮೆಲ್ಲಮಳ್ಕಿಮೆಳ್ಕಿದಂತಾದುದೆಂಬುದಂ ಕೇಳ್ದು-

ಚಂ॥ ಮಗನೆನಗೆಂದು ಪೇೞ್ ಪಿಡಿದು ಕಟ್ಟದೆ ಮಾಣ್ಬೆನೆ ಪಾರ್ಥನಂ ಧರಿ
ತ್ರಿಗೆ ಗುರುವೆಂದು ವಜ್ರದೊಳುರುಳ್ಚದೆ ಮಾಣ್ಬೆನೆ ಚಕ್ರಿಯಂ ಕರಂ ।
ಬಗೆಯದೆ ಗೊಡ್ಡಮಾಡಿದರ್ಗೆ ತಕ್ಕುದನೀಗಳೆ ಮಾೞ್ಪೆನೆಂದು ತೊ
ಟ್ಟಗೆ ಪೊಱಮಟ್ಟನೇಱಿ ನಿಜವಾಹನಮಂ ದಿವದಿಂ ಸುರಾಧಿಪಂ ॥ ೧೦೧

ವ॥ ಅಂತು ದೇವನಿಕಾಯಂ ಬೆರಸು ಯುದ್ಧಸನ್ನದ್ಧನಾಗಿ ಪರಸೈನ್ಯ ಭೈರವನೊಳಿಱಿವೆ ನೆಂಬ ಪಟುವಗೆಯೊಳ್ ಭೈರವಂಬಾಯ್ವಂತೆ ಬಂದು ನಿಂದ ಪುರಂದರನಲ್ಲಿಗೆ ಸರಸಿಜಸಂಭವಂ ಬಂದು ಮಾರ್ಕೊಂಡು-

ಚಂ॥ ಬನಮನೆ ಕಾಯಲೆಂದಿಱಿವೆಯಪ್ಪೊಡೆ ಮುನ್ನಮೆ ಪೋದುದೆಂದು ಪಾ
ರ್ಥನೊಳೆನಗೇವಮೆಂಬ ಬಗೆಯುಳ್ಳೊಡೆ ನಿನ್ನಯ ಪುತ್ರನಚ್ಯುತಂ ।
ಗಿನಿಸೆರ್ದೆ ನೋವೆಯಪ್ಪೊಡದು ಕೂಡದು ಮೂವರೊಳೊರ್ವನೆಮ್ಮ ಮಾ
ತಿನಿತೆ ಗುಣಾರ್ಣವಂಗೆ ಕುಡು ಗೆಲ್ಲಮನಿಂತಿದೆ ಕಜ್ಜದುಜ್ಜುಗಂ ॥ ೧೦೨

ಮನಸ್ಸಿನಿಂದ ಕೋಪಿಸಿಕೊಂಡು ಕರ್ಣನ ಬತ್ತಳಿಕೆಯನ್ನು ಪ್ರವೇಶಿಸಿದನು. ವ॥ ಹಾಗೆ ಅಶ್ವಸೇನನು ಅರ್ಧಾವಲೀಕವೆಂಬ ಅಮೋಘವಾದ ಬಾಣವಾಗಿ ಕರ್ಣನ ಬತ್ತಳಿಕೆಯಲ್ಲಿದ್ದನು. ಈ ಕಡೆ ಖಾಂಡವವನದಲ್ಲಿ ಮದನಪಾಲನೆಂಬ ಋಷಿಗೂ ಒಂದು ಲಾವುಕಪಕ್ಷಿಗೂ ಹುಟ್ಟಿದ ನಾಲ್ಕು ಲಾವುಕಹಕ್ಕಿಗಳು ಅಗ್ನಿಸೂತ್ರಮಂತ್ರಗಳನ್ನು ಜಪಿಸುತ್ತ ಬೆಂಕಿಗೆ ಹೆದರದೆ ಎದುರಾಗಿ ಬರಲು ಅವುಗಳ ಬರುವಿಕೆಗೆ ಸಂತೋಷಪಟ್ಟು ಅಗ್ನಿದೇವನು (ನಿಮಗೆ ಬೇಕಾದ) ವರವನ್ನು ಕೇಳಿಕೊಳ್ಳಿ ಎನ್ನಲು 'ನಮ್ಮ ವಂಶಕ್ಕೆ ನೀನು ಹಿತವಂತನಾಗು' ಎಂದು ಬೇಡಿಕೊಂಡವು. ಅಗ್ನಿಯು ಹಾಗೆಯೇ ಆಗಲಿ ಎಂದು ವರವನ್ನು ಕೊಟ್ಟನು. ಈಕಡೆ ಇಂದ್ರನು ತನ್ನ ಬಲವೆಲ್ಲ ನಾಶವಾಗಿ ಸಾರಿಸಿದಂತಾಯಿತೆಂಬುದನ್ನು ಕೇಳಿದನು. ೧೦೧. 'ನನ್ನ ಮಗನೆಂದು ಅರ್ಜುನನನ್ನು ಹಿಡಿದು ಕಟ್ಟದೆ ಬಿಡುತ್ತೇನೆಯೇ? ಲೋಕಗುರುವೆಂದು ಕೃಷ್ಣನನ್ನು ವಜ್ರಾಯುಧದಿಂದ ಉರುಳಿಸದೆ ಬಿಡುತ್ತೇನೆಯೇ? ನನ್ನನ್ನು ಸ್ವಲ್ಪವೂ ಲಕ್ಷಿಸದೆ ಚೇಷ್ಟೆಮಾಡಿದವರಿಗೆ ಯೋಗ್ಯವಾದುದನ್ನು ಈಗಲೇ ಮಾಡುತ್ತೇನೆ' ಎಂದು ಇದ್ದಕ್ಕಿದ್ದ ಹಾಗೆ ದೇವೇಂದ್ರನು ತನ್ನ ವಾಹನವಾದ ಐರಾವತವನ್ನು ಹತ್ತಿ ಸ್ವರ್ಗದಿಂದ ಹೊರಟನು. ವ॥ ದೇವತೆಗಳ ಸಮೂಹವನ್ನು ಕೂಡಿಕೊಂಡು ಯುದ್ಧಕ್ಕೆ ಸಿದ್ಧನಾಗಿ ಪರಸೈನ್ಯಭೈರವನಾದ ಅರ್ಜುನನೊಡನೆ ಯುದ್ಧ ಮಾಡುತ್ತೇನೆಂಬ ಕೆಟ್ಟಮನಸ್ಸಿನಿಂದ ಭೈರವನು ಹಾಯ್ದುನುಗ್ಗುವ ಹಾಗೆ ಬಂದು ನಿಂತ ಇಂದ್ರನ ಹತ್ತಿರಕ್ಕೆ ಬ್ರಹ್ಮನು ಬಂದು ಅವನನ್ನು ತಡೆದು ೧೦೨. "ನೀನು ವನವನ್ನು ರಕ್ಷಿಸುವುದಕ್ಕಾಗಿ ಯುದ್ಧಮಾಡುವುದಾದರೆ ಅದು ಮೊದಲೇ ನಾಶವಾಗಿದೆ. ಪಾರ್ಥನಲ್ಲಿ ನಿನಗೆ ದ್ವೇಷವಿದೆಯೆನ್ನುವುದಾದರೆ

ವ|| ಎಂದು ಕಮಲಾಸನನಾಸೆದೋಱಿ ನುಡಿದುಳ್ಳುದನೆ ನುಡಿದೊಡಂತೆಗೆಯ್ವೆನೆಂದು-

ಚಂ|| ಸುರಿವರಲೊಂದು ಬೆಳ್ಸರಿಯದಾತ್ಮತನೂಭವನುತ್ತಮಾಂಗದೊಳ್
ದೊರೆಕೊಳೆ ನಿಲ್ಲದಲ್ಲಿ ಕುಸುಮಂ ಕೆಲವಲ್ಲುಗೆ ತನ್ನ ರತ್ನವಿ ।
ಸ್ಫುರಿತ ಕಿರೀಟಮಂ ಕವಿದು ತಾನೆ ನರಂಗೆ ಕಿರೀಟ ನಾಮಮಂ
ಸರಸದಿನಾಗಳುಚ್ಚರಿಸಿ ಸಾಹಸಮಂ ಪೊಗೞ್ದಂ ಸುರಾಧಿಪಂ ॥ ೧೦೩

ವ|| ಅಂತು ಪೊಗೞ್ದು ಖಾಂಡವವನದಹನದೊಳಾದ ಪೊಗೆಯೊಳಮಲ್ಲಿಯ ಮಹಾನಾಗಂಗಳ ವಿಷಂಬೆರಸು ಸುಯ್ವ ಸುಯ್ಯ ಪೊಗೆಯೊಳಂ ಕಱಂಗಿ ಕಟ್ಟಿದ ಮೆಯ್ಯುಮಂ ಪ್ರಚಂಡ ಗಾಂಡೀವ ವ್ಯಾಘಾತದೊಳಿಂದ್ರನೀಲಂಗಳನಡಸಿದಂತಪ್ಪ ಮುಂಗೆಯ್ಯುಮಂ ಕಂಡು ಕೃಷ್ಣನೆಂಬ ಪೆಸರನಿಟ್ಟನಾಗಳ್ ಬ್ರಹ್ಮಂ ಬ್ರಹ್ಮಾಯುವಕ್ಕೆಂದು ಪರಸಿದನೀಶ್ವರಂ ನೀನುದಾರಮಹೇಶ್ವರ ನಪ್ಪುದಱಿಂ ನಿನಗಮೆನಗಮೇತಱೊಳಂ ವಿಕಲ್ಪಮುಂ ವಿಚ್ಛಿನ್ನಮುಮಿಲ್ಲೆಂದನಂತು ಮೂದೇವರುಂ ಪರಸಿ ನಿಜನಿವಾಸಂಗಳ್ಗೆ ಪೋದರಾಗಳ್-

ಚಂ|| ಅನಿತಿನಿತೆನ್ನದಾಂತ ಸುರ ಪನ್ನಗ ಕಿನ್ನರ ಸೈನ್ಯಮೆಲ್ಲಮಂ
ಬಿನ ಮೊನೆಯೊಳ್ ಪಡಲ್ವಡೆ ಲತಾಭವನಂ ಕೃತಕಾಚಳಂಗಳೆಂ ।
ಬಿನಿತುಮವಟ್ಟೆ ತಟ್ಟೆ ನುಡಿಯಂ ನುಡಿದಂತೆ ನೆಗೞ್ಚಲಗ್ನಿದೇ
ವನನಮರೇಂದ್ರನಂದನಮನೂಡಿದನಂದಮರೇಂದ್ರನಂದನಂ ॥ ೧೦೪

ಅವನು ನಿನ್ನ ಮಗ; ಕೃಷ್ಣನ ವಿಷಯದಲ್ಲಿ ಹೃದಯವೇದನೆ (ಕೋಪ) ಯಿರುವುದಾದರೆ ಅದು ಕೂಡದು. ಅವನು ತ್ರಿಮೂರ್ತಿಗಳಲ್ಲೊಬ್ಬ, ನಮ್ಮ ಮಾತಿಷ್ಟೆ : ಗುಣಾರ್ಣವನಾದ ಅರ್ಜುನನಿಗೆ ಜಯವನ್ನು ಕೊಡು. ಈಗ ಮಾಡಬೇಕಾದ ಕಾರ್ಯವಿಷ್ಟೆ." ೧೦೩. ಎಂದು ಬ್ರಹ್ಮನು ಇಂದ್ರನಿಗೆ ಆಶೆದೋರಿಸಿ ಮಾತನಾಡಿ ವಾಸ್ತವಾಂಶವನ್ನು ತಿಳಿಸಲು (ಇಂದ್ರನು) ಹಾಗೆಯೇ ಮಾಡುತ್ತೇನೆಂದು ತನ್ನ ಮಗನಾದ ಅರ್ಜುನನ ತಲೆಯ ಮೇಲೆ ಧಾರಾಕಾರವಾಗಿ ಸುರಿಯುತ್ತಿರುವ ಹೂಗಳು ಆ ಸ್ಥಳದಲ್ಲಿಯೇ ನಿಲ್ಲದೆ ಪಕ್ಕದಲ್ಲಿ ಬೀಳುತ್ತಿರಲು ಇಂದ್ರನು ತಾನೇ ರತ್ನಕಾಂತಿಯಿಂದ ಕೂಡಿದ ತನ್ನ ಕಿರೀಟವನ್ನು ಅರ್ಜುನನ ತಲೆಯ ಮೇಲಿಟ್ಟು ಅರ್ಜುನನಿಗೆ 'ಕಿರೀಟಿ' ಎಂಬ ಹೆಸರನ್ನು ಸರಸವಾಗಿ ಇಟ್ಟು ಅವನ ಸಾಹಸವನ್ನು ಹೊಗಳಿದನು. ವ|| ಖಾಂಡವವನದಹನದಿಂದುಂಟಾದ ಹೊಗೆಯಿಂದಲೂ ಅಲ್ಲಿಯ ಮಹಾಸರ್ಪಗಳ ವಿಷಮಿಶ್ರವಾಗಿ ಉಸಿರಾಡುವ ಗಾಳಿಯಿಂದಲೂ ಕಪ್ಪುಕಪ್ಪಾದ ಶರೀರವನ್ನೂ ಮಹಾಶಕ್ತಿಯುಕ್ತವಾದ ಗಾಂಡೀವದ ಪೆಟ್ಟಿನಿಂದ ಇಂದ್ರನೀಲರತ್ನಗಳು ಸೇರಿಕೊಂಡ ಹಾಗಿರುವ ಮುಂಗಯ್ಯನ್ನೂ ಕಂಡು ಇಂದ್ರನು ಅರ್ಜುನನಿಗೆ ಕೃಷ್ಣನೆಂಬ ಹೆಸರಿಟ್ಟನು. ಬ್ರಹ್ಮನು ನಿನಗೆ ದೀರ್ಘಾಯುವಾಗಲಿ ಎಂದು ಹರಸಿದನು. ಈಶ್ವರನು ನೀನು ಉದಾರಮಹೇಶ್ವರನಾಗಿರುವುದರಿಂದ ನಿನಗೂ ನನಗೂ ಯಾವುದರಲ್ಲಿಯೂ ವ್ಯತ್ಯಾಸವೂ ಭೇದವೂ ಇಲ್ಲ ಎಂದನು. ಹಾಗೆ ತ್ರಿಮೂರ್ತಿಗಳೂ ಅರ್ಜುನನನ್ನು ಹರಸಿ ತಮ್ಮ ವಾಸಸ್ಥಳಗಳಿಗೆ ಹೋದರು. ೧೦೪. ಅಷ್ಟಿಷ್ಟೆನ್ನದೆ ಪ್ರತಿಭಟಿಸಿದ ದೇವತೆಗಳ ನಾಗರರ ಕಿನ್ನರರ ಸೈನ್ಯವೆಲ್ಲವೂ ತನ್ನ ಬಾಣದ ಹೊಡೆತಕ್ಕೆ ಸಿಕ್ಕಿ ಚೆಲ್ಲಾಪಿಲ್ಲಿಯಾಗಿ ಕೆಳಗುರುಳಲು ಬಳ್ಳಿವನೆ ಕೃತಕಪರ್ವತ ಎಂಬಿವೆಲ್ಲ

ವ॥ ಆಗಳ್ ಸ್ವಾಹಾಂಗನಾನಾಥಂ ಸಂಪೂರ್ಣ ಮನೋರಥನಾಗಿ ಖಟ್ವಾಂಗನೆಂಬರಸನ ಯಜ್ಞದೊಳಾತನ ತಂದ ಘೃತಸಮುದ್ರಮಂ ಕುಡಿದೊಡಾದ ರೋಗಮಿಂದು ಪೋದುದೆಂದು ನೀರೋಗನಾಗಿ ಮಹಾನುರಾಗಂಬೆರಸು ಪರಸಿ ಪೋದನಾಗಳಿರ್ವರುಮಿಂದ್ರಪ್ರಸ್ಥಕ್ಕೆಯ್ದೆವಂದು-

ಚಂ॥ ಇದಿರ್ವರೆ ಧರ್ಮಜಂ ಬೆರಸು ತನ್ನೊಡವುಟ್ಟಿದರೆಯ್ದೆ ತಳ್ತು ಕ
ಟ್ಟಿದ ಗುಡಿ ರಂಗವಲ್ಲಿಗಳೆ ದಾಂಗುಡಿಯಂತಿರೆ ಸೂಸೆ ಸೇಸೆಯಂ ।
ಸುದತಿಯರಿಕ್ಕೆ ಚಾಮರಮನಂಗನೆಯರ್ ನಿಜಕೀರ್ತಿ ಲೋಕಮಂ
ಪುದಿದಿರೆ ಪೊಕ್ಕನಂದು ನಿಜಮಂದಿರಮಂ ಪರಸೈನ್ಯಭೈರವಂ ॥ ೧೦೫

ಇದು ವಿವಿಧ ವಿಬುಧಜನವಿನುತ ಜಿನಪದಾಂಭೋಜ
ವರಪ್ರಸಾದೋತ್ಪನ್ನ ಪ್ರಸನ್ನ ಗಂಭೀರ ವಚನ ರಚನ
ಚತುರ ಕವಿತಾಗುಣಾರ್ಣವ ವಿರಚಿತಮಪ್ಪ
ವಿಕ್ರಮಾರ್ಜುನ ವಿಜಯದೊಳ್
ಪಂಚಮಾಶ್ವಾಸಂ

ನಾಶವಾಗಿ ತಗ್ಗಿದರೂ ತಾನಾಡಿದ ಮಾತನ್ನು ಉಳಿಸಿಕೊಳ್ಳುವುದಕ್ಕಾಗಿ ಅಗ್ನಿದೇವನಿಗೆ ಇಂದ್ರನ ಉದ್ಯಾನವಾದ ಖಾಂಡವವನವನ್ನು ಅರ್ಜುನನು ಉಣಿಸಿದನು. ವ॥ ಆಗ ಸ್ವಾಹಾದೇವಿಯ ಪತಿಯಾದ ಅಗ್ನಿಯು ಇಷ್ಟಾರ್ಥವನ್ನು ಪೂರ್ಣವಾಗಿ ಪಡೆದವನಾಗಿ ಖಟ್ವಾಂಗನೆಂಬ ರಾಜನ ಯಜ್ಞದಲ್ಲಿ ಅವನು ತಂದಿದ್ದ ತುಪ್ಪದ ಸಮುದ್ರವನ್ನು ಕುಡಿದುದರಿಂದ ಉಂಟಾದ ರೋಗವು ಇಂದು ಪರಿಹಾರವಾಯಿತು ಎಂದು ರೋಗರಹಿತನಾಗಿ ವಿಶೇಷ ಸಂತೋಷದಿಂದ ಕೂಡಿ ಆಶೀರ್ವದಿಸಿ ಹೋದನು. ಆಗ ಕೃಷ್ಣಾರ್ಜುನರಿಬ್ಬರೂ ಇಂದ್ರಪ್ರಸ್ಥಪಟ್ಟಣಕ್ಕೆ ಬಂದು ಸೇರಿದರು. ೧೦೫. ಆಗ ತನ್ನ ಒಡಹುಟ್ಟಿದವರು ಧರ್ಮರಾಯನೊಡಗೂಡಿ ಇದಿರಾಗಿ ಬರಲು ಕಟ್ಟಿದ ತೋರಣವೂ ಇಟ್ಟ ರಂಗವಲ್ಲಿಯೂ ತನ್ನ ಕೀರ್ತಿಯ ದಾಂಗುಡಿಗಳಂತಿರಲು ಸ್ತ್ರೀಯರು ಅಕ್ಷತೆಗಳನ್ನು ಚೆಲ್ಲುತ್ತಿರಲು ಅಂಗನೆಯರು ಚಾಮರವನ್ನು ಬೀಸುತ್ತಿರಲು ತನ್ನ ಕೀರ್ತಿಯು ಲೋಕವನ್ನೆಲ್ಲ ವ್ಯಾಪಿಸುತ್ತಿರಲು ಅಂದು ಪರಸೈನ್ಯಭೈರವನಾದ ಅರ್ಜುನನು ತನ್ನ ಅರಮನೆಯನ್ನು ಪ್ರವೇಶಿಸಿದನು.

ಇದು ಅನೇಕ ದೇವತೆಗಳಿಂದ ಸ್ತುತಿಸಲ್ಪಟ್ಟ ಜಿನಪಾದಕಮಲಗಳ ವರಪ್ರಸಾದ ದಿಂದ ಹುಟ್ಟಿದುದೂ ತಿಳಿಯಾದುದೂ ಗಂಭೀರವಾದುದೂ ಆದ ಮಾತುಗಳ ರಚನೆಯಲ್ಲಿ ಚಾತುರ್ಯವನ್ನುಳ್ಳ ಕವಿತಾಗುಣಾರ್ಣವನಿಂದ ರಚಿತವಾದುದೂ ಆದ ವಿಕ್ರಮಾರ್ಜುನವಿಜಯದಲ್ಲಿ

ಐದನೆಯ ಆಶ್ವಾಸ.

# ಷಷ್ಠಾಶ್ವಾಸಂ

ಕಂ॥ ಶ್ರೀಗೆ ಫಳಂ ಚಾಗಂ ವಾಕ್
ಶ್ರೀಗೆ ಫಳಂ ಸರ್ವಶಾಸ್ತ್ರ ಪರಿಣತಿ ವೀರ ।
ಶ್ರೀಗೆ ಫಳಮಾಯವೆಂದಿಂ
ತಾಗಳುಮಱಿದೆಸಗಿದಂ ಪರಾಕ್ರಮಧವಳಂ ॥ ೧

ವ॥ ಅಂತು ಖಾಂಡವವನದಹನಪ್ರಪಂಚದಿಂ ಬಟೆಯಮರಾತಿವನದಹನ ತೀವ್ರ ಪ್ರತಾಪ ಗಹನಕ್ಕೆ ಮುನ್ನಮಳ್ಕಿ ಪರಮಂಡಳಿಕರಿತ್ತುಂ ತೆತ್ತುಂ ಬೆಸಕೆಯ್ಯೆ ಕೆಲವು ದಿವಸಮಿರ್ದು ನಾರಾಯಣನಂ ದ್ವಾರಾವತಿಗೆ ಕಳಿಪಿ-

ಉ॥ ತುಂಗ ತರಂಗ ಭಂಗುರ ಪಯೋಧಿಪರೀತಮಹಾಮಹೀತಳಾ
ಲಿಂಗಿತ ಕೀರ್ತಿ ಕೇಳ್ದು ಬಡ ಪಾರ್ವನ ಪುಯ್ಯಲನೊರ್ಮೆ ಕೇಳ್ದನಾ ।
ವಂಗಮಗುರ್ವು ಪರ್ವೆ ಜವನೊಳ್ ಸೆರಗಿಲ್ಲದೆ ಪೋಗಿ ತಾಗಿ ತಂ
ದಂ ಗಡ ವಿಕ್ರಮಾರ್ಜುನನೆ ಪಾರ್ವರ ಪಿಳ್ಳೆಯ ಪೋದ ಜೀವಮಂ ॥ ೨

ವ॥ ಎಂದು ಲೋಕಮೆಲ್ಲಂ ಪೊಗಟೆ ವಿದ್ವಿಷ್ಟವಿದ್ರಾವಣನುಂ ಭೀಮ ಯುಧಿಷ್ಠಿರ ನಕುಳ ಸಹದೇವರುಮಯ್ವರುಂಬೆರಸೊಂದು ದಿವಸಮೋಲಗಂಗೊಟ್ಟಿರೆ ಧರ್ಮಪುತ್ರನಲ್ಲಿಗೆ ಮಯಂ ಪಂಚರತ್ನ ಹಿರಣ್ಮಯಂ ಚತುರಶ್ರಂ ಮೂಱುಂ ಯೋಜನದಳವಿಯ

೧. ಐಶ್ವರ್ಯಕ್ಕೆ ಪ್ರಯೋಜನತ್ಯಾಗ (ದಾನ), ವಾಕ್ಚಾತುರ್ಯಕ್ಕೆ ಫಲ ಸಕಲಶಾಸ್ತ್ರಗಳಲ್ಲಿ ಪಾಂಡಿತ್ಯ, ಪೌರುಷಕ್ಕೆ ಪ್ರಯೋಜನ ಔಚಿತ್ಯ ಎಂಬಿವನ್ನು ಯಾವಾಗಲೂ ತಿಳಿದುಕೊಂಡು ಪರಾಕ್ರಮಧವಳನಾದ ಅರ್ಜುನನು (ನಡೆದು ಕೊಂಡನು). ವ॥ ಖಾಂಡವವನವನ್ನು ಸುಟ್ಟನಂತರ ಶತ್ರುಗಳೆಂಬ ಭಯಂಕರವಾದ ಕಾಡನ್ನು ಸುಡುವ ಪೌರುಷಪ್ರದರ್ಶನಕ್ಕೆ ಮೊದಲೇ ಶತ್ರುಗಳಾದ ಮಂಡಲಾಧಿಪರು ಧನಕನಕಗಳನ್ನು ಕೊಟ್ಟು ಕಪ್ಪಕಾಣಿಕೆಗಳನ್ನು ತೆತ್ತು ಆಜ್ಞಾಧಾರಕವಾಗಿರಲು ಕೆಲವು ದಿವಸಗಳ ಮೇಲೆ ನಾರಾಯಣನನ್ನು ದ್ವಾರಕಾಪಟ್ಟಣಕ್ಕೆ ಕಳುಹಿಸಿಕೊಟ್ಟರು. ೨. ಎತ್ತರವಾದ ಅಲೆಗಳನ್ನುಳ್ಳ ಚಂಚಲವಾದ ಸಮುದ್ರದಿಂದ ಸುತ್ತುವರಿಯಲ್ಪಟ್ಟ ಅಖಂಡಭೂಮಂಡಲವನ್ನು ಆಕ್ರಮಿಸಿರುವ ಕೀರ್ತಿಯುನ್ನುಳ್ಳ ಅರ್ಜುನನು ಭಯವುಂಟಾಗುವ ಹಾಗೆ ಆಕ್ರಂದನಮಾಡುತ್ತಿದ್ದ ಬಡಬ್ರಾಹ್ಮಣನಗೋಳನ್ನು ಹಠಾತ್ತಾಗಿ ಕೇಳಿ ಸಹಾಯವಿಲ್ಲದೆಯೇ ಹೋಗಿ ಯಮನನ್ನು ಪ್ರತಿಭಟಿಸಿ ಬ್ರಾಹ್ಮಣ ಬಾಲಕನ ಹೋದ ಜೀವವನ್ನು ಪುನಃ ತಂದನು. ವ॥ ಅರ್ಜುನನ ಪರಾಕ್ರಮವನ್ನು ಲೋಕವೆಲ್ಲವೂ ಹೊಗಳಿತು. ವಿದ್ವಿಷ್ಟವಿದ್ರಾವಣನಾದ ಅರ್ಜುನನು ಭೀಮ ಯುಧಿಷ್ಠಿರ ನಕುಲ ಸಹದೇವರೊಡಗೂಡಿ ಅಯ್ದು ಜನವೂ ಸಭೆಯನ್ನು ನಡೆಸುತ್ತಿರಲು ಒಂದು ದಿವಸ ಧರ್ಮರಾಜನಲ್ಲಿಗೆ ಮಯನು (ದೇವಶಿಲ್ಪಿ) ಪಂಚರತ್ನಗಳಿಂದಲೂ ಚಿನ್ನದಿಂದಲೂ ರಚಿಸಿದ ಮೂರುಯೋಜನದಳತೆಯ ಚಚ್ಚೌಕವಾದ

ಸಭಾಮಂಟಪಮನೊಂದುಲಕ್ಕ ರಕ್ಕಸವಡೆಯಿಂ ಪೊತ್ತು ತರಿಸಿ ತನ್ನ ನಲ್ಮೆಯುಂ ಬಲ್ಮೆಯುಂ ಮೆಱೆಯಲೆಂದು ದೇವಲೋಕದಿಂ ತಂದು ಮುಂದಿಟ್ಟು-

ಮ॥ ಇದಱಿಂದಂ ಬಿಸವಂದಮೊಂದು ತೆಱನಲ್ತೆಂತೆಂದೊಡಾರಯ್ವೊಡಿಂ
ತಿದಱೊಳ್ ದಿವ್ಯ ಸರೋವರಂಗಳಿದಱೊಳ್ ಕಲ್ಪಾವನೀಜಂಗಳಿಂ ।
ತಿದಱೊಳ್ ನಾಟಕಶಾಲೆ ರಮ್ಯಮಿದಱೊಳ್ ದೇವಾಪ್ಸರೋನೃತ್ಯಮಿಂ
ತಿದಱಿಂತಾಗಿರೆ ನೋೞ್ಪೊಡಾರುಮಱಿಯರ್ ಮಾಡಲ್ ಸಭಾಗೇಹಮಂ ॥ ೩

ವ॥ ಎಂದೆನ್ನೀ ಪ್ರಾಣಮೆಂಬುದು ವಿಕ್ರಮಾರ್ಜುನನ ದಯೆಗೆಯ್ದ ಪ್ರಾಣಮೆನ್ನ ಕೊಟ್ಟುದರ್ಕೆ ಮಾರ್ಕೊಳ್ಳದೆ ಕೊಳ್ಳಿಮೆಂದೊಡಂತೆಗೆಯ್ವೆಮೆಂದು ನಿಶ್ಚಯಿಸೆ ಧರ್ಮಪುತ್ರಂಗೋಲಗಂಗುಡಲ್ತಕ್ಕುದೆಂದದಂ ಧರ್ಮಪುತ್ರಂಗೆ ಕೊಟ್ಟು ಪರಾಕ್ರಮಧವಳಂಗೆ ಶಶಾಂಕವಿಶದಯಶಮೆ ತೆರಳ್ದುರುಳಿಗೊಂಡಂತಿರ್ದ ಶಂಖಮಂ ಬಾಸಣಿಗೆಗಳೆದು-

ಕಂ॥ ಇದನಿಂದ್ರನಟ್ಟಿದಂ ನಿನ
ಗಿದಱ ಪೆಸರ್ ದೇವದತ್ತಮೆಂಬುದು ನಿನಗ ।
ಭ್ಯುದಯಕರಂ ಶಂಖಂ ರಿಪು
ಹೃದಯಕವಾಟಪುಟವಿಘಟನಂ ನೋಡರಿಗಾ ॥ ೪

ವ॥ ಎಂದದಂ ವಿಕ್ರಮಾರ್ಜುನಂಗೆ ಕೊಟ್ಟು ಮುನ್ನಂ ಷೋಡಶರಾಜರೊಳಗೆ ಮಾಂಧಾತನೆಂಬಂ ವಿದ್ಯಾಧರನಾತನ ಗದೆಯಿದು ಬೞಿಯಮಾತನಂ ಲವಣನೆಂಬಸುರಂ ಕಾದಿ

ಸಭಾಮಂಟಪವನ್ನು ಲಕ್ಷರಾಕ್ಷಸಪಡೆಯಿಂದ ಹೊರಿಸಿಕೊಂಡು ಬಂದು ತನ್ನ ಸದ್ಗುಣವನ್ನೂ ಪರಾಕ್ರಮವನ್ನೂ ಪ್ರದರ್ಶಿಸುವುದಕ್ಕಾಗಿ ದೇವಲೋಕದಿಂದ ತಂದು ಅವರ ಮುಂದಿಟ್ಟನು. ೩. ಇದರ ಸೌಂದರ್ಯವು ಆಶ್ಚರ್ಯಕರವಾದುದು. ಒಂದು ರೀತಿಯದಲ್ಲ; ಇದರಲ್ಲಿ ದಿವ್ಯಸರೋವರಗಳಿವೆ, ಕಲ್ಪವೃಕ್ಷಗಳಿವೆ, ರಮ್ಯವಾದ ನಾಟಕಶಾಲೆಯಿದೆ, ದೇವಾಪ್ಸರೆಯರ ನೃತ್ಯವಿದೆ. ವಿಚಾರಮಾಡಿ ನೋಡುವುದಾದರೆ ಇದರಂತಹ ಸಭಾಮಂಟಪವನ್ನು ರಚಿಸಲು ಯಾರೂ ಸಮರ್ಥರಲ್ಲ. ವ॥ ನನ್ನ ಪ್ರಾಣವೆಂಬುದು ವಿಕ್ರಮಾರ್ಜುನನು ದಯಮಾಡಿ ಕೊಟ್ಟ ಪ್ರಾಣ. ನಾನು ಕೊಟ್ಟಿದುದಕ್ಕೆ ಪ್ರತಿಯಾಡದೆ ಅಂಗೀಕಾರಮಾಡಬೇಕು ಎಂದನು. ಆಗಲೆಂದು ಅವರು ಒಪ್ಪಿದರು. ಇದು ಧರ್ಮರಾಜನು ಓಲಗಮಾಡಲು ಯೋಗ್ಯವಾದುದೆಂದು ಅದನ್ನು ಧರ್ಮರಾಜನಿಗೆ ಕೊಟ್ಟನು. ಪರಾಕ್ರಮಧವಳನಾದ ಅರ್ಜುನನಿಗೆ ಚಂದ್ರನಷ್ಟು ವಿಸ್ತಾರವಾದ ಯಶಸ್ಸಿನ ಉಂಡೆಯ ಹಾಗೆಯೂ ಇದ್ದ ಶಂಖವನ್ನು ಮುಸುಕು ತೆಗೆದು ೪. ಅರಿಗನೇ ನೋಡಿ, ಇದನ್ನು ನಿನಗೆ ಇಂದ್ರನು ಕಳುಸಹಿಸಿದನು. ಇದರ ಹೆಸರು ದೇವದತ್ತವೆಂದು, ಶತ್ರು ಹೃದಯಕವಾಟವನ್ನು ಭೇದಿಸುವ ಶಕ್ತಿಯುಳ್ಳದು, ಈ ಶಂಖವು ನಿನಗೆ ಶ್ರೇಯಸ್ಕರವಾದುದು ಇದನ್ನು ಸ್ವೀಕರಿಸು. ವ॥ ಎಂದು ಅದನ್ನು ವಿಕ್ರಮಾರ್ಜುನನಿಗೆ ಕೊಟ್ಟು ಹಿಂದೆ ಷೋಡಶರಾಜರುಗಳಲ್ಲಿ ಮಾಂಧಾತನೆಂಬ ವಿದ್ಯಾಧರನಿದ್ದನು, ಅವನ ಗದೆಯಿದು; ಅವನನ್ನು ಲವಣನೆಂಬ ರಾಕ್ಷಸನು ಕಾದಿಕೊಂದು ಅದನ್ನು ತೆಗೆದುಕೊಂಡನು. ಅವನನ್ನು ರಾಮಚಂದ್ರನ ತಮ್ಮನಾದ

ಕೊಂದು ಕೊಂಡೊಡಾತನಂ ರಾಮಚಂದ್ರನ ತಮ್ಮ ಶತ್ರುಘ್ನಂ ಗೆಲ್ದು ತನಗೆ ಕೊಂಡು ಸಮುದ್ರದ ನಡುವಣ ಮೈನಾಕಪರ್ವತದೊಳ್ ಮಡಗಿದೊಡೆನಗಿದಂ ವರುಣದೇವನಿತ್ತನಿಂತಪ್ಪುದು-

ಕಂ॥ ಅಧಿಕರಿಪುನೃಪತಿಬಳನವ
ರುಧಿರಜಳಸ್ಫುರಿತರೌದ್ರಮಿಾ ಗದೆ ಪೆಸರಿಂ ।
ರುಧಿರಮುಖಿಯೆಂಬುದೆಂದದ
ನಧಿಕಬಳಸ್ಥಂಗೆ ಭೀಮಸೇನಂಗಿತ್ತಂ ॥ ೫

ವ॥ ಅಂತಿತ್ತು ಬೞಿಯಮವರ ದಾನಸನ್ಮಾನಾದಿಗಳಿಂ ಮಯಂ ರಾಗರಸಮಯನಾಗಿ ಸಂತಸಂಬಟ್ಟು ಪೋದನಿತ್ತ ಮತ್ತೊಂದು ದಿವಸಮಾ ಸಭಾಮಂಟಪದೊಳ್ ಧರ್ಮರಾಜಂ ತನ್ನ ನಾಲ್ವರ್ ತಮ್ಮಂದಿರೊಡನೆ ದೇವೇಂದ್ರಲೀಲೆಯಿಂದೋಲಗಂಗೊಟ್ಟಿರೆಯಿರೆ-

ಚಂ॥ ಬೆಳಗುಗಳೆಲ್ಲಮೊಂದುರುಳಿಯಾಗಿ ನಭಸ್ಥಳದಿಂದಮಿಾ ಮಹೀ
ತಳಕಿೞಿತರ್ಪುದೆಂದು ಮನುಜಾಕೃತಿಯೆಂದು ಮುನೀಂದ್ರನೆಂದು ಕ ।
ಣ್ಗೊಳಿಸೆ ಮುನೀಂದ್ರರೊಳ್ ಕಮಳಸಂಭವನಂದನನೆಂದು ನೋಟಕರ್
ತಳವೆಳಗಾಗೆ ಸಾರೆವರೆ ನೀರದಮಾರ್ಗದಿನಂದು ನಾರದಂ ॥ ೬

ತರಳ ॥ ಬಳಸಿ ತನ್ನೊಡನೊಯ್ಯನೊಯ್ಯನೆ ಬರ್ಪ ದೇವರದೊಂದು ಗಾ
ವುಳಿಯನಿನ್ನಿರಿಮೆಂದು ತನ್ನನೆ ನಿಳ್ಕಿ ನೋಳ್ಪರ ಕಣ್ಗೆ ಕ ।
ಣ್ಬೊಳಿಪು ತನ್ನಯ ಮೆಯ್ಯ ಬೆಳ್ಪಿನೊಳೞ್ಪು ನಿಂದೊಡೆ ವಾಳೆಮಿಾನ್
ಪೊಳೆಯೆ ಧಾತ್ರಿಗೆ ವರ್ಪ ಗಂಗೆವೊಲೊಪ್ಪಿದಂ ಮುನಿಪುಂಗವಂ ॥ ೭

ಶತ್ರುಘ್ನನು ಗೆದ್ದು ಸಮುದ್ರದ ಮಧ್ಯದಲ್ಲಿರುವ ಮೈನಾಕಪರ್ವತದಲ್ಲಿ ಮಡಗಿದನು. ಇದನ್ನು ವರುಣದೇವನು ನನಗೆ ಕೊಟ್ಟನು. ೫. ಇದು ಅನೇಕ ಶತ್ರುರಾಜರ ಸೈನ್ಯದ ಹೊಸರಕ್ತದಿಂದ ಕೂಡಿ ಭಯಂಕರ ಪ್ರಕಾಶಮಾನವಾಗಿದೆ. ರುಧಿರಮುಖಿಯೆಂಬುದು ಇದರ ಹೆಸರು ಎಂದು ಅದನ್ನು ಅಧಿಕಬಲನಾದ ಭೀಮಸೇನನಿಗೆ ಕೊಟ್ಟನು. ವ॥ ಬಳಿಕ ಮಯನು ಪಾಂಡವರ ದಾನಸನ್ಮಾನಗಳಿಂದ ಸಂತುಷ್ಟನಾಗಿ ಹೋದನು. ಈ ಕಡೆ ಮತ್ತೊಂದು ದಿವಸ ಧರ್ಮರಾಜನು ತನ್ನ ನಾಲ್ವರು ತಮ್ಮಂದಿರೊಡನೆ ದೇವೇಂದ್ರನ ವೈಭವದಿಂದ ಸಭೆಯನ್ನು ನಡೆಸುತ್ತಿರಲು ೬. ಮೊದಲು ಕಾಂತಿಸಮೂಹವೆಲ್ಲ ಒಂದು ಉಂಡೆಯಾಗಿ ಆಕಾಶದಿಂದ ಈ ಭೂಮಂಡಲಕ್ಕೆ ಇಳಿಯುತ್ತಿರುವಂತೆಯೂ ಅನಂತರ ಅದು ಮನುಷ್ಯಾಕೃತಿಯಂತೆಯೂ ಇನ್ನೂ ಹತ್ತಿರ ಬರಲು ಮುನಿಶ್ರೇಷ್ಠನಂತೆಯೂ ಕಣ್ಣಿಗೆ ಕಾಣಿಸಿಕೊಂಡು (ಇನ್ನೂ ಹತ್ತಿರ ಬರಲು) ಬ್ರಹ್ಮನಂದನನಾದ ನಾರದನೆ ಬರುತ್ತಿದ್ದಾನೆ' ಎಂದು ನೋಡುತ್ತಿದ್ದವರು ಆಶ್ಚರ್ಯಪಡುವ ಹಾಗೆ ಆಕಾಶಮಾರ್ಗದಿಂದ ನಾರದನು ಸಮೀಪಕ್ಕೆ ಬಂದನು. ೭. ತನ್ನನ್ನು ಸುತ್ತಿಕೊಂಡು ತನ್ನೊಡನೆ ಸಾವಧಾನವಾಗಿ ಬರುತ್ತಿದ್ದ ದೇವತೆಗಳ ಸಮೂಹವನ್ನು 'ಇನ್ನು ನೀವು ನಿಲ್ಲಿರಿ' ಎಂದು ಹೇಳಿ ತನ್ನನ್ನೇ ಕುರಿತು ದಿಟ್ಟಿಸಿ ನೋಡುತ್ತಿದ್ದವರ ಕಣ್ಬೆಳುಪು ತನ್ನ ಶರೀರದ ಬಿಳುಪಿನಲ್ಲಿ ಸೇರಿ ಕೊಂಡಿರಲು ಹೊಳೆಯುವ ಬಾಳೆಮೀನಿನಿಂದ ಕೂಡಿದ ಗಂಗೆಯು ಭೂಮಿಗೆ ಇಳಿದು

ವ॥ ಅಂತು ಬರ್ಪಾಗಳ್-

ತರಳ॥ ಸರಿಗೆಯೊಳ್ ಸಮೆದಕ್ಷಮಾಲಿಕೆ ಪೊನ್ನ ಮುಂಜಿ ತೊಳಪ್ಪ ಕ
ಪ್ಪುರದ ಭಸ್ಮರಜಸ್ತ್ರಿಪುಂಡ್ರಕಮೊಪ್ಪೆ ಪಿಂಗ ಜಟಾಳಿ ತಾ ।
ವರೆಯ ಸೂತ್ರದೊಳಾದ ಜನ್ನವಿಅಂ ದುಕೂಲದ ಕೋವಣಂ
ಕರಮೊಡಂಬಡೆ ನೋಟಕರ್ಕಳನಾ ತಪಸ್ವಿ ಮರುಳ್ಚಿದಂ ॥ ೮

ಕಂ॥ ಬಟ್ಟಗೊಡೆ ಚಂದ್ರಕಾಂತಿಯ
ನಟ್ಟುಂಬರಿಗೊಳೆ ಪೊದಳ್ದ ಕೃಷ್ಣಾಜಿನಮೊಂ
ದಿಟ್ಟಳಮೆಸೆಯೆ ಬೆಡಂಗಂ
ಪುಟ್ಟಸೆ ಗಾಡಿಗಳೊಳೆಸೆವ ವೀಣಾಕ್ವಣಿತಂ ॥ ೯

ಬೆರಲೊಳ್ ಬೀಣೆಯ ತಂತಿಗ
ಳೊರಸಿದ ಕೆಂಗಲೆಗಳಕ್ಷಮಾಲೆಯೊಳೆಸೆದಂ ।
ತಿರೆ ಪೊಸೆಯೆ ಮುತ್ತು ಪವಳಂ
ಬೆರಸಿದವೋಲಾಯ್ತು ಚೆನ್ನ ತಪಸಿಯ ಕೆಯ್ಯೊಳ್ ॥ ೧೦

ವ॥ ಅಂತು ಸಾಕ್ಷಾತ್‌ಬ್ರಹ್ಮಂ ಬರ್ಪಂತೆ ಬಂದು-

ಕಂ॥ ಅಡಿಯಿಟ್ಟನೆಳೆಯೊಳಿವನೆಂ
ಬೆಡೆಯೊಳ್ ಪರಿಜನಸಮೇತಮಿದಿರೆಟ್ಟರಸಂ ।
ಪೊಡವಡೆ ತಪಸ್ವಿ ಕೆಯ್ಯಂ
ಪಿಡಿದೆತ್ತಿ ಪಲರ್ಮೆ ಪರಸಿದಂ ಪರಕೆಗಳಂ ॥ ೧೧

ಬರುತ್ತಿದ್ದ ಹಾಗೆ ಋಷಿಶ್ರೇಷ್ಠನಾದ ನಾರದನು ಪ್ರಕಾಶಿಸಿದನು. ೮. (ಚಿನ್ನದ) ಸರಿಗೆಯಲ್ಲಿ ಮಾಡಿದ ಜಪಸರ, ಹೊನ್ನಿನ ಉಡಿದಾರ, ಹೊಳೆಯುವ ಕರ್ಪೂರದ ಧೂಳಿನಿಂದ ಮಾಡಿದ ವಿಭೂತಿಯ ಮೂರು ಗೆರೆಗಳು, ಪಿಂಗಳಬಣ್ಣದ ಜಟೆಯ ಸಮೂಹ, ತಾವರೆಯ ನೂಲಿನಿಂದ ಮಾಡಿದ ಯಜ್ಞೋಪವೀತ, ರೇಷ್ಮೆಯ ಕೌಪೀನ, ಇವು ವಿಶೇಷವಾಗಿ ಒಪ್ಪುತ್ತಿರಲು ಆ ಋಷಿಯು ನೋಡುವವರನ್ನು ವಿಶೇಷವಾಗಿ ಆಕರ್ಷಿಸಿದನು. ೯. ಗುಂಡಾಗಿರುವ ಕೊಡೆಯು ಚಂದ್ರನ ಕಾಂತಿಯನ್ನು ಅಟ್ಟಿ ಓಡಿಸುವಂತಿತ್ತು. ಶರೀರದಲ್ಲಿ ಹರಡಿದ್ದ ಜಿಂಕೆಯ ಚರ್ಮವು ಮನೋಹರವಾಗಿತ್ತು. ಸೊಗಸಾಗಿ ಧ್ವನಿಮಾಡುವ ವೀಣೆಯ ನಾದವು ಬೆಡಗನ್ನು ಹುಟ್ಟಿಸಿತು. ೧೦. ಬೆರಳುಗಳಲ್ಲಿ ವೀಣೆಯ ತಂತಿಗಳನ್ನು ಉಜ್ಜಿದ ಕೆಂಗಲೆಗಳು ಜಪಮಾಲೆಗಳಲ್ಲಿ ಸೇರಿ ಹೆಣೆದುಕೊಂಡಿರಲು ಆ ಚೆಲುವಾದ ತಪಸ್ವಿಯ ಕಯ್ಯಲ್ಲಿ ಮುತ್ತೂ ಹವಳಗಳೂ ಬೆರಸಿದ ಹಾಗಾಯಿತು. ವ॥ ಹಾಗೆ ಸಾಕ್ಷಾತ್ ಬ್ರಹ್ಮನೇ ಬರುವ ಹಾಗೆ ಬಂದು ೧೧. ಭೂಮಿಯಲ್ಲಿ ಇವನು ಕಾಲಿಟ್ಟನೆಂಬ ಸಮಯದಲ್ಲಿಯೇ ಧರ್ಮರಾಜನು ಪರಿವಾರಸಮೇತವಾಗಿ ಇದಿರಾಗಿ ಎದ್ದುಹೋಗಿ ನಮಸ್ಕರಿಸಲು ತಪಸ್ವಿಯಾದ

ವ॥ ಅಂತು ಧರ್ಮಪುತ್ರನಬ್ಜಜಪುತ್ರನಂ ಮುಂದಿಟ್ಟೊಡಗೊಂಡು ಬಂದು ಮಣಿ ಕನಕರಚನವಿಚಿತ್ರವೇತ್ರಾಸನದೊಳಿರಿಸಿ ಮಹಾರ್ಘ್ಯಗುಣಮಣಿವಿಭೂಷಣಂಗೆ ಕನಕ ಪಾತ್ರದೊಳರ್ಘ್ಯಮೆತ್ತಿ ಕನಕ ಕಳಶ ಸಂಭೃಶ ಶುಚಿಜಲಂಗಳಿಂದಮಾ ಮುನೀಶ್ವರನ ಪಾದಪದ್ಮಮಂ ಕರ್ಚಿ ತತ್ಪಾದಪವಿತ್ರೋದಕಂಗಳಿಂ ಮಹಾಋಷಿಯ ತಳಿದ ಕನಕಕಮಂಡಲುವಿನ ತೀರ್ಥೋದಕಂಗಳಿಂದಯ್ವರುಂ ಪವಿತ್ರೀಕೃತಮಸ್ತಕರಾಗಿರ್ದು ಯುಧಿಷ್ಠಿರಂ ನಾರದಮಹಾಮುನಿಯ ಮೊಗಮಂ ನೋಡಿ-

ಕಂ॥ ಪಡೆದಂ ಬ್ರಹ್ಮಂ ಜಗಮಂ
ಪಡೆಯಲ್ ತಾನಾರ್ತನಿಲ್ಲ ಪೆಂಪಂ ನಿಮ್ಮಂ ।
ಪಡೆದಲ್ತೆ ಪಡೆದನೆನಿಸಿದ
ಕಡು ಪೆಂಪಿನ ಪೊಜಿಗೆ ನೀವು ಮೊದಲಿಗರಾದಿರ್ ॥ ೧೨

ಬಾದೇನಾ ಮದೀಯ ಕರ್ಮ ಫ
ಳೋದಿತ ಸಂತಾಪರೂಪ ಪಾಪಕಳಾಪ ।
ಚ್ಛೇದನಕರಮಾಯ್ತು ಭವ
ತ್ಪಾದ ಪ್ರಕ್ಷಾಳನೋದಕಂ ಮುನಿನಾಥಾ ॥ ೧೩

ಬೆಸನೆನಗಾವುದೋ ಬೆಸಸಿಂ
ಬೆಸನಂ ಪಿರಿದಕ್ಕೆ ಗೆಯ್ಯೆ ಸಾರ್ದಿರ್ದೆನದಂ ।
ಬೆಸಸಿಂ ನಿಮ್ಮಯ ಬರವಂ
ಪೊಸತಾಗಿರೆ ಬಂದಿರೀಗಳೆಲ್ಲಿಂ ಬಂದಿರ್ ॥ ೧೪

ನಾರದನು ಅವನ ಕಯ್ಯನ್ನು ಹಿಡಿದೆತ್ತಿ ಅನೇಕಸಲ ಹರಕೆಗಳಿಂದ ಆಶೀರ್ವದಿಸಿದನು. ವ॥ ಹಾಗೆ ಧರ್ಮಪುತ್ರನು ಬ್ರಹ್ಮಪುತ್ರನಾದ ನಾರದನನ್ನು ಮುಂದು ಮಾಡಿಕೊಂಡು ಜೊತೆಯಲ್ಲಿ ಬಂದು ರತ್ನಚಿನ್ನ ಮೊದಲಾದವುಗಳ ರಚನೆಗಳಿಂದ ವಿಚಿತ್ರವಾದ ಬೆತ್ತದ ಪೀಠದಲ್ಲಿ ಕುಳ್ಳಿರಿಸಿ ಬಹು ಅನರ್ಘ್ಯಗುಣಗಳಿಂದ ಅಲಂಕೃತನಾದ ಅವನಿಗೆ ಚಿನ್ನದ ಪಾತ್ರೆಯಲ್ಲಿ ಅರ್ಘ್ಯವನ್ನೆತ್ತಿ ಚಿನ್ನದ ಕಲಶಗಳಲ್ಲಿ ತುಂಬಿದ ನಿರ್ಮಲವಾದ ನೀರಿನಿಂದ ಆ ಋಷಿಶ್ರೇಷ್ಠನ ಪಾದಕಮಲಗಳನ್ನು ತೊಳೆದು ಆ ಪವಿತ್ರವಾದ ಪಾದೋದಕದಿಂದಲೂ ಆ ಋಷಿವರ್ಯನು ಪ್ರೋಕ್ಷಿಸಿದ ಚಿನ್ನದ ಕಮಂಡಲದ ಪವಿತ್ರವಾದ ನೀರಿನಿಂದಲೂ ಅಯ್ವರೂ ಶುಚಿರ್ಭೂತವಾದ ಶರೀರವುಳ್ಳವರಾಗಿದ್ದು ಧರ್ಮರಾಯನು ನಾರದಋಷಿಯ ಮುಖವನ್ನು ನೋಡಿ - ೧೨. ಬ್ರಹ್ಮನು ಜಗತ್ತನ್ನು ಸೃಷ್ಟಿಸಿದರೂ ಹಿರಿಮೆಯನ್ನು ಮಾತ್ರ ಪಡೆಯಲು ಶಕ್ತನಾಗಲಿಲ್ಲ. ನಿಮ್ಮನ್ನು ಪಡೆದ ಮೇಲಲ್ಲವೇ ಈ ಹಿರಿಮೆಯನ್ನು ಅವನು ಪಡೆದುದು ಎಂಬ ಹಿರಿಮೆಯ ಗೌರವಕ್ಕೆ ನೀವೇ ಮೊದಲಿಗರಾದಿರಲ್ಲವೇ? ೧೩. ಹೆಚ್ಚು ಮಾತನಾಡಿ ಫಲವೇನು? ಋಷಿವರ್ಯರೇ ನಿಮ್ಮ ಪಾದೋದಕವು ನನ್ನ ಕರ್ಮದ ಫಲವಾಗಿ ಬಂದ ದುಃಖರೂಪವಾದ ಪಾಪಸಮೂಹವನ್ನು ಪರಿಹಾರ ಮಾಡಿತು. ೧೪. ಈಗ ನಾನು ಮಾಡಬೇಕಾದ ಕಾರ್ಯವೇನು ಆಜ್ಞಾಪಿಸಿ; ಅದು ಎಷ್ಟೇ ಹಿರಿದಾಗಿದ್ದರೂ ಮಾಡಲು ಸಿದ್ಧನಾಗಿದ್ದೇನೆ. ಅದನ್ನು ಅಪ್ಪಣೆಕೊಡಿ, ನೀವು ಬಂದ ಕಾರಣವನ್ನು ತಿಳಿಸಿ,

ವ|| ಎಂಬುದುಮಾ ಮುನೀಂದ್ರನಿಂದ್ರಲೋಕದಿಂ ಬಂದೆವೆಂದೊಡಲ್ಲಿಯ ಪಡೆಮಾತಾವುದು-

ಮ|| ದಿವಿಜೇಂದ್ರಂ ಸುಖಮಿರ್ದನೇ ದಿತಿಸುತವ್ಯಾಬಾಧೆಗಳ್ ದೇವರ್ಗಿ
ಲ್ಲವಲಾ ಷೋಡಶರಾಜರಿರ್ಪ ತೆಜಿನೇನೆಮ್ಮನ್ವಯಕ್ಷ್ಮಾಪರಾ ।
ವ ವಿಳಾಸಂಗಳೊಳಿರ್ಪರೇ ದೊರೆತು ತಾನೆಮ್ಮಯ್ಯನೈಶ್ವರ್ಯಮಿಂ
ತಿವನೆಲ್ಲಂ ತಿಳಿವಂತುಟಾಗಿ ಬೆಸಸಿಂ ಪಂಕೇಜಗರ್ಭಾತ್ಮಜಾ ॥ ೧೫

ವ|| ಎಂಬುದುಮಾ ಮುನೀಶ್ವರನಿಳಾಧರೇಶ್ವರಂ ಬೆಸಗೊಂಡಂದದೊಳೆ ದೇವಲೋಕದ ಪಡೆಮಾತೆಲ್ಲಮಂ ಪೇೞ್ದು ಪಾಂಡುರಾಜನ ಮಾತನಿಂತೆಂದಂ-

ಉ|| ನೀಡಿರದಿಂದ್ರನೋಲಗಕೆ ಪೋಪುದುಮಾಗಳುಮಂತೆ ಪೋಗಿಯುಂ
ಷೋಡಶ ರಾಜರಿಂ ಕಡೆಯೊಳಿರ್ಪುದು ಜೀಯ ಪಸಾದಮೆಂಬುದುಂ ।
ನೋಡಿದ ದೃಷ್ಟಿಗಳ್ಗಿ ಸುಗಿದಿರ್ಪುದುಮಾದಮೆ ಮಾನಭಂಗಮಂ
ಮಾಡೆ ಮನಃಕ್ಷತಕ್ಕಳವಿಗಾಣೆವು ನೋಡಿರೆ ಪಾಂಡುರಾಜನಾ ॥ ೧೬

ಮ || ಪರ ಚಕ್ರಂಗಳನೊತ್ತಿಕೊಂಡದಟರಂ ಕೊಂದಿಕ್ಕಿ ದಾಯಾದರೆ
ಲ್ಲರುಮಳ್ಕುತ್ತಿರೆ ಸಂದ ಸಾಹಸದ ನಿಮ್ಮಾಯಯ್ವರುಂ ಮಕ್ಕಳಾ ।
ಗಿರೆಯುಂ ನಿಚ್ಚಲುಮಿಂದ್ರನೋಲಗದೊಳಂತಾ ಪಾಂಡುರಾಜಂಗೆ ನಿ
ರ್ನೆರಮಪ್ಪೊಂದಪಮಾನದಿಂದಮಿನಿತೊಂದೂನತಮಪ್ಪಂತುಟೇ॥ ೧೭

ಅಪೂರ್ವವಾಗಿ ಬಂದಿದ್ದೀರಿ; ಈಗ ಎಲ್ಲಿಂದ ಬಂದಿರಿ? ಎಂದು ಕೇಳಿದನು. ವ|| ಅದಕ್ಕೆ ಆ ಮುನೀಂದ್ರನು 'ನಾವು ಇಂದ್ರಲೋಕದಿಂದ ಬಂದೆವು' ಎನ್ನಲು ಅಲ್ಲಿಯ ಸಮಾಚಾರವೇನು, ೧೫. ದೇವೇಂದ್ರನು ಸುಖವಾಗಿದ್ದಾನೆಯೇ? ದೇವತೆಗಳಿಗೆ ರಾಕ್ಷಸರ ಬಾಧೆಯಿಲ್ಲ ತಾನೇ? ಷೋಡಶರಾಜರಿರುವ ರೀತಿ ಯಾವುದು? ನಮ್ಮ ವಂಶದ ದೊರೆಗಳು ಯಾವ ವೈಭವದಿಂದಿದ್ದಾರೆ? ನಮ್ಮ ತಂದೆಯ ಸಂಪತ್ತು ಎಂತಹುದು? ಇವನ್ನು ತಿಳಿಯುವ ಹಾಗೆ ಬ್ರಹ್ಮಪುತ್ರರಾದ ನಾರದರೇ ಹೇಳಿರಿ. ವ|| ಎನ್ನಲು ಆ ಮುನೀಶ್ವರನು ಚಕ್ರವರ್ತಿಯಾದ ಧರ್ಮರಾಜನು ಪ್ರಶ್ನೆಮಾಡಿದ ರೀತಿಯಲ್ಲಿಯೇ ದೇವಲೋಕದ ಸಮಾಚಾರವನ್ನೆಲ್ಲ ಹೇಳಿ ಪಾಂಡುರಾಜನ ವಿಷಯಕವಾದ ಮಾತನ್ನು ಹೀಗೆಂದನು-೧೬. ಪಾಂಡುವು ಎಲ್ಲರಿಗಿಂತ ಮುಂಚೆ ಇಂದ್ರನ ಸಭೆಗೆ ಹೋಗಿದ್ದರೂ ಅಲ್ಲಿಯೂ ಅವರ ಹಾಗೆಯೇ ಹೋಗಿದ್ದರೂ ಆ ಷೋಡಶರಾಜರಿಗಿಂತ ಕೊನೆಯಲ್ಲಿರುವುದೂ ಸ್ವಾಮಿ ಪ್ರಸಾದ ಎನ್ನುವುದೂ ಅವರು ದೃಷ್ಟಿಸಿ ನೋಡಿದ ನೋಟಕ್ಕೆ ಹೆದರಿ ಮುದುರಿಕೊಂಡಿರುವುದೂ ಅವನಿಗೆ ವಿಶೇಷವಾದ ಅವಮಾನವನ್ನುಂಟುಮಾಡಲು ೧೭. ಶತ್ರುಮಂಡಲಗಳನ್ನೆಲ್ಲ ಆಕ್ರಮಿಸಿ ಶೂರರಾದವರನ್ನೆಲ್ಲ ಸಂಹಾರಮಾಡಿ ದಾಯಾದಿಗಳೆಲ್ಲರೂ ಹೆದರುವಂತಹ ಪ್ರಸಿದ್ಧ ಪರಾಕ್ರಮವನ್ನುಳ್ಳ ನೀವೈದುಮಂದಿಯೂ ಮಕ್ಕಳಾಗಿದ್ದರೂ ಪ್ರತಿನಿತ್ಯವೂ ಇಂದ್ರನ ಸಭೆಯಲ್ಲಿ ಆ ಪಾಂಡುರಾಜನಿಗೆ ನಿಷ್ಕಾರಣವಾದ ಒಂದು ಅಪಮಾನದಿಂದ ಇಷ್ಟು

ವ॥ ಆಮುಮದಂ ನೋಡಲಾಱದೆಯುಂ ಪಾಂಡುರಾಜನೆನ್ನಿರ್ದಿರವನೆನ್ನ ಮಕ್ಕಳ್ಗಱಿಪಿ ರಾಜಸೂಯಮೆಂಬ ಯಾಗಮಂ ಬೇಳ್ವಂತೆ ಮಾಡಿ ಬನ್ನಿಮೆನೆಯುಮದನಱಿಪಲೆಂದೆ ಬಂದೆಮಾ ಮಖದ ಮಾಹಾತ್ಮ್ಯಮಂ ಪೇೞ್ವೊಡೆ ಮುನ್ನಂ ಕೃತಯುಗದೊಳ್ ಹರಿಶ್ಚಂದ್ರನೆಂಬ ಚಕ್ರವರ್ತಿ ಶತಕ್ರತುವಂ ನಿರ್ವರ್ತಿಸಿ ಚತುರರ್ಣವಪರೀತಮಹೀತಳಮೆಲ್ಲಮಂ ಧರಾಮರರ್ಕಳ್ಗೆ ದಕ್ಷಿಣೆಗೊಟ್ಟನಪ್ಪುದಱಿಂದಮದಱ ಫಲದೊಳೀಗಳಾತನಲ್ಲಿಗಿಂದ್ರಂ ನಿಚ್ಚಮೊಂದು ಪೊೞ್ತು ಪೋಗಿ ಪೂಜಿಸಿ ಬರ್ಪಂ ನಿಮ್ಮಯ್ಯಂಗೆ ನೀಮುಮನಿತು ಮಹಿಮೆಯಂ ಮಾಟ್ಪಿರಪ್ಪೊಡೆ-

ಚಂ॥ ಬಿರುದರನೊತ್ತಿ ಬೀರರರನಡಂಗಿಸಿ ಕೊಂಕಿಗರಂ ಕಟಿಲ್ಚಿ ಚೆ
ನ್ನರನಡಿಗೊತ್ತಿ ಮಂಡಳಿಕರಂ ಬೆಸಕೆಯ್ಸಿ ಕಱುಂಬರಂ ನಿರಾ ।
ಕರಿಸಿ ಸಮಸ್ತವಾರಿಧಿಪರೀತಮಹೀತಳದರ್ಥಮೆಲ್ಲಮಂ
ತರಿಸಿ ನೆಗೞ್ತಿಯಂ ನಿಱಿಸಲಾರ್ಪೊಡೆ ಮಾಡಿರೆ ರಾಜಸೂಯಮಂ ॥ ೧೮

ವ॥ ಎಂದು ರಾಜಸೂಯಾಂತಂ ಕಳಹಮೆಂಬುದಂ ಬಗೆದು ತಾನುಂ ಕಲಹ ಪ್ರಿಯನಪ್ಪುದಱಿಂದಮನಿತನೆ ನುಡಿದು ಮಾಣ್ದ ಮುನೀಂದ್ರನಂ ನರೇಂದ್ರನಿಂತೆಂದಂ-

ಚಂ॥ ಬೆಳಗುವುದಿಂದ್ರಲೋಕದೊಳಗಯ್ಯನ ಮಾತೆನಲೆಮ್ಮ ಸಾಹಸಂ
ಬೆಳಗುವುದೀ ಧರಾವಳಯದೊಳ್ ತಣಿವರ್ ದ್ವಿಜಮುಖ್ಯರಪ್ಪುದ ।
ಗ್ಗಳಿಕೆ ಪೊದಳ್ದು ಪರ್ವುವುದು ಕೀರ್ತಿ ಪುರಾಕೃತಪುಣ್ಯದಿಂದೆ ಸಂ
ಗಳಿಸುವುದೆಂದೊಡೀ ಮಖದೊಳೇನ್ ತೊದಳುಂಟೆ ಮುನೀಂದ್ರನಾಯಕಾ ॥ ೧೯

ಕೊರತೆಯುಂಟಾಗಬಹುದೇ? ವ॥ ನಾವು ಅದನ್ನು ನೋಡಲಾರದಿದ್ದುದರಿಂದಲೂ ಪಾಂಡುರಾಜನೂ 'ನಾನಿರುವ ಸ್ಥಿತಿಯನ್ನು ತನ್ನ ಮಕ್ಕಳಿಗೆ ತಿಳಿಸಿ ರಾಜಸೂಯವೆಂಬ ಯಜ್ಞವನ್ನು ಮಾಡುವಂತೆ ಮಾಡಿ ಬನ್ನಿ' ಎಂದು ಹೇಳಿದುದರಿಂದಲೂ ಇದನ್ನು ತಿಳಿಸಬೇಕೆಂದೇ ಬಂದೆವು. ಆ ಯಾಗದ ಮಾಹಾತ್ಮ್ಯವನ್ನು ಏನೆಂದು ಹೇಳಲಿ. ಮೊದಲು ಕೃತಯುಗದಲ್ಲಿ ಹರಿಶ್ಚಂದ್ರನೆಂಬ ಚಕ್ರವರ್ತಿ ನೂರು ಯಜ್ಞವನ್ನು ಮಾಡಿ ನಾಲ್ಕು ಸಮುದ್ರಗಳಿಂದ ಸುತ್ತುವರಿಯಲ್ಪಟ್ಟ ಭೂಭಾಗವನ್ನೆಲ್ಲ ಬ್ರಾಹ್ಮಣರಿಗೆ ದಕ್ಷಿಣೆಯಾಗಿ ಕೊಟ್ಟನು. ಅದರ ಫಲವಾಗಿ ಈಗ ಆತನಲ್ಲಿಗೆ ದೇವೇಂದ್ರನು ಪ್ರತಿನಿತ್ಯವೂ ಒಂದು ಹೊತ್ತು ಹೋಗಿ ಪೂಜಿಸಿ ಬರುತ್ತಿದ್ದಾನೆ. 'ನಿಮ್ಮ ತಂದೆಗೆ ನೀವೂ ಅಷ್ಟು ವೈಭವವನ್ನು ಮಾಡಲಾರಿರಾ'-೧೮. ಬಿರುದುಳ್ಳ ರಾಜರನ್ನೆಲ್ಲ ಆಕ್ರಮಿಸಿ ವೀರರನ್ನೆಲ್ಲ ಅಡಗಿಸಿ ವಕ್ರವಾಗಿರುವವರನ್ನೆಲ್ಲ ಸಡಿಲಿಸಿ ಪರಾಕ್ರಮಿಗಳನ್ನು ಕಾಲಿನ ಕೆಳಕ್ಕೆ ಅದುಮಿ ಸಾಮಂತರನ್ನು ಆಜ್ಞಾಧೀನರನ್ನಾಗಿ ಮಾಡಿ ಅಸೂಯೆಗಾರರನ್ನು ಉಪೇಕ್ಷಿಸಿ ಸಮಸ್ತ ಸಮುದ್ರಗಳಿಂದ ಸುತ್ತುವರಿಯಲ್ಪಟ್ಟ ಭೂಮಂಡಲದ ದ್ರವ್ಯವನ್ನು ಬರಮಾಡಿಕೊಂಡು ನಿಮ್ಮ ಪ್ರಸಿದ್ಧಿಯನ್ನು ಸ್ಥಾಪಿಸಲು ಸಮರ್ಥರಾಗಿದ್ದರೆ ರಾಜಸೂಯಯಾಗವನ್ನು ಮಾಡಿರಿ. ವ॥ ಎಂದು 'ರಾಜಸೂಯದ ಕಡೆಯಲ್ಲಿ ಜಗಳ' ಎಂಬುದನ್ನು ಮನಗಂಡು ತಾನು ಕಲಹಪ್ರಿಯನಾದುದರಿಂದ ಅಷ್ಟನ್ನು ಮಾತ್ರ ಹೇಳಿ ನಿಲ್ಲಿಸಿದ ಮುನೀಂದ್ರನನ್ನು ನರೇಂದ್ರನಾದ ಧರ್ಮರಾಜನು ನಾರದನಿಗೆ ಹೀಗೆ ಹೇಳಿದನು-೧೯. ಇಂದ್ರಲೋಕದಲ್ಲಿ ನಮ್ಮ ತಂದೆಯ ಮಾತು ಬೆಳಗುವ ಹಾಗೆಯೇ ಈ ಭೂಮಂಡಲದಲ್ಲಿ ನಮ್ಮ ಶೌರ್ಯವೂ ಬೆಳಗುತ್ತದೆ. ಬ್ರಾಹ್ಮಣಶ್ರೇಷ್ಠರೂ

ವ॥ ಎಂಬುದುಮಾ ಮಾತಂ ನಿಲೆ ನುಡಿದುದರ್ಕೆ ಮೆಚ್ಚಿ ನಿನಗದೇವಿರಿದು-

ಕಂ॥ ಪರಪಿನ ನೀಳದ ಕಡೆಯಂ
ಮರುಳಂ ತವೆ ನೋಡಲಾಜದಂಬರತಳಮಂ ।
ಕರಿದೆಂಬಂತಿರೆ ನಿನ್ನಂ
ನರನೆಂಬುದೆ ನಿನ್ನ ಸಾಹಸಕ್ಕದು ಪಿರಿದೇ ॥ ೨೦

ವ॥ ಎಂದು ನುಡಿದು ನಾಡೆಯುಂ ಪೊೞ್ತಿರ್ದುಮಿನ್ ಪೋಪೆಮೆಂದ ಮುನಿನಾಥನಂ ನರನಾಥಂ ಬಿಜಯಂಗೆಯ್ಯಿಮೆನೆ ನಾರದನಿರದೆ ಗಗನತಳಕ್ಕೊಗೆದು ಮುಗಿಲ ಪೊರೆಯೊಳಡಂಗಿದನಿತ್ತ ಧರ್ಮರಾಜಂ ನಿಜಾನುಜರೊಡನೆ ರಾಜಸೂಯಪ್ರಪಂಚಮನಾಲೋಚಿಸಿ ಪುರುಷೋತ್ತಮನನೀ ಪದದೊಳ್ ಬರಿಸುವುದು ನಮಗುತ್ತಮಪಕ್ಷಮೆಂದು-

ಉ॥ ದ್ವಾರವತೀಪುರಕ್ಕೆ ಚರರಂ ತಡವಿಲ್ಲದೆ ಬೇಗಮಟ್ಟಿ ಪಂ
ಕೇರುಹನಾಭನಂ ಬರಿಸಿ ಮಜ್ಜನ ಭೋಜನ ಭೂಷಣಾದಿ ಸ ।
ತ್ಕಾರದೊಳಟ್ಟಜಿಂ ನೆಱೆಯೆ ಮಾಡಿ ಮುರಾಂತಕ ಪಾಂಡು ಭೂಭುಜಂ
ಕಾರಣಮಾಗೆ ನಾರದನ ಪೇೞ್ದ ನೆಗೞ್ತೆಯ ರಾಜಸೂಯಮಂ ॥ ೨೧

ಕಂ॥ ಬೇಳಲೆ ಬಗೆವೊಡೆ ಹರಿಯೊಡ
ನಾಲೋಚಪಮೆಂದು ಬಟೆಯಸಟ್ಟಿದೆನೆಮ್ಮಂ ।
ಪಾಳಿಸುವೈ ನೀನ್ ನಿಮ್ಮೊಡ
ನಾಲೋಚಿಸದೆಮಗೆ ನೆಗೞಲೇಂ ನೆರವುಂಟೇ ॥ ೨೨

ತೃಪ್ತಿಪಡುತ್ತಾರೆ. ಗೌರವವುಂಟಾಗುತ್ತದೆ. ಕೀರ್ತಿ ಹರಡಿ ಹಬ್ಬುತ್ತದೆ. ಹಿಂದೆ ಮಾಡಿದ ಪುಣ್ಯದಿಂದ ಮಾತ್ರ ಪ್ರಾಪ್ತವಾಗುತ್ತದೆ ಎಂದಾಗ ಈ ಯಜ್ಞವನ್ನು ನಡೆಸುವುದೇ ನಿಶ್ಚಯ ಎಂದನು. ವ॥ ಆತನ ನಿಷ್ಕರ್ಷೆಯನ್ನು ಕೇಳಿ ನಾರದನು ನಿನಗೆ ಇದೇನು ದೊಡ್ಡದು-೨೦. ಹುಚ್ಚನು ವಿಸ್ತಾರವಾಗಿ ಹರಡಿರುವ ನೀಲಿಯ ಬಣ್ಣದ ಕೊನೆಯನ್ನು ನೋಡಲಾಗದೆ ಆಕಾಶಪ್ರದೇಶವನ್ನು ಕಪ್ಪು ಎನ್ನುವ ಹಾಗೆ ನಿನ್ನನ್ನು ಮನುಷ್ಯಸಾಮಾನ್ಯನೆನ್ನಬಹುದೇ? ನಿನ್ನ ಪರಾಕ್ರಮಕ್ಕೆ ಅದು ದೊಡ್ಡದೇ? ವ॥ ಎಂದು ಹೇಳಿ ಕೆಲಕಾಲವಿದ್ದು 'ಇನ್ನು ಹೋಗುತ್ತೇವೆ, ಎಂದ ನಾರದನನ್ನು ಧರ್ಮರಾಜನು 'ದಯಮಾಡಿಸಿ' ಎನ್ನಲು ನಾರದನು ಸಾವಕಾಶಮಾಡದೆ ಆಕಾಶಪ್ರದೇಶಕ್ಕೆ ಹಾರಿ ಮೋಡದ ಪದರದಲ್ಲಿ ಅಡಗಿದನು. ಈ ಕಡೆ ಧರ್ಮರಾಜನು ತನ್ನ ತಮ್ಮಂದಿರೊಡನೆ ರಾಜಸೂಯವಿಷಯವನ್ನು ಆಲೋಚಿಸಿದನು. ಈ ಸಮಯದಲ್ಲಿ ಕೃಷ್ಣನನ್ನು ಬರಿಸುವುದು ನಮಗೆ ಉತ್ತಮಪಕ್ಷವೆಂದು ನಿಶ್ಚಯಿಸಿದರು. ೨೧. ದ್ವಾರಾವತೀಪಟ್ಟಣಕ್ಕೆ ಚಾರರನ್ನು ಸಾವಕಾಶಮಾಡದೆ ಬೇಗ ಕಳುಹಿಸಿ ಕೃಷ್ಣನನ್ನು ಬರಮಾಡಿದರು. ಸ್ನಾನ ಭೋಜನ ಅಲಂಕಾರಾದಿಸತ್ಕಾರಗಳಿಂದ ವಿಶೇಷ ಪ್ರೀತಿಯನ್ನು ಪ್ರದರ್ಶಿಸಿ 'ಕೃಷ್ಣಾ ಪಾಂಡುಮಹಾರಾಜನ ಕಾರಣವಾಗಿ ನಾರದನು ಹೇಳಿದ ಪ್ರಸಿದ್ಧವಾದ ರಾಜಸೂಯಯಾಗವನ್ನು-೨೨. ಮಾಡಲು ಯೋಚಿಸುವುದಾದರೆ ನಿನ್ನೊಡನಾಲೋಚಿಸೋಣ ಎಂದು ದೂತರನ್ನಟ್ಟಿದೆನು. (ನೀನು ನಮ್ಮ ರಕ್ಷಕ, ನಮ್ಮನ್ನು

ವ॥ ಎಂಬುದುಮದೆಲ್ಲಮಂ ನೆಱೆಯೆ ಕೇಳ್ದು ಮುಂದಣ ಕಜ್ಜದ ಬಣ್ಣುಮನಱೆದಂಭೋರುಹನಾಭಂ ಶುಂಭದಂಭೋಧರಧ್ವನಿಯಿನಿಂತೆಂದಂ-

ಉ॥ ಎಂತು ಬಿಗುರ್ತು ಧೀರರನೆ ಕೊಂದಪಿರೆಂತು ಸಮಸ್ತ ವಾರ್ಧಿ ಪ
ರ್ಯಂತ ಧರಿತ್ರಿಯಂ ವಶಕೆ ತಂದಪಿರೆಂತು ಧನಂಗಳಂ ಪ್ರಯೋ ।
ಗಾಂತರದಿಂ ತೆರಳ್ಚಿದಪಿರಾಗದಿದಾದೊಡಮೆಂತು ರಾಜಸೂ
ಯಾಂತಮಿದೆಂತು ಬೇಳ್ದಪಿರಪಾಯಶತಂ ಬರೆ ರಾಜಸೂಯಮಂ ॥ ೨೩

ಕಂ॥ ಗಾಳು ಗೊರವಂ ತಗುಳ್ಚಿ ಪ
ಳಾಳಮನೇನೊಂದನಪ್ಪೊಡಂ ಗಳಪಿದೊಡಾ ।
ಬೇಳುನುಡಿಗೇಳ್ದು ಕೆಮ್ಮನೆ
ಬೇಳಲ್ ನಿಮಗಂತು ರಾಜಸೂಯಂ ಮೊಗ್ಗೇ ॥ ೨೪

ವ॥ ಮುನ್ನಂ ಕೃತಯುಗದೊಳ್ ಸೋಮನ ವರುಣನ ರಾಜಸೂಯದ ಕಡೆಯೊಳ್ ದೇವಾಸುರಯುದ್ಧಂ ನೆಗೞೆ ಹಿರಣ್ಯ ಕಾಳನೇಮಿಗಳ್ ಮೊದಲಾಗಿ ನೆಗೞ್ತೆಯ ದೈತ್ಯರೆಲ್ಲಮೆನ್ನ ಚಕ್ರಘಾತದೊಳಟ್ಟೆ ಮಟ್ಟೆಗಿಂತಾದರದೊಂದು ಧರಾವನಿತೆಯ ಭಾರಾವತಾರದೊಳೆನಿತಾನುಂ ಘಸಣಿ ಪೋದುದದು ಕಾರಣದಿಂ ರಾಜಸೂಯದ ಮಾತಂ ಕೇಳ್ದಲ್ಲಿಯೆ ಮಱೆವುದು ನುಡಿಯಲ್ವೇಡೆನೆ ಮಱುಮಾತುಗುಡಲಱೆಯದೆ ಧರ್ಮಪುತ್ರಂ ಮೌನಂಗೊಂಡುಸಿರದಿರೆ ಪರಾಕ್ರಮಧವಳನಿಂತೆಂದಂ-

ಪಾಲಿಸುವವನು ನೀನು; ನಿನ್ನೊಡನೆ ಆಲೋಚಿಸದೆ ಮಾಡಲು ನಮಗೆ ಸಾಧ್ಯವೇ?' ವ॥ ಎಂಬುದಾಗಿ ಹೇಳಲು ಅದೆಲ್ಲವನ್ನೂ ಸಂಪೂರ್ಣವಾಗಿ ಕೇಳಿ ಮುಂದಿನ ಕಾರ್ಯದ ಭಾರವನ್ನು ತಿಳಿದು ಕೃಷ್ಣನು ಪ್ರಕಾಶಮಾನವಾದ ಗುಡುಗಿನ ಧ್ವನಿಯಿಂದ ಹೀಗೆ ಹೇಳಿದನು-೨೩. ಭಯಪಡಿಸಿ ವೀರರನ್ನು ಹೇಗೆ ಕೊಲ್ಲುವಿರಿ? ಸಮಸ್ತಸಮುದ್ರದವರೆಗಿರುವ ಭೂಮಿಯನ್ನು ಹೇಗೆ ವಶಕ್ಕೆ ತಂದುಕೊಳ್ಳುವಿರಿ? ಬೇರೆ ಬೇರೆ ಉಪಾಯಗಳಿಂದ ಹೇಗೆ ಧನವನ್ನು ಶೇಖರಿಸುವಿರಿ? ಇದು ಸಾಧ್ಯವಿಲ್ಲ, ಇಷ್ಟಾದರೂ ರಾಜಸೂಯದ ಕೊನೆಮುಟ್ಟುವುದು ಹೇಗೆ? ನೂರಾರು ಅಪಾಯಗಳು ಬರುವ ಈ ರಾಜಸೂಯಯಾಗವನ್ನು ಹೇಗೆ ಮಾಡುವಿರಿ? ೨೪. ಆ ಕಪಟಸನ್ಯಾಸಿಯು ರೇಗಿಸಿ ಯಾವುದೋ ಕಾಡುಹರಟೆಯನ್ನು ಹರಟಿದರೆ ಆ ಪೊಳ್ಳು ಮಾತನ್ನು ಕೇಳಿ ಸುಮ್ಮನೆ ಹಾಗೆ ಯಜ್ಞವನ್ನು ಮಾಡಲು ರಾಜಸೂಯವು ನಿಮಗೆ ಸಾಧ್ಯವೇ? ವ॥ 'ಮೊದಲು ಕೃತಯುಗದಲ್ಲಿ ಸೋಮ ಮತ್ತು ವರುಣ ರಾಜಸೂಯದ ಕಡೆಯಲ್ಲಿ ದೇವಾಸುರಯುದ್ಧವು ಪ್ರಾಪ್ತವಾಯಿತು. ಹಿರಣ್ಯ ಕಾಲನೇಮಿಗಳೇ ಮೊದಲಾಗಿ ಪ್ರಸಿದ್ಧರಾದ ರಾಕ್ಷಸರೆಲ್ಲ ನನ್ನ ಸುದರ್ಶನಚಕ್ರದ ಹೊಡೆತದಿಂದ ನಾಶವಾಗಿ ಮಟ್ಟದಂತಾದರು. ಭೂದೇವಿಯ ಆ ಒಂದು ಭಾರವನ್ನು ಇಳಿಸುವುದರಲ್ಲಿ ಎಷ್ಟೋ ಆಯಾಸವಾಯಿತು. ಆ ಕಾರಣದಿಂದ ರಾಜಸೂಯದ ಮಾತನ್ನು ಕೇಳಿದಲ್ಲಿಯೇ ಮರೆಯುವುದು ಲೇಸು ಮಾತನಾಡಬೇಡ' ಎಂದನು. ಪ್ರತ್ಯುತ್ತರವನ್ನು ಕೊಡಲು ಶಕ್ತಿಯಿಲ್ಲದೆ ಧರ್ಮರಾಜನು ಮೌನವನ್ನು ತಾಳಿರಲು ಪರಾಕ್ರಮಧವಳನಾದ

ಕಂ॥ ಎನಿತು ಗಡಂ ಪಯೋನಿಧಿಪರೀತಮಹೀತಳಮೆಂಬುದಾಂಪ ಬೀ
ರನ ಪೆಸರಾವುದೀ ನುಡಿಯನೀ ಪದದೊಳ್ ಪೆಱಗಿಕ್ಕೆ ನಾರದಂ ।
ಮನದೊಳೆ ಪೇಸುಗುಂ ಸುರಪನುಂ ನಗುಗುಂ ಕಡುವಿನ್ನನಕ್ಕುಮ
ಯ್ಯನ ಮುಖಮೆಂತುಪೇಕ್ಷಿಸುವುದೀ ಮಖಮಂ ಸರಸೀರುಹೋದರಾ ॥೨೫

ವ॥ ಎಂದೊಡೆ ಭೀಮಸೇನನಿಂತೆಂದಂ-

ಕಂ ॥ ಪನ್ನತರ ನಡುವನುಡಿಯ
ಲ್ಕೆನ್ನ ಭುಜಾರ್ಗಳಮೆ ಸಾಲ್ಗುಮೊಸೆ ಮೇಣ್ ಮುನಿ ಮೇ ।
ಣೆನ್ನ ನುಡಿ ಟಾಠಡಾಢಣ
ಮೆನ್ನಂ ಬೆಸಸುವುದು ರಾಜಸೂಯಂ ಬೇಳಲ್ ॥ ೨೬

ವ॥ ಎಂದು ಗಜಱೆ ಗರ್ಜಿಸುವುದುಮಮಳರುಮಿಾ ಬೇಳ್ವೆಯ ಮಾತಂ ತೆಮಳೆ ನುಡಿದೊಡೆಮ್ಮ ಗಂಡವಾತುಮಳುಂಬಂ ಭೃತಮಕ್ಕುಮೆಂದು ಮೆಯ್ಮೆಯ್ಗೆ ಬೆಸಸೆಂಬುದುಂ ರಾಜಸೂಯಮಂ ಬೇಳ್ದಲ್ಲದಿರಿರಪ್ಪೊಡೆ ಗಂಗಾನದಿಯ ಬಡಗಣ ತಡಿಯ ಮಘಮಘಿಸುವ ವಾರಣಾಸಿ ಪುರಮನಾಳ್ವ ಬೃಹದ್ಬಳಂ ಪುತ್ರೋತ್ಪತ್ತಿನಿಮಿತ್ತಮಪ್ಪೊಂದು ದಿವ್ಯಪಿಂಡಮಂ ತನ್ನಿರ್ವರರಸಿಯರ್ಗೆ ಪಚ್ಚು ಕೊಟ್ಟೊಡೆ ಪುಟ್ಟಿದೆರಡು ಪೋೞುಮನಿವೇವುವೆಂದು ಬಿಸುಡೆ

ಅರ್ಜುನನು ಹೀಗೆಂದನು. ೨೫. ಸಮುದ್ರದಿಂದ ಸುತ್ತುವರಿಯಲ್ಪಟ್ಟ ಈ ಭೂಭಾಗವೆಂಬುದು ಎಷ್ಟು ದೊಡ್ಡದು? ಪ್ರತಿಭಟಿಸುವ ವೀರನ ಹೆಸರಾವುದು? ಈ ಯಜ್ಞಮಾಡುವ ವಿಚಾರವನ್ನು ಈ ಸಮಯದಲ್ಲಿ ಉಪೇಕ್ಷಿಸಿದಲ್ಲಿ ನಾರದನು ಮನಸ್ಸಿನಲ್ಲಿಯೇ ಜುಗುಪ್ಸೆಪಟ್ಟುಕೊಳ್ಳುವನು; ದೇವೇಂದ್ರನು ನಗುವನು; ಅಯ್ಯನಾದ ಪಾಂಡುವಿನ ಮುಖವೂ ಖಿನ್ನವಾಗುವುದು. ಕೃಷ್ಣನೇ ಈ ಯಜ್ಞವನ್ನು ಉದಾಸೀನಮಾಡುವುದಾದರೂ ಹೇಗೆ? ವ॥ ಭೀಮಸೇನನು ಹೀಗೆಂದನು-೨೬. ವೀರರ ಸೊಂಟವನ್ನು ಮುರಿಯುವುದಕ್ಕೆ ನನ್ನ ಬಲಿಷ್ಠವಾದ ತೋಳುಗಳೇ ಸಾಕು ಒಪ್ಪು ಅಥವಾ ಒಪ್ಪದಿರು ನನ್ನ ಮಾತು ಟವರ್ಗಾಕ್ಷರಗಳಂತೆ ಶಾಶ್ವತವಾದುದು ನಾನು ರಾಜಸೂಯಯಾಗವನ್ನು ಮಾಡುವುದಕ್ಕೆ ಅಪ್ಪಣೆ ಕೊಡು (ಆಜ್ಞೆ ಮಾಡು) ವ॥ ಎಂದು ರೇಗಿ ಗರ್ಜನೆಮಾಡಿದನು. ಅವಳಿಗಳಾದ ನಕುಲಸಹದೇವರೂ ಈ ಯಜ್ಞದ ಮಾತನ್ನು ಜಾರಿಹೋಗುವಂತೆ ಉದಾಸೀನವಾಗಿಯೇ ಮಾತನಾಡಿ ನಮ್ಮ ಪರಾಕ್ರಮದ ಮಾತೂ ವಿಶೇಷವಾಗಿ ಹೀನವಾಗುತ್ತದೆ, ನಮ್ಮೊಬ್ಬೊಬ್ಬರಿಗೂ (ರಾಜಸೂಯಯಾಗ ಮಾಡುವಂತೆ) ಆಜ್ಞೆಮಾಡು ಎಂದರು. 'ಕೃಷ್ಣನು' ನೀವು ರಾಜಸೂಯಯಾಗವನ್ನು ಮಾಡದೇ ಬಿಡುವುದಿಲ್ಲವಾದರೆ ಹೀಗೆ ಮಾಡಿ. ಗಂಗಾನದಿಯ ಉತ್ತರತೀರದಲ್ಲಿ ಬಹುವಾಸನಾಯುಕ್ತವಾಗಿರುವ ವಾರಣಾಸಿ ಪಟ್ಟಣವನ್ನು ಬೃಹದ್ಬಲನೆಂಬ ರಾಜನು ಆಳುತ್ತಿದ್ದನು. ಅವನು ಮಕ್ಕಳಾಗಬೇಕೆಂಬ ಒಂದು ಕಾರಣದಿಂದ ಒಂದು ದಿವ್ಯವಾದ ಪಿಂಡ(ಉಂಡೆ)ವನ್ನು ತನ್ನ ಇಬ್ಬರು ರಾಣಿಯರಿಗೆ ಭಾಗಮಾಡಿಕೊಟ್ಟನು. ಅವರಿಬ್ಬರಿಗೂ ಪ್ರತ್ಯೇಕವಾಗಿ ಹುಟ್ಟಿದ ಎರಡು ಹೋಳುಗಳನ್ನು ಇವುಗಳಿಂದೇನು ಪ್ರಯೋಜನವೆಂದು ಬಿಸಾಡಲು ಜರೆಯೆಂಬ

ಜರೆಯೆಂಬ ರಕ್ಕಸಿ ಕಂಡು ತಿನಲೆಂದೆರಡು ಪೋಳುವುಸೊಂದು ಕೆಯ್ಯೊಳೆ ಪಿಡಿದೊಡೊಂದೊಂಗಳೊಳ್ ಸಂದಿಸಿ ಮಾನಸರೂಪುಗೊಂಡೊಡೆ ಚೋದ್ಯಂಬಟ್ಟು ಜರಾಸಂಧನೆಂದು ಪೆಸರನಿಟ್ಟು ಬೃಹದ್ಬಳಂಗೆ ಕೊಟ್ಟೊಡೆ ಜರಾಸಂಧನುಂ ಸಾಲ್ವಲನುಮೆಂಬ ದೈತ್ಯನುಮೊಂದಾಗಿ ಮೂವತ್ತೆರಡಕ್ಕೋಹಿಣೀಬಲಂಬೆರಸು ಮಧುರಾಪುರಕ್ಕೆ ವಂದೆನ್ನಂ ಮುತ್ತಿಕೊಂಡೊಡುಪಾಯ ಬಲದೊಳೆ ಸಾಲ್ವಲನಂ ಕೊಂದು ಜರಾಸಂಧಂಗಳ್ಕಿ ಮಧುರಾಪುರಮಂ ಬಿಸುಟ್ಟು ಪೋಗಿ ದ್ವಾರಾವತಿಯಂ ಸಮುದ್ರಮೆ ನೀರ್ಗಾದಿಗೆಯಾಗಿ ಮಾಡಿದೆನಿನ್ನುಂ ಯಾದವರ ಸೆಱೆಗಳೆಲ್ಲಾತನಲ್ಲಿರ್ದರಾತನುಂ ಭೀಮನ ಕೆಯ್ಯೊಳಲ್ಲದೆ ಸಾಯನೆಂಬುದಾದೇಶಮದಱೆನಿಮ್ಮಿಷ್ಟಿಯುಂ ಸಮಸ್ತ ಬಲಂಬೆರಸು ಭೀಮಾರ್ಜುನರಂ ಪೇಳ್ವುದೆಂದು ಧರ್ಮಪುತ್ರನನೊಡಂಬಡಿಸಿ ನುಡಿದು ಮಧುರಾಪುರಮನೆಯ್ದಿ ಬೃಹದ್ಬಳತನೂಜನಲ್ಲಿಗೆ ಧರ್ಮಯುದ್ಧಮಂ ಬೇಡಿಯಟ್ಟಿದೊಡೆ-

ಮ॥ ಕಲಿ ಮಾರ್ಕೊಳ್ಳದೆ ಕೊಟ್ಟು ಮೆಯ್ಯೊಳೆ ಸಿಡಿಲ್ ತಾಪಂತೆವೋಲ್ ತಾಗೆ ಮು
ಯ್ಗಲಿ ಭೀಮಂ ಪೆಱಪಿಂಗದಾಂತು ಪಲವುಂ ಬಂಧಂಗಳಿಂ ತಳ್ತು ತ ।
ತ್ಕುಲಶೈಲಂ ಕುಲಶೈಲದೊಳ್ ಕಲುಷದಿಂ ಪೋರ್ವಂತೆವೋಲ್ ಪೋರ್ದು ನೆ
ಯ್ದಿಲ ಕಾವಂ ತುದಿಗೆಯ್ದೆ ಸೀಳ್ವ ತೆಱದಿಂ ಸೀಳ್ದಂ ಜರಾಸಂಧನಂ ॥ ೨೭

ವ॥ ಅಂತು ದೃಢ ಕಠಿನ ಹೃದಯ ಬಂಧನಂ ಜರಾಸಂಧನಂ ಕೊಂದುಮಾತನ ಮಗಂ ಕ್ಷೇಮಧೂರ್ತಿಯಂ ರಾಜ್ಯದೊಳ್ ನಿಱೆಸಿ ಜರಾಸಂಧನೇಱುವ ರಥಮಂ ತರಿಸಿ

ರಾಕ್ಷಸಿಯು ಅವನ್ನು ತಿನ್ನಲೆಂದು ಎತ್ತಿಕೊಂಡು ಎರಡು ಹೋಳುಗಳನ್ನು ಒಂದೇ ಕಯ್ಯಲ್ಲಿ ಹಿಡಿಯಲಾಗಿ ಒಂದು ಮತ್ತೊಂದರಲ್ಲಿ ಸೇರಿಕೊಂಡು ಮನುಷ್ಯರೂಪವನ್ನು ತಾಳಲು ಆಶ್ಚರ್ಯಪಟ್ಟು ಜರಾಸಂಧನೆಂದು ನಾಮಕರಣಮಾಡಿ ಬೃಹದ್ಬಳನಿಗೆ ಕೊಟ್ಟಳು. ಜರಾಸಂಧನೂ ಸಾಲ್ವಲನೆಂಬ ರಾಕ್ಷಸನೂ ಒಂದಾಗಿ ಮೂವತ್ತೆರಡ ಕ್ಷೋಹಿಣೀ ಸೈನ್ಯದಿಂದ ಕೂಡಿ ಮಧುರಾಪಟ್ಟಣಕ್ಕೆ ಬಂದು ನನ್ನನ್ನು ಮುತ್ತಿಕೊಂಡರು. ಉಪಾಯುಬಲದಿಂದ ಸಾಲ್ವಲನನ್ನು ಕೊಂದು ಜರಾಸಂಧನಿಗೆ ಹೆದರಿ ಮಧುರಾಪಟ್ಟಣವನ್ನು ಬಿಟ್ಟು ದ್ವಾರಾವತಿಗೆ ಹೋಗಿ ಸಮುದ್ರವನ್ನೇ ನೀರಿನ ಕಂದಕವನ್ನಾಗಿ ಮಾಡಿಕೊಂಡು ಅಲ್ಲಿಯೇ ನೆಲೆಸಿದೆ. ಇನ್ನೂ ಸೆರೆಯಾಗಿರುವ ಬಂಧಿತರಾದ ಯಾದವರು ಆತನಲ್ಲಿದ್ದಾರೆ. ಅವನು ಭೀಮನ ಕಯ್ಯಲ್ಲಲ್ಲದೆ ಸಾಯುವುದಿಲ್ಲವೆಂಬುದು ಭವಿಷ್ಯವಾಣಿಯ ಆದೇಶ. ನಮ್ಮ ಇಷ್ಟಾರ್ಥವೂ ಅದೇ. ಸಮಸ್ತಸೈನ್ಯದಿಂದ ಕೂಡಿ ನಡೆಯಬೇಕೆಂದು ಭೀಮಾರ್ಜುನರಿಗೆ ತಿಳಿಸು' ಎಂದು ಧರ್ಮರಾಜನನ್ನೊಪ್ಪಿಸಿ ನುಡಿದು ಮಧುರಾಪಟ್ಟಣವನ್ನು ಸೇರಿ ಬೃಹದ್ಬಳ ಪುತ್ರನಾದ ಜರಾಸಂಧನಲ್ಲಿಗೆ ಧರ್ಮಯುದ್ಧವನ್ನಪೇಕ್ಷಿಸಿ ಹೇಳಿ ಕಳುಹಿಸಿದನು. ೨೭. ಶೂರನಾದ ಆ ಜರಾಸಂಧನು ಪ್ರತಿಮಾತಾಡದೆ ಧರ್ಮಯುದ್ಧಕ್ಕೆ ಒಪ್ಪಿ ಶರೀರದ ಮೇಲೆ ಸಿಡಿಲು ಬೀಳುವ ಹಾಗೆ ಬಿದ್ದನು. ಶೂರನಾದ ಭೀಮನು ಹಿಂದಕ್ಕೆ ಸರಿಯದೆ ಎದುರಿಸಿ ಹಲವು ಪಟ್ಟುಗಳಿಂದ ಕೂಡಿ ಕುಲಪರ್ವತವು ಕುಲಪರ್ವತದೊಡನೆ ಕೋಪದಿಂದ ಯುದ್ಧಮಾಡುವ ಹಾಗೆ ಕಾದಿ ಕನ್ನೈದಿಲೆಯ ದಂಟನ್ನು ತುದಿಯವರೆಗೆ ಸೀಳುವ ಹಾಗೆ ಜರಾಸಂಧನನ್ನು ಸೀಳಿದನು. ವ॥ ಹಾಗೆ ಬಲಿಷ್ಠವೂ ಒರಟೂ ಆದ ಹೃದಯಬಂಧವನ್ನುಳ್ಳ ಜರಾಸಂಧನನ್ನು ಕೊಂದು ಆತನ ಮಗ ಕ್ಷೇಮಧೂರ್ತಿಯನ್ನು

ಸಮಸ್ತ ವಸ್ತುಗಳಂ ಕೊಂಡು ಗರುತ್ಮನಂ ನೆನೆದು ಬರಿಸಿ ರಥಮಂ ಚೋದಿಸಲ್ವೇೞ್ದು ಯಾದವರ ಸೆಱೆಗಳುಮಂ ಮುಂದಿಟ್ಟು ನಾರಾಯಣಂ ಭೀಮಾರ್ಜುನರ್ವೆರಸು ಸುಖಪ್ರಯಾಣಂಗಳಿಂದಿಂದ್ರ ಪ್ರಸ್ಥಕ್ಕೆ ವಂದು ಧರ್ಮಪುತ್ರನಂ ಕಂಡು-

ಶಿಖರಿಣಿ॥ ಜರಾಸಂಧಂ ಮುನ್ನಂ ಮಡಿದೊಡಿಳೆ ನಿಷ್ಕಂಟಕಮದ
ಕ್ಕಿರಲ್ವೇಡಿನ್ ನಾಲ್ಕುಂ ದೆಸೆಗೆ ಬೆಸಸಿಂ ನಿಮ್ಮನುಜರಂ ।
ಭರಂಗೆಯ್ವಾಗಳ್ ನೀಂ ಪೆಸರ್ವೆಸರೊಳಾ ನಾಲ್ವರುಮನಾ
ದರಂಗೊಂಡಾ ನಾಲ್ಕು ದೆಸೆಗೆ ಬೆಸಸಿಂ ಬೆಳ್ಕುಱುವಿನಂ ॥ ೨೮

ವ॥ ಅಂತು ಭೀಮಸೇನನನಿಂದ್ರನ ಮೇಲೆ ವೇೞ್ವಂತೆ ಪೂರ್ವ ದಿಗ್ಭಾಗಕ್ಕೆ ವೇೞ್ದು ನಕುಳನಂ ಯಮನನದಿರ್ಪಲ್ವೇೞ್ವಂತೆ ದಕ್ಷಿಣದಿಶಾಭಾಗಕ್ಕೆ ಬೆಸಸಿ ಸಹದೇವನಂ ವರುಣನನದಿರ್಩ಲ್ ನಿಯಮಿಸುವಂತೆ ಪಶ್ಚಿಮ ದಿಗ್ಭಾಗಕ್ಕೆ ವೇೞ್ದು ವಿಕ್ರಮಾರ್ಜುನನಂ ಕುಬೇರನಿಂ ಕಪ್ಪಂಗೊಳಲ್ ಸಮರ್ಪಿಸುವಂತೆ ಉತ್ತರೋತ್ತರಮಾಗಲುತ್ತರದಿಶಾಭಾಗಕ್ಕೆ ವೇೞ್ವಾಗಳ್-

ಚಂ॥ ಅರಿ ನರಪಾಲ ಮೌಳಿಮಣಿಯೊಳ್ ನೆಲೆಗೊಂಡುದು ಶಂಖ ಚಕ್ರ ಚಾ
ಮರ ಪಳಚಿಹ್ನ ಚಿಹ್ನಿತ ಪದಾಕೃತಿ ಬೀಸುವ ಚಾಮರಾಳಿ ಸುಂ ।
ದರಿಯರ ಕೆಯ್ಗಳಿಂ ಬಱಿಕೆ ಬಿೞ್ದುವು ಬೆಳ್ಗೊಡೆ ನೋಡೆ ನೋಡೆ ನಿಂ
ದುರಿದುವು ಸಾಲಭಂಜಿಕೆಗಳೞ್ತುವು ವೈರಿನರೇಂದ್ರಗೇಹದೊಳ್ ॥ ೨೯

ರಾಜ್ಯದಲ್ಲಿ ನಿಲ್ಲಿಸಿ ಜರಾಸಂಧನ ರಥವನ್ನು ಬರಮಾಡಿ ಸಮಸ್ತವಸ್ತುಗಳನ್ನೂ ತೆಗೆದುಕೊಂಡು ಗರುಡನನ್ನು ಧ್ಯಾನಮಾಡಿ ಬರಿಸಿ ರಥವನ್ನು ನಡೆಸುವಂತೆ ಹೇಳಿ ಬಂಧಿತರಾಗಿದ್ದ ಯಾದವರನ್ನು ಮುಂದುಮಾಡಿಕೊಂಡು ನಾರಾಯಣನಾದ ಕೃಷ್ಣನು ಭೀಮಾರ್ಜುನರೊಡಗೂಡಿ ಸುಖಪ್ರಯಾಣಗಳಿಂದ ಇಂದ್ರಪ್ರಸ್ಥಪಟ್ಟಣಕ್ಕೆ ಬಂದು ಧರ್ಮರಾಯನನ್ನು ನೋಡಿ ಹೇಳಿದನು. ೨೮. ಜರಾಸಂಧನು ಸತ್ತುದರಿಂದ ಭೂಮಿಯು ಇನ್ನು ಮೇಲೆ ಕಂಟಕರಹಿತವಾಯಿತು. ಆದುದರಿಂದ ಇನ್ನು ತಡಮಾಡಬೇಡ (ಜೈತ್ರಯಾತ್ರೆಗಾಗಿ) ನಾಲ್ಕು ದಿಕ್ಕುಗಳಿಗೂ ನಿನ್ನ ತಮ್ಮಂದಿರನ್ನು ನೇಮಿಸು. ಕಾರ್ಯಭಾರಮಾಡುವಾಗ ಒಬ್ಬೊಬ್ಬರನ್ನು ಹೆಸರು ಹಿಡಿದು ನಾಲ್ಕು ದಿಕ್ಕುಗಳಿಗೂ ಭಯವುಂಟಾಗುವ ಹಾಗೆ ಆಜ್ಞೆಮಾಡಿ ಕಳುಹಿಸು ಎಂದನು. ವ॥ ಭೀಮಸೇನನು ಇಂದ್ರನ ಮೇಲೆ ದಂಡೆತ್ತಿ ಹೋಗುವ ಹಾಗೆ ಪೂರ್ವದಿಗ್ಭಾಗಕ್ಕೂ ನಕುಲನನ್ನು ಯಮನನ್ನು ನಡುಗಿಸ ಹೇಳಿ ದಕ್ಷಿಣದಿಕ್ಕಿಗೂ ಸಹದೇವನನ್ನು ವರುಣನನ್ನು ಗೆಲ್ಲಲು ಪಶ್ಚಿಮದಿಗ್ಭಾಗಕ್ಕೂ ಗೊತ್ತುಮಾಡಿ ವಿಕ್ರಮಾರ್ಜುನನನ್ನು ಕುಬೇರನಿಂದ ಕಪ್ಪಕಾಣಿಕೆಯನ್ನು ಪಡೆಯಲು ಅಭಿವೃದ್ಧಿಯಾಗುವ ಹಾಗೆ ಉತ್ತರದಿಗ್ಭಾಗಕ್ಕೂ ನಿಯಮಿಸಿದನು. ೨೯. ಶತ್ರುರಾಜರ ರತ್ನಕಿರೀಟಗಳಲ್ಲಿ ಶಂಖ, ಚಕ್ರ, ಚಾಮರ, ಮತ್ತು ನೇಗಿಲುಗಳಿಂದ (ರೇಖೆ) ಕೂಡಿದ ಪಾದಗಳ ಆಕಾರವು ಚಕ್ರವರ್ತಿ ಚಿಹ್ನೆಗಳು ಸ್ಥಿರವಾಗಿ ನಿಂತವು. (ಅಂದರೆ) ಅವರು ಚಕ್ರವರ್ತಿಯಾದ ಧರ್ಮರಾಜನ ಪಾದಗಳನ್ನು ತಮ್ಮ ತಲೆಯಲ್ಲಿ ಧರಿಸಿಕೊಂಡು ಅವನ ಆಜ್ಞಾಧಾರಕರಾದರು. ಅವರಿಗೆ ಬೀಸುತ್ತಿದ್ದ ಚಾಮರಗಳ ಸಮೂಹಗಳು ಸುಂದರಸ್ತ್ರೀಯರ ಕಯ್ಯಿಂದ ಜಾರಿಬಿದ್ದುವು. ಶ್ವೇತಚ್ಛತ್ರಗಳು

**ವ॥ ಅಂತು ವಿಜಯಂ ತನ್ನ ದಿಗ್ವಿಜಯದೊಳಾದ ವಿಜಯಚಿಹ್ನಂಗಳ್ ಮುನ್ನಮೆ ನೆಗಟಿ ವಿಜಯದ ಗುಡಿವಿಡಿಸಿ ಅರಿ ನೃಪರಂ ಛೇದಿಸಿ ಪಾಂಚಾಳರಂ ಚಾಳಿಸಿ ಗಾಂಧರ್ವರಂ ವಿರಥರ್ಮಾಡಿ ಕೌಳಾಧೀಶರಂ ಸಾಧಿಸಿ ಕಿಂಪುರುಷರಂ ಕಾಪುರುಷರ್ಮಾಡಿ ಬಾಹ್ಲಿಕರನನೀಕರಿಸಿ ಮಾಳವಿಗರಂ ಕಲಿಗಿವಿಗೆಯ್ಯಲೀಯದಾಟಂದು ನಿಜ ನಾಮಾಂಕಿತ ಸಾಯಕಂಗಳಿಂದೆಚ್ಚು ನಚ್ಚಂ ಕಿಡಿಸಿ-**

**ಮ॥ ಉಱದಿರ್ಪಂತೆಮಗಾವ ಗರ್ವಮಿಱೆಯಲ್ವೇಡೆಮ್ಮನೆಮ್ಮುಳ್ಳುದಂ**
**ನೆಱೆಕೊಂಡೆಮ್ಮಯ ಬಾಳ್ವೆಯೊಳ್ ನಿಱೆಸುವಂ ನೀನೆಂದು ತಂದಿತ್ತು ಕೆ ॥**
**ಯ್ಸೆಱೆಯಂ ಕೊಟ್ಟಳವಟ್ಟ ಸಾರ ಧನಮಂ ಮೂವಿಟ್ಟಿಗಂ ಪೂಣ್ಬು ಕಾ**
**ಲ್ಗೆಱಗಿತ್ತಂತರಿಗಂಗೆ ಬೆರ್ಚಿ ಭಯದಿಂ ಗ್ರಾಮಂ ಕುಳಂ ರಾಜಕಂ ॥ ೩೦**

**ವ॥ ಮತ್ತಮಲ್ಲಿ ಕೆಲರಂ ಮೈತ್ರಾಸನ ವೃತ್ತಿಯೊಳ್ ನಿಱೆಸಿ ಕೆಲರನುದ್ಧತಾ ಪ್ರತಿಮಹಿತರ್ಮಾಡಿ ಕೆಲರನುಚ್ಚಾಟಿಸಿ ಸರ್ವಹರಣಂಗೆಯ್ದು ಕಸವರಮೆಲ್ಲಮನಿಂದ್ರಪ್ರಸ್ಥಕ್ಕೆ ಕಟೆಪಿ**

ನೋಡುತ್ತಿರುವ ಹಾಗೆಯೇ ನಿಂತು ಉರಿದುವು. ಶತ್ರುರಾಜರ ಅರಮನೆಗಳಲ್ಲಿದ್ದ ಸಾಲುಬೊಂಬೆಗಳು ಅತ್ತವು. ವ॥ ಹಾಗೆ ಅರ್ಜುನನು ತನ್ನ ದಿಗ್ವಿಜಯದಲ್ಲುಂಟಾದ ವಿಜಯಚಿಹ್ನೆಗಳನ್ನು ಮೊದಲೇ ಪ್ರದರ್ಶಿಸಿದನು. ಜಯಧ್ವಜವನ್ನೇರಿಸಿ ಶತ್ರುರಾಜರನ್ನು ಕತ್ತರಿಸಿ ಪಾಂಚಾಲರಾಜರನ್ನು ಚಲಿಸುವಂತೆ ಮಾಡಿ ಗಂಧರ್ವರಾಜರನ್ನು ರಥವಿಲ್ಲದವರನ್ನಾಗಿ ಮಾಡಿ ಕಾಳಾಧೀಶ್ವರನನ್ನು ಗೆದ್ದು ಕಿಂಪುರುಷರನ್ನು ಅಲ್ಪರನ್ನಾಗಿಸಿ ಬಾಹ್ಲೀಕರನ್ನು ಸೈನ್ಯವಿಲ್ಲದವರನ್ನಾಗಿ ಮಾಡಿ ಮಾಳವಿಕರನ್ನು ಉದಾಸೀನರಾಗಿರಲು ಬಿಡದೆ ಮೇಲೆಬಿದ್ದು ತನ್ನ ಹೆಸರಿನ ಗುರುತುಗಳಿಂದ ಕೂಡಿದ ಬಾಣಗಳಿಂದ ಹೊಡೆದು ಅವರ ನಂಬಿಕೆಯನ್ನು ಕೆಡಿಸಿದನು. ೩೦. ಗ್ರಾಮದವರೂ ಕುಲದವರೂ ರಾಜರೂ ಹೆದರಿ ನಾವು ನಿನ್ನ ವಿಷಯದಲ್ಲಿ ಅಲಕ್ಷ್ಯದಿಂದಿರುವಂತೆ ನಮಗೇನಹಂಕಾರವಿದೆ. ನಮ್ಮೊಡನೆ ಯುದ್ಧಮಾಡಬೇಡ; ನಮ್ಮಲ್ಲಿರುವದನ್ನು ಪೂರ್ಣವಾಗಿ ತೆಗೆದುಕೊಂಡು ನಮ್ಮನಮ್ಮ ಬದುಕುಗಳಲ್ಲಿ ಸಿಥಿಪಡಿಸು (ನಿಯಮಿಸು) ನೀನು, ಎಂದು ನಿಷ್ಕೃಷ್ಟವೂ ಸಾರಭೂತವೂ ಆದ ಧನವನ್ನು ತಮ್ಮ ಬೊಗಸೆಯಲ್ಲಿ ಕೊಟ್ಟು ಕೈಸೆರೆಯಲ್ಲಿದ್ದವರೆನ್ನೆಲ್ಲಾ ಬಿಟ್ಟು ಕೊಟ್ಟು* ಮೂರು ವಿಧವಾದ ಬಿಟ್ಟಿಯ ಕೆಲಸವನ್ನೂ ಮಾಡುತ್ತೇವೆ ಎಂದು ಒಪ್ಪಿ ಪ್ರತಿಜ್ಞೆಮಾಡಿ ಅರ್ಜುನನ ಕಾಲಿಗೆ ನಮಸ್ಕರಿಸಿದರು. ವ॥ ಅಲ್ಲದೆ ಅಲ್ಲಿ ಕೆಲವರನ್ನು ಸ್ನೇಹಿತರನ್ನಾಗಿ ಭಾವಿಸಿದನು. ಉದಾಸೀನರಾಗಿರುವ ಹಾಗೆ ಇದ್ದು ಮಲೆತಿದ್ದ ಮತ್ತೆ ಕೆಲವರನ್ನು ಬೇರೆ ರಾಜ್ಯಕ್ಕೆ ಓಡಿಸಿದನು. ಕೆಲವರನ್ನು ಎಬ್ಬಿಸಿ ಓಡಿಸಿ ಎಲ್ಲವನ್ನೂ ಕಸಿದುಕೊಂಡು, ಚಿನ್ನವನ್ನೆಲ್ಲ (ದ್ರವ್ಯವನ್ನೆಲ್ಲ) ಇಂದ್ರಪ್ರಸ್ಥಕ್ಕೆ

---

* ವ್ಯಕ್ತ ವಿಶೇಷ -ಸೋತ ರಾಜನು ಗೆದ್ದವನಿಗೆ ಮಾಡಬೇಕಾದ ಮೂರು ಬಗೆಯ ವಿಷ್ಟಿಕರ್ಮಗಳು - ಶೋಧನಕರ್ಮ, ವಹನಕರ್ಮ ಮತ್ತು ಅಪನಯನಕರ್ಮ. ಅಂದರೆ ಶಿಬಿರ, ಮಾರ್ಗ, ಸೇತು, ಬಾವಿ ಮೊದಲಾದವುಗಳನ್ನು ಶೋಧನಮಾಡಿ ಸರಿಯಾಗಿಡುವುದು ಶೋಧನಕರ್ಮ; ಯಂತ್ರ, ಆಯುಧ, ಆವರಣ, ಉಪಕರಣಗಳನ್ನು ಸಾಗಿಸಿಕೊಡುವುದು ವಹನ ಕರ್ಮ; ಯುದ್ಧದಲ್ಲಿ ಗಾಯಗೊಂಡವರನ್ನೂ ಸತ್ತವರನ್ನೂ ಅವರ ಆಯುಧಕವಚಸಮೇತ ತಂದೊಪ್ಪಿಸುವುದು ಅಪನಯನಕರ್ಮ. (ಅರ್ಥಶಾಸ್ತ್ರ ೧೦-೪)

ಕಾಶ್ಮೀರ ಹಿಮವಂತ ಹೇಮಕೂಟ ಕೈಳಾಸ ಪಾರಿಯಾತ್ರಶ್ವೇತಶೃಂಗ ಗಂಧಮಾದನಗಿರಿ ನಿಕಟವರ್ತಿಗಳಪ್ಪ ಪರ್ವತರಾಜರನಪಗತತೇಜರ್ಮಾಡಿ ಕಸವರಮಂ ಕೆಯ್ಗೆಮಾಡಿ ಮೇರುಪರ್ವತದ ತೆಂಕಣ ತಪ್ಪಲೊಳ್ ದ್ವಾದಶಯೋಜನ ಪ್ರಮಾಣಮಪ್ಪ ಜಂಬೂವೃಕ್ಷದ ಕೆಲದೊಳಡಸಿ ರಸದ ತೊಱೆ ಪರಿವಂತೆ ಕನಕಗಿರಿಯನಲೆದು ಪರಿವ ಜಂಬೂನದಮೆಂಬ ತೊಱೆಯೊಳ್ ಪುಟ್ಟಿದ ಜಾಂಬೂನದಮೆಂಬ ಪೊನ್ನ ಪಾಸಜೆಗಳಂ ಕಂಡು-

ಕಂ॥ ಗಾಂಡೀವದ ಕೊಪ್ಪುಗಳೊಳ್
ಖಂಡಿಸಿ ತತ್ತಟದ ಕನಕ ರೇಣುವನವನಾ ।
ಖಂಡಲ ತನಯನಸುಂಗೊಳೆ
ಖಂಡಿಸಿದಂ ನಿಶಿತ ಪರಶು ಶರಸಮಿತಿಗಳಿಂ ॥ ೩೧

ವ॥ ಅಂತು ಕನಕರೇಣುಗಳ್ ಪುಟ್ಟಿದ ಪಾಸಱೆಗಳುಮಂ ಕನಕದ ಪಿರಿಯ ಸೆಲೆಗಳುಮ ನೊಟ್ಟಿ ಬೆಟ್ಟಾಗಿ ಪುಂಜಿಸಿ-

ಚಂ॥ ಬರಿಸಿ ಘಟೋತ್ಕಚಂಬೆರಸು ದಾನವಸೇನೆಯನೀಗಳೀ ಬಲಂ
ಬೆರಸಿವನಿಂತು ಪೊತ್ತು ನಡೆ ನಮ್ಮ ಪುರಕ್ಕೆನೆ ತದ್ಗಿರೀಂದ್ರ ಕಂ ।
ದರ ಕನಕಾಚಳಂಗಳೆನಿತುಂಟನಿತಂ ತವೆ ಹೇಮ ರೇಣುಗ
ಳ್ವೆರಸು ಕಡಂಗಿ ಪೊತ್ತು ನಡೆದತ್ತು ಘಟೋತ್ಕಚರೌದ್ರಸಾಧನಂ ॥ ೩೨

ವ॥ ಆಗಳ್ ಪರಾಕ್ರಮಧವಳಂ ತನ್ನ ಪರಾಕ್ರಮಮಂ ಮೆಱೆಯಲೆಂದು ಕೈಳಾಸದ ಮೇಗಣ್ಗೆ ವಂದು ಕುಬೇರನಿಂ ಕಪ್ಪಂಗೊಂಡು ಪೊನ್ನಂ ಜಕ್ಕರೆಕ್ಕೆಯಿಂ ಪೊತ್ತು ಬರೆ ತಡೆಯದಿಂದ್ರ ಪ್ರಸ್ಥಕ್ಕೆ ಬಂದನಿತ್ತ ಭೀಮನುಂ ಮೂಡಣ ದಿಶಾಭಾಗಮಮಂ ಬಾಯ್ಕೇಳಿಸಿ ದೇವೇಂದ್ರನ

ಕಳುಹಿಸಿದನು. ಕಾಶ್ಮೀರ, ಹಿಮವಂತ, ಹೇಮಕೂಟ ಕೈಲಾಸ ಪಾರಿಯಾತ್ರ ಶ್ವೇತಶೃಂಗ ಗಂಧಮಾದನವೇ ಮೊದಲಾದ ಪರ್ವತಗಳ ತಪ್ಪಲಿನಲ್ಲಿದ್ದ ಪರ್ವತರಾಜರುಗಳನ್ನು ತೇಜೋಹೀನರನ್ನಾಗಿ ಮಾಡಿ ಅವರ ಐಶ್ವರ್ಯವನ್ನು ಸ್ವಾಧೀನಪಡಿಸಿಕೊಂಡನು. ಮೇರುಪರ್ವತದ ದಕ್ಷಿಣ ತಪ್ಪಲಿನಲ್ಲಿ ಹನ್ನೆರಡು ಯೋಜನದ ಅಳತೆಯನ್ನುಳ್ಳ ನೇರಳೆಯ ಮರದ ಕೆಳಗೆ ಅಗೆದು ಕೊರೆದು ಪಾದರಸದ ನದಿಯು ಹರಿಯುವಂತೆ ಮೇರುಪರ್ವತವನ್ನು ತೋಡಿ ಹರಿಯುವ ಜಂಬೂನದವೆಂಬ ನದಿಯಲ್ಲಿ ಹುಟ್ಟಿದ ಜಾಂಬೂನದವೆಂಬ ಚಿನ್ನದ ಹಾಸುಬಂಡೆಯನ್ನು ನೋಡಿದನು. ೩೧. ಗಾಂಡೀವದ ತುದಿಯ ಭಾಗದಿಂದ ಕತ್ತರಿಸಿ ಆ ಜಂಬೂನದಿಯ ತೀರದ ಚಿನ್ನದ ಬಂಡೆಗಳನ್ನು ಪ್ರಾಣಸಹಿತ (ಸಚೇತನವಾಗಿ) ಹರಿತವಾದ ಕೊಡಲಿ ಮತ್ತು ಬಾಣಸಮೂಹದಿಂದ ಕತ್ತರಿಸಿದನು. ವ॥ ಚಿನ್ನದ ರೇಣುಗಳಿಂದ ಕೂಡಿದ ಹಾಸುಬಂಡೆಗಳನ್ನೂ ದೊಡ್ಡಶಿಲೆ ಗಳನ್ನೂ ರಾಶಿಯನ್ನಾಗಿ ಮಾಡಿದನು. ೩೨. ಘಟೋತ್ಕಚನನ್ನು ರಾಕ್ಷಸಸೇನೆಯೊಡನೆ ಬರಮಾಡಿ ಈಗಲೇ ಈ ಸೈನ್ಯದೊಡನೆ ಇವುಗಳನ್ನು ಹೀಗೆಯೇ ಹೊತ್ತುಕೊಂಡು ನಮ್ಮ ಪಟ್ಟಣಕ್ಕೆ ನಡೆ ಎನ್ನಲು ಆ ಬೆಟ್ಟಗಳ ಕಣಿವೆಗಳಲ್ಲಿರುವ ಚಿನ್ನದ ಬೆಟ್ಟಗಳೆಷ್ಟಿತ್ತೋ ಅಷ್ಟನ್ನೂ ಪೂರ್ಣವಾದ ಚಿನ್ನದ ರೇಣುಗಳೊಡನೆ ಉತ್ಸಾಹದಿಂದ ಹೊತ್ತು ಘಟೋತ್ಕಚನ ಆ ಭಯಂಕರವಾದ ಸೈನ್ಯವು ಇಂದ್ರಪ್ರಸ್ಥಕ್ಕೆ ನಡೆಯಿತು. ವ॥ ಆಗ ಅರ್ಜುನನು ತನ್ನ ಪೌರುಷವನ್ನು ಪ್ರದರ್ಶನಮಾಡಬೇಕೆಂದು ಕೈಲಾಸಪರ್ವತದ

**ವಜ್ರಮುಮಿಂದ್ರಾಣಿಯ ಕೈಗನ್ನಡಿಯುಮುೞಿಯೆ ಸಮಸ್ತ ವಸ್ತುಗಳಂ ತಂದಂ ಸಹದೇವನುಂ ಪಡುವಣ ದೆಸೆಯ ಮಂಡಳಿಕರನದಿರ್ಪಿಯುಮುದಿರ್ಪಿಯುಂ ಕೊಂಡು ವರುಣನ ಮಕರಮುಂ ವರುಣಾನಿಯ ಕೊರಲೊಳಯ್ದೆ ಮಿನುಗುಮುೞಿಯೆಯುೞಿದ ವಸ್ತುಗಳೆಲ್ಲಮಂ ತಂದು ಮುಂದಿಟ್ಟಂ ನಕುಳನುಂ ತೆಂಕಣ ದೆಸೆಯ ಮಲೆಪರಂ ಮಂಡಳಿಕರುಮನಸಿಯರಾಗೆ ಕವರ್ದುಕೊಂಡು ಲಂಕೆಯ ಮೇಗೆ ನಡೆದು ವಿಭೀಷಣಂ ತನಗೆ ಬಾಯ್ಕೇಳದಿರ್ದೊಡೆ ವಿಕ್ರಮಾರ್ಜುನಂಗೆ ಪೇಳ್ದಟ್ಟಿದೊಡೆ-**

**ಉ॥ ತೊಂಡಿನೊಳುರ್ಕಿ ಕೆಟ್ಟ ದಶಕಂಠನನಕ್ಕಟ ಕೊಂಡ ಪೆರ್ಮರುಳ್**
**ಕೊಂಡುದೆ ತನ್ನುಮಂ ಬಿಸುಡು ನೀಂ ಬಲಗರ್ವಮನಾ ಸಮುದ್ರ ಮೇ ।**
**ಬಂಡಮೊ ಪಾಯ್ದೊಡೆಂದು ನಿಜ ಸಾಯಕದೊಳ್ ಬರೆದೆಚ್ಚು ಕಪ್ಪಮಂ**
**ಕೊಂಡನವುಂಕಿ ಲಂಕೆಯ ವಿಭೀಷಣನಂ ಪರಸೈನ್ಯಭೈರವಂ ॥ ೩೩**

**ವ॥ ಅಂತು ನಾಲ್ಕುಂ ಸಮುದ್ರಂಗಳ ನೀರುೞಿಯೆ ರತ್ನಂಗಳುಮಂ ದಿಶಾಗಜಂಗಳುೞಿಯೆ ಗಜಂಗಳುಮಂ ಆದಿತ್ಯನ ಕುದುರೆಗಳುೞಿಯೆ ಕುದುರೆಗಳುಮಂ ದೇವೇಂದ್ರನ ಸುರಭಿಯುಮೀಶ್ವರನ ನಂದಿಯುಮುೞಿಯೆ ಗೋವ್ರಜಂಗಳುಮನಿಂದ್ರಪ್ರಸ್ಥಕ್ಕೆ ತೆರಳ್ಚಿ ಬೞಿಯಂ**

ಮೇಲಕ್ಕೆ ಬಂದು ಕುಬೇರನಿಂದ ಕಪ್ಪವನ್ನು ಸ್ವೀಕರಿಸಿ ಯಕ್ಷರು ಚಿನ್ನವನ್ನು ಗುಂಪಾಗಿ ಹೊತ್ತು ಬರಲು ಸಾವಕಾಶಮಾಡದೆ ಇಂದ್ರಪ್ರಸ್ಥಕ್ಕೆ ಬಂದನು. ಈ ಕಡೆ ಭೀಮನೂ ಪೂರ್ವದಿಕ್ಕಿನ ಭಾಗವನ್ನು ಆಜ್ಞಾಧೀನರನ್ನಾಗಿ ಮಾಡಿ ದೇವೇಂದ್ರನ ವಜ್ರಾಯುಧವನ್ನೂ ಶಚೀದೇವಿಯ ಕೈಗನ್ನಡಿಯನ್ನೂ ಬಿಟ್ಟು ಮಿಕ್ಕ ಸಮಸ್ತವಸ್ತುಗಳನ್ನೂ ತಂದನು. ಸಹದೇವನೂ ಪಶ್ಚಿಮದಿಕ್ಕಿನ ಸಾಮಂತರನ್ನು ನಡುಗಿಸಿಯೂ ನಾಶಮಾಡಿಯೂ ಅವರ ಐಶ್ವರ್ಯವನ್ನೂ ತೆಗೆದುಕೊಂಡು ವರುಣನ ವಾಹನವಾದ ಮಕರವನ್ನೂ ಅವನ ಹೆಂಡತಿಯ ಮಾಂಗಲ್ಯವನ್ನೂ ಉಳಿದು ಮಿಕ್ಕೆಲ್ಲ ವಸ್ತುಗಳನ್ನೂ ತಂದು ಮುಂದಿಟ್ಟನು. ನಕುಳನು ದಕ್ಷಿಣ ದಿಕ್ಕಿಗೆ ಗರ್ವಿಷ್ಠರನ್ನೂ ಸಾಮಂತರನ್ನೂ ಕೃಶವಾಗುವ ಹಾಗೆ ದೋಚಿಕೊಂಡು ವಿಭೀಷಣನು ತನಗೆ ಅಧೀನವಾಗದಿರಲು ಅರ್ಜುನನಿಗೆ ಹೇಳಿ ಕಳುಹಿಸಿದನು. ೩೩. ಪರಸೈನ್ಯಭೈರವನಾದ ಅರ್ಜುನನು ಅಯ್ಯೋ ದೌಷ್ಟದಿಂದ ಉಬ್ಬಿ ಕೆಟ್ಟ ಆ ರಾವಣನನ್ನು ಹಿಡಿದಿದ್ದ ಪೆಡಂಭೂತವೇ ನಿನ್ನನ್ನೂ ಹಿಡಿದಿದೆಯೆ? ನಿನ್ನ ಬಲಗರ್ವವನ್ನು ಬಿಸಾಡು; ನಾನು ನಿನ್ನ ಮೇಲೆ ಹಾಯ್ದು ಬಂದರೆ ನಿನ್ನ ಆ ಸಮುದ್ರವು ಯಾವ ಪ್ರಯೋಜನಕ್ಕೆ ಬರುತ್ತದೆ ಎಂದು ತನ್ನ ಬಾಣದಲ್ಲಿ ಬರೆದು ಪ್ರಯೋಗಿಸಿ ಆ ಲಂಕೆಯ ವಿಭೀಷಣನನ್ನು ಅಡಗಿಸಿ ಕಪ್ಪವನ್ನು ಕೊಂಡನು. ವ॥ ಹಾಗೆ ನಾಲ್ಕು ಸಮುದ್ರಗಳ ನೀರನ್ನುಳಿದು ಮಿಕ್ಕೆಲ್ಲ ರತ್ನಗಳನ್ನೂ ದಿಗ್ಗಜಗಳನ್ನೂ ಬಿಟ್ಟು ಮಿಕ್ಕೆಲ್ಲ ಆನೆಗಳನ್ನೂ ಸೂರ್ಯನ ಕುದುರೆಗಳನ್ನುಳಿದು ಮಿಕ್ಕೆಲ್ಲ ಕುದುರೆಗಳನ್ನೂ ದೇವೇಂದ್ರನ ಕಾಮಧೇನುವನ್ನೂ ಈಶ್ವರನ ನಂದಿಯನ್ನೂ ಬಿಟ್ಟು ಮಿಕ್ಕೆಲ್ಲ ಗೋಸಮೂಹಗಳನ್ನೂ ಇಂದ್ರಪ್ರಸ್ಥದಲ್ಲಿ ಕೂಡಿಸಿದರು. ಬಳಿಕ ಕೃಷ್ಣನ ಅಭಿಪ್ರಾಯದ

ನಾರಾಯಣನ ಮತದೊಳ್ ಹಸ್ತಿನಾಪುರದೊಳಿರ್ದ ಧೃತರಾಷ್ಟ್ರ ವಿದುರ ಗಾಂಗೇಯ ದ್ರೋಣಾಶ್ವತ್ಥಾಮ ಕೃಪಬಾಹ್ಲೀಕ ಸೋಮದತ್ತ ಭಗದತ್ತ ಭೂರಿಶ್ರವಃ ಕರ್ಣ ಶಲ್ಯ ಶಕುನಿ ಸೈಂಧವ ದುರ್ಯೋಧನ ದುಶ್ಶಾಸನಾದಿಗಳ್ಗೆಲ್ಲಂ ಬೞಿಯನಟ್ಟಿ ಬರಿಸಿ ಶಿಶುಪಾಲಾದಿಗಳಪ್ಪನೇಕಾಧೀಶ್ವರರೆಲ್ಲರುಮಂ ಬರಿಸಿ ವ್ಯಾಸರ್ ಮೊದಲಾಗೆ ಬ್ರಹ್ಮಋಷಿಯರೆಲ್ಲರುಮಂ ಬರಿಸಿ ತುೞಿಲ ಪರಕೆಯ ಸಮಾನ ಪ್ರತಿಪತ್ತಿಯಿಂ ಕಿಱಿಪಿರಿಯರಱಿದು ಪೊಡೆವಟ್ಟು ಪರಸಿಯಪ್ಪಿಕೊಂಡು ನುಡಿದುಂ ನೋಡಿಯುಂ ನಕ್ಕುಂ ಕೆಯ್ಯಂ ಪಿಡಿದುಂ ಬಲ್ಲಿದಿರೆ ಎಂದು ಪ್ರಿಯದೊಳಂ ಬಿರ್ದಿನೊಳಂ ಸಂತಸಂಬಡಿಸಿ ಶುಭ ದಿನ ವಾರ ನಕ್ಷತ್ರ ಯೋಗ ಕರಣ ಮುಹೂರ್ತದೊಳಿಂದ್ರಪ್ರಸ್ಥಕ್ಕೆ ಉತ್ತರ ದಿಗ್ಭಾಗದೊಳ್ ಸಹಸ್ರ ಯೋಜನ ಪ್ರಮಾಣದೊಳ್ ಯಾಗಮಂಟಪಮಂ ಸಮೆದು ಮಯನ ಕೊಟ್ಟ ಸಭಾಮಂಟಪದೊಳ್ ಬ್ರಹ್ಮಋಷಿಯರುಮನರಸುಮಕ್ಕಳುಮನೆಡೆಯಱಿದಿರಿಸಿ ಯಜ್ಞದ್ರವ್ಯಂಗಳೆಲ್ಲಮಂ ನೆರಪಿ ಮಹಾವಿಭವದೊಳ್ ಶಮೀ ಪಾರ್ಶ್ವತಳ ದಕ್ಷಿಣಾಶಾಲೆಯೊಳ್ ಹಿರಣ್ಯದಾನಮಂ ಮಾಡಿ ವೇದಿನಿಹಿತಂಗಳಪ್ಪಾಹವನೀಯ ದಕ್ಷಿಣ ಗಾರ್ಹಪತ್ಯಂಗಳೆಂಬ ಮೂಱುಂ ಕೊಂಡಂಗಳೊಳುತ್ತರವೇದಿಯೊಳಗ್ನಿಸಂಧಾನಂಗೆಯ್ದು ವ್ಯಾಸ ಕಶ್ಯಪ ವಿಶ್ವಾಮಿತ್ರ ಭಾರದ್ವಾಜ ಬ್ರಹ್ಮಾಧ್ವರ್ಯ್ವಾಗ್ನೀಧ್ರ ಮೈತ್ರಾವರುಣಾಗ್ನಿ ಪರಿಚಾರಕೋದ್ಗಾತೃ ನೇತೃ ಹೋತೃ ಜಮದಗ್ನ್ಯಾದಿಗಳಪ್ಪ ಷೋಡಶರ್ತ್ವಿಜರ್ಕಳಿಂ ಬೇಳಲ್ವೇೞ್ದು ಧರ್ಮಪುತ್ರಂ ಸಪತ್ನಿ ಯಜಮಾನನಾಗಿರ್ದಾಗಳ್-

ಪ್ರಕಾರ ಹಸ್ತಿನಾಪುರದಲ್ಲಿದ್ದ ಧೃತರಾಷ್ಟ್ರ ವಿದುರ ಭೀಷ್ಮ ದ್ರೋಣಾಶ್ವತ್ಥಾಮ ಕೃಪ ಬಾಹ್ಲೀಕ ಸೋಮದತ್ತ ಭಗದತ್ತ ಭೂರಿಶ್ರವ ಕರ್ಣ ಶಲ್ಯ ಶಕುನಿ ಸೈಂಧವ ದುರ್ಯೋಧನ ದುಶ್ಶಾಸನನೇ ಮೊದಲಾದವರನ್ನೆಲ್ಲ ದೂತರನ್ನು ಕಳುಹಿಸಿ ಬರಮಾಡಿಕೊಂಡರು. ಶಿಶುಪಾಲನೇ ಮೊದಲಾದ ಅನೇಕ ಚಕ್ರವರ್ತಿಗಳನ್ನು ಬರಿಸಿದರು. ವ್ಯಾಸರೇ ಮೊದಲಾದ ಬ್ರಹ್ಮಋಷಿಗಳನ್ನು ನಮಸ್ಕಾರ ಆಶೀರ್ವಾದ ಸಮಾನಸತ್ಕಾರಗಳಿಂದ ಕಿರಿಯರು ಹಿರಿಯರು ಎಂಬುದನ್ನು ತಿಳಿದು ನಮಸ್ಕರಿಸಿ ಆಶೀರ್ವದಿಸಿ ಆಲಿಂಗಿಸಿದರು. ಮಾತನಾಡಿದರು, ನೋಡಿದರು, ನಕ್ಕರು, ಹಸ್ತಲಾಘವವನ್ನಿತ್ತು ಕ್ಷೇಮವಾಗಿದ್ದೀರಾ ಎಂದು ಪ್ರಶ್ನೆಮಾಡಿದರು. ಪ್ರೀತಿಯಿಂದಲೂ ಆತಿಥ್ಯದಿಂದಲೂ ಸಂತೋಷಪಡಿಸಿದರು, ಶುಭದಿನ ವಾರ ನಕ್ಷತ್ರ ಯೋಗ ಕರಣ ಮುಹೂರ್ತದಲ್ಲಿ ಇಂದ್ರಪ್ರಸ್ಥಕ್ಕೆ ಉತ್ತರದಿಗ್ಭಾಗದಲ್ಲಿ ಸಹಸ್ರ ಯೋಜನದಳತೆಯಲ್ಲಿ ಯಾಗಮಂಟಪವನ್ನು ನಿರ್ಮಿಸಿದರು. ಮಯನು ಕೊಟ್ಟ ಸಭಾಮಂಟಪದಲ್ಲಿ ಬ್ರಹ್ಮಋಷಿಯರನ್ನೂ ರಾಜಕುಮಾರರನ್ನೂ ಉಚಿತ ಸ್ಥಳಗಳಲ್ಲಿ ಕುಳ್ಳಿರಿಸಿದರು. ಯಜ್ಞದ್ರವ್ಯಗಳನ್ನೆಲ್ಲ ಒಟ್ಟುಗೂಡಿಸಿದರು. ಮಹಾವೈಭವದಿಂದ ಬನ್ನೀಮರದ ಪಕ್ಕದಲ್ಲಿದ್ದ ದಕ್ಷಿಣಶಾಲೆಯಲ್ಲಿ ಹಿರಣ್ಯದಾನವನ್ನು ಮಾಡಿ ಜಗಲಿಗಳ ಮೇಲೆ ಇಡಲ್ಪಟ್ಟ ಆಹವನೀಯ ದಕ್ಷಿಣ ಗಾರ್ಹ್ಯಪತ್ಯಗಳೆಂಬ ಮೂರು ಕುಂಡಗಳಲ್ಲಿ ಉತ್ತರದ ಜಗಲಿಯಲ್ಲಿ ಅಗ್ನಿಸಂಧಾನಮಾಡಿಕೊಂಡರು. ವ್ಯಾಸ, ಕಶ್ಯಪ, ವಿಶ್ವಾಮಿತ್ರ, ಭಾರದ್ವಾಜ, ಬ್ರಹ್ಮ ಅಧ್ವರ್ಯ, ಆಗ್ನೀಧ್ರ, ಮೈತ್ರಾವರುಣ, ಅಗ್ನಿಪರಿಚಾರಕ,

ಕಂ॥ ಚಾರುತರ ಯಜ್ಞವಿದ್ಯಾ
ಪಾರಗರ ರವಂಗಳಿಂ ಸ್ವಧಾಕಾರ ವಷ ।
ಟ್ಕಾರ ಸ್ವಾಹಾಕಾರೋಂ
ಕಾರ ಧ್ವನಿ ನೆಗಟ್ಟೆ ನೆಗಟ್ಟುದಾಹುತಿಧೂಮಂ ॥ ೩೪

ಬಳಸೆ ಮುಗಿಲ್ಗಳ್ ಕನಕಾ
ಚಳಮಂ ಬಳಸುವವೊಲಿಕ್ಕಿದಾಹುತಿಗಳ ಗೊಂ ।
ದಳದಿನೊಡನೊಗೆಹ ಪೊಗೆಗಳ್
ಬಳಸಿದುವೆಡೆವಿಡದೆ ಕನಕಯೂಪಮನಾಗಳ್ ॥ ೩೫

ಚಂ॥ ಒಡನೆ ದಿಗಂತ ದಂತಿಗಳ ಕೋಡ ಮೊದಲ್ಗಳೊಳೆಯ್ದೆ ಪೊಕ್ಕು ಸಿ
ಪ್ಪಡಸಿದ ಮಾಟ್ಕೆಯಾದುವು ಕರಂಗಳಡಂಗಿ ಕಿಲುಂಬುಗೊಂಡ ಕ ।
ನ್ನಡಿಗೆಣೆಯಾಯ್ತು ಭಾನುವಳಯಂ ದಿವಿಜಾಪಗೆ ನೋಡೆ ಕೂಡೆ ಕ
ರ್ಪಡರ್ದೆಣೆಯಾದುದಾ ಯಮುನೆಗಗ್ಗದ ಯಾಗದ ಧೂಮದೇಟ್ಗೆಯೊಳ್ ॥೩೬

ಕಂ॥ ಗಣನಾತೀತಾಜ್ಯಾಹುತಿ
ಗಣದಿಂದಂ ತಣಿಯೆ ಜಾತವೇದನುಮಾ ಬ್ರಾ ।
ಹ್ಮಣಸಮಿತಿ ಬೇಳೆ ದೇವರ್
ತಣಿಯುಂಡರ್ ನೆರೆದು ದಿವ್ಯಹವ್ಯಾಮೃತಮಂ ॥ ೩೭

ಮ॥ ತ್ರಿದಶೇಂದ್ರಂಗೆ ಯುಧಿಷ್ಠಿರಾಧ್ವರದ ಮಾಸಾಮರ್ಥ್ಯಮಂ ಸೂಟು ಸೂ
ಟದೆ ಪೇಟಲ್ ಪರಿವಂತೆ ಪೊಣ್ಮೆ ಪಲವುಂ ಧೂಮಂಗಳಾ ಹೋಮ ಧೂ ॥
ಮದ ಗಂಧಂ ನಸು ಮುಟ್ಟೆ ದಿವ್ಯಮುಖಮಂ ಕೆಯ್ಕೊಂಡು ಸಗ್ಗಕ್ಕೆ ಪಾ
ಱದುವಾ ಪಾಱಿವ ಜಕ್ಕವಕ್ಕಿಗಳದೇಂ ಪೆಂಪೋ ಮಹಾಯಜ್ಞದಾ ॥ ೩೮

ಉದ್ಗಾತೃ, ನೇತ್ರ, ಹೋತೃ, ಜಮದಗ್ನಿಗಳೇ ಮೊದಲಾದ ೧೬. ಋತ್ವಿಜರುಗಳಿಂದ ಯಜ್ಞ ಮಾಡಹೇಳಿ ಧರ್ಮರಾಜನು ಪತ್ನಿಯಿಂದ ಕೂಡಿ ಯಜಮಾನನಾದನು. ೩೪. ಯಜ್ಞವಿದ್ಯೆಯಲ್ಲಿ ಪೂರ್ಣಪಂಡಿತರಾದವರ ಅತ್ಯಂತ ಮನೋಹರವಾದ ಧ್ವನಿಗಳಿಂದ ಸ್ವಾಹಾಕಾರ, ಸ್ವಧಾಕಾರ, ವಷಟ್ಕಾರ, ಓಂಕಾರಧ್ವನಿಗಳುಂಟಾದುವು, ಹವಿಸ್ಸಿನ ಹೊಗೆಯು ಮೇಲಕ್ಕೆದ್ದಿತು. ೩೫. ಮೋಡಗಳು ಮೇರುಪರ್ವತವನ್ನು ಬಳಸುವ ಹಾಗೆ ಹೋಮಮಾಡಿದ ಆಹುತಿಗಳ ಸಮೂಹದಿಂದ ಹುಟ್ಟಿದ ಹೊಗೆಗಳು ಅವಿಚ್ಛಿನ್ನವಾಗಿ ಚಿನ್ನದ ಯೂಪಸ್ತಂಭವನ್ನು ಬಳಸಿದುವು. ೩೬. ಅತಿಶಯವಾದ ಯಾಗದ ಹೆಚ್ಚಿದ ಹೊಗೆಯು ದಿಕ್ಕುಗಳ ಕೊನೆಯಲ್ಲಿರುವ ಆನೆಗಳ ಕೊಂಬುಗಳ ಮೂಲವನ್ನು ವಿಶೇಷವಾಗಿ ಪ್ರವೇಶಿಸಿ ಚಿಪ್ಪನ್ನು ತೊಡಿಸಿದಂತಾಯಿತು. ಸೂರ್ಯ ಬಿಂಬವು ಕಿಡಿಗಳು ಹೊಗೆಯಿಂದ ಮರೆಯಾಗಿ ಕಿಲುಬುಗೊಂಡ ಕನ್ನಡಿಗೆ ಸಮಾನ ವಾಯಿತು. ದೇವಗಂಗಾನದಿಯು ಕಪ್ಪಗಾಗಿ ಯಮುನಾದಿಗೆ ಸಮಾನವಾಯಿತು. ೩೭. ಅಸಂಖ್ಯಾತವಾದ ಆಜ್ಯಾಹುತಿಗಳ ಸಮೂಹದಿಂದ ಅಗ್ನಿಯು ತೃಪ್ತಿಪಡುವಂತೆ ಆ ಬ್ರಾಹ್ಮಣಸಮೂಹವು ಹೋಮಮಾಡಲು ದೇವತೆಗಳೆಲ್ಲ ಒಟ್ಟುಗೂಡಿ ಶ್ರೇಷ್ಠವಾದ ಹವಿಸ್ಸುಗಳೆಂಬ ಅಮೃತವನ್ನು ತೃಪ್ತಿಯಾಗಿ ಊಟಮಾಡಿದರು. ೩೮. ಧರ್ಮರಾಜನ ಯಜ್ಞದ ಮಹಾಮಹಿಮೆಯನ್ನು ದೇವೇಂದ್ರನಿಗೆ ಕ್ರಮಕ್ರಮವಾಗಿ

ವ|| ಅಂತು ಪುರೋಡಾಶ ಪವಿತ್ರೋದರನುಂ ಸೋಮಪಾನ ಕಷಾಯಿತೋದರನುಮಾಗಿ ಮೂವತ್ತೆರಡು ದಿವಸದೊಳ್ ಕ್ರತುವಂ ನಿರ್ವರ್ತಿಸಿ ಮಹಾದಾನಂಗೆಯ್ದು ದಕ್ಷಿಣಾಕಾಲದೊಳ್

ಉ|| ಒಟ್ಟಿದ ಪೊನ್ನ ಬೆಟ್ಟುಗಳನೀವೆಡೆಗೇವುದೊ ತೂಕಮೆನ್ನ ಕೆ
ಯ್ಯಟ್ಟಳೆ ಕೊಳ್ಳಿಮೆಂದು ಕುಡೆ ಷೋಡಶ ಋತ್ವಿಜರ್ಗಿತ್ತುದರ್ಕೆ ಬಾ ।
ಯ್ವಿಟ್ಟರೆ ವಿಪ್ರಕೋಟಿ ಮಡಗಲ್ಕೆಡೆಯಿಲ್ಲದೆ ಪೊನ್ನ ರಾಶಿಯಂ
ಬಟ್ಟನೆ ಬಂದು ಕಾಯೆ ಯಮನಂದನನೇನ್ ತೊದಳಿಲ್ಲದಿತ್ತನೊ || ೩೯

ಸ್ರ || ದಾನಾಂಭಃ ಪೀನ ಗಂಡಸ್ಥಳ ಕರಿನಿಕರಂ ಬಾಟಿತ್ತಿಯೋ ಮೆಚ್ಚುವೇಟೂ
ಜಾನೇಯಾಶ್ವೋತ್ಕರಂ ಬಾಟಿತ್ತಿಯೊ ಮಣಿನಿಚಯಂ ಬಾಟಿತ್ತಿಯೋ ಪೇಟಿಮೆಂದಾ ।
ದೀನಾನಾಥರ್ಗೆ ವೃದ್ಧ ದ್ವಿಜ ಮುನಿನಿಕರಕ್ಕಂದೆಡರ್ ಪೋಪಿನಂ ಕಃ
ಕೇನಾರ್ಥೀ ಕೋ ದರಿದ್ರಃ ಎನುತುಮನಿತುಮಂ ಧರ್ಮಜಂ ಸೂಟಿಗೊಟ್ಟಂ ||೪೦

ವ|| ಅಂತು ನಿಜ ಧವಳಚ್ಛತ್ರ ಚಾಮರ ಸಿಂಹಾಸನಾದಿ ರಾಜಚಿಹ್ನಂಗಳುಟಿಯೆ ಸರ್ವಸ್ವಮೆಲ್ಲಮಂ ದಕ್ಷಿಣೆಗೊಟ್ಟು ವ್ಯಾಸ ಗಾಂಗೇಯ ವಿದುರ ಬಾಹ್ಲೀಕ ಸೋಮದತ್ತ ಭಗದತ್ತ

ತಿಳಿಸಲು ಹರಿಯುವಂತೆ ಹಲವು ಹೊಗೆಗಳೂ ಆಕಾಶವನ್ನು ಮುಟ್ಟಿದುವು. ಆ ಹೋಮದ ಹೊಗೆಯ ವಾಸನೆಯು ತಮ್ಮನ್ನು ಸ್ಪರ್ಶಿಸಲು ಆ ಶ್ರೇಷ್ಠವಾದ ಯಜ್ಞವನ್ನು ಸ್ವೀಕರಿಸಿ ಪಾರಿವಾಳ ಮತ್ತು ಚಕ್ರವಾಕಪಕ್ಷಿಗಳು ಸ್ವರ್ಗಕ್ಕೆ ಹಾರಿದುವು. ಆ ಮಹಾಯಜ್ಞದ ಹಿರಿಮೆಯನ್ನು ಏನೆಂದು ವರ್ಣಿಸುವುದು. ವ|| ಹಾಗೆ ಧರ್ಮರಾಜನು ಪುರೋಡಾಶದಿಂದ ಪವಿತ್ರೀಕೃತವಾದ ಹೊಟ್ಟೆಯುಳ್ಳವನೂ ಸೋಮರಸಪಾನದಿಂದ ಕದಡಿದ ಉದರವುಳ್ಳವನೂ ಆಗಿ ಆ ಮುವ್ವತ್ತೆರಡುದಿವಸಗಳಲ್ಲಿ ಯಜ್ಞವನ್ನು ಮುಗಿಸಿ ಮಹಾದಾನವನ್ನು ಮಾಡಿ ದಕ್ಷಿಣೆಯನ್ನು ಕೊಡುವ ಕಾಲದಲ್ಲಿ ೩೯. ರಾಶಿಮಾಡಿದ ಚಿನ್ನದ ಬೆಟ್ಟಗಳನ್ನು ದಾನಮಾಡುವಾಗ ತೂಕಮಾಡುವುದೇತಕ್ಕೆ? ನನ್ನ ಕೈಕಟ್ಟಳೆಯ ತೂಕದಿಂದಲೇ ಕೊಳ್ಳಿ ಎಂದು ಹದಿನಾರು ಋತ್ವಿಕ್ಕುಗಳಿಗೆ ದಾನಮಾಡಿದುದನ್ನು ನೋಡಿ ಬ್ರಾಹ್ಮಣರ ಸಮೂಹವು ಆಶ್ಚರ್ಯದಿಂದ ಬಾಯ್ಬಿಟ್ಟಿತು. ದಾನಮಾಡಿದ ಹೊನ್ನರಾಶಿಯನ್ನು ಮಡಗುವುದಕ್ಕೇ ಸ್ಥಳವಿಲ್ಲದಷ್ಟು ದ್ರವ್ಯವನ್ನು ರಕ್ಷಿಸುತ್ತಿರಲು ಧರ್ಮರಾಯನು ವಂಚನೆಯಿಲ್ಲದೆ ದಾನಮಾಡಿದನು. ೪೦. ಮದೋದಕದಿಂದ ಕೂಡಿದ ದಪ್ಪವಾದ ಗಂಡಸ್ಥಳಗಳನ್ನುಳ್ಳ ಆನೆಯು ನಿಮಗೆ ಬೇಕೆ? ನಿಮ್ಮ ಇಷ್ಟವಾದುದನ್ನು ಹೇಳಿ; ಉತ್ತಮವಾದ ಕುದುರೆಗಳ ಸಮೂಹವು ನಿಮಗೆ ಪ್ರಯೋಜನವಾದೀತೇ. ರತ್ನಸಮೂಹವು ಬೇಕೆ ಹೇಳಿ ಎಂದು ದೀನರಿಗೂ ಅನಾಥರಿಗೂ ಮುದುಕರಿಗೂ ಬ್ರಾಹ್ಮಣರಿಗೂ ಋಷಿಸಮೂಹಕ್ಕೂ ಬಡತನವು ಹೋಗವಷ್ಟು, ಯಾರಿಗೆ ಏನುಬೇಕು, ದರಿದ್ರರಾರು, ಎನ್ನುತ್ತ ಅಷ್ಟನ್ನೂ ಧರ್ಮರಾಜನು ಸೂರೆಯಾಗಿ ಕೊಟ್ಟನು. ವ|| ಹಾಗೆ ತನ್ನ ಶ್ವೇತಛತ್ರಿ ಚಾಮರ ಸಿಂಹಾಸನವೇ ಮೊದಲಾದ ರಾಜಚಿಹ್ನೆಗಳನ್ನು ಬಿಟ್ಟು ಉಳಿದ ಸರ್ವಸ್ವವನ್ನೂ ದಕ್ಷಿಣೆಯಾಗಿ ಕೊಟ್ಟು ವ್ಯಾಸ ಗಾಂಗೇಯ ವಿದುರ ಬಾಹ್ಲೀಕ,ಸೋಮದತ್ತ ಭಗದತ್ತ ಧೃತರಾಷ್ಟ್ರ ದ್ರೋಣಾಶ್ವತ್ಥಾಮ ಕೃಪ ಮೊದಲಾದ

ಧೃತರಾಷ್ಟ್ರ ದ್ರೋಣಾಶ್ವತ್ಥಾಮ ಕೃಪ ಕುಲವೃದ್ಧರುಮಂ ದುರ್ಯೋಧನ ದುಶ್ಶಾಸನ ಕರ್ಣ ಶಲ್ಯ ಶಕುನಿಗಳುಮನವರವರ ದಾನ ಸನ್ಮಾನಾದಿಗಳೊಳಂ ಸಂತಸಂಬಡಿಸಿ ಧರ್ಮಪುತ್ರಂ ಪೇೞಿಮಿಾ ಸಭೆಯೊಳಗ್ರಪೂಜೆಗಾರ್ ತಕ್ಕರೆನೆ ಗಾಂಗೇಯನಿಂತೆಂದಂ-

ಮ॥ ಬಲಿಯಂ ಕಟ್ಟಿದನಾವನೀ ಧರಣಿಯಂ ವಿಕ್ರಾಂತದಿಂದಂ ರಸಾ
ತಲದಿಂದೆತ್ತಿದನಾವನಂದು ನರಸಿಂಹಾಕಾರದಿಂ ದೈತ್ಯನಂ ।
ಚಲದಿಂ ಸೀಳ್ದವನಾವನಬ್ಧಿಮಥನಪ್ರಾರಂಭದೊಳ್ ಮಂದರಾ
ಚಲಮಂ ತಂದವನಾವನಾತನೆ ವಲಂ ತಕ್ಕಂ ಪೆಱರ್ ತಕ್ಕರೇ ॥ ೪೧

ವ॥ ಎಂದು ತನ್ನ ಮನದೊಳಚ್ಚೊತ್ತಿದಂತೆ ನುಡಿದ ಗಾಂಗೇಯನ ಮಾತಂ ಮನದೆಗೊಂಡು ಯಮನಂದನನಾನಂದಂಬೆರಸಂತೆಗೆಯ್ವೆನೆಂದು ಪುರುಷೋತ್ತಮಂಗರ್ಘ್ಯಮೆತ್ತಿದಾಗಳ್-

ಕಂ॥ ಮುಳಿದು ಶಿಶುಪಾಲನಾ ಸಭೆ
ಯೊಳಗೆ ಮಹಾಪ್ರಳಯ ಜಳಧಿನಾದದಿನಿರದು ।
ಚ್ಚಳಿಸಿ ನುಡಿದಂ ತೆ ಕಳೆ ಕಳೆ
ಹರಿಗೆತ್ತಿದನರ್ಘ್ಯದರ್ಘ್ಯಮಂ ಧರ್ಮಸುತಾ ॥ ೪೨

ತೀವಿದ ನರೆಯುಂ ಡೊಳ್ಳುಂ
ದೇವವ್ರತನೆನಿಸಿ ನೆಗಱ್ದ ಯಶಮುಂ ಬೆರಸಿ ।
ನ್ನೀವುದು ಹರಿಗರ್ಘ್ಯಮನೆಂ
ದಾವನುಮಿಾ ಭೀಷ್ಮರಂತು ನುಡಿದರುಮೊಳರೇ ॥ ೪೩

ಕುಲವೃದ್ಧರನ್ನೂ ದುರ್ಯೋಧನ ದುಶ್ಶಾಸನ ಕರ್ಣ ಶಲ್ಯ ಶಕುನಿಗಳನ್ನೂ ಅವರವರಿಗೆ ಉಚಿತವಾದ ದಾನಸನ್ಮಾನಗಳಿಂದ ಸಂತೋಷಪಡಿಸಿ ಧರ್ಮರಾಜನು ಈ ಸಭೆಯಲ್ಲಿ ಅಗ್ರಪೂಜೆಗೆ ಯಾರು ಅರ್ಹರು ಎನ್ನಲು ಭೀಷ್ಮನು ಹೀಗೆಂದನು-೪೧. ಬಲಿಯನ್ನು ಕಟ್ಟಿದವನೂ ಪೌರುಷದಿಂದ ಈ ಭೂಮಿಯನ್ನು ಪಾತಾಳದಿಂದ ಎತ್ತಿದವನೂ ಹಿಂದೆ ನರಸಿಂಹಾವತಾರದಲ್ಲಿ ರಾಕ್ಷಸನಾದ ಹಿರಣ್ಯಕಶಿಪುವನ್ನು ಹಟದಿಂದ ಸೀಳಿದವನೂ ಕ್ಷೀರಸಮುದ್ರವನ್ನು ಕಡೆಯುವ ಕಾಲದಲ್ಲಿ ಮಂದರಪರ್ವತವನ್ನು ತಂದವನೂ ಆದ ಕೃಷ್ಣನೇ ನಿಜವಾಗಿಯೂ ಅಗ್ರಪೂಜೆಗೆ ಅರ್ಹನಾದವನು. ಇತರರು ಅರ್ಹರಾದಾರೇ? ವ॥ ಎಂದು ತನ್ನ ಮನಸ್ಸಿನಲ್ಲಿ ಮುದ್ರೆಯೊತ್ತಿದ ಹಾಗೆ ಹೇಳಿದ ಭೀಷ್ಮನ ಮಾತನ್ನು ಅಂಗೀಕಾರಮಾಡಿ ಧರ್ಮರಾಯನು ಸಂತೋಷದಿಂದ ಕೂಡಿ ಹಾಗೆಯೇ ಮಾಡುತ್ತೇನೆಂದು ಪುರುಷೋತ್ತಮನಾದ ಶ್ರೀಕೃಷ್ಣನಿಗೆ ಅರ್ಘ್ಯವೆತ್ತಿದಾಗ-೪೨. ಆ ಸಭೆಯಲ್ಲಿ ಶಿಶುಪಾಲನು ಸುಮ್ಮನಿರದೆ ಕೋಪಿಸಿಕೊಂಡು ಮೇಲಕ್ಕೆ ಎದ್ದು ಪ್ರಳಯಕಾಲದ ಸಮುದ್ರಘೋಷದಿಂದ ಕೂಡಿ ಧರ್ಮರಾಜನೇ, ಛೀ ಕೃಷ್ಣನಿಗೆತ್ತಿದ ಅಮೌಲ್ಯವಾದ ಅಗ್ರೋದಕವನ್ನು ತೆಗೆತೆಗೆ ಎಂದು ಒರಟಾಗಿ ನುಡಿದನು-೪೩. ತುಂಬಿದ ನರೆಯನ್ನೂ ಬೊಜ್ಜಿನ ಹೊಟ್ಟೆಯನ್ನೂ ದೇವವ್ರತನೆನಿಸಿಕೊಂಡು ಪ್ರಸಿದ್ಧಿ ಪಡೆದ ಯಶಸ್ಸನ್ನೂ ತನ್ನಲ್ಲಿ ಕೂಡಿಕೊಂಡು ಇನ್ನೂ ಕೃಷ್ಣನಿಗೆ ಅರ್ಘ್ಯವನ್ನು ಕೊಡುವುದು ಎಂಬುದಾಗಿ ಈ ಭೀಷ್ಮನಂತೆ ಸಲಹೆಮಾಡುವವರು ಮತ್ತಾವನಾದರೂ ಇದ್ದಾನೆಯೇ?

ಕುರುವೃದ್ಧಂ ಕುಲವೃದ್ಧಂ
ಸರಿತ್ಸುತಂ ತಕ್ಕನೆಂದು ನಂಬಿದ ಸಭೆಯೊಳ್ ।
ದೊರೆಗಿಡಿಸಿ ನುಡಿದೊಡೇನೊಲ
ವರಮೆನ್ನದೆ ನೀನುಮದನೆ ಕೊಂಡೆಸಗುವುದೇ ॥ ೪೪

ಮನದೊಲವರಮುಳ್ಳೊಡೆ ಕುಡು
ಮನೆಯೊಳ್ ಹರಿಗಗ್ರಪೂಜೆಯಂ ಯಜ್ಞದೊಳೀ ।
ಮನುಜಾಧೀಶ್ವರಸಭೆಯೊಳ್
ನೆನೆಯಲುಮಾಗದು ದುರಾತ್ಮನಂ ಬೆಸಗೊಳ್ವಾ ॥ ೪೫

ಅಳವಱಿಯದೆಗ್ಗು ಬಳವಳ
ಬಳೆವಿನೆಗಂ ಪಚ್ಚ ಪಸಿಯ ತುಱುಕಾಱಂಗ
ಗ್ಗಳಿಕೆಯನೆ ಮಾಡಿ ನೀನುಂ
ಪಳಿಯಂ ಕಟ್ಟಿದೆಯೊ ಭೂಪರಿನಿಬರ ಕೊರಲೊಳ್ ॥ ೪೬

ದೇವರನಡಿಗೆಱಗಿಸಿ ಸಕ
ಳಾವನಿತಳದದಟರಂ ಪಡಲ್ವಡಿಸಿದ ಶೌ ।
ರ್ಯಾವಷ್ಟಂಭದೊಳಾನಿರೆ
ಗೋವಳಿಗಂಗಗ್ರಪೂಜೆಯಂ ನೀನ್ ಕುಡುವಾ ॥ ೪೭

ಸಮುಕಟ್ಟುಱಿಯದೆ ಹರಿಗ
ರ್ಘ್ಯಮೆತ್ತಿ ನಿಂದಿರ್ದ ಯಜ್ಞಮದು ಮೊದಲೊಳ್ ತಾ ।
ನಮರ್ದುಮಮರ್ದಿರದೆ ತಣಿಯುಂ
ಡಮರ್ದಂ ಗೋಮೂತ್ರದಿಂದೆ ಬಾಯ್ಪೂಸಿದವೋಲ್ ॥ ೪೮

೪೪. ಭೀಷ್ಮನು ಕುರುವಂಶದಲ್ಲಿ ಹಿರಿಯ, ಕುಲದಲ್ಲಿ ಹಿರಿಯವ ಯೋಗ್ಯ ಎಂದು ನಂಬಿದ ಈ ಸಭೆಯಲ್ಲಿ ತನ್ನ ಯೋಗ್ಯತೆಯನ್ನು ಕೆಡಿಸಿಕೊಂಡು ಇನ್ನೂ ಕೃಷ್ಣನಿಗೆ ಅರ್ಘ್ಯವನ್ನು ಕೊಡು ಎಂದು ಹೇಳಿದರೆ ಅದನ್ನು ಪಕ್ಷಪಾತವೆಂದು ತಿಳಿದುಕೊಳ್ಳದೆ ನೀನೂ ಆ ಭೀಷ್ಮನು ಹೇಳಿದುದನ್ನೇ ಅಂಗೀಕರಿಸಿ ಹಾಗೆ ಮಾಡುವುದೇ? ೪೫. ಮನಸ್ಸಿನಲ್ಲಿ ಪಕ್ಷಪಾತವಿದ್ದರೆ ಕೃಷ್ಣನಿಗೆ ನಿಮ್ಮ ಮನೆಯಲ್ಲಿ ಅರ್ಘ್ಯವನ್ನು ಕೊಡು. ಯಜ್ಞದಲ್ಲಿ ಈ ಚಕ್ರವರ್ತಿಗಳ ಸಭೆಯಲ್ಲಿ ಆ ದುರಾತ್ಮನನ್ನು ನೆನೆಸಿಕೊಳ್ಳಲೂ ಆಗದು. ಆ ದುರಾತ್ಮನನ್ನು ಪ್ರಶ್ನೆಮಾಡುವುದೇಕೆ? ೪೬. ಅಳತೆಯಿಲ್ಲದ ದಡ್ಡತನವು ಅತಿಶಯವಾಗಿ ಬೆಳೆಯುತ್ತಿರಲು ಆ ಪಚ್ಚಹಸಿಯ ದನಕಾಯುವವನಿಗೆ ಗೌರವವನ್ನು ಮಾಡಿ ನೀನೂ ಕೂಡ ಇಷ್ಟು ಜನ ರಾಜರ ಕೊರಳಿನಲ್ಲಿ ಅಪಯಶಸ್ಸನ್ನು ಕಟ್ಟಿದೆಯಲ್ಲ! ೪೭. ದೇವತೆಗಳನ್ನೆಲ್ಲ ಕಾಲಿಗೆ ಬೀಳುವ ಹಾಗೆ ಮಾಡಿ ಸಮಸ್ತಭೂಮಂಡಲದ ರಾಜರುಗಳನ್ನೂ ಕೆಳಗುರುಳುವ ಹಾಗೆ ಮಾಡಿದ ಪರಾಕ್ರಮದ ಗರ್ವದಿಂದ ಕೂಡಿದ ನಾನಿರುವಾಗ ಸಾಮಾನ್ಯನಾದ ದನಕಾಯುವವನಿಗೆ ನೀನು ಅಗ್ರಪೂಜೆಯನ್ನು ಕೊಡುತ್ತೀಯಾ. ೪೮. ಔಚಿತ್ಯ ಅನೌಚಿತ್ಯಗಳನ್ನು ಅರಿಯದೆ ಹರಿಗೆ (ಕೃಷ್ಣನಿಗೆ) ಎತ್ತಿದ ಅರ್ಘ್ಯವನ್ನುಳ್ಳ ಈ ಯಜ್ಞವು ಮೊದಲು ಸರಿಯಾಗಿದ್ದರೂ ಕೊನೆಯಲ್ಲಿ

ಕುಡವೇೞ್ವನ ಕುಡುವನ ಕುಡೆ
ಪಡೆವನ ಪೆಂಪೇಂ ನೆಗೞ್ತೆವಡೆಗುಮೊ ಪೇೞ್ವಂ ।
ಕುಡವೇೞ್ಗೆಮ ಕುಡುವಣ್ಣಂ
ಕುಡುಗೆಮ ಕುಡೆ ಕೊಳ್ವ ಕಲಿಯನಱೆಯಲ್ಕಕ್ಕುಂ ॥ ೪೯

ವ॥ ಎಂದನಿತಱೊಳ್ ಮಾಣದೆ ಗೀರ್ವಾಣಾರಿಯಸುರಾರಿಯನಿಂತೆಂದಂ-

ಕಂ॥ ದೊರೆಯಕ್ಕುಮೆ ನಿನಗೆ ಯುಧಿ
ಷ್ಠಿರನರ್ಘ್ಯಮನೆತ್ತೆ ಶಂಖದೊಳ್ ಪಾಲೆಱೆದಂ ।
ತಿರೆ ಮಲಿನಮಿಲ್ಲದೊಳ್ಗುಲ
ದರಸುಗಳಿರೆ ನೀನುಮಗ್ರಪೂಜೆಯನಾಂಪಾ ॥ ೫೦

ಮನದೊಲವರದಿಂದೀ ಯಮ
ತನಯನ ಕುಡುವಗ್ರಪೂಜೆ ಮತ್ಸನ್ನಿಧಿಯೊಳ್ ।
ನಿನಗಸನಿಯ ಮಿೞ್ತುವ ನಂ
ಜಿನ ದೊರೆಯೆಂದೊಣರ ನಂದಗೋಪಾಲಸುತಾ ॥ ೫೧

ಮನೆ ನಿನಗೆ ನಂದಗೋಪಾ
ಲನ ಮನೆ ತುಱುಗಾರ್ತಿ ನಿನಗೆ ಮನೆವೆಂಡತಿ ಪ ।
ಚ್ಚನೆ ಪಸಿಯ ಗೋವನೈ ಕರ
ಮನಯದೆ ನಿನ್ನಳವಿಗಳವನಱೆಯದೆ ನೆಗೞ್ದೈ ॥ ೫೨

ತೃಪ್ತಿಯಾಗಿ ಅಮೃತಪಾನಮಾಡಿ ಗಂಜಳದಿಂದ ಬಾಯಿಮುಕ್ಕಳಿಸಿ ಹಾಗೆ ಹೊಂದಿಕೆಯಿಲ್ಲದೇ ಇದೆಯಲ್ಲ! ೪೯. ಕೊಡು ಎಂದು ಹೇಳುವವನೂ ಕೊಡುವವನೂ ಕೊಟ್ಟರೆ ತೆಗೆದುಕೊಳ್ಳುವವನೂ ಒಬ್ಬೊಬ್ಬರ ಹಿರಿಮೆಯೂ ಎಷ್ಟು ಘನವಾದುದೊ! ನೋಡೋಣ. ಹೇಳುವವನು ಕೊಡು ಎಂದು ಹೇಳಲಿ; ಕೊಡುವಣ್ಣನು ಕೊಡಲಿ; ಕೊಟ್ಟರೆ ತೆಗೆದುಕೊಳ್ಳುವ ಶೂರರನ್ನು ನೋಡಿಯೇ ಬಿಡುತ್ತೇನೆ. ವ॥ ಎನ್ನುವಷ್ಟರಲ್ಲಿಯೇ ತಡೆಯದೆ ದೇವತೆಗಳಿಗೆ ಶತ್ರುವಾದ ಶಿಶುಪಾಲನು ಅಸುರಾರಿಯಾದ ಕೃಷ್ಣನನ್ನು ಹೀಗೆಂದು ಮೂದಲಿಸಿದನು. ೫೦. 'ಯುಧಿಷ್ಠಿರನು ನಿನಗೆ ಅರ್ಘ್ಯವನ್ನೆತ್ತಿದರೆ ಅದು ನಿನಗೆ ಯೋಗ್ಯವಾದುದಾಗುತ್ತದೆಯೇ? ಶಂಖದಲ್ಲಿ ಹಾಲೆರೆದಂತೆ ನಿಷ್ಕಲ್ಮಷವಾದ ಸತ್ಕುಲದರಸುಗಳು ನಾವಿರುವಾಗ ನೀನು ಅಗ್ರಪೂಜೆಯನ್ನು ಸ್ವೀಕರಿಸುತ್ತೀಯಾ? ೫೧. ಎಲೈ ನಂದಗೋಪಾಲನ ಮಗನೇ, ನಿನ್ನ ಮನಸ್ಸಿನ ಪಕ್ಷಪಾತ(ಪ್ರೀತಿ)ದಿಂದ ಈ ಧರ್ಮರಾಯನು ಕೊಡುವ ಈ ಅಗ್ರಪೂಜೆಯು ನನ್ನೆದುರಿಗೆ ನಿನಗೆ ಸಿಡಿಲಿನ, ಮೃತ್ಯುವಿನ ವಿಷದ ಸಮಾನವೆಂದು ಭಾವಿಸೋ. ೫೨. ಮನೆ ನಿನಗೆ ನಂದಗೋಪಾಲನ ಮನೆ, ದನಕಾಯುವವಳು ನಿನ್ನ ಮನೆಯ ಹೆಂಡತಿ, ನೀನು ಹಚ್ಚ ಹಸಿಯ ದನಕಾಯುವವನು. ಹೆಚ್ಚಿನ ಅವಿವೇಕದಿಂದ ನಿನ್ನ

ಮುರನಡಸಿ ಪಿಡಿದು ಕಟ್ಟಿದ
ಪರಿಭವಮಂ ಮಱೆದೆ ನಿನ್ನ ಪೆಡಗೆಯ್ಗಟ್ಟಂ ।
ಶರದಿಂ ಬಿಡಿಸಿದನಲ್ಲನೆ
ಸರಿತ್ಸುತಂ ಬನ್ನವಿನ್ನವೆಂಬುವುಮೊಳವೇ ॥ ೫೩

ದನುಜಾಂತಕನೆಂಬೀ ನಿ
ನ್ನ ನಚ್ಚುವೋದಂಕಮೆಲವೊ ಮುನ್ನೆನ್ನನ್ನಂ ।
ದನುಜಂ ಪುಟ್ಟದೆ ಸಂದುದು
ನಿನಗೀ ಪೆಸರೆನ್ನ ಮುಂದೆಯುಂ ಸಂದಪುದೇ ॥ ೫೪

ಆನಿರ್ದ ಸಭೆಯೊಳರ್ಘ್ಯಮ
ನಾನಲ್ಲಾಟಿಸಿದ ನಿನ್ನ ಬಿಸುನೆತ್ತರನಿಂ ।
ತೀ ನೆರವಿ ನೋಡೆ ಕುಡಿಯದೊ
ಡೇನೋ ಶಿಶುಪಾಲನೆಂಬ ಪೆಸರೆಸೆದಪುದೇ ॥ ೫೫

ಮಱೆದ ಮುಚುಕುಂದನೆಂಬನ
ಮಱೆವೊಕ್ಕುದನಂದು ನೀನ್ ಜರಾಸಂಧಂಗಂ ।
ಬಱುತೋಡಿಮುದಂ ಭೂತಳ
ಮಱಿಯದೆ ನೆನೆಯೆಲವೊ ಗೋವುಗಾದುದು ಪುಸಿಯೇ ॥ ೫೬

ಮಿಾನಾವೆ ಪಂದಿಯೆಂದೆನಿ
ತಾನುಂ ತೆಱನಾಗಿ ಡೊಂಬವಿದ್ದೆಯನಾಡಲ್ ।
ನೀನಱಿವೆಯುಱಿದಿರ್ಚಿದೊ
ಡಾನಱೆವೆಂ ನಿನ್ನನಿಲ್ಲಿ ದೆಸೆವಲಿಗೆಯ್ಯಲ್ ॥ ೫೭

ಯೋಗ್ಯತೆಯ ಪ್ರಮಾಣವನ್ನೇ ತಿಳಿಯದೆ ನಡೆದುಕೊಂಡಿದ್ದೀಯೆ. ೫೩. ಮುರಾಸುರನು ಮೇಲೆಬಿದ್ದು ನಿನ್ನನ್ನು ಕಟ್ಟಿಹಾಕಿದ್ದ ಸೋಲನ್ನು ಮರೆತೆಯಾ? ನಿನ್ನ ಹಿಂಗೈಗಟ್ಟನ್ನು ಭೀಷ್ಮನು ಬಿಡಿಸಿದನಲ್ಲವೇ? ನಿನ್ನ ಸೋಲೆಂಬುದು ಇಂಥದೆಂಬುದುಂಟೇ? ೫೪. ಎಲವೋ, ದನುಜಾಂತಕ (ರಾಕ್ಷಸರಿಗೆ ಯಮಸ್ವರೂಪ) ಎಂಬ ನಿನ್ನ ಅಹಂಕಾರಕ್ಕೆ ಪಾತ್ರವಾದ ಹೆಸರು ಮೊದಲು ನನ್ನಂತಹ ದನುಜ(ರಾಕ್ಷಸನು)ನು ಹುಟ್ಟದೆ ಇದ್ದುದರಿಂದ ಪ್ರಾಪ್ತವಾಯಿತು. ನಿನಗೆ ಈ ಹೆಸರು ನನ್ನ ಮುಂದೆಯೂ ಸಲ್ಲುತ್ತದೆಯೇ? ೫೫. ನಾನಿರುವ ಸಭೆಯಲ್ಲಿ ಅರ್ಘ್ಯವನ್ನು ಪಡೆಯುವುದಕ್ಕೆ ಬಯಸಿದ ನಿನ್ನ ಬಿಸಿರಕ್ತವನ್ನು ಈ ಸಭೆಯು ನೋಡುತ್ತಿರುವ ಹಾಗೆಯೇ ಕುಡಿಯದಿದ್ದರೆ ಶಿಶುಪಾಲನೆಂಬ (ನನ್ನ) ಹೆಸರು ಪ್ರಕಾಶಿಸುತ್ತದೆಯೇನೋ? ೫೬. ಅಂದು ಮುಚುಕುಂದನೆಂಬುವನನ್ನು ಮೊರೆಹೊಕ್ಕದ್ದನ್ನೂ ಮರೆತೆಯಾ? ಅಂದು ನೀನು ಜರಾಸಂಧನಿಗೂ ಹೆದರಿ ಓಡಿದುದನ್ನೂ ಪ್ರಪಂಚವೇ ಅರಿಯದೇ? ಜ್ಞಾಪಿಸಿಕೊಳ್ಳೊಳ್ಳ, ನೀನು ದನಕಾಯುವುದು ಸುಳ್ಳೇನೊ? ೫೭. ಮೀನು, ಆಮೆ, ಹಂದಿ ಎಂದು ಎಷ್ಟೋ ರೀತಿಯಲ್ಲಿ ಡೊಂಬರವಿದ್ಯೆಯನ್ನಾಡಲು ನೀನು ಬಲ್ಲೆ? ವೇಗವಾಗಿ ಎದುರಿಸಿದರೆ ನಿನ್ನನ್ನು ಇಲ್ಲಿ

ಅಱಿಯದಿದಂ ಮಾಡಿದೆನೆ
ನ್ನಱಿಯಮಿಕೆಗೆ ಸೈರಿಸೆಂದು ನೀನ್ ಸಭೆಯೊಳ್ ಕಾ ।
ಲ್ಗೆಱಗೆಱಗು ಕೊಲ್ಲೆನೆಂದೆರ್ದೆ
ತೆಱೆವಿನೆಗಂ ಹರಿಯ ನೆಱನನಸುರಂ ನುಡಿದಂ ॥ ೫೮

ವ॥ ಅಂತು ನುಡಿದು ಕಾಯ್ಪಿನೊಳ್ ಪಿಡುಗಿ ನಡನಡ ನಡುಗಿ-

ಕಂ॥ ಪೊಳೆದುಳ್ಕುವ ಕುಡು ದಾಡೆಯ
ಪೊಳಪು ನೊಸಲ್ಗಡರ್ದು ಪೊಡರ್ವ ಪುರ್ವೆಸೆವಿನಮು ।
ವ್ವಳಿಸುವ ಮುಳಿಸಿನ ದಳ್ಳುರಿ
ಗಳನುಗುಳ್ವವೊಲುಗುಳ್ದನಸುರನುರಿವ ಪಟಿಗಳಂ ॥ ೫೯

ವ॥ ಆಗಳ್ ಸಭಾಸದರೆಲ್ಲಮೆವೆಮಿಡುಕದೆ ಪಂದೆಯಂ ಪಾವಡರ್ದವೊಲುಸಿರದಿರೆ ನಾರಾಯಣಂ ಶಿಶುಪಾಲನನಿಂತೆಂದಂ-

ಕಂ॥ ನಿನ್ನಯ ತಾಯ್ ಸಾತ್ವತಿಯುಂ
ನಿನ್ನಂ ತಂದೆನ್ನ ತೊಡೆಯಮೇಲಿಟೆಪುವುದುಂ ।
ನಿನ್ನ ಲಲಾಟದ ಕಣ್ಣದು
ಮುನ್ನಮೆ ಕಿಡೆ ನಿನ್ನ ಮೃತ್ಯುವೆನ್ನಯ ಕೆಯ್ಯೊಳ್ ॥ ೬೦

ಕಂ॥ ನೆಱೆದುದನಱೆದೀ ಕಿಱೆಯವ
ನಱೆಯದೆ ಕೆಡೆ ನುಡಿದನಪ್ಪೊಡಂ ನೂಱುವರಂ ।
ನೆಱೆ ಸಲಿಸುವುದೆಂದುದನಾಂ
ಮಱೆವೆನೆ ಬಯ್ ಬಯ್ಕೆ ಸಲಿಸುವೆಂ ನೂಱುವರಂ ॥ ೬೧

ದಿಗ್ಬಲಿಕೊಡಲು ನಾನು ಬಲ್ಲೆ. ೫೮. 'ತಿಳಿಯದೆ ಇದನ್ನು ಮಾಡಿದೆ, ನನ್ನ ಅಜ್ಞಾನಕ್ಕೆ ಕ್ಷಮಿಸು' ಎಂದು ಈ ಸಭೆಯಲ್ಲಿ ನನ್ನ ಕಾಲಿಗೆ ಬೀಳು, ಬೀಳು, ಕೊಲ್ಲುವುದಿಲ್ಲ ಎಂದು ಹೃದಯಭೇದನವಾಗುವ ಹಾಗೆ ಕೃಷ್ಣನ ಮರ್ಮ (ರಹಸ್ಯ)ಗಳನ್ನು ರಾಕ್ಷಸನಾದ ಶಿಶುಪಾಲನು ಎತ್ತಿ ಆಡಿದನು. ವ॥ ಹಾಗೆ ಮಾತನಾಡಿ ಕೋಪದಿಂದ ಸಿಡಿದು ವಿಶೇಷವಾಗಿ ನಡುಗಿ ೫೯. ಹೊಳೆದು ಪ್ರಕಾಶಿಸುವ ಕೊಂಕಿದ ಕೋರೆಹಲ್ಲಿನ ಹೊಳಪು ಮುಖವನ್ನು ಹತ್ತಿ ನಡುಗುವ ಹುಬ್ಬು ಪ್ರಕಾಶಿಸುತ್ತಿರಲು ಹೆಚ್ಚುತ್ತಿರುವ ಕೋಪದ ಜ್ವಾಲೆಗಳನ್ನು ಉಗುಳುವ ಹಾಗೆ ರಾಕ್ಷಸನು ಉರಿಯುತ್ತಿರುವ ನಿಂದೆಗಳನ್ನು ಉಗುಳಿದನು. ವ॥ ಆ ಸಭೆಯಲ್ಲಿರುವವರೆಲ್ಲರೂ ರೆಪ್ಪೆ ಬಡಿಯದೆ ಹೇಡಿಯನ್ನು ಹಾವು ಅಡ್ಡಗಟ್ಟಿದ ಹಾಗೆ ಮಾತನಾಡದಿರಲು ನಾರಾಯಣನು ಶಿಶುಪಾಲನಿಗೆ ಹೀಗೆಂದನು. ೬೦. ನಿನ್ನ ತಾಯಿಯಾದ ಸಾತ್ವತಿಯು ನಿನ್ನನ್ನು ತಂದು ನನ್ನ ತೊಡೆಯ ಮೇಲೆ ಇಳಿಸಿದಾಗ ನಿನ್ನ ಆ ಹಣೆಗಣ್ಣು ಮೊದಲೇ ನಾಶವಾಯಿತು. ಆದರಿಂದ ನಿನ್ನ ಮೃತ್ಯು ನನ್ನ ಕಯ್ಯಲ್ಲಿ ೬೧. ಸೇರಿರುವುದನ್ನು ತಿಳಿದು ಅವಳು ನನ್ನನ್ನು ಕುರಿತು ಕೃಷ್ಣಾ ಕಿರಿಯವನಾದ ಇವನು ತಿಳಿಯದೆ ಕೆಟ್ಟ ಮಾತನ್ನಾಡಿದರೂ ನೂರರವರೆಗೆ ಪೂರ್ಣವಾಗಿ ಅವಕಾಶಕೊಡು (ಸಹಿಸಿಕೊ) ಎಂದುದನ್ನು ನಾನು

ಮುನಿಯಲೆನಗಾಗ ಗಾಂಗೇ
ಯನಿರ್ದನಿರ್ದಂ ಘಟೋದ್ಭವಂ ನೆಗಲ್ದ ಪೃಥಾ ।
ತನಯರುಮಿರ್ದರ್ ದುರ್ಯೋ
ಧನನಿರ್ದಂ ಕೇಳೆ ಪೇೞ್ವರಾ ಬಲ್ಲವರುಂ ॥ ೬೨

ಎನೆಯೆನೆ ಬಾಯ್ಗಂ ಬಂದನಿ
ತನಿತುಮನಮರಾರಿ ಬಯ್ಯೆ ಸೈರಿಸಿ ನೂಱುಂ ।
ಬನಿತುವರಂ ಮನ್ನಿಸಿ ನಸು
ಕಿನಿಸದೆ ಮಿಗೆ ಕಿನಿಸಿ ದಿತಿಜಕುಳದವದಹನಂ ॥ ೬೩

ಮುಳಿದು ತನಗರ್ಘ್ಯಮೆತ್ತಿದ
ತಳಿಗೆಯೊಳಿಡೆ ತಿಱಿದ ತೆಱದೆ ತಲೆ ಪಱಿದಾಗಳ್ ।
ಕಳಕಳಿಸಿ ನಗುತುಮಿರ್ದುದು
ತಳಿಗೆಯ ಮೇಲಸುರನದಟದೇನಚ್ಚರಿಯೋ ॥ ೬೪

ವ॥ ಅಂತು ಜವನರ್ಘ್ಯಮೆತ್ತಿದಂತಿರ್ದ ಶಿಶುಪಾಲನ ಶಿರೋಂಬುಜಮಂ ಕಂಡಬಲ್ದಾತನ ನಂಟರಪ್ಪಶ್ವಗ್ರೀವ ವಿದ್ಯುನ್ಮಾಲಿ ನೀಲಾದಿಗಳಪ್ಪ ಪ್ರಭುಗಳೆನಿಬರಾನುಂ ಮುರಾಂತಕನಂ ಬಂದು ತಾಗಿದೊಡೆ-

ಕಂ॥ ತಿರಿಪಿ ಕರಚಕ್ರಮಂ ದನು
ಜರ ತಲೆಗಳನಸುರವೈರಿ ಮುಳಿದಿಡೆ ಪಱಿದಂ ।
ಬರತಳಮನೆಯ್ದಿ ಮೇಘದ
ಪೊರೆಪೊರೆಯೊಳ್ ತೊಡರ್ದು ನೆಲಕೆ ಬೀೞವೆ ತಲೆಗಳ್ । ೬೫

ಮರೆಯುತ್ತೇನೆಯೇ, ಬಯ್ಯಿ -ನೂರರವರೆಗೆ ಬಯ್ಯಲು ಅವಕಾಶ ಕೊಡುತ್ತೇನೆ. ೬೨. ನನ್ನ ಮೇಲೆ ಕೋಪಿಸಬೇಡ; ಆಗ ಭೀಷ್ಮನಿದ್ದನು - ದ್ರೋಣನೂ ಇದ್ದನು. ಪ್ರಸಿದ್ಧರಾದ ಪಾಂಡವರೂ ಇದ್ದರು, ದುರ್ಯೋಧನನೂ ಇದ್ದನು. ಕೇಳಿದರೆ ಆ ಬಲ್ಲವರೆಲ್ಲ ಹೇಳುತ್ತಾರೆ. ೬೩. ಎಂದು ಹೇಳುತ್ತಿರಲು ರಾಕ್ಷಸನು ಬಾಯಿಗೆ ಬಂದಷ್ಟನ್ನು ಬಯ್ಯಲು ಸಹಿಸಿಕೊಂಡು ರಾಕ್ಷಸಕುಲಕ್ಕೆ ಕಾಡುಗಿಚ್ಚಿನ ಹಾಗಿರುವ ಕೃಷ್ಣನು ನೂರಾಗುವವರೆಗೂ ಸ್ವಲ್ಪವೂ ಕೋಪಿಸಿಕೊಳ್ಳದೆ ಕ್ಷಮಿಸಿ ಅದೂ ಮೀರಲು ೬೪. ಕೋಪಿಸಿಕೊಂಡು ತನಗೆ ಅರ್ಘ್ಯವೆತ್ತಿದ ತಟ್ಟೆಯಿಂದಲೇ ಹೊಡೆಯಲು ಗರಗರನೆ ಕತ್ತರಿಸಿದ ಹಾಗೆ ಆ ತಲೆಯು ತುಂಡರಿಸಿ ತಟ್ಟೆಯ ಮೇಲೆ ಕಳಕಳಿಸಿ ನಗುತ್ತಿತ್ತು. ರಾಕ್ಷಸನ ಪರಾಕ್ರಮವು ಎಷ್ಟು ಆಶ್ಚರ್ಯಕರವಾದುದು? ವ॥ ಹಾಗೆ ಯಮನಿಗೆ ಅರ್ಘ್ಯದಂತೆ ತಟ್ಟೆಯಲ್ಲಿದ್ದ ರಾಕ್ಷಸನ ಕಮಲದಂತಿರುವ ತಲೆಯನ್ನು ಆತನ ನಂಟರಾದ ಅಶ್ವಗ್ರೀವ ವಿದ್ಯುನ್ಮಾಲಿಗಳನೇಕರು ನೋಡಿ ದುಃಖಿಸಿ ಒಟ್ಟಾಗಿ ಸೇರಿ ಬಂದು ಕೃಷ್ಣನನ್ನು ತಾಗಿದರು. ೬೫. ಅಸುರವೈರಿಯಾದ ಕೃಷ್ಣನು ಕಯ್ಯಲ್ಲಿದ್ದ ಚಕ್ರವನ್ನು ತಿರುಗಿಸಿ ರಾಕ್ಷಸರ ತಲೆಗೆ ಕೋಪದಿಂದ ಹೊಡೆಯಲು ಆ ತಲೆಗಳು ಹರಿದುಹೋಗಿ ಆಕಾಶಪ್ರದೇಶದಲ್ಲಿ ಮೋಡದ ಪದರದ ಸಮೂಹದಲ್ಲಿ ಸೇರಿಕೊಂಡು ನೆಲಕ್ಕೆ ಬೀಳದಿದ್ದವು.

ವ|| ಅನಿತೊಂದು ಮಹಾ ಪ್ರಘಟ್ಟದೊಳಗ್ರಪೂಜೆಯಂ ನಾರಾಯಣಂಗೆ ಕೊಟ್ಟವಭೃಥ ಸ್ನಾನದೊಳ್ ಪಿರಿದುಮೊಸಗೆಯಂ ಮಾಡಿ ಯಾಗವಿಧಿಯಂ ನಿರ್ವರ್ತಿಸಿ ನೆರೆದ ರಾಜಕುಲಮೆಲ್ಲ ಮಂ ಪೂಜಿಸಿ ವಿಸರ್ಜಿಸಿದಾಗಳ್ ಮುರಾಂತಕನಂತಕನಂದನನನಿಂತೆಂದಂ-

ಮ|| ಹಿಮ ಸೇತು ಪ್ರತಿಬದ್ಧ ಭೂವಳಯಮುಮಂ ನಿಷ್ಕಂಟಕಂ ಮಾಡಿ ವಿ
ಕ್ರಮಮಂ ತೋಱಿ ನಿಜಾನುಜರ ನೆರಪಿದೊಂದೈಶ್ವರ್ಯದಿಂ ರಾಜ ಸೂ ||
ಯಮನಿಂದಗ್ಗಳದಗ್ಗಳಿಕ್ಕೆಯ ಮಖಂ ತಾನೆಂಬಿನಂ ನಿನ್ನ ಕೀ
ರ್ತಿ ಮುಖಂ ಕೀರ್ತಿ ಮುಖಂಬೊಲೇನಸೆದುದೋ ದಿಗ್ದಂತಿ
ದಂತಂಗಳೊಳ್ || ೬೬

ವ|| ಎಂದು ನುಡಿದ ಮಂದರಧರನಂ ನಿನ್ನನುಗ್ರಹದೊಳದೇವಿರಿದೆಂದು ವಸ್ತು ವಾಹನಂಗಳನಿತ್ತು ದ್ವಾರಾವತಿಗೆ ಕಳಿಪಿ ಸುಖಸಂಕಥಾವಿನೋದಂಗಳೊಳ್ ರಾಜ್ಯಲಕ್ಷ್ಮಿಯನನು ಭವಿಸುತ್ತಿರ್ಪನ್ನೆಗಮತ್ತಂ-

ಕಂ|| ಮೇಗಿಲ್ಲದ ಬಲ್ಲಾಳ್ತನ
ದಾಗರಮೆನೆ ನೆಗಟ್ದ ತತ್ಪೃಥಾನಂದನರು |
ದ್ಯೋಗದ ಚಾಗದ ಯಾಗದ
ಭೋಗದ ಮ್ಮೆಮೆಗೆ ಸುಯೋಧನಂ ಬೆಱಗಾದಂ || ೬೭

ವ|| ಆಗಿ ದುಶ್ಶಾಸನ ಕರ್ಣ ಶಕುನಿ ಸೈಂಧವರೆಂಬ ದುಷ್ಟಚತುಷ್ಟಯದೊಳ್ ಮಂತಣಮಿರ್ದು ದಾಯಿಗರಪ್ಪೊಡೆ ಕರಂ ಪೆರ್ಚಿದರವರ ಪೆರ್ಚಿಂಗೇಗೆಯ್ವಂ ಬಸನಂಗಳಂ

ವ|| ಅಷ್ಟೊಂದು ದೊಡ್ಡ ಸಂಭ್ರಮದಲ್ಲಿ ನಾರಾಯಣನಿಗೆ ಅಗ್ರಪೂಜೆಯನ್ನು ಕೊಟ್ಟು ಧರ್ಮರಾಜನು ಯಾಗದ ಕೊನೆಯಲ್ಲಿ ಮಾಡಬೇಕಾದ ಮಂಗಳಸ್ನಾನವನ್ನು ಮುಗಿಸಿದನು. ವಿಶೇಷ ಸಂತೋಷದಿಂದ ಯಾಗದ ನಿಯಮಗಳನ್ನೆಲ್ಲ ಮುಗಿಸಿ ಸೇರಿದ್ದ ರಾಜಸಮೂಹವೆಲ್ಲವನ್ನು ಸತ್ಕರಿಸಿ ಕಳುಹಿಸಿದನು. ಆಗ ಶ್ರೀಕೃಷ್ಣನು ಧರ್ಮರಾಜನನ್ನು ಕುರಿತು ಹೀಗೆಂದನು-೬೬. ಹಿಮವತ್ಪರ್ವತ ಮತ್ತು ರಾಮಸೇತುಗಳ ಮೇರೆಯುಳ್ಳ ಭೂಮಂಡಲವನ್ನು ಬಾಧಾರಹಿತವನ್ನಾಗಿ ಮಾಡಿ ಪರಾಕ್ರಮಪ್ರದರ್ಶನದಿಂದ ಇದು ನಿನ್ನ ತಮ್ಮಂದಿರು ಒಟ್ಟುಗೂಡಿಸಿದ ಐಶ್ವರ್ಯದಿಂದ ರಾಜಸೂಯವನ್ನು ಇಂದು ಅತ್ಯತಿಶಯವಾದ ಯಜ್ಞ ಎನ್ನುವ ಹಾಗೆ ನಡೆಸಿದೆ. ನಿನ್ನ ಕೀರ್ತಿಯ ಪ್ರವಾಹವು ದಿಗ್ಗಜಗಳ ದಂತಗಳಲ್ಲಿ ಧರಿಸಿದ ಕೀರ್ತಿಮುಖವೆಂಬ ಆಭರಣದ ಹಾಗೆ ಸೌಂದರ್ಯಯುಕ್ತವಾಗಿದೆ. ವ|| ಎಂಬುದಾಗಿ ಹೇಳಿದ ಕೃಷ್ಣನನ್ನು 'ನಿನ್ನ ಅನುಗ್ರಹವಿರುವಾಗ ಏನು ದೊಡ್ಡದು' ಎಂದು ಹೇಳಿ ವಸ್ತುವಾಹನಗಳನ್ನು ಕೊಟ್ಟು ಸತ್ಕರಿಸಿ ದ್ವಾರಾವತಿಗೆ ಕಳುಹಿಸಿ ಸುಖಸಂಕಥಾವಿನೋದಗಳಿಂದ ಪಾಂಡವರು ರಾಜ್ಯಲಕ್ಷ್ಮಿಯನ್ನು ಅನುಭವಿಸುತ್ತಿದ್ದರು. ಆ ಕಡೆ-೬೭. ಉತ್ತಮೋತ್ತಮವಾದ ಪರಾಕ್ರಮದ ಆವಾಸಸ್ಥಳವೆನಿಸಿಕೊಂಡು ಪ್ರಸಿದ್ಧರಾದ ಆ ಪಾಂಡವರ ಕಾರ್ಯದ, ತ್ಯಾಗದ, ಸೌಖ್ಯದ ಮಹಿಮೆಗೆ ದುರ್ಯೋಧನನು ಬೆರಗಾದನು. ವ|| ದುಶ್ಶಾಸನ ಕರ್ಣ ಶಕುನಿ ಸೈಂಧವರೆಂಬ ನಾಲ್ಕು ದುಷ್ಟರಲ್ಲಿ (ದುಷ್ಟಚತುಷ್ಟಯ) ಜ್ಞಾತಿಗಳಾದರೋ

ಸಮಕಟ್ಟುವಮಪ್ಪೊಡೆ ಸಪ್ತವ್ಯಸನಂಗಳಯ್ವರುಮನೊಂದುಂ ಗೆಲ್ಲುವಲ್ಲವು ರಾಷ್ಟ್ರವ್ಯಸನಮಂ ಬಳವ್ಯಸನಮಂ ಪಾರ್ವಮಪ್ಪೊಡವು ಮುನ್ನಮಿಲ್ಲ ಪರಮಂಡಳವ್ಯಸನಮನಾರಯ್ವಮಪ್ಪೊಡಿತ್ತುಂ ತೆತ್ತುಂ ಬಾಳ್ವ ಮಂಡಲಮಲ್ಲದೆ ಕೀಱಿಯುಂ ಮಿಾಱಿಯುಂ ನೆಗಳ್ವ ಮಂಡಲಮಿಲ್ಲ ಪುರುಷಮಂ ಸಮಕಟ್ಟುವಮಪ್ಪೊಡೆ ಪೊಕ್ಕಿಱಿಯಲಣ್ಮುವರಿಲ್ಲ ರಸದಾನಾದಿಗಳೊಳ್ ಭೇದಿಸುವ ಮಪ್ಪೊಡವರಾಪ್ತವಂತರುಂ ಬುದ್ಧಿವಂತರುಮಾಗಿ ನೆಗಳ್ದರಿನ್ನಾವ ಮಾಟ್ಕೆಯೊಳ್ ಬಗೆಯಂ ಕೆಯ್ಗೆ ಮಾಡುವಂ ಪೇೞಿಮೆನೆ ಶಕುನಿಯಿಂತೆಂದಂ-

ಚಂ ॥ ಬೆಸಸಿದ ನಿನ್ನ ಮಾತಿನಿತುಮಂತುಟೆ ಗೆಲ್ಲವು ಪಾಂಡು ಪುತ್ರರಂ
ಬಸನದೊಡಂಬಡಂ ಮಱಿದುಮಾ ಯಮನಂದನನಲ್ತೆ ನೆತ್ತದೊಳ್ ।
ಬಸನಿಗನಾತನಂ ಬರಿಸಿ ನೆತ್ತಮನಾಡಿಸಿ ಗೆಲ್ದುಕೊಳ್ವಮಿಾ
ವಸುಮತಿಯಂ ಮನಂಬಸದೆ ನೀನ್ ಬೞಿಯಟ್ಟು ಫಣೀಂದ್ರಕೇತನಾ ॥೬೮

ವ॥ ಎಂದು ನಾೞಿವಾಸಗೆಗಳಂ ಮುನ್ನಮೆ ಸಮಕಟ್ಟಿ ತಾಮುಮಾಮುಂ ಕೆಲವು ದೆವಸಂ ಗೋಷ್ಠಿಯೊಳಿರ್ಪಂ ಬರ್ಕೆಂದು ಬೞಿಯನಟ್ಟಿದೊಡವರ ಮನದ ಪುಲ್ಲಗೆಯಂ ಪೊಲ್ಲಮೆಯುಮನಱಿಯದೆ ಸಮಸ್ತಬಳೋದ್ಯುಕ್ತನಾಗಿ ಶಕುನಂಗಳ ಕ್ರಮಮಂ ಬಗೆಯದೆ

ವಿಶೇಷವಾಗಿ ಹೆಚ್ಚಿದರು. ಅವರ ಅಭಿವೃದ್ಧಿಗೆ ಪ್ರತಿಯಾಗಿ ಏನುಮಾಡೋಣ, ವ್ಯಸನಗಳನ್ನೇರ್ಪಡಿಸೋಣವೆಂದರೆ ಏಳು ವ್ಯಸನಗಳಲ್ಲಿ ಒಂದೂ ಆ ಅಯ್ದುಜನರನ್ನು ಗೆಲ್ಲಲಾರದು. ರಾಜ್ಯವ್ಯಸನವನ್ನೂ ಬಲವ್ಯಸನವನ್ನೂ ನೋಡೋಣವೆಂದರೆ ಅವು ಮೊದಲೇ ಇಲ್ಲ. ಶತ್ರುಮಂಡಳಗಳಿಂದ ಆಗಬಹುದಾದ ವ್ಯಸನವನ್ನು ವಿಚಾರಿಸುವುದಾದರೆ ಅವೆಲ್ಲ ಕೊಟ್ಟೂ ತೆತ್ತೂ ಬಾಳುವ ದೇಶಗಳಲ್ಲದೆ ಮೀರಿಯೂ ರೇಗಿಯೂ ಕೆಲಸ ಮಾಡುವ ಮಂಡಲಗಳಲ್ಲ. ಪೌರುಷಪ್ರದರ್ಶನಮಾಡೋಣವೆಂದರೆ ಅವರಲ್ಲಿ ಹೊಕ್ಕು ಯುದ್ಧಮಾಡುವ ಶಕ್ತಿಯುವರಿಲ್ಲ. ವಿಷದಾನಾದಿಗಳಿಂದ ಭೇದಿಸೋಣವೆಂದರೆ ಅವರು ಆಪ್ತವಂತರೂ ಬುದ್ಧಿವಂತರೂ ಆಗಿದ್ದಾರೆ. ಬೇರಾವ ರೀತಿಯಲ್ಲಿ ಶತ್ರುವನ್ನು ಅಧೀನಮಾಡಿಕೊಳ್ಳೋಣ ಹೇಳಿಯೆನಲು ಶಕುನಿಯು ಹೀಗೆ ಹೇಳಿದನು.-೬೮. 'ನೀನು ಹೇಳಿದ ಮಾತಿಷ್ಟೂ ಹಾಗೆಯೇ ಸತ್ಯವಾದುದು. ಪಾಂಡುಪುತ್ರರನ್ನು ಅವು ಗೆಲ್ಲಲಾರವು. ಮರೆತೂ ಆ ಧರ್ಮರಾಯನು ವ್ಯಸನವನ್ನು ಅಂಗೀಕರಿಸುವುದಿಲ್ಲ. ಆದರೆ ಧರ್ಮರಾಜನು ಪಗಡೆಯಾಟದಲ್ಲಿ ಆಸಕ್ತನಲ್ಲವೇ. ಅವನನ್ನು ಬರಮಾಡಿ ಪಗಡೆಯಾಟವನ್ನಾಡಿಸಿ ಈ ಭೂಮಿಯನ್ನು ಅವನಿಂದ ಗೆದ್ದುಕೊಳ್ಳೋಣ. ಒಂದೇ ಮನಸ್ಸಿನಿಂದ ದುರ್ಯೋಧನಾ, ನೀನು ದೂತರೊಡನೆ ಅವನಿಗೆ ಹೇಳಿಕಳುಹಿಸು. ವ॥ ಎಂದು ಮೋಸದ ದಾಳಗಳನ್ನು ಮೊದಲೇ ಸಿದ್ಧಪಡಿಸಿ 'ತಾವೂ ನಾವೂ ಕೆಲವುಕಾಲ ಜೊತೆಯಲ್ಲಿ ಒಟ್ಟಿಗಿರೋಣ ಬನ್ನಿ' ಎಂದು ದೂತರನ್ನು ಕಳುಹಿಸಿದರು. ಅವರ ಮನಸ್ಸಿನ ದುರ್ಭಾವವನ್ನೂ ದೌಷ್ಟ್ಯವನ್ನೂ ತಿಳಿಯದೆ ಪಾಂಡವರು ಸಮಸ್ತಸೈನ್ಯದಿಂದ ಕೂಡಿ ವಿರೋಧವಾದ ಶಕುನಗಳನ್ನೂ ಲಕ್ಷಿಸದೆ "ವಿಧಿಯನ್ನು ಮೀರುವವರಾರು" ಎಂಬ ಮಾತನ್ನು ನಿಜವನ್ನಾಗಿ ಮಾಡಿ ಹಸ್ತಿನಾಪಟ್ಟಣಕ್ಕೆ ಬಂದರು. ಧೃತರಾಷ್ಟ್ರನೇ ಮೊದಲಾದ ಕುಲದ ಹಿರಿಯರೊಡನೆ

ನಿಯತಿಃ ಕೇನ ಲಂಘ್ಯತೇ ಎಂಬ ನುಡಿಯಂ ನನ್ನಿಮಾಡಿ ಮದಗಜೇಂದ್ರಪುರಮನೈದೆ ಬರೆ ಧೃತರಾಷ್ಟ್ರಾದಿ ಕುಲವೃದ್ಧರೊಡನೆ ದುರ್ಯೋಧನನಿದಿರ್ವೋಗಿ ಧರ್ಮಪುತ್ರಂಗೆ ಪೊಡೆವಟ್ಟು ಭೀಮನಂ ಸಮಾನ ಪ್ರತಿಪತ್ತಿಯೊಳ್ ಕಂಡು ತನಗೆ ಪೊಡವಟ್ಟ ಮತ್ತಿನ ಮೂವರುಮಂ ತೆಗೆದು ತಬ್ಬಿಸಿ ಪರಸಿ ತನ್ನ ತಮ್ಮಂದಿರೆಲ್ಲರುಮನಯ್ವರ್ಗಂ ಪೊಡವಡಿಸಿ ಪೊೞಲೊಳಗಣೆವಂದು ರಾಜಮಂದಿರಮಂ ಪೊಕ್ಕು-

ಉ॥ ನೋಡಿ ಪೃಥಾತನೂಜರ ಸಭಾಗೃಹದಂದಮನಂತುಟಪ್ಪುದಂ
ಮಾಡಿಪೆನೆಂದು ಮಾಡಿಸಿ ಸಭಾಲಯಮಂ ನಿಜ ರಾಜಲೀಲೆಯೊಳ್ ।
ಕೂಡಿ ಯುಧಿಷ್ಠಿರ ಪ್ರಭುಗೆ ತಾನೆ ಸುಯೋಧನನುಯ್ದು ತೋಱಿದಂ
ನೋಡಿರೆ ಸಿಂಹಮಾಡುವರ ಬಾಲಮನಾಡಿದರೆಂಬ ಮಾೞ್ಕೆಯಿಂ ॥ ೬೯

ವ॥ ಅಂತು ಸುಯೋಧನಂ ತನ್ನ ವಿಭವಮುಮಂ ವಿಳಾಸಮುಮಂ ಪಾಂಡವರ್ಗೆ ಮೆಱೆದು ಕಂದುಕಕ್ರೀಡಾದಿ ನಾನಾ ವಿಧ ವಿನೋದಂಗಳಿಂ ಕೆಲವು ದಿವಸಮನಿರ್ದೊಂದು ದಿವಸಂ ತನಗೆ ಸಾವಂ ಸಮಕಟ್ಟುವಂತೆ ಪಿಂಗಾಕ್ಷನಕ್ಷಕ್ರೀಡೆಯಂ ಶಕುನಿಯೊಳ್ ಸಮಕಟ್ಟಿ ಪೊಡಲ್ವೇೞ್ದು ಪುಸಿಯನೆ ಪೆಱರಂ ಮುನ್ನಮಾಡಲ್ವೇೞ್ದು ತಾನುಂ ಧರ್ಮಪುತ್ರನುಂ ಕೆಲದೊಳಿರ್ದು ನೋಡುತ್ತಿರೆ ಶಕುನಿಯಿಂತೆಂದಂ-

ಕಂ॥ ನೋಡುವುದಱೊಳೇನಟ್ಟೆಯೊ
ಳಾಡುತ್ತಿರಲಾಗ ತಮ್ಮುತಿರ್ವರುಮೆನೆ ನಾ ।
ಮಾಡುವಮೆ ಬನ್ನಿಮೆಂಬುದು
ಮಾಡುವ ಬಗೆ ಬಂದು ನೆತ್ತಮಂ ಧರ್ಮಸುತಂ ॥ ೭೦

ದುರ್ಯೋಧನನು ಎದುರಾಗಿ ಹೋಗಿ ಸ್ವಾಗತಿಸಿದನು. ಧರ್ಮರಾಜನಿಗೆ ನಮಸ್ಕಾರಮಾಡಿ ಭೀಮನನ್ನು ಸಮಾನಸತ್ಕಾರಗಳಿಂದ ನೋಡಿ ತನಗೆ ನಮಸ್ಕಾರ ಮಾಡಿದ ಇತರ ಮೂವರನ್ನು ಆಲಿಂಗನಮಾಡಿಕೊಂಡು ಹರಸಿದನು. ತನ್ನ ತಮ್ಮಂದಿರನ್ನೆಲ್ಲ ಆ ಅಯ್ದುಮಂದಿಗೆ ನಮಸ್ಕಾರಮಾಡಿಸಿ ಪಟ್ಟಣದೊಳಕ್ಕೆ ಬಂದು ಅರಮನೆಯನ್ನು ಪ್ರವೇಶಮಾಡಿಸಿದನು. ೬೯. ಪಾಂಡವರ ಸಭಾಮಂಟಪದ ಸೌಂದರ್ಯವನ್ನು ನೋಡಿ ಅಂತಹುದನ್ನು ನಾನೂ ಮಾಡಿಸುತ್ತೇನೆಂದು ದುರ್ಯೋಧನನು ಸಭಾಮಂಟಪವನ್ನು ನಿರ್ಮಿಸಿ ತನ್ನ ರಾಜಲೀಲೆಯಿಂದ ಅದನ್ನು ಸೇರಿ ಯುಧಿಷ್ಠಿರ ಚಕ್ರವರ್ತಿಯನ್ನು ತಾವೇ ಕರೆದುಕೊಂಡು ಹೋಗಿ 'ಸಿಂಹದಾಟವನ್ನಾಡುವವರಿಗೆ ಬಾಲದಾಟವನ್ನಾಡಿ ತೋರಿಸಿದರು' ಎಂಬಂತೆ ಅದರ ಸೌಂದರ್ಯವನ್ನು ತೋರಿಸಿದನು. ವ॥ ದುರ್ಯೋಧನನು ತನ್ನ ವೈಭವವನ್ನೂ ವಿಳಾಸವನ್ನೂ ಪಾಂಡವರಿಗೆ ಪ್ರಕಾಶಪಡಿಸಿ ಚೆಂಡಾಟವೇ ಮೊದಲಾದ ನಾನಾವಿಧವಾದ ಸಂತೋಷಗಳಿಂದ ಕೆಲವು ದಿನವಿದ್ದು ಒಂದು ದಿನ ದುರ್ಯೋಧನನು ತನಗೆ ಸಾವನ್ನು ಸಿದ್ಧಪಡಿಸಿಕೊಳ್ಳುವ ಹಾಗೆ ಶಕುನಿಯಿಂದ ಪಗಡೆಯಾಟವನ್ನು ಸಿದ್ಧಪಡಿಸಿದನು. ಪ್ರಾರಂಭದಲ್ಲಿ ಇತರರನ್ನು ಮೊದಲು ಹುಸಿಯಾಟ ಆಡುವಂತೆ ಹೇಳಿ ತಾನೂ ಧರ್ಮರಾಯನೂ ಪಕ್ಕದಲ್ಲಿದ್ದುಕೊಂಡು ನೋಡುತ್ತಿದ್ದರು. ಆಗ ಶಕುನಿಯು ಹೀಗೆಂದನು. ೭೦. ಸುಮ್ಮನೆ ನೋಡುವುದರಲ್ಲಿ ಏನು ಪ್ರಯೋಜನ? ದುರ್ಯೋಧನನೂ ನೀನು ಪ್ರೀತಿಯಿಂದ ಆಡಬಾರದೇ ಎಂದು ಹೇಳಲು

ಕರೆದೊಡೆ ಜೂದಿಂಗಂ ಧುರ
ಭರಕಾಖೇಟಕ್ಕೆ ಭೂಭುಜಂಗಾಗದು ಮೆ ।
ಯ್ಗರೆದಿರಲೆಂಬ ಪುರಾತನ
ಗುರುವಚನಂ ತನಗೆ ನಿಟ್ಟೆಪಟ್ಟುದಱಿಂದಂ ॥ ೭೧

ವ॥ ಅಂತು ಪೂಡಿಕೊಂಡು ಸಾಟಿವಾಸಗೆಯನಿಕ್ಕಲ್ವೇೞ್ವುದುಂ ಶಕುನಿ ಮುನ್ನೆ ತನ್ನ ಮಾಡಿದ ನಾಟಿವಾಸಗೆಗಳನರಸಾಳಂತೆ ಕಣ್ಣಱಿದು ಮೆಟ್ಟಿ ಮಟ್ಟಮಱಿದಿಕ್ಕುವಾಗಲೊಡ್ಡಮಂ ಪೇೞಿಮೆನೆ ಪೊೞ್ತುಪ್ರೋಗಿಂಗಮಟ್ಟೆಗಮಾಡುವ ತಮ್ಮಿರ್ವರುಂ ಪಲಗೆಗೆ ಸಾಯಿರ ಗದ್ಯಾಣದ ಪೊನ್ನೇ ಸಾಲ್ಗುಮಗ್ಗಳಂ ಬೇಡೆಂದು ದುರ್ಯೋಧನನೊಕ್ಕಲಂ ಪುಡಿಯೊಳ್ ಪೊರಳ್ವಂತೆ ಪಾಸಂಗೆಯಂ ಪೊರಳ್ಚಿ ಮುನ್ನಂ ನೆತ್ತಮನಱಿಯದನಂತವರ ದಾಯಮನಾತೆ ಮಡಿಮಡಿಗುಱುವುದು ಮೊಂದು ಪತ್ತಂಟು ಪಲಗೆಯುಂ ಮೆಳ್ಪಡಿಸಲೆಂದು ಸೋಲ್ತು ಸೋಲದೊಳೇವಯಿಸಿಯಿನ್ನೊಡ್ಡಂ ಕೊಳ್ಳಿಮೆಂದು-

ಚಂ॥ ಪಲಗೆಗೆ ಪತ್ತು ಸಾಯಿರಮೆ ಗದ್ಯಣಮೆಂದಿರದೊಡ್ಡಿ ತಾಮೆರ
ಬ್ಬಲಗೆಯುನಾಡಿ ಸೋಲ್ತೊಡೆ ಸುಯೋಧನನೇವದೆ ಧರ್ಮಪುತ್ರನಂ ।
ಕುಲಧನ ಸಂಕುಲನಂಗಳನೆ ತಂದಿಡೆಯಿಟ್ಟವನಾಡಿ ಸೋಲ್ತನಾ
ಕುಲಮತಿ ಮುಂದೆ ಭಾರತದೊಳೊಡ್ಡುವುದು ಕಡು ನನ್ನಿ ಪಾಟಿವೋಲ್ ॥೭೨

(ದುರ್ಯೋಧನನು) ನಾವಾಡೋಣವೇ ಬನ್ನಿ ಎಂದು ಕರೆದನು. ಆಡುವ ಮನಸ್ಸು ಧರ್ಮರಾಜನಿಗೂ ಉಂಟಾಯಿತು. ೭೧. ಜೂಜಿಗೂ ರಣಕ್ಕೂ ಬೇಟೆಗೂ ಕರೆದರೆ ರಾಜನಾದವನು ಮೈಮರೆಸಿಕೊಂಡಿರುವುದು ಯೋಗ್ಯವಲ್ಲ ಎಂಬ ಪುರಾತನವಾದ ಹಿರಿಯಮಾತು ಅವನ ವ್ರತವಾಗಿ ಬಿಟ್ಟಿತು. ವ॥ ಇಬ್ಬರೂ ಆಟವಾಡಲು ಮೊದಲು ಮಾಡಿದರು. ದಾಳಗಳನ್ನು ಬಿಡುವಂತೆ ಹೇಳಲು ಶಕುನಿಯು ಮೊದಲೇ ತಾನು ಸಿದ್ಧಪಡಿಸಿದ್ದ ಕಳ್ಳದಾಳಗಳನ್ನು ರಾಜಭಟನಂತೆ ದುರ್ಯೋಧನನ ಇಂಗಿತವನ್ನು ತಿಳಿದು ದಾಳಗಳನ್ನು ಕುಟ್ಟಿ ಸಮಪ್ರದೇಶದಲ್ಲಿ ಉರುಳಿಸಿದನು. ಪಣ(ಒತ್ತೆ)ವನ್ನು ಕೇಳಿ ಎಂದನು ದುರ್ಯೋಧನ. ಹೊತ್ತು ಹೋಗುವುದುದಕ್ಕೂ ಪ್ರೀತಿಗೂ ಆಡುವ ನಮ್ಮಿಬ್ಬರಿಗೂ ಪಗಡೆಯಾಟದ ಹಾಸಿನ ಒಂದ ಹಲಗೆಗೆ ಸಾವಿರಗದ್ಯಾಣದ (ನಾಣ್ಯ) ಚಿನ್ನ (ಹಣವೇ)ವೇ ಸಾಕು, ಹೆಚ್ಚಿನದು ಬೇಡ ಎಂದು ತೀರ್ಮಾನಿಸಿದರು. ದುರ್ಯೋಧನನು ತನ್ನ ಕುಲವನ್ನೇ ಧೂಳಿನಲ್ಲಿ ಹೊರಳಿಸುವಂತೆ ದಾಳಗಳನ್ನು ಹೊರಳಿಸಿ ಮೊದ ಮೊದಲು ಪಗಡೆಯಾಟವನ್ನು ತಿಳಿಯದವನ ಹಾಗೆ ಗರವನ್ನು ಹಾಕಿ, ಸಲಸಲಕ್ಕೂ ಇಟ್ಟಿ ಒತ್ತೆಯನ್ನು ಅವರನ್ನು ಮೋಸಗೊಳಿಸುವದಕ್ಕೋಸ್ಕರ ಸೋತು ಸೋಲದಿಂದ ಅಸಮಾಧಾನಪಟ್ಟವನಂತೆ ನಟಿಸಿದನು. ಈಗ ಇನ್ನೂ ಒತ್ತೆಯನ್ನು ತೆಗೆದುಕೊಳ್ಳುವೆ ಯೆಂದು-೭೨. ಹಲಗೆಗೆ (ಒಂದು ಆಟಕ್ಕೆ) ಹತ್ತುಸಾವಿರ ಗದ್ಯಾಣವಿರಲಿ ಎಂದು ತಕ್ಷಣ ಒಡ್ಡಿ ಆ ಹಲಗೆಗಳನ್ನೂ ಸೋತನು. ಸಮಾಧಾನದಿಂದ ಧರ್ಮರಾಯನೂ ದುರ್ಯೋಧನನೂ ಕಲಕಿದ ಮನಸ್ಸುಳ್ಳವರಾಗಿ ಸಮಸ್ತಕುಲಧನಗಳನ್ನೂ ಒಡ್ಡಿದರು. ಮುಂದೆ ನಡೆಯಲಿರುವ ಭಾರತಯುದ್ಧದಲ್ಲಿ ತನ್ನ ವಂಶವನ್ನು ಬಲಿಯಾಗಿ ಒಡ್ಡುವುದನ್ನು ನಿಜವನ್ನಾಗಿಸುವಂತೆ ಧರ್ಮರಾಜನು ಕುಲಧನಸಮೂಹಗಳನ್ನೂ ತಂದು

ವ|| ಅಂತು ಕಾಳಿಂಗಾಂಗ ವನಸಂಭವಂಗಳಪ್ಪ ಮದಾಂಧಗಂಧಸಿಂಧುರಂಗಳುಮನಾಜಾನೇಯ ಕಾಂಭೋಜ ಭೂಮಿಜಂಗಳಪ್ಪ ಜಾತ್ಯಶ್ವಂಗಳುಮನೊಡ್ಡಿದಾಗಳ್ ದುರ್ಯೋಧನಂ ಬಂದಿಕಾಱನಂತೆ ಸೆಱೆಗೆಯ್ದುಂ ವ್ರಣವೈದ್ಯನಂತೆ ಕೊಡಸಾರಿಯಂ ಪಿಡಿದುಂ ಸೂಳೆಯಂತೆ ಕಟಿವುಟಿವನಱಿದುಂ ರಸವಾದಿಯಂತೆ..... ಕಟ್ಟಿಯುಂ ಪೆರ್ಜೋಡೆಯಂತೆ ನುಣ್ಣಿತಂ ವೇೞ್ದುವಣುಗಾಳಂತೆ ದಾಯಂಬಡೆದುಂ ಮೇಳದಂಕದಂತೆ ಸುೞಿಯಱಿದುಂ ಡೊಂಬರ ಕೋಡಗದಂತಾಡಿ ಗೆಲ್ದಾಗಳ್ ತಮ್ಮಣ್ಣನ ಸೋಲಮಂ ಕಂಡಾಗಳ್ ಭೀಮಸೇನನಿಂತೆಂದಂ-

ಕಂ|| ಭಯಮಱಿಯದ ಕಲಿಯುಂ ಚಾ
ಗಿಯುಮೆನಿಸದೆ ನಾಡೆ ಲೋಭಿಯುಂ ಪಂದೆಯುಮಾ ।
ಗಿಯೆ ಬಾೞ್ವಂಗಲ್ಲದೆ ಸೂ
ಳೆಯ ಕಣ್ ಪಾಸಗೆಯ ಕಣ್ಣುಮೇನುೞುಗುಗುಮೇ ॥ ೭೩

ವ|| ಎಂದು ಕಯ್ಪೆಸರಂಬೆರಸು ನುಡಿದ ಭೀಮಸೇನನ ನುಡಿಗಳ್ ಕಿಡಿಗಳಂತೆ ತನ್ನ ಮನಮನೊನಲಿಸೆಯುಮೆರ್ದೆಯಂ ಕನಲಿಸೆಯುಮೇನುಮೆನ್ನದೆ ಮುಂತಣ ಕಜ್ಜಮನೆ ಬಗೆದುಸಿರದಿರ್ದ ದುರ್ಯೋಧನನಲ್ಲಿಗೆ ಗಾಂಗೇಯನುಂ ವಿದುರನುಂ ಬಂದು-

ಉ|| ಸಾಲದೆ ಜೂದು ನಿಮ್ಮೊಳಗಿದೇಂ ಗಳ ಮಾಣಿಸಿಮೆಂದೊಡನ್ನಭೂ
ಪಾಲಕಿರೀಟತಾಟಿತಪದಂ ಯಮನಂದನನಜ್ಜ ನಾಡೆಯುಂ ।
ಸೋಲದೊಳಾದಮೇವಯಿಸಿದಂ ನುಡಿಗಿನ್ನೆಡೆಯಿಲ್ಲ ಪೋಗಿಮಾ
ತ್ಮಾಲಯಕೆಂದೊಡೇನುಮೇನಲಣ್ಮದೆ ಬಾರಿಸಲಣ್ಮದಿರ್ವರುಂ ॥ ೭೪

ಒತ್ತೆಯನ್ನಾಗಿಟ್ಟು ಆಡಿ ಸೋತನು. ವ|| ಹಾಗೆ ಕಳಿಂಗ ಮತ್ತು ಅಂಗದೇಶದ ಕಾಡುಗಳಲ್ಲಿ ಹುಟ್ಟಿದ ಮದ್ದಾನೆಗಳನ್ನೂ ಉತ್ತಮ ಜಾತಿಯವುಗಳಾದ ಕಾಂಭೋಜದೇಶದಲ್ಲಿ ಹುಟ್ಟಿದ ಕುದುರೆಗಳನ್ನೂ ಒಡ್ಡಿದಾಗ ಸೆರೆಹಿಡಿಯುವಂತೆ ಬಂಧಿಸಿಯೂ ಹುಣ್ಣುಗಳನ್ನೂ ಚಿಕಿತ್ಸೆಮಾಡುವ ವೈದ್ಯನಂತೆ ಕೊಡಸಾರಿ (ಹಾಳ-ಒಂದು ಮೂಲಿಕೆ)ಗಳನ್ನೂ ಹಿಡಿದೂ ಸೂಳೆಯರ ಹಾಗೆ ಕಳಿದು ಉಳಿದುದನ್ನೆಲ್ಲಾ ತಿಳಿದೂ ಪಾದರಸದಿಂದ ಚಿನ್ನವನ್ನು ಮಡುವ ರಸವಾದಿಯಂತೆ ಕಾಯಿಗಳನ್ನು ಕುಟ್ಟಿಯೂ ಹಿರಿಯ ಜಾರೆಯರಂತೆ ನಯವಾಗಿ ಮಾತನಾಡಿಯೂ ಪ್ರೀತಿಯ ಮನುಷ್ಯನಂತೆ ಗರಗಳನ್ನು ಹೊಂದಿಯೂ - ದಾಯಭಾಗವನ್ನು ಹೊಂದಿಯೂ ಪ್ರೇಮಕಲಹದಂತೆ ಸುಳಿವನ್ನು ತಿಳಿದುಕೊಂಡೂ ಡೊಂಬರ ಕೋತಿಯಂತೆ ಆಡಿ ಒತ್ತೆಯನ್ನೆಲ್ಲ ಗೆದ್ದಾಗ ಭೀಮಸೇನನು ತಮ್ಮಣ್ಣನ ಸೋಲನ್ನು ಕಂಡು ಹೀಗೆಂದನು. ೭೩. ಭಯವನ್ನೇ ತಿಳಿಯದ ಶೂರನೂ ತ್ಯಾಗಿಯೂ ಎನಿಸಿಕೊಳ್ಳದೆ ವಿಶೇಷವಾಗಿ ಜಿಪುಣನೂ ಹೇಡಿಯೂ ಆಗಿ ಬಾಳುವವನಿಗಲ್ಲದೆ (ಇತರರಿಗೆ) ಸೂಳೆಯ ಕಣ್ಣೂ ದಾಳಗಳ ಕಣ್ಣೂ ಬಗ್ಗಿ ಅಧೀನವಾಗುತ್ತವೆಯೇ? ವ|| ಎಂದು ಕಹಿಯಾದ (ಹಿತವಲ್ಲದ) ಧ್ವನಿಯೊಡನೆ ಕೂಡಿ ನುಡಿದ ಭೀಮಸೇನನ ಮಾತುಗಳು ಬೆಂಕಿಯ ಕಿಡಿಗಳಂತೆ ತನ್ನ ಮನಸ್ಸನ್ನು ಮೂದಲಿಸಿದರೂ ಕೆರಳಿಸಿದರೂ ಏನನ್ನೂ ಹೇಳದೆ ಮುಂದಿನ ಕಾರ್ಯವನ್ನೇ ಯೋಚಿಸಿ ಮಾತನಾಡದಿದ್ದ ದುರ್ಯೋಧನನ ಹತ್ತಿರಕ್ಕೆ ಭೀಷ್ಮವಿದುರರು ಬಂದು ೭೪. ನಿಮ್ಮಲ್ಲಿ ಇನ್ನೂ ಜೂಜು

ವ॥ ಧೃತರಾಷ್ಟ್ರನಲ್ಲಿಗೆ ಪೋಗಿ-

ಚಂ॥ ನಿನಗೆ ಮಗಂ ಪುರಾಕೃತದ ಕರ್ಮಮೆ ಪುಟ್ಟುವವೋಲೆ ಪುಟ್ಟಿ ನಿ
ಮ್ಮಿನಿಬರುಮಂ ರಸಾತಳದೊಳಟ್ಟಿದಪಂ ಪಗೆ ಪೊಲ್ಲ ಪಾಂಡು ನಂ ।
ದನರೊಳಹೀಂದ್ರಕೇತನನ ಬೂದಿನ ಗೆಲ್ಲಮದೆಂತುಟೆನ್ನೆ ನಂ
ಜಿನ ಸವಿಯಂತುಟೆಂದೊಡಿನಿಸಂತದೊಳಂತಕನೆಲ್ಲಿಗಟ್ಟುಗುಂ ॥ ೭೫

ಕಂ॥ ಪುರುಡಿಸಿಕೊಂಡೀಗಳ್ ನೀ
ನರಸಿನ ಗರ್ವದೊಳೆ ಬೀಗಿ ಬೆಸೆಯದೆ ಮಗನಂ ।
ಕರೆದೊಪ್ಪಿಸವೇಟ ಯುಧಿ
ಷ್ಠಿರಂಗೆ ಮುನ್ನ ಗೆಲ್ದ ವಸ್ತುವಾಹನ ಚಯಮಂ ॥ ೭೬

ಮ॥ ಸ್ರ ॥ ಕದನಪ್ರಾರಂಭಶೌಂಡಂ ರಿಪುನೃಪಬಲದಾವಾನಲಂ ವೈರಿ ಭೂಭೃ
ನ್ಮದವನ್ಮಾತಂಗಕುಂಭಸ್ಥಳ ದಳನಖರೋಗ್ರಾಸಿ ಪಂಚಾಸ್ಯ ಧೈರ್ಯಂ ।
ವಿದಿತ ಪ್ರತ್ಯಕ್ಷನಾಶಾಕರಿ ನಿಕಟತಟಶ್ರಾಂತ ದಾನಂ ಭರಂಗೆ
ಯ್ದಿದಿರೊಳ್ ವಿಕ್ರಾಂತತುಂಗಂ ಹರಿಗನಿರೆ ಬಗುರ್ತಾಂಪನಂತಾವ ಗಂಡಂ ॥ ೭೭

ಸಾಕಾಗಲಿಲ್ಲವೇ, ನಿಮ್ಮ ನಿಮ್ಮಲ್ಲಿಯೂ ಇದೇನಿದು? ನಿಲ್ಲಿಸಿ ಎಂದರು. ಶತ್ರು ರಾಜರನ್ನು ಕಾಲ್ಗೆರಗಿಸಿದ ಯಮನಂದನನು ಅವರನ್ನು ಕಂಡು ಅಜ್ಜಾ ನನಗುಂಟಾದ ಸೋಲಿನಿಂದ ನಾನು ವಿಶೇಷ ನೊಂದಿದ್ದೇನೆ, ಈಗ ಮಾತನಾಡುವುದಕ್ಕೂ ಅವಕಾಶವಿಲ್ಲ ನಿಮ್ಮ ಮನೆಗೆ ದಯಮಾಡಿಸಿ ಎಂದನು. ಏನು ಹೇಳುವುದಕ್ಕೂ ಅಸಮರ್ಥರಾಗಿ ಅವನನ್ನು ತಪ್ಪಿಸುವುದಕ್ಕಾಗದೆ ಇಬ್ಬರೂ ಧೃತರಾಷ್ಟ್ರನಲ್ಲಿಗೆ ಬಂದು ೭೫. "ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮವೇ ಹುಟ್ಟಿದಂತೆ ಹುಟ್ಟಿದ ನಿನ್ನ ಮಗನು ನಿಮ್ಮೆಲ್ಲರನ್ನೂ ಪಾತಾಳದಲ್ಲಿ ಮುಳುಗಿಸುತ್ತಾನೆ. ಪಾಂಡುಪುತ್ರರಲ್ಲಿ ದ್ವೇಷವು ಸಲ್ಲದು (ಯೋಗ್ಯವಲ್ಲ) ದುರ್ಯೋಧನನ ಜೂಜಿನಲ್ಲಿ ಪಡೆದ ಗೆಲವು ಎಂತಹುದು ಎನ್ನುವೆಯಾದರೆ ಅದು ವಿಷದ ರುಚಿಯಂತಹುದು. ಕೊನೆಯಲ್ಲಿ ಯಮನಲ್ಲಿಗೆ ಕಳುಹಿಸಿತ್ತದೆ. ೭೬. ಈಗ ನೀನು ಅಸೂಯೆಯಿಂದಲೂ ರಾಜನೆಂಬ ಗರ್ವದಿಂದಲೂ ಉಬ್ಬಿ ಹೋಗದೆ ಮಗನನ್ನು ಕರೆದು ಮೊದಲು ಗೆದ್ದ ವಸ್ತುವಾಹನಗಳ ಸಮೂಹವನ್ನು ಧರ್ಮರಾಜನಿಗೆ ಒಪ್ಪಿಸುವಂತೆ ಹೇಳು ವ॥ ಎಂದು ಮತ್ತೂ ಹೀಗೆಂದರು. ೭೭. ಯುದ್ಧೋದ್ಯೋಗದಲ್ಲಿ ಆಸಕ್ತಿಯುಳ್ಳವನೂ ಶತ್ರುರಾಜರ ಸೈನ್ಯಕ್ಕೆ ಕಾಡುಗಿಚ್ಚಿನಂತಿರುವವನೂ ವೈರಿರಾಜರೆಂಬ ಮದ್ದಾನೆಗಳ ಕುಂಭಸ್ಥಳವನ್ನು ಸೀಳುವ ಹರಿತವೂ ಭಯಂಕರವೂ ಆದ ಕತ್ತಿಯನ್ನುಳ್ಳ ಸಿಂಹಧೈರ್ಯವುಳ್ಳವನೂ ಇಂದ್ರಿಯಗಳಿಗೆ ಗೋಚರವಾದುದನ್ನೆಲ್ಲ ಚೆನ್ನಾಗಿ ತಿಳಿದಿರುವವನೂ ದಿಗ್ಗಜಗಳವರೆಗೂ ಹರಡಿರುವ ತ್ಯಾಗ ಗುಣವುಳ್ಳವನೂ ಆದ ಉನ್ನತ ಪರಾಕ್ರಮಿಯಾದ ಅರ್ಜುನನು ಆರ್ಭಟಮಾಡಿಕೊಂಡು

ಇದು ವಿವಿಧ ವಿಬುಧಜನವಿನುತ ಜಿನಪದಾಂಭೋಜ
ವರ ಪ್ರಸಾದೋತ್ಪನ್ನ ಪ್ರಸನ್ನ ಗಂಭೀರ ವಚನ ರಚನ
ಚತುರ ಕವಿತಾಗುಣಾರ್ಣವವಿರಚಿತಮಪ್ಪ
ವಿಕ್ರಮಾರ್ಜುನ ವಿಜಯದೊಳ್
ಷಷ್ಠಾಶ್ವಾಸಂ

ಎದುರಿಗಿರುವಾಗ ಹಾಗೆಯೇ ಆರ್ಭಟಿಸಿ ಎದುರಿಸಿ ಭಯಪಡಿಸುವ ಶೂರನಾವ ನಿದ್ದಾನೆ ಎಂದರು. ಇದು ಅನೇಕ ದೇವತೆಗಳಿಂದ ಸ್ತುತಿಸಲ್ಪಟ್ಟ ಜಿನಪಾದಕಮಲಗಳ ವರಪ್ರಸಾದದಿಂದ ಹುಟ್ಟಿದುದೂ ತಿಳಿಯಾದುದೂ ಗಂಭೀರವಾದುದೂ ಆದ ಮಾತುಗಳ ರಚನೆಯಲ್ಲಿ ಚಾತುರ್ಯವನ್ನುಳ್ಳ ಕವಿತಾಗುಣಾರ್ಣವನಿಂದ ರಚಿತವಾದುದೂ ಆದ ವಿಕ್ರಮಾರ್ಜುನ ವಿಜಯದಲ್ಲಿ ಆರನೆಯ ಆಶ್ವಾಸ.

# ಸಪ್ತಮಾಶ್ವಾಸಂ

ಕಂ॥ ಶ್ರೀ ರಮಣೀರಮಣಂಗರಿ
ನಾರೀ ವೈಧವ್ಯ ದಿವ್ಯ ದೀಕ್ಷಾ ದಕ್ಷಂ ।
ಗಾರೆಱೆ ಹರಿಗಂಗೀಗಡೆ
ಬಾರಿಸು ನೀಂ ನಿನ್ನ ಮಗನನಂಧನರೇಂದ್ರಾ ॥ ೧

ಕಾದುದು ಸರಣ್ಗವಂದರ
ನಾದುದು ಕಾಲಾಗ್ನಿಬಲವದರಿನೃಪತಿಗೆ ಕಾ ।
ಪಾದುದು ನೆಲಕ್ಕೆ ತೋಳ್ವಲ
ಮಿಾ ದೊರೆತನೆ ಮರುಳೆ ಹರಿಗನೊಳ್ ಪಗೆಗೊಳ್ವಾ ॥ ೨

ವ॥ ಎಂದೆನಿತಾನುಂ ತೆಱದೊಳೆ ಸಾಱೆಯುಂ ಕೀಱೆಯುಂ ನುಡಿದೊಡೆ ಧೃತರಾಷ್ಟ್ರಂ ಮಗನಲ್ಲಿಗೆ ವಂದು ಜಡಿದು ನುಡಿದುಮೇಗೆಯ್ದುಮೊಡಂಬಡಿಸಲಾಱದಿರೆ ಯುಧಿಷ್ಠಿರಂ ತಲೆಗವಿ ವನಲ್ಲದೆಯುಮೇವದೊಳ್ ತಲೆಗವಿದು ಸಿಗ್ಗಂ ಕೊಂಡಾಡಿ ನೆತ್ತಮನಾಡಿ-

ಕಂ॥ ವ್ಯಾಳ ಗಜಂಗಳನಗ್ಗದ
ಸೂಳೆಯರೊಕ್ಕಲನಲನರ್ಘ್ಯ ವಸ್ತುಗಳನಿಳಾ ।
ಪಾಳಂ ಸೋಲ್ತೊಡೆ ಜೂದಿನ
ಕೇಳಿಯನಾ ಕೇಳಿಯನಿತಱೊಳ್ ಮಾಣಿಸಿದರ್ ॥ ೩

ವ॥ ಮಾಣಿಸಿದೊಡೆ ಮಾಣದೆ ರಪಣಮಂ ತೋಱೆಯುಮೊತ್ತೆಯನುಗ್ಗಡಿಸಿಯುಮಾಡಿ ಮನೆ ಪೆಱತೇನುಮುಪಾಯಮಿಲ್ಲದೆಮ್ಮಾಳ್ವ ನೆಲನೊತ್ತೆಯೆಂದೊಡೆ ಬಗೆದು ನೋಡಿ ಗೆಲ್ದಿಂ

೧. 'ಐಶ್ವರ್ಯಲಕ್ಷ್ಮೀಪತಿಯೂ ಶತ್ರುರಾಜಸ್ತ್ರೀಯರಿಗೆ ವೈಧವ್ಯದೀಕ್ಷೆಯನ್ನು ಕೊಡುವ ಶಕ್ತಿಯುಳ್ಳವನೂ ಆದ ಅರಿಕೇಸರಿಗೆ ಸಮಾನರಾದವರಾರು? ಕುರುಡ ದೊರೆಯೇ ನಿನ್ನ ಮಗನನ್ನು ಈ ಜೂಜಿನ ಕಾರ್ಯದಿಂದ ನಿವಾರಿಸುವವನಾಗು'. ೨. ಅರ್ಜುನನ ತೋಳಿನ ಬಲವು ಶರಣಾಗತರನ್ನು ರಕ್ಷಿಸಿತು. ಬಲಿಷ್ಠರಾದ ಶತ್ರುರಾಜರಿಗೆ ಕಾಲಾಗ್ನಿಯಾಯಿತು. ಭೂಮಿಗೆ ರಕ್ಷಣೆಯಾಯಿತು. ಅವನ ಬಾಹುಬಲವು ಇಂತಹುದು ಎಂದು ತಿಳಿದೂ ಹುಚ್ಚ! ಅರ್ಜುನನಲ್ಲಿ ಹಗೆಗೊಳ್ಳುತ್ತೀಯಾ? ವ॥ ಎಂದು ಎಷ್ಟೋ ರೀತಿಯಲ್ಲಿ ಸಾರಿ ಸ್ಪಷ್ಟವಾಗಿ ಕೋಪದಿಂದಲೂ ಬಲಾತ್ಕಾರದಿಂದಲೂ ಭೀಷ್ಮರು ಹೇಳಿದರು. ಧೃತರಾಷ್ಟ್ರನು ಮಗನ ಹತ್ತಿರಕ್ಕೆ ಬಂದು ಗದರಿಸಿ ಬಯ್ದು ಹೇಳಿ ಏನೂ ಮಾಡಿದರೂ ಒಪ್ಪಿಸಲಾಗಲಿಲ್ಲ. ಧರ್ಮರಾಜನು (ಸಾಮಾನ್ಯವಾಗಿ) ತಲೆತಗ್ಗಿಸುವವನಲ್ಲವಾದರೂ ತನಗುಂಟಾದ ಸೋಲಿನಲ್ಲಿ ತಲೆತಗ್ಗಿಸಿ ನಾಚಿಕೆಯಿಂದ ಪಗಡೆಯಾಟವಾಡಿ-೩. ಭಯಂಕರವಾದ (ತುಂಟಾದ) ಆನೆಗಳನ್ನೂ ಶ್ರೇಷ್ಠರಾದ ದಾಸಿಯರನ್ನೂ ಕುಟುಂಬಗಳನ್ನೂ ಬೆಲೆ ಯಿಲ್ಲದ ವಸ್ತುಗಳನ್ನೂ ಸೋತನು. ಜೂಜಿನಾಟವನ್ನು ಆ ಆಟಕ್ಕೆ ನಿಲ್ಲಿಸಿದರು. ವ॥ ಹಾಗೆ ನಿಲ್ಲಿಸಿದರೂ ದುರ್ಯೋಧನನು ನಿಲ್ಲಿಸಲು ಇಷ್ಟಪಡದೆ ಪದಾರ್ಥಗಳನ್ನು

ಬಱಿಯಂ ಮುದುಗಣ್ಗಳ್ ಮಗುಱಿ ಕುಡಿಸುವರೆಂಬ ಬಗೆಯೊಳಂ ವಿಕ್ರಮಾರ್ಜುನನುಂ ಭೀಮನುಂ ಯಮಳರುಮೆಱಿದುಕೊಳ್ವರೆಂಬ ಸಂಕೆಯೊಳಮಂತಲ್ತು ನಿನ್ನ ನನ್ನಿಯೊಳಂ ವರ್ಷಾವಧಿಯೊಳಲ್ಲದೆ ನೆಲನನೊತ್ತೆವಿಡಿಯೆನೆಂದೊಡೆ ಧರ್ಮಪುತ್ರಂ ಪನ್ನೆರಡು ವರುಷಂಬರಂ ನಾಡಂ ಪುಗದರಣ್ಯದೊಳಿರ್ಪಂತುಮಜ್ಞಾತವಾಸಮೆಂದೊಂದು ವರುಷದೊಳಾರಾನು ಮಱಿದರಪ್ಪೊಡೆ ಮತ್ತಂ ದ್ವಾದಶಾಬ್ದಂಬರಂ ನಾಡ ದೆಸೆಯಂ ನೋಡದಂತಾಗೆಯೊಂದೆ ಪಲಗೆಯೊಳೆ ಗೆಲ್ಲಸೋಲಮಪ್ಪಂತು ನನ್ನಿ ನುಡಿದು ನೆಲನನೊತ್ತೆಯಿಟ್ಟಾಡಿ-

ಕಂ॥ ಆ ಪಲಗೆಯುಮಂ ಸೋಲ್ತು ಮ
ಹೀಪತಿ ಚಲದಿಂ ಬಱಿಕ್ಕೆ ಸೋಲ್ತಂ ಗಡಮಾ ।
ದ್ರೌಪದಿಯುಮನೇನಾಗದೊ
ಪಾಪದ ಫಳಮೆಯ್ದುವಂದ ದೆವಸದೊಳಾರ್ಗಂ ॥ ೪

ವ॥ ಅಂತು ದುರ್ಯೋಧನನಜಾತಶತ್ರುವಿನ ಸರ್ವಸ್ವಮೆಲ್ಲಮಂ ಗೆಲ್ದು ಗೆಲ್ದ ಕಸವರ ಮೆಲ್ಲಂ ಬಂದುದು ಪಾಂಚಾಳರಾಜತನೂಜೆಯೊರ್ವಳ್ ಬಂದಳಿಲ್ಲಾಕೆಯಂ ತನ್ನಿಮೆಂದು ಯುಧಿಷ್ಠಿರಂ ಕೊಟ್ಟ ನನ್ನಿಯ ಬಲದೊಳ್ ತನಗೆ ಲಯಮಿಲ್ಲದುದನಱಿದು ಮೇಗಿಲ್ಲದ ಗೊಡ್ಡಾಟಮಾಡಲ್ ಬಗೆದು ಕರ್ಣನ ಲೆಂಕಂ ಪ್ರಾತಿಕಾಮಿಯೆಂಬನುಮಂ ತನ್ನ ತಮ್ಮಂ

ತೋರಿಸಿಯೂ ಒತ್ತೆಗಳನ್ನು ಕೂಗಿ ಹೇಳುತ್ತಲೂ ಆಡಿ ಎನ್ನಲು ಬೇರೆ ಉಪಾಯ ವಿಲ್ಲದೆ ಧರ್ಮರಾಜನು 'ನಾವು ಆಳುತ್ತಿರುವ ರಾಜ್ಯವೇ ಒತ್ತೆ'ಯೆಂದೊಡನೆಯೇ ಯೋಚನೆಮಾಡಿ ಗೆದ್ದ ಬಳಿಕ (ಇದನ್ನು) ಈ ಮುದಿಕಣ್ಣಳು ಪುನಃ ಹಿಂದಕ್ಕೆ ಕೊಡಿಸಿಬಿಡುತ್ತಾರೆಂಬ ಯೋಚನೆಯಿಂದಲೂ ಅರ್ಜುನಭೀಮನಕುಳರು ಸೆಳೆದುಕೊಳ್ಳುತ್ತಾರೆಂಬ ಸಂದೇಹದಿಂದಲೂ ದುರ್ಯೋಧನನು (ಧರ್ಮರಾಜನನ್ನು ಕುರಿತು) ಹಾಗಲ್ಲ ನಿನ್ನ ಮಾತಿನಲ್ಲಿ ನಂಬಿಕೆಯಿಲ್ಲದಿಲ್ಲ. ಆದರೂ ವರ್ಷದ ಕಾಲನಿರ್ದಿಷ್ಟವಾದಲ್ಲದೆ ನಿನ್ನ ಭೂಮಿಯನ್ನು ಒತ್ತೆಯಾಗಿ ಸ್ವೀಕರಿಸುವುದಿಲ್ಲ ಎನ್ನಲು ಧರ್ಮರಾಜನು 'ಹನ್ನೆರಡು ವರ್ಷದವರೆಗೆ ನಾಡನ್ನು ಪ್ರವೇಶಮಾಡದೆ ಕಾಡಿನಲ್ಲಿರುತ್ತೇವೆ. ಒಂದು ವರ್ಷ ಅಜ್ಞಾತವಾಸಮಾಡುತ್ತೇವೆ. ಆ ಅಜ್ಞಾತವಾಸವೆಂಬ ಒಂದು ವರ್ಷದಲ್ಲಿ ಯಾರಾದರೂ ತಿಳಿದರಾದರೆ ಪುನಃ ಹನ್ನೆರಡು ವರ್ಷದವರೆಗೆ ರಾಜ್ಯದ ಕಡೆಗೆ ನೋಡುವುದಿಲ್ಲ. ಒಂದು ಹಲಗೆ(ಆಟ)ಯಲ್ಲಿಯೇ ಗೆಲುವು ಸೋಲುಗಳನ್ನು ನಿಷ್ಕರ್ಷಿಸೋಣ' ಎಂದು ಹೇಳಿ ರಾಜ್ಯವನ್ನು ಒತ್ತೆಯಿಟ್ಟು ಆಡಿ ೪. ಆ ಹಲಗೆಯನ್ನೂ ಸೋತನು. ಧರ್ಮರಾಜನು ಅಷ್ಟಕ್ಕೇ ಬಿಡದೆ ಬಳಿಕ ಹಟದಿಂದ ದ್ರೌಪದಿಯನ್ನೂ ಸೋತನು. ಪಾಪದ ಫಲ ಕೂಡಿಬಂದ ದಿವಸ ಯಾರಿಗೆ ಏನು ತಾನೇ ಆಗುವುದಿಲ್ಲ. ವ॥ ಹಾಗೆ ದುರ್ಯೋಧನನು ಶತ್ರು ಹುಟ್ಟದೆಯೇ ಇರುವ (ಸರ್ವಸಖನಾದ) ಯುಧಿಷ್ಠಿರನ ಸರ್ವಸ್ವವನ್ನೂ ಗೆದ್ದು, ಗೆದ್ದ ಬೆಲೆಯುಳ್ಳ ವಸ್ತುಗಳೆಲ್ಲವೂ ಬಂದುವು. ದ್ರೌಪದಿಯೊಬ್ಬಳು ಮಾತ್ರ ಬಂದಿಲ್ಲ. ಆಕೆಯನ್ನು ತನ್ನಿಯೆಂದು ಧರ್ಮರಾಜನು ಕೊಟ್ಟ ಸತ್ಯವಾಕ್ಕಿನ ಬಲದಿಂದಲೇ ತನಗೆ ಆಜ್ಞೆಗೆ ಕೇಡಿಲ್ಲವೆಂದು ತಿಳಿದು ಉತ್ತಮವಲ್ಲದ ತುಂಟಾಟವಾಡಲು (ಚೇಷ್ಟೆ ಮಾಡಲು)

ದುಶ್ಶಾಸನನುಮಂ ಪೇೞ್ದೊಡವಂದಿರಾಗಳೆ ಬೀಡಿಂಗೆವರಿದು ರಜಸ್ವಲೆಯಾಗಿರ್ದೆಂ ಮುಟ್ಟಲಾಗದೆನೆಯುಮೊತ್ತಂಬದಿಂದೊಳಗಂ ಪೊಕ್ಕು ಪಾಂಚಾಳಿಯಂ ಕಣ್ಗಿಡೆ ಜಡಿದು ಮುಡಿಯಂ ಪಿಡಿದು ತನ್ಮಧ್ಯದಿಂ ಸುಯೋಧನನ ಸಭಾಮಧ್ಯಕ್ಕೆ ತಂದು–

ಮ।। ಮನದೊಳ್ ನೊಂದಮರಾಪಗಾಸುತ ಕೃಪ ದ್ರೋಣಾದಿಗಳ್ ಬೇಡವೇ
ಡೆನೆಯುಂ ಮಾಣದೆ ತೊೞ್ತಿ ತೊೞ್ತುವೆಸಕೆಯ್ ಪೋ ಪೋಗು ನೀನೆಂದು ಬ ।
ಯ್ವನಿತಾನುಂ ತೆಱದಿಂದಮುಟ್ಟುದುವರಂ ಕೆಯ್ವಂದು ದುಶ್ಶಾಸನಂ
ತನಗಂ ಮೆಲ್ಲನೆ ಮೃತ್ಯು ಸಾರೆ ತೆಗೆದಂ ಧಮ್ಮಿಲ್ಲಮಂ ಕೃಷ್ಣೆಯಾ ।। ೫

ವ।। ಅಂತು ಕೃಷ್ಣೆಯ ಕೃಷ್ಣಕಬರೀಭಾರಮಂ ಮೇಗಿಲ್ಲದೆ ಪಿಡಿದು ತೆಗೆದು ಕೃಷ್ಣೋರಗನಂ ಪಿಡಿದ ಬೆಳ್ಳಾಳಂತುಮ್ಮನೆ ಬೆಮರುತ್ತುಮಿರ್ದ ದುಶ್ಶಾಸನನುಮಂ ಕಣ್ಸೈತ್ತಿ ಕಿಱುನಗೆ ನಗುವ ಕೂರದರ ಮೊಗಮುಮಂ ತಮ್ಮಣ್ಣನ ಬಿನ್ನನಾದ ಮೊಗಮುಮಂ ಕಂಡು ಕಣ್ಗಳಿಂ ನೆತ್ತರ್ ತುಳುಂಕೆ–

ಉ।। ಕೋಪದ ಪೆರ್ಚಿನೊಳ್ ನಡುಗುವೂರುಯುಗಂ ಕಡುಪಿಂದರಲ್ವ ನಾ
ಸಾಪುಟಮೆಕ್ಕೆಯಿಂ ಪೊಡರ್ವ ಪುರ್ವು ಪೊದಳ್ದ ಲಯಾಂತಕ ತ್ರಿಶೂ ।
ಲೋಪಮ ಭೀಷಣ ಭ್ರುಕುಟಿ ಮುನ್ನಮೆ ರೌದ್ರ ಗದಾಯುಧಂಬರಂ
ಪೋಪ ಭುಜಾರ್ಗಳಂ ರಿಪುಗಳ ಗ್ರಹಮಾದುದು ಭೀಮಸೇನನಾ ।। ೬

ಯೋಚಿಸಿ ಕರ್ಣನ ಸೇವಕನಾದ ಪ್ರಾತಿಕಾಮಿಯೆಂಬುವನಿಗೂ ತನ್ನ ತಮ್ಮನಾದ ದುಶ್ಶಾಸನನಿಗೂ ಆಜ್ಞೆಮಾಡಿದನು. ಅವರು ಆಗಲೇ ಅವಳ ಅಂತಃಪುರಕ್ಕೆ ಓಡಿಹೋಗಿ 'ರಸಜ್ವಲೆಯಾಗಿದ್ದೇನೆ ಮುಟ್ಟಕೂಡದು' ಎಂದರೂ ಬಲಾತ್ಕಾರದಿಂದ ಒಳಗೆ ಪ್ರವೇಶಿಸಿ ದ್ರೌಪದಿಯನ್ನು ಭಯಪಡುವಂತೆ ಗದರಿಸಿ ಅವಳ ತುರುಬನ್ನು ಹಿಡಿದು ಆ ಮನೆಯ ಮಧ್ಯಭಾಗದಿಂದ ದುರ್ಯೋಧನನ ಸಭಾಮಂದಿರದ ಮಧ್ಯಭಾಗಕ್ಕೆ ಸೆಳೆದು ತಂದರು. ೫. ಭೀಷ್ಮ ಕೃಪ ದ್ರೋಣಾದಿಗಳು ಮನಸ್ಸಿನಲ್ಲಿ ದುಃಖಪಟ್ಟು ಬೇಡಬೇಡವೆಂದರೂ ಬಿಡದೆ 'ದಾಸಿ, ನಡೆ, ನೀನು ತೊತ್ತಿನ ಕೆಲಸಮಾಡು ಹೋಗು, ಹೋಗು' ಎಂದು ಎಷ್ಟೋ ರೀತಿಯಲ್ಲಿ ಬಯ್ದು ಉಟ್ಟ ಸೀರೆಯವರೆಗೆ ಕೈಹಾಕಿ ತನಗೆ ಮೃತ್ಯು ಸಮೀಪವಾಗಿರಲು ದುಶ್ಶಾಸನನು ದ್ರೌಪದಿಯ ತುರುಬನ್ನು ಹಿಡಿದು ಸೆಳೆದನು. ವ।। ಹಾಗೆ ದ್ರೌಪದಿಯ ಕಪ್ಪಾದ ಮುಡಿಯ ಗಂಟನ್ನು ನೀಚವಾದ ರೀತಿಯಲ್ಲಿ ಹಿಡಿದು ಸೆಳೆದು ಕಾಳಸರ್ಪವನ್ನು ಹಿಡಿದ ಪೆಚ್ಚನಂತೆ ಸುಮ್ಮನೆ ಬೆವರುತ್ತಿದ್ದ ದುಶ್ಶಾಸನನೂ ಕಣ್ಸನ್ನೆಮಾಡಿ (ಹಾಸ್ಯದಿಂದ) ಹುಸಿನಗೆನಗುವ ಅಹಿತರ ಮುಖವನ್ನೂ ತಮ್ಮಣ್ಣನ ಖಿನ್ನವಾದ ಮುಖವನ್ನೂ ಭೀಮನು ನೋಡಿದನು. ಕಣ್ಣಿನಲ್ಲಿ (ಕೋಪದಿಂದ) ರಕ್ತವು ತುಳುಕಿತು. ೬. ಕೋಪದ ಆಧಿಕ್ಯದಿಂದ ಎರಡು ತೊಡೆಗಳೂ ನಡುಗಿದುವು. ವೇಗದಿಂದ (ಭಯಂಕರವಾಗಿ) ಮೂಗಿನ ಹೊಳ್ಳೆಗಳು ಅರಳಿದುವು. ಪ್ರಳಯಕಾಲದ ಯಮನ ತ್ರಿಶೂಲಕ್ಕೆ ಸಮಾನವೂ ಭಯಂಕರವೂ ಆದ ಹುಬ್ಬು ಗಂಟಿಕ್ಕಿತು. ಮೊದಲೇ ಭಯಂಕರವಾದ ಭೀಮಸೇನನ ಅಗುಳಿಯಂತಿರುವ ತೋಳುಗಳು ಗದೆಯ ಕಡೆ

ಮ॥ ನೆಲನಂ ನುಂಗುವ ಮೇರುವಂ ಪಿಡಿದು ಕೀಳ್ವಾಶಾಗಜೇಂದ್ರಂಗಳಂ
ಚಲದಿಂ ಕಟ್ಟುವ ಸಪ್ತ ಸಪ್ತಿಯನಿಳಾಭಾಗಕ್ಕೆ ತರ್ಪೊಂದು ತೋ ।
ಳ್ವಲಮುಂ ಗರ್ವಮುಮುಣ್ಮೆ ಪೊಣ್ಮೆ ಮನದೊಳ್ ಕೋಪಾಗ್ನಿ ಕೆಯ್ಗಣ್ಮೆ ಕ
ಣ್ಮಲರೊಳ್ ಬಂದಿರೆ ನೋಡಿದಂ ಕಲುಷದಿಂ ಗಾಂಡೀವಿ ಗಾಂಡೀವಮಂ ॥ ೭

ಕಂ॥ ಪ್ರಕುಪಿತ ಮೃಗಪತಿ ಶಿಶು ಸ
ನ್ನಿಕಾಶರತಿ ವಿಕಟ ಭೀಷಣ ಭ್ರೂ ಭಂಗರ್ ।
ನಕುಲ ಸಹದೇವರಿರ್ವರು
ಮಕಾಲ ಕಾಲಾಗ್ನಿರೂಪಮಂ ಕೆಯ್ಕೊಂಡರ್ ॥ ೮

ವ॥ ಅಂತು ವಿಳಯಕಾಲಜಳನಿಧಿಗಳಂತೆ ಮೇರೆದಪ್ಪಲ್ ಬಗೆದ ತನ್ನ ನಾಲ್ವರ್ ತಮ್ಮಂದಿರ ಮುನಿದ ಮೊಗಮಂ ಕಂಡು ತನ್ನ ನುಡಿದ ನನ್ನಿಯ ಕೇಡಂ ಬಗೆದರೆಂದು ಕಟಾಕ್ಷ ವಿಕ್ಷೇಪದಿಂ ಬಾರಿಸೆ-

ಮ॥ ಅನಿತೊಂದುರ್ಕಿನೊಳುರ್ಕಿ ಕೌರವ ಖಳರ್ ಪಾಂಚಾಳರಾಜಾತ್ಮಜಾ
ನನ ಪದ್ಮಗ್ಲಪನೈಕ ಕಾರಣಪರರ್ ತಾಮಾಗೆಯುಂ ಮತ್ತಮ ।
ಣ್ಣನ ಕಣ್ಸನ್ನೆಗೆ ಮಿಾಱಲಣ್ಮದೆ ಸಮಂತಿರ್ದರ್ ಪೃಥಾಪುತ್ರರಂ
ತಿನಿತೊಂದಾದೊಡಮೇಂ ಮಹಾಪುರುಷರಾಜ್ಞಾಲಂಘನಂಗೆಯ್ವರೇ ॥ ೯

ವ॥ ಆಗಳ್ ದ್ರೌಪದಿ ತನ್ನ ಕೇಶಪಾಶಮಂ ದುಶ್ಶಾಸನಂ ಪಿಡಿದು ತೆಗೆದನೆಂಬ ಸಿಗ್ಗಗ್ಗಳಂ ಪೆರ್ಚೆ ಸಭೆಯೊಳಿಂತೆಂದಳ್-

ತಿರುಗಿ ಶತ್ರುಗಳ (ಕತ್ತನ್ನು) ಹಿಡಿಯುವಂತಾಯಿತು. ೭. ಭೂಮಿಯನ್ನು ನುಂಗುವ, ಮೇರುಪರ್ವತವನ್ನು ಹಿಡಿದು ಕೀಳುವ, ದಿಗ್ಗಜಗಳನ್ನು ಹಟದಿಂದ ಕಟ್ಟುವ, ಸೂರ್ಯನನ್ನು ಭೂಭಾಗಕ್ಕೆ ತರುವ, ಬಾಹುಬಲವೂ ಅಹಂಕಾರವೂ ಚಿಮ್ಮಿ ಹೊಮ್ಮಲು ಕೋಪದ ಬೆಂಕಿಯು ಮಿತಿಮೀರಿ ಹೂವಿನಂತಿದ್ದ ಕಣ್ಣಿನಲ್ಲಿ ಬಂದಿರಲು ಅರ್ಜುನನು ಕೋಪದಿಂದ ತನ್ನ ಗಾಂಡೀವವನ್ನು ನೋಡಿದನು. ೮. ವಿಶೇಷವಾಗಿ ಕೋಪಗೊಂಡಿರುವ ಸಿಂಹದ ಮರಿಗೆ ಸಮಾನರೂ ಅತ್ಯಂತ ವಿಕಟವೂ ಭಯಂಕರವೂ ಹುಬ್ಬಿನ ಗಂಟುಳ್ಳವರೂ ಆದ ನಕುಲ ಸಹದೇವರಿಬ್ಬರೂ ಅಕಾಲದಲ್ಲಿ ಬರುವ ಪ್ರಳಯಾಗ್ನಿರೂಪವನ್ನು ತಾಳಿದರು. ವ॥ ಹಾಗೆ ಪ್ರಳಯಕಾಲದ ಸಮುದ್ರಗಳ ಹಾಗೆ ಎಲ್ಲೆಮೀರಲು ಯೋಚಿಸಿದ ತನ್ನ ನಾಲ್ಕು ತಮ್ಮಂದಿರ ಕೋಪಗೊಂಡ ಮುಖಗಳನ್ನು ನೋಡಿ ಧರ್ಮರಾಜನು ತಾನಾಡಿದ ಸತ್ಯದ ಕೇಡನ್ನು ಯೋಚಿಸಿದ್ದಾರೆಂದು ತಿಳಿದು ಕಣ್ಸನ್ನೆಯಿಂದಲೇ ನಿವಾರಿಸಿದನು. ೯. ಅಷ್ಟೊಂದು ಗರ್ವದಲ್ಲಿ ಉಬ್ಬಿ ದುಷ್ಟಕೌರವರು ದ್ರೌಪದಿಯ ಮುಖಕಮಲವು ಬಾಡುವುದಕ್ಕೆ ಮುಖ್ಯ ಕಾರಣರಾದರೂ ಅಣ್ಣನಾದ ಧರ್ಮರಾಜನ ಕಣ್ಸನ್ನೆಗೆ ಮೀರಲು ಸಮರ್ಥರಾಗದೆ ಪಾಂಡವರು ಸುಮ್ಮನೆ ಶಾಂತಿಯಿಂದಿದ್ದರು. ಮಹಾಪುರುಷರಾದವರು ಹಿರಿಯರ ಆಜ್ಞೆಯನ್ನು ದಾಟುತ್ತಾರೆಯೇ? ವ॥ ಆಗ ದುಶ್ಶಾಸನನು ತನ್ನ ಕೂದಲಿನ ಗಂಟನ್ನು ಹಿಡಿದು ಸೆಳೆದನೆಂಬ ನಾಚಿಕೆಯು ವಿಶೇಷವಾಗಿ ಹೆಚ್ಚಲು ದ್ರೌಪದಿಯು ಸಭೆಯಲ್ಲಿ ಹೀಗೆಂದಳು.

ಕಂ॥ ಮುಡಿಯಂ ಪಿಡಿದೆೞೆದವನಂ
ಮುಡಿಯಿಸಿ ಮತ್ತವನ ಕರುಳ ಪಿಣಿಲಿಂದೆನ್ನಂ ।
ಮುಡಿಯಿಸುವಿನೆಗಂ ಮುಡಿಯಂ
ಮುಡಿಯೆಂ ಗಡ ಕೇಳಿಮಿಾಗಳಾನ್ ನುಡಿ ನುಡಿದೆಂ ॥ ೧೦

ವ॥ ಎಂಬುದುಂ ಭೀಮಸೇನನಾ ಮಾತಂ ಕೇಳ್ದು ಸೈರಿಸಲಾಱದೆ-

ಉ॥ ಆಱದ ಕೋಪ ಪಾವಕನಿನಣ್ಣನ ನನ್ನಿಯನಿಲ್ಲಿ ಮಿಾಱುವೆಂ
ಮಿಾಱೆನೆನುತ್ತುಮಿರ್ಪ ಪದದಲ್ಲಿಯೆ ನೋಡೆ ಮರುಳ್ಗೆ ಧೂಪಮಂ ।
ತೋಱಿದ ಮಾೞ್ಕೆಯಿಂ ದ್ರುಪದರಾಜಸುತಾ ವಚನಂಗಳಲ್ಲಿ ಮೆ
ಯ್ದೋಱೆ ಮರುತ್ಸುತಂ ನುಡಿದನಾ ಸಭೆಯೊಳ್ ನವ ಮೇಘನಾದದಿಂ ॥ ೧೧

ಮ॥ ಮುಳಿಸಿಂದಂ ನುಡಿದೊಂದು ನಿನ್ನ ನುಡಿ ಸಲ್ಲಾರಾಗದೆಂಬರ್ ಮಹಾ
ಪ್ರಳಯೋಲ್ಕೋಪಮ ಮದ್ಗದಾಹತಿಯಿನತ್ಯುಗ್ರಾಜಿಯೊಳ್ ಮುನ್ನಮಿಾ ।
ಖಳ ದುಶ್ಶಾಸನನಂ ಪೊರಳ್ಚಿ ಬಸಿಱಂ ಪೋೞ್ದಿಕ್ಕಿ ಬಂಬಲ್ಗರು
ಳ್ಗಳಿನಾನಲ್ತೆ ವಿಳಾಸದಿಂ ಮುಡಿಯಿಪೆಂ ಪಂಕೇಜಪತ್ರೇಕ್ಷಣೇ । ೧೨

ಮ॥ ಸ್ರ ॥ ಕುಡಿವೆಂ ದುಶ್ಶಾಸನೋರಸ್ಥಳಮನಗಲೆ ಪೋೞ್ದಾರ್ದು ಕೆನ್ನೆತ್ತರಂ ಪೊ
ಕ್ಕುಡಿವೆಂ ಪಿಂಗಾಕ್ಷನೂರುದ್ವಯಮನುರು ಗದಾಘಾತದಿಂ ನುಚ್ಚು ನೂಱಾ ।
ಗೊಡೆವೆಂ ತದ್ರತ್ನ ರಶ್ಮಿ ಪ್ರಕಟ ಮಕುಟಮಂ ನಂಬು ನಂಬೆನ್ನ ಕಣ್ಣಿಂ
ಕಿಡಿಯುಂ ಕೆಂಡಂಗಳುಂ ಸೂಸಿದಪುವಹಿತರಂ ನೋಡಿ ಪಂಕೇಜವಕ್ತ್ರೇ ॥ ೧೩

೧೦. ಮುಡಿಯನ್ನು ಹಿಡಿದೆಳೆದವನನ್ನು ಕೊಂದು ಅವನ ಕರುಳಿನ ಜಡೆಯಿಂದ (ಸಮೂಹ) ನನ್ನ ಮುಡಿಯನ್ನು ಮುಡಿಯಿಸುವವರೆಗೂ ಆ ಮುಡಿಯನ್ನು ಪುನಃ ಮುಡಿಯುವುದಿಲ್ಲ; ಕೇಳಿ, ನೀವೆಲ್ಲ ಕೇಳಿ ನಾನು ಪ್ರತಿಜ್ಞೆ ಮಾಡಿದ್ದೇನೆ ಎಂದಳು. ವ॥ ಭೀಮಸೇನನು ಆ ಮಾತನ್ನು ಕೇಳಿ ಸೈರಿಸಲಾರದೆ-೧೧. ಕಡಿಮೆಯಾಗದ ಕೋಪಾಗ್ನಿಯಿಂದ ಅಣ್ಣನ ಸತ್ಯವಾಕ್ಕನ್ನು ಮೀರಲೇ ಬೇಡವೇ ಎನ್ನುತ್ತಿದ್ದ ಸಮಯದಲ್ಲಿಯೇ ಮರುಳಿಗೆ ಧೂಪವನ್ನು ತೋರಿಸಿದ ರೀತಿಯಿಂದ ದ್ರೌಪದಿಯ ಮಾತುಗಳು ಅಲ್ಲಿ ಕಾಣಿಸಿಕೊಳ್ಳಲು ಭೀಮಸೇನನು ಆ ಸಭೆಯಲ್ಲಿ ಹೊಸಗುಡುಗಿನ ಶಬ್ದದಿಂದ ಹೇಳಿದನು. ೧೨. ಕೋಪದಿಂದ ನೀನು ಆಡಿದ ಮಾತು ಸಲ್ಲಲಿ, ಯಾರು ಬೇಡವೆನ್ನುತ್ತಾರೆ. ಮಹಾಪ್ರಳಯಕಾಲದ ಉಲ್ಕೆಗೆ (ಬೆಂಕಿಯ ಕೊಳ್ಳಿ) ಸಮಾನವಾದ ನನ್ನ ಗದೆಯ ಪೆಟ್ಟಿನಿಂದ ಅತಿಭಯಂಕರವಾದ ಯುದ್ಧದಲ್ಲಿ ಮೊದಲು ದುಶ್ಶಾಸನನನ್ನು ಹೊರಳಿಸಿ ಹೊಟ್ಟೆಯನ್ನು ಸೀಳಿ ಹೆಣೆದುಕೊಂಡಿರುವ ಕರುಳಿನಿಂದ ಎಲೌ ಕಮಲದಳದ ಹಾಗೆ ಕಣ್ಣುಳ್ಳ ದ್ರೌಪದಿಯೇ ವೈಭವದಿಂದ ನಾನೇ ಮುಡಿಯಿಸುತ್ತೇನಲ್ಲವೇ? ೧೩. ದುಶ್ಶಾಸನನ ಎದೆಯನ್ನು ಅಗಲವಾಗಿ ಹೋಳುಮಾಡಿ ರಕ್ತವನ್ನು ಕುಡಿಯುತ್ತೇನೆ. ಮೇಲೆಬಿದ್ದು ದುರ್ಯೋಧನನ ಎರಡುತೊಡೆಗಳನ್ನೂ ಶ್ರೇಷ್ಠವಾದ ನನ್ನ ಗದೆಯ ಪೆಟ್ಟಿನಿಂದ ಒಡೆಯುತ್ತೇನೆ. ರತ್ನಕಾಂತಿಗಳಿಂದ ಪ್ರಕಾಶವಾದ ಅವನ ಕಿರೀಟವನ್ನು ನುಚ್ಚುನೂರಾಗುವಂತೆ ಪುಡಿಮಾಡುತ್ತೇನೆ. ದ್ರೌಪದಿ ಈ ನನ್ನ ಮಾತನ್ನು ನಂಬು,

ಮ॥ ಮುಳಿಸಂ ಮಾಡಿಯುಮೇವಮಂ ಪಡೆದುಮಿನ್ನೀ ಪಂದೆಗಳ್ ಪ್ರಾಣದಿಂ
ದೊಳರಿನ್ನುಂ ತಲೆ ಮತ್ತಮಟ್ಟೆಗಳ ಮೇಲಿರ್ದಪ್ಪುವೆಂದಂತೆ ದಲ್ ।
ಮುಳಿಸಿಲ್ಲಣ್ಣನ ನನ್ನಿಯೆಂಬುದನೆ ಪೇಟೀವೇೞ್ದುಮಿಾ ಕೌರವ
ರ್ಕಳನುಂತಿನ್ನೆಗಮುರ್ಚೆ ಮುಕ್ಕದೆ ಸಡಿಲ್ದೀ ಭೀಮನೇಂ ಮಾಣ್ಬುಗುಮೇ ॥೧೪

ವ॥ ಎಂದು ಪಾಂಚಾಳರಾಜತನೂಜೆಯ ಮನಮನಾಱೆ ನುಡಿದು ಮತ್ತಮಿಂತೆಂದಂ-

ಮ॥ ಸುರಸಿಂಧುಪ್ರಿಯಪುತ್ರ ಕೇಳ್ ಕಳಶಜಾ ನೀಂ ಕೇಳ್ ಕೃಪಾ ಕೇಳ ಮಂ
ದರದಿಂದಂಬುಧಿಯಂ ಕಲಂಕಿದಸುರಪ್ರಧ್ವಂಸಿವೋಲ್ ಬಾಹುಮಂ ॥
ದರದಿಂ ವೈರಿಬಲಾಬ್ಧಿ ಘೂರ್ಣಿಸೆ ಬಗುರ್ತೀ ಕೌರವರ್ ಕೂಡೆ ನೂ
ರ್ವರುಮಂ ಕೊಲ್ವೆನಿದೆನ್ನ ಪೂಣ್ಕೆ ನುಡಿದೆಂ ನಿಮ್ಮೀ ಸಭಾಮಧ್ಯದೊಳ್ ॥ ೧೫

ವ॥ ಎಂದು ಪ್ರಳಯಕಾಳಜಳಧರನಿನಾದದಿಂ ಗಿರಿ ತಾಟಿಸಿದಂತಾನುಂ ನೆಲಂ ಮೊಟಗಿದಂತಾನುಂ ಗಜಱೆ ಗರ್ಜಿಸಿ ನುಡಿದು ಮಹಾಪ್ರತಿಜ್ಞಾರೂಢನಾದ ಭೀಮಸೇನನ ನುಡಿಯಂ ಕೇಳ್ದು ಕೌರವರ್ ಕಡಲ ನಡುವಣ ಪರ್ವತದಂತಳ್ಕಾಡೆ ಕುರುವೃದ್ಧನುಂ ಬುದ್ಧಿವೃದ್ಧನುಮಪ್ಪ ಗಾಂಗೇಯಂ ಧೃತರಾಷ್ಟ್ರಂಗಿಂತೆಂದಂ-

ಚಂ॥ ಭರತ ಯಯಾತಿ ಕುತ್ಸ ಪುರುಕುತ್ಸ ಪುರೂರವರಿಂದಮಿನ್ನೆಗಂ
ಪರಿವಿಡಿಯಿಂದೆ ಬಂದ ಶಶಿವಂಶಮದೀಗಳಿವಂದಿರಿಂದೆ ನಿ ।
ತ್ತರಿಸುವುದಕ್ಕುಮೆಂದೆ ಬಗೆದಿರ್ದೊಡೆ ಕೀಲೊಳೆ ಕಿಚ್ಚು ಪುಟ್ಟೆ ಭೋ
ರ್ಗರೆದುರಿದಂತೆ ನಿನ್ನ ಮಗನಿಂದುರಿದತ್ತಿದನಾರೊ ಬಾರಿಪರ್ ॥ ೧೬

ನಂಬು; ಶತ್ರುಗಳನ್ನು ನೋಡಿ ನನ್ನ ಕಣ್ಣಿನಿಂದ ಕಿಡಿಯೂ ಕೆಂಡಗಳೂ ಚೆಲ್ಲುತ್ತಿವೆ. ೧೪. ನಮಗೆ ಇಷ್ಟು ಕೋಪವನ್ನುಂಟುಮಾಡಿಯೂ ದುಃಖವನ್ನು ಬರಿಸಿಯೂ ಇನ್ನೂ ಈ ಹೇಡಿಗಳು ಜೀವದಿಂದಿದ್ದಾರೆ. ಇನ್ನೂ ಅವರ ತಲೆಗಳು ಅವರು ಮುಂಡಗಳ ಮೇಲಿವೆ ಎನ್ನುವುದು ಕೋಪವಿಲ್ಲವೆಂದೇ ಅರ್ಥಮಾಡುವುದಿಲ್ಲವೇ? ಅಣ್ಣನ ಸತ್ಯವೆಂಬುದೊಂದು ಇಲ್ಲದಿದ್ದರೆ ಏನು ಹೇಳಿದರೂ ಈ ಕೆರಳಿದ ಭೀಮನು ಇಷ್ಟು ಹೊತ್ತಿಗೆ ಸುಲಿದು ಬಾಯಿಗೆ ಹಾಕಿಕೊಳ್ಳದೆ ಬಿಡುತ್ತಿದ್ದನೇ? ವ॥ ಎಂದು ದ್ರೌಪದಿಯ ಮನಸ್ಸಮಾಧಾನವಾಗುವ ಹಾಗೆ ನುಡಿದು ಪುನಃ ಹೀಗೆಂದನು-೧೫. ಭೀಷ್ಮರೇ ಕೇಳಿ, ದ್ರೋಣರೇ ಕೇಳಿ, ಕೃಪರೇ ಕೇಳಿ, ಮಂದರಪರ್ವತದಿಂದ ಕ್ಷೀರಸಮುದ್ರವನ್ನು ಕಲಕಿದ ನಾರಾಯಣನ ಹಾಗೆ ನನ್ನ ತೋಳೆಂಬ ಮಂದರದಿಂದ ಘೋಷಿಸುತ್ತಿರುವ ಶತ್ರುಸೇನಾಸಮುದ್ರವನ್ನು ಕಡೆದು ಮದಿಸಿರುವ ಈ ನೂರು ಕೌರವರನ್ನೂ ಒಟ್ಟಿಗೆ ಕೊಲ್ಲುತ್ತೇನೆ. ನಿಮ್ಮ ಈ ಸಭೆಯ ಮಧ್ಯದಲ್ಲಿ ಈ ನನ್ನ ಪ್ರತಿಜ್ಞೆಯನ್ನು ತಿಳಿಸಿದ್ದೇನೆ. ವ॥ ಎಂದು ಪ್ರಳಯಕಾಲದ ಸಮುದ್ರಘೋಷದಂತೆ ಪರ್ವತವು ಅಪ್ಪಳಿಸಿದ ಭೂಮಿಯ ಗುಡುಗಿನಂತೆ ಆರ್ಭಟಿಸಿ ಗರ್ಜನೆಮಾಡಿ ನುಡಿದು ಮಹಾಪ್ರತಿಜ್ಞೆಯನ್ನು ಅಂಗೀಕರಿಸಿದ ಭೀಮಸೇನನ ಮಾತನ್ನು ಕೇಳಿ ಕೌರವರು ಸಮುದ್ರಮಧ್ಯದ ಪರ್ವತದಂತೆ ನಡುಗಿದರು. ಕೌರವರಲ್ಲಿ ಹಿರಿಯನೂ ಆದ ಭೀಷ್ಮನು ಧೃತರಾಷ್ಟ್ರನಿಗೆ ಹೀಗೆ ಹೇಳಿದನು. ೧೬. ಭರತ ಯಯಾತಿ ಕುತ್ಸ ಪುರೂರವರಿಂದ ಹಿಡಿದು

ವ॥ ಎಂದಬಿಲ್ಕು ಧೃತರಾಷ್ಟ್ರನೊಳ್ ನುಡಿಯೆ ಕುಂಭಸಂಭವಾಶ್ವತ್ಥಾಮ ಕೃಪ ವಿದುರಾದಿಗಳ್ ನೀಮೆನಿತು ನುಡಿದೊಡಮಾನೆಯ ಕೋಡು ಬಾಗದೆಂಬಂತೆ ದುರ್ಯೋಧನನುದ್ವೃತ್ತತೆಯುಮಂ ಭೀಮಸೇನನ ಮಹಾಪ್ರತಿಜ್ಞೆಯುಮನಾರ್ಗಂ ಬಾರಿಸಲ್ಬಾರದು ಕೆಯ್ಗುಟಿದ ಮನೆವಾೞ್ತೆ ಬುದ್ಧಿವೇೞಲೆಡೆಯಿಲ್ಲ ತಾಮುಂ ತಾಮುಮಱವರ್ ಬನ್ನಿಮೆಂದು ನಿಜನಿವಾಸಂಗಳ್ಗೆ ಪೋದರಾಗಳ್ ಭೀಮಸೇನಂ ಧರ್ಮಪುತ್ರಂಗೆಂದನುಪ್ಪಿಕ್ಕಿದೊಡೆ ತುಪ್ಪದ ಮೆಳ್ಪಡಿತೆಂಬಂತೆ ನಮ್ಮ ಕೆಮ್ಮನಿರ್ಪಿರವಿದೇ ಕಾರಣಂ ಬನ್ನಿ ಪೋಪಮೆಂದರಮನೆಯಂ ಪೊಱಮಟ್ಟು ಬರೆ ಧೃತರಾಷ್ಟ್ರಂ ದುರ್ಯೋಧನನನೇಗೆಯ್ದುಮೊಡಂಬಡಿಸಲಾಱದಿರೆಯುಂ ದ್ರೌಪದಿ ಪರಸ್ತ್ರೀಯಂ ನಮ್ಮ ಮನೆಯೊಳಿರಿಸುವುದುಚಿತಮಲ್ಲೆಂದು ಕಟಿಪಿದೊಡೆ ಪಾಂಚಾಳರಾಜತನೂಜೆವೆರಸು ಬಿನ್ನ ಬನ್ನನೆ ಪೊೞಲಂ ಪೊಱಮಡೆ ಪುರಜನಂಗಳೆಲ್ಲಂ ನೆರೆದವರ ಪೋಗಿಂಗೆ ಸೈರಿಸಲಾಱದೆ ತಮ್ಮೊಳಿಂತೆಂದರ್-

ಕಂ॥ ಏದೊರೆಯಂ ಯಮನಂದನ
ನೇದೊರೆಯಂ ಭೀಮಸೇನನೇದೊರೆಯಂ ಕಂ ।
ಜೋದರನ ಮೈದುನಂ ತಾ
ಮೇದೊರೆಯರಮಳ್ಗಳವರ್ಗಮಿಾ ಯಿರವಾಯ್ತೇ ॥ ೧೭

ಇಲ್ಲಿಯವರೆಗೂ ಕ್ರಮವಾಗಿ ನಡೆದುಬಂದ ಚಂದ್ರವಂಶವು ಈಗ ಈ ಕೌರವರಿಂದ ಮುಂದೆ ಅಭಿವೃದ್ಧಿಯಾಗುತ್ತದೆ ಎಂದು ಯೋಚಿಸುತ್ತಿರಲು ಅದಕ್ಕೆ ವಿರೋಧವಾಗಿ ಕೀಲಿನಲ್ಲಿಯೇ ಬೆಂಕಿಹುಟ್ಟಿ ಶಬ್ದಮಾಡಿ ಉರಿಯುವ ಹಾಗೆ ನಿನ್ನ ಮಗನಿಂದ ನಮ್ಮ ವಂಶವೇ ಸುಟ್ಟು ಹೋಗುತ್ತದೆ. ಇದನ್ನು ನಿವಾರಿಸುವವರು ಯಾರಿದ್ದಾರೆ? ವ॥ ಎಂದು ದುಃಖಿಸಿ ಧೃತರಾಷ್ಟ್ರನಲ್ಲಿ ಹೇಳಲು, ದ್ರೋಣ ಅಶ್ವತ್ಥಾಮ ಕೃಪವಿದುರರೇ ಮೊದಲಾದವರು ನೀವೆಷ್ಟು ಹೇಳಿದರೂ ಆನೆಯ ಕೊಂಬು ಬಗ್ಗುವುದಿಲ್ಲ ಎನ್ನುವ ಹಾಗೆ ದುರ್ಯೋಧನನ (ಕೆಡೆದು ನಿಲ್ಲುವಿಕೆ) ತುಂಟತನವನ್ನೂ ಭೀಮನ ಮಹಾಪ್ರತಿಜ್ಞೆಯನ್ನೂ ಯಾರಿಗೂ ತಪ್ಪಿಸಲಾಗುವುದಿಲ್ಲ; ಕೈಮೀರಿದ ಮನೆವಾರ್ತೆಗೆ ಬುದ್ಧಿಹೇಳಲು ಅವಕಾಶವಿಲ್ಲ; ಅವರವರೇ ತಿಳಿಯಲಿ ಬನ್ನಿ ಎಂದು ತಮ್ಮ ಮನೆಗಳಿಗೆ ಹೋದರು. ಆಗ ಭೀಮಸೇನನು ಧರ್ಮರಾಜನಿಗೆ ಹೇಳಿದನು. ಉಪ್ಪನ್ನು ಬಡಿಸಿದರೆ ತುಪ್ಪಕ್ಕೆ ಮೋಸ ಎನ್ನುವ ಹಾಗೆ ನಾವು ಸುಮ್ಮನಿರುವುದರಿಂದ ಏನು ಪ್ರಯೋಜನ, ಬನ್ನಿ ಹೋಗೋಣ ಎಂದು ಅರಮನೆಯಿಂದ ಹೊರಟರು. ಧೃತರಾಷ್ಟ್ರನು ದುರ್ಯೋಧನನನ್ನು ಏನು ಮಾಡಿಯೂ ಒಪ್ಪಿಸಲಾರದಿದ್ದರೂ ಪರಸ್ತ್ರೀಯಾದ ದ್ರೌಪದಿಯನ್ನು ನಮ್ಮ ಮನೆಯಲ್ಲಿಟ್ಟುಕೊಳ್ಳುವುದು ಯೋಗ್ಯವಲ್ಲವೆಂದು ಕಳುಹಿಸಿದನು. ದ್ರೌಪದಿಯೊಡನೆ ಪಾಂಡವರು ದುಃಖದಿಂದ ಪಟ್ಟಣವನ್ನು ಬಿಟ್ಟು ಹೊರಟರು. ಪಟ್ಟಣದ ಜನರೆಲ್ಲರೂ ಒಟ್ಟುಗೂಡಿ ಅವರು ಆ ಸ್ಥಿತಿಯಲ್ಲಿ ಹೋಗುತ್ತಿರುವುದನ್ನು ನೋಡಿ ದುಃಖಪಟ್ಟು ಹೀಗೆಂದರು-೧೭. ಧರ್ಮರಾಜನೆಂತಹವನು - ಭೀಮನೆಂತಹವನು, ಕೃಷ್ಣನ ಮೈದುನನಾದ ಅರ್ಜುನನು ಎಂಥವನು; ಅವಳಿಗಳಾದ

ಜೂದಾಡಿ ಸೋಲ್ತು ನನ್ನಿಗೆ
ಮೇದಿನಿಯಂ ಕೊಟ್ಟು ಪಾಂಡುನಂದನರೀಗಳ್ ।
ಪೋದೊಡಮೇನ್ ತಿಣುಕಾಗದೆ
ಪೋದಪುದೇ ನಮ್ಮ ನೃಪತಿಗವು ತವುದಲೆಯೊಳ್ ॥ ೧೮

ಜೂದಿನ ಗೆಲ್ಲದೊಳಾದೀ
ಮೇದಿನಿಯಂ ಕಂಡು ಕಜ್ಜಮಂ ಕಾಣದೆ ದು ।
ರ್ಯೋದನನದೇನದೇಂ ಮರು
ಳಾದನೊ ಬಡಿಗಂಡನಿಲ್ಲ ಪಾಲನೆ ಕಂಡಂ ॥ ೧೯

ಎನಿತಾನುಮಂದದಿಂ ಜೂ
ದನಿಕ್ಕೆಯುಂ ದ್ರುಪದಸುತೆಯನೆೞೆದುಯ್ಯೆಯುಮಿಂ ।
ತಿನಿತೊಂದಾದುದು ದುಶ್ಶಾ
ಸನನಿಂದಂ ಶಕುನಿಯೆಂಬ ಬೆಳ್ಪೊಱಸಿಂದಂ ॥ ೨೦

ವ॥ ಎಂದಿರ್ದರಿರ್ದಲ್ಲಿಯೆ ತಂತಮ್ಮ ಕಂಡುದನೆ ನುಡಿಯೆಯುಂ ಕೆಲರವರ ಪೋಗಿಂಗಲಲ್ಲು ಕಣ್ಣ ನೀರನಿಕ್ಕೆಯುಂ ಕೆಲರ್ ಪರಸಿ ಸೇಸೆಯನಿಕ್ಕೆಯುಂ ಪೊೞಲಂ ಪೊಱಮಟ್ಟು ಪುರದ ಬಾಹಿಗೆಯನೆಯ್ದುವಾಗಳ್ ಗಾಂಗೇಯ ದ್ರೋಣ ಕೃಪ ವಿದುರಾದಿಗಳ್ ಕೊಂತಿವೆರಸೆಯ್ದೆ ವಂದು ಕಿಱಿದಂತರಮಂ ಕಳಿಪುತ್ತುಂ ಬರೆ ಧರ್ಮಪುತ್ರನೆಮಗೆ ತಕ್ಕ ಬುದ್ಧಿಯಂ ಪೇೞ್ದು ಮಗುೞೆಮೆಂದೊಡನಿಬರುಂ ಮನಂ ಬಂಧಿಸಿದ ಮೋಹದಿಂ ಗಳಗಳನೆ ಕಣ್ಣ ನೀರ್ಗಳಂ ಸುರಿದು–

ನಕುಲಸಹದೇವರೆಂಥವರು. ಅವರಿಗೂ ಈ ಸ್ಥಿತಿಯಾಯ್ತೆ? ೧೮. ಜೂಜಾಡಿ ಸೋತು ಸತ್ಯಕ್ಕಾಗಿ ರಾಜ್ಯವನ್ನು ಕೊಟ್ಟು ಪಾಂಡವರು ಹೋದರೇನು? ರಾಜನಾದ ದುರ್ಯೋಧನನಿಗೆ ಕೊನೆಯಲ್ಲಿ ಇದು ಸ್ಪಷ್ಟವಾಗದೆ ಹೋಗುತ್ತದೆಯೇ? ೧೯. ಜೂಜಿನ ಗೆಲುವಿನಿಂದ ಬಂದ ಈ ರಾಜ್ಯವನ್ನು ನೋಡಿ ಮುಂದಾಗುವ ಕಾರ್ಯವನ್ನು ಕಾಣದೆ ದುರ್ಯೋಧನನು ಅದೇತಕ್ಕೆ ಅತ್ಯಂತ ಹುಚ್ಚನಾದ? ಮೇಲೆತ್ತಿದ ಕೊಡಚಿ (ಬಡಿ) ಯನ್ನು ಕಾಣದೆ ಹಾಲನ್ನು ಮಾತ್ರ ಕಂಡನಲ್ಲ. ೨೦. ವಿವಿಧರೀತಿಯಲ್ಲಿ ಜೂಜನ್ನಾಡಿಸಿದುದೂ ದ್ರೌಪದಿಯನ್ನು ಎಳೆದು ಸೆಳೆದುದೂ ಇವೆಲ್ಲ ಆ ದುಶ್ಶಾಸನನಿಂದ ಮತ್ತು ಶಕುನಿಯೆಂಬ ಬುದ್ಧಿಯಿಲ್ಲದ ಪೊರಸಿನಿಂದ ಉಂಟಾಯಿತು. ವ॥ ಎಂದು ಇದ್ದವರು ಇದ್ದ ಕಡೆಯಲ್ಲಿಯೇ ತಾವು ತಾವು ನೋಡಿದುದನ್ನು ನುಡಿಯುತ್ತಿದ್ದರು. ಕೆಲವರು ಪಾಂಡವರು ಹಾಗೆ ಹೋಗುತ್ತಿರುವುದನ್ನು ನೋಡಿ ಅತ್ತು ಕಣ್ಣೀರನ್ನು ಸುರಿಸಿದರು. ಮತ್ತೆ ಕೆಲವರು ಹರಸಿ ಅಕ್ಷತೆಯನ್ನಿಕ್ಕಿದರು. ಪಟ್ಟಣವನ್ನು ಬಿಟ್ಟು ಹೊರಟು ಹೊರಭಾಗವನ್ನು ಸೇರುವಾಗ ಭೀಷ್ಮದ್ರೋಣ ಕೃಪ ವಿದುರರೇ ಮೊದಲಾದವರು ಕುಂತಿಯೊಡಗೂಡಿ ಸ್ವಲ್ಪದೂರ ಬಂದು ಕಳುಹಿಸಿ ಬರಲು ಧರ್ಮರಾಜನು 'ನಮಗೆ ಯೋಗ್ಯವಾದ ಉಪದೇಶಮಾಡಿ ಹಿಂತಿರುಗಿ' ಎಂದನು. ಅವರೆಲ್ಲರೂ ಆಕರ್ಷಿತರಾಗಿ ಮನಸ್ಸಿನ ಪ್ರೀತಿಯಿಂದ ಗಳಗಳನೆ ಕಣ್ಣೀರನ್ನು ಸುರಿಸಿದರು.

ಚಂ॥ ಪುಗುವುದರಣ್ಯಮಿರ್ಪಿರವು ಪನ್ನೆರಡಬ್ದಮದಲ್ಲದಲ್ಲಿ ಕೋ
ಟೆಗದ ವನೇಚರಾಧಿಪರ ದಾಯಿಗರತ್ತಣೆನಪ್ಪಪಾಯ ಕೋ ।
ಟಿಗೆ ಪವಣಿಲ್ಲ ಕಲ್ಪಿಗೆಡೆಯಾವುದೊ ಪಾಟಿಯ ಬಟ್ಟೆದಪ್ಪಿ ಮುಂ
ನೆಗಟ್ಟೆಡೆಯಿಲ್ಲ ಪೋಗು ಜಯಮಕ್ಕೆ ಶುಭಂ ನಿಮಗಕ್ಕೆ ಮಂಗಳಂ ॥ ೨೧

ವ॥ ಎಂದೊಡಲ್ಲಿರ್ದು ನಿಮ್ಮ ಮನಕ್ಕೆ ಕೊಕ್ಕರಿಕ್ಕೆಯಾಗಿಯುಂ ಪಾಟಿಗೆ ಗೆಂಟಾಗಿಯುಂ ನೆಗಟ್ಟಮಲ್ಲೆಂದು ಪೊಡವಟ್ಟು ಕೊಂತಿಯಂ ವಿದುರನ ಮನೆಯೊಳಿರಲ್ವೇಟ್ಟು ಸುಭದ್ರೆಯನಭಿಮನ್ಯು ವೆರಸು ನಾರಾಯಣನಲ್ಲಿಗೆ ದ್ವಾರಾವತಿಗೆ ಕಳಿಪಿ ನಿಜ ಪರಿಜನಂಬೆರಸು ಗಂಗೆಯಂ ಪಾಯ್ದದಱ ಪಡುವಣ ದೆಸೆಯ ಕಾಮ್ಯಕವನದ ಬಟ್ಟೆಯಂ ತಗುಳ್ದು ಪೋಗೆ ಪೋಗೆ-

ಚಂ॥ ದೆಸೆ ಪಸುರೇಱೆ ಪಚ್ಚೆಯೊಳೆ ಮುಚ್ಚ ಮುಸುಂಕಿದ ಮಾಟ್ಕೆಯಾದುದಾ
ಗಸಮಳಿ ನೀಳ ನೀಳ ಗಳಕಂಠ ತಮಾಳ ವಿನೀಳನೀರದ ॥
ಪ್ರಸರ ವಿಭಾಸಿಯಾದುದು ಸಮೀರನುದಾರ ಕದಂಬ ಕೇತಕೀ
ಪ್ರಸರ ರಜಸ್ವರ ಪ್ರಕಟ ಪಾಂಸುಳಮಾದುದು ಮೇಘಕಾಲದೊಳ್ ॥ ೨೨

ಚಂ॥ ಕರಿಯ ಮುಗಿಲ್ಗಳಿಂ ಗಗನಮಂಡಳಮೊಪ್ಪಿರೆ ಸೋಗೆಯಿಂ ವನಾಂ
ತರಮೆಸೆದೊಪ್ಪೆ ತೋರ್ಪ ಮೊಳೆವುಲ್ಗಳಿನೀ ಧರಣೀವಿಭಾಗಮೊ ।
ಪ್ಪಿರೆ ಪೊಸ ವೇಟಕಾಱರೆರ್ದೆಗಳ್ ಪೊಸ ಕಾರ ಪೊಡರ್ಪುಗಂಡದೇಂ
ಕರಿತುವದೇಂ ಕಲಂಕಿದುವದೇಂ ಕುಟಿಗೊಂಡುವದೇಂ ಕನಲ್ದುವೋ ॥ ೨೩

೨೧. ನೀವು ಪ್ರವೇಶಮಾಡಬೇಕಾಗಿರುವುದು ಕಾಡು, ಇರಬೇಕಾದ ಕಾಲ ಹನ್ನೆರಡುವರ್ಷ; ಅದಲ್ಲದೆಯೂ ಅಲ್ಲಿ ಕ್ರೂರಮೃಗಗಳ, ಬೇಡನಾಯಕರ, ದಾಯಾದಿಗಳ ಕಡೆಯಿಂದ ಬರುವ ಅಪಾಯ ಸಮೂಹಕ್ಕೆ ಅಳತೆಯೇ ಇಲ್ಲ; ಬುದ್ಧಿ ಹೇಳುವುದಕ್ಕೆ ಅವಕಾಶವೆಲ್ಲಿದೆ? ಧರ್ಮಮಾರ್ಗವನ್ನು ಬಿಟ್ಟು ನೀವು ಇದುವರೆಗೆ ನಡೆದ ಸಂದರ್ಭವೇ ಇಲ್ಲ; ಧರ್ಮರಾಜ! ನಿನಗೆ ಶುಭವಾಗಲಿ ಮಂಗಳವಾಗಲಿ ಹೋಗಿಬಾ ಎಂದು ಆಶೀರ್ವದಿಸಿದರು. ವ॥ ಧರ್ಮರಾಜನು 'ನಾವು ಅಲ್ಲಿದ್ದರೂ ನಿಮ್ಮ ಮನಸ್ಸಿಗೆ ಅಸಹ್ಯವಾಗುವ ಹಾಗೆಯೂ ಧರ್ಮಕ್ಕೆ ದೂರವಾಗಿಯೂ ನಡೆಯುವವರಲ್ಲ' ಎಂದು ಹೇಳಿ ನಮಸ್ಕಾರಮಾಡಿ ಕುಂತಿಯನ್ನು ವಿದುರನ ಮನೆಯಲ್ಲಿರಹೇಳಿ ಸುಭದ್ರೆಯನ್ನು ಅಭಿಮನ್ಯುವಿನೊಡನೆ ದ್ವಾರಾವತಿಗೆ ಕೃಷ್ಣನ ಹತ್ತಿರಕ್ಕೆ ಕಳುಹಿಸಿ, ತಮ್ಮ ಪರಿವಾರದೊಡನೆ ಮುಂದಕ್ಕೆ ನಡೆದರು. ಗಂಗಾನದಿಯನ್ನೂ ದಾಟಿ ಅದರ ಪಶ್ಚಿಮದಿಕ್ಕಿನಲ್ಲಿರುವ ಕಾಮ್ಯಕವನದ ಮಾರ್ಗವನ್ನನುಸರಿಸಿ ಹೋದರು. ೨೨. ಮಳೆಗಾಲವು ಪ್ರಾರಂಭವಾಯಿತು. ದಿಕ್ಕುಗಳು (ಪಚ್ಚೆ ಪೈರುಗಳಿಂದ) ಹಸಿರುಹತ್ತಲು ಪಚ್ಚೆಯ ರತ್ನದಿಂದ ಹೊದಿಸಿದ ಹಾಗಾಯಿತು. ಆಕಾಶವು ದುಂಬಿಯಂತೆ ಶಿವನ ಕೊರಳಿನಂತೆ, ಹೊಂಗೆಯ ಮರದಂತೆ ಕಪ್ಪಗಿರುವ ಅತ್ಯಂತ ನೀಲ ಬಣ್ಣದ ಮೋಡಗಳ ಸಮೂಹದಿಂದ ಪ್ರಕಾಶಮಾನವಾಯಿತು. ಗಾಳಿಯು ವಿಸ್ತಾರವಾಗಿ ಹಬ್ಬಿರುವ ಕದಂಬ ಮತ್ತು ಕೇದಗೆ ಹೂವುಗಳ ಸಮೂಹದಿಂದ ಹೊರಗೆ ಚೆಲ್ಲುತ್ತಿರುವ ಪರಾಗದಿಂದ ಕೂಡಿದುದಾಯಿತು. ೨೩. ತಪ್ಪಾಗಿರುವ ಮೋಡಗಳಿಂದ

ವ|| ಆದಲ್ಲದೆಯುಂ-

ಮ|| ಭವ ಲಾಲಾಟವಿಲೋಚನಾಗ್ನಿಶಿಖಿಯಿಂ ಬೆಂದಳ್ಕಿ ಮತ್ತಂ ಮನೋ
ಭವನೆೞ್ಚತ್ತೊಡೆ ಕಾಮಕಾಂತೆ ಬೞಿಯಂ ತನ್ನಿೞ್ಚೆಯಿಂ ಮೆಚ್ಚಿ ಬ ।
ಣ್ಣವುರಂ ತೀವಿದ ಮಾೞ್ಕೆಯಾಯ್ತು ನವಿಲಿಂ ಕುಂದಂಗಳಿಂದಿಂದ್ರಗೋ
ಪವಿಳಾಸಂಗಳಿನಾಲಿಕಲ್ಲ ಪರಲಿಂ ಕಾರೊಳ್ ಮಹೀಮಂಡಲಂ ॥ ೨೪

ಚಂ|| ಪೊಳೆವಮರೇಂದ್ರಗೋಪದ ಪಸುರ್ತೆಳವುಲ್ಗಳ ತಳ್ತ ಕಾರ್ಮುಗಿ
ಲ್ಗಳ ಕಿಱುಗೊಂಕುಗೊಂಕಿದ ಪೊನಲ್ಗಳ ಕೆಂಪು ಪಸುರ್ಪು ಕರ್ಪು ಬೆ ॥
ಳ್ಪೊಳಕೊಳೆ ಶಕ್ರ ಕಾರ್ಮುಕ ವಿಳಾಸಮನೇನೆರ್ದೆಗೊಂಡು ಬೇಟದ
ತ್ತಳಗಮನುಂಟುಮಾಡಿದುದೊ ಕಾಮನ ಕಾರ್ಮುಕದಂತೆ ಕಾರ್ಮುಕಂ ॥ ೨೫

ವ|| ಅಂತು ತಮಗಿದಿರಂ ಬರ್ಪಂತೆ ಬಂದ ಪಯೋಧರಕಾಲದೊಳಿರಡು ತಡಿಯುಮಂ ಪೊಯ್ದು ಪರಿವ ತೊಱೆಗಳುಮಂ ತೊವಲ್ತು ಸೊಗಯಿಸುವಡವಿಗಳುಮಂ ಪಸಿಯ ನೇತ್ರಮಂ ಪಚ್ಚವಡಿಸಿದಂತೆ ಪಸುರ್ಪುವಡೆದ ನೆಲದೊಳ್ ಪದ್ಮರಾಗದ ಪರಲ್ಗಳಂ ಬಲಿಗೆದಱಿದಂತೆ ಉಪಾಶ್ರಯಂಬಡೆದಳಂಕರಿಸುವಿಂದ್ರಗೋಪಂಗಳುಮಂ ಕಿಸುಗಾಡ ನೆಲಂಗಳೆಳದಳಿರ ಬಣ್ಣಮಂ

ಆಕಾಶವೊಪ್ಪಿರಲು ಹೆಣ್ಣುನವಿಲುಗಳಿಂದ ಕಾಡಿನ ಮಧ್ಯಭಾಗವು ಒಪ್ಪಿರಲು ಆಗತಾನೆ ಕಾಣುತ್ತಿರುವ ಮೊಳೆಹುಲ್ಲುಗಳಿಂದ (ಹುಲ್ಲಿನ ಮೊಳಕೆಗಳಿಂದ) ಭೂಮಿಯು ಒಪ್ಪಿರಲು ಹೊಸ ಪ್ರಿಯಪ್ರೇಯಸಿಯರ ಹೃದಯವು ಪೊಸಮಳೆಗಾಲದ ವೈಭವವನ್ನು ನೋಡಿ ಅದೆಷ್ಟು ಕರ್ರಗಾದುವೋ, ಅದೆಷ್ಟು ಕೆರಳಿದುವೋ; ಅದೆಷ್ಟು ಗುಳಿಗೊಂಡವೋ! ವ|| ಅಷ್ಟೇ ಅಲ್ಲದೆ ೨೪. ಮಳೆಗಾಲದಲ್ಲಿ ಭೂಮಂಡಲವು ನವಿಲುಗಳಿಂದಲೂ ಮೊಲ್ಲೆಯ ಹೂವಿನಿಂದಲೂ ಮಿಂಚುಹುಳಗಳ ವಿಲಾಸದಿಂದಲೂ ಆಲಿಕಲ್ಲುಗಳ ಹರಳುಗಳಿಂದಲೂ ಕೂಡಿರಲು ಈಶ್ವರನ ಹಣೆಗಣ್ಣಿನ ಬೆಂಕಿಯ ಜ್ವಾಲೆಯಿಂದ ಸತ್ತ ಮನ್ಮಥನು ಪುನಃ ಸಜೀವನಾಗಲು ಅದರಿಂದ ಸಂತೋಷಗೊಂಡ ಕಾಮನ ಸತಿಯಾದ ರತಿಯು ತನ್ನಿಷ್ಟಬಂದಂತೆ ನೆಲಕ್ಕೆ ಹಾಸಿದ ವಿವಿಧ ಬಣ್ಣದ ವಸ್ತ್ರದಂತೆ ಭೂಮಿಯು ಪ್ರಕಾಶಿಸಿತು. ೨೫. ಹೊಳೆಯುವ ಮಿಂಚುಹುಳುಗಳ, ಹಸುರಾದ ಎಳೆಯ ಹುಲ್ಲುಗಳ, ಒತ್ತಾಗಿರುವ ಕರಿಯಮೋಡಗಳ, ಕಿರಿಕಿರಿದಾಗಿ ವಕ್ರವಾಗಿ ಹರಿಯುವ ಪ್ರವಾಹಗಳ ಕೆಂಪು ಹಸುರು ಬಿಳುಪು ಬಣ್ಣಗಳು ಒಟ್ಟಾಗಿ ಸೇರಿ ಕಾಮನಬಿಲ್ಲಿನ ಸೌಂದರ್ಯವನ್ನೂ ಒಳಕೊಂಡಿರಲು ಮಳೆಗಾಲದ ಪ್ರವೇಶವು ಕಾಮನಬಿಲ್ಲಿನಂತೆಯೇ ಮನಸ್ಸನ್ನಾಕರ್ಷಿಸಿ ಪ್ರೇಮಾಧಿಕ್ಯವನ್ನುಂಟುಮಾಡಿತು. ವ|| ಹಾಗೆ ತಮಗೆ ಎದುರಾಗಿ ಬರುವಂತೆ ಬಂದ ಮಳೆಗಾಲದಲ್ಲಿ ಎರಡುದಡವನ್ನು ಘಟ್ಟಿಸಿ ಹರಿಯುವ ನದಿಗಳನ್ನೂ ಚಿಗುರಿ ಸೊಗಯಿಸುವ ಕಾಡುಗಳನ್ನೂ ಹಸುರುಬಟ್ಟೆಯನ್ನು ಹರಡಿದಂತೆ ಹಸುರಾದ ನೆಲದಲ್ಲಿ ಪದ್ಮರಾಗರತ್ನದ ಹರಳುಗಳನ್ನು ಚೆಲ್ಲಿದಂತೆ ಅವಲಂಬನವನ್ನು ಪಡೆದು ಅಲಂಕಾರವಾಗಿರುವ ಮಿಂಚುಹುಳುಗಳನ್ನೂ ಕೆಂಪಗಿರುವ ಕಾಡುಗಳ ನೆಲಗಳ ಎಳೆಯ ಚಿಗುರಿನ ಬಣ್ಣವನ್ನು ಹೊಂದಿ ವಿರಹಿಗಳ ಮನಸ್ಸನ್ನು ಕೆರಳಿಸುವಂತೆ ಜಲಜಲನೆ ಹರಿಯುವ ಝರಿಗಳ

ಕೆಯ್ಕೊಂಡು ವಿರಹಿಗಳ ಮನಮನೊಲಿಸುವಂತೆ ಜಲಜಲನೆ ಪರಿವ ಜರಿವೊನಲ್ಗಳುಮಂ ಕಂಡು ತಮ್ಮ ಕಣ್ಗಂ ಮನಕಂ ಸೊಗಯಿಸೆ ಪಯಣಂಬಂದು ಕಾಮ್ಯಕವನಮಂ ಪುಗುತಂದರದೆಂತೆಂದೊಡೆ-

ಮ॥ ದೆಸೆಗೆತ್ತಂ ಗಜಜುತ್ತುಮಿರ್ಪ ಪುಲಿಯಿಂ ನೀಳಾಭ್ರಮಂ ದಂತಿಗೆ
ತ್ತು ಸಿಡಿಲ್ದಾಗಸಕೆಯ್ದೆ ಪಾಯ್ವ ಪಲವುಂ ಸಿಂಗಂಗಳಿಂದೆತ್ತಗು ।
ರ್ವಿಸಿ ಪಾಯ್ವರ್ವಿಗಳಿಂ ಮದಾಂಧ ವನಗಂಧೇಭಂಗಳಿಂ ಕಣ್ಗಗು
ರ್ವಿಸೆಯುಂ ಚಿತ್ತದೊಳಂದು ಕಾಮ್ಯಕವನಂ ಮಾಡಿತ್ತು ಪ್ರೀತಿಯಂ ॥ ೨೬

ವ॥ ಅಂತು ಸೌಮ್ಯಭಯಂಕರಾಕಾರಮಪ್ಪ ಕಾಮ್ಯಕವನಮಂ ಪುಗುತಂದಲ್ಲಿ ತದ್ವನಾಧಿಪತಿಯಪ್ಪ ದೈತ್ಯಂ ಕಿಮ್ಮೀರನವರಂ ಪುಗಲೀಯದಡ್ಡಮಾಗಿರೆ-

ಮ॥ ಮಸಿಯಂ ಪುಂಜಿಸಿದಂತುಟಪ್ಪ ತನು ನೀಳಾಂಭೋಧರಂ ದಾಡೆಗಳ್
ಪೊಸ ಮಿಂಚುಗ್ರ ವಿಲೋಚನಂ ದಿವಿಜ ಗೋಪಂ ಕಾರೊ ಮೇಣ್ ಕಾಳ ರ ।
ಕ್ಕಸನೋ ಪೇಳೆನೆ ಬಂದು ತಾಗೆ ಗದೆಯಂ ಕೊಂಡೆಯ್ದೆ ಭೀಮಂ ಸಿಡಿ
ಲ್ದು ಸಿಡಿಲ್ ಪೊಯ್ವವೊಲಾಗೆ ಪೊಯ್ದನಿಳೆಯೊಳ್ ಕಿಮ್ಮೀರನಂ ವೀರನಂ ॥೨೭

ವ॥ ಅಂತು ಕಿಮ್ಮೀರನಂ ಕೊಂದು ಕಾಮ್ಯಕವನಮಂ ಪೊಕ್ಕು ತದ್ವನ ತಪೋಧನರ ಗೋಷ್ಠಿಯೊಳಮಾಟವಿಕರಟ್ಟಟ್ಟಿಯೊಳಂ ತಮಗಿಂದ್ರಪ್ರಸ್ಥದ ರಾಜ್ಯಶ್ರೀಯಂ ಮಸುಳಿಸೆ-

ಪ್ರವಾಹವನ್ನೂ ನೋಡಿ ಕಣ್ಣಿಗೂ ಮನಸ್ಸಿಗೂ ಆನಂದವಾಗಿರಲು ಪಾಂಡವರು ಪ್ರಯಾಣಮಾಡಿ ಕಾಮ್ಯಕವನವನ್ನು ಪ್ರವೇಶಮಾಡಿದರು. ಅದು ಹೇಗಿತ್ತೆಂದರೆ- ೨೬. ಎಲ್ಲ ದಿಕ್ಕುಗಳಲ್ಲಿಯೂ ಗರ್ಜಿಸುತ್ತಿರುವ ಹುಲಿಗಳಿಂದಲೂ ನೀಲಾಕಾಶವನ್ನು ಆನೆಯೆಂದು ಭ್ರಮಿಸಿ ಸಿಡಿದು ಆಕಾಶಕ್ಕೆ ವಿಶೇಷವಾಗಿ ಹಾರುವ ಹಲವು ಸಿಂಹಗಳಿಂದಲೂ ಎಲ್ಲೆಲ್ಲಿಯೂ ಭಯವನ್ನುಂಟುಮಾಡಿ ಹರಿಯುವ ಬೆಟ್ಟದ ಝುರಿಗಳಿಂದಲೂ ಮದದಿಂದ ಸೊಕ್ಕಿದ ಕಾಡಾನೆಗಳಿಂದಲೂ ಕಾಮ್ಯಕವನವು ಕಣ್ಣಿಗೆ ಭಯವನ್ನುಂಟುಮಾಡಿದರೂ ಮನಸ್ಸಿಗೆ ಅತ್ಯಂತ ಪ್ರೀತಿಯನ್ನುಂಟುಮಾಡಿತು. ವ॥ ಹಾಗೆ ಸೌಮ್ಯವೂ ಭಯಂಕರವೂ ಆದ ಕಾಮ್ಯಕವನವನ್ನು ಪ್ರವೇಶಿಸಲು ಆ ಕಾಡಿಗೆ ಒಡೆಯನಾದ ಕಿಮ್ಮೀರನೆಂಬ ರಾಕ್ಷಸನು ಅವರು ಪ್ರವೇಶಮಾಡುವುದಕ್ಕೆ ಅವಕಾಶಕೊಡದೆ ತಡೆದನು. ೨೭. ಮಸಿಯನ್ನು ಒಟ್ಟುಗೂಡಿಸಿದ ಹಾಗಿದ್ದ ಅವನ ಶರೀರವೇ ಕರಿಯಮೋಡ, ಕೋರೆಹಲ್ಲುಗಳೇ ಮಿಂಚು, ಭಯಂಕರವಾದ ಕಣ್ಣುಗಳೇ ಮಿಂಚುಹುಳುಗಳು, ಇದು ಮಳೆಗಾಲವೋ ಕಾಳರಾಕ್ಷಸನೋ ಎನ್ನುವ ಹಾಗೆ ಬಂದು ಮೇಲೆ ಬೀಳಲು ಭೀಮನು ಗದೆಯನ್ನು ತೆಗೆದುಕೊಂಡು ವಿಶೇಷವಾಗಿ ಆರ್ಭಟಿಸಿ ಸಿಡಿಲುಹೊಡೆದ ಹಾಗೆ ವೀರನಾದ ಕಿಮ್ಮೀರನನ್ನು ಹೊಡೆದು ಭೂಮಿಯಲ್ಲಿ ಕೆಡವಿದನು. ವ॥ ಹಾಗೆ ಕಿಮ್ಮೀರನನ್ನು ಕೊಂದು ಕಾಮ್ಯಕವನವನ್ನು ಪ್ರವೇಶಿಸಿ ಆ ಕಾಡಿನಲ್ಲಿದ್ದ ತಪಸ್ವಿಗಳ ಗುಂಪಿನಲ್ಲಿಯೂ ಅಲ್ಲಿಯ ಕಾಡುಜನರ ಸೇವೆಗಳಲ್ಲಿಯೂ ಸುಖದಿಂದಿದ್ದರು. ಅಲ್ಲಿಯ ಸೌಖ್ಯವು ಅವರಿಗೆ ಇಂದ್ರಪ್ರಸ್ಥದ ರಾಜ್ಯವೈಭವವನ್ನು

ಪಿರಿಯಕ್ಕರ ।। ಪಿರಿಯ ಮರಂಗಳೆ ಮಾಡಮಾಗೆ ಪೊಳೆವೆಳದಳಿರ್ಗಳೆ ಸೆಜ್ಜೆಯಾಗೆ
ಪಿರಿಯ ಮಡುಗಳೆ ಮಜ್ಜನಮಾಗೆ ಪೊಸ ನಾರೆ ದೇವಾಂಗವಸ್ತ್ರಮಾಗೆ ।
ಪರೆದ ತಱಿಗೆಲೆಯೆ ಪರಿಯಣಮಾಗೆ ಪಣ್ಪಲಮೆತ್ತಿದ ಬೋನಮಾಗೆ
ಸಿರಿಯ ಮಹಿಮೆಯಂ ಮೆಱೆಯಲೇನಾರ್ತುದೊ ಬನದೊಳಿರ್ಪರವಾ
ಪಾಂಡವರಾ ।। ೨೮

ಉ।। ಪಾಸಱೆ ಸಿಂಹಪೀಠಮಳಿನೀರುತಿ ಮಂಗಳಗೀತಿ ಭೂತಳಂ
ಪಾಸು ಮೃಗವ್ರಜಂ ಪರಿಜನಂ ಪೊದಱೋಲಗಸಾಲೆ ಮೊಕ್ಕಳಂ ।
ಬೀಸುವ ಗಾಳಿ ಚಾಮರದ ಗಾಳಿಯೆನಲ್ ದೊರೆವೆತ್ತದೇಂ ಸುಖಾ
ವಾಸ ನಿಮಿತ್ತವಾಯ್ತೊ ವನವಾಸನಿವಾಸಮೆ ಪಾಂಡುಪುತ್ರರಾ ।। ೨೯

ವ।। ಅಂತು ಕಾಮ್ಯಕವನದೊಳಯ್ದು ವರುಷಮಿರ್ದಾಱನೆಯ ವರುಷದೊಳದಱ ಕೆಲದೊಳೊಂದಿ ಸಂದಿಸಿ ಗಗನತಳಮಂ ತಱುಂಬುವಂತಿರ್ದ ಶಿಖರಿಶಿಖರಂಗಳಿಂದಂ ದೆಸೆಗಳಂ ತಡವರಿಸಿ ಕೊಳ್ವಂತೆ ಬಳ್ವವ ಬಳೆದು ಸೊಗಯಿಸುವ ಪೆರ್ಮರಂಗಳಿಂದಂ ವನಲಕ್ಷ್ಮಿಯ ಗೋಮಂಡಲದಂತಿರ್ದ ಕಡವಿನ ಕಾಡೆರ್ಮೆಯ ಪಿಂಡುಗಳಿಂದಂ ದೆಸೆಗಳ್ಗೆ ಬೆರ್ಚಿ ಮೂಂಕಿಱಿವ ವನಮಹಿಷಿಗಳಿಂ ಮದಹಸ್ತಿಯಂತೆ ಮರವಾಯ್ವ ಪುಲಿಗಳಿನತಿ ಭಯಂಕರಾಕಾರಮಪ್ಪ ದ್ವೈತವನಕ್ಕೆ ಬಂದು ತದ್ವನೋಪಕಂಠವರ್ತಿಗಳಪ್ಪ ತಾಪಸಾಶ್ರಮಂಗಳೊಳ್ ವಿಶ್ರಮಿಸಲ್ ಬಗೆದು-

ಮರೆಯಿಸಿತು. ೨೮. ದೊಡ್ಡಮರಗಳೇ ಹಾಸುಗೆಯಾದವು, ಆಳವಾದ ಮಡುಗಳೇ ಸ್ನಾನ(ಗೃಹ)ವಾದುವು ಹೊಸ ನಾರೆ ರೇಷ್ಮೆಯ ಬಟ್ಟೆಯಾಯಿತು. ಹರಡಿದ ತರಗೆಲೆಯೇ ಊಟದತಟ್ಟೆಯಾಯಿತು. ಹಣ್ಣು ಹಂಪಲುಗಳೇ ಶ್ರೇಷ್ಠವಾದ ಭೋಜನ ವಾಯಿತು. ಪಾಂಡವರ ವನವಾಸವೂ ಐಶ್ವರ್ಯದ ಮಹತ್ವವನ್ನು ಪ್ರಕಟಿಸಲು ಸಹಾಯಕವಾಯಿತು. ೨೯. ಹಾಸು ಬಂಡೆಯೇ ಸಿಂಹಾಸನ, ದುಂಬಿಯ ಧ್ವನಿಯೇ ಮಂಗಳವಾದ್ಯ, ಭೂಮಿಯೇ ಹಾಸಿಗೆ, ಮೃಗಗಳ ಸಮೂಹವೇ ಪರಿಹಾರ, ಹೊದರುಗಳೇ ಸಭಾಸ್ಥಾನ, ವಿಶೇಷವಾಗಿ ಬೀಸುವ ಗಾಳಿಯೇ ಚಾಮರದ ಗಾಳಿ ಎನ್ನುವ ಹಾಗಿರಲು ಪಾಂಡವರ ವನವಾಸವೇ ರಾಜ್ಯಭಾರಕ್ಕೆ ಸಮಾನವಾಗಿ ಅವರ ಸುಖಾವಾಸಕ್ಕೆ ಕಾರಣವಾಯಿತು. ವ।। ಪಾಂಡವರ ಹಾಗೆ ಕಾಮ್ಯಕವನದಲ್ಲಿ ಅಯ್ದು ವರ್ಷಗಳ ಕಾಲವಿದ್ದರು. ಆರನೆಯ ವರ್ಷದಲ್ಲಿ ಅದರ ಪಕ್ಕದಲ್ಲಿಯೇ ಸೇರಿಕೊಂಡು ಆಕಾಶಪ್ರದೇಶವನ್ನು ಅಟ್ಟಿಹೋಗುವ ಹಾಗಿದ್ದ ಶಿಖರಗಳನ್ನುಳ್ಳ ಬೆಟ್ಟಗಳಿಂದಲೂ ದಿಕ್ಕುಗಳನ್ನೂ ಹುಡುಕುವಂತೆ ಕೊಬ್ಬಿ ಬೆಳೆದು ಸೊಗಯಿಸುತ್ತಿರುವ ದೊಡ್ಡ ಮರಗಳಿಂದಲೂ ವನಲಕ್ಷ್ಮಿಯ ಗೋವುಗಳ ಗುಂಪಿನ ಹಾಗಿರುವ ಕಡವು ಮತ್ತು ಕಾಡುಕೋಣಗಳ ಹಿಂಡುಗಳಿಂದಲೂ ದಿಕ್ಕುದಿಕ್ಕುಗಳಲ್ಲಿ ಹೆದರಿ ವಾಸನೆ ನೋಡಲು ಮೂಗನ್ನು ಚಾಚುತ್ತಿರುವ ಕಾಡೆಮ್ಮೆಗಳಿಂದಲೂ ಮದ್ದಾನೆಯಂತೆ ಬಂದು ಮರಕ್ಕೆ ತಗಲುವ ಹುಲಿಗಳಿಂದಲೂ ಅತ್ಯಂತ ಭಯಂಕರವಾಗಿರುವ ದ್ವೈತವನಕ್ಕೆ ಬಂದು ಆ ವನದ ಸಮೀಪದಲ್ಲಿರುವ ತಪಸ್ವಿಗಳ ಆಶ್ರಮಗಳಲ್ಲಿ ವಿಶ್ರಮಿಸಿಕೊಳ್ಳಲು

ಮ॥ ಪುಗಲಿಲ್ಲೀ ಬನಮಾರ್ಗಮಿಂಬು ನೆಲಸಲ್ ನಾರುಂಟುಡಲ್ ಮೆಲ್ಲೆ ಕೊಂ
ಬುಗಳೊಳ್ ಪಣ್ಪಲಮುಂಟು ಮಿಾಯೆ ಕುಡಿಯಲ್ ನೀರುಂಟು ಪದ್ಮಾಕರಾ ।
ಳಿಗಳೊಳ್ ತಣ್ಪುಗಳುಂಟು ಹೇಮಲತಿಕಾ ಕುಂಜಂಗಳೊಳ್ ನಮ್ಮ ನ
ನ್ನಿಗೆ ಬನ್ನಂ ಬರಲೀಯದೀ ಬನದೊಳಿರ್ದೇಂ ಕಾಲಮಂ ಪಾರೆವೇ ॥ ೩೦

ವ॥ ಎಂದು ತಮ್ಮೊಳಯ್ವರುಮೇಕ ಕಾರ್ಯಾಳೋಚನಪರರಾಗಿ ದ್ವೈತವನದೊಳದ್ವೈತ ಸಾಹಸರಿರ್ಪನ್ನೆಗಮೊಂದು ದಿವಸಂ ದುರ್ಯೋಧನನ ಮಯ್ದುನಂ ಸಿಂಧುದೇಶಾಧೀಶ್ವರಂ ಸೈಂಧವನವರಂ ಭೇದಿಸಲೆಂದು ಮೆಯ್ಗರೆದು ಬಂದು-

ಮ॥ ಮೃಗಯಾಕ್ರೀಡೆಗೆ ಪಾಂಡುರಾಜತನಯರ್ ಪೋಪನ್ನೆಗಂ ಬಂದು ತೊ
ಟ್ಟನೆ ಪಾಂಚಾಳಿಯನೆತ್ತಿ ತನ್ನ ರಥದೊಳ್ ತಂದಿಟ್ಟುಕೊಂಡುಯ್ವನ ।
ನ್ನೆಗಮಂತಾ ಪಡೆಮಾತುಗೇಳ್ದತಿಬಳರ್ ಭೀಮಾರ್ಜುನರ್ ಕಾಯ್ದು ಕೆ
ಯ್ಮಿಗೆ ಬೆನ್ನಂ ಪರಿದೆತ್ತ ಪೋಪೆಯೆಲವೋ ಪೋ ಪೋಗಲೆಂದೆಯ್ದಿದರ್ ॥ ೩೧

ವ॥ ಅಂತೆಯ್ದಿ ತದ್ಗದಾಘಾತದೊಳಂ ಬಾಣಪಾತದೊಳಮವನ ರಥಮಂ ಶತ ಚೂರ್ಣಂ ಮಾಡಿ ಜಯದ್ರಥನಂ ಕೋಡಗಗಟ್ಟುಗಟ್ಟಿ ಬೆನ್ನಂ ಬಿಲ್ಲ ಕೊಪ್ಪಿನೊಳಿಱಿದು ನಡೆಯೆಂದು ನಡೆಯಿಸಿ ಪಾಂಚಾಳಿಯಂ ಲೀಲೆಯಿಂದೊಡಗೊಂಡು ಬೀಡಿಂಗೆ ವಂದು ಧರ್ಮಪುತ್ರಂಗೆ ತೋಱಿದೊಡೆ-

ಯೋಚಿಸಿದರು. ೩೦. ಈ ವನವು ಮತ್ತಾರಿಗೂ ಪ್ರವೇಶಿಸಲಾಗುವುದಿಲ್ಲ; ಇರುವುದಕ್ಕೆ ಸ್ಥಳಾವಕಾಶವೂ ಉಡಲು ನಾರೂ ಉಂಟು; ಊಟಮಾಡಲು ಕೊಂಬೆಗಳಲ್ಲಿ ಹಣ್ಣು ಹಂಪಲುವುಂಟು; ಸ್ನಾನಮಾಡಲೂ ಕುಡಿಯಲೂ ಕೊಳಗಳಲ್ಲಿ ನೀರುಂಟು; ಹೊಂಬಣ್ಣದ ಬಳ್ಳಿವನೆಗಳಲ್ಲಿ ತಂಪುಂಟು; ಈ ವನದಲ್ಲಿ ನಮ್ಮ ಸತ್ಯಪರಿಪಾಲನೆಗೆ ಭಂಗಬರುವುದಿಲ್ಲ. ಈ ವನದಲ್ಲಿಯೇ ಇದ್ದು ಕಾಲಯಾಪನೆ ಮಾಡಬಹುದಲ್ಲವೇ ಎಂದು ಯೋಚಿಸಿ ವ॥ ಅಯ್ವರೂ ಏಕಾಭಿಪ್ರಾಯವಾಗಿ ಅದ್ವಿತೀಯ ಬಲಶಾಲಿಗಳಾದ ಅವರು ಆ ದ್ವೈತವನದಲ್ಲಿ ತಂಗಿದರು. ಅಷ್ಟರಲ್ಲಿ ಒಂದು ದಿವಸ ದುರ್ಯೋಧನನ ಮೈದುನನೂ ಸಿಂಧುದೇಶಾಧಿಪತಿಯೂ ಆದ ಸೈಂಧವನು ಅವರನ್ನು ಭೇದಿಸಬೇಕೆಂದು (ರಹಸ್ಯವನ್ನು ತಿಳಿಯಲೆಂದು) ಮೈಮರೆಸಿಕೊಂಡು ಬಂದನು. ೩೧. ಆ ಪಾಂಡುಪುತ್ರರು ಬೇಟೆಗೆ ಹೋಗಿರುವ ಸಮಯವನ್ನೇ ನೋಡಿ ಬಂದು ಇದ್ದಕ್ಕಿದ್ದ ಹಾಗೆ ದ್ರೌಪದಿಯನ್ನೆತ್ತಿ ತನ್ನ ರಥದಲ್ಲಿಟ್ಟುಕೊಂಡು ಹೋದನು. ಅಷ್ಟರಲ್ಲಿ ಆ ಸಮಾಚಾರವನ್ನು ಕೇಳಿ ಬಹುಸಾಹಸಿಗಳಾದ ಭೀಮಾರ್ಜುನರ ಕೋಪವು ಮಿತಿಮೀರಿರಲು ಅವನ ಬೆನ್ನಿನ ಹಿಂದೆಯೇ ಓಡಿ ಎಲ್ಲಿಗೆ ಹೋಗುತ್ತೀಯೋ ಹೋಗಬೇಡ, ಹೋಗಬೇಡ (ನಿಲ್ಲು) ಎಂದು ಅವನನ್ನು ಸಮೀಪಿಸಿದರು. ವ॥ ತಮ್ಮ ಗದೆಯ ಪೆಟ್ಟಿನಿಂದಲೂ ಬಾಣ ಪ್ರಯೋಗದಿಂದಲೂ ಅವನ ತೇರನ್ನು ನೂರು ಚೂರುಮಾಡಿ ಸೈಂಧವನನ್ನು ಕಪಿಯನ್ನು ಬಿಗಿಯುವಂತೆ ಬಿಗಿದು ಅವನ ಬೆನ್ನನ್ನು ಬಿಲ್ಲಿನ ತುದಿಯಿಂದ ತಿವಿದು ಗಾಯಮಾಡಿ ನಡೆ ಎಂದು ನಡೆಯಿಸಿ

ಕಂ॥ ಲಾಕ್ಷಾಗೃಹಮಂ ಪುಗಿಸಲು
ಮಕ್ಷಕ್ರೀಡೆಯೊಳೆ ಧರಣಿಯಂ ಕೊಳಲುಂ ಪಿಂ ।
ಗಾಕ್ಷಂಗೆವೇೞ್ದು ಸೈರಿಸ
ದಾಕ್ಷೇಪದಿನೆಮ್ಮನಿಲ್ಲಿ ಭಿದಿಸ ಬಂದೈ ॥ ೩೨

ವ॥ ಎಂದು ನಿನ್ನಂ ಪರಿಭವಕ್ಕೆ ತಂದು ನಿನ್ನ ಯಶಮಂ ಕಿಡಿಸಿದೆವಿನ್ ಕೊಂದೊಡೇವಂದಪುದೆಂದು ದುರ್ಯೋಧನನಲ್ಲಿಗೆ ಪೋಗೆಂದು ಕಟ್ಟಿದ ಕಟ್ಟುಗಳಂ ಬಿಟ್ಟು ಕಳಿದೊಡೆ ಜಯದ್ರಥಂ ಸಿಗ್ಗಾಗಿ ಕೈಲಾಸದೊಳೀಶ್ವರಂಗೆ ತಪಂಗೆಯ್ದು ಮೆಚ್ಚಿಸಿ ಪಾಂಡವರನೊಂದು ದೆವಸದನುವರದೊಳ್ ಗೆಲ್ವೆನಕ್ಕೆಂದು ಬರಂಬಡೆದು ಪೋದನಿತ್ತ ದುರ್ಯೋಧನಂ ಸಮಸ್ತಸಾಧನಸಹಿತನಾಗಿ ಕಾಡೊಳ್ ಬೇಡರಂತೆ ತೊೞಲ್ವ ದಾಯಿಗರ ಕಂದಿ ಕುಂದಿದ ಮೊಗಂಗಳಂ ನೋಡುವುದುಮೆನ್ನನವರಿಂ ನೋಡಿಸುವುದಮಿಾಯೆರಡೆ ಸಂಸಾರಫಲಮೆಂದು ನಾಗಪುರದಿಂ ಪೊಱಮಟ್ಟು ದುಶ್ಶಾಸನಾದಿಗಳಪ್ಪ ನೂರ್ವರ್ ತಮ್ಮಂದಿರುಂ ಭಾನುಮತಿಯುಂ ಚಂದ್ರಮತಿಯುಮೆಂಬ ಬೇಟದರಸಿಯರುಂ ಲಕ್ಕಣಂ ಮೊದಲಾಗೆ ನೂರ್ವರ್ ಮಕ್ಕಳುಂ ಗಾಂಗೇಯ ದ್ರೋಣ ಕೃಪ ವಿದುರ ಪ್ರಭೃತಿಗಳುಮಶ್ವತ್ಥಾಮ ಕರ್ಣ ಶಲ್ಯ ಶಕುನಿ ಸೈಂಧವ ಪ್ರಮುಖನಾಯಕರುಂಬೆರಸು ಬೇಂಟೆಯ ನೆವದಿಂ ಬಂದು ದ್ವೈತವನದ ಕೆಲದ ನಂದನವನದೊಳ್ ಪಾಂಡವರ್ಗೆ ಸಮೀಪಮಾಗೆ ಬೀಡಂ ಬಿಟ್ಟು ಪಾಡಿಸುತ್ತುಂ ಪೊಗೞಿಸುತ್ತಮಿರ್ದನನ್ನೆಗಂ ಪಗೆಯಿಱಿಯೆಯುಬಂದರ

ದ್ರೌಪದಿಯೊಡನೆ ಬೀಡಿಗೆ ಬಂದು ಧರ್ಮರಾಜನಿಗೆ ತೋರಿದರು. ೩೨. 'ಅರಗಿನ ಮನೆಯನ್ನು ಪ್ರವೇಶಮಾಡಿಸಲೂ ಪಗಡೆಯಾಟದಿಂದ ರಾಜ್ಯವನ್ನು ಕಸಿದುಕೊಳಲೂ ದುರ್ಯೋಧನನಿಗೆ ಪ್ರೇರೇಪಿಸಿ (ಅಷ್ಟಕ್ಕೇ) ತೃಪ್ತಿಪಡದೆ ನಮ್ಮನ್ನು ದೌಷ್ಟ್ಯದಿಂದ ಇಲ್ಲಿಯೂ ಭೇದಿಸಲು ಬಂದೆಯಾ?' ವ॥ 'ನಿನ್ನನ್ನು ಅವಮಾನ ಪಡಿಸಿ ನಿನ್ನ ಯಶಸ್ಸನ್ನು ಕೆಡಿಸಿದೆವು. ಇನ್ನು ನಿನ್ನನ್ನು ಕೊಂದರೆ ಏನು ಬರುತ್ತದೆ,' ದುರ್ಯೋಧನನ ಹತ್ತಿರಕ್ಕೆ ಹೋಗಿ ಬದುಕು ಎಂದು ಕಟ್ಟಿದ್ದ ಕಟ್ಟುಗಳನ್ನೆಲ್ಲ ಬಿಚ್ಚಿ ಕಳುಹಿಸಲು ಸೈಂಧವನು ನಾಚಿಕೆಗೊಂಡು ಕೈಲಾಸದಲ್ಲಿ ಈಶ್ವರನನ್ನು ಕುರಿತು ತಪಸ್ಸುಮಾಡಿ ಮೆಚ್ಚಿಸಿ 'ಪಾಂಡವರನ್ನು ಒಂದು ದಿನದ ಯುದ್ಧದಲ್ಲಿಯಾದರೂ ಗೆಲ್ಲುವಂತಾಗಲಿ' ಎಂದು ವರವನ್ನು ಪಡೆದು ಹೋದನು. ಈ ಕಡೆ ದುರ್ಯೋಧನನು ಕಾಡಿನಲ್ಲಿ ಬೇಡರಂತೆ ತೊಳಲುತ್ತಿರುವ ಜ್ಞಾತಿಗಳ ಬಾಡಿ ಕೃಶವಾದ ಮುಖಗಳನ್ನು ನೋಡುವುದೂ ವೈಭವಯುಕ್ತವಾದ ತನ್ನನ್ನು ಅವರಿಂದ ನೋಡಿಸುವುದೂ ಇವೆರಡೇ ಸಂಸಾರದ ಫಲವೆಂದು (ಭಾವಿಸಿ) ಸಮಸ್ತ ಸಲಕರಣೆಗಳೊಡನೆ ಹಸ್ತಿನಾಪುರದಿಂದ ಹೊರಟು ದುಶ್ಶಾಸನನೇ ಮೊದಲಾದ ನೂರ್ವರು ತಮ್ಮಂದಿರನ್ನೂ ಭಾನುಮತಿ ಮತ್ತು ಚಂದ್ರಮತಿ ಎಂಬ ಇಬ್ಬರು ಪ್ರೀತಿಪಾತ್ರರಾದ ರಾಣಿಯರನ್ನು ಲಕ್ಷಣನೇ ಮೊದಲಾದ ನೂರುಜನ ಮಕ್ಕಳನ್ನೂ ಭೀಷ್ಮ, ದ್ರೋಣ ಕೃಪ ವಿದುರ ಮೊದಲಾದ ಪ್ರಭೃತಿಗಳನ್ನೂ ಅಶ್ವತ್ಥಾಮ, ಕರ್ಣ,ಶಲ್ಯ, ಶಕುನಿ ಸೈಂಧವನೇ ಮೊದಲಾದ ನಾಯಕರನ್ನೂ ಕೂಡಿಬೇಟೆಯ ನೆಪದಿಂದ ಬಂದು ದ್ವೈತವನದ ಪಕ್ಕದ ನಂದನವನದೊಳಗೆ ಪಾಂಡವರಿಗೆ ಸಮೀಪವಾಗಿರುವ ಹಾಗೆ ಬೀಡು ಬಿಟ್ಟನು. ತನ್ನ ವೈಭವವನ್ನು ಹಾಡಿಸುತ್ತಲೂ ಹೊಗಳಿಸುತ್ತಲೂ ಇದ್ದನು. ಅಷ್ಟರಲ್ಲಿ 'ಹಗೆಯನ್ನು ಕೊಲ್ಲಲು ಬಂದವರ ಮೂಗನ್ನು

ಮೂಗನರಿದರೆಂಬಂತನಿಬರಂ ಬಾಯಂ ಬಿಟ್ಟು ನೋಡೆ ನೋಡೆ ಪೂರ್ವಜನ್ಮದ ಪಗೆ ಚಿತ್ರಾಂಗದನೆಂಬ ಗಂಧರ್ವನಱುವತ್ತು ಕೋಟಿ ಗಾಂಧರ್ವಬಲಂಬೆರಸು ಬಂದು ದುರ್ಯೋಧನ ದುಶ್ಶಾಸನರಿರ್ವರುಮಂ ಕೋಡಗಗಟ್ಟುಗಟ್ಟಿ-

ಚಂ॥ ಮಿಡುಕದೆ ಭೀಷ್ಮ ನೋಡುತಿರು ಕುಂಭಜ ಸುರ್ಕಿರು ಕರ್ಣ ಮಿಕ್ಕು ಮಾ
ರ್ನುಡಿಯದೆ ಮೂಗುವಟ್ಟಿರು ಗುರು ಪ್ರಿಯನಂದನ ಕೂಗಡಂಗದಿ ।
ರ್ದೊಡೆ ಬರ್ದುಕಾವುದಿರ್ ಪೊಡರ್ದೊಡೀಗಡೆ ಕೊಂದಪೆನೆಂದು ಕೂ
ಣ್ಗಿಡೆ ಜಡಿದುಯ್ದನಾ ಖಚರನಿರ್ವರುಮಂ ಪರಮಾಣುಮಾರ್ಗದಿಂ ॥ ೩೩

ವ॥ ಅಂತುಯ್ವುದುಂ ನೆಗಟ್ತೆಯ ಬೀರರೆಲ್ಲಂ ಬಡವರ ಪಿತರರಂತೆ ಮಿಳ್ಮಿಳ ನೋಡುತ್ತಿರೆ ಮಿಕ್ಕುದುಂಡರಂತೆ ತಲೆಯಂ ಬಾಗಿ ಬಿಲ್ಗಳಂ ಮುಂದಿಟ್ಟು ಬಿಲ್ಲುಂ ಬೆಱಗುಮಾಗಿರೆ ಸುಯೋಧನನ ಮಹಾದೇವಿ ಭಾನುಮತಿ ಬಾಯಟೆದು ಪುಯ್ಯಲಿಡುತುಂ ಬಂದು ಧರ್ಮನಂದನನ ಕಾಲ ಮೇಲೆ ಕವಿದುಪಟ್ಟು-

ಕಂ॥ ನೋಂತರ ಪಗೆವರನೆಟ್ತಿಱಿ
ದಂತಾಯ್ತೆಂದಿರದೆ ಪುರುಷಕಾರದ ಪೆಂಪಂ ।
ಚಿಂತಿಸಿ ತರಿಸಿ ಮಹೀಶನ
ನೆಂತಪ್ಪೊಡಮೆನಗೆ ಪುರುಷಭಿಕ್ಷಮನಿಕ್ಕಿಂ ॥ ೩೪

ವ॥ ಎಂದು ಪುಯ್ಯಲಿಡುವ ಭಾನುಮತಿಯ ಪುಯ್ಯಲಂ ಕೇಳ್ದು ಸುಯೋಧನಂ ಬಂದ ವೃತ್ತಾಂತಮನಱಿದು-

ಕತ್ತರಿಸಿದರು' ಎಂಬಂತೆ ಎಲ್ಲರೂ ಆಶ್ಚರ್ಯದಿಂದ ಬಾಯಿಬಿಟ್ಟುಕೊಂಡು ನೋಡುತ್ತಿದ್ದ ಹಾಗೆಯೇ ಹಿಂದಿನ ಜನ್ಮದ ಶತ್ರುವಾದ ಚಿತ್ರಾಂಗದನೆಂಬ ಗಂಧರ್ವನು ಅರುವತ್ತು ಕೋಟಿ ಗಂಧರ್ವಸೈನ್ಯದೊಡನೆ ಕೂಡಿ ಬಂದು ದುರ್ಯೋಧನ ದುಶ್ಶಾಸನರಿಬ್ಬರನ್ನೂ ಕಪಿಯನ್ನು ಕಟ್ಟುವ ಹಾಗೆ ಕಟ್ಟಿದನು. ೩೩. 'ಭೀಷ್ಮ ಅಳ್ಳಾಡದೆ ನೋಡುತ್ತಿರು, ದ್ರೋಣನೇ ಮುದುರಿಕೊಂಡಿರು; ಕರ್ಣನೇ ಮೀರಿ ಮಾತನಾಡದೆ ಮೌನವಾಗಿರು; ಅಶ್ವತ್ಥಾಮ ನಿನ್ನ ಕೂಗು ಅಡಗದಿದ್ದರೆ ನಿನಗೆ ಬದುಕುವುದೆಲ್ಲಿ ಬಂತು, ಸುಮ್ಮನಿರು; ಜಂಬಮಾಡಿದರೆ ಈಗಲೆ ಕೊಲ್ಲುತ್ತೇನೆ' ಎಂದು ಅವರೆಲ್ಲರೂ ಹೆದರುವಂತೆ ಬೆದರಿಸಿ ಇಬ್ಬರನ್ನೂ ಆ ಚಿತ್ರಾಂಗದನು ಆಕಾಶಮಾರ್ಗದಿಂದ ಎತ್ತಿಕೊಂಡು ಹೋದನು. ವ॥ ಹಾಗೆ ಎತ್ತಿಕೊಂಡು ಹೋಗಲು ಪ್ರಸಿದ್ಧರಾದ ವೀರರೆಲ್ಲ ಬಡವರ ತಂದೆಯರಂತೆ ಮಿಟಮಿಟನೆ ನೋಡುತ್ತಿದ್ದರು. ಎಂಜಲನ್ನು ತಿಂದವರಂತೆ ತಲೆಯನ್ನು ತಗ್ಗಿಸಿಕೊಂಡರು. ಬಿಲ್ಲುಗಳನ್ನು ತಮ್ಮ ಮುಂದಿಟ್ಟುಕೊಂಡು ಆಶ್ಚರ್ಯಚಕಿತರಾಗಿ ಏನು ಮಾಡಲೂ ತೋರದಿದ್ದರು, ದುರ್ಯೋಧನನ ಮಹಾರಾಣಿಯಾದ ಭಾನುಮತಿಯು ಅಳುತ್ತಲೂ ಅರಚುತ್ತಲೂ ಬಂದು ಧರ್ಮರಾಜನ ಕಾಲಿನ ಮೇಲೆ ಕವಿದು ಬಿದ್ದಳು. ೩೪. 'ತಾನೇ ಕೊಲ್ಲಬೇಕೆಂದು ವ್ರತಮಾಡುತ್ತಿದ್ದವರ ಹಗೆಯನ್ನು ಎತ್ತು ಇರಿದ ಹಾಗಾಯ್ತು ಎಂದು ಸುಮ್ಮನಿರದೆ ಪುರುಷಪ್ರಯತ್ನದ ವೈಭವವನ್ನು ಯೋಚಿಸಿ ಹೇಗಾದರೂ ಮಹಾರಾಜನನ್ನು ತರಿಸಿ ನನಗೆ ಪುರುಷಭಿಕ್ಷೆಯನ್ನು ಕೊಡಿ' ವ॥ ಎಂದು ಕೂಗಿಕೊಳ್ಳುತ್ತಿರುವ ಭಾನುಮತಿಯ ಗೋಳನ್ನು ಕೇಳಿ ದುರ್ಯೋಧನನು ಬಂದ

ಮ॥ ಪಿರಿದುಂ ಕಾಯ್ಪಿನೊಳೆಯ್ದೆ ಕಾಯ್ವ ಸಮಕಟ್ಟಂ ದೋಷಮಲ್ತಕ್ಕ ಮ
ಚ್ಚರಮುಂ ಮೋಘಮೊಡಂಬಡುಂ ಕಲುಷಮುಂ ಮುನ್ನುಳ್ಳುದಂತೆತ್ತಿಯುಂ ।
ಪೊರೆಯುಂ ಪಂತಮುಮಿಲ್ಲದಂತೆ ಮನದೊಳ್ ನಿಷ್ಕಾರಣಂ ಕಾಯ್ವರಂ
ಪರ ಚಿಂತಾಕರ ಏಹಿ ಎಂಬ ನುಡಿಯಂ ಮುಂ ಕೇಳ್ದೆನಿಲ್ಲಾಗದೇ ॥ ೩೫

ವ॥ ಎಂದು ತನ್ನೊಳೆ ಬಗೆದು ಭಾನುಮತಿಯನಿಂತೆಂದಂ-

ಮ॥ ಸುರಿಯಲ್ವೇಡಮದರ್ಕೆ ಬಾಷ್ಪಜಳಮಂ ನಿನ್ನಾಣ್ಮನಂ ನಿನ್ನೊಳಿಂ
ದಿರದಾಂ ಕೂಡುವೆವೆಮ್ಮೊಳಾದ ಕಲಹಕ್ಕೆಂತಾದೊಡಂ ಕೇಳ ನೂ ।
ರ್ವರೆ ದಲ್ ಕೌರವರಾಮುಮಯ್ವರೆ ವಲಂ ಮತ್ತೊರ್ವರೊಳ್ ತೊಟ್ಟ ಸಂ
ಗರರಂಗಕ್ಕೆ ಜಸಕ್ಕೆ ಕೂಡುವೆಡೆಯೊಳ್ ನೂಱಯ್ವರಾವಲ್ಲವೇ ॥ ೩೬

ವ॥ ಎಂದು ಯುಧಿಷ್ಠಿರಂ ಪಾೞಿಯ ಪಸುಗೆಯನಱಿದು ನುಡಿದೊಡಾ ಪೂಣ್ದ
ಬೆಸನಂ ಕರಮಾಸೆವಟ್ಟು ತನ್ನ ಕೆಲದೊಳಿರ್ದ ಸಾಹಸಾಭರಣನ ಮೊಗಮಂ ನೋಡಿ-

ಕಂ॥ ಪಿಡಿದುಯ್ದುದು ಗಂಧರ್ವರ
ಪಡೆ ಗಡ ನಿಮ್ಮಣ್ಣನಂ ಸುಯೋಧನನನಿದಂ ।
ಕಡೆಗಣಿಸಲಾಗ ನಮಗೀ
ಗಡೆ ಬೇಗಂ ಬಿಡಿಸಿ ತರ್ಪುದಾತನ ಸೆಱೆಯಂ ॥ ೩೭

ವ॥ ಎಂಬುದುಂ ಮಹಾಪ್ರಸಾದಮಂತೆಗೆಯ್ವೆನೆಲ್ಲಿಪೊಕ್ಕೊಡಂ ಕೊಂಡು ಬಂದಪೆನೆಂದು
ಬಗೆಯದಿದಿರಂ ನೋಡುತ್ತಿರಿಮೆಂದು ತವದೊಣೆಗಳಂ ಬಿಗಿದು ಗಾಂಡೀವಮನೇಱಿಸಿ ನೀವಿ

ಕಾರಣವನ್ನು ತಿಳಿದು ೩೫. ಈಗ ವಿಶೇಷವಾಗಿ ಕೋಪಿಸಿಕೊಳ್ಳುವುದು ನನಗೆ ಯೋಗ್ಯವಲ್ಲ ತಾಯಿ! ಅಸೂಯೆಯೂ ವ್ಯರ್ಥವಾದ ತೊಂದರೆಯೂ ದ್ವೇಷವೂ ದುರ್ಯೋಧನನಿಗೆ ಸಹಜವಾದುದೇ. ಅದನ್ನೇ ಅನುಸರಿಸಿಕೊಂಡು ನಾನು ದುಃಖದಿಂದ ನಿಷ್ಕಾರಣವಾಗಿ ಕೋಪಿಸಿಕೊಳ್ಳುವುದು ನನಗೆ ಯೋಗ್ಯವಲ್ಲ. ಇತರರಿಗೆ ಹಿಂಸೆಮಾಡುವ ಸ್ವಭಾವವು ನನ್ನಿಂದ ದೂರವಿರಲಿ ಎಂಬ ಮಾತನ್ನು ನಾನು ಹಿಂದೆಯೇ ಕೇಳಿಲ್ಲವೇ? ವ॥ ಎಂದು ತನ್ನಲ್ಲಿ ಯೋಚಿಸಿ ಭಾನುಮತಿಯನ್ನು ಕುರಿತು ಹೀಗೆಂದನು. ೩೬. ಇದಕ್ಕಾಗಿ ನೀನು ಕಣ್ಣೀರನ್ನು ಸುರಿಸಬೇಡ; ಸಾವಕಾಶಮಾಡದೆ ನಿನ್ನ ಗಂಡನನ್ನು ಈ ದಿನವೇ ತಂದು ಸೇರಿಸುವೆವು; ಕೇಳಮ್ಮ ನಮ್ಮ ಮನೆಯಲ್ಲಿಯೇ ಉಂಟಾದ ಜಗಳಕ್ಕೆ ಕೌರವರು ನೂರು ಜನ, ನಾವು ಅಯ್ದು ಜನವೇ ದಿಟ. ಆದರೆ ಮತ್ತೊಬ್ಬರಲ್ಲಿ ಉಂಟಾದ ಯುದ್ಧ ಸೇರುವ ಸಂದರ್ಭದಲ್ಲಿ ನಾವು ನೂರೈದು ಜನವಲ್ಲವೇ? ವ॥ ಎಂದು ಧರ್ಮರಾಜನು ಧರ್ಮದ ವಿವೇಕವನ್ನು ತಿಳಿಯುವ ಹಾಗೆ ಹೇಳಿ ತಾನು ಪ್ರತಿಜ್ಞೆ ಮಾಡಿದ ಕಾರ್ಯವನ್ನು ಶೀಘ್ರವಾಗಿ ಸಾಧಿಸಲು ಮನಸ್ಸು ಮಾಡಿ ತನ್ನ ಪಕ್ಕದಲ್ಲಿದ್ದ ಸಾಹಸಾಭರಣನಾದ ಅರ್ಜುನನ ಮುಖವನ್ನು ನೋಡಿ-೩೭. ನಿಮ್ಮಣ್ಣನಾದ ದುರ್ಯೋಧನನನ್ನು ಗಂಧರ್ವಸೈನ್ಯವು ಹಿಡಿದುಕೊಂಡು ಹೋಗಿದೆ. ನಾವು ಇದನ್ನು ಕಡೆಗಣಿಸಬಾರದು; ಈಗಲೇ ಬೇಗ ಆತನ ಬಂಧನವನ್ನು ಬಿಡಿಸಿ ತರತಕ್ಕದ್ದು. ವ॥ ಎನ್ನಲು ಮಹಾಪ್ರಸಾದ, ಹಾಗೆಯೇ ಮಾಡುತ್ತೇನೆ; ಎಲ್ಲಿ ಹೊಕ್ಕಿದ್ದರೂ

ಜೇವೊಡೆದು ಗಂಧರ್ವರ ಪೋಪ ಬಟೆಯಂ ಬೆಸಗೊಂಡು ಹಿಮವಂತದಲ್ಲಿ ರಾಕ್ಷಸಿ ಕೊಟ್ಟ ಚಕ್ಷುಸಿಯೆಂಬ ವಿದ್ಯೆಯಿಂ ತನ್ನ ಕಣ್ಣನಭಿಮಂತ್ರಿಸಿಕೊಂಡು ಪಾಱುವ ಗಂಧರ್ವಬಲಮಂ ಜಲಕ್ಕನೆ ಕಂಡು-

ಕಂ॥ ಕೊಳ್ ಕೊಳ್ಳೆಂದೆಚ್ಚೊಡೆ ವಿಳ
ಯೋಳ್ಕದ ತೆಱದಿಂದೆ ಮುಸುಱೆ ದಿವ್ಯಾಸ್ತ್ರಚಯಂ ।
ಗಳ್ ಕೊಳೆ ಗಾಂಧರ್ವಬಲಂ
ಗಳ್ ಕೆಡೆದುವು ಮಿಟ್ಟೆಗೊಂಡ ಚಿಟ್ಟೆಯ ತೆಱದಿಂ ॥ ೩೮

ವ॥ ಅಂತಲ್ಲಿ ಪದಿನಾಲ್ಸಾಸಿರ್ವರ್ ಗಂಧರ್ವರಂ ಕೊಂದೊಡೆ ಚಿತ್ರಾಂಗದಂ ಬೆರ್ಚಿ ಕೊಳ್ ನಿನ್ನ ನಚ್ಚಿನ ಸೆಱೆಯನೆಂದು ಬಿಸುಟ್ಟೊಡೆ ನೋಯಲೀಯದೆ ನೆಲದಾಕಾಶದೆಡೆ ಯೊಳಂಬುಗಳಂ ತರತರದಿಂದೆಚ್ಚು ಸೋಪಾನಂ ಮಾಡಿ ದುರ್ಯೋಧನ ದುಶ್ಶಾಸನರನಿೞಿಪಿ ಕಟ್ಟುಗಳಂ ಬಿಡದೊಡಗೊಂಡು ಬಂದು ಧರ್ಮಪುತ್ರಂಗೆ ತೋಱಿದೊಡೆ ಸಾಹಸಾಭರಣನ ಸಾಹಸಮನಳವಲ್ಲದೆ ಪೊಗಟ್ಟು ತೊಡೆಯನೇಱಿಸಿಕೊಂಡು ಬಾಯೊಳ್ ತಂಬುಲಂಗೊಟ್ಟಂ ಪಾಂಚಾಲರಾಜತನೂಜೆ ಪಗೆವರ ಕಟ್ಟುವಟ್ಟರ್ದೇಳಿದಿಕ್ಕೆಗೆ ಸಂತಸಂಬಟ್ಟು ಸೈರಿಸಲಾಱದಿಂತೆಂದಳ್-

ಕಂ॥ ಎಮ್ಮಂ ಪಿಡಿದೆಳೆವಂದಿನ
ನಿಮ್ಮದಟುಗಳೀಗಳೆತ್ತವೋದುವೊ ಪಿಡಿವ ।
ಟ್ಟಮ್ಮ ಬೞಿಲ್ದಿರೆ ಕಂಡಿರೆ
ನಿಮ್ಮಳವಂ ನಿಮಗಮೀಗಳೀಯೆಡರಾಯ್ತೇ ॥ ೩೯

ಕೊಂಡುಬರುತ್ತೇನೆ, ಆ ವಿಷಯವಾಗಿ ಚಿಂತಿಸದೆ ನಿರೀಕ್ಷಣೆ ಮಾಡುತ್ತಿರಿ ಎಂದು ತನ್ನ ಅಕ್ಷಯತೂಣೀರವನ್ನು ಬಿಗಿದುಕೊಂಡು ಗಾಂಡೀವಕ್ಕೆ ಹೆದೆಯನ್ನೇರಿಸಿ ನೀವಿ ಶಬ್ದಮಾಡಿ ನೋಡಿ ಗಂಧರ್ವರು ಹೋದ ದಾರಿಯನ್ನು ಹುಡುಕಿಕೊಂಡು ಹೊರಟನು. ಹಿಮವತ್ಪರ್ವತದಲ್ಲಿ ರಾಕ್ಷಸಿಯು ಕೊಟ್ಟ ಚಕ್ಷುಸಿಯೆಂಬ ವಿದ್ಯೆಯಿಂದ ತನ್ನ ಕಣ್ಣನ್ನು ಅಭಿಮಂತ್ರಿಸಿಕೊಂಡು ನೋಡಲು ಹಾರಿಹೋಗುತ್ತಿದ್ದ ಗಂಧರ್ವಸೈನ್ಯವನ್ನು ಸ್ಪಷ್ಟವಾಗಿ ಕಂಡನು. ೩೮. ತೆಗೆದುಕೊ ತೆಗೆದುಕೊ ಎಂದು ಹೊಡೆಯಲಾಗಿ ದಿವ್ಯಾಸ್ತ್ರಗಳ ಸಮೂಹವು ಪ್ರಳಯಕಾಲದ ಬೆಂಕಿಯ ಚೂರಿನಂತೆ ಮುತ್ತಿ ನಾಟಲಾಗಿ ಗಂಧರ್ವಸೈನ್ಯಗಳು ಮಣ್ಣು ಹೆಂಟೆಯು ತಗುಲಿದ ಚಿಟ್ಟೆಯ ಹುಳುವಿನ ಹಾಗೆ ಉರುಳಿ ಬಿದ್ದುವು. ವ॥ ಅಲ್ಲಿ ಹದಿನಾಲ್ಕು ಸಾವಿರ ಗಂಧರ್ವರನ್ನು ಕೊಲ್ಲಲು ಚಿತ್ರಾಂಗದನು ಹೆದರಿ ನಿನ್ನ ಪ್ರೀತಿಪಾತ್ರವಾದ ಬಂದಿಯನ್ನು ತೆಗೆದುಕೋ ಎಂದು ದುರ್ಯೋಧನ ಮತ್ತು ದುಶ್ಶಾಸನರನ್ನು ಬಿಸಾಡಿದನು. ಅವರು ನೋಯುವುದಕ್ಕೆ ಅವಕಾಶ ಕೊಡದೆ ಭೂಮ್ಯಾಕಾಶಗಳ ಮಧ್ಯದಲ್ಲಿ ಬಾಣಗಳನ್ನು ವಿಧವಿಧವಾಗಿ ಪ್ರಯೋಗಮಾಡಿ ಮೆಟ್ಟಿಲು ಗಳನ್ನು ಕಟ್ಟಿ ದುರ್ಯೋಧನ ದುಶ್ಶಾಸನರನ್ನು ಇಳಿಸಿ ಕಟ್ಟುಗಳನ್ನು ಬಿಡಿಸದೆಯೆ ಕರೆತಂದು ಧರ್ಮರಾಯನಿಗೆ ತೋರಿಸಿದನು. ಅವನು ಸಾಹಸಾಭರಣನ ಸಾಹಸವನ್ನು ಅಳತೆಯಿಲ್ಲದಷ್ಟು ಹೊಗಳಿ ತೊಡೆಯಮೇಲೆ ಕುಳ್ಳಿರಿಸಿಕೊಂಡು ಬಾಯಲ್ಲಿ ತಾಂಬೂಲ ವನ್ನು ಕೊಟ್ಟನು. ದ್ರೌಪದಿಯು ಶತ್ರುಗಳು ಕಟ್ಟುಗಳನ್ನು ಕಟ್ಟಿಸಿಕೊಂಡು ಅವಮಾನ ಪಟ್ಟುದಕ್ಕೆ ಸಂತೋಷಪಟ್ಟು ಸಹಿಸಲಾರದೆ ಹೀಗೆಂದಳು-೩೯. ನಮ್ಮನ್ನು ಹಿಡಿದೆಳೆದ

ವ॥ ಎಂದು ಸಾಯೆ ಸರಸಂ ನುಡಿದು ಕಟ್ಟಿದ ಕಟ್ಟುಗಳಂ ತಾನೆ ಬಿಟ್ಟು ಕಳೆದು ಭಾನುಮತಿಗೆ ನಿನ್ನಾಣ್ಮನುಮಂ ನಿನ್ನ ಮಯ್ದುನನುಮಂ ನೀನೊಪ್ಪುಗೊಳ್ಳೆಂಬುದುಂ ದುರ್ಯೋಧನಂ ದಾಡೆಗಳೆದ ಕುಳಿಕನಂತೆಯುಂ ಕೋಡುಡಿದ ಮದಹಸ್ತಿಯಂತೆಯುಂ ನಖಮುಡಿದ ಸಿಂಹದಂತೆಯುಂ ಗಳಿತಗರ್ವನಾಗಿ ಪಾಂಡವರ ಮೊಗಮಂ ನೋಡಲ್ ನಾಣ್ಚಿ ಮದಗಜಪುರಕ್ಕೆ ಪೋಗಿ ಜೂದಿನೊಳ್ ಗೆಲ್ದ ನೆಲನಂ ನಯಜ್ಞನಾಗಿ ತನ್ನೊಳ್ ಪತ್ತಿಸಿ ದುಶ್ಶಾಸನನಂ ಯುವರಾಜನಂ ಮಾಡಿ ನಿರ್ವ್ಯಾಜಮರಸುಗೆಯ್ಯುತ್ತುಮಿರ್ದನಿತ್ತ ಯುಧಿಷ್ಠಿರನಟ್ಟಿದ ಕಿರಾತದೂತಂ ತಾಪಸ ವ್ಯಾಜನಾಗಿ ಪೋಗಿ ಸುಯೋಧನನ ವಾರ್ತೆಯೆಲ್ಲಮುಮನಱಿದು ಬಂದಜಾತಶತ್ರುಗಿಂತೆಂದು ಬಿನ್ನಪಂಗೆಯ್ದಂ–

ಚಂ॥ ಕಿವಿಗಿನಿದುಂ ನೃಪಂಗೆ ಹಿತಮುಂ ನುಡಿಯೆಲ್ಲಿಯುಮಿಲ್ಲ ಕೇಳ ಬಿ
ನ್ನವಿಸುವೆನೆನ್ನ ಕಂಡುದನೆ ಜೂದಿನೊಳುಕ್ಕೆವದಿಂದೆ ಗೆಲ್ದ ನಿ ।
ನ್ನವನಿತಳಂ ಕರಾತಳದವೋಲ್ ತನಗಂ ಬೆಸಕೆಯ್ಯೆ ಕೆಯ್ಗೆ ಮಾ
ಡುವ ನಯಮಾ ಬೃಹಸ್ಪತಿಯುಮಂ ಗೆಲೆವಂದುದು ಧಾರ್ತರಾಷ್ಟ್ರನಾ ॥೪೦

ಮ॥ ಮೊದಲೊಳ್ ತಿಣ್ಣಮದೊಪ್ಪಿ ತಪ್ಪಿದುದನೀಯೆಂದಟ್ಟದಂ ದಂಡನ
ಟ್ಟದೆ ಸಾಮರ್ಥ್ಯದಿನಟ್ಟದೋಲೆಗೆ ಮಹಾಪ್ರತ್ಯಂತ ಭೂಪಾಳರ ।
ಟ್ಟಿದ ಕಾಳಿಂಗ ಗಜೇಂದ್ರ ದಾನಜಲಧಾರಾಸಾರದಿಂ ನೋಡ ಕುಂ
ದಿದುದಿಲ್ಲೊಳ್ಗಿಸಱಾ ಸುಯೋಧನ ನೃಪದ್ವಾರೋಪಕಂಠಗಳೊಳ್ ॥ ೪೧

ಆ ದಿನದ ನಿಮ್ಮ ಪರಾಕ್ರಮಗಳು ಈಗ ಎಲ್ಲಿಗೆ ಹೋದವು; ಅಪ್ಪ ಬಳಲಿದಿರಲ್ಲಾ; ನಿಮ್ಮ ಪರಾಕ್ರಮದ ಪ್ರಮಾಣವನ್ನು ತಿಳಿದುಕೊಂಡಿರಾ; ಛೀ, ನಿಮಗೂ ಈಗ ಈ ಪರಾಭವವುಂಟಾಯಿತೇ? ವ॥ ಎಂದು ಸಾಯುವ ಹಾಗೆ ಹಾಸ್ಯಮಾಡಿ ಕಟ್ಟಿದ ಕಟ್ಟುಗಳನ್ನು ತಾನೇ ಬಿಚ್ಚಿ ಭಾನುಮತಿಗೆ ನಿನ್ನ ಗಂಡನನ್ನೂ ಮೈದುನನನ್ನೂ ಒಪ್ಪಿಸಿಕೊ ಎಂದಳು. ದುರ್ಯೋಧನನು ಹಲ್ಲುಕಿತ್ತ ಕ್ರೂರಸರ್ಪದಂತೆಯೂ ಕೊಂಬುಮುರಿದ ಮದ್ದಾನೆಯಂತೆಯೂ ಉಗುರು ಕತ್ತರಿಸಿದ ಸಿಂಹದಂತೆಯೂ ಗರ್ವಹೀನನಾಗಿ ಪಾಂಡವರ ಮುಖವನ್ನು ನೋಡಲು ನಾಚಿ ಹಸ್ತಿನಾಪುರಕ್ಕೆ ಹೋಗಿ ಜೂಜಿನಲ್ಲಿ ಗೆದ್ದ ರಾಜ್ಯವನ್ನು ನೀತಿಯುಕ್ತವಾಗಿ ಆಳುತ್ತಾ ದುಶ್ಶಾಸನನನ್ನೂ ಯುವರಾಜನನ್ನಾಗಿ ಮಾಡಿ ಸುಖದಿಂದ ರಾಜ್ಯಭಾರ ಮಾಡುತ್ತಿದ್ದನು. ಈ ಕಡೆ ಯುಧಿಷ್ಠಿರನು ಕಳುಹಿಸಿದ ಕಿರಾತದೂತನು ತಪಸ್ವಿ ವೇಷದಿಂದ ಹೋಗಿ ದುರ್ಯೋಧನನ ಸಮಾಚಾರವನ್ನೆಲ್ಲ ತಿಳಿದು ಬಂದು ಧರ್ಮರಾಯನಿಗೆ ವಿಜ್ಞಾಪಿಸಿದನು-೪೦. ಒಂದೇ ಮಾತು ಕಿವಿಗಿಂಪಾಗಿಯೂ ಶ್ರೇಯಸ್ಕರವಾಗಿಯೂ ಇರಲು ಸಾಧ್ಯವಿಲ್ಲ. ನಾನು ಕಂಡುದನ್ನು ವಿಜ್ಞಾಪಿಸುತ್ತೇನೆ. ಜೂಜಿನಲ್ಲಿ ಮೋಸದಿಂದ ಗೆದ್ದ ನಿನ್ನ ರಾಜ್ಯವು ಅಂಗಯ್ಯಲ್ಲಿರುವ ಹಾಗೆ ತನಗೆ ಆಜ್ಞಾಧಾರಕವಾಗಿರುವ ಹಾಗೆ ಮಾಡಿಕೊಳ್ಳುವ ದುರ್ಯೋಧನನ ಆ ಹೊಸರಾಜನೀತಿ ಬೃಹಸ್ಪತಿಯನ್ನೂ ಮೀರಿಸಿದೆ. ೪೧. ಮೊದಲು ನಿಷ್ಕರ್ಷೆಯಿಂದ ಒಪ್ಪಿದುದನ್ನು ಕೊಡದೆ ತಪ್ಪಿದವರಿಗೆ ಸೈನ್ಯವನ್ನಟ್ಟದೆ ಕೊಡು ಎಂದು ಸಾಮದಿಂದ ಹೇಳಿ ಕಳುಹಿಸುವನು. ರಾಜ್ಯಾಧಿಕಾರದಿಂದ ಕಳುಹಿಸಿದ ಇವನ ಆಜ್ಞಾಪತ್ರಕ್ಕೆ ರಾಜ್ಯದ ಎಲ್ಲೆಡೆಗಳಲ್ಲಿದ್ದ ಸಾಮಂತರಾಜರು ಕಳುಹಿಸಿದ ಕಳಿಂಗ ದೇಶದ ಉತ್ತಮವಾದ

ಕಂ॥ ಕುಸಿದಂ ರಿಪುವಿಜಯದೆ ನಿ
ದ್ರಿಸಿದಂ ಕಂಡೆಂದಿನಂದಮಂ ತಪ್ಪಿದನಾ ।
ಳ್ವೆಸಕಗಿಯೆ ನುಡಿದನೆಂಬೀ
ಪಿಸುಣನನಂ ಕೇಳ್ದೆನಿಲ್ಲ ಬೀಡಿನೊಳವನಾ ೪೨

ನೆಗಟ್ದರಿಗನ ಸಾಹಸಮೊ
ರ್ಮೆಗೊರ್ಮೆ ಕೆಲದವರ ಮಾತಿನೊಳ್ ತನ್ನ ಮನಂ ।
ಬುಗೆ ಮಂತ್ರಪದಕ್ಕುರಗಂ
ಸುಗಿವಂತೆವೊಲಗಿದು ಸುಗಿದು ತಲೆಗರೆದಿರ್ಪಂ ॥ ೪೩

ಅಱಿವಿಂತು ರಾಜಕಾರ್ಯದ
ತೆಱನೆನಗಱಿವಂತು ಮೊಗ್ಗೆ ದೇವರ ಮುಂದಾ ।
ನಱೆಯೆಂ ಪಿರಿದುಂ ಗಟಿಪಲ್
ಮಱಸೊಂದಿದನಲ್ಲನಹಿತನೆಚ್ಚತ್ತಿರ್ದಂ ॥ ೪೪

ವ॥ ಎಂದು ಬಿನ್ನಪಂಗೆಯ್ದು ಕಿರಾತದೂತಂ ಪೋಪುದುಮಾ ಮಾತೆಲ್ಲಮಂ ಕೇಳ್ದು ಯಜ್ಞಸೇನತನೂಜೆ ಯಮತನೂಜಂಗಿಂತೆಂದಳ್-

ಚಂ॥ ನುಡಿವೊಡೆ ರಾಜಕಾರ್ಯ ನಯಮೆತ್ತಬಲಾಜನದೊಂದು ಬುದ್ಧಿಯೆ
ತ್ತುಡುಪತಿವಂಶ ನೋಡುವೊಡಿದೊಂದಘಟಂ ಬಗೆವಾಗಳೆಂತು ಕೇಳ್।
ನುಡಿಯದೆ ಕೆಮ್ಮಗಿರ್ದೊಡಮಿರಲ್ಕಣಮಿಾಯದೆ ನಿಮ್ಮೊಳೆನ್ನುಮಂ
ನುಡಿಯಿಸಿದಪ್ಪುವಾ ಕುರುಕುಳರ್ಕಳ ಗೆಯ್ದಪರಾಧಕೋಟಿಗಳ್ ॥ ೪೫

ಆನೆಗಳ ಮದೋದಕದ ಧಾರಾಪ್ರವಾಹದಿಂದ ಉಂಟಾದ ಕೆಸರು ಆ ದುರ್ಯೋಧನ ರಾಜನ ಅರಮನೆಯ ಬಾಗಿಲುಗಳ ಸಮೀಪಪ್ರದೇಶದಲ್ಲಿ ಕಡಿಮೆಯೇ ಆಗಿಲ್ಲ. ೪೨. ಶತ್ರುವು ಆಡಿದ ಮಾತಿಗೆ ತಪ್ಪಿದ, ಗೆಲುವಿನಿಂದ ನಿದ್ರಿಸಿದುದನ್ನು ಕಂಡ, ಹಿಂದಿನಿಂದ ಇದ್ದ ರೀತಿಯನ್ನು ತಪ್ಪಿದ, ಸೇವೆಮಾಡುವ ವಿಷಯದಲ್ಲಿ ಕೆಟ್ಟಮಾತನಾಡಿದ ಎಂಬ ಈ ಚಾಡಿಮಾತುಗಳನ್ನೂ ಅವನ ಬೀಡಿನಲ್ಲಿ ಸ್ವಲ್ಪವೂ ಕೇಳಿಲ್ಲ. ೪೩. ಆದರೆ ಪ್ರಸಿದ್ಧನಾದ ಅರಿಕೇಸರಿಯ ಸಾಹಸವು ಒಂದೊಂದು ಸಲ ಪಕ್ಕದವರ ಮಾತಿನ ಮೂಲಕ ತನ್ನ ಮನಸ್ಸನ್ನು ಪ್ರವೇಶಿಸಲು ಮಂತ್ರಮುಗ್ಧವಾದ ಹಾವು ಹೆದರುವ ಹಾಗೆ ಹೆದರಿ ತಲೆಯನ್ನು ಬಗ್ಗಿಸಿಕೊಂಡಿರುತ್ತಾನೆ. ೪೪. ನನಗೆ ತಿಳಿದ ಸಮಾಚಾರವಿಷ್ಟು, ರಾಜಕಾರ್ಯದ ರೀತಿಯನ್ನು ತಿಳಿಯುವುದು ನನಗೆ ಸಾಧ್ಯವೇ? ಪ್ರಭುವಿನ ಮುಂದೆ ಹೆಚ್ಚಾಗಿ ಹರಟುವುದು ನನಗೆ ತಿಳಿಯದು; ಶತ್ರುವಾದ ದುರ್ಯೋಧನನು ಮೈಮರೆತಿಲ್ಲ; ಎಚ್ಚರದಿಂದಿದ್ದಾನೆ. ವ॥ ಎಂದು ಬಿನ್ನವಿಸಿ ಕಿರಾತದೂತನು ಹೋಗಲು ಆ ಮಾತೆಲ್ಲವನ್ನೂ ಕೇಳಿ ದ್ರೌಪದಿಯು ಧರ್ಮರಾಜನಿಗೆ ಹೀಗೆಂದಳು-೪೫. ಹೇಳುವುದಾದರೆ ರಾಜಕಾರ್ಯದ ರೀತಿಯೆಲ್ಲಿ ಸ್ತ್ರೀಜನರ ಬುದ್ಧಿಯೆಲ್ಲಿ? ಎಲೈ ಚಂದ್ರವಂಶನಾದ ಧರ್ಮರಾಜನೇ ವಿಚಾರಮಾಡುವುದಾದರೆ ಈಗ ನಡೆದಿರುವ ಇದು (ಈ ಕೌರವರ ದುಶ್ಚೇಷ್ಟೆ) ವಂಶಕ್ಕೆ ಹೊಂದಿಕೊಳ್ಳದಿರುವ ವಿಷಯ (ಅಸಂಗತವಾದುದು) ಕೇಳು ಯೋಚನೆಮಾಡಿ ಹೀಗೂ ಮಾತನಾಡದೆ

ಕಂ॥ ಆವಡವಿಗಳೊಳ್ ಪಣ್ಪಲ
ಮಾವಗಮೊಳವಲ್ಲಿಗಱಸಿ ಪರಿಪರಿದು ಕರಂ ।
ತಾವಡಿಗೊಳ್ವೀ ಭೀಮನ
ಬೇವಸಮಿದು ನಿನ್ನ ಮನಮನೊನಲಿಸಿತಿಲ್ಲಾ ॥ ೪೬

ಉ॥ ಪೋಗಿ ಸುಪರ್ವಪರ್ವತದ ಕಾಂಚನರೇಣುಗಳಂ ಪರಾಕ್ರಮೋ
ದ್ಯೋಗದಿನೆತ್ತಿ ತಂದು ನಿನಗಿತ್ತದಟಂ ಬಡಪಟ್ಟು ಬೆಟ್ಟದೊಳ್ ।
ಪೋಗಿ ತೊಟಲ್ದು ನಾರ್ಗಳನುಡಲ್ ತರುತಿರ್ದೆಲೆ ಮಾಡಲಾರ್ತನಿ
ಲ್ಲಾಗಳೆ ಕೋಪಮಂ ನಿನಗೆ ಸಂಚಿತಶೌರ್ಯಧನಂ ಧನಂಜಯಂ ॥ ೪೭

ಕಂ॥ ಕಾಯ ಕ್ಲೇಶದಿನಡವಿಯ
ಕಾಯಂ ಪಣ್ಣುಮನುದಿರ್ಪಿ ತಿಂದಗಲದೆ ನಿಂ ।
ದೀ ಯಮಳರಾವ ತೆಱದಿಂ
ನೋಯಿಸರಯ್ ನಿನ್ನ ನನ್ನಿಕಾಱನ ಮನಮಂ ॥ ೪೮

ಆ ದುಶ್ಶಾಸನನಿಂದೆನ
ಗಾದ ಪರಾಭವಮನೇನುಮಂ ಬಗೆಯದೊಡಿಂ ।
ತಾದರಮೆ ತೊವಲ್ನಾರುಮ
ನಾದರದೇಂ ನಿನ್ನ ಮನಕೆ ಚಿಂತೆಯುಮಿಲ್ಲಾ ॥ ೪೯

ಎಮ್ಮಯ್ವರ ಬೇವಸಮಂ
ನೀಂ ಮನದೊಳ್ ನೆನೆಯೆಯಪ್ಪೊಡಂ ನಿನ್ನಿರವಂ ।
ನೀಂ ಮರುಳೆ ಬಗೆಯದಂತುಂ
ಘುಮ್ಮೆಂಬಡವಿಯೊಳಡಂಗಿ ಚಿಂತಿಸುತಿರ್ಪಾ ॥ ೫೦

ಸುಮ್ಮನಿರಬೇಕೆಂದಿದ್ದರೂ ಇರುವುದಕ್ಕೆ ಅವಕಾಶಕೊಡದೆ ಆ ಕುರುಕುಲದವರು ಮಾಡಿದ ಅಪರಾಧದ ಸಮೂಹಗಳು ನಿಮ್ಮಲ್ಲಿ ನನ್ನನ್ನು ಮಾತನಾಡುವಂತೆ ಮಾಡುತ್ತಿವೆ. ೪೬. ಯಾವ ಕಾಡುಗಳಲ್ಲಿ ಹಣ್ಣುಹಂಪಲುಗಳು ಯಾವಾಗಲೂ ಇರುತ್ತವೆ, ಅಲ್ಲಿಗೆ ಅದನ್ನು ಹುಡುಕಿಕೊಂಡು ಓಡಿ ಅಲೆಯುತ್ತಿರುವ ಈ ಭೀಮನ ಶ್ರಮವು ನಿನ್ನ ಮನಸ್ಸನ್ನು ಕೆರಳಿಸಿಲ್ಲವೇ? ೪೭. ಮೇರುಪರ್ವತಕ್ಕೆ ಹೋಗಿ ಪೌರುಷಪ್ರದರ್ಶನದಿಂದ ಚಿನ್ನದ ಕಣಗಳನ್ನು ನಿನಗೆ ತಂದುಕೊಟ್ಟು ಕೃಶವಾಗಿ ಬೆಟ್ಟದಲ್ಲಿ ತೊಳಲಿ ಉಡುವುದಕ್ಕೆ ನಾರುಗಳನ್ನು ತರುತ್ತಿರುವ ಶೌರ್ಯವನ್ನೇ ಕೂಡಿಟ್ಟ ಧನವಾಗಿ ಉಳ್ಳ ಪರಾಕ್ರಮಶಾಲಿಯಾದ ಧನಂಜಯನೂ (ಅರ್ಜುನನೂ) ನಿನಗೆ ಕೋಪವನ್ನುಂಟು ಮಾಡಲು ಶಕ್ತನಾಗಲಿಲ್ಲವೆ? ೪೮. ಶರೀರದ ಆಯಾಸದಿಂದ ಕಾಡಿನ ಕಾಯನ್ನೂ ಹಣ್ಣನ್ನೂ ಉದುರಿಸಿ ತಿಂದು ನಿಮ್ಮನ್ನು ಅಗಲದೆ ನಿಂತ ಈ ಯಮಳರೂ ಸತ್ಯಸಂಧನಾದ ನಿನ್ನ ಮನಸ್ಸನ್ನು ನೋಯಿಸುವುದಿಲ್ಲವೇ? ೪೯. ಆ ದುಶ್ಶಾಸನನಿಂದ ನನಗುಂಟಾದ ಅವಮಾನವೇನನ್ನೂ ಎಣಿಸದಿರುವ ನಿನಗೆ ಈ ತೊಗಲುನಾರುಗಳು ಆದರಕ್ಕೆ ಪಾತ್ರವಾದುವೇ? ಈ ಅನಾಸಕ್ತಿಯೇತಕ್ಕೆ? ನಿನ್ನ ಮನಸ್ಸಿಗೆ ಚಿಂತೆಯೇ ಇಲ್ಲವೇ? ೫೦. ನಮ್ಮಯ್ದುಜನಗಳ ಕಷ್ಟವನ್ನೂ ನೀನು ಮನಸ್ಸಿನಲ್ಲಿ ನೆನೆಯದಿದ್ದರೂ

ಶಮಮನೆ ಕೆಯ್ಕೊಳ್ವೊಡೆ ಬಿ
ಲ್ಲುಮಂಬುಮಂ ಬಿಸುಟು ತಪಕೆ ನೀಂ ಬಗೆವೊಡೆ ವಿ ।
ಕ್ರಮಮಂ ಪಗೆಯಂ ಕಿಡಿಸುವ
ಶಮದಿಂ ಮುನಿಗಾಯ್ತು ಸಿದ್ಧಿ ಭೂಪತಿಗಾಯ್ತೆ ॥ ೫೧

ತಪ್ಪುಮನೆ ನುಡಿಯೆನೆಂಬುದಿ
ದೊಪ್ಪದು ನಿನಗಹಿತರೆಯ್ದೆ ತಪ್ಪಿರ್ದರವರ್ ।
ತಪ್ಪಿದ ಬಟಿಕ್ಕೆ ತಪ್ಪಿದ
ತಪ್ಪೇಂ ಗಳ ನನ್ನಿಗೊಪ್ಪಮಲ್ಲದ ತಪ್ಪೇ ॥ ೫೨

ವ॥ ಎಂದ ಪಾಂಚಾಳರಾಜತನೂಜೆಯ ಮಾತಿಂಗೆ ಬೆಂಬಲಂಬಾಯ್ತಂತೆ ಭೀಮಸೇನ ನಿಂತೆಂದಂ–

ಕಂ॥ ನುಡಿಯದೆ ಪೆಱತಂ ದ್ರೌಪದಿ
ನುಡಿದಳ್ ತಕ್ಕುದನೆ ಕೇಳಿಮಿಂ ಕೇಳದಿರಿಂ ।
ನುಡಿಯಲೆಡೆಯಿಲ್ಲ ನಿಮ್ಮಂ
ನುಡಿಯಿಸಿದಪುದೆನ್ನ ಮನದ ಮುನಿಸವನಿಪತೀ ॥ ೫೩

ನಾಲ್ಕುಂ ನೃಪವಿದ್ಯೆಯನಾ
ಡಲ್ ಕಲ್ತುಂ ನೆಱೆಯೆ ಕಲ್ತೆಯಿಲ್ಲಾಗದೆ ಸೋ ।
ಲಲ್ಕೆ ನೃಪ ದೊರೆಯೆ ನೆಲನಂ
ವಲ್ಕಲವಸನಕ್ಕೆ ಮೆಯ್ಯನಾಂಪುದು ಪೆಂಪೇ ॥ ೫೪

ಎಲೈ ಪುಚ್ಚೇ ನಿನ್ನ ಸ್ಥಿತಿಯನ್ನು ಯೋಚಿಸಿ ನೋಡು ಈ ಘುಮ್ಮೆನ್ನುವ ಕಾಡಿನಲ್ಲಿ ಅಡಗಿಕೊಂಡು ಚಿಂತಿಸುತ್ತಿರಬಹುದೇ? ೫೧. ನೀನು ಶಾಂತಿಗುಣವನ್ನೇ ಅಂಗೀಕರಿಸುವುದಾದರೆ ಬಿಲ್ಲನ್ನೂ ಬಾಣವನ್ನೂ ಬಿಸಾಡಿ ತಪಸ್ಸನ್ನೇ ಅಪೇಕ್ಷಿಸುವುದಾದರೆ ವಿಕ್ರಮವನ್ನೂ ದ್ವೇಷವನ್ನೂ ಹೋಗಲಾಡಿಸುವ ಶಾಂತಿಯಿಂದ ಋಷಿಗೆ ಸಿದ್ಧಿಯಾಗುತ್ತದೆಯೇ ವಿನಾ ರಾಜನಿಗೆ ಸಿದ್ಧಿಯಾಗುತ್ತದೆಯೇ (ಅಂದರೆ ಶಾಂತಿಯಿಂದ ಋಷಿಸಿದ್ಧಿಯಾಗುತ್ತದೆಯೇ ವಿನಾ ರಾಜಸಿದ್ಧಿಯಾಗುತ್ತದೆಯೇ?) ೫೨. ದೋಷವನ್ನೇ ಕುರಿತು ನಾನು ಮಾತನಾಡುವುದಿಲ್ಲವೆಂಬ ಮಾತು ಯೋಗ್ಯವಲ್ಲ; ಶತ್ರುಗಳಾದವರು ತಪ್ಪುಮಾಡಿದ್ದಾರೆ. ಅವರು ತಪ್ಪುಮಾಡಿದ ಬಳಿಕ ನೀನು ತಪ್ಪುಮಾಡಿದರೆ ಆ ತಪ್ಪು ನಿನ್ನ ಸತ್ಯಕ್ಕೆ ಒಪ್ಪದ ತಪ್ಪಾಗುತ್ತದೆಯೇ? ವ॥ ಎಂಬುದಾಗಿ ಹೇಳಿದ ದ್ರೌಪದಿಯ ಮಾತಿಗೆ ಬೆಂಬಲ ಬರುವ ಹಾಗೆ ಭೀಮಸೇನನು ಹೀಗೆಂದನು-೫೩. ದ್ರೌಪದಿಯು ಅನ್ಯಥಾ ನುಡಿಯದೆ ಯೋಗ್ಯವಾದುದನ್ನೇ ಹೇಳಿದಳು. ನೀವು ಕೇಳಿ, ಬಿಡಿ; ಇನ್ನು ಮಾತನಾಡುವುದಕ್ಕೆ ಅವಕಾಶವೇ ಅಲ್ಲ. ರಾಜನೇ, ನನ್ನ ಮನಸ್ಸಿನ ಕೋಪ ನನ್ನನ್ನೂ ಮಾತನಾಡುವ ಹಾಗೆ ಮಾಡುತ್ತದೆ. ೫೪. ರಾಜನಿಗೆ ಯೋಗ್ಯವಾದ ಸಾಮ, ದಾನ, ಭೇದ, ದಂಡಗಳೆಂಬ ನಾಲ್ಕುಪಾಯಗಳನ್ನೂ ತಿಳಿದಿದ್ದರೂ ನೀನು ಪೂರ್ಣವಾಗಿ ಕಲಿತವನಾಗಲಿಲ್ಲವಲ್ಲ; ಭೂಮಿಯನ್ನು ಸೋಲುವುದುಚಿತವೇ? ಶರೀರಕ್ಕೆ ನಾರುಮಡಿಯನ್ನು ಧರಿಸಿರುವುದು ಹಿರಿಮೆಯೇ? (ನಾರುಮಡಿಗೆ ಮೆಯ್ಯನ್ನೊಡ್ಡುವುದು

ಉ॥ ನನ್ನಿಗೆ ದಾಯಿಗಂಗೆಳೆಯನೊಪ್ಪಿಸಿದಂ ಗಡಿಮೆಂಬ ಮಾತುಗಳ್
ನಿನ್ನವು ಕೂರದರ್ ನೆಲನನೊಟ್ಟಜೆಯಿಂ ಕೊಳೆ ಕೊಟ್ಟು ಮುಟ್ಟುಗೆ ।
ಟ್ಟನ್ನುಮರಣ್ಯದೊಳ್ ನವೆದಪಂ ಯಮನಂದನನೆಂಬ ಬನ್ನಮುಂ
ಮುನ್ನಮೆ ಸೋಂಕ ಕಣ್ಮಲೆವ ಮಾತುಗಳೆಲ್ಲರ ಪೇಟ್ವ ಮಾತುಗಳ್ ॥ ೫೫

ಕಂ॥ ಪಲೆ ಸಂದಿರ್ಪತ್ತೊಂದುಂ
ತಲೆವರೆಗಂ ನಮಗೆ ಪರಿಭವಂ ಕೃಷ್ಣೆಯ ಮುಂ ।
ದಲೆಯಂ ಪಿಡಿದೆಟೆವಲ್ಲಿಯೆ
ತಲೆವಿಡಿದರ್ ನಮ್ಮ ಬೀರಮಂ ಕೌರವರುಂ ॥ ೫೬

ಚಂ॥ ಮಲೆ ಮಲೆದುರ್ಕಿ ಸೊರ್ಕಿ ಸಭೆಯೊಳ್ ಕುಲಪಾಂಸುಲನೀ ಶಿರೀಷ ಕೋ
ಮಲೆಯ ವಿಲೋಲ ನೀಲ ಕಬರೀಭರಮಂ ತೆಗೆವಾಗಳಲ್ಲಿ ಕೆ ।
ಯ್ಯಲೆ ಸವೆದಂತೆ ಪತ್ತಿ ಬೆರಲಚ್ಚುಗಳಚ್ಚೊಟೆದಂತೆ ಕೊಂಕುಗಳ್
ತಲೆ ನವಿರೊಂದಿ ಮೂದಲಿಸುವಂತೆವೊಲಿರ್ದುವು ನಮ್ಮ ವೀರಮಂ ॥೫೭

ಮ॥ ಅಸಿತೇಂದೀವರಲೋಲಲೋಚನೆಯನಂದಂತಾ ಸಭಾಮಧ್ಯದೊಳ್
ಪಸುವಂ ಮೋದುವವೋಲೆ ಮೋದೆಯುಮದಂ ಕಂಡಂತೆ ಪಲ್ಗರ್ಚಿ ಸೈ ।
ರಿಸಿದೆಂ ನಿನ್ನಯ ನನ್ನಿಗಿನ್ನೆವರಮಾ ದುಶ್ಶಾಸನೋರಸ್ಥಳೋ
ಷ್ಣಸೃತಾಸೃಗ್ಜಲಪಾನಮಂ ಬಯಸಿ ಬಾಯ್ ತೇರೈಸೆ ಸೈರ್ಪೆನೇ ॥ ೫೮

ವೈಭವವೇ) ೫೫. ಸತ್ಯಕ್ಕಾಗಿ ದಾಯಾದಿಗಳಿಗೆ ರಾಜ್ಯವನ್ನೂ ಒಪ್ಪಿಸಿದೆವು ಎಂಬುದು ನೀವು ಹೇಳುವ ಮಾತುಗಳು. ಹಿತವಲ್ಲದವರು ರಾಜ್ಯವನ್ನು ಪರಾಕ್ರಮದಿಂದ ಕಿತ್ತುಕೊಳ್ಳಲು ಸಾಧನಸಾಮಗ್ರಿಗಳನ್ನೆಲ್ಲ ನೀಗಿಕೊಂಡು (ನಿಸ್ಸಹಾಯಕನಾಗಿ) ಧರ್ಮರಾಯನು ಕಾಡಿನಲ್ಲಿ ನವೆಯುತ್ತಿದ್ದಾನೆ ಎಂಬ ಅವಮಾನಕರವಾದ ಎಲ್ಲರೂ ಹೇಳುವ ಮಾತುಗಳು ನಮ್ಮನ್ನು ಮೊದಲೇ ಸೋಂಕಿ ಕಣ್ಣನ್ನು ಕೆರಳಿಸುವಂತಹವು ಗಳಾಗಿವೆ. ೫೬. ಪ್ರಸಿದ್ಧವಾದ ನಮ್ಮ ಇಪ್ಪತ್ತೊಂದು ತಲೆಮಾರಿನವರೆಗೂ ನಮಗೆ ಅವಮಾನವಾದ ಹಾಗೆಯೇ ಆಯಿತು. ದ್ರೌಪದಿಯ ಮುಂದಲೆಯನ್ನು ಹಿಡಿದೆಳೆದಾಗಲೇ ಕೌರವರು ನಮ್ಮ ಪರಾಕ್ರಮವನ್ನೂ ಸೆರೆಹಿಡಿದರು. ೫೭. ಅಹಂಕಾರದಿಂದ ಮಲೆತು ಉಬ್ಬಿ ಸೊಕ್ಕಿ ಆ ಕುಲಕಳಂಕನಾದ ದುಶ್ಶಾಸನನು ಸಭೆಯಲ್ಲಿ ಬಾಗೆಯ ಹೂವಿನಂತೆ ಕೋಮಲವೂ ಮೃದುವೂ ಚಂಚಲವೂ ಕಪ್ಪಗೂ ಇರುವ ಕೇಶರಾಶಿಯನ್ನು ಎಳೆದಾಗ ಕಯ್ಯಲ್ಲಿಯೇ ಹೊಡೆದ ಹಾಗೆ ಬೆರಳಿನ ಗುರುತುಗಳು ಅಂಟಿಕೊಂಡು ಮುದ್ರಿಸುವ ಹಾಗೆ ಇರುವ ಕೊಂಕಾದ ಮುಂಗುರುಳು ತಲೆಯ ಕೂದಲುಗಳೊಡನೆ ಸೇರಿ ನಮ್ಮ ವೀರ್ಯವನ್ನು ಮೂದಲಿಸುವಂತಿವೆ. ೫೮. ಕನ್ನೈದಿಲೆಯಂತೆ ಚಂಚಲವಾದ ಕಣ್ಣುಳ್ಳ ದ್ರೌಪದಿಯನ್ನು ಆ ದಿನ ಆ ಸಭಾಮಧ್ಯದಲ್ಲಿ ಪಶುವನ್ನು ಹೊಡೆಯುವ ಹಾಗೆ ಹೊಡೆದುದನ್ನು ಕಂಡು ನಿನ್ನ ಸತ್ಯಕ್ಕಾಗಿ ಹಲ್ಲುಕಚ್ಚಿಕೊಂಡು ಇಲ್ಲಿಯವರೆಗೆ ಸಹಿಸಿದೆನು. ಆ ದುಶ್ಶಾಸನನ ಎದೆಯ ಬಿಸಿರಕ್ತವನ್ನು ಪಾನಮಾಡಲು ನನ್ನ ಬಾಯಿ ಬಯಸಿ ಆತುರ ಪಡುತ್ತಿರುವಾಗ ನಾನು ಇನ್ನು ಸುಮ್ಮನೆ ಇರುತ್ತೇನೆಯೇ?

ವ॥ ಎಂದು ಗದಾದಂಡಮಂ ಭುಜಾದಂಡದೊಳಳವಡಿಸಿಕೊಂಡು ಪಗೆವರಿರ್ದ ದೆಸೆಯಂ ನೋಡಿ ತಳರಲ್ ಬಗೆದ ಭೀಮಸೇನನಂ ಧರ್ಮಪುತ್ರಂ ಕೋಪತಾಪದಿಂ ಮಸಗಿದ ಮದಗಜಮನೆ ಮಾಣಿಸುವಂತೆಂತಾನುಂ ಮೃದುವಚನಂಗಳಿಂ ಮುಳಿಸನಾಱಿಸುತಿರ್ದನಿರ್ಪನ್ನೆಗಂ-

ಚಂ॥ ಕನಕ ಪಿಶಂಗ ತುಂಗ ಜಟಿಕಾವಳಯಂ ಕುಡುಮಿಂಚಿನೋಳಿಯಂ
ನೆನೆಯಿಸೆ ನೀಲ ನೀರದ ತನುಚ್ಛವಿ ಭಸ್ಮ ರಜೋವಿಲಿಪ್ತಮಂ ।
ಜನ ಗಿರಿಯಂ ಶರಜ್ಜಳಧರಂ ಕವಿದಂತಿರೆ ಚೆಲ್ವನಾಳ್ದು ಭೋಂ
ಕನೆ ನಭದಿಂದಮಂದಿಟಿದನಲ್ಲಿಗೆ ವೃದ್ಧ ಪರಾಶರಾತ್ಮಜಂ ॥ ೫೯

ವ॥ ಅಂತು ನಭೋವಿಭಾಗದಿಂ ಧರಾವಿಭಾಗಕ್ಕಿಟಿತಂದ ಕೃಷ್ಣದ್ವೈಪಾಯನನಂ ಕಂಡಜಾತಶತ್ರು ತನ್ನೇಱಿದ ಸ್ಫಟಿಕ ಶಿಳಾತಳದ ಪಟ್ಟಕದಿಂದಿಟಿದು ನಿಜಾನುಜಸಹಿತಮಿದಿರ್ವಂದು ಧರಾತಳನಿಪ್ಪ ಲಲಾಟಪಟ್ಟಂ ಸಾಷ್ಟಾಂಗವೆಱಗಿ ಪೊಡವಟ್ಟು ತದೀಯಾಶೀರ್ವಾದಮನಾಂತು ತಚ್ಛಿಳಾತಳದೊಳ್ ಕುಳ್ಳಿರಿಸಿ ವನಕುಸುಮಂಗಳಿಂದರ್ಘ್ಯಮೆತ್ತಿ ಸರೋವರಜಲಂಗಳಂ ಪದ್ಮಪತ್ರಪುಟಂಗಳಿಂ ತಂದು ಪದಪದ್ಮಂಗಳಂ ಕರ್ಚಿ ತತ್ಪಾದ ಪವಿತ್ರೋದಕಂಗಳನನಿಬರು ಮುತ್ತಮಾಂಗದೊಳ್ ತಳಿದುಕೊಂಡಿರ್ದಾಗಳ್ ಸತ್ಯವತೀನಂದನಂ ತನ್ನ ಮಕ್ಕಳ ಸಾಯಸಂಗಳ್ಗೆ ಮನ್ಮುಮಿಕ್ಕು ಕಣ್ಣಸೀರಂ ನೆಗಪೆ ಮಹಾಪ್ರಸಾದಮೆಂದು ಧರ್ಮನಂದನನಿಂತೆಂದಂ-

ವ॥ ಎಂದು ತನ್ನ ಗದಾದಂಡವನ್ನು ಭುಜಾದಂಡದಲ್ಲಿ ಅಳವಡಿಸಿಕೊಂಡು ಶತ್ರುಗಳಿದ್ದ ಕಡೆಯನ್ನು ನೋಡಿ ಹೊರಡಲು ಯೋಚಿಸಿದ ಭೀಮಸೇನನನ್ನು ಧರ್ಮರಾಜನು ಕೋಪಾಗ್ನಿಯಿಂದ ಕೆರಳಿದ ಮದಗಜವನ್ನು ಸಂತೈಸುವಂತೆ ಹೇಗೋ ಮೃದುವಾದ ಮಾತುಗಳಿಂದ ಸಮಾಧಾನಮಾಡಿದನು. ಅಷ್ಟರಲ್ಲಿ-೫೯. ಹೊಂಬಣ್ಣದ ಎತ್ತರವಾದ ಜಟೆಯ ಸಮೂಹವು ಕುಡಿಮಿಂಚಿನ ಸಮೂಹವನ್ನು ಜ್ಞಾಪಿಸುತ್ತಿರಲು ವಿಭೂತಿಯಿಂದ ಲೇಪಿಸಿದ ಕೃಷ್ಣಮೇಘದಂತಿದ್ದ ಶರೀರಕಾಂತಿಯು ಅಂಜನಾದ್ರಿಯನ್ನು ಶರತ್ಕಾಲದ ಮೋಡಗಳು ಕವಿದಂತಿರಲು ಸೌಂದರ್ಯದಿಂದ ಕೂಡಿ ವೃದ್ಧನಾದ ವ್ಯಾಸಮಹರ್ಷಿಯು ಇದ್ದಕ್ಕಿದ್ದ ಹಾಗೆ ಆ ದಿನ ಆಕಾಶದಿಂದ ಅಲ್ಲಿಗೆ ಇಳಿದು ಬಂದನು. ವ॥ ಹಾಗೆ ಆಕಾಶಭಾಗದಿಂದ ಭೂಭಾಗಕ್ಕೆ ಇಳಿದು ಬಂದ ವ್ಯಾಸಮಹರ್ಷಿಯನ್ನು ನೋಡಿ ಧರ್ಮರಾಯನು ತಾನು ಏರಿದ್ದ ಸ್ಫಟಿಕಶಿಲಾತಳಪೀಠದಿಂದ ಕೆಳಗಿಳಿದು ತನ್ನ ತಮ್ಮಂದಿರೊಡನೆ ಇದಿರಾಗಿ ಬಂದು ಭೂಮಿಯಲ್ಲಿಟ್ಟ ಮುಖಮಂಡಲವುಳ್ಳವನಾಗಿ ಸಾಷ್ಟಾಂಗ ನಮಸ್ಕಾರಮಾಡಿ ಅವನ ಹರಕೆಗಳನ್ನು ಪಡೆದು ಆ ಶಿಲಾಪಟ್ಟದಲ್ಲಿಯೇ ಅವನನ್ನು ಕುಳ್ಳಿರಿಸಿ ಕಾಡುಹೂವುಗಳಿಂದ ಅರ್ಘ್ಯವನ್ನು ಕೊಟ್ಟು ಕಮಲದೆಲೆಗಳಲ್ಲಿ ಸರೋವರದ ನೀರನ್ನು ತಂದು ಪಾದಕಮಲಗಳನ್ನು ತೊಳೆದು ಆ ಪವಿತ್ರವಾದ ಪಾದೋದಕವನ್ನು ಎಲ್ಲರೂ ತಲೆಯಲ್ಲಿ ಧರಿಸಿಕೊಂಡರು. ವ್ಯಾಸಮಹರ್ಷಿಯು ತನ್ನ ಮೊಮ್ಮಕ್ಕಳ ವಿಶೇಷವಾದ ಆಯಾಸ(ಶ್ರಮ)ಕ್ಕಾಗಿ ದುಃಖಮೀರಿ ಕಣ್ಣ ನೀರನ್ನು ತುಂಬಿಕೊಂಡರು. ಅವರು ಬಂದುದು ಪರಮಾನುಗ್ರಹವೆಂದು ಧರ್ಮರಾಜನು ಅವರನ್ನು ಕುರಿತು ಹೀಗೆಂದನು-

ಉ॥ ನೀಗಿದುದೀಗಳೆಮ್ಮ ವನವಾಸಪರಿಶ್ರಮಮಿಾಗಳಾಳ್ದೆವಾ
ಸಾಗರ ಮೇಖಳಾವೃತ ಧರಿತ್ರಿಯನೀಗಳಡಂಗಿತೆಮ್ಮ ಹೃ
ದ್ರೋಗಮನೇಕ ಮಂಗಳಪರಂಪರೆಗಳ್ ದೊರೆಕೊಂಡುವೀಗಳೇ
ನಾಗದೊ ಪೇಬ್ ಭವಚ್ಚರಣಪದ್ಮನಿರೀಕ್ಷಣದಿಂ ಮುನೀಶ್ವರಾ ॥ ೬೦

ಕಂ॥ ಆಪತ್ಪಯೋಧಿಯೊಳಗ
ತ್ಯಾಪತ್ತಿಂದುಳ್ಕಿಮುಟ್ಕೆ ನಮೆವೆಮಗೆ ಶರಣ್ ।
ಪಾಪಹರ ನೀಮೆ ಬಗೆದೆಮ
ಗಾಪತ್ಪ್ರತಿಕಾರಮಾವುದೀಗಳೆ ಬೆಸಸಿಂ ॥ ೬೧

ವ॥ ಎಂಬುದುಮಾ ಮುನೀಂದ್ರನಾಮುಮಂತೆಂದೆ ಬಂದೆವೆಂದು-

ಕಂ॥ ಸುರರ್ಗಮೃತಮನುಂತೆ ಕಳಾ
ತರದಿಂದಿತ್ತಸಿಯನಾದ ಚಂದ್ರನವೋಲ್ ಭೂ ।
ಭರಮಂ ನನ್ನಿಗೆ ದಾಯಿಗ
ರ್ಗಿರದಿತ್ತೆಡರೊತ್ತೆ ನೀನೆ ಧನ್ಯನೆಯಲ್ತೇ ॥ ೬೨

ನೀಂ ಬೇಱಿಮಗೆ ಸುಯೋಧನ
ನೇಂ ಬೇಱಿಯೆ ಕೂಸುತನದೊಳಾದೊಡಮಿನ್ನೇ ।
ನೆಂಬುದೊ ಪಿರಿದೈವರೊಳಂ
ಪಂಬಲ್ ಗುಣಪಕ್ಷಪಾತಮಪ್ಪುದು ನಿಮ್ಮೊಳ್ ॥ ೬೩

ವ॥ ಎಂದು ತನ್ನ ವರ್ತನಮುಂ ಮೋಹಮನುಂಟುಮಾಡೆ ಮತ್ತಮಿಂತೆಂದಂ-

೬೦. ಎಲೈ ಮುನೀಶ್ವರನೇ ನಿಮ್ಮ ಪಾದಕಮಲದ ದರ್ಶನದಿಂದ ನಮ್ಮ ವನವಾಸದ ಆಯಾಸಗಳೆಲ್ಲವೂ ಮಾಯವಾದುವು. ಸಾಗರವೆಂಬ ಒಡ್ಯಾಣದಿಂದ ಸುತ್ತುವರಿಯಲ್ಪಟ್ಟ ಭೂಮಂಡಲವನ್ನು ನಾವು ಈಗ ಆಳಿದವರಾದೆವು. ನಮ್ಮ ಹೃದಯಬೇನೆಗಳು ಅಡಗಿದುವು. ನಮಗೆ ಅನೇಕ ಶುಭಪರಂಪರೆಗಳುಂಟಾದುವು. ಇನ್ನೇನುತಾನೆ ಆಗವು? ೬೧. ಆಪತ್ತುಗಳೆಂಬ ಸಮುದ್ರದಲ್ಲಿ ಅತಿಯಾದ ಅಪಾಯಗಳಿಂದ ಹೆದರಿ ಮುಳುಗಿ ಕೃಶವಾಗುತ್ತಿರುವ ನಮಗೆ ಪಾಪ ಹೋಗಲಾಡಿಸುವ ನೀವೇ ಶರಣು(ಆಶ್ರಯ). ನೀವು ಯೋಚಿಸಿ ಈ ಆಪತ್ತಿಗೆ ಪರಿಹಾರವಾವುದೆಂಬುದನ್ನು ಈಗಲೆ ತಿಳಿಸಿ. ವ॥ ಎನ್ನಲು ಆ ಋಷಿಶ್ರೇಷ್ಠನು ನಾವೂ ಅದಕ್ಕಾಗಿಯೇ ಬಂದಿದ್ದೇವೆ ಎಂದನು. ೬೨. (ಯಾವ ಪ್ರತಿಫಲವೂ ಇಲ್ಲದೆ) ಸುಮ್ಮನೆ ದೇವತೆಗಳಿಗೆ ತನ್ನ ಕಲಾಸಮೂಹಗಳಿಂದ ಅಮೃತವನ್ನು ಕೊಟ್ಟು ಕೃಶವಾದ ಚಂದ್ರನ ಹಾಗೆ ಸತ್ಯಕ್ಕಾಗಿ ದಾಯಾದ್ಯರಿಗೆ ಭೂಭಾರವನ್ನು ಕೊಟ್ಟು ಅಪಾಯಕ್ಕೊಳಗಾದ ನೀನೇ ಧನ್ಯನಲ್ಲವೇ? ೬೩. ಬಾಲ್ಯದಿಂದ ನಮಗೆ ನೀವು ಬೇರೆಯಲ್ಲ ಸುಯೋಧನನು ಬೇರೆಯಲ್ಲ ಈಗ ಹೇಳುವುದು ತಾನೆ ಏನಿದೆ. ನಿಮ್ಮ ಅಯ್ದು ಜನರಲ್ಲಿ ಗುಣಪಕ್ಷಪಾತದಿಂದ ನನ್ನ ಮೆಚ್ಚಿಗೆ (ನಿಮ್ಮಲ್ಲಿ) ಹೆಚ್ಚಾಗಿದೆ ವ॥ ಎಂದು ಹೇಳಿ ತನ್ನ ನಡತೆಯನ್ನೂ ಮೋಹವನ್ನೂ

ಕಂ॥ ಪನ್ನೆರಡು ವರುಷದವಧಿಯು
ಮಿನ್ನೆಱೆಯಲ್ ಬಂದುದಹಿತನಿಳೆಯಂ ಕುಡನಾ ।
ಸನ್ನಂ ಕಾಳೆಗಮಱೆಯಿರೆ
ಪನ್ನಗಕೇತನನ ಚಲದ ಕಲಿತನದಳವಂ ॥ ೬೪

ಅನವದ್ಯಂ ॥ ಪರಶುರಾಮನನಂಜಿಸಿ ಬೀರಕ್ಕಾಗರಮಾದ ನದೀಜನೇ
ದೊರೆಯನೇದೊರೆಯುಂ ಗಳ ಕುಂಭಪ್ರೋದ್ಭವನಾತನ ಪುತ್ರನೇ ।
ದೊರೆಯನೇದೊರೆಯುಂ ಕೃಪನಂತಾ ಪಾಟಿಯೊಳೇಕದ ಕರ್ಣನೇ
ದೊರೆಯನಿಂತಿವರೊರ್ಬರಿನೊರ್ಬರ್ ಗರ್ವಿತರಗ್ಗಳಮಲ್ಲರೇ ॥ ೬೫

ಕಂ॥ ಪ್ರಳಯದುರಿ ಕಾಳಕೂಟದ
ಗುಳಿಗೆ ಪುರಾಂತಕ ಲಲಾಟನೇತ್ರಾನಳನೊಂ ।
ದಳವಿಗಮಗ್ಗಳಮವರ್ಗಳ
ಮುಳಿಸುಗಳುಂ ಮುಳಿದು ತುಡುವ ದಿವ್ಯೇಷುಗಳುಂ ॥ ೬೬

ವ॥ ಅದು ಕಾರಣದಿಂದವರಂ ಗೆಲ್ವಾಗಳ್ ವಿಕ್ರಮಾರ್ಜುನನಲ್ಲದೆ ಗೆಲ್ಲನವಱಿಂದಾತಂಗೆ ದಿವ್ಯಾಸ್ತ್ರಂಗಳಂ ಪಡೆಯಲ್ವೇಟ್ಟುದದಂ ಪಡೆವುಪಾಯುಮುಮಂ ಮಂತ್ರಮುಮನುಪದೇಶಂಗೆಯ್ಯಲ್ ಬಂದೆವೆಂದು ಯುಧಿಷ್ಠಿರಂಗೆ ವೇೞ್ದು ವಿಕ್ರಮಾರ್ಜುನಂಗೆ ಮಂತ್ರಾಕ್ಷರಂಗಳನುಪದೇಶಂಗೆಯ್ದು ಗುಹ್ಯಕನೆಂಬನಂ ಸ್ಮರಣಮಾತ್ರದೊಳ್ ಬರಿಸಿ ಸಾಹಸಾಭರಣನನಿಂದ್ರಕೀಲನಗೇಂದ್ರಮನೆಯ್ದಿಸಿ ಬರ್ಪುದೆಂದು ಪೇೞ್ವುದುಂ ಧರ್ಮಪುತ್ರನಾ ಮುನೀಂದ್ರಂಗೆ ಸಾಷ್ಟಾಂಗವೆಱಗಿ ಪೊಡವಡೆ

ಸ್ಪಷ್ಟಪಡಿಸುವ ಹಾಗೆ ಪುನಃ ಹೀಗೆಂದನು -೬೪. ಇನ್ನೇನು ಹನ್ನೆರಡು ವರ್ಷದ ಗಡುವು ಮುಗಿಯುತ್ತ ಬಂದಿದೆ. ಶತ್ರುವಾದ ಕೌರವನು ರಾಜ್ಯವನ್ನು ತಾನಾಗಿ ಕೊಡುವುದಿಲ್ಲ. ದುರ್ಯೋಧನನ ಹಟದ ಮತ್ತು ಪರಾಕ್ರಮದ ಪ್ರಮಾಣವು ನಿಮಗೆ ತಿಳಿಯದೇ? ೬೫. ಪರಶುರಾಮನನ್ನು ಹೆದರಿಸಿ ಪರಾಕ್ರಮಕ್ಕೆ ಆವಾಸಸ್ಥಾನವಾದ ಭೀಷ್ಮನು ಸಾಮಾನ್ಯನೇ? ಕುಂಭಸಂಭವನಾದ ದ್ರೋಣನು ಸಾಮಾನ್ಯನೇ? ಅವನ ಮಗನಾದ ಅಶ್ವತ್ಥಾಮನೇನು ಸಾಮಾನ್ಯನೇ, ಕೃಪನೇನು ಸಾಮಾನ್ಯನೇ? ಅದೇ ಕ್ರಮದಲ್ಲಿ ಶೂರನಾದ ಕರ್ಣನು ಯಾರಿಗೆ ಸಮಾನನು? ಈ ಗರ್ವಿಷ್ಠರಾದ ಇವರಲ್ಲಿ ಒಬ್ಬರಿಗಿಂತೊಬ್ಬರು ಮತ್ತೂ ಶ್ರೇಷ್ಠರು. ೬೬. ಅವರ ಕೋಪಗಳೂ ಕೋಪಿಸಿಕೊಂಡು ಪ್ರಯೋಗಿಸುವ ದಿವ್ಯಾಸ್ತ್ರಗಳೂ ಪ್ರಳಯಕಾಲದ ಬೆಂಕಿ ಕಾಳಕೂಟವೆಂಬ ವಿಷದ ಗುಳಿಗೆ ಈಶ್ವರನ ಹಣೆಗಣ್ಣಿನ ಅಗ್ನಿ ಇವುಗಳ ಪ್ರಮಾಣಕ್ಕಿಂತ ಅತಿಶಯವಾದುವು. ವ॥ ಆದ ಕಾರಣದಿಂದ ಅವರನ್ನು ಗೆಲ್ಲಬೇಕಾದರೆ ವಿಕ್ರಮಾರ್ಜುನನಲ್ಲ ದವನು ಗೆಲ್ಲಲಾರ. ಆದುದರಿಂದ ಅವನನ್ನು ದಿವ್ಯಾಸ್ತ್ರಗಳನ್ನು ಗೆಲ್ಲುವಂತೆ ಹೇಳಬೇಕು. ಅದನ್ನು ಪಡೆಯುವ ಉಪಾಯವನ್ನೂ ಮಂತ್ರವನ್ನೂ ಉಪದೇಶಮಾಡು ವುದಕ್ಕಾಗಿಯೇ ಬಂದಿದ್ದೇವೆ ಎಂಬುದಾಗಿ ಧರ್ಮರಾಜನಿಗೆ ಹೇಳಿ ವಿಕ್ರಮಾರ್ಜುನನಿಗೆ ಮಂತ್ರಾಕ್ಷರಗಳನ್ನು ಉಪದೇಶಮಾಡಿದನು. ಗುಹ್ಯಕನೆಂಬುವನನ್ನು ಸ್ಮರಿಸಿಕೊಳ್ಳುವುದರಿಂದಲೇ ಬರಮಾಡಿ ಸಾಹಸಾಭರಣನಾದ ಅರ್ಜುನನನ್ನು ಇಂದ್ರಕೀಲಪರ್ವತವನ್ನು ಸೇರಿಸಿ ಬರುವುದು ಎಂದು ಹೇಳಿದನು. ಧರ್ಮರಾಜನು

ಪಗಸಿ ಪಯೋಧರಪಥಕ್ಕೊಗೆದಸಿತ್ತ ವಿಕ್ರಾಂತತುಂಗನುಂ ಧರ್ಮಪುತ್ರಂಗಂ ವಾಯುಸುತಂಗಂ ಪೊಡವಟ್ಟು ಬೆಸಕೇಳ್ವೆನೆಂದಾಗಳ್ ಪಾಂಚಾಳರಾಜತನೂಜೆಯಿಂತೆಂದಳ್-

ಕಂ॥ ಬಗೆಯದೆ ಮೆಯ್ಸೊಕಮಂ ಬಗೆ
ಪಗೆವರ ಕಡುವೆರ್ಚನೆನ್ನ ಪೂಣ್ಕೆಯನೆರ್ದೆಯೊಳ್ ।
ಬಗೆ ಮುನಿಯ ಮಂತ್ರಪದಮಂ
ಬಗೆ ಕೂಡುಗೆ ನಿನ್ನ ಬಗೆದ ಬಗೆಯೊಳ್ ಪಾರ್ಥಾ ॥ ೬೭

ವ॥ ಎಂದು ಬುದ್ಧಿವೇಳ್ದು ಮನದೆಱಕಂ ಮನೋವೇಗದಿಂ ಪರಿಯೆ ಸೈರಿಸಲಾಱದೆ-

ಉ॥ ಬಳ್ಳಳ ನೀಳ್ದ ಕಣ್ಮಲರ ತಳ್ತೆಮೆಯಿಂ ಕರೆಗಣ್ಮೆ ಬೆಳ್ಗಡ
ಲ್ಗಳ್ವರಿಯಲ್ಕಮಾಟಸಿದೊಡೊಯ್ಯನೆ ಮಂಗಳ ಭಂಗ ಭೀತಿಯಂ ।
ತಳ್ವದೆ ಮಾಡೆ ಬಾಷ್ಪಜಳಮಂ ಕಳೆದಲ್ಕಱನೀಯೆ ಸಂಬಳಂ
ಗೊಳ್ವವೊಲಾ ತಳೋದರಿಯ ಚಿತ್ತಮನಿಬ್ಬುಟಿಗೊಂಡನರ್ಜುನಂ ॥ ೬೮

ವ॥ ಅಂತು ಯಾತ್ರೋದ್ಯುಕ್ತನಾಗಿ ಗುಹ್ಯಕನ ಪೆಗಲನೇಱೆ ಗಂಧೇಭ ವಿದ್ಯಾಧರಂ ವಿದ್ಯಾಧರನಂತೆ ಗಗನತಳಕ್ಕೊಗೆದು ಮಹೇಂದ್ರಕೀಲಾಭಿಮುಖನಾದಾಗಳ್-

ಚಂ॥ ಕಡವಿನ ಕಂಪಡಂಗಿದುದು ಜಾದಿಯ ಕಂಪೊದವಿತ್ತು ಸೋಗೆಯು
ರ್ಕುಡುಗಿದುದಂಚೆಯುರ್ಕು ಪೊಸತಾಯ್ತು ಮುಗಿಲ್ಗಳ ಕರ್ಪುಪೋ ನಮೋ ।
ಗಡಿಸಿದುದಿಂದುಮಂಡಳದ ಕರ್ಪೆಸೆದತ್ತು ಘನಾಗಮಂ ಪೊದ
ಲ್ಗಿಡೆ ಶರದಾಗಮಂ ನೆಱೆಯೆ ಪರ್ಬೆ ಸಮಸ್ತ ಮಹೀವಿಭಾಗಮಂ ॥ ೬೯

ಋಷಿಶ್ರೇಷ್ಠನಿಗೆ ಸಾಷ್ಟಾಂಗಪ್ರಣಾಮ ಮಾಡಿ ನಮಸ್ಕರಿಸಲು ವ್ಯಾಸನು ಆಶೀರ್ವದಿಸಿ ಆಕಾಶಪ್ರದೇಶಕ್ಕೆ ತೆರಳಿದನು. ಈಕಡೆ ಪರಾಕ್ರಮದಲ್ಲಿ ಶ್ರೇಷ್ಠನಾದ ಅರ್ಜುನನು ಧರ್ಮರಾಜನಿಗೂ ಭೀಮಸೇನನಿಗೂ ನಮಸ್ಕಾರಮಾಡಿ ಅಪ್ಪಣೆಯನ್ನು ಕೇಳುತ್ತಿದ್ದೇನೆ ಎಂದು ಹೇಳಿದಾಗ ದ್ರೌಪದಿಯು ಹೀಗೆಂದಳು-೬೭. ನಿನ್ನ ಶರೀರಸೌಖ್ಯವನ್ನು ಚಿಂತಿಸದೆ ಶತ್ರುಗಳ ಹೆಚ್ಚಿನ ಅಭಿವೃದ್ಧಿಯನ್ನೂ ನನ್ನ ಪ್ರತಿಜ್ಞೆಯನ್ನೂ ಋಷಿಯ ಮಂತ್ರೋಪದೇಶವನ್ನೂ ಹೃದಯದಲ್ಲಿ ಚಿಂತಿಸು, ಅರ್ಜುನ ನಿನ್ನ ಇಷ್ಟಾರ್ಥಸಿದ್ಧಿಯಾಗಲಿ ವ॥ ಎಂದು ಬುದ್ಧಿಹೇಳಿ ಮನಸ್ಸಿನ ಪ್ರೀತಿಯು ಮನೋವೇಗದಿಂದ ಹರಿಯುತ್ತಿರಲು ಸಹಿಸಲಾರದೆ ೬೮. ಅತ್ಯಂತ ದೀರ್ಘವಾಗಿ ಬೆಳೆದಿರುವ ಹೂವಿನಂತಿರುವ ಕಣ್ಣುಗಳ ಮುಚ್ಚಿದ ರೆಪ್ಪೆಯಿಂದ ಎಲ್ಲೆ ಮೀರಿ ಬಿಳಿಯ ಕಾಂತಿ ಸಮುದ್ರವು ಹರಿಯುವುದಕ್ಕೆ ಬಯಸಲು ಅಮಂಗಳವಾಗುತ್ತದೆಯೆಂಬ ಭಯದಿಂದ ಕಣ್ಣೀರನ್ನು ಒರಸಿ ದ್ರೌಪದಿಯು ಒಂದು ಮುತ್ತನ್ನು ಕೊಡಲು (ಚುಂಬಿಸಲು) ಅವಳಿಂದ ದಾರಿಯ ಬುತ್ತಿಯನ್ನು ಪಡೆಯುವ ಹಾಗೆ ಆ ಕೃಶಾಂಗಿಯಾದ ದ್ರೌಪದಿಯ ಮನಸ್ಸನ್ನು ಅರ್ಜುನನು ಸೆಳೆದುಕೊಂಡನು. ವ॥ ಹಾಗೆ ಪ್ರಯಾಣದಲ್ಲಿ ಯಕ್ಷನ ಹೆಗಲನ್ನೇರಿ ಗಂಧೇಭವಿದ್ಯಾಧರನಾದ ಅರ್ಜುನನು ವಿದ್ಯಾಧರನಂತೆ ಆಕಾಶಕ್ಕೆ ತೆರಳಿ ಮಹೇಂದ್ರಕೀಲದ ಕಡೆಗೆ ನಡೆದನು. ೬೯. ವರ್ಷಾಕಾಲವು ಕಳೆದು ಶರತ್ಕಾಲವು ಪ್ರಾಪ್ತವಾಗಲು ಕದಂಬಪುಷ್ಪಗಳ ವಾಸನೆಯು ಅಡಗಿಹೋಯಿತು. ಜಾಜಿಯ

ಅಳಿ ಬರಿದಿರ್ದ ಜಾದಿಯೊಳೆ ಪಲ್ಮೊರೆಯುತ್ತಿರೆ ಹಂಸೆ ಪೂತ ಪೂ
ಗೊಳದೊಳೆ ರಾಗಿಸುತ್ತಿರೆ ಶುಕಾವಳಿ ಬಂಧುರ ಗಂಧಶಾಳಿ ಸಂ ।
ಕುಳದೊಳೆ ಪಾಯ್ದು ಪಾಯ್ದು ನಲಿಯುತ್ತಿರೆ ಸಾರೆ ಚಕೋರಮಿಂದುಮಂ
ಡಳ ಗಳಿತಾಮೃತಾಸವಮನುಂಡುಸಿರುತ್ತಿರೆ ಚೆಲ್ವು ಶಾರದಂ ॥ ೭೦

ಮ॥ ಪುಳಿಯೊಳ್ ಕರ್ಚಿದ ಬಾಳ ಬಣ್ಣಮನೆ ಪೋಲ್ವಾಕಾಶಮಾಕಾಶಮಂ
ಡಳಮಂ ಪರ್ವಿದ ಬೆಳ್ಮುಗಿಲ್ ಮುಗಿಲ ಬೆಳ್ಪೊಳ್ಪೊಕ್ಕು ತಳ್ಪೊಯ್ಯೆ ಬ ।
ಳ್ವಳ ನೀಳ್ದಿರ್ದ ದಿಶಾಳಿಶಾಳಿವನ ಗಂಧಾಂಧ ದ್ವಿರೇಫಾಳಿ ಕ
ಗ್ಗೊಳಿಸಿತ್ತೊರ್ಮೆಯೆ ಬಂದುದಂದು ಶರದಂ ಲೋಕಕ್ಕೆ ಕಣ್ ಬರ್ಪಿನಂ ॥೭೧

ವ॥ ಆಗಳ್ ವಿಜಯಂ ತನ್ನ ವಿಜಯಶ್ರೀಯ ಬರವಿಂಗಿದಿರ್ವಂದಂತೆ ಬಂದ ಶರತ್ಕಾಲಶ್ರೀಯನುತ್ಕಂಠಿತಹೃದಯನಾಗಿ ಮೆಚ್ಚಿ ನೋಡುತ್ತುಂ ಬರ್ಪನ್ನೆಗಂ ಮುಂದೆ ಶಾರದ ನೀರದಂಗಳೆಲ್ಲಮೊಂದೆಡೆಗೆ ತೆರಳ್ದೊಟ್ಟಿ ಬೆಟ್ಟಾದಂತಿರ್ದ ನೀಹಾರಗಿರಿಯಂ ಕಂಡಿದಾವುದೆಂದು ಬೆಸಗೊಳೆ ಗುಹ್ಯಕನಿಂತೆಂದಂ-

ಮ॥ ವಿದಳತ್ಕುಂದ ಶಶಾಂಕ ಶಂಖಧವಳಂ ಗಂಧೇಭ ದಾನಾಂಬು ಪೂ
ರ್ಣ ದರೀ ಸುಂದರ ಕಂದರಂ ಮೃಗಪತಿ ಪ್ರಧ್ವಾನ ಗರ್ಜದ್ಗುಹಂ ।
ಮುದಿರೋನ್ಮತ್ತ ನಿಳಿಂಪ ಕಿಂಪುರುಷ ಕಾಂತಾರಬ್ಧ ಸಂಗೀತಮೊ
ಪ್ಪಿದುದಲ್ತೇ ಸುರ ಸಿದ್ಧ ದಂಪತಿ ರತಿ ಶ್ರೀ ರಮ್ಯ ಹೈಮಾಚಳಂ ॥ ೭೨

ವಾಸನೆಯು ಹೆಚ್ಚಿತು. ನವಿಲಿನ ವೈಭವವು ನಿಂತಿತು. ಹಂಸದ ವೈಭವವು ಹೊಸದಾಗಿ ಬಂದಿತು. ಮೋಡಗಳ ಕಪ್ಪು ಸಂಪೂರ್ಣವಾಗಿ ಹಿಂಜರಿಯಿತು. ಚಂದ್ರಮಂಡಲದ ಕಪ್ಪುಮಚ್ಚೆಯು ಪ್ರಕಾಶಮಾನವಾಯಿತು. ೭೦. ದುಂಬಿಗಳು ಅರಳಿದ ಜಾಜಿಯಲ್ಲಿ ಝೇಂಕರಿಸಿದುವು. ಹಂಸಪಕ್ಷಿಯು ಸುಮಭರಿತವಾದ ಪುಷ್ಪಸರೋವರದಲ್ಲಿ ಸಂತೋಷಪಡುತ್ತಿತ್ತು. ಗಿಳಿಗಳ ಸಮೂಹವು ಮನೋಹರವಾದ ಸುಗಂಧದಿಂದ ಕೂಡಿದ ಬತ್ತದ ಸಮೂಹದಲ್ಲಿ ನುಗ್ಗಿ ನುಗ್ಗಿ ನಲಿದುವು. ಪಕ್ಕದಲ್ಲಿಯೇ ಚಕೋರ ಪಕ್ಷಿಯು ಚಂದ್ರಬಿಂಬದಿಂದ ಸ್ರವಿಸುತ್ತಿರುವ ಅಮೃತವೆಂಬ ಮಕರಂದವನ್ನುಂಡು ಶಬ್ದಮಾಡಿತು. ಇವುಗಳಿಂದ ಶರತ್ಕಾಲವು ಸುಂದರವಾಯಿತು. ೭೧. ಹುಳಿನೀರಿನಲ್ಲಿ ತೊಳೆದ ಕತ್ತಿಯ ನೀಲಿಯ ಬಣ್ಣವನ್ನೇ ಹೋಲುವ ಆಕಾಶ, ಆಕಾಶಪ್ರದೇಶವನ್ನು ಹಬ್ಬಿರುವ ಬಿಳಿಯ ಮೋಡ, ಮೋಡಗಳ ಬಿಳುಪು ಒಳಗೆಲ್ಲಾ ವ್ಯಾಪಿಸಿರಲು ವಿಸ್ತಾರವಾಗಿ ಹರಡಿದ್ದ ದಿಕ್ಕುಗಳ ಸಮೂಹ, ಶಾಳಿವನದ (ಬತ್ತದ ಗದ್ದೆಯ) ಸುವಾಸನೆಯಿಂದ ಸೊಕ್ಕಿರುವ ದುಂಬಿಗಳ ಸಮೂಹ ಇವುಗಳಿಂದ ಆಕರ್ಷಕವಾಗಿರುವ ಶರತ್ಕಾಲವು ಲೋಕಕ್ಕೆ ಕಣ್ಣು ಬರುವಂತೆ ಪ್ರಾಪ್ತವಾಯಿತು. ವ॥ ಆಗ ಅರ್ಜುನನು ತನ್ನ ವಿಜಯಲಕ್ಷ್ಮಿಯ ಬರುವಿಕೆಯನ್ನು ಸ್ವಾಗತಮಾಡುವುದಕ್ಕೆ ಇದಿರಾಗಿ ಬಂದಂತೆ ಬಂದ ಶರತ್ಕಾಲಲಕ್ಷ್ಮಿಯನ್ನು ಸಂತುಷ್ಟ ಹೃದಯದಿಂದ ಮೆಚ್ಚಿ ನೋಡುತ್ತ ಬರುವಷ್ಟರಲ್ಲಿ ಮುಂದೆ ಶರತ್ಕಾಲದ ಮೋಡಗಳೆಲ್ಲ ಒಟ್ಟಾಗಿ ಸೇರಿ ಬೆಟ್ಟವಾದಂತೆ ಇದ್ದ ಹಿಮವತ್ಪರ್ವತವನ್ನು ನೋಡಿ ಇದು ಯಾವುದು ಎಂದು ಪ್ರಶ್ನೆಮಾಡಿದನು. ಗುಹ್ಯಕನು ಹೀಗೆಂದು ಹೇಳಿದನು. ೭೨. ಅರಳುತ್ತಿರುವ ಮೊಲ್ಲೆಯ ಹೂವಿನಂತಿರುವ ಚಂದ್ರನಂತೆಯೂ ಶಂಖದಂತೆಯೂ ಬೆಳ್ಳಗಿರುವುದೂ ಮದ್ದಾನೆಗಳ ಮದೋದಕದಿಂದ

ಕಂ॥ ಲಳಿತೋತ್ಸವ ಧ್ವಜಾಂಶುಕ
ವಿಳಸನಮಂ ಮುಂವೆ ನಿನಗೆ ತೋರ್ಪಂತಿರೆ ಕ ।
ಣ್ಗೊಳಿಸಿರ್ದುದು ನೋಡ ಹಿಮಾ
ಚಳ ಶಿಖರದ ಮೇಲೆ ಪಾಯ್ವ ಗಂಗಾಸ್ರೋತಂ ॥ ೭೩

ವ॥ ಎಂದು ಗುಹ್ಯಕಂ ಹಿಮವನ್ಮಹೀಧರಮಂ ತೋಱುತ್ತುಂ ಬಂದು ಕೈಲಾಸ ಪರ್ವತಮಂ ಕಂಡು-

ಮ॥ ಸ್ರ ॥ ಇದು ಕೈಲಾಸಂ ಭವಾನೀಧವನ ನೆಲೆ ಮನೋಜಾತನಂ ಬೂದಿಮಾಡಿ
ತ್ತಿದಱೊಳ್ ದಕ್ಷಾಧ್ವರಧ್ವಂಸಕನ ನೊಸಲ ಕಣ್ಣಾತನೊಳ್ ತನ್ನ ದೋರ್ಗ ।
ರ್ವದಗುರ್ವಂ ಪ್ರಾಕಟಂ ಮಾಡುವ ಬಗೆಯೊಳಿದಂ ಪತ್ತಿ ಕಿೞ್ತ್ತಿ ಪೊತ್ತೆ
ತ್ತಿದೊಡಿತ್ತಂ ಮೆಚ್ಚಿ ಲಂಕಾಧಿಪತಿಗೆ ಬರವಂ ರಾಗದಿಂ ನೀಳಕಂಠಂ ॥ ೭೪

ಚಂ॥ ತೊಱೆ ತೊಱೆಯೆಂಬ ಮಾತನಿನಿತಿಲ್ಲದೊಡಾಂ ತೊಱೆವೆಂ ದಲೆಂದೊಡಾ
ತೊಱೆಯೊಳೆ ಪೋಯ್ತು ಸೂರುಳನೆ ಸೂರುಳವೇವುವೊ ನಂಬೆನೆಂಬುದುಂ ।
ಕಱೆಗೊರಲಾತನಾತ್ಮ ವಿಟತತ್ವಮನುಂಟೊಡೆತಾಗಿ ಮಾಡಿ ಬಾಂ
ದೊಱೆಯನೆ ಪೊತ್ತು ಗೌರಿಗೆ ಕವಲ್ದೊಱೆಗೆಯ್ದಿದನೀ ಪ್ರದೇಶದೊಳ್ ॥ ೭೫

ತುಂಬಿದ ದರಿಗಳಿಂದ ಕೂಡಿ ಮನೋಹರವಾಗಿರುವ ಕಣಿವೆಗಳನ್ನುಳ್ಳುದೂ ಸಿಂಹದ ಅತಿಶಯವಾದ ಶಬ್ದದಿಂದ ಕೂಡಿದ ಗರ್ಜನೆಯನ್ನುಳ್ಳ ಗುಹೆಯನ್ನುಳ್ಳುದೂ ಮದ್ಯಪಾನದ ಅಮಲೇಂದ ದೇವತೆಗಳ ಮತ್ತು ಕಿಂಪುರುಷಸ್ತ್ರೀಯರಿಂದ ಪ್ರಾರಂಭಿಸಲ್ಪಟ್ಟ ಸಂಗೀತವನ್ನುಳ್ಳುದೂ ದೇವತೆಗಳು ಮತ್ತು ಸಿದ್ಧದಂಪತಿಗಳ ರತಿಕ್ರೀಡೆಯ ವೈಭವದಿಂದ ಮನೋಹರವಾಗಿರುವುದೂ ಆದ ಇದು ಹಿಮವತ್ಪರ್ವತ ಎಂದು ಹೇಳಿದನು. ೭೩. ಅದೋ ನಿನಗೆ ಶುಭೋತ್ಸವಸೂಚಕವಾದ ಬಾವುಟದ ಬಟ್ಟೆಯ ವಿಲಾಸವನ್ನು ನಿನ್ನೆದುರಿಗೆ ತೋರುವಂತೆ ಹಿಮವತ್ಪರ್ವತದ ಶಿಖರದ ಮೇಲೆ ಹರಿಯುತ್ತಿರುವ ಗಂಗಾಪ್ರವಾಹವು ಕಣ್ಣನ್ನು ಆಕರ್ಷಿಸುತ್ತಿದೆ ನೋಡು. ವ॥ ಎಂದು ಗುಹ್ಯಕನು ಹಿಮಾಲಯಪರ್ವತವನ್ನು ತೋರಿಸುತ್ತ ಮುಂದೆ ಬಂದು ಕೈಲಾಸಪರ್ವತವನ್ನು ಕಂಡು-೭೪. ಇದು ಕೈಲಾಸಪರ್ವತ; ಪಾರ್ವತೀಪತಿಯ ವಾಸಸ್ಥಾನ, ದಕ್ಷಬ್ರಹ್ಮನ ಯಜ್ಞವನ್ನು ನಾಶಮಾಡಿದ ಈಶ್ವರನ ಹಣೆಗಣ್ಣು ಮನ್ಮಥನನ್ನು ಬೂದಿಮಾಡಿದುದು ಇದರಲ್ಲಿಯೇ, ಶಿವನ ಮುಂದೆ ತನ್ನ ಬಾಹುಬಲದ ಅಹಂಕಾರವನ್ನೂ ಅತಿಶಯವನ್ನೂ ಪ್ರಕಟಿಸುವ ಆಶೆಯಿಂದ ಈ ಪರ್ವತವನ್ನೇ ಬೇರಿನಿಂದ ಕಿತ್ತು ಹೊತ್ತು ಮೇಲಕ್ಕೆತ್ತಲು ಈಶ್ವರನು ತೃಪ್ತನಾಗಿ ಲಂಕಾಧಿಪತಿಯಾದ ರಾವಣನಿಗೆ ಸಂತೋಷದಿಂದ ಇಲ್ಲಿ ವರಪ್ರದಾನ ಮಾಡಿದನು. ೭೫. ನದಿ (ಗಂಗಾನದಿ)ಯೆಂಬ ಮಾತನ್ನು ತಕ್ಷಣ ಬಿಟ್ಟುಬಿಡು. ಹಾಗಿಲ್ಲವಾದರೆ ನಾನು ಖಂಡಿತ ವಾಗಿಯೂ ನಿನ್ನನ್ನು ಬಿಟ್ಟುಬಿಡುತ್ತೇನೆ ಎಂದು (ಗೌರಿಯು ಸವತಿಮಾತ್ಸರ್ಯದಿಂದ) ಹೇಳಿದಳು. ಶಿವನು ಆ ನಿನ್ನ ಪ್ರತಿಜ್ಞೆಯು ಆ ನದಿಯ ಜೊತೆಯಲ್ಲಿಯೇ ಹೋಯಿತು, ಎಂದನು. ಗೌರಿಯು ಆ ಪ್ರತಿಜ್ಞೆಯದೇನು ನಾನು ನಂಬುವುದಿಲ್ಲ ಎನ್ನಲು

ವ॥ ಎಂದು ಗುಹ್ಯಕಂ ಕೈಲಾಸಶೈಲದೆಲ್ಲೆಡೆಗಳುಮಂ ವಿಕ್ರಮಾರ್ಜುನಂಗೆ ತೋಱುತ್ತುಂ ಬಂದು-

ಉ॥ ಸಾಳ ತಮಾಳ ಕಾನನಭರೋದ್ಧತ ಸಿಂಧುರಕಂಠಗರ್ಜನಾ
ಭೀಳಮನಂಬರೇಚರವಧೂಕರಪಲ್ಲವಸಂಚಳಲ್ಲತಾಂ ।
ದೋಳಮನಾಶ್ರಿತಾದ್ರಿ ನದ ಕೂಳಮನುನ್ನತಧರೀಕೃತಾನ್ಯ ಕು
ತ್ಕೀಳಮನಿಂದುಕಾಂತ ಸುಸಲೀಳಮನೆಯ್ದಿದನಿಂದ್ರಕೀಳಮಂ ॥ ೭೬

ಮ॥ ಕಮಳಾಂತರ್ಗತ ಗಂಧ ಬಂಧು ನಯದಿಂ ಬಂದಪ್ಪಿಕೊಳ್ವಂತೆ ಗಾ
ಳಿ ಮನಂಗೊಂಡಿರೆ ತೀಡೆ ಭೃಂಗರುತಿಗಳ್ ಮಾಂಗಲ್ಯಗೇಯಂಗಳಂ ।
ದಮಸಂದೀಯೆ ಮಡಲ್ತು ಪೂತ ಲತೆಗಳ್ ಕೆಯ್ಗೆಯ್ದು ಪೂನೀಡಲ್ಕ
ರ್ಘ್ಯಮನೀವಂತೆವೊಲಾದುದದ್ರಿ ಹರಿಗಂಗಿಷ್ಟಾರ್ಥಸಂಸಿದ್ಧಿಯಂ ॥ ೭೭

ವ॥ ಆಗಳ್ ಗುಹ್ಯಕನಿಂದ್ರಸುತನನಿಂದ್ರಕೀಲನಗೇಂದ್ರದ ಚಂದ್ರಕಾಂತಶಿಲಾ ತಲದೊಳಿೞಿಪಿ ಬೀೞ್ಕೊಂಡು ಪೋದನಿತ್ತ ವಿಕ್ರಮಾರ್ಜುನಂ ಪರಂತಪಂ ತಪೋನಿಯಮ ನಿಯಮಿತನಾಗಿ-

ವಿಷಕಂಠನಾದ ಈಶ್ವರನು ಆ ಗೌರಿಯನ್ನು ನಂಬಿಸುವುದಕ್ಕಾಗಿಯೂ ತನ್ನ ವಿಟವಿದ್ಯೆಯನ್ನು ಪ್ರದರ್ಶಿಸುವುದಕ್ಕಾಗಿಯೂ ಗಂಗೆಯನ್ನು ತಲೆಯಲ್ಲಿ ಮರೆಮಾಡಿ ಇಟ್ಟುಕೊಂಡು ಈ ಸ್ಥಳದಲ್ಲಿ ಕವಲೊಡೆದ ಬೇರೆಯ ನದಿಯನ್ನುಂಟುಮಾಡಿದನು. ಅಂದರೆ ತಲೆಯಲ್ಲಿಯೇ ಗಂಗೆಯನ್ನಿಟ್ಟುಕೊಂಡು ಅದನ್ನು ತೊರೆದುಬಿಟ್ಟ ಹಾಗೆ ಅದರ ಕವಲೊಡೆದ ಒಂದೆರಡು ಪ್ರವಾಹವನ್ನು ಹೊರಕ್ಕೆ ಬಿಟ್ಟನು. ವ॥ ಎಂದು ಗುಹ್ಯಕನು ಕೈಲಾಸಪರ್ವತದ ಎಲ್ಲಾ ಸ್ಥಳಗಳನ್ನೂ ಅರ್ಜುನನಿಗೆ ತೋರುತ್ತ ಬಂದನು. ೭೬. ಮುಂದೆ ಒತ್ತಾಗಿ ಬೆಳೆದ ತೆಂಗು ಮತ್ತು ಹೊಂಗೆಯ ಮರಗಳ ಕಾಡಿನಲ್ಲಿ ಎತ್ತರವಾಗಿ ಬೆಳೆದ ಮದ್ದಾನೆಗಳ ಕೊರಳಿನಿಂದ ಬರುತ್ತಿದ್ದ ಘೀಳಿಡುವಿಕೆಯಿಂದ ಭಯಂಕರವಾಗಿದ್ದರೂ ಆಕಾಶಗಾಮಿಗಳಾದ ಖೇಚರಸ್ತ್ರೀಯರ ಚಿಗುರಿನಂತಿರುವ ಕೈಗಳಿಂದ ಚಲಿಸಲ್ಪಟ್ಟ ಬಳ್ಳಿಗಳ ಉಯ್ಯಾಲೆಯನ್ನುಳ್ಳದೂ (ತನ್ನ ಔನ್ನತ್ಯದಿಂದ) ಇತರ ಎಲ್ಲ ಪರ್ವತಗಳನ್ನೂ ಬಹು ಕೀಳನ್ನಾಗಿ ಮಾಡಿರುವುದೂ ಚಂದ್ರಕಾಂತಶಿಲೆಯ ಉಚ್ಚವೈಭವವನ್ನುಳ್ಳದೂ ಆದ ಇಂದ್ರಕೀಲಪರ್ವತವನ್ನು ಅರ್ಜುನನು ಬಂದು ಸೇರಿದನು. ೭೭. ಕಮಲದ ಹೂವಿನಲ್ಲಿರುವ ವಾಸನೆಗೆ ಸ್ನೇಹಿತನಾದ ವಾಯುವು ವಿನಯದಿಂದ ಬಂದು ಆಲಿಂಗನಮಾಡಿಕೊಳ್ಳುವ ಹಾಗೆ ಆಹ್ಲಾದಕರವಾಗಿ ಬೀಸಲು ದುಂಬಿಯ ಶಬ್ದಗಳು ಮಂಗಳವಾದ್ಯದ ಸೊಗಸನ್ನುಂಟುಮಾಡುತ್ತಿರಲು ಹಬ್ಬಿ ಹೂವಿನಿಂದ ಕೂಡಿರುವ ಬಳ್ಳಿಗಳು ಅಲಂಕಾರಮಾಡಿಕೊಂಡು ಕೈಗೆ ನೀರನ್ನು ಕೊಡುವ ಹಾಗೆ ಹೂವನ್ನು ಕೊಡಲು ಅರ್ಜುನನಿಗೆ ಆ ಪರ್ವತವು ಇಷ್ಟಾರ್ಥಸಿದ್ಧಿಯನ್ನುಂಟು ಮಾಡುವ ಹಾಗೆ ಕಂಡಿತು. ವ॥ ಆಗ ಗುಹ್ಯಕನು ಅರ್ಜುನನನ್ನು ಶ್ರೇಷ್ಠವಾದ ಇಂದ್ರಕೀಲಪರ್ವತದ ಚಂದ್ರಕಾಂತಶಿಲಾತಲದಲ್ಲಿ ಇಳಿಸಿ ಅವನ ಅಪ್ಪಣೆಪಡೆದು ಹೋದನು. ಈ ಕಡೆ ಶತ್ರುಗಳನ್ನು ಸುಡುವ ಸ್ವಭಾವವುಳ್ಳ ಅರ್ಜುನನು ತಪೋನಿಯಮ

ಮ॥ ಸ್ರ ॥ ಭಸಿತಂ ಕರ್ಪೂರ ಕಾಳಾಗರು ಬಹುಳ ರಜಂ ವಲ್ಕಲಂ ಕಲ್ಪವೃಕ್ಷ
ಪ್ರಸವಂ ಯಜ್ಞೋಪವೀತಂ ಕನಕ ಕಮಳನಾಳೋತ್ಕರಂ ನಿಚ್ಚನಿಚ್ಚಂ ।
ಪೊಸತೆಂಬಂತಾಗೆ ಪಾರ್ಥಂಗೊಸೆದು ತುಡಲುಡಲ್ ಪೂಸಲುಂ ಸಾಲ್ವಿನಂ ಸಾ
ಧಿಸಿತುದ್ಯದ್ಭಕ್ತಿ ಭಾರಾನತ ವನವನಿತಾವೃಂದಮಾನಂದದಿಂದಂ ॥ ೭೮

ಚಂ॥ ಅದಿರದ ಚಿತ್ತಮಳ್ಕದ ಮನಂ ಬಗೆಗೊಳ್ಳದ ಮೋಹಮೆತ್ತಿ ಕ
ಟ್ಟಿದ ಜಡೆ ತೊಟ್ಟ ರತ್ನಕವಚಂ ಕೊರಲೊಳ್ ಸಲೆ ಕೋದ ಬಿಲ್ ಪ್ರಯ ।
ತ್ನದೆ ಬಿಗಿದಿರ್ದೆರಟಿಗ್ಗೊಣೆ ಮಿಸುಪ್ಪಸಿಖೇಟಕಮಿಂತಿವೊಂದು ಗುಂ
ದದೆ ನಿಲೆ ನೋಟ್ಪ ನೋಟಕರ್ಗೆ ಸೌಮ್ಯಭಯಂಕರನಾದನರ್ಜುನಂ ॥ ೭೯

ವ॥ ಅಂತು ಪರಾಶರನಂದನನುಪದೇಶದೊಳ್ ತಪನಪ್ರಭಂ ತಪಂಗೆಯ್ಯಲ್ ತಗುಳ್ದೊಡೆ-

ಚಂ॥ ಕರಿಣಿಯ ಸೀಯನಪ್ಪ ಮೊಲೆವಾಲ್ಗೆ ತಗುಳ್ದುದು ತತ್ಕಿಶೋರ ಕೇ
ಸರಿ ಹರಿಪೋತಮಂ ಬೆದಱುತುಂ ಕರಿಪೋತಮವುಂಡುಗರ್ಚಿ ಕೇ ।
ಸರಿಣಿಯ ಕೆಚ್ಚಲಂ ತುಡುಕುತುಂ ಪರಿದತ್ತು ಕುರಂಗಯೂಥದೊಳ್
ಬೆರಸಿದುವಂದು ಪೆರ್ಬುಲಿಗಳಿಂದ್ರತನೂಜತಪಃಪ್ರಭಾವದಿಂ ॥ ೮೦

ನಿಷ್ಠನಾದನು. ೭೮. ಅರ್ಜುನನಲ್ಲುಂಟಾದ ಅತ್ಯತಿಶಯವಾದ ಭಕ್ತಿಯ ಭಾರದಿಂದ ನಮ್ರರಾದ ಅರಣ್ಯಾಭಿಮಾನಿ ದೇವತಾಸ್ತ್ರೀಯರ ಸಮೂಹವು ಅವನಿಗೆ ಪ್ರತಿನಿತ್ಯವೂ ಹೊಸಹೊಸದು ಎನ್ನುವ ಹಾಗೆ ಉಡಲು ತೊಡಲು ಲೇಪನಮಾಡಿಕೊಳ್ಳಲು ಸಾಕಾಗುವಷ್ಟು ವಿಭೂತಿ, ಪಚ್ಚಕರ್ಪೂರ, ಕರಿಯ ಅಗರಿನ ಶ್ರೇಷ್ಠವಾದ ಧೂಳು, ಕಲ್ಪವೃಕ್ಷದ ತೊಗಟೆಯಿಂದ ಮಾಡಿದ ನಾರುಮಡಿ, ಹೊಂದಾವರೆಯ ದಂಟಿನ ನೂಲಿನ ಸಮೂಹದಿಂದ ಮಾಡಿದ ಜನಿವಾರ ಇವುಗಳನ್ನು ಒದಗಿಸಿಕೊಟ್ಟಿತು. ೭೯. ಚಂಚಲವಾಗದ ಬುದ್ಧಿ, ಭಯಪಡದ ಮನಸ್ಸು, ಹೃದಯವನ್ನು ಪ್ರವೇಶಿಸಿದ ಪ್ರೀತಿ (ವಿರಕ್ತಿ), ಎತ್ತಿಕಟ್ಟಿರುವ ಜಡೆ, ತೊಟ್ಟಿರುವ ರತ್ನಖಚಿತವಾದ ಕವಚ (ಮೈಜೋಡು), ಕತ್ತಿನಲ್ಲಿ ವಿಶೇಷವಾಗಿ ಪೋಣಿಸಿಕೊಂಡಿರುವ ಬಿಲ್ಲು, ಪ್ರಯತ್ನ ಪೂರ್ವಕವಾಗಿ ಬಿಗಿದುಕೊಂಡಿರುವ ಎರಡು ಬತ್ತಳಿಕೆ, ಪ್ರಕಾಶಮಾನವಾಗಿರುವ ಕತ್ತಿಗುರಾಣಿಗಳು ಇವು ಸ್ವಲ್ಪವೂ ಊನವಾಗಿರದೆ ನೆಲಸಿರಲು ನೋಡುವವರಿಗೆ ಅರ್ಜುನನು ಸೌಮ್ಯವಾಗಿಯೂ ಭಯಂಕರವಾಗಿಯೂ ಕಂಡನು. ವ॥ ವ್ಯಾಸ ಮಹರ್ಷಿಯ ಉಪದೇಶದಿಂದ ಸೂರ್ಯನ ಕಾಂತಿಯನ್ನುಳ್ಳ ಅರ್ಜುನನು ತಪಸ್ಸು ಮಾಡಲು ಪ್ರಾರಂಭಿಸಿದನು. ೮೦. ಇಂದ್ರಪುತ್ರನಾದ ಅರ್ಜುನನ ತಪಸ್ಸಿನ ಪ್ರಭಾವ ದಿಂದ ಸಿಂಹದ ಮರಿಗಳು ಹೆಣ್ಣಾನೆಯ ಸಿಹಿಯಾದ ಮೊಲೆಹಾಲಿಗಾಗಿ ಅದರ ಹಿಂದೆಯೇ ಹೋದುವು. ಆನೆಯ ಮರಿಗಳು ಸಿಂಹದ ಮರಿಗಳನ್ನು ಹೆದರಿಸುತ್ತ ಅವಡುಗಚ್ಚಿ (ತುಟಿಯನ್ನು ಕಚ್ಚಿಕೊಂಡು) ಹೆಣ್ಣು ಸಿಂಹದ ಕೆಚ್ಚಲನ್ನು ಹಿಡಿದುಕೊಳ್ಳುತ್ತ ಓಡಿದುವು. ಹೆಬ್ಬುಲಿಗಳು ಜಿಂಕೆಯ ಸಮೂಹದಲ್ಲಿ ಬೆರಸಿಕೊಂಡವು. (ಅರ್ಜುನನ ತಪಃಪ್ರಭಾವದಿಂದ ಕಾಡುಪ್ರಾಣಿಗಳೂ ತಮ್ಮ ಸಹಜವೈರವನ್ನು ತೊರೆದು

ವ|| ಮತ್ತಮಾ ಗಿರೀಂದ್ರಕಂದರದೊಳ್ ತಪಂಗೆಯ್ವ ತಪೋಧನರ ತಪಂಗಳೆಲ್ಲಮಾತನ ತಪೋಮಯಶಿಖಿಗಳಿಂ ಬೆಂದು ಬೆಂದ ನುಲಿಯಂತೆತರ್ಕಂ ಮುಟ್ಟಲ್ಲದೆ ಮುಟ್ಟುಗಿಡೆ ದೇವೇಂದ್ರಂ ತನಗಾದ ಹೃತ್ಕಂಪದೊಳಮಾಸನಕಂಪದೊಳಂ ನರೇಂದ್ರತಾಪಸಂ ತನ್ನಿಂದ್ರತ್ವಮಂ ಕೊಳಲೆಂದು ತಪಂಗೆಯ್ವಪನೆಂಬ ಸಂಕೆಯೊಳ್ ತಪೋವಿಘಾತಂ ಮಾಡಿಮೆಂದು ತನ್ನ ನೆಚ್ಚಿನಚ್ಚರಸೆಯರು ಮನಾಱುಂ ಋತುಗಳುಮಂ ಗಂಧರ್ವರುಮಂ ಕಾಮದೇವನಂ ದಂಡನಾಯಕಂ ಮಾಡಿ ಪೇೞ್ದಾಗಳ್-

ಚಂ|| ವನರುಹಗರ್ಭನೆಂಬವನ ಮುನ್ನಿನ ಗೆಯ್ದ ತಪಂ ತಿಲೋತ್ತಮಾಂ
ಗನೆಯಿನದಂತುಟಾದುದೆನೆ ಮತ್ತಿನ ಬೂತು ತಪಂಗಳೆಮ್ಮ ಪು ।
ರ್ವಿನ ಕಡೆಯೊಂದು ಜರ್ವಿನೊಳೆ ತೀರ್ವುವವಲ್ಲದೆ ದೇವ ಬೆಂಬಲಂ
ಮನಸಿಜನೀಗಳಾಱು ಋತುವುಂ ನೆರವೆಂದೊಡೆ ಸೋಲದಿರ್ಪರಾರ್ ॥ ೮೧

ವ|| ಎಂದು ದೇವಾಪ್ಸರೋವೃಂದಮೆನಿತಾನುಮಂದದಿಂ ಪುರಂದರನ ಪಕ್ಕದೆ ಪೂಣ್ದು ಬಂದು ಗಗನತಳಮೆಲ್ಲಂ ತಮ್ಮ ತೊಟ್ಟ ದಿವ್ಯಾಭರಣಕಿರಣಂಗಳೊಳ್ ತೊಳಗಿ ಬೆಳಗೆ ಬಂದು ಮಹೀತಳಕ್ಕವತರಿಸಿ ನದನದೀಪುಳಿನಪರಿಸರಪ್ರದೇಶಂಗಳೊಳಂ ಕದಳೀವನಂಗಳೊಳಂ ಕನಕಲತಾಮಂಟಪಂಗಳೊಳಮಿಡಿದೆಡೆಗೊಳೆ ಪೂತ ಮಲ್ಲಿಗೆಯ ಬಳ್ಳಿಗಾವಣಂಗಳೊಳಂ ನನೆಯ

ನಿರ್ಭಯದಿಂದ ಸ್ನೇಹದಿಂದಿದ್ದುವು ಎಂಬುದು ಅಭಿಪ್ರಾಯ) ವ|| ಮತ್ತು ಆ ಪರ್ವತಶ್ರೇಷ್ಠದ ಕಣಿವೆಗಳಲ್ಲಿ ತಪಸ್ಸುಮಾಡುತ್ತಿದ್ದ ತಪೋಧನರ ತಪಸ್ಸುಗಳೆಲ್ಲವೂ ಆತನ ತಪಸ್ಸಿನಿಂದುಂಟಾದ ಬೆಂಕಿಯಿಂದ ಸುಟ್ಟುಹೋಗಿ ಸುಟ್ಟ ಹಗ್ಗದಂತೆ ಉಪಯೋಗವಿಲ್ಲದೆ ನಿಷ್ಪ್ರಯೋಜನವಾದುವು. ದೇವೇಂದ್ರನು ತನಗುಂಟಾದ ಎದೆನಡುಕದಿಂದಲೂ ಪೀಠದ ನಡುಗುವಿಕೆ(ಆಸನ ಕಂಪನ)ಯಿಂದಲೂ ಮನುಷ್ಯತಪಸ್ವಿಯು ತನ್ನಿಂದ ಪದವಿಯನ್ನು ಅಪಹರಿಸಲು ತಪಸ್ಸು ಮಾಡುತ್ತಿದ್ದಾನೆಂಬ ಸಂದೇಹದಿಂದ ಅವನ ತಪಸ್ಸಿಗೆ ವಿಘ್ನಮಾಡಿ ಎಂದು ತನಗೆ ಪರಮಪ್ರೀತಿಪಾತ್ರರಾದ ಅಪ್ಸರಸ್ತ್ರೀಯರನ್ನೂ ಆರು ಋತುಗಳನ್ನೂ ಗಂಧರ್ವರನ್ನೂ ಕಾಮದೇವನನ್ನು ದಂಡನಾಯಕನನ್ನಾಗಿ ಮಾಡಿ ಹೇಳಿಕಳುಹಿಸಿದನು - ೮೧. ಎಲೈ ಇಂದ್ರದೇವನೇ ಹಿಂದೆ ಬ್ರಹ್ಮನು ಮಾಡಿದ ತಪಸ್ಸು ತಿಲೋತ್ತಮೆಯೆಂಬ (ಒಬ್ಬ) ದೇವವೇಶ್ಯೆಯಿಂದ ಹಾಗೆ ಆಯಿತು (ನಷ್ಟವಾಯಿತು) ಎನ್ನುವಾಗ ಉಳಿದ ಪ್ರಾಣಿಗಳ ತಪಸ್ಸು ನಮ್ಮ ಹುಬ್ಬಿನ ಕೊನೆಯ ಒಂದು ಅಲುಗಾಟದಿಂದಲೇ ಮುಗಿದುಹೋಗುತ್ತವೆ. ಅಲ್ಲದೆ ಈಗ ಮನ್ಮಥನ ಬೆಂಬಲವೂ ಆರುಋತುಗಳ ಸಹಾಯವೂ ಇರುವಾಗ ಸೋಲದಿರುವವರಾರಿದ್ದಾರೆ? ವ|| ಎಂದು ದೇವಲೋಕದ ಅಪ್ಸರಸ್ತ್ರೀಯರ ಸಮೂಹವು ಇಂದ್ರನ ಹತ್ತಿರ ಎಷ್ಟೋ ರೀತಿಯಲ್ಲಿ ಪ್ರತಿಜ್ಞೆಮಾಡಿ ಬಂದು ಆಕಾಶಪ್ರದೇಶವೆಲ್ಲವೂ ತಾವು ಧರಿಸಿದ್ದ ದಿವ್ಯವಾದ ಒಡವೆಗಳ ಕಾಂತಿಯಿಂದ ಪ್ರಕಾಶಿಸುತ್ತಿರಲು ಭೂಮಿಗೆ ಇಳಿದು ಬಂಮು ಗಂಡು ಮತ್ತು ಹೆಣ್ಣುನದಿಗಳ ಮರಲುದಿಣ್ಣೆಗಳಲ್ಲಿಯೂ ಬಾಳೆಯ ತೋಟಗಳಲ್ಲಿಯೂ ಹೊಂಬಣ್ಣದ ಲತಾಮಂಟಪಗಳಲ್ಲಿಯೂ ಒತ್ತಾಗಿ ಸೇರಿ ಹೂ ಬಿಟ್ಟಿರುವ ಲತಾಗೃಹಗಳಲ್ಲಿಯೂ ಹೂವಿನಗೊಂಚಲುಗಳಲ್ಲಿಯೂ ಆಕಾಶದಲ್ಲಿ ಸಂಚರಿಸಿದುದರಿಂದುಂಟಾದ

ಜೊಂಪಂಗಳೊಳಂ ಗಗನಗಮನಜನಿತಶ್ರಮಮನಾ ಗಜಗಮನೆಯರಾಱಿಸಿ ಪಾಲ್ಗಡಲೊಳ ಮಮರ್ದಿನೊಳಂ ಪುಟ್ಟಿದ ಕಳ್ಳ ಸೊರ್ಕಿನೊಳಮುಂತೆ ನಡುಗುವ ಬಡನಡುಗಳ್ಗೆ ನಡುಕಮುಮನುಂತೆ ಪೊಡರ್ವ ಪುರ್ವುಗಳ್ಗೆ ಪೊಡರ್ಪುಮನುಂತೆ ಸೊಗಯಿಸುವ ಬೆಳರ್ವಾಯ್ಗಳ್ಗೆ ತನಿಗೆತ್ತುಮನುಂತೆ ಪೊಳೆವ ನಿಡಿಯಲರ್ಗಣ್ಗಳ್ಗೆ ಮಳಮಳಿಪ ನೋಟಮುಮನುಂತೆ ತೊದಳಿಸುವ ನುಡಿವ ನುಡಿಗಳ್ಗೆ ತೊದಳುಮನೆಕ್ಕೆಯಿಂ ತಳೆಯೆ ನೆಱೆಯೆ ಕೆಯ್ಗೆಯ್ದು ಮುನ್ನಮಾಱುಂ ಋತುಗಳುಮಂ ನಿಮ್ಮ ನಿಮ್ಮ ಸ್ವರೂಪಂಗಳುಮನಾತನಿರ್ದಲ್ಲಿಗೆ ಪೋಗಿ ತೋಱೆಮೆಂದಾಗಳ್-

ಕಂ॥ ಆಱುಂ ಋತುಗಳ ಪೂಗಳು
ಮಾಱುಂ ಋತುಗಳ ಪೊದಳ್ದ ಚೆಲ್ವುಗಳುಮಣಂ ।
ಬೇಱಿಲ್ಲದೊಂದು ಸೂಳ್ ಮೆ
ಯ್ದೋಱಿದುವೊಡನೊಡನೆ ನೆಲದೊಳಂ ಗಗನದೊಳಂ ॥ ೮೨

ಮೆಯ್ದೋಱಿದೊಡವಱೊಡನೆಯೆ
ಮೆಯ್ದೋಱಲ್ ಬಗೆದನಂಗಜಂಗಮಲತೆಗಳ್ ।
ಮೆಯ್ದೋಱುವಂತೆ ಮೆಲ್ಲನೆ
ಮೆಯ್ದೋಱಿದರಮರಗಣಿಕೆಯರ್ ವಂದಾಗಳ್ ॥ ೮೩

ಸಮದ ಗಜಗಮನೆಯರ್ ಮುಗಿ
ಲ ಮೇಲೆ ನಡೆಪಾಡುವಾಕೆಗಳ್ ತಮಗೆ ಧರಾ ।
ಗಮನಂ ಪೊಸತಪ್ಪುದಱಿಂ
ದಮರ್ದಿರೆ ನಡೆ ನಡೆದು ನಡೆಯಲಾಱದೆ ಸುಟಿದರ್ ॥ ೮೪

ಬಳಲಿಕೆಯನ್ನು ಆನೆಯಂತೆ ನಡಗೆಯುಳ್ಳ ಅಪ್ಸರಸ್ತ್ರೀಯರು ಪರಿಹರಿಸಿಕೊಂಡರು. ಕ್ಷೀರಸಮುದ್ರದಲ್ಲಿ ಹುಟ್ಟಿದ ಅಮೃತದಿಂದ ಉತ್ಪನ್ನವಾದ ಸೊಕ್ಕಿನಿಂದ (ಮದ್ಯಪಾನದಿಂದ) ಕೂಡಿದವರಾಗಿ ಸುಮ್ಮನೆ ನಡುಗುತ್ತಿರುವ ಕೃಶವಾದ ನಡುಗಳಿಗೆ ಮತ್ತಷ್ಟು ನಡುಕವನ್ನುಂಟುಮಾಡಿಕೊಂಡು, ಕುಣಿಯುತ್ತಿರುವ ದೀರ್ಘವಾದ ಹುಬ್ಬುಗಳಿಗೆ ಮತ್ತಷ್ಟು ಕುಣಿತವನ್ನು, ಮೊದಲೇ ಸೊಗಯಿಸುವ ಬಿಳಿಯ ಬಾಯಿಗಳಿಗೆ ಹೊಸದಾದ ಅದಿರಾಟವನ್ನು,ಹೊಳೆಯುತ್ತಿರುವ ದೀರ್ಘವಾದ ಹೂವಿನಂತಿರುವ ಕಣ್ಣುಗಳಿಗೆ ಕೆಂಪಾಗಿ ಕದಡಿದ ನೋಟವನ್ನು ಈಗಾಗಲೆ ಸುಮ್ಮನೆ ತೊದಳಿನಿಂದ ನುಡಿಯುತ್ತಿರುವ ತೊದಳುಮಾತಿಗೆ ಮತ್ತಷ್ಟು ತೊದಳುವಿಕೆಯನ್ನು ಏಕಕಾಲದಲ್ಲಿ ಕೂಡಿಕೊಳ್ಳುವಂತೆ ಪೂರ್ಣವಾಗಿ ಅಲಂಕರಿಸಿಕೊಂಡು ನಡೆಯುತ್ತಿರಲು ಆರು ಋತುಗಳೂ ತಮ್ಮ ತಮ್ಮ ಸ್ವರೂಪಗಳಿಂದ ಆತನಿದ್ದ ಸ್ಥಳಕ್ಕೆ ಹೋಗಿ ತೋರ್ಪಡಿಸಿಕೊಂಡವು. ೮೨. ಆರು ಋತುಗಳ ಹೂವುಗಳೂ ಆರು ಋತುಗಳಲ್ಲಿ ವ್ಯಾಪಿಸಿರುವ ಸೌಂದರ್ಯವೂ ಸ್ವಲ್ಪವೂ ಬೇರೆ ಬೇರೆಯಾಗಿರದೆ ಒಟ್ಟಿಗೇ ಒಂದೇ ಸಲ ಭೂಮಿಯಲ್ಲಿಯೂ ಆಕಾಶದಲ್ಲಿಯೂ ಕಾಣಿಸಿಕೊಂಡವು. ೮೩. ಆರು ಋತುಗಳೊಡನೆಯೇ ತಾವೂ ಕಾಣಿಸಿಕೊಳ್ಳಬೇಕೆಂದು ಭಾವಿಸಿ ಮನ್ಮಥನ ಜಂಗಮಲತೆಗಳು ಕಾಣಿಸಿಕೊಳ್ಳುವ ಹಾಗೆ ಅಪ್ಸರಸ್ತ್ರೀಯರೂ ಬಂದು ನಿಧಾನವಾಗಿ ಕಾಣಿಸಿಕೊಂಡರು. ೮೪. ಮೋಡಗಳ ಮೇಲೆ ನಡೆದಾಡುವ ಸ್ವಭಾವವುಳ್ಳ ಆ

ಕಂ॥ ಮುಡಿಯ ಕುಚಯುಗದ ಜಘನದ
ಕಡುವಿಣ್ಪಿಂ ಮಣಲೊಳಟ್ಟು ಬರೆ ಮೆಲ್ಲಡಿಗಳ್ ।
ನಡೆಯದ ಬೇವಸಮಂ ತಾಂ
ನಡೆಯಿಸುವಂತವರ್ಗಳೊಯ್ಯನೊಯ್ಯನೆ ನಡೆದರ್ ॥ ೮೫

ಮ॥ ಮುಡಿಯಂ ಸೋಗೆಯೆಗೆತ್ತು ಸೋಗೆ ನಡೆಯಂ ಪೆಣ್ಣಂಚೆಗೆತ್ತಂಚೆ ಮೆ
ಲ್ನುಡಿಯಂ ಕೋಗಿಲೆಗೆತ್ತು ಕೋಗಿಲೆ ಘನೋತ್ತುಂಗ ಸ್ತನದ್ವಂದ್ವದಿ ।
ಟ್ಟೆಡೆಯಂ ಕೋಕಮೆಗೆತ್ತು ಕೋಕಮಳಕಾನೀಕಂಗಳಂ ಸೋರ್ಕಿದಾ
ಱಿದಿಗೆತ್ತಾಱಿದಿ ಸುತ್ತುತುಂ ಬರೆ ಬನಂ ಬರ್ಪಂತೆ ಬಂದಾಕೆಗಳ್ ॥ ೮೬

ವ॥ ಅಂತು ನರೇಂದ್ರತಾಪಸನಂ ಸೋಲಿಸಲೆಂದು ವಂದಾಕೆಗಳ್ ತಾಮೆ ಸೋಲ್ತು ಮುಂದು ಮುಂದನೆ ಸುೞಿಯೆ-

ಚಂ॥ ಮಗಮಗಿಸುತ್ತುಮಿರ್ಪ ಮೃಗನಾಭಿಯ ನೀರ್ದಳಿವಲ್ಲಿ ಕಂಪಸಾ
ಳ್ದುಗುಟ್ಟಿಲಸುತ್ತುಮಿರ್ಪ ಪದದೊಳ್ ಪದವಟ್ಟು ಪೊದಳ್ದು ತೋರ ಮ ।
ಲ್ಲಿಗೆಯ ತುಱುಂಬು ರಾಹು ತವೆ ನುಂಗಿದ ಚಂದ್ರನನೊಯ್ಯನೊಯ್ಯನಂ
ದುಗುಟ್ಟವೊಲೊಪ್ಪಿರಲ್ ಬಲದೊಳುರ್ವಸಿ ದೇಸಿಗೆ ದೇಸಿಯಾಡಿದಳ್ ॥ ೮೭

ಮದಗಜಗಮನೆಯರು ನೆಲದ ಮೇಲೆ ನಡೆಯುವುದು ತಮಗೆ ಹೊಸದಾದುದರಿಂದ ಪಾದಗಳು ನೆಲಕ್ಕೆ ಹತ್ತಿಕೊಂಡಿರಲು ನಡೆದೂ ನಡೆದೂ ನಡೆಯಲಸಮರ್ಥರಾಗಿ ಸುತ್ತಾಡಿದರು. ೮೫. ತುರುಬಿನ, ಮೊಲೆಗಳ, ಪಿರ್ರೆಗಳ, ಅತಿಯಾದ ಭಾರದಿಂದ ಅವರ ಮೃದುವಾದ ಪಾದಗಳು ಮರಳಿನಲ್ಲಿ ಹೂತುಹೋಗಲು ನಡೆಯಲು ಅಭ್ಯಾಸವಿಲ್ಲದ ತಮ್ಮ ಆಯಾಸವನ್ನು ಪ್ರದರ್ಶಿಸುವಂತೆ ಮೆಲ್ಲಮೆಲ್ಲಗೆ ನಡೆದರು. ೮೬. ತುರುಬಿನ ಗಂಟನ್ನು ಹೆಣ್ಣು ನವಿಲೆಂದು ಭ್ರಾಂತಿಗೊಂಡು ಗಂಡುನವಿಲೂ, ನಡಗೆಯನ್ನು ಹೆಣ್ಣು ಹಂಸವೆಂದು ಭ್ರಮಿಸಿ ಗಂಡುಹಂಸವೂ, ಮೃದುವಾದ ಮಾತನ್ನು ಹೆಣ್ಣುಕೋಗಿಲೆಯೆಂದು ಭಾವಿಸಿ ಗಂಡುಕೋಗಿಲೆಯೂ ದಪ್ಪವೂ ಎತ್ತರವೂ ಆದ ಮೊಲೆಗಳ ಒತ್ತಡವನ್ನು ಕಂಡು ಚಕ್ರವಾಕದ ಜೋಡಿಯೆಂದು ಭ್ರಮಿಸಿ ಚಕ್ರವಾಕವೂ, ಮುಂಗುರುಳುಗಳ ಸಾಲನ್ನು ಸೊಕ್ಕಿದ ಹೆಣ್ಣುದುಂಬಿಯೆಂದೇ ಭ್ರಮಿಸಿ ಗಂಡುದುಂಬಿಗಳೂ ಆ ಅಪ್ಸರೆಯರನ್ನು ಸುತ್ತಿಕೊಂಡು ಬರುತ್ತಿರಲು ಅವರು ವನವೇ ಬರುವ ಹಾಗೆ ಬಂದರು. ವ॥ ಹಾಗೆ ರಾಜತಪಸ್ವಿಯನ್ನು ಸೋಲಿಸುವುದಕ್ಕಾಗಿ ಬಂದ ಅವರು ತಾವೇ ಸೋತು ಅವನ ಮುಂದು ಮುಂದಕ್ಕೆ ಸುಳಿದಾಡಿದರು. ೮೭. ಗಮಗಮಿಸುವ ಕಸ್ತೂರಿಯ ನೀರನ್ನು ಚಿಮುಕಿಸುವುದರಿಂದ ವಾಸನಾಯುಕ್ತವಾಗಿ ಸ್ಫುಟಗೊಂಡು ಅರಳುತ್ತಿರುವ ಹೂವಿನಲ್ಲಿ ಹದವರಿತು ಸೇರಿ ಅಗಲವಾಗುತ್ತಿರುವ ದಪ್ಪಮಲ್ಲಿಗೆಯ ದಂಡೆಯು ತುರುಬಿನ ಮೇಲೆ ಗ್ರಹಣಕಾಲದಲ್ಲಿ ರಾಹುವು ಚಂದ್ರನನ್ನು ನಿಧಾನವಾಗಿ ಹೊರಚೆಲ್ಲುವ ಹಾಗೆ ಸೊಗಸಾಗಿರಲು ಬಲಗಡೆಯಲ್ಲಿ ಊರ್ವಶಿಯ

ಚಂ॥ ಪದ ಕೊರಲಿಂಪನಪ್ಪುಕೆಯೆ ಕೊಂಕು ನಯಂ ಗಮಕಂಗಳಿಂ ಪೊದ
ಕೋದಳೆಟಿದಿಕ್ಕಿದಂತೆ ಸುತಿಯೊಳ್ ಸಮವಾಗಿರೆ ಜಾಣನಾಂತು ಮೆ ।
ಚ್ಚದ ತೆಱದಾಸೆವಟ್ಟಲಸದೆತ್ತಿದವೋಲ್ ದೊರೆವೆತ್ತು ದೂಱದಾ
ಱದ ದನಿ ಮುಟ್ಟೆ ಮೇನಕೆ ಸರಸ್ವತಿ ಬಾಯ್ದೆಱೆದಂತೆ ಪಾಡಿದಳ್ ॥ ೮೮

ನಡು ನಡುಗಲ್ಕೆ ಪುರ್ವು ಪೊಡರಲ್ಕೆ ಕುರುಳ್ ಮಿಳಿರಲ್ಕೆ ಬಾಯ್ ಬೆಡಂ
ಗಿಡಿದೆಳಸಲ್ ತೆರಳ್ತು ತುಡುಕಲ್ಕೆ ತಗುಳ್ದುದು ಕೆಂದನೀಕೆ ಕ ।
ನ್ನಡಿಪಳೊ ಪಾಡಿದೀ ನೆವದಿನೆಂಬಿನೆಗಂ ದನಿಯಿಂಪು ಬೀಣೆಯಂ
ಮಿಡಿದವೊಲಾಗೆ ಗಾನದೊಳೊಡಂಬಡೆ ಮೇನಕೆ ಮುಂದೆ ಪಾಡಿದಳ್ ॥ ೮೯

ಒದವಿದ ಕೆತ್ತ ಕಂಕಣದ ಪುರ್ವಿನ ಜರ್ವು ಲಯಕ್ಕೆ ಲಕ್ಕ ಲೆ
ಕ್ಕದ ಗತಿ ನಾಟಕಾಭಿನಯಮಾಯ್ತೆನೆ ಗೇಯದೊಳೀಕೆ ಸೊರ್ಕನಿ ।
ಕ್ಕಿದಳೆನೆ ಕಳ್ಗೆ ಚಕ್ಕಣಮೆನಿಪ್ಪುದು ಸಾಗೆನಿಸಲ್ಕೆ ಸಾಲ್ವ ಸ
ಗ್ಗದ ಪೊಸ ದೇಸಿಯೋಳಿಗಳನೊರ್ವಳೊಱಲ್ದು ನೆಱಲ್ದು ಪಾಡಿದಳ್ ॥ ೯೦

ದೇಶೀಯನೃತ್ಯಕ್ಕಿಂತಲೂ ಉತ್ತಮವಾದ ನೃತ್ಯವನ್ನಾಡಿದಳು. ೮೮. ಹದವಾದ ಶಾರೀರವು ಇಂಪಿನಿಂದ ಕೂಡಿಕೊಂಡಿರಲು ಕೊಂಕು ನಯ ಗಮಕಗಳಿಂದ ಸ್ಫುರಣೆಗೊಂಡ ಮಧುರವಾದ ಮಾತು ತಂತಿಎಳೆದ ಹಾಗೆ ಶ್ರುತಿಯಲ್ಲಿ ಸೇರಿಕೊಂಡಿರಲು ಜಾಣತನದಿಂದ ಕೂಡಿ ತಾನೆ ಮೆಚ್ಚಿ ಆಸೆಗೊಂಡು ರಾಗವನ್ನು ಎತ್ತಿಕೊಂಡು ಹಾಗೆ ಸ್ವಲ್ಪವೂ ಆಯಾಸ ಪಡದೆ ಮಧ್ಯಮಸ್ವರದಿಂದ ಹೃದಯಸ್ಪರ್ಶಿಯಾಗಿರಲು ಸರಸ್ವತಿಯೇ ಬಾಯಿತೆರೆದ ಹಾಗೆ ಮೇನಕೆಯು ಹಾಡಿದಳು. ೮೯. ಸೊಂಟವು ನಡುಗುತ್ತಿರಲು ಹುಬ್ಬುಗಳು ಅದುರುತ್ತಿರಲು ಮುಂಗುರುಳು ಅಲುಗಾಡುತ್ತಿರಲು ಬಾಯಿಸೌಂದರ್ಯದಿಂದ ಕೂಡಿ ತವಕಪಟ್ಟು ಹಿಡಿದುಕೊಳ್ಳುವುದಕ್ಕೆ ಓಡಿಬಂದಿತು. ಹಾಡಿದ ಈ ನೆಪದಿಂದ ಇವಳು ರತಿಪ್ರೇಮವನ್ನು ಪ್ರತಿಬಿಂಬಿಸುತ್ತಿದ್ದಾಳೆಯೋ ಎನ್ನುವ ಹಾಗೆ ಧ್ವನಿಯ ಮಾಧುರ್ಯವು ವೀಣೆಯನ್ನು ಮೀಟಿದ ಹಾಗೆ ಹೊಂದಿಕೊಂಡಿರಲು ಮೇನಕೆಯು ಮುಂದೆ ಬಂದು ಹಾಡಿದಳು. ೯೦. ಉಂಟಾದ ಬಳೆಗಳ ಚಲನೆಯೂ ಹುಬ್ಬಿನ ಅಲುಗಾಟವೂ ತಾಳದ ಲಯಕ್ಕನುಗುಣವಾಗಿ ಲಕ್ಷಸಂಖ್ಯೆಯ ಗತಿಯನ್ನುಳ್ಳ ನಾಟಕಾಭಿನಯವಾಯಿತೆನ್ನುವ ಹಾಗೆ ಹಾಡುಗಾರಿಕೆಯಲ್ಲಿ ಈಕೆ ಸೊಕ್ಕನ್ನುಂಟುಮಾಡಿದಳು (ಕಿಣ್ವವನ್ನಿಕ್ಕಿದಳು - ಮದ್ಯಪಾನ ಮಾಡುವುದರಿಂದುಂಟಾಗುವ ಮೈಮರೆಯುವಿಕೆ). ಇವಳ ಗೀತವು ಮದ್ಯಕ್ಕೆ ಚಾಕಣವನ್ನು ಬೆರಸಿದ ಹಾಗಿದೆ. ಹಾಗೆನಿಸಿಕೊಳ್ಳಲೂ ಸಾಕು ಎನ್ನಿಸಿಕೊಳ್ಳುವ ಸ್ವರ್ಗದ ಹೊಸದೇಸಿರಾಗಗಳ ಸಮೂಹವನ್ನು ಒಬ್ಬಳು ಅಪ್ಸರಸ್ತ್ರೀ ಪ್ರೀತಿಯಿಂದ ಸ್ಥಿರವಾಗಿ

ಉ॥ ಆಡದ ಮೆಯ್ಗಳಿಲ್ಲ ನಿಡುಮೆಯ್ಗಳುಮಾಡಿದುವಂತೆ ಮೆಟ್ಟುವಳ್
ನೋಡಿದರೆಲ್ಲರಂ ಪಿಡಿದು ಮೆಟ್ಟಿದಳಿಟ್ಟಳಮಾಯ್ತು ದೇಸಿ ಕೆ ।
ಯ್ಗೂಡಿದುದಿಲ್ಲ ಮಾರ್ಗಮೆನೆ ವಿಸ್ಮಯಮಾಗಿರೆ ತನ್ನ ಮುಂದೆ ಬಂ
ದಾಡಿದಳಾ ತಿಳೋತ್ತಮೆಯನೊಲ್ದನುಮಿಲ್ಲ ನರೇಂದ್ರತಾಪಸಂ ॥ ೯೧

ವ॥ ಅಂತಾಕೆಗಳೆಡೆಯಾಡಿಯುಂ ಮನಂಗೊಳೆ ಪಾಡಿಯುಂ ಮನುಜಮಾಂಧಾತನಂ ಸೋಲಿಸಲಾಱದೆ ಸಹಜಮನೋಜನ ರೂಪಿಂಗಂ ಸುರತಮಕರಧ್ವಜನ ಸೌಂದರ್ಯಕ್ಕಂ ಗಂಧೇಭವಿದ್ಯಾಧರನ ಗಂಡಗಾಡಿಗಂ ತಾಮೆ ಸೋಲ್ತೆಯ್ದೆ ವಂದು–

ಕಂ॥ ಬೂದಿ ಜೆಡೆ ಲಕ್ಕಣಂ ತಪ
ಕಾದುವೆರಟಿಗ್ಗೊಣೆ ಶರಾಸನಂ ಕವಚಮಿವೆಂ ।
ತಾದುವೊ ಮುತ್ತುಂ ಮೆಣಸುಂ
ಕೋದಂತುಟೆ ನಿನ್ನ ತಪದ ಪಾಂಗೆಂತು ಗಡಾ ॥ ೯೨

ಚಂ॥ ಕಡು ತಪದಿಂದೆ ನಿನ್ನ ಪಡೆಪಾವುದೊ ಗಾವಿಲ ಸಗ್ಗಮಲ್ತೆ ಪೋ
ನುಡಿಯವೊ ಮೂರ್ಖ ಸಗ್ಗದ ಫಲಂ ಸುಖಮಲ್ತೆ ಸುಖಕ್ಕೆ ಪೇೞಿಡಂ ।
ಬಡದವರಾರೊ ಪೆಂಡಿರೊಳಗಾರ್ ಪೆಱರಾಮೆ ದಲಾಮೆ ಬಂದು ಕಾ
ಲ್ವಿಡಿದಪೆವಿಂಬುಕೆಯ್ವೊಡಿವು ಮೆಲ್ಲಡಿಗಳ್ ಗಡ ಕರ್ಚು ಬೂದಿಯಂ ॥೯೩

ಹಾಡಿದಳು.* ೯೧. ಶರೀರದ ಯಾವ ಭಾಗವೂ ಚಲಿಸದಿರಲಿಲ್ಲ; ದೀರ್ಘವಾದ ಶರೀರವೂ ಹಾಗೆ ಪೂರ್ಣವಾಗಿ ಚಲಿಸಿತು. ಅವಳು ಪ್ರೇಕ್ಷಕರೆಲ್ಲರನ್ನು ಹಿಡಿದು ಮೆಟ್ಟಿದಳು; ಮಾರ್ಗಮಿಶ್ರವಿಲ್ಲದ ಇವಳ ದೇಶೀಯತೆ ಬಹು ರಮಣೀಯವಾಯಿತು; ಆದರೂ ಯಾರಿಗೂ ಅವಳು ಅಧೀನಳಾಗಲಿಲ್ಲ ಎಂದು ಆಶ್ಚರ್ಯವಾಗುವ ಹಾಗೆ ತನ್ನ ಮುಂದೆ ನಾಟ್ಯವಾಡಿದ ತಿಲೋತ್ತಮೆಯನ್ನೂ ರಾಜತಾಪಸನಾದ ಅರ್ಜುನನು ಮೋಹಿಸಲಿಲ್ಲ. ವ॥ ಹಾಗೆ ಆ ಅಪ್ಸರಸ್ತ್ರೀಯರು ಸಮೀಪದಲ್ಲಿಯೇ ಓಡಿಯಾಡಿಯೂ ಮನೋಹರವಾಗಿರುವ ಹಾಗೆ ಹಾಡಿಯೂ ಮನುಜಮಾಂಧಾತನಾದ ಅರ್ಜುನನನ್ನು ಸೋಲಿಸಲು ಅಶಕ್ತರಾಗಿ ಸಹಜಮನ್ಮಥನಾದ ಅರ್ಜುನನ ರೂಪಕ್ಕೂ ಸುರತ ಮಕರ ಧ್ವಜನಾದ ಅವನ ಸೌಂದರ್ಯಕ್ಕೂ ಗಂಧೇಭವಿದ್ಯಾಧರನ ಪೌರುಷದ ಸೊಬಗಿಗೂ ತಾವೇ ಸೋತು ಅವನ ಸಮೀಪಕ್ಕೆ ಬಂದು ಅವನನ್ನೇ ಪ್ರಶ್ನಿಸಿದರು. ೯೨. ವಿಭೂತಿ ಮತ್ತು ಜಡೆಯ ಲಕ್ಷಣಗಳು ತಪಸ್ಸಿಗೆ ಹೊಂದಿಕೊಳ್ಳುತ್ತವೆ. ಆದರೆ ಎರಡು ಬತ್ತಳಿಕೆ ಬಿಲ್ಲು ಕವಚ ಇವು ಹೇಗೆ ಹೊಂದಿಕೊಳ್ಳುತ್ತವೆ? ಮುತ್ತನ್ನೂ ಮೆಣಸನ್ನೂ ಕೋದಂತಿರುವ ಈ ನಿನ್ನ ತಪಸ್ಸಿನ ರೀತಿ ಅದೆಂತಹುದು? ೯೩. ಎಲೋ ದಡ್ಡ, ತೀವ್ರವಾದ ತಪಸ್ಸಿನಿಂದ ನೀನು ಪಡೆಯಬೇಕಾದ ವಸ್ತು ತಾನೆ ಏನು? ಸ್ವರ್ಗವಲ್ಲವೇ, ಹೋಗು ಮೂರ್ಖ, ಮಾತನಾಡಬೇಡ. ಸ್ವರ್ಗದ ಫಲವೂ ಸುಖವೇ ಅಲ್ಲವೇ?

---

*ಇಲ್ಲಿಯ ಸೊರ್ಕು, ಚಕ್ಕಣ, ಸಾಗು ಎನ್ನುವ ಪದಗಳಿಗೆ ಸರಿಯಾದ ಅರ್ಥವಾಗಿಲ್ಲ. ಮದ್ಯಪಾನಮಾಡುವುದರಿಂದುಂಟಾಗುವ ಮೈಮುರಿಯುವಿಕೆ, ಅಮಲೇರುವುದು ಎಂದು ಅರ್ಥವಾಗಬಹುದು.

ಕಂ॥ ಕೋಕಿಳಕುಳಕಳ ಗಳನಿನ
ದಾಕುಳರವಮಿಂಪನಾಗಳುಂ ಪಡೆದುದು ನೋ ।
ಡೀಕೆಗಳ ಚಳಿತ ಲುಳಿತ
ಭ್ರೂಕುಟಿಯೇ ಪರಮ ಸುಖದ ಕೋಟಿಯನೀಗುಂ ॥ ೯೪

ವ॥ ಎಂದೆನಿತಾನುಂ ತೆಱದೊಳಟೆಪಿನ ಲಲ್ಲೆಯ ಚೆಲ್ಲದ ಪುರುಡಿನ ಮುಳಿಸಿನ ನೆವದ ಪಡೆಮಾತುಗಳಂ ನುಡಿದುಂ ಕಾಲ್ವಿಡಿದುಮಚಳಿತಧೈರ್ಯನ ಮನಮಂ ಚಳಿಯಿಸಲಾಱದಚ್ಚರಸೆಯರಚ್ಚಗಂಗೊಂಡಂತಾಗೆಯುಂ ಗಂಧರ್ವರ್ ಗರ್ವಮನುಟಿದು ಪೋಗೆಯುಂ ಕಾಮದೇವನೇವಮಂ ಕೆಯ್ಕೊಂಡು ಸೀಂತಂತೆ ಮೊಗಮಾಡಿ ಪೋಗಿ ದೇವೇಂದ್ರನ ಮೊಗಮಂ ನೋಡಲ್ ನಾಣ್ಚಿರ್ದನಾಗಳಿಂದ್ರಂ ನರೇಂದ್ರತಾಪಸನ ಧೈರ್ಯಕ್ಕೆ ಮೆಚ್ಚಿ ಧರಾಮರವೇಷದೊಳಿಂದ್ರಕೀಲನಗೇಂದ್ರಮನೆಯ್ದೆವಂದು–

ಮ॥ ಸ್ರ॥ ಕಣಿಯಂ ಶೌರ್ಯಾಭಿಮಾನಕ್ಕೆಡಱಿದ ರಿಪುಸೈನ್ಯಕ್ಕೆ ಸಂಗ್ರಾಮದೊಳ್ ಬ
ಲ್ಕಣಿಯಂ ಕಲ್ಹಾರ ಸಾರಾಮೃತ ಶಶಿ ವಿಶದಾತ್ಮೀಯವಂಶಕ್ಕೆ ಚೂಡಾ ।
ಮಣಿಯಂ ತೀವ್ರ ಪ್ರತಾಪ ದ್ಯುಮಣಿಯನೆರೆದರ್ಥಿವ್ರಜಂಗಳ್ಗೆ ಚಿಂತಾ
ಮಣಿಯಂ ಸಾಮಂತಚೂಡಾಮಣಿಯನಣಿಯರಂ ಬಂದು ಕಂಡಂ
ಸುರೇಂದ್ರಂ ॥ ೯೫

ಸುಖಕ್ಕೆ ಒಪ್ಪದವರಾರಿದ್ದಾರೆ, ಸ್ತ್ರೀಯರಲ್ಲಿ ನಮಗಿಂತ ಸೌಂದರ್ಯವತಿಯರಾದವರಾರು? ನಾವೇ ಅಲ್ಲವೇ (ಪರಮ ಸೌಂದರ್ಯವತಿಯರಾದವರು) ನಾವೇ ಬಂದು ನಿನ್ನ ಕಾಲನ್ನು ಹಿಡಿಯುತ್ತಿದ್ದೇವೆ. ಈ ಮೃದುವಾದ ನಿನ್ನ ಕಾಲುಗಳು ನಾವು ಆಶ್ರಯಿಸುವುದಕ್ಕೆ ಯೋಗ್ಯವಾದುವಲ್ಲವೇ? ಬೂದಿಯನ್ನು ತೊಳೆದುಕೊ. ೯೪. ಇಗೋ ಕೋಗಿಲೆಗಳ ಸಮೂಹದ ಕಂಠಧ್ವನಿ ಯಾವಾಗಲೂ ಮಾಧುರ್ಯವನ್ನು ಪಡೆದಿದೆ. ನೋಡು ಈ ಅಪ್ಸರೆಯರ ಚಲಿಸುತ್ತಿರುವ ವಕ್ರವಾದ ಹುಬ್ಬುಗಳ ತುದಿಗಳೇ ಸುಖದ ಪರಮಾವಧಿಯನ್ನುಂಟುಮಾಡುತ್ತವೆ. ವ॥ ಎಂಬುದಾಗಿ ಎಷ್ಟೋ ರೀತಿಯ ಪ್ರೇಮದ, ಮುದ್ದಿನ, ಚೆಲ್ಲಾಟದ, ಹುರುಡಿನ, ಕೋಪದ, ನೆಪದ ಪ್ರತಿಮಾತುಗಳನ್ನು ಆಡಿಯೂ ಕಾಲು ಹಿಡಿದೂ ಸ್ಥಿರಚಿತ್ತನಾದ ಅರ್ಜುನನ ಮನಸ್ಸನ್ನು ಕದಲಿಸಲಸಮರ್ಥರಾದರು. ಅಪ್ಸರಸ್ತ್ರೀಯರು ವ್ಯಸನಗೊಂಡವರಂತೆ ಅಸಮಾಧಾನವನ್ನು ಹೊಂದಿದರು. ಗಂಧರ್ವರು ತಮ್ಮ ಅಹಂಕಾರವನ್ನು ತೊರೆದರು. ಮನ್ಮಥನು ಅವಮಾನವನ್ನು ಹೊಂದಿ ಸೀಂತ ಹಾಗೆ ಮುಖವನ್ನು ಮಾಡಿಕೊಂಡು ಹೋಗಿ ದೇವೇಂದ್ರನ ಮುಖವನ್ನು ನೋಡಲು ನಾಚಿಕೆಗೊಂಡನು. ಆಗ ಇಂದ್ರನು ರಾಜತಾಪಸನಾದ ಅರ್ಜುನನ ಧೈರ್ಯಕ್ಕೆ ಮೆಚ್ಚಿ ಬ್ರಾಹ್ಮಣವೇಷದಲ್ಲಿ ತಾನೇ ಇಂದ್ರಕೀಲಪರ್ವತಕ್ಕೆ ಬಂದನು. ೯೫. ಶೌರ್ಯಾಭಿಮಾನಿಗಳಿಗೆ ಗಣಿಯೂ ಯುದ್ಧದಲ್ಲಿ ಪ್ರತಿಭಟಿಸಿದ ಶತ್ರುಸೈನ್ಯಕ್ಕೆ ಬಹು ಶೂರನೂ, ಕಲ್ಹಾರ ಪುಷ್ಪದಂತೆಯೂ ಸಾರವತ್ತಾದ ಅಮೃತದಂತೆಯೂ, ಚಂದ್ರಮಂಡಲದಂತೆಯೂ ಸ್ವಚ್ಛವಾಗಿರುವ ತನ್ನ ವಂಶಕ್ಕೆ ತಲೆಯಾಭರಣವೂ ತೀಕ್ಷ್ಣವಾದ ಪ್ರತಾಪದಲ್ಲಿ ಸೂರ್ಯನೂ ಬೇಡುವ

ಇದು ವಿವಿಧ ವಿಬುಧಜನವಿನುತ ಜಿನಪದಾಂಭೋಜ
ವರಪ್ರಸಾದೋತ್ಪನ್ನಪ್ರಸನ್ನಗಂಭೀರವಚನರಚನ
ಚತುರಕವಿತಾಗುಣಾರ್ಣವ ವಿರಚಿತಮಪ್ಪ
ವಿಕ್ರಮಾರ್ಜುನವಿಜಯದೊಳ್
ಸಪ್ತಮಾಶ್ವಾಸಂ

ಯಾಚಕವರ್ಗಕ್ಕೆ ಚಿಂತಾಮಣಿಯೂ ಸಾಮಂತಚೂಡಾಮಣಿಯೂ ಆದ ಅರ್ಜುನನನ್ನು ಇಂದ್ರನು ಬಂದು ಕಂಡನು.

ಇದು ಅನೇಕ ದೇವತೆಗಳಿಂದ ಸ್ತುತಿಸಲ್ಪಟ್ಟ ಜಿನಪಾದಕಮಲಗಳ ವರಪ್ರಸಾದದಿಂದ ಹುಟ್ಟಿದುದೂ ತಿಳಿಯಾದುದೂ ಆದ ಮಾತುಗಳ ರಚನೆಯಲ್ಲಿ ಚಾತುರ್ಯವನ್ನುಳ್ಳ ಕವಿತಾಗುಣಾರ್ಣವನಿಂದ ರಚಿತವಾದುದೂ ಆದ ವಿಕ್ರಮಾರ್ಜುನ ವಿಜಯದಲ್ಲಿ ಏಳನೆಯ ಆಶ್ವಾಸ.

# ಅಷ್ಟಮಾಶ್ವಾಸಂ

ಕಂ॥ ಶ್ರೀಯಂ ಭುಜಬಳದಿಂ ನಿ
ರ್ದಾಯಾದ್ಯಂ ಮಾಟ್ಪ ಬಗೆಯಿನವಿಕಳನಿಯಮ ।
ಶ್ರೀಯನಳವಡಿಸಿ ನಿಂದ ಧ
ರಾಯುವತೀಶನನುದಾತ್ತನಾರಾಯಣನಂ ॥ ೧

ಕಂಡು ನಿಜತನಯನಳವರ್ದೆ
ಗೊಂಡಿರೆ ಮುದುಪಾರ್ವನಾಗಿ ಮೆಲ್ಲನೆ ಸಾರ್ವಾ ।
ಖಂಡಳನಂ ಕಾಣಲೊಡಂ
ಗಾಂಡಿವಿಗಿರದುರ್ಚೆ ಪಾಯ್ದುವಶ್ರುಜಲಂಗಳ್ ॥ ೨

ವ॥ ಅಂತು ಮನದೊಳಾದ ಮೋಹರಸಮೆ ಕಣ್ಣಿಂ ತುಳುಂಕುವಂತೆ ಪೊಱಪೊಣ್ಮುವ ನಯನಜಲಂಗಳನುತ್ತರೀಯವಲ್ಕಲವಸನೋಪಾಂತದೊಳೊತ್ತುತ್ತುಮತಿಥಿಗತಿಥಿಸತ್ಕಾರಮೆಲ್ಲಮಂ ನೆಱಿಯೆ ಮಾಡಿದಾಗಳಿಂದ್ರಂನರೇಂದ್ರತಾಪಸನನಿಂತೆಂದಂ-

ಕಂ॥ ನೀನಾರ್ಗೆ ನಿನ್ನ ಪೆಸರೇ
ನೀ ನಿಯಮಕ್ಕೆಂತು ಮೆಯ್ಯನೊಡ್ಡಿದೆಯಿದು ದಲ್ ।
ತಾನಾಶ್ಚರ್ಯಮಿದೇನ
ಜ್ಞಾನಿಯವೋಲ್ ತಪಕೆ ಬಿಲ್ಲುಮಂಬುಂ ದೊರೆಯೇ ॥ ೩

ವ॥ ಎನೆ ಸಾಹಸಾಭರಣನಿಂತೆಂದಂ-

ಕಂ॥ ನಿನ್ನೆಂದಂತುಟೆ ಮೋಕ್ಷ
ಕ್ಕೆನ್ನಿರ್ಪಿರವಘಟಮಾನಮೈಹಿಕದ ತೊಡ ।
ರ್ಪೆನ್ನಿರವಿನೊಳುಂಟಜಿಪದೆ
ನಿನ್ನಂ ಪುಸಿಯಾಡಿ ಕಾಡೆನಗೇಂ ದೊರೆಯೇ ॥ ೪

೧. ತನ್ನ ಬಾಹುಬಲದಿಂದ ಜಯಲಕ್ಷ್ಮಿಯನ್ನು ದಾಯಾದಿಗಳಿಲ್ಲದಂತೆ ಮಾಡಬೇಕೆಂಬ ಅಭಿಪ್ರಾಯದಿಂದ ಸ್ವಲ್ಪವೂ ಊನವಿಲ್ಲದ ತಪೋನಿಷ್ಠೆಯೆಂಬ ಲಕ್ಷ್ಮಿಯೊಡನೆ ಕೂಡಿಕೊಂಡು ತಪಸ್ಸುಮಾಡುತ್ತಿದ್ದ ಭೂಪತಿಯೂ ಉದಾತ್ತ ನಾರಾಯಣನೂ ಆದ ಅರ್ಜುನನನ್ನು ಇಂದ್ರನು ಕಂಡನು. ೨. ತನ್ನ ಮಗನ ಪರಾಕ್ರಮವನ್ನು ನೋಡಿ ಎದೆಯು ಸೂರೆಗೊಂಡಿತು. ಮುದಿಬ್ರಾಹ್ಮಣನ ವೇಷದಲ್ಲಿ ಬರುತ್ತಿದ್ದ ಇಂದ್ರನನ್ನು ನೋಡಿ ಅರ್ಜುನನಿಗೆ ಕಣ್ಣೀರು ಥಟ್ಟನೆ ಚಿಮ್ಮಿತು. ವ॥ ಹಾಗೆ ಮನಸ್ಸಿನಲ್ಲುಂಟಾದ ಮೋಹರಸವೇ ಕಣ್ಣಿನಿಂದ ತುಳುಕುವಂತೆ ಹೊರಹೊರಡುವ ಕಣ್ಣೀರನ್ನು ಮೇಲೆ ಹೊದೆದಿದ್ದ ನಾರುಮಡಿಯ ಅಂಚಿನಿಂದ ಒರೆಸಿಕೊಳ್ಳುತ್ತ ಅತಿಥಿಯಾದ ಇಂದ್ರನಿಗೆ ಅತಿಥಿಸತ್ಕಾರವೆಲ್ಲವನ್ನೂ ಮಾಡಿದಾಗ ಇಂದ್ರನು ರಾಜತಪಸ್ವಿಯಾದ ಅರ್ಜುನನನ್ನು ಕುರಿತು ಪ್ರಶ್ನೆಮಾಡಿದನು.- ೩. ನೀನಾರವನು? ನಿನ್ನ ಹೆಸರೇನು? ಈ ನಿಯಮಕ್ಕೆ ಶರೀರವನ್ನು ಏಕೆ ಅಧೀನಗೊಳಿಸಿದೆ. ಇದು ನಿಜವಾಗಿಯೂ ಆಶ್ಚರ್ಯ. ಅಜ್ಞಾನಿಯ ಹಾಗೆ ಇದೇನು ತಪಸ್ಸಿಗೆ ಯೋಗ್ಯವಲ್ಲದ ಬಿಲ್ಲು ಬಾಣಗಳನ್ನು ತೊಟ್ಟಿದ್ದೀಯಲ್ಲ. ವ॥ ಎನ್ನಲು ಸಾಹಸಾಭರಣನಾದ ಅರ್ಜುನನು ಹೀಗೆಂದನು. ೪. ನೀನು ಹೇಳಿದ ಹಾಗೆಯೇ

ಮ॥ ನಿನಗಂ ಪೇೞ್ವೊಡೆ ಪಾಂಡುರಾಜತನಯಂ ಗಾಂಡೀವಿಯೆಂ ದಾಯಿಗಂ
ಗೆ ನೆಲಂ ಜೂದಿನೊಳೊತ್ತೆವೋಗೆ ಬನಮಂ ಪೊಕ್ಕಣ್ಣನೆಂದೊಂದು ಮಾ ।
ತನಣಂ ಮೀಱದೆ ನಿಂದು ಶಂಕರನ ನೀನಾರಾಧಿಸೆಂದಿಂತಿದಂ
ಮುನಿ ಪಾರಾಶರನೊಲ್ದು ಪೇೞೆ ಹರ ಬರ್ಪನ್ನಂ ತಪಂಗೆಯ್ವೆಂ ॥ ೫

ವ॥ ಅಂತುಮಲ್ಲದೆ-

ಚಂ॥ ಸ್ಫುರಿತ ತಪೋಮಯಾನಳನಿನೀಯೊಡಲಂ ನೆಗೞ್ದೀ ಗಿರೀಂದ್ರ ಕಂ
ದರದೊಳಗಿಂತೆ ದಲ್ ಕರಗಿಪೆಂ ಪೆಱತೇಂ ಪಡೆಮಾತೊ ಮೇಣ್ ಪುರಂ ।
ದರನೊಸೆದಿತ್ತುದೊಂದು ಬರದಿಂದುಱದೆನ್ನ ವಿರೋಧಿವರ್ಗಮಂ
ಕರಗಿಪೆನಲ್ಲದಿಲ್ಲಿ ಸೆರಗಂ ಬೆರಗಂ ಬಗೆಯೆಂ ದ್ವಿಜೋತ್ತಮಾ ॥ ೬

ಎನೆಯೆನೆ ರತ್ನ ರಶ್ಮಿ ಜಟಿಳಂ ಮಕುಟಂ ಮಣಿಕುಂಡಳಂ ಕನ
ತ್ಕನಕ ಪಿಶಂಗ ದೇಹರುಚಿ ನೀಳಸರೋಜವನಂಗಳಾಗಳು ।
ಳ್ಳನಿತುಮರಲ್ವವೋಲ್ ಪೊಳೆವ ಕಣ್ಗಳುಮಲ್ಕಱನೀಯೆ ವಿಕ್ರಮಾ
ರ್ಜುನನ ಮನಕ್ಕೆ ತೋಱಿದನಿಳಾಮರನಂದಮರೇಂದ್ರರೂಪಮಂ ॥ ೭

ವ॥ ಅಂತು ತನ್ನ ಸಹಜರೂಪಮಂ ತೋಱಿ ಮನದಟ್ಕಱಂ ತೋಱಲೆಂದು ಮಗನನಪ್ಪಿಕೊಂಡು-

ನನ್ನ ಸ್ಥಿತಿ ಮೋಕ್ಷಸಾಧನೆಗೆ ಹೊಂದಿಕೊಳ್ಳತಕ್ಕುದಲ್ಲ; ಇದು ಇಹಲೋಕದ ಬಂಧನಕ್ಕೊಳಗಾದುದು. ಅದನ್ನು ಹೇಳದೆ ಸುಳ್ಳು ಹೇಳಿ ನಿಮ್ಮನ್ನು ಕಾಡುವುದು ನನಗೆ ಯೋಗ್ಯವಲ್ಲ. ೫. ನಿನಗೆ ಹೇಳುವುದಾದರೆ ನಾನು ಪಾಂಡುರಾಜನ ಮಗ, ಗಾಂಡೀವಿಯಾಗಿದ್ದೇನೆ. ರಾಜ್ಯವು ಜೂಜಿನಲ್ಲಿ ದಾಯಾದಿಯಾದ ದುರ್ಯೋಧನನಿಗೆ ಒತ್ತೆಯಾಗಿ ಹೋಗಲು ಅಣ್ಣನ ಮಾತನ್ನು ಸ್ವಲ್ಪವೂ ಮೀರದೆ ಅರಣ್ಯಪ್ರವೇಶಮಾಡಿ ಸ್ಥಿರವಾಗಿ ನಿಂತೆವು. ಶಂಕರನನ್ನು ಆರಾಧಿಸು ಎಂದು ವ್ಯಾಸಮಹರ್ಷಿಯು ಪ್ರೀತಿಯಿಂದ ಹೇಳಲಾಗಿ (ಅದರ ಪ್ರಕಾರ) ಈಶ್ವರನು ಪ್ರತ್ಯಕ್ಷವಾಗುವವರೆಗೆ ತಪಸ್ಸನ್ನು ಮಾಡುತ್ತೇನೆ. ವ॥ ಹಾಗಲ್ಲದೆ - ೬. ಎಲೈ ಬ್ರಾಹ್ಮಣಶ್ರೇಷ್ಠನೇ ಪ್ರಕಾಶಮಾನವಾದ ತಪಸ್ಸೆಂಬ ಬೆಂಕಿಯಿಂದ ಈ ನನ್ನ ಶರೀರವನ್ನು ಪ್ರಸಿದ್ಧವಾದ ಈ ಕಣಿವೆಯಲ್ಲಿ ಹೀಗೆಯೇ ಕರಗಿಸುತ್ತೇನೆ ನನಗೆ ಬೇರೆ ಮಾತೇ ಇಲ್ಲ. ಮತ್ತು ಆ ಶಿವನು ಪ್ರೀತಿಯಿಂದ ಕೊಡುವ ಒಂದು ವರದಿಂದ ಸಾವಕಾಶ ಮಾಡದೆ ನನ್ನ ಶತ್ರುಸಮೂಹವನ್ನು ಕರಗಿಸುತ್ತೇನೆ: ಹಾಗಲ್ಲದೆ ಇಲ್ಲಿ ನಾನು ಅಪಾಯ ಉಪಾಯಗಳಾವುದನ್ನೂ ಯೋಚನೆಮಾಡುವುದಿಲ್ಲ. ೭. ಎನ್ನುತ್ತಿರುವಾಗಲೇ ರತ್ನಗಳ ಕಾಂತಿಯು ಹೆಣೆದಿರುವ ಕಿರೀಟವೂ ರತ್ನಖಚಿತವಾದ ಕಿವಿಯಾಭರಣವೂ ಹೊಳೆಯುವ ಚಿನ್ನದಂತೆ ಕೆಂಪುಮಿಶ್ರವಾದ ಹೊಂಬಣ್ಣದ ದೇಹಕಾಂತಿಯೂ ಕನ್ನೈದಿಲೆಯ ವನಗಳನ್ನು ಪೂರ್ಣವಾಗಿ ಅರಳುವ ಹಾಗೆ ಮಾಡುವ ಸಾವಿರ ಕಣ್ಣುಗಳೂ ವಿಕ್ರಮಾರ್ಜುನನ ಮನಸ್ಸಿಗೆ ಪ್ರೀತಿಯನ್ನುಂಟುಮಾಡುತ್ತಿರಲು ಆ ಬ್ರಾಹ್ಮಣನ ವೇಷದಲ್ಲಿದ್ದ ಇಂದ್ರನು ತನ್ನ ನಿಜಸ್ವರೂಪವನ್ನು ತೋರಿಸಿದನು. ವ॥ ಹಾಗೆ ತನ್ನ ಸ್ವಭಾವಸಿದ್ಧವಾದ ಆಕಾರವನ್ನು ತೋರಿಸಿ ಮನಸ್ಸಿನ ಪ್ರೀತಿಯನ್ನು

ಕಂ॥ ಸಾಧಿಸುವೊಡಮರಿನೃಪರಂ
ಸಾಧಿಸುವೊಡಮಸ್ತ್ರಚಯಮನಿನ್ನುಂ ತನುವಂ ।
ಬಾಧಿಸು ತಪೋಗ್ನಿಯಿಂದಾ
ರಾಧಿಸು ನೀಂ ಮಗನೆ ದುರಿತಹರನಂ ಹರನಂ ॥ ೮

ಎಂದು ತಿರೋಹಿತನಾಗಿ ಪು
ರಂದರನುಂ ಪೋದನಿತ್ತ ತಪದೊಳ್ ನರನಿಂ ।
ತೊಂದಿ ನಿಲೆ ತಪದ ಬಿಸುಪಿಂ
ಬೆಂದಟೆಮುದು ವನದೊಳುಳ್ಳ ತಪಸಿಯರ ತಪಂ ॥ ೯

ಖರಕರಕಿರಣಾವಳಿಯಂ
ಪರಿದೆಬ್ಬಿಟ್ಟದುವು ಪಗಲಿರುಳ್ ಶಶಿರುಚಿಯಂ ।
ಪರಿಭವಿಸಿ ನಭಮನಡರ್ದುವು
ನರೇಂದ್ರತಾಪಸತಪೋಮಯೂಖಾವಳಿಗಳ್ ॥ ೧೦

ವ॥ ಅಂತುಗ್ರೋಗ್ರತಪಂಗೆಯ್ಯೆ ತತ್ತಪತ್ತಪನವಿಪುಳಮರೀಚಿಗಳ್ ತಮಗೆ ತಪವಿಘಾತಮಂ ಮಾಡುವುದುಮಿಂದ್ರಕೀಲನಗೇಂದ್ರದ ತಪೋಧನರೆಲ್ಲಂ ನೆರೆದು ಬಂದು ಕೈಲಾಸದೊಳ್ ವಿಳಾಸಂಬೆರಸು ಗಿರಿಜೆಯೊಳ್ ತಳ್ತಿರ್ದ ಬಾಳೇಂದುಚೂಡಾಮಣಿಗೆ ಸಾಮಂತಚೂಡಾಮಣಿಯ ತಪಃಪ್ರಭಾವಮನಿಂತೆಂದು ಬಿನ್ನಪಂಗೆಯ್ದರ್-

ಮಲ್ಲಿಕಾಮಾಲೆ ॥ ಆವನೆಂದಜೆಯಲ್ಕೆ ಬಾರದಪೂರ್ವನೊರ್ವನರಾತಿವಿ
ದ್ರಾವಣಂ ತಪಕೆಂದು ನಿಂತೊಡೆ ತತ್ತಪೋಮಯಪಾವಕಂ ।
ದಾವಪಾವಕನಂತೆವೋಲ್ ಸುಡೆ ಬೆಂದುವೆಮ್ಮ ತಪಂಗಳಿ
ನ್ನಾವ ಶೈಳದೊಳಿರ್ಪೆವಿರ್ಪೆಡೆವೇಟ ನೀಂ ತ್ರಿಪುರಾಂತಕಾ ॥ ೧೧

ತೋರಬೇಕೆಂದು ಮಗನನ್ನು ತಬ್ಬಿಕೊಂಡು ೮. ಮಗನೇ ನೀನು ಶತ್ರುರಾಜರನ್ನು ಗೆಲ್ಲುವುದಕ್ಕಾಗಿ ಬಾಣ(ಅಸ್ತ್ರ)ಸಮೂಹವನ್ನು ಪಡೆಯಬೇಕಾದ ಪಕ್ಷದಲ್ಲಿ ತಪೋಗ್ನಿಯಿಂದ ನಿನ್ನ ಶರೀರವನ್ನು ಇನ್ನೂ ದಂಡಿಸು. ಪಾಪವನ್ನು ಹೋಗಲಾಡಿಸುವ ಶಿವನನ್ನು ನೀನು ಆರಾಧನೆ ಮಾಡು. ೯. ಎಂಬುದಾಗಿ ಹೇಳಿ ಇಂದ್ರನು ಅದೃಶ್ಯನಾದನು. ಈ ಕಡೆ ಅರ್ಜುನನು ತಪಸ್ಸಿನಲ್ಲಿ ನಿರತನಾದನು. ತಪಸ್ಸಿನ ಬೆಂಕಿಯಿಂದ ಆ ಕಾಡಿನಲ್ಲಿದ್ದ ತಪಸ್ವಿಗಳ ತಪಸ್ಸೆಲ್ಲವೂ ಸುಟ್ಟು ನಾಶವಾದುವು. ೧೦. ರಾಜತಪಸ್ವಿಯಾದ ಅರ್ಜುನನ ತಪಸ್ಸಿನ ಕಿರಣಸಮೂಹಗಳು ಹಗಲಿನಲ್ಲಿ ಸೂರ್ಯಕಿರಣಗಳ ಸಮೂಹವನ್ನು ಹಿಮ್ಮೆಟ್ಟಿ ಎಬ್ಬಿಸಿ ಓಡಿಸಿದುವು. ರಾತ್ರಿಯಲ್ಲಿ ಚಂದ್ರನ ಕಾಂತಿಯನ್ನು ಹಿಯ್ಯಾಳಿಸಿ ಆಕಾಶಕ್ಕೇರಿದುವು. ವ॥ ಹಾಗೆ ಅತ್ಯುಗ್ರವಾದ ತಪಸ್ಸನ್ನು ಮಾಡಲು ಆ ತಪೋಗ್ನಿಯ ವಿಶೇಷ ಕಿರಣಗಳು ತಮ್ಮ ತಪಸ್ಸಿಗೆ ಹಾನಿಯುನ್ನುಂಟುಮಾಡಲು ಇಂದ್ರಕೀಲಪರ್ವತದಲ್ಲಿದ್ದ ತಪೋಧನರೆಲ್ಲರೂ ಒಟ್ಟುಗೂಡಿ ಬಂದು ಕೈಲಾಸಪರ್ವತದಲ್ಲಿ ವಿಳಾಸದಿಂದ ಕೂಡಿ ಪಾರ್ವತಿಯೊಡನಿದ್ದ ಶಿವನಿಗೆ ಸಾಮಂತಚೂಡಾಮಣಿಯ ತಪಸ್ಸಿನ ಪ್ರಭಾವವನ್ನು ಹೀಗೆಂದು ವಿಜ್ಞಾಪನೆಮಾಡಿದರು. ೧೧. ಯಾರೆಂದು ತಿಳಿಯಲಾಗುವುದಿಲ್ಲ. ಹಿಂದೆಂದೂ

ಕಂ॥ ಆರೋಪಿತಚಾಪಂ ಸಂ
ಧಾರಿತಕವಚಂ ಧೃತೋಗ್ರಶರಧಿಯುಗಂ ತಾ ।
ನಾರಂದಮಲ್ಲವಂ ತ್ರಿಪು
ರಾರೀ ಕೇಳ್ ತ್ರಿಪುರಮಿಸುವ ನಿನ್ನನೆ ಪೋಲ್ವಂ ॥ ೧೨

ವ॥ ಎಂಬುದುಮದೆಲ್ಲಮಂ ಕೇಳ್ದಾತನಾವನೆಂಬುದನಱಿಯಲೆಂದು-

ಕಂ॥ ಧ್ಯಾನದೊಳಭವಂ ನೆಱೆದಿನಿ
ಸಾನುಮನರೆ ಮುಚ್ಚಿ ಕಣ್ಗಳಂ ನಿಶ್ಚಳಿತಂ ।
ತಾನಿರ್ದು ಮಱೆದು ಕಿಂದಿದ
ಮೀನಂ ತಳ್ದಾಡದಿರ್ದ ಮಡುವಂ ಪೋಲ್ತಂ ॥ ೧೩

ವ॥ ಅಂತು ಪೋಲ್ತು ದಿವ್ಯಜ್ಞಾನದೊಳ್ ಮಹೇಶ್ವರನುದಾರಮಹೇಶ್ವರನಪ್ಪುದನಱಿದು ಬೆರಲಂ ಮಿಡಿದು ಮುಗುಳ್ನಗೆ ನಕ್ಕು ನೆನೆದಾತಂಗೆ ತಕ್ಕುದನಾನೆ ಬಲ್ಲೆನೆಂದು ಮುನೀಂದ್ರ ವೃಂದಮಂ ಪೋಗಲ್ವೇೞ್ದು ಮುನ್ನ ದೇವೇಂದ್ರಂ ತನಗೆ ಮೂಕದಾನವನ ಪುಯ್ಯಲಂ ಬಿನ್ನಪಂಗೆಯ್ದುದನವಧಾರಿಸಿ ಮೂಕದಾನವನಾದಿವರಾಹರೂಪದೊಳಿರ್ದುದುಮನಱಿದು ಮನುಜ ಮಾಂಧಾತನಿಂದಮಾ ದೈತ್ಯನಂ ಕೊಲಿಸಲುಂ ಸಾಹಸಾಭರಣನೊಳೇನಾನುಮೊಡಂಬಡಂ ಮಾಡಿ ಮಾಯಾಯುದ್ಧದೊಳಾತನ ಸಾಹಸದ ಬಲದ ಬಲ್ಲಾಳ್ತನದಳವಿಗಳನಳೆದು ನೋಡಿ ವರದನಪ್ಪೆನೆಂಬುದುಮಂ ಬಗೆದು-

ಕಾಣದಿರುವ ಶತ್ರುಸಂಹಾರಕನಾದ ಅವನು ತಪಸ್ಸಿಗೆಂದು ನಿಲ್ಲಲು ಅವನ ತಪಸ್ಸಿನಿಂದುಂಟಾದ ಬೆಂಕಿಯಿಂದ ಬೆಂಕಿಯು ಕಾಡಕಿಚ್ಚನ್ನು ಸುಡುವ ಹಾಗೆ ನಮ್ಮ ತಪಸ್ಸುಗಳೆಲ್ಲ ಬೆಂದು ಹೋದುವು. ಬೇರೆ ಯಾವ ಪರ್ವತದಲ್ಲಿರೋಣ, ನಾವು ಇರಬೇಕಾದ ಸ್ಥಳವನ್ನು ಶಿವನೇ ನೀನು ಹೇಳು. ೧೨. ಹೆದೆಯೇರಿಸಿದ ಬಿಲ್ಲು, ತೊಟ್ಟ ಕವಚ, ಬೆನ್ನಲ್ಲಿ ಧರಿಸಿರುವ ಭಯಂಕರವಾದ ಎರಡು ಬತ್ತಳಿಕೆಗಳು. ಇವನ್ನುಳ್ಳ ಅವನು ಬೇರೆಯಾದ ರೀತಿಯವನೂ ಅಲ್ಲ. ಪರಶಿವನೇ, ತ್ರಿಪುರಾಸುರಸಂಹಾರಕ್ಕೆ ಬಾಣಸಂಧಾನ ಮಾಡಿದ ನಿನ್ನನ್ನೇ ಹೋಲುತ್ತಾನೆ ಎಂದರು. ವ॥ ಅದೆಲ್ಲವನ್ನೂ ಕೇಳಿ ಅವನು ಯಾರೆಂಬುದನ್ನು ತಿಳಿಯಬೇಕೆಂದು ೧೩. ಶಿವನು ಧ್ಯಾನಮಗ್ನನಾಗಿ ಕಣ್ಣುಗಳನ್ನು ಅರ್ಧಮುಚ್ಚಿ ನಿಶ್ಚಲಚಿತ್ತನಾಗಿದ್ದು ಮೈಮರೆತು ಮಲಗಿರುವ ಮೀನುಗಳಿಂದ ಕೂಡಿದ ನಿಶ್ಚಲವಾಗಿರುವ ಮಡುವಿಗೆ ಸಮಾನನಾದನು. ವ॥ ಹಾಗೆ ಹೋಲಿ ತನ್ನ ದಿವ್ಯಜ್ಞಾನದಿಂದ ಶಿವನು,ತಪಸ್ಸು ಮಾಡುತ್ತಿದ್ದವನು ಉದಾರಮಹೇಶ್ವರನಾದ ಅರ್ಜುನನಾಗಿರುವುದನ್ನು ತಿಳಿದನು. (ಸಂತೋಷದಿಂದ) ಬೆರಳನ್ನು ಚಿಟಿಕಿಸಿ ಹುಸಿನಗೆ ನಕ್ಕು ಜ್ಞಾಪಿಸಿಕೊಂಡು ಆತನಿಗೆ ಯೋಗ್ಯವಾದುದನ್ನು ಮಾಡುವುದಕ್ಕೆ ನಾನು ಬಲ್ಲೆ, ನೀವು ಹೊರಡಿ ಎಂದು ಋಷಿಶ್ರೇಷ್ಠರ ಸಮೂಹವನ್ನು ಕಳುಹಿಸಿಕೊಟ್ಟನು. ಹಿಂದೆ ದೇವೇಂದ್ರನು ತನಗೆ ಮೂಕದಾನವನಿಂದಾದ ಕೇಡನ್ನು ತನ್ನೊಡನೆ ವಿಜ್ಞಾಪಿಸಿಕೊಂಡುದನ್ನು ಜ್ಞಾಪಿಸಿಕೊಂಡನು. ಆ ಮೂಕದಾನವನು ಆದಿವರಾಹರೂಪದಲ್ಲಿರುವುದನ್ನು ತಿಳಿದು ಅರ್ಜುನನಿಂದ ಆ ದೈತ್ಯನನ್ನು ಕೊಲ್ಲಿಸುತ್ತೇನೆ. ಅರ್ಜುನನೊಡನೆ ಏನಾದರೂ

ಚಂ॥ ವನಚರನಾಗಿ ಶಂಭು ಗಿರಿಜಾತೆಯನೋತು ಪುಳಿಂದಿ ಮಾಡಿ ನ
ಚ್ಚಿನ ಗುಹನ ಕಿರಾತಬಲ ನಾಯಕನಾಗಿರೆ ಮಾಡಿ ಭೂತಮು ।
ಳ್ಳನಿತುಮನೆಯ್ದೆ ಬೇಡವಡೆ ಮಾಡಿ ಯುಗಾಂತ ಪಯೋಧರಾಳಿ ಭೋಂ
ಕೆನೆ ಕವಿವಂದದಿಂ ಕವಿದನಾ ಬನಮಂ ಮೃಗಯಾನಿಧಾನಮಂ ॥ ೧೪

ವ॥ ಅಂತು ಕವಿದೊಡಾ ಕಳಕಳಕ್ಕೇವಯಿಸಿ ವರಾಹರೂಪದ ಮೂಕದಾನವಂ-

ತರಳ॥ ಪೊರಳೆ ವಾರಿಧಿಗಳ್ ಕಲಂಕಿದುವುರ್ದೆ ಮೆಯ್ಯನುದಗ್ರಮಂ
ದರಮದಂದಲುಗಿತ್ತು ಬಾಯ್ಗೆಯೆ ದಿಗ್ಗಜಂ ಪೆಱಗಿಟ್ಟುವಾಂ ।
ತರದೆ ತೊಟ್ಟನೆ ದಾಡೆಗುಟ್ಟೆ ಕಟಲ್ದು ತಾರಗೆಗಳ್ ನಭಂ
ಬೆರಸು ಬಿಱ್ದುವು ಪೆಂಪಿದೇಂ ಪಿರಿದಾಯ್ತೊ ದೈತ್ಯವರಾಹನಾ ॥ ೧೫

ವ॥ ಅಂತಾ ವರಾಹನಾದಿವರಾಹನಾದ ಮುರಾಂತಕನುಮನಿಟೆಸಿ ನೆಲಂ ಕಪ್ಪುಗವಿಯು ಮಾಗೆ ಬರೆ ಪೆಱಗೆ ಕೃತಕ ಕಿರಾತನಟ್ಟುತ್ತುಂ ಬರೆ ತನ್ನತ್ತ ಮೊಗದೆ ಬರ್ಪುದಂ ಕಂಡಮೋಘಾಸ್ತ್ರ ಧನಂಜಯನೊಂದಮೋಘಾಸ್ತ್ರಮನಕ್ಷೂಣಬಾಣಧಿಯಿಂದಮುರ್ಚಿಕೊಂಡು ಗಾಂಡೀವದೊಳ್ ಪೂಡಿ-

ಕೀಟಲೆ ಮಾಡಿ ಮಾಯಾಯುದ್ಧದಲ್ಲಿ ಅವನ ಸಾಹಸದ ಚಲದ ಬಲದ ಬಿಲ್ಲಾಳ್ತನದ ಶಕ್ತಿಯನ್ನೂ ಪರೀಕ್ಷಿಸುತ್ತೇನೆ; ಅನಂತರ ಅವನಿಗೆ ವರದ (ವರವನ್ನು ಕೊಡುವವ) ನಾಗುತ್ತೇನೆ ಎಂದು ನಿಶ್ಚಯಿಸಿದನು. ೧೪. ಈಶ್ವರನು ತಾನು ಬೇಡರವನಾಗಿಯೂ ಪಾರ್ವತಿಯನ್ನು ಪ್ರೀತಿಯಿಂದ ಬೇಡಿತಿಯನ್ನಾಗಿಯೂ ತನ್ನ ನಂಬಿಕೆಗೆ ಪಾತ್ರನಾದ ಷಣ್ಮುಖನನ್ನು ಬೇಡರ ಸೈನ್ಯಕ್ಕೆ ನಾಯಕನನ್ನಾಗಿಯೂ ಮಾಡಿ ತನ್ನಲ್ಲಿರುವಷ್ಟು ಭೂತಗಣವನ್ನು ಬೇಡರ ಪಡೆಯನ್ನಾಗಿಸಿದನು. ಪ್ರಳಯಕಾಲದ ಮೇಘಸಮೂಹವು ಇದ್ದಕ್ಕಿದ್ದಂತೆ ಕವಿಯುವ ಹಾಗೆ ಬೇಟೆಗೆ ಆಧಾರವಾದ ಆ ಕಾಡನ್ನು ಮುತ್ತಿದನು. ವ॥ ಆ ಕೋಲಾಹಲಶಬ್ದಕ್ಕೆ ಅಸಮಾಧಾನಪಟ್ಟು ಹಂದಿಯ ರೂಪದಲ್ಲಿದ್ದ ಆ ಮೂಕದಾನವನು ೧೫. ಹೊರಳಲು ಸಮುದ್ರಗಳು ಕಲಕಿಹೋದವು, ಮೆಯ್ಯನ್ನು ಉಜ್ಜಲು ಎತ್ತರವಾದ ಮಂದರಪರ್ವತವೂ ಅಲುಗಾಡಿತು. ಶಬ್ದಮಾಡಲು ದಿಗ್ಗಜಗಳೂ ಹಿಮ್ಮೆಟ್ಟಿದುವು. ಮಧ್ಯದಲ್ಲಿ ಇದ್ದಕ್ಕಿದ್ದ ಹಾಗೆ ಕೋರೆಹಲ್ಲುಗಳನ್ನು ಕಡಿಯಲು ನಕ್ಷತ್ರಗಳು ಆಕಾಶಸಹಿತ ಕಳಚಿಬಿದ್ದವು. ಹಂದಿಯ ರೂಪದಲ್ಲಿದ್ದ ಆ ರಾಕ್ಷಸನ ಹಿರಿಮೆಯೂ ಅದ್ಭುತವಾಯಿತು. ವ॥ ಆ ಹಂದಿಯು ಆದಿವರಾಹಾವತಾರ ಮಾಡಿದ ಕೃಷ್ಣನನ್ನು ಹೀಯ್ಯಾಳಿಸಿ (ತಿರಸ್ಕರಿಸಿ) ನೆಲವು ಮುಚ್ಚುವ ಮುಚ್ಚಳವಾಗುವ ಹಾಗೆ (ನೆಲವನ್ನಲ್ಲಾಡಿಸುತ್ತ) ಬರುತ್ತಿರಲು ಹಿಂಭಾಗದಿಂದ ಕೃತಕ ಕಿರಾತನಾದ ಶಿವನು ಅದನ್ನಟ್ಟಿಕೊಂಡು ಬಂದನು. ತನ್ನ ಕಡೆಗೆ ಬರುತ್ತಿರುವುದನ್ನು ಧನಂಜಯನು ಕಂಡು ಒಂದು ಅಮೋಘವಾದ ಬಾಣವನ್ನು ತನ್ನ ಅಕ್ಷಯವಾದ ಬತ್ತಳಿಕೆಯಿಂದ

ಮ॥ ತೆಗೆದೆಚ್ಚರ್ಜುನನಂಬು ತೀವೆ ತುದಿಯಿಂ ಬಾಲಂಬರಂ ಪಂದಿ ಸೌ
ಳಗೆವೋಲ್ಪಂತಿರೆ ನೋಡ ಸಂಬಳಿಗೆವೋಯ್ತೊಂಬನ್ನೆಗಂ ಕೊಂಡುಮೊ ।
ಯ್ಯಗೆ ಪಾರ್ದೆಚ್ಚ ವೃಷಾಂಕನಂಬು ತನುವಂ ಪಚ್ಚಂತೆ ಕೊಂಡತ್ತು ತೊ
ಟ್ಟಗೆ ವೈಮಾನಿಕಕೋಟಿಗಂದು ಪಿರಿದೊಂದುತ್ಸಾಹಮಪ್ಪನ್ನೆಗಂ ॥ ೧೬

ವ॥ ಅಂತು ಮೂಕದಾನವನನಾ ನೆವದೊಳೆ ಕೊಂದು ವರಾಹಾರುಣಜಲಧಾರಾರುಣ ಮಾಗಿರ್ದಾತ್ಮೀಯಬಾಣಮಂ ಪರಾಕ್ರಮಧವಳನೊಯ್ಯನೆ ಕೊಂಡು ಬಾಣಧಿಯೊಳಿಟ್ಟು ಪೋಗಿ ಪೂಗೊಳದೊಳ್ ಕರಚರಣಪ್ರಕ್ಷಾಳನಂಗೆಯ್ದು ಮಗುಟ್ಟಿಮೇಕಪಾದ ತಪದೊಳ್ ಸಿಲೆ ಗೀರ್ವಾಣನಾಥಾತ್ಮಜನಲ್ಲಿಗೆ ಗುಹನನಹಿಭೂಷಣನೆಂಬಂ ಬೇಡಿಯಟ್ಟಿದೊಡಾತಂ ಬಂದು-

ಚಂ॥ ಗೊರವರೆ ಬೂದಿಯುಂ ಜಡೆಯುಮಕ್ಕೆ ತಪಕ್ಕೆ ತನುತ್ರಮಿಾ ಭಯಂ
ಕರ ಧನು ಖಡ್ಗಮತ್ತಪರಮಿಂತೆರಡುಂ ದೊಣೆ ತೀವಿದಂಬುಮೊಂ ।
ದಿರವು ತಪಕ್ಕಿದೆಂತುಟೊ ತಪಂಗಳುಮಿಲ್ಲಮವುಳ್ಳೊಡೀಗಳೆ
ಮ್ಮರಸರ ನಚ್ಚಿತೆಚ್ಚ ಶರಮಂ ಸೆರಗಿಲ್ಲದೆ ಕೊಂಡು ಬರ್ಪಿರೇ ॥ ೧೭

ಕಂ॥ ಅಱೆಯದೆ ತಂದೊಡಮೇನೆ
ಮ್ಮಱಿಯಂಗದನೆಮ್ಮ ಕೆಯ್ಯೊಳಟ್ಟಿಂ ನೀಮಿಂ ।
ತಱೆಯುತ್ತುಂ ಪೆಱರೊಡಮೆಯ
ನುಱೆ ಸೆಱೆವಿಡಿದಿರ್ಪಿರಿನ್ನರುರ್ವಿಯೊಳೊಳರೇ ॥ ೧೮

ಸೆಳೆದುಕೊಂಡು ಗಾಂಡೀವದಲ್ಲಿ ಹೂಡಿದನು. ೧೬. ಹೆದೆಯೆಳೆದು ಪ್ರಯೋಗಮಾಡಿದ ಅರ್ಜುನನ ಬಾಣವು ತುದಿಯಿಂದ ಬಾಲದವರೆಗೂ ವ್ಯಾಪಿಸಿ ಸೌಳೆಂದು ಶಬ್ದಮಾಡುತ್ತ ಸೀಳಿಕೊಂಡು ಹೋಗಿ ಸಂಪುಟದಲ್ಲಿ ಸೇರುವಂತೆ ಮೆಯ್ಯಲ್ಲಿಯೇ ಅಡಗಿಕೊಂಡಿತು. ಇದನ್ನು ನೋಡುತ್ತಿದ್ದ ಶಿವನು ನಿಧಾನವಾಗಿ ಗುರಿಯಿಟ್ಟು ಹೊಡೆದ ಬಾಣವು ಶರೀರವನ್ನು ಭಾಗಮಾಡಿದ ಹಾಗೆ ಒಳನುಗ್ಗಿತು. ವಿಮಾನದಲ್ಲಿ ಕುಳಿತು ನೋಡುತ್ತಿದ್ದ ದೇವತೆಗಳ ಸಮೂಹಕ್ಕೆ ವಿಶೇಷ ಸಂತೋಷವಾಯಿತು. ವ॥ ಹಾಗೆ ಮೂಕದಾನವನನ್ನು ಆ ನೆಪದಿಂದ ಕೊಂದ ಹಂದಿಯ ರಕ್ತಧಾರೆಯಿಂದ ಕೆಂಪಾಗಿದ್ದ ತನ್ನ ಬಾಣವನ್ನು ಪರಾಕ್ರಮಧವಳನು ನಿಧಾನವಾಗಿ ತೆಗೆದುಕೊಂಡು ಬಂದು ಬತ್ತಳಿಕೆಯಲ್ಲಿ ಸೇರಿಸಿ ಪಕ್ಕದಲ್ಲಿದ್ದ ಹೂಗೊಳದಲ್ಲಿ ಕೈ ಕಾಲುಗಳನ್ನು ತೊಳೆದು ಪುನಃ ಏಕಪಾದತಪಸ್ಸಿನಲ್ಲಿ ನಿಲ್ಲಲು ಅರ್ಜುನನ ಹತ್ತಿರಕ್ಕೆ ಸರ್ಪಾಭರಣನಾದ ಶಿವನು ತನ್ನ ಬಾಣವನ್ನು ಬೇಡಲು ಗುಹನನ್ನು ಕಳುಹಿಸಿದನು. ಅವನು ಬಂದು ೧೭. ತಪಸ್ವಿಗಳೇ, ಬೂದಿಯೂ ಜಡೆಯೂ ತಪಸ್ಸಿಗಿರಲಿ; ಕವಚ, ಈ ಭಯಂಕರವಾದ ಬಿಲ್ಲು ಕತ್ತಿ ಗುರಾಣಿ, ಬಾಣದಿಂದ ತುಂಬಿದ ಈ ಎರಡು ಬತ್ತಳಿಕೆಗಳು - ಇವು ತಪಸ್ಸಿಗೆ ಹೊಂದಿಕೊಳ್ಳಲಾರವು. ಇದು ಹೇಗೊ (ವಿಚಿತ್ರವಾಗಿದೆ) ತಪಸ್ಸು ಕೂಡ ಇಲ್ಲ, ಅದಿದ್ದ ಪಕ್ಷದಲ್ಲಿ (ನೀವು ತಪಸ್ವಿಗಳಾಗಿದ್ದರೆ) ನಮ್ಮರಾಜರು ನಂಬಿಕೆಯಿಂದ (ಗುರಿಯಿಟ್ಟು) ಹೊಡೆದ ಬಾಣವನ್ನು ಭಯವಿಲ್ಲದೆ ಕೊಂಡು ಬರುತ್ತಿದ್ದಿರಾ? ೧೮. ತಿಳಿಯದೆ ತಂದರೆ ತಾನೆ ಏನು ದೋಷ? ನಮ್ಮ ಯಜಮಾನರಿಗೆ ಅದನ್ನು ನನ್ನ ಕಯ್ಯಲ್ಲಿ ಕಳುಹಿಸಿಕೊಡಿ. ನೀವು ಹೀಗೆ ತಿಳಿದವರಾಗಿದ್ದರೂ ಇತರರ ಪದಾರ್ಥವನ್ನು ವಿಶೇಷವಾಗಿ ಬಂಧಿಸಿಟ್ಟಿದ್ದೀರಲ್ಲ!

ವ|| ಎಂದು ಕಿರಾತದೂತಂ ತನ್ನನತಿಕ್ರಮಿಸಿ ನುಡಿದುದರ್ಕೆ ಮುಳಿದು ಪರಾಕ್ರಮಧವಳ ನಿಂತೆಂದಂ-

ಕಂ|| ದಸಿಕೊಂದಕ್ಕುಂ ಬೇಡಂ
ಗಿಸಲ್ಕೆ ದೊರೆ ಮೃಗಮನೀ ಜಗಂಗಳನಳ್ಳಾ |
ದಿಸುವ ಮದೀಯೋಗ್ರಾಸ್ತ್ರಂ
ಪೆಸರ್ಗೊಳಲೇಂ ತನಗೆ ದೊರೆಯೆ ಖಳನಳವಱಿಯಂ || ೧೯

ಉ|| ಏಱಿನೆ ಸೂಱೆಗೊಂಡು ನುಡಿವೀ ನುಡಿಯಲ್ಲದೆ ಮತ್ತಮಾಸನಂ
ದೋಱುವ ಬಲ್ಪುದೋಱುವೆರ್ದೆದೋಱುವ ಕಯ್ಪುಸರಂಗಳೆಮ್ಮನುಂ |
ತೇಱಿಪವು ಬೇಡ ಬೇಡದಿರು ಬೇಡ ಚಲಂಬೆರಸಂಬನಂಬನಿನ್
ಕಾಱುತೆ ಮೋದಲಾಟಿಪೊಡೆ ನೀಂ ಬರವೇೞ್ಪುದು ನಿನ್ನನಾಳ್ದನಂ ೨೦

ವ|| ಎಂದು ಬಂದ ಕಿರಾತದೂತನಂ ವಿಕ್ರಾಂತತುಂಗಂ ಬಗ್ಗಿಸಿದೊಡಾ ಮಾತೆಲ್ಲಮನಾ ಮಾೞ್ಕೆಯೊಳೆ ಪೋಗಿ ಕಪಟ ಕಿರಾತಂಗಱಿಪಿದೊಡಾತನುಂ ಮಾಯಾಯುದ್ಧಮಂ ಪೊಣರ್ಚಲ್ ಬಗೆದು ಹಸ್ತ್ಯಶ್ವರಥಪದಾತಿಬಲಂಗಳನೆನಿತಾನುಮನಿದಿರೊಳ್ ತಂದೊಡ್ಡಿದಾಗಳ್ ಪರಸೈನ್ಯಭೈರವಂ ಮಹಾಪ್ರಳಯಭೈರವಾಕಾರಮುಂ ಕೆಯ್ಕೊಂಡು ಸೆರಗಿಲ್ಲದೆ ಬಂದು ತಾಗಿ-

ಇಂತಹವರೂ ಭೂಮಿಯಲ್ಲಿದ್ದಾರೆಯೇ? ವ|| ಎಂದು ಆ ಬೇಡನ ದೂತನಾದ ಗುಹನು ತನ್ನನ್ನು ಮೀರಿ ಮಾತನಾಡಿದುದಕ್ಕೆ ಕೋಪಿಸಿ ಪರಾಕ್ರಮಧವಳನಾದ ಅರ್ಜುನನು ಹೀಗೆಂದನು-೧೯. ಬೇಡನಿಗೆ ಒಂದು ಪ್ರಾಣಿಯನ್ನು ಹೊಡೆಯಲು ಒಂದು ಮೊಳೆ ಸಾಕು. ಈ ಲೋಕಗಳನ್ನೇ ನಡುಗಿಸುವಂತೆ ಮಾಡುವ ನನ್ನ ಭಯಂಕರವಾದ ಬಾಣದ ಹೆಸರು ಹೇಳಲು ತಾನೆ ಅವನಿಗೆ (ಆ ನಿನ್ನ ಒಡೆಯನಿಗೆ) ಸಾಧ್ಯವೇ. ಆ ದುಷ್ಟನು ನನ್ನ ಶಕ್ತಿಯನ್ನು ಇನ್ನೂ ತಿಳಿದಿಲ್ಲ. ೨೦. ಕೇವಲ ಕಲಹವಾಡುವುದಕ್ಕಾಗಿಯೂ ಪೊಳ್ಳು ಪರಾಕ್ರಮವನ್ನು ಮೆರೆಯುವುದಕ್ಕಾಗಿಯೂ ಇಂತಹ ಒರಟಾದ ಉಪೇಕ್ಷೆಯಿಂದ ಕೂಡಿದ ಕಹಿ ಮಾತುಗಳನ್ನು ನಮ್ಮಲ್ಲಿ ಆಡಬೇಡ. ಈ ಕಹಿಯಾದ ಮಾತುಗಳು ನಮ್ಮ ಮೇಲೆ ಯಾವ ಪ್ರಭಾವವನ್ನೂ ಬೀರಲಾರವು (ನಮ್ಮನ್ನು ಹೆದರಿಸಲಾರವು). ಎಲೋ ಬೇಡ ನಿನಗೆ ಹಟಬೇಡ, ಬಾಣವನ್ನು ಕೇಳದಿರು. ಬಾಣದ ಮೇಲೆ ಬಾಣವನ್ನು ಕಾರಿಸುತ್ತ ಯುದ್ಧಮಾಡುವ ಅಪೇಕ್ಷೆಯೇ ಇದ್ದರೆ ನೀನು ನಿನ್ನ ಯಜಮಾನನನ್ನು ಬರಹೇಳು. ವ|| ಎಂದು ಬಂದ ದೂತನಾದ ಗುಹನನ್ನು ವಿಕ್ರಾಂತತುಂಗನಾದ ಅರ್ಜುನನು ಹೆದರಿಸಿ ಕಳುಹಿಸಿದನು. ಅವನು ಆ ಮಾತೆಲ್ಲವನ್ನೂ ಆ ರೀತಿಯಲ್ಲಿಯೇ ಹೋಗಿ ಆ ಕಪಟಕಿರಾತನಾದ ಶಿವನಿಗೆ ತಿಳಿಸಿದನು. ಆತನೂ ಮಾಯಾಯುದ್ಧವನ್ನು ಹೂಡಲು ಮನಸ್ಸು ಮಾಡಿ ಅಸಂಖ್ಯಾತವಾದ ಆನೆ, ಕುದುರೆ, ತೇರು ಮತ್ತು ಕಾಲಾಳು ಸೈನ್ಯವನ್ನು ಇದಿರಿನಲ್ಲಿ ತಂದೊಡ್ಡಿದನು. ಪರಸೈನ್ಯಭೈರವನಾದ ಅರ್ಜುನನು ಪ್ರಳಯಕಾಲದ ಭೈರವನ

ಚಂ॥ ಕೆದಱೆ ಚತುರ್ಬಲಂ ಬೆದಱೆ ತಳ್ತ ದಳಂ ಕೆಡೆದಟ್ಟೆ ತಟ್ಟೆ ಮಾ
ಣದೆ ಪೆಱಗಿಟ್ಟು ಬಾಯ್ಬಿಡೆ ಘಟಾಳಿ ಗುರ್ಣಾವನಂಬು ಲಕ್ಕಲೆ ।
ಕ್ಕದೆ ಕೊಳೆ ಚಾತುರಂಗಬಲಮಂತಟೆದಟ್ಟೆ ಕನಲ್ದೊನಲ್ದು ಮಾ
ಣದೆ ಪೆಣೆದಂ ಹರಂ ದಿಗಿಭದೊಳ್ ದಿಗಿಭಂ ಪೆಣೆವಂತೆ ಪಾರ್ಥನೊಳ್ ॥ ೨೧

ವ॥ ಅಂತು ಶೂನ್ಯಹಸ್ತದೊಳಿರ್ವರುಂ ಪೆಣೆದು ಪಲವುಂ ಗಾಯದೊಳಾಯಂದಪ್ಪದೆ ಪಿರಿದುಂ ಪೊಟ್ಟು ಸಂತರ್ಪಿನಂ (?) ಪೋರೆ ದೇವರೆಲ್ಲರುಮಂಬರತಳದೊಳಿರ್ದು ತಮ್ಮಂ ನೋೞ್ಪಂತೆ (?) ನೋಡೆ-

ಕಂ॥ ಇಕ್ಕಿದನಭವಂ ಪಾರ್ಥನ
ನಿಕ್ಕಿದನಾ ತ್ರಿಪುರಹರನನರ್ಜುನನೆನೆ ಗೆ ।
ಲ್ಲಕ್ಕೆ ಮುಡಿಗಿಕ್ಕುವಂತೆವೊ
ಲಿಕ್ಕಿದನವಯವದೆ ನೆಲದೊಳರಿಗಂ ಹರನಂ ॥ ೨೨

ವ॥ ಅಂತು ನೆಲಕ್ಕಿಕ್ಕಿ ಗಂಟಲಂ ಮೆಟ್ಟಿದಾಗಳ್-

ಕಂ॥ ಪೊಱಕಣ್ಗಂ ಮುನ್ನಂ ತಾಂ
ಮಱಸಿದ ನೊಸಲೊಂದು ಕಣ್ಣುಮಾಗಳ್ ನೊಸಲಿಂ ।
ಪೊಱಮಟ್ಟಂತಿರೆ ತೋಱಿದ
ನೆಱಕದೆ ಹರಿಗಂಗೆ ರುದ್ರನಗ್ಗಳಗಣ್ಣಂ ॥ ೨೩

ಉರದೊಳ್ ಫಣಿ ಕರದೊಳ್ ಬಿಲ್
ಶಿರದೊಳ್ ತೊಱೆ ತೊಱೆಯ ಕೆಲದೊಳೆಸೆದಿರೆ ಪೆಱೆ ಮುಂ ।
ಗೊರಲೊಳ್ ಕಱೆ ಮಱೆಯಿಲ್ಲದೆ
ದೊರೆಕೊಳೆ ಮೃಡನಡಿಗೆ ಹರಿಗನೆಱಗಿದನಾಗಳ್ ॥ ೨೪

ಆಕಾರವನ್ನು ತಾಳಿ ಭಯವಿಲ್ಲದೆ ಬಂದು ತಾಗಿದನು. ೨೧. ಚತುರಂಗಸೈನ್ಯವು ಚದುರಿತು. ನೆರೆದಿದ್ದ ಸೈನ್ಯವು ಬೆದರಿತು. ಆನೆಗಳ ಗುಂಪು ಕೆಳಗುರುಳಿ ನಾಶವಾಗಿ ನಿಲ್ಲದೆ ಹಿಂಜರಿದು ಕೂಗಿಕೊಂಡವು. ಅರ್ಜುನನ ಬಾಣವು ಲಕ್ಷಲೆಕ್ಕದಲ್ಲಿ ನಾಟಿದುದರಿಂದ ಚತುರಂಗಸೈನ್ಯವೂ ಕುಗ್ಗಿ ನಾಶವಾಯಿತು. ಶಿವನು ವಿಶೇಷವಾಗಿ ಕೋಪಿಸಿಕೊಂಡು ಉದಾಸೀನಮಾಡದೆ ಅರ್ಜುನನೊಡನೆ ದಿಗ್ಗಜವು ದಿಗ್ಗಜದೊಡನೆ ಹೆಣೆದುಕೊಳ್ಳುವಂತೆ ಹೆಣೆದುಕೊಂಡನು. ವ॥ ಹಾಗೆ ಇಬ್ಬರೂ ನಿರಾಯುಧರಾಗಿ ಹೆಣೆದುಕೊಂಡು ಅನೇಕ ಪಟ್ಟುಗಳಲ್ಲಿ ಕ್ರಮತಪ್ಪದೆ ಬಹುಕಾಲ ಸಹಿಸಿಕೊಂಡು ಕಾದಿದರು. ದೇವತೆಗಳು ಆಕಾಶಪ್ರದೇಶದಲ್ಲಿದ್ದುಕೊಂಡು ಅವರ ದ್ವಂದ್ವಯುದ್ಧವನ್ನು ನೋಡುತ್ತಿದ್ದರು. ೨೨. ಶಿವನು ಪಾರ್ಥನನ್ನು ಬೀಳಿಸಿದನು; ಪಾರ್ಥನು ಶಿವನನ್ನು ಬೀಳಿಸಿದನು. ವಿಜಯಕ್ಕೆ ಸವಾಲು ಮಾಡುವ ಹಾಗೆ ಅರ್ಜುನನು ಶಿವನನ್ನು ಶ್ರಮವಿಲ್ಲದೆ ನೆಲದಲ್ಲಿ ಬೀಳಿಸಿ ವ॥ ಅವನ ಗಂಟಲನ್ನು ಮೆಟ್ಟಿದನು. ೨೩. ಹೊರಗಡೆಯ ಕಣ್ಣುಗಳಿಗೆ ಕಾಣದಂತೆ ಮೊದಲೇ ಮರಸಿಟ್ಟಿದ್ದ ಹಣೆಗಣ್ಣೊಂದು ಆಗ ಹಣೆಯಿಂದ ಹೊರ ಹೊರಟ ಹಾಗಿರಲು ಶಿವನು ಅರ್ಜುನನಿಗೆ ಶ್ರೇಷ್ಠವಾದ ಆ ಕಣ್ಣನ್ನು ಪ್ರೀತಿಯಿಂದ ತೋರಿಸಿದನು. ೨೪. ಎದೆಯಲ್ಲಿ ಹಾವು, ಕಯ್ಯಲ್ಲಿ ಬಿಲ್ಲು, ತಲೆಯಲ್ಲಿ

ವ|| ಅಂತೆಱಗಿ ಪೊಡವಟ್ಟು-

ಕಂ|| ನೀನಪ್ಪುದನಣಮಱಿಯದೆ
ದಾನವ ಮಾನವ ಸುರೇಂದ್ರ ಮಣಿಮಕುಟತಟಾ ।
ಪ್ಧಾನಪದಂಗಾ ನೆಗಟ್ಬುದ
ನಾನೇತಱೊಳಿಂತು ನೀಗುವೆಂ ನೀಂ ಬೆಸಸಾ ॥ ೨೫

ವ|| ಎಂದು ವಿನಯವಿನಮಿತೋತ್ತಮಾಂಗನಾಗಿ ಕರಕಮಳಂಗಳಂ ಮುಗಿದು ತನ್ನ ಮುಂದಿರ್ದ ಪರಾಕ್ರಮಧವಳನ ಪರಾಕ್ರಮಕ್ಕಂ ವಿನಯಕ್ಕಂ ಮೆಚ್ಚಿ ಮೆಚ್ಚಿದೆಂ ಬರವಂ ಬೇಡಿ ಕೊಳ್ಳೆನೆ ಮಹಾಪ್ರಸಾದಂ ಪೆಱತೇನುಮನೊಲ್ಲೆನೆನಗೆ ನಿಮ್ಮಡಿ ಪಾಶುಪತಾಸ್ತ್ರಮಂ ದಯೆಗೆಯ್ವುದೆನೆ ನಿನ್ನ ತಪಶ್ಶಕ್ತಿಗಂ ಭಕ್ತಿಗಂ ಮೆಚ್ಚಿತ್ತೆನೆಂದು-

ಕಂ|| ಕ್ಲೇಶದ ಫಳಮೆರ್ದೆಗೊಳ್ಳದೆ
ಈಶಂ ಮನಮೊಸೆದು ನೆಗಟ್ದ ದಿವ್ಯಾಸ್ತ್ರಮನಾ ।
ಪಾಶುಪತಾಸ್ತ್ರಮನಿತ್ತು ವಿ
ನಾಶಿತರಿಪುವಕ್ಕೆ ಹರಿಗನೆಂದಂ ದಯೆಯಿಂ ॥ ೨೬

ವ|| ಆಗಳೀಶ್ವರಂ ಕೊಟ್ಟುದರ್ಕೆ ತೆಲ್ಲಂಟಯೆಂದು ಗೌರಿದೇವಿಯುಮಂಜರಿಕಾಸ್ತ್ರಮೆಂಬ ಮೋಘಾಸ್ತ್ರಮಂ ವಿಕ್ರಮಾರ್ಜುನಂಗೆ ಕುಡೆ ಮೂವತ್ತುಮೂದೇವರುಂ ತಂತಮ್ಮ ನಚ್ಚಿನಂಬುಗಳಂ ತಂದೀಯೆ ಗುಣಾರ್ಣವಂ ಸಂಪೂರ್ಣ ಮನೋರಥನಾಗಿರ್ದಾಗಳಿಂದ್ರಂ ಪರಾಕ್ರಮಧವಳನ

ಗಂಗಾನದಿ, ನದಿಯ ಪಕ್ಕದಲ್ಲಿ ಚಂದ್ರ, ಪ್ರಕಾಶಮಾನವಾಗಿರಲು ಮುಂಭಾಗದ ಕೊರಳಿನಲ್ಲಿ ಕರೆಯು ಪ್ರಕಟವಾಗಿ ಕಾಣಿಸಿಕೊಳ್ಳಲು ಶಿವನ ಪಾದಕ್ಕೆ ಅರ್ಜುನನು ತಕ್ಷಣ ನಮಸ್ಕರಿಸಿದನು. ವ|| ಹಾಗೆ ಬಗ್ಗಿ ನಮಸ್ಕಾರಮಾಡಿ-೨೫. (ನನ್ನನ್ನು ಪ್ರತಿಭಟಿಸಿದವನು ಶಿವನಾದ) ನೀನು ಎಂಬುದನ್ನು ತಿಳಿಯದೆ ರಾಕ್ಷಸ, ಮನುಷ್ಯ, ದೇವೇಂದ್ರ ಇವರುಗಳ ರತ್ನಖಚಿತವಾದ ಕಿರೀಟಪ್ರದೇಶಗಳಿಂದ ಆವರಿಸಲ್ಪಟ್ಟ ಪಾದಗಳುಳ್ಳ ಶಿವನಾದ ನಿನಗೆ ನಾನು ಮಾಡಿದ ಅಪಚಾರವನ್ನು ಯಾವುದರಲ್ಲಿ ಹೇಗೆ ಕಳೆಯಲಿ ಎಂಬುದನ್ನು ನೀನೇ ಅಪ್ಪಣೆ ಕೊಡಿಸು. ವ|| ಎಂದು ವಿನಯದಿಂದ ಬಗ್ಗಿದ ತಲೆಯುಳ್ಳವನಾಗಿ (ನಮಸ್ಕರಿಸಿ) ಕರಕಮಲಗಳನ್ನು ಮುಗಿದು ತನ್ನ ಮುಂದುಗಡೆ ನಿಂತಿದ್ದ ಪರಾಕ್ರಮಧವಳನ ಪರಾಕ್ರಮಕ್ಕೂ ವಿನಯಕ್ಕೂ ಮೆಚ್ಚಿ ಶಿವನು 'ಮೆಚ್ಚಿದ್ದೇನೆ ವರವನ್ನು ಕೇಳಿಕೊ' ಎಂದನು. ಅರ್ಜುನನು ಮಹಾಪ್ರಸಾದ, ಬೇರೆಯೇನೂ ಬೇಡ, ನನಗೆ ತಮ್ಮ ಪಾಶುಪತಾಸ್ತ್ರವನ್ನು ದಯಮಾಡಿ ಕೊಡಿಸಬೇಕು ಎಂದನು. ನಿನ್ನ ತಪ್ಪಶ್ಶಕ್ತಿಗೂ ಭಕ್ತಿಗೂ ಮೆಚ್ಚಿ ಕೊಟ್ಟಿದ್ದೇನೆ ಎಂದು ಶಿವನು ಹೇಳಿದನು. ೨೬. ಕಷ್ಟದಿಂದ ಸಂಪಾದಿಸಿದ ಫಲ ಹೃದ್ಯವಾಗದೇ ಇರುತ್ತದೆಯೇ? ಈಶ್ವರನು ಮನಃಪ್ರೀತಿಯಿಂದ ಪ್ರಸಿದ್ಧವಾದ ದಿವ್ಯಾಸ್ತ್ರವಾದ ಪಾಶುಪತಾಸ್ತ್ರವನ್ನು ದಯೆಯಿಂದ ಕೊಟ್ಟು ಅರ್ಜುನನನ್ನು 'ಶತ್ರುಗಳನ್ನು ಗೆಲ್ಲುವವನಾಗು' ಎಂದು ಹರಸಿದನು. ವ|| ಆಗ ಈಶ್ವರನು ಕೊಟ್ಟುದಕ್ಕೆ ಸಮಾನವಾದ ಬಹುಮಾನವೆಂದು ಗೌರೀದೇವಿಯು ಅಂಜರಿಕಾಸ್ತ್ರವೆಂಬ ಬಹು ಬೆಲೆಯುಳ್ಳ ಅಸ್ತ್ರವನ್ನು ವಿಕ್ರಮಾರ್ಜುನನಿಗೆ ಕೊಟ್ಟಳು.

ಪರಾಕ್ರಮಕ್ಕಮೇಗೆಯ್ವ ತೆಱನುಮಱಿಯದೆಯುಮತಿಸ್ನೇಹದಿಂ ಪುಷ್ಪವೃಷ್ಟಿಯುಮನಾನಂದಬಾಷ್ಪ ವೃಷ್ಟಿಯುಮನೊಡನೊಡನೆ ಸುರಿದು ಪಲವು ದಿವಸಮುಗ್ರೋಗ್ರತಪದೊಳ್ ಮೆಯ್ಯಂ ದಂಡಿಸಿದ ಪರಿಶ್ರಮಂ ಪೋಗೆ ಕೆಲವು ದಿವಸಮನೆಮ್ಮ ಲೋಕದೊಳ್ ವಿಶ್ರಮಿಸಿ ಬರ್ಪೆ ಬಾ ಪೋಪಮೆಂದು ತನ್ನೊಡನೆ ರಥಮನೇಱಿಸಿಕೊಂಡು ಗಗನತಳಕ್ಕೊಗೆದು ತನ್ನಮರಾವತೀಪುರಮನೆಯ್ದಿ ಮಗಂ ಬಂದೊಸಗೆಗೆ ಪೊಲಲೊಳಷ್ಟ ಶೋಭೆಯಂ ಮಾಡಿಸಿ ಪೊಲಲಂ ಪೊಕ್ಕಾಗಳ್-

ಮ॥ ಪರಿತಂದಂದಮರಾವತೀಪುರದ ವಾರಸ್ತ್ರೀಯರೇನೀತನೇ
ನರನಾ ಖಾಂಡವಮೆಲ್ಲಮಂ ಶಿಖಿಗುಣಲ್ ಕೊಟ್ಟಾತನೀಗಳ್ ಮಹೇ ।
ಶ್ವರನಂ ಮೆಚ್ಚಿಸಿ ಮಿಕ್ಕ ಪಾಶುಪತಮಂ ಪೆತ್ತಾತನೇ ಸಾಹಸಂ
ಪಿರಿದುಂ ಚೆಲ್ವನುಮಪ್ಪನೆಂದು ಮನದೊಳ್ ಸೋಲ್ತಕ್ಕಱಿಂ ನೋಡಿದರ್ । ೨೭

ವ॥ ಅಂತು ನೋಡಿ ಕಡೆಗಣ್ಣ ಚೆಲ್ಲಂಬೆರಸು ಸೂಸುವ ವಾಸವಸ್ತ್ರೀಯರ ಮುಖಾಬ್ಜಾಸವ ಸಂಬಂಧಿಗಳಪ್ಪ ಶೇಷಾಕ್ಷತಂಗಳನೀಶ್ವರನಂ ಗೆಲ್ದ ಗೆಲ್ಲಕ್ಕೆ ಸೇಸೆಗೊಳ್ವಂತೆ ಸೇಸೆಗೊಳುತ್ತುಂ ದೇವರಾಜನೊಡನೆ ದೇವಾಪ್ಸರೋನಿಚಯನಿಚಿತಮಪ್ಪ ದೇವವಿಮಾನಮಂ ಪೊಕ್ಕಾಗಳ್ ದೇವೇಂದ್ರಂ ತನ್ನೊಡನೆ ಮಜ್ಜನಂಬುಗಿಸಿ ದಿವ್ಯಾಹಾರಂಗಳನೊಡನಾರೋಗಿಸಿ ತಂಬುಲಂಗೊಂಡು

ಮೂವತ್ತು ಮೂರು ದೇವರುಗಳು ತಮ್ಮ ಪ್ರಧಾನಾಸ್ತ್ರಗಳನ್ನು ತಂದುಕೊಟ್ಟರು. ಗುಣಾರ್ಣವನಾದ ಅರ್ಜುನನು ಸಂಪೂರ್ಣ ಮನೋರಥನಾದನು. ಇಂದ್ರನು ಪರಾಕ್ರಮಧವಳನಾದ ಅರ್ಜುನನ ಶೌರ್ಯಪರಾಕ್ರಮಗಳಿಗೆ ಯಾವ ರೀತಿಯ ಸತ್ಕಾರ ಮಾಡಬೇಕೆಂಬುದನ್ನು ತಿಳಿಯದೆ ವಿಶೇಷವಾದ ಸ್ನೇಹದಿಂದ ಪುಷ್ಪವೃಷ್ಟಿಯನ್ನೂ ಆನಂದಬಾಷ್ಪವನ್ನೂ ಜೊತೆಜೊತೆಯಲ್ಲಿಯೇ ಸುರಿಸಿದನು. 'ಅನೇಕ ದಿನ ಬಹು ಕಠಿಣವಾದ ತಪಸ್ಸಿನಲ್ಲಿ ಶರೀರವನ್ನು ದಂಡಿಸಿದ್ದೀಯೆ. ಆಯಾಸಪರಿಹಾರವಾಗುವ ಹಾಗೆ ಕೆಲವು ಕಾಲ ನಮ್ಮ ಲೋಕದಲ್ಲಿ ವಿಶ್ರಾಂತಿಯನ್ನು ಪಡೆದು ಬರುವೆಯಂತೆ ಹೋಗೋಣ ಬಾ' ಎಂದು ತನ್ನ ಜೊತೆಯಲ್ಲಿಯೇ ತೇರನ್ನು ಹತ್ತಿಸಿಕೊಂಡು ಆಕಾಶ ಪ್ರದೇಶಕ್ಕೆ ನೆಗೆದು ತನ್ನ ರಾಜಧಾನಿಯಾದ ಅಮರಾವತೀಪಟ್ಟಣವನ್ನು ಸೇರಿದನು. ಮಗನು ಬಂದ ಸಂತೋಷಕ್ಕಾಗಿ ಪಟ್ಟಣವನ್ನು ತಳಿರು ತೋರಣಾದಿ ಎಂಟುಬಗೆಯ ಅಲಂಕಾರಗಳಿಂದ ಸಿಂಗರಿಸಿ ಪುರಪ್ರವೇಶ ಮಾಡಿಸಿದನು-೨೭. ಅಮರಾವತೀ ಪಟ್ಟಣದ ವೇಶ್ಯಾಸ್ತ್ರೀಯರು ಓಡಿ ಬಂದು ಇವನೇ ಅರ್ಜುನನೇನು! ಅಗ್ನಿಗೆ ಖಾಂಡವವನವೆಲ್ಲವನ್ನೂ ಉಣ್ಣಲು ಕೊಟ್ಟನೇನು, ಈಗ ಮಹೇಶ್ವರನನ್ನು ಮೆಚ್ಚಿಸಿ ಶ್ರೇಷ್ಠವಾದ ಪಾಶುಪತಾಸ್ತ್ರವನ್ನು ಪಡೆದವನೇ? ಪರಾಕ್ರಮಶಾಲಿಯೂ ವಿಶೇಷ ಸೌಂದರ್ಯವಂತನೂ ಆಗಿದ್ದಾನೆ. ಎಂದು ಮನಸ್ಸಿನಲ್ಲಿ ಸೋತು ಪ್ರೀತಿಯಿಂದ ನೋಡಿದರು. ವ॥ ಹಾಗೆ ಕಡೆಗಣ್ಣಿನ ವಿಲಾಸದಿಂದ ಕೂಡಿದ ಇಂದ್ರಲೋಕ ಸ್ತ್ರೀಯರ ಮುಖಕಮಲದ ಮಧುವಿನ ಸಂಬಂಧವುಳ್ಳ ಮಂತ್ರಾಕ್ಷತೆಯನ್ನು ಈಶ್ವರನನ್ನು ಜಯಿಸಿದ ಜಯಕ್ಕೆ ಸೇಸೆಯೆಂಬಂತೆ ಸ್ವೀಕರಿಸುತ್ತ ದೇವೇಂದ್ರನೊಡನೆ ದೇವಲೋಕದ ಅಪ್ಸರಸ್ತ್ರೀಯರ ಸಮೂಹದಿಂದ ತುಂಬಿದ್ದ ದೇವವಿಮಾನವನ್ನು ಪ್ರವೇಶಿಸಿದನು. ದೇವೇಂದ್ರನು ಅರ್ಜುನನಿಗೆ ತನ್ನೊಡನೆ ಸ್ನಾನಮಾಡಿಸಿ ದಿವ್ಯಾಹಾರಗಳ ಸಹಪಂಕ್ತಿ

ತನ್ನ ತುಡುವ ತುಡುಗೆಗಳೆಲ್ಲಮಂ ತುಡಿಸಿ ಕಿರೀಟಿಯಂ ಕೋಟಿ ಮಾಟ್ಕೆಯಿಂ ಕೊಂಡಾಡಿ ಕೆಲವು ದಿವಸಮನಿರ್ದು ತನಗವಧ್ಯರುಮಸಾಧ್ಯರುಮಾಗಿರ್ದ ನಿವಾತಕವಚ ಕಾಳಕೇಯ ಪೌಲೋಮ ತಳತಾಳುಕರೆಂಬಱುವತ್ತು ಕೋಟಿ ರಕ್ಕಸರನೆನಗೆ ಗೆಲ್ದೀಯಲ್ವೇೞ್ಕುಮೆಂದು ಮಾತಳಿಯೆಂಬ ಸಾರಥಿವೆರಸು ವಿವಿಧಾಸ್ತ್ರಗರ್ಭಮಪ್ಪ ರಥಮಂ ಕೊಟ್ಟೊಡದನೇಱಿ ಪೋಗಿ-

ಮ|| ದನುಜಾನೀಕದ ನಿಂದದೊಂದು ನೆಲೆಯಂ ಮುಟ್ಟುತ್ತೆ ಮಾದೇವನಿ
ತ್ತ ನಿಜೋಗ್ರಾಸ್ತ್ರದೆ ದೈತ್ಯರೆಂಬ ಪೆಸರಿಲ್ಲೆಂಬಂತುಟಂ ಮಾಡಿ ಬಂ ।
ದೆನಿತಾನುಂ ಮಹಿಮಾಗುಣಕ್ಕೆ ಕಣಿಯಾಗಿರ್ದೊಂದು ಪೆಂಪಿಂದಮಿಂ
ದ್ರನೊಳರ್ಧಾಸನಮೇಱಿದೊಳ್ಪು ಹರಿಗಂಗಕ್ಕುಂ ಪೆಱಂಗಕ್ಕುಮೇ ॥ ೨೮

ವ|| ಅಂತು ದೇವಲೋಕದೊಳ್ ತನ್ನ ಮಾತೆ ಮಾತಾಗಿರ್ದ ಪರಾಕ್ರಮಧವಳನ ಪರಾಕ್ರಮಕ್ಕಂ ಗಂಡಗಾಡಿಗಂ ರಂಭೆ ಸೋಲ್ತು ಸೈರಿಸಲಾಱದೇಕಾಂತದೊಳ್ ಮೇಲೆ ಬಿೞ್ದೊಡೆ-

ಕಂ|| ಎಂದು ಪುರಂದರನರಸಿಯ
ಯಂದು ದಲೆನಗಬ್ಬೆಯೇ ತೊದಳ್ ನುಡಿಯದೆ ಪೋ ।
ಗೆಂದೊಡದೊಂದಬ್ದದೊಳೆ ಬೃ
ಹಂದಳೆಯಾಗೆಂದು ಮುನಿದು ಶಾಪವನಿತ್ತಳ್ ॥ ೨೯

ವ|| ಇತ್ತೊಡೆಂತುಮಾನ್ ಪರಸ್ತ್ರೀಯರ ದೆಸೆಯೊಳಮಣ್ಣನ ನನ್ನಿಯ ವರ್ಷಾವಧಿಯೊಳ ಮೋತು ಪಿಡಿವೆಂ ನಿನ್ನ ನುಡಿಯೊಳೇ ದೋಷಮೆಂದು ತನ್ನ ಶೌಚದ ಮೇಗಣ ಕಲಿತನಮುಮಂ

ಭೋಜನವನ್ನು ಮಾಡಿದನು. ಜೊತೆಯಲ್ಲಿಯೇ ತಾಂಬೂಲವನ್ನು ಸ್ವೀಕರಿಸಿದನು. ತಾನು ಧರಿಸುವ ಎಲ್ಲ ಆಭರಣಗಳನ್ನು ತೊಡಿಸಿ ಅರ್ಜುನನನ್ನು ಕೋಟಿರೀತಿಯಿಂದ ಕೊಂಡಾಡಿದನು. ಕೆಲವುದಿನಗಳಿದ್ದು ತಾನು ಕೊಲ್ಲಲು ಅಸಾಧ್ಯರಾಗಿದ್ದ ನಿವಾತಕವಚ ಕಾಲಕೇಯ ಪೌಲೋಮ ತುಳುತಾಳುಕರೆಂಬ ಅರುವತ್ತು ಕೋಟಿ ರಾಕ್ಷಸರನ್ನು ಗೆದ್ದು ಕೊಡಬೇಕು ಎಂದು ಕೇಳಿದನು. ಅರ್ಜುನನು ಸಾರಥಿಯಾದ ಮಾತಲಿಯೊಡನೆ ಕೂಡಿ ಅನೇಕ ರೀತಿಯ ಬಾಣಗಳಿಂದ ತುಂಬಿದ ತೇರನ್ನು ಹತ್ತಿ ೨೮. ರಾಕ್ಷಸ ಸಮೂಹವು ವಾಸಮಾಡುತ್ತಿದ್ದ ಸ್ಥಳವನ್ನು ಮುಟ್ಟಿದನು. ಮಹಾದೇವನು ತನಗೆ ಕೊಟ್ಟ ಭಯಂಕರವಾದ ಪಾಶುಪತಾಸ್ತ್ರದಿಂದ ಆ ರಾಕ್ಷಸರನ್ನು ಹೆಸರಿಲ್ಲದಂತೆ ಮಾಡಿ ಬಂದನು. ವಿಶೇಷ ಮಹಾತ್ಮೆಗೆ ಆಕರವಾದ ಗೌರವದಿಂದ ಇಂದ್ರನೊಡನೆ ಅರ್ಧಾಸನ (ಮಪೀಠ)ವನ್ನು ಹತ್ತುವ ಸೌಭಾಗ್ಯವು ಅರ್ಜುನನಿಗಲ್ಲದೆ ಮತ್ತಾರಿಗೆ ಸಾಧ್ಯ. ವ|| ಹಾಗೆ ದೇವಲೋಕದಲ್ಲಿ ತನ್ನ ಮಾತೇ ಮಾತಾಗಿದ್ದ ಪರಾಕ್ರಮಧವಳನ ಪೌರುಷಕ್ಕೂ ಸೌಂದರ್ಯಕ್ಕೂ ರಂಭೆಯು ಸೋತು ಸಹಿಸಲಾರದೆ ರಹಸ್ಯವಾಗಿ ಬಂದು ಮೇಲೆ ಬಿದ್ದು ತನ್ನನ್ನು ಸ್ವೀಕರಿಸಬೇಕೆಂದು ಪ್ರಾರ್ಥಿಸಿದಳು. ೨೯. 'ಎಲ್ಲಿಯ ವರೆಗೆ ನೀನು ಇಂದ್ರನ ರಾಣಿಯಾಗಿದ್ದೀಯೋ ಅಲ್ಲಿಯವರೆಗೆ ನೀನು ನಿಜವಾಗಿಯೂ ನನಗೆ ತಾಯಿಯಾಗಿಗ್ದೀಯೆ. ಕೆಟ್ಟ ಮಾತನಾಡದೆ ಹೋಗು ಎಂದು ಅವಳನ್ನು ಅರ್ಜುನನು ತಿರಸ್ಕರಿಸಿದನು. ರಂಭೆಗೆ ಕೋಪ ಬಂದಿತು. 'ಒಂದು ವರ್ಷಕಾಲ ಬೃಹಂದಳೆಯಾಗು' ಎಂದು ಶಾಪವನ್ನು ಕೊಟ್ಟಳು. ವ|| ಹೇಗೂ ನಮ್ಮಣ್ಣನ ಪ್ರತಿಜ್ಞೆಯ

ಸೌಭಾಗ್ಯದ ಮೇಗಣ ಬಲ್ಲಾಳ್ತನಮುಮನಿಂದ್ರಲೋಕದಿಂ ಪೊಗಟೆಸಿ ಸುಖಮಿರ್ಪನ್ನೆಗಮಿತ್ತ ವಿಕ್ರಾಂತತುಂಗನ ತಡೆದುದರ್ಕೆ ಯುಧಿಷ್ಠಿರ ಭೀಮಸೇನ ನಕುಳ ಸಹದೇವರುಂ ದ್ರೌಪದಿಯುಂ ವ್ಯಾಕುಳಚಿತ್ತರಾಗಿ-

ಸ್ರ ॥ ಆ ದಿವ್ಯಾಸ್ತ್ರಂಗಳಂ ಸಾಧಿಸಲೆ ನೆಗಟ್ದ ಪಾರಾಶರಂ ಪೇೞೆ ಮುನ್ನಂ
ಪೋದಂ ಸಂದಿಂದ್ರಕೀಲಕ್ಕದನಱಿವಮದೇನಾದುದೋ ಕಾರ್ಯಸಿದ್ಧಿ ।
ಪ್ರಾದುರ್ಭಾವಕ್ಕೆ ವಿಘ್ನಂ ಪಲವೊಳವಱಿಯಲ್ಬರ್ಕುಮೇ ಬಾರದಲ್ಲಿಂ
ಪೋದಂ ವಿಕ್ರಾಂತತುಂಗಂ ಗಡಮದನಱಿಯಲ್ಕಾಗದಿನ್ನೆಲ್ಲಿ ಕಾಣ್ಬಂ ॥ ೩೦

ವ॥ ಎಂದು ಪೋದ ದೆಸೆಯನಱಿಯದೆ ಚಿಂತಾಕ್ರಾಂತರಾಗಿ ಮಾರ್ಕಂಡೇಯನೆಂಬ ದಿವ್ಯಜ್ಞಾನಿಗಳ ದಿವ್ಯೋಪದೇಶದೊಳಯ್ವರುಂ ಗಂಧಮಾದನಗಿರಿಗೆವಂದು ತದ್ಗಿರೀಂದ್ರದೊಳ್ ಭೀಮಸೇನಂ ದ್ರೌಪದಿಯ ಬಯಕೆಗೆ ಧನದನ ಕೊಳದೊಳಗಣ ಕನಕಕಮಳಂಗಳಂ ತರಲೆಂದು ಪೋಗಿ-

ಕಂ॥ ಪ್ರಕಟಿತ ಸಾಹಸನಱುವ
ತ್ತು ಕೋಟಿ ಧನದಾನುಚರರನತಿ ರೌದ್ರಭಯಾ ।
ನಕಮಾಗೆ ಕೊಂದು ಸೌಗಂ
ಧಿಕಕಾಂಚನಕಮಳಹರಣಪರಿಣತನಾದಂ ॥ ೩೧

ವ॥ ಮತ್ತಂ ಜಟಾಸುರನೆಂಬಸುರನನಾ ಗಿರೀಂದ್ರಕಂದರದೊಳ್ ಸೀಳ್ದು ಸೀಱುಂಬುಳಾಡಿ ಕೆಲವು ದಿವಸಮನಿರ್ದೊಂದು ದಿವಸಮೊರ್ವನೆ ಬೇಂಟೆಯ ನೆವದಿಂದಲ್ಲಿಂ ತಳರ್ದು ಬಟ್ಟೆಯ ಕಣ್ಣೊಳಡ್ಡಂಬಿಟ್ಟಿರ್ದ ವೃದ್ಧ ವಾನರನಂ ಕಂಡು-

ವರ್ಷಾವಧಿಯಲ್ಲಿ ಪರಸ್ತ್ರೀಯರ ಬಳಿ ಇರಬೇಕಾಗಿ ಬರುವ ಸಂದರ್ಭಕ್ಕಾಗಿ ಈ ಶಾಪವನ್ನು ಸಂತೋಷದಿಂದ ಅಂಗೀಕಾರಮಾಡುತ್ತೇನೆ. ನಿನ್ನ ಮಾತಿನಲ್ಲಿ ದೋಷವೇನಿಲ್ಲ ಎಂದನು. ಹೀಗೆ ತನ್ನ ಶುದ್ಧನಡತೆಯೊಡನೆ ಕೂಡಿದ ಪೌರುಷವನ್ನೂ ಸೌಭಾಗ್ಯದಿಂದ ಕೂಡಿದ ಪರಾಕ್ರಮವನ್ನೂ ಇಂದ್ರಲೋಕದವರಿಂದ ಹೊಗಳಿಸಿಕೊಂಡು ಕೆಲವುಕಾಲ ಇಂದ್ರಲೋಕದಲ್ಲಿ ಸುಖವಾಗಿದ್ದನು. ಅಷ್ಟರಲ್ಲಿ ಈ ಕಡೆ ವಿಕ್ರಾಂತತುಂಗನಾದ ಅರ್ಜುನನು ಹಿಂತಿರುಗುವುದಕ್ಕೆ ಸಾವಕಾಶಮಾಡಿದುದಕ್ಕಾಗಿ ಧರ್ಮರಾಜ, ಭೀಮ, ನಕುಳ, ಸಹದೇವ, ದ್ರೌಪದಿ ಮೊದಲಾದವರು ಚಿಂತಾಕ್ರಾಂತರಾದರು. ೩೦. ಪ್ರಸಿದ್ಧನಾದ ವ್ಯಾಸಮಹರ್ಷಿಯು ದಿವ್ಯಾಸ್ತ್ರಗಳನ್ನು ಪಡೆಯಲೇಬೇಕು ಎಂದು ಹೇಳಲು ಅರ್ಜುನನು ಪ್ರಸಿದ್ಧವಾದ ಇಂದ್ರಕೀಲಕ್ಕೆ ಹೋದನು. ಅದೇನಾಯಿತೋ ಫಲಪ್ರಾಪ್ತಿಯಾಗುವುದಕ್ಕೆ ಅನೇಕ ವಿಘ್ನಗಳಿವೆ. ಅದನ್ನು ತಿಳಿಯಲೂ ನಮಗೆ ಸಾಧ್ಯವಾಗುವುದಿಲ್ಲ. ಅರ್ಜುನನು ಇಂದ್ರಕೀಲದಿಂದ ಮುಂದೆ ಹೋದನೋ ಇಲ್ಲವೋ ಎಂಬುದನ್ನೂ ತಿಳಿಯಲಾಗುವುದಿಲ್ಲ; ಅವನನ್ನು ಇನ್ನೆಲ್ಲಿ ಹುಡುಕೋಣ. ವ॥ ಎಂದು ಅರ್ಜುನನು ಹೋದ ದಿಕ್ಕನ್ನು ತಿಳಿಯದೆ ಚಿಂತಾಕ್ರಾಂತರಾಗಿ ಮಾರ್ಕಂಡೇಯನೆಂಬ ದಿವ್ಯಜ್ಞಾನಿಯ ದಿವ್ಯೋಪದೇಶದಿಂದ ಅಯ್ದು ಮಂದಿಯೂ ಗಂಧಮಾದನಪರ್ವತಕ್ಕೆ ಬಂದರು. ಆ ಶ್ರೇಷ್ಠಪರ್ವತದಲ್ಲಿ ಭೀಮಸೇನನು ದ್ರೌಪದಿಯ ಆಶೆಯನ್ನು ತೀರಿಸುವುದಕ್ಕಾಗಿ ಕುಬೇರನ ಸರೋವರದಲ್ಲಿದ್ದ ಚಿನ್ನದ ಕಮಲಗಳನ್ನು

ಚಂ॥ ತೊಲಗೆನೆ ಬಟ್ಟೆಯಿಂ ತೊಲಗಲಾಱೆನಶಕ್ತನೆನಾರ್ಪೊಡೆನ್ನನಿನ್
ತೊಲಗಿಸಿ ಪೋಗು ನೀನೆನೆ ವೃಕೋದರನೊಯ್ಯನೆ ನಕ್ಕು ಬಾಲಮಂ ।
ಸಲೆ ಮುರಿದೆತ್ತಲಾಟಿಸೆ ಧರಿತ್ರಿಗೆ ಕೀಲಿಸಿದಂತುಟಾಗೆ ದೋ
ರ್ವಲದ ಪೊಡರ್ಪುಗೆಟ್ಟು ನಡೆ ನೋಡಿ ಮರುತ್ಸುತನಂ ಮರುತ್ಸುತಂ ॥ ೩೨

ಕಂ॥ ನೀನೆಮ್ಮಣ್ಣನೆ ವಂಶದ
ವಾನರನಲ್ಲಯ್ ವಲಂ ಮಹಾಬಲ ಪೇೞೇ ।
ಕೀ ನಗದೊಳಿರ್ದೆಯೆನೆ ತ
ದ್ವಾನರನಬ್ಬಿರ್ತು ಭೀಮನೆಂಬಂ ನೀನೇ ॥ ೩೩

ವ॥ ಎಂಬುದುಮಪ್ಪೆನೆಂದೊಡೆ ನಿಮ್ಮಣ್ಣನಪ್ಪಣುವನೆ ನಾನಪ್ಪೆನೆಂದು ಪೇೞ್ವುದುಮಾಗಳ್ ಸಾಷ್ಟಾಂಗಮೆಱಗಿ ಪೊಡವಟ್ಟ ಭೀಮಸೇನನಂ ಪರಸಿ–

ಕಂ॥ ಎನ್ನಂತಪ್ಪೊಡವುಟ್ಟದ
ರಿನ್ನಿನಗೊಳರಾಗಲಹಿತರಿದಿರಾಂಪರೆ ಪೇೞ್ ।
ನಿನ್ನಂ ಪಗೆವರ ಬೇರೊಳ್
ಬೆನ್ನೀರಂ ಪೊಯ್ದು ನಿನಗೆ ಮಾೞ್ಪೆಂ ಧರೆಯಂ ॥ ೩೪

ತರಲು ಹೋಗಿ ೩೧. ಸಾಹಸವನ್ನು ಪ್ರದರ್ಶಿಸಿ ಕುಬೇರನ ಅರವತ್ತು ಕೋಟಿ ಭಟರನ್ನು ಬಹಳ ರೌದ್ರವೂ ಭಯಂಕರವೂ ಆಗಿರುವ ರೀತಿಯಲ್ಲಿ ಕೊಂದು ಸುಗಂಧದಿಂದ ಕೂಡಿದ ಚಿನ್ನದ ಕಮಲಗಳನ್ನು ಅಪಹರಿಸಿಕೊಂಡು ಬಂದನು. ೩೨. ಮತ್ತು ಜಟಾಸುರನೆಂಬ ರಾಕ್ಷಸನನ್ನು ಆ ಪರ್ವತದ ಗುಹೆಯಲ್ಲಿ ಸೀಳಿ ಚೆಲ್ಲಾಪಿಲ್ಲಿ ಮಾಡಿ ಅಲ್ಲಿ ಕೆಲವು ದಿವಸವಿದ್ದನು. ಒಂದು ದಿವಸ ಒಬ್ಬನೇ ಬೇಟೆಗಾಗಿ ಅಲ್ಲಿಂದ ಹೊರಟು ದಾರಿಯ ಎದುರಿಗೆ ಅಡ್ಡಲಾಗಿ ಬಿದ್ದಿದ್ದ ಮುದಿಕಪಿಯನ್ನು ಕಂಡು 'ದಾರಿಯಿಂದ ತೊಲಗು' ಎಂದನು. ಅದಕ್ಕೆ ಆ ಕಪಿಯು ತೊಲಗಲಶಕ್ತನಾಗಿದ್ದೇನೆ. ನಿನಗೆ ಸಾಮರ್ಥ್ಯವಿದ್ದರೆ ನೀನೇ ನನ್ನನ್ನು ತೊಲಗಿಸಿ ಹೋಗು' ಎಂದಿತು. ಭೀಮನು ಹುಸಿನಗೆ ನಕ್ಕು ಬಾಲವನ್ನು ಚೆನ್ನಾಗಿ ಬಗ್ಗಿಸಿ ಎತ್ತಲು ಪ್ರಯತ್ನಿಸಿದರೂ ಭೂಮಿಗೆ ಬೆಸೆದಿರುವಂತಿರಲು ತನ್ನ ಬಾಹುಬಲದ ಸಾಮರ್ಥ್ಯವು ನಾಶವಾಯಿತೇ ವಿನಾ ಭೀಮಸೇನನು ಆ ವಾನರನ ಬಾಲವನ್ನು ಅಲುಗಿಸಲೂ ಆಗಲಿಲ್ಲ. ಆಗ ಆಂಜನೇಯನನ್ನು ದೀರ್ಘವಾಗಿ ನೋಡಿ ೩೩. 'ನೀನು ನಿಜವಾಗಿಯೂ ನಮ್ಮಣ್ಣನಾದ ವಾಯುಪುತ್ರನೇ (ಆಂಜನೇಯನೇ) ಅಲ್ಲವೇ? ಪರಾಕ್ರಮಶಾಲಿಯೇ ಏಕೆ ಈ ಪರ್ವತದಲ್ಲಿದ್ದೀಯೆ ಎಂಬುದನ್ನು ಹೇಳು' ಎಂದು ಕೇಳಿದನು. ಆ ವಾನರನು ಪ್ರೀತಿಸಿ ನೋಡಿ ಓಹೋ ಭೀಮನೆಂಬುವವನು ನೀನೆಯೊ ವ॥ ಎನ್ನಲು 'ಭೀಮನು ನಾನು' ಎಂದನು. ಹೌದು, ಹಾಗಾದರೆ ನಿಮ್ಮಣ್ಣನಾದ ಹನುಮಂತನು ನಾನೆಂಬುದೂ ಸತ್ಯ ಎಂದನು, ಆಗ ಸಾಷ್ಟಾಂಗ ನಮಸ್ಕಾರಮಾಡಿದ ಬೀಮನನ್ನು ಆಂಜನೇಯನು ಹರಸಿದನು. ೩೪. ನನ್ನಂತಹ ಸಹೋದರರು ನಿನಗೆ ಇನ್ನೂ ಇರುವಾಗ ಶತ್ರುಗಳಾದವರು ನಿನ್ನನ್ನು ಪ್ರತಿಭಟಿಸಲು ಶಕ್ತರಾಗುತ್ತಾರೆಯೇ. ನಿನ್ನನ್ನು ದ್ವೇಷಿಸುವವರ ಬೇರಿನಲ್ಲಿ ಬಿಸಿನೀರನ್ನು

ವ|| ಎಂಬುದುಂ ಭೀಮಸೇನನಿಂತೆಂದಂ-

ಮ|| ಬೆಸನಂ ಪೂಣ್ದು ಕಡಂಗಿ ಪಾಯ್ದು ಕಡಲಂ ಮುಂ ಪೂಣ್ದರಂ ಕೊಂದು ಪೊ
ಕ್ಕು ಸಮಂತಾಗಡೆ ಲಂಕೆಯಂ ಬನಮನಾಟಂದುರ್ಕಿ ಕಿಟ್ಟಿಕ್ಕಿ ಸಂ ।
ತಸಮಂ ಸೀತೆಗೆ ಮಾಡಿ ಸುಟ್ಟು ಪೊೞಲಂ ಕಾಳಾನಳಂಗಿತ್ತು ಬೇ
ವಸಮಂ ರಾಮನಿನುಯ್ದು ನೀಂಬರೆಗಮೇನಾ ಕೌರವರ್ ಗಂಡರೇ ॥ ೩೫

ಕಂ|| ಎನಗೆ ದಯೆಗೆಯ್ವುದೊಂದನೆ
ಮೊನೆಯೊಳ್ ವಿಜಯಂಗೆ ವಿಜಯಮಾಗಿರೆ ನೀಮಾ ।
ತನ ಕೇತನದೊಳ್ ಫಣಿಕೇ
ತನಬಲಕುತ್ಪಾತಕೇತುವಪ್ಪುದೆ ಸಾಲ್ಗುಂ ॥ ೩೬

ವ|| ಎಂದು ಬೇಡಿಕೊಂಡೊಡದೇವಿರಿದಿತ್ತೆನೆಂದಣುವನದೃಶ್ಯಮಾದನಾಗಳ್ ಭೀಮಸೇನಂ ಬೀಡಿಂಗೆ ವಂದು ಧರ್ಮಪುತ್ರಂಗಾ ಮಾತೆಲ್ಲಮಂ ಪೇೞ್ದು ವಿಕ್ರಮಾರ್ಜುನನ ಬರವನೆ ಪಾರುತ್ತಿರ್ಪನ್ನೆಗಮಿತ್ತ ವಿಬುಧವನಜವನಕಳಹಂಸನುಂ ಪಲವುಂ ದಿವಸಮಗಲ್ದಿರ್ದ ತನ್ನೊಡವುಟ್ಟಿದರಂ ನೆನೆದು ಪೋಪೆನೆಂದಿಂದ್ರನಂ ಬೀೞ್ಕೊಂಡು ತನಗೆ ದೇವೇಂದ್ರನಿತ್ತ ಐಂದ್ರಮೆಂಬ ದಿವ್ಯಾಸ್ತ್ರಮುಮಂ ನೈಷ್ಠಿಕಮೆಂಬ ಮುಷ್ಟಿಯುಮಂ ಕೆಯ್ಕೊಂಡು ದೇವಸ್ತ್ರೀಯರ ಮನಮನಿೞ್ಕುಳಿಗೊಂಡಿಂದ್ರಂ ತನ್ನ ಪುಷ್ಪಕಮನೇಱಿಸಿ ಮಾತಳಿಯಂ ಸಾರಥಿಯಾಗಲ್ವೇೞ್ದು

ಸುರಿದು ನಿನಗೆ ರಾಜ್ಯವನ್ನು ದೊರಕಿಸುತ್ತೇನೆ ಎಂದನು. ವ|| ಅದಕ್ಕೆ ಭೀಮಸೇನನು ಹೀಗೆ ಹೇಳಿದನು. ೩೫. ಅಣ್ಣಾ; ಕಾರ್ಯ ಪ್ರತಿಜ್ಞೆಮಾಡಿ ಉತ್ಸಾಹಗೊಂಡು ಕಡಲನ್ನು ದಾಟಿದೆ ಪ್ರತಿಜ್ಞೆಮಾಡಿದ್ದವರನ್ನು ಕೊಂದೆ, ಆಗಲೇ ಲಂಕಾಪ್ರವೇಶಮಾಡಿದೆ, ಅಶೋಕವನ್ನಾಕ್ರಮಿಸಿ ಉತ್ಸಾಹದಿಂದ ಉಬ್ಬಿ (ಅದನ್ನು) ನಾಶಪಡಿಸಿದೆ. ಸೀತಾದೇವಿಗೆ ಸಂತೋಷವನ್ನುಂಟುಮಾಡಿದೆ. (ಲಂಕಾ) ಪಟ್ಟಣವನ್ನು ಸುಟ್ಟು ಹಾಕಿದೆ (ಕಾಲಾಗ್ನಿಗೆ ಕೊಟ್ಟು) ರಾಮನ ದುಃಖವನ್ನು ಪರಿಹಾರಮಾಡಿದೆ. ನಿನ್ನವರೆಗೂ (ನಿನ್ನನ್ನೂ ಪ್ರತಿಭಟಿಸುವಷ್ಟು) ಆ ಕೌರವರು ಶೂರರೇ ಏನು? ೩೬. 'ನನಗೆ ದಯಮಾಡಿ ಒಂದನ್ನು ಕರುಣಿಸಬೇಕು; ಯುದ್ಧದಲ್ಲಿ ಅರ್ಜುನನಿಗೆ ವಿಜಯವಾಗುವ ಹಾಗೆ ನೀವು ಆತನ ಧ್ವಜದಲ್ಲಿದ್ದು ದುರ್ಯೋಧನನ ಸೈನ್ಯಕ್ಕೆ ಪ್ರತಿಶಕುನವನ್ನೂ ಸೂಚಿಸುವ ಕೇತುಗ್ರಹವಾಗಿರುವುದೇ ಸಾಕು? ಎಂದು ಬೇಡಿದನು. ವ|| 'ಅದೇನು ದೊಡ್ಡದು ಆಗಬಹುದು' ಎಂದು ಹೇಳಿ ಹನುಮಂತನು ಅದೃಶ್ಯನಾದನು. ಭೀಮಸೇನನು ಬೀಡಿಗೆ ಬಂದು ಧರ್ಮರಾಜನಿಗೆ ಆ ಸಮಾಚಾರವೆಲ್ಲವನ್ನೂ ತಿಳಿಸಿದನು. ಎಲ್ಲರೂ ವಿಕ್ರಮಾರ್ಜುನನ ಬರವನ್ನೇ ಇದಿರುನೋಡುತ್ತಿದ್ದರು. ಈಕಡೆ ವಿದ್ವಾಂಸರೆಂಬ ಕಮಲವನಕ್ಕೆ ಶ್ರೇಷ್ಠವಾದ ಹಂಸದಂತಿರುವ ಅರ್ಜುನನೂ ಅನೇಕಕಾಲ ಅಗಲಿದ್ದ ತನ್ನ ಸಹೋದರರನ್ನು ಜ್ಞಾಪಿಸಿಕೊಂಡು ಹಿಂದಿರುಗಲು ಮನಸ್ಸುಮಾಡಿ ಇಂದ್ರನನ್ನು ಬೀಳ್ಕೊಟ್ಟು ತನಗೆ ದೇವೇಂದ್ರನು ಕೊಟ್ಟ ಐಂದ್ರವೆಂಬ ದಿವ್ಯಾಸ್ತ್ರವನ್ನೂ ನೈಷ್ಠಿಕವೆಂಬ ಮುಷ್ಟಿಯನ್ನೂ (ಮಂತ್ರವಿಶೇಷ) ಅಂಗೀಕಾರಮಾಡಿ ಇಂದ್ರನು ತನ್ನನ್ನು ಅವನ ಪುಷ್ಪಕವಿಮಾನವನ್ನು ಹತ್ತಿಸಿ ಮಾತಲಿಯನ್ನು ಸಾರಥಿಯಾಗಿರ ಹೇಳಿ ಕಳುಹಿಸಲು

**ಕಟೆಪೆ ನಾಕಲೋಕದ್ವಾರಮಾಗಿರ್ದ ಗಂಧಮಾದನಗಿರಿಗೆವಂದು ಕಾರ್ಗಾಲದ ಬರವಂ ಚಾದಗೆ ಪಾರ್ವಂತೆ ತನ್ನ ಬರವನೆ ಪಾರುತ್ತಿರ್ದ ಧರ್ಮಪುತ್ರನ ಮರುತ್ಸುತನ ಪಾದಕಮಲಂಗಳಂ ನಿಜಮಕುಟಮರೀಚಿಗಳಿಂದಮರ್ಚಿಸಿ ತದೀಯಾಶೀರ್ವಚನಮನಾಂತು ತನಗ ಪೊಡವಟ್ಟ ನಕುಳ ಸಹದೇವರಿರ್ಬರುಮನಪ್ಪಿಕೊಂಡು ಪರಸಿ ಬಟೆಯಮಿಂದ್ರಕೀಲನಗೇಂದ್ರದೊಳೀಶ್ವರನ ವರ ಪ್ರಸಾದದಿಂ ಪಡೆದ ದಿವ್ಯಾಸ್ತ್ರಮಂ ತೋಜಿ ತನ್ನನಿಂದ್ರನೊಡಗೊಂಡು ಪೋದುದುಮನಿಂದ್ರಲೋಕದೊಳಾತನಲ್ಲಿ ಪಡೆದ ಮಹಿಮೆಯುಮನಜಿಯೆ ಪೇಟ್ದು ನಾವಿಲ್ಲಿರಲ್ವೇಡ ದ್ವೈತವನದೊಳಿರ್ಪಂ ಬನ್ನಿಮೆಂದು ಮಾತಳಿಯಂ ಬೀಟ್ಕೊಟ್ಟು ಕಟೆಪಿ ನಿಜಪರಿಜನಸಹಿತಂ ಬಂದು ಸುಖಮಿರ್ಪನ್ನೆಗಮೊಂದು ದಿವಸಮೊಂದು ಮಾಯಾ ಮತ್ತಹಸ್ತಿ-**

**ಮ॥ ಮಸಕಂ ಕಾಯ್ದು ಜವಂ ಜವಂಗಮಿದಿರೊಳ್ ನೋಡಲ್ಕಗುರ್ವಾಗೆ ಮಾಂ**
**ದಿಸಿಮಿಾ ವಂದುದು ಕೊಂದುದೆಂದು ಭಯದಿಂ ವಿಪ್ರರ್ ತೆರಳ್ದೋಡೆ ತಾ ।**
**ಪಸರಂ ಬೆರ್ಚಿಸಿ ತೂಳ್ದಿ ಬೇಳ್ವರಣಿಯಂ ಕೊಂಡಾಶ್ರಮಕ್ಕಿಂತು ಬೇ**
**ವಸಮಂ ಮಾಡುವುದಾಯ್ತದೊಂದು ವಿಭವಂ ಮತ್ತೇಭವಿಕ್ರೀಡಿತಂ ॥ ೩೭**

**ವ॥ ಆಗಳಾ ಮದಾಂಧಗಂಧಸಿಂಧುರದ ಕೋಳಾಹಳಮಂ ತಾಪಸರ್ ಬಂದು ಯುಧಿಷ್ಠಿರಂಗಱಿಪಿ ನೀಮೆಮಗದಱ ಕೈಗೆ ಪೋದರಣಿಯಂ ತಂದೀಯದಾಗಳಿಷ್ಟಿ ವಿಘ್ನಂಗಳಂ ಮಾಡಿದಿರೆಂದೊಡಯ್ವರುಂ ಪ್ರಚಂಡಕೋದಂಡಹಸ್ತರ್ ಕಾಳಕಾಳಸ್ವರೂಪಮಂ ಕೆಯ್ಕೊಂಡು**

ಸ್ವರ್ಗಲೋಕದ ಬಾಗಿಲಾಗಿದ್ದ ಗಂಧಮಾದನಪರ್ವತಕ್ಕೆ ಬಂದನು. ವರ್ಷಾಕಾಲದ ಆಗಮನವನ್ನು ಚಾತಕಪಕ್ಷಿಯು ನಿರೀಕ್ಷಿಸುವಂತೆ ತನ್ನ ಬರವನ್ನೇ ಎದುರು ನೋಡುತ್ತಿದ್ದ ಧರ್ಮರಾಜ ಮತ್ತು ಭೀಮರ ಪಾದಕಮಲಗಳನ್ನು ತನ್ನ ಕಿರೀಟದ ಕಿರಣಗಳಿಂದ ಪೂಜಿಸಿ ಅವರ ಆಶೀರ್ವಾದವನ್ನು ಧರಿಸಿದನು. ತನಗೆ ನಮಸ್ಕಾರಮಾಡಿದ ನಕುಲಸಹದೇವರಿಬ್ಬರನ್ನೂ ಪ್ರೀತಿಯಿಂದ ಆಶೀರ್ವಾದಮಾಡಿದನು. ಅನಂತರ ಇಂದ್ರಕೀಲಪರ್ವತದಲ್ಲಿ ಈಶ್ವರನ ವರಪ್ರಸಾದದಿಂದ ಪಡೆದ ದಿವ್ಯಾಸ್ತ್ರ (ಪಾಶುಪತಾಸ್ತ್ರ)ವನ್ನು ತೋರಿ ತನ್ನನ್ನು ಇಂದ್ರನು ಜೊತೆಯಲ್ಲಿ ಕರೆದುಕೊಂಡು ಹೋದುದನ್ನೂ ಇಂದ್ರಲೋಕದಲ್ಲಿ ಇಂದ್ರನಿಂದ ಪಡೆದ ಮಹಿಮೆ (ಗೌರವ) ತಿಳಿಯುವ ಹಾಗೆ ವಿಸ್ತಾರವಾಗಿ ಹೇಳಿದನು. ನಾವಿಲ್ಲಿರುವುದು ಬೇಡ ದ್ವೈತವನದಲ್ಲಿರೋಣ ಬನ್ನಿ ಎಂದು ಹೇಳಿ, ಮಾತಲಿಯನ್ನು ಕಳುಹಿಸಿಕೊಟ್ಟು ತನ್ನ ಬಂಧುಗಳ ಸಮೇತ ದ್ವೈತವನಕ್ಕೆ ಬಂದು ಸುಖವಾಗಿದ್ದನು. ೩೭. ಹಾಗಿರುವಾಗ 'ರಭಸ ಕೋಪ ಮತ್ತು ವೇಗದಲ್ಲಿ ಯಮನಿಗೂ ಅದರ ಎದುರಿನಲ್ಲಿ ನಿಂತು ನೋಡುವುದಕ್ಕೆ ಭಯಂಕರವಾಗುವ ಹಾಗೆ ಇರುವ ಮಾಯಾಗಜವು ಬಂದಿತು! ತಡೆಯಿರಿ, ಕೊಂದುಹಾಕುತ್ತಿದೆ' ಎಂದು ಬ್ರಾಹ್ಮಣರು ಭಯದಿಂದ ಗುಂಪಾಗಿ ಓಡಿದರು. ತಪಸ್ವಿಗಳನ್ನು ಹೆದರಿಸಿ ನೂಕಿ ಅವರು ಹೋಮಮಾಡುವುದಕ್ಕೆ ಸಹಾಯಕವಾದ ಅರಣಿಯನ್ನು (ಅಗ್ನಿಯನ್ನುಂಟುಮಾಡಲು ಉಪಯೋಗಿಸುವ ಕಡೆಗೋಲು) ಕೊಂಡು ಓಡಿತು. ವ॥ ಆಗ ಆ ಮದ್ದಾನೆಯ ಕೋಲಾಹಲವನ್ನು ತಪಸ್ವಿಗಳು ಬಂದು ಧರ್ಮರಾಜನಿಗೆ ತಿಳಿಸಿ ಅದು ಕೊಂಡು ಹೋಗಿರುವ ಅರಣಿಯನ್ನು ನೀವು ನಮಗೆ ತಂದುಕೊಡದಿದ್ದರೆ ಯಜ್ಞವಿಘ್ನಮಾಡಿದವರಾಗುತ್ತೀರಿ ಎಂದರು. ಅಯ್ದು ಜನವೂ

ಮದಾಂಧಗಂಧಸಿಂಧುರದ ಬೞಿಯಂ ನಿರ್ಬಂದದಿಂ ತಗುಳ್ವುದುಮಾ ಮಾಯಾ ಮತ್ತಹಸ್ತಿಯುಂ ಮೂಱು ಜಾವಂಬರಂ ರೂಪುದೋಱಿ ಪರಿದು ಬೞಿಯಮದೃಶ್ಯಮಾದೊಡಯ್ವರುಂ ಚೋದ್ಯಂ ಬಟ್ಟು ಘರ್ಮಕಿರಣಸಂತಾಪತಾಪಿತಶರೀರರೊಂದಾಲದ ಮರದ ಕೆಳಗೆ ವಿಶ್ರಮಿಸೆ ಧರ್ಮ ಪುತ್ರಂ ನೀರಡಸಿ ಸಹದೇವನನೆಲ್ಲಿಯಾದೊಡಂ ನೀರಂ ಕೊಂಡು ಬೇಗಂ ಬಾಯೆಂದು ಪೇೞ್ದುದು ಮಂತೆಗೆಯ್ವೆನೆಂದು ಕೂಜಜ್ಜಳಚರಕುಳಕಳರವದೊಳಂ ಕಮಳಕುವಳಯರಜಃಕಷಾಯ ಪರಿಮಿಳದಳಿಪಟಳಜಟಿಳಮಾಗಿ ಬಂದು ತೀಡುವ ಮಂದಾನಿಳನಿಂ ನೀರ ದೆಸೆಯನಱಿದು ಪೋಗೆ ಪೋಗೆ-

ಕಂ॥ ಬಕ ಕಲಹಂಸ ಬಲಾಕ
ಪ್ರಕರ ಮೃದುಕ್ವಣಿತರಮ್ಯಮಿದಿರೊಳ್ ತೋಱಿ ।
ತ್ತು ಕೊಳಂ ಪರಿ ವಿಕಸಿತ ಕನ
ಕ ಕಂಜಕಿಂಜಲ್ಕಪುಂಜಪಿಂಜರಿತಜಳಂ ॥ ೩೮

ವ॥ ಅಂತು ಸೊಗಯಿಸುವ ಸರೋವರಮಂ ಕಂಡು ತಾನುಂ ನೀರಡಸಿದಪ್ಪುದಱಿಂದದಱ ಕೆಲದ ಲತೆಯ ಮೆಳೆಯೊಳ್ ಬಿಲ್ಲುಮಂಬುಮಂ ಸಾರ್ಚಿ ಕೊಳನಂ ಪೊಕ್ಕು ಕರಚರಣ ವದನಪ್ರಕ್ಷಾಲನಂಗೆಯ್ದು ನೀರಂ ಕುಡಿಯಲೆಂದು ನಿಜಾಂಜಲಿಪುಟಮಂ ನೀಡಿದಾಗಳೊಂದು ದಿವ್ಯವಚನಮಾಕಾಶದೊಳ್-

ಭಯಂಕರವಾದ ಬಿಲ್ಲನ್ನು ತರಿಸಿ ಪ್ರಳಯಕಾಲದ ಯಮನ ಆಕಾರವನ್ನು ತಾಳಿ ಆ ಮದ್ದಾನೆಯ ಮಾರ್ಗವನ್ನೇ ಅನುಸರಿಸಿ ಹಿಂದೆ ನಿರ್ಬಂಧದಿಂದ ಅಟ್ಟಿಕೊಂಡು ಹೋಗಲು ಆ ಮಾಯಾಮದಗಜವು ಮೂರು ಜಾವದವರೆಗೂ ತನ್ನ ಆಕಾರವನ್ನು ತೋರಿಕೊಂಡಿದ್ದು ಓಡಿ ಬಳಿಕ ಕಣ್ಮರೆಯಾಯಿತು. ಅಯ್ದು ಜನವೂ ಆಶ್ಚರ್ಯಪಟ್ಟು ಸೂರ್ಯನ ಬಿಸಿಲಿನ ಬೇಗೆಯಿಂದ ಸುಡಲ್ಪಟ್ಟ ಶರೀರವುಳ್ಳವರಾಗಿ ಒಂದು ಆಲದಮರದ ಕೆಳಗೆ ವಿಶ್ರಮಿಸಿಕೊಂಡರು ಧರ್ಮರಾಜನು ಬಾಯಾರಿ ಸಹದೇವನನ್ನು ಎಲ್ಲಿಂದಲಾರದೂ ಬೇಗ ನೀರನ್ನು ತೆಗೆದುಕೊಂಡು ಬಾ ಎಂದು ಹೇಳಿದನು. ಹಾಗೆಯೇ ಮಾಡುತ್ತೇನೆ ಎಂದು ಶಬ್ದಮಾಡುತ್ತಿರುವ ಜಲಚರಪ್ರಾಣಿಗಳ ಕಲಕಲಶಬ್ದದಿಂದಲೂ ಕಮಲಕನ್ನೈದಿಲೆಗಳ ಧೂಳಿನ ಒಗರಿನಿಂದ ಕೂಡಿದ ದುಂಬಿಗಳ ಸಮೂಹದಿಂದ ವ್ಯಾಪ್ತವಾಗಿ ಬಂದು ಬೀಸುವ ಮಂದಮಾರುತದಿಂದಲೂ ನೀರಿರುವ ಸ್ಥಳವನ್ನು ತಿಳಿದು ಆ ಕಡೆ ಹೋದನು. ೩೮. ಬಕ, ಹಂಸ, ಮತ್ತು ಬೆಳ್ಳಕ್ಕಿಗಳ ಸಮೂಹದ ನಯವಾದ ಶಬ್ದದಿಂದಲೂ ರಮ್ಯವಾಗಿ ಅರಳಿರುವ ಹೊಂದಾವರೆಯ ಕೇಸರಗಳ ರಾಶಿಯಿಂದಲೂ ಕೆಂಪು ಮಿಶ್ರವಾದ ಹಳದಿಯ ಬಣ್ಣವನ್ನುಳ್ಳ ನೀರಿನಿಂದಲೂ ಕೂಡಿದ ಸರೋವರವೊಂದು ಇದಿರಿನಲ್ಲಿ ಕಾಣಿಸಿಕೊಂಡಿತು. ವ॥ ಹಾಗೆ ಸೊಗಯಿಸುತ್ತಿರುವ ಸರೋವರವನ್ನು ನೋಡಿ ತಾನೂ ಬಾಯಾರಿದ್ದುದರಿಂದ ಅದರ ಪಕ್ಕದ ಬಳ್ಳಿಯ ಮೆಳೆಯಲ್ಲಿ ಬಿಲ್ಲನ್ನೂ ಬಾಣವನ್ನೂ ಇಟ್ಟು ಸರೋವರವನ್ನು ಪ್ರವೇಶಿಸಿ ಕೈಕಾಲುಮುಖವನ್ನು ತೊಳೆದುಕೊಂಡು ನೀರನ್ನು ಕುಡಿಯುವುದಕ್ಕೋಸ್ಕರ ತನ್ನ ಕೈಬೊಗಸೆಯನ್ನು ನೀಡಿದಾಗ ಒಂದು ಅಶರೀರವಾಣಿಯು ಆಕಾಶದಲ್ಲಿ ಹೀಗೆಂದಿತು.

ಕಂ॥ ತೋಯಜಷಂಡಮನಿದನಾ
ನಾಯತಿಯಿಂ ಕಾವೆನೆನ್ನ ಮಾತಿಂಗೆಲೆ ಕೌಂ ।
ತೇಯ ಮಱುಮಾತನಿತ್ತು ಮ
ದೀಯ ಸರೋವರದ ತೋಯಮಮಂ ಕುಡಿ ಕೊಂಡುಯ್ ॥ ೩೯

ವ॥ ಎಂಬುದುಮಾ ದಿವ್ಯವಚನಮನುಲ್ಲಂಘಿಸಿ ನೀರಟ್ಕೆಪೋಪಿನಂ ನೀರಂ ಕುಡಿದು ಪದ್ಮಪತ್ರೌಘಂಗಳಿಂ ತಮ್ಮಣ್ಣಂಗೆ ನೀರಂ ತೀವಿಕೊಂಡು ಸರೋವರದಿಂ ಪೊಱಮಟ್ಟೊಂದೆರಡಡಿಯ ನಿಡುತೆ ಗತಪ್ರಾಣನಾಗಿ ಬಿಟ್ದಿರ್ದನಿತ್ತ ಧರ್ಮಪುತ್ರಂ ಸಹದೇವಂ ತಡೆದುದರ್ಕುಮ್ಮಳಿಸಿ ನಕುಲನ ಮೊಗಮಂ ನೋಡಿ ಸಹದೇವನೊಡಂಗೊಂಡು ನೀರಂ ಕೊಂಡು ಬೇಗಂ ಬಾಯೆಂದು ಪೇಟ್ದೊಡಂತೆಗೆಯ್ವೆನೆಂದು ಸಹದೇವನ ಪೋದ ಪಜ್ಜೆಯನೆ ಪೋಗಿ ಕೊಳದ ತಡಿಯೊಳ್ ಬಿಟ್ದಿರ್ದ ತಮ್ಮನಂ ಕಂಡು ಚೋದ್ಯಂಬಟ್ಟು-

ಕಂ॥ ತಾನುಂ ಸರೋಜಷಂಡಮ
ನಾನತರಿಪು ಪೊಕ್ಕು ದಿವ್ಯವಚನಮನದನಂ ।
ತೇನುಂ ಬಗೆಯದೆ ಕುಡಿದ
ಜ್ಞಾನತೆಯಿಂ ನಂಜುಗುಡಿದರಂತಿರೆ ಕೆಡೆದಂ ॥ ೪೦

ವ॥ ಅನ್ನೆಗಂ ಯಮನಂದನನಿರ್ವರ ಬರವುಮಂ ಕಾಣದೆ ಶಂಕಾಕುಳಿತಚಿತ್ತನಾಗಿ ಕಿರೀಟಿಯಂ ಬೇಗಂ ಪೋಗಿ ನೀನಾ ಕೂಸುಗಳನೊಡಂಗೊಂಡು ನೀರಂ ಕೊಂಡು ತಡೆಯದೆ ಬಾಯೆಂಬುದುಮಂತೆಗೆಯ್ವೆನೆಂದು ಬಂದು ಕೊಳನ ತಡಿಯೊಳಚೇತನರಾಗಿ ಬಿಟ್ದಿರ್ದ ತಮ್ಮಂದಿರಿರ್ವರುಮಂ ಕಂಡು ವಿಸ್ಮಯಂಬಟ್ಟು-

೩೯. 'ಈ ಕೊಳವನ್ನು ನಾನು ಎಚ್ಚರದಿಂದ ಕಾಯುತ್ತಿದ್ದೇನೆ. ಎಲೈ ಕೌಂತೇಯನೆ ನನ್ನ ಮಾತಿಗೆ ಪ್ರತ್ಯುತ್ತರವನ್ನು ಕೊಟ್ಟು ನನ್ನ ಸರೋವರದ ನೀರನ್ನು ಕುಡಿದುಕೊಂಡು ಹೋಗು' ವ॥ ಎನ್ನಲು ಆ ದಿವ್ಯವಚನವನ್ನುಲ್ಲಂಘನೆ ಮಾಡಿ ಬಾಯಾರಿಕೆ ಹೋಗುವವರೆಗೂ ನೀರು ಕುಡಿದು ಕಮಲಪತ್ರಗಳ ಸಮೂಹದಲ್ಲಿ ತಮ್ಮಣ್ಣನಿಗೆ ನೀರನ್ನು ತುಂಬಿಕೊಂಡು ಸರೋವರದಿಂದ ಹೊರಟನು. ಒಂದೆರಡು ಹೆಜ್ಜೆಯಿಡುವಷ್ಟರಲ್ಲಿಯೇ ಕೆಳಗೆ ಬಿದ್ದು ಗತಪ್ರಾಣನಾದನು. ಎಷ್ಟು ಹೊತ್ತಾದರೂ ಸಹದೇವನು ಹಿಂತಿರುಗಿ ಬರದಿದ್ದುದರಿಂದ ಕಳವಳಪಟ್ಟು ಯುಧಿಷ್ಠಿರನು ನಕುಲನನ್ನು ನೋಡಿ ಸಹದೇವನನ್ನು ಕರೆದುಕೊಂಡು ನೀರನ್ನೂ ತೆಗೆದುಕೊಂಡು ಬಾ ಎಂದು ಹೇಳಿದನು. ೪೦. ಅವನೂ ಸರೋವರವನ್ನು ಪ್ರವೇಶಿಸಿ ಶತ್ರುಗಳನ್ನು ಅಧೀನಮಾಡಿ ಕೊಂಡಿದ್ದ ಆ ನಕುಲನು ಆ ದೇವತೆಯ ಮಾತನ್ನು ಹೇಗೂ ಲಕ್ಷ್ಯಮಾಡದೆ ಅವಿವೇಕದಿಂದ ಕುಡಿದು ವಿಷಪಾನಮಾಡಿದವರ ಹಾಗೆ ಬಿದ್ದನು. ವ॥ ಆಗ ಧರ್ಮರಾಯನು ಇಬ್ಬರ ಬರುವಿಕೆಯನ್ನೂ ಕಾಣದೆ ಸಂದೇಹದಿಂದ ಕಲಕಿದ ಮನಸ್ಸುಳ್ಳವನಾಗಿ ಅರ್ಜುನನನ್ನು ನೀನು ಬೇಗಹೋಗಿ ಆ ಮಕ್ಕಳುಗಳನ್ನೊಡಗೊಂಡು ನೀರನ್ನೂ ತೆಗೆದುಕೊಂಡು ಸಾವಕಾಶಮಾಡದೆ ಬಾ ಎಂದನು. ಹಾಗೆಯೇ ಮಾಡುತ್ತೇನೆ ಎಂದು ಅರ್ಜುನನು ಬಂದು ಕೊಳದ ದಡದಲ್ಲಿ ಸತ್ತು ಬಿದ್ದಿದ್ದ ಇಬ್ಬರು ತಮ್ಮಂದಿರನ್ನು

ಕಂ॥ ಆ ಕಮಳಾಕರಮಂ ಪೊ
ಕ್ಕಾಕಾಶಧ್ವನಿಯನುಱದೆ ಕುಡಿದರಿಭೂಪಾ ।
ನೀಕಭಯಂಕರನುಂ ಗಡ
ಮೇಕೆಂದಱಿಯಂ ಬೞಲ್ದು ಜೋಲ್ದಂ ಧರೆಯೊಳ್ ॥ ೪೧

ವ॥ ಅನ್ನೆಗಮತ್ತ ಯಮಸಂದನಂ ಮೂವರ್ ತಮ್ಮಂದಿರ ಬರವಂ ಕಾಣದೆ ಭಗ್ನಮನಸನಾಗಿ ಭೀಮಸೇನನಂ ನೀಂ ಪೋಗಿ ಮೂವರುಮನೊಡಂಗೊಂಡು ನೀರಂ ಕೊಂಡು ಬಾಯೆಂದೊಡಂತೆಗೆಯ್ವೆನೆಂದು ವಾಯುವೇಗದಿಂ ಬಂದು ಪುಂಡರೀಕಷಂಡೋಪಾಂತದೊಳ್ ವಿಗತಜೀವಿತರಾಗಿರ್ದ ಮೂವರನುಜರುಮಂ ಕಂಡಿದು ಮನುಜರಿಂದಾದುಪದ್ರವಮಲ್ಲ ಮೇಣಾಮುಮೊಂದು ದೇವತೋಪದ್ರವಮಾಗಲೆವೇೞ್ಕುಮೆಂದು

ಕಂ॥ ಬಿಡದೆ ಕಡುಕೆಯ್ದು ದಿವ್ಯದ
ನುಡಿಗೆ ಕಿವುಟ್ಕೇಳ್ದು ಕುಡಿದು ನೀರಂ ಭೀಮಂ ।
ಪಿಡಿದ ಗದೆವೆರಸು ಭೋಂಕೆನೆ
ಕೆಡೆದಂ ಗಿರಿಶಿಖರದೊಡನೆ ಕೆಡೆವಂತಾಗಳ್ ॥ ೪೨

ವ॥ ಅಂತು ನಾಲ್ವರುಂ ವಿಳಯಕಾಲವಾತಾಹತಿಯಿಂ ಕೆಡೆದ ಕುಲಗಿರಿಗಳಂತೆ ಕೆಡೆದು ವಿಗತಜೀವಿತರಾಗಿರ್ದ ಪದದೊಳತ್ತ ದುರ್ಯೋಧನನ ಬೆಸದೊಳಾತನ ಪುರೋಹಿತಂ ಕನಕಸ್ವಾಮಿಯೆಂಬಂ ಪಾಂಡವರ್ಗಾಭಿಚಾರಮಾಗೆ ಬೇಳ್ವ ಬೇಳ್ವಿಯ ಕೊಂಡದೊಳಗಣಿಂದಮಂಜನ ಪುಂಜದಂತಪ್ಪ ಮೆಯ್ಯುಂ ಸಿಡಿಲನಡಸಿದಂತಪ್ಪ ದಾಡೆಯುಮುರಿಯುರುಳಿಯಂತಪ್ಪ ಕಣ್ಣುಂ

ನೋಡಿ ಆಶ್ಚರ್ಯಪಟ್ಟನು. ೪೧. ಶತ್ರುರಾಜರ ಸಮೂಹಕ್ಕೆ ಭಯವನ್ನುಂಟುಮಾಡುವ ಅರ್ಜುನನೂ ಆ ಸರೋವರವನ್ನು ಪ್ರವೇಶಿಸಿ ಏನೆಂದು ತಿಳಿಯದೆ ಶಕ್ತಿಗುಂದಿ ಭೂಮಿಯಲ್ಲಿ ಜೋತುಬಿದ್ದನು. ವ॥ ಅಷ್ಟರಲ್ಲಿ ಆ ಕಡೆ ಧರ್ಮರಾಯನು ಮೂವರು ತಮ್ಮಂದಿರ ಬರವನ್ನೂ ಕಾಣದೆ ಉತ್ಸಾಹಶೂನ್ಯನಾಗಿ (ಒಡೆದ ಮನಸ್ಸುಳ್ಳವನಾಗಿ) ಭೀಮಸೇನನನ್ನು 'ನೀನು ಹೋಗಿ ಮೂವರನ್ನೂ ಕೂಡಿಕೊಂಡು ನೀರನ್ನೂ ತೆಗೆದುಕೊಂಡು ಬಾ' ಎಂದನು, 'ಹಾಗೆಯೇ ಮಾಡುತ್ತೇನೆ' ಎಂದು ವಾಯು ವೇಗದಿಂದ ಬಂದು ಸರೋವರದ ಸಮೀಪದಲ್ಲಿ ಸತ್ತು ಹೋಗಿದ್ದ ಮೂವರು ತಮ್ಮಂದಿರನ್ನೂ ನೋಡಿ ಇದು ಮನುಷ್ಯರಿಂದಾದ ಕೇಡಲ್ಲ; ಯಾವುದಾದರೂ ದೇವತೆಯ ಹಿಂಸೆಯಾಗಿರಬೇಕೆಂದು ಊಹಿಸಿ ೪೨. ತನಗೂ ಅವಕಾಶಕೊಡದೆ ತಡೆದ ದೇವತೆಯ ಮಾತನ್ನು ಉದಾಸೀನಮಾಡಿ ನೀರನ್ನು ಕುಡಿದು ಹಿಡಿದ ಗದೆಯೊಡನೆಯೇ ಶಿಖರಸಹಿತವಾಗಿ ಪರ್ವತವು ಉರುಳುವಂತೆ (ಭೀಮ) ತಟಕ್ಕನೆ ಬಿದ್ದನು. ವ॥ ಹಾಗೆ ನಾಲ್ಕು ಮಂದಿಯೂ ಪ್ರಳಯಕಾಲದ ಗಾಳಿಯ ಪೆಟ್ಟಿನಿಂದ ಬಿದ್ದ ಕುಲಪರ್ವತಗಳಂತೆ ಕೆಡೆದು ಗತಪ್ರಾಣರಾಗಿದ್ದ ಸ್ಥಿತಿಯಲ್ಲಿ ಆ ಕಡೆ ದುರ್ಯೋಧನನ ಆಜ್ಞೆಯಿಂದ ಆತನ ಪುರೋಹಿತನಾದ ಕನಕಸ್ವಾಮಿಯೆಂಬುವನು ಪಾಂಡವರಿಗೆ ಮಾಟಮಾಡಲು ಒಂದು ಹೋಮಮಾಡುತ್ತಿದ್ದನು. ಆ ಯಜ್ಞಕುಂಡದಿಂದ ಕತ್ತಲೆಯ ಸಮೂಹದಂತಿರುವ ಶರೀರವೂ ಸಿಡಿಲನ್ನು ತುಂಬಿಕೊಂಡ ಹಾಗಿದ್ದ ಕೋರೆಹಲ್ಲುಗಳೂ ಬೆಂಕಿಯ ಉಂಡೆಯ ಹಾಗಿದ್ದ ಕಣ್ಣೂ

ಕೃತಾಂತನಂತಾಕಾರಮಾಗಿ ತಳತಳಿಸಿ ಪೊಳೆವ ಕತ್ತಿಗೆಯುಂ ಬೆರಸು ಪೊಱಮಟ್ಟು ಕೀರ್ತಿಗೆ ಯೆಂಬುಗ್ರದೇವತೆ ಬೆಸಸು ಬೆಸಸೆಂದು ಬೆಸನಂ ಬೇಡೆ ಪಾಂಡವರನೆಲ್ಲಿರ್ದೊಕ್ಕೊಡಂ ಕೊಲ್ಲೆಂದೊಡಂತೆ ಗೆಯ್ವೆನೆಂದು ಪೋಗೆಲ್ಲಿಯುಮಱಸಿ ಕಾಣದೆ ಕೊಳನ ತಡಿಯೊಳ್ ಬಿೞ್ದಿರ್ದ ನಾಲ್ವರುಮಂ ಕಂಡು ಬಾಪ್ಪು ಬೞ್ದೆನೆಂದು ತಿನಲ್ ಸಾರ್ವಾಗಳವರ್ಗಳ್ಗನಿತಂ ಮಾಡಿದ ದೈವಂ ಪ್ರತ್ಯಕ್ಷಮಾಗಿ ಗಜಱಿ ಗರ್ಜಿಸುತ್ತುಂ ಬಂದು-

ಕಂ॥ ಎಲೆ ಪಿಱಿತಿನಿ ಪೋ ಮುಟ್ಟದೆ
ತೊಲಗೀ ನಾಲ್ವರ್ಕಳಸುವನವರ್ಗಳ ಮೆಯ್ಯಿಂ ।
ತೊಲಗಿಸಿ ಮುನ್ನಮೆ ಕಾದಿ
ರ್ದಲಂಘ್ಯಬಲನೆನಿಸಿದೆನಗೆ ನೀನಗ್ಗಳಮೇ ॥ ೪೩

ವ॥ ಅದಲ್ಲದೆಯುಂ ನೀನೆ ಜಾತಿದೇವತೆಯಪ್ಪೊಡೆನ್ನೆಂಜಲನೆಂತು ತಿಂಬೆಯೆಂಬುದುಂ ಪಾಂಡವರ್ ಮುನ್ನಮೆ ನಿನ್ನ ಕೆಯ್ಗೆ ವಂದರೆನಗಮಾ ಬೆಸಂ ತಪ್ಪಿದುದಾನಾರಂ ತಿಂಬೆಂ ಪೇೞೆನೆ ನಿನ್ನನಾವನೊರ್ವನಕಾರಣಂ ಪುಟ್ಟಿಸಿದನಾತನನೆ ತಿನ್ನೆಂಬುದುಮಂತೆಗೆಯ್ವೆನೆಂದು ಪೋಗಿ-

ಕಂ॥ ಕನಕನ ಬೇಳ್ವೆ ತಗುಳ್ದುದು
ಕನಕನನೆಂಬೊಂದು ಮಾತು ಧರೆಗೆಸೆಯೆ ಸುಯೋ ॥
ಧನನ ಪುರೋಹಿತನಪ್ಪಾ
ಕನಕಸ್ವಾಮಿಯನೆ ಮುನಿದು ಕೀರ್ತಿಗೆ ತಿಂದಳ್ ॥ ೪೪

(ಇವುಗಳಿಂದ ಕೂಡಿ) ಯಮನ ಹಾಗಿರುವ ಸ್ವರೂಪವೂ ಇವುಗಳನ್ನು ತಾಳಿ ಥಳಥಳನೆ ಹೊಳೆಯುತ್ತಿರುವ ಕತ್ತಿಯಿಂದ ಕೂಡಿ ಹೊರಟು ಕೀರ್ತಿಗೆಯೆಂಬ ಒಂದು ಭಯಂಕರವಾದ ದೇವತೆಯು 'ನಾನು ಏನು ಮಾಡಬೇಕೆಂಬುದನ್ನು ಅಪ್ಪಣೆಕೊಡು' ಎಂದು ತಾನು ಮಾಡಬೇಕಾದ ಕಾರ್ಯವನ್ನು ಬೇಡಿತು. 'ಪಾಂಡವರೆಲ್ಲಿ ಹೊಕ್ಕಿದ್ದರೂ ಕೊಲ್ಲು' ಎಂದು ಆಣತಿಯಿತ್ತನು. ಹಾಗೆಯೇ ಮಾಡುತ್ತೇನೆ ಎಂದು ಹೋಗಿ ಹುಡುಕಿ ಎಲ್ಲಿಯೂ ಕಾಣದೆ ಕೊಳದ ದಡದಲ್ಲಿ ಬಿದ್ದಿದ್ದ ನಾಲ್ವರನ್ನೂ ಕಂಡು 'ಶಹಭಾಸ್ ಬದುಕಿದೆನು' ಎಂದು ತಿನ್ನುವುದಕ್ಕೆ ಬಂದಾಗ ಅವರುಗಳಿಗೆ ಆ ಸ್ಥಿತಿಯನ್ನುಂಟು ಮಾಡಿದ ದೈವವು ಎದುರಿಗೆ ಕಾಣಿಸಿಕೊಂಡು ರೇಗಿ ಆರ್ಭಟಮಾಡುತ್ತ ಬಂದು ಹೇಳಿತು. ೪೩. ಎಲೆ ಪಿಶಾಚಿ, ತೊಲಗಿಹೋಗು. ಈ ನಾಲ್ಕು ಜನದ ಪ್ರಾಣವನ್ನು ಅವರ ಶರೀರದಿಂದ ತೊಲಗಿಸಿದ ಮೊದಲಿಂದ ಕಾದಿರುವ, ಮೀರುವುದಕ್ಕಾಗದ ಶಕ್ತಿಯುಳ್ಳವನೆನಿಸಿಕೊಂಡಿರುವ ನನಗೆ ನೀನು ಹೆಚ್ಚಿನವಳೇ? ವ॥ ಹಾಗೆಲ್ಲಿಯೂ 'ನೀನು ಉತ್ತಮಜಾತಿಯ ದೇವತೆಯೇ ಆಗಿದ್ದ ಪಕ್ಷದಲ್ಲಿ ನನ್ನ ಎಂಜಲನ್ನು ಹೇಗೆ ತಿನ್ನುತ್ತೀಯೆ' ಎಂದಿತು. ಪಾಂಡವರು ಮೊದಲೇ ನಿನ್ನ ಅಧೀನರಾದವರು ಆದುದರಿಂದ ನಾನು ಮಾಡಬೇಕಾದ ಆ ಕಾರ್ಯವು ತಪ್ಪಿಹೋಯಿತು. ನಾನು ಈಗ ಯಾರನ್ನು ತಿನ್ನಲಿ ಹೇಳು ಎಂದು ಕೇಳಿದಳು. ನಿನ್ನನ್ನು ಯಾವನು ಅಕಾರಣವಾಗಿ ಹುಟ್ಟಿಸಿದನೋ ಅವನನ್ನೇ ತಿನ್ನು ಎಂದು ಹೇಳಲು ಹಾಗೆಯೇ ಮಾಡುತ್ತೇನೆ ಎಂದು ಹೋಗಿ ೪೪. 'ಕನಕನ ಯಜ್ಞ ಕನಕನ ಬೆನ್ನನ್ನೇ ಅಂಟಿತು' ಎಂಬ ಒಂದು ಮಾತು ಭೂಮಿಯಲ್ಲಿ

ವ॥ ಅನ್ನೆಗಮಿತ್ತ ಕೃತಾಂತನಂದನಂ ತನ್ನ ನಾಲ್ವರ್ ತಮ್ಮಂದಿರುಂ ಬಾರದೆ ತಡೆದುದರ್ಕೆ ಚಿಂತಾಕ್ರಾಂತನಾಗಿ-

ಕಂ॥ ಪೋದರನೊಡಗೊಂಡು ಬರಲ್
ಪೋದರುಮಾ ಪೋದ ಪೋಗೆ ಪೋದರ್ ತಡೆಯಲ್ ।
ಪೋದವರಲ್ತೆಂದು ಮನಃ
ಖೇದಂಬೆರಸೆಯ್ದೆವಂದನಬ್ಜಾಕರಮಂ ॥ ೪೫

ವ॥ ಅಂತೆಯ್ದೆವಂದು ಬಱಿಸಿಡಿಲ್ ಪೊಡೆಯೆ ಕೆಡೆದ ಶಾಲತರುಗಳಿರ್ಪಂತಿರ್ದ ನಾಲ್ವರ್ ತಮ್ಮಂದಿರುಮಂ ಕಂಡು ಬೆಕ್ಕಸಂಬಟ್ಟು-

ಕಂ॥ ಆರಿಂದಮಿವರ್ಗಿದಾಯ್ತೆಂ
ದಾರಯ್ವೆಂ ಬೞಿಯಮಾದೊಡೇನಾಯ್ತೆಂದಂ ।
ಭೋರುಹರಜಃಪಟಾವೃತ
ವಾರಿಯನಾ ನೃಪತಿ ಕುಡಿಯಲೊಡರಿಸಿದಾಗಳ್ ॥ ೪೬

ಮರುಳಾಗದೆನ್ನ ನುಡಿಗು
ತ್ತರಮಂ ಮುನ್ನಿತ್ತು ಕುಡಿಯೆ ಕಜ್ಜಂ ನಿನಗು ।
ತ್ತರಿಸುಗುಮಂತಲ್ಲದಿವಂ
ದಿರಂತೆ ನೀನುಂತೆ ಮೂರ್ಖನಾಗದಿರರಸಾ ॥ ೪೭

ವ॥ ಎಂಬುದುಮೆನ್ನ ತಮ್ಮಂದಿರ್ಗಿನಿತಂ ಮಾಡಿದ ದಿವ್ಯಮಿ ದಿವ್ಯಮಕ್ಕುಮೆಂದದಱ ಬೆಸಗೊಂಡುದರ್ಕೆಲ್ಲಂ ಮಱುಮಾತುಗುಡುವುದುಂ ಮೆಚ್ಚಿ ತನ್ನ ಸ್ವರೂಪಮಂ ತೋಱಿ-

ಪ್ರಖ್ಯಾತವಾಗುವ ಹಾಗೆ ದುರ್ಯೋಧನನ ಪುರೋಹಿತನಾದ ಆ ಕನಕಸ್ವಾಮಿಯನ್ನೇ ಕೋಪಿಸಿಕೊಂಡು ಕೀರ್ತಿಗೆ ತಿಂದುಹಾಕಿದಳು. ವ॥ ಅಷ್ಟರಲ್ಲಿ ಧರ್ಮರಾಜನು ತನ್ನ ನಾಲ್ಕು ತಮ್ಮಂದಿರೂ ಬರದೆ ಸಾವಕಾಶಮಾಡಿದುದಕ್ಕಾಗಿ ಚಿಂತಾಕ್ರಾಂತನಾಗಿ ೪೫. ಹೋದವರನ್ನು ಒಡಗೊಂಡು ಬರಲು ಹೋದವರೂ ಅವರ ಹಿಂದೆಯೇ ಹೊರಟುಹೋದರು. ಅವರು ತಡೆಯಲು ಹೋದವರಲ್ಲ (ಅವರು ಹಾಗೆ ಸಾವಕಾಶಮಾಡುವವರಲ್ಲ) ಎಂಬ ಮನಸ್ಸಿನ ಖೇದದಿಂದ ತಾನೇ ಸರೋವರದ ಸಮೀಪಕ್ಕೆ ಬಂದನು. ವ॥ ಹಾಗೆ ಸಮೀಪಿಸಿ ಬರಸಿಡಿಲು ಹೊಡೆಯಲು ಕೆಡೆದ ಶಾಲವೃಕ್ಷಗಳಂತಿದ್ದ ನಾಲ್ವರು ತಮ್ಮಂದಿರನ್ನೂ ನೋಡಿ ಆಶ್ಚರ್ಯಪಟ್ಟನು. ೪೬. ಯಾರಿಂದ ಇವರಿಗಿದಾಯಿತು ಎಂಬುದನ್ನು ಅನಂತರ ವಿಚಾರಿಸುತ್ತೇನೆ. ಆದರೆ ಏನಾಯ್ತು ಎಂದು ಕಮಲದ ಧೂಳೆಂಬ ಬಟ್ಟೆಯಿಂದ ಮುಚ್ಚಿದ ನೀರನ್ನು ಆ ರಾಜನು ಕುಡಿಯಲು ತೊಡಗಿದನು. ೪೭. 'ಅವಿವೇಕಿ (ಹುಚ್ಚ)ಯಾಗದೆ ನನ್ನ ಮಾತಿಗೆ ಮೊದಲು ಉತ್ತರವನ್ನು ಕೊಟ್ಟು ನೀರು ಕುಡಿದರೆ ನಿನ್ನ ಕೆಲಸ ಜಯಪ್ರದವಾಗುತ್ತದೆ. ಹಾಗಲ್ಲದೆ ಎಲೈ ರಾಜನೇ ಇವರುಗಳ ಹಾಗೆ ನೀನೂ ಸುಮ್ಮನೆ ಮೂರ್ಖನಾಗಬೇಡ' ವ॥ ಎನ್ನಲು ನನ್ನ ತಮ್ಮಂದಿರಿಗೆ ಇಷ್ಟು ಮಾಡಿದೆ ದೇವತೆಯಿದೇ ಆಗಿರ ಬಹುದೆಂದು ತಿಳಿದು ಅದು ಹಾಕಿದ ಪ್ರಶ್ನೆಗಳಿಗೆಲ್ಲ ಪ್ರತ್ಯುತ್ತರವನ್ನಿತ್ತು ತೃಪ್ತಿ

ಚಂ॥ ಕನಕನ ಬೇಳ್ವೆಯಿಂದೊಗೆದ ಕೀರ್ತಿಗೆಯಿಂ ನಿನಗಪ್ಪಪಾಯಮಂ
ನೆನೆದು ಮದೇಭರೂಪಮನೆ ತೋಱಿ ನಿಜಾಶ್ರಮದಿಂದಗಲ್ಚಿ ನಿ ।
ನ್ನನುಜರನೀಯುಪಾಯದೊಳೆ ಕೀರ್ತಿಗೆಯೊಡ್ಡಿಸೆ ಕಾದೆನಾಂ ಕೃತಾಂ
ತನೆನೆನಗಮ್ಮ ನೀಂ ಮಗನೆಯಿನ್ ಪೆಱತೇಂ ನಿನಗುತ್ತರೋತ್ತರಂ ॥ ೪೮

ವ॥ ಎಂದು ಮಱಕಿಂದಿದರನೆತ್ತುವಂತೆ ನಾಲ್ವರುಮನೆತ್ತಿ ತಾಂ ಮುನ್ನಂ ತಂದರಣಿಯಂ ಕೊಟ್ಟು ಕೃತಾಂತನಂತರ್ಧಾನಕ್ಕೆ ಸಂದಂ ಧರ್ಮತನೂಜನುಮನುಜರ್ ಸಹಿತಂ ನಿಜನಿವಾಸಕ್ಕೆ ವಂದರಣಿಯಂ ಪಾರ್ವರ್ಗೆ ಕೊಟ್ಟು ಕೆಲವು ದೆವಸಮಿರ್ದು ಧೌಮ್ಯ ಪುರೋಹಿತಂಬೆರಸಯ್ವರು ಮಾಳೋಚಿಸಿ-

ಚಂ॥ ನೆಱೆದುವು ಪನ್ನೆರಬ್ಬರಿಸಮುಗ್ರವಿರೋಧಿಜನಕ್ಕೆ ಮಿಬ್ತುಗಳ್
ನೆಱೆವವೊಲಾಗದಿನ್ನೆಱೆದಿರಲ್ ನಮಗಬ್ದಮನೊಂದನಿರ್ದೊಡೇ ।
ತಱಿ ಪಡೆಮಾತೊ ಮತ್ತಮಿರವೇಬ್ಪುದು ಪನ್ನೆರಡಬ್ದಮಂ ಮನಂ
ಮಱುಗೆ ಬನಂಗಳೊಳ್ ನುಡಿದ ಸನ್ನಿಗೆ ಪೇಟಿಮಿದರ್ಕೆ ಕಜ್ಜಮಂ ॥ ೪೯

ವ॥ ಎನೆ ಯಮನಂದನನಿಂತೆಂದಂ-

ಮ॥ ಅಪವಾದಂ ಪೆಱತೊಂದುಮಿಲ್ಲ ನಮಗಿನ್ನುಂ ಪೊಕ್ಕಿರಲ್ಕಿಂಬು ಮ
ತ್ಸ್ಯಪುರಂ ಶತ್ರುಗೆ ಶತ್ರು ಮತ್ಸ್ಯನವಱೆಂದಜ್ಞಾತವಾಸಕ್ಕೆ ಚಂ ।
ತಿಪೊಡಿನ್ನನ್ನವು ತಾಣಮಿಲ್ಲದಱೆನುಂತಾರ್ಗಪ್ಪೊಡಂ ಮಿಕ್ಕ ರೂ
ಪ ಪರಾವರ್ತನದಿಂ ವಿರಾಟಪುರಮಂ ಪೊಕ್ಕಿರ್ದದಂ ನೀಗೆಮೇ ॥ ೫೦

ಪಡಿಸಿದನು. ಸಂತೋಷಗೊಂಡ ದೈವವು ಹೀಗೆ ಹೇಳಿತು. ೪೮. ಕನಕನ ಯಜ್ಞದಿಂದ ಹುಟ್ಟಿದ ಕೀರ್ತಿಗೆಯೆಂಬ ದೇವತೆಯಿಂದ ನಿನಗಾಗಬಹುದಾದ ಅಪಾಯವನ್ನು ತಿಳಿದು ಅದನ್ನು ತಪ್ಪಿಸಬೇಕೆಂದು ಹೀಗೆ ಮಾಡಿದೆ. ಮದಗಜದ ಆಕಾರವನ್ನು ತೋರಿಸಿ ನಿಮ್ಮನ್ನು ಆಶ್ರಮದಿಂದ ಆಗಲಿಸಿ (ಬೇರೆ ಮಾಡಿ) ಈ ಉಪಾಯದಿಂದ ಕೀರ್ತಿಗೆಯೆಂಬ ಆ ದೇವತೆಗೆ ಪ್ರತೀಕಾರಮಾಡಿ ನಿನ್ನ ತಮ್ಮಂದಿರನ್ನು ರಕ್ಷಿಸಿದ ನಾನು ಯಮ. ನೀನು ನನ್ನ ಮಗನಾಗಿದ್ದೀಯಪ್ಪ. ಇದಕ್ಕಿಂತ ನಿನಗೆ ಬೇರೆಯಾದ ಅಭಿವೃದ್ಧಿ ಏನಿದೆ. ವ॥ ಎಂಬುದಾಗಿ ಹೇಳಿ ಮರೆತು ಮಲಗಿದ್ದವರನ್ನು ಎಬ್ಬಿಸುವ ಹಾಗೆ ನಾಲ್ಕು ಜನರನ್ನೂ ಎಬ್ಬಿಸಿ ತಾನು ತಂದಿದ್ದ ಅರಣಿಯನ್ನು ಕೊಟ್ಟು ಯಮನು ಅದೃಶ್ಯನಾದನು. ಧರ್ಮರಾಜನೂ ತಮ್ಮಂದಿರೊಡನೆ ತನ್ನ ವಾಸಸ್ಥಳಕ್ಕೆ ಬಂದು ಅರಣಿಯನ್ನು ಬ್ರಾಹ್ಮಣರಿಗೆ ಕೊಟ್ಟನು. ಕೆಲವು ದಿನಗಳಿದ್ದು ಧೌಮ್ಯನೆಂಬ ಪುರೋಹಿತನೊಡಗೂಡಿ ಅಯ್ದುಜನರೂ ಆಲೋಚಿಸಿದರು. ೪೯. ಕ್ರೂರಿಗಳಾದ ಶತ್ರುಗಳಿಗೆ ಮೃತ್ಯುಪೂರ್ಣವಾಗುವ ಹಾಗೆ ಹನ್ನೆರಡುವರ್ಷಗಳು ತುಂಬಿದುವು. ಇನ್ನು ಒಂದು ವರ್ಷ ನಾವು ಯಾರೂ ತಿಳಿಯದಂತೆ ಇರಬೇಕು. ಅದು ತಪ್ಪಿದರೆ ಆಡಿದ ಸತ್ಯವಾಕ್ಕಿಗೆ ಅನುಗುಣವಾಗಿ ಮನಸ್ಸಿಗೆ ದುಃಖವಾಗುವ ಹಾಗೆ ಇನ್ನೂ ಹನ್ನೆರಡು ವರ್ಷಗಳ ಕಾಲ ಕಾಡಿನಲ್ಲಿರಬೇಕಾಗುತ್ತದೆ. ಇದಕ್ಕೆ ಮಾಡಬೇಕಾದ ಕಾರ್ಯ (ಉಪಾಯ)ವನ್ನು ತಿಳಿಸಿ. ವ॥ ಎನ್ನಲು ಧರ್ಮರಾಯನು ಹೀಗೆಂದನು-೫೦ 'ನಮಗೆ ಇದುವರೆಗೆ ಯಾವ ಅಪವಾದವೂ ಇಲ್ಲ; ಸುಖವಾಗಿರುವುದಕ್ಕೆ ಮತ್ಸ್ಯಪುರವು

ವ|| ಎಂದು ಯುಧಿಷ್ಠಿರಂ ನಿಶ್ಚಿತಕಾರ್ಯಮನನುಷ್ಠಿಸಿ ನಿಜ ಪರಿಜನಮೆಲ್ಲಮನೀಯೊಂದು ವರುಷಮುಂ ನಿಮ್ಮ ನಿಮ್ಮ ಬಲ್ಲಂದದೊಳಿರಿಮೆಂದು ಧೌಮ್ಯಸಮೇತಂ ಪೋಗಲ್ವೇೞ್ದು ತಮ್ಮಯ್ವರುಂ ಪಾಂಚಾಳಿವೆರಸು ಪೋದ ದೆಸೆಯನಾರುಮಱಿಯದಂತು ದ್ವೈತವನಮಂ ಪೊಱಮಟ್ಟು ಜಗುನೆಯಂ ಪಾಯ್ದು ಮೂಡಮೊಗದೆ ಪಯಣಂಬೋಗಿ ಮತ್ಸ್ಯದೇಶಮಂ ಪುಗುತಂದರದೆಂತಪ್ಪುದೆಂದೊಡೆ-

ಕಂ|| ಇಂಚೆಯ ಪಸವಿನ ಬಱದ ಕ
ಳಿಂಚನ ಡಾವರದ ಬಾಧೆಯಿಲ್ಲದ ಪದದೊಳ್ ।
ಮುಂಚದೆ ಪಿಂಚದೆ ಬಳೆದು ವಿ
ರಿಂಚಿಯ ಕೆಯ್ಪಿಡಿವೊಲಾದುವಾ ನಾಡೂರ್ಗಳ್ ॥ ೫೧

ವ|| ಆ ನಾಡಂ ಸಾಡಾಡಿಯಲ್ಲದೆ ಮೆಚ್ಚುತ್ತುಂ ಬಂದು-

ಕಂ|| ಧ್ವನದಳಿಕುಳಾಕುಳೀಕೃತ
ವನಂಗಳಿಂದೆಸೆವ ಪದ್ಮಷಂಡಂಗಳ ಚೆ ।
ಲ್ವಿನೊಳಂ ಕಣ್ಣಂ ಮನಮುಮ
ನನುವಿಸುವ ವಿರಾಟಪುರಮನೆಯ್ದಿದರವರ್ಗಳ್ ॥ ೫೨

ವ|| ಅಂತೆಯ್ದವಂದು ತಮ್ಮ ದಿವ್ಯಾಯುಧಂಗಳನೆಲ್ಲಮನಾ ಪುರೋಪವನದ ಪಿತೃವನದ ಕೆಲದ ಶಮೀವೃಕ್ಷದ ಮೇಲೆ ಪುರುಷಾಕೃತಿಯಾಗಿ ನೇಲ್ಗಟ್ಟಿ ಕೆಲದ ಪೆಣಂಗಳೆಲ್ಲಮನವಱ

ಆಶ್ರಯವಾಗಿರುತ್ತದೆ. ನಮ್ಮ ಶತ್ರುವಾದ ಕೌರವನಿಗೆ ಮತ್ಸ್ಯರಾಜನು ಶತ್ರು; ಆದುದರಿಂದ ಅಜ್ಞಾತವಾಸದ ವಿಷಯವಾಗಿ ಯೋಚಿಸುವುದಾದರೆ ಇದಕ್ಕಿಂತ ಉತ್ತಮವಾದ ಸ್ಥಳವಿಲ್ಲ. ಆದುದರಿಂದ ಯಾರಿಗೂ ತಿಳಿಯದಂತೆ ವೇಷವನ್ನು ಮರೆಸಿಕೊಂಡು ವಿರಾಟಪುರವನ್ನು ಪ್ರವೇಶಿಸಿ ಆ ಅಜ್ಞಾತವಾಸವನ್ನು ಕಳೆಯೋಣ.' ವ|| ಎಂದು ಧರ್ಮರಾಯನು ಮಾಡಬೇಕಾದ ಕಾರ್ಯವನ್ನು ಸೂಚಿಸಿ ತನ್ನ ಪರಿವಾರದವರನ್ನೆಲ್ಲ ಈ ಒಂದು ವರ್ಷ ಕಾಲ ನಿಮಗೆ ತಿಳಿದ ರೀತಿಯಲ್ಲಿ ಇರಿ ಎಂದು ಧೌಮ್ಯನೊಡನೆ ಕಳುಹಿಸಿದನು. ತಾವೈದು ಜನರೂ ದ್ರೌಪದಿಯೊಡಗೂಡಿ ತಾವು ಹೋದ ದಿಕ್ಕನ್ನು ಯಾರೂ ತಿಳಿಯದಂತೆ ದ್ವೈತವನದಿಂದ ಹೊರಟು ಯಮುನಾನದಿಯನ್ನು ದಾಟಿ ಪೂರ್ವಾಭಿಮುಖವಾಗಿ ಪ್ರಯಾಣಮಾಡಿ ಮತ್ಸ್ಯದೇಶವನ್ನು ಪ್ರವೇಶಮಾಡಿದರು. ಅದು ಹೇಗಾಯಿತೆಂದರೆ-೫೧. ಆ ನಾಡಿನ ಊರುಗಳು ಹಿಂಸೆ, ಕ್ಷಾಮ, ಬರ, ಮೋಸ, ಕ್ಷೋಭೆ ಇವುಗಳ ಉಪದ್ರವವಿಲ್ಲದ ಸ್ಥಿತಿಯಲ್ಲಿ ಯಾವ ಹೆಚ್ಚೂ ಕಡಿಮೆಯಿಲ್ಲದೆ. ಏಕಪ್ರಕಾರವಾಗಿ ಅಭಿವೃದ್ಧಿಯಾಗಿ ಬ್ರಹ್ಮನ ಕೈಗನ್ನಡಿಯ ಹಾಗಿದ್ದುವು. ವ|| ಆ ದೇಶವನ್ನು ಅಸಾಧಾರಣವಾಗಿ ನೋಡುತ್ತ ಬಂದು, ೫೨. ಶಬ್ದಮಾಡುತ್ತಿರುವ ದುಂಬಿಗಳ ಸಮೂಹದಿಂದ ಆವರಿಸಲ್ಪಟ್ಟ ತೋಟಗಳಿಂದ ಪ್ರಕಾಶಿಸುವ, ಸರೋವರಗಳ ಸೌಂದರ್ಯದಿಂದ ಮನಸ್ಸಿಗೆ ಸಂತೋಷವನ್ನುಂಟು ಮಾಡುವ ವಿರಾಟಪುರವನ್ನು ಅವರು ಬಂದು ಸೇರಿದರು. ವ|| ತಮ್ಮ ದಿವ್ಯಾಯುಧಗಳೆಲ್ಲವನ್ನೂ ಆ ಪಟ್ಟಣದ ಸಮೀಪದ ಶ್ಮಶಾನದ ಪಕ್ಕದಲ್ಲಿದ್ದ ಬನ್ನಿಮರದ

ಮೇಲೊಟ್ಟಿ ಪರೆದೋರೊರ್ವರೊಂದೊಂದು ಬಟ್ಟೆಯೊಳ್ ಪೋಗಿ ಬೇಱವೇಱ ಪೊೞಲಂ ಪೊಕ್ಕು ಧರ್ಮಪುತ್ರಂ ಧರಾಮರವೇಷದೊಳ್ ವಿರಾಟನಂ ಕಂಡಾಶೀರ್ವಾದಮಂ ಕುಡೆ ವಿರಾಟಂ ನೀಮೆತ್ತಣಿಂ ಬಂದಿರೆಂಬುದುಮಾಂ ಧರ್ಮರಾಜನ ಸಮೀಪದೊಳಿರ್ಪವರಸಂಗೆ ಪೊೞ್ತು ಪೋಗದಾಗಳೆಮ್ಮೊಡನೆ ನೆತ್ತಮನಾಡುವನದಲ್ಲದೆಯುಂ-

ಕಂ॥ ಕನವರಿಸೆ ನಾಲ್ಕು ವೇದಮು
ಮೆನಗೆ ಮುಖೋದ್ಗತಮದಲ್ಲದಾಱಂಗದ ಮಾ ।
ತನಿತೆ ಗಡ ನೃಪತಿ ಬಂದೆಂ
ನಿನಗಾಳಾಗಲ್ಕೆ ಕಂಕಭಟ್ಟನೆನೆಂಬೆಂ ॥ ೫೩

ವ॥ ಎಂಬುದುಂ ವಿರಾಟನಾತನ ಭದ್ರಾಕಾರಮುಮಂ ಮೃದುಮಧುರಗಂಭೀರ ವಾಣಿಯುಮಂ ಕಂಡು ಕರಂ ಮನದೆಗೊಂಡು ಕರಮೊಳ್ಳಿತೆಂದು ಕಂಕಭಟ್ಟನನಿರಿಸಿದನನ್ನೆಗಂ ಭೀಮಸೇನನುಂ ಬೋನವೇಳಿಗೆಯುಂ ಸಟ್ಟುಗಮುಮನೊರ್ವ ಪರಿಚಾರಕನಿಂ ಪಿಡಿಯಿಸಿಕೊಂಡು ಬಂದು ನಿಂದವನಂ ಕಂಡು ವಿರಾಟಂ ನಿನ್ನ ಬಿನ್ನಾಣಮೇನೆಂದು ಬೆಸಗೊಳೆ-

ಕಂ॥ ಎನ್ನಟ್ಟಡುಗೆಯನುಂಡೊಡೆ
ಬಿನ್ನಣಮೇನರಸ ನರೆಗಳಾಗವು ಸವಿಯೊಳ್ ।
ನಿನ್ನಂ ಮೆಚ್ಚಿಪೆನೆಡಱದೊ
ಡೆನ್ನರೊಳಂ ಮಲ್ಲನೊರ್ವ ವಲ್ಲಲನೆಂಬೆಂ ॥ ೫೪

ಮೇಲೆ ಮನುಷ್ಯಾಕೃತಿಯಲ್ಲಿ ನೇತುಹಾಕಿದರು. ಪಕ್ಕದಲ್ಲಿದ್ದ ಹೆಣಗಳೆಲ್ಲವನ್ನೂ ಆದರ ಮೇಲೆ ರಾಶಿ ಹಾಕಿದರು. ಬೇರೆಬೇರೆಯಾಗಿ ಒಬ್ಬೊಬ್ಬರೂ ಒಂದೊಂದು ದಾರಿಯಲ್ಲಿ ಪ್ರತ್ಯೇಕವಾಗಿ ಪುರಪ್ರವೇಶಮಾಡಿದರು. ಧರ್ಮರಾಯನು ಬ್ರಾಹ್ಮಣವೇಷದಲ್ಲಿ ವಿರಾಟನನ್ನು ನೋಡಿ ಆಶೀರ್ವದಿಸಿದನು. ವಿರಾಟನು 'ನೀವೆಲ್ಲಿಂದ ಬಂದಿರಿ' ಎನ್ನಲು ನಾವು ಧರ್ಮರಾಜನ ಸಮೀಪದಲ್ಲಿದ್ದವರು. ರಾಜನಿಗೆ ಹೊತ್ತುಹೋಗದಾಗ ಅವನು ನಮ್ಮೊಡನೆ ಪಗಡೆಯಾಡುತ್ತಿದ್ದನು. ಅದಲ್ಲದೆ ೫೩. ನಾನು ನಾಲ್ಕು ವೇದಗಳನ್ನು ಕನಸಿನಲ್ಲಿಯೂ ಹೇಳಬಲ್ಲೆ, ಅದಲ್ಲದೆ ಶಿಕ್ಷಾವ್ಯಾಕರಣವೇ ಮೊದಲಾದ ಆರು ವೇದಾಂಗಗಳೂ ಹಾಗೆಯೇ ಕಂಠಪಾಠವಾಗಿವೆ. ನಿನಗೆ ಆಳಾಗಿರುವುದಕ್ಕೆ ಬಂದಿದ್ದೇನೆ. ಕಂಕಭಟ್ಟನೆಂದು ನನ್ನ ಹೆಸರು ಎಂದನು. ವ॥ ವಿರಾಟನು ಆತನ ಮಂಗಳಾಕಾರವನ್ನೂ ಮೃದುಮಧುರಗಂಭೀರವಾದ ಮಾತನ್ನೂ ನೋಡಿ ವಿಶೇಷವಾಗಿ ಸಂತೋಷಪಟ್ಟು ಬಹಳ ಒಳ್ಳೆಯದು ಎಂದು ಕಂಕಭಟ್ಟನನ್ನು ತನ್ನಲ್ಲಿ ಇರಿಸಿಕೊಂಡನು. ಅಷ್ಟರಲ್ಲಿ ಭೀಮಸೇನನು ಊಟದ ಪೆಟ್ಟಿಗೆಯನ್ನೂ ಸೌಟನ್ನೂ ಒಬ್ಬ ಆಳಿನ ಕಯ್ಯಲ್ಲಿ ತೆಗೆಸಿಕೊಂಡು ಬಂದು ನಿಂತನು. ಅವನನ್ನು ನೋಡಿ ನಿನ್ನ ವಿದ್ಯೆಯೇನು (ಕಸುಬು ವೃತ್ತಿ) ಎಂದು ಪ್ರಶ್ನೆಮಾಡಿದನು. ೫೪. ಅದಕ್ಕೆ ಭೀಮನು ನಾನು ಮಾಡಿದ ಅಡಿಗೆಯನ್ನು ಊಟಮಾಡಿದರೆ ತಲೆಯಲ್ಲಿ ನರೆಕೂದಲೇ ಬರುವುದಿಲ್ಲ. ಎಲೈ ರಾಜನೆ ವಿಚಾರಮಾಡುವುದೇನು ರುಚಿಯಲ್ಲಿ ನಾನು ನಿಮ್ಮನ್ನು ತೃಪ್ತಿಪಡಿಸಬಲ್ಲೆ, ಪ್ರತಿಭಟಿಸಿ ಬಂದರೆ ಎಂತಹವರನ್ನೂ ನೋಡಿಕೊಳ್ಳಲೂ ಸಮರ್ಥನಾದ ಜಟ್ಟಿ ನಾನು,

ವ॥ ಎಂಬುದುಂ ನಿನ್ನನಾಳ್ವೆನೆಂದು ಬಾಣಸಿನ ಕರಣಕ್ಕೆ ನಿರೂಪಣಂಗೆಯ್ವನನ್ನೆಗಂ ನಕುಳನುಮಂಕವಣೆಯುಂ ಬಾಳುಂ ಬಾರುಂ ಚಮ್ಮಟಿಗೆಯುಮನೊರ್ವ ಕೀಲಾಳಿಂ ಪಿಡಿಯಿಸಿ ಕೊಂಡು ಬಂದು ವಿರಾಟನಂ ಕಂಡೆಂತಪ್ಪ ದುಷ್ಟಾಶ್ವಂಗಳುಮನೇಱಲುಂ ತಿರ್ದಲುಂ ಬಲ್ಲೆನೆಂದು ವೇೞ್ಪಾಳಾಗಿ ತಂತ್ರಪಾಳವೆಸರೊಳ್ ಮಾಸಾದಿಯಾಗಿರ್ದಂ ಸಹದೇವನುಂ ಗೋಪಾಳವೇಷದೊಳ್ ಬಂದು ಕಂಡವನ ಗೋಮಂಡಳಾಧ್ಯಕ್ಷನಾಗಿರ್ದಾಗಳ್-

ಮ॥ ಎಳೆಯಂ ವಿಕ್ರಮದಿಂ ತರಲ್ ಮಹಿಧರಂ ಮುನ್ ಪಂದಿಯಾದಂತೆ ಪೋ<br>
ದೆಳೆಯಂ ದಾಯಿಗರಂ ಪಡಲ್ವಡಿಸಿ ಕೊಂಡಾಳಲ್ಕಮಾದೇವದಿಂ ।<br>
ಮುಳಿಸಿಂ ರಂಭೆಯ ಕೊಟ್ಟ ಶಾಪಮನದಂ ನೀಗಲ್ಕಮಾಗಳ್ ಬೃಹಂ<br>
ದಳೆಯಾದಂ ನರನಾತ್ಮಕಾರ್ಯವಶದಿಂ ಶುದ್ಧಾಂತದೊಳ್ ಮತ್ಸ್ಯನಾ ॥ ೫೫

ವ॥ ಅಂತು ಬೃಹಂದಳೆಯಾಗಿ ಗಾಂಡೀವ ಜ್ಯಾಘಾತದೊಳಿಂದ್ರನೀಲಂಗಳನಡಸಿದಂತಿರ್ದೆರಡುಂ ಮುಂಗೆಯ್ಗಳ ಕರ್ಪಂ ತೀವೆ ತೊಟ್ಟ ಬಳೆಗಳ್ ಮಱಸೆ ವಿರಾಟನ ಮಗಳಪ್ಪುತ್ತರೆ ಮೊದಲಾಗೆ ಪಲವುಂ ಪಾತ್ರಂಗಳನಾಡಿಸುತ್ತುಂ ಮಹಾ ಭಾರಾವತಾರದೊಳಪ್ಪ ಸಂಗ್ರಾಮರಂಗದೊಳರಾತಿನಾಯಕರ ಕಬಂಧಪಾತ್ರಂಗಳನಾಡಿಸುವುದನುದಾಹರಿಸುವಂತಿರ್ದಂ ಪಾಂಚಾಳ

ವಲಲನೆಂಬುದು ನನ್ನ ಹೆಸರು ಎಂದನು. ವ॥ ನಿನ್ನನ್ನಾಳುತ್ತೇನೆ ಎಂದು ವಿರಾಟನು ಅವನನ್ನು ಅಡುಗೆಯ ಕಾರ್ಯಕ್ಕೆ ನೇಮಿಸಿಕೊಂಡನು. ಅಷ್ಟರಲ್ಲಿ ನಕುಳನು ಕುದುರೆಯ ಮೇಲಿನ ತಡಿಯನ್ನೂ ಕತ್ತಿಯನ್ನೂ ಚರ್ಮದ ಲಗಾಮನ್ನೂ ಚಾವಟಿಯನ್ನೂ ಒಬ್ಬ ಸೇವಕನಿಂದ ತೆಗೆಯಿಸಿಕೊಂಡು ಬಂದು ವಿರಾಟನನ್ನು ಕುರಿತು ಎಂತಹ ದುಷ್ಟಕುದುರೆಯನ್ನಾದರೂ ಹತ್ತಲು ತಿದ್ದಲೂ ಬಲ್ಲೆ. ಎಂದು ಹೇಳಿ ಆತನಲ್ಲಿ ಆಳಾಗಿ ಸೇರಿ ತಂತ್ರಪಾಲನೆಂಬ ಹೆಸರಿನಿಂದ ಕುದುರೆಯ ರಕ್ಷಕನಾಗಿದ್ದನು. ಸಹದೇವನೂ ದನಕಾಯುವವನ ವೇಷದಲ್ಲಿ ಬಂದು ಕಂಡು ಅವನ ಗೋಸಮೂಹದ ಮುಖ್ಯಾಧಿಕಾರಿಯಾಗಿದ್ದನು. ಆಗ ೫೫. ಪೌರುಷದಿಂದ ವಿಷ್ಣುವು ಭೂಮಿಯನ್ನು ತರಲು ಹಿಂದೆ ಹಂದಿಯಾದಂತೆ (ವರಾಹವತಾರವನ್ನೆತ್ತಿದ ಹಾಗೆ) ತಮಗೆ ನಷ್ಟವಾದ ರಾಜ್ಯವನ್ನು ದಾಯಾದಿಗಳಿಂದ ಬಿಡಿಸಿಕೊಂಡು ಆಳುವುಕ್ಕೂ ತನಗುಂಟಾದ ಅವಮಾನದಿಂದಲೂ ಕೋಪದಿಂದಲೂ ರಂಭೆಯು ಕೊಟ್ಟ ಶಾಪವನ್ನು ನೀಗುವುದಕ್ಕೂ ಆಗ ಅರ್ಜುನನು ತನ್ನ ಕಾರ್ಯಸಾಧನೆಗಾಗಿ ವಿರಾಟನ ಅಂತಃಪುರದಲ್ಲಿ ಬೃಹಂದಳೆಯೆಂಬ ನಪುಂಸಕನಾದನು. ವ॥ ಗಾಂಡೀವದ ಹೆದೆಯ ಪೆಟ್ಟನಿಂದಾದ ಇಂದ್ರನೀಲಮಣಿಗಳನ್ನು ಕೆತ್ತಿಸಿದ ಹಾಗಿದ್ದ ಎರಡು ಮುಂಗೈಗಳ ಕಪ್ಪನ್ನು ಪೂರ್ಣವಾಗಿ ತೊಟ್ಟುಕೊಂಡಿದ್ದ ಬಳೆಗಳು ಮರೆಮಾಡಿದುವು. ವಿರಾಟನ ಮಗಳಾದ ಉತ್ತರೆಯೇ ಮೊದಲಾದ ಅನೇಕ ಪಾತ್ರಗಳನ್ನು ನಾಟ್ಯವಾಡಿಸುವ ಕಾರ್ಯವು ಅವನದಾಯಿತು. ಮುಂದೆ ಅದು ಬರುವ ಮಹಾಭಾರತ ಯುದ್ಧಭೂಮಿಯಲ್ಲಿ ಶತ್ರುನಾಯಕರ ರುಂಡಗಳೆಂಬ ಪಾತ್ರಗಳನ್ನು ಈ ರೀತಿಯಲ್ಲಿ ಆಡಿ ತೋರಿಸುತ್ತೇನೆ ಎನ್ನುವಂತಿದ್ದಿತು. ದ್ರೌಪದಿಯೂ ಆಕಾರವನ್ನು ಮರೆಸಿಕೊಂಡು ಸೈರಂಧ್ರೀವೇಷದಿಂದ ಹೋಗಿ ವಿರಾಟನ

ರಾಜತನೂಜೆಯುಂ ರೂಪುಗರೆದು ಸೈರಂಧ್ರೀವೇಷದೊಳ್ ಪೋಗಿ ವಿರಾಟನ ಮಹಾದೇವಿ ಸುದೇಷ್ಣೆಯಂ ಕಾಣ್ಬುದುಮಾಕೆಯುಂ ಕೃಷ್ಣೆಯ ರೂಪಂ ಕಂಡು ಚೋದ್ಯಂಬಟ್ಟು ಸಾಮಾನ್ಯೆಯಲ್ಲೆ ನೀನಾರ್ಗೇನೆಂಬೆಯೆಂದು ಬೆಸಗೊಳೆ-

ಕಂ॥ ನವ ಮೃಗಮದ ಪರಿಮಳಮುಮ
ನಿವು ಮಸುಳಿಪುವೆನಿಪ ವಿವಿಧ ಗಂಧಂಗಳನಾ ।
ನವಯವದೊಳ್ ಮಾಡುವ ಘ
ಟ್ಟವಳ್ತಿಯೆಂ ದೇವಿ ಗಂಡವಳ್ತಿಯೆನಲ್ಲೆಂ ॥ ೫೬

ಪೆಸರೊಳ್ ಸೈರಂಧ್ರಿಯೆನಟೆ
ವೆಸನದ ದೆಸೆಯಱಿಯೆನೆನಗೆ ಗಂಧರ್ವರ ಕಾ ।
ಪಸದಳಮುಂಟರಿಸುವೊಡಾಂ
ಬೆಸಕೆಯ್ವೆಂ ನಿನ್ನ ಬೆಸಸಿದಂದದೊಳಿರ್ಪೆಂ ॥ ೫೭

ವ॥ ಎಂದು ವಿರಾಟನ ಮಹಾದೇವಿಗಾವಗಮಣುಗೆಯಾಗಿ ಪಾಂಚಾಳಿಯಿರ್ದಳಂತು ಪಾಂಡವರೀ ಮಾಟ್ಕೆಯಿಂದಿರ್ಪನ್ನೆಗಮೊಂದು ದೆವಸಂ ವಿರಾಟಂ ನೆಲದೊಳುಳ್ಳಮಲ್ಲರೆಲ್ಲರುಮಂ ಬರಿಸಿ ಮಲ್ಲಯುದ್ಧಮಂ ನೋಡೆ ಸುಯೋಧನನಮಲ್ಲಂ ವಿಷಖರ್ಪರನೆಂಬಂ ತನ್ನ ಮಲ್ಲರೆಲ್ಲರು ಮಂ ಕೊಂದೊಡೆ ಸಿಗ್ಗಾಗಿ ತನ್ನ ಬಾಣಸಿಗನಾಗಿರ್ದ ವಲ್ಲಲನಂ ಕರೆದು ಪೇೞ್ದಾಗಳ್-

ಮಹಾರಾಣಿಯಾದ ಸುದೇಷ್ಣೆಯನ್ನು ಕಂಡಳು. ಅವಳು ದ್ರೌಪದಿಯ ರೂಪವನ್ನು ನೋಡಿ ಆಶ್ಚರ್ಯಪಟ್ಟು 'ನೀನು ಸಾಮಾನ್ಯಳಲ್ಲ, ನೀನು ಯಾರವಳು? ನಿನ್ನ ಹೆಸರೇನು?' ಎಂದು ಪ್ರಶ್ನೆಮಾಡಿದಳು- ೫೬. ಹೊಸದಾದ ಕಸ್ತೂರಿಯ ವಾಸನೆಯನ್ನೂ ಮೀರಿಸುವ ನಾನಾಬಗೆಯಾದ ಗಂಧಗಳನ್ನು ಶ್ರಮವಿಲ್ಲದೆ ಅರೆದು ಸಿದ್ಧಪಡಿಸಬಲ್ಲ ಗಟ್ಟಿವಳ್ತಿಯು ನಾನು. ದೇವಿ ಗಂಡನಿಲ್ಲದವಳಾಗಿದ್ದೇನೆ-೫೭. ಸೈರಂಧ್ರಿಯೆಂಬುದು ನನ್ನ ಹೆಸರು. ನೀಚಕಾರ್ಯದ ಪರಿಚಯವಿಲ್ಲದವಳು, ನನಗೆ ಗಂಧರ್ವರ ರಕ್ಷಣೆ ಪೂರ್ಣವಾಗುಂಟು. ಒಪ್ಪುವುದಾದರೆ ದಾಸಿಯಾಗಿರುತ್ತೇನೆ. ಆಜ್ಞೆ ಮಾಡಿದ ರೀತಿಯಲ್ಲಿ ನಡೆದುಕೊಳ್ಳುತ್ತೇನೆ. ವ॥ ಎಂದು ದ್ರೌಪದಿಯು ವಿರಾಟನ ಮಹಾರಾಣಿಗೆ ಅತ್ಯಂತ ಪ್ರೀತಿಪಾತ್ರಳಾದ ದಾಸಿಯಾಗಿದ್ದಳು. ಪಾಂಡವರು ಈ ರೀತಿಯಿಂದಿರುವಾಗ ಒಂದುದಿನ ವಿರಾಟನು ಭೂಮಿಯಲ್ಲಿರುವ ಜಟ್ಟಿಗಳೆಲ್ಲರನ್ನೂ ಬರಮಾಡಿ ಜಟ್ಟಿಕಾಳಗವನ್ನು ಆಡಿಸಿ ನೋಡಿದನು. ದುರ್ಯೋಧನನ ಜಟ್ಟಿಯಾದ ವಿಷಖರ್ಪರನೆಂಬುವನು ತನ್ನ ಜಟ್ಟಿಗಳೆಲ್ಲರನ್ನೂ ಕೊಲ್ಲಲು ಅವಮಾನಿತನಾಗಿ ತನ್ನ ಅಡುಗೆಯವನಾಗಿದ್ದ ವಲಲನನ್ನು ಕರೆದು ಕಾದಲು ಹೇಳಿದನು. ೫೮. ವಿಷಖರ್ಪರನು ತನ್ನ ವಿಶೇಷ ಕ್ರೌರ್ಯದಿಂದ ಪ್ರತಿಭಟಿಸಲು ವಲಲನು ಭೂಮಿಯನ್ನು ಕಯ್ಯಿಂದ ಉಜ್ಜಿ, ಎದುರಿಸಿ ಕಣ್ಣುಗಳು ತಿರುಗುವ ಹಾಗೆ ಅವುಕಿಕೊಂಡು ಸಿಂಹಧ್ವನಿಯಿಂದ ಘರ್ಜಿಸಿದನು. ವ॥ ದುರ್ಯೋಧನನ ಜಟ್ಟಿಯನ್ನು ಕೊಂದು ವಲಲನು ವಿರಾಟನ ಮನೆಯಲ್ಲಿ ತನ್ನ ಮಾತೇ ಮಾತಾಗಿದ್ದನು. ಅಷ್ಟರಲ್ಲಿ ವಿರಾಟನ ಮೈದುನನೂ ಸುದೇಷ್ಣೆಯ ಸೋದರನೂ ಸಿಂಹಬಲವುಳ್ಳವನೂ ಆದ ಕೀಚಕನೆಂಬುವನು

ಕಂ॥ ಪರ್ಪರಿಕೆಗಿಡದೆ ಕಲಿ ವಿಪ
ಖರ್ಪರನಿದಿರಾಂತೊಡಾಂತು ವಲಲಂ ತಳಮಂ ।
ಮಾರ್ಪೊಸೆದು ತಳ್ತು ಕಣ್ತಿರಿ
ತರ್ಪಿನೆಗಮವುಂಕಿ ಸಿಂಹನಾದದಿನಾರ್ದಂ ॥ ೫೮

ವ॥ ಅಂತು ಸುಯೋಧನನ ಮಲ್ಲನಂ ಕೊಂದು ವಲಲಂ ವಿರಾಟನ ಮನೆಯೊಳ್ ತನ್ನ ಮಾತೆ ಮಾತಾಗಿರ್ದನನ್ನೆಗಂ ವಿರಾಟನ ಮೈದುನಂ ಸುದೇಷ್ಣೆಯೊಡವುಟ್ಟಿದನೊರ್ವಂ ಸಿಂಹಬಲಂ ಕೀಚಕನೆಂಬಂ ಸುಯೋಧನನ ದಂಡೆಲ್ಲಮನಱದೋಡಿಸಿ ಬಂದು ವಿರಾಟನಂ ಕಂಡು ತಮ್ಮಕ್ಕನಂ ಕಾಣಲ್ ಪೋದಾತನಾ ಮಹಾದೇವಿಯ ಕೆಲದೊಳಿರ್ದ-

ಚಂ॥ ಸೊಗಯಿಸೆ ತೋಳ ಮೊತ್ತಮೊದಲೊಳ್ ಪೊಗರ್ವಟ್ಟೆಸೆವೊಂದು ನುಣ್ಪು ಸಾ
ವಗಿಸುವ ಮೇಲುದಂ ಮೊಲೆಗಳಳ್ಳಿಱಯುತ್ತಿರೆ ಪೊಣ್ಮೆ ಘರ್ಮ ಬಿಂ ।
ದುಗಳಲರಂಬುವೋಲೆಳಸೆ ಪಾಟಲಲೋಲವಿಲೋಚನಂ ಮನಂ
ಬುಗೆ ನಳಿತೋಳ ಕೋಳೆಸೆಯೆ ಘಟ್ಟಮಗುಳ್ಬುವ ಘಟ್ಟವಳ್ತಿಯಂ ॥ ೫೯

ವ॥ ಭೋಂಕನೆ ಕಂಡು ಕೀಚಕಂ ಕಾಮದೇವಂ ಮಾಡಿದ ಯಾಚಕನಂತೆ ಕರಮೆ ನಾಣ್ಗೆಟ್ಟು ಮನಂಗಾಪಟಿದಳಿಪಿ ನೋಡಿ ತನ್ನ ಮನದೊಳಿಂತೆಂದು ಬಗೆದಂ-

ಚಂ॥ ಸುರಿಯೆ ಬೆಮರ್ ಕುರುಳ್ವಿಡಿದು ಮುತ್ತುಗಳಂ ಮಱದುಂಬಿ ಕಾಱುವಂ
ತಿರೆ ನಳಿತೋಳ ಬಳ್ವಳಿಕೆ ಕಣ್ಗೊಳೆ ಘಟ್ಟಮಗುಳ್ಬುವಂದಮ ।
ಲ್ತರೆದು ಮುಗುಳ್ಬುವಂದಮೆ ದಲೆನ್ನೆರ್ದೆಯಂ ಪೆಱತೇನದೆಂತು ಪೇೞ್
ಪರಿಕಿಪೆನೀ ಮೃಗೋದ್ಭವದ ಕಂಪುಮನೀಕೆಯ ಸುಯ್ಯ ಕಂಪುಮಂ ॥ ೬೦

ದುರ್ಯೋಧನನ ಸೈನ್ಯವನ್ನೆಲ್ಲ ಶೀಘ್ರವಾಗಿ ಓಡಿಸಿ ಬಂದು ವಿರಾಟನನ್ನು ನೋಡಿಯಾದ ಮೇಲೆ ತಮ್ಮಕ್ಕನನ್ನು ನೋಡಲು ಹೋದನು. ಆ ಮಹಾರಾಣಿಯ ಸಮೀಪದಲ್ಲಿದ್ದ ದ್ರೌಪದಿಯನ್ನು ಕಂಡನು. ೫೯. ಅವಳ ತೋಳ ನುಣುಪು ವಿಶೇಷಕಾಂತಿಯಿಂದ ಸೊಗಸಾಗಿತ್ತು. ನೋಟಕರಿಗೆ ಸಾವನ್ನುಂಟುಮಾಡುತ್ತಿರುವ ಅವಳ ಮೊಲೆಗಳು ಮೇಲುಹೊದಿಕೆಯನ್ನು ಅಲುಗಾಡಿಸುತ್ತಿದ್ದುವು. ಬೆವರಹನಿಗಳು ಹೊರಹೊಮ್ಮು ತ್ತಿದ್ದುವು. ನಸುಗೆಂಪಾದ ಕಣ್ಣುಗಳು ಪುಷ್ಪಬಾಣದಂತೆ ಮನಸ್ಸನ್ನಾಕರ್ಷಿಸುತ್ತಿದ್ದುವು. ದುಂಡಾದ ತೋಳುಗಳ ಹಿಡಿತವು ಚೆಲುವಾಗಿರಲು ಗಂಧವನ್ನು ಅರೆಯುತ್ತಿದ್ದ ಸೈರಂಧ್ರಿಯನ್ನು ಕೀಚಕನು ನೋಡಿದನು ವ॥ ಇದ್ದಕ್ಕಿದ್ದ ಹಾಗೆ ಅವಳನ್ನು ನೋಡಿ ಕೀಚಕನು ಕಾಮದೇವನು ಮಾಡಿದ ಭಿಕ್ಷುಕನಂತೆ ವಿಶೇಷವಾಗಿ ನಾಚಿಕೆಗೆಟ್ಟು ಮನಸ್ಸಿನ ಹಿಡಿತ ತಪ್ಪಿ ಆಸೆಯಿಂದ ನೋಡಿ ತನ್ನ ಮನಸ್ಸಿನಲ್ಲಿ ಹೀಗೆಂದು ಯೋಚಿಸಿದನು - ೬೦. ಮರಿದುಂಬಿಗಳು ಮುತ್ತುಗಳನ್ನು ಕಾರುವ ಹಾಗೆ ಬೆವರು ಮುಂಗುರುಳುಗಳನ್ನು ಅನುಸರಿಸಿ ಸುರಿಯುತ್ತಿವೆ. ದುಂಡಾದ ತೋಳಿನ ಸೌಂದರ್ಯವು ಆಕರ್ಷಕವಾಗಿದೆ. ಇದು ಗಂಧವನ್ನು ತೇಯುವ ರೀತಿಯಲ್ಲ ; ನನ್ನ ಎದೆಯನ್ನು ಅರೆದು ಹಿಂದುಮುಂದು ಮಾಡುವ ರೀತಿಯೇ ಸರಿ. ನಾನು ಈ ಕಸ್ತೂರಿಯ ವಾಸನೆಯನ್ನೂ

ಕಂ॥ ಇದೆ ಮದನಭವನಮಿಂತಿದೆ
ಮದನಾಮೃತಮಿದುವೆ ಮದನಸಾಯಕಮಿದೆ ಪೋ ।
ಮದನಮಹೋತ್ಸವ ಪದಮೆನಿ
ಸಿದುದು ಕಟಾಕ್ಷೇಕ್ಷಣಂ ವಿಲೋಲೇಕ್ಷಣೆಯಾ ॥ ೬೧

ಉ॥ ಮಾಸಿದ ರೂಪು ನೋಟ್ಪೊಡರೆ ಮಾಸಿದ ಚಿತ್ರದ ಪೆಣ್ಣ ರೂಪುಮಂ
ಮಾಸಿಸೆ ನಾಡೆ ಮಾಸದಿಕೆಯಂ ಪಡೆದಪ್ಪುದು ಕಂಡ ಕಣ್ಣಳೊಳ್ ।
ಸೂಸುವ ಮಾಟ್ಕೆಯಿಂ ಪೊಜಗೆ ಪೊಣ್ಮುವುದಂದಮಿದೆಂತೊ ಕಾಯ್ದು ಕೈ
ವೀಸುವ ಕಾವನಂದಮಿವಳೇಂ ಕುಲನಾರಿಯೊ ವಾರನಾರಿಯೋ ॥ ೬೨

ಮಲ್ಲಿಕಾಮಾಲೆ ॥ ಆವಳಪ್ಪೊಡಮಕ್ಕೆ ಪೋ ತಲೆಯಿಂದೆ ಪೋದೊಡಮಿಂದೆ ಮಾ
ದೇವನಾರ್ತಡೆಗೋದೊಡಂ ಲಯಮಿಂದೆ ಬರ್ಪೊಡಮೆನ್ನುರಂ ।
ತೀವಿ ತಳ್ತಿವಳೀ ಕುಚಂಗಳನಟ್ಟಜಿಂದಮರ್ದಪ್ಪಿ ಪೋ
ಗಾವುಪಾಯದೊಳಾದೊಡಂ ನೆರೆದಲ್ಲದಿನ್ನಿರೆನೀಕೆಯೊಳ್ ॥ ೬೩

ವ॥ ಎಂದು ಸೈರಂಧ್ರಿಯಂ ನೋಡಿ ಸೈರಿಸಲಾಜದೆ ಸಿಂಹಬಲನಂತನಂಗಮತ್ತಮಾತಂಗ ಕೋಳಾಹಳೀಕೃತಾಂತರಂಗನಾಗಿ ತಮ್ಮಕ್ಕನನೀಕೆಯಾರ್ಗೆಂದು ಬೆಸಗೊಂಡೊಡಾತನ ಸೋಲ್ತ ಕಣ್ಣಜಿದೀಕೆ ಸಾಮಾನ್ಯವನಿತೆಯಲ್ಲಿವಳ್ ಗಂಧರ್ವವನಿತೆಯೆನ್ನೊಳಾದ ಮಚ್ಚುಂ ಮೋಹಮುಂ ಕಾರಣಮಾಗಿರ್ಪಳೆಂಬುದುಮಾ ಮಾತಿನೊಳ್ ಬೇಟಮುಗ್ಗಳಿಸೆ ನಿಜನಿವಾಸಕ್ಕೆ ಬಂದಕ್ಕನನಗೆ

ಈಕೆಯ ಉಸುರಿನ ಗಾಳಿಯ ವಾಸನೆಯನ್ನೂ ಹೇಗೆ ರಕ್ಷಿಸಲಿ ? ೬೧. ಈ ಚಂಚಲಾಕ್ಷಿಯ ಕಡೆಗಣ್ಣಿನ ನೋಟವೇ ಮದನಭವನ, ಇದೇ ಮದನಾಮೃತ, ಇದೇ ಮದನಬಾಣ. ಇದೇ ಮದನಮಹೋತ್ಸವದ ಸ್ಥಾನ ಎನಿಸಿತು. ೬೨. ನೋಡುವುದಾದರೆ ಇವಳ ಮಲಿನವಾದ ರೂಪವು ಅರ್ಧಕೊಳೆಯಾದ ಚಿತ್ರದಲ್ಲಿರುವ ಸುಂದರವಾದ ಹೆಣ್ಣಿನ ರೂಪವನ್ನು ಮಸುಳಿಸುವಂತಿದೆ. ಇವಳ ಕಣ್ಣಿನಲ್ಲಿ ಹೊರಸೂಸುವ ಸೌಂದರ್ಯವನ್ನು ನೋಡಿದರೆ ಕೆರಳಿ ಕೈಬೀಸಿ ಮನ್ಮಥನೇ ವಿಲಾಸದಿಂದ ಜಗಳಕ್ಕೆ ಕೈಬೀಸುವಂತಿದೆ. ಇವಳೇನು ಕುಲಸ್ತ್ರೀಯೋ ಅಥವಾ ವೇಶ್ಯಾಸ್ತ್ರೀಯೋ ? ೬೩. ಯಾವಳಾದರೂ ಆಗಲಿ ಈ ದಿನವೇ ತಲೆಹೋದರೂ ಮಹಾದೇವನೇ ಸಮರ್ಥವಾಗಿ ಮಧ್ಯ ಪ್ರವೇಶಿಸಿದರೂ ಈ ದಿನವೇ ನಾಶವುಂಟಾದರೂ ನನ್ನ ಎದೆ ತುಂಬಿ ಸೇರಿದ ಇವಳ ಮೊಲೆಗಳನ್ನು ಗಟ್ಟಿಯಾಗಿ ಆಲಿಂಗನ ಮಾಡಿಕೊಂಡು ಯಾವ ಉಪಾಯದಿಂದಲಾದರೂ ಈಕೆಯಲ್ಲಿ ಕೂಡಿಯಲ್ಲದೆ ಇರುವುದಿಲ್ಲ. ವ॥ ಎಂದು ಸೈರಂಧ್ರಿಯರನ್ನು ನೋಡಿ ಸಹಿಸಲಾರದೆ ಸಿಂಹಬಲನು ಮನ್ಮಥನೆಂಬ ಮದ್ದಾನೆಯಿಂದ ಹಿಂಸಿಸಲ್ಪಟ್ಟ ಮನಸ್ಸುಳ್ಳವನಾಗಿ ತಮ್ಮ ಅಕ್ಕನನ್ನು ಈಕೆ ಯಾರವಳು ಎಂದು ಪ್ರಶ್ನೆಮಾಡಿದನು. ಸುದೇಷ್ಣೆಯು ಅವನ ಮೋಹಪರವಶವಾದ ಕಣ್ಣನ್ನು ತಿಳಿದು ಈಕೆಯು ಸಾಮಾನ್ಯಸ್ತ್ರೀಯಲ್ಲ, ಇವಳು ಗಂಧರ್ವಪತ್ನಿ ; ನನ್ನಲ್ಲಾದ ಮೆಚ್ಚಿಗೆಯಿಂದಲೂ ಪ್ರೀತಿಯಿಂದಲೂ ಇಲ್ಲಿ ಇದ್ದಾಳೆ ಎಂದಳು. ಆ ಮಾತಿನಿಂದ ಅವನಿಗೆ ಪ್ರೀತಿಯೂ ಮೋಹವೂ ಮತ್ತೂ ಅಧಿಕವಾಯಿತು. ತನ್ನ ಮನೆಗೆ ಬಂದು ಅಕ್ಕನನ್ನು

ತನ್ನ ಘಟ್ಟವಳ್ತಿಯ ಕೆಯ್ಯೊಳಪೂರ್ವ ವಿಲೇಪನಂಗಳನಟ್ಟುವುದೆಂದಟ್ಟುವುದುಂ ತಮ್ಮನುಪರೋಧಕ್ಕಾಱದೆ ಸೈರಂಧ್ರಿಯುಂ ಪೋಗಲ್ವೇಱ್ಪುದುಮಾಕೆಯುವನ ಮನದ ಪಱುವಗೆಯನಱಯದಂತೆಗೆಯ್ವೆನೆಂದು-

ಚಂ॥ ಸ್ಮರನರಲಂಬು ಕೈಚದುರ್ಕಿ ಬರ್ಪವೊಲೊಯ್ಯನೆ ಬಂದು ನಿಂದ ಸುಂ
ದರಿಯನೊಱಲ್ದು ಸಿಂಹಬಳನಂತಿರು ಮಾಸಿದೆಯಾದೆ ಮೇಣುಡಲ್ ।
ತರಿಪೆನೆ ತಂಬುಲಂಬಿಡಿ ಮನೋಜಶಿಖಾಳಿಗಳಟ್ಟಿ ಮುನ್ನಮೆ
ನ್ನುರಿವೆರ್ದೆ ಕಂಡು ನಿನ್ನನಿನಿಸಾಱದುದಂಬುಜಲೋಲಲೋಚನೇ ॥ ೬೪

ಕಂ॥ ಪರೆದ ಕುರುಳಲುಗೆ ಘಟ್ಟಿಯ
ನರೆಯುತ್ತುಂ ನಾಣ್ಚಿ ತೆಗೆದು ನೋೞ್ಪುದುಮೆನ್ನಂ ।
ಸ್ಮರ ಕುಳಿಕಾಗ್ನಿಯೆ ಕೊಂಡಂ
ತಿರೆ ಕೊಂಡುದು ನೋಡ ನಿನ್ನ ನೋಡಿದ ನೋಟಂ ॥ ೬೫

ಮ॥ ಮದನಾಸ್ತ್ರಂ ಕರ ಸಾಣೆಗಾಣಿಸಿದುದೆಂಬಂತಾಗೆ ನಿನ್ನೊಂದು ಕಂ
ದಿದ ಮೆಯ್ಯೆನ್ನಯ ತೋಳೊಳೊಂದೆ ಸಿರಿಯಂ ನೀನುಯ್ದು ತೊೞ್ತಾಳ್ದು ರಾ ।
ಗದಿನೆನ್ನೊಳ್ ಸುಕಮಿರ್ಪುದೆನ್ನ ನುಡಿಯಂ ನೀಂ ಕೇಳ್ದುಮೊಂದಂಚೆಯುಂ
ಪೊದೆಯೊಂದಂಚೆಯನುಟ್ಟ ನಿನ್ನಿರವಿದೇನಂಭೋಜಪತ್ರೇಕ್ಷಣೇ ॥ ೬೬

ತನ್ನ ಗಂಧ ಅರೆಯುವವಳ ಕಯ್ಯಲ್ಲಿ ಅಪೂರ್ವವಾದ ಸುಗಂಧದ್ರವ್ಯವನ್ನು ಕಳುಹಿಸಿಕೊಡುವುದು ಎಂದು ಹೇಳಿ ಕಳುಹಿಸಿದನು. ತಮ್ಮನ ಒತ್ತಾಯಕ್ಕೆ ತಡೆಯಲಾಗದೆ ಸೈರಂಧ್ರಿಯನ್ನು ಕಳುಹಿಸಲು ಅವಳು ಅವನ ಮನಸ್ಸಿನ ನೀಚಬುದ್ಧಿಯನ್ನು ತಿಳಿಯದೆ ಹಾಗೆಯೇ ಆಗಲೆಂದು ಅವನ ಅರಮನೆಗೆ ಹೋದಳು. ೬೪. ಮನ್ಮಥನ ಪುಷ್ಪಬಾಣವು ಕೈಯಿಂದ ತಪ್ಪಿಸಿಕೊಂಡು ಬರುವ ಹಾಗೆ ನಿಧಾನವಾಗಿ ಬಂದು ನಿಂತ ಆ ಸುಂದರಿಯನ್ನು ಸಿಂಹಬಲನು ಪ್ರೀತಿಯಿಂದ ನೋಡಿ ಹೇ ಕಮಲಾಕ್ಷಿ ಹಾಗೆಯೇ ಇರು, ಮಲಿನವಾಗಿ ಬಿಟ್ಟಿದ್ದೀಯೆ, ಉಡುವುದಕ್ಕೆ ವಸ್ತ್ರವನ್ನು ತರಿಸಲೇ? ತಾಂಬೂಲವನ್ನು ಹಿಡಿ, ಮನ್ಮಥನ ಬಾಣಗಳ ಸಮೂಹವು ಈಗಾಗಲೇ ಸುಡುತ್ತಿರುವ ನನ್ನ ಎದೆಯು ನಿನ್ನನ್ನು ನೋಡಿ ಸ್ವಲ್ಪ ಉಪಶಮನವಾಯಿತು. ೬೫. ಚದುರಿದ ನಿನ್ನ ಮುಂಗುರುಳು ಚಲಿಸುತ್ತಿರುವ ಗಂಧವನ್ನು ಅರೆಯುತ್ತ ಲಜ್ಜೆಯಿಂದ ನನ್ನನ್ನು ಮೋಹಿಸಿ ನೋಡಲು ನಿನ್ನ ಆ ನೋಡಿದ ನೋಟ ನನ್ನನ್ನು ಮನ್ಮಥನೆಂಬ ಸರ್ಪದ ವಿಷಾಗ್ನಿಯೇ ಸುಟ್ಟ ಹಾಗೆ ಸುಟ್ಟಿತು ನೋಡು. ೬೬. ನಿನ್ನ ಕಂದಿಹೋಗಿರುವ ಶರೀರವನ್ನು ನನ್ನ ತೋಳಿನಲ್ಲಿ ಕೂಡಿಸಿ ಕಾಮಬಾಣವೇ ವಿಶೇಷವಾಗಿ ಸಾಣೆಯನ್ನು ಹೊಂದಿತು ಎನ್ನುವ ಹಾಗೆ ಸುಖಿಸು ನೀನು. ನನ್ನ ಈ ಐಶ್ವರ್ಯಲಕ್ಷ್ಮಿಯನ್ನು ಬರಸೆಳೆದು ನಿನ್ನ ಸೇವಕಿಯನ್ನಾಗಿ ಮಾಡಿಕೊ, ಪ್ರೀತಿಯಿಂದ ನನ್ನಲ್ಲಿ ಸುಖವಾಗಿರು. ನನ್ನ ಮಾತನ್ನು ಕೇಳಿ ಒಂದು ವಸ್ತ್ರವನ್ನು ಹೊದೆದುಕೊ ಎಲೌ ಕಮಲದಳದಂತೆ ಕಣ್ಣುಳ್ಳವಳೇ ಏಕವಸ್ತ್ರವನ್ನುಟ್ಟಿರುವೆ

ಕಂ॥ ಬಗಿದೊಗೆದ ನಿನ್ನ ಮೊಲೆಗಳ
ಮೃಗಮದದ ಪುಳಿಂಚುಗಳ್ ಪಗಿಲ್ತಿರಲೆಡೆಯಾ ।
ದಗಲುರಮನೆನಗೆ ಪಡೆದಜ
ನೊಗಸುಗಮಲ್ತೆಲಗೆ ನಿನ್ನನೆನಗೆಯೆ ಪಡೆದಂ ॥ ೬೭

ಕಂ॥ ಎನಗರಸಿಯಾಣೆ ನಿನ್ನೊಡ
ನೆನಗೇಗೆಟ್ಟಪುದಿದೆಂದು ಜಿಱೋಡಾಡಲ್ ಕೆ ।
ಮ್ಮನೆ ನುಡಿದೊಡೆನ್ನ ಕಣ್ಗಂ
ಮನಕ್ಕೆ ವಂದಿರ್ದ ನಿನ್ನೊಳೆನಗೆರಡುಂಟೇ ॥ ೬೮

ಬಾಯಟಿದೆನಿತೆರೆದೊಡಮಾ
ಹಾಯೆನ್ನಯ ಕರಮೆ ಮಱುಗಿ ಮೆಯ್ಯುಡಿದುರಿವೆ ।
ನ್ನೀ ಯೆರ್ದೆಯನಾಱಿಸಲ್ ನೀಂ
ಬಾಯೊಳ್ದಂಬುಲಮನಪ್ಪೊಡಂ ದಯೆಗೆಯ್ಯೋ ॥ ೬೯

ವ॥ ಎಂದು ಮತ್ತಮನಿತಾನುಂ ತೆಱದ ಲಲ್ಲೆಯಿನಳಿಪಂ ತೋಱೆ ಬಾಯಟಿದು ತನ್ನ ನುಡಿಗಳಳಿಪಳಿವೋಗೆ ಸೈರಿಸಲಾಱದೆ ಪಿಡಿವುದುಂ ಪಾಂಚಾಲರಾಜತನೂಜೆಯಿಂತೆಂದಳ್-

ಮ॥ ಸ್ರ ॥ ನುಡಿಯಲ್ವೇಡೆನ್ನೊಳಿಂತಪ್ಪಳಿಪಿನ ನುಡಿಯಂ ನಿನ್ನ ಮಾತಿಂಗೆ ಛೀ ಮೆ
ಳ್ವಡುವಂತಪ್ಪಾಕೆಯಲ್ಲೆಂ ಬಿಡು ಗಡ ಬಿಡದಂದೆನ್ನ ಗಂಧರ್ವರಿಂದಂ ।
ಮಡಿವಯ್ ನೀನೆಂದೊಡಂತಪ್ಪೊಡೆ ಬಿಡೆನೆನಗಂ ಮೇಗುವೇಟ್ಟಪ್ಪೆಯಿಲ್ಲಾ
ರ್ಪೊಡೆ ನಿನ್ನಂ ಕಾವ ಗಂಧರ್ವರೆ ಬಿಡಿಸುಗೆ ಪೋಗೆಂದು ಪೊಯ್ದಂ
ದುರಾತ್ಮಂ ॥ ೭೦

ನಿನ್ನ ಈ ದುರವಸ್ಥೆಯಿದೇನು ? ೬೭. ಬಿಗಿದುಕೊಂಡು ಗಟ್ಟಿಯಾಗಿ ಹೊರ ಚಿಮ್ಮುತ್ತಿರುವ ನಿನ್ನ ಮೊಲೆಗಳ ಕಸ್ತೂರಿಯ ಗುಳ್ಳೆಗಳು ಅಂಟಿಕೊಳ್ಳಲು ಯೋಗ್ಯ ವಾಗಿರುವ ಹಾಗೆ ಬ್ರಹ್ಮನು ನನ್ನ ಎದೆಯನ್ನು ವಿಶಾಲವಾಗಿ ಸೃಷ್ಟಿಸಿದ್ದಾನೆ. ಇದು ಅತಿಶಯವಲ್ಲ ನಿನ್ನನ್ನು ಬ್ರಹ್ಮನು ನನಗಾಗಿಯೇ ನಿರ್ಮಿಸಿದ್ದಾನೆ - ೬೮. ರಾಣಿಯಾದ ಸುದೇಷ್ಣೆಯಾಣೆ. ಇಂದು ನಾನು ಪರಿಹಾಸ್ಯಕ್ಕಾಗಿ ನಿನ್ನೊಡನೆ ಮಾತನಾಡಿದರೆ ದೋಷವೇನು ? ನನ್ನ ದೃಷ್ಟಿಗೂ ಮನಸ್ಸಿಗೂ ಒಪ್ಪಿಗೆಯಾಗಿರುವ ನಿನ್ನಲ್ಲಿ ನನಗೆ ಮೋಸವುಂಟೇ ? ೬೯. ಬಾಯಿಸೋಲುವಷ್ಟು ಬೇಡಿದರೂ ಅಯ್ಯೋ ಎಂದು ಹೇಳಲಾರೆಯಲ್ಲ. ವಿಶೇಷವಾಗಿ ಸಶರೀರವಾಗಿ ಉರಿಯುತ್ತಿರುರ ನನ್ನ ಎದೆಯನ್ನು ಸಮಾಧಾನಮಾಡಲು ನೀನು ಬಾಯಲ್ಲಿ ತಂಬುಲವನ್ನಾದರೂ ಕೊಡಲೊಲ್ಲೆಯಾ? ವ॥ ಎಂದು ಇನ್ನೂ ಎಷ್ಟೋ ರೀತಿಯ ಮುದ್ದುಮಾತುಗಳಿಂದ ಆಸೆಯನ್ನು ತೋರಿಸಿ ಗೋಗರೆದು ತನ್ನ ಮಾತುಗಳೂ ಆಸೆಯೂ ತಿರಸ್ಕೃತವಾಗಲು ಸಹಿಸಲಾರದೆ ಕೀಚಕನು ಅವಳನ್ನು ಹಿಡಿದುಕೊಳ್ಳಲು ಹೋದನು. ದ್ರೌಪದಿಯು ಹೀಗೆಂದಳು- ೭೦. ನನ್ನಲ್ಲಿ ಇಂತಹ ದುರಾಸೆಯ ಮಾತುಗಳನ್ನಾಡಬೇಡ. ಛೀ ನಿನ್ನ ಮಾತಿಗೆ ಮೋಸಹೋಗುವಂತಹವಳಲ್ಲ. ಬಿಟ್ಟುಬಿಡು, ಬಿಡದಿದ್ದರೆ ನೀನು ನನ್ನ ಗಂಧರ್ವರಿಂದ ಸಾಯುತ್ತೀಯೆ ಎಂದಳು. ಹಾಗಾದರೆ ಬಿಡುವುದಿಲ್ಲ. ನನಗೂ ವಂಚನೆಯ ಮಾತುಗಳನ್ನಾಡುತ್ತಿರವೆಯಲ್ಲ ; ಸಮರ್ಥರಾಗಿದ್ದರೆ ನಿನ್ನನ್ನು ರಕ್ಷಿಸುವ

ವ|| ಪೊಯ್ದೊಡೆ ಬಱುಬಂ ಪೊಯಿಲ್ವೆತ್ತಂತೇನುಮನಱಿಯದೆ ಪರಿಭವಾನಿಲನಿಂ ಶೋಕಾನಲಸಿರ್ಮಡಿಸೆ ನಡನಡುಗಿ ಕಾಯ್ಪಿನೊಳ್ ಪಿಡುಗಿ ತಳೋದರಿ ವೃಕೋದರನಲ್ಲಿಗೆ ವಂದು ಕೃಟೇಕಾಂತದೊಳಿಂತೆಂದಳ್-

ಮ|| ಸ್ರ|| ಪೆಱನಿಕ್ಕುಂಗೂಳಿಂಗೊಳಂ ಕೀೞಿಲೊಳಮೞವಿಗೆಟ್ಟಿರ್ಪ ನಿಮ್ಮಿರ್ಪುದರ್ಕಂ
ಮಱುಗುತ್ತಿರ್ಪಳ್ಗೆ ನೋಡಾದಟಲನೆನಗೆ ಕಣ್ಬೋಲದಿಂ ಕೀಚಕಂ ಬಂ ।
ದುಱಿದೆನ್ನಂ ಕಾಡಿ ಕೈಗೆಲ್ದುಗಿದನವನದೊಂದುರ್ಕನೇವೇೞ್ವೆನಿನ್ನೀ
ನಱಿವಯ್ ಪೂಣ್ದೆನ್ನದೊಂದಂ ಪರಿಭವಮನಿದಂ ನೀಗು ನೀಂ ಭೀಮಸೇನಾ || ೭೧

ವ|| ಎಂಬುದುಂ ಭೀಮಸೇನನೇವದೊಳ್ ಕಣ್ಗಾಣದಿವನೊರ್ವಂ ದುಶ್ಶಾಸನನ ನಂಟನಕ್ಕುಮಾದೊಡೇನಾಯ್ತು-

ಕಂ|| ಮುಳಿಸೆಂಬುದೆನಗೆ ಕೌರವ
ರೊಳೆ ಪಿರಿದಾ ಬಲಿದ ಬಯಕೆಯಂ ಮಾದುರದೊಳ್ ।
ಕಳೆವಂತನ್ನೆಗಮಿವನೊಳ್
ಕಳೆವೆಂ ನಿನ್ನೊಂದು ಮುಳಿಸನಬ್ಜದಳಾಕ್ಷೀ || ೭೨

ವ|| ಎಂದು ನೀನೀ ವಿರಾಟನ ನಾಟಕಶಾಲೆಯನೆ ಸಂಕೇತನಿಕೇತನಂ ಮಾಡಿ ನೇಸರ್ಪಡಲೊಡಮೆನ್ನಿಂ ಮುನ್ನಮೆ ಪೋಗಿರ್ಪುದಾನಲ್ಲಿಗೆ ವರ್ಪೆನೆಂದಾ ಪಾಣ್ಬನಂ ನಂಬೆ

ಗಂಧರ್ವರೆ ಬಿಡಿಸಿಕೊಳ್ಳಲಿ ಹೋಗು ಎಂದು ದುರಾತ್ಮನಾದ ಅವನು ಅವಳನ್ನು ಹೊಡೆದನು. ವ|| ಹೊಡೆಯಲಾಗಿ ಸಹಾಯವಿಲ್ಲದವನು ಪೆಟ್ಟು ತಿಂದಹಾಗೆ ಏನುಮಾಡಲೂ ತಿಳಿಯದೆ ಅವಮಾನವೆಂಬ ಗಾಳಿಯಿಂದ ದುಃಖಾಗ್ನಿಯು ಇಮ್ಮಡಿಸಲು ವಿಶೇಷವಾಗಿ ನಡುಗಿ ಕೋಪದಿಂದ ಸಿಡಿದು ದ್ರೌಪದಿಯು ಭೀಮನ ಬಳಿಗೆ ಬಂದು ಅತ್ಯಂತ ರಹಸ್ಯವಾಗಿ ಹೀಗೆಂದು ತನ್ನ ದುಃಖವನ್ನು ತೋಡಿಕೊಂಡಳು. ೭೧. ಪರಾನ್ನದಿಂದಲೂ ಪರರ ಸೇವಾವೃತ್ತಿಯಿಂದಲೂ ಕೀಳಂತಸ್ತಿನಲ್ಲಿ ದುಃಸ್ಥಿತಿಯಿಂದ ದುಃಖಪಡುತ್ತಿರುವ ನನಗೆ ಉಂಟಾದ ದುಃಖವನ್ನು ನೋಡು. ನನ್ನ ಮೇಲಿನ ಮೋಹದಿಂದ ಕೀಚಕನು ಬಂದು ವಿಶೇಷವಾಗಿ ನನ್ನನ್ನು ಹಿಂಸಿಸಿ ಕೈಮೀರಿ ಹೊಡೆದು ಬಿಸಾಡಿದನು. ಅವನ ಕೊಬ್ಬನ್ನು ಏನೆಂದು ಹೇಳಲಿ , ಭೀಮಸೇನಾ ನನ್ನನ್ನು ಆವರಿಸಿರುವ ಈ ಅವಮಾನವನ್ನು ನೀನು ತಿಳಿದಿದ್ದೀಯೆ. ಇದನ್ನು ನೀನು ಪರಿಹಾರಮಾಡು ಎಂದು ಬಾಯಳಿದಳು. ವ|| ಭೀಮಸೇನನು ಕೋಪದಲ್ಲಿ ಕುರುಡನಾಗಿರುವ ಇವನು ಮತ್ತೊಬ್ಬ ದುಶ್ಶಾಸನನ ನೆಂಟನಾಗಿರಬೇಕು. ಆದರೇನಾಯ್ತು? ೭೨. ನನಗೆ ಕೌರವರಲ್ಲಿ ವಿಶೇಷ ಆಗ್ರಹವುಂಟು. ಈ ಸಂಪೂರ್ಣವಾದ ಬಯಕೆಯನ್ನು ಮಹಾಯುದ್ಧದಲ್ಲಿ ಕಳೆಯುವವರೆಗೆ ನಿನಗಾಗಿ ಉಂಟಾದ ಕೋಪವನ್ನು ಎಲೌ ಕಮಲದಳನೇತ್ರೆ ಇವನಲ್ಲಿ ತೀರಿಸಿಕೊಳ್ಳುತ್ತೇನೆ ವ|| ನೀನು ಈ ವಿರಾಟನ ನಾಟಕಶಾಲೆಯನ್ನೇ ರಹಸ್ಯವಾಗಿ ಕೂಡುವ ಮನೆಯನ್ನಾಗಿ ಮಾಡಿಕೊಂಡು ಸೂರ್ಯಾಸ್ತಮಾನವಾದ ಕೂಡಲೇ ನಮಗಿಂತ ಮುಂಚೆಯೇ ನೀನು ಹೋಗಿರು. ನಾನು ಅಲ್ಲಿಗೆ ಬರುತ್ತೇನೆಂದು ಕಾಮುಕನನ್ನು ನಂಬಿಕೆ ಬರುವಂತೆ

ನುಡಿದಾ ಪೊೞ್ತೆಗೆನ್ನನಲ್ಲಿಗೆ ಪರಿಸವಂಗೆ ತಕ್ಕುದನಾನೆ ಬಲ್ಲೆನೆಂದು ನುಡಿದು ಕಟಿಪಲಾ ದ್ರೌಪದಿ ಸಂತಸಂಬಟ್ಟಂತೆಗೆಯ್ವೆನೆಂದು ಪೋಗಿ-

ಚಂ॥ ಮಱುದೆವಸಂ ಲತಾಲಲಿತೆ ಕೀಚಕನಲ್ಲಿಗೆ ಕಾಮನೊಂದು ಕೈ
ಸೆಱೆಯೆನಿಪಂಗರಾಗಮನಿಳೇಶ್ವರವಲ್ಲಭೆಯಟ್ಟಲುಯ್ದೊಡಾ ।
ನಱೆಯದೆ ನಿನ್ನೆ ನೋಯಿಸಿದೆನಿಂದೆನಗೆಂಬುದನೆಂಬುದೆಂದು ಕಾ
ಲ್ಗೆಱಗಿದೊಡೊಳ್ಳಿತಾಗೆ ನಿನಗಿಂತಿನಿತೊಂದೊಲವುಳ್ಳೊಡೊಲ್ಲೆನೇ ॥ ೭೩

ವ॥ ಎಂದು ನಂಬೆ ನುಡಿದು ವಿರಾಟನ ನಾಟಕಶಾಲೆಯನೆ ಪೂರ್ವಸೂಚಿತಕ್ರಮದೊಳ್ ಕುಱುಪುವೇೞ್ದು ಸೂರ್ಯಾಸ್ತಮಯಸಮಯದೊಳ್ ಭೀಮಸೇನಂಗೆ ತದ್ವೃತ್ತಕಮನಱಿಪಿದೊಡೆ ಬಾಹುಯುದ್ಧಸನ್ನದ್ಧನಾಗಿ ಕಲಿಗಂಟಿಕ್ಕಿ ಗಂಡುಡೆಯುಮನುಟ್ಟು ಮೇಲುದನಿೞಿಯೆ ಮುಸುಕಿಟ್ಟು ಪೋಗಿ ಗುಣಣೆಯ ಬಾಗಿಲೊಳ್ ದ್ರೌಪದಿಯನಿರಿಸಿ ವೀರಶ್ರೀಯ ವಿವಾಹಮಂಟಪಮಂ ಪುಗುವಂತೊಳಪೊಕ್ಕು-

ಕಂ॥ ಸಿಂಗಬಲನೆಂಬಗುರ್ವಿನ
ಸಿಂಗಮನಸಿಧೇನುಕಿರಣಕೇಸರಮಾಲಾ ।
ಸಂಗತಮನಡಸಿ ನುಂಗಲ್
ಸಂಗತಬಲನೊಂದು ಶರಭಮಿರ್ಪಂತಿರ್ದಂ ೭೪

ಮಾತನಾಡಿ ಆ ಹೊತ್ತಿಗೆ ನನ್ನನ್ನೂ ಅಲ್ಲಿಗೆ ಬರಮಾಡು. ಅವನಿಗೆ ತಕ್ಕುದನ್ನು ನಾನು ಬಲ್ಲೆ ಎಂದು ಹೇಳಿಕಳುಹಿಸಿದನು. ದ್ರೌಪದಿಯು ಸಂತೋಷಪಟ್ಟು ಹಾಗೆಯೇ ಮಾಡುತ್ತೇನೆಂದು ಹೋದಳು. ೭೩. ಮಾರನೆಯ ದಿನ ಲತೆಯಂತೆ ಕೋಮಲವಾದ ಶರೀರವುಳ್ಳ ದ್ರೌಪದಿಯ ಕಯ್ಯಲ್ಲಿ ಮಹಾರಾಣಿಯಾದ ಸುದೇಷ್ಣೆಯು ಕಾಮನ ಬಂದಿಯೆಂಬ ಒಂದು ಲೇಪನದ್ರವ್ಯವನ್ನು ಕೀಚಕನಲ್ಲಿಗೆ ಕಳುಹಿಸಿದಳು. ಕೀಚಕನು ದ್ರೌಪದಿಯುನ್ನು ಕುರಿತು 'ನಾನು ತಿಳಿಯದೆ ನಿನ್ನೆಯ ದಿನ ನಿನಗೆ ನೋವನ್ನುಂಟುಮಾಡಿದೆ. ಈ ದಿನ ನನಗೆ ಹೇಳಬೇಕಾದುದನ್ನು ಹೇಳು' ಎಂದು ಅವಳ ಕಾಲಿಗೆ ಬಿದ್ದನು. 'ಒಳ್ಳೆಯದು ನಿನಗೆ ಇಷ್ಟು ಪ್ರೀತಿಯಿರುವುದಾದರೆ ನಾನು ಬೇಡವೆನ್ನುತ್ತೇನೆಯೆ ?' ವ॥ ಎಂದು ನಂಬುವ ಹಾಗೆ ಮಾತನಾಡಿ ಹಿಂದೆಯೇ ಸೂಚಿತವಾಗಿದ್ದಂತೆ ವಿರಾಟನ ನಾಟಕಶಾಲೆಯನ್ನೇ ಗುರುತು ಹೇಳಿ ಸೂರ್ಯನು ಮುಳುಗುವ ವೇಳೆಯಲ್ಲಿ ಭೀಮಸೇನನಿಗೆ ಆ ಸಮಾಚಾರವನ್ನು ತಿಳಿಸಿದಳು. ಭೀಮಸೇನನು ಮಲ್ಲಯುದ್ಧಮಾಡುವುದಕ್ಕೆ ಸಿದ್ಧನಾಗಿ ವೀರಗಚ್ಚೆಯನ್ನು ಹಾಕಿ ಗಂಡಸಿನ ಉಡುಪನ್ನು ಧರಿಸಿ ಮೇಲುಹೊದಿಕೆ(ಉತ್ತರೀಯು)ಯನ್ನು ಕೆಳಗಿನವರೆಗೆ ಮುಸುಕುಹಾಕಿಕೊಂಡು ಹೋಗಿ ದ್ರೌಪದಿಯನ್ನು ನಾಟ್ಯಶಾಲೆಯ ಬಾಗಿಲಿನಲ್ಲಿರಿಸಿ ವೀರಲಕ್ಷ್ಮಿಯ ವಿವಾಹಮಂಟಪವನ್ನು ಪ್ರವೇಶಮಾಡುವ ಹಾಗೆ ಒಳಹೊಕ್ಕನು. ೭೪. ಕತ್ತಿಯ ಕಿರಣಗಳೆಂಬ ಕೇಸರದ ಮಾಲೆಯಿಂದ ಕೂಡಿರುವ ಸಿಂಹಬಲ (ಕೀಚಕ)ನೆಂಬ ಸಿಂಹವನ್ನು ಹಿಡಿದು ನುಂಗಲು ಭೀಮನು ಶಕ್ತಿಯುತವಾದ

ವ॥ ಅನ್ನೆಗಮಿತ್ತ ಕೀಚಕನೆಂಬ ಪಾಣ್ಬಂ-

ಉ॥ ಅಚ್ಚಗದಿಂದಟಲ್ದಿನಸಡಂಗದ ಬೇಸಱಿಸೊಳಂತೆ ನೀರೊಳಂ
ಕಿಚ್ಚಿನೊಳಂ ಪೊರಳ್ದು ಪಗಲಂದಿರುಳಾದೊಡೆ ರಾಜ್ಯಮಾದವೋಲ್ ॥
ಪೆರ್ಚೆ ಮನಕ್ಕೆ ಬಿಚ್ಚತಿಕೆವಂದಿರೆ ನಾಟಕಶಾಲೆವೊಕ್ಕು ವಿ
ದ್ಯುಚ್ಚಪಳಂ ಮನೋಜಪರಿತಾಪದಿನೋಪಳೆಗೆತ್ತು ಭೀಮನಂ ॥ ೭೫

ಚಂ॥ ನುಡಿಯದೆ ಕೆಮ್ಮನಿರ್ಪಿರವಿದಾವುದು ಕಾರಣಮಾವುದೀ ಮೊಗಂ
ಗುಡದಿರವಿಂತು ಕಣ್ಬಡಿಗರಪ್ಪರೆ ಮಾನಸರಪ್ಪರೆಂದು ಮೆ ।
ಳ್ಪಡೆ ನುಡಿದೆಯ್ದೆವಂದು ಮುಸುಕಂ ತೆಗೆದಾಗಡೆ ಮೇಲೆವಾಯ್ದು ಬ
ಲ್ದಡಿಗನವುಂಕಿ ಬಲ್ದಡಿಗನಂ ಪಿಡಿದೊರ್ಮೆಯೆ ಮಲ್ಲಯುದ್ಧದೊಳ್ ॥ ೭೬

ವ॥ ಪೋರ್ದು ಮಲ್ಲಾಮಲ್ಲಿಯಾಗೆ ಪಲವುಂ ಗಾಯಗಳೊಳಾಯಂದಪ್ಪದೆ ತನಗವಂ ಸಮಾನಬಳನಪ್ಪುದಱಿಂ ಪಿರಿದು ಪೊಟ್ತು ಸಂತರ್ಪಿನಂ (?) ಪೋರ್ದು ಬಳೆಯ ಪೇಱಿನಾನೆ ಮೆಟ್ಟಿದಂತೆ ನುರ್ಚುನೂಱಪ್ಪಿನಮವುಂಕಿ ಪಿಡಿದಡಸಿಯಗುರ್ವು ಪರ್ವೆ ಬೀಸಿ ಗುಣಸೆಯ ಕಂಭಂಗಳೊಳಂ ಕೇರ್ಗಳೊಳಮಾಸ್ಫೋಟಿಸಿ ತಾಟಿಸಿದಾಗಳ್-

ಕಂ॥ ಬಿಸುನೆತ್ತರ್ ನೆಣನಡಗೆ
ಲ್ವು ಸಮಸ್ತಂ ಸುರಿಯೆ ಕೈಗೆ ತೊವಲುಬೆಯಲಗು ।
ರ್ವಿಸಿದುದು ತೀವಿದ ಗುಳ್ಳೆಯ
ಪಸುಂಬೆಯಂ ಸೋರ್ಚಿದಂತೆ ತನು ಕೀಚಕನಾ ॥ ೭೭

ಶರಭಮೃಗವಿರುವ ಹಾಗಿದ್ದನು. ವ॥ ಸೂರ್ಯನು ಇನ್ನೂ ಅಸ್ತಮಯವಾಗದ ಬೇಸರಿಕೆಯ ದುಃಖದಿಂದ ವ್ಯಥೆಪಟ್ಟು ನೀರಿನಲ್ಲಿಯೂ ಬೆಂಕೆಯಲ್ಲಿಯೂ ಹೊರಳಿ ಹಗಲು ರಾತ್ರಿಯಾದ ತಕ್ಷಣ ರಾಜ್ಯಪ್ರಾಪ್ತಿಯಾದ ಹಾಗೆ ಉಬ್ಬಿ ಮನಸ್ಸಿಗೆ ಸಂತೋಷವುಂಟಾಗಿರಲು ನಾಟಕಶಾಲೆಯನ್ನು ಪ್ರವೇಶಿಸಿ ಮಿಂಚಿನಂತೆ ಚಪಲನಾದ ಕೀಚಕನು ಕಾಮತಾಪದಿಂದ ಭೀಮನನ್ನು ಪ್ರಿಯೆಯೆಂದೇ ಭಾವಿಸಿ 'ಇದೇನಿದು ಪ್ರಿಯೆ. ೭೬. ಮಾತನಾಡದೆ ಸುಮ್ಮನೆ ಇರುವುದಕ್ಕೆ ಕಾರಣವೇನು ? ಮುಖವನ್ನು ತೋರಿಸದೇ ಇರುವ ಈ ಸ್ಥಿತಿಯೇನು ? ಮನುಷ್ಯರಾಗಿರುವವರು ಈ ಸ್ಥಿತಿಯಲ್ಲಿ ಮೋಸಗಾರರಾಗುವುದುಂಟೇ ?' ಎಂದು ಮೋಹದ ಮಾತಗಳನ್ನಾಡಿ ಸಮೀಪಕ್ಕೆ ಬಂದು ಮುಸುಕನ್ನು ತೆಗೆದೊಡನೆಯೇ ಬಲುದಡಿಗನಾದ ಭೀಮನು ಬಲುದಡಿಗನಾದ ಕೀಚಕನನ್ನು ಅಮುಕಿ ಹಿಡಿದುಕೊಂಡು ಮಲ್ಲಯುದ್ಧದಲ್ಲಿ ಒಂದೇ ಸಮನಾಗಿ ವ॥ ಹೋರಾಡಿ ದ್ವಂದ್ವಯುದ್ಧವಾಡಿ ಅನೇಕ ಪಟ್ಟುಗಳಲ್ಲಿ ಶಕ್ತಿಹೀನನಾಗದೆ ತನಗೆ ಅವನು ಸಮಾನಬಲನಾದುದರಿಂದ ಬಹಳಹೊತ್ತು ಸಮಾನನಾಗಿ ಕಾದಿ ಬಳೆಯ ರಾಶಿಯನ್ನು ಆನೆಯು ತುಳಿದ ಹಾಗೆ ನುಚ್ಚುನೂರಾಗುವಂತೆ ಅಮುಕಿ ಹಿಡಿದು ನೆಗ್ಗಿ ಭಯವು ಹಬ್ಬುವ ಹಾಗೆ ಬೀಸಿ ನಾಟ್ಯಶಾಲೆಯ ಕಂಭಗಳಿಗೂ ಗೋಡೆಗಳಿಗೂ ಬಡಿದು ಆಸ್ಫೋಟಿಸಿ ಬೀಸಿದನು. ೭೭. ಬಿಸಿರಕ್ತ, ಕೊಬ್ಬು, ಮಾಂಸ, ಎಲುಬು ಎಲ್ಲವೂ ಸುರಿದು ಹೋಗಿ ಕೈಯಲ್ಲಿ ತೊಗಲು ಮಾತ್ರ ಉಳಿಯಿತು. (ಪದಾರ್ಥದಿಂದ) ತುಂಬಿ

ಉ॥ ಆಂ ಜಗದೊಳ್ ಬಲಸ್ಥನೆನಿದಿರ್ಚುವರಾರೆನಗೆಂದು ಸೋಲದಿಂ
ಕಂಜದಳಾಕ್ಷಿಯಂ ಪಿಡಿದನೀ ಖಳನೆಂಬಟಲಿಂದಮತ್ತಮಿ ।
ತ್ತಂ ಜವನೊಕ್ಕಲಿಕ್ಕಿದೊಡೆ ನಾಟಕಶಾಲೆಯೊಳಿಟ್ಟೆ ರಕ್ತ ಪು
ಷ್ಪಾಂಜಳಿಗೆಯ್ದೆ ಮಾಟ್ಕೆಯವೊಲಿರ್ದುವು ಸೂಸಿದ ಖಂಡದಿಂಡೆಗಳ್ ॥೭೮

ವ॥ ಅಂತು ಸಂಧಿ ಸಂಧಿಯೊಳ್ ಸಹಸ್ರ ಸಿಂಹಬಲನೆನಿಪ ಸಿಂಹಬಲನನಶ್ರಮದೊಳ್ ಬಾಣಸಿನ ಮನೆಯೊಳ್ ಬಂದಿರ್ದನಿತ್ತ ದ್ರೌಪದಿಯುಮುಪಾಯದೊಳ್ ಗುಣಿಸೆಯ ಮನೆಯ ಮುಂದೆ ನಿಂದು-

ಕಂ॥ ಗಂಧರ್ವವನಿತೆಯೆಂ ನಿ
ರ್ಬಂಧಂ ಬೇಡಳಿಪೆ ಸಾವೆಯೆನೆ ಮಾಣದೆ ಕಾ ।
ಮಾಂಧಂ ಕೀಚಕನಾಟಿಸಿ
ಗಂಧರ್ವರಿನಟಿದನೆನಗೆ ದೂಱಪ್ಪಿನೆಗಂ ॥ ೭೯

ವ॥ ಎಂದು ಗಗ್ಗರಿಕೆಗೊಳ್ವ ಸರವುಂ ಕರ್ಣಪರಂಪರೆಯಿಂ ಕೇಳ್ದು ಸಿಂಹಬಲನೊಡವುಟ್ಟಿದರ್ ನೂರ್ವರ್ ಕೀಚಕರುಂ ಪರಿತಂದು ಮುಳಿಸಿನೊಳ್ ಕಣ್ಗಾಣದೆಲ್ಲಮೀ ಡಾಮರ ಡಾಕಿನಿಯಿಂದಮಾದುದೀಕೆಗಮೆಮ್ಮಣ್ಣಂಗಮೊಂದೆ ವಿಧಿಯಂ ಮಾಟ್ಪೆಮೆಂದಾಕೆಯಂ

ಉಬ್ಬಿಕೊಂಡಿದ್ದ ಹಸುಬೆಯ ಚೀಲವನ್ನು ಅದರಲ್ಲಿದ್ದ ಪದಾರ್ಥವನ್ನು ಖಾಲಿಮಾಡಿದಂತೆ ಕೀಚಕನ ಶರೀರವು ಭಯಂಕರವಾಯಿತು. ೭೮. ಪ್ರಪಂಚದಲ್ಲೆಲ್ಲ ನಾನೇ ಬಲಿಷ್ಠನಾದವನು. ನನ್ನನ್ನು ಇದಿರಿಸುವವರಾರಿದ್ದಾರೆ ಎಂದು ಮೋಹದಿಂದ ಕಮಲದಳನೇತ್ರೆಯಾದ ದ್ರೌಪದಿಯನ್ನು ಈ ದುಷ್ಟನು ಹಿಡಿದನು ಎಂಬ ದುಃಖದಿಂದ ಯಮನು ಆ ಕಡೆಯಿಂದ ಈ ಕಡೆಗೆ ಒಕ್ಕಣಮಾಡಲಾಗಿ ನಾಟಕಶಾಲೆಯಲ್ಲಿ ಚೆಲ್ಲಿದ ಮಾಂಸರಾಶಿಗಳು ಕೆಂಪುಹೂವುಗಳನ್ನು ಎರಚಿದ ರೀತಿಯಲ್ಲಿ ಇದ್ದುವು. ವ॥ ಹಾಗೆ ಭೀಮನು ಕೀಲುಕೀಲುಗಳಲ್ಲಿಯೂ ಸಾವಿರ ಸಿಂಹದ ಬಲವುಳ್ಳವನೆನಿಸಿದ ಕೀಚಕನನ್ನು ಅನಾಯಾಸದಿಂದ ಕೊಂದು ಯಮನಿಗೆ ಔತಣವಿಕ್ಕಿ ನಿತ್ಯದ ಹಾಗೆ ಅಡುಗೆಮನೆಯನ್ನು ಸೇರಿದನು. ಈ ಕಡೆ ದ್ರೌಪದಿಯು ಉಪಾಯದಿಂದ ನಾಟ್ಯಶಾಲೆಯ ಮುಂದುಗಡೆ ನಿಂತುಕೊಂಡು - ೭೯. ನಾನು ಗಂಧರ್ವಪತ್ನಿ, ಬಲಾತ್ಕಾರ ಮಾಡಬೇಡ; ದುರಾಸೆಪಟ್ಟರೆ ಸಾಯುತ್ತೀಯೆ ಎಂದರೂ ಬಿಡದೆ ಕಾಮಾಂಧನಾದ ಕೀಚಕನು ಆಶೆಪಟ್ಟು ನನಗೆ ಅಪಪ್ರಥೆ ಬರುವಹಾಗೆ ಗಂಧರ್ವರಿಂದ ನಾಶವಾದನು. ವ॥ ಎಂದು ಆರ್ತಸ್ವರದಿಂದ ಕೂಗಿಕೊಳ್ಳುವ ಧ್ವನಿಯನ್ನು ಕಿವಿಯಿಂದ ಕಿವಿಗೆ ಕೇಳಿದ ಸಿಂಹಬಲನಾದ ಕೀಚಕನ ಸಹೋದರರಾದ ನೂರುಜನ ಕೀಚಕರು ಓಡಿಬಂದು ಕೋಪದಿಂದ ಕುರುಡರಾಗಿ ಎಲ್ಲವೂ ಈ ಪಿಶಾಚಿಯಿಂದಾಯಿತು, ಇವಳಿಗೂ ನಮ್ಮಣ್ಣನಿಗೂ ಒಂದೇ ರೀತಿಯ ಸಂಸ್ಕಾರವನ್ನು ಮಾಡುವೆವು ಎಂದು ಅವಳನ್ನು ಮುಂದಿರಿಸಿಕೊಂಡು ಹೋದರು. ಇವನನ್ನು ಈ ರಾತ್ರಿಯೇ ದಹನಕ್ರಿಯಾದಿಗಳಿಂದ ಸಂಸ್ಕಾರ ಮಾಡಬೇಕು ಎಂದು ತೆಗೆದುಕೊಂಡು ಹೋಗುವಾಗ ಆ ಗುಂಪಿನ ಶಬ್ದವನ್ನು

ಮುಂದಿಟ್ಟು ಪೋದರಿವನನಿರುಳೊಳೆ ಸಂಸ್ಕರಿಸಲ್ವೇೞ್ಕುಮೆಂದು ಕೊಂಡುಪೋಪಾಗಳಾ ಕಳಕಳಮಂ ಭೀಮಸೇನಂ ಕೇಳ್ದವಂದಿರೊಡನೆ ರೂಪ್ಗರೆದು ಪೊೞಲಂ ಪೊಱಮಟ್ಟು ಬಱಸಿಡಿಲೆಱಗುವಂತೆ ನಿಜಭುಜಶಿಖರಾಸ್ಫಾಲನಂಗೆಯ್ದು-

ಮ॥ ವನಿತಾಹೇತುವೆ ಕೇತುವಾಯ್ತು ನಿಮಗಂ ಗಾಂಧರ್ವರಿಂದಿಂದು ನಿ
ಮ್ಮ ನಿಷೇಕಂ ನೆರೆದತ್ತು ಸತ್ತಿರೆನುತ್ತುಂ ಪೊಕ್ಕಾರ್ದು ಕಾಳಾಂಬುದ ।
ಧ್ವನಿಯಿಂ ಬಾೞೆಯ ಬೆಳ್ವನಪ್ಪ ಬನಮಂ ಕಾಡಾನೆ ಪೊಯ್ವಂತೆ ಪೊ
ಯ್ದುನಿಸುಂ ಮಾಣದೆ ನೀಚ ಕೀಚಕನಿಕಾಯ ಧ್ವಂಸನಂ ಮಾಡಿದಂ ॥ ೮೦

ವ॥ ಅಂತಳವಿಗಱೆಯೆ ಕೊರ್ವಿದ ಕೀಚಕವನಮೆಲ್ಲಮೊಂದಿರುಳೊಳೆ ಸಾಹಸ ಭೀಮನುದ್ದಾಮಕೋಪದವದಹನಜ್ವಾಲಾಸಹಸ್ರಂಗಳಿನಳ್ಕಿಮೊಳ್ಕಿದಂತಪ್ಪುದುಂ ನೇಸಱ್ ಮೂಡಿದಾಗಳಾ ಪಡೆಮಾತನಿರ್ದರಿರ್ದಲ್ಲಿಯೆ ಕೇಳ್ದು-

ಮ॥ ಪಡಲಿಟ್ಟಂತೆವೊಲಾಯ್ತು ಕೀಚಕಬಲಂ ಗಂಧರ್ವರಿಂದಿಂದಿರು
ಳ್ಗಡಿದೇಂ ಸಂಗಡಮಿೞ್ತುವಾಯ್ತೆ ಪೆಱವೆಣ್ಗೊಲ್ದಂಗಮೇನಾಗದಿಂ ।
ದುಡಿಪತ್ತಾಗದೆ ಮತ್ಸ್ಯನೊಂದು ಬಲಗೆಯ್ಕೆಂದಕ್ಕಟಾ ಎಂಬುದಂ
ನುಡಿಯಲ್ಕಾರ್ತರುಮಿಲ್ಲ ಪಾರದರದೊಳ್ ಸತ್ತಂಗಱಿಲ್ವನ್ನರಾರ್ ॥ ೮೧

ಕಂ॥ ರಾವಣನುಂ ಗಡ ಸೀತಾ
ದೇವಿಗೆ ಸೋಲ್ತದಱ ಫಲಮನೆಯ್ದಿದನಿವನಾ ।
ರಾವಣನಿಂ ಪಿರಿಯನೆ ಪೇ
ೞೇವುದೊ ಶುಚಿಯಲ್ಲದವನ ಗಂಡುಂ ತೊಂಡುಂ ॥ ೮೨

ಭೀಮಸೇನನು ಕೇಳಿ ಅವರ ಜೊತೆಯಲ್ಲಿಯೇ ಆಕಾರವನ್ನು ಮರೆಮಾಡಿಕೊಂಡು ಪಟ್ಟಣದಿಂದ ಹೊರಟು ಬರಸಿಡಿಲು ಮೇಲೆ ಬೀಳುವ ಹಾಗೆ ತನ್ನ ತೋಳುಗಳನ್ನು ತಟ್ಟಿಕೊಂಡು ೮೦. ನಿಮಗೂ ಸ್ತ್ರೀನಿಮಿತ್ತವೇ (ವಿಪತ್ಕಾರಕ) ಕೇತುಗ್ರಹವಾಯಿತು. ಗಂಧರ್ವರಿಂದ ಈ ದಿನ ಒಸಗೆ (ಮಂಗಳಕಾರ್ಯ-ತಕ್ಕಶಾಸ್ತಿ)ಯಾಯಿತು. ಸತ್ತಿರಿ; ಎನ್ನುತ್ತ ಪ್ರವೇಶಮಾಡಿ ಆರ್ಭಟಿಸಿ ಕಾಲಮೇಘದ ಧ್ವನಿಯಿಂದ ಸುಂದರವಾದ ಬಾಳೆಯ ತೋಟವನ್ನು ಕಾಡಾನೆಯು ನಾಶಮಾಡುವಂತೆ ಹೊಡೆದು ಸ್ವಲ್ಪವೂ ಬಿಡದೆ ನೀಚರಾದ ಕೀಚಕಸಮೂಹವನ್ನು ಧ್ವಂಸಮಾಡಿದನು. ವ॥ ಹಾಗೆ ಅಳತೆಯನ್ನು ಮೀರಿ ಕೊಬ್ಬಿದ ಕೀಚಕರೆಂಬ ಕಾಡೆಲ್ಲವನ್ನೂ ಒಂದೇ ರಾತ್ರಿಯಲ್ಲಿ ಸಾಹಸಭೀಮನು ಅತಿ ದೊಡ್ಡದಾದ ಕೋಪವೆಂಬ ಕಾಡುಗಿಚ್ಚಿನ ಸಾವಿರಾರು ಉರಿಗಳಿಂದ ನಾಶಪಡಿಸಿದಂತೆ ಆಗಲು ಸೂರ್ಯೋದಯವಾಯಿತು. ಆ ಸಮಾಚಾರವನ್ನು ಇದ್ದವರು ಇದ್ದಲ್ಲಿಯೇ ಕೇಳಿ ೮೧. ಕೀಚಕಸಮೂಹವು ರಾತ್ರಿ ಗಂಧರ್ವರಿಂದ ಚೆಲ್ಲಾಪಿಲ್ಲಿಯಾದ ಹಾಗಾಯಿತು. ಇದೂ ಸಾಮೂಹಿಕಮೃತ್ಯುವಾಯಿತಲ್ಲವೇ ? ಪರಸ್ತ್ರೀಗೆ ಆಳುಪಿದವನಿಗೆ ಏನುತಾನೆ ಆಗುವುದಿಲ್ಲ ? ಈ ದಿನ ವಿರಾಟನ ಬಲಗೈ ಮುರಿದುಹೋಯಿತಲ್ಲವೇ, ಅಯ್ಯೋ ಎಂದು ಹೇಳುವವರೂ ಇಲ್ಲವಲ್ಲಾ, ಹಾದರದಲ್ಲಿ ಸತ್ತವರಿಗೆ ಅಳುವವರಾರಿದ್ದಾರೆ ೮೨. ರಾವಣನೂ ಕೂಡ ಸೀತಾದೇವಿಗೆ ಮೋಹಿಸಿ ಅದರ ಫಲವನ್ನು ಹೊಂದಿದನು. ಇವನು ಆ ರಾವಣನಿಗಿಂತ ಹಿರಿಯನೆ ಹೇಳು. ಸ್ವಚ್ಛವಾದ

ವ॥ ಎಂದು ಪೊೞಲ ಜನಂಗಳ್ ಗುಜುಗುಜುಗೊಂಡು ಕೀಚಕನ ಪಡೆಮಾತನೆ ನುಡಿಯೆ ವಿರಾಟನ ಮಹಾದೇವಿಯುಂ ಪೇಡಿ ಸತ್ತಂತೇನುಮನೆನಲಱಿಯದೆ ನಾಣ್ಚಿ ತನ್ನೊಳೆ ಮೂಗೞ್ಕಿಯನಟ್ಟು ಕಿಮ್ಮನಿರ್ದಳಿತ್ತ ದುರ್ಯೋಧನನ ಗೂಢಪ್ರಣಿಧಿಗಳಾ ಮಾತಂ ಜಲಕ್ಕನಱಿದು ನಾಗಪುರಕ್ಕೆ ವಂದು ಸುಯೋಧನ ಸಭಾಮಧ್ಯದೊಳಿಂತೆಂದು ಬಿನ್ನಪಂಗೆಯ್ದರ್-

ಮ॥ ಗುಡಿಗಂ ಬದ್ದವಣಕ್ಕಮಪ್ಪ ಪಡೆಮಾತೇಮಾತಿದಂ ಕೇಳ್ದೊಡೀ
ಗಡೆ ಮೆಚ್ಚೀಯಲೆವೇೞ್ಪುದೆಯ್ದೆ ಪರಮದ್ರೋಹರ್ಕಳಾಗಿರ್ದು ನಿ-
ಮ್ಮಡಿಯೊಳ್ ಪೋಗದೆ ಕಾಡುತಿರ್ದ ಸುಭಟರ್ಕಳ್ ನೂರ್ವರುಂ ಕೀಚಕರ್
ಮಡಿದರ್ ದೇವರದೊಂದು ಪುಣ್ಯಬಲದಿಂ ಗಂಧರ್ವಯುದ್ಧಾಗ್ರದೊಳ್॥ ೮೩

ವ॥ ಅದುಕಾರಣದಿಂದಾ ವಿರಾಟನ ಮಂಡಲಂ ಗೋಮಂಡಲದಂತೆ ಹೇಳಾಸಾಧ್ಯಮಾಗಿ ಕೈಗೆವರ್ಕುಮೆಂಬುದುಂ ಕುರುರಾಜಂ ಸಿಂಧುತನೂಜನ ಮೊಗಮಂ ನೋಡಿ-

ಮ॥ ಇದು ದಲ್ ಚೋದ್ಯಮತರ್ಕ್ಯಮದ್ಭುತಮಸಂಭಾವ್ಯಂ ವಿಚಾರಕ್ಕೆ ಬಾ
ರದುದೆಂತೆಂದೊಡೆ ಸಂದ ಸಿಂಹಬಲನಂ ಕೊಲ್ವನ್ನರಾರ್ ಭೀಮನ
ಲ್ಲದವರ್ ಕೀಚಕ ಭೀಮ ಶಲ್ಯ ಬಲದೇವರ್ಕಳ್ ಸಮಾನರ್ಕಳ
ಪ್ಪುದಱಿಂ ತೋಳ್ವಲದೊಳ್ ಪೆಱಿಂಗಮರಿದೀ ವಿಕ್ರಾಂತಮುಂ ಗರ್ವಮುಂ ॥ ೮೪

ನಡತೆಯಿಲ್ಲದವನ ಪೌರುಷಪರಾಕ್ರಮಗಳಿಂದೇನು ಪ್ರಯೋಜನ ? ವ॥ ಎಂದು ಪಟ್ಟಣದ ಜನಗಳು ಗುಂಪುಕೂಡಿಕೊಂಡು ಕೀಚಕನ ವಿಷಯವಾದ ಮಾತನ್ನೇ ಆಡುತ್ತಿರಲು ವಿರಾಟನ ಮಹಾರಾಣಿಯಾದ ಸುದೇಷ್ಣೆಯೂ ಹೇಡಿ ಸತ್ತ ಹಾಗೆ ಏನನ್ನು ಹೇಳಲೂ ತಿಳಿಯದೆ ಲಜ್ಜೆಪಟ್ಟು ತನ್ನಲ್ಲಿಯೇ ಮೂಗಳುವನ್ನು ಅತ್ತು ಸುಮ್ಮನಿದ್ದಳು. ಈ ಕಡೆ ದುರ್ಯೋಧನನ ಗೂಢಚಾರರು ಆ ಮಾತನ್ನು ಥಟ್ಟನೆ ತಿಳಿದು ಹಸ್ತಿನಾವತಿಗೆ ಬಂದು ದುರ್ಯೋಧನನ ಸಭೆಯ ಮಧ್ಯದಲ್ಲಿ ಹೀಗೆಂದು ವಿಜ್ಞಾಪನೆ ಮಾಡಿದರು. ೮೩. 'ಧ್ವಜಾರೋಹಣಮಾಡುವುದಕ್ಕೂ ಮಂಗಳವಾದ್ಯ ಮಾಡಿಸುವುದಕ್ಕೂ ಯೋಗ್ಯವಾದ ಸಮಾಚಾರ' ಎಂದರು ದೂತರು. ಅದೇನಂತಹ ಸುದ್ದಿ ಎಂದ ದುರ್ಯೋಧನ. ಇದನ್ನು ಕೇಳಿದ ತಕ್ಷಣವೇ ನಮಗೆ ಬಹುಮಾನವನ್ನು ಕೊಟ್ಟೇ ತೀರಬೇಕಾದುದು. 'ನಿಮ್ಮ ವಿಶೇಷಪರಮ ದ್ರೋಹಿಗಳಾಗಿದ್ದು ನಿಮ್ಮನ್ನು ಸದಾ ಹಿಂಸಿಸುತ್ತಿದ್ದ ನೂರುಜನ ಕೀಚಕರೂ ಸ್ವಾಮಿಯ ಪುಣ್ಯಬಲದಿಂದ ಗಂಧರ್ವರೊಡನೆ ಆದ ಯುದ್ಧದಲ್ಲಿ ಸತ್ತರು. ವ॥ ಆದ ಕಾರಣದಿಂದ ವಿರಾಟದೇಶವು ಪಶುವಿನ ಹಿಂಡಿನಂತೆ ಆಟದಷ್ಟು ಸುಲಭಸಾಧ್ಯವಾಗಿ ಕೈವಶವಾಗುತ್ತದೆ' ಎಂದು ಹೇಳಿದರು. ದುರ್ಯೋಧನನು ಭೀಷ್ಮಾಚಾರ್ಯರ ಮುಖವನ್ನು ನೋಡಿದನು. ೮೪. ಇದು ನಿಜವಾಗಿಯೂ ಆಶ್ಚರ್ಯಕರವಾದುದದು, ತರ್ಕಿಸಲಾಗದುದು. ಅದ್ಭುತವಾದುದು, ನಡೆಯಲಾಗದುದು, ವಿಚಾರ ಮಾಡಲಾಗದುದು ; ಹೇಗೆಂದರೆ ಭೀಮನಲ್ಲದವರು ಸಿಂಹಬಲನನ್ನು ಕೊಲ್ಲುವವರಾರಿದ್ದಾರೆ ? ಬಾಹುಬಲದಲ್ಲಿ ಕೀಚಕ, ಭೀಮ, ಶಲ್ಯ, ಬಲದೇವರುಗಳು ಸಮಾನರಾಗಿರುವುದರಿಂದ ಈ ಪೌರುಷಮಾರ್ಗವು

ವ|| ಅದಱಿಂ ಪಾಂಡವರ್ಕೈವರುಂ ವಿರಾಟಪುರದೊಳಿರ್ದರಾಗಲೆವೇಱ್ಕುಮವ ರಿರ್ದರಪ್ಪೊಡೆ-

ಚಂ|| ಪರಿಭವದೊಂದು ತುತ್ತ ತುದಿ ಕೃಷ್ಣೆಯ ಬನ್ನದೊಳಾಗೆ ಜೂದಿನೊಳ್
ಪೊರಸಟಿವಂತೆ ತಮ್ಮರಸುಗೆಟ್ಟು ಕಟಿಲ್ವೆರ್ದೆಗೆಟ್ಟರಣ್ಯದೊಳ್ ।
ತಿರಿತರುತಿರ್ದ ಕಣ್ಬಡಿಗರಿನ್ ಮಗುಳ್ದುಂ ಬಿಱುತೋಡಿ ಬೇಡರೊಳ್
ನೆರೆದಿರಲಲ್ಲದೊಡ್ಡಯಿಸಿ ರಾಜ್ಯದೊಳೇಂ ನೆರೆಯಲ್ಕೆ ತೀರ್ಗುಮೋ ॥ ೮೫

ವ|| ಎಂಬುದುಮಾ ಕೌರವನ ಮಾತಿಂಗಮರಾಪಗಾನಂದನನಿಂತೆಂದಂ-

ಮ|| ಸ್ರ || ರಸೆಯೊಳ್ ಕಾಲಾಗ್ನಿರುದ್ರಂ ಜಲಶಯನದೊಳಂಭೋಜನಾಭಂ ಪೊದಳ್ದಾ ।
ಗಸದಿಂ ಸುತ್ತಿರ್ದಜಾಂಡೋದರದೊಳಜನಡಂಗಿರ್ಪವೋಲ್ ಕಾರಣಕ್ಕಂ ॥
ದೊಸೆದಿರ್ದರ್ ಪಾಂಡವರ್ ಕಾನನದೊಳಿರದವರ್ ನನ್ನಿಯಂ ತಪ್ಪೆಯುಂ ಸ
ಪ್ತಸಮುದ್ರಂ ಮೇರೆಯಂ ತಪ್ಪೆಯುಮೊಳರೆ ಬಿಗುರ್ತಾಂಪವರ್ ರಾಜರಾಜಾ ॥ ೮೬

ವ|| ಎನೆ ಕುಂಭಸಂಭವನಿಂತೆಂದಂ-

ಮ|| ಕೃತಶಾಸ್ತ್ರರ್ ಧೃತಶಾಸ್ತ್ರರಪ್ರತಿಹತ ಪ್ರಾಗಲ್ಭ್ಯರೀಗಳ್ ಪೃಥಾ
ಸುತರುದ್ಯೋಗಮನೆತ್ತಿಕೊಳ್ವ ದೆವಸಂ ಸಾರ್ಚಿತ್ತು ಕಾಲಾವಧಿ ।
ಸ್ಥಿತಿಯುಂ ಬಂದುದಿದರ್ಕೆ ಮಾಣ್ದಿರದೆ ಮಂತ್ರಾವಾಸದೊಳ್ ಮಂತ್ರ ನಿ
ಶ್ಚಿತನಾಗೀಗಡೆ ಕಾದಿದಲ್ಲದಿಳೆಯಂ ನೀನೆಂತುಮೇನಿತ್ತಪಯ್ ॥ ೮೭

ಇತರರಿಗೆ ಅಸಾಧ್ಯ. ವ|| ಆದುದರಿಂದ ಪಾಂಡವರೈದು ಜನವೂ ವಿರಾಟನಗರದಲ್ಲಿದ್ದೇ ತೀರಬೇಕು. ಅವರಿರುವುದಾದರೆ -೮೫. ದ್ರೌಪದಿಯ ಅವಮಾನದ ಪರಮಾವಧಿ ಯಿಂದ ಜೂಜಿನಲ್ಲಿ ಪಾರಿವಾಳವು ನಾಶವಾಗುವಂತೆ ತಮ್ಮ ರಾಜ್ಯವನ್ನು ಕಳೆದು ಕೊಂಡು, ಗೌರವವನ್ನು ನೀಗಿ, ಉತ್ಸಾಹಶೂನ್ಯರಾಗಿ ಕಾಡಿನಲ್ಲಿ ಅಲೆದಾಡುತ್ತಿರುವ ಮೋಸಗಾರರು ಪುನಃ ಹೆದರಿ ಓಡಿಹೋಗಿ ಬೇಡರಲ್ಲಿ ಸೇರಿರಬೇಕಲ್ಲದೆ ಗುಂಪುಕೂಡಿ ರಾಜ್ಯದಲ್ಲಿ ಸೇರುವುದು ಸೂಕ್ತವೇ ? ಎಂದ ದುರ್ಯೋಧನ. ವ|| ಆ ದುರ್ಯೋಧನನ ಮಾತಿಗೆ ಭೀಷ್ಮನು ಹೇಳಿದನು : ೮೬. ಕಾಲಾಗ್ನಿರುದ್ರನು ಪಾತಾಳದಲ್ಲಿಯೂ ವಿಷ್ಣುವು ಜಲಶಯನದಲ್ಲಿಯೂ ಬ್ರಹ್ಮನು (ವ್ಯಾಪ್ತವಾದ) ಆಕಾಶದಿಂದ ಸುತ್ತಿರುವ ಬ್ರಹ್ಮಾಂಡದ ಮಧ್ಯಭಾಗದಲ್ಲಿಯೂ ಅಡಗಿರುವ ಹಾಗೆ ಯಾವುದೋ ಒಂದು ಕಾರಣಕ್ಕಾಗಿ ಪಾಂಡವರು ಸಮಾಧಾನ ಚಿತ್ತದಿಂದ ಕಾಡಿನಲ್ಲಿ ಅಡಗಿದ್ದರು. ದುರ್ಯೋಧನ ಅವರು ಹಾಗೆ ಮಾಡದೆ ಸತ್ಯವನ್ನು ತಪ್ಪಿದರೂ ಏಳು ಸಮುದ್ರಗಳು ಮೇರೆದಪ್ಪಿದರೂ ಪ್ರತಿಭಟಿಸುವವರು ಯಾರು ಇದ್ದಾರೆ? ಎನ್ನಲು ದ್ರೋಣಾಚಾರ್ಯರು ಹೀಗೆಂದರು. ೮೭. ಪಾಂಡವರು ಶಾಸ್ತ್ರವನ್ನು ತಿಳಿದವರು. ಶಸ್ತ್ರವನ್ನು ಧರಿಸಿರುವವರು. ತಡೆಯಿಲ್ಲದ ಪ್ರೌಢಿಮೆಯನ್ನುಳ್ಳವರು. ಅವರು ಕಾರ್ಯಾರಂಭಮಾಡುವ ಕಾಲ ಸಮೀಪಿಸಿದೆ. ಮಂತ್ರಾಲೋಚನಾಸಭೆಯಲ್ಲಿ ಈಗಲೇ ನಿಶ್ಚಿತವಾದ ಸೂಕ್ತವಾದ ಕಾರ್ಯವನ್ನು [illegible]. ಯುದ್ಧಮಾಡದ [illegible] ನೀನು ಹೇಗೂ ಕೊಡುವುದಿಲ್ಲವಲ್ಲವೆ?

ವ|| ಎಂದೊಡೆ ಕರ್ಣನಿಂತೆಂದಂ-

ಚಂ|| ಬಗೆಯದೆ ಸಾಮಮಂ ಬಿಸುಟು ಭೇದಮನೊಲ್ಲದುದಗ್ರದಾನಮಂ
ನೆಗಬದೆ ದಂಡಮಂ ನಿನಗೆ ಮಾಡಿದಕೃತ್ಯರನಂತು ಮಾಣ್ಬುದೇ ।
ಬಗೆ ಪಗೆ ನೀಗೆಯುಂ ಮುಳಿಸು ಪೋಗೆಯುಮಾಯತಿ ಪೆರ್ಚೆಯುಂ ಜಗಂ
ಪೊಗಟೆಯುಮಾಂತರಾತಿನೃಪರಂ ತವೆ ಕೊಲ್ವುವಹೀಂದ್ರಕೇತನಾ ॥ ೮೮

ವ|| ಎಂಬುದುಂ ಸುಯೋಧನನಿರ್ವರ ನುಡಿಯುಮಂ ಕೇಳ್ದು ತನ್ನ ಮನದೊಳಾದ ಕಜ್ಜಮನಿಂತೆಂದಂ-

ಚಂ|| ಅಱಿಯಲೆವೇಟ್ಪುದಿರ್ದೆಡೆಯನಿರ್ದೆಡೆಯಿಂ ತೆಗೆದಾಜಿರಂಗದೊಳ್
ನಿಱಿಸಲೆವೇಟ್ಪುದಂತವರನಂತವರಿರ್ಪೆಡೆಯುಂ ವಿರಾಟನಿ ।
ರ್ಪಱಿಕೆಯ ಪಟ್ಟಣಂ ನಮಗಿದೇವಿರಿದಪ್ಪುದು ತಳ್ವದೆಯ್ದಿ ನಾಂ
ತುಱುಪನೆ ಕೊಳ್ವಮಂತು ತುಱುಗೊಂಡೊಡೆ ಪಾಂಡವರಿರ್ಪ ಗಂಡರೇ ॥ ೮೯

ವ|| ಎಂದು ಪಿರಿದುಮಾಗ್ರಹಂಬೆರಸು ಗೋಗ್ರಹಣಪ್ರಪಂಚಮನೆ ನಿಶ್ಚಯಿಸಿ ವಿರಾಟನ ದಾಯಿಗಂ ತ್ರಿಗರ್ತಾಧೀಶಂ ಸುಶರ್ಮನುಮಂ ನಾಲ್ಛಾಸಿರ ರಥಂಬೆರಸು ದಕ್ಷಿಣದಿಶಾಭಾಗಕ್ಕೆ ವೇಟ್ದು ತುಱುವಂ ಕೊಳಿಸಿದಾಗಳ್-

ಚಂ|| ಕರೆದು ವಿರಾಟನುತ್ತರನನಾತ್ಮತನೂಜನನಾ ಪೊಟಲ್ಗೆ ಕಾ
ಪಿರಿಸಿ ಧರಾತಳಂ ತಳರ್ವಪೋಲ್ ನಡೆದಾಗಳೆ ಪಾಂಡುಪುತ್ರರ ।
ಯ್ವರುಮಿದು ನಮ್ಮನಾರಯಲೆ ವೈರಿಯ ಮಾಡಿದ ಗೊಡ್ಡವಿಲ್ಲಿ ಮಾ
ಣ್ದಿರಲಣಮಾಗ ಪೂಣ್ದವಧಿಯುಂ ನೆಱೆದತ್ತು ಕಡಂಗಿ ಕಾದುವಂ ॥ ೯೦

ವ|| ಎನ್ನಲು ಕರ್ಣನು ಹೀಗೆ ಹೇಳಿದನು - ೮೮. ದುರ್ಯೋಧನ, ಸಾಮೋಪಾಯವನ್ನು ಯೋಚಿಸದೆ ಭೇದೋಪಾಯವನ್ನು ಬಿಸಾಡಿ ಶ್ರೇಷ್ಠವಾದ ದಾನೋಪಾಯವನ್ನು ಅಂಗೀಕರಿಸದೆ ನಿನಗೆ ದಂಡೋಪಾಯವನ್ನೇ ನಿಷ್ಕರ್ಷಿಸಿದ ಆ ಕೃತಘ್ನರನ್ನು ಹಾಗೆಯೇ ಬಿಡುವುದು ಯೋಗ್ಯವಲ್ಲ. ಶತ್ರು ತೊಲಗುವಂತೆಯೂ ಕೋಪವು ಪರಿಹಾರವಾಗುವಂತೆಯೂ ಪೌರುಷವು ಹೆಚ್ಚುವಂತೆಯೂ ಲೋಕವು ಹೊಗಳುವಂತೆಯೂ ಪ್ರತಿಭಟಿಸಿದ ಶತ್ರುರಾಜರನ್ನು ಪೂರ್ಣವಾಗಿ ಕೊಲ್ಲುವುದು ಸೂಕ್ತವಾದ ಮಾರ್ಗ ಎಂದನು. ೮೯. ಎನ್ನಲು ದುರ್ಯೋಧನನು ಇಬ್ಬರ ಮಾತನ್ನು ಕೇಳಿ ತನ್ನ ಅಭಿಪ್ರಾಯವನ್ನು ಸೂಚಿಸಿದನು. ಮೊದಲು ಅವರು ಇರುವ ಸ್ಥಳವನ್ನು ತಿಳಿಯಬೇಕು. ಅವರನ್ನು ಅವರಿರುವ ಸ್ಥಳದಿಂದ ಓಡಿಸಿ ಯುದ್ಧಭೂಮಿಯಲ್ಲಿ ನಿಲ್ಲಿಸಬೇಕು. ವಿರಾಟನು ವಾಸಿಸುವ ಪ್ರಸಿದ್ಧವಾದ ವಿರಾಟನಗರವು ಅವರಿರುವ ಸ್ಥಳ. ನಮಗೆ ಆ ವಿರಾಟನಗರವು ಏನು ದೊಡ್ಡದು? ಸಾವಕಾಶಮಾಡದೆ ನಾವು ಹೋಗಿ ಗೋವುಗಳನ್ನು ಹಿಡಿಯೋಣ. ಹಾಗೆ ಹಸುಗಳನ್ನು ಬಂಧಿಸಿದರೆ ಪಾಂಡವರು ಸುಮ್ಮನಿರುವ ಶೂರರಲ್ಲ. ವ|| ಎಂದು ವಿಶೇಷ ಕೋಪದಿಂದ ಕೂಡಿ ಪಶುಗಳನ್ನು ಬಂಧಿಸುವ ವಿಷಯವನ್ನೇ ನಿಶ್ಚಯಿಸಿದರು. ವಿರಾಟನ ಜ್ಞಾತಿಯೂ ತ್ರಿಗರ್ತಾಧೀಶನೂ ಆದ ಸುಶರ್ಮನನ್ನು ನಾಲ್ಕು ಸಾವಿರ ತೇರುಗಳೊಡನೆ ದಕ್ಷಿಣದಿಗ್ಭಾಗಕ್ಕೆ ಕಳುಹಿಸಿ ಪಶುಗಳನ್ನು ಓಡಿಸಿದರು. ೯೦. ವಿರಾಟನು ತನ್ನ ಮಗನಾದ ಉತ್ತರನನ್ನು ಕರೆದು ಆ ಪಟ್ಟಣಕ್ಕೆ ಕಾವಲಾಗಿರಿಸಿ

ವ|| ಎಂದು ತಮ್ಮಯ್ವರುಮಾಳೋಚಿಸಿ ವಿಕ್ರಮಾರ್ಜುನನಂ ಪೆಱಗಣ ಕಾಪಿಂಗಿರಲ್ವೇೞ್ದು ನಾಲ್ವರುಂ ನಾಲ್ಕು ಸಮುದ್ರಂಗಳೆ ಮೇರೆದಪ್ಪಿದಂತೆ ವಿರಾಟನೊಳ್ ಕೂಡಿ ಪೋಗಿ ತಾಗಿದಾಗಳ್-

ಚಂ|| ಕಡಲ ಪೊದಳ್ದ ಪೆರ್ದೆರೆಗಳೆಯ್ದೆ ಕುಲಾದ್ರಿಗಳೊಳ್ ಪಳಂಚಿ ತೂ
ಳ್ದೊಡನೆ ಮರಲ್ವವೋಲ್ ಕೆಡೆಯೆ ಪಾಯಿಸಿಮುಗ್ರರಥಂಗಳಟ್ಟಿತ ||
ಳ್ತಡಿಗಿಡೆ ಪಾಯ್ದರಾತಿನೃಪರಂ ತಱೆದಾಂತಿರದಾ ಸುಶರ್ಮನಂ
ಪಿಡಿದು ನೆಗೞ್ತಿಯಂ ಪಡೆದು ಸಾಹಸದಿಂ ತುಱುವಂ ಮಗುೞ್ಚಿದರ್ ||೯೧

ವ|| ಆನ್ನೆಗಮತ್ತ ಸುಯೋಧನಂ ಸಮಸ್ತ ಸಾಧನಂಬೆರಸು-

ಉ|| ಉತ್ತರಂ ಗೋಗ್ರಹಂ ಪಿರಿದುಮಾಗ್ರಹಮಂ ಮನದೊಳ್ ತಗುಳ್ಚೆ ದಿ
ಗ್ಭಿತ್ತಿ ವಿಭೇದಿ ಪೆರ್ಚೆ ಕದನಾನಕರಾವಮುಗುರ್ವಿನುರ್ವು ಪ |
ರ್ವುತ್ತಿರೆ ಚಾರು ವೀರ ಭಟ ಕೋಟಿಗೆ ರಾಗರಸಂ ಪೊದಳ್ದು ತು
ಳ್ಕುತ್ತಿರೆ ಬಂದು ಮುತ್ತಿ ಮೊಗೆದಂ ವಿಭು ಗೋಕುಲಮಂ ವಿರಾಟನಾ || ೯೨

ಚಂ|| ಪಸರಿಸಿ ಪೊಕ್ಕು ಕೂಕಿಱಿದು ಕಾದುವ ಬಲ್ಲಣಿಗಳ್ ಪಳಂಚೆ ಪಾ
ಯಿಸುವ ದಟಕ್ಕಗುರ್ವೆಸೆಯೆ ನೂಂಕಿದ ಬಲ್ಲಣಿಗೆತ್ತಮೆಯ್ದೆ ಚೋ |
ದಿಸುವ ರಥಕ್ಕೆ ಪೆಳ್ಕಳಿಸದೊರ್ವರಿನೊರ್ವರೆ ಮಿಕ್ಕು ಪಾರ್ದು ಸಾ
ರ್ದಿಸೆ ತುಱುಗಾಱರಂದಿನಿಸು ಬಲ್ವಲನಾದುದದೊಂದು ಕಾಳೆಗಂ || ೯೩

ಭೂಮಂಡಲವೇ ಚಲಿಸುವ ಹಾಗೆ ಯುದ್ಧಕ್ಕೆ ನಡೆದನು. ಪಾಂಡವರೈವರೂ 'ನಮ್ಮನ್ನು ಕಂಡು ಹಿಡಿಯಲು ಶತ್ರುವಾದ ದುರ್ಯೋಧನನು ಹೂಡಿದ ಚೇಷ್ಟೆಯಿದು. ಇಲ್ಲಿ ತಡೆದಿರಲಾಗದು. ಪ್ರತಿಜ್ಞೆಮಾಡಿದ ಗಡುವೂ ಪೂರ್ಣವಾಗಿದೆ. ಉತ್ಸಾಹದಿಂದ ಯುದ್ಧಮಾಡೋಣ' ವ|| ಎಂದು ತಾವಯ್ದುಜನವೂ ತಮ್ಮಲ್ಲಿ ಆಲೋಚಿಸಿ ವಿಕ್ರಮಾರ್ಜುನನನ್ನು ನಗರದ ಹಿಂಗಾವಲಿಗೆ ಇರಹೇಳಿ ನಾಲ್ಕು ಜನರೂ ನಾಲ್ಕು ಸಮುದ್ರಗಳೇ ಮೇರೆದಪ್ಪಿದಂತೆ ವಿರಾಟನೊಡನೆ ಕೂಡಿ ಹೋಗಿ ಪ್ರತಿಭಟಿಸಿದರು. ೯೧. ಸಮುದ್ರದಲ್ಲಿ ವ್ಯಾಪ್ತವಾದ ದೊಡ್ಡ ಅಲೆಗಳು ಕುಲಪರ್ವತಗಳನ್ನು ತಗುಲಿ ಹಿಂದಕ್ಕೆ ಮರಳಿದಂತೆ ಮುಂದಕ್ಕೆ ನುಗ್ಗಿಸಿದ ಭಯಂಕರವಾದ ರಥಗಳನ್ನು ಹಿಂದಕ್ಕೆ ತಳ್ಳಿ ಬೀಳಿಸಿ ತಳಭಾಗವು ನಾಶವಾಗಿ ಅಡಿಮೇಲಾಗಲು ನುಗ್ಗಿದ ಶತ್ರುರಾಜರನ್ನೂ ಸುಶರ್ಮನನ್ನೂ ಬಿಡದೆ ಎದುರಿಸಿ ಹಿಡಿದು ಪ್ರಸಿದ್ಧಿಯನ್ನು ಪಡೆದು ಸಾಹಸದಿಂದ ಪಾಂಡವರು ವಿರಾಟನ ಗೋವುಗಳನ್ನು ಹಿಂದಕ್ಕೆ ತಿರುಗಿಸಿದರು. ವ|| ಅಷ್ಟರಲ್ಲಿ ಆ ಕಡೆ ದುರ್ಯೋಧನನು ಸಮಸ್ತ ಸೈನ್ಯದೊಡಗೂಡಿ - ೯೨. ಉತ್ತರದಿಕ್ಕಿನ ಗೋವುಗಳನ್ನು ಹಿಡಿಯಲು ಯೋಚಿಸಿ ದಿಗಂತವನ್ನು ಒಡೆಯುತ್ತಿರುವ ಯುದ್ಧಭೇರಿಯ ಭಯಂಕರವಾದ ಶಬ್ದವು ಹೆಚ್ಚುತ್ತಿರಲು ಪ್ರಸಿದ್ಧರಾದ ಶೂರರನೇಕರಿಗೆ ಸಂತೋಷರಸವು ಹೆಚ್ಚಿ ಹೊರ ಹೊಮ್ಮುತ್ತಿರಲು ಪ್ರಭುವಾದ ದುರ್ಯೋಧನನು ಬಂದು ವಿರಾಟನ ಗೋಸಮೂಹವನ್ನು ಆಕ್ರಮಿಸಿ ಸೆರೆಹಿಡಿದನು. ೯೩. ಪ್ರಸರಿಸಿ ಹೊಕ್ಕು ಮೇಲಕ್ಕೆ ನೆಗೆದು ಹೋರಾಡುವ ಬಲಿಷ್ಠರಾದ ಕಾಲಾಳುಗಳು ತಾಗಲು, ಮುನ್ನುಗ್ಗಿಸುವ ಸೈನ್ಯಕ್ಕೆ ಭಯವುಂಟಾಗುವಂತೆ ಮುಂದೆ ನುಗ್ಗಿದ ಬಲವಾದ ಕಾಲಾಳುಗಳಿಗೂ ವೇಗವಾಗಿ ನಡೆಸುತ್ತಿರುವ ತೇರುಗಳಿಗೂ ಹೆದರದೆ ಒಬ್ಬರನ್ನೊಬ್ಬರು ಮೀರಿ ಗುರಿಯಿಟ್ಟು ನೋಡಿ

ಕಂ॥ ಮಚ್ಚರದಿನೊರ್ವರೊರ್ವರ
ನುಚ್ಚಳಿಸಿ ತಗುಳ್ದು ಗೋವರಾರ್ದಿಸೆ ಕೀಲಿಂ ।
ಕರ್ಚಿ ಪುಡಿಯೊಳ್ ಪೊರಳ್ದುವು
ನಚ್ಚಿನ ಕಾಂಭೋಜವಾಜಿಗಳ್ ಕೆಲವಾಗಳ್ ॥ ೯೪

ವ॥ ಅಂತು ಮತ್ತು ಮನದೊಳೊಡಂಬಟ್ಟಂತೆ ಮನಮನೆಡಗಲಿಸಿ ಪರಿವ ಜಾತ್ಯಶ್ವಂಗಳೆಲ್ಲ ಮಱೆಗಾಳೆಗದೊಳ್ ಸತ್ತೊಡೆ-

ಚಂ॥ ತುಱು ಪರಿವಾಗಳೆಮ್ಮ ಪೆಣನಂ ತುೞಿದುಂ ಪರಿಗುಂ ದಲೆಂದು ಚಃ
ತುಱುಗೊಳೆ ಬಾೞ್ವಮೆಂದು ತುಱುಗೋಳೊಳೆ ಸಾವುದು ಸೈಪಿದೆಂದು ಪಾ ।
ಯ್ದುಱಿಕೆಯ ಗೋವರಣ್ಮಿ ಬರೆ ಪಾಯಿಸಿ ಘೋಟಿಯಿಲರ್ ತಗುಳ್ದು ತ
ತ್ತೞಿ ತಱಿದಿಕ್ಕಿ ದೇಗುಲಕೆ ಪೆರ್ಮರನಂ ಕಡಿವಂತೆ ಮಾಡಿದರ್ ॥ ೯೫

ವ॥ ಆಗಳೊರ್ವ ಗೋವಳನನಿಬರ ಸಾವುಮಂ ಕಂಡು ಮನದೊಳಾದೇವಂ ಪೆರ್ಚಿಯುಂ ತುಱುವ ಪೋಗಿಂಗಾಱದೆ ವಿರಾಟಪುರಕ್ಕೆ ವಂದುತ್ತರಂಗೆ ಪೇೞ್ದಾಗಳ್-

ಚಂ॥ ಪೆಱಗಣ ಕಾಪೆನ್ನನೆ ಮಹೀಪತಿ ಪೂಣಿಸಿ ಪೋದನಾಂ ಗಡಂ
ತುಱುಗೊಳೆ ಮಾಣೆನೆನ್ನಿದಿರ್ಗೆ ರಾವಣ ಕೋಟಿಯುಮಾಂತುಮೇಂ ಗೆಲಲ್ ।
ನೆಱೆಗುಮೆ ತನ್ನಿಮಿನ್ನನಗೆ ಸಾರಥಿಯಪ್ಪನನೀಗಳೆಂದು ಪೊ
ಚ್ಚಱಿಸೆ ವಿರಾಟನಂದನನದೆಲ್ಲಮನಾಗಡೆ ವಿಕ್ರಮಾರ್ಜುನಂ ॥ ೯೬

ಸಮೀಪಕ್ಕೆ ಬಂದು ಬಾಣಪ್ರಯೋಗಮಾಡಲು ದನಕಾಯುವವರ ಅಂದಿನ ಯುದ್ಧವು ಸ್ವಲ್ಪ ಬಲಿಷ್ಠವೇ ಆಯಿತು. ೯೪. ಮತ್ಸರದಿಂದ ಒಬ್ಬರನ್ನೊಬ್ಬರು ಹಾರಿಸಿ ದನಕಾಯುವವರು ಆರ್ಭಟದಿಂದ ಹೊಡೆಯಲು (ಜಯಿಸಿಯೇ ತೀರುತ್ತೇವೆಂದು) ನಂಬಿದ್ದ ಕೆಲವು ಕಾಂಭೋಜದೇಶದ ಕುದುರೆಗಳು ಕಡಿವಾಣವನ್ನು ಕಚ್ಚಿಕೊಂಡೇ ಹುಡಿಯಲ್ಲಿ ಹೊರಳಿದುವು. ವ॥ ಹಾಗೆ ತಮ್ಮ ಮನಸ್ಸಿಗೆ ತೃಪ್ತಿಯಾಗುವಂತೆ ಮನಸ್ಸನ್ನೂ ಮೀರಿ ಓಡುವ ಜಾತಿಕುದುರೆಗಳೆಲ್ಲ ಆ ಸಾಮಾನ್ಯಯುದ್ಧದಲ್ಲಿ ಸತ್ತವು. ೯೫. ದನಗಳು ಓಡುವಾಗ ನಮ್ಮ ಹೆಣವನ್ನು ತುಳಿದುಕೊಂಡು ಓಡುತ್ತವೆಯಲ್ಲವೇ ? ದನಗಳನ್ನು ಶತ್ರುಗಳು ಹಿಡಿದರೆ ನಾವು ಬದುಕಿರಲಾರೆವು. ತುರುಗಾಳಗದಲ್ಲಿ ಸಾಯುವುದು ನಮ್ಮ ಪುಣ್ಯವೇ ಸರಿ (ಅದೃಷ್ಟ) ಎಂದು ಹಾಯ್ದು ಪ್ರಸಿದ್ಧರಾದ ಗೋಪಾಲಕರು ಪೌರುಷಪ್ರದರ್ಶನಮಾಡಿ ಬರಲು ಕುದುರೆಯ ರಾವುತರು ಕುದುರೆಗಳನ್ನು ಮುನ್ನುಗ್ಗಿಸಿ ಅವರನ್ನು ಬೆನ್ನಟ್ಟಿ ದೇವಾಲಯಕ್ಕೆ ದೊಡ್ಡಮರವನ್ನು ಕಡಿಯುವಂತೆ ಚೂರುಚೂರಾಗಿ ಕತ್ತರಿಸಿದರು. ವ॥ ಆಗ ಒಬ್ಬ ಗೋಪಾಲಕನು ಅಷ್ಟುಮಂದಿಯ ಸಾವನ್ನು ಕಂಡು ಮನಸ್ಸಿನಲ್ಲಿ ಕೋಪವು ಹೆಚ್ಚಿಯೂ ಪಶುಗಳ ನಾಶವನ್ನು ಸಹಿಸಲಾರದೆಯೂ ವಿರಾಟನಗರಕ್ಕೆ ಬಂದು ಉತ್ತರನಿಗೆ ಆ ವಿಷಯವನ್ನು ತಿಳಿಸಿದನು. ೯೬. ನಗರದ ಹಿಂಗಾವಲಿಗೆ ರಾಜನು ನನ್ನನ್ನು ನಿಯಮಿಸಿ ಹೋದನು. ಆದರೂ ಪಶುಗಳನ್ನು ಸೆರೆಹಿಡಿಯುವುದಕ್ಕೆ ನಾನು ಅವಕಾಶಕೊಡುವುದಿಲ್ಲ, ನನ್ನ ಇದಿರಾಗಿ ಕೋಟಿ ರಾವಣರು ಬಂದರೆ ತಾನೆ ನನ್ನನ್ನು ಗೆಲ್ಲಲು ಸಾಧ್ಯವೇ ? ಈ ನನಗೆ ಸಾರಥಿಯಾಗುವವನನ್ನು

ವ|| ಕೇಳ್ದಾ ಪೊೞ್ತು ಪೊೞ್ತಾಗೆ ದ್ರೌಪದಿಗೆ ಬೞೆಯನಟ್ಟಿ ಬರಿಸಿ-

ಉ|| ಸಾರಥಿ ಮಾಡು ಮತ್ಸ್ಯಸುತನುತ್ತರನಂ ತದರಾತಿಸೈನ್ಯ ಕೂ
ಪಾರದ ಪಾರಮಂ ತಡೆಯದೆಯ್ದುವೆನೆಂಬುದುಮಂತೆ ಬಂದು ಪಂ ।
ಕೇರುಹವಕ್ತ್ರೆ ಮತ್ಸ್ಯಸುತನಂ ನುಡಿದಳ್ ನಿನಗಾಜಿರಂಗದೊಳ್
ಸಾರಥಿಯಪ್ಪೊಡಪ್ಪುದು ಶಿಖಂಡಿಯೆ ನಿನ್ನೊರೆಗುಂತೆ ಗಂಡರಾರ್ ॥ ೯೭

ವ|| ಎಂಬುದುಂ ಬೃಹಂದಳೆಯಲ್ಲಿಗುತ್ತರಂ ತನ್ನ ತಂಗೆಯುತ್ತರೆಯಪೆ ಬೞೆಯನಟ್ಟಿ ಬರಿಸಿ-

ಉ|| ಸಾರಥಿಯಪ್ಪೊಡಪ್ಪನೆನಗೀತನೆ ಪೋ ಪೆಱರೇವರಿನ್ ನೆರಂ
ಬಾರೆನೆನುತ್ತೆ ತನ್ನ ರಥಮಂ ತರವೇೞ್ದಿರದೆಯ್ದೆ ಘೋರ ಕಾಂ ॥
ತಾರಮನೊಂದು ಬೇಗೆ ಪರಿವಂತು ರಥಂ ಪರಿದತ್ತು ವೈರಿ ಕಾಂ
ತಾರಮನಟ್ಟಿಲಂಕದ ಬೃಹಂದಳೆ ಚೋದಿಸೆ ಚೋದ್ಯಮಪ್ಪಿನಂ ॥ ೯೮

ವ|| ಅಂತು ಕಿಱಿದಂತರಮಂ ಪೋಗೆವೋಗೆ-

ಚಂ|| ಕರಿಘಟೆ ನೀಳಮೇಘಘಟೆಯಂತೆ ತುರಂಗದಳಂ ಸಮುದ್ರದೊಳ್
ತರತರದಿಂದಮೇೞ್ವ ತೆರೆಯಂತೆ ರಥಂ ಮಕರಂಗಳಂತಗು
ರ್ವ್ವರಿವರಿಯುತ್ತುಮಿರ್ಪಣಿ ಬೃಹದ್ವಡಬಾನಳನಂತೆ ತೋಱೆ ಭೀ
ಕರತರಮಾದುದುತ್ತರನ ಕಣ್ಗೆ ಸುಯೋಧನಸೈನ್ಯಸಾಗರಂ ॥ ೯೯

ಈಗಲೆ ತನ್ನಿರಿ ಎಂದು ಉತ್ತರಕುಮಾರನು ವಿಜೃಂಭಿಸಲು (ಜಂಬ ಕೊಚ್ಚಲು) ಅದೆಲ್ಲವನ್ನೂ ಅರ್ಜುನನು ಕೇಳುತ್ತಿದ್ದನು. ವ|| ತಕ್ಷಣವೇ ದ್ರೌಪದಿಗೆ ದೂತರ ಮೂಲಕ ಸಮಾಚಾರವನ್ನು ಕಳುಹಿಸಿ ಬರಮಾಡಿದನು. ೯೭. 'ಮತ್ಸ್ಯನ ಮಗನಾದ ಉತ್ತರನಿಗೆ ನನ್ನನ್ನು ಸಾರಥಿಯನ್ನಾಗಿ ಮಾಡು. ಅವನ ಶತ್ರುಸೇನಾಸಮುದ್ರವನ್ನು ನಾನು ಜಯಿಸಿ ಬಿಡುತ್ತೇನೆ ಎಂದು ಹೇಳಿದನು. ದ್ರೌಪದಿಯು ಉತ್ತರನಿಗೆ ಹಾಗೆಯೇ ಬಂದು ತಿಳಿಸಿದಳು. ಯುದ್ಧರಂಗದಲ್ಲಿ ನಿನಗೆ ಸಾರಥಿಯಾಗಬೇಕಾದರೆ ಶಿಖಂಡಿಯೇ ಆಗಬಹುದು. ನಿನಗೆ ಸಮಾನರಾದ ಶೂರರಾರಿದ್ದಾರೆ ? ಎಂದಳು. ವ|| ಉತ್ತರನು ತನ್ನ ತಂಗಿಯಾದ ಉತ್ತರೆಯ ಮೂಲಕ ಸಮಾಚಾರವನ್ನು ಕಳುಹಿಸಿ ಬೃಹಂದಳೆಯನ್ನು ಬರಮಾಡಿದನು. ೯೮. ಸಾರಥಿಯಾಗುವುದಾದರೆ ಈತನೇ ಸಮರ್ಥ ಬಿಡು; ಇತರರು ಏನು ಮಾಡಿಯಾರು ? ಇನ್ನು ಯಾರ ಸಹಾಯವನ್ನೂ ನಾನು ಅಪೇಕ್ಷಿಸುವುದಿಲ್ಲ. ಎಂದು ಹೇಳುತ್ತ ತನ್ನ ತೇರನ್ನು ತರಹೇಳಿ ಸಾವಕಾಶಮಾಡದೆ ಹೊರಟನು. ಭಯಂಕರವಾದ ಕಾಡನ್ನು ಕಿಚ್ಚು ಆವರಿಸಿದ ಹಾಗೆ ಶೂರನಾದ ಬೃಹಂದಳೆಯು ಆಶ್ಚರ್ಯವಾಗುವ ಹಾಗೆ ತೇರನ್ನು ನಡೆಸಿದನು. ಶತ್ರುಗಳೆಂಬ ಕಾಡಿನ ಕಡೆಗೆ ತೇರು ಧಾವಿಸಿತು. ವ|| ಹಾಗೆ ಸ್ವಲ್ಪ ದೂರ ಹೋಗುತ್ತಲು ೯೯. ಆನೆಯ ಸಮೂಹವು ಕರಿಯ ಮೋಡಗಳ ಸಮೂಹದಂತೆಯೂ ಕುದುರೆಯ ಸೈನ್ಯವು ಸಮುದ್ರದಲ್ಲಿ ವಿಧವಿಧವಾಗಿ ಏಳುವ ಅಲೆಗಳಂತೆಯೂ ತೇರುಗಳು ಮೊಸಳೆಗಳಂತೆಯೂ ದೊಡ್ಡ ಕಿಚ್ಚಿನಂತೆ ಹರಿದುಬರುತ್ತಿರುವ ಪದಾತಿಸೈನ್ಯವು ದೊಡ್ಡ ಬಡಬಾಗ್ನಿಯಂತೆಯೂ

ವ|| ಆಗಳದಂ ಕಂಡುತ್ತರನೊತ್ತರಮೊತ್ತಿದಂತೆ ಬೆರ್ಚಿ ಬೆಗಡುಗೊಂಡು-

ಉ|| ನೋಡಲಲುಂಬಮೆಂದೊಡಿದನಾಂತಿಜಿದಾರ್ ತವಿಪನ್ನರೆಂದು ನಾ
ಣೋಡೆ ವಿರಾಟಸೂನು ರಥದಿಂದಿಟಿದೋಡಿದೊಡೆಯ್ದೆ ಪೂಣ್ದು ಬೆ ।
ರ್ಚೋಡೆ ಕಿರೀಟಿ ತನ್ನನಱಿಪುತ್ತೆ ಶಮೀದ್ರುಮದಲ್ಲಿಗಾತನಂ
ನೀಡಿರದುಯ್ದು ನೀಡಿಸಿದನಾತನಿನಲ್ಲಿಯ ಕೈದುವೆಲ್ಲಮಂ ॥ ೧೦೦

ವ|| ಅಂತು ಗಾಂಡೀವಿ ಗಾಂಡೀವಂ ಮೊದಲಾಗೆ ದಿವ್ಯಶರಾಸನಶರಧಿ ವಿಚಿತ್ರತನುತ್ರಂಗಳೆಲ್ಲಮಂ ಗೆಲ್ಲಮಂ ತನಗಾವಗಂ ಕೊಳ್ವಂತೆ ಕೊಂಡು ಪಗೆವರ ಗಂಟಲ ಬಳೆಯನೊಡೆದು ಕಳೆವುದನನುಕರಿಸುವಂತೆ ತೀವಿ ತೊಟ್ಟ ಮುಂಗೈಯ್ಯ ಬಳೆಗಳನೊಡೆದು ಕಳೆದು-

ಚಂ|| ಬಿಡೆ ಪಿಣಿಲಂ ಕುರುಧ್ವಜಿನಿ ತೊಟ್ಟನೆ ಬಾಯನೆ ಬಿಟ್ಟುದಂದು ಗಂ
ಡುಡೆಯುಡೆ ಗಂಡುಗೆಟ್ಟುದು ನೆಗಟ್ತೆಯ ಗಾಂಡಿವಮಂ ತಗುಳ್ದು ಜೇ ।
ವೊಡೆಯೆ ಸಿಡಿಲ್ ಸಿಡಿಲ್ದು ಪೊಡೆವಂತೆವೊಲಾಯ್ತೆನೆ ಗಂಡಗಾಡಿ ನೂ
ರ್ಮಡಿ ಮಿಗಿಲಾದುದಾ ರಥಮನೇಱಲೊಡಂ ಪಡೆಮೆಚ್ಚೆಗಂಡನಾ ॥ ೧೦೧

ವ|| ಅನ್ನೆಗಮತ್ತ ಪರಸೈನ್ಯಭೈರವನ ಬರವಿಂಗಳ್ಕಿ ಗಾಡಿಗೊಡ್ಡಿದ ಸೊಡರಂತೆ ನಡನಡ ನಡುಗುವ ಕುರುಧ್ವಜಿನಿಯಂ ಕಂಡು ಸುಯೋಧನಂಗೆ ಗಾಂಗೇಯನಿಂತೆಂದಂ-

ಕಾಣಲು ದುರ್ಯೋಧನನ ಸೇನಾಸಮುದ್ರವು ಉತ್ತರನ ಕಣ್ಣಿಗೆ ಅತ್ಯಂತ ಭಯಂಕರವಾಗಿ ಕಂಡಿತು. ವ|| ಅದನ್ನು ನೋಡಿ ಉತ್ತರನು ಇದ್ದಕ್ಕಿದ್ದ ಹಾಗೆ ಆಕ್ರಮಿಸಲ್ಪಟ್ಟವನ ಹಾಗೆ ಬೆಚ್ಚಿ ಭಯವನ್ನು ಹೊಂದಿದನು. ೧೦೦. 'ನೋಡುವುದಕ್ಕೆ, ಅಸಾಧ್ಯವಾದ ಇದನ್ನು ಪ್ರತಿಭಟಿಸಿ ನಾಶಮಾಡುವವರಾರು' ಎಂದು ಉತ್ತರನು ನಾಚಿಕೆಗೆಟ್ಟು ತೇರಿನಿಂದಿಳಿದು ಓಡಿದನು. (ಹಿಂದೆ) ಹೆಮ್ಮೆಯಿಂದ ಪ್ರತಿಜ್ಞೆಮಾಡಿ ಈಗ ಹೆದರಿ ಭಯದಿಂದ ಓಡಿಹೋಗುತ್ತಿರುವ ಉತ್ತರನಿಗೆ ಅರ್ಜುನನು ತನ್ನ ಪರಿಚಯವನ್ನು ಮಾಡಿಕೊಟ್ಟು ಅವನನ್ನು ಬನ್ನಿಯ ಮರದ ಹತ್ತಿರಕ್ಕೆ ತಕ್ಷಣ ಕರೆದುಕೊಂಡು ಹೋಗಿ ಅವನಿಂದ ಆಯುಧಗಳೆಲ್ಲವನ್ನೂ ತನಗೆ ನೀಡುವ ಹಾಗೆ ಮಾಡಿದನು - (ತೆಗೆದುಕೊಂಡನು) ವ|| ಹಾಗೆ ಅರ್ಜುನನು ಗಾಂಡೀವವೇ ಮೊದಲಾದ ದಿವ್ಯವಾದ ಬಿಲ್ಲುಬತ್ತಳಿಕೆಗಳನ್ನೂ ವಿಚಿತ್ರವಾದ ಕವಚಗಳನ್ನೂ ತನಗೆ ವಿಜಯಸೂಚಕವಾಗಿಯೇ ಅಂಗೀಕರಿಸಿದನು. ಶತ್ರುಗಳ ಗಂಟಲ ಬಳೆಯನ್ನು ಒಡೆದು ಹಾಕುವುದನ್ನು ಅನುಸರಿಸುವಂತೆ ಪೂರ್ಣವಾಗಿ ತೊಟ್ಟಿದ್ದ ಮುಂಗಯ್ಯಿನ ಬಳೆಗಳನ್ನು ಒಡೆದುಹಾಕಿದನು. ೧೦೧. ಕೂದಲಿನ ಗಂಟನ್ನು (ಹೆರಳನ್ನು) ಬಿಚ್ಚಲು ಕೌರವ ಸೈನ್ಯವು ಇದ್ದಕ್ಕಿದ್ದ ಹಾಗೆ ಆಶ್ಚರ್ಯ ಮತ್ತು ಭಯದಿಂದ ಬಾಯಿಬಿಟ್ಟಿತು. ಪುರುಷನಿಗೆ ಯೋಗ್ಯವಾದ ಗಂಡುಗಚ್ಚೆಯ ಉಡುಪನ್ನು ಧರಿಸಲು ತನ್ನ ಪೌರುಷವನ್ನು ನೀಗಿತು. ಗಾಂಡೀವವನ್ನು ಹಿಡಿದು ಹೆದೆಯಿಂದ ಶಬ್ದಮಾಡಲು ಸಿಡಿಲು ಸಿಡಿದು ಹೊಡೆಯುವ ಹಾಗಾಯಿತು ಎನ್ನಲು ಪಡೆಮೆಚ್ಚೆಗಂಡನಾದ ಅರ್ಜುನನು ರಥವನ್ನು ಹತ್ತಲು ಅವನ ಪೌರುಷವೂ ಸೌಂದರ್ಯವೂ ನೂರರಷ್ಟು ಹೆಚ್ಚಾಯಿತು. ವ|| ಅಷ್ಟರಲ್ಲಿ ಆ ಕಡೆ

ಚಂ|| ಅವಧಿಯ ಲೆಕ್ಕಮಂ ನೆಱಪಿ ನನ್ನಿಗೆ ಮಾಣದೆ ಕಾದಲೆಂದು ಬಂ
ದವನಿವನರ್ಜುನಂ ತೊಡರ್ದು ನಿಲ್ಲದೆ ನೀನೊಡಗೊಂಡು ಪೋಗು ಗೋ ।
ವಹಮನಂಗರಾಜ ಕೃಪ ಕುಂಭಭವ ಪ್ರಮುಖ ಪ್ರವೀರರೆಂ
ಬವರ್ವೆರಸಾಂಪೆನಾನಿನಿಸನೀ ಯೆಡೆಯೊಳ್ ಕದನತ್ರಿಣೇತ್ರನಂ ॥ ೧೦೨

ವ|| ಎಂಬುದುಂ ಸುಯೋಧನಂ ಪಿರಿದುಮಾಕುಳಂಬೆರಸು ಗೋಕುಲಮಂ ಕೊಂಡುಪೋಗೆ ಪೋಗಲೀಯದುತ್ತರನಂ ರಥಮಂ ಚೋದಿಸೆಂದು ಮುಟ್ಟೆವಂದು-

ಮ|| ಪಗೆ ತೀರ್ಗುಂ ಬಗೆ ತೀರ್ಗುಮಾ ಕುರುಕುಳಪ್ರಖ್ಯಾತನಂ ಕಾದಿ ತೊ
ಟ್ಟಗೆ ಗೋವೃಂದಮನಾಂ ಮಗುಟ್ಟಿದಪೆನೆಂದಾರ್ದೆಚ್ಚು ತನ್ನಂಕದಂ ।
ಬುಗಳೊಂದೊಂದಱಿಲೊಂದು ಲಕ್ಕ ಬಲಮಂದಟ್ಟಾಡೆ ದುರ್ಯೋಧನಂ
ಮಿಗೆ ಸೋಲ್ತೋಡೆ ಮಗುಟ್ಟಿದಂ ತುಱುಗಳಂ ವಿದ್ವಿಷ್ಟವಿದ್ರಾವಣಂ ॥೧೦೩

ಚಂ|| ಅದಟರ ಚೆನ್ನಪೊಂಗರ ಸಬಂಗಳ ತೊಟ್ಟುಟಿಯೊಳ್ ತೊಡಂಕಿ ನಿ
ಲ್ಲದೆ ಪೊಱಮಟ್ಟ ತಮ್ಮ ಮನದೊಳ್ ಮಿಗೆ ಬೆಚ್ಚಿಸಿದಂತೆ ತೋಱುವ ।
ಗ್ಗದ ನಿಡುಗೋಡು ಮೇಡುಮುಮರುತ್ತುಮಿಱುಂಕಿದ ಕೆಚ್ಚಲೆತ್ತಮೆ
ತ್ತಿದ ಕುಡಿವಾಲಮಂದೆಸೆಯೆ ಕರ್ಬಸುಗಳ್ ಪರಿಗೊಂಡುವಾಜಿಯೊಳ್ ॥ ೧೦೪

ಪರಸೈನ್ಯಭೈರವನಾದ ಅರ್ಜುನನ ಬರವಿಕೆಗೆ ಹೆದರಿ ಗಾಳಿಗೊಡ್ಡಿದ ದೀಪದ ಹಾಗೆ ವಿಶೇಷವಾಗಿ ನಡುಗುತ್ತಿರುವ ಕೌರವಸೈನ್ಯವನ್ನು ಕಂಡು ದುರ್ಯೋಧನನಿಗೆ ಭೀಷ್ಮನು ಹೀಗೆಂದನು. ೧೦೨. ಅಜ್ಞಾತವಾಸದ ಗಡುವಿನ ಲೆಕ್ಕವನ್ನು ಪೂರ್ಣಮಾಡಿ ಸತ್ಯವಾಕ್ಕಿಗೆ ತಪ್ಪದೆ ನಡೆದು ಯುದ್ಧಮಾಡುವುದಕ್ಕಾಗಿ ಬಂದ ಇವನು ಅರ್ಜುನ. ಇವನಲ್ಲಿ ಸಿಕ್ಕಿ ನಿಂತುಕೊಳ್ಳದೆ ನೀನು ಪಶುಸಮೂಹವನ್ನು ಕರ್ಣ, ಕೃಪ, ದ್ರೋಣರೇ ಮುಖ್ಯರಾದ ಯೋಧಾಗ್ರೇಸರರನ್ನು ಒಡಗೊಂಡು ಹಿಂತಿರುಗಿಸು. ಈ ಸ್ಥಳದಲ್ಲಿ ನಾನು ಕದನತ್ರಿಣೇತ್ರನಾದ ಅರ್ಜುನನನ್ನು ಸ್ವಲ್ಪಮಟ್ಟಿಗೆ ಎದುರಿಸುತ್ತೇನೆ ಎಂದನು. ವ|| ದುರ್ಯೋಧನನು ವಿಶೇಷಗಾಬರಿಯಿಂದ ಕೂಡಿ ಪಶುಸಮೂಹವನ್ನೊಡಗೊಂಡು ಹೋಗಲು ಹಾಗೆ ಹೋಗುವುದಕ್ಕೆ ಬಿಡದೆ ಉತ್ತರನನ್ನು ತೇರನ್ನು ನಡೆಸುವಂತೆ ಹೇಳಿ (ಅರ್ಜುನನು ದುರ್ಯೋಧನನ) ಸಮೀಪಕ್ಕೆ ಬಂದನು. ೧೦೩. ಶತ್ರುವೂ ನಾಶವಾಗುತ್ತದೆ. ಇಷ್ಟಾರ್ಥವೂ ನೆರವೇರುತ್ತದೆ. ಆದುದರಿಂದ ಕುರುಕುಲದಲ್ಲಿ ಪ್ರಖ್ಯಾತನಾದ ಈ ದುರ್ಯೋಧನನೊಡನೆ ನಾನು ಯುದ್ಧಮಾಡಿ ಗೋಸಮೂಹವನ್ನು ಹಿಂತಿರುಗಿಸುತ್ತೇನೆ ಎಂದು ಆರ್ಭಟಿಸಿ ಹೊಡೆದು ತನ್ನ ಪ್ರಸಿದ್ಧವಾದ ಒಂದೊಂದು ಬಾಣದಿಂದಲೂ ಲಕ್ಷಸೈನ್ಯವು ನಾಶವಾಗಲು ದುರ್ಯೋಧನನು ಪೂರ್ಣವಾಗಿ ಸೋತು ಓಡಿಹೋದನು. ಅರ್ಜುನನು ಗೋವುಗಳನ್ನು ಹಿಂತಿರುಗಿಸಿದನು. ೧೦೪. ಶೂರರ ಮತ್ತು ಪರಾಕ್ರಮಶಾಲಿಗಳ ಶವಗಳ ತುಳಿದಾಟದಲ್ಲಿ ಸಿಕ್ಕಿಕೊಂಡು ನಿಂತುಕೊಳ್ಳದೆ ಹೊರಟು ತಮ್ಮ ಮನಸ್ಸಿನಲ್ಲಿ ವಿಶೇಷವಾಗಿ ಹೆದರಿದಂತೆ ಕಾಣುವ ಕೊನೆ ಬಾಗಿಯೂ ನೀಳವಾಗಿಯೂ ಇರುವ ಕೊಂಬುಗಳೂ ಹಿಣಿಲೂ, ಒಳಗೆ ಸೇರಿಕೊಂಡು ಬಿಗಿದುಕೊಂಡಿರುವ ಕೆಚ್ಚಲೂ, ಸಂಪೂರ್ಣವಾಗಿ ಮೇಲೆತ್ತಿಕೊಂಡಿರುವ ಬಾಲದ

ವ|| ಅಂತು ತುಱುವಂ ಮಗುಳ್ಚಿ ಮಗುಬಿದೆ ತನಗಿದಿರೊಡ್ಡಿ ನಿಂದರಿನೃಪಬಲಮು ನರೆದು ಸದೆದು-

ಚಂ|| ಪಱುವಱಿಯಂ ತಗುಳ್ದಳುರ್ವ ಬೇಗೆವೊಲೆಚ್ಚ ಶರಾಳಿಗಳ್ ಛಟಿಲ್
ಛಟಿಲೆನೆ ಪಾಯೆ ಪಾಯ್ವ ಬಿಸುನೆತ್ತರ ಸುಟ್ಟುರೆ ಚಾತುರಂಗಮಂ ।
ಕಱಕುಱಮಾಗೆ ಪೇೞಿಪೆಸರಿಲ್ಲೆನೆ ಪಾಯಿಸಿ ತೇರನೆಯ್ದಿ ತೊ
ತ್ತೞಿದುೞಿದತ್ತು ವೈರಿಬಲಮೆಲ್ಲಮನಮ್ಮನ ಗಂಧವಾರಣಂ || ೧೦೫

ಕುರುಬಲದೊಳ್ ಕರಂ ನೆಗೞ್ದ ಬೀರರ ಚೆನ್ನರ ಸಂದ ಚೆನ್ನಪೊಂ
ಗರ ತಲೆ ತಾಱಪಣ್ ಕೆದಱೆದಂತೆ ನಿರಂತರಮಾಜಿರಂಗದೊಳ್ ।
ಪರೆದಿರೆ ಲೋಹಿತಾಂಬುಧಿಯೊಳಾನೆಗಳಟ್ಟೆಗಳಾಡೆ ನೋಡಲ
ಚ್ಚರಿಯುಮಗುರ್ವುಮದ್ಭುತಮುಮಾಯ್ತು ರಣಂ ಕದನತ್ರಿಣೇತ್ರನಾ ||೧೦೬

ವ|| ಆಗಳದಂ ಕಂಡಂಗರಾಜಂ ರಾಜರಾಜನ ನಡಪಿದುದುಮಂ ತನ್ನ ಬಲ್ಲಾಳ್ತನಮುಮಂ ನೆನೆದು ವಿಕರ್ಣಂಬೆರಸರ್ಣವನಿನಾದದಿಂದಾರುತ್ತುಂ ಬಂದ ಗುಣಾರ್ಣವನೊಳ್ ತಾಗೆ-

ಚಂ|| ಸಮೆದುದು ಪೋಗು ಗೋಗ್ರಹಣದಲ್ಲಿಯೆ ಭಾರತಮೆಂಬ ಮಾತನಂ
ದಮರ ನರೋರಗರ್ ನುಡಿಯೆ ರೌದ್ರಶರಂಗಳಿನೆಚ್ಚು ಯುದ್ಧದೊಳ್ ।
ಸಮಸಮನಾಗಿ ಕಾದಿದೊಡೆ ಕರ್ಣನ ವಕ್ಷಮನೆಚ್ಚು ಗರ್ವಮಂ
ಸಮೆಯಿಸಿ ಕೊಂದನಂಕದ ವಿಕರ್ಣನನೊಂದೆ ವಿಕರ್ಣದಿಂ ನರಂ || ೧೦೭

ತುದಿಯೂ ಪ್ರಕಾಶಿಸುತ್ತಿರಲು ಕರಿಯ ಹಸುಗಳು, ಯುದ್ಧರಂಗದಲ್ಲಿ ಓಡಿಹೋದುವು. ವ|| ಹಾಗೆ ಹಸುಗಳನ್ನು ಹಿಂತಿರುಗಿಸಿ ಹಿಂತಿರುಗದೆ ತನಗೆ ಪ್ರತಿಭಟಿಸಿ ನಿಂತ ಶತ್ರುಸೈನ್ಯವನ್ನು ಪುಡಿಮಾಡಿ ನಾಶಪಡಿಸಿದನು. ೧೦೫. ಅರಣ್ಯಮಾರ್ಗವನ್ನನುಸರಿಸಿ ವ್ಯಾಪಿಸುವ ಕಿಚ್ಚಿನ ಹಾಗೆ ಪ್ರಯೋಗ ಮಾಡಿದ ಅರ್ಜುನನ ಬಾಣಸಮೂಹಗಳು ಛಳಿಲ್ ಛಳಿಲ್ ಎಂದು ನುಗ್ಗಿಸುತ್ತಾ ಹರಿದುಬರುತ್ತಿರುವ ಬಿಸಿರಕ್ತದ ಸುಂಟರಗಾಳಿಯಿಂದ ಚತುರಂಗಸೈನ್ಯವನ್ನು ಅಸ್ತವ್ಯಸ್ತವಾಗುವ ಹಾಗೆ ಮಾಡಿದನು. ಹೇಳುವುದಕ್ಕೂ ಒಂದು ಹೆಸರಿಲ್ಲ ಎನ್ನುವ ಹಾಗೆ ತೇರನ್ನು ಹಾಯಿಸಿ ಸೊಕ್ಕಿದಾನೆಯಂತೆ ಅರ್ಜುನನು ಶತ್ರುಸೈನ್ಯವನ್ನೆಲ್ಲ ಸಂಪೂರ್ಣವಾಗಿ ತುಳಿದು ಹಾಕಿದನು. ೧೦೬. ಕೌರವಸೈನ್ಯದಲ್ಲಿ ವಿಶೇಷಪ್ರಖ್ಯಾತರಾದ ವೀರರ ಸೌಂದರ್ಯಶಾಲಿಗಳ ಪ್ರಸಿದ್ಧರಾದ ಶೂರರುಗಳ ತಲೆಗಳು ತಾಳೆಯ ಹಣ್ಣು ಹರಡಿರುವ ಹಾಗೆ ಅವಿಚ್ಛಿನ್ನವಾಗಿ ಯುದ್ಧಭೂಮಿಯಲ್ಲಿ ಚದುರಿದುವು. ರಕ್ತಸಮುದ್ರದಲ್ಲಿ ಆನೆಯ ಶರೀರಗಳು ಆಡುತ್ತಿರಲು ಕದನತ್ರಿಣೇತ್ರನಾದ ಅರ್ಜುನನ ಯುದ್ಧವು ನೋಡುವುದಕ್ಕೆ ಆಶ್ಚರ್ಯವೂ ಭಯಂಕರವೂ ಅದ್ಭುತವೂ ಆಯಿತು. ವ|| ಆಗ ಕರ್ಣನು ಅದನ್ನು ನೋಡಿ ದುರ್ಯೋಧನನು ತನ್ನನ್ನು ಸಾಕಿದುದನ್ನೂ ತನ್ನ ಪರಾಕ್ರಮವನ್ನೂ ನೆನೆದು ವಿಕರ್ಣನೊಡಗೂಡಿ ಸಮುದ್ರಘೋಷದಿಂದ ಆರ್ಭಟಿಸುತ್ತ ಬಂದು ಗುಣಾರ್ಣವನಾದ ಅರ್ಜುನನನ್ನು ತಾಗಿದನು. ೧೦೭. ಗೋಗ್ರಹಣದಲ್ಲಿಯೇ ಮಹಾಭಾರತಯುದ್ಧವು ಮುಗಿದುಹೋಯಿತು ಎಂಬ ಮಾತನ್ನು ಆ ದಿನ ದೇವತೆಗಳೂ

ವ|| ಅಂತು ಕರ್ಣನ ನೋವುಮಂ ವಿಕರ್ಣನ ಸಾವುಮಂ ಕಂಡು-

ಉ|| ತಕ್ಕಿನ ಕುಂಭಸಂಭವ ನದೀಜ ಕೃಪ ಪ್ರಮುಖ ಪ್ರವೀರರೆ
ಕ್ಕೆಕ್ಕೆಯಿನೊರ್ವರೊರ್ವರೆ ಬಿಗುರ್ತಿರದಾಂತು ನಿಶಾತ ಬಾಣ ಜಾ।
ಲಕ್ಕೆ ಸಿಡಿಲ್ದು ಜೋಲ್ದು ಸೆರಗಂ ಬಗೆದೋಡಿದರೊಂದು ಪೊಳ್ತುಮೊಂ
ದರ್ಕಮಿದಿರ್ಚಲಾಜಿದೆ ಮನಂಗಲಿಗಳ್ ಕದನತ್ರಿಣೇತ್ರನಾ ॥ ೧೦೮

ಕಂ|| ಮನದೊಳ್ ಕರುಣಿಸಿ ಸಂಮೋ
ಹನಾಸ್ತ್ರದಿಂದೆಚ್ಚು ಬೀರರಂ ಬೀರದ ಶಾ।
ಸನಮನೆ ನಿಱಿಸುವ ಬಗೆಯಿಂ
ದನಿಬರ ಪಟಿವಿಗೆಯನೆಟೆದುಕೊಂಡಂ ಹರಿಗಂ ॥ ೧೦೯

ವ|| ಅಂತು ವರ ಶಶಿ ವಿಶದಯಶಃಪಟಂಗಳಂ ನನ್ನಿಪಟಂಗೊಳ್ವಂತೆ ವಿವಿಧ ಧ್ವಜಪಟಂಗಳಂ ಕೊಂಡು ಗೆಲ್ಲಂಗೊಂಡು ತಾನುಮುತ್ತರನುಂ ವಿರಾಟಪುರಕ್ಕೆ ಮಗುಳ್ದು ಬರ್ಪಾಗಳ್-

ಉ|| ಸೂಸುವ ಸೇಸೆ ಬೀಸುವ ಚಳಚ್ಚಮರೀರುಹಮೆಕ್ಕೆಯಿಂ ರಣಾ
ಯಾಸ ಪರಿಶ್ರಮಾಂಬು ಲವಮಂ ತವೆ ಪೀರೆ ಪುರಾಂಗನಾಮುಖಾ।
ಬ್ಜಾಸವಗಂಧದೊಳ್ ಬೆರಸಿದೊಂದೆಲರೊಯ್ಯನೆ ತೀಡೆ ಪೊಕ್ಕನಾ
ವಾಸವನಂತೆ ಮತ್ಸ್ಯಮಹಿಪಾಳಕಮಂದಿರಮಂ ಗುಣಾರ್ಣವಂ ॥ ೧೧೦

ಮನುಷ್ಯರೂ ಉರಗರೂ (ಮೂರು ಲೋಕದವರೂ) ಹೇಳುವ ಹಾಗೆ ಅರ್ಜುನನು ಭಯಂಕರವಾದ ಬಾಣಗಳಿಂದ ತನಗೆ ಯುದ್ಧದಲ್ಲಿ ಸರಿಸಮವಾಗಿ ಕಾದಿದ ಕರ್ಣನ ಎದೆಗೆ ಹೊಡೆದು ಅವನ ಅಹಂಕಾರವನ್ನು ಕಡಿಮೆ ಮಾಡಿ ಶೂರನಾದ ವಿಕರ್ಣನನ್ನು ಒಂದೆ ಬಾಣದಿಂದ ಕೊಂದನು. ವ|| ಹಾಗೆ ಕರ್ಣನ ನೋವನ್ನೂ ವಿಕರ್ಣನ ಸಾವನ್ನೂ ನೋಡಿ - ೧೦೮. ಸಮರ್ಥರಾದ ದ್ರೋಣ, ಭೀಷ್ಮ, ಕೃಪರೇ ಮುಖ್ಯರಾದ ವೀರಾಗ್ರೇಸರರೂ ಗುಂಪುಗುಂಪಾಗಿ ಒಬ್ಬೊಬ್ಬರೂ ಅರ್ಜುನನ ಹರಿತವಾದ ಬಾಣಸಮೂಹಗಳಿಗೆ ತಡೆಯಲಾರದೆ ಹೆದರಿ ಓಡಿಹೋದರು. ಮನಸ್ಸಿನಲ್ಲಿ ಮಾತ್ರ ಶೂರರಾದ ಅವರು ಕದನತ್ರಿಣೇತ್ರನಾದ ಅರ್ಜುನನ ಒಂದು ಹೊತ್ತಿನ ಯುದ್ಧಕ್ಕೂ ಪ್ರತಿಭಟಿಸಿ ನಿಲ್ಲಲಾರದೆ ಹೋದರು. ೧೦೯. ಆಗ ಅರ್ಜುನನು ಅವರ ಮೇಲೆ ದಯೆತೋರಿ ಸಮ್ಮೋಹನಾಸ್ತ್ರವನ್ನು ಪ್ರಯೋಗಿಸಿ ಅವರು ಮೈಮರೆತಿರಲು ವೀರಶಾಸನವನ್ನು ಸ್ಥಾಪಿಸುವ ಮನಸ್ಸಿನಿಂದ ಅವರೆಲ್ಲರ ಧ್ವಜವನ್ನೂ ಕಸಿದುಕೊಂಡನು. ವ|| ಹಾಗೆ ಶ್ರೇಷ್ಠವಾದ ಚಂದ್ರನಂತೆ ವಿಸ್ತಾರವಾಗಿರುವ ಯಶಸ್ಸೆಂಬ ವಸ್ತ್ರಗಳನ್ನು ಸತ್ಯಶಾಸನದ ಕಡತವನ್ನು ಸ್ವೀಕರಿಸುವ ಹಾಗೆ ನಾನಾ ರೀತಿಯ ಬಾವುಟಗಳನ್ನು ತೆಗೆದುಕೊಂಡು ಜಯಪ್ರದನಾಗಿ ತಾನೂ (ಅರ್ಜುನನೂ) ಉತ್ತರನೂ ವಿರಾಟನಗರಕ್ಕೆ ಹಿಂತಿರುಗಿ ಬಂದರು. ೧೧೦. ಸೂಸುತ್ತಿರುವ ಮಂತ್ರಾಕ್ಷತೆಗಳೂ ಚಲಿಸುತ್ತಿರುವ ಚಾಮರಗಳೂ ಒಟ್ಟಿಗೆ ಸೇರಿ ಯುದ್ಧಾಯಾಸದಿಂದುಂಟಾದ ಬೆವರುಹನಿಗಳನ್ನು

ಇದು ವಿವಿಧ ವಿಬುಧಜನವಿನುತ ಜಿನಪದಾಂಭೋಜ
ವರ ಪ್ರಸಾದೋತ್ಪನ್ನ ಪ್ರಸನ್ನ ಗಂಭೀರ ವಚನ ರಚನ
ಚತುರ ಕವಿತಾಗುಣಾರ್ಣವವಿರಚಿತಮಪ್ಪ
ವಿಕ್ರಮಾರ್ಜುನವಿಜಯದೊಳ್
ಅಷ್ಟಮಾಶ್ವಾಸಂ

ಸಂಪೂರ್ಣವಾಗಿ ಹೀರಲು ಪುರಸ್ತ್ರೀಯರ ಮುಖಕಮಲದ ನಸುಗಂಧದಿಂದ ಬೆರಸಿದ ಗಾಳಿಯು ನಿಧಾನವಾಗಿ ಬೀಸುತ್ತಿರಲು ವಿರಾಟನ ಅರಮನೆಯನ್ನು ಅರ್ಜುನನು ದೇವೇಂದ್ರನಂತೆ ಪ್ರವೇಶಮಾಡಿದನು- ಇದು ಅನೇಕ ದೇವತೆಗಳಿಂದ ಸ್ತುತಿಸಲ್ಪಟ್ಟ ಜಿನಪಾದಕಮಲಗಳ ವರಪ್ರಸಾದದಿಂದ ಹುಟ್ಟಿದುದೂ ತಿಳಿಯಾದುದೂ ಆದ ಮಾತುಗಳ ರಚನೆಯಲ್ಲಿ ಚಾತುರ್ಯವನ್ನುಳ್ಳ ಕವಿತಾಗುಣಾರ್ಣವನಿಂದ ರಚಿತವಾದ ವಿಕ್ರಮಾರ್ಜುನವಿಜಯದಲ್ಲಿ ಎಂಟನೆ ಆಶ್ವಾಸ.

# ನವಮಾಶ್ವಾಸಂ

ಕಂ॥ ಶ್ರೀಗೆ ನೆಗಟ್ಟೆಗೆ ವೀರ
ಶ್ರೀಗಾಗರಮಪ್ಪೆನೆಂಬ ಕಳ ಕಳ ವಿಜಯೋ ।
ದ್ಯೋಗದೊಳೆ ನೆಗಟ್ಟಿನೆಂಬು
ದ್ಯೋಗಿಗೆ ಮಲೆವನ್ನನೃಪತಿಮಂಡಳಮೊಳವೇ । ೧

ಎಂದು ಜಗಜ್ಜನಮಳವನ
ಗುಂದಲೆಯಾಗಡರೆ ಬಡದೆ ಪೊಗಟುತ್ತಿರೆ ಕುಂ ।
ದೇಂದು ಯಶಂ ರಥದಿಂದಿಟಿ
ತಂದೆಱಗಿದನಗ್ರಜನ್ಮ ಪದ ಸರಸಿಜದೊಳ್ ॥ ೨

ಅಱಿಮಗನ ಪವನತನಯನ
ನೆಱೆದಾಶೀರ್ವಚನಶತಮನಾಂತನುನಯದಿಂ ।
ದೆಱಗಿದಮಳರುಮನಪ್ಪಿಱೆ
ನೊಱಲ್ದು ತೆಗೆದಪ್ಪಿ ಪರಸೆ ನಲ್ವರಕೆಗಳಿಂ ॥ ೩

ಚಲ ಚಲದಿನುಱದೆ ಪಗೆವರ
ತಲೆಗಳನರಿದಂದು ಬಂದು ಪಾಂಡುತನೂಜರ್ ।
ತಲೆದೋಱಿರೆ ರಾಗಮುಗುಂ
ದಲೆಯುಂ ಪೊಂಪುಟೆಯುಮಾಯ್ತು ಮತ್ಸ್ಯಂಗಾಗಳ್ ॥ ೪

ಮ॥ ಗುಡಿಯಂ ಕಟ್ಟಿಸಿ ಪೊಯ್ಸಿ ಬದ್ದವಣಮಂ ಪ್ರಾಣಕ್ಕಮರ್ಥಕ್ಕಮಿ
ನ್ನೆಡಱೇನೇತಱೊಳಪ್ಪುದೆಂದು ಕುರುಡಂ ಕಣ್ಬೆತ್ತವೋಲ್ ರಾಗದಿಂ ।
ದೊಡೆಯಂತಾಂ ಬಗೆದುಳ್ಳ ಸಾರ ಧನಮಂ ಮುಂದಿಟ್ಟತಿ ಪ್ರೀತಿಯಂ
ಪಡೆದಂ ಮತ್ಸ್ಯಮಹೇಶನಂದು ಮನದೊಳ್ ತತ್ಪಾಂಡುಪುತ್ರರ್ಕಳಾ ॥ ೫

೧. ಸಂಪತ್ತಿಗೂ ಕೀರ್ತಿಗೂ ಜಯಲಕ್ಷ್ಮಿಗೂ ಆವಾಸಸ್ಥಾನವಾಗುತ್ತೇನೆಂಬ, ಉತ್ಸಾಹಕರವೂ ಜಯಪ್ರದವೂ ಆದ ಕಾರ್ಯದಲ್ಲಿ ತೊಡಗಿರುತ್ತೇನೆನ್ನುವ ಕಾರ್ಯಶೀಲನಾದವನಿಗೆ ಪ್ರತಿಭಟಿಸುವ ಶತ್ರುರಾಜಸಮೂಹವುಂಟೇ ೨. ಎಂದು ಲೋಕದ ಜನಗಳು ಅವನ ಶಕ್ತಿಯನ್ನು ಅತಿಶಯವಾಗಿ ಅಭಿವೃದ್ಧಿಯಾಗುವ ಹಾಗೆ ಒಂದೇ ಸಮನಾಗಿ ಹೊಗಳುತ್ತಿರಲು ಕುಂದಪುಷ್ಪದಂತೆಯೂ ಚಂದ್ರನಂತೆಯೂ ಇರುವ ಯಶಸ್ಸುಳ್ಳ ಅರ್ಜುನನು ರಥದಿಂದಿಳಿದು ಬಂದ ಅಣ್ಣನ ಪಾದಕಮಲದಲ್ಲಿ ನಮಸ್ಕಾರ ಮಾಡಿದನು. ೩. ಧರ್ಮರಾಯನ ಮತ್ತು ಭೀಮನ ಸಂಪೂರ್ಣವಾದ ನೂರು ಆಶೀರ್ವಾದಗಳನ್ನೂ ಪಡೆದು ಅವಳಿಗಳನ್ನು ಪ್ರೀತಿಯಿಂದ ಆಲಿಂಗನಮಾಡಿಕೊಂಡು ಒಳ್ಳೆಯ ಹರಕೆಗಳಿಂದ ಹರಸಿದನು. ೪. ಪಾಂಡವರು ಉದಾಸೀನರಾಗಿರದೆ ಹಟದಿಂದ ಶತ್ರುಗಳ ತಲೆಗಳನ್ನು ಕತ್ತರಿಸಿ ಅಂದು ಕಾಣಿಸಿಕೊಳ್ಳಲು ವಿರಾಟರಾಜನಿಗೆ ಅತ್ಯತಿಶಯವಾದ ಸಂತೋಷವುಂಟಾಯಿತು. ೫. ಬಾವುಟಗಳನ್ನು ಕಟ್ಟಿಸಿದನು. ಮಂಗಳವಾದ್ಯಗಳನ್ನು ಬಾಜಿಸಿದನು. ನನ್ನ ಪ್ರಾಣಕ್ಕೂ ಐಶ್ವರ್ಯಕ್ಕೂ ಇನ್ನು ಯಾವುದರಿಂದಲೂ ವಿಘ್ನವುಂಟಾಗುವುದಿಲ್ಲ ಎಂದು ಭಾವಿಸಿ ಕುರುಡನು ಕಣ್ಣನ್ನು

ಉ॥ ಕೇಳಿರೆ ಕಂಕಭಟ್ಟನೆ ಯುಧಿಷ್ಠಿರನಾ ವಲಲಂ ವೃಕೋದರಂ
ಬಾಳೆಯರಂ ದಲಾಡಿಪ ಬೃಹಂದಳೆ ಫಲ್ಗುಣನಂಕದಶ್ವ ಗೋ ।
ಪಾಳಕರೆಂಬರಾ ನಕುಳನುಂ ಸಹದೇವನುಮಾದರೇಂ ಮಹೀ
ಪಾಳರೊಳಾದ ಕಾರ್ಯಗತಿಗಳ್ ಬಗೆಯಲ್ಕೆ ಬಹು ಪ್ರಕಾರಮೋ ॥ ೬

ವ॥ ಎಂಬ ಪುರಜನಾಳಾಪಂಗಳ್ ನೆಗಱೆ ವಿರಾಟನ ಮಹಾದೇವಿ ಸುದೇಷ್ಣೆ ಕೃಷ್ಣೆಗಾಗಳೆಱಗಿ ಪೊಡೆವಡೆ ಧರ್ಮತನೂಜಂಗೆ ವಿರಾಟನವತಮಣಿಮಕುಟನಿಂತೆಂದು ಬಿನ್ನಪಂಗೆಯ್ದಂ-

ಚಂ॥ ಇರದುಱಿದಾವ ಮಂಡಲದೊಳಂ ನೃಪ ನೀಂ ದಯೆಯಿಂದಮಿಲ್ಲಿ ಬಂ
ದಿರೆ ದೊರೆವೆತ್ತುದನ್ನ ಮೆಱೆವಾಳ್ವೆಸನೆನ್ನ ತನೂಜೆಗಂಕದು ।
ತ್ತರೆಗೆ ವಿವಾಹಮಂಗಳಮನಿನ್ನಭಿಮನ್ಯುಗೆ ಮಾಱ್ಪುದುತ್ತರೋ
ತ್ತರಮೆನೆ ಮಾಡು ನಿನ್ನ ದಯೆಯಿಂ ಮೆಱೆವೆಂ ಯಮರಾಜನಂದನಾ ॥ ೭

ವ॥ ಎಂಬುದುಮಂತೆಗೆಯ್ವೆಂ ನಿಮ್ಮಮ್ಮ ನಣ್ಪುಗಳೀಗಳಾದುವಲ್ಲ ಹಿರಣ್ಯಗರ್ಭ ಬ್ರಹ್ಮರಿಂ ತಗುಳ್ದವ್ಯವಚ್ಛಿನ್ನಮಾಗಿ ಬಂದುವು ನಿನ್ನ ದೊರೆಯ ನಂಟನುಮನೆಲ್ಲಿ ಪಡೆವೆನೆಂಬು ವಿರಾಟನಂ ಸಂತಸಂಬಡೆ ನುಡಿದು ಚಾಣೂರಾರಿಯಂ ಸುಭದ್ರೆಯುಮನಭಿಮನ್ಯುವುಮನೊಡ ಗೊಂಡು ಬರ್ಪುದೆಂದು ಬಱೆಯನಟ್ಟಿ ಬರವಱೆದು ಪಾಂಡವರಯ್ವರುಂ ವಿರಾಟ ಸಮೇತಮಿದಿರ್ವೋಗಿ ಕಂಡಾಗಳ್-

ಪಡೆದ ಹಾಗೆ ವಿರಾಟನು ಸಂತೋಷಿಸಿದನು. ತನ್ನಲ್ಲಿದ್ದ ಸಾರವತ್ತಾದ ಐಶ್ವರ್ಯವನ್ನೆಲ್ಲ ಪಾಂಡವರ ಮುಂದಿಟ್ಟು ಅವರ ಮನಸ್ಸಿಗೆ ಅತ್ಯಂತ ಸಂತೋಷವನ್ನುಂಟುಮಾಡಿದನು. ೬. ಕೇಳಿರಿ, ಕಂಕಭಟ್ಟನೇ ಧರ್ಮರಾಜನು. ವಲಲನು ಭೀಮಸೇನ, ಬಾಲಕಿಯರನ್ನು ಲಕ್ಷಣವಾಗಿ ಆಡಿಸುವ ಬೃಹಂದಳೆಯು ಅರ್ಜುನ. ಪ್ರಸಿದ್ಧರಾದ ಕುದುರೆ ಮತ್ತು ಗೋವುಗಳ ಪಾಲಕರಾದವರು ನಕುಲ ಮತ್ತು ಸಹದೇವರುಗಳಾಗಿದ್ದಾರೆ. ಈ ರಾಜರುಗಳಲ್ಲಿ ಆದ ಕಾರ್ಯಗಳ ಪರಿಣಾಮವನ್ನು ಯೋಚನೆಮಾಡುವುದಾದರೆ ಇವರಿಗೆ ಏನು ವಿಪರೀತ ವಿಧಿಯೋ? ವ॥ ಎಂಬ ಪಟ್ಟಣಿಗರ ಮಾತುಗಳು ಪ್ರಸಿದ್ಧವಾಗಲು ವಿರಾಟನ ಮಹಾರಾಣಿಯಾದ ಸುದೇಷ್ಣೆಯು ದ್ರೌಪದಿಗೆ ಬಗ್ಗಿ ನಮಸ್ಕಾರ ಮಾಡಿದಳು. ಧರ್ಮರಾಯನಿಗೆ ವಿರಾಟನು ಬಗ್ಗಿದ ಮಕುಟವುಳ್ಳವನಾಗಿ (ನಮಸ್ಕರಿಸಿ) ವಿಜ್ಞಾಪನೆ ಮಾಡಿದನು - ೭. ಧರ್ಮರಾಜನೇ ನೀವು ಬೇರೆ ದೇಶದಲ್ಲಿ ತಂಗದೆ ಕೃಪೆಯಿಂದ ಇಲ್ಲಿಗೆ ಬಂದಿದ್ದೀರಿ. (ಇದರಿಂದ) ನನ್ನ ದೊರೆತನ ಗೌರವಾನ್ವಿತವಾಯಿತು. ಪ್ರಸಿದ್ಧಳಾದ ನನ್ನ ಮಗಳು ಉತ್ತರೆಗೆ ಉತ್ತರೋತ್ತರಾಭಿ ವೃದ್ಧಿಯಾಗುವ ಹಾಗೆ ನಿನ್ನ ಮಗನಾದ ಅಭಿಮನ್ಯುವಿನೊಡನೆ ಮದುವೆಯ ಮಂಗಳಕಾರ್ಯವನ್ನು ಮಾಡುವುದು. ನಿನ್ನ ದಯೆಯಿಂದ ನಾನು ಪ್ರಸಿದ್ಧಿಪಡೆಯುತ್ತೇನೆ. ವ॥ ಎನ್ನಲು ಹಾಗೆಯೇ ಮಾಡುತ್ತೇನೆ. ನಿಮ್ಮ ನಮ್ಮ ಸ್ನೇಹ ಸಂಬಂಧಗಳು ಈಗ ಆದುವಲ್ಲ. ಹಿರಣ್ಯಗರ್ಭಬ್ರಹ್ಮನಿಂದ ಹಿಡಿದು ಎಡಬಿಡದೆ ಏಕಪ್ರಕಾರವಾಗಿ ಬಂದಂತಹವು. ನಿನಗೆ ಸಮಾನವಾದ ಬಂಧುವನ್ನು ನಾನೆಲ್ಲಿ ಪಡೆಯಲು ಸಾಧ್ಯ ?

ಚಂ॥ ಮುರರಿಪು ಧರ್ಮನಂದನ ಪದಾಬ್ಜಯುಗಕ್ಕೆ ಮರುತ್ಸುತಾದಿಗಳ್
ಹರಿ ಚರಣಾಂಬುಜಕ್ಕೆಱಗೆಯುತ್ಸವದಿಂದಭಿಮನ್ಯು ತಮ್ಮುತ್ತೈ ।
ವರ ಲಲಿತಾಂಘ್ರಿ ಪದ್ಮನಿವಹಕ್ಕೆಱಗುತ್ತಿರೆ ತನ್ಮುಖಾಬ್ಜದೊಳ್
ಪರಕೆಗಳುಣ್ಮಿ ಪೊಣ್ಮಿದುವು ಪಂಕಜದಿಂ ಮಕರಂದದಂತೆವೋಲ್ ॥ ೮

ವ॥ ಅಂತು ಮಂದರಧರನುಂ ತಾಮುಮೊಂದೊರ್ವರನಗಲ್ದಿಂ ಬೞಯಮಾದ ಸುಖದುಃಖಗಳನನ್ಯೋನ್ಯನಿವೇದನಂಗೆಯ್ದಾನಂದದಿಂ ಪೊಲಲಂ ಪೊಕ್ಕು ಮಜ್ಜನ ಭೋಜನಾದಿಗಳಿಂದಮಪಗತಪರಿಶ್ರಮನಂ ಮಾಡಿ ಮುರಾಂತಕನನಂತಕನಂದನನಭಿಮನ್ಯು ವಿವಾಹಕಾರ್ಯ ಪರ್ಯಾಲೋಚನೆಯೊಳೊಡಂಬಡಿಸಿ ಶುಭಲಗ್ನೋದಯದೊಳ್-

ಉ॥ ವಾರಿಧಿಘೋಷದಂತೆಸೆವ ಮಂಗಳತೂರ್ಯರವಂಗಳಿಂ ಬಯಂ
ಮೇರುವ ಪೊನ್ನಣಂ ನೆಱೆಯದೆಂಬಿನಮಿಟ್ಟಳಮಾಗೆ ವಾರನಾ ।
ರೀ ರಮಣೀಯ ನೃತ್ತಮಮರುತ್ತಿರೆ ಸಂದ ವಿರಾಟನೆಂದು ಕೆ
ಯ್ನೀರೆಱೆದೀಯೆ ಗೆಯ್ದರಭಿಮನ್ಯುಗಮುತ್ತರೆಗಂ ವಿವಾಹಮಂ ॥ ೯

ವ॥ ಅಂತಾ ವೀರನಂ ವೀರಶ್ರೀಯೊಳ್ ನೆರಪುವಂತುತ್ತರೆಯೊಳ್ ನೆರಪಿ ಕಂಸಧ್ವಂಸಿಯಂ ದ್ವಾರಾವತಿಗೆ ಕಳಿಪಿ-

ಎಂದು ವಿರಾಟನಿಗೆ ಸಂತೋಷವಾಗುವ ಹಾಗೆ ಮಾತನಾಡಿ ಶ್ರೀಕೃಷ್ಣನಿಗೆ ಸುಭದ್ರೆಯನ್ನೂ ಅಭಿಮನ್ಯುವನ್ನೂ ಜೊತೆಯಲ್ಲಿ ಕರೆದುಕೊಂಡು ಬರಬೇಕು ಎಂದು ಸಮಾಚಾರವನ್ನು ದೂತರ ಮೂಲಕ ಕಳುಹಿಸಿದರು. ಅವರ ಬರುವಿಕೆಯನ್ನು ತಿಳಿದು ಪಾಂಡವರೈದುಮಂದಿಯೂ ವಿರಾಟನೊಡಗೊಂಡು ಎದುರಾಗಿ ಹೋಗಿ ಕಂಡರು. ೮. ಕೃಷ್ಣನು ಧರ್ಮರಾಜನ ಪಾದಯುಗಳಗಳಿಗೂ ಭೀಮಸೇನಾದಿಗಳು ಕೃಷ್ಣನ ಪಾದಕಮಲಕ್ಕೂ ನಮಸ್ಕಾರಮಾಡಿದರು. ಅಭಿಮನ್ಯುವು ಆ ಅಯ್ದುಜನರ ಮನೋಹರವಾದ ಪಾದಕಮಲಗಳಿಗೆ ನಮಸ್ಕಾರಮಾಡಿದನು. ಅವರ ಮುಖಕಮಲದಲ್ಲಿ ಕಮಲದಿಂದ ಮಕರಂದವು ಉಕ್ಕಿ ಹರಿಯುವಂತೆ ಹರಕೆಗಳು ಅಭಿವೃದ್ಧಿಗೊಂಡು ಚಿಮ್ಮಿದುವು. ವ॥ ಹಾಗೆ ಶ್ರೀಕೃಷ್ಣನೂ ತಾವೂ ಒಬ್ಬೊಬ್ಬರನ್ನು ಅಗಲಿದ ಬಳಿಕ ಆದ ಸುಖದುಃಖಗಳನ್ನು ಪರಸ್ಪರ ತಿಳಿಯಪಡಿಸಿ ಸಂತೋಷದಿಂದ ಪುರಪ್ರವೇಶಮಾಡಿದರು. ಧರ್ಮರಾಜನು ಕೃಷ್ಣನೊಡನೆ ಅಭಿಮನ್ಯುವಿನ ಮದುವೆಯ ವಿಚಾರವಾಗಿ ಆಲೋಚನೆಮಾಡಿ ಅವನನ್ನು ಒಪ್ಪಿಸಿದನು. ಒಳ್ಳೆಯ ಶುಭಮುಹೂರ್ತದಲ್ಲಿ ೯. ಮಂಗಳವಾದ್ಯವು ಕಡಲ ಮೊರೆಯಂತೆ ಘೋಷಿಸುತ್ತಿರಲು ದಾನಮಾಡಿದ ಸುವರ್ಣಕ್ಕೆ (ದಕ್ಷಿಣೆ) ಮೇರುಪರ್ವತವೂ ಸಮಾನವಾಗಲಾರದು ಎನ್ನುವಷ್ಟು ಅತಿಶಯವಾಗಿರಲು ವೇಶ್ಯಾಸ್ತ್ರೀಯರ ಮನೋಹರವಾದ ನೃತ್ಯವು ರಮಣೀಯವಾಗಿರಲು ಪ್ರಸಿದ್ಧನಾದ ವಿರಾಟಮಹಾರಾಜನು ಧಾರಾಜಲವನ್ನೆರೆದು ಕನ್ಯಾದಾನಮಾಡಲು ಉತ್ತರೆಗೂ ಅಭಿಮನ್ಯುವಿಗೂ ಮದುವೆಯನ್ನು ಮಾಡಿದನು. ವ॥ ಆ ವೀರನನ್ನು ವೀರಲಕ್ಷ್ಮಿಯಲ್ಲಿ ಕೂಡಿಸುವಂತೆ ಅಭಿಮನ್ಯುವನ್ನು ಉತ್ತರೆಯಲ್ಲಿ

ಮ॥ ಮಲೆಪರ್ ಮಂಡಳಿಕರ್ ಕಱುಂಬರದಟರ್ ವೀರರ್ಕಳುಂ ತಮ್ಮ ಬಾ
ಟ್ಟಲೆಯಂ ಬೇಡಿದ ವಸ್ತುವಾಹನಮುಮಂ ಮುಂದಿಟ್ಟು ಮೂವಿಟ್ಟಿಯೊ ।
ಕ್ಕಲವೋಲಿಂ ಬೆಸಕೆಯ್ಯೆ ಸಂತಮಿರುತುಂ ಕುಂತೀಸುತರ್ ತಮ್ಮ ತೋ
ಳ್ವಲಮಂ ನಚ್ಚರೆ ದಾಯಿಗರ್ ಧರೆಯನಾಳ್ದಂದಬ್ದಿರೆಂಬೇವದಿಂ ॥ ೧೦

ವ॥ ಅಂತು ತಮ್ಮ ಪೂಣ್ದ ವರ್ಷಾವಧಿ ನೆಱೆದೊಡಮರಾತಿಗಳ್ಗಂತ್ಯಕಾಲಂ ನೆಱೆಯದುದರ್ಕುಮ್ಮಳಿಸಿ ನಮಗೆ ಕೆಮ್ಮಗಿರಲಾಗದು ದುರ್ಯೋಧನನಪ್ಪೊಡೆ ಶ್ವೇತ ಕೃಷ್ಣಕಾರಕಂ ಕೃಷ್ಣನಂ ತನಗೆ ಮಾಡದನ್ನೆಗಂ ಮುನ್ನಮೆ ಪನ್ನಗಶಯನನಂ ನಮಗೆ ಮಾಡುವುದುತ್ತಮಪಕ್ಷಮೆಂಬೀ ಪ್ರಧಾನ ಕಾರ್ಯಮಂ ತಮ್ಮೊಳಾಳೋಚಿಸಿ ವಿಕ್ರಮಾರ್ಜುನನಂ ನೀನೆ ಪೋಗಲ್ವೇಳ್ಕುಮೆಂಬುದು ಮಪ್ರತಿರಥಂ ರಥಮನೇಱೆ ಮನಃಪವನವೇಗದಿಂ ದ್ವಾರಾವತಿಯನೆಯ್ದಿ ರಾಜಮಂದಿರಮಂ ಪೊಕ್ಕು ದುಗ್ಧಾಬ್ಧಿಧವಳ ಶಯ್ಯಾತಳದೊಳ್ ಮಱೆದೊಱಗಿದ ಮಧುಮಥನನನೆತ್ತಲಣ್ಮದೆ ಕಾಲ ದೆಸೆಯೊಳುಸಿರದೆ ಕುಳ್ಳಿರೆ ದುರ್ಯೋಧನನುಮಾಗಳೆ ಬಂದು ಬಲಿಬಂಧನನ ತಲೆದೆಸೆಯೊಳ್ ಕುಳ್ಳಿರೆ ಕಿಱಿದಾನುಂ ಬೇಗದಿಂ-

ಕಂ॥ ಪವಡಿಸಿದನಂತನೊಸೆದು
ಪ್ಪವಡಿಸಿ ತನ್ನೆರಡುಮಡಿಯನೊತ್ತುತ್ತಿರ್ದಾ ।
ಹವ ವಿಜಯಿಯಪ್ಪ ವಿಜಯನ
ನೆ ವಲಂ ಮುಂ ಕಂಡು ಬಟಿಕೆ ನೃಪನಂ ಕಂಡಂ ॥ ೧೧

ಕೂಡಿಸಿ ಶ್ರೀಕೃಷ್ಣನನ್ನು ದ್ವಾರಕಾಪಟ್ಟಣಕ್ಕೆ ಕಳುಹಿಸಿದನು. ೧೦. ಉದ್ಧತರಾದ ಸಾಮಂತರೂ ಸಣ್ಣಪುಟ್ಟ ರಾಜರೂ ಪರಾಕ್ರಮಶಾಲಿಗಳೂ ವೀರರೂ ತಮ್ಮ ಪ್ರಾಣವನ್ನೂ ಕೇಳಿದ ಎಲ್ಲ ವಸ್ತು ಸಮೂಹಗಳನ್ನೂ ಪಾಂಡವರ ಮುಂದಿಟ್ಟು ಮೂರು ಬಗೆಯಾದ ಬಿಟ್ಟಿಸೇವೆಯನ್ನು ಮಾಡುವ ಜನರಂತೆ ಆಜ್ಞಾಧಾರಿಗಳಾಗಿರಲು ಪಾಂಡವರು ದಾಯಿಗರಾದ ಕೌರವರು ತಮ್ಮ ರಾಜ್ಯವನ್ನು ಅಪಹರಿಸಿ ಆಳುತ್ತಿರುವ ಕ್ಲೇಶವು ತಮ್ಮನ್ನು ಬಾಧಿಸುತ್ತಿದ್ದರೂ ತಮ್ಮ ಬಾಹುಬಲವನ್ನೇ ನೆಚ್ಚಿರುತ್ತಿದ್ದರು. ವ॥ ಹಾಗೆ ತಾವು ಪ್ರತಿಜ್ಞೆ ಮಾಡಿದ್ದ ಗಡುವು ತೀರಿದರೂ ಶತ್ರುಗಳಿಗೆ ಅಂತ್ಯಕಾಲವು ತುಂಬದೇ ಇದ್ದುದಕ್ಕಾಗಿ ದುಃಖಪಟ್ಟು 'ನಾವು ಸುಮ್ಮನಿರಲಾಗದು, ದುರ್ಯೋಧನ ನಾದರೆ ಬಿಳಿಯದನ್ನು ಕಪ್ಪನ್ನಾಗಿ ಮಾಡುವ ಮೋಸಗಾರ. (ಶ್ವೇತಕೃಷ್ಣಕಾರಕ) ಅವನು ಕೃಷ್ಣನನ್ನು ತನ್ನವನನ್ನಾಗಿ ಮಾಡಿಕೊಳ್ಳುವುದಕ್ಕೆ ಮೊದಲೇ ಶ್ರೀಕೃಷ್ಣನನ್ನು ನಮಗೆ ಸಹಾಯಕನನ್ನಾಗಿ ಮಾಡಿಕೊಳ್ಳುವುದು ಉತ್ತಮಪಕ್ಷ ಎಂಬ ಈ ಪ್ರಧಾನ ಕಾರ್ಯವನ್ನು ತಮ್ಮಲ್ಲಿ ಆಲೋಚಿಸಿದರು. ಆ ಕಾರ್ಯಕ್ಕೆ ವಿಕ್ರಮಾರ್ಜುನನನ್ನು 'ನೀನೇ ಹೋಗಬೇಕು' ಎಂದರು. ಅಪ್ರತಿರಥನಾದ ಅವನು ರಥವನ್ನು ಹತ್ತಿ ಮನಃಪವನವೇಗ (ಮನಸ್ಸಷ್ಟೂ ಗಾಳಿಯಷ್ಟೂ ವೇಗ)ದಿಂದ ದ್ವಾರಾ ವತೀಪಟ್ಟಣವನ್ನು ಸೇರಿ ಅರಮನೆಯನ್ನು ಪ್ರವೇಶಿಸಿದನು. ಕ್ಷೀರಸಮುದ್ರದಷ್ಟು ಬೆಳ್ಳಗಿರುವ ಹಾಸಿಗೆಯ ಮೇಲೆ ನಿದ್ರಿಸುತ್ತಿದ್ದ ಕೃಷ್ಣನನ್ನು ನೋಡಿದನು. ಅವನನ್ನು ಎಬ್ಬಿಸಲು ಇಷ್ಟಪಡದೆ ಕಾಲ ದೆಸೆಯಲ್ಲಿ ಮಾತನಾಡದೆ ಕುಳಿತನು. ದುರ್ಯೋಧನನೂ ಆಗಲೇ ಬಂದು ಶ್ರೀಕೃಷ್ಣನ ತಲೆದೆಸೆಯಲ್ಲಿ ಕುಳಿತನು. ಸ್ವಲ್ಪಕಾಲದ ಮೇಲೆ ೧೧. ಮಲಗಿದ್ದ ಶ್ರೀಕೃಷ್ಣನು ಸಂತೋಷದಿಂದ ಎದ್ದು ತನ್ನ ಎರಡು ಪಾದಗಳನ್ನು ಒತ್ತುತ್ತಿದ್ದ ಯುದ್ಧದಲ್ಲಿ

ವ।। ಕಂಡು ತನಗೆ ಪೊಡೆವಟ್ಟರ್ವರುಮಂ ಪರಸಿ ನೀವಿರ್ವರುಂ ಬಂದಂದಮುಮಂ ಮನೆವಾೞ್ತೆಯಂ ಪೇೞಿಮೆಂದೊಡೆಮ್ಮಮ್ಮಂ ಕೆಯ್ಕೊಂಡು ಗೆಲಿಸಲ್ವೇೞ್ಕುಮೆಂದು ಬಂದೆವೆನೆ-

ಕಂ।। ಮನ್ನಣೆಗೆನಗಿರ್ವರುಮೋ
ರನ್ನರೆ ವಿಜಯನನೆ ಮುನ್ನೆ ಕಂಡುದಱಿಂದಾ ।
ನೆನ್ನಂ ಕೊಟ್ಟೆಂ ನಿನಗಂ
ಪನ್ನಗಕೇತನ ಚತುರ್ಬಲಂಗಳನಿತ್ತೆಂ ।। ೧೨

ವ।। ಎಂದು ತನ್ನೊಳ್ ಸಮಾನಬಲನಪ್ಪ ತನ್ನ ತಮ್ಮಂ ಕೃತವರ್ಮನುಮಂ ತನ್ನೊಡನಾಡಿಗಳಪ್ಪ ತೊಂಬತ್ತಾಱು ಸಾಸಿರ ಗೋಪಕುಮಾರರೊಡನೆ ಕೂಡಿ ಕಳಿಪಿ ವಿಕ್ರಮಾರ್ಜುನನುಂ ತಾನುಂ ವಿರಾಟಪುರಕ್ಕೆ ವಂದು ಮಜ್ಜನ ಭೋಜನಾದಿಗಳೊಳ್ ವಿಗತ ಪರಿಶ್ರಮರಾಗಿ ಮಱುದೆವಸಮಱುವರುಮಾಱುಂಗುಣಂಗಳೆ ಮೂರ್ತಿಮಂತಂಗಳಾದಂತೆ ಮಂತ್ರಶಾಲೆಯಂ ಪೊಕ್ಕಿರ್ದಾಗಳ್-

ಕಂ।। ಪ್ರಿಯ ವಿಷಯಕಾಂಕ್ಷೆಯಿಂದಿಂ
ದ್ರಿಯಂಗಳೆಂತೆಯ್ದೆ ಮನಮನಾಶ್ರಯಿಸುಗುಮಂ ।
ತಯ ನಯ ಪರರಯ್ವರುಮಾ
ಶ್ರಯಿಸಿರ್ದರ್ ವಿಷಯಕಾಂಕ್ಷೆಯಿಂ ಮುರರಿಪುವಂ ।। ೧೩

ಲೋಕಕ್ಕಿದರ್ಥಶಾಸ್ತ್ರದ
ಟೀಕೆನಿಸಿದ ತನ್ನ ನುಡಿ ಮನಂಗೊಳಿಸೆ ದಳ ।
ತ್ಕೋಕನದ ಜಠರನಂ ನಿ
ರ್ವ್ಯಾಕುಳಮಿಂತೆಂದು ಧರ್ಮತನಯಂ ನುಡಿದಂ ।। ೧೪

ಜಯಶಾಲಿಯಾದ ಅರ್ಜುನನನ್ನೇ ಮೊದಲು ನೋಡಿ ಬಳಿಕ ದುರ್ಯೋಧನನನ್ನು ನೋಡಿದನು. ವ।। ನೋಡಿ ತನಗೆ ನಮಸ್ಕರಿಸಿದ ಇಬ್ಬರನ್ನೂ ಆಶೀರ್ವದಿಸಿ ನೀವಿಬ್ಬರೂ ಬಂದ ಕಾರಣವನ್ನೂ ಗೃಹಕೃತ್ಯವನ್ನೂ ಹೇಳಿ ಎಂದನು. 'ನಮ್ಮನಮ್ಮನ್ನು ಅಂಗೀಕಾರ ಮಾಡಿ ಗೆಲ್ಲಿಸಬೇಕೆಂದು' ಕೇಳಿಕೊಳ್ಳಲು ಬಂದೆವು ಎಂದರು. ೧೨. ನನ್ನ ಮನ್ನಣೆಗೆ ನೀವಿಬ್ಬರೂ ಸಮಾನರಾದರೂ ಅರ್ಜುನನನ್ನು ಮೊದಲು ಕಂಡದ್ದರಿಂದ ನಾನು ನನ್ನನ್ನು ಅವನಿಗೆ ಕೊಟ್ಟಿದ್ದೇನೆ. ದುರ್ಯೋಧನ ! ನಿನಗೆ ನನ್ನ ಚತುರ್ಬಲಗಳನ್ನೂ ಕೊಟ್ಟಿದ್ದೇನೆ. ವ।। ಎಂದು ಹೇಳಿ ತನಗೆ ಸಮಾನವಾದ ಶಕ್ತಿಯುಳ್ಳ ತನ್ನ ತಮ್ಮನಾದ ಕೃತವರ್ಮನನ್ನು ತನ್ನ ಜೊತೆಗಾರರಾದ ತೊಂಬತ್ತಾರುಸಾವಿರ ಗೋಪಕುಮಾರರೊಡನೆ ಸೇರಿಸಿ ಕಳುಹಿಸಿದನು. ವಿಕ್ರಮಾರ್ಜುನನೂ ತಾನೂ ವಿರಾಟನಗರಕ್ಕೆ ಬಂದು ಸ್ನಾನಭೋಜನಾದಿಗಳಿಂದ ಶ್ರಮ ಪರಿಹಾರ ಮಾಡಿಕೊಂಡರು. ಮಾರನೆಯ ದಿನ ಆರುಮಂದಿಯೂ ರಾಜ್ಯಶಾಸ್ತ್ರದ ಆರುಗುಣಗಳೇ ಪ್ರತ್ಯಕ್ಷವಾಗಿ ಮೂರ್ತಿತಾಳಿದ ಹಾಗೆ ಆಲೋಚನಾಮಂದಿರವನ್ನು ಪ್ರವೇಶಮಾಡಿದರು. ೧೩. ಕಿವಿ, ಕಣ್ಣು ಮೊದಲಾದ ಪಂಚೇಂದ್ರಿಯಗಳು ತಮ್ಮ ಪ್ರಿಯವಾದ ವಸ್ತುಗಳ ಅಪೇಕ್ಷೆಯಿಂದ ಮನಸ್ಸನ್ನು ಹೇಗೆ ಆಶ್ರಯಿಸುತ್ತವೆಯೋ ಹಾಗೆ ವಿಧಿನಿಯಮಗಳಲ್ಲಿ ಆಸಕ್ತರಾದ ಅಯ್ದುಜನ ಪಾಂಡವರೂ ತಮ್ಮ ಇಷ್ಟಾರ್ಥಸಿದ್ಧಿಗಾಗಿ ಶ್ರೀಕೃಷ್ಣನನ್ನು ಆಶ್ರಯಿಸಿದ್ದರು. ೧೪. ಧರ್ಮರಾಜನು ರಾಜನೀತಿಶಾಸ್ತ್ರದ ವ್ಯಾಖ್ಯಾನದಂತಿದ್ದ ತನ್ನ ಮಾತು

ಎಳೆ ರಸೆಯೊಳಟ್ಟುದಂ ಭುಜ
ಬಳದಿಂ ಮುನ್ನೆತ್ತಿದಂತೆ ವಿಷಯಾಂಬುಧಿಯೊಳ್ ।
ಮುಳುಗಿರ್ದೆಮ್ಮೈವರುಮಂ
ಬಳಿಹರ ಪಿಡಿದೆತ್ತಲೆಂದು ಬಂದೈ ಭರವಂ ॥ ೧೫

ಬಸಿಱೊಳ್ ಜಗತೀತ್ರಯಮುಮ
ನೊಸೆದಿಟ್ಟೋರಂತೆ ಕಾದ ಪೆಂಪಿನ ನಿಮ್ಮೀ ।
ಬಸಿಱಿಂ ಪೊಕ್ಕೆಮ್ಮೈವರ
ನಸುರಕುಳಾಂತಕ ಕಡಂಗಿ ಕಾವುದು ಪಿರಿದೇ ॥ ೧೬

ಮಲ್ಲಿಕಾಮಾಲೆ ॥ ಎನ್ನ ನನ್ನಿಯ ಪೆಂಪು ನಿನ್ನ ಮಹತ್ವದಿಂದಮೆ ಸಂದುದಂ
ತೆನ್ನ ಪನ್ನಗಕೇತನಂಗೆ ಧರಾವಿಭಾಗಮನಿತ್ತು ಸಂ ।
ಪನ್ನ ಯೋಗ ನಿಯೋಗದಿಂದಮರಣ್ಯದೊಳ್ ನೆಲಸಿರ್ದುಣಲ್
ಬನ್ನಮಿಲ್ಲದೆ ಬಾಳ್ವುದೇಂ ಪುಲುಮಾನಸಂಗೆನಗಕ್ಕುಮೇ ॥ ೧೭

ವ॥ ಅದಲ್ಲದೆಯುಮೀ ಸೂೞೊಂದುಮೊಡಂಬಡಿಲ್ಲದೆ ಗೋಗ್ರಹಣಮನೆ ನೆವಂ ಮಾಡಿ ಸುಯೋಧನನೆಂಬ ಪಾಪಕರ್ಮನ ಮಾಡಿದನುವರಂ ನಿಮ್ಮನುಬಲದೊಳಮರಿಕೇಸರಿಯ ಭುಜಬಲದೊಳಮೆಮುಗಿಂಬುವಂದುದು-

ಉ॥ ಕಾದದೆ ಪನ್ನಗಧ್ವಜನಿಳಾತಳಮಂ ಕುಡನಾನುಮಿರ್ಪುದುಂ
ಸೋದರರೆಂದು ನಾಣ್ಚಿ ಸೆಡೆದಿರ್ದಪೆನಿರ್ದೊಡವಸ್ತುಭೂತನೆಂ ।
ದಾದಮೆ ಭೂತಳಂ ಪಟಿಯೆ ತೇಜಮೆ ಕೆಟ್ಟಪುದಿಂತಿದರ್ಕೆ ಪ
ದ್ಮೋದರ ನೀನೆ ಪೇೞ್ ಬಗೆದು ಕಜ್ಜಮನೀಗಳೆ ದಿವ್ಯಚಿತ್ತದಿಂ ॥ ೧೮

ಆಕರ್ಷಕವಾಗಿರಲು ಅರಳಿದ ತಾವರೆಯನ್ನು ನಾಭಿಯಲ್ಲುಳ್ಳ (ಕಮಲನಾಭನಾದ) ಶ್ರೀಕೃಷ್ಣನಿಗೆ ಅನಾಯಾಸವಾಗಿ ಈ ರೀತಿ ಹೇಳಿದನು. ೧೫. ಕೃಷ್ಣಾ ನೀನು ಮೊದಲು ಪಾತಾಳದಲ್ಲಿ ಮುಳುಗಿದ್ದ ಭೂಮಿಯನ್ನು ನಿನ್ನ ಬಾಹುಬಲದಿಂದ ಎತ್ತಿದ ಹಾಗೆ ಇಂದ್ರಿಯಭೋಗವೆಂಬ ಸಮುದ್ರದಲ್ಲಿ ಮುಳುಗಿದ್ದ ನಮ್ಮೈದು ಜನವನ್ನೂ ಉದ್ಧಾರಮಾಡಬೇಕೆಂದೇ ಬಂದಿದ್ದೀಯೆ. ೧೬. ಕೃಷ್ಣಾ, ಮೂರು ಲೋಕಗಳನ್ನೂ ಸಂತೋಷದಿಂದ ಹೊಟ್ಟೆಯಲ್ಲಿಟ್ಟು ಕ್ರಮದಿಂದ ರಕ್ಷಿಸಿದ ಮಹಿಮೆಯುಳ್ಳ ನಿಮ್ಮ ಅಂತರಂಗವನ್ನು ಪ್ರವೇಶಿಸಿರುವ ನಮ್ಮೈದುಜನರನ್ನು ಉತ್ಸಾಹದಿಂದ ರಕ್ಷಿಸುವುದು ಹಿರಿದೇ ? ೧೭. ನನ್ನ ಸತ್ಯದ ಹಿರಿಮೆಯಿಂದಲೇ ಸಾಧ್ಯವಾಯಿತು. ಅದು ಹೇಗೆನ್ನುವೆಯೊ - ದುರ್ಯೋಧನನಿಗೆ ಭೂಮಿಯ ಭಾಗವನ್ನು ಕೊಟ್ಟು ಪರಿಪೂರ್ಣವಾದ ಯೋಗಮಾರ್ಗದಲ್ಲಿ ಕಾಡಿನಲ್ಲಿ ನೆಲಸಿ ನಿರ್ವಿಘ್ನವಾಗಿ ಊಟಮಾಡುತ್ತ ಬದುಕುವುದು ಹುಳುವಂತೆ ಇರುವ ಸಾಮಾನ್ಯ ಮನುಷ್ಯನಾದ ನನಗೆ ಸಾಧ್ಯವಾಗುತ್ತದೆಯೇ. ವ॥ ಅಷ್ಟೆ ಅಲ್ಲದೆ ಈ ಸಲವೂ ಒಂದು ಕಾರಣವೂ ಇಲ್ಲದೆ ಗೋಗ್ರಹಣವನ್ನು ನೆಪಮಾಡಿಕೊಂಡು ದುರ್ಯೋಧನನೆಂಬ ಪಾಪಿಯು ಏರ್ಪಡಿಸಿದ ಯುದ್ಧವು ನಿಮ್ಮ ಸಹಾಯದಿಂದಲೂ ಅರಿಕೇಸರಿಯಾದ ಅರ್ಜುನನ ಬಾಹುಬಲದಿಂದಲೂ ಪ್ರಿಯವಾಗಿ ಮುಗಿಯಿತು. ೧೮. ದುರ್ಯೋಧನನು ಯುದ್ಧಮಾಡದೆ ರಾಜ್ಯವನ್ನು ಕೊಡುವುದಿಲ್ಲ; ನಾನೂ ಒಡಹುಟ್ಟಿದವರೆಂದು

ವ॥ ಎಂಬುದುಮಂಬುಜೋದರಂ ನಯದ ವಿನಯದ ಮಾತು ನೀನೆಂದಂತು ತೊಱೆಗೆ ನೀರಡಕಲುಮಾದಿತ್ಯಂಗೆ ಸೊಡರಿಡಲುಮಿಂದ್ರಂಗೆ ದೇವಲೋಕಮಂ ಬಣ್ಣಿಸುವಂತೆಯುಂ ನಿನಗೇನೆಂದು ಕಜ್ಜಂಬೇೞ್ವುದಾದೊಡಂ-

ಮ॥ ಬೆಸಮಾರ್ ಕೊಂಡವೊಲಕ್ಕುಮೊಂದೆ ನಯಮಂ ಕೇಳ್ ನಿನ್ನ ಮುಂದೀಗಳಾ
ನುಸಿರ್ದಪ್ಪೆಂ ಸಲೆ ಮೆಲ್ಪು ಬಲ್ಪನಟೆಗುಂ ಕೈವಾರಮುಂ ಕೂಡೆ ಕೂ ।
ರಿಸುಗುಂ ನಿಕ್ಕುವಮಪ್ಪ ಕಾರಣದಿನಿಂತೀ ಸಾಮಮಂ ಮುಂ ಪ್ರಯೋ
ಗಿಸಿದೇಕೆಟ್ಟಪುದಂದು ದಂಡಮನೆ ಮುಂ ಮುಂತಿಕ್ಕುವಂ ಮಂತ್ರಿಯೇ ॥ ೧೯

ಬಲಿಯಂ ವಾಮನರೂಪದಿಂದಮೆ ವಲಂ ಮುಂ ಬೇಡಿದೆಂ ಭೂರಿ ಭೂ
ತಲಮಂ ಕುಂದೆನಗಾಯ್ತೆ ಕೊಂಡೆನಿಳೆಯಂ ಕಟ್ಟಿಟ್ಟೆನಿನ್ನುಂ ರಸಾ ।
ತಲದೊಳ್ ದೈತ್ಯನನಂತೆ ನೀನುಮಿಳೆಯಂ ಮುಂ ಬೇಡಿಯಟ್ಟಿಟ್ಟೆ ಮಾ
ರ್ಮಲೆದಾತಂ ಕುಡದಿರ್ದೊಡಂದಿಱಿಯ ನೀಂ ಲೋಕಂ ಗುಣಂಗೊಳ್ವಿನಂ ॥೨೦

ವ॥ ಎಂದು ನುಡಿದ ಮಂದರಧರನ ನುಡಿಗೆ ಕಿನಿಸಿ ಕಿಂಕಿಱಿವೋಗಿ ಭೀಮಸೇನನಿಂತೆಂದಂ-

ನಾಚಿಕೆಯಿಂದ ಸಂಕೋಚದಿಂದಿದ್ದೇನೆ. ಹಾಗಿದ್ದರೆ ಲೋಕದ ಜನರೆಲ್ಲ ಇವನು ಆಸ್ತಿಯಿಲ್ಲದವನು ಎಂದು ನಿಂದಿಸಿದರೆ ನನ್ನ ಕೀರ್ತಿಯೂ ಮಾಸಿಹೋಗುತ್ತದೆ. ಎಲೈ ಕಮಲನಾಭ ಇದಕ್ಕೆ ಮಾಡಬೇಕಾದ ಕಾರ್ಯವನ್ನು ನೀನು ನಿನ್ನ ದಿವ್ಯಚಿತ್ತದಲ್ಲಿ ಯೋಚಿಸಿ ಹೇಳು. ವ॥ ಎನ್ನಲು ಕೃಷ್ಣನು (ಧರ್ಮರಾಜನನ್ನು ಕುರಿತು) 'ಧರ್ಮರಾಜ ನೀತಿ ಮತ್ತು ನಡತೆಯ ದೃಷ್ಟಿಯಿಂದ ನೋಡಿದರೆ ನೀನು ಹೇಳಿದ ಹಾಗೆಯೆ ಸತ್ಯ. ನಿನಗೆ ಕಾರ್ಯರೀತಿಯನ್ನು ಹೇಗೆಂದು ತಿಳಿಸುವುದು ನದಿಗೆ ನೀರು ತುಂಬುವ ಹಾಗೆ, ಸೂರ್ಯನಿಗೆ ದೀಪವನ್ನು ಹಚ್ಚುವ ಹಾಗೆ, ಇಂದ್ರನಿಗೆ ಸ್ವರ್ಗಲೋಕವನ್ನು ಪರಿಚಯ ಮಾಡಿಸುವ ಹಾಗೆ ಆಗುತ್ತದೆ. ಆದರೂ ೧೯. ಆರಂಭಿಸಿದ ಕಾರ್ಯ ಉದ್ದೇಶಿಸಿದ ಹಾಗೆಯೇ ಆಗುವುದಿಲ್ಲ. ಕಾರ್ಯಸಾಧನೆಯಾಗುವ ಒಂದು ನೀತಿಯನ್ನು ಈಗ ನಿಮಗೆ ತಿಳಿಸುತ್ತೇನೆ. ಮಾರ್ದವವು ಒರಟುತನವನ್ನು ನಾಶಪಡಿಸುತ್ತದೆ. ಹೊಗಳಿಕೆಯು ತಕ್ಷಣವೇ ಪ್ರೀತಿಯನ್ನುಂಟುಮಾಡುತ್ತದೆ. ಆದುದರಿಂದ ಮೊದಲು ಸಾಮೋಪಾಯವನ್ನು ಉಪಯೋಗಿಸುವುದು ಸೂಕ್ತ ಎಂದು ಉಪದೇಶ ಮಾಡುವವನು ನಿಜವಾದ ಮಂತ್ರಿ. ಹಾಗಲ್ಲದೆ ಉದಾಸೀನತೆಯಿಂದ ಏನೀಗ ಎಂದು ಮೊದಲು ದಂಡೋಪಾಯವನ್ನು ಸೂಚಿಸುವವನು ಮಂತ್ರಿಯಾಗಬಲ್ಲನೇ?' ೨೦. ಹಿಂದಿನ ಕಾಲದಲ್ಲಿ ವಾಮನನ ಆಕಾರದಲ್ಲಿ ಬಲಿಚಕ್ರವರ್ತಿಯಿಂದ ಈ ವಿಸ್ತಾರವಾದ ಭೂಮಿಯನ್ನು ತೆಗೆದುಕೊಂಡೆನು. ಆ ರಾಕ್ಷಸನನ್ನು ಇನ್ನೂ ಪಾತಾಳದಲ್ಲಿಯೇ ಕಟ್ಟಿಟ್ಟಿದ್ದೇನೆ. ಹಾಗೆಯೇ ನೀನು ರಾಜ್ಯಕ್ಕಾಗಿ ಮೊದಲು ಬೇಡಿ ದೂತನನ್ನು ಕಳುಹಿಸಿಕೊಡು. ಆತನು ಪ್ರತಿಭಟಿಸಿ ಕೊಡದಿದ್ದರೆ ಆಗ ಲೋಕವೆಲ್ಲ ಗುಣಗ್ರಹಣಮಾಡುವ ಹಾಗೆ ಯುದ್ಧಮಾಡು. ವ॥ ಎಂಬುದಾಗಿ ಹೇಳಿದ ಕೃಷ್ಣನ ಮಾತಿಗೆ ಕೆರಳಿ ಕೋಪಗೊಂಡು ಭೀಮಸೇನನು ಹೀಗೆಂದನು-

ಕಂ॥ ನಿಜ ಮತಮನೆನಗೆ ಮೀಱ
ಲ್ಕಜಾತ ದೊರೆಯಲ್ಲವಲ್ಲದಿರ್ದೊಡಮೆನ್ನಿಂ ।
ದ ಜನಿಸಿ ನುಡಿಯಿಸಿದುವಹಿ
ಧ್ವಜನೋವದೆ ಮುನ್ನೆ ನೆಗಟ್ದ ದುಶ್ಚರಿತಂಗಳ್ ॥ ೨೧

ಶಾ॥ ಆ ಲಾಕ್ಷಾಗೃಹ ದಾಹಮೊಂದೆ ವಿಷಸಂಯುಕ್ತಾನ್ನಮಂತೊಂದೆ ಪಾಂ
ಚಾಲೀ ನಿಗ್ರಹಮೊಂದೆ ಟಕ್ಕುವಗೆಯಿಂ ಗೆಲ್ದಿರ್ದ ಜೂದೊಂದೆ ಶಾ ।
ರ್ದೂಲಾಭೀಲ ವನಂಗಳೊಳ್ ತಿರಿಪಿದೀಯುರ್ಕೊಂದೆ ಲೆಕ್ಕಂಗೊಳಲ್
ಕಾಲಂ ಸಾಲವೆ ಕಂಡುಮುಂಡುಮೆಮಗಿನ್ನಾತಂಗಳೊಳ್ ಪಾೞಿಯೇ ॥ ೨೨

ಕಂ॥ ಜಟಮಟಸಿಕೊಂಡು ನಿಮ್ಮೀ
ಘಟಯಿಸುವೀ ಸಂಧಿ ಕೌರವರ್ಕಳೊಳೆನ್ನಿಂ ।
ಘಟಿತ ಜರಾಸಂಧೋರ
ಸ್ತಟ ಸಂಧಿವೊಲೊಂದೆ ಪೊೞ್ತಱೊಳ್ ವಿಘಟಿಸದೇ ॥ ೨೩

ಉ॥ ತೋಡುವೆನೊರ್ವನೊಳ್ಗರುಳನುರ್ವಿಗೆ ನೆತ್ತರನೆಯ್ದೆ ಪೀರ್ದುವಿ
ದಾಡುವೆನೊರ್ವನೂರುಗಳನೆನ್ನ ಗದಾಶನಿಘಾತದಿಂದೆ ಸು ।
ಗ್ಗಾಡುವೆನೆಂದು ಲೋಕಮಱಿಯುತ್ತಿರೆ ಪೂಣ್ದೆನಗಂತೆ ಸಂತಸಂ
ಮಾಡದೆ ಸಂಧಿ ಮಾಡಿ ಕುರುಪುತ್ರರೊಳೆನ್ನನೆ ಜೋಡುಮಾಳ್ಪಿರೇ ॥ ೨೪

ವ॥ ಎಂದು ಮಸಗಿದ ಮದಾಂಧಗಂಧಸಿಂಧುರದಂತೆ ದೆಸೆಗೆ ಮಸಗಿದ ವಾಯುಪುತ್ರನಂ ಧರ್ಮಪುತ್ರಂ ಸಂತೈಸಿ-

೨೧. ಕೃಷ್ಣ, ನಿನ್ನ ಮಾತನ್ನು ಮೀರುವುದು ನನಗೆ ಯೋಗ್ಯವಲ್ಲ. ಅಲ್ಲದಿದ್ದರೂ ದುರ್ಯೋಧನನು ಲಕ್ಷಿಸದೆ ಮಾಡಿದೆ ಕೆಟ್ಟಕೆಲಸಗಳು ನನ್ನಿಂದ ಒರಟಾಗಿ ಮಾತನಾಡಿಸುತ್ತಿವೆ. ೨೨. ಅರಗಿನ ಮನೆಯಲ್ಲಿ ಸುಟ್ಟುದೊಂದೇ, ವಿಷಮಿಶ್ರವಾದ ಆಹಾರವನ್ನು ತಿನ್ನಿಸಿದುದೊಂದೇ, ದ್ರೌಪದಿಗೆ ಅವಮಾನಪಡಿಸಿದುದೊಂದೇ, ಮೋಸದ ರೀತಿಯಿಂದ ಗೆದ್ದ ಜೂಜೊಂದೇ, ಹುಲಿಗಳಿಂದ ಭಯಂಕರವಾದ ಕಾಡಿನಲ್ಲಿ ಅಲೆಯುವ ಹಾಗೆ ಮಾಡಿದ ಆ ಅಪಂಕಾರವೊಂದೇ-ಗಣನೆ ಮಾಡುವುದಕ್ಕೆ ಕಾಲಾವ ಕಾಶವೇ ಸಾಕಾಗುವುದಿಲ್ಲ! ನೋಡಿ ಅನುಭವಿಸಿಯೂ ಇನ್ನೂ ಅವರಲ್ಲಿ ನಮಗೆ ಧರ್ಮಪಾಲನೆಯೆ? ೨೩. ಉತ್ಸಾಹದಿಂದ ಈಗ ನೀವು ಕೌರವರಲ್ಲಿ ಮಾಡ ಬೇಕೆಂದಿರುವ ಸಂಧಿಕಾರ್ಯವು ಕೂಡಿಕೊಂಡಿರುವ ಜರಾಸಂಧನ ಎದೆಯ ಜೋಡಣೆಯ ಹಾಗೆ ನನ್ನಿಂದ ಅಲ್ಪಕಾಲದಲ್ಲಿ ಮುರಿದುಹೋಗದೆ ಇರುತ್ತದೆಯೇ? ೨೪. ಒಬ್ಬನ (ದುಶ್ಶಾಸನನ) ಹೊಟ್ಟೆಯೊಳಗಿನ ಕರುಳನ್ನು ನೆಲಕ್ಕೆ ತೋಡಿಹಾಕುತ್ತೇನೆ. ರಕ್ತವನ್ನು ಪೂರ್ಣವಾಗಿ ಹೀರಿ ಔತಣಮಾಡುತ್ತೇನೆ. ಒಬ್ಬನ (ದುರ್ಯೋಧನನ) ತೊಡೆಗಳನ್ನು ನನ್ನ ಗದೆಯೆಂಬ ವಜ್ರಾಯುಧದ ಪೆಟ್ಟಿನಿಂದ ನುಚ್ಚುನೂರಾಗಿ ಮಾಡುತ್ತೇನೆ ಎಂದು ಪ್ರಪಂಚವೆಲ್ಲ ತಿಳಿದ ಹಾಗೆ ಪ್ರತಿಜ್ಞೆಮಾಡಿದ ನನಗೆ ಸಂತೋಷ ವನ್ನುಂಟು ಮಾಡದೆ ಕೌರವರೊಡನೆ ಸಂಧಿಮಾಡಿ ನನ್ನನ್ನು ಅವರಿಗೆ ಜೊತೆಮಾಡು ತ್ತೀರಾ? ವ॥ ಎಂದು ಮದದಿಂದ ಕುರುಡಾದ ಮದ್ದಾನೆಯಂತೆ ದಿಕ್ಕುದಿಕ್ಕಿಗೂ

ಮ|| ಬಕ ಕಿಮ್ಮಿರ ಜಟಾಸುರೋದ್ಧತ ಜರಾಸಂಧರ್ಕಳಂ ಸಂದ ಕೀ
ಚಕರಂ ನೂರ್ವರುಮಂ ಪಡಲ್ವಡಿಸಿದೀ ತ್ವಚ್ಚಂಡದೋರ್ದಂಡಮು |
ಗ್ರ ಕುರುಕ್ಷ್ಮಾಪ ಮಹೀರುಹಪ್ರಕರಮಂ ಮತ್ತೇಭವಿಕ್ರೀಡಿತ
ಕ್ಕೆ ಕರಂ ಪೋಲ್ವೆಗೆ ವಂದು ಭೀಮ ರಣದೊಳ್ ನುರ್ಗಾಡದೇಂ
ಪೋಕುಮೇ || ೨೫

ವ|| ಎಂದು ನಾರಾಯಣನುಂ ಧರ್ಮಪುತ್ರನುಂ ವೃಕೋದರನ ಮನಮನಾಱೆ ನುಡಿದು ಮತ್ತಂ ನಾರಾಯಣಂಗೆ ಯುಧಿಷ್ಠಿರಂ ನಿಶ್ಚಿತ ಕಾರ್ಯಮನನುಷ್ಠಿಸಲೆಂದಿಂತೆಂದಂ-

ಮ|| ಅವನೀನಾಥನ ಗೆಯ್ದ ಪೊಲ್ಲಮೆಗಮೆನ್ನೊಳ್ಪಿಂಗಮಿಂ ಸಕ್ಕಿಯಾ
ಗವನೀವಂತುಟನೀಯದಂತುಟನದಂ ಬಲ್ಲಂತು ಕಾಲ್ವುಗ್ಗಿತ್ತಿನೋ |
ಡವನೀ ಭಾಗದೊಳೆನ್ನ ಭಾಗಮನದಂ ತಾನೀಯದಿರ್ದಾಗಳೆ
ನ್ನವನೀ ರಕ್ಷಣ ದಕ್ಷ ದಕ್ಷಿಣ ಭುಜಸ್ತಂಭಂ ಕೊಲಲ್ ಸಾಲದೇ || ೨೬

ವ|| ಎಂದು ಧರ್ಮರಾಜಂ ರಾಜರಾಜನಲ್ಲಿಗೆ ನಿರ್ವ್ಯಾಜದಿಂ ದಿತಿಜಕುಳ ವಿಜಯಿಯಪ್ಪಜಿತನನೆ ದೂತಕಾರ್ಯಕ್ಕಟ್ಟಿದೊಡಸುರವಿಜಯಿಯುಂ ಕತಿಪಯ ಪ್ರಯಾಣಂಗಳಿಂ ಮದಗಜೇಂದ್ರಪುರಮನೆಯ್ದಿ-

ಚಂ|| ಮದಗಜ ಬೃಂಹಿತಧ್ವನಿ ತುರಂಗಮ ಹೇಷಿತಘೋಷದೊಳ್ ಪೊದ
ಱೆದುದವೆ ಗಭೀರ ಧೀರ ಮುರಜಧ್ವನಿ ಯೌವನ ಮತ್ತಕಾಮಿನೀ |
ಮೃದು ಪದ ನೂಪುರ ಕ್ವಣಿತದೊಳ್ ಪೆಣೆದೊಂದಿರೆ ಚಕ್ರಿಗುಂಟುಮಾ
ಡಿದುದು ಪೊೞಲ್ ಸುರಾದ್ರಿಮಥಿತಾಂಬುಧಿಜಾತನಿನಾದ ಶಂಕೆಯುಂ || ೨೭

ವಿಜೃಂಭಿಸಿದ ಭೀಮಸೇನನನ್ನು ಧರ್ಮರಾಯನು ಸಮಾಧಾನಮಾಡಿದನು. ೨೫. ಬಕ, ಕಿಮ್ಮೀರ, ಜಟಾಸುರ, ಗರ್ವಿಷ್ಠರಾದ ಜರಾಸಂಧಾದಿಗಳನ್ನೂ ಪ್ರಸಿದ್ಧರಾದ ನೂರು ಕೀಚಕರನ್ನೂ ಕೆಳಗೆ ಬೀಳುವ ಹಾಗೆ ಮಾಡಿಸಿದ ನಿನ್ನ ಭಯಂಕರವಾದ ಕೌರವರಾಜರೆಂಬ ಮರಗಳ ಸಮೂಹವು ಮದ್ದಾನೆಯಾಟಕ್ಕೆ ಸಮನಾಗಿ ನುಚ್ಚು ಮಾಡದೇ ಬಿಡುತ್ತದೆಯೆ ? ವ|| ಎಂದು ಕೃಷ್ಣನೂ ಧರ್ಮರಾಯನೂ ಭೀಮನ ಮನಸ್ಸನ್ನು ಸಮಾಧಾನಪಡಿಸಿದರು. ಪುನಃ ಧರ್ಮರಾಯನು ಕೃಷ್ಣನಿಗೆ ಮಾಡಬೇಕಾದ ಕಾರ್ಯವನ್ನು ಹೀಗೆಂದು ತಿಳಿಸಿದನು. ೨೬. ರಾಜನಾದ ದುರ್ಯೋಧನನು ಮಾಡಿದ ಅಪರಾಧಕ್ಕೂ ನನ್ನ ಒಳ್ಳೆಯ ಸ್ವಭಾವಕ್ಕೂ ನೀನು ಸಾಕ್ಷಿಯಾಗಿದ್ದುಕೊಂಡು ಅವನು ಭೂಮಿಯನ್ನು ಕೊಡುವುದನ್ನೂ ಕೊಡದಿರುವುದನ್ನೂ ಸಾಧ್ಯವಿದ್ದಷ್ಟು ವಿಚಾರಮಾಡಿ ನೋಡು. ನ್ಯಾಯಯುತವಾಗಿ ನನಗೆ ಬರಬೇಕಾದುದನ್ನು ಅವನು ಕೊಡದಿದ್ದಾಗ ನನ್ನ ಭೂಭಾರರಕ್ಷಣಾಸಮರ್ಥವಾದ ಕುಂಭದಂತಿರುವ ಬಲತೋಳು ಅವನನ್ನು ಕೊಲ್ಲಲು ಸಾಲದೇ ಹೋಗುತ್ತದೆಯೇ? ವ|| ಎಂದು ಧರ್ಮರಾಯನು ಕೃಷ್ಣನನ್ನು ಕೌರವಚಕ್ರವರ್ತಿಯ ಹತ್ತಿರಕ್ಕೆ ನಿಷ್ಕಪಟಿಯಾಗಿ - ಸರಳಹೃದಯನಾಗಿ ದೂತಕಾರ್ಯಕ್ಕಾಗಿ ಸಂಧಿಯನ್ನು ಏರ್ಪಡಿಸುವ ರಾಯಭಾರಿಯಾಗಿ ಕಳುಹಿಸಿದನು. ಕೃಷ್ಣನು ಕೆಲವು ದಿವಸದ ಪ್ರಯಾಣದಿಂದ ಹಸ್ತಿನಾಪಟ್ಟಣವನ್ನು ಸೇರಿದನು. ೨೭. ಆ ಹಸ್ತಿನಾಪಟ್ಟಣವು ಕುದುರೆಗಳ ಹೇಷಾರವ, ಮದ್ದಾನೆಗಳ ಘೀಂಕಾರಶಬ್ದ, ಮದ್ದಲೆಗಳ ಗಂಭೀರನಾದ,

ವ॥ ಅಂತು ನಾಗಪುರಮನಿೞಿಸುವ ನಾಗಪುರಮನಾ ನಾಗಶಯನಂ ಪೊಕ್ಕು ವಿದುರಂ ಪಾಂಡವ ಪಕ್ಷಪಾತಿಯಪ್ಪುದಱಿಂದಾತನ ಮನೆಗೆ ವರೆ ತನಗಿದಿರ್ವಂದ ಕೊಂತಿಗಸುರಾಂತಕನೆಱಗಿ ತನಗೆಱಗಿದ ವಿದುರನಂ ಪರಸಿ ರಥದಿಂದಮಿೞಿದು ಮಣಿಮಯ ಪೀಠದೊಳ್ ಕುಳ್ಳಿರ್ದು ಪಾಂಡುತನೂಜರ ಕುಶಲವಾರ್ತೆಯನಱಿಪೆ ತದನಂತರಂ ವಿದುರನಜನನೇಗೆಯ್ವ ತೆಱನುಮನಱಿಯದೆ-

ಕಂ॥ ತೀವಿದ ಮಜ್ಜನದಿಂ ಸ
ದ್ಭಾವದಿನೊಸೆದೆತ್ತಿದೊಂದು ಬೋನದೊಳಂ ನಾ ।
ನಾ ವಿಧದ ಪದೆಪಿನೊಳ್ ಪರಿ
ಗಾವಗಮಾಱಿದುದು ಪಥಪರಿಶ್ರಮಮೆಲ್ಲಂ ॥ ೨೮

ವ॥ ಅಂತು ವಿದುರನಜನನುಚಿತ ಪ್ರತಿಪತ್ತಿಗಳಿಂ ಸಂತಸಂಬಡಿಸಿ ಬಂದ ಬರವನಾಗಳೆ ಸುಯೋಧನಂಗಱಿಪುವುದುಂ ರಾಜರಾಜನುಱದೆ ಕಿಱುನಗೆ ನಕ್ಕು ನಾಳಿನೋಲಗದೊಳ್ ತಂದು ಕಾಣಿಸೆಂಬುದುಂ ಮಱುದಿವಸಂ ನೇಸಱ್ ಮೂಡಿವಾಗಳಾದಿತ್ಯನಂತನೇಕಮಣಿಮಯೂಖ ವಿಜೃಂಭಮಾಣಾಖಂಡಳ ವಿಳಂಬಿತಾಭೀಳ ಕೋದಂಡವಿಳಾಸ ವಿಭ್ರಮ ಸಿಂಹಾಸನಾಸೀನನುಂ ಪ್ರಮದಾಹಸ್ತವಿನ್ಯಸ್ತ ವಾಮಕ್ರಮಕಮಳನುಮನವರತ ಸ್ಫುರಿತ ತಾರಕಾಕಾರ ಮುಕ್ತಾಭರಣ ಕಿರಣ ನಿಕರ ವಿಳಸಿತ ವಿಶಾಲೋರಸ್ಥಳನುಮನಂತ ಸಾಮಂತ ಮಕುಟ ಮಾಣಿಕ್ಯ ಮಯೂಖ

ಯುವತಿಯರೂ, ಮದಿಸಿರುವವರೂ ಆದ ಸ್ತ್ರೀಯರ ಕಾಲಂದಿಗೆಗಳ ಶಬ್ದ ಇವುಗಳಿಂದ ಮಂದರ ಪರ್ವತದಿಂದ ಕಡೆಯಲ್ಪಟ್ಟ ಕ್ಷೀರಸಮುದ್ರದ ಶಂಕೆಯನ್ನು ಕೃಷ್ಣನಿಗೆ ಉಂಟುಮಾಡಿತು. ವ॥ ಭೋಗವತೀಪಟ್ಟಣವನ್ನು ಕೀಳುಮಾಡುವ ಹಸ್ತಿನಾಪಟ್ಟಣವನ್ನು ಶ್ರೀಕೃಷ್ಣನು ಪ್ರವೇಶಿಸಿದನು. ವಿದುರನು ಪಾಂಡವಪಕ್ಷಪಾತಿಯಾದುದರಿಂದ ಆತನ ಮನೆಗೆ ಬಂದನು. ತನಗೆ ಎದುರಾಗಿ ಬಂದ ಕುಂತಿದೇವಿಗೆ ಕೃಷ್ಣನು ನಮಸ್ಕಾರ ಮಾಡಿ ತನಗೆ ನಮಸ್ಕಾರ ಮಾಡಿದ ವಿದುರನನ್ನು ಹರಸಿದನು. ತೇರಿನಿಂದಿಳಿದು ರತ್ನಖಚಿತವಾದ ಪೀಠದಲ್ಲಿ ಕುಳಿತುಕೊಂಡು ಪಾಂಡವರ ಕ್ಷೇಮಸಮಾಚಾರವನ್ನು ತಿಳಿಸಿದನು. ಕೃಷ್ಣನಿಗೆ ಸತ್ಕಾರಮಾಡುವ ರೀತಿಯು ವಿದುರನಿಗೆ ತೋರದಾಯಿತು. ೨೮. ಅವನು ಸಿದ್ಧಪಡಿಸಿದ ಸ್ನಾನದಿಂದಲೂ ಒಳ್ಳೆಯ ಮನಸ್ಸಿನಿಂದ ಬಡಿಸಿದ ಆಹಾರದಿಂದಲೂ ನಾನಾರೀತಿಯಾದ ಸಾಮಾನ್ಯ ಸತ್ಕಾರಗಳಿಂದಲೂ ಕೃಷ್ಣನಿಗೆ ಮಾರ್ಗಾಯಾಸವೆಲ್ಲ ಪೂರ್ಣವಾಗಿ ಶಮನವಾಯಿತು. ವ॥ ವಿದುರನು ಕೃಷ್ಣನನ್ನು ಯೋಗ್ಯವಾದ ಸನ್ಮಾನಗಳಿಂದ ಸಂತೋಷಪಡಿಸಿ ಅವನ ಬರುವಿಕೆಯನ್ನು ದುರ್ಯೋಧನನಿಗೆ ತಿಳಿಸಿದನು. ಚಕ್ರವರ್ತಿಯು ಸುಮ್ಮನಿರಲಾರದೆ ಹುಸಿನಗೆ ನಕ್ಕು ನಾಳೆಯ ಸಭೆಯಲ್ಲಿ ತಂದು ಕಾಣಿಸು ಎಂದನು. ಮಾರನೆಯ ದಿನ ಸೂರ್ಯೋದಯವಾದಾಗ ಸೂರ್ಯನಂತೆ ಅನೇಕ ರತ್ನಕಿರಣಗಳಿಂದ ಮೆರೆಯುತ್ತಿರುವ ಇಂದ್ರನಂತೆ ಉದ್ದವೂ ಭಯಂಕರವೂ ಆದ ಬಿಲ್ಲಿನ ವೈಭವಯುಕ್ತವಾದ ವಿಳಾಸದಿಂದ ಕೂಡಿದ ಸಿಂಹಾಸನದಲ್ಲಿ ಕುಳಿತನು. ಸ್ತ್ರೀಯರು ತಮ್ಮ ಕಯ್ಯಿಂದ ಅವನ ಎಡಗಾಲನ್ನು ಒತ್ತುತ್ತಿದ್ದರು. ಅವನ ವಿಸ್ತಾರವಾದ ಎದೆಯನ್ನು ಅಲಂಕರಿಸಿದ ಆಭರಣಗಳು ನಕ್ಷತ್ರಗಳಂತೆ ಪ್ರಕಾಶಮಾನವಾಗಿದ್ದುವು. ಅನಂತ ಸಾಮಂತ ರಾಜರ ಕಿರೀಟದ

ಮಂಜರೀಜಾಳ ಪಲ್ಲವಿತಾಸ್ಥಾನಮಂಟಪನುಮಾಗಿ ಸಭಾಮಂಟಪದೊಳೊಡ್ಡೋಲಗಂಗೊಟ್ಟೆಡೆ ವಱೆಯುದವರವರ ಪಡೆದ ಪ್ರತಿಪತ್ತಿಗಳನಱಿದಿಕ್ಕಿದ ಲೋಹಾಸನಂಗಳೊಳಂ ಮಣಿಖಚಿತ ಕನಕ ಪೀಠಂಗಳೊಳಂ ಕಟ್ಟಿದ ಚಿನ್ನದ ಬೊಂದರಿಗೆಯೊಳಂ ಭೀಷ್ಮ ದ್ರೋಣಾಶ್ವತ್ಥಾಮ ಕೃಪ ಕೃತವರ್ಮ ಶಲ್ಯ ಶಕುನಿ ಬಾಹ್ಲೀಕ ಸೋಮದತ್ತ ಭಗದತ್ತ ಭೂರಿಶ್ರವಃ ಪ್ರಭೃತಿಗಳನಿರಿಸಿ ಮತ್ತಮನೇಕ ದೇಶಾಧೀಶ್ವರರೆಲ್ಲರುಮನೆಡೆಯಱಿದು ಕುಳ್ಳಿರಿಸಿ ಪೆಂಡವಾಸದೊಳ್ವೆಂಡಿರನೆರಡೋಳಿಯೊಳಮಿರಿಸಿ ನೂರ್ವರ್ ತಮ್ಮಂದಿರುಮಂ ಪಿಂತಿರಿಸಿ ಲಕ್ಕಣಂ ಮೊದಲಾಗೆ ನೂರ್ವರ್ ಮಕ್ಕಳುಮಂ ಮುಂತಿರಿಸಿ ಯುವರಾಜನಪ್ಪನುಗ ದುಶ್ಶಾಸನನುಮನಂಗರಾಜನಪ್ಪಣುಗಾಳ್ ಕರ್ಣನುಮನೆರಡುಂ ಕೆಲದೊಳಂ ತೊಡೆ ಸೋಂಕೆ ಕುಳ್ಳಿರಿಸಿ–

ಮ॥ ನನೆಯಂಬಂ ಮಸೆದನ್ನರಪ್ಪ ಪಲರೊಳ್ಪೆಂಡಿರ್ ಮನಂಗೊಂಡೊಱ
ಲ್ವಿನಮೆತ್ತಂ ಕೊಳೆ ಪಾಡೆ ಜೇನ ಮೞೆ ಕೊಂಡಂತಪ್ಪ ಗೇಯಂ ಮನ ।
ಕ್ಕೆ ನೆಲಕ್ಕಿಟ್ಟಳಮಾಗೆ ಸಂದ ರಥಿಕರ್ ಕಣ್ಗೊಳ್ಗಿನಂ ತತ್ಸುಯೋ
ಧನನೊಡ್ಡೋಲಗಮಿಂದ್ರನೋಲಗಮುಮಂ ಕೀೞ್ಮಾಡಿ ಕಣ್ಗೊಪ್ಪುಗುಂ ॥ ೨೯

ವ॥ ಅಂತು ಪಿರಿದೋಲಗಂಗೊಟ್ಟರ್ಪನ್ನೆಗಂ ಮುನ್ನಮೆ ಮೂಱನೆಯ ಬಾಗಿಲೊಳ್ ಬಂದಿರ್ದನಂತನ ಬರವಂ ಪಡಿಯಱಂ ಬಿನ್ನಪಂಗೆಯ್ಯೆ ಕುರುರಾಜಂ ಸಿಂಧುತನೂಜನ ಮೊಗಮಂ ನೋಡಿ–

ಮಾಣಿಕ್ಯರತ್ನಕಾಂತಿಸಮೂಹದಿಂದ ಸಭಾಮಂಟಪವು ವಿರಾಜಮಾನವಾಗಿದ್ದಿತು. ಆ ಸಭಾಮಂಟಪದಲ್ಲಿ ದುರ್ಯೋಧನನು ಒಡ್ಡೋಲಗದಲ್ಲಿದ್ದನು. ಆ ಸಭಾಮಂಟಪದ ಮಧ್ಯೆ ಅವಕಾಶವೇ ಇಲ್ಲದೆ ಒತ್ತಾಗಿ ಅವರ ಮರ್ಯಾದಾನುಗುಣವಾಗಿ ಸಿದ್ಧಪಡಿಸಿದ್ದ ಲೋಹಪೀಠಗಳಲ್ಲಿಯೂ ರತ್ನಖಚಿತವಾದ ಸುವರ್ಣಾಸನಗಳಲ್ಲಿ ಸೇರಿಸಿರುವ ಮೆತ್ತೆಗಳಲ್ಲಿಯೂ ಭೀಷ್ಮ, ದ್ರೋಣ, ಅಶ್ವತ್ಥಾಮ, ಕೃಪ, ಕೃತವರ್ಮ, ಶಲ್ಯ, ಶಕುನಿ, ಬಾಹ್ಲೀಕ, ಸೋಮದತ್ತ, ಭಗದತ್ತ, ಭೂರಿಶ್ರವರೇ ಮೊದಲಾದವರು ಕುಳಿತಿದ್ದರು. ಇತರ ಅನೇಕದೇಶಾಧೀಶರೆಲ್ಲ ತಮ್ಮ ತಮ್ಮ ಸ್ಥಾನಾನುಗುಣವಾಗಿ ಮಂಡಿಸಿದ್ದರು. ರಾಣಿವಾಸದ ಉತ್ತಮಸ್ತ್ರೀಯರು ಎರಡುಪಕ್ಕದಲ್ಲಿಯೂ ಇದ್ದರು. ನೂರುಜನ ತಮ್ಮಂದಿರೂ ಹಿಂದುಗಡೆ ಇದ್ದರು. ಲಕ್ಷಣನೇ ಮೊದಲಾದ ನೂರು ಜನ ಮಕ್ಕಳು ಮುಂಭಾಗವನ್ನಲಂಕರಿಸಿದ್ದರು. ಯುವರಾಜನೂ ಪ್ರೀತಿಯ ತಮ್ಮನೂ ಆದ ದುಶ್ಶಾಸನನೂ ಪ್ರೀತಿಯ ಸೇವಕನೂ ಅಂಗರಾಜನೂ ಆದ ಕರ್ಣನೂ ಎರಡು ಪಕ್ಕಗಳಲ್ಲಿಯೂ ತೊಡೆಸೋಂಕುವ ಹಾಗೆ ಹತ್ತಿರದಲ್ಲಿ ಕುಳಿತಿದ್ದರು. -೨೯. ಪುಷ್ಪಬಾಣವನ್ನು ಮಸೆದ ಹಾಗಿರುವ ಅನೇಕ ಒಳ್ಳೆಯ ಸ್ತ್ರೀಯರು ಆಕರ್ಷಕವಾಗಿ ಪ್ರೀತಿಯಿಂದ ಹಾಡುತ್ತಿದ್ದರು. ಜೇನಮಳೆಯನ್ನು ಸುರಿಸಿದಂತಿರುವ ಸಂಗೀತವು ಎಲ್ಲೆಡೆಯಲ್ಲಿಯೂ ವ್ಯಾಪಿಸಿದ್ದಿತು. ಮನಸ್ಸಿಗೂ ಆಸ್ಥಾನಮಂಟಪಕ್ಕೂ ರಮಣೀಯ ವಾಗಿರುವಂತೆ ಪ್ರಸಿದ್ಧವಾಗಿರುವ ರಥಿಕರು ಚಿತ್ತಾಕರ್ಷಕವಾಗಿರಲು ಆ ದುರ್ಯೋಧನನ ಆಸ್ಥಾನಮಂಟಪವು ಇಂದ್ರನ ಸಭೆಯನ್ನು ಕೀಳ್ಮಾಡಿ ಕಣ್ಣಿಗೆ ಒಪ್ಪುವಂತಿತ್ತು. ವ॥ ಅಂತಹ ಒಡ್ಡೋಲಗದಲ್ಲಿದ್ದ ದುರ್ಯೋಧನನಿಗೆ ಮೂರನೆಯ ಬಾಗಿಲಿನಲ್ಲಿ ಬಂದಿದ್ದ ಕೃಷ್ಣನ ಆಗಮನವನ್ನು ಪ್ರತೀಹಾರಿಯು ಬಂದು ತಿಳಿಸಲು ದುರ್ಯೋಧನನು

ಕಂ॥ ಲೋಕ ಗುರು ಶಂಖ ಚಕ್ರ ಗ
ದಾಕರನತಿಶಯ ಚತುರ್ಭುಜಂ ಜನಜನಿತ ।
ವ್ಯಾಕುಳದೆ ಬಂದನೆಂದೊಡೆ
ಲೋಕದೊಳಿನ್ನೆನ್ನ ದೊರೆಗೆ ಪಿರಿಯರುಮೊಳರೇ ॥ ೩೦

ವ॥ ಎಂದು ತನ್ನ ಬೆಸನನೆ ಪಾರ್ದು ಲಲಾಟ ತಟ ಘಟಿತ ಮುಕುಳಿತ ಕರಕಮಳನಾಗಿರ್ದ ಮಹಾಪ್ರತಿಹಾರನ ಮೊಗಮಂ ನೋಡಿ-

ಮ॥ ಬರವೇಳೆಂಬುದುಮಂಜನಾಚಲದವೋಲ್ ಕಣ್ಗೊಪ್ಪಿ ಬರ್ಪಂಬುಜೋ
ದರನಂ ಮೆಲ್ಲನೆ ನೋಡಿ ಮೆಯ್ಯಲಸಿದಂತೆಂತಾನುಮೆಟ್ದಿರ್ದು ಕೇ ।
ಸರಿ ಪೀಠಾಗ್ರದಿನಪ್ಪಿಕೊಂಡು ಪೊಡೆವಟ್ಟುಚ್ಚಾಸನಾಸೀನನಾ
ಗಿರವೇಳ್ದರ್ಘ್ಯಮನಿತ್ತನಂತರಮೆ ತಾಂ ಕುಳ್ಳಿರ್ದು ದುರ್ಯೋಧನಂ ॥ ೩೧

ವ॥ ಅಂತು ಮಧುಕೈಟಭಾರಾತಿಯ ಮೊಗಮಂ ನೋಡಿ-

ಕಂ॥ ಸಂಸಾರದೊಳಿನ್ನೆನ್ನವೊ
ಲೇಂ ಸೈಪಂ ಪಡೆದರೊಳರೆ ನೀಂ ಬರೆ ಪೆಱತೇಂ ।
ಕಂಸಾರೀ ಯುಷ್ಮತ್ಪದ
ಪಾಂಸುಗಳಿಂದಾಂ ಪವಿತ್ರಗಾತ್ರನೆನಾದೆಂ ॥ ೩೨

ಬಂದ ಬರವಾವುದಿದು ಬಸ
ವಂದಂ ಬೆಸನಾವುದಾವ ಬೆಸನಂ ಬೆಸಸಲ್ ।
ಬಂದಿರ್ ಬರವಿನೊಳೀಗಳ
ಗುಂದಲೆಯಾಯ್ತೆನಗಮೀಗಳೆಂಬುದುಮಾಗಳ್ ॥ ೩೩

ಭೀಷ್ಮನ ಮುಖವನ್ನು ನೋಡಿ-೩೦. ಲೋಕಗುರುವೂ ಶಂಖಚಕ್ರಗದಾಪಾಣಿಯೂ ಅತಿಶಯವಾದ ನಾಲ್ಕುತೋಳುಗಳುಳ್ಳವನೂ ಆದ ಕೃಷ್ಣನೇ ಲೋಕಪ್ರಸಿದ್ಧವಾದ ಚಿಂತೆಯಿಂದ ನನ್ನ ಬಳಿಗೆ ಬಂದಿದ್ದಾನೆ ಎನ್ನುವಾಗ ಲೋಕದಲ್ಲಿ ನನಗೆ ಸಮಾನವಾದ ಹಿರಿಮೆಯುಳ್ಳವರೂ ಇದ್ದಾರೆಯೇ ಎಂದನು. ವ॥ ತನ್ನ ಅಪ್ಪಣೆಯನ್ನೇ ನಿರೀಕ್ಷಿಸುತ್ತ ಕೈಮುಗಿದು (ಮೊಗ್ಗಾಗಿ ಮಾಡಿದ್ದ ಕರಕಮಲವನ್ನು ಮುಖದ ಸಮೀಪದಲ್ಲಿ ಸೇರಿಸಿದ್ದ) ನಿಂತಿದ್ದ ಮಹಾದ್ವಾರಪಾಲಕನ ಮುಖವನ್ನು ನೋಡಿ-೩೧. 'ಬರಹೇಳು' ಎಂದನು. ಅಂಜನ ಪರ್ವತದಂತೆ ಕಣ್ಣಿಗೆ ಮನೋಹರವಾಗಿರುವಂತೆ ಕೃಷ್ಣನು ಪ್ರವೇಶಿಸಿದನು. ಅವನನ್ನು ನಿಧಾನವಾಗಿ ನೋಡಿ ಶರೀರಕ್ಕೆ ಏನೋ ಆಯಾಸವಾಗಿರುವಂತೆ ಹೇಗೋ ಎದ್ದು ಸಿಂಹಾಸನದಿಂದಲೇ ಆಲಿಂಗನಮಾಡಿಕೊಂಡು ನಮಸ್ಕಾರಮಾಡಿ ಎತ್ತರವಾದ ಆಸನದಲ್ಲಿ ಕುಳಿತುಕೊಳ್ಳಬೇಕೆಂದು ಹೇಳಿದನು. ಅರ್ಘ್ಯವನ್ನು ಕೊಟ್ಟಾದಮೇಲೆಯೇ ದುರ್ಯೋಧನನು ತಾನೂ ಕುಳಿತುಕೊಂಡನು. ವ॥ ಮಧುಕೈಟಭರೆಂಬವರ ಶತ್ರುವಾದ ಕೃಷ್ಣನ ಮುಖವನ್ನು ನೋಡಿ ಹೇಳಿದನು. ೩೨. 'ಕೃಷ್ಣ, ನೀನು ಬರಲಾಗಿ ಸಂಸಾರದಲ್ಲಿ ಇನ್ನು ಮೇಲೆ ನನ್ನಂತಹ ಅದೃಷ್ಟಶಾಲಿಗಳಾದವರೂ ಇದ್ದಾರೆಯೇ ? ಮತ್ತೇನು ನಿನ್ನ ಪಾದಧೂಳಿಯಿಂದ ನಾನು ಪರಿಶುದ್ಧವಾದ ಶರೀರವುಳ್ಳವನಾಗಿದ್ದೇನೆ. ೩೩. ತಾವು ದಯಮಾಡಿಸಿದ ಕಾರಣ ಯಾವುದು ? ನಿಮ್ಮ ಆಗಮನ ಆಶ್ಚರ್ಯಕರವಾದುದು;

ಅಯ ನಯ ಪರಾಕ್ರಮೋಪಾ
ಶ್ರಯಂಗಳಂ ಶ್ರೀಗಡರ್ಪುಮಾಡಿದ ನಿನ್ನಿಂ ।
ದ್ರಿಯ ಜಯಮೆ ಕೂಡೆ ಲೋಕ
ತ್ರಯದಿಂ ಪೊಗಟೆಸಿದುದಿಂತು ಪಿರಿಯರುಮೊಳರೇ ॥ ೩೫

ಕಂ॥ ಉನ್ನತನೆ ಆಗಿಯುಂ ನುಡಿ
ಸನ್ನಿಯನಳವಣ್ಮನಱಿವು ವಿನಯಮನಾದಂ ।
ಮನ್ನಣೆ ಗುರುಜನಮಂ ನೆಱ
ಮನ್ನಿಸಿದುದು ಪಿರಿಯ ಸಿರಿಯೊಳೀಂ ಸುಜನತೆಯೋ ॥ ೩೬

ಕುವಳಯಬಾಂಧವನೆಸೆವನೆ
ಕುವಳಯಮಂ ಬೆಳಸಿ ಕುವಳಯಂ ಪೊಱಗೆನೆ ಪಾಂ ।
ಡವರೆ ಪೊಱಗಾಗೆ ನಿನಗೀ
ಕುವಳಯಪತಿಯೆಂಬ ಪೆಂಪೊಡಂಬಡೆ ನೃಪತೀ । ೩೭

ಮನಕತದಿಂದೊರ್ವರ
ನಿನಿಸನಗಲ್ದಿರ್ದಿರಿನಿಸೆ ನಿಮಗಂ ತಮಗಂ ।
ಮುನಿಸುಂಟೆ ಕಾಯ್ದು ಬೆನ್ನೀರ್
ಮನೆ ಸುಡದೆಂಬೊಂದು ನುಡಿಯವೋಲ್ ಕುರುರಾಜಾ ॥ ೩೮

ಪೊಂಗುವ ಮಲೆಪರ ಮಲೆಗಳ
ಡಂಗಂ ಕಣ್ಮಲೆವ ಮಂಡಲಂಗಳ್ ಪುತ್ಕಂ ।
ತಂಗಳೆನಲೊಳವೆ ಪಾಂಡವ
ರಂ ಗೆಡೆಗೊಳೆ ನಿನಗೆ ಕುರುಕುಳಾಂಬರಭಾನೂ ॥ ೩೯

ಯಾವ ಕಾರ್ಯವನ್ನು ಆಜ್ಞೆಮಾಡಲು ಬಂದಿದ್ದೀರಿ ? ಈಗ ನಿಮ್ಮ ಬರುವಿಕೆಯಿಂದ ನನಗೂ ಗೌರವವುಂಟಾಗಿದೆ ಎಂದು ಪ್ರಶ್ನೆಮಾಡಿದನು. ಆಗ -೩೪. ಆ ಸಭಾಸ್ಥಾನದಲ್ಲಿ ಕೃಷ್ಣನು ತನ್ನ ಅಭಿನಯದಿಂದಲೇ ಮಾತುಗಳನ್ನು ಜೋಡಿಸುತ್ತಿರಲು ಹಲ್ಲುಗಳ ಕಾಂತಿಯು ಹಾಸುಹೊಕ್ಕಾಗಿ ಹರಡಿ ಸಭಾಭವನವು ಪ್ರಕಾಶಮಾನವಾಗಿರಲು ಮಾತನಾಡಿದನು. ೩೫. ನಯ ನೀತಿ ಪರಾಕ್ರಮಗಳನ್ನು ಯಶೋಲಕ್ಷ್ಮಿಗೆ ಅಧೀನವನ್ನಾಗಿಸಿರುವ ಜಿತೇಂದ್ರಿಯತ್ವವು ಮೂರುಲೋಕಗಳಿಂದಲೂ ಹೊಗಳಿಸಿಕೊಳ್ಳುತ್ತಿದೆ. ನಿನ್ನಂತಹ ಹಿರಿಯರು ಯಾರಿದ್ದಾರೆ ? ೩೬. ಉನ್ನತವಾಗಿದ್ದರೂ ನಿನ್ನ ಮಾತಿನಲ್ಲಿ ಸತ್ಯಸಂಧತೆಯೂ ಶಕ್ತಿಯಲ್ಲಿ ಪರಾಕ್ರಮವೂ ಪಾಂಡಿತ್ಯದಲ್ಲಿ ವಿನಯವೂ ಹಿರಿಯರಲ್ಲಿ ಮರ್ಯಾದೆಯೂ ನಿನ್ನಲ್ಲಿ ಶೋಭಿಸುತ್ತಿವೆ. ಹೆಚ್ಚಾದ ಸಿರಿಯಿದ್ದರೂ ನಿನ್ನಲ್ಲಿ ಸೌಜನ್ಯವಿದೆ! ೩೭. ಚಂದ್ರನು ಭೂಮಿಯನ್ನೆಲ್ಲ ಬೆಳಗಿಸಿ ಕನ್ನೈದಿಲೆಗೆ ಮಾತ್ರ ಹೊರಗಾಗಿದ್ದಾನೆ ಎಂದರೆ ಸೊಗಯಿಸುತ್ತಾನೆಯೆ ? ಹಾಗೆಯೇ ಪಾಂಡವರು ಹೊರಗಾಗಿದ್ದರೆ ನಿನಗೆ ಭೂಪತಿ (ಚಕ್ರವರ್ತಿ)ಯೆಂಬ ಹಿರಿಮೆ ಒಪ್ಪುತ್ತದೆಯೇ? ೩೮. ಇದುವರೆಗೆ ಏನೋ ಮನಸ್ತಾಪದಿಂದ ಒಬ್ಬರನ್ನೊಬ್ಬರು ಅಗಲಿದ್ದೀರಿ ಇಷ್ಟೇ. ನಿಮಗೂ ಅವರಿಗೂ ಕ್ರೋಧವುಂಟೆ? ದುರ್ಯೋಧನ, ಕಾದ

ಪಟ್ಟದ ಮೊದಲಿಗರಾಜಿಗೆ
ಜಟ್ಟಿಗರವರೆಂದುಮಾಳ್ದ ಮುನ್ನಿನ ನೆಲನಂ ।
ಕೊಟ್ಟು ಬಟಿಯಟ್ಟು ನಿನಗೊಡ
ವುಟ್ಟಿದರಾ ದೊರೆಯರಾಗೆ ತೀರದುದುಂಟೇ ॥ ೪೦

ಮುನ್ನಿನ ನೆಲನಂ ಕುಡುಗೆಮ
ಗೆನ್ನರ್ ದಾಯಿಗರೆಮೆನ್ನರಂತಲ್ತಿಂತ ।
ಲೆನ್ನರ್ ಕರುಣಿಸಿ ದಯೆಯಿಂ
ದಿನ್ನಿತ್ತುದೆ ಸಾಲ್ಗುಮೆಂಬರೆಂಬುದನೆಂಬರ್ ॥ ೪೧

ಚಂ॥ ಕರಿ ಕಳಭ ಪ್ರಚಂಡ ಮೃಗರಾಜ ಕಿಶೋರ ಕಠೋರ ಘೋರ ಹೂಂ
ಕರಣ ಭಯಂಕರಾಟವಿಯೊಳಿನ್ನವರಂ ನೆಲಸಿರ್ದ ಸೇದೆ ನೀಂ ।
ಕರುಣಿಸಿದಾಗಳಲ್ಲದವರ್ಗಾಱದು ಕೆಮ್ಮಗೆ ನಾಡ ಚಲ್ಲವ
ತ್ತರ ನುಡಿಗೊಳ್ಳದಿರ್ ನಿನಗೆ ಪಾಂಡವರಪ್ಪುದನಾರುಮಪ್ಪರೇ ॥ ೪೨

ಉ॥ ಒಂದುಮೊಡಂಬಡುಂ ಪೊರೆಯುಮಿಲ್ಲವರ್ಗೆಂಬುದನೆಯ್ದೆ ನಂಬ ನಾ
ಡಂ ದಯೆಗೆಯ್ದು ನೀಂ ಕುಡುವಿನಂ ಪೆಱತೇ ಪಡೆಮಾತೊ ಪಳ್ಳಿರ ।
ಲೈಂದವರ್ಗೀವುದೊಳ್ಪು ನಿಲೆ ಕಂಚಿ ನೆಗಲ್ತೆಯ ವಾರಣಾಸಿ ಕಾ
ಕಂದಿ ಕುರುಸ್ಥಳಂ ವರ ವೃಕಸ್ಥಳಮೆಂಬಿವನಯ್ದು ಬಾಡಮಂ ॥ ೪೩

ಬಿಸಿನೀರು ಮನೆಯನ್ನು ಸುಡುವುದೆ ? ೩೯. ಕೌರವವಂಶವೆಂಬ ಆಕಾಶಕ್ಕೆ ಸೂರ್ಯನಂತಿರುವ ಎಲೈ ದುರ್ಯೋಧನನೇ ಪಾಂಡವರೊಡನೆ ಸ್ನೇಹವನ್ನು ಗಳಿಸಿದರೆ ನಿನಗೆ ಪ್ರತಿಭಟಿಸುವ ಪರ್ವತರಾಜರ ಸುಂಕದ ಕಟ್ಟೆಗಳೂ ಅಹಂಕಾರದಿಂದ ವರ್ತಿಸುವ ದೇಶಗಳೂ ಗಡಿಪ್ರದೇಶಗಳೂ ಎನ್ನುವುವು ಇರುತ್ತವೆಯೇ ? ೪೦. ಅದೂ ಇರಲಿ, ಅವರು ರಾಜ್ಯಪಟ್ಟಕ್ಕೆ ಮೊದಲು ಅರ್ಹರಾದವರು, ಯುದ್ಧದಲ್ಲಿ ಶೂರರಾದವರು. ಅವರು ಯಾವಾಗಲೂ ಮೊದಲಿಂದ ಆಳುತ್ತಿದ್ದ ರಾಜ್ಯವನ್ನು ಅವರಿಗೆ ಕೊಟ್ಟು ಆ ಸಮಾಚಾರವನ್ನು ದೂತರ ಮೂಲಕ ಹೇಳಿಕಳುಹಿಸು. ನಿನ್ನ ಸಹೋದರರು ಅಂತಹ ಸಮರ್ಥರಾಗಿರಲು ನಿನಗಸಾಧ್ಯವಾದುದೂ ಉಂಟೇ ? ೪೧. ಅವರು ನಮಗೆ ಮೊದಲಿನ ನೆಲವನ್ನೆ ಕೊಡು ಎನ್ನುವುದಿಲ್ಲ. ನಾವು ದಾಯಾದಿಗಳು (ಸಮಭಾಗಿಗಳು) ಎನ್ನುವುದಿಲ್ಲ. ಹೀಗಲ್ಲ ಹಾಗಲ್ಲ ಎನ್ನುವುದಿಲ್ಲ. ನೀನು ದಯೆಯಿಯಿಂದ ಕೊಟ್ಟುದು ಸಾಕು ಎನ್ನುತ್ತಾರೆ. ನೀನು ಹೇಳಿದಂತೆ ಕೇಳುವರು. ೪೨. ಆನೆಯ ಮತ್ತು ಭಯಂಕರವಾದ ಸಿಂಹದ ಮರಿಗಳ ಕರ್ಕಶವೂ ಭಯಂಕರವೂ ಆದ ಹೂಂಕರಣ ಶಬ್ದದಿಂದ ಕೂಡಿದ ಘೋರವಾದ ಕಾಡಿನಲ್ಲಿ ಇದುವರೆಗೂ ಅವರು ವಾಸಮಾಡಿದ ಆಯಾಸವು ನೀನು ದಯೆತೋರಿಸಿದಲ್ಲದೆ ಶಮನವಾಗುವುದಿಲ್ಲ. ಸುಮ್ಮನೆ ನಂಬಿಸಿ ಹೊಟ್ಟೆಹೊರೆಯುವ ಬೀದಿಹೋಕರ ಮಾತುಗಳನ್ನು ಕೇಳಬೇಡ. ನಿನ್ನ ಕಷ್ಟಸುಖಕ್ಕೆ ಪಾಂಡವರಾಗುವಂತೆ ಇತರರಾಗುತ್ತಾರೆಯೆ ? ೪೩. ಪಾಂಡವರಿಗೆ ಯಾವ ಒಡಂಬಡಿಕೆಯೂ ರಕ್ಷಣೆಯೂ ಇಲ್ಲ ಎಂದು ಚೆನ್ನಾಗಿ ನಂಬಿ ಬೇರೆ ಮಾತಿಲ್ಲದೆ

ವ|| ಎಂಬುದು ಸುಯೋಧನಂ ಕ್ರೋಧಾನಲೋದ್ದೀಪಿತ ಹೃದಯನಾಗಿ ಶೌರ್ಯಮ ದಾಡಂಬರದೊಳಂಬರಂಬರಂ ಸಿಡಿಲ್ದು-

ಚಂ|| ತೊಲಗದೆ ಗೋವುಗಾದ ಕಿಱಿಯಂದಿನ ಗೋವಿಕೆ ನಿನ್ನ ಚಿತ್ತದೊಳ್
ನೆಲಸಿದುದಕ್ಕುಮಗ್ಗಳದ ವೈಷ್ಣವ ಮೋಹಮ ನಿನ್ನ ಮೆಯ್ಯೊಳ |
ಗ್ಗಲಿಸಿದುದಕ್ಕುಮಾ ಜಡಧಿ ಸಂಗತಿಯಿಂ ಜಡಬುದ್ಧಿ ಬುದ್ಧಿಯಂ
ತೊಲಗಿಸಿತಕ್ಕುಮಲ್ಲದೊಡೆ ನೀನಿನಿತಂ ನುಡಿವೈ ಪಳಾಳಮಂ || ೪೪

ಕಂ || ಪಱಿಪಟ್ಟ ಪಗೆವರಂ ನೆಱಿ
ಪಱಿಪಡಲಣವೀಯದವರನವರ್ಗಳ ಬಾಟಿೞೊಳ್ |
ನಿಱಿಸಲ್ ಬಗೆದೈ ಕರಮೆನ
ಗುಱಿದಿರ್ಕುಮೆ ನಿನ್ನ ಪೇೞ್ದ ಧರ್ಮಶ್ರವಣಂ || ೪೫

ಉ|| ಭಾಗಮನಾಸೆವಟ್ಟಳಿಪಿ ಬೇೞ್ಪುದು ನಿನ್ನಯ ಕಲ್ತ ವಿದ್ದೆ ನೀ
ನಾಗಳುಮಣ್ಣ ಬೇಡಿದಪೆ ಸಜ್ಜನದಂತೆನಗೆಕ್ಕಬಾಗೆ ನೋ |
ಡೀಗಳಿಳಾಲತಾಂಗಿ ಪುದುವಲ್ಲಳದೆಂತೆನೆ ಮುನ್ನ ನೂಲ ತೋ
ಡಾಗದೆ ಕೆಟ್ಟು ಪೋದವರನಿಂ ಮಗುೞ್ದುಂ ನಿಱಿಪಂತು ಬೆಳ್ಳನೇ || ೪೬

ರಾಜ್ಯವನ್ನು ದಯೆಮಾಡಿ ಕೊಡುವುದಾದರೆ ಕಂಚಿ, ಶ್ರೇಷ್ಠವಾದ ವಾರಣಾಸಿ, ಕಾಕಂದಿ, ಕುರುಸ್ಥಳ, ಉತ್ತಮವಾದ ವೃಕಸ್ಥಳ ಎಂಬ ಅಯ್ದು ಹಳ್ಳಿಗಳನ್ನು ಅವರಿಗೆ ಮಲಗುವುದಕ್ಕೆ (ಸಾಕಷ್ಟು ನೆಲವನ್ನು) ಲೋಕ ಮೆಚ್ಚುವ ಹಾಗೆ (ನಿನ್ನ ಸದ್ಗುಣ ಸ್ಥಿರವಾಗುವ ಹಾಗೆ) ಕೊಟ್ಟರೆ ಸಾಕು. ವ|| ಎನ್ನಲು ದುರ್ಯೋಧನನು ಕ್ರೋಧಾಗ್ನಿಯಿಂದ ಉರಿಯುತ್ತಿರುವ ಹೃದಯವುಳ್ಳವನಾಗಿ ಶೌರ್ಯದ ಸೊಕ್ಕಿನ ಉಬ್ಬರದಲ್ಲಿ ಆಕಾಶದವರೆಗೂ ಸಿಡಿದು ಕೃಷ್ಣನನ್ನು ಕುರಿತು ಹೇಳಿದನು. ೪೪. "ಬಾಲ್ಯದ ದನಕಾಯುವ ಮನೋಭಾವ ನಿನ್ನಲ್ಲಿ ಹೋಗದೆ ಇನ್ನೂ ನೆಲೆಸಿರುವಂತಿದೆ. ಅತಿಶಯವಾದ ವೈಷ್ಣವ ಮೋಹವು ನಿನ್ನ ಶರೀರದಲ್ಲಿ ಮಿತಿಮೀರಿರಬೇಕು. ಆ ಜಲಧಿ (ಕ್ಷೀರಸಮುದ್ರ) ಸಂಬಂಧದಿಂದ ಬಂದ ಜಡಬುದ್ಧಿಯು ನಿನ್ನ ಬುದ್ಧಿಯನ್ನು ತೊಲಗಿಸಿರಬೇಕು. ಅಲ್ಲದಿದ್ದರೆ ನೀನು ಈ ಮೋಸದ ಮಾತನ್ನು ಆಡುತ್ತಿದ್ದೆಯಾ ೪೫. ಹರಿದುಹೋದ (ಕತ್ತರಿಸಿಹೋಗಿರುವ) ಸಂಬಂಧವುಳ್ಳ ಶತ್ರುಗಳನ್ನು ಸಂಪೂರ್ಣವಾಗಿ ನಾಶಮಾಡುವುದಕ್ಕೆ ಅವಕಾಶಕೊಡದೆ ಅವರ ಮೊದಲ ಉನ್ನತಸ್ಥಿತಿಯಲ್ಲಿ ಪುನಃ ಸ್ಥಾಪಿಸಲು ಮನಸ್ಸು ಮಾಡಿದ್ದೀಯೆ. ನೀನು ಹೇಳಿದ ಧರ್ಮಶ್ರವಣವು ನನಗೆ ಹಿಡಿಸುವುದಿಲ್ಲವಲ್ಲವೆ ? ೪೬. ಭೂಭಾಗವನ್ನು ಕೊಡೆಂದು ಆಶೆಪಟ್ಟು ಕೇಳಿಕೊಳ್ಳುವುದು ನೀನು ಮೊದಲಿಂದ ಕಲಿತ ವಿದ್ಯೆ. ನೀನು ಯಾವಾಗಲೂ ಬೇಡುವ ಸ್ವಭಾವವುಳ್ಳವನು ತಾನೆ. ಈಗ ನನಗೆ ಭೂಮಿಯೆಂಬ ಸ್ತ್ರೀಯು ಕುಲವಧುವಿನಂತೆ ಒಬ್ಬನೇ ಅನುಭವಿಸುವುದಕ್ಕೆ ಯೋಗ್ಯಳಾದವಳು ಮತ್ತೊಬ್ಬರೊಡನೆ ಜೊತೆಗೂಡಿ ಇರುವವಳಲ್ಲ. ಅದು ಹೇಗೆಂದರೆ ಮೊದಲು ಕತ್ತರಿಸಿ ಪೋದ ನೂಲಿನಂತೆ ತಿರುಗಿ ಸೇರಿಸಲಾಗದುದು. ಕೆಟ್ಟು ಹೋದವರನ್ನು ಪುನಃ

ಮ॥ ವಿಜಿಗೀಷುತ್ವದೊಳೊಂದಿ ಗೋವುಳಿಗನಪ್ಪಂ ಮತ್ಸ್ಯನಾಳಾಗಿ ವಾ
ರಿಜನಾಭಂ ಹರಿಯೆಂಬ ದೊಡ್ಡಿವೆಸರಂ ಪೊತ್ತಿರ್ದ ನೀಂ ಮಂತ್ರಿಯಾ ।
ಗೆ ಜಯೋದ್ಯೋಗಮನೆತ್ತಿಕೊಂಡು ರಣದೊಳ್ ಭೂಭಾಗಮಂ ನೆಟ್ಟನೊ
ಟ್ಟಜೆಯಿಂದಂಜಿಸಿಕೊಳ್ಳದಿರ್ಪರೆ ಸಮಂತಾ ಗಂಡರೀ ಗಂಡರಂ ॥ ४೭

ಚಂ॥ ಪುಸಿಯೆನೆ ಸಾಮಮಂ ನುಡಿದು ಭೇದಮನುಂಟೊಡತಾಗೆ ಮಾಡಿ ಛಿ
ದ್ರಿಸಲೊಳಪೊಕ್ಕು ಮಿಕ್ಕು ನೆಗಳ್ದುಗ್ರವಿರೋಧಿಗಳೆತ್ತಮೆಯ್ದೆ ಬಂ ।
ಚಿಸಿ ಪೊಱಗಣ್ಗೆ ಸಯ್ದರೆನೆ ತಾವೊಳಗಂ ತವೆ ತೋಡಿ ತಿಂದು ರ
ಕ್ಕಸಿಯರ ಕಂಡ ಕುಂಬಳದ ಮಾೞ್ಕೆವೊಲಾಗಿರೆ ಮಾಡದಿರ್ಪರೇ ॥ ४೮

ವ॥ ನಾಮೆಲ್ಲಮೊಂದೆ ಗರುಡಿಯೊಳೋದಿದ ಮಾನಸರೆವೆಮ್ಮಂ ನಿಮ್ಮಡಿ ಕೆಮ್ಮನೆ ಬೞಲಿಸಲ್ವೇಡ ಬಂದ ಬಟ್ಟೆಯಿನೆ ಬಿಜಯಂಗೆಯ್ಯಿಮೆನೆ ಮುರಾಂತಕನಂತಕನಂತೆ ಮಾಮಸಕಂ ಮಸಗಿ ದುರ್ಯೋಧನನನಿಂತೆಂದಂ–

ಉ॥ ಸೀತೆಯ ದೂಸಱಿಂದಟಿದ ರಾವಣನಂತಿರ ನೀನುಮೀಗಳೀ
ಸೀತೆಯ ದೂಸಱಿಂದಟಿಯಲಾಟಿಸಿದ್ಧೆ ನಿನಗಂತು ಸೀತೆಯೇ ।
ಸೀತೆ ಕಡಂಗಿ ಕಾಯ್ದು ಕಡೆಗಣ್ಚಿದಳಪ್ಪೊಡೆ ಧಾತ್ರನಿಂ ತೊದ
ಳ್ವಾತಿನೊಳೇನೊ ಪಾಂಡವರ ಕೆಯ್ಯೊಳೆ ನಿನ್ನ ನಿಸೇಕಮಾಗದೇ ॥ ४೯

ಸ್ಥಾಪಿಸುವುದಕ್ಕೆ ನಾನು ದಡ್ಡನೇ ? ४೭. ಗೋವಳಿಗನಾಗಿದ್ದು ಜಯಾಕಾಂಕ್ಷೆಯಿಂದ ಕೂಡಿ ವಿರಾಟನ ಸೇವಕನಾಗಿ (ಮನುಷ್ಯನ ಆಳಾಗಿ) ಕಮಲನಾಭ, ಹರಿ, ಎನ್ನುವ ದೊಡ್ಡ ಹೆಸರನ್ನು ಹೊತ್ತಿರುವ ನೀನು ಮಂತ್ರಿಯಾಗಿರಲು ಆ ಶೂರರಾದ ಪಾಂಡವರು ಜಯೋದ್ಯೋಗವನ್ನು ಹೂಡಿ (ಯುದ್ಧದಲ್ಲಿ ಗೆಲ್ಲುವ ಕಾರ್ಯದಲ್ಲಿ ತೊಡಗಿ) ಶೂರರಾದ ನಮ್ಮನ್ನು ಪರಾಕ್ರಮದಿಂದ ಹೆದರಿಸಿ ಯುದ್ಧದಲ್ಲಿ ನೇರವಾಗಿ ಭೂಮಿಯ ಭಾಗವನ್ನು ಪೂರ್ಣವಾಗಿ ಪಡೆಯದೇ ಇರುತ್ತಾರೆಯೇ ? ४೮. ಸುಳ್ಳು ಸಾಮವನ್ನು ಹೇಳಿ, ಕೂಡಲೆ ಭೇದವನ್ನುಂಟುಮಾಡಿ, ಛಿದ್ರಿಸಲು ಒಳಹೊಕ್ಕು, ಉಗ್ರ ವಿರೋಧಿಗಳಾದ ನೀವು ಎಲ್ಲ ರೀತಿಯಿಂದಲೂ ವಂಚನೆಮಾಡಿ ರಾಕ್ಷಸಿಯರು ನೋಡಿದ ಕುಂಬಳದ ಕಾಯಿಯಂತೆ ಹೊರಗಡೆ ಮಾತ್ರ ಸರಿಯಾದವರಂತೆ ತೋರಿ ಒಳಗೆಯೆ ಕೇಡನ್ನು ಮಾಡದಿರುತ್ತೀರಾ ? ವ॥ ನಾವೆಲ್ಲ ಒಂದೇ ಗರಡಿಯಲ್ಲಿ ಕಲಿತ ಮನುಷ್ಯರಾಗಿದ್ದೇವೆ. ನೀವು ನಮ್ಮನ್ನು ವೃಥಾ ಆಯಾಸಪಡಿಸಬೇಡಿ ; ಬಂದ ದಾರಿಯಲ್ಲಿ ಬಿಜಯಮಾಡಿಸಿ ಎಂದನು. ಕೃಷ್ಣನು ಯಮನಂತೆ ವಿಶೇಷವಾಗಿ ಕೋಪಿಸಿಕೊಂಡು ದುರ್ಯೋಧನನಿಗೆ ಹೀಗೆಂದನು. ४೯. ಸೀತಾದೇವಿಯ ಕಾರಣದಿಂದ ನಾಶವಾದ ರಾವಣನ ಹಾಗೆ ಈಗ ನೀನೂ ಕೂಡ ರಾಜ್ಯದ (ಭೂಮಿಯ) ಆಸೆಯಿಂದ ನಾಶವಾಗಲು ಆಶಿಸುತ್ತಿದ್ದೀಯೆ ; ನಿನಗೆ ಈ ಸೀತೆ (ಭೂಮಿಯು) ಆ ಸೀತೆಯೇ ಆಗಿದ್ದಾಳೆ. (ನಾಶಕಾರಕಳು). ಉತ್ಸಾಹಿಸಿ ಕೋಪದಿಂದ ನಿನ್ನನ್ನು ಭೂಮಿಯು ತಿರಸ್ಕರಿಸುವುದಾದರೆ ಬ್ರಹ್ಮನ ಸಹಾಯದಿಂದಲೇ ಪಾಂಡವರ ಕಯ್ಯಿಂದಲೇ ನಿನಗೆ ನಿಷೇಕ (ಶಾಸ್ತಿ, ಪ್ರಸ್ತುತ) ಆಗದಿರುತ್ತದೆಯೇ ? ಅಡ್ಡ

ಆರ್ಕಡುಕೆಯ್ದು ಪಾಂಡವರೊಳಾಂತಿಟಿಯಲ್ ನೆರೆವನ್ನರಿಂತಿದೇ
ತರ್ಕೆ ಬಿಗುರ್ತಪೈ ನೆಲನೊಪ್ಪಿಸಿ ತಪ್ಪದೆ ಬಾಳ್ವೆನೆನ್ನದೀ ।
ಯುರ್ಕಿನೊಳಿಂತು ನಿಂದು ಸೆಣಸಲ್ ಬಗೆ ಬಂದುದು ನಿನ್ನ ಮೆಯ್ಯ ನೆ
ತ್ತರ್ಕುದಿದುರ್ಕಿ ಸಾವ ಬಗೆಯಿಂ ಸೆಣಸಲ್ ಬಗೆ ಬಂದುದಾಗದೇ ॥ ೫೦

ಕಂ॥ ಮುಳಿಯಿಸಿ ಬರ್ದುಂಕಲಾದನು
ಮೊಳನೆ ಯುಧಿಷ್ಠಿರನನಮಳರಳವೆಂಬುದು ಭೂ ।
ವಳಯ ಪ್ರಸಿದ್ಧಮರಿನೃಪ
ಬಳಂಗಳವರಿಜೆಯೆ ಪೆಳಱಿವೆಂಬರುಮೊಳರೇ ॥ ೫೧

ಚಂ॥ ಗಜೆಗೊಳೆ ಭೀಮಸೇನನಿದಿರಾಂತು ಬರ್ದುಂಕುವ ವೈರಿ ಭೂಭುಜ
ಧ್ವಜಿನಿಗಳಿಲ್ಲದಲ್ಲದೆಯುಮೀ ಯುವರಾಜನ ನೆತ್ತರಂ ಕುರು ।
ಧ್ವಜಿನಿಯೆ ನೋಡೆ ಪೀರ್ದು ಭವದೂರುಯುಗಂಗಳನಾಜಿರಂಗದೊಳ್
ಗಿಜಿಗಿಜಿ ಮಾಡಲೆಂದವನ ಪೂಣ್ಬುದು ನಿಕ್ಕುವಮಾಗದಿರ್ಕುಮೇ ॥ ೫೨

ವ॥ ಅದಲ್ಲದೆಯುಂ ರಾಜಸೂಯ ವ್ಯತಿಕರದೊಳ್ ದಿಗ್ವಿಜಯಂ ಗೆಯ್ದು ಲಂಕೆಯ ವಿಭೀಷಣನನೊಂದೆ ದಿವ್ಯಾಸ್ತ್ರದೊಳೆಚ್ಚು ಕಪ್ಪಂಗೊಂಡ ವಿಕ್ರಮಾರ್ಜುನನ ವಿಕ್ರಮಮುಮಂ ಕಾಪಿನ ದೇವರೊಂದು ಪೊಟ್ಟುಮಗಲದ ನೂಱು ಯೋಜನದಳವಿ ಖಾಂಡವವನಮನನಲಂ

ಮಾತುಗಳಿಂದಲೇನು ಪ್ರಯೋಜನ ೫೦. ಪಾಂಡವರನ್ನು ಪ್ರತಿಭಟಿಸಿ ಯುದ್ಧಮಾಡಲು ಯಾರು ಸಮರ್ಥರು ? ಹೀಗೇಕೆ ಉಬ್ಬಿಹೋಗಿದ್ದೀಯೆ ? ಅವರಿಗೆ ಸಲ್ಲಬೇಕಾದ ಭೂಮಿಯನ್ನು ಒಪ್ಪಿಸಿ ತಪ್ಪದೆ (ಶಾಶ್ವತವಾಗಿ) ಬದುಕುತ್ತೇನೆ ಎನ್ನದೆ ಹೀಗೆ ಅಹಂಕಾರದಿಂದ ಪ್ರತಿಭಟಿಸಿ ಸೆಣಸಲು ಹೇಗೆ ನಿನಗೆ ಮನಸ್ಸು ಬಂದಿತು ? ನಿನ್ನ ಶರೀರದ ರಕ್ತ ಕುದಿದು ಉಕ್ಕಿ ಸಾಯುವ ಇಚ್ಛೆಯಿಂದಲೇ ಯುದ್ಧಮಾಡಲು ನಿನಗೆ ಮನಸ್ಸು ಬಂದಿರಬೇಕಲ್ಲವೇ ? ೫೧. ಧರ್ಮರಾಜನಿಗೆ ಕೋಪ ಬರುವ ಹಾಗೆ ಮಾಡಿ ಬದುಕಬಲ್ಲವನೂ ಇದ್ದಾನೆಯೇ ? ಯಮಳರಾದ ನಕುಲಸಹದೇವರ ಪರಾಕ್ರಮವೆಂಬುದು ಲೋಕಪ್ರಸಿದ್ಧವಾದುದು. ಅವರು ಯುದ್ಧಮಾಡಲು, ಹೆದರೆವು ಎನ್ನುವ ಶತ್ರುಗಳೂ ಉಂಟೆ ? ೫೨. ಭೀಮಸೇನನು ಗದೆಯನ್ನು ಹಿಡಿಯಲು ಪ್ರತಿಭಟಿಸಿ ಬದುಕುವ ಶತ್ರುಸೈನ್ಯವಿಲ್ಲ ? ಅದೂ ಅಲ್ಲದೆ ಈ ಯುವರಾಜನಾದ ದುಶ್ಶಾಸನನ ರಕ್ತವನ್ನು ಕೌರವಸೈನ್ಯವು ನೋಡುತ್ತಿರುವ ಹಾಗೆಯೇ ಹೀರಿ ನಿನ್ನ ಎರಡು ತೊಡೆಗಳನ್ನೂ ಯುದ್ಧಭೂಮಿಯಲ್ಲಿ ಅಜ್ಜಿಗುಜ್ಜಿ ಮಾಡುತ್ತೇನೆಂದು ಅವನು ಪ್ರತಿಜ್ಞೆ ಮಾಡಿದುದು ನಿಜವಾಗದೇ ಹೋಗುತ್ತದೆಯೇ ? ವ॥ ಅದಲ್ಲದೆ ರಾಜಸೂಯದ ಸಂದರ್ಭದಲ್ಲಿ ದಿಗ್ವಿಜಯವನ್ನು ಮಾಡಿ ಲಂಕಾಪಟ್ಟಣದ ವಿಭೀಷಣನನ್ನು ಒಂದೇ ದಿವ್ಯಾಸ್ತ್ರದಿಂದ ಹೊಡೆದು ಕಪ್ಪವನ್ನು ತೆಗೆದುಕೊಂಡ ವಿಕ್ರಮಾರ್ಜುನನ ಪರಾಕ್ರಮವನ್ನು, ರಕ್ಷಣೆಗೋಸ್ಕರ ಇದ್ದ ದೇವತೆಗಳು ಒಂದು ಹೊತ್ತೂ ಅಗಲದಿದ್ದ ನೂರು ಯೋಜನ ವಿಸ್ತಾರದ ಖಾಂಡವವನವನ್ನು ಅಗ್ನಿಗೆ ಸಮರ್ಪಿಸಿದ ಅರಾತಿಕಾಳಾನಳನ ಶಕ್ತಿಯನ್ನೂ, ಯಮನನ್ನೂ ಶ್ರಮವಿಲ್ಲದೆ ಗೆದ್ದು ಬ್ರಾಹ್ಮಣನ ಮಗನ ಹೋಗಿದ್ದ ಪ್ರಾಣವನ್ನು ತಂದ

**ಗೂಡಿದರಾತಿಕಾಳಾನಳನಳವುವಂ ಜವನನವಯುವದೊಳ್ ಗೆಲ್ದು ಪಾರ್ವರ ಪಿಳ್ಳೆಯ ಪೋದ ಪ್ರಾಣಮಂ ತಂದ ಸಾಹಸಾಭರಣನ ಸಾಹಸಮುಮನಿಂದ್ರಕೀಲ ನಗೇಂದ್ರದೊಳಿಂದ್ರನ ಬೆಸದೊಳ್ ತಪೋವಿಘಾತಂ ಮಾಡಲೆಂದು ಬಂದ ಪುರಂದರನ ಗಣಿಕೆಯರ ಕಡೆಗಣ್ಣ ನೋಟಕ್ಕಂ ಕಾಟಕ್ಕ ಮಳ್ಕದ ಶೌಚಾಂಜನೇಯನ ಶೌಚಮುಮಂ ದಾನವಾಧಿಪನಪ್ಪ ಮೂಕದಾನವ ಸೂಕರನನೊಂದೆ ಸೂಟಿಂಬನೊಳೆಚ್ಚು ಕೊಂದ ಪರಾಕ್ರಮಧವಳನ ಪರಾಕ್ರಮಮುಮಂ ತ್ರಿಣೇತ್ರನೊಳ್ ಕಾದಿ ಪಾಶುಪತಾಸ್ತ್ರಮಂ ಪಡೆದ ಕದನತ್ರಿಣೇತ್ರನ ಗಂಡಗರ್ವಮುಮನಿಂದ್ರಲೋಕಕ್ಕೆ ಪೋಗಿ ದೇವೇಂದ್ರನ ಪಗೆವರಪ್ಪ ನಿವಾತಕವಚ ಕಾಳಕೇಯ ಪೌಲೋಮ ತಳತಾಳುಕರೆಂಬ ದೈತ್ಯರಂ ಪಡಲ್ವಡಿಸಿದ ಪಡೆಮೆಚ್ಚೆ ಗಂಡನ ಗಂಡುಮಂ ದೇವೇಂದ್ರನೊಳರ್ಧಾಸನಮೇಱಿದ ಗುಣಾರ್ಣವನ ಮಹಿಮೆಯುಮಂ ಚಳುಕ್ಯಕುಳತಿಳಕನಪ್ಪ ವಿಜಯಾದಿತ್ಯಂಗೆ ಗೋವಿಂದರಾಜಂ ಮುಳಿಯೆ ತಳರದೆ ಪೆಱಗಿಕ್ಕಿ ಕಾದ ಶರಣಾಗತ ಜಳನಿಧಿಯ ಪೆಂಪುಮಂ ಗೊಜ್ಜಿಗನೆಂಬ ಸಕಲ ಚಕ್ರವರ್ತಿ ಬೆಸಸೆ ದಂಡುವಂದ ಮಹಾಸಾಮಂತರಂ ಮರಲಿಱಿದು ಗೆಲ್ದ ಸಾಮಂತ ಚೂಡಾಮಣಿಯ ಬೀರಮುಮನತಿವರ್ತಿಯಾಗಿ ಮಾರ್ಮಲೆವ ಚಕ್ರವರ್ತಿಯಂ ಕಿಡಿಸಿ ತನ್ನ ನಂಬಿ ಬಂದ ಬದ್ದೆಗ ದೇವಂಗೆ ಸಕಳ ಸಾಮ್ರಾಜ್ಯಮನೋರಂತು ಮಾಡಿ ನಿಱಿಸಿದರಿಕೇಸರಿಯ ತೋಳ್ವಲಮುಮಂ ಸಮದಗಜಘಟಾಟೋಪಂಬೆರಸು ನೆಲನದಿರೆವಂದು ತಾಗಿದ ಕಕ್ಕಲನ ತಮ್ಮನಪ್ಪ ಬಪ್ಪುವನಂಕಕಾಱನನೊಂದೆ ಮದಾಂಧಗಂಧಸಿಂಧುರದೊಳೋಡಿಸಿದ ವೈರಿಗಜಘಟಾ**

ಸಾಹಸಾಭರಣನ ಸಾಹಸವನ್ನೂ, ಇಂದ್ರಕೀಲಪರ್ವತದಲ್ಲಿ ಇಂದ್ರನ ಆಜ್ಞೆಯ ಪ್ರಕಾರ ತಪಸ್ಸಿಗೆ ವಿಘ್ನಮಾಡಬೇಕೆಂದು ಬಂದ ಇಂದ್ರನ ವೇಶ್ಯೆಯರ ಕಟಾಕ್ಷದೃಷ್ಟಿಗೂ ಅವರ ಹಿಂಸೆಗೂ ಹೆದರದ ಶೌಚಾಂಜನೇಯನ ಶುಚಿತ್ವವನ್ನೂ, ರಾಕ್ಷಸಾಧಿಪತಿಯಾದ ಮೂಕರಾಕ್ಷಸನೆಂಬ ಹಂದಿಯನ್ನು ಒಂದೇ ಸಲದ ಬಾಣದಲ್ಲಿ ಹೊಡೆದು ಕೊಂದ ಪರಾಕ್ರಮಧವಳನ ಪರಾಕ್ರಮವನ್ನೂ ಈಶ್ವರನಲ್ಲಿ ಕಾದಿ ಪಾಶುಪತಾಸ್ತ್ರವನ್ನು ಪಡೆದ ಕದನತ್ರಿಣೇತ್ರನ ಪೌರುಷಾಹಂಕಾರವನ್ನೂ ಇಂದ್ರಲೋಕಕ್ಕೆ ಹೋಗಿ ದೇವೇಂದ್ರನ ಶತ್ರುಗಳಾಗಿದ್ದ ನಿವಾಚಕವಚ, ಕಾಳಕೇಯ, ಪೌಳೋಮ, ತಳತಾಳುಕರೆಂಬ ರಾಕ್ಷಸರನ್ನು ಕೆಳಗೆ ಬೀಳುವ ಹಾಗೆ ಮಾಡಿದ ಪಡೆಮೆಚ್ಚೆಗಂಡನ ಪೌರುಷವನ್ನೂ, ದೇವೇಂದ್ರನಲ್ಲಿ ಅರ್ಧಾಸನವನ್ನು ಪಡೆದ ಗುಣಾರ್ಣವನ ಮಹಿಮೆಯನ್ನೂ, ಚಾಳುಕ್ಯಕುಲತಿಲಕನಾದ ವಿಜಯಾದಿತ್ಯನಿಗೆ ಗೋವಿಂದರಾಜನು ಪ್ರತಿಭಟಿಸಲು ಅವನನ್ನು ಸಾವಕಾಶಮಾಡದೆ ಹಿಂದಕ್ಕೆ ನೂಕಿ ರಕ್ಷಿಸಿದ ಶರಣಾಗತ ಸಮುದ್ರನ ಮಹಿಮೆಯನ್ನೂ ಗೊಜ್ಜಿಗನೆಂಬ ಸಕಲಚಕ್ರವರ್ತಿಯು ಆಜ್ಞೆಮಾಡಲು ದಂಡೆತ್ತಿಬಂದ ಮಹಾಸಾಮಂತರನ್ನೆಲ್ಲ ಹಿಮ್ಮೆಟ್ಟುವಂತೆ ಹೊಡೆದು ಗೆದ್ದ ಸಾಮಂತ ಚೂಡಾಮಣಿಯ ವೀರ್ಯವನ್ನೂ, ಎಲ್ಲೆ ಮೀರಿ ಪ್ರತಿಭಟಿಸುವ ಚಕ್ರವರ್ತಿಯನ್ನು ಹಾಳುಮಾಡಿ ತನ್ನನ್ನೇ ನಂಬಿ ಬಂದ ಬದ್ದೆಗದೇವನಿಗೆ ಸಕಲಸಾಮ್ರಾಜ್ಯವನ್ನು ಏಕಪ್ರಕಾರವಾಗಿ ಮಾಡಿ ಸ್ಥಾಪಿಸಿದ ಅರಿಕೇಸರಿಯ ತೋಳ ಬಲವನ್ನು ಮದ್ದಾನೆಗಳ ಗುಂಪಿನ ಆರ್ಭಟದಿಂದ ಕೂಡಿ ಭೂಮಿಯು ನಡುಗುವಂತೆ ಬಂದು ತಾಗಿದ ಕಕ್ಕಲನ ತಮ್ಮನಾದ ಬಪ್ಪುವನೆಂಬ ಜಟ್ಟಿಯನ್ನು ಒಂದೇ ಮದ್ದಾನೆಯಿಂದ ಓಡಿಸಿದ ವೈರಿಗಜಘಟಾವಿಘಟನಪಟುವಾದ

ವಿಘಟನನದಟುಮಂ ಪರಚಕ್ರಂಗಳನಂಜಿಸಿದ ಪರಸೈನ್ಯ ಭೈರವನ ಮೇಗಿಲ್ಲದ ಬಲ್ಲಾಳ್ತನಮುಮಂ ಕಂಡುಂ ಕೇಳ್ದುಂ ನಿನಗೆ ಸೆಣಸಲೆಂತು ಬಗೆ ಬಂದಪುದು-

ಉ॥ ನೆಟ್ಟನೆ ಬೂತುಗೊಳ್ವ ತೆಱದಿಂ ದಶಕಂಧರನಾಡಿ ಪಾಡಿ ನಾ
ಣ್ಗೆಟ್ಟರೆ ಕೊಂಡನಲ್ಲದೆ ಬರಂಗಳನೀಶ್ವರನಲ್ಲಿ ಪೇಟಿಮಾ ।
ಪೊಟ್ಟಜೆಯಿಂದೆ ಕೊಂಡನೆನುತುಂ ವಿಜಯಂ ನೆಲಕಿಕ್ಕಿ ಗಂಟಲಂ
ಮೆಟ್ಟದೆ ಕೊಂಡನೇ ಹರನ ಪಾಶುಪತಾಸ್ತ್ರಮನಿಂದ್ರಕೀಲದೊಳ್ ॥ ೫೩

ಪೊಂಗಿ ಕಡಂಗಿ ಬೀರದೊಳೆ ಬೀಗುವ ನಿನ್ನಣುಗಾಳೆ ನೋಡೆ ನಿ
ನ್ನಂಗನೆಯರ್ ತೊವಲ್ಗೊಳೆ ಭಯಂಗೊಳೆ ಕೋಡಗಗಟ್ಟುಗಟ್ಟಿ ಚಿ ।
ತ್ರಾಂಗದನುಯ್ಯೆ ನಿನ್ನನೆಡೆಮಾಡದಸುಂಗೊಳೆ ಕಾದಿ ತಂದ ವೀ
ರಂಗರಿಗಂಗೆ ನೀಂ ಮಲೆದು ನಿಲ್ವುದು ಪಾಟಿವಲಂ ಸುಯೋಧನಾ ॥ ೫೪

ಮ॥ ಸ್ರ ॥ ಗುರುವಿಲ್ಲಾ ಕರ್ಣನಿಲ್ಲಾ ಗುರುವಿನ ಮಗನಿಲ್ಲಾ ಕೃಪಾಚಾರ್ಯನಿಲ್ಲಾ
ಕುರುರಾಜಾ ನಿನ್ನ ತಮ್ಮಂದಿರೊಳೆನಿಬರೊಳಾರಿಲ್ಲ ಗಾಂಗೇಯನಿಲ್ಲಾ ।
ಮರುಳೇ ಗಾಂಡೀವಿಯಾರೆಂದೆಣಿಕೆಗಳೆವೆ ಗಂಧರ್ವರುಯ್ವಂದು ನಿನ್ನಂ
ಕರುವಿಟ್ಟಂತಿರ್ದುದಿಲ್ಲಾ ನೆರೆದ ಕುರುಬಲಂ ತಂದವಂ ಪಾರ್ಥನಲ್ಲಾ ॥ ೫೫

(ಶತ್ರುಗಳ ಆನೆಯ ಸಮೂಹವನ್ನು ಒಡೆದುಹಾಕುವ ಶಕ್ತಿಯುಳ್ಳ) ಅರ್ಜುನನ ಪರಾಕ್ರಮವನ್ನೂ, ಶತ್ರುಸೈನ್ಯವನ್ನು ಹೆದರಿಸಿದ ಪರಸೈನ್ಯಭೈರವನ ಅತಿಶಯವಾದ ಪೌರುಷವನ್ನೂ ಕಂಡೂ ಕೇಳಿಯೂ ನಿನಗೆ ಹೋರಾಡಲು ಹೇಗೆ ಮನಸ್ಸು ಬರುತ್ತದೆ. ೫೩. ದುರ್ಯೋಧನ ! ರಾವಣನು ಸಾಮಾನ್ಯವಾದ ಬಡಪ್ರಾಣಿಯಂತೆ ಹಾಡಿ ಪಾಡಿ ಬೇಡಿ ನಾಚಿಕೆಯಾಗುವ ರೀತಿಯಲ್ಲಿ ಈಶ್ವರನಿಂದ ವರಗಳನ್ನು ಪಡೆದನಲ್ಲದೆ ತನ್ನ ಪರಾಕ್ರಮದಿಂದ ತೆಗೆದುಕೊಂಡನೆ ಹೇಳು. ಅರ್ಜುನನಾದರೋ ಶಿವನನ್ನು ನೆಲಕ್ಕೆ ತಳ್ಳಿ ಗಂಟಲನ್ನು ಮೆಟ್ಟದೆ ಈಶ್ವರನ ಪಾಶುಪತಾಸ್ತ್ರವನ್ನು ಇಂದ್ರಕೀಲಪರ್ವತದಲ್ಲಿ ತೆಗೆದುಕೊಂಡನೆ ? (ಅರ್ಜುನನು ತನ್ನ ಪರಾಕ್ರಮದಿಂದಲೇ ಈಶ್ವರನಿಂದ ಅಸ್ತ್ರವನ್ನು ಪಡೆದುದರಿಂದ ರಾವಣನಿಗಿಂತ ಇವನು ಪರಾಕ್ರಮಿ ಎಂದರ್ಥ.) ೫೪. ಕೊಬ್ಬಿ ಉತ್ಸಾಹಿಸಿ ಶೌರ್ಯದಿಂದ ಅಹಂಕಾರಪಡುವ ನಿನ್ನ ಪ್ರೀತಿಪಾತ್ರರಾದ ಯೋಧರೇ ನೋಡುತ್ತಿರಲು ನಿನ್ನ ಸ್ತ್ರೀಯರು ತಮ್ಮ ಅಪಾಯವನ್ನು ಸೂಚಿಸುವ ಚಿಗುರನ್ನು ಹಿಡಿದುಕೊಂಡು ಹೆದರಿರಲು ಚಿತ್ರಾಂಗದನೆಂಬ ಗಂಧರ್ವನು ನಿನ್ನನ್ನು ಕೋಡಗವನ್ನು ಕಟ್ಟುವಂತೆ ಕಟ್ಟಿ ತೆಗೆದುಕೊಂಡು ಹೋಗುತ್ತಿರಲು ತಡಮಾಡದೆ ಪ್ರಾಣವನ್ನೇ ಸೆಳೆಯುವಂತೆ ಕಾದಿ ತಂದ ವೀರನಾದ ಅರ್ಜುನನಿಗೆ ಮಲೆತು ನೀನು ಪ್ರತಿಭಟಿಸಿ ನಿಲ್ಲುವುದು ಕ್ರಮವಲ್ಲವೇ ದುರ್ಯೋಧನ? ೫೫. ನಿನ್ನನ್ನು ಗಂಧರ್ವರು ಸೆಳೆದುಕೊಂಡು ಹೋದಾಗ ದ್ರೋಣಾಚಾರ್ಯರಿಲ್ಲ, ಕರ್ಣನಿಲ್ಲ, ಅಶ್ವತ್ಥಾಮನಿಲ್ಲ, ಕೃಪಾಚಾರ್ಯನೂ ಇಲ್ಲ, ನಿನ್ನ ಇಷ್ಟು ಜನ ತಮ್ಮಂದಿರಲ್ಲಿ ಯಾರೂ ಇಲ್ಲ, ಭೀಷ್ಮನೂ ಇಲ್ಲ. ಯಾರೂ ಸಮಯಕ್ಕಾಗಲಿಲ್ಲ. ಬುದ್ಧಿಯಿಲ್ಲದವನೇ ಅರ್ಜುನನು ಯಾರೆಂದು ಕೀಳಾಗಿ ನುಡಿಯುತ್ತಿರುವೆ ? ಕುರುಸೈನ್ಯವು ಎರಕಹೊಯ್ದಂತೆ ಸ್ತಬ್ಧವಾಗಿತ್ತಲ್ಲವೆ ? ನಿನ್ನನ್ನು

ಮ॥ ಬವರಂಗೆಯ್ವಮೋಘಮೆಂಬ ಬಗೆಯಿಂ ನೀಮೆಲ್ಲಮಾದಂ ರಣೋ
ತ್ಸವದಿಂ ನಿನ್ನೆಯೆ ಪೋದ ಗೋಗ್ರಹಣದಂದೇನಾದಿರಂತಾ ಪರಾ ।
ಭವಮಂ ಚೀ ಮಱೆದಿರ್ದಿರಪ್ಪೊಡಮದೇನೇವೋದುದಿನ್ನುಂ ಗುಣಾ
ರ್ಣವನಿಂ ನಾಳೆಯೆ ಕೇಳದಿರ್ಪಿರೆ ಮಹಾ ಗಾಂಡೀವ ನಿರ್ಘೋಷಮಂ ॥ ೫೬

ಚಂ॥ ಸುರಿವ ಸರಲ್ ನರಲ್ವ ಭಟರೆತ್ತಮುರುಳ್ವ ದಟಿಂ ಪೊರಳ್ವ ಸಿಂ
ಧುರ ಘಟೆ ಬರ್ಪ ನೆತ್ತರ ಕಡಲ್ ಕುಣಿವಟ್ಟೆಗಳಾಜಿಯೊಳ್ ಭಯಂ ।
ಕರತರಮಪ್ಪಿನಂ ಪಗೆವರೊಕ್ಕಲೊಳೋವೆನಲೊರ್ವರಿಲ್ಲದಂ
ತಿರೆ ತವೆ ಕೊಲ್ಗುಮಂತುಮರಿಕೇಸರಿಗಾಂತು ಬರ್ದುಂಕಲಕ್ಕುಮೇ ॥ ೫೭

ವ॥ ಎಂದು ಕಾಳನೀಳಮೇಘದಂತು ಮುಸಗಿ ಗರ್ಜಿಸುವಸುರಕುಳವಿಷಯಕೇತುಗೆ ಫಣಿಕೇತು ಮುಳಿದು ತಳಮಳಿಸಿ ಕಣ್ಣಾಣದೆ-

ಕಂ॥ ಎೞ್ದೋಗು ದೂತನಪ್ಪನ
ಬೆಟ್ಟಿನ ನುಡಿಗೇಳ್ದು ಮುಳಿಯಲಾಗದು ನೀನುಂ ।
ಮೆಟ್ಟಟ್ಟು ವಿದುರನೆಂಬೀ
ತೊೞ್ತುವುಟ್ಟಿಯ ಮನೆಯ ಕೂೞ್ ನುಡಿಯಿಸೆ ನುಡಿದೈ ॥ ೫೮

ವ॥ ಎನೆ ವಿದುರನತಿಕುಪಿತಮನನಾಗಿ-

ಬಿಡಿಸಿ ತಂದವನು ಅರ್ಜುನನಲ್ಲವೇ? ೫೬. ಉತ್ತಮರೀತಿಯಲ್ಲಿ ಯುದ್ಧಮಾಡೋಣ ಎಂಬ ಮನಸ್ಸಿನಿಂದ ನೀವೆಲ್ಲರೂ ವಿಶೇಷಾಸಕ್ತಿಯಿಂದ ಬಂದು ನಿನ್ನೆ ನಡೆದ ಪಶುಗಳನ್ನು ಹಿಡಿಯುವ ಸಂದರ್ಭದಲ್ಲಿ ಏನಾದಿರಿ? ಆಗುಂಟಾದ ಸೋಲನ್ನು ಚೀ ಮರೆತಿರುವಿರಾದರೆ ಏನಂತೆ ? ಇನ್ನೂ ಗುಣಾರ್ಣವನಾದ ಅರ್ಜುನನಿಂದ ನಾಳೆಯೇ ಮಹಾಗಾಂಡೀವದ ಟಂಕಾರ ಶಬ್ದವನ್ನು ಕೇಳದಿರುತ್ತೀರಾ? ೫೭. ಸುರಿಯುವ ಬಾಣಗಳು, ನರಳುತ್ತಿರುವ ಯೋಧರು, ಉರುಳುತ್ತಿರುವ ಸೈನ್ಯ, ಹೊರಳುವ ಆನೆಗಳ ಸಮೂಹ, ಹರಿದು ಬರುತ್ತಿರುವ ರಕ್ತಸಮುದ್ರ, ಕುಣಿವ ತಲೆಯಿಲ್ಲದ ಮುಂಡಗಳು, ಯುದ್ಧದಲ್ಲಿ ಭಯಂಕರವಾಗುವ ಹಾಗೆ ಶತ್ರುಶಿಬಿರದಲ್ಲಿ ಓ ಎನ್ನುವುದಕ್ಕೆ ಒಬ್ಬರೂ ಇಲ್ಲದಂತೆ ಸಂಪೂರ್ಣವಾಗಿ ಕೊಲ್ಲುತ್ತಾನೆ. ಹಾಗೆ ಅರಿಕೇಸರಿಗೆ ಪ್ರತಿಭಟಿಸಿ ಬದುಕಲು ಸಾಧ್ಯವೇ? ವ॥ ಎಂದು ಪ್ರಳಯಕಾಲದ ಕಾರ್ಮೋಡದ ಹಾಗೆ ರೇಗಿ ಗರ್ಜನೆ ಮಾಡುವ ಕೃಷ್ಣನಿಗೆ ದುರ್ಯೋಧನನು ಕೋಪಿಸಿಕೊಂಡು ಕುದಿದು ಕುರುಡನಾದನು. ೫೮. "ಎದ್ದು ಹೋಗು ; ದೂತನಾದವನ ದಡ್ಡಮಾತನ್ನು ಕೇಳಿ ಕೋಪಿಸಬಾರದು. ನೀನು ಮೋಸಹೋಗಿ ವಿದುರನೆಂಬ ದಾಸೀಪುತ್ರನ ಮನೆಯ ಕೂಳಿನ ಕೊಬ್ಬು ಮಾತನಾಡಿಸಲು ನೀನು ಹೀಗೆ ಮಾತನಾಡಿದ್ದೀಯೆ. (ನೀಚ ಆಹಾರದ ಪ್ರಭಾವ ಇದು ಎಂದರ್ಥ) ವ॥ ಎನ್ನಲು ವಿದುರನು ವಿಶೇಷ ಕೋಪದಿಂದ ಕಿಡಿಕಿಡಿಯಾದನು.

ಕಂ॥ ಕಡು ಮುಳಿದು ನಿನ್ನ ತೊಡೆಗಳ
ನುಡಿವೆಡೆಯೊಳ್ ಭೀಮಸೇನನಾನಾ ಪದದೊಳ್ ।
ಪಿಡಿಯಲ್ಕೆಂದಿರ್ದೆನಿದಂ
ಪಿಡಿಯೆಂ ಪೋಗೆಂದು ಸಭೆಯೊಳುಡಿದಂ ಬಿಲ್ಲಂ ॥ ೫೯

ವ॥ ಅಂತು ವಿದುರಂ ವಿಚ್ಛಿದುರಮನನಾಗಿ ಬಿಲ್ಲನುಡಿವುದುಂ ಸುಯೋಧನಂ ತನ್ನ ಬಲದ ತೋಳುಡಿದಂತಾಗಿ ಸಿಗ್ಗಾಗಿ ಬಾಳಂ ಕಿೞ್ತೊದಱೆ ಮನದೊಳಾದೇವದಿಂ ದೇವಕೀನಂದನನ ಮೇಲೆವಾಯ್ವುದುಂ ಸಂಜೆನ ಮೇಲೆವಾಯ್ವ ಸೊಳವಿಸಂತುರುಳ್ತರೆ ಪಾಯ್ದು-

ಉ॥ ಮೂಱಡಿ ಮಾಡಿದಂದು ನೆಲನೆಲ್ಲಮನಾ ಬಲಿಗಾದ ರೂಪಮಂ
ತೋಱಿದನೀ ಜಗತ್ತ್ರಯಮನೊರ್ಮೆಯೆ ನುಂಗುವ ಕಾಲ ರೂಪಮಂ ।
ತೋಱಿದನಂತೆ ರೌದ್ರತರ ರೂಪಮನೊರ್ಮೆಯೆ ವಿಶ್ವರೂಪಮಂ
ತೋಱಿದನಿರ್ದರಂ ನೆಱೆಯೆ ಮೋಹಿಸಿ ವೈಷ್ಣವದಿಂ ಮುರಾಂತಕಂ ॥ ೬೦

ವ॥ ಆಗಳ್ ಧೃತರಾಷ್ಟ್ರಂ ಬಂದು ಮುಕುಂದನನೇಕಸ್ತುತಿಶತಸಹಸ್ರಂಗಳಿಂ ಸ್ತುತಿಯಿಸಿದೊಡುತಂಗೆ ವರದನಾಗಿ ದಿವ್ಯ ದೃಷ್ಟಿಯಂ ದಯೆಗೆಯ್ದು ಮುನ್ನಿನಂತೆ ಮನುಷ್ಯದೇಹಮಂ ಕೆಯ್ಕೊಂಡು ತ್ರೈಲೋಕ್ಯ ಗುರು ಗುರುತನೂಜನ ಕೆಯ್ಯಂ ಪಿಡಿದರಮನೆಯಿಂ ಪೊಱಮಟ್ಟು ಕಪಟ ಪ್ರಪಂಚದಿಂದಾತನುಮಂ ತನಗೆ ಮಾಡಿ ಬೀದಿಂಗೆ ವಂದು ಕುಂತಿಗೇಕಾಂತದೊಳಿಂತೆಂದಂ-

- ೫೯. ಎಲವೊ ದುರ್ಯೋಧನ, ಮುಂದೆ ಭೀಮಸೇನನು ವಿಶೇಷವಾಗಿ ಕೋಪಿಸಿಕೊಂಡು ನಿನ್ನ ತೊಡೆಯನ್ನು ಒಡೆಯುವ ಸಂದರ್ಭದಲ್ಲಿ ಇದನ್ನು ಪ್ರಯೋಗಿಸಬೇಕೆಂದಿದ್ದೆ. ಈಗ ಹಿಡಿಯುವುದಿಲ್ಲ ಹೋಗು ಎಂದು ಸಭೆಯಲ್ಲಿ ಎಲ್ಲರೆದುರಿಗೂ ಬಿಲ್ಲನ್ನು ಮುರಿದು ಹಾಕಿದನು. ವ॥ ಹಾಗೆ ವಿದುರನು ಭಗ್ನಮನಸ್ಕನಾಗಿ ಬಿಲ್ಲನ್ನು ಮುರಿದುಹಾಕಲು ದುರ್ಯೋಧನನಿಗೆ ತನ್ನ ಬಲತೋಳೇ ಛಿನ್ನವಾದಂತೆ ಆಯಿತು. ಅವಮಾನಿತನಾಗಿ ಒರೆಯಿಂದ ಕತ್ತಿಯನ್ನು ಸೆಳೆದು ಒದರಿ ಮನಸ್ಸಿನಲ್ಲುಂಟಾದ ಕೋಪದಿಂದ ಕೃಷ್ಣನ ಮೇಲೆ ಹಾಯಲು ದೀಪದ ಮೇಲೆ ಹಾಯುವ ನೊಣದಂತೆ ಉರುಳಿಬೀಳುವ ಹಾಗೆ ಹಾಯಲು-೬೦. ಶ್ರೀಕೃಷ್ಣನು ತನ್ನ ವಿಷ್ಣುಮಾಯೆಯಿಂದ ಸಭೆಯಲ್ಲಿದ್ದವರನ್ನೆಲ್ಲಾ ಪೂರ್ಣವಾಗಿ ಮೂರ್ಛೆಗೊಳಿಸಿ ಭೂಮಿಯನ್ನೆಲ್ಲ ಮೂರಡಿಯಾಗಿ ಅಳೆದಾಗ ಬಲಿಚಕ್ರವರ್ತಿಗೆ ತೋರಿದ ದೊಡ್ಡಆಕಾರವನ್ನು ತೋರಿಸಿದನು. ಈ ಮೂರು ಲೋಕಗಳನ್ನೂ ಒಂದೇ ಸಲಕ್ಕೆ ನುಂಗುವ ಪ್ರಳಯಕಾಲದ ರೂಪವನ್ನು ತೋರಿಸಿದನು. ಹಾಗೆಯೇ ಒಂದೇಸಲಕ್ಕೆ ವಿಶ್ವರೂಪವನ್ನು ತೋರಿಸಿದನು. ವ॥ ಆಗ ಧೃತರಾಷ್ಟ್ರನು ಬಂದು ನೂರಾರು ಸಾವಿರಾರು ಸ್ತೋತ್ರಗಳಿಂದ ಸ್ತುತಿಸಲು ಆತನಿಗೆ ವರಪ್ರದನಾಗಿ ದಿವ್ಯದೃಷ್ಟಿಯನ್ನು ದಯಪಾಲಿಸಿ ಮೊದಲಿನ ಮನುಷ್ಯರೂಪವನ್ನು ತಾಳಿ ಮೂರುಲೋಕದ ಗುರುವಾದ ಕೃಷ್ಣನು ಅಶ್ವತ್ಥಾಮನ ಕೈಹಿಡಿದು ಅರಮನೆಯಿಂದ ಹೊರಟು ಅವನನ್ನು ಕಪಟದಿಂದ ತನ್ನವನನ್ನಾಗಿ ಮಾಡಿಕೊಂಡು ಬೀದಿಗೆ ಬಂದು ಕುಂತೀದೇವಿಗೆ ರಹಸ್ಯವಾಗಿ ಹೀಗೆ

ಚಂ॥ ಗುರು ಕೃಪ ಶಲ್ಯ ಸಿಂಧುಸುತರಪ್ಪೊಡೆ ನಮ್ಮಯ ಪಕ್ಷಮೊಂದಿದಂ
ಗುರುಸುತನೀಗಳೆಮ್ಮೊಳಖಿಳಾಸ್ತ್ರ ವಿಶಾರದನಪ್ಪನುಂ ಗೆಲ ।
ಲ್ಕರಿಯನುಮೊಂದಿ ಬಾರವನುಮಂಕದ ಕರ್ಣನೆ ಬೀರಮಾತನಿಂ
ದುರಿವರಿದತ್ತು ಚಾಗಮವನಿಂದೆಸೆದತ್ತು ಸಮಸ್ತ ಧಾತ್ರಿಯೊಳ್ ॥ ೬೧

ಉ॥ ಎಂತೆನೆ ವಜ್ರ ವಜ್ರಕವಚಕ್ಕೆ ನಿಜೋಜ್ವಳಕುಂಡಳಕ್ಕೆ ಕೆ
ಯ್ಯಾಂತೊಡೆ ಪಾಂಡುಪುತ್ರರನೆ ಕಾದೆರೆಪಂದುಗಿವಂ ದಲೆಂದಿನಂ ॥
ಮಂತಣದಿಂದೆ ಬಾರಿಸೆಯುಮೆಂದುದನೆನ್ನದೆ ಮೀಱಿ ಕೊಟ್ಟನೋ
ರಂತು ಜಸಕ್ಕೆ ಸೋಂತು ಬಿಡೆ ನೇರ್ದೊಡಲೊಳ್ ತೊಡರ್ದಾ ತನುತ್ರಮಂ ॥ ೬೨

ಉ॥ ಬರವಂ ಬೇಡಿದರ್ಗೀವ ದೇವನೆ ವಲಂ ನಾಣ್ಗೆಟ್ಟು ಬಂದೆನ್ನನಿಂ
ತೆರೆದಂ ಬರ್ದರೊಳಾನೆ ಬರ್ದನೆನುತುಂ ನೇರ್ವಲ್ಲಿ ಕನ್ನೆತ್ತರುಂ ।
ಬಿರಿ ಕಂದಂಗಳೆ ಬೀಟಲುಗ್ಮೆ ಮನದೊಂದಣ್ಮೆಟ್ಟಳಂ ಪೊಣ್ಮೆ ಪೀ
ರರಸಕ್ಕಾಗರಮಾಯ್ತು ನೋಡೆ ಕವಚಂಗೊಂಡಂದಮಾ ಕರ್ಣನಾ ॥ ೬೩

ವ॥ ಅಂತು ಸಹಜಕವಚ ರತ್ನಕುಂಡಲಂಗಳಂ ನೆತ್ತರ್ ಪಸಪಸ ಪನಿಯೆ ತಿದಿಯುಗಿವಂತುಗಿದು ಕೊಟ್ಟುದರ್ಕೆ ಮೆಚ್ಚಿ ದೇವೇಂದ್ರನಾತಂಗಮೋಘಶಕ್ತಿಯನಿತ್ತನಾತನಂ ನಾನುಮೆನ್ನ ಬಲ್ಲ ಮಾಳ್ಕೆಯಿಂ ಭೇದಿಸಿದಪ್ಪೆಂ ನೀಮುಂ ನಿಮ್ಮ ಚೊಚ್ಚಲ ಮಗನಪ್ಪ ಸೂರ್ಯಸೂನುವಂ ಸೂರ್ಯದಿನದಂದು ಕಂಡು ಕಾರ್ಯಸಿದ್ಧಿಯಂ ಮಾಡಿ ಬನ್ನಿಮೆಂದು ಕೊಂತಿಯಂ ಬೀಱ್ಕೊಂಡು ಪರಕೆಯಂ ಕೈಕೊಂಡು ರಥಾಂಗಧರಂ ರಥಮನೇಱಿ ಕರ್ಣನ ಮನೆಯ ಮುಂದನೆ ಬಂದು ಮೇಲೆ ಬಿಟ್ಟಿದ್ದಮ್ಮಂ ಕಿಱಿದಂತರಂ ಕಳಿಪಿ ಮಗುೞ್ವಿ ಬಾ ಪೋಪಮೆಂದು ತನ್ನೊಡನೆ ರಥಮನೇಱಿಸಿಕೊಂಡುಪೋಗಿ ಮುಂದೊಂದೆಡೆಯೊಳ್ ನಿಂದು-

ಹೇಳಿದನು-೬೧. ಗುರು, ಕೃಪ, ಶಲ್ಯ, ಭೀಷ್ಮರಾದರೆ ನಮ್ಮ ಪಕ್ಷದವರೇ. ಈಗ ಅಶ್ವತ್ಥಾಮನೂ ನಮ್ಮಲ್ಲಿ ಸೇರಿದನು. ಸಮಸ್ತ ಶಾಸ್ತ್ರದಲ್ಲಿ ವಿಶಾರದನೂ ಜಯಿಸುವುದಕ್ಕೆ ಅಸಾಧ್ಯನೂ ನಮ್ಮ ಜೊತೆಯಲ್ಲಿ ಸೇರುವುದಕ್ಕೆ ಒಪ್ಪದವನೂ ಆದವನು ಪ್ರಸಿದ್ಧನಾದ ಕರ್ಣನೊಬ್ಬನೇ. ಸಮಸ್ತ ಪ್ರಪಂಚದಲ್ಲಿ ಅವನ ಶೌರ್ಯಪ್ರತಾಪವು ಬೆಂಕಿಯಂತೆ ಪ್ರಸರಿಸಿದೆ. ತ್ಯಾಗವೂ ಅವನಿಂದಲೇ ಪ್ರಕಾಶಮಾನವಾಗಿದೆ. ೬೨. ಹೇಗೆಂದರೆ ಇಂದ್ರನು ಕರ್ಣನ ವಜ್ರಕವಚವನ್ನೂ ಅವನ ಬಹುಪ್ರಕಾಶವಾದ ಕಿವಿಯಾಭರಣ ಗಳನ್ನೂ ಕೈನೀಡಿ ಯಾಚಿಸಿದಾಗ "ಪಾಂಡುಪುತ್ರರನ್ನು ರಕ್ಷಿಸುವುದಕ್ಕಾಗಿ ಇಂದ್ರನು ಬಂದು ನಿನ್ನನ್ನು ಛಿದ್ರಿಸುತ್ತಿದ್ದಾನೆ, ಕೊಡಬೇಡ ಎಂದು ಸೂರ್ಯನು ಬಂದು ಉಪದೇಶಮಾಡಿ ತಡೆದರೂ ಅವನು ಹೇಳಿದುದನ್ನು ಕೇಳದೆ ಯಶಸ್ಸಿಗಾಗಿ ಆಸೆಪಟ್ಟು ತನ್ನ ಶರೀರದಲ್ಲಿ ಅಂಟಿಕೊಂಡಿದ್ದ ಆ ವಜ್ರಕವಚವನ್ನು ಸುಲಿದುಬರುವ ಹಾಗೆ ಕತ್ತರಿಸಿ ದಾನವಾಗಿ ಕೊಟ್ಟನು. ೬೩. ಬೇಡಿದವರಿಗೆ ವರವನ್ನು ಕೊಡುವ ಇಂದ್ರದೇವನೇ ನಾಚಿಕೆಗೆಟ್ಟು ಬಂದು ನನ್ನನ್ನು ಈರೀತಿ ಬೇಡಿದನು. ಬಾಳಿದವರಲೆಲ್ಲ ನಾನೆ ಬಾಳಿದವನು ಎಂದುಕೊಳ್ಳುತ್ತ ದೇಹದಿಂದ ಕವಚವನ್ನು ಕೆಂಪಾದ ರಕ್ತವೂ ಸೀಳಿದ ಮಾಂಸಖಂಡವೂ ಒಂದೇ ಸಮನಾಗಿ ಸುರಿಯುತ್ತಿರಲು ಮನೋದಾರ್ಢ್ಯವೂ ಅತಿಶಯವಾಗಿ ಅಭಿವೃದ್ಧಿಯಾಗುತ್ತಿರಲು ಕರ್ಣನು ಕವಚವನ್ನು ಶರೀರದಿಂದ ಕಿತ್ತ

ಉ॥ ಭೇದಿಸಲೆಂದೆ ದಲ್ ನುಡಿದರೆನ್ನದಿರೊಯ್ಯನೆ ಕೇಳ ಕರ್ಣ ನಿ
ನ್ನಾದಿಯೊಳಬ್ಬೆ ಕೊಂತಿ ನಿನಗಮ್ಮನಹರ್ಪತಿ ಪಾಂಡುನಂದನರ್ ।
ಸೋದರರೆಯ್ದೆ ಮಯ್ದುನನೆನಾಂ ಪೆಱತೇಂ ಪಡೆಮಾತೊ ನಿನ್ನದೀ
ಮೇದಿನಿ ಪಟ್ಟಮುಂ ನಿನತೆ ನೀನಿರೆ ಮತ್ತೆ ಪೆಱರ್ ನರೇಂದ್ರರೇ ॥ ೬೪

ಕಂ॥ ಗಂಗೆಗೆ ಕೆಯ್ಯಡೆಯೆಂದು
ತುಂಗಸ್ತನಿ ಕೊಟ್ಟು ಪೋಗೆ ಸೂತಂ ಕಂಡಾ ।
ತ್ಮಾಂಗನೆಗೆ ರಾಧೆಗಿತ್ತು ಮ
ನಂಗೊಳೆ ರಾಧೇಯನೆನಿಸಿ ಸೂತಜನಾದೈ ॥ ೬೫

ನಿನ್ನುತ್ಪತ್ತಿಯನಿಂತೆಂ
ದೆನ್ನರುಮಣಮಱಿಯರಱಿವೆನಾಂ ಸಹದೇವಂ ।
ಪನ್ನಗಕೇತು ದಿನೇಶಂ
ನಿನ್ನಂಬಿಕೆ ಕುಂತಿಯಿಂತಿವರ್ ನೆಱೆ ಬಲ್ಲರ್ ॥ ೬೬

ರೀತಿ ನೋಡುವವರಿಗೆ ವೀರರಸಕ್ಕೆ ಆಗರವಾಗಿತ್ತು. ವ॥ ಹಾಗೆ ಅವನಿಗೆ ಸಹಜವಾಗಿ ಹುಟ್ಟಿದ ಕವಚ ಮತ್ತು ರತ್ನಕುಂಡಲಗಳನ್ನು ರಕ್ತವು ಪನಪನ ಎಂದು ತೊಟ್ಟುತ್ತಿರಲು ಚರ್ಮವನ್ನು ಸುಲಿಯುವ ಹಾಗೆ ಸುಲಿದುಕೊಟ್ಟುದಕ್ಕೆ ಮೆಚ್ಚಿ ದೇವೇಂದ್ರನಾತನಿಗೆ ಬೆಲೆಯಿಲ್ಲದ ಶಕ್ತ್ಯಾಯುಧವನ್ನು ವರವಾಗಿ ಕೊಟ್ಟಿದ್ದಾನೆ. ಆತನನ್ನು ನಾನೂ ನನಗೆ ತಿಳಿದ ಮಟ್ಟಿನ ರೀತಿಯಲ್ಲಿ ಭಿದ್ರಿಸುತ್ತೇನೆ. ನೀವೂ ನಿಮ್ಮ ಚೊಚ್ಚಲಮಗನಾದ ಸೂರ್ಯಪುತ್ರನಾದ ಕರ್ಣನನ್ನು ಭಾನುವಾರದ ದಿನ ನೋಡಿ ಕಾರ್ಯಸಿದ್ಧಿಯನ್ನು ಮಾಡಿಕೊಂಡು ಬನ್ನಿ ಎಂದು ಕುಂತಿಯನ್ನು ಕಳುಹಿಸಿಕೊಟ್ಟನು. ಅವಳ ಆಶೀರ್ವಾದವನ್ನು ಪಡೆದು ಕೃಷ್ಣನು ತೇರನ್ನು ಹತ್ತಿ ಕರ್ಣನ ಮನೆಯ ಮುಂದುಗಡೆಯೇ ಬಂದು ತಾನೇ ಮೇಲೆ ಬಿದ್ದು 'ಕರ್ಣ ! ನಮ್ಮನ್ನು ಸ್ವಲ್ಪ ದೂರ ಕಳುಹಿಸಿಕೊಟ್ಟು ಬರುವೆಯಂತೆ ಬಾ ಹೋಗೋಣ' ಎಂದು ತನ್ನೊಡನೆ ರಥದಲ್ಲಿ ಹತ್ತಿಸಿಕೊಂಡು ಹೋಗಿ ಮುಂದೆ ಬಂದು ಒಂದು ಕಡೆಯಲ್ಲಿ ನಿಂತು ಹೇಳಿದನು. ೬೪. ಕರ್ಣ ಕೇಳು, ನಿನ್ನನ್ನು ಭೇದಿಸಲು ಹೀಗೆ ಹೇಳಿದೆನೆಂದು ನುಡಿಯದಿರು. ಆದಿಯಲ್ಲಿ ಕುಂತಿಯು ನಿನ್ನ ತಾಯಿ, ಸೂರ್ಯನು ನಿನ್ನ ತಂದೆ, ಪಾಂಡವರು ನಿನ್ನ ಸಹೋದರರು, ನಾನು ನಿನಗೆ ಮೈದುನ. ಹೆಚ್ಚು ಹೇಳುವುದೇನು ? ಈ ಭೂಮಿಯೆಲ್ಲವೂ ನಿನ್ನದೇ. ಪಟ್ಟವೂ ನಿನ್ನದೇ. ನೀನಿರುವಲ್ಲಿ ಇತರರು ರಾಜರಾಗಬಲ್ಲರೇ ? ೬೫. ನಿನ್ನನ್ನು ಯುವತಿಯಾದ ನಿನ್ನ ತಾಯಿಯಾದ ಕುಂತಿಯು ಗಂಗೆಗೆ ನ್ಯಾಸವೆಂದು (ರಕ್ಷಿಸುವ ಪದಾರ್ಥ) ಕೊಟ್ಟು ಹೋಗಲು ಅದನ್ನು ನೋಡಿದ ಸೂತನು ತನ್ನ ಹೆಂಡತಿಯಾದ ರಾಧೆಗೆ ಕೊಟ್ಟುದರಿಂದ ನೀನು ರಾಧೇಯನೆನಿಸಿಕೊಂಡು ಸೂತಪುತ್ರನಾಗಿದ್ದೀಯೆ. ೬೬. ನೀನು ಹುಟ್ಟಿದ ರೀತಿ ಹೀಗೆಂದು ಯಾರಿಗೂ ಸ್ವಲ್ಪವೂ ತಿಳಿಯದು. ನಾನು, ಸಹದೇವ, ದುರ್ಯೋಧನ, ಸೂರ್ಯ, ನಿನ್ನ ತಾಯಿಯಾದ ಕುಂತಿ ಇವರು

ವ|| ದುರ್ಯೋಧನಂ ನಿನ್ನನೇತಱಿಂ ನಂಬಿವನೆಂದೊಡೆ ನೀನುಂ ತಾನುಮೊರ್ಮೆ ಗಂಗಾನದೀತೀರದೊಳ್ ಬೇಂಟೆಯಾಡುವಲ್ಲಿ ತತ್ಸಮೀಪದ ತಾಪಸಾಶ್ರಮದೊಳ್ ಸತ್ಯಂತಪರೆಂಬ ದಿವ್ಯಜ್ಞಾನಿಗಳಂ ಕಂಡು ಪೊಡೆವಟ್ಟಿರ್ವರುಮಂ ಹರಸಿ ನಿನಗೆ ಮುನ್ನಮೇಱಲ್ ತರಿಸಿದೊಡೆ ಸುಯೋಧನನೇವಯಿಸಿ ನಿನ್ನಂ ಪೋಗಲ್ವೇೞ್ದು-

ಉ|| ಆನಿರೆ ನೀಮಿದೇಕೆ ದಯೆಗೆಯ್ದಿರೊ ಮೀಂಗುಲಿಗಂಗೆ ಪೇೞಿಮೆಂ
ದಾ ನರನಾಥನಂ ತಿಳಿಪೆ ತನ್ಮುನಿ ಭೂಭುಜನೆಯ್ದೆ ನಂಬಿ ಕಾ ।
ನೀನ ಸಮಂತು ಪಾಟಿಸುವೆನೊಯ್ಯನೆ ಮುಳ್ಳೊಳೆ ಮುಳ್ಳನೆಂದು ತಾ
ನೀ ನಯದಿಂದೆ ಪೆರ್ಚೆ ಪೊರೆದಲ್ಕಱಿನೊಳಂದೊಡನುಂಡನಲ್ಲನೇ ॥ ೬೭

ಚಂ|| ಎನೆಯೆನೆ ಬಾಷ್ಪವಾರಿ ಪುಳಕಂಬೆರಸೊರ್ಮೆಯೆ ಪೊಣ್ಮೆ ಮುನ್ನೆ ನೀ
ವೆನಗಿದನೇಕೆ ಪೇೞ್ದಿರೊ ನೆಗೞ್ತೆ ಪೊಗೞ್ತೆಯನಾಂಪಿನಂ ಸುಯೋ ।
ಧನನೆನಗೊಳ್ಪಿಕೆಯ್ದ ಕೃತಮಂ ಪೆಱಗಿಕ್ಕಿ ನೆಗೞ್ತೆ ಮಾಸೆ ನ
ಣ್ಪಿನ ನೆವದಿಂದೆ ಪಾಂಡವರನಾನೊಳವೊಕ್ಕೊಡೆ ನೀಮೆ ಪೇಸಿರೇ ೬೮

ಉ|| ನೆತ್ತಮನಾಡಿ ಭಾನುಮತಿ ಸೋಲ್ತೊಡೆ ಸೋಲಮನೀವುದೆಂದು ಕಾ
ಡುತ್ತಿರೆ ಲಂಬಣಂ ಪಱಿಯೆ ಮುತ್ತಿನ ಕೇಡನೆ ನೋಡಿ ನೋಡಿ ಬ ।
ಳ್ಕುತ್ತಿರೆಯೇವಮಿಲ್ಲದಿವನಾಯ್ವುದೊ ತಪ್ಪದೆ ಪೇೞಿಮೆಂಬ ಭೂ
ಪೋತ್ತಮನಂ ಬಿಸುಟ್ಟರದೆ ನಿಮ್ಮೊಳೆ ಪೊಕ್ಕೊಡೆ ಬೇಡನಲ್ಲನೇ ॥ ೬೯

ಪೂರ್ಣವಾಗಿ ಬಲ್ಲೆವು. ವ|| ದುರ್ಯೋಧನನು ನಿನ್ನನ್ನು ಯಾವುದರಿಂದ ನಂಬಿದನೆಂದರೆ ನೀನೂ ಆತನೂ ಒಂದು ಸಲ ಗಂಗಾತೀರದಲ್ಲಿ ಬೇಟೆಯಾಡುತ್ತಿರುವಾಗ ಸಮೀಪದಲ್ಲಿದ್ದ ತಾಪಸಾಶ್ರಮದಲ್ಲಿ ಸತ್ಯಂತಪರೆಂಬ ದಿವ್ಯಜ್ಞಾನಿಗಳನ್ನು ಕಂಡು ನಮಸ್ಕಾರಮಾಡಿದಿರಿ. ನಿಮ್ಮಿಬ್ಬರನ್ನೂ ಹರಸಿ ಅವರು ನಿನಗೆ ಮೊದಲು ಆಸನವನ್ನು ತರಿಸಿಕೊಟ್ಟರು. ದುರ್ಯೋಧನನು ಲಜ್ಜಿತನಾಗಿ ನಿನ್ನನ್ನು ಹೊರಗೆ ಹೋಗಹೇಳಿ ೬೭. 'ನಾನಿರುವಾಗ ತಾವಿದೇಕೆ ಆ ಮೀಂಗುಲಿಗನಿಗೆ (ಮೀನನ್ನು ಕೊಲ್ಲುವ ಸ್ವಭಾವವುಳ್ಳವನು-ಬೆಸ್ತ) ದಯೆಗೆಯ್ದಿರಿ ' ಎಂದು ಆ ಋಷಿಯನ್ನು ಕೇಳಿದಾಗ ಅವರು ದೊರೆಗೆ ಎಲ್ಲವನ್ನೂ ತಿಳಿಸಿದರು. ದೊರೆಯು ನಂಬಿ ಕರ್ಣ! ಮುಳ್ಳನ್ನು ಮುಳ್ಳಿನಿಂದಲೇ ತೆಗೆಯುವ ಉಪಾಯವನ್ನು ಮಾಡುವೆನೆಂದು ನಿನ್ನನ್ನು ಈ ನಯದಿಂದ ಪೋಷಿಸುತ್ತ ಪ್ರೀತಿಯಿಂದ ನಿನ್ನೊಡನೆ ಉಂಡನಲ್ಲವೇ ?" ೬೮. ಹೀಗೆಂದು ಕೃಷ್ಣನು ಹೇಳಲು ಕರ್ಣನಿಗೆ ರೋಮಾಂಚನದೊಡನೆ ಕಣ್ಣೀರು ಸುರಿಯಲಾರಂಭಿಸಿತು. ಅವನು ಕೃಷ್ಣನನ್ನು ಕುರಿತು 'ತಾವು ಮೊದಲು ನನಗೆ ಏಕೆ ತಿಳಿಸಿದರೋ? ಪ್ರಸಿದ್ಧಿಗೂ ಹೊಗಳಿಕೆಗೂ ಪಾತ್ರವಾಗುವಷ್ಟು ಆತ್ಮವಿಶ್ವಾಸದಿಂದ ದುರ್ಯೋಧನನು ನನಗೆ ಮಾಡಿದ ಒಳ್ಳೆಯ ಕಾರ್ಯಗಳನ್ನು ಹೊರಗಿಕ್ಕಿ ನನ್ನ ಕೀರ್ತಿ ಮಾಸಿ ಹೋಗುವ ಹಾಗೆ ನೆಂಟಿನ ನೆಪದಿಂದ ಪಾಂಡವರಲ್ಲಿ ಸೇರಿಕೊಂಡರೆ ನೀವೂ ಹೇಸುವುದಿಲ್ಲವೇ? ೬೯. ದುರ್ಯೋಧನನೂ ರಾಣಿಯಾದ ಭಾನುಮತಿಯೂ ಪಗಡೆಯಾಡಿ ಭಾನುಮತಿ ಸೋತು ಎದ್ದುಹೋಗಲು ಪಣವನ್ನು ಕೊಟ್ಟು ಹೋಗು

ವ॥ ಎಂಬುದುಂ ಕರ್ಣಂ ತನಗೆಂತುಮೊಡಂಬಡದುದಂ ನಿರ್ಣಯಮಾಗಱಿದು ಮಗುಬಿಲ್ವೇೞ್ದು ನಾರಾಯಣಂ ಪೋದನಿತ್ತಲಂಗರಾಜನುಮಾತ್ಮಾಲಯಕ್ಕೆ ವಂದು ಚಿಂತಾಕ್ರಾಂತನಾಗಿ-

ಚಂ॥ ಕುರುಪತಿಗಿಲ್ಲ ದೈವಬಲಮಾಜಿಗೆ ಮೇಲ್ಮಲೆಗೆಯ್ವರಾಗಳುಂ
ಗುರು ಗುರುಪುತ್ರ ಸಿಂಧುಸುತರಾಳ್ದನುಮೆನ್ನನೆ ನಚ್ಚಿ ಪೆರ್ಚಿ ಮುಂ ।
ಪೊರೆದನಿದಿರ್ಚಿ ಕಾದುವರುಮೆನ್ನಯ ಸೋದರರೆಂತು ನೋಡಿ ಕೊ
ಕ್ಕರಿಸದೆ ಕೊಲ್ವೆನೆನ್ನೊಡಲನಾಂ ತವಿಪೆಂ ರಣರಂಗಭೂಮಿಯೊಳ್ ॥ ೭೦

ಮ॥ ಅಱಿದೆಂ ಸೋದರರೆಂದು ಪಾಂಡವರನಿನ್ನೆಂತೆನ್ನರಂ ಕೊಲ್ವೆನ
ಟ್ಟಱಿಯೊಳೆನ್ನಂ ಪೊರೆದಿರ್ದು ನಂಬಿದ ನೃಪಂಗೆಂತಾಜಿಯೊಳ್ ತಪ್ಪುವೆಂ ।
ತಱಿಸಂದುದ್ಧತ ವೈರಿ ಭೂಪ ಬಲದೊಡ್ಡಳ್ಗಾಡೆ ಲೆಕ್ಕಕ್ಕೆ ತ
ಳ್ತಿಱಿದೆನ್ನಾಳ್ದನಿನಾನೆ ಮುಂಚೆ ಗೆಱೆಪೆಂ ಕೆಯ್ಕೊಂಡು ಕಟ್ಟಾಯಮಂ ॥ ೭೧

ಎಂದು ದುರ್ಯೋಧನನು ಹಿಂಸಿಸುತ್ತಿರಲು ಮುತ್ತಿನ ಹಾರವು ಕಿತ್ತುಹೋಯಿತು. ತನ್ನ ಮುತ್ತಿನ ಕೇಡನ್ನೇ ನೋಡುತ್ತ ನಡುಗುತ್ತಿದ್ದ ಭಾನುಮತಿಯನ್ನು ದುರ್ಯೋಧನನು ಕರ್ಣನಿಗೆ 'ತೋರಿಸಿ, ನಾಚಿಕೆಯಿಲ್ಲದೆ ಮುತ್ತುಗಳನ್ನು ಆಯುವುದೇ ತಪ್ಪಿಲ್ಲದೇ ಹೇಳು' ಎಂದು ಹೇಳುವ ರಾಜಶ್ರೇಷ್ಠನಾದ ದುರ್ಯೋಧನನನ್ನು ಬಿಟ್ಟು ನಿಮ್ಮಲ್ಲಿ ಸೇರಿಕೊಂಡರೆ ನಾನು ಯಾರಿಗೂ ಬೇಡದವನಾಗುತ್ತೇನಲ್ಲವೇ? ಎಂದನು.* ವ॥ ಕರ್ಣನು ಹೇಗೂ ತನ್ನ ಮಾತಿಗೆ ಒಪ್ಪುವುದಿಲ್ಲವೆಂಬುದನ್ನು ಸ್ಥಿರವಾಗಿ ತಿಳಿದುಕೊಂಡು ಕೃಷ್ಣನು ಅವನನ್ನು ಹಿಂತಿರುಗಹೇಳಿ ತಾನೂ ಹೋದನು. ಈ ಕಡೆ ಕರ್ಣನು ತನ್ನ ಮನೆಗೆ ಬಂದು ದುಃಖದಿಂದ ಕೂಡಿ-೭೦. ದುರ್ಯೋಧನನಿಗೆ ದೈವಬಲವಿಲ್ಲ, ದ್ರೋಣ ಅಶ್ವತ್ಥಾಮ ಭೀಷ್ಮರು ತೋರಿಕೆಯ ಯುದ್ಧವನ್ನು ಮಾಡುವವರು, ನನ್ನ ಯಜಮಾನನಾದ ದುರ್ಯೋಧನನು ನನ್ನನ್ನೇ ನಂಬಿ ಉಬ್ಬಿ ಮೊದಲು ಸಾಕಿದ್ದಾನೆ. ಯುದ್ಧಮಾಡುವವರು ನನ್ನ ಸಹೋದರರು. ತಿಳಿದು ತಿಳಿದು ಅಸಹ್ಯಪಡದೆ ಅವರನ್ನು ಹೇಗೆ ಕೊಲ್ಲಲಿ. ರಣರಂಗಭೂಮಿಯಲ್ಲಿ ನನ್ನ ಶರೀರವನ್ನೇ ನಾಶಮಾಡುತ್ತೇನೆ. ೭೧. ಪಾಂಡವರನ್ನು ಸೋದರರೆಂದು ತಿಳಿದೆನು. ಇನ್ನು ನನ್ನವರನ್ನು ಹೇಗೆ ಕೊಲ್ಲಲಿ? ಪ್ರೀತಿಯಿಂದ ಸಲಹಿ ಪೂರ್ಣವಾಗಿ ನಂಬಿದ ರಾಜನಿಗೆ ಹೇಗೆ ಯುದ್ಧದಲ್ಲಿ ತಪ್ಪಿ ನಡೆಯಲಿ. ಎರಡೂ

---

* ಈ ಪದ್ಯದಲ್ಲಿ ಕರ್ಣನು ತನಗೆ ದುರ್ಯೋಧನನಲ್ಲಿದ್ದ ಸದರವನ್ನೂ ಆಂತರ್ಯ ಮನೋಭಾವವನ್ನೂ ವಿಶದಪಡಿಸುತ್ತಾನೆ. ಇಲ್ಲಿ ಪಗಡೆಯಾಡುತ್ತಿರುವವರು ದುರ್ಯೋಧನ ಭಾನುಮತಿಯರು, ಕರ್ಣ ಪ್ರೇಕ್ಷಕ. ದುರ್ಯೋಧನನ ಏಕಾಂತವಾದ ಅಂತಃಪುರಕ್ಕೂ ಅವನಿಗೆ ಪ್ರವೇಶವುಂಟು. ರಾಜರಾಣಿಯರ ಆಟದಲ್ಲಿಯೂ ಇವನ ಮಧ್ಯಸ್ಥಿಕೆ ಇರುತ್ತಿತ್ತು ಎಂಬುದು ಸೂಕ್ತವಾದ ಅರ್ಥ. ಅದು ಬಿಟ್ಟು ಕರ್ಣನು ಭಾನುಮತಿಯೊಡನೆ ಪಗಡೆಯಾಟವಾಡುತ್ತಿದ್ದು ಅವಳ ಹಾರಕ್ಕೆ ಕೈ ಹಾಕಿ ಹರಿದುಹಾಕಿದ ಎಂಬುದು ಲೌಕಿಕದೃಷ್ಟಿಯಿಂದ ಹಾಸ್ಯಾಸ್ಪದವಾಗುತ್ತದೆ. ಎಷ್ಟೇ ಸದರವಿದ್ದರೂ ಸ್ನೇಹಿತ ಅಥವಾ ಕೈಕೆಳಗಿನ ಅಧಿಕಾರಿಯೊಬ್ಬನು ರಾಣಿಯ ಮುತ್ತಿನ ಹಾರಕ್ಕೆ ಕೈಹಾಕಿ ಹರಿಯುವುದು ಅಪಚಾರದ ಪರಮಾವಧಿ. ರಾಜರಾಣಿಯರ ಪ್ರಣಯಕಲಹ ದಲ್ಲಿಯೂ ಕರ್ಣನ ಮಧ್ಯಸ್ಥಿಕೆಯಿತ್ತೆಂಬುದು ಅವರ ಪರಸ್ಪರ ಮೈತ್ರಿಯ ಪರಾಕಾಷ್ಠತೆಯನ್ನು ವಿಶದಪಡಿಸುತ್ತದೆ.

ವ|| ಎಂದು ಮುಂತಪ್ಪ ಕಜ್ಜಮಂ ತನ್ನೊಳೆ ಬಗೆದವಾರ್ಯ ವೀರ್ಯಂ ಸೂರ್ಯದಿನದಂದು ಮಂದಾಕಿನಿಯಂ ಮೀಯಲೆಂದು ಬಂದು ದುರ್ಯೋಧನನಟ್ಟಿದ ದೇವಸವಳದ ಪದಿನೆಂಟು ಕೋಟಿ ಪೊನ್ನುಮನೊಟ್ಟಿ ಬೆಟ್ಟಾಗೆ ಪುಂಜಿಸಿ-

ಕಂ|| ಸೋರ್ವ ವಸುಧಾರೆಯಂ ಕೆ
ಯ್ವಾರ್ವ ನಿಧಾನಮುಮನಿಟೆಸಿ ತನ್ನೀವಳವಿಂ ।
ಪಾರ್ವಂಗಮಳಿಪಿ ಬೇಡಿದ
ಪಾರ್ವಂಗಂ ಪಿರಿದನಿತ್ತನಂಗಮಹೀಶಂ ॥ ೭೨

ವ|| ಅಂತು ಚಾಗಂಗೆಯ್ದು ಜಗನ್ಮಂಗಳ ಗಂಗಾವಾರಿಯೊಳನಿವಾರಿತ ಪರಾಕ್ರಮನಘಮರ್ಷಣಪೂರ್ವಕಂ ಮಿಂದು ಕನಕಪಾತ್ರದೊಳ್ ತೆಕ್ಕನೆ ತೀವಿದ ಕನಕ ಕಮಳಂಗಳಿಂದಾದಿತ್ಯತೇಜನಾದಿತ್ಯಂಗರ್ಘ್ಯಮೆತ್ತಿ ಸೂರ್ಯಜಂ ಸೂರ್ಯಮಂತ್ರಂಗಳನೋದಿ ನೀರಂ ಸೂಸಿ ತ್ರಿಪ್ರದಕ್ಷಿಣಂಗೆಯ್ವಾಗಳ್-

ಕಂ|| ಸಂಗತ ತರಂಗಯುತೆಯಂ
ಮಂಗಳಲಕ್ಷಣೆಯನಂದು ಭೋಂಕನೆ ಕಂಡಂ ।
ಗಂಗಾಂಗನೆಯಂ ಕಾಣ್ಬವೊ
ಲಂಗನೃಪಂ ಮುಂದೆ ನಿಂದ ಕೊಂತಯನಾಗಳ್ ॥ ೭೩

ಸಾಧ್ಯವಿಲ್ಲ. ನಿಷ್ಕರ್ಷೆಮಾಡಿಕೊಂಡು ಉದ್ಧತರಾದ ಶತ್ರುಸೈನ್ಯಸಮೂಹವನ್ನು ನಾಶವಾಗುವ ಹಾಗೆ ಲೆಕ್ಕಕ್ಕೆ ಮಾತ್ರ ಹೋರಾಡಿ ನನ್ನೊಡೆಯನಿಗಿಂತ ಮೊದಲು ನಾನೇ ಪರಾಕ್ರಮವನ್ನು ಅಂಗೀಕರಿಸಿ ಸಾಯುತ್ತೇನೆ. ವ|| ಎಂದು ಮುಂದೆ ಆಗಬೇಕಾದ ಕಾರ್ಯವನ್ನು ತನ್ನಲ್ಲಿ ನಿಷ್ಕರ್ಷೆಮಾಡಿಕೊಂಡನು. ಅವಾರ್ಯವೀರ್ಯನಾದ ಕರ್ಣನು ಒಂದು ಆದಿತ್ಯವಾರದ ದಿನ ಗಂಗೆಯಲ್ಲಿ ಸ್ನಾನಮಾಡಬೇಕೆಂದು ಬಂದು ದುರ್ಯೋಧನನು ಕಳುಹಿಸಿದ ದೇವಮಾನದ ಹದಿನೆಂಟು ಕೋಟಿ ಚಿನ್ನವನ್ನು ಒಟ್ಟಾಗಿ ಬೆಟ್ಟದಂತೆ ರಾಶಿಮಾಡಿದನು. ೭೨. ತಾನು ಮಾಡುವ ದಾನವು ಧಾರಾಕಾರವಾಗಿ ಸುರಿಯುವ ಸುವರ್ಣವೃಷ್ಟಿಯನ್ನೂ ಕೈವಶವಾದ ನಿಧಿಯನ್ನೂ ಕಡೆಗಣಿಸುತ್ತಿರಲು ದಕ್ಷಿಣೆಯನ್ನು ನಿರೀಕ್ಷಿಸುತ್ತಿರುವವನಿಗೂ ಆಶೆಪಟ್ಟು ಬೇಡಿದ ಬ್ರಾಹ್ಮಣರಿಗೂ ಕರ್ಣನು ಕೊಡುಗೈಯಿಂದ ದಾನಮಾಡಿದನು. ವ|| ಹಾಗೆ ತ್ಯಾಗ ಮಾಡಿ ಲೋಕಮಂಗಳ ಸ್ವರೂಪೆಯಾದ ಗಂಗಾನದಿಯಲ್ಲಿ ತಡೆಯಿಲ್ಲದ ಪರಾಕ್ರಮವುಳ್ಳ ಕರ್ಣನು ಪಾಪಪರಿಹಾರವಾದ ಮಂತ್ರೋಚ್ಚಾರಣಪೂರ್ವಕವಾಗಿ ಸ್ನಾನಮಾಡಿ ಚಿನ್ನದ ಪಾತ್ರೆಯಲ್ಲಿ ಪೂರ್ಣವಾಗಿ ತುಂಬಿದ ಚಿನ್ನದ ಕಮಲಗಳಿಂದ ಆದಿತ್ಯತೇಜನಾದ ಕರ್ಣನು ಸೂರ್ಯನಿಗೆ ಅರ್ಘ್ಯವೆತ್ತಿ ಸೂರ್ಯಮಂತ್ರವನ್ನು ಜಪಿಸಿ ಅರ್ಘ್ಯಪ್ರದಾನ ಮಾಡಿ ಮೂರುಪ್ರದಕ್ಷಿಣೆ ಮಾಡಿದನು. ೭೩. ಆಗ ಅಲೆಗಳಿಂದ ಕೂಡಿದವಳೂ ಮಂಗಳಲಕ್ಷಣವುಳ್ಳವಳೂ ಆದ ಗಂಗಾದೇವಿಯನ್ನು ಕಾಣುವ ಹಾಗೆ ಮುಂದೆ ನಿಂತಿದ್ದ

ವ॥ ಅಂತು ಕಂಡು ಮನದೊಳಾದೆಱಕದಿಂ ಸಾಷ್ಟಾಂಗಮೆಱಗಿ ಪೊಡೆವಟ್ಟ ನಿಜನಂದನನ ನಲ್ಮೆಯಿಂದಪ್ಪಿಕೊಂಡು ಪರಮಾಶೀರ್ವಚನಂಗಳಿಂ ಪರಸಿ-

ಕಂ॥ ತೊರೆದ ಕುಚಯುಗಳವಂದಂ
ಬರಿವಿಡೆ ಮೊಲೆವಾಲನಲ್ಮೆಯಿಂದಂ ಮೆಯ್ಯುಂ ।
ಕುರಿಸೆ ಸುರಿವಶ್ರುಜಲಮು
ಬ್ಬರಿಸಿ ಪೊನಲ್ ಪೊನಲನಟ್ಟೆ ಜನನುತೆಗಾಗಳ್ ॥ ೭೪

ಆಗಳೆ ಮಗನಂ ಪೆತ್ತವೊ
ಲಾಗಿ ಲತಾಲಲಿತೆ ನೊಸಲ ಕಣ್ಬೆತ್ತವೊಲಂ ।
ತಾಗಡೆ ರಾಗಕ್ಕಾಗರ
ಮಾಗೆ ದಿನಾಧಿಪತನೂಜನೊಸೆದಿರ್ಪಿನೆಗಂ ॥ ೭೫

ವ॥ ಗಂಗಾದೇವಿಯುಂ ದಿವ್ಯಮೂರ್ತಿಯಂ ಕೆಯ್ಕೊಂಡು ಬಂದು-

ಕಂ॥ ಒಪ್ಪಿಸಿದೆಂ ಕೆಯ್ಯಡೆಯೆಂ
ದಪ್ಪೈಸಿದ ನಿನ್ನ ಮಗನನೀಗಳೆ ನಿನಗೆಂ ।
ದಪ್ಪೈಸಿ ಗಂಗೆ ಪೋಪುದು
ಮೊಪ್ಪುವ ನಿಜಬಿಂಬದೊಳಗಣಿಂದಂ ದಿನಪಂ ೭೬

ಪೊಱಮಟ್ಟು ಬರಲ್ ತನ್ನಡಿ
ಗೆಱಗಿದ ನಿಜಸುತನನಲ್ಮೆಯಿಂ ಪರಸಿ ಮನಂ ।
ಮಱುಗಿ ರವಿ ನುಡಿದನೆನ್ನುಮ
ನುಱದೆ ಮರುಳ್ಮಗನೆ ಹರಿಗೆ ಕವಚಮನಿತ್ತೈ ॥ ೭೭

ಕುಂತಿದೇವಿಯನ್ನು ಕರ್ಣನು ಥಟಕ್ಕನೆ ಕಂಡನು. ವ॥ ಮನಸ್ಸಿನಲ್ಲುಂಟಾದ ಪ್ರೀತಿಯಿಂದ ಸಾಷ್ಟಾಂಗನಮಸ್ಕಾರ ಮಾಡಿದನು. ಕುಂತಿಯು ತನ್ನ ಮಗನನ್ನು ಪ್ರೀತಿಯಿಂದ ಆಲಿಂಗನಮಾಡಿಕೊಂಡು ಅತ್ಯುತ್ತಮವಾದ ಹರಕೆಗಳಿಂದ ಹರಸಿದಳು. ೭೪. ತೊರೆದ ಎರಡು ಮೊಲೆಗಳೂ ಆಗ ಎದೆಯ ಹಾಲನ್ನು ಧಾರಾಕಾರವಾಗಿ ಸುರಿಸಿದುವು. ಪ್ರೀತಿಯಿಂದ ಶರೀರದಲ್ಲಿ ರೋಮಾಂಚನವುಂಟಾಯಿತು. ಸಂತೋಷದಿಂದ ಹರಿಯುತ್ತಿರುವ ಕಣ್ಣೀರು ಅತ್ಯಧಿಕ ಪ್ರವಾಹವಾಗಿ ಗಂಗೆಯ ಪ್ರವಾಹವನ್ನು ಹೆಚ್ಚಿಸಿತು. ಜನರ ಸ್ತುತಿಗೆ ಪಾತ್ರಳಾದ ಆ ಕುಂತೀದೇವಿಗೆ-೭೫. ಆಗತಾನೆ ಪುತ್ರೋತ್ಸವ ವಾದಂತಾಯಿತು. ಬಳ್ಳಿಯಂತೆ ಕೋಮಲವಾದ ಗಂಗಾದೇವಿಗೆ ಹಣೆಗಣ್ಣನ್ನು ಪಡೆದಷ್ಟು ಸಂತೋಷವಾಯಿತು. ಸೂರ್ಯಪುತ್ರನಾದ ಕರ್ಣನು ಸಂತೋಷಿಸುತ್ತಿದ್ದನು. ವ॥ ಆ ವೇಳೆಗೆ ಸರಿಯಾಗಿ ಗಂಗಾದೇವಿಯು ದಿವ್ಯಾಕಾರವನ್ನು ತಾಳಿ ಬಂದು ೭೬. ಕುಂತಿಯನ್ನು ಕುರಿತು 'ನನಗೆ ನ್ಯಾಸವೆಂದು ಒಪ್ಪಿಸಿದ್ದ ನಿನ್ನ ಮಗನನ್ನು ನಿನಗೆ ಈಗ ಒಪ್ಪಿಸಿದ್ದೇನೆ' ಎಂದು ಹೇಳಿ ಗಂಗೆಯು ಅದೃಶ್ಯಳಾದಳು. ಸೂರ್ಯನು ತನ್ನ ಪ್ರಕಾಶಮಾನವಾದ ಬಿಂಬದಿಂದ ೭೭. ಹೊರಟು ಬಂದು ತನ್ನ ಪಾದಕ್ಕೆ ಭಕ್ತಿಯಿಂದ ನಮಸ್ಕಾರಮಾಡಿದ ಮಗನನ್ನು ಪ್ರೀತಿಯಿಂದ ಹರಸಿ ಮನಸ್ಸಿನಲ್ಲಿ ದುಃಖಪಟ್ಟು 'ಹಿಂದೆ ನನ್ನನ್ನೂ ಲಕ್ಷ್ಯಮಾಡದ ಬುದ್ಧಿಯಿಲ್ಲದೆ ಮಗನೇ ಇಂದ್ರನಿಗೆ ಕವಚವನ್ನು ಕೊಟ್ಟೆ.

ನುಡಿಯೆನಿದಂ ನಿನ್ನಂಬಿಕೆ
ಪಡೆಮಾತೇಂ ಕೊಂತಿ ಹರಿಯ ಮತದಿಂ ಕಾಯ ।
ಲ್ಕೊಡರಿಸಿ ಬಂದಳ್ ಸುತರಂ
ಕುಡದಿರ್ ಪುರಿಗಣೆಯನೆನಿತು ಲಲ್ಲೆಸಿದೊಡಂ ॥ ೭೮

ಎಂದರವಿಂದಪ್ರಿಯಸಖ
ನಂದಂಬರತಳಮನಡರ್ವುದುಂ ಕೆಯ್ಮುಗಿದಿಂ ॥
ತೆಂದಂ ಕುಂತಿಯನಬ್ಬೇಂ
ವಂದಿರ್ಪುದದೆನಗೆ ಸಯ್ಪು ಬರ್ಪಂತೀಗಳ್ ॥ ೭೯

ಚಲಮುಂ ಚಾಗಮುಮಳವುಂ
ಕಲಿತನಮುಂ ಕುಲಮುಮೀಗಳೆನ್ನಯ ಮೆಯ್ಯೊಳ್ ।
ನೆಲಸಿದುವು ನಿಮ್ಮ ಕರುಣಾ
ಬಲದಿಂ ನೀವೆನ್ನನಿಂದು ಮಗನೆಂದುದಱಿಂ ॥ ೮೦

ಪಡೆದರ್ ತಾಯುಂ ತಂದೆಯು
ಮೊಡಲಂ ಪ್ರಾಣಮುಮನವರವವು ಕೆಯ್ಕೆಡೆಯಂ ।
ಕುಡುವುದರಿದಾಯ್ತೆ ನೀಮೆನ
ಗೆಡೆ ಮಡಗದೆ ಬೆಸಪ ತೊಟ್ಟುವೆಸನಂ ಬೆಸಸಿಂ ॥ ೮೧

ಎಂಬುದುಮಂಬಿಕೆ ಮಗನೆ ಮ
ನಂಬೆಳಱದೆ ನೀನುಮಿತ್ತೆಯಾನುಂ ಪೆತ್ತೆಂ ।
ನಂಬಿದ ನಿನ್ನನುಜರ್ ನಿ
ನ್ನಂ ಬೆಸಕೆಯೆ ನೀನೆ ನೆಲನನಾಳ್ವುದು ಕಂದಾ ॥ ೮೨

೭೮. ಇದನ್ನು ಈಗ ಹೇಳುತ್ತಿಲ್ಲ; ಇಂದಿನ ಮಾತು ಬೇರೆ. ಈಗ ನಿನ್ನ ತಾಯಿಯಾದ ಕುಂತೀದೇವಿಯು ಕೃಷ್ಣನ ಸೂಚನೆಯ ಪ್ರಕಾರ ತನ್ನ ಮಕ್ಕಳ ರಕ್ಷಣೆಯ ಪ್ರಯತ್ನದಲ್ಲಿ ತೊಡಗಿ ಬಂದಿದ್ದಾಳೆ. ಎಷ್ಟು ಲಲ್ಲೆಯ (ಪ್ರೀತಿಯ) ಮಾತುಗಳನ್ನಾಡಿದರೂ ದಿವ್ಯಾಸ್ತ್ರಗಳನ್ನು ಕೊಡಬೇಡ. ೭೯. ಎಂದು ಹೇಳಿ ಸೂರ್ಯನು ಆಕಾಶಪ್ರದೇಶವನ್ನು ಹತ್ತಿದನು. ಕರ್ಣನು ಕುಂತಿಗೆ ಕೈಮುಗಿದು ಹೀಗೆಂದನು: ನನಗೆ ಅದೃಷ್ಟಪ್ರಾಪ್ತಿಯಾದ ಹಾಗೆ ನೀವು ಬಂದಿರುವ ಕಾರ್ಯವಾವುದು? ೮೦. ನೀವು ತಮ್ಮ ಕರುಣೆಯ ಬಲದಿಂದ ಈಗ ನನ್ನನ್ನು ಮಗನೆಂದು ಹೇಳಿದುದರಿಂದ ನನಗೆ ಛಲವೂ ತ್ಯಾಗವೂ ಮೇಲ್ಮೆಯೂ ಪರಾಕ್ರಮವೂ ಕುಲವೂ ನನ್ನ ಶರೀರದಲ್ಲಿ ನೆಲಸಿದುವು. ೮೧. ತಾಯಿಯೂ ತಂದೆಯೂ ಮಗನ ಶರೀರವನ್ನೂ ಪ್ರಾಣವನ್ನೂ ಪಡೆದವರು, ಆದುದರಿಂದ ಅದು ಅವರಿಗೇ ಸೇರಿದುವು. ಅವರು ದಯಪಾಲಿಸಿರುವ ಅವನ್ನು ಅವರಿಗೇ ಹಿಂದಿರುಗಿ ಕೊಡುವುದು ಅಸಾಧ್ಯವೇ? ನೀವು ನನಗೆ ಸ್ವಲ್ಪವೂ ಮರೆಮಾಚದೆ ಅಪ್ಪಣೆ ಕೊಡಿಸಬೇಕೆಂದಿರುವ ಸೇವಾಕಾರ್ಯವನ್ನು ಮರೆಮಾಚದೆ ತಿಳಿಸಿ ೮೨. ಎನ್ನಲು ತಾಯಿಯು 'ಮಗನೆ ಮನಸ್ಸಿನಲ್ಲಿ ಹೆದರದೆ ನೀನೂ ಕೊಟ್ಟೆ ನಾನೂ ಪಡೆದಿದ್ದೇನೆ. ಕಂದಾ ನಿನ್ನನ್ನೇ ನಂಬಿರುವ ನಿನ್ನ ತಮ್ಮಂದಿರು ನಿನಗೆ ಸೇವೆ ಮಾಡುವ

ಕಂ॥ ನಿನಗಪ್ಪರಸಂ ದುರ್ಯೋ
ಧನನೊಲವಂ ಮುಂದುಗೆಯ್ದು ಬೆಸಕೆಯ್ವರೆ ನಿ ।
ನ್ನನುಜರೆರಬ್ದೆಸೆಗಂ ಕಿಸು
ಜೆನಿಸಾಗದು ಮಗನೆ ನೀನೊಡಂಬಡವೇೞ್ಕುಂ ॥ ೮೩

ವ॥ ಎಂಬುದುಮದೆಲ್ಲಮಂ ಕೇಳ್ದು ಕರ್ಣಂ ಮುಗುಳ್ನಗೆ ನಕ್ಕು-

ಮ॥ ಭಯಮುಂ ಲೋಭಮುಮೆಂಬ ತಮ್ಮೆರಡುಂ ಪಾಪಕ್ಕೆ ಪಕ್ಕಾಗೆ ಪಾ
ಟೆಯನೊಕ್ಕಾಳ್ದನ ಗೆಯ್ದ ಸತ್ಕೃತಮುಮಂ ಪಿಂತಿಕ್ಕಿ ಜೋಳಕ್ಕೆ ತ ।
ಪ್ಪಿಯುಮಿಂ ಬಾೞ್ವುದೆ ಪೂಣ್ದು ನಿಲ್ಲದಿಕೆಯಿಂ ಬಾೞ್ವಂತು ವಿಖ್ಯಾತ ಕೀ
ರ್ತಿಯವೋಲೀಯೊಡಲಬ್ಬೆ ಪೇೞಿಮೆನಗೇಂ ಕಲ್ಪಾಂತರಸ್ಥಾಯಿಯೇ ॥ ೮೪

ಕಂ॥ ಮೀಂಗುಲಿಗನೆನಾಗಿಯುಮಣ
ಮಾಂ ಗುಣಮನೆ ಬಿಸುಟೆನಿಲ್ಲ ನಿಮಗಂ ಮಗನಾ ।
ದಂಗೆನಗೆ ಬಿಸುಡಲಕ್ಕುಮೆ
ನೀಂ ಗಳ ಪಂಬಲನೆ ಬಿಸುಡಿಮಿನ್ನೆನ್ನೆಡೆಯೊಳ್ ॥ ೮೫

ವ॥ ಎಂಬುದುಂ ಕೊಂತಿ ಭೋಂಕನೆರ್ದೆದೆಱೆದು-

ಮ॥ ಅೞಿದೆಂ ನೆಟ್ಟನೆ ಬೆಟ್ಟನಿಂತು ನುಡಿವೈ ನೀಂ ಕಂದ ಪೋಗಿಂದೆ ಕೆ
ಟ್ಟಟೆದತ್ತಾಗದೆ ಸೋಮವಂಶಮೆನಗಿಂ ಬಾೞ್ವಾಸೆಯೆಲ್ಲಿತ್ತೊ ಬ ।
ಟ್ಟುಟೆದೆಂ ಮತ್ತಿನ ಮಕ್ಕಳಾಸೆಯುಮನಾನೆಂದಳ್ಗಿ ಶೋಕಾಗ್ನಿ ಪೊಂ
ಪುೞಿವೋಗುತ್ತಿರೆ ಕರ್ಣನೆಂದನಿನಿತೇಂ ಪೇೞಬ್ಬೆ ಚಿಂತಾಂತರಂ ॥ ೮೬

ಹಾಗೆ (ನಿನ್ನ ಅಜ್ಞಾಧಾರಕರಾಗಿರುವ ಹಾಗೆ) ನೀನೇ ರಾಜ್ಯವನ್ನು ಆಳು. ೮೩. ನಿನಗೆ ಪ್ರಾಪ್ತವಾದ ರಾಜ್ಯವನ್ನು ನಿನ್ನ ತಮ್ಮಂದಿರು ದುರ್ಯೋಧನನ್ನು ಮುಂದುಮಾಡಿಕೊಂಡು ಸೇವೆಮಾಡುವರು, ಇದರಿಂದ (ನೀನು ರಾಜನಾಗುವುದರಿಂದ) ಉಭಯಪಕ್ಷಕ್ಕೂ ಸ್ವಲ್ಪವೂ ದೋಷವುಂಟಾಗುವುದಿಲ್ಲ. ಮಗನೇ ನೀನು ಒಪ್ಪಬೇಕು' ಎಂದಳು ವ॥ ಅದನ್ನೆಲ್ಲವನ್ನು ಕರ್ಣನು ಕೇಳಿ ಹುಸಿನಗೆ ನಕ್ಕನು. ೮೪. ಭಯವೂ ಲೋಭವೂ ಇವೆರಡೂ ಪಾಪಕ್ಕೆ ಭಾಗಿಯಾಗಿರಲು ಹಿಂದಿನ ಸಂಪ್ರದಾಯ (ಕ್ರಮ)ವನ್ನು ಬಿಟ್ಟು ಸ್ವಾಮಿಯು ಮಾಡಿರುವ ಸತ್ಕಾರ್ಯಗಳನ್ನೆಲ್ಲ ಹಿಂದಕ್ಕೆ ಹಾಕಿ (ಮರೆತು) ಅನ್ನದ ಋಣಕ್ಕೆ (ಕೃತಜ್ಞತೆಗೆ) ಮೀರಿಯೂ ಬಾಳುವುದೇ ? ಅಶಾಶ್ವತತೆಗೆ ಪ್ರಸಿದ್ಧವಾದ ಈ ಶರೀರವು ಪ್ರಖ್ಯಾತಕೀರ್ತಿಯು ಬಾಳುವ ಹಾಗೆ ಯುಗಯುಗಗಳಲ್ಲಿಯೂ ನಿಲ್ಲುವಂತಹುದೇ ಹೇಳಿ ತಾಯಿ. ೮೫. ಮೀನನ್ನು ಕೊಲ್ಲುವ ಸ್ವಭಾವವುಳ್ಳ ಬೆಸ್ತರ ಜಾತಿಯವನಾಗಿದ್ದು ಇಲ್ಲಿಯವರೆಗೆ ನಾನು ಸ್ವಲ್ಪವೂ ಸದ್ಗುಣವನ್ನು ಬಿಟ್ಟಿಲ್ಲ. ಸತ್ಕುಲಪ್ರಸೂತರಾದ ನಿಮ್ಮ ಮಗನಾದ ನನಗೆ (ಆ ಗುಣಗಳನ್ನು) ತ್ಯಾಗಮಾಡುವುದು ಆಗುತ್ತದೆಯೇ? ಇನ್ನು ನೀವು ನನ್ನಲ್ಲಿರುವ ಹಂಬಲವನ್ನು ಬಿಸಾಡಿಬಿಡಿ. ವ॥ ಎನ್ನಲು ಕುಂತಿಯು ಇದ್ದಕ್ಕಿದ್ದ ಹಾಗೆ ಎದೆಯೊಡೆದು-೮೬. ಅಯ್ಯೋ ನಾನು ಹಾಳಾದೆ ಕಂದ, ನೀನು ನೇರವಾಗಿ ಇಷ್ಟು ಒರಟಾಗಿ ಮಾತನಾಡುತ್ತಿದ್ದೀಯೆ. ಚಂದ್ರವಂಶವು ಇಂದೇ

ಕಂ॥ ಪಿಡಿಯೆಂ ಪುರಿಗಣೆಯಂ ನರ
ನೆಡೆಗೊಂಡೊಡಮುೞಿದ ನಿನ್ನ ಮಕ್ಕಳನಿನ್ನೇ ।
ರ್ದೊಡಮುೞಿಯೆಂ ಪೆರ್ಜಸಮನೆ
ಪಿಡಿದೆನ್ನನೆ ರಣದೊಳಳಿವೆನಿರದಡಿಯೆತ್ತಿಂ ॥ ೮೭

ವ॥ ಎಂದು ಕೊಂತಿಯಂ ವಿಸರ್ಜಿಸಿ ಚಲದ ಚಾಗದ ಕುಲದ ನನ್ನಿಯನಾವರ್ಜಿಸಿ ರಾಧೇಯನೊಳ್ಪಿಂಗಾಧೇಯಮಾಗಿರ್ದನಿತ್ತ ಪುರುಷೋತ್ತಮನುಂ ಕತಿಪಯ ಪ್ರಯಾಣಂಗಳಿಂ ವಿರಾಟಪುರ ನಿಕಟವರ್ತಿಯಪ್ಪ ದಿವಿಜಾಪಗಾತಟದುಪವನದೊಳರಿನೃಪವನಕ್ಕುಪದ್ರವಕಾರಿಯಾಗಿ ನೆಲಂ ಮೂರಿವಿಟ್ಟಂತೆ ಬಿಟ್ಟಿರ್ದಜಾತಶತ್ರುವನವನತೋತ್ತಮಾಂಗನಾಗಿ ಕಂಡು–

ಮ॥ ಹಿಮಕೃದ್ವಂಶಜರಪ್ಪ ಪಾಂಡುಸುತರಂ ಕೆಯ್ಕೊಂಡು ನಿನ್ನಯ್ದು ಬಾ
ಡಮನಿತ್ತು ನಡಪೆಂದು ಸಾಮಮನೆ ಮುಂ ಮುಂತಿಟ್ಟೊಡಾತಂ ಪರಾ।
ಕ್ರಮಮಂ ತೋಱಿ ಸಿಡಿಲ್ದು ಪಾಯ್ವುದುಮಸುಂಗೊಳ್ವನ್ನೆಗಂ ವಿಶ್ವರೂ
ಪಮನಾಂ ತೋಱಿದೆನಿಂ ಕಡಂಗಿ ರಣದೊಳ್ ನೀಂ ತೋಱು ನಿನ್ನಾರ್ಪುಮಂ ॥೮೮

ವ॥ ಎಂಬನ್ನೆಗಂ ದುರ್ಯೋಧನನಟ್ಟಿದ ದೂತಂ ಸಂಜಯನೆಂಬಂ ಬಂದು ಸಕಲ ಸಾಮಂತ ಮಣಿಮಕುಟ ಮರೀಚಿ ಮಸೃಣಿತ ಚರಣಾರವಿಂದನಪ್ಪ ಧರ್ಮನಂದನನಂ ಕಂಡು–

ಕೆಟ್ಟು ನಾಶವಾಗಲಿಲ್ಲವೇ. ನನಗೂ ಇನ್ನು ಮೇಲೆ ಬದುಕುವ ಆಸೆಯೆಲ್ಲಿದೆ ? ಉಳಿದ ಮಕ್ಕಳ ಆಸೆಯನ್ನು ಬಿಟ್ಟು ಬಿಟ್ಟಿದ್ದೇನೆ ಎಂದು ಹೇಳಿದ ಕುಂತೀದೇವಿಗೆ ಕರ್ಣನು ದುಃಖಾಗ್ನಿಯು ವೃದ್ಧಿಯಾಗುತ್ತಿರಲು ಇಷ್ಟೊಂದು ಚಿಂತೆಯೇಕೆ ತಾಯಿ, ಯೋಚಿಸ ಬೇಡಿ. ೮೭. ಅರ್ಜುನನು ಪ್ರತಿಭಟಿಸಿದರೂ ದಿವ್ಯಾಸ್ತ್ರವನ್ನು ಹಿಡಿಯುವುದಿಲ್ಲ. ಉಳಿದ ನಿನ್ನ ಮಕ್ಕಳು ಗಾಯಪಡಿಸಿದರೂ ಅವರನ್ನು ಕೊಲ್ಲುವುದಿಲ್ಲ. ಪ್ರಖ್ಯಾತಕೀರ್ತಿಯನ್ನೇ ಆಶ್ರಯಿಸಿ ಯುದ್ಧದಲ್ಲಿ ನನ್ನನ್ನೇ ನಾಶಮಾಡಿಕೊಳ್ಳುತ್ತೇನೆ. ಸಾವಕಾಶಮಾಡದೆ ಅಡಿಯೆತ್ತಿ (ಹೊರಡಿರಿ) ವ॥ ಎಂದು ಕುಂತಿಯನ್ನು ಬಿಟ್ಟು ಕಳೆದು ಛಲ, ತ್ಯಾಗ, ಕುಲ, ಮತ್ತು ಸತ್ಯವನ್ನು ಸಂಪಾದಿಸಿಕೊಂಡು ಕರ್ಣನು ಸದ್ಗುಣಕ್ಕೆ ಆಶ್ರಯವಾಗಿದ್ದನು. ಈಕಡೆ ಕೃಷ್ಣನು ಕೆಲವು ಪ್ರಯಾಣಗಳಿಂದ ವಿರಾಟನಗರದ ಸಮೀಪದಲ್ಲಿದ್ದ ಗಂಗಾನದಿಯ ದಡದ ಉಪವನದಲ್ಲಿ ಶತ್ರುರಾಜರೆಂಬ ಕಾಡಿಗೆ ಹಿಂಸಾಕಾರಿಯಾಗಿ ಜಗತ್ತಿನ ಜನವೆಲ್ಲ ಗುಂಪುಕೂಡಿಕೊಂಡಿರುವಂತೆ ಬೀಡುಬಿಟ್ಟಿದ್ದ ಧರ್ಮರಾಜನನ್ನು ಕುರಿತು ನಮಸ್ಕಾರಪೂರ್ವಕ ಕಂಡು - ೮೮. ಸೋಮವಂಶದಲ್ಲಿ ಹುಟ್ಟಿದ ಪಾಂಡವರನ್ನು ಅಂಗೀಕಾರಮಾಡಿ (ಪುರಸ್ಕರಿಸಿ) ನಿನ್ನ ಅಯ್ದು ಹಳ್ಳಿಗಳನ್ನು ಕೊಟ್ಟು ಕಾಪಾಡು (ನಡಸು) ಎಂದು ಸಾಮೋಪಾಯವನ್ನೇ ಮುಂದುಮಾಡಿ ನುಡಿದೆ. ಅವನು ತನ್ನ ಪರಾಕ್ರಮವನ್ನೇ ಪ್ರದರ್ಶಿಸಿ ಸಿಡಿದು ಮೇಲೆ ಹಾಯ್ದ. ಅವನ ಪ್ರಾಣಗಳನ್ನೇ ಸೆಳೆದುಕೊಳ್ಳುವಂತೆ ನಾನು ವಿಶ್ವರೂಪವನ್ನು ತೋರಿದೆ. ಇನ್ನು ನೀನು ಉತ್ಸಾಹಶಾಲಿಯಾಗಿ ಯುದ್ಧದಲ್ಲಿ ನಿನ್ನ ಶಕ್ತಿಯನ್ನು ಪ್ರದರ್ಶಿಸು ವ॥ ಎನ್ನುವಷ್ಟರಲ್ಲಿ ದುರ್ಯೋಧನನು ಕಳುಹಿಸಿದ ಸಂಜಯನೆಂಬ ದೂತನು ಬಂದು ಸಾಮಂತರಾಜರ ರತ್ನಕಿರೀಟದ ಕಾಂತಿಯಿಂದ

ಉ॥ ಆಟ್ಟಿದ ನಿಮ್ಮ ಪೆರ್ಗಡೆ ಬರ್ದುಂಕಿದನೆಂಬುದನಿಂದ್ರಜಾಲಮಂ
ತೊಟ್ಟನೆ ತೋಱಿ ಬಂದು ಬರ್ದುಕಾಡಿದನಿನ್ನಳಿಪಿಂದವಟ್ಟುವ ।
ಟ್ಟಟ್ಟಿಗಳಂ ಬಿಸುಟ್ಟುದೆಮಗಂ ತಮಗಂ ಮುಳಿಸಿಂದಮೀಗಳ
ಟ್ಟಟ್ಟಿಗಳಪ್ಪುವೆಂದಿದನೆ ದಲ್ ನುಡಿದಟ್ಟಿದನೆಮ್ಮ ಭೂಭುಜಂ ॥ ೮೯

ಮ॥ ಬಳ ಸಂಪನ್ನರನಾಸೆಗೆಯ್ಗೆ ಚತುರಂಗಾನೀಕಮಂ ಕೂಡಿ ಕೊ
ಳ್ಗುಳಮಂ ಗಂಡುಮನಪ್ಪುಕೆಯ್ಗೆ ಮನಮಂ ಬಲ್ಲಿತ್ತು ಮಾೞ್ಕೆಂದುಮಾ ।
ನೆಳೆಯಂ ಕಾದಿದೊಡಲ್ಲದೀಯೆನಱಿದಿರ್ಕೆಂದಾ ಕುರುಕ್ಷೇತ್ರಮಂ
ಕಳವೇೞ್ದಿಟ್ಟದನಣ್ಮಿ ಸಾಯಿಮುೞಿಯಿಂ ನಿಮ್ಮೊಂದು ಬಾೞ್ವಾಸೆಯಂ ॥ ೯೦

ವ॥ ಎಂಬುದುಂ ವೃಕೋದರಂ ಮುಳಿದಾಸ್ಫೋಟಿಸಿ-

ಚಂ॥ ವಿಸಸನರಂಗಮಪ್ಪುದೆನಗಂ ತನಗಂ ದೊರೆ ಕಾಯ್ದುಮೇವಮುಂ
ಪಸರಿಸಿ ಪರ್ವಿ ತನ್ನೊಳಮದೆನ್ನೊಳಮಿರ್ದುದು ಭೀಮನೆಂದೊಡಾ ।
ಪೆಸರನೆ ಕೇಳ್ದು ಸೈರಿಸದ ನಿನ್ನರಸಂ ಕಲಿಯಾಗಿ ನಾಳೆ ಸೈ
ರಿಸುಗುಮೆ ವೈರಿಭೂಪ ರುಧಿರಾರ್ದ್ರ ಮದೀಯ ಗದಾಭಿಘಾತಮಂ ॥ ೯೧

ವ॥ ಎಂಬುದುಂ ಪರಾಕ್ರಮಧವಳನಿಂತೆಂದಂ-

ಮ॥ ಕಱುಪ್ಪುಂ ಕಾಯ್ದುಮನುಂಟುಮಾಡಿ ನೆಲನಂ ದುರ್ಯೋಧನಂ ತಾಗಿ ತ
ಳ್ತಿಱಿದಂದಲ್ಲದೆ ಕೂಡನಾಜಿ ಭರಮುಂ ಸಾರ್ಚಿತ್ತದೇನೆಂದು ಮು ।
ನ್ನಱುದಿಂಗಳ್ ಜಱುಚುತ್ತುಮಿರ್ಪುದೆ ರಣಕ್ಕಾರೆನ್ನರೆಂದೀಗಳಿಂ
ತಱುಯಲ್ ಬರ್ಕುಮೆ ಬರ್ಕೆ ಬಂದೊಡಱಿಯಲ್ಕಕ್ಕುಂ ಕುರುಕ್ಷೇತ್ರದೊಳ್॥ ೯೨

ಪ್ರಕಾಶವಾದ ಪಾದಕಮಲಗಳನ್ನುಳ್ಳ ಧರ್ಮರಾಜನನ್ನು ನೋಡಿ -೮೯. ನೀವು ಕಳುಹಿಸಿದ ಹೆಗ್ಗಡೆಯು ಇಂದ್ರಜಾಲವನ್ನು ತೋರಿ ಬದುಕಿ ಬಂದಿದ್ದಾನೆ. ಇನ್ನು ದೂತರನ್ನು ಕಳುಹಿಸುವುದನ್ನು ನಿಲ್ಲಿಸಿರಿ. ಇನ್ನು ಮೇಲೆ ಕೋಪದಿಂದ ನಮಗೂ ನಿಮಗೂ ಅಟ್ಟಿಯಾಡುವ ಯುದ್ಧಕಾರ್ಯವು ಪ್ರಾಪ್ತವಾಗುವುದು ಎಂಬ ಈ ಸಂದೇಶವನ್ನು ಹೇಳಿ ನಮ್ಮ ರಾಜನು ನಮ್ಮನ್ನು ನಿಮ್ಮಲ್ಲಿಗೆ ಕಳುಹಿಸಿದ್ದಾನೆ. ೯೦ ಬಲಸಂಪನ್ನರಾದವರನ್ನು ಕೂಡಿಕೊಳ್ಳಲಿ (ಸೇರಿಸಿಕೊಳ್ಳಲಿ) ; ಚತುರಂಗ ಸೈನ್ಯವನ್ನು ಕೂಡಿಸಿ ರಣರಂಗವನ್ನು ಸೇರಿ ಪರಾಕ್ರಮವನ್ನು ಅಂಗೀಕರಿಸಲಿ ; ಮನಸ್ಸನ್ನು ಗಟ್ಟಿ ಮಾಡಿಕೊಳ್ಳಲಿ ; ನಾನು ಎಂದೂ ಯುದ್ಧಮಾಡಿದಲ್ಲದೆ ಭೂಮಿಯನ್ನು ಕೊಡುವುದಿಲ್ಲ ತಿಳಿದಿರಲಿ ಎಂದು ಕುರುಕ್ಷೇತ್ರವನ್ನು ಯುದ್ಧರಂಗವನ್ನಾಗಿ ಗೊತ್ತು ಮಾಡಿ ಕಳುಹಿಸಿದ್ದಾನೆ. ಪೌರುಷಪ್ರದರ್ಶನಮಾಡಿ ಸಾಯಿರಿ, ಬಾಳುವ ಆಸೆಯನ್ನು ಬಿಡಿರಿ ವ॥ ಎನ್ನಲು ಭೀಮಸೇನನು ಕೋಪಿಸಿಕೊಂಡು ಆರ್ಭಟಿಸಿ ನುಡಿದನು. ೯೧. ಯುದ್ಧರಂಗವು ನನಗೂ ದುರ್ಯೋಧನನಿಗೂ ಸಮಾನವಾದುದೇ. ನನ್ನಲ್ಲಿಯೂ ಅವನಲ್ಲಿಯೂ ಕೋಪ ಮಾತ್ಸರ್ಯಗಳು ಪ್ರಸರಿಸಿ ಅಧಿಕವಾಗಿವೆ. ಭೀಮನೆಂಬ ಹೆಸರನ್ನೇ ಕೇಳಿ ಸಹಿಸದ ನಿಮ್ಮ ರಾಜನು ಶೂರನಾಗಿ ನಾಳೆಯ ದಿನ ಶತ್ರುರಾಜರ ರಕ್ತದಿಂದ ಒದ್ದೆಯಾದ ನನ್ನ ಗದೆಯ ಪೆಟ್ಟನ್ನು ಸೈರಿಸುತ್ತಾನೆಯೇ ? (ತಡೆದುಕೊಳ್ಳುತ್ತಾನೆಯೇ?) ವ॥ ಎನ್ನಲು ಅರ್ಜುನನು ಹೀಗೆಂದನು ೯೨. ಕೋಪವನ್ನೂ ತಾಪವನ್ನೂ

ವ॥ ಎಂಬುದುಂ ಯಮನಂದನನಿಂತೆಂದಂ-

ಮ॥ ಸ್ರ ॥ ಎಳೆಯಂ ದುರ್ಯೋಧನಂ ತಳ್ತಿಱಿಯದೆ ಕುಡೆನೆಂದಟ್ಟಿ ಕಾದಲ್ಕಮೀಗಳ್
ಕಳನಂ ಪೇೞ್ದಂ ಕುರುಕ್ಷೇತ್ರಮನೆನೆ ತಡವಿನ್ನಾವುದುಗ್ರಾಜಿಯೊಳ್ ದೋ ।
ರ್ವಳದಿಂದಂ ತನ್ನ ಮೆಚ್ಚಂ ಸಲಿಸಿಯೆ ನೆಲನಂ ಕೊಳ್ವೆನಿಂ ತಳ್ವೆನೆಮ್ಮೊಳ್
ಕಳನಂ ಬೇಡೆಯ್ದೆ ಕೇಳ್ದಂ ಬಗೆಯನಱಿಯಲಾಯ್ತೇೞಿಮಂತೆಂದೆ ಪೇೞಿಂ ॥ ೯೩

ವ॥ ಎಂದಜಾತಶತ್ರು ಶತ್ರುಪಕ್ಷಕ್ಷಯಂ ಮಾಡುವುದ್ಯೋಗಮನೆತ್ತಿಕೊಂಡು ಪ್ರಯಾಣ ಭೇರಿಯಂ ಪೊಯ್ಸಿದಾಗಳ್-

ಮ॥ ದೆಸೆಯಂ ಪೊತ್ತ ಮದೇಭರಾಜಿ ದೆಸೆಗೆಟ್ಟೋಡಲ್ತಗುಳ್ದತ್ತು ಸ
ಪ್ತ ಸಮುದ್ರಂ ಕರೆಗಣ್ಮಿ ತನ್ನವಧಿಯಂ ದಾಂಟಿತ್ತಜಾಂಡಂ ಸಿಡಿ ।
ಲ್ದು ಸಿಡಿಲ್ಪೊಯ್ದೊಡೆದೊಂದು ತತ್ತಿಯವೊಲಾಯ್ತೆಂಬೊಂದು ಸಂದೇಹಮಂ
ಪೊಸತಂ ಭೂಭುವನಕ್ಕೆ ಮಾಡಿದುದು ತತ್ಪ್ರಸ್ಥಾನಭೇರೀರವಂ ॥ ೯೪

ಕರಿಗಳ್ ಭೃಂಗಕುಳಾಕುಳೀಕೃತ ಕಟೋಪೇತಂಗಳೊಂಬತ್ತು ಸಾ
ಸಿರಮಂತೊಂದು ಗಜಕ್ಕೆ ನೂಱು ರಥಮಂತಾ ಸ್ಯಂದನಕ್ಕೊಂದಱೊಳ್ ।
ತುರಗಂ ನೂಱನಿತುಂ ತುರಂಗದಳಮೊಂದೊಂದರ್ಕೆ ನೂಱಾಳ್ ತಗು
ಳ್ದಿರೆ ಬಲ್ಲರ್ ನಡೆ ನೋಡಿ ಕೂಡೆ ಪಡೆದತ್ತಕ್ಷೋಹಿಣೀಸಂಖ್ಯೆಯಂ ॥ ೯೫

ಉಂಟುಮಾಡಿ ಪ್ರತಿಭಟಿಸಿ ಯುದ್ಧಮಾಡಿದಲ್ಲದೆ ದುರ್ಯೋಧನನು ರಾಜ್ಯವನ್ನು ಕೊಡುವುದಿಲ್ಲ. ಯುದ್ಧಭಾರವೂ ಸಮೀಪಿಸಿದೆ. ಆರು ತಿಂಗಳ ಮೊದಲಿಂದಲೂ ಅದೇನಾಗುತ್ತದೆಂದು ಹರಟುತ್ತಿರುವುದೇ ? ರಣದಲ್ಲಿ ಯಾರು ಎಂಥವರು ಎಂಬುದನ್ನು ಈಗ ತಿಳಿಯುವುದು ಸಾಧ್ಯವೇ? ಕುರುಕ್ಷೇತ್ರಕ್ಕೆ ಬರಲಿ, ಬಂದರೆ ತಿಳಿಯುತ್ತದೆ. ವ॥ ಎನ್ನಲು ಧರ್ಮರಾಜನು ಹೀಗೆಂದನು ೯೩. ದುರ್ಯೋಧನನನ್ನು ಸಂಧಿಸಿ ಯುದ್ಧಮಾಡಿದ ಹೊರತು ಭೂಮಿಯನ್ನು ಕೊಡುವುದಿಲ್ಲ ಎಂದು ದೂತನ ಮೂಲಕ ಹೇಳಿಕಳುಹಿಸಿ ಈಗ ಕುರುಕ್ಷೇತ್ರವನ್ನು ಯುದ್ಧರಂಗವನ್ನಾಗಿ ನಿಶ್ಚಯಿಸಿದ್ದೇನೆ ಎಂದ ಮೇಲೆ ಇನ್ನು ಸಾವಕಾಶವೇತಕ್ಕೆ? ಘೋರಯುದ್ಧದಲ್ಲಿ ನನ್ನ ಬಾಹುಬಲದಿಂದಲೇ ಅವನ ಆಶೆಯನ್ನು ಪೂರೈಸಿ ರಾಜ್ಯವನ್ನು ತೆಗೆದುಕೊಳ್ಳುತ್ತೇನೆ. ಇನ್ನು ಸಾವಕಾಶ ಮಾಡುವುದಿಲ್ಲ. ನಮ್ಮಲ್ಲಿ ಯುದ್ಧಮಾಡುವುದನ್ನಪೇಕ್ಷಿಸಿ ಸರಿಯಾದುದನ್ನೇ ಕೇಳಿದ್ದಾನೆ. ಅವನ ಅಭಿಪ್ರಾಯವನ್ನು ಚೆನ್ನಾಗಿ ತಿಳಿಯಲಾಯ್ತು; ಇನ್ನು ಏಳಿ; ಹಾಗೆಯೇ ಹೇಳಿ ಎಂದು ಅವನನ್ನು ಕಳುಹಿಸಿದನು. ವ॥ ಧರ್ಮರಾಯನು ಶತ್ರುಪಕ್ಷವನ್ನು ನಾಶಮಾಡುವ ಕಾರ್ಯವನ್ನು ಅಂಗೀಕರಿಸಿ ಪ್ರಯಾಣಭೇರಿಯನ್ನು ಹೊಡೆಯಿಸಿದನು- ೯೪. ದಿಕ್ಕುಗಳ ಭಾರವನ್ನು ಹೊತ್ತಿರುವ ಮದದಿಂದ ಕೂಡಿದ ದಿಗ್ಗಜಗಳ ಸಮೂಹವು ದಿಕ್ಕೆಟ್ಟು ಓಡಲು ಪ್ರಾರಂಭಿಸಿದವೋ, ಏಳು ಸಮುದ್ರಗಳೂ ಮೇರೆಯನ್ನು ಮೀರಿ ತಮ್ಮ ಎಲ್ಲೆಯನ್ನು ದಾಟಿದುವೋ, ಬ್ರಹ್ಮಾಂಡವು ಸಿಡಿದು ಹೋಗಿ ಸಿಡಿಲಿನಿಂದ ಒಡೆದು ಚೂರಾದ ಒಂದು ಮೊಟ್ಟೆಯಂತಾಯಿತೋ ಎಂಬ ಒಂದು ಸಂದೇಹವನ್ನು ಆ ಭೇರಿಯು ಶಬ್ದವು ಭೂಲೋಕಕ್ಕೆಲ್ಲ ಉಂಟುಮಾಡಿತು. ೯೫. ದುಂಬಿಗಳ ಸಮೂಹದಿಂದ ಹಿಂಸಿಸಲ್ಪಟ್ಟ ಕಪೋಲಗಳನ್ನುಳ್ಳ ಒಂಬತ್ತು ಸಾವಿರ ಆನೆಗಳು, ಅಂತಹ

ವ|| ಅಂತು ಮಾಡಿದ ಪರಿಸಂಖ್ಯೆಯೊಳೊಂದಕ್ಷೋಹಿಣೀ ಬಲಂಬೆರಸು ತಲೆಬಟೆವಟೆಯೆಂದಭಿಮನ್ಯುಗೆ ಕೂಸಂ ಕೊಟ್ಟ ಜಟ್ಟಿಗಂ ವಿರಾಟಂ ಶ್ವೇತನುತ್ತರಂ ಶಂಖನೆಂಬ ಮೂವರ್ ಮಕ್ಕಳುಂ ಶತಾನೀಕ ಶತದ್ಯುಮ್ನ ಶತಚಂದ್ರಂ ಮೊದಲಾಗಿ ಪನ್ನೊರ್ವರ್ ತಮ್ಮಂದಿರುಂಬೆರಸು ನೆಲನದಿರೆ ಮುಂಗೋಳೊಳ್ ನಡೆಯೆ ದ್ರೌಪದಿಯ ಕೊಟ್ಟ ನಣ್ಪುಮಂ ದ್ರೋಣನೊಳಾದ ಪರಿಭವಮುಮಂ ನೆನೆದೊಂದಕ್ಷೋಹಿಣೀ ಬಲಂಬೆರಸು ದ್ರುಪದಂ ಧೃಷ್ಟದ್ಯುಮ್ನ ಶಿಖಂಡಿ ಚೇಕಿತಾನ ಯುಧಾಮನ್ಯೂತ್ತಮೌಜಃ ಪುರುಕುತ್ಸು ವಿಚಿತ್ರಾದಿಗಳಪ್ಪ ತನ್ನ ಮಕ್ಕಳ್ವೆರಸು ನೆಲಂ ಮೂರಿವಿಟ್ಟಂತೆ ಬಲವಕ್ಕದೊಳ್ ನಡೆಯೆ ಸುಭದ್ರೆಯ ಕೊಟ್ಟ ನಣ್ಪಿಂಗನುಬಲಮಾಗಿ ಪುಂಡರೀಕಾಕ್ಷನ ತಮ್ಮಂ ಸಾತ್ಯಕಿ ವೃಷ್ಣಿ ಕಾಂಭೋಜಕುಳತಿಳಕರಪ್ಪ ಯಾದವರ ಕುಲದೊಡನೆಯಕ್ಷೋಹಿಣೀಪತಿ ನಾಯಕಂ ಭೂಪತಿಯೆಡವಕ್ಕದೊಳ್ ನಡೆಯೆ ಕೇಕಯ ವಿಷಯಾಧೀಶ್ವರರಪ್ಪ ಕೈಕಯರಯ್ವರುವೊಂದಕ್ಷೋಹಿಣೀ ಬಲದೊಡನೆ ಸಿಡಿಲನುರುಳಿ ಮಾಡಿದಂತು ಪಿಂಗೋಳೊಳ್ ನಡೆಯೆ ಪಾಂಡ್ಯಂ ಶ್ರೀಜಯಸೋಮಕರೊಡನೊಂದಕ್ಷೋಹಿಣೀ ಬಲಂಬೆರಸು ಸುತ್ತಿಱಿದು ಬಳಸಿ ಬರೆ ಧರಣೇಂದ್ರನ ತಂಗೆಯಪ್ಪ ಕನಕಲತೆಗಂ ವಿಕ್ರಮಾರ್ಜುನಂಗಂ ಪುಟ್ಟಿದ ಮಗನಿಳಾವಂತನನಂತ ನಾಗರಾಜ ಬಲಂಬೆರಸು ನಾಗಲೋಕಮೆ ಕಿಟ್ಟಿಟ್ಟುಬರ್ಪಂತೆ

ಒಂದು ಆನೆಗೆ ನೂರು ತೇರುಗಳು ; ಆ ತೇರು ಒಂದೊಂದಕ್ಕೆ ನೂರು ಕುದುರೆಗಳು, ಅಷ್ಟು ಕುದುರೆಯ ಸೈನ್ಯದ ಒಂದೊಂದಕ್ಕೆ ನೂರಾಳು ಸೇರಿಕೊಂಡಿರಲು, ಅದು ತಿಳಿದವರ ಗಣನೆಯ ಪ್ರಕಾರ ಒಂದು ಅಕ್ಷೋಹಿಣೀ ಎಂದೆನಿಸಿತು ವ|| ಹೀಗೆ ಮಾಡಿದ ಲೆಕ್ಕದ (ಈ ಗಣನೆಗೆ ಅನುಗುಣವಾದ) ಒಂದು ಅಕ್ಷೋಹಿಣೀ ಸೈನ್ಯದಿಂದ ಕೂಡಿ ತನ್ನ ತಲೆಯನ್ನೇ ಬಳುವಳಿಯನ್ನಾಗಿ ಮಾಡಿ ಉತ್ತರನಿಗೆ ಮಗಳನ್ನು ಕೊಟ್ಟ ಶೂರನಾದ ವಿರಾಟನು, ಶ್ವೇತ, ಉತ್ತರ, ಶಂಖರೆಂಬ ಮೂರು ಮಕ್ಕಳನ್ನೂ ಶತಾನೀಕ, ಶತದ್ಯುಮ್ನ, ಶತಚಂದ್ರ ಮೊದಲಾದ ಹನ್ನೊಂದು ತಮ್ಮಂದಿರೊಡಗೂಡಿ ಭೂಮಿಯು ನಡುಗುವಂತೆ ಮುಂಭಾಗದಲ್ಲಿ ನಡೆದನು. ದ್ರೌಪದಿಯನ್ನು ಕೊಟ್ಟಿರುವ ಬಾಂಧವ್ಯವನ್ನೂ ದ್ರೋಣಾಚಾರ್ಯನಿಂದುಂಟಾದ ಅವಮಾನವನ್ನೂ ನೆನೆಸಿಕೊಂಡು ಒಂದು ಅಕ್ಷೋಹಿಣೀ ಸಮೇತನಾಗಿ ದ್ರುಪದನು ಧೃಷ್ಟದ್ಯುಮ್ನ, ಶಿಖಂಡಿ, ಚೇಕಿತಾನ, ಯುಧಾಮನ್ಯೂತ್ತಮೌಜ, ಪುರುಕುತ್ಸು, ವಿಚಿತ್ರರೇ ಮೊದಲಾದ ತನ್ನ ಮಕ್ಕಳೊಡಗೂಡಿ ಭೂಮಿಯ ಜನವೆಲ್ಲ ಗುಂಪುಕೂಡಿದ ಹಾಗೆ ಬಲಪಾರ್ಶ್ವದಲ್ಲಿ ನಡೆದನು. ಸುಭದ್ರೆಯನ್ನು ಕೊಟ್ಟಿರುವ ಸಂಟುತನಕ್ಕನುಗುಣವಾಗಿ ಶ್ರೀಕೃಷ್ಣನ ತಮ್ಮನಾದ ಸಾತ್ಯಕಿಯು ವೃಷ್ಣಿ ಕಾಂಭೋಜಕುಲತಿಲಕರಾದ ಯಾದವಕುಲದವರೊಡನೆ ಅಕ್ಷೋಹಿಣೀ ಸೈನ್ಯದ ನಾಯಕನಾಗಿ ರಾಜನ ಎಡಭಾಗದಲ್ಲಿ ನಡೆದನು. ಕೇಕಯ ದೇಶಾಧೀಶರಾದ ಕೈಕಯರೈದು ಮಂದಿಯೂ ಒಂದಕ್ಷೋಹಿಣೀ ಬಲದೊಡನೆ ಸಿಡಿಲನ್ನು ಉಂಡೆ ಮಾಡಿದ ಹಾಗೆ ಹಿಂಭಾಗದಲ್ಲಿ ನಡೆದರು. ಪಾಂಡ್ಯನು ಶ್ರೀಜಯ ಸೋಮಕರೊಡನೆ ಒಂದಕ್ಷೋಹಿಣೀ ಸೈನ್ಯಸಮೇತನಾಗಿ ಸುತ್ತಲೂ ವ್ಯಾಪಿಸಿ ಬಂದನು. ರಾಜನ ತಂಗಿಯಾದ ಕನಕಲತೆಗೂ ವಿಕ್ರಮಾರ್ಜುನನಿಗೂ ಹುಟ್ಟಿದ ಮಗನಾದ ಇಳಾವಂತನು ಸಮಸ್ತ ನಾಗರಾಜಸೈನ್ಯದೊಡನೆ ಪಾತಾಳಲೋಕವೇ ಕಿತ್ತು

**ಬರೆ ಹಿಡಿಂಬೆಗಂ ಭೀಮಂಗಂ ಪುಟ್ಟಿದ ಮಗಂ ಘಟೋತ್ಕಚನಱುವತ್ತೆಂಟು ಕೋಟಿ ರಾಕ್ಷಸ ಬಲಂಬೆರಸು ಬರೆ ಸಾಮಂತ ಚೂಡಾಮಣಿಯ ಕೃತೋಪಕಾರಮಂ ನೆನೆದಂಗದಪರ್ಣನೆಂಬ ಗಂಧರ್ವಂ ನಾಲ್ಕು ಕೋಟಿ ಗಂಧರ್ವಬಲಮುಮಱುವತ್ತು ಸಾಸಿರ ಗಿಳಿಯ ಬಣ್ಣದ ಕುದುರೆಗಳುಂ ಬೆರಸು ಗಂಧರ್ವಲೋಕಮೆ ಕಿೞ್ತೆೞ್ದು ಬರ್ಪಂತೆ ಬರೆ ಮಹಾ ಪ್ರಚಂಡರುಂ ಪ್ರತಾಪಿಗಳುಮಪ್ಪ ಪಂಚಪಾಂಡವರುಮಂಕದಭಿಮನ್ಯುವುಂ ಕೆಲ ಕೆಲದೊಳೋಲಗಿಸುತ್ತುಂ ಬರೆ ಕೊಂತಿಯ ಮಾವನಪ್ಪ ಕೊಂತಿಭೋಜನುಂ ಸೋಮಕಂ ಬೆರಸೊಂದಕ್ಷೋಹಿಣೀ ಬಲಂಬೆರಸು ಬರೆ ಮತ್ತಂ ಪ್ರಭದ್ರೈಕಬಲಮುಮಂಗ ವಂಗ ಕಳಿಂಗ ಕೊಂಗ ಕೊಂಕಣ ಗೊಲ್ಲ ಕಾಂಭೋಜ ಮಗಧ ಸೌರಾಷ್ಟ್ರ ವರಾಟ ಲಾಟ ಕರ್ಣಾಟಕ ರಹಾಟ ಮಳಯ ಮಾಳವ ನೇಪಾಳ ಪಾರಿವ ಪಾರಿಯಾತ್ರ ಬರ್ಬರ ಕೋಸಳ ಕಾಶಿ ಕಾಶ್ಮೀರ ಕೌಶಿಕಾಂಧ್ರ ದ್ರವಿಳ ಗಜಮುಖಾಶ್ವ ಮುಖೋಷ್ಟ್ರಮುಖ ಖರಮುಖ ಮೇಷಮುಖ ಲಂಬಕರ್ಣ ಹಸ್ತಿಕರ್ಣಾಶ್ವಕರ್ಣ ತುರುಷ್ಕ ಪ್ರವರ ನಾನಾದ್ವೀಪ ದೇಶಾಧೀಶ್ವರರುಂ ಪಗೆಗಂ ಪಾಟೆಗಂ ಪರಿಭವಕ್ಕಂ ಪಲವೆಗಂ ಪಾಗುಡಕ್ಕಂ ಪಳಬದ್ದಕ್ಕಂ ವೈವಾಹಿಕ ಸಂಬಂಧಕ್ಕಂ ಮೈತ್ರಕ್ಕಂ ಮೇರೆಗಂ ಅಟ್ಟಟ್ಟಿಗಂ ಸ್ವಾಮಿ ಭೃತ್ಯ ಸಂಬಂಧಕ್ಕಂ ದೋರ್ವಲಕ್ಕಂ ಮೈಮೆಗಂ ಮೋಕ್ಷಕ್ಕಂ ಮಹಾಸಮುದ್ರದೊಳ್ ಮಹಾನದಿಗಳ್ ಕೂಡುವಂತೇೞಕ್ಷೋಹಿಣೀ ಬಲಂ ಕೂಡಿ ನಡೆಯೆ ತನ್ನ ನಾಲ್ವರ್ ತಮ್ಮಂದಿರೊಡನೆ**

ಎದ್ದುಬರುವಂತೆ ಬಂದನು. ಹಿಡಿಂಬೆಗೂ ಭೀಮನಿಗೂ ಹುಟ್ಟಿದ ಘಟೋತ್ಕಚನು ಅರವತ್ತೆಂಟು ಕೋಟಿ ರಾಕ್ಷಸಸೈನ್ಯದೊಡಗೂಡಿ ಬಂದನು. ಅರ್ಜುನನು ಮಾಡಿದ ಉಪಕಾರವನ್ನು ನೆನೆಸಿಕೊಂಡು ಅಂಗದಪರ್ಣನೆಂಬ ಗಂಧರ್ವನು ನಾಲ್ಕು ಕೋಟಿ ಗಂಧರ್ವಸೈನ್ಯವೂ ಅರವತ್ತು ಸಾವಿರ ಗಿಳಿಯ ಬಣ್ಣದ ಕುದುರೆಗಳೂ ಕೂಡಿ ಗಂಧರ್ವಲೋಕವೇ ಕಿತ್ತು ಎದ್ದು ಬರುವ ಹಾಗೆ ಬಂದನು. ಮಹಾಪ್ರಚಂಡರೂ ಪ್ರತಾಪಿಗಳೂ ಆದ ಶ್ರುತಸೋಮಕರೇ ಮೊದಲಾದ ಪಂಚ ಉಪಪಾಂಡವರೂ ಶೂರನಾದ ಅಭಿಮನ್ಯುವೂ ಪಕ್ಕಪಕ್ಕದಲ್ಲಿ ಸೇವೆಮಾಡುತ್ತಿದ್ದರು.ಕುಂತಿಯ ಮಾವನಾದ ಕುಂತೀಭೋಜನು ಸೋಮಕನೊಡಗೂಡಿ ಒಂದಕ್ಷೋಹಿಣೀ ಸೈನ್ಯದ ಜೊತೆಯಲ್ಲಿ ಬಂದು ಸೇರಿದನು. ಮತ್ತು ಪ್ರಭದ್ರೈಕ ಬಲವೂ ಅಂಗ ವಂಗ ಕಳಿಂಗ ಕೊಂಗ ಕೊಂಕಣ ಗೊಲ್ಲ ಕಾಂಭೋಜ ಮಗಧ ಸೌರಾಷ್ಟ್ರ ವರಾಟ ಲಾಟ ಕರ್ಣಾಟ ಕರಹಾಟ ಮಳಯ ಮಾಳವ ನೇಪಾಳ ಪಾರಿವ ಪಾರಿಯಾತ್ರ ಬರ್ಬರ ಕೋಸಳ ಕಾಶಿ ಕಾಶ್ಮೀರ ಕೌಶಿಕ ಆಂಧ್ರ ದ್ರವಿಡ ಗಜಮುಖ ಅಶ್ವಮುಖ ಉಷ್ಟ್ರಮುಖ ಖರಮುಖ ಮೇಷಮುಖ ಲಂಬಕರ್ಣ ಹಸ್ತಿಕರ್ಣ ಅಶ್ವಕರ್ಣ ತುರುಷ್ಕರೇ ಮುಖ್ಯರಾದ ನಾನಾದ್ವೀಪದ ಒಡೆಯರೂ ಧರ್ಮಕ್ಕೂ ಸೋಲಿಗೂ ಹಳೆಯ ಸಂಬಂಧಕ್ಕೂ ಕಪ್ಪಕಾಣಿಕೆಗೂ ಲಾಭ ಮತ್ತು ಪ್ರಯೋಜನಾದಿಗಳಿಗೂ ಮದುವೆಯ ನಂಟುತನಕ್ಕೂ ಸ್ನೇಹಕ್ಕೂ ಗಡಿಯಲ್ಲಿದ್ದು ದಕ್ಕೂ ದೌತ್ಯಕ್ಕೂ ಆಳರಸರ ಸಂಬಂಧಕ್ಕೂ ತೋಳಬಲಕ್ಕೂ ಮಹಿಮೆಗೂ ಮೋಕ್ಷಕ್ಕೂ ಹೀಗೆ ನಾನಾ ಕಾರಣಕ್ಕಾಗಿ ಮಹಾಸಮುದ್ರಕ್ಕೆ ಮಹಾನದಿಗಳು ಬಂದು ಕೂಡುವಂತೆ ಏಳು ಅಕ್ಷೋಹಿಣೀ ಸೈನ್ಯಸಮೇತರಾಗಿ ಬಂದು ಸೇರಿದರು. ತನ್ನ ನಾಲ್ಕು ಜನ ತಮ್ಮಂದಿರೊಡನೆ ಮಂಗಳಾಭರಣಗಳಿಂದಲಂಕೃತನಾಗಿ ಮಂಗಳಪ್ರಧಾನವಾದ

ಮಂಗಳವಸದಸಂಗೊಂಡು ಮಂಗಳ ಪ್ರಧಾನೋಚಿತ ವಿಜಯಗಜಮನೇಜೆ ವಿದ್ಯೋತಮಾಗಿ ದಕ್ಷಿಣಾವರ್ತಮಪ್ಪ ಹೋಮಾಗ್ನಿಯಂ ಬಲಂಗೊಂಡು ಬಲದ ಕೋಡ ಮೇಲೆ ಕೆಯ್ಯಂ ಪೇಜೆ ಮುಖವಿಕ್ಷೇಪಣಂಗೆಯ್ದು ಘನಾಘನನಿನಾದದಿಂ ಬೃಂಹಿತಂಗೆಯ್ದ ವಿಜಯಗಜಮಂ ನೆಲನಂ ಪೊಕ್ಕಡಂಗಿದ ಪಗೆವರನಗುಳ್ದು-ಕೊಲ್ವುದನುದಾಹರಿಸುವಂತೆ ದಕ್ಷಿಣ ಚರಣದೊಳ್ ನೆಲನಂ ಪರಡಿ ಗಂಭೀರನಿನಾದದಿಂ ಹೇಷಿತಂಗೆಯ್ದ ವಿಜಯಹಯಮುಂ ವಿಜಯನ ವಿಜಯಮನೆ ಸೂಚಿಸೆ-

ಮಂ॥ ಎಸಗಿತ್ತಂದನುಕೂಲಮಂದಪವನಂ ಪೆಣ್ದುಂಬಿಗಳ್ ಮುತ್ತುತುಂ
ಮುಸುಱುತ್ತುಂ ಬರೆ ಬಂದುದಿಂದ್ರವನದಿಂ ಪೂದಂದಲಂಭೋಧಿ ಗ ।
ರ್ಜಿಸುವಂತಾದುದು ದೇವದುಂದುಭಿ ಜಯಪ್ರಾರಂಭಮಂ ಸಾಱುವಂ
ತೆಸೆದತ್ತಚ್ಚರಿಯಪ್ಪಿನಂ ಜಯಜಯಧ್ವಾನಂ ದಿಗಂತಂಗಳೊಳ್ ॥ ೯೬

ವ॥ ಆ ಪ್ರಸ್ತಾವದೊಳ್-

ಶಾ॥ ವಾತ್ಯಾ ದುರ್ಧರ ಗಂಧ ಸಿಂಧುರ ಕಟ ಸ್ರೋತಸ್ಸಮುದ್ಯನ್ಮದ
ವ್ರಾತೇಂದಿಂದಿರ ಚಂಡ ತಾಂಡವ ಕಲ ಸ್ವಾಭಾವಿಕ ಶ್ರೇಯಸಃ ।
ಕಿಂಚಾಕಸ್ಮಿಕ ಪಾಂಸು ಪಲ್ಲವ ಜಳಸ್ಯಂದೀ ಸದಾ ಸಿಂಧುರ
ಪ್ರಾಗೇಯಂ ಪ್ರಿಯಗಳ್ಳ ಭೂಪತಿ ಚಮೂಪ್ರಸ್ಥಾನಮಾಚಕ್ಷತೇ ॥ ೯೭

ವಿಜಯಗಜವನ್ನೇರಿ ಪ್ರಕಾಶಿಸುತ್ತ ಬಲಗಡೆಯ ಸುಳಿಯನ್ನುಳ್ಳ ಹೋಮಾಗ್ನಿಯನ್ನು ಪ್ರದಕ್ಷಿಣೆ ಮಾಡಿ ಬಲದ ಕೊಂಬಿನ ಮೇಲೆ ಸೊಂಡಿಲನ್ನಿಟ್ಟು ಮುಖವನ್ನು ಅತ್ತಿತ್ತ ಕೊಡವಿ ಗುಡುಗಿನ ಶಬ್ದದಿಂದ ಘೀಳಿಡುವ ವಿಜಯಗಜವೂ ಭೂಮಿಯನ್ನು ಪ್ರವೇಶಿಸಿ ಅಡಗಿಕೊಂಡಿರುವ ಶತ್ರುಗಳನ್ನು ಅಗೆದು ಕೊಲ್ಲುವುದನ್ನು ಉದಾಹರಿಸುವಂತೆ ಬಲಗಾಲಿನಿಂದ ನೆಲವನ್ನು ಕೆದರಿ ಗಂಭೀರ ಧ್ವನಿಯಿಂದ ಕೆನೆಯುವ ವಿಜಯಹಯವೂ ಅರ್ಜುನನ ವಿಜಯವನ್ನೇ ಸೂಚಿಸಿದುವು. ೯೬. ಆಗ ಗಾಳಿಯು ನಿಧಾನವಾಗಿ ಹಿತಕರವಾಗಿ (ಅಪ್ಯಾಯಮಾನವಾಗಿರುವ ರೀತಿಯಲ್ಲಿ) ಬೀಸಿತು. ಹೆಣ್ಣುದುಂಬಿಗಳು ಮುತ್ತುತ್ತಲೂ ಕವಿಯುತ್ತಲೂ ಬರಲು ಇಂದ್ರವನದಿಂದ ಪುಷ್ಪವೃಷ್ಟಿಯಾಯಿತು. ಸಮುದ್ರವು ಘೋಷಿಸುವ ಹಾಗಾಯಿತು. ದಿಕ್ಕುಗಳ ಅಂಚಿನಲ್ಲಿ ಜಯ ಜಯ ಧ್ವನಿಯು ಆಶ್ಚರ್ಯವನ್ನುಂಟುಮಾಡಿದುವು. ದೇವದುಂದುಭಿರವವು ಜಯೋದ್ಯೋಗವನ್ನು ಸಾರುವಂತೆ ಮೊಳಗಿದುವು. ವ॥ ಆ ಸಂದರ್ಭದಲ್ಲಿ ಬಿರುಗಾಳಿಯಿಂದ ಧರಿಸಲಸಾಧ್ಯವಾದ ಮದ್ದಾನೆಗಳ ಕಪೋಲಪ್ರದೇಶದ ಮದಧಾರೆಯನ್ನುಳ್ಳುದೂ ಹಾರುತ್ತಿರುವ ಮದೋದಕದ ಮುತ್ತುತ್ತಿರುವ ದುಂಬಿಗಳ ವೇಗವಾದ ಕುಣಿತದ ರಮಣೀಯ ನಾದದಿಂದ ಸಹಜವಾದ ಶ್ರೇಯಸ್ಸನ್ನುಳ್ಳುದೂ ಮತ್ತು ಅಕಸ್ಮಾತ್ತಾಗಿ ಎದ್ದ ಧೂಳನ್ನುಳ್ಳುದೂ ಆನೆಯ ಸೊಂಡಿಲಿನ ತುದಿಯ ನೀರಿನ ಪ್ರವಾಹದಿಂದ ಯಾವಾಗಲೂ ಹರಿಯುತ್ತಿರುವ ನದಿಯನ್ನುಳ್ಳುದೂ ಆದ ಸೇನಾಪ್ರಯಾಣವನ್ನು ಪ್ರಿಯಗಳ್ಳನೆಂಬ ಬಿರುದುಳ್ಳ ಅರಿಕೇಸರಿರಾಜನು ಅಪೂರ್ವ ರೀತಿಯಲ್ಲಿ

ವ॥ ಎಂಬ ಮಂಗಳಪಾಠಕರ ಮಂಗಳ ವೃತ್ತೋಚ್ಚಾರಣೆಗಳೆಸೆಯೆ ಧರ್ಮಪುತ್ರಂ ಕುರುಕ್ಷೇತ್ರಾಭಿಮುಖನಾದಾಗಳ್-

ಚಂ॥ ಧ್ವಜಮಯಮಂಬರಂ ಗಜಮಯಂ ಭುವನಂ ಪ್ರಳಯ ಪ್ರಚಂಡ ಭೂ
ಭುಜಮಯಮಷ್ಟದಿಗ್ವಳಯಮಶ್ವಮಯಂ ಜಗತೀತಳಂ ರಥ ।
ವ್ರಜಮಯಮುಂ ಪದಾತಿಮಯಮುಂ ನೆಱೆಯಾದುದು ಕಾಡು ಕೋಡುಮಾರ್
ತ್ರಿಜಗದೊಳಾಂಪರೀ ಬಲಮನಿನ್ನೆನಿಸಿತ್ತು ಚತುರ್ಬಲಾರ್ಣವಂ॥ ೯೮

ಎಣಿಕೆಗಳುಂಬಮುಂ ಪಿರಿದುಮಾದ ಪದಾತಿ ವರೂಥ ವಾಜಿ ವಾ
ರಣ ಬಲದಿಂದಮಿರ್ಮಡಿಸೆ ಧಾತ್ರಿಯ ಬಣ್ಣೆನಗೆಂದಿನಂದವ ।
ಲ್ತಣಕಮಿದೆಂದು ಕಣ್ ತುಮುಟೆ ಪೇರ್ಬೆಡೆಯಿಂ ಮಣಿ ಸೂಸೆ ಬೇಸಱಿಂ
ತಿಣುಕಿದನಾನಲುಮ್ಮಳಿಸಿ ಶೇಷನಶೇಷಮಹೀವಿಭಾಗಮಂ ॥ ೯೯

ಉ॥ ಏಱಿದ ಪೊನ್ನ ಪಣ್ಣುಗೆಯ ಪೆರ್ವಿಡಿ ಕಟ್ಟದಿರಾಗೆ ಮುಂದೆ ಬಂ
ದೇಱಿದ ಚೆನ್ನಗನ್ನಡಿಯ ಚೇಟಿಕೆ ಬೀಸುವ ಕುಂಚಮೆಯ್ದೆ ಮೆ ।
ಯ್ದೋಱುವ ಗಾಡಿ ಕಾಂಚನದ ದಂಡದ ಸೀಗುರಿ ನೋೞ್ಪೊಡಾರುಮಂ
ಮಾಱೆ ಮನೋಜನೊಡ್ಡನಿಸಿದರ್ ನಡೆತಂದ ನರೇಂದ್ರಕಾಂತೆಯರ್ ॥ ೧೦೦

ನಿರೀಕ್ಷಿಸುತ್ತಿದ್ದಾನೆ. ವ॥ ಎಂಬ ಅರ್ಥದಿಂದ ಕೂಡಿದ ಹೊಗಳುಭಟ್ಟರ ಮಂಗಳಶ್ಲೋಕಪಠನವು ಶೋಭಾಯಮಾನವಾಗಿರಲು ಧರ್ಮರಾಜನು ಕುರುಕ್ಷೇತ್ರಕ್ಕೆ ಅಭಿಮುಖನಾದನು. ೯೮. ಆಕಾಶವು ಬಾವುಟಗಳಿಂದ ತುಂಬಿದೆ ; ಲೋಕವೆಲ್ಲ ಆನೆಗಳಿಂದ ತುಂಬಿದೆ. ಎಂಟು ದಿಕ್ಕುಗಳ ಸಮೂಹವು ಪ್ರಳಯಕಾಲದಷ್ಟು ಭಯಂಕರರಾದ ರಾಜರಿಂದ ತುಂಬಿದೆ. ಭೂಮಂಡಲವು ಕುದುರೆಯಿಂದ ತುಂಬಿದೆ. ಕಾಡು ಕೋಡುಗಳು ರಥಗಳ ಸಮೂಹದಿಂದಲೂ ಕಾಲಾಳುಗಳ ಸಮೂಹದಿಂದಲೂ ಸಂಪೂರ್ಣವಾಗಿ ತುಂಬಿವೆ. ಮೂರುಲೋಕಗಳಲ್ಲಿ ಯಾರು ಈ ಸೈನ್ಯವನ್ನು ಪ್ರತಿಭಟಿಸುತ್ತಾರೆ ಎನ್ನುವ ಹಾಗೆ ಚತುರಂಗಸೇನಾಸಮುದ್ರವು ಎನ್ನಿಸಿತು. ೯೯. ಲೆಕ್ಕಕ್ಕೆ ಮೀರಿದುದೂ ಮಹತ್ತಾದುದೂ ಆದ ಚತುರಂಗಸೈನ್ಯದ ಭಾರದಿಂದ ಭೂಮಿಯ ಭಾರವು ಎರಡರಷ್ಟಾಗಲು ಈ ಹಿಂಸೆ ನನಗೆ ಎಂದಿನ ರೀತಿಯದಲ್ಲ ಎಂದು ಆದಿಶೇಷನು ಕಣ್ಣನ್ನು ಅರ್ಧಮುಚ್ಚಿ ದೊಡ್ಡ ಹೆಡೆಯಿಂದ ರತ್ನಗಳು ಚೆಲ್ಲುತ್ತಿರಲು ಸಮಸ್ತ ಭೂಮಂಡಲದ ಭಾರವನ್ನು ಧರಿಸಲು ತಿಣುಕಿದನು. ೧೦೦. ತಾವು ಹತ್ತಿದ ಸುವರ್ಣಾಲಂಕಾರದಿಂದ ಕೂಡಿದ ದೊಡ್ಡ ಹೆಣ್ಣಾನೆಯು ಆ ಸೈನ್ಯದೊಂದಿಗೆ ರಾಜಪತ್ನಿಯರು ವೈಭವಯುಕ್ತವಾದ ಆನೆಯನ್ನೇರಿ ಬಂದರು. ಸೌಂದರ್ಯವತಿಯರಾದ ದಾಸಿಯರು ಸುವರ್ಣಾಲಂಕೃತವಾದ ಆನೆಗಳನ್ನೇರಿ ತಾವು ಧರಿಸಿರುವ ರತ್ನಗನ್ನಡಿಗಳೂ, ಚಿನ್ನದ ಕಾವನ್ನುಳ್ಳ ಸೀಗುರಿಗಳೂ ತಮ್ಮ ಶರೀರಕಾಂತಿಯಿಂದ ಕೂಡಿ ನೋಡಿದವರು ಮಾರುಹೋಗುವಂತೆ

ಕಂ॥ ಅಂತು ತಿರುವಿಂ ಬರ್ದುಂಕಿದ
ಕಂತುವ ನನೆಗಣೆಗಳಂತೆವೋಲ್ ನಡೆತಂದರ್ ।
ಸಂತಸದೆ ಪೊನ್ನ ಕಳಸದ
ದಂತದ ಸಿವಿಗೆಗಳನೇಱಿ ಭೋಗಿಯರರಬರ್ ॥ ೧೦೧

ಹರಿಣೀಪ್ಲುತಂ ॥ ನಡೆಯೆ ತುರಗಂ ಪೊನ್ನಾಯೋಗಂಗಳಿಂದಮುರ್ದಟ್ಟೆಯಿಂ
ಪಡೆಯೆ ನೆೞಲಂ ಚಂಚತ್ಪಿಂಛಾತಪತ್ರಮೆ ಕೂಡೆ ತ ।
ಮ್ಮೊಡನೆ ಬರೆ ಬಂದೆತ್ತಂ ಪತ್ತೆಂಟು ದೇಸೆ ವಿಳಾಸದೊಳ್
ತೊಡರೆ ಚರಿತಂಬಂದರ್ ಕಣ್ಗೊಪ್ಪಿರಲ್ ವರ ಭೋಗಿಯರ್ ॥ ೧೦೨

ಚಂ॥ ಸಡಹುಡನಪ್ಪ ಕಟ್ಟಿ ಕೊಡೆ ಸಂತಸದಿಂ ಪೆಱಗೇಱಿ ಬರ್ಪ ಕ
ನ್ನಡಿವಿಡಿದಾಕೆ ಚಿನ್ನದ ಸವಂಗಮಪೂರ್ವದ ಮೊಚ್ಚೆಯುಂ ಪವ ।
ಣ್ಬಡೆದ ಸುವರ್ಣ ಪಾರಿವದ ಕುಪ್ಪಸಮೊಪ್ಪೆ ಬೆಡಂಗನಾಳ್ದು ಕ
ಣ್ಗಿದಱದೆ ಪೆಂಡವಾಸದ ವಿಳಾಸದ ಸೂಳೆಯರೊಪ್ಪಿ ತೋಱಿದರ್ ॥ ೧೦೩

ಮ॥ ನಡೆಯಲ್ಬಂದಿಱಿಯಲ್ಕೆ ತಕ್ಕ ತುರಂಗಂ ಭೋರೆಂದು ಬರ್ಪೊಂದೊಡಂ
ಬಡು ಬಂದೆತ್ತಿಸಿದೊಂದು ಸತ್ತಿಗೆ ಕರಂ ಮೆಯ್ವೆತ್ತು ಮುಯ್ವಾಗಮಾ ।
ಗಡುಮಾರ್ಗಂ ಕುಡುತಿರ್ಪ ಕಪ್ಪುರದ ಬಂಬಲ್ದಂಬುಲಂ ರಾಗಮಂ
ಪಡೆಗೆಲ್ಲಂ ಪಡೆವನ್ನೆಗಂ ನಡೆದರಂದೆತ್ತಂ ಕೆಲರ್ ನಾಯಕರ್ ॥ ೧೦೪

ಆಕರ್ಷಕವಾಗಿರಲು ಮನ್ಮಥನ ಸೈನ್ಯವೆನ್ನಿಸಿ ಪ್ರಕಾಶಿಸಿದರು. ೧೦೧. ಹಾಗೆ ಬಿಲ್ಲಿನ ಹಗ್ಗದಿಂದ ತಪ್ಪಿಸಿಕೊಂಡ ಮನ್ಮಥನ ಪುಷ್ಪಬಾಣದಂತೆ ಕೆಲವರು ವಿಲಾಸಿನಿಯರು ಚಿನ್ನದ ಕಲಶವನ್ನುಳ್ಳ ದಂತದ ಪಲ್ಲಕ್ಕಿಗಳನ್ನು ಹತ್ತಿ ಸಂತೋಷದಿಂದ ಬಂದರು. ೧೦೨. ಕುದುರೆಗಳು ಚಿನ್ನದ ಅಲಂಕಾರಗಳಿಂದ ಕೂಡಿ ಸಂತೋಷದಿಂದ ನಡೆದು ಬರಲು, ಚಲಿಸುತ್ತಿರುವ ನವಿಲುಗರಿಯ ಕೊಡೆಯು ನೆರಳನ್ನುಂಟು ಮಾಡುತ್ತ ಜೊತೆಯುಲ್ಲಿ ಬರಲು, ಎಲ್ಲೆಲ್ಲಿಯೂ ಹತ್ತೆಂಟು ವಿಳಾಸಗಳು ಶೋಭಾಯಮಾನವಾಗಿರಲು ಶ್ರೇಷ್ಠರಾದ ಭೋಗಸ್ತ್ರೀಯರು ಕಣ್ಣಿಗೆ ಆಕರ್ಷಕವಾಗಿರುವ ರೀತಿಯಲ್ಲಿ ಜಾಗ್ರತೆಯಾಗಿ ಬಂದರು. ೧೦೩. ಸಡಗರದಿಂದ ಕೂಡಿದ ಹೇಸರಗತ್ತೆಯ ಮೇಲೆ ಸಂತೋಷದಿಂದ ಹಿಂದ ಕುಳಿತು ಬರುವ ಕನ್ನಡಿಯನ್ನು ಹಿಡಿದಿರುವ ದಾಸಿಯೂ ಚಿನ್ನದ ಸರಿಗೆಯ ಕವಚವೂ ಅಪೂರ್ವವಾದ ಪಾದರಕ್ಷೆಯೂ ಪ್ರಯಾಣಕ್ಕನುಗುಣವಾದ ಹೊಂಬಣ್ಣದ ಪಾರಿವಾಳದ ಬಣ್ಣದ ಕುಪ್ಪಸವೂ ಸುಂದರವಾಗಿರಲು ಬೆಡಗಿನಿಂದ ಕೂಡಿ ಕಣ್ಣಿಗೆ ಸಹ್ಯವಾದ ರೀತಿಯಲ್ಲಿ (ಹಿತವಾಗಿ) ರಾಣಿವಾಸದ ವಿಳಾಸವನ್ನುಳ್ಳ ವೇಶ್ಯಾಸ್ತ್ರೀಯರು ಚೆಲುವಿನಿಂದ ಕೂಡಿ ಕಾಣಿಸಿಕೊಂಡರು. ೧೦೪. ಯುದ್ಧಕ್ಕೆಂದು ಬಂದ ಕುದುರೆಯು ಭೋರೆಂದು ಯೋಗ್ಯವಾದ ರೀತಿಯಲ್ಲಿ ನಡೆಯಲು, ತಮಗೆ ಹಿತಕರವಾದ ರೀತಿಯಲ್ಲಿ (ಒಪ್ಪುವ ರೀತಿಯಲ್ಲಿ) ಹಿಡಿದು ಬರುತ್ತಿರುವ ಛತ್ರಿ, ಪೂರ್ಣವಾಗಿ ಪುಷ್ಟವಾಗಿ ಬೆಳೆದ ತಮ್ಮ

ವ॥ ಮತ್ತಂ ಸಸಂಭ್ರಮ ಪ್ರಚಳಿತ ಸಮದ ಗಜ ಘಟಾ ಘಂಟಾರವಂಗಳಿಂದಂ ತುರಂಗಮಹೇಷಿತಂಗಳಿಂದಂ ಮಹಾಸಾಮಂತರ ಪದಿರ ಪಱೆಗಳಿಂದಮಗುರ್ವಾಗೆ ನಡೆವ ಬೀಡಿಂಗೆ ಬೀಡುವಿಡಲ್ ನೆಲನುಮೊಲೆಗಲ್ಗಳ್ಗೆ ಬೆಟ್ಟುಗಳುಂ ಗುಡಿಯ ಗೂಂಟಕ್ಕೆ ಬಲ್ಲಡವಿಂಗಳುಂ ದಂಡಿಗೆಗೆ ವೇಣುವನಂಗಳುಮಾನೆಗಂಬಕ್ಕೆ ಪೆರ್ಮರುಂಗಳುಮಾ ಪಡೆಗೆ ನೆಱೆಯವೆನಿಸಿ ಪಾಂಡವರೇೞಕ್ಕೋಹಿಣೀ ಬಲಂಬೆರಸೇೞುಂ ಸಮುದ್ರಂಗಳುಂ ಮೇರೆದಪ್ಪಿ ಬರ್ಪಂತಿರೆ ಬಂದು ಕಡಿತಮಿಕ್ಕಿದಂತಿರ್ದ ಸಮಚತುರಶ್ರಂ ನಾಲ್ವತ್ತೆಣ್ಗಾವುದು ಪರಿ ಪ್ರಮಾಣಮೆನಿಪ ಕುರುಕ್ಷೇತ್ರಮನೆಯ್ದೆವಂದದಱ ಪಶ್ಚಿಮ ದಿಶಾಭಾಗದೊಳ್ ಮುನ್ನೆ ಪರಶುರಾಮನೀ ಲೋಕದೊಳುಳ್ಳರಸುಮಕ್ಕಳೆಲ್ಲರುಮನಿರ್ಪತ್ತೊಂದುಸೂೞ್ವರಂ ಪೇೞೆ ಪೆಸರಿಲ್ಲದಂತೆ ಕೊಂದು ತಂದೆಯ ಪಗೆಗೆಂದಲ್ಲಿಯೆ ತಂದು ನಿಜನಿಶಿತ ಪರಶುಧಾರೆಗಳಿಂ ನೆತ್ತರ್ ಸೂಸಿ ಪಾಯೆ ಕಡಿದವರ ನೆತ್ತರ ಧಾರೆಯೊಳ್ ತೀವಿ ತನ್ನ ತಾಯಂ ನೀರಿೞಿಪಲುಂ ತಾನುಂ ಮಿಂದು ತನ್ನ ತಂದೆಗೆ ನೀರ್ಗುಡಲುಮೆಂದು ಮಾಡಿದ ಶಮಂತ ಪಂಚಕಂಗಳೆಂಬಯ್ದು ಪೆರ್ಮಡುಗಳ ಕೆಲದೊಳೆಡೆಯಱಿದು ಬೀಡಂ ಬಿಡಿಸಿ-

ಭುಜಭಾಗ, ಎಲ್ಲ ಕಾಲದಲ್ಲಿಯೂ ಎಲ್ಲರಿಗೂ ಕೊಡುತ್ತಿರುವ ಕರ್ಪೂರ ತಾಂಬೂಲ ರಾಶಿ ಇವು ಸೈನ್ಯಕ್ಕೆಲ್ಲ ಸಂತೋಷವನ್ನುಂಟುಮಾಡುವಂತೆ ಕೆಲವು ನಾಯಕರು ಎಲ್ಲ ಕಡೆಯಲ್ಲಿಯೂ ನಡೆದರು. ವ॥ ಮತ್ತು ಸಂಭ್ರಮದಿಂದ ಕೂಡಿದ ಮದ್ದಾನೆಗಳ ಗಂಟೆಗಳ ಶಬ್ದ, ಕುದುರೆಗಳ ಕೆನೆಯುವಿಕೆ, ಮಹಾಸಾಮಂತರ ಸಂಕೇತವಾದ್ಯ - ಇವು ಭಯಂಕರವಾಗಿರಲು ನಡೆಯುತ್ತಿರುವ ಸೈನ್ಯಕ್ಕೆ ತಂಗುವುದಕ್ಕೆ ನೆಲವೇ ಸಾಲದಾಯಿತು. ಒಲೆಯ ಕಲ್ಲುಗಳಿಗೆ ಪರ್ವತಗಳು ಸಾಲದಾಯಿತು, ಬಾವುಟಗಳ ಗೂಟಕ್ಕೆ (ಗೂಡಾರದ ಗೂಟಕ್ಕೆ ?) ಹಿರಿಯ ಕಾಡುಗಳು ಸಾಲದಾದುವು. ಪಲ್ಲಕ್ಕಿಗಳಿಗೆ ಬಿದರ ಕಾಡುಗಳು ಸಾಲದಾದುವು. ಆನೆಯನ್ನು ಕಟ್ಟುವ ಕಂಬಗಳಿಗೆ ದೊಡ್ಡ ಮರಗಳು ಸಾಲದಾದುವು ಎನ್ನಿಸಿ ಪಾಂಡವರು ಏಳಕ್ಷೋಹಿಣೀ ಸೈನ್ಯದಿಂದ ಕೂಡಿ ಏಳು ಸಮುದ್ರಗಳೂ ಎಲ್ಲೆ ಮೀರಿ ಬರುತ್ತಿರುವ ಹಾಗೆ ಒಂದು ಕಡಿತದಲ್ಲಿ (ಬಟ್ಟೆಯನ್ನು ಮಡಿಸಿ ಮಾಡಿರುವ ಪುಸ್ತಕ) ಬರೆದಂತಿದ್ದ ಚಚ್ಚೌಕವಾಗಿರುವ ನಲವತ್ತೆಂಟು ಗಾವುದ ಸುತ್ತಳತೆಯನ್ನುಳ್ಳ ಕುರುಕ್ಷೇತ್ರಕ್ಕೆ ಬಂದು ಸೇರಿದರು. ಅದರ ಪಶ್ಚಿಮ ದಿಗ್ಭಾಗದಲ್ಲಿ ಶಮಂತಪಂಚಕಗಳು. ಇವು ಪೂರ್ವಕಾಲದಲ್ಲಿ ಈ ಲೋಕದಲ್ಲಿರುವ ಅರಸುಮಕ್ಕಳನ್ನೆಲ್ಲ ಹೇಳಲು ಹೆಸರಿಲ್ಲದಂತೆ ಇಪ್ಪತ್ತೊಂದು ಸಲ ಕೊಂದು ತನ್ನ ತಂದೆಯ ಹಗೆತನಕ್ಕಾಗಿ ಅಲ್ಲಿಗೆ ತಂದು ತನ್ನ ಹರಿತವಾದ ಕೊಡಲಿಯ ಅಲಗಿನಿಂದ ರಕ್ತವು ಚೆಲ್ಲಿ ಹರಿಯುವಂತೆ ಕತ್ತರಿಸಿ ಅವರ ರಕ್ತಧಾರೆಯಿಂದ ತುಂಬಿ ತನ್ನ ತಾಯಿಗೆ ಸ್ನಾನ ಮಾಡಿಸುವುದಕ್ಕೂ ತಾನು ಸ್ನಾನ ಮಾಡಿ ತನ್ನ ತಂದೆಗೆ ತರ್ಪಣ ಕೊಡುವುದಕ್ಕೂ ಮಾಡಿದ ಅಯ್ದು ದೊಡ್ಡ ಮಡುಗಳಾದುವು. ಅವುಗಳ ಸಮೀಪದಲ್ಲಿ ಸ್ಥಳವನ್ನು ನಿಷ್ಕರ್ಷಿಸಿ ಬೀಡನ್ನು

ಶಾ॥ ವೀರಕ್ಷೇತ್ರಮಗುರ್ವಿಗಂಕದ ಕುರುಕ್ಷೇತ್ರಂ ಬಲಸ್ಥರ್ ಮಹಾ
ಕ್ರೂರಾರಾತಿಗಳೆನ್ನ ದೋರ್ವಲದಗುರ್ವಿಂದಂ ತ್ರಿಲೋಕಕ್ಕೆ ಸಂ ।
ಹಾರಂ ಮಾಡಿದ ಭೈರವ ಪ್ರಭುವಿನೊಂದಾಕಾರದಿಂ ವೈರಿ ಸಂ
ಹಾರಂ ಮಾಡದೆ ಮಾಣೆನೆಂದು ಹರಿಗಂ ಕೆಯ್ಕೊಂಡನುತ್ಸಾಹಮಂ ॥೧೦೫

ಇದು ವಿವಿಧ ವಿಬುಧಜನವಿನುತ ಜಿನಪದಾಂಭೋಜ
ವರ ಪ್ರಸಾದೋತ್ಪನ್ನ ಪ್ರಸನ್ನ ಗಂಭೀರ ವಚನ ರಚನ
ಚತುರ ಕವಿತಾಗುಣಾರ್ಣವ ವಿರಚಿತಮಪ್ಪ
ವಿಕ್ರಮಾರ್ಜುನ ವಿಜಯದೊಳ್
ನವಮಾಶ್ವಾಸಂ

ಬಿಟ್ಟಿತು. ೧೦೫. ಪ್ರಸಿದ್ಧವಾದ ಈ ಕುರುಭೂಮಿಯು ವೀರಕ್ಷೇತ್ರವೂ ಅಹುದು, ಮಹಾಕ್ರೂರರಾದ ನನ್ನ ಶತ್ರುಗಳು ಶಕ್ತಿವಂತರು, ಬಲಿಷ್ಠರೆಂಬುದೂ ನಿಜ. ಆದರೂ (ಅವರನ್ನು) ನಾನು ನನ್ನ ತೋಳಿನ ಶಕ್ತಿಯಿಂದ ಹಿಂದೆ ಭಯಂಕರವಾಗಿ ಮೂರು ಲೋಕವನ್ನು ಸಂಹಾರಮಾಡಿದ ಭೈರವಸ್ವಾಮಿಯ ಆಕಾರವನ್ನು ತಾಳಿ ವೈರಿಸಂಹಾರ ಮಾಡದೆ ಬಿಡುವುದಿಲ್ಲ ಎಂದು ಅರ್ಜುನನು ಉತ್ಸಾಹವನ್ನು ತಾಳಿದನು. ಇದು ಅನೇಕ ದೇವತೆಗಳಿಂದ ಸ್ತುತಿಸಲ್ಪಟ್ಟ ಜಿನಪಾದಕಮಲಗಳ ವರಪ್ರಸಾದದಿಂದ ಹುಟ್ಟಿದುದೂ ತಿಳಿಯೂ ಗಂಭೀರವೂ ಆದ ಮಾತುಗಳ ರಚನೆಯಲ್ಲಿ ಚಾತುರ್ಯವುಳ್ಳ ಕವಿತಾ ಗುಣಾರ್ಣವನಿಂದ ರಚಿತವಾದುದೂ ಆದ ವಿಕ್ರಮಾರ್ಜುನ ವಿಜಯದಲ್ಲಿ ಒಂಬತ್ತನೆಯ ಆಶ್ವಾಸ.

# ದಶಮಾಶ್ವಾಸಂ

ಕಂ॥ ಶ್ರೀ ನಾರೀವಲ್ಲಭನಭಿ
ಮಾನಧನಂ ಹರಿಗನಾ ಕುರುಕ್ಷೇತ್ರದೊಳಂ ।
ತೇನುಂ ಮಾಣದೆ ಬಿಟ್ಟುದ
ನಾ ನೆಗಟ್ದ ಸುಯೋಧನಂಗೆ ಚರರಱಿಪುವುದುಂ ॥ ೧

ಗುರು ಗುರುಸುತ ಶಕುನಿ ಕೃಪಾಂ
ಗರಾಜರಂ ಬರಿಸಿ ನುಡಿದನವನಿಪನೇಂ ಕೇ ।
ಳ್ದಿರೆ ಪಾಂಡುಸುತರ ಮುನಿಸಿನ
ತಱಿಸಲವಿನ ಚಲದ ಬಲದ ಕಲಿತನದಳವಂ ॥ ೨

ಬಂದು ಕುರುಕ್ಷೇತ್ರದೊಳಳ
ವೊಂದಿರೆ ನಮ್ಮೊಳ್ ಕಡಂಗಿ ಮಿಗೆ ತಳ್ತಿಱಿಯ ।
ಲ್ಕೆಂದಾನುಂ ಬಂದಿರ್ದರಿ
ದೇಂ ದಾಯಿಗತನಮುನೆಮಗವರ್ ತೋಱಿದಪರ್ ॥ ೩

ಮ॥ ಪಡೆವಳ್ಳಂ ಗಡಮಾ ಬಲಕ್ಕೆ ದಲೆ ಧೃಷ್ಟದ್ಯುಮ್ನನಂಬೊಳ್ಳಿಯಾ
ಪಡೆಯೊಳ್ ಗಂಡನುಮಾ ಮೊಲಂ ದ್ರುಪದನುಂ ಪೇರೊಟ್ಟೆಯಾ ಮತ್ಸ್ಯನುಂ ।
ಗಡಮಂತಾ ಬಲಕಾಳ್ದನೇನಱಿಯಿರೇ ಧರ್ಮಜ್ಞನಾ ಧರ್ಮಜಂ
ಗಡಮೇಂ ನಾಯಕರೊಳ್ಳಿದರ್ ನೆರೆದರೋ ಕಾದಲ್ಕೆ ಮತ್ಸೈನ್ಯದೊಳ್ ॥ ೪

ವ॥ ಎಂಬುದುಂ ಕುಂಭಸಂಭವನಿಂತೆಂದಂ-

ಮ॥ ಕಳವೇಟ್ಟ್ರಿ ಕುರುಭೂಮಿಯುಂ ಕಳಕವರ್ ವುದಿರ್ದರೆಂದಂತೆ ದೋ
ರ್ವಳ ಚಾತುರ್ವಳ ತತ್ಸುಹೃದ್ಬಳಮನಿನ್ನೇಗೇಳ್ದಪೈ ಪಾಂಡವರ್ ।
ಬಳಸಂಪನ್ನರುದಗ್ರದೈವಬಳಸಂಪನ್ನರ್ ಮರುಳ್ಮಾತನಿ
ನ್ನುಳಿ ಗಾಂಗೇಯರ ಪೇಟ್ದದೊಂದು ತೆಱದಿಂ ನೀಂ ಕಾದು ದುರ್ಯೋಧನಾ ॥ ೫

೧. ಸಂಪಲ್ಲಕ್ಷ್ಮೀಪತಿಯೂ ಅಭಿಮಾನಧನನೂ ಆದ ಅರ್ಜುನನು ಕುರುಕ್ಷೇತ್ರದಲ್ಲಿ ಯಾವ ತಡೆಯೂ ಇಲ್ಲದೆ ಬೀಡುಬಿಟ್ಟುದನ್ನು ಆ ಪ್ರಸಿದ್ಧನಾದ ದುರ್ಯೋಧನನಿಗೆ ದೂತರು ತಿಳಿಸಿದರು. ೨. ದ್ರೋಣ, ಅಶ್ವತ್ಥಾಮ, ಶಕುನಿ, ಕೃಪ, ಕರ್ಣರನ್ನು ಬರಮಾಡಿ ದುರ್ಯೋಧನನು ಹೇಳಿದನು - ಪಾಂಡವರ ಕೋಪದ, ನಿಶ್ಚಯದ, ಛಲದ, ಬಲದ, ಪರಾಕ್ರಮದ ಅಳತೆಯನ್ನು ಕೇಳಿದಿರಾ? ೩. ಸಮರ್ಥರಾಗಿ ಕುರುಕ್ಷೇತ್ರಕ್ಕೆ ಬಂದು ವಿಶೇಷ ಉತ್ಸಾಹದಿಂದ ನಮ್ಮಲ್ಲಿ ಯುದ್ಧಮಾಡುವುದಕ್ಕಾಗಿಯೇ ಬಂದಿದ್ದಾರೆ. ಅವರು ನಮ್ಮಲ್ಲಿ ಎಂತಹ ಜ್ಞಾತಿತ್ವವನ್ನು ತೋರಿಸುತ್ತಿದ್ದಾರೆ! ೪. ಆ ಪಾಂಡವಸೈನ್ಯಕ್ಕೆ ನಿಜವಾಗಿಯೂ ಸೇನಾನಾಯಕನಾಗಿರುವವನು ಧೃಷ್ಟದ್ಯುಮ್ನನೆಂಬ ನೀರುಹಾವು, ಆ ಸೈನ್ಯದಲ್ಲಿ ಶೂರನಾಗಿರುವವರು ದ್ರುಪದನೆಂಬ ಮೊಲ, ಮತ್ಸ್ಯನೆಂಬ ಒಂಟೆ, ಆ ಸೈನ್ಯಕ್ಕೆ ಯಜಮಾನ ಧರ್ಮದ ಗೊಡ್ಡಾದ ಧರ್ಮರಾಯ (ಅವರ ಯೋಗ್ಯತೆ ನನಗೆ ತಿಳಿಯದೇ?) ಒಳ್ಳೆಯ ನಾಯಕರು ನನ್ನ ಸೈನ್ಯದೊಡನೆ ಯುದ್ಧಮಾಡುವುದಕ್ಕೆ ಸೇರಿದ್ದಾರೆ! ವ॥ ಎಂಬುದಾಗಿ ಹೇಳಲು ದ್ರೋಣಾಚಾರ್ಯನು ಹೀಗೆಂದನು. ೫. ನೀನು ಕುರುಕ್ಷೇತ್ರವನ್ನು ಯುದ್ಧ

ವ।। ಎಂಬುದುಮಾ ಮಾತಂ ಮನದೇಗೊಂಡಂತೆಗೆಯ್ವೆನೆಂದನಿಬರುಮಂ ವಿಸರ್ಜಿಸಿ ನಿಶಾಸಮಯದೊಳ್ ಪತ್ತೆಂಟು ಕೆಯ್ದೀವಿಗೆಗಳ ಬೆಳಗಿನೊಳಂ ಕತಿಪಯ ಪರಿಜನ ಪರಿವೃತನಾಗಿ ರಾಜರಾಜಂ ಸಿಂಧುಜನರಮನೆಗೆವಂದು ವಾಹನದಿಂದಮಿೞಿದು ಕುರುಪಿತಾಮಹಂಗೆಱಗಿ ಪೊಡೆವಡುವುದುಂ ಪರಸಿ ಮಂಚದೊಳೇಱಲ್ ಕರೆದೊಡೊಲ್ಲೆಂ ಮಹಾಪ್ರಸಾದಮಿಂತಿರ್ಪೆನೆಂದು ಮಣಿಮಯ ಹೇಮಾಸನದೊಳ್ ಕುಳ್ಳಿರ್ದನಂ ನೋಡಿ ಕಜ್ಜಂ ಪುಟ್ಟಿದೊಡೆಮಗೆ ಬಟೆಯಟ್ಟದೀ ಪೊೞ್ತಿದಾವುದು ಮನವಾರ್ತೆಗೆಟ್ಟುಂದೆಯೆಂದೊಡೆ ಸುಯೋಧನನಿಂತೆಂದಂ-

ಕಂ।। ಹರಿ ಬಲದಿಂ ಪಾಂಡವರನು
ವರಮಂ ಪೊತ್ತಿಸಿದರೆನ್ನೊಳಾಂ ಕರಮಱಿದಾ ।
ಹರಿಯಂ ಕೋಡಗಗಟ್ಟಾ
ಗಿರೆ ಕಟ್ಟಿದೊಡಂದು ನೀಮೆ ಬಿಡಿಸಿದಿರಲ್ತೇ ।। ೬

ಕರಿಗಂ ಪರಮಾಣುಗಮಂ
ತರಮಾವುದೊ ನಿಮಗಮಸುರವೈರಿಗಮೇನಂ ।
ತರಮಂತೆ ನಿಮ್ಮೊಳಗ್ಗದ
ಪರಶುಧರಂ ಪೊಣರ್ದು ತಾಸದಂದೇನಾದಂ ।। ೭

ಭೂಮಿಯನ್ನಾಗಿ ನಿಷ್ಕರ್ಷಿಸಿದೆ. ನೀನು ಹೇಳಿದ ಹಾಗೆ (ಅದರಂತೆ) ಅವರು ಯುದ್ಧರಂಗಕ್ಕೆ ಬಂದಿದ್ದಾರೆ. ಅವರ ಬಾಹುಬಲವನ್ನೂ ಚತುರಂಗಸೈನ್ಯದ ಬಲವನ್ನೂ ಅವರ ಮಿತ್ರವರ್ಗದ ಶಕ್ತಿಯನ್ನೂ ಇನ್ನೇನೆಂದು ಕೇಳುತ್ತೀಯಾ? ಪಾಂಡವರು ಬಲಸಂಪನ್ನರು, ಉತ್ತಮವಾದ ದೈವಬಲದಿಂದ ಕೂಡಿರುವವರು. ಅವಿವೇಕದ ಮಾತನ್ನು ಬಿಟ್ಟುಬಿಡು. ದುರ್ಯೋಧನಾ, ಭೀಷ್ಮರು ಹೇಳಿದ ರೀತಿಯಲ್ಲಿ ಯುದ್ಧಮಾಡು. ವ।। ಎನ್ನಲು ಆ ಮಾತನ್ನು ಅಂಗೀಕರಿಸಿ ಹಾಗೆಯೇ ಮಾಡುತ್ತೇನೆಂದು ಒಪ್ಪಿದನು. ಅಷ್ಟು ಮಂದಿಯನ್ನೂ ಬಿಟ್ಟು ಕಳೆದು ರಾತ್ರಿಯ ಸಮಯದಲ್ಲಿ ಹತ್ತೆಂಟು ಕೈದೀವಿಗೆಗಳ ಬೆಳಕಿನಲ್ಲಿ ಕೆಲವೇ ಜನ ಸೇವಕರಿಂದ ಕೂಡಿದವನಾಗಿ ಚಕ್ರವರ್ತಿಯಾದ ದುರ್ಯೋಧನನು ಭೀಷ್ಮನ ಅರಮನೆಗೆ ಬಂದನು. ವಾಹನದಿಂದಿಳಿದು ಕುರುಪಿತಾಮಹನಾದ ಭೀಷ್ಮನಿಗೆ ಬಗ್ಗಿ ನಮಸ್ಕಾರ ಮಾಡಿದನು. ಅವರು ಹರಸಿ ಅವನನ್ನು ಮಂಚದ ಮೇಲೆ ಹತ್ತಿ ಕುಳಿತುಕೊಳ್ಳಹೇಳಿದರು, 'ಒಲ್ಲೆ ಹಾಗೆ ಮಾಡಲಾರೆ, ಇದೇ ನನಗೆ ಪರಮಾನುಗ್ರಹ, ಹೀಗಿರುತ್ತೇನೆ, ಎಂದು ರತ್ನಖಚಿತವಾದ ಚಿನ್ನದ ಪೀಠದ ಮೇಲೆಯೇ ಕುಳಿತುಕೊಂಡನು. ಭೀಷ್ಮನು ಅವನನ್ನು ನೋಡಿ 'ಕಾರ್ಯ ವುಂಟಾದರೆ ನಮಗೆ ದೂತರ ಮೂಲಕ ಹೇಳಿಕಳುಹಿಸದೆ ಈ ಹೊತ್ತಿನಲ್ಲಿಯೂ ಮನೆವಾರ್ತೆಗಾಗಿ ಬಂದೆ' ಎಂದರು. ದುರ್ಯೋಧನನು ಹೀಗೆಂದನು-೬. ಆ ಪಾಂಡವರು ಕೃಷ್ಣನ ಬಲದಿಂದ ನಮ್ಮಲ್ಲಿ ಯುದ್ಧವನ್ನು ಹತ್ತಿಸಿದ್ದಾರೆ. ಇದನ್ನು ನಾನು ತಿಳಿದೇ ಅಂದು ಕೃಷ್ಣನನ್ನು ಕೋಡಗಗಟ್ಟಿನಿಂದ ಕಟ್ಟಿದರೆ ಆ ದಿನ ನೀವೆ ಬಿಡಿಸಿದಿರಲ್ಲವೇ ೭. ಆನೆಗೂ ಸೂಕ್ಷ್ಮವಾದ ಅಣುವಿಗೂ ಎಷ್ಟು ವ್ಯತ್ಯಾಸ? ನಿಮಗೂ ಕೃಷ್ಣನಿಗೂ ಯಾವ ಅಂತರ? ನಿಮ್ಮಲ್ಲಿ ಆ ಪ್ರಸಿದ್ಧನಾದ ಪರಶುರಾಮನು ಜಗಳವಾಡಿ ಆದಿನ

ಪಿಡಿದರವರಸುರವೈರಿಯ
ನೊಡಂಬಡಿಂ ತೊಟ್ಟುವೆಸದಿನಾಂ ನಿಮ್ಮಡಿಯಂ ।
ಪಿಡಿದೆನದೇಂ ತಾನೆಚ್ಚುಂ
ಪಿಡಿದೊಡವರ್ವಂದು ಪಿಡಿದರೆನ್ನರೆ ಗೆಲ್ಲಂ ॥ ೮

ಮ॥ ಕೊರಲೊಳ್ ಕಟ್ಟಿದ ದೇವಿಯಂತಿರುರದೊಳ್ ಶ್ರೀ ತೊಟ್ಟಿಲೊಳ್ ತೊಟ್ಟನಂ
ತರಮೆನ್ನೊಳ್ ನೆಲಸಿತ್ತು ನಿಮ್ಮ ದಯೆಯಿಂ ನಿಮ್ಮಂ ಕರಂ ನಚ್ಚಿ ಸಂ ।
ಗರಮಂ ಬಲ್ಲಿದರೊಳ್ ಪೊಣರ್ಚಿದೆನದರ್ಕೆನ್ನೊಳ್ ರಣಶ್ರೀ ರಣಾ
ಜಿರದೊಳ್ ಮಾಣದೆ ಪೊರ್ದುವಂತೆ ಬೆಸಸಿಂ ನಿಮ್ಮೊಂದಭಿಪ್ರಾಯಮಂ ॥ ೯

ವ॥ ಎಂದು ನುಡಿದ ತನ್ನ ಮೊಮ್ಮನ ನಯದ ವಿನಯದ ನುಡಿಗಳ್ಗೆ ಕರುಣಿಸಿ ಕುರುವೃದ್ಧನಿಂತೆಂದಂ-

ಮ॥ ಧೃತರಾಷ್ಟ್ರಂ ನುಡಿದಾರ್ತನೇ ಹರಿ ಭರಂಗೆಯ್ದಾರ್ತನೇ ನೀಂ ಪೃಥಾ
ಸುತರಂ ನೋಯಿಸಲಾಗದೆಂದು ನುಡಿದೇನಾಮಾರ್ತೆಮೇ ನಿನ್ನೊರಂ ।
ಟುತನಂ ಕೈಗಟಿವಾಯ್ತುದಪ್ಪೊಡೆ ಮಹಾಭಾರಾವತಾರಂ ರಣೋ
ದ್ಯತನಾಗೆಂಬುದನೆಮ್ಮನನ್ಯರವೊಲೇಂ ನೀಂ ಪ್ರಾರ್ಥಿಸಲ್ವೇಟ್ಟುದೇ ॥ ೧೦

ವ। ಎಂಬುದುಂ ಮಹಾಪ್ರಸಾದಮೆಂದು ದುರ್ಯೋಧನಂ ಪೋದನಿತ್ತ ಗಾಂಗೇಯಂ ತನ್ನಂತರ್ಗತದೊಳ್-

ತಾನೇ ಏನಾದ? ೮. ಅವರು ಶ್ರೀಕೃಷ್ಣನನ್ನು ಸಮಾನಪ್ರತಿಪತ್ತಿಯಿಂದ ಆಶ್ರಯಿಸಿದ್ದಾರೆ. ನಾನು ನಿಮ್ಮ ಪಾದವನ್ನು ಸೇವಕವೃತ್ತಿಯಿಂದ ಹಿಡಿದಿದ್ದೇನೆ. ಒಂದು ಸಲ ಹೊಡೆದೂ ಪುನಃ ಆಶ್ರಯಿಸಿದ್ದಾರೆ ಎನ್ನುವುದಿಲ್ಲವೇ (?) ೯. ನಿಮ್ಮ ದಯೆಯಿಂದ ರಾಜ್ಯಲಕ್ಷ್ಮಿಯು ಕೊರಳಲ್ಲಿ ಕಟ್ಟಿದ ದುರ್ಗಾಪದಕದಂತೆ ತೊಟ್ಟಿಲಲ್ಲಿ ಬಾಲ್ಯತನದಿಂದ ಇಲ್ಲಿಯವರೆಗೆ ಏಕಪ್ರಕಾರವಾಗಿ ನನ್ನಲ್ಲಿ ನೆಲಸಿದ್ದಾಳೆ. ನಿಮ್ಮನ್ನು ಪೂರ್ಣವಾಗಿ ನಂಬಿ ಬಲಿಷ್ಠರಾದವರಲ್ಲಿ ಯುದ್ಧವನ್ನು ಹೂಡಿದ್ದೇನೆ. ಈಗ ರಣರಂಗದಲ್ಲಿ ಯುದ್ಧಲಕ್ಷ್ಮಿಯು ನನ್ನನ್ನೇ ತಪ್ಪದೆ ಸೇರುವಂತೆ ಮಾಡಬೇಕು. ನಿಮ್ಮ ಅಭಿಪ್ರಾಯವನ್ನು ಕೊಡಿರಿ. ವ॥ ಎಂದು ನುಡಿದ ತನ್ನ ಮೊಮ್ಮಗನ ವಿನಯದಿಂದ ಕೂಡಿದ ಮಾತುಗಳಿಗೆ ಕರುಣಿಸಿ ಭೀಷ್ಮನು ಹೀಗೆ ಹೇಳಿದನು. ೧೦. ನೀನು ಪಾಂಡವರನ್ನು ನೋಯಿಸಬಾರದು ಎಂದು ಹೇಳಿ ನಿನ್ನ ತಂದೆಯಾದ ಧೃತರಾಷ್ಟ್ರನು ನಿನ್ನನ್ನು ತಿದ್ದಲು ಪ್ರಯತ್ನಿಸಿದ. ಕೃಷ್ಣನು ಆರ್ಭಟಮಾಡಿ ನೋಡಿದ. ಅವರಿಬ್ಬರೂ ಸಮರ್ಥರಾಗಲಿಲ್ಲ. ಕುಂತೀ ಪುತ್ರರನ್ನು ನೋಯಿಸಬಾರದೆಂದು ಹೇಳಿದೆವು. ನಾವು ಸಮರ್ಥರಾದೆವೇ? ನಿನ್ನ ಒರಟುತನ ಕೈಮೀರಿದ್ದಾಯಿತು. ಮುಂದಾಗುವುದಾದರೋ ಮಹಾಭಾರತ ಯುದ್ಧ. ಯುದ್ಧಕಾರ್ಯದಲ್ಲಿ ತೊಡಗು ಎಂದು ನಮ್ಮನ್ನು ಇತರರ ಹಾಗೆ ನೀನು ಪ್ರಾರ್ಥಿಸಬೇಕೆ? ವ॥ ಎನ್ನಲು ದುರ್ಯೋಧನನು ಮಹಾಪ್ರಸಾದ ಎಂದು ಹೇಳಿಹೋದನು. ಈ ಕಡೆ ಭೀಷ್ಮನು ತನ್ನ ಮನಸ್ಸಿನಲ್ಲಿ ಚಿಂತಾಕ್ರಾಂತನಾದನು.

ಕಂ॥ ಅಣಿಯರಮೊದವಿದ ಮುಳಿಸಿನೊ
ಳಣಮುಜಿದವರೆಂದು ರಣದೆ ಜಯಿಸಲ್ ನಾರಾ
ಯಣನೊಳಮುದಾತ್ತನಾರಾ
ಯಣನೊಳಮಿಂತೆತ್ತಿಕೊಂಡ ಗಂಡರುಮೊಳರೇ ॥ ೧೧

ನಿನ್ನನೆ ನಚ್ಚಿದನನುವರ
ಕೆನ್ನನೆ ಪೂಣಿಸಿದನೆನಗೆರಟ್ಟಂಡಮುಮೋ ।
ರನ್ನರೆ ದಲೆಂತು ಕಾದುವೆ
ನೆನ್ನಯ ಮಕ್ಕಳೊಳಮೆನ್ನ ಮೊಮ್ಮಕ್ಕಳೊಳಂ ॥ ೧೨

ಮಕ್ಕಳ ಮೊಮ್ಮಕ್ಕಳ ರಥ
ಮೆಕ್ಕೆಯಿನೆಡೆಗೊಂಡೊಡವರನೋವದೆ ರಣದೊಳ್ ।
ಮಕ್ಕಳನಾಂ ಕೊಂದೊಡೆ ತ
ನ್ನಿಕ್ಕಿದ ತತ್ತಿಯನೆ ಪಾವು ನೊಣೆವಂತಕ್ಕುಂ ॥ ೧೩

ನರ ನಾರಾಯಣರಿರ್ವರೆ
ಧುರದೊಳ್ ಮಾರ್ಕೊಳ್ವರೆನ್ನನೊರ್ವಂ ಮೊಮ್ಮಂ ।
ಪರಮಗುರುವೊರ್ವನವರಿ
ರ್ವರುಮಂ ಕಾದಟಿವೆನುಟಿದ ರಿಪುನೃಪಬಲಮಂ ॥ ೧೪

ವ॥ ಎಂದು ತನ್ನೊಳ್ ಬಗೆಯುತ್ತಿರ್ಪಿನಮತ್ತ ದುರ್ಯೋಧನಂ ಸಹಸ್ರ ಕಿರಣೋದಯದೊಳನೇಕಸಹಸ್ರನರಪತಿ ಪರಿವೃತನುಮಾಗಿ ಮಂದಾಕಿನೀತನೂಜಂಗೆ ಬಟಿಯಸಟ್ಟಿ ಬರಿಸಿ ಮಣಿಮಯಪೀಠದೊಳ್ ಕುಳ್ಳಿರಿಸಿ ದೇವಾಸುರಯುದ್ಧದೊಳ್ ಗುಹಂಗೆ ವೀರಪಟ್ಟಮಂ ಕಟ್ಟುವ ಪುರಂದರನಂದಮನೆ ಪೋಲ್ತು-

೧೧. ದುರ್ಯೋಧನನು ವಿಶೇಷವಾಗಿ ತನಗುಂಟಾದ ಕೋಪದಲ್ಲಿ ಪಾಂಡವರು ನಿಶ್ಯಕ್ತರು, ಸತ್ವಶಾಲಿಗಳಲ್ಲ ಎಂದು ಜಯ ಪಡೆಯುವುದಕ್ಕಾಗಿ ನಾರಾಯಣನನ್ನೂ ಉದಾತ್ತನಾರಾಯಣನನ್ನೂ ಲಕ್ಷ್ಯಮಾಡದೆ ಯುದ್ಧದಲ್ಲಿ ಜಯಿಸುವುದಕ್ಕೆ ಹೊರಟಿದ್ದಾನೆ. ಇಂತಹ ಶೂರನು ಬೇರೆ ಇದ್ದಾನೆಯೇ. ೧೨. ದುರ್ಯೋಧನನು ನನ್ನನ್ನೇ ನಂಬಿದ್ದಾನೆ. ಯುದ್ಧಮಾಡುತ್ತೇನೆಂದು ನನ್ನಿಂದ ಪ್ರತಿಜ್ಞೆ ಮಾಡಿಸಿದ್ದಾನೆ. ನನಗೆ ಎರಡು ಗುಂಪಿನವರೂ ಸಮಾನರಾದವರಲ್ಲವೇ? (ಸಮಾನಬಂಧುಗಳಲ್ಲವೇ?) ನನ್ನ ಮಕ್ಕಳೊಡನೆಯೂ ಮೊಮ್ಮಕ್ಕಳೊಡನೆಯೂ ಹೇಗೆ ಯುದ್ಧಮಾಡಲಿ? ೧೩. ಮಕ್ಕಳ ಮೊಮ್ಮಕ್ಕಳ ತೇರುಗಳು ಗುಂಪುಗುಂಪಾಗಿ ನಡುವೆ ಎದುರಿಸಿದರೆ ಅವರನ್ನು ರಕ್ಷಿಸದೆ ಯುದ್ಧದಲ್ಲಿ ಮಕ್ಕಳನ್ನು ಕೊಂದೆನಾದರೆ ಹಾವು ತಾನು ಇಕ್ಕಿದ (ಪ್ರಸವಿಸಿದ-ಹೆತ್ತ) ಮೊಟ್ಟೆಗಳನ್ನು ತಾನೆ ನುಂಗಿದಂತಾಗುತ್ತದೆಯಲ್ಲವೇ? ೧೪. ನರನಾರಾಯಣರಿಬ್ಬರೇ ಯುದ್ಧದಲ್ಲಿ ನನ್ನನ್ನು ಪ್ರತಿಭಟಿಸುವವರು. ಅವರಲ್ಲಿ ಒಬ್ಬ ಮೊಮ್ಮಗ, ಮತ್ತೊಬ್ಬ ಪರಮಗುರು. ಅವರಿಬ್ಬರನ್ನೂ ರಕ್ಷಿಸಿ ಉಳಿದ ಶತ್ರುರಾಜಸೈನ್ಯವನ್ನು ನಾಶ ಪಡಿಸುತ್ತೇನೆ. ವ॥ ಎಂದು ತನ್ನಲ್ಲಿ ಯೋಚಿಸುತ್ತಿರಲಾಗಿ ಆ ಕಡೆ ದುರ್ಯೋಧನನು ಸೂರ್ಯೋದಯದಲ್ಲಿ ಅನೇಕ ಸಾವಿರರಾಜರುಗಳಿಂದ ಸುತ್ತುವರಿಯಲ್ಪಟ್ಟು ಭೀಷ್ಮನಿಗೆ ದೂತರ ಮೂಲಕ ಹೇಳಿಕಳುಹಿಸಿ ಬರಮಾಡಿದನು. ರತ್ನಖಚಿತವಾದ ಪೀಠದಲ್ಲಿ

ಉ|| ತುಂಗ ಮೃದಂಗ ಶಂಖ ಪಟಹಧ್ವನಿ ದಿಕ್ತಟದಂತನೆಯ್ದೆ ವಾ
ರಾಂಗನೆಯರ್ ಚಳಲ್ಲುಳಿತ ಚಾಮರಮಂ ನೆರೆದಿಕ್ಕೆ ಪಂಚ ರ ।
ತ್ನಂಗಳುಮಂ ಪುದುಂಗೊಳಿಸಿ ಪೊಂಗಳಸಂಗಳೊಳಿರ್ದ ಪುಣ್ಯತೋ
ಯಂಗಳೊಳಲ್ಮಿಜಿಂ ಮಿಸಿಸಿ ಕಟ್ಟಿದನಾ ವಿಭು ವೀರಪಟ್ಟಮಂ ॥ ೧೫

ವ|| ಅಂತು ಪರಶುರಾಮನನಂಜಿಸಿದ ವೀರಂಗೆ ವೀರಪಟ್ಟಮಂ ಕಟ್ಟಿ ಪಗೆವರನೆನ್ನ ಮಂಚದ ಕಾಲೊಳ್ ಕಟ್ಟದೆನೆಂದು ಪೊಟ್ಟಳಿಸುವ ಸುಯೋಧನನ ನುಡಿಯನವಕರ್ಣಿಸಿ ಕರ್ಣನಿಂತೆಂದಂ-

ಚಂ|| ಭಗವತಿಯೇಱುವೇೞ್ವ ತೆರದಿಂ ಕಥೆಯಾಯ್ತಿವರೇಱು ನೀನಿದಂ
ಬಗೆದಿವರಿನ್ನುಮಾಂತಿಱಿವರೆಂದು ವಿಮೋಹಿಸಿ ವೀರಪಟ್ಟಮಂ ।
ಬಗೆಯದೆ ಕಟ್ಟಿದೈ ಗುರುಗಳಂ ಕುಲವೃದ್ಧರನಾಜಿಗುಯ್ದು ಕೆ
ಮ್ಮಗೆ ಪಗೆವಾಡಿಯೊಳ್ ನಗಿಸಿಕೊಂಡೊಡೆ ಬಂದಪುದೇಂ ಸುಯೋಧನಾ ॥೧೬

ಕಂ|| ಕಟ್ಟಿದ ಪಟ್ಟಮೆ ಸರವಿಗೆ
ನೆಟ್ಟನೆ ದೊರೆ ಪಿಡಿದ ಬಿಲ್ಲೆ ದಂಟಂಗೆಣೆ ಕ ।
ಣ್ಗೆಟ್ಟ ಮುದುಪಂಗೆ ಪಗೆವರ
ನಿಟ್ಟೆಲ್ವಂ ಮುಱಿವೊಡೆನಗೆ ಪಟ್ಟಂಗಟ್ಟಾ ॥ ೧೭

ಕುಳ್ಳಿರಿಸಿದನು. ದೇವಾಸುರಯುದ್ಧದಲ್ಲಿ ಷಣ್ಮುಖನಿಗೆ ವೀರಪಟ್ಟವನ್ನು ಕಟ್ಟುವ ಇಂದ್ರನ ರೀತಿಯನ್ನೇ (ಅನುಕರಿಸಿ) ೧೫. ಶ್ರೇಷ್ಠವಾದ ಮೃದಂಗ, ಶಂಖ, ತಮಟೆ, ಮೊದಲಾದವುಗಳ ಉಚ್ಚಧ್ವನಿಯು ದಿಕ್ಕುಗಳ ಕೊನೆಯನ್ನು ಮುಟ್ಟುತ್ತಿರಲು ವೇಶ್ಯಾಸ್ತ್ರೀಯರು ಚಲಿಸುತ್ತಿರುವ ಚಾಮರವನ್ನು ಗುಂಪಾಗಿ ಬೀಸುತ್ತಿರಲು ಪಂಚರತ್ನಗಳ ರಾಶಿಗಳಿಂದ ಕೂಡಿದ ಚಿನ್ನದ ಕಲಶಗಳ ಪುಣ್ಯ ತೀರ್ಥಗಳಲ್ಲಿ ಪ್ರೀತಿಯಿಂದ ಸ್ನಾನ ಮಾಡಿಸಿ ಚಕ್ರವರ್ತಿಯಾದ ದುರ್ಯೋಧನನು ಭೀಷ್ಮನಿಗೆ ವೀರಪಟ್ಟವನ್ನು ಕಟ್ಟಿದನು. ವ|| ಹಾಗೆ ಪರಶುರಾಮನನ್ನೇ ಹೆದರಿಸಿದ ವೀರನಿಗೆ ವೀರಪಟ್ಟವನ್ನು ಕಟ್ಟಿ ಶತ್ರುಗಳನ್ನು ನನ್ನ ಮಂಚದ ಕಾಲಿನಲ್ಲಿ ಕಟ್ಟಿದೆನೆಂದು ಅಹಂಕಾರ ಪಡುತ್ತಿರುವ ದುರ್ಯೋಧನನ ಮಾತನ್ನು ಕೇಳಿ ಕರ್ಣನು ಹೀಗೆಂದನು. ೧೬. ಹಿಂದಿನ ಕಟ್ಟುಕಥೆಯಂತಾಯ್ತು ಇವರ ಯುದ್ಧದ ಕತೆ. ಇದನ್ನು ತಿಳಿಯದೆ ನೀನು ಇವರು ಇನ್ನೂ ಪ್ರತಿಭಟಿಸಿ ಯುದ್ಧಮಾಡುತ್ತಾರೆ ಎಂದು ಭ್ರಾಂತಿಗೊಂಡು ವಿಚಾರಮಾಡದೆ ಇವರಿಗೆ ಸೇನಾಧಿಪತ್ಯದ ಪಟ್ಟವನ್ನು ಕಟ್ಟಿದೆ. ಗುರುಗಳೂ ಕುಲವೃದ್ಧರೂ ಆದ ಇವರನ್ನು ಯುದ್ಧರಂಗಕ್ಕೆ ಸೆಳೆದು ನಿಷ್ಪ್ರಯೋಜನವಾಗಿ ಶತ್ರುಗಳ ಗುಂಪಿನಲ್ಲಿ ನಗಿಸಿಕೊಂಡರೆ ನಿನಗೆ ಬರುವ ಪ್ರಯೋಜನವೇನು ದುರ್ಯೋಧನ? ೧೭. ಕಣ್ಣು ಕಾಣದ ಈ ಮುದುಕನಿಗೆ ಕಟ್ಟಿದ ವೀರಪಟ್ಟವು ಹಗ್ಗಕ್ಕೆ ಸಮಾನವಲ್ಲವೇ? ಆತನು ಧರಿಸಿರುವ ಬಿಲ್ಲು ದಂಟಿಗೆ ಸಮಾನವಲ್ಲವೇ? ಶತ್ರುಗಳ ನಿಟ್ಟೆಲುಬುಗಳನ್ನು ಪುಡಿಮಾಡಬೇಕಾದರೆ

ಆದಿಯೊಳವರಂ ಪಿರಿದೊಂ
ದಾದರದಿಂ ನಡಪಿದಜ್ಜರಪ್ಪುದಱೆಂದಂ ।
ಕಾದರಿವರವರೊಳವರುಂ
ಕಾದರ್ ನೆರೆದಿವರೊಳೆಂತು ನಂಬುವೆ ನೃಪತೀ ॥ ೧೮

ವ॥ ಎಂಬುದುಮಾ ನುಡಿಗೆ ಸಿಡಿಲ್ದು ಕುಂಭಸಂಭವನಿಂತೆಂದಂ-

ಕಂ॥ ಸಿಂಗದ ಮುಪ್ಪು ನೆಗಟ್ದೀ
ಗಾಂಗೇಯರ ಮುಪ್ಪುಮಿಟೆಕೆವಡೆಗುಮೆ ವನಮಾ ।
ತಂಗಂಗಳಿನಸುಹೃಚ್ಚತು
ರಂಗಬಲಂಗಳಿನದೆಂತುಮಂಗಾಧಿಪತೀ ॥ ೧೯

ಕುಲಜರನುದ್ಧತರಂ ಭುಜ
ಬಲಯುತರಂ ಹಿತರನೀ ಸಭಾಮಧ್ಯದೊಳ ।
ಗ್ಗಲಿಸಿದ ಮದದಿಂ ನಾಲಗೆ
ಕುಲಮಂ ತುಬ್ಬುವವೊಲುಱದೆ ನೀಂ ಕೆಡೆನುಡಿವೈ ॥ ೨೦

ವ॥ ಎಂದು ನುಡಿದ ಗುರುವಿನ ಕರ್ಣಕಠೋರವಚನಂಗಳ್ಗೆ ಕರ್ಣಂ ಕಿನಿಸಿ-

ಚಂ॥ ಕುಲಮನೆ ಮುನ್ನಮುಗ್ಗಡಿಪಿರೇಂ ಗಳ ನಿಮ್ಮ ಕುಲಂಗಳಾಂತು ಮಾ
ರ್ಮಲೆವನನಟ್ಟಿ ತಿಂಬುವೆ ಕುಲಂ ಕುಲಮಲ್ತು ಚಲಂ ಕುಲಂ ಗುಣಂ ।
ಕುಲಮಭಿಮಾನಮೊಂದೆ ಕುಲಮಣ್ಮು ಕುಲಂ ಬಗೆವಾಗಳೀಗಳೀ
ಕಲಹದೊಳಣ್ಣ ನಿಮ್ಮ ಕುಲವಾಕುಲಮಂ ನಿಮಗುಂಟುಮಾಡುಗುಂ ॥ ೨೧

ನನಗೆ ಪಟ್ಟ ಕಟ್ಟಯ್ಯ. ೧೮. ಬಾಲ್ಯದಿಂದಲೂ ಅವರನ್ನು ವಿಶೇಷ ಪ್ರೀತಿಯಿಂದ ಸಾಕಿದ ಅಜ್ಜರಾದುದರಿಂದ ಇವರು ಅವರೊಡನೆ ಕಾದುವುದಿಲ್ಲ. ಅವರೂ ಇವರೊಡನೆ ಪ್ರತಿಭಟಿಸಿ ಕಾದುವುದಿಲ್ಲ. ರಾಜನೇ ಹೇಗೆ ಇವರನ್ನು ನಂಬುತ್ತೀಯೆ? ವ॥ ಎನ್ನಲು ಆ ಮಾತಿಗೆ ದ್ರೋಣನು ಸಿಡಿದು ಹೀಗೆಂದನು. ೧೯. ಸಿಂಹದ ಮುಪ್ಪನ್ನೂ ಭೀಷ್ಮರ ಮುಪ್ಪನ್ನೂ ಅಲ್ಲಗಳೆಯಬೇಡ, ಸಿಂಹವು ಮುಪ್ಪಾದರೆ ಆನೆಗಳಿಗೆ ಸದರವೇನು? ಹಾಗೆಯೇ ಭೀಷ್ಮರು ಮುದುಕರಾದುದರಿಂದ ಚತುರಂಗಸೈನ್ಯವು ಅವರನ್ನು ಗೆಲ್ಲಬಲ್ಲವೇ? ೨೦. ಸತ್ಕುಲಪ್ರಸೂತರಾದವರನ್ನು ಶ್ರೇಷ್ಠರಾದವರನ್ನು ಎಲ್ಲರಿಗೂ ಹಿತರಾದವರನ್ನು ಕುರಿತು ಈ ಸಭಾಮಧ್ಯದಲ್ಲಿ ಹೆಚ್ಚಿದ ಕೊಬ್ಬಿನಿಂದ ನೀನು ನಿಷ್ಪ್ರಯೋಜನವಾಗಿ ತಿರಸ್ಕಾರದ ಮಾತನಾಡಿದ್ದೀಯೆ. ಕುಲವನ್ನು ನಾಲಗೆ ಆಡಿ ತೋರಿಸುತ್ತದೆಯಲ್ಲವೆ? ವ॥ ಎಂದು ನುಡಿದ ಕಿವಿಗೆ ಕರ್ಕಶವಾದ ಮಾತುಗಳಿಗೆ ಕರ್ಣನು ಕೋಪಿಸಿಕೊಂಡು ೨೧. ಮಾತಿಗೆ ಮೊದಲು ಕುಲವನ್ನೇ ಏಕೆ ಕುರಿತು ಘೋಷಿಸುತ್ತೀರಿ? ನಿಮ್ಮ ಕುಲಗಳು ಪ್ರತಿಭಟಿಸಿದವರನ್ನು ಎದುರಿಸಿ ಹಿಂಬಾಲಿಸಿ ತಿಂದು ಹಾಕುತ್ತವೆಯೇನು? ಹುಟ್ಟಿದ ಜಾತಿ ನಿಜವಾದ ಕುಲವಲ್ಲ; ಛಲ-ಕುಲ, ಸದ್ಗುಣ-ಕುಲ, ಆತ್ಮಗೌರವವೊಂದೆ ಕುಲ, ಪರಾಕ್ರಮವೆಂಬುದು ಕುಲ. ವಿಚಾರಮಾಡುವುದಾದರೆ ಈಗ ಈ ಯುದ್ಧದಲ್ಲಿ ಅಣ್ಣಾ, ನಿಮ್ಮ ಈ ಕುಲವು ನಿಮಗೆ

ಕಂ॥ ಗಂಗಾಸುತಂ ಪೃಥಾಸುತ
ರಂ ಗೆಲ್ದೊಡೆ ತಪಕೆ ಪೋಪೆನವರ್ಗಳ ಕೆಯ್ಯೊಳ್ ।
ಗಾಂಗೇಯನಳಿದೊಡಹಿತರ
ನಾಂ ಗೆಲೆ ತಳ್ತಿರಿವೆನನ್ನೆಗಂ ಬಿಲ್ವಿಡಿಯೆಂ ॥ ೨೨

ವ॥ ಎಂದು ಕರ್ಣಂ ಪ್ರತಿಜ್ಞೆಗೆಯ್ವುದುಂ ಸಿಂಧುತನೂಜನಿಂತೆಂದಂ-

ಚಂ॥ ಕಲಿತನದುರ್ಕು ಜವ್ವನದ ಸೊರ್ಕು ನಿಜೇಶನ ನಚ್ಚು ಮಿಕ್ಕ ತೋ
ಳ್ವಲದ ಪೊಡರ್ಪು ಕರ್ಣ ನಿನಗುಳ್ಳನಿತೇನೆನಗುಂಟೆ ಭಾರತಂ ।
ಕಲಹಮಿದಿರ್ಚುವಂ ಹರಿಗನಪ್ಪೊಡೆ ಮೊಕ್ಕಳಮೇಕೆ ನೀಂ ಪಳಂ
ಚಲೆದಪೆಯಣ್ಣ ಸೂಟ್ಪಡೆಯಲಪ್ಪುದು ಕಾಣ ಮಹಾಜಿರಂಗದೊಳ್ ॥ ೨೩

ವ॥ ಎಂದು ಮತ್ತಮಿಂತೆಂದಂ-

ಕಂ॥ ಮುದುಪರ ಬಿಲ್ಬಲ್ಮೆಯುಮಿಱಿ
ವದಟುಂ ಬಗೆವಾಗಳಣ್ಣನೆಂದಂತುಟೆ ತ
ಪ್ಪದು ಕರಮೆ ತುಚ್ಛಮಕ್ಕುಂ
ಕದನದೊಳಿನ್ನೆನ್ನ ನುಡಿದ ನುಡಿಯಂ ಕೇಳಿಂ ॥ ೨೪

ಮ॥ ಪಿಡಿಯೆಂ ಚಕ್ರಮನೆಂಬ ಚಕ್ರಿಯನಿಳಾಚಕ್ರಂ ಭಯಂಗೊಳ್ವಿನಂ
ಪಿಡಿಯಿಪ್ಪೆಂ ಕರಚಕ್ರಮಂ ನರರಥಂ ತೂಳ್ದಾ ಕುರುಕ್ಷೇತ್ರದಿಂ ।
ಪಡುವೆಣ್ಗಾವುದು ಪೋಗೆ ಪೋಗಡಿಸುವೆಂ ನಿಚ್ಚಂ ಧರಾಧೀಶರಂ
ಪಡಲಿಟ್ಟಂತಿರೆ ಮಾಟ್ಪೆನೋವದೆ ಪಯಿಂಛಾಸಿರ್ವರಂ ಯುದ್ಧದೊಳ್ ॥೨೫

ವ್ಯಥೆಯನ್ನುಂಟುಮಾಡುತ್ತದೆ. ೨೨. ಭೀಷ್ಮನು ಪಾಂಡವರನ್ನು ಗೆದ್ದರೆ ನಾನು ತಪಸ್ಸಿಗೆ ಹೋಗಿಬಿಡುತ್ತೇನೆ. ಅವರುಗಳ ಕಯ್ಯಲ್ಲಿ ಭೀಷ್ಮನು ನಾಶವಾದರೆ ಶತ್ರುಗಳನ್ನು ಗೆಲ್ಲುವುದಕ್ಕಾಗಿ ನಾನು ಸಂಧಿಸಿ ಯುದ್ಧಮಾಡುತ್ತೇನೆ. ಅಲ್ಲಿಯವರೆಗೆ ನಾನು ಬಿಲ್ಲನ್ನೇ ಹಿಡಿಯುವುದಿಲ್ಲ. ವ॥ ಎಂಬುದಾಗಿ ಕರ್ಣನು ಪ್ರತಿಜ್ಞೆ ಮಾಡಲು ಭೀಷ್ಮನು ಹೀಗೆ ಹೇಳಿದನು. ೨೩. ಕರ್ಣ ಶೌರ್ಯದ ಗರ್ವ, ಯವ್ವನದ ಮದ, ಸ್ವಾಮಿಯ ನಂಬಿಕೆ, ಮೀರಿದ ಬಾಹುಬಲದ ವೈಭವ - ಇವು ನಿನಗಿರುವಷ್ಟು ನನಗಿದೆಯೇನಪ್ಪ. ಇದು ಭಾರತದ ಯುದ್ಧ, ಎದುರಿಸುವವನು ಹರಿಗನಾಗಿರುವಾಗ ಈ ಹೀಯಾಳಿಕೆಯೇಕೆ? ನೀನು ಪ್ರತಿಭಟಿಸಿ ಕಾದುವೆಯಣ್ಣಾ, ಈ ಮಹಾಯುದ್ಧದಲ್ಲಿ ನಿನಗೂ ಸರದಿ ಬರುತ್ತದೆ ನೋಡುವೆಯಂತೆ ವ॥ ಎಂದು ಪುನಃ ಹೀಗೆಂದನು-೨೪. ನಾನೇನೋ ಮುದುಕ. ಮುದುಕರ ಅಸ್ತ್ರವಿದ್ಯಾಕೌಶಲ್ಯವನ್ನೂ ಯುದ್ಧಮಾಡುವ ಪರಾಕ್ರಮವನ್ನೂ ವಿಚಾರಮಾಡಿ ನೋಡಿದರೆ ಕರ್ಣನು ಹೇಳಿದ ಹಾಗೆಯೇ. ತಪ್ಪೇನಿಲ್ಲ, ವಿಶೇಷವಾಗಿ ನಿಜವೇ ಆಗುತ್ತದೆ. ಆದರೂ ಯುದ್ಧದಲ್ಲಿ ಇನ್ನು ಮೇಲೆ ನನ್ನ ಪ್ರತಿಜ್ಞೆಯನ್ನು ಕೇಳಿ- ೨೫. ಚಕ್ರವನ್ನು ಹಿಡಿಯುವುದಿಲ್ಲವೆಂದು ಪ್ರತಿಜ್ಞೆ ಮಾಡಿರುವ ಕೃಷ್ಣನ ಕೈಯಲ್ಲಿ ಭೂಮಂಡಲವೆಲ್ಲ ಭಯಪಡುವ ಹಾಗೆ ಚಕ್ರವನ್ನು ಹಿಡಿಸುತ್ತೇನೆ. ಅರ್ಜುನನ ತೇರು ಹಾರಿ ಕುರುಕ್ಷೇತ್ರದಲ್ಲಿ ಪಶ್ಚಿಮಕ್ಕೆ ಎಂಟುಗಾವುದ ಹೋಗುವ ಹಾಗೆ ಬಾಣಪ್ರಯೋಗ

ವ॥ ಎಂದು ಮಹಾ ಪ್ರತಿಜ್ಞಾರೂಢನಾದ ಗಾಂಗೇಯನಳವನಳವಲ್ಲದೆ ಪೊಗಟ್ಟುವರಂ ಬೀಡಿಂಗೆ ಬಿಜಯಂಗೆಯ್ಯಿಮೆಂದು ಕಳಿಪಿ ಮಱುದಿವಸಂ ಯುದ್ಧಸನ್ನದ್ಧನಾಗಿ ಪ್ರಯಾಣಭೇರಿಯಂ ಪೊಯ್ಸಿದಾಗಳ್-

ಮ॥ ಕೆಡೆದಂ ಪದ್ಮಜನಾಸನಾಂಬುರುಹದಿಂದಾಗಳ್ ಸುರೇಂದ್ರಾಚಳಂ
ನಡುಗಿತ್ತರ್ಕನಳುರ್ಕೆಗೆಟ್ಟು ಸಭದಿಂ ತೂಳ್ದಂ ಮರುಳ್ದಪ್ಪಿದಳ್ ।
ಮೃಡನಂ ಗೌರಿ ಸಮಸ್ತಮೀ ತ್ರಿಭುವನಂ ಪಂಕೇಜಪತ್ರಾಂಬುವೋಲ್
ನಡುಗಿತ್ತೆಂಬಿನಮುರ್ವಿ ಪರ್ವಿದುದು ತತ್ಪ್ರಸ್ಥಾನಭೇರೀರವಂ ॥ ೨೬

ವ॥ ಅಂತು ಮೊಬಗುವ ಭೇರೀರವದೊಡನೆ ನೆಲಂ ಮೊಬಗೆಯುಂ ತಳ್ತಿತ್ತಿದ ವಿಚಿತ್ರಕೇತುಗಳೊಡನುತ್ಪಾತಕೇತುಗಳ್ ಮೂಡೆಯುಂ ಪೆರ್ವಂಡಿರ್ ಸೂಸುವ ಸೇಸೆಯೊಡನೆ ರುಧಿರವರ್ಷಂ ಸುರಿಯೆಯುಂ ಹಿತ ಪುರೋಹಿತ ಜಯ ಜಯ ಧ್ವನಿಗಳೊಡನೆ ಹಾಹಾಕ್ರಂದನ ಧ್ವನಿಗಳನಿಮಿತ್ತಮಾಕಾಶದೊಳ್ ನೆಗೞೆಯುಂ ಕಾದುವೆನೆಂದು ನೆಗೞ್ ನುಡಿದ ನುಡಿಯುಮಂ ಪಿಡಿದ ಚಲಮುಮಂ ಬಗೆದು ಸೆರಗಂ ಬೆರಗುಮಂ ಬಗೆಯದೆ ಮಂಗಳಾಭರಣದೊಳ್ ನೆಱೆಯೆ ಕೆಯ್ಗೆಯ್ದು ಮುತ್ತಿನ ಮಾಣಿಕದ ಮಂಡನಾಯೋಗಂಗಳೊಳಾಯೋಗಂಗೊಂಡು ಬಂದ ಮದಾಂಧಗಂಧಸಿಂಧುರಮಪ್ಪ ಪಟ್ಟವರ್ಧನದ ಬೆಂಗೆವಾಯ್ದು-

ಮಾಡುತ್ತೇನೆ. ಪ್ರತಿದಿನವೂ ಯುದ್ಧದಲ್ಲಿ ಹತ್ತು ಸಾವಿರ ರಾಜರನ್ನು ಕೆಳಗುರುಳಿಸುತ್ತೇನೆ. (ಕೆಳಗೆ ಮಲಗುವ ಹಾಗೆ ಮಾಡುತ್ತೇನೆ) ವ॥ ಎಂದು ಮಹಾಪ್ರತಿಜ್ಞೆಯನ್ನು ಮಾಡಿದ ಭೀಷ್ಮನ ಶಕ್ತಿಯನ್ನು ಅಳತೆಯಿಲ್ಲದಷ್ಟು ಎಲ್ಲರೂ ಹೊಗಳಿದರು. ಅವರನ್ನು 'ಬೀಡಿಗೆ ದಯಮಾಡಿಸಿ' ಎಂದು ಕಳುಹಿಸಿಕೊಟ್ಟನು. ಮಾರನೆಯದಿನ ಯುದ್ಧಸನ್ನದ್ಧನಾಗಿ ಪ್ರಯಾಣಸೂಚಕವಾದ ಭೇರಿಯನ್ನು ಶಬ್ದಮಾಡಿಸಿದನು. ೨೬. ಆ ಭೇರಿಯ ಶಬ್ದವನ್ನು ಕೇಳಿ ಬ್ರಹ್ಮನು ಕಮಲಾಸನದಿಂದ ಉರುಳಿದನು; ಮೇರುಪರ್ವತವು ನಡುಗಿತು. ಸೂರ್ಯನು ಸ್ಥಾನಭ್ರಷ್ಟನಾಗಿ ಆಕಾಶದಿಂದ ಹಾರಿದನು. ಪಾರ್ವತಿಯು ಭ್ರಾಂತಿಗೊಂಡು ಈಶ್ವರನನ್ನು ತಬ್ಬಿಕೊಂಡಳು. ಈ ಸಮಸ್ತ ಭೂಮಂಡಲವು ಕಮಲದೆಲೆಯ ಮೇಲಿನ ನೀರಿನ ಹಾಗೆ ನಡುಗಿತು ಎನ್ನುವಂತೆ ಆ ಪ್ರಯಾಣಭೇರೀ ಶಬ್ದವು ಹೆಚ್ಚಿ ಹಬ್ಬಿತು. ವ॥ ಆಗ ಭೂಮಿಯು ಗುಡುಗಿತು. ಎತ್ತಿ ಕಟ್ಟಿರುವ ಚಿತ್ರಮಯವಾದ ಧ್ವಜಗಳೊಡನೆ ಅಪಶಕುನ ಸೂಚಕವಾದ ನಕ್ಷತ್ರಗಳು ಕಾಣಿಸಿಕೊಂಡವು. ವೃದ್ಧಸ್ತ್ರೀಯರು ಚೆಲ್ಲುವ ಮಂತ್ರಾಕ್ಷತೆಗಳೊಡನೆ ರಕ್ತದ ಮಳೆಯು ಸುರಿಯಿತು. ಹಿತರಾದ ಪುರೋಹಿತರ ಜಯಜಯಶಬ್ದಗಳೊಡನೆ ಅಳುವ ಶಬ್ದವು ಅಕಾರಣವಾಗಿ ಆಕಾಶದಲ್ಲಿ ಉಂಟಾಯಿತು. ಆದರೂ ದುರ್ಯೋಧನನು ಯುದ್ಧ ಮಾಡುತ್ತೇನೆಂದು ಸ್ಪಷ್ಟವಾಗಿ ಆಡಿದ ಮಾತನ್ನೂ ಹಿಡಿದ ಛಲವನ್ನೂ ಯೋಚನೆ ಮಾಡಿ ಭಯವನ್ನೂ ಅಪಾಯವನ್ನೂ ಯೋಚಿಸಲೇ ಇಲ್ಲ. ಮಂಗಳಕರವಾದ ಒಡವೆಗಳಿಂದ ಪೂರ್ಣವಾಗಿ ಅಲಂಕಾರಮಾಡಿಕೊಂಡು ಮುತ್ತು ಮಾಣಿಕ್ಯದ ಆಭರಣಗಳಿಂದ ಅಲಂಕೃತವಾಗಿ ಬಂದ ಮದಗಜವಾದ ಪಟ್ಟದಾನೆಯನ್ನು ಹತ್ತಿ

ಕಂ॥ ನಯಮನಯಂ ಜಯಮೆನಗಪ
ಜಯವಿದು ಯಶಮಯಶಮೆಂಬಿದಂ ಬಗೆಯದೆ ನಿ ।
ಶ್ಚಯಿಸಿ ಕಲಹಮನೆ ಮನದೊಳ್
ಭಯಮಱಿಯದ ಕಲಿ ಸುಯೋಧನಂ ಪೊಱಮಟ್ಟಂ ॥ ೨೭

ವ॥ ಅಂತು ಪೊಱಮಟ್ಟು ಮುಂದೆ ಪರಿವ ಧವಳಚ್ಛತ್ರಚಾಮರಂಗಳುಂ ಮಿಳಿರ್ವ ಪಾಳಿ ಕೇತನಂಗಳುಂ ಪೊಯ್ವ ಪಂಚಮಹಾಶಬ್ದಂಗಳುಂ ತನಗೆ ರಾಜರಾಜ ಶಬ್ದಮನನ್ವರ್ಥಂ ಮಾಡೆ ಜಯದ್ರಥ ಜಯತ್ಸೇನ ಸುದಕ್ಷಿಣ ಶಲ್ಯ ಶಕುನಿ ಧೃಷ್ಟಕೇತು ನೀಳ ಭಗದತ್ತ ಶ್ರುತಾಯುಧ ನಿಯತಾಯುಧಾಚ್ಯುತಾಯುಧಾದಿಗಳಪ್ಪ ಪನ್ನೊಂದಕ್ಷೋಹಿಣೀಪತಿಗಳುಂ ಗಾಂಗೇಯ ದ್ರೋಣಾಶ್ವತ್ಥಾಮ ಕೃಪ ಕೃತವರ್ಮ ಪ್ರಭೃತಿಗಳುಂ ಕರ್ಣ ವೃಷಸೇನ ಚಿತ್ರಸೇನರೆಂಬ ತಂದೆ ಮಕ್ಕಳ್ ಮೂವರುಂ ಬೆರಸು ಬರೆ ಬಾಹ್ಲಿಕ ಭೂರಿಶ್ರವಸೋಮದತ್ತರೆಂಬ ಮೂವರುಮನಂತ ಬಲಂ ಬೆರಸು ಕೂಡಿಬರೆಯವಂತಿದೇಶಾಧೀಶ್ವರರಪ್ಪ ವಿಂದಾನುವಿಂದರೆಣ್ಬತ್ತು ನಾಲ್ಸಾಸಿರ ಮದದಾನೆ ವೆರಸು ಬಂದು ಕೂಡೆ ಕಳಿಂಗರಾಜಂ ಕ್ಷೇಮಧೂರ್ತಿಯುಂ ಭೀಮಸೇನನ ಕೆಯ್ಯೊಳ್ ಸತ್ತ ಬಕಾಸುರ ಜಟಾಸುರರ ಮಕ್ಕಳ್ ಚತುಸ್ತ್ರಿಂಶತ್ಸಹಸ್ರ ನಕ್ತಂಚರ ಪರಿವೃತ ಹಳಂಭೂಪ ಮುಸಲಾಯುಧ ಕಾಳನೀಳ ವಿದ್ಯುನ್ಮಾಲ್ಯಾದಿಗಳುಂ ಬಂದು ಕೂಡೆ ತ್ರಿಗರ್ತಾಧೀಶಂ ಸುಶರ್ಮನುಂ ಸಂಸಪ್ತಕರ್ ಪದಿನೆಂಟು ಕೋಟಿ ರಥಂ ಬೆರಸು ಬಂದು ಕೂಡೆ ಮತ್ತಮನೇಕ ದೇಶಾಧೀಶ್ವರರುಂ

೨೭. ಇದು ನೀತಿ ಇದು ಅನೀತಿ, ಇದು ಜಯ ಇದು ಅಪಜಯ, ಇದು ಯಶಸ್ಸು ಇದು ಅಪಯಶಸ್ಸು ಎಂದು ವಿಚಾರಮಾಡದೆ ಯುದ್ಧವನ್ನೇ ಮನಸ್ಸಿನಲ್ಲಿ ನಿಷ್ಕರ್ಷಿಸಿ ಭಯವೆಂದರೇನೆಂಬುದನ್ನೇ ತಿಳಿಯದ ಶೂರನಾದ ದುರ್ಯೋಧನನು ಯುದ್ಧಕ್ಕೆ ಹೊರಟನು. ವ॥ ಹಾಗೆ ಹೊರಟು ತನ್ನ ಮುಂದೆ ನಡೆಯುತ್ತಿದ್ದ ಶ್ವೇತಚ್ಛತ್ರಚಾಮರಗಳೂ ಅಲುಗಾಡುತ್ತಿದ್ದ ಕೊಂಬು, ತಮಟೆ, ಭೇರಿ, ಘಂಟೆ ಮತ್ತು ಚಿನ್ನಂಗಹಳಗಳೆಂಬ ಪಂಚಮಹಾವಾದ್ಯಗಳೂ ತನ್ನ ಚಕ್ರವರ್ತಿ ಎಂಬ ಶಬ್ದವನ್ನು ಅನ್ವರ್ಥವಾಗಿ ಮಾಡುತ್ತಿದ್ದವು. ಜಯದ್ರಥ, ಜಯತ್ಸೇನ, ಸುದಕ್ಷಿಣ, ಶಲ್ಯ, ಶಕುನಿ, ಧೃಷ್ಟಕೇತು, ನೀಳ, ಭಗದತ್ತ, ಶ್ರುತಾಯುಧ, ನಿಯತಾಯುಧ, ಅಚ್ಯುತಾಯುಧರೇ ಮೊದಲಾದ ಹನ್ನೊಂದಕ್ಷೋಹಿಣೀ ನಾಯಕರೂ ಭೀಷ್ಮ, ದ್ರೋಣ, ಅಶ್ವತ್ಥಾಮ, ಕೃಪ, ಕೃತವರ್ಮ ಮೊದಲಾದವರೂ ಕರ್ಣ, ವೃಷಸೇನ ಚಿತ್ರಸೇನರೆಂಬ ತಂದೆ ಮಕ್ಕಳು ಮೂವರೂ ಒಟ್ಟುಗೂಡಿ ಬಂದರು. ಬಾಹ್ಲಿಕ ಭೂರಿಶ್ರವ ಸೋಮದತ್ತರೆಂಬ ಮೂವರೂ ಕಡೆಯಿಲ್ಲದಷ್ಟು ಸೇನಾಸಮೇತರಾಗಿ ಬಂದು ಸೇರಿದರು. ಅವಂತೀದೇಶದ ಒಡೆಯರಾದ ವಿಂದಾನುವಿಂದರು ಎಂಬತ್ತುನಾಲ್ಕು ಸಾವಿರ ಮದ್ದಾನೆಯೊಡಗೂಡಿ ಬಂದು ಕೂಡಿದರು. ಕಳಿಂಗ ರಾಜನಾದ ಕ್ಷೇಮಧೂರ್ತಿಯೂ ಭೀಮಸೇನನ ಕಯ್ಯಲ್ಲಿ ಸತ್ತ ಬಕಾಸುರ ಜಟಾಸುರರ ಮಕ್ಕಳಾದ ಹಳಂಭೂಷ ಮುಸಲಾಯುಧ ಕಾಳ ನೀಳ ವಿದ್ಯುನ್ಮಾಲಿ ಮೊದಲಾದವರೂ ಮೂವತ್ತುನಾಲ್ಕುಸಾವಿರ ರಾಕ್ಷಸರಿಂದ ಸುತ್ತುವರಿಯಲ್ಪಟ್ಟು ಬಂದು ಜೊತೆಗೂಡಿದರು. ತ್ರಿಗರ್ತಾಧೀಶ್ವರನಾದ ಸುಶರ್ಮನೂ ಸಂಶಪ್ತಕರೂ ಹದಿನೆಂಟು ಕೋಟಿ ತೇರಿನೊಡನೆ ಬಂದು ನೆರೆದರು. ಇನ್ನೂ ಅನೇಕ ದೇಶಾಧೀಶರು ಬಂದು ಒಟ್ಟುಗೂಡಿದರು. ಯುಯುತ್ಸು, ದುಶ್ಶಾಸನ, ಚಿತ್ರಸೇನ,

ಬರೆ ಯುಯುತ್ಸು ದುಶ್ಶಾಸನ ಚಿತ್ರಸೇನ ದುಸ್ಸಹ ದುಸ್ಸಳ ವಿಂದಾನುವಿಂದ ದುರ್ಧರ್ಷಣ ದುರ್ಮರ್ಷಣ ದುಸ್ಸ್ಪರ್ಶನ ಸುಬಾಹು ದುರ್ಮುಖ ದುಷ್ಕರ್ಣ ವಿಕರ್ಣ ವಿವಿಂಶತಿ ಸುಲೋಚನ ಚಿತ್ರೋಪಚಿತ್ರ ನಂದೋಪನಂದ ಚಿತ್ರಾಂಗದ ಚಿತ್ರಕುಂಡಲ ಜರಾಸಂಧ ಸತ್ಯಸಂಧ ಸುಹಸ್ತ ದೃಢಹಸ್ತ ಪ್ರಮಾಥಿ ದೀರ್ಘಬಾಹು ಮಹಾಬಾಹುಗಳ್ ಮೊದಲಾಗೆ ತನ್ನ ನೂರ್ವರ್ ತಮ್ಮಂದಿರುಂ ಲಕ್ಷಣಂ ಮೊದಲಾಗೆ ನೂರ್ವರ್ ಮಕ್ಕಳುಂ ಸುತ್ತಿಱಿದು ಬಳಸಿ ಬರೆ ಪ್ರಳಯಕಾಳ ವಾತಾಹತಿಯಿಂ ಜಳನಿಧಿಯೆ ತಳರ್ವಂತೆ ತಳರ್ದು ಕುರುಕ್ಷೇತ್ರಕ್ಕೆ ಮೊಗಸಿದಾಗಳ್-

ಚಂ॥ ಕರಿ ಮಕರಂಗಳಂ ಕರಿ ಘಟಾವಳಿಯಬ್ದಕುಳಂಗಳಂ ಭಯಂ
ಕರತರಮಾದ ಪೆರ್ದೆರೆಗಳಂ ಹಯಸಂತತಿ ಮತ್ಸ್ಯಕೋಟಿಯಂ ।
ಸ್ಫುರಿತ ನಿಶಾತಹೇತಿಯುತ ಸದ್ಭಟಕೋಟಿ ನಿರಂತರಂ ತಿರ
ಸ್ಕರಿಸಿರೆ ಘೂರ್ಣಿತಾರ್ಣವಮನೊತ್ತರಿಸಿತ್ತು ಚತುರ್ಬಲಾರ್ಣವಂ ॥ ೨೮

ಮ॥ ಮದವದ್ದಂತಿ ವರೂಥ ವಾಜಿ ಭಟ ಸಂಘಾತಂಗಳೀ ಲೆಕ್ಕಮೆಂ
ಬುದನಾಂ ನಿಟ್ಟಿಸಲಾಱೆನೊಂದನಱಿವೆಂ ತತ್ಸೈನ್ಯ ಪಾದೋತ್ಥಿತಂ ।
ಪುದಿದೆತ್ತಂ ರಜಮಂಬರಸ್ಥಳಮುಮಂ ಮುಟ್ಟಿತ್ತು ತಳ್ತುರ್ವಿ ಪ
ರ್ವಿದೊಡಾ ಮುನ್ನಿನ ತೆಳ್ಪುಗೆಟ್ಟು ಕೆಸಱಾಯ್ತಾಕಾಶ ಗಂಗಾಜಲಂ ॥ ೨೯

ಚಂ॥ ರವಿಕಿರಣಾಳಿಗಳ್ ಧ್ವಜಪಟಾಳಿಯ ತಿಂತಿಣಿಯಿಂದಮುರ್ಚಲಾ
ಱವೆ ರವಿವಾಜಿಗಳ್ ನೆಗೆದ ಪಾಂಸುಗಳಿಂ ದೆಸೆಗೆಟ್ಟು ಪೋಗಲಾ ।
ಱವೆ ರವಿಬಿಂಬಮಂದೆಸೆಯಲಾಱದೆ ಪೆಂಪಿನ ತಿಣ್ಣನಾಂತ ಕೌ
ರವಬಳದಂತು ಮೇರೆ ಪವಣೆಂಬುದನಿನ್ನಱಿವಂದಮಾವುದೋ ॥ ೩೦

ದುಸ್ಸಹ, ದುಸ್ಸಳ, ವಿಂದಾನುವಿಂದ, ದುರ್ಧರ್ಷಣ, ದುರ್ಮರ್ಷಣ, ದುಸ್ಸ್ಪರ್ಶನ, ದುಷ್ಕರ್ಣ, ಸುಬಾಹು, ದುರ್ಮುಖ, ವಿಕರ್ಣ, ವಿವಿಂಶತಿ, ಸುಲೋಚನ, ಚಿತ್ರೋಪಚಿತ್ರ, ದೃಢಹಸ್ತ, ಪ್ರಮಾಥಿ, ದೀರ್ಘಬಾಹು, ಮಹಾಬಾಹುಗಳೇ ಮೊದಲಾದ ನೂರುಜನ ತಮ್ಮಂದಿರೂ ಲಕ್ಷಣನೇ ಮೊದಲಾದ ನೂರುಜನ ಮಕ್ಕಳೂ ಸುತ್ತುಗಟ್ಟಿ ಬಂದರು. ಪ್ರಳಯಕಾಲದ ಗಾಳಿಯ ಪೆಟ್ಟಿನಿಂದ ಸಮುದ್ರವೇ ಚಲಿಸುವಂತೆ ಚಲಿಸಿ ಸೈನ್ಯವು ಕುರುಕ್ಷೇತ್ರವನ್ನು ಮುತ್ತಿಕೊಂಡಿತು. ೨೮. ನೀರಾನೆಗಳನ್ನೂ ಮೊಸಳೆಗಳನ್ನೂ ಆನೆಯ ಸಮೂಹವೂ, ಮೇಘಸಮೂಹವನ್ನೂ ಅತಿಭಯಂಕರವಾದ ದೊಡ್ಡ ಅಲೆಗಳನ್ನೂ ಕುದುರೆಗಳ ಸಮೂಹವೂ, ಮೀನಿನ ಸಮೂಹವನ್ನು ಪ್ರಕಾಶಮಾನವೂ ಹರಿತವೂ ಆದ ಕತ್ತಿಗಳಿಂದ ಕೂಡಿದ ಒಳ್ಳೆಯ ಭಟಸಮೂಹವೂ ಒಂದೇಸಮನಾಗಿ ತಿರಸ್ಕರಿಸುತ್ತಿರಲು ಚತುರಂಗಸೇನಾಸಮುದ್ರವು ಘೋಷಿಸುತ್ತಿರುವ ಸಮುದ್ರವನ್ನೇ ಮೀರಿ ಬಂದಿತು. ೨೯. ಮದ್ದಾನೆ, ತೇರು, ಕುದುರೆ, ಕಾಲಾಳುಗಳು ಈ ಲೆಕ್ಕವುಳ್ಳದ್ದು ಎಂದು ನಾನು ಹೇಳಲಾರೆ. ಇಷ್ಟು ಮಾತ್ರ ಹೇಳಬಲ್ಲೆ. ಆ ಸೈನ್ಯದ ತುಳಿತದಿಂದ ಮೇಲೆದ್ದು ಎಲ್ಲ ಕಡೆಯಲ್ಲೂ ವ್ಯಾಪಿಸಿ ಆಕಾಶಪ್ರದೇಶವನ್ನು ಮುಟ್ಟಿದ್ದ ಧೂಳು ಮತ್ತೂ ಹೆಚ್ಚಾಗಿ ವ್ಯಾಪಿಸಲು ಆಕಾಶಗಂಗಾನದಿಯ ನೀರು ತನ್ನ ಮೊದಲಿನ ಸ್ವಚ್ಛತೆಯನ್ನು ಕಳೆದುಕೊಂಡು ಬಗ್ಗಡವಾಯಿತು. ೩೦. ಸೂರ್ಯನ ಕಿರಣಗಳ ಸಮೂಹವು ಬಾವುಟದ ಬಟ್ಟೆಗಳ ಸಮೂಹವನ್ನು ಭೇದಿಸಿಕೊಂಡು

ಮ॥ ಮದವದ್ದಂತಿ ಮದಾಂಬುಧಾರೆಗಳವಂದೊಂದೊಂದಱೊಳ್ ಕೂಡೆ ಪ
ಣ್ಣಿದ ಜಾತ್ಯಶ್ವ ರಥಾಶ್ವ ಸಂಕುಳ ಖಲೀನೋದ್ಭೂತ ಲಾಲಾಜಲಂ ।
ಕದಡೆಟ್ಟಿತ್ತಮವುಂಕೆ ಬೇಱೆ ಪರಭಾಗಂಬೆತ್ತು ಲೋಕಕ್ಕೆ ಸ
ನ್ನಿದಮಾಗಿರ್ದುವು ಕೌರವಧ್ವಜಿನಿಯೊಳ್ ಕಾಳಿಂದಿಯುಂ ಗಂಗೆಯುಂ ॥ ೩೧

ವ॥ ಅಂತು ದುರ್ಯೋಧನಂ ತನ್ನ ಬಲದ ಕರಿಘಟೆಗಳ ಕರ್ಣ ತಾಳಾಹತಿಯಿಂ ಕುಲಗಿರಿಗಳಳ್ಳಾಡೆಯುಂ ತನ್ನ ಬಲದ ಪದಾಭಿಘಾತದೊಳಂ ಕುಲಗಿರಿಗಳ್ ಜೇಱಿಟ್ಟು ಪಾಱೇಱೆಯುಂ ತನ್ನ ಬಲದ ಪದೋತ್ಥಿತ ರಜಮೆ ಮಹಾಸಮುದ್ರಂಗಳಂ ತೆಕ್ಕನೆ ತೀವೆಯುಂ ನಿಚ್ಚವಯಣದಿಂ ಬಂದು ಕುರುಕ್ಷೇತ್ರದ ಪೂರ್ವ ದಿಗ್ಭಾಗದೊಳ್ ಪ್ರಳಯಂ ಮೂರಿವಿಟ್ಟಂತೆ ಬೀಡಂಬಟ್ಟು ಧರ್ಮಪುತ್ರನಲ್ಲಿಗುಳೂಕನೆಂಬ ದೂತನನಿಂತೆಂದಟ್ಟಿದಂ-

ಚಂ॥ ಮಸೆಯಿಸುಗುಳ್ಳ ಕೆಯ್ದುಗಳನರ಼್ಿಸುಗಾನೆಗಳಂ ತಗುಳ್ದು ಪೂ
ಜಿಸುಗೆ ವಿಶುದ್ಧ ವಾಜಿಗಳನಾಜಿಗೆ ಜೆಟ್ಟಿಗರಾಗಿ ಕೊಳ್ವಿವೀ !
ಸಿಸುಗೆ ನಿರಂತರಂ ರವಳಿ ಘೋಷಿಸುಗಿಂದೆ ಕಡಂಗಿ ಸಾರ್ಚಿ ಬಿ
ಟ್ಟುಸಿರದೆ ನಿಲ್ವ ಕಾರಣಮದಾವುದೊ ನೆಟ್ಟನೆ ನಾಳೆ ಕಾಳೆಗಂ ॥ ೩೨

ಬರಲಾರವು, ಸೂರ್ಯನ ಕುದುರೆಗಳು ಮೇಲೆದ್ದ ಧೂಳಿನಿಂದ ದಿಕ್ಕೆಟ್ಟು ಮುಂದೆ ಹೋಗಲಾರವು, ಸೂರ್ಯಬಿಂಬವು ಪ್ರಕಾಶಹೀನವಾಗಿ ವೈಭವದ ಭಾರದಿಂದ ಕೂಡಿದ ಕೌರವಸೇನೆಯಂತೆಯೇ ಕೊನೆ, ಎಲ್ಲೆ, ಪ್ರಮಾಣಗಳನ್ನು ತಿಳಿಯಲಾರದಂತಿದ್ದುವು ೩೧. ಮದ್ದಾನೆಗಳ ಮದೋದಕದ ಒಟ್ಟುಗೂಡಿದ ಪ್ರವಾಹವೂ ಸಿದ್ಧವಾಗಿ ಅಲಂಕೃತವಾಗಿರುವ ಜಾತ್ಯಶ್ವ ಮತ್ತು ರಥಾಶ್ವ (ಜಾತಿ ಕುದುರೆ ಮತ್ತು ತೇರಿನ ಕುದುರೆ)ಗಳ ಕಡಿವಾಣಗಳ ಸಮೂಹದಿಂದ ಹುಟ್ಟಿದ ಜೊಲ್ಲಿನ ರಸವೂ ಒಂದರೊಡನೊಂದುಗೂಡಲು (ಒಂದನ್ನೊಂದು ಒತ್ತರಿಸಲು) ಗಂಗಾ ಯಮುನಾನದಿಗಳು ಬೇರೆ ಆಕಾರವನ್ನು ಪಡೆದು ಕೌರವ ಸೈನ್ಯ ಪ್ರದೇಶದಲ್ಲಿ ಹರಿಯುವ ಹಾಗಿದ್ದುವು. ವ॥ ದುರ್ಯೋಧನನು ಸೈನ್ಯದ ಆನೆಗಳ ಸಮೂಹದ ಕಿವಿಯ ಬೀಸುವಿಕೆಯ ಪೆಟ್ಟಿನಿಂದ ಕುಲಪರ್ವತಗಳಳ್ಳಾಡಿದುವು. ಅವನ ಸೈನ್ಯದ ಕಾಲಿನ ತುಳಿತದಿಂದ ಕುಲಪರ್ವತಗಳು ಪುಡಿಯಾಗಿ ಮೇಲಕ್ಕೆದ್ದು ಹಾರಿದುವು. ಅವನ ಸೈನ್ಯದ ಕಾಲಿನಿಂದ ಎದ್ದ ಧೂಳೇ ಮಹಾಸಮುದ್ರಗಳನ್ನು ಇದ್ದಕ್ಕಿದ್ದ ಹಾಗೆ ತುಂಬಿತು. ಹೀಗೆ ನಿತ್ಯಪ್ರಯಾಣದಿಂದ ಬಂದು ಕುರುಕ್ಷೇತ್ರದ ಪೂರ್ವದಿಗ್ಭಾಗದಲ್ಲಿ ಪ್ರಳಯ ಕಾಲವೇ ಗುಂಪುಕೂಡಿದ ಹಾಗೆ ಬೀಡನ್ನು ಬಿಟ್ಟು ದುರ್ಯೋಧನನು ಧರ್ಮರಾಜನ ಹತ್ತಿರಕ್ಕೆ ಉಳೂಕನೆಂಬ ಆಳಿನ ಮೂಲಕ ಹೀಗೆಂದು ಹೇಳಿ ಕಳುಹಿಸಿದನು. ೩೨. ಇರುವ ಆಯುಧಗಳನ್ನು ಹರಿತಮಾಡಲಿ, ಆನೆಗಳನ್ನು ಪೂಜಿಸಲಿ, ಪರಿಶುದ್ಧರಾದ ಕುದುರೆಗಳನ್ನು ಶ್ರದ್ಧೆಯಿಂದ ಪೂಜಿಸಲಿ; ಯುದ್ಧವೀರರಾಗಿ ಯುದ್ಧ ಸೂಚಕಗಳಾದ ದೀವಟಿಗೆಗಳನ್ನು ಬೀಸಿಸಲಿ. ನಿಲ್ಲಿಸದೆ ಒಂದೇಸಮನಾಗಿ ಯುದ್ಧ ಘೋಷವಾಗುತ್ತಿರಲಿ; ಉತ್ಸಾಹದಿಂದ ಕೂಡಿ ಯುದ್ಧಮಾಡಬೇಕಾದ ಈದಿನ ಯುದ್ಧರಂಗದಲ್ಲಿ ವ್ಯರ್ಥಾಲಾಪ ಮಾಡುತ್ತಿರಲು ಕಾರಣವೇನು? ನೇರವಾಗಿ ನಾಳೆಯಿಂದಲೇ ಕಾಳಗ

ವ|| ಎಂದಾ ದೂತನಾ ಮಾಱ್ಕೆಯೊಳೆ ಬಂದು ಪೇೞೆ ಕೇಳ್ದು ಯಮನಂದನನಿಂತೆಂದಂ-

ಚಂ|| ಪಗೆ ಮಸೆದಂದೆ ಕೆಯ್ದು ಮಸೆದಿರ್ದುವು ಪೂಜಿಸುವಂಕದಾನೆ ವಾ
ಜಿಗಳೆಮಗಿಲ್ಲ ಜಟ್ಟಿಗರೆ ಎನ್ನೊಡವುಟ್ಟಿದರಲ್ತೆ ನಾಲ್ಕುಮಾ ।
ನೆಗಳಿವನಾಂ ದಲಿಂ ರಣದೊಳರ್ಚಿಸಿ ಬಟ್ಟಪೆನೇಕೆ ಮಾಣ್ಬೆನಾ
ವಗಮಿದನಿಂತೆ ಪೇೞ್ ನೆಱಿಯೆ ನಾಳೆಯೆ ಕಾಳೆಗಮಂತೆ ಗೆಯ್ವಮಾಂ || ೩೩

ವ|| ಎಂದಾ ದೂತನಂ ವಿಸರ್ಜಿಸಿ ಪುಂಡರೀಕಾಕ್ಷಂಗೆ ಬೞೆಯನಟ್ಟಿ ಬರಿಸಿ ನಮ್ಮ ಪಡೆಯೊಳಾರ್ಗೆ ವೀರಪಟ್ಟಮಂ ಕಟ್ಟುವಂ ಪೇೞಿಮೆನೆ-

ಶಾ|| ಮಾತಂಗಾಸುರವೈರಿಯಲ್ಲಿ ಪಡೆದುಂ ಬಿಲ್ಲಂ ಧನುರ್ವಿದ್ಯೆಗಂ
ತಾತಂಗಗ್ಗಳಮಾರುಮಲ್ಲದಜೆನಾ ಶ್ವೇತಂಗಮಂತಾ ನದೀ
ಜಾತಂಗಂ ದೊರೆ ಯುದ್ಧಮೆಂದಱಿದು ತಚ್ಛ್ವೇತಂಗೆ ಭೂಲೋಕವಿ
ಖ್ಯಾತಂಗಗ್ಗಳ ವೀರಪಟ್ಟಮನುದಾರಂ ಕಟ್ಟಿದಂ ಧರ್ಮಜಂ || ೩೪

ವ|| ಅಂತು ವಿರಾಟನಂದನನಂ ಧರ್ಮನಂದನಂ ಸೇನಾನಾಯಕನಂ ಮಾಡೆ ನಾಳೆ ಕಾಳಗಮೆಂದು ಪಡೆವಳರ್ ಪೋಗಿ ಸಾಱಿಮೆಂಬುದುಮವರ್ ಬೀಡುವೀಡುಗಳ್ಗೆಲ್ಲಂ ಸಾಱಿದಾಗಳ್-

ಚಂ|| ಪಗೆ ಸುಗಿವನ್ನೆಗಂ ಮಸೆವ ವೀರಭಟರ್ಕಳ ರೌದ್ರಮಪ್ಪ ಕೆ
ಯ್ದುಗಳಿನಗುರ್ವಿನದ್ಭುತದಿನುರ್ವಿದ ಕೆಂಗಿಡಿಗಳ್ ಪಳಂಚಿ ತೊ ।
ಟ್ಟಗೆ ಕೊಳೆ ಸಾಯ್ದವೋಲ್ ಪೊಳೆವ ಸಂಜೆಯ ಕೆಂಪದು ಸಾಣೆಗೊಡ್ಡಿದಿ
ಟ್ಟಗೆಯ ರಜಂಬೊಲೆಂಬಿನೆಗಮಸ್ತಮಯಕ್ಕಿೞಿದಂ ದಿವಾಕರಂ || ೩೫

ಪ್ರಾರಂಭವಾಗತಕ್ಕದ್ದು. ವ|| ಎಂದು ಹೇಳಿದ ಆ ಮಾತನ್ನು ಆ ದೂತನು ಆ ರೀತಿಯಿಂದಲೇ ಬಂದು ಹೇಳಲಾಗಿ ಧರ್ಮರಾಜನು ಕೇಳಿ ಹೀಗೆಂದನು. ೩೩. ಹಗೆತನ ಪ್ರಾರಂಭವಾದ ದಿನವೇ ಆಯುಧಗಳು ಸಾಣೆಗೊಂಡಿವೆ. ಪೂಜಿಸಬೇಕಾದ ಪ್ರಸಿದ್ಧವಾದ ಪ್ರತ್ಯೇಕ ಆನೆ ಕುದುರೆಗಳು ನಮಗಿಲ್ಲ; ನನ್ನೊಡನೆ ಹುಟ್ಟಿದವರೇ ಜಟ್ಟಿಗಳಾದವರಲ್ಲವೇ? ಈ ನಾಲ್ಕು ಆನೆಗಳನ್ನೇ ಪೂಜಿಸಿ ಯುದ್ಧದಲ್ಲಿ ಬಿಡುತ್ತೇನೆ. ಏಕೆ ತಡೆಯಲಿ? ಇದನ್ನು ಹೀಗೆಯೇ ಪೂರ್ಣವಾಗಿ ಹೇಳು. ನಾಳೆಯೇ ಯುದ್ಧವಾಗಲಿ. ನಾವೂ ಹಾಗೆಯೇ ಮಾಡುತ್ತೇವೆ. ವ|| ಎಂದು ಆ ದೂತನನ್ನು ಕಳುಹಿಸಿ ಕೊಟ್ಟನು. ಶ್ರೀಕೃಷ್ಣನಿಗೆ ಸಮಾಚಾರವನ್ನು ದೂತರ ಮೂಲಕ ಕಳುಹಿಸಿ ಬರ ಮಾಡಿದನು. 'ನಮ್ಮ ಸೈನ್ಯದಲ್ಲಿ ಯಾರಿಗೆ ವೀರಪಟ್ಟವನ್ನು ಕಟ್ಟೋಣ ಅಪ್ಪಣೆ ಕೊಡಿ' ಎಂದು ಕೇಳಿದನು. ೩೪. ಶ್ವೇತನು ಈಶ್ವರನಲ್ಲಿ ಬಿಲ್ಲನ್ನು ಪಡೆದಿದ್ದಾನೆ. ಬಿಲ್ವಿದ್ಯೆಯಲ್ಲಿ ಆತನನ್ನು ಮೀರಿಸುವವರಾರೂ ಇಲ್ಲ. ಆದುದರಿಂದ ಆ ಶ್ವೇತನಿಗೂ ಭೀಷ್ಮನಿಗೂ ಯುದ್ಧವು ಸಮಾನವಾದುದು ಎಂದು ತಿಳಿದು ಆ ಉದಾರಿಯಾದ ಧರ್ಮರಾಜನು ಭೂಲೋಕವಿಖ್ಯಾತನಾದ ಶ್ವೇತನಿಗೆ ಅತಿಶಯವಾದ ವೀರಪಟ್ಟವನ್ನು ಕಟ್ಟಿದನು. ವ|| ಹಾಗೆ ವಿರಾಟನ ಮಗನಾದ ಶ್ವೇತನನ್ನು ಧರ್ಮರಾಜನು ಸೇನಾನಾಯಕನನ್ನಾಗಿ ಮಾಡಿ ನಾಳೆಯೇ ಯುದ್ಧವೆಂದು ಸೇನಾಧಿಪತಿಗಳು ಹೋಗಿ ಸಾರಿರಿ ಎನ್ನಲು ಅವರು ಬೀಡುಬೀಡುಗಳಲ್ಲೆಲ್ಲ ಘೋಷಿಸಿದರು-೩೫. ಶತ್ರುವು ಹೆದರುವಂತೆ ಮಸೆದಿರುವ ವೀರಭಟರುಗಳ ಭಯಂಕರವಾದ ಆಯುಧಗಳಿಂದ

ವ|| ಆಗಳುಭಯಬಲಂಗಳೊಳಂ ಚಾತುರ್ಯಾಮಾವಸಾನಘಟಿತ ಘಂಟಿಕಾಧ್ವನಿಗಳುಂ ಸಂಧ್ಯಾಸಮಯಸಮುದಿತ ಶಂಖಧ್ವನಿಗಳುಂ ಪಂಚಮಹಾಶಬ್ದಧ್ವನಿಗಳುಮೊಡನೊಡನೆ ನೆಗಳ್ದುವಾಗಳೆರಡುಂ ಬೀಡುಗಳೊಳಂ ಭೋರೆಂದಾರ್ದು ರವಳಿ ಘೋಷಿಸಿ ಕೊಳ್ಳಿವೀಸಿದಾಗಳ್-

ಕಂ|| ಉರಿಮುಟ್ಟಿದರಳೆಯಂತಂ
ಬರಮುರಿದತ್ತಜನ ಪದ್ಮವಿಷ್ಟರದೆಸಳಂ ।
ದರೆಸೀದುವಖಿಳ ದಿಗ್ವಿರ
ದರದಂಗಳ್ ಕರಮೆ ಕರಿಪುಗಾಜಿದುವಾಗಳ್ ॥ ೩೬

ವ|| ಅಂತು ಕೊಳ್ಳಿವೀಸಿದಿಂಬಟಿಯಂ-

ಕಂ|| ಧೃತ ಧವಳವಸನರಾರಾ
ಧಿತಶಿವರರ್ಚಿತ ಸಮಸ್ತಶಸ್ತ್ರರ್ ನೀರಾ ।
ಜಿತತುರಗರೊಪ್ಪಿದರ್ ಕೆಲ
ರತಿರಥ ಸಮರಥ ಮಹಾರಥಾರ್ಧರಥರ್ಕಳ್ ॥ ೩೭

ಉಡಲುಂ ತುಡಲುಂ ವಸ್ತ್ರಂ
ತುಡುಗೆಯನಾನೆಯುಮನರ್ಥಿಸಂತತಿಗೀಯಲ್ ।
ಬಿಡುವೊನ್ನುಮನಾಳ್ಗಟ್ಟುವ
ತೊಡರೊಳ್ ತೊಡರ್ದಿರ್ದರರಸುಮಕ್ಕಳ್ ಕೆಲಬರ್ ॥ ೩೮

ಭಯಂಕರವೂ ಆಶ್ಚರ್ಯಕರವೂ ಆಗಿ ಎದ್ದಿರುವ ಕೆಂಗಿಡಿಗಳು ತಗಲಿ ಆವರಿಸಲು ಮೇಲೆ ಹಾಯುವ ಹಾಗೆ ಹೊಳೆಯುತ್ತಿರುವ ಆ ಸಂಜೆಗೆಂಪು ಸಾಣೆಗೆ ಕೊಟ್ಟ ಇಟ್ಟಿಗೆಯ ಧೂಳೆನ್ನುವ ಹಾಗಿರಲು ಸೂರ್ಯನು ಮುಳುಗಿದನು. ವ|| ಆಗ ಎರಡು ಸೈನ್ಯಗಳಲ್ಲಿಯೂ ನಾಲ್ಕು ಯಾಮಗಳ ಕಡೆಯಲ್ಲಿ ಉಂಟಾಗುವ ಗಂಟೆಯ ಶಬ್ದಗಳೂ ಸಂಧ್ಯಾಕಾಲದಲ್ಲಿ ಶಂಖಧ್ವನಿಗಳೂ ಪಂಚಮಹಾಧ್ವನಿಗಳೂ ಜೊತೆಜೊತೆಯಲ್ಲಿಯೇ ಉಂಟಾದುವು. ಆಗ ಎರಡು ಬೀಡುಗಳಲ್ಲಿಯೂ ಭೋರೆಂದು ಸಾಮೂಹಿಕ ಶಬ್ದವನ್ನು ಘೋಷಿಸಿ ಆ ಯುದ್ಧಸೂಚಕವಾದ ದೀವಟಿಗೆಗಳನ್ನು ಬೀಸಿದರು. ೩೬. ಬೆಂಕಿ ತಗುಲಿದ ಹತ್ತಿಯಂತೆ ಆಕಾಶವು ಉರಿದುಹೋಯಿತು. ಬ್ರಹ್ಮನ ಕಮಲಾಸನದ ದಳಗಳು ಅರ್ಧ ಸುಟ್ಟವು. ಎಲ್ಲ ದಿಗ್ಗಜಗಳ ದಂತಗಳೂ ವಿಶೇಷವಾಗಿ ಕರ್ರಗಾದುವು ವ|| ಹಾಗೆ ಕೊಳ್ಳಿ ಬೀಸಿದ ಬಳಿಕ ೩೭. ಆ ಸೈನ್ಯದಲ್ಲಿ ವಸ್ತ್ರವನ್ನು ಧರಿಸಿದವರೂ ಶಿವನನ್ನು ಆರಾಧಿಸಿದವರೂ ಸಮಸ್ತ ಆಯುಧಗಳನ್ನು ಪೂಜಿಸಿದವರೂ ಕುದುರೆಗಳಿಗೆ ಆರತಿಯನ್ನೆತ್ತಿದವರೂ ಆದ ಕೆಲವರು ಅತಿರಥ, ಸಮರಥ, ಮಹಾರಥ, ಅರ್ಧರಥರುಗಳು ಪ್ರಕಾಶಿಸಿದರು. ೩೮. ಉಡಲು ವಸ್ತ್ರವನ್ನೂ ತೊಡಲು ಆಭರಣವನ್ನೂ ಆನೆಯನ್ನೂ ಯಾಚಕಸಮೂಹಕ್ಕೆ ಕೊಡಲು ಬಿಡಿ ಹೊನ್ನುಗಳನ್ನೂ ಸೇವಕರಿಗೆ ಕಳುಹಿಸುವ ಸಡಗರದಲ್ಲಿ ಕೆಲವು ಅರಸು ಮಕ್ಕಳು ತೊಡಗಿದ್ದರು.

ವ|| ಆ ಪ್ರಸ್ತಾವದೊಳೊರ್ವಂ ತನ್ನ ದೋರ್ವಲದಗುರ್ವಿನೊಳುರ್ವೀಪತಿಯ ನಿಂತೆಂದಂ-

ಉ|| ನಾಳೆ ವಿರೋಧಿ ಸಾಧನ ಘಟಾಘಟಿತಾಹವದಲ್ಲಿ ನಿನ್ನ ಕ
ಟ್ಟಾಳಿರೆ ಮುಂಚಿ ತಾಗದೊಡಮಳ್ಕುಱೆ ತಾಗಿ ವಿರೋಧಿಸೈನ್ಯ ಭೂ ।
ಪಾಳರನೊಂದೆ ಪೊಯ್ಯದೊಡಮೀ ತಲೆ ಪೋದೊಡಮಟ್ಟೆಯಟ್ಟಿ ಕ
ಟ್ಟಾಳನೆ ಮುಟ್ಟ ತಳ್ತಿಱಿಯದಿರ್ದೊಡಮಂಜಿದೆನಾಂ ಮಹೀಪತೀ ॥ ೩೯

ವ|| ಎಂದು ತನ್ನ ಮನದ ಪ್ರೌಢಪ್ಪುಮಂ ಕೂರ್ಪುಮನುಂಟುಮಾಡಿ ನುಡಿದಂ ಮತ್ತೊರ್ವಂ ತನ್ನನಾಳ್ದಂ ಪೆರ್ಚಿ ಪೊರೆದುದರ್ಕೆ ಕರಂ ಮೆಯ್ವೆರ್ಚಿ ನುಡಿದಂ-

ಚಂ|| ಒವವಿದ ನಿನ್ನದೊಂದು ದಯೆ ಮೇಣ್ ಪಿರಿದೋ ನೆಗೞ್ತೆನ್ನ ಗಂಡುಮಾ
ದದಟುಮಳುರ್ಕೆಯುಂ ಪಿರಿದೊ ಸಂದೆಯಮಾವಪುದಿಂತಿದಿಲ್ಲಿ ತೂ ।
ಗಿದೊಡಱಿಯಲ್ಕೆ ಬಾರದದು ಕಾರಣದಿಂ ರಿಪುಭೂಪ ದಂತಿದಂ
ತದ ತೊಲೆಯೊಳ್ ಪರಾಕ್ರಮದಿನೆನ್ನನೆ ಭೂಪತಿ ತೂಗಿ ತೋಱೆನೇ ॥೪೦

ವ|| ಎಂದು ತನ್ನ ಸೆರಗುಂ ಬೆರಗುಮಿಲ್ಲದ ಕಲಿತನಮನಱಿಯೆ ನುಡಿದಂ ಮತ್ತಮೊಂದೆಡೆಯೊಳೊರ್ವ ವೀರಭಟನುದಾರ ವೀರರಸರಸಿಕನಾಗಿ-

ಚಂ|| ಕುದುರೆಯನೇಱಿದಂಬೆರಸು ಸೌೞನೆ ಪೋಗಿರೆ ಪೊಯ್ದುಮೆಯ್ದೆ ಕ
ಟ್ಟಿದಿರೊಳೆ ನೂಂಕಿದಾನೆಗಳ ಕೋಡುಗಳಂ ಬಳೆವೋಗೆ ಪೊಯ್ದುಮಾಂ ।
ಕರದಟರನೊಂದೆಪೊಯ್ಯುಮೆರಡುಂ ಬಲಮೆನ್ನನೆ ನೋಡೆ ತಕ್ಕಿನೆ
ನ್ನದಟುಮನೆನ್ನ ವೀರಮುಮನಾಜಿಯೊಳೆನ್ನರಸಂಗೆ ತೋಱುವೆಂ ॥ ೪೧

ವ|| ಆ ಸಂದರ್ಭದಲ್ಲಿ ಒಬ್ಬನು ತನ್ನ ತೋಳಬಲದ ಆಧಿಕ್ಯದಿಂದ ರಾಜನಿಗೆ ಹೀಗೆ ಹೇಳಿದನು -೩೯. ಎಲೈ ರಾಜನೆ ನಾಳೆ ನಡೆಯಲಿರುವ ಶತ್ರುಸೈನ್ಯದ ಗಜಯುದ್ಧದಲ್ಲಿ ನಿನ್ನ ಶೂರರಿರಲು ಅವರನ್ನು ಮುಂಚಿ ಶತ್ರುಸೈನ್ಯವನ್ನು ಪ್ರತಿಭಟಿಸುತ್ತೇನೆ. ಭಯವುಂಟಾಗುವಂತೆ ತಗುಲಿ ಶತ್ರುರಾಜರನ್ನು ಒಂದೇಸಮನಾಗಿ ಹೊಡೆದು ಹಾಕುತ್ತೇನೆ. ಈ ತಲೆ ಹೋದರೂ ಮುಂಡವೇ ಶೂರರನ್ನು ಬೆನ್ನಟ್ಟಿ ಹೋಗಿ ತಗಲಿ ಕತ್ತರಿಸುತ್ತದೆ. ಹಾಗೆ ಮಾಡದಿದ್ದರೆ ನಾನು ಅಂಜಿದವನಾಗುತ್ತೇನೆ. ವ|| ಎಂದು ತನ್ನ ಮನದ ಉತ್ಸಾಹವನ್ನೂ ಕೆಚ್ಚನ್ನೂ ಪ್ರದರ್ಶನ ಮಾಡಿ ತೋರಿಸಿದನು. ಮತ್ತೊಬ್ಬನು ತನ್ನ ಯಜಮಾನನು ತನ್ನನ್ನು ವಿಶೇಷವಾಗಿ ಸಾಕಿದುದಕ್ಕೆ ತೃಪ್ತಿಗೊಂಡು ಮೆಯ್ಯುಬ್ಬಿ ಮಾತನಾಡಿದನು-೪೦. ನನ್ನಲ್ಲಿ ನಿನಗುಂಟಾದ ದಯೆ ಹೆಚ್ಚಿನದೊ ಅಥವಾ ನನ್ನ ಪ್ರಸಿದ್ಧವಾದ ಪೌರುಷವೂ ಪರಾಕ್ರಮವೂ ಕೀರ್ತಿಯೂ ದೊಡ್ಡದೋ ಎನ್ನುವುದು ಸಂದೇಹವಾಗಿದೆ. ಇಲ್ಲಿ ಇವೆರಡನ್ನೂ ತೂಗಿ ನೋಡಲು ಸಾಧ್ಯವಿಲ್ಲ. ಆದುದರಿಂದ ಶತ್ರುರಾಜರ ಆನೆಯ ದಂತದ ತಕ್ಕಡಿಯಲ್ಲಿ ಪರಾಕ್ರಮದ ದೃಷ್ಟಿಯಿಂದ ನನ್ನನ್ನು ತಾನೇ ತೂಗಿ ತೋರಿಸುತ್ತೇನೆ. ವ|| ಎಂದು ತನ್ನ ಭಯವೂ ಅಪಾಯವೂ ಇಲ್ಲದ ಶೌರ್ಯವನ್ನು ಸ್ಪಷ್ಟವಾಗಿ ಪ್ರದರ್ಶಿಸಿದನು. ಬೇರೊಂದು ಸ್ಥಳದಲ್ಲಿ ವೀರಭಟನು ಔದಾರ್ಯದಿಂದ ಕೂಡಿದ ವೀರರಸದಲ್ಲಿ ಮಗ್ನನಾಗಿ ನುಡಿದನು. ೪೧. ಹತ್ತಿದ ಕುದುರೆಯೊಡನೆ ಸವಾರನನ್ನು 'ಸಿಳ್' ಎಂದು ಕತ್ತರಿಸುವ ಹಾಗೆ ಚೆನ್ನಾಗಿ ಹೊಡೆದು,

ವ|| ಎಂದತಿರಭಸ ರಣವ್ಯಸನಮನಾತ್ಮೀಯಶಾಸನಾಯತ್ತಂ ಮಾಡಿದಂ ಮತ್ತೊರ್ವ ನತ್ಯುಗ್ರ ಮಂಡಳಾಗ್ರಮನನುಗೆಯ್ದು ವೀರಗ್ರಹಗ್ರಸ್ತನಾಗಿ-

ಚಂ|| ಸಿಡಿಲೊಳೆ ತಳ್ತು ಪೋರ್ವ ಸಿಡಿಲಂತಿರೆ ಬಾಳೊಳೆ ಬಾಳ್ ಪಳಂಚೆ ಮಾ
ರ್ಕಿಡಿವಿಡೆ ನೋಡಲಂಜಿ ದೆಸೆದೇವತೆಗಳ್ ಪೆಱಪಿಂಗೆ ತೋಳ ತೀನ್ ||
ಕಿಡೆ ನಲಿದೊಂದೆರಟ್ಟುದುರೆಯಟ್ಟೆಯುಮೊಂದೆರಡಾನೆಯಟ್ಟೆಯುಂ
ತೊಡರ್ದೊಡನಾಡೆ ತಳ್ತಿಱಿಯದಿರ್ದೊಡೆ ಜೋಳಮನೆಂತು ನೀಗುವೆಂ || ೪೨

ವ|| ಎಂದು ನಿಜಭುಜವಿಜಯಮನಪ್ಪುಕೆಯ್ದು ನುಡಿದಂ ಮತ್ತೊರ್ವನಲ್ಲಿಯೆ-

ಮ|| ಸುರಲೋಕಂ ದೊರೆಕೊಳ್ವುದೊಂದು ಪರಮ ಶ್ರೀಲಕ್ಷ್ಮಿಯುಂ ಬರ್ಪುದಾ
ದರದಿಂ ದೇವನಿಕಾಯದೊಳ್ ನೆರೆವುದೊಂದುತ್ಸಾಹಮುಂ ತನ್ನ ಮೆ |
ಯ್ಸಿರಿ ಭಾಗ್ಯಂ ನೆರಮಪ್ಪುದೊಂದೆ ರಣದೊಳ್ ಗೆಲ್ದಾಜಿಯಂ ತಳ್ತು ಸಂ
ಗರದೊಳ್ ಜೋಳದ ಪಾೞಿಯಂ ನೆರಪಿದಂ ಗಂಡಂ ಪೆಱಂ ಗಂಡನೇ || ೪೩

ವ|| ಎಂದು ನುಡಿದಂ-

ಮ|| ತವೆ ಮಾಱಾಂತ ಬಲಂ ಕಱುತ್ತಿಱಿದು ತನ್ನಾಳ್ದಂ ಕರಂ ಮೆಚ್ಚೆ ಗೆ
ಲ್ದವನಂ ಶ್ರೀವಧು ಪತ್ತುಗುಂ ಮಡಿದನಂ ದೇವಾಂಗನಾನೀಕಮು |
ತ್ಸವದಿಂದುಯ್ಗುಮದೆಂತುಮಿಂಬು ಸುಭಟಂಗಿಂತಪ್ಪುದಂ ಕಂಡುಮಂ
ಜುವನೇಕಂಜುವನೆಂದು ಪೆರ್ಚಿ ನುಡಿದಂ ಮತ್ತೊರ್ವನಾಸ್ಥಾನದೊಳ್ ||೪೪

ನೇರ ಎದುರಾಗಿ ನುಗ್ಗಿದ ಆನೆಗಳ ಕೊಂಬುಗಳನ್ನು ಅವುಗಳ ಅಣಸು ಬಿದ್ದುಹೋಗುವಂತೆ ಎದುರಿಸಿದ ಶೂರರನ್ನೂ ಒಟ್ಟಿಗೆ ಧ್ವಂಸ ಮಾಡಿ ಎರಡು ಸೈನ್ಯಗಳೂ ನನ್ನನ್ನೇ ನೋಡುವಷ್ಟು ಸಮರ್ಥವಾದ ನನ್ನ ಪರಾಕ್ರಮವನ್ನೂ ನನ್ನ ವೀರವನ್ನೂ ಯುದ್ಧದಲ್ಲಿ ನನ್ನ ಸ್ವಾಮಿಗೆ ತೋರಿಸುತ್ತೇನೆ ವ|| ಎಂದು ಅತ್ಯಂತ ರಭಸದಿಂದ ಕೂಡಿದ ತನ್ನ ಯುದ್ಧಾಸಕ್ತಿಯನ್ನು ತೋರ್ಪಡಿಸಿಕೊಂಡನು. ಮತ್ತೊಬ್ಬನು ಬಹಳ ಭಯಂಕರವಾದ ಕತ್ತಿ ಸಿದ್ಧಪಡಿಸಿಕೊಂಡು ಪರಾಕ್ರಮವೆಂಬ ಗ್ರಹದಿಂದ ಹಿಡಿಯಲ್ಪಟ್ಟವನಾದನು. ೪೨. ಸಿಡಿಲನ್ನು ಸಂಧಿಸಿ ಹೋರಾಡುವ ಸಿಡಿಲಿನಂತೆ ಕತ್ತಿಯಲ್ಲಿ ಕತ್ತಿಯು ಘಟ್ಟಿಸಿ ಎದುರು ಕಿಡಿಗಳನ್ನು ಚೆಲ್ಲುತ್ತಿರಲು ಅದನ್ನು ನೋಡಿ ದಿಗ್ದೇವತೆಗಳೆಲ್ಲ ಹೆದರಿ ಹಿಮ್ಮೆಟ್ಟುತ್ತಿರಲು ತೋಳಿನ ನವೆಯು ತೀರುವ ಹಾಗೆ ಒಂದೆರಡು ಕುದುರೆಯ ಮುಂಡಗಳೂ ಒಂದೆರಡಾನೆಯ ಮುಂಡಗಳೂ ಕತ್ತಿಗೆ ಸಿಕ್ಕಿ ಜೊತೆಯಲ್ಲಿ ಕುಣಿಯುವಂತೆ ಸಂತೋಷದಿಂದ ಸಂಧಿಸಿ ಕಾದದಿದ್ದರೆ ಜೋಳದ ಋಣವನ್ನು ನಾನು ಹೇಗೆ ತೀರಿಸುತ್ತೇನೆ? ವ|| ಎಂದು ತನ್ನ ತೋಳಿನ ಜಯವನ್ನು ಕ್ರಯಿಸಿ ಮಾತನಾಡಿದನು. ಅಲ್ಲಿಯೇ ಮತ್ತೊಬ್ಬನು ೪೩. ದೇವಲೋಕ ಪ್ರಾಪ್ತಿಯಾಗುವುದು ಒಂದು ಫಲ, ಹಾಗೆಯೇ ಉತ್ತಮ ಐಶ್ವರ್ಯವೂ ಪ್ರಾಪ್ತವಾಗುವುದು ಮತ್ತೊಂದ ಫಲ. ನನ್ನ ಉತ್ಸಾಹವೂ ಮೆಯ್ಸಿರಿಯೂ ಹೆಚ್ಚುವುದು. ಇಂತಹ ಒಂದು ಯುದ್ಧದಲ್ಲಿ ಭಾಗವಹಿಸಿ ವಿಜಯಶಾಲಿಯಾಗಿ ಅನ್ನದ ಋಣವನ್ನು ತೀರಿಸಿದವನೇ ನಿಜವಾಗಿ ಶೂರ. ಬೇರೆಯವನು ಶೂರನೇ ವ|| ಎಂಬುದಾಗಿ ಹೇಳಿದನು. ೪೪. ಪ್ರತಿಭಟಿಸಿದ ಸೈನ್ಯವು ಸಂಪೂರ್ಣವಾಗಿ ನಾಶವಾಗುವಂತೆ

ವ॥ ಅಂತು ನುಡಿದೆರಡುಂ ಬಲಂಗಳುಂ ತಂತಮ್ಮ ವೀರಮುಂ ಚಾಗಮುಂ ಮೆಱೆದು ತಮ್ಮ ಕೆಯ್ದುಗಳನರ್ಚಿಸಿ ದರ್ಭಶಯನಂ ಮಾಡಿ ಪಲ್ಲಂ ಸುಲಿದು ಶಸ್ತ್ರಸಂಗ್ರಹರಾಗಿ ಪಲರುಂ ವೀರಭಟರ್ ತಮ್ಮಂ ತಾಮೆ ಪರಿಚ್ಛೇದಿಸಿರ್ದರತ್ತ ಮತ್ತಮೊರ್ವಂ ತನ್ನ ನಲ್ಲಳೊಳಿಂತೆಂದನೀ ಪೊಟ್ಟೆ ಪೊಟ್ಟು ನಾಳೆ ದೇವಲೋಕದ ಕನ್ಯಕೆಯರೋಲಗದೊಳಿರ್ಪೆನೆಂದು ನುಡಿಯೆ ನೀನೆಂದಂತು ಪೋಗಲ್ ತೀರದು ನಾಳೆ ಮಗುಟ್ಟು ಬಂದೆನ್ನೊಳ್ ನೆರೆವೆಯೆಂದು ಪೇೞೆ ನಿನಗಱೆವುಂಟೆ ಎಂದು ಕೇಳೆಯೆನ್ನೋಲೆವಾಗ್ಯಮುಂಟೆಂದಳ್ ಮತ್ತಮೊಂದೆಡೆಯೊಳೊರ್ವಳ್ ದರ್ಭಶಯನಸ್ಥನಾದ ನಿಜಪ್ರಾಣೇಶ್ವರನ ಪರಿಚ್ಛೇದಮನಱೆದು ತನ್ನ ಸಾವಂ ಪರಿಚ್ಛೇದಿಸಿ-

ಉ॥ ತಾಂ ಗಡ ನಾಳೆ ಪೋಗಿ ದಿವಿಜಾಂಗನೆಯೊಳ್ ತೊಡರ್ದಿರ್ಪನಿಲ್ಲಿ ಮಾ
ಣ್ದಾಂ ಗಡಮಿರ್ಪೆನಂತನಿಕು ಬೆಳ್ಪಿನೆ ಮುನ್ನಮೆ ಪೋಗಿ ನಲ್ಮೆಗೆ ।
ಲ್ಲಂಗೊಳೆ ದೇವಲೋಕದೊಳಧೀಶನನಾನಿದಿರ್ಗೊಳ್ವೆನೋವೊ ಸ
ಗ್ಗಂಗಳೊಳಿರ್ಪ ದೇಪದಿತಿ ತೊೞ್ತಿರೊಳಟ್ಟೆಯನಾಗಲೀವೆನೇ ॥ ೪೫

ವ॥ ಎಂದು ಕೈದವಮಿಲ್ಲದ ನಲ್ಮೆಯುಂ ನಾಲಗೆಯ ತುದಿಗೆ ತಂದು ನುಡಿದಳ್ ಮತ್ತೊರ್ವಳ್ ತನ್ನಾಣ್ಮನ ಬೋರ್ವಲದಗುರ್ವಂ ನೆಚ್ಚಿ-

ಗುರಿಯಿಟ್ಟು ಹೊಡೆದು ತನ್ನ ಸ್ವಾಮಿಯು ವಿಶೇಷವಾಗಿ ಮೆಚ್ಚುವಂತೆ ಗೆದ್ದವನು ಅಪಾರವಾದ ಐಶ್ವರ್ಯವನ್ನು ಪಡೆಯುತ್ತಾನೆ. ದೇವಸ್ತ್ರೀಯರ ಸಮೂಹವು ಸಂತೋಷದಿಂದ ಸ್ವಾಗತಿಸುತ್ತದೆ. ಇವೆರಡೂ ಸುಭಟನಿಗೆ ಸಂತೋಷಕರವಾದುದೇ. ಹೀಗಿರುವುದನ್ನು ತಿಳಿದೂ ಹೆದರುವವನು ಏಕೆ ಹೆದರುತ್ತಾನೆ ಎಂದು ಮತ್ತೊಬ್ಬನು ಆ ರಾಜಸಭೆಯಲ್ಲಿ ಉಬ್ಬಿ ಹೇಳಿದನು. ವ॥ ಹೀಗೆ ಮಾತನಾಡಿ ಎರಡು ಸೈನ್ಯದವರೂ ತಮ್ಮ ತಮ್ಮ ವೀರವನ್ನೂ ತ್ಯಾಗವನ್ನೂ ಪ್ರದರ್ಶಿಸಿ ತಮ್ಮ ಆಯುಧಗಳನ್ನು ಪೂಜಿಸಿ ದರ್ಭೆಯ ಮೇಲೆ ಮಲಗಿ, ಹಲ್ಲನ್ನು ತೊಳೆದು ಶಸ್ತ್ರಧಾರಿಗಳಾಗಿ ಅನೇಕ ವೀರಭಟರು ತಮ್ಮ ವಿಷಯವನ್ನು ತಾವೇ ನಿಶ್ಚಯಿಸಿದರು. ಆ ಕಡೆ ಮತ್ತೊಬ್ಬನು ತನ್ನ ಪ್ರಿಯಳೊಡನೆ ಹೀಗೆಂದನು. ಈ ಹೊತ್ತೇ ಹೊತ್ತು. ನಾಳೆ ದೇವಲೋಕದ ಸ್ತ್ರೀಯರಲ್ಲಿ ಸಂತೋಷದಿಂದಿರುತ್ತೇನೆ ಎಂದು ಹೇಳಿದನು. ಅವಳು 'ನೀನು ಹೇಳಿದ ಹಾಗೆ ಹೋಗುವುದು ಸಾಧ್ಯವಿಲ್ಲ. ನಾಳೆ ಪುನಃ ನೀನು ಬಂದು ನನ್ನಲ್ಲಿ ಸೇರುತ್ತೀಯೆ' ಎಂದಳು. 'ಅದು ನಿನಗೆ ಹೇಗೆ ಗೊತ್ತು' ಎಂದು ಪ್ರಶ್ನಿಸಿದನು. ಅವಳು 'ನನ್ನ ಓಲೆಭಾಗ್ಯವುಂಟು' ಎಂದಳು. ಬೇರೊಂದು ಕಡೆಯಲ್ಲಿ ಒಬ್ಬಳು ದರ್ಭೆಯ ಹಾಸಿಗೆಯಲ್ಲಿದ್ದ ತನ್ನ ಪತಿಯ ನಿಶ್ಚಯವನ್ನು ತಿಳಿದು ತನ್ನ ಸಾವನ್ನು ನಿಷ್ಕರ್ಷಿಸಿ ೪೫. ನನ್ನ ಪತಿಯು ನಾಳೆ ಹೋಗಿ ದೇವತಾಸ್ತ್ರೀಯರಲ್ಲಿ ಸೇರಿರುತ್ತಾನೆ, ಇಲ್ಲಿ ನಾನು ಮಾತ್ರ ಇರುತ್ತೇನಲ್ಲವೆ? ಅಷ್ಟು ದಡ್ಡಳೇ ನಾನು! ಮೊದಲೇ ಹೋಗಿ ನನ್ನ ಸದ್ಗುಣವು ಪ್ರಕಾಶವಾಗುವ ಹಾಗೆ ದೇವಲೋಕದಲ್ಲಿ ನನ್ನ ಪತಿಯನ್ನು ಇದಿರುಗೊಳ್ಳುತ್ತೇನೆ. ಓಹೋ ಸ್ವರ್ಗದಲ್ಲಿರುವ ದೇವಸ್ತ್ರೀಯರೆಂಬ ದಾಸಿಯರಲ್ಲಿ (ನನ್ನ ಪತಿಯು) ಪ್ರೀತಿಸುವುದಕ್ಕೆ ಅವಕಾಶ ಕೊಡುತ್ತೇನೆಯೇ? ವ॥ ಎಂದು ಕಪಟವಿಲ್ಲದ ತನ್ನ ಪ್ರೇಮವನ್ನು ನಾಲಗೆಯ ತುದಿಗೆ ತಂದು ಸ್ಪಷ್ಟವಾಗಿ ಹೇಳಿದಳು. ಮತ್ತೊಬ್ಬಳು ತನ್ನ

ಚಂ॥ ಜಳಧಿಯೊಳಾದ ಮುತ್ತುಗಳವೇಂ ಪೊಸತಾದುವೆ ನಿನ್ನ ತೋಳ ಬಾ
ಳೊಳೆ ಬಲಗರ್ವದಿಂ ತೆಗೆದುದಗ್ರ ವಿರೋಧಿ ಮದೇಭ ಮಸ್ತಕ ।
ಸ್ಥಳ ಜಳರಾಶಿಯೊಳ್ ಬಳೆದ ನಿರ್ಮಳ ನಿರ್ವ್ರಣ ವೃತ್ತಮೌಕ್ತಿಕಾ
ವಳಿಯನೆ ತರ್ಪುದೆಂದು ನುಡಿದಳ್ಕಱೊಳಾಱೆಸಿದಳ್ ನಿಜೇಶನಂ ॥ ೪೬

ವ॥ ಅಂತುಭಯ ಬಲಂಗಳೊಳಂ ವೀರಜನಜನಿತಾಳಾಪಂಗಳ್ ನೆಗಱೆ ವಿಕ್ರಮಾರ್ಜುನನನಂತನುಂ ತಾನುಂ ಜಲಕ್ರನಿರೆ ಪಲ್ಲಂ ಸುಲಿದಗಣ್ಯ ಪುಣ್ಯ ತೀರ್ಥೋದಕಂಗಳಂ ಮಿಂದು ಮಂಗಳವಸದನಂಗೊಂಡು ಸಾಮಾನ್ಯಯಜ್ಞಂಗೆಯ್ದು ಪಲವುಂ ತೆಱದ ಪಱೆಗಳೆಸೆಯೆ ನಾಂದೀಮುಖಮಂ ನಿರ್ವರ್ತಿಸಿ ಶುಭಲಕ್ಷಣಲಕ್ಷಿತನುಂ ಸನ್ನಾಹಕರ್ಮನಿರ್ಮಿತನುಂ ಹಸ್ತಾಯುಧ ಕುಶಳನುಂ ಭದ್ರಮನನುಮಪ್ಪ ವಿಜಯಗಜಮುಮನಕ್ಷಯರಥಾಶ್ವಕೇತನ ಶರಾಸನ ಶರಧಿ ವಿಚಿತ್ರ ತನುತ್ರ ವಿವಿಧಾಸ್ತ್ರಶಸ್ತ್ರಂಗಳುಮಂ ಗಂಧ ಧೂಪ ದೀಪಾದಿಗಳಿಂದರ್ಚಿಸಿ ಪೊಡೆವಟ್ಟಾಗಳ್-

ಕಂ॥ ಬೆಳಗುವ ಸೊಡರ್ಗಳ ಬೆಳಗುಮ
ನಿಳಿಸಿ ತಱತ್ತಱಿಸಿ ಪೊಳೆಯೆ ತಮ್ಮಯ ಬೆಳಗ ।
ಗ್ಗಳಿಸಿ ತಱತಱಿಸಿ ವಿದ್ಯು
ದ್ವಿಳಸಿತಮೆನಿಸಿದುವು ನರನ ದಿವ್ಯಾಸ್ತ್ರಂಗಳ್ ॥ ೪೭

ಒಡೆಯನ ಬಾಹುಬಲದ ಆಧಿಕ್ಯವನ್ನು ನಂಬಿ ೪೬. ಸಮುದ್ರದಲ್ಲಿ ಹುಟ್ಟಿದ ಮುತ್ತುಗಳು ಮಹತ್ತಾದುವೇನು? ನಿನ್ನ ತೋಳೆಂಬ ಕತ್ತಿಯಿಂದ ಬಲಪ್ರದರ್ಶನಮಾಡಿ ಉದ್ಧಾರ ಮಾಡಿದ ಭಯಂಕರವಾದ ಶತ್ರುರಾಜರ ಮದ್ದಾನೆಯ ಕುಂಭಸ್ಥಳವೆಂಬ ಮುತ್ತುಗಳೇ ಅನರ್ಘ್ಯವಾದುವು. ಅವು ನಿರ್ಮಲವೂ ಊನವಿಲ್ಲದುದೂ ದುಂಡಾದುದೂ ಆಗಿವೆ. ಆ ಮುತ್ತಿನ ರಾಶಿಯನ್ನೇ ತಂದುಕೊಡಬೇಕು ಎಂದು ಪ್ರೀತಿಯಿಂದ ನುಡಿದು ತನ್ನ ಪತಿಯನ್ನು ಸಮಾಧಾನಪಡಿಸಿದಳು. ವ॥ ಹಾಗೆ ಎರಡು ಸೈನ್ಯದಲ್ಲಿಯೂ ವೀರಾಲಾಪಗಳು ಮೊಳಗುತ್ತಿದ್ದುವು. ವಿಕ್ರಮಾರ್ಜುನನೂ ಕೃಷ್ಣನೂ ನಿರ್ಮಲವಾಗಿ ಹಲ್ಲನ್ನು ತೊಳೆದು ಅಸಂಖ್ಯಾತವಾದ ಪವಿತ್ರ ತೀರ್ಥಗಳಲ್ಲಿ ಸ್ನಾನಮಾಡಿ ಮಂಗಳಾಭರಣಗಳನ್ನು ತೊಟ್ಟು ನಿತ್ಯಕರ್ಮಗಳನ್ನು ಮುಗಿಸಿದರು. ನಾನಾ ರೀತಿಯ ವಾದ್ಯಗಳು ಮೊಳಗುತ್ತಿರಲು ನಾಂದಿಮುಖವೆಂಬ ಪಿತೃಕಾರ್ಯವನ್ನು ಮುಗಿಸಿದರು. ಶುಭಲಕ್ಷಣಗಳಿಂದ ಕೂಡಿದುದೂ ಯುದ್ಧಕಾರ್ಯಕ್ಕೆ ಸಿದ್ಧಮಾಡಲ್ಪಟ್ಟುದೂ ಕರಕೌಶಲ್ಯ ಉಳ್ಳುದೂ ಭದ್ರಜಾತಿಗೆ ಸೇರಿದುದೂ ಆದ ವಿಜಯಗಜವನ್ನೂ ನಾಶವಿಲ್ಲದ ತೇರು, ಕುದುರೆ, ಧ್ವಜ, ಬಿಲ್ಲು, ಬಾಣ, ಕವಚ, ವಿವಿಧ ಅಸ್ತ್ರ ಶಸ್ತ್ರ- ಮೊದಲಾದುವುಗಳನ್ನೂ ಗಂಧ,ಧೂಪ, ದೀಪ, ಮೊದಲಾದವುಗಳಿಂದ ಪೂಜಿಸಿ ನಮಸ್ಕರಿಸಿದರು. ೪೭. ಅರ್ಜುನನ ದಿವ್ಯಾಸ್ತ್ರಗಳು ಅಲ್ಲಿ ಕಾಂತಿಯುಕ್ತವಾಗಿ ಪ್ರಕಾಶಮಾನವಾಗಿದ್ದ ದೀಪದ ಬೆಳಕನ್ನು ಕೀಳುಮಾಡಿ ಥಳಥಳನೆ ಹೊಳೆಯಲು ತಮ್ಮ ಕಾಂತಿಯು ಅತ್ಯಧಿಕವಾಗಿ ಮಿಂಚಿನಿಂದ ಕೂಡಿದುವೋ ಎಂಬಂತೆ ಪ್ರಕಾಶಿಸಿದುವು.

ಕಂ॥ ಸೊಡರ್ಗುಡಿಯ ಕೆಂಪಿನೊಳ್ ಕೆಂ
ಪಿಡಿದಿರೆ ರಿಪುನೃಪತಿಬಲದ ಶೋಣಿತಜಳಮಂ ।
ಕುಡಿಯದೆಯುಂ ದಲ್ ಮುನ್ನಮೆ
ಕುಡಿದಂತೆಸೆದಿರ್ದುವರಿಗನಸ್ತ್ರಚಯಂಗಳ್ ॥ ೪೮

ವ॥ ಅಂತಾಯಿರುಳಂ ವಿಜಯಂ ವಿಜಯೋದ್ಯೋಗದೊಳ್ ಕಳೆಯೆ ಬೆಳಗಪ್ಪ ಜಾವದೊಳ್ ಬೀಡುವೀಡುಗಳ್ಗೆಲ್ಲಂ ತೊಟಲ್ವೇಕಿರ್ಪಿರೇಟೆಂ ಪಣ್ಣಿಮೆನೆ-

ಉ॥ ತಂಡದೆ ಕೀಜೆ ಸಾಱುವ ಪಲರ್ ಪಡೆವಳ್ಳರ ಮಾತುಗಳ್ ಮನಂ
ಗೊಂಡಿರೆ ಸನ್ನಣಂದುಡುವ ಪಣ್ಣುವ ಬಾಟ್ಸಿಯುವಂದಿರಂ ಮರು ।
ಳ್ಗೊಂಡವೊಲುಳ್ಳ ಬಗ್ಗಿಸುವ ಬೇಗದೊಳಾ ಕಟಕಂಗಳೆಯ್ದೆ ಕೆ
ಯ್ಗೊಂಡುವು ಮಂದರ ಕ್ಷುಭಿತ ದುಗ್ಧಪಯೋಧಿ ಗಭೀರನಾದಮಂ ॥ ೪೯

ಚಂ॥ ಕೃತ ವಿವಿಧಾಸ್ತ್ರ ವೀರಭಟಕೋಟಿ ಭಯಂಕರಮಾಗೆ ಬೀಸುವಾ
ವೃತಿಯ ಕಳಂಕ ಪಂಕದೊಳೆ ಪೆರ್ಚಿದ ಕಟ್ಟಲೆ ತೀವು ಶಸ್ತ್ರಸಂ ।
ಹತಿಗಳ ದೀಪ್ತಿಯಿಂ ಬಿಸುಗೆಯಾಗಿ ಕರಂ ಪೊಗರ್ವಟ್ಟಗುರ್ವುಮ
ದ್ಭುತಮುಮನೀಯೆ ಪಣ್ಣಿದುವು ಪಾಂಡವ ಕೌರವ ರೌದ್ರಸಾಧನಂ ॥ ೫೦

ವ॥ ಅಂತೆರಡುಂ ಪಡೆಗಳುಂ ಪಣ್ಣಪಣ್ಣನೆ ಪಣ್ಣಿ ಕಾಳೆಗಕ್ಕೆ ನಡೆಯಲೊಡರಿಸಿದಾಗಳ್-

೪೮. ಆತನ ಬಾಣಸಮೂಹವು ದೀಪದ ಕುಡಿಯ ಕೆಂಪುಬಣ್ಣದಿಂದ ಕೆಂಪಾಗಿ ಶತ್ರುರಾಜರ ರಕ್ತಜಲವನ್ನು ಕುಡಿಯದಿದ್ದರೂ ಅದಕ್ಕೆ ಮೊದಲೇ ಅವು ಕುಡಿದಿದ್ದಂತೆ ಶೋಭಾಯಮಾನವಾಗಿದ್ದುವು. ವ॥ ಹಾಗೆ ಈ ರಾತ್ರಿಯನ್ನು ಅರ್ಜುನನು ಯುದ್ಧೋದ್ಯೋಗದಲ್ಲಿಯೇ ಕಳೆದು ಬೆಳಗಿನ ಜಾವದಲ್ಲಿ ಬೀಡು ಬೀಡುಗಳಲ್ಲೆಲ್ಲ ಅಲೆದು 'ಏಕೆ ಸುಮ್ಮನಿದ್ದೀರಿ ಎದ್ದು ಸಿದ್ಧರಾಗಿ' ಎಂದನು. ೪೯. ಗುಂಪುಗುಂಪಾಗಿ ಕೋಪಿಸಿಕೊಂಡು ಸಾರಿ ಹೇಳುತ್ತಿರುವ ಅನೇಕ ಸೇನಾನಾಯಕರ ಮಾತುಗಳು ಮನಸ್ಸನ್ನು ಸೆಳೆಯುತ್ತಿರಲು, ಕಡಿವಾಣವನ್ನು ತೊಡಿಸುವ, ಯುದ್ಧಕ್ಕೆ ಅಣಿಮಾಡುತ್ತಿರುವ, ಕೆಲಸದಲ್ಲಿರುವವರನ್ನು ಹುಚ್ಚು ಹಿಡಿದವರ ಹಾಗೆ ಹೆದರಿಸುತ್ತಿರುವ ಆ ಸೈನ್ಯವು ವೇಗದಲ್ಲಿ ಮಂದರಪರ್ವತದಿಂದ ಕಡೆಯಲ್ಪಟ್ಟ ಕ್ಷೀರಸಮುದ್ರದ ಗಭೀರನಾದವನ್ನು ಅಂಗೀಕಾರಮಾಡಿತು. ೫೦. ನಾನಾವಿಧವಾದ ಅಸ್ತ್ರಶಸ್ತ್ರಗಳಲ್ಲಿ ಪೂರ್ಣಪಾಂಡಿತ್ಯವನ್ನು ಪಡೆದಿರುವ ವೀರಭಟರ ಸಮೂಹವು ಭಯವಾಗುವ ಹಾಗೆ ಬೀಸುತ್ತಿರುವ ಆವೃತಿಯೆಂಬ ಆಯುಧದ ಕರೆಯೆಂಬ ಕೆಸರಿನಲ್ಲಿಯೇ ಹೆಚ್ಚಾದ ಕತ್ತಲೆಯು ಹರಿತವಾದ ಶಸ್ತ್ರ ಸಮೂಹಗಳ ಕಾಂತಿಯೊಡನೆ ಚೆನ್ನಾಗಿ ಬೆಸೆದುಕೊಂಡು ಕಾಂತಿಯುಕ್ತವಾಗಿ ಭಯವನ್ನೂ ಆಶ್ಚರ್ಯವನ್ನೂ ಏಕಕಾಲದಲ್ಲಿ ಉಂಟುಮಾಡುತ್ತಿರಲು ಪಾಂಡವ ಕೌರವರ ಭಯಂಕರವಾದ ಸೈನ್ಯಗಳು ಯುದ್ಧಕ್ಕೆ ಸಿದ್ಧವಾದುವು. ವ॥ ಹಾಗೆ ಎರಡು ಸೈನ್ಯಗಳೂ ಮೆಲ್ಲಮೆಲ್ಲನೆ ಯುದ್ಧಸನ್ನದ್ಧವಾಗಿ ಯುದ್ಧಕ್ಕೆ ಹೊರಡಲು ಪ್ರಾರಂಭಿಸಿದಾಗ ಸೂರ್ಯೋದಯ

ಕಂ॥ ಲೋಕೈಕಚಕ್ಷು ನವ ಕಮ
ಲಾಕರ ಬಾಂಧವನನೇಕ ದಿತಿಸುತ ಸಮರಾ ।
ನೀಕ ಭಯಂಕರನೆರಡುಮ
ನೀಕಂಗಳನಡರೆ ನೋಡುವಂತುದಯಿಸಿದಂ ॥ ೫೧

ವ॥ ಆಗಳೇಱಿಸಿದ ಬಿಸುಗೆಗಳುಮಿಕ್ಕಿದ ಲೋಹಪಕ್ಕರೆಗಳುಮುರ್ಚಿದ ಮೊಗಪಡಂಗಳುಂ ಕಟ್ಟಿದ ಪಟಯಿಗೆಗಳುಮೊಟ್ಟಿದ ಮೂವತ್ತೆರಡಾಯುಧಂಗಳುಂ ಬೆರಸೆಱಂಕೆವೆರಸಿದ ಕುಲಗಿರಿಗಳೆ ತಳರ್ವಂತೆ ತಳರ್ವ ಮದಾಂಧಗಂಧಸಿಂಧುರಂಗಳುಮಂ ಚಕ್ರಚೀತ್ಕೃತನಾದದೊಳ್ ದಿಕ್ಚಕ್ರ ಮುಮಂ ಚಕ್ರಘಾತದೊಳ್ ಧರಾಚಕ್ರಮನಾಕ್ರಮಿಸಿ ನಿಶಾತಹೇತಿಗರ್ಭಂಗಳುಮನೇಕ ಪ್ರಕಾರ ಕೇತನ ವಾಜಿರಾಜಿಗಳುಮಾಗಿ ದೊಮ್ಮಳಿಸಿ ನಡೆವ ರಥಂಗಳುಮಂ ಕಣ್ಣುಂ ಖುರಮುಂ ತೋಱೆ ಪಕ್ಕರೆಯಿಕ್ಕಿ ಪೊಳೆವ ಪೊನ್ನ ಪರ್ಯಾಣಂಗಳುಮೆಸೆಯೆ ಘೋಳಾಯ್ಲರ್ ಪೊಳೆಯಿಸೆ ಬಿಸಿಲ್ಗುದುರೆಗಳ್ ಪೊಳೆವಂತೆ ಪೊಳೆವ ಕಡುಗುದುರೆಗಳುಮಂ ಮಿಡುಮಿಡುಕನೆ ಮಿಡುಕುವ ಸಿಡಿಲೇಱ್ಗೆಯುಮಂ ಕೋಳ್ಮಸಗಿದ ಪುಲಿಯ ಪಿಂಡುಗಳುಮನನುಕರಿಸಿ ನಡೆವಣಿಯ ಸಂದಣಿಯುಮಂ ಕಾಟ್ಟುಱು ಮಸಗಿದಂತೆ ಮಸಗಿದ ದುರ್ಧರ ಧನುರ್ಧರಬಲಮುಮಂ ಶ್ವೇತ ಭೀಷ್ಮರ ಪೇೞ್ದ್ದೋಜೆಯೊಳೆರಡುಂ ಪಡೆಗಳ ಪಡೆವಳರ್ಕಳ್ ಕುರುಕ್ಷೇತ್ರದೊಳ್ ಚಿತ್ರಿಸಿದಂತೊಡ್ಡಿ ನಿಂದಾಗಳ್-

ವಾಯಿತು. ೫೧. ಲೋಕಚಕ್ಷುಸ್ಸೂ, ಕಮಲಬಾಂಧವನೂ ಭಯಂಕರನೂ ಆದ ಸೂರ್ಯನು ಎರಡೂ ಸೈನ್ಯಗಳನ್ನು ಮೇಲಿಂದ ನೋಡುವಂತೆ ಉದಯಿಸಿದನು. ವ॥ ಆಗ ಎತ್ತಿ ಕಟ್ಟಿದ ಅಂಬಾರಿಗಳು, ಹಾಕಿರುವ ಲೋಹದ ಪಕ್ಷರಕ್ಷೆಗಳು, ಬಿಚ್ಚಿರುವ ಮೊಗವಾಡಗಳು, ಕಟ್ಟಿದ ಧ್ವಜಗಳು ರಾಶಿಮಾಡಿರುವ ಮೂವತ್ತೆರಡಾಯುಧಗಳು ಇವುಗಳಿಂದ ಕೂಡಿ ರೆಕ್ಕೆಗಳಿಂದ ಕೂಡಿದ ಕುಲಪರ್ವತಗಳೇ ನಡೆಯುವಂತೆ ಮದಾಂಧವಾದ ಆನೆಗಳು ನಡೆದುವು. ಚಕ್ರದ ಚೀತ್ಕಾರ ಶಬ್ದದಿಂದ ದಿಕ್ಕುಗಳ ಸಮೂಹವನ್ನೂ, ಚಕ್ರಗಳ ಹೊಡೆತದಿಂದ ಭೂಮಂಡಲವನ್ನೂ ಆಕ್ರಮಿಸಿ ಹರಿತವಾದ ಆಯುಧಗಳನ್ನೊಳಗೊಂಡು ನಾನಾ ರೀತಿಯ ಬಾವುಟ ಮತ್ತು ಕುದುರೆಗಳ ಸಮೂಹಗಳನ್ನುಳ್ಳುದಾಗಿ ಸಡಗರದಿಂದ ತೇರುಗಳು ನಡೆದುವು. ಕಣ್ಣು ಗೊರಸುಗಳನ್ನುಳಿದು ಪಾರ್ಶ್ವಕ್ಕೆ ಹಾಕಿದ ಗುಳದಿಂದಲೂ ಹೊಳೆಯುತ್ತಿರುವ ಚಿನ್ನದ ಜೀನುಗಳಿಂದಲೂ ಅಲಂಕರಿಸಲ್ಪಟ್ಟ ಬಿಸಿಲ್ಗುದುರೆಗಳ ಹಾಗೆ ಹೊಳೆಯುತ್ತಿರುವ ವೇಗಶಾಲಿಗಳಾದ ಕುದುರೆಗಳು ಮುಂದುವರಿದುವು. ವಿಶೇಷವಾಗಿ ಪ್ರಕಾಶಿಸುತ್ತಿರುವ ಸಿಡಿಲಿನ ವೈಭವವನ್ನೂ ಕೋಪಗೊಂಡ ಹುಲಿಗಳ ಹಿಂಡನ್ನೂ ಅನುಕರಿಸುತ್ತಿರುವ ಕಾಲಾಳುಗಳ ಸಮೂಹ ಮುಂದೆ ನಡೆಯಿತು. ಕಾಡ ಹಸು ರೇಗಿದ ಹಾಗೆ ರೇಗಿರುವ ಧರಿಸಲಸಾಧ್ಯವಾದ ಬಿಲ್ಲಾಳಿನ ಸೈನ್ಯವೂ ಮುನ್ನುಗ್ಗಿತು. ಎರಡು ಸೈನ್ಯವೂ ಶ್ವೇತ ಮತ್ತು ಭೀಷ್ಮರು ಆಜ್ಞೆ ಮಾಡಿದ ರೀತಿಯಲ್ಲಿ ನಡೆದು ಕುರುಕ್ಷೇತ್ರದ ರಣರಂಗದಲ್ಲಿ

ಚಂ॥ ಜಲಶಯನೋದರಾಂತರದಿನೀ ತ್ರಿಜಗಂ ಪೊಱಮಟ್ಟುದೀಗಳೆಂ
ಬುಲಿ ಸಲೆ ತಮ್ಮ ತಮ್ಮ ಶಿಬಿರಂಗಳಿನುಗ್ರ ಚತುರ್ಬಲಂಗಳಂ ।
ಪಲವುಮನೊಂದೆ ಮಾಡಿ ದೆಸೆಗಳ್ ಮಸುಳಲ್ ನಡೆತಂದರಾಜಿಗಿ
ರ್ವಲದಲರಾತಿನಾಯಕರುಮೊರ್ಬರನೊರ್ಬರೆ ಗೆಲ್ವ ತಕ್ಕಿನೊಳ್ ॥೫೨

ವ॥ ಆಗಳ್ ಕೌರವಬಲದ ಸೇನಾನಾಯಕಂ ಗಾಂಗೇಯನಡ್ಡಮಾಗೆ ತನ್ನೊಡ್ಡಿದ ಮಕರವ್ಯೂಹದ ಮೊನೆಯೊಳ್ ಸುತ್ತಿಱಿದೆತ್ತಿದ ಪೊನ್ನ ತೊಳಪ ಪಟಿಯಿಗೆಗಳುಂ ಮೆಱೆವ ಬೆಳ್ಳಿಯ ರಥಮುಮಾ ರಥದೊಳೊಡಂಬಡೆ ಪೂಡಿದ ಕುದುರೆಗಳುಂ ಜೋಲ್ದ ಪುರ್ವನೆತ್ತಿ ಕಟ್ಟಿದ ಲಲಾಟಪಟ್ಟದೊಳಿಟ್ಟಳಮೊಪ್ಪುವ ಬೀರವಟ್ಟಮುಮಸವಳಮೆಸೆಯೆ ದಿವ್ಯಕವಚಮಂ ತೊಟ್ಟು ಪರಶುರಾಮಂ ಬಾಳ್ಗೆಂದು ಪ್ರಚಂಡ ಕೋದಂಡಮಂ ಕೊಂಡು ಪಾಂಡವಬಲಮಂ ಮಾರ್ಕೊಂಡು ನಿಂದಾಗಳ್ ಶ್ವೇತನುಮಾ ವ್ಯೂಹಕ್ಕೆ ಪ್ರತಿವ್ಯೂಹಮಾಗಿ ಸೂಚೀವ್ಯೂಹಮನೊಡ್ಡಿ ಕನಕಕವಚಾಲಂಕೃತ ಶರೀರನುಮಾರೂಢ ಸಮರ ರಸನುಮುಪಾರೂಢ ಕನಕರಥನುಮಾಗಿ ಕೈಲಾಸವಾಸಿಗೆ ಪೊಡೆವಟ್ಟು ಬಿಲ್ಲಂ ಕೊಂಡು ಗಂಗಾಸುತಂಗದಿರದಿದಿರ್ಚಿ ನಿಂದಾಗಳ್-

ಕಂ॥ ಶ್ವೇತನ ಗಂಗಾಜಾತನ
ಮಾತನೆ ಪಾರ್ದರಡುಮೊಡ್ಡಣಂ ಕಾದಲ್ಕೆಂ ।
ದೀ ತೆಱದಿನೊಡ್ಡಿ ನಿಂದುವು
ಭೂತಳಮಳ್ಳಾಡೆ ಕೆಸಱಿ ಕಡಿತದ ತೆಱದಿಂ ॥ ೫೩

ಸೇರಿರಲು ಅವು ಚಿತ್ರದಲ್ಲಿ ಬರೆದ ಹಾಗೆ ಕಂಡವು. ೫೨. ವಿಷ್ಣುವಿನ ಗರ್ಭದಿಂದ ಈಗ ಮೂರುಲೋಕಗಳೂ ಹೊರಹೊರಟವು ಎಂಬ ಮಾತು ಸಲ್ಲುತ್ತಿರಲು ದಿಕ್ಕುಗಳು ಕಾಂತಿಹೀನವಾಗುತ್ತಿರಲು ಎರಡು ಸೈನ್ಯದ ಶತ್ರುನಾಯಕರೂ ಒಬ್ಬರನ್ನೊಬ್ಬರು ಗೆಲ್ಲುವ ಸಾಮರ್ಥ್ಯದಿಂದ ಯುದ್ಧಕ್ಕೆ ನಡೆದು ಬಂದರು. ವ॥ ಆಗ ಕೌರವ ಸೈನ್ಯದ ನಾಯಕನಾದ ಭೀಷ್ಮನು ತಾನು ಅಡ್ಡಲಾಗಿ ಮೊಸಳೆಯ ಆಕಾರದ ಸೈನ್ಯರಚನೆಯನ್ನು ಒಡ್ಡಿದನು. ಅದರ ಮುಂಭಾಗದಲ್ಲಿ ಸುತ್ತಲೂ ಎತ್ತಿ ಕಟ್ಟಿರುವ ಪ್ರಕಾಶಮಾನವಾದ ಚಿನ್ನದ ಬಾವುಟಗಳೂ ಶೋಭಾಯಮಾನವಾಗಿರುವ ಬೆಳ್ಳಿಯ ತೇರು, ಆ ರಥಕ್ಕೆ ಹೊಂದಿಕೊಳ್ಳುವ ಹಾಗೆ ಹೂಡಿರುವ ಕುದುರೆಗಳು ಸಿದ್ಧವಾಗಿದ್ದುವು. ಜೋತು ಹೋಗಿರುವ ಹುಬ್ಬನ್ನು ಎತ್ತಿ ಕಟ್ಟಿರುವ ಹಣೆಯಲ್ಲಿ ಸೊಗಸಾಗಿ ಪ್ರಕಾಶಿಸುತ್ತಿರುವ ವೀರಪಟ್ಟವು ಅತಿಶಯವಾಗಿ ಮೆರೆಯುತ್ತಿರಲು ದಿವ್ಯವಾದ ಕವಚವನ್ನು ತೊಟ್ಟು 'ಪರಶುರಾಮನು ಬಾಳಲಿ' ಎಂದು ತನ್ನ ಆಚಾರ್ಯನನ್ನು ನೆನೆದನು. ಭಯಂಕರವಾದ ಬಿಲ್ಲನ್ನು ಹಿಡಿದು ಪಾಂಡವಸೈನ್ಯವನ್ನು ಪ್ರತಿಭಟಿಸಿ ನಿಂತನು. ಈ ಕಡೆ ಶ್ವೇತನೂ ಆ ಮಕರವ್ಯೂಹಕ್ಕೆ ಪ್ರತಿಯಾಗಿ ಸೂಜಿಯ ಆಕಾರದ ಸೇನಾರಚನೆಯನ್ನು ಒಡ್ಡಿದನು. ಚಿನ್ನದ ಕವಚದಿಂದ ಅಲಂಕೃತವಾದ ಶರೀರವುಳ್ಳವನೂ ಯುದ್ಧೋತ್ಸಾಹದಿಂದ ಕೂಡಿದವನೂ ಆಗಿ ಕೈಲಾಸವಾಸಿಯಾದ ಈಶ್ವರನಿಗೆ ನಮಸ್ಕರಿಸಿ ಬಿಲ್ಲನ್ನು ಹಿಡಿದು ಭೀಷ್ಮನಿಗೆ ಹೆದರದೆ ಎದುರಿಸಿ ನಿಂತನು. ೫೩. ಶ್ವೇತ ಮತ್ತು ಭೀಷ್ಮರ ಆಜ್ಞೆಯನ್ನೇ ನಿರೀಕ್ಷಿಸುತ್ತ ಎರಡು ಸೈನ್ಯವೂ ಯುದ್ಧಮಾಡುವುದಕ್ಕಾಗಿ ಈ ರೀತಿಯಲ್ಲಿ ನಿಂತಿರಲು

ವ॥ ಆಗಳ್ ಧರ್ಮಪುತ್ರಂ ಪುರುಷೋತ್ತಮನ ಮೊಗಮಂ ನೋಡಿ ಕೌರವ ಬಲದೊಡ್ಡಣದ ನಾಯಕರಿವರಾರೆಂದು ಬೆಸಗೊಳೆ ಮಕರ ಮಸ್ತಕಭೂಮಿಯೊಳ್ ಯುದ್ಧಸನ್ನದ್ಧನಾಗಿ-

ಕಂ॥ ಕೆಂಬಣ್ಣದ ಕುದುರೆಗಳೊಳೊ
ಡಂಬಡೆ ನಿಜರಜತರಥಮಗುರ್ವುರ್ವರೆಯಂ ।
ತಿಂಬೆ ಕಳಶಧ್ವಜಂ ಮಿಳಿ
ರ್ದಂಬರಮಂ ಬಳಸೆ ನಿಂದನಾತಂ ದ್ರೋಣಂ ॥ ೫೪

ಆತನ ಸಾರೆ ಕಮಂಡಲು
ಕೇತನಮಂಬರಮನಡರೆ ಚತುರಂಗ ಬಲೋ ।
ಪೇತನತಿ ಧವಳ ರಥನಭಿ
ಜಾತಂ ಕ್ಷತ್ರಿಯರನುಜಿದ ಕಲಿ ಕೃಪನಾತಂ ॥ ೫೫

ವ॥ ಮತ್ತಿತ್ತ ಗಾಂಗೇಯನ ದಕ್ಷಿಣೋಪಾಂತದೊಳ್ ಕರ್ಗನೆ ಕರ್ಗಿದ ಸಮದ ಗಜಘಟಾಟೋಪದ ನಡುವೆ-

ಕಂ॥ ಸರದದ ಮುಗಿಲನೆ ಬಿಡದನು
ಕರಿಸುವ ಧವಳಾಶ್ವದಿಂದಮೆಸೆದೊಪ್ಪುವ ಲೋ ।
ಹ ರಥಮದು ಪುಲಿಯ ಪಟಿಯಿಗೆ
ವೆರಸು ತಟತ್ತಟಿಸೆ ನಿಂದನಾತಂ ಶಲ್ಯಂ ॥ ೫೬

ವ॥ ಮತ್ತಿತ್ತ ಗಂಗಾಸುತನ ವಾಮಭಾಗದೊಳಂಬರಭಾಗಮಂ ಕಟ್ಟ ಮೆಡಱಿದಂತಾಗಿ ತನ್ನ ರಥದೊಳೊಟ್ಟಿದ ಕೆಯ್ದುಗಳ ಬೆಳಗೆ ಬೆಳಗಾಗೆ-

ಕೆಸರಿನ ಮೇಲೆ ಹರಡಿದ ಕಡಿತದಂತೆ ನೆಲವು ನಡುಗುತ್ತಿತ್ತು. ವ॥ ಆಗ ಧರ್ಮರಾಜನು ಕೃಷ್ಣನ ಮುಖವನ್ನು ನೋಡಿ ಕೌರವ ಸೇನಾವ್ಯೂಹದ ಒಡೆಯರಾದವರಿವರಾರು ಎಂದು ಪ್ರಶ್ನಿಸಿದನು. ಮಕರವ್ಯೂಹದ ತಲೆಯ ಪ್ರದೇಶದಲ್ಲಿ (ಮುಂಭಾಗದಲ್ಲಿ) ಯುದ್ಧ ಸನ್ನದ್ಧನಾಗಿ ೫೪. ತನ್ನ ಬೆಳ್ಳಿಯ ತೇರು ಕೆಂಪು ಬಣ್ಣದ ಕುದುರೆಗಳಿಂದ ಒಪ್ಪಿರಲು ಭಯಂಕರನಾದ ಕಳಶ ಚಿಹ್ನೆಯುಳ್ಳ ಬಾವುಟವು ಚಲಿಸುತ್ತ ಆಕಾಶವನ್ನು ಬಳಸಿರುವಂತೆ ನಿಂತಿರುವವನು ದ್ರೋಣಾಚಾರ್ಯ ೫೫. ಅವನ ಪಕ್ಕದಲ್ಲಿಯೇ ಕಮಂಡಲು ಗುರುತಿನ ಬಾವುಟವು ಆಕಾಶವನ್ನು ವ್ಯಾಪಿಸಿರಲು ಚತುರಂಗಸೈನ್ಯದಿಂದ ಕೂಡಿರುವವನೂ ಅತ್ಯಂತ ಬಿಳುಪಾದ ತೇರನ್ನುಳ್ಳವನೂ ಒಳ್ಳೆಯ ಕುಲದಲ್ಲಿ ಹುಟ್ಟಿದವನೂ ಕ್ಷತ್ರಿಯರನ್ನು ಲಕ್ಷ್ಯಮಾಡದವನೂ ಶೂರನೂ ಆದವನು ಕೃಪಾಚಾರ್ಯ. ವ॥ ಮತ್ತು ಈ ಕಡೆ ಭೀಷ್ಮನ ಬಲಗಡೆಯ ಪಕ್ಕದಲ್ಲಿ ಬಹಳ ಕಪ್ಪಾದ ಮದ್ದಾನೆಗಳ ಸಮೂಹದ ಆರ್ಭಟದ ನಡುವೆ ೫೬. ಶರತ್ಕಾಲದ ಮೋಡವನ್ನೇ ಅನುಕರಿಸುತ್ತಿರುವ ಬಿಳಿಯ ಕುದುರೆಗಳಿಂದ ಪ್ರಕಾಶಿಸುತ್ತಿರುವ ಆ ಲೋಹ ರಥದಲ್ಲಿ ಹುಲಿಯ ಬಾವುಟ ದಿಂದ ಕೂಡಿ ಥಳಥಳಿಸುತ್ತ ನಿಂತಿರುವವನು ಶಲ್ಯ, ವ॥ ಮತ್ತು ಈ ಕಡೆ ಭೀಷ್ಮನ ಎಡಪಾರ್ಶ್ವದಲ್ಲಿ ಆಕಾಶ ಭಾಗವನ್ನು ತಡಿಕೆಯಿಂದ ಹೆಣೆದ ಹಾಗೆ ಮಾಡಿ ತನ್ನ

ಕಂ॥ ಕಱೆ ಕೊರಲೊಳ್ ಕಣ್ನೊಸಲೊಳ್
ಪೆಱೆ ಮಕುಟದೊಳುಗ್ರಧನು ಕರಾಗ್ರದೊಳಿರೆಯ ।
ಳ್ಳಿಱೆಯೆ ಹರಿಕೇತು ನಭದೊಳ್
ಮಿಱುಗುವ ಚೆಂಬೊನ್ನ ರಥದನಶ್ವತ್ಥಾಮಂ ॥ ೫೭

ವ॥ ಆ ರುದ್ರಾವತಾರನ ಕೆಲದೊಳ್ ಕಿಕ್ಕಿಱಿಗಿಱಿದ ತಳಿದುಱುಗಲ ನಡುವೆ ಪೊನ್ನ ರಥಮನೇಱಿ ನಿಂದಂ ಭೂರಿಶ್ರವನಾತನ ಕೆಲದೊಳ್ ಬಾಳಬಟ್ಟಂ ತೂಂತಿಟ್ಟಂತೆ ಸಂದಣಿಸಿ ನಿಂದ ಗೋಪಕುಮಾರರಣಿಯ ನಡುವೆ ಪೊನ್ನ ರಥಮನೇಱಿ ನಿಂದಾತನೆನ್ನ ತಮ್ಮಂ ಕೃತವರ್ಮನಾತನ ಕೆಲದೊಳೊಂದಕ್ಷೋಹಿಣೀ ಬಲಂಬೆರಸು ಸುತ್ತಿಱಿದು ಕನಕ ದಂಡ ಮಂಡಿತ ವಿಚಿತ್ರಾತಪತ್ರಂಗಳ ನಡುವೆ ಮಣಿಮಕುಟ ಮರೀಚಿಗಳ್ ಪೊಳೆಯೆ ನಾನಾ ವಾಹನಂಗಳನೇಱಿ ನಿಂದರ್ ಜಯತ್ಸೇನ ಕಾಂಭೋಜ ಸುದಕ್ಷಿಣ ದಂಡಧಾರ ಶತದಂಡಧರರವರ ಕೆಲದೊಳ್ ನೀಳ ಶ್ರುತಾಯುಧ ನಿಯುತಾಯುಧಾಚ್ಯುತಾಯುಧರೆಂಬರವರ ಕೆಲದೊಳ್ ನಿಲೆ ಬಲದ ಸೆಱೆಕೋಲೊಳೊಂದ ಕ್ಷೋಹಿಣೀಬಲಂಬೆರಸುಮಯ್ವತ್ತುಸಾಸಿರ ಮದದಾನೆವೆರಸು ನಿಂದಂ ಸುಯೋಧನನಣುಗ ಮಯ್ದುನಂ ಸಿಂಧುದೇಶಾಧೀಶ್ವರಂ ಜಯದ್ರಥನಾತನ ಕೆಲದೊಳ್ ಮಕರಮಸ್ತಕಭೂಮಿಯೊಳ್ ಕರಟತಟಗಳಿತ ಮದಜಳಧಾರಾಪೂರ ಪರಿಪ್ಲಾವಿತ ಸಕಳ ಭೂತಳಮಪ್ಪ ನಾಲ್ಕು ಲಕ್ಕ ಭದ್ರಹಸ್ತಿಯುಮನೊಂದು ಮಾಡಿ ಘಟೆಯ ಮೊನೆಯೊಳ್ ದಿಗ್ಗಜೇಂದ್ರಮೆನಿಸಿದ ಸುಪ್ರತೀಕ

ರಥದಲ್ಲಿ ರಾಶಿ ಹಾಕಿದ ಆಯುಧಗಳ ಬೆಳಕೇ ಬೆಳಕಾಗಿರಲು ೫೭. ಕತ್ತಿನಲ್ಲಿ ಕರಿಯ ಮಚ್ಚೆ ಹಣೆಯಲ್ಲಿ ಕಣ್ಣು ಕಿರೀಟದ ತುದಿಯಲ್ಲಿ ಚಂದ್ರ ಕೈಯ್ಯಲ್ಲಿ ಉಗ್ರವಾದ ಬಿಲ್ಲು ಇವುಗಳಿಂದ ಕೂಡಿ ಆಕಾಶದಲ್ಲಿ ಸಿಂಹಧ್ವಜವು ಮಿಡುಕುತ್ತಿರುವ ಪ್ರಕಾಶವಾದ ಹೊಂಬಣ್ಣದ ತೇರಿನಲ್ಲಿರುವವನು ಅಶ್ವತ್ಥಾಮ. ವ॥ ಆ ರುದ್ರಾವತಾರನ ಪಕ್ಕದಲ್ಲಿ ಒಟ್ಟಾಗಿ ಸೇರಿಕೊಂಡಿರುವ ಛತ್ರಿಗಳ ಸಮೂಹದ ಮಧ್ಯದಲ್ಲಿ ಚಿನ್ನದ ರಥವನ್ನು ಹತ್ತಿ ನಿಂತಿರುವವನು ಭೂರಿಶ್ರವ; ಆತನ ಪಕ್ಕದಲ್ಲಿ ಆಕಾಶ ಪ್ರದೇಶವನ್ನು ತೂತುಮಾಡಿದ ಹಾಗೆ ಗುಂಪುಕೂಡಿಸಿ ನಿಂತಿರುವ ಗೋಪಕುಮಾರರ ಸೈನ್ಯದ ನಡುವೆ ಚಿನ್ನದ ತೇರನ್ನು ಹತ್ತಿ ನಿಂತಿರುವವನು ನನ್ನ ತಮ್ಮನಾದ ಕೃತವರ್ಮ, ಆತನ ಪಕ್ಕದಲ್ಲಿ ಒಂದಕ್ಷೋಹಿಣೀ ಸೈನ್ಯದಿಂದ ಕೂಡಿ ಸುತ್ತಲೂ ವ್ಯಾಪಿಸಿ ಚಿನ್ನದ ದಂಡಿಗೆಯಿಂದಲಂಕೃತವಾದ ಚಿತ್ರಖಚಿತವಾದ ಛತ್ರಿಗಳ ನಡುವೆ ರತ್ನಖಚಿತವಾದ ಕಿರೀಟವು ಹೊಳೆಯುವ ಹಾಗೆ ಅನೇಕ ವಿಧವಾದ ವಾಹನಗಳನ್ನು ಹತ್ತಿ ನಿಂತಿರುವವರು ಜಯತ್ಸೇನ, ಕಾಂಭೋಜ, ಸುದಕ್ಷಿಣ, ದಂಡಧಾರ, ಶತದಂಡಧರರು. ಅವರ ಪಕ್ಕದಲ್ಲಿ ಬಲದಂಚಿನಲ್ಲಿ ಒಂದಕ್ಷೋಹಿಣೀ ಸೈನ್ಯದಿಂದಲೂ ಐವತ್ತು ಸಾವಿರ ಮದ್ದಾನೆಯಿಂದಲೂ ಕೂಡಿ ನಿಂತಿರುವವನು ದುರ್ಯೋಧನನ ಪ್ರೀತಿಯ ಮೈದುನನೂ ಸಿಂಧುದೇಶಾಧೀಶ್ವರನೂ ಆದ ಜಯದ್ರಥ. ಆತನ ಪಕ್ಕದಲ್ಲಿ ಮಕರವ್ಯೂಹದ ಮುಂಭಾಗದಲ್ಲಿ ಕಪೋಲಪ್ರದೇಶದಿಂದ ಧಾರಾಕಾರವಾಗಿ ಹರಿಯುತ್ತಿರುವ ಮದೋದಕದಿಂದ ತೊಳೆಯಲ್ಪಟ್ಟ ಭೂಮಿಯುಳ್ಳ ನಾಲ್ಕು ಲಕ್ಷ ಭದ್ರಜಾತಿಯ ಆನೆಗಳನ್ನು ಒಟ್ಟುಗೂಡಿಸಿಕೊಂಡು ಅವುಗಳ ಮುಂಭಾಗದಲ್ಲಿ ದಿಗ್ಗಜವೆಂದು

**ಗಜೇಂದ್ರಮನೇಱಿ ನಿಂದಾತನಿಂದ್ರನ ಕೆಳೆಯಂ ಭಗದತ್ತನಾತನ ಕೆಲದೊಳೊಂದು ಲಕ್ಕ ಕುದುರೆಯುಮಱುವತ್ತು ಸಾಸಿರ ರಥಮುಮೊಂದಕ್ಶೋಹಿಣಿಯ ಕಾಲಾಳ್ವೆರಸು ನಿಂದರ್ ಸೋಮದತ್ತ ಬಾಹ್ಲೀಕರವರ ಕೆಲದೊಳ್ ದೇವೇಂದ್ರಂಗೆ ಹಗೆವರಾಗಿ ವಿಕ್ರಮಾರ್ಜುನನ ಕೆಯ್ಯೊಳ್ ಸತ್ತ ನಿವಾತಕವಚ ಕಾಳಕೇಯ ಪೌಳೋಮ ತಳತಾಳುಕರೆಂಬ ದೈತ್ಯರ್ ವೃದ್ಧ ವೈರಮಂ ನೆರೆದು ತ್ರಿಗರ್ತಾಧೀಶ ಸುಶರ್ಮ ಪ್ರಭೃತಿಗಳುಂ ಸಂಸಪ್ತಕರುಮಾಗಿ ಪುಟ್ಟಿ ಮೂರು ಕೋಟಿಯುಮಱುವತ್ತು ಸಾಸಿರ ದೈತ್ಯಪ್ರಧಾನನಾಯಕರುಮರ್ಜುನನೊಳ್ ಕಾದುವ ಬೆಸನಂ ದುರ್ಯೋಧನನೊಳ್ ಬೇಡಿ ಪಡೆದು ಪದಿನೆಂಟು ಕೋಟಿ ರಥಂಬೆರಸು ಬೇಱಿಕೊಡ್ಡಿ ನಿಂದರ್ ಮತ್ತಿತ್ತ ಚತುರಂಗಬಳಜಳನಿಧಿಯ ನಡುವೆ ಕಳಿಂಗರಾಜ ವಂಗ ಕೊಂಗ ದೇಶಾಧೀಶ್ವರ ರೆಣ್ಬತ್ತುಸಾಸಿರ ಗಜಘಟೆಗಳುಂ ಮೂಱುಲಕ್ಕ ರಥಮುಮಱವತ್ತು ಕೋಟಿ ಪದಾತಿಯುಂ ಬೆರಸು ನಿಂದರ್ ಮತ್ತಂ ಕ್ಷೇಮಧೂರ್ತಿಯುಂ ಭೀಮಸೇನನ ಕೆಯ್ಯೊಳ್ ಸತ್ತ ಬಕಾಸುರ ಜಟಾಸುರರನ ಮಕ್ಕಳಳಂಭೂಷ ಹಲಾಯುಧ ಮುಸಲಾಯುಧ ಕಾಳ ನೀಳ ಪ್ರಮುಖ ರೂಕ್ಷರಾಕ್ಷಸ ಬಲಂಬೆರಸು ಸುತ್ತಿಱಿದು ಬಳಸಿಯುಮಿರೆ ದುಶ್ಶಾಸನಂ ಮೊದಲಾಗೆ ನೂರ್ವರ್ ತಮ್ಮಂದಿರುಂ ಲಕ್ಕಣಂ ಮೊದಲಾಗೆ ನೂರ್ವರ್ ಮಕ್ಕಳುಮಱುವತ್ತು ಸಾಸಿರ ರಥಮುಂ ಪದಿನೆಂಟು ಸಾಸಿರ ಮದಾಂಧಗಂಧಸಿಂಧುರಂಗಳುಂ ಬೆರಸು ಪೊಯ್ಯ ಪಂಚಮಹಾಶಬ್ದಂಗಳ್**

ಪ್ರಸಿದ್ಧಿಗೊಂಡಿರುವ ಸುಪ್ರತೀಕವೆಂಬ ಆನೆಯನ್ನು ಹತ್ತಿ ನಿಂತಿರುವವನು ಇಂದ್ರನ ಸ್ನೇಹಿತನಾದ ಭಗದತ್ತ. ಆತನ ಪಕ್ಕದಲ್ಲಿ ಒಂದು ಲಕ್ಷ ಕುದುರೆಯನ್ನು ಅರವತ್ತು ಸಾವಿರ ರಥವನ್ನು ಒಂದು ಲಕ್ಷ ಕಾಲಾಳನ್ನು ಕೂಡಿಕೊಂಡು ನಿಂತವರು ಸೋಮದತ್ತ ಬಾಹ್ಲಿಕರು. ಅವರ ಪಕ್ಕದಲ್ಲಿ ದೇವೇಂದ್ರನಿಗೆ ಶತ್ರುಗಳಾಗಿ ವಿಕ್ರಮಾರ್ಜುನನ ಕಯ್ಯಲ್ಲಿ ಸತ್ತ ನಿವಾತಕವಚ, ಕಾಳಕೇಯ, ಪೌಳೋಮ, ತಳತಾಳುಕರೆಂಬ ರಾಕ್ಷಸರು ಹಳೆಯ ಶತ್ರುತ್ವವನ್ನು ನೆನೆಸಿಕೊಂಡು ಈಗ ತ್ರಿಗರ್ತಾಧೀಶ, ಸುಶರ್ಮರೇ ಮೊದಲಾದವರಾಗಿಯೂ ಸಂಸಪ್ತಕರಾಗಿಯೂ ಹುಟ್ಟಿ ಬಂದಿರುವ ಮೂರುಕೋಟಿ ಅರವತ್ತು ಸಾವಿರ ರಾಕ್ಷಸಮುಖ್ಯರಾದ ನಾಯಕರು ಅರ್ಜುನನೊಡನೆ ಯುದ್ಧ ಮಾಡುವ ಕಾರ್ಯವನ್ನು ದುರ್ಯೋಧನನಲ್ಲಿ ಬೇಡಿ ಪಡೆದು ಹದಿನೆಂಟು ಕೋಟಿ ರಥದಿಂದ ಕೂಡಿ ಪ್ರತ್ಯೇಕವಾಗಿ ಸನ್ನದ್ಧರಾಗಿ ನಿಂತಿದ್ದಾರೆ. ಅಲ್ಲದೆ ಈ ಕಡೆ ಚತುರಂಗ ಸೇನಾಸಮುದ್ರದ ಮಧ್ಯದಲ್ಲಿ ಕಳಿಂಗ ಕೊಂಗ ವಂಗಾಧೀಶರು ಎಂಬತ್ತು ಸಾವಿರ ಆನೆಯ ಗುಂಪುಗಳನ್ನೂ ಮೂರುಲಕ್ಷ ರಥವನ್ನೂ ಅರವತ್ತು ಕೋಟಿ ಕಾಲಾಳು ಸೈನ್ಯವನ್ನೂ ಕೂಡಿ ನಿಂತಿದ್ದಾರೆ. ಅಲ್ಲದೆ ಕ್ಷೇಮಧೂರ್ತಿಯೂ ಭೀಮನ ಕಯ್ಯಲ್ಲಿ ಸತ್ತ ಬಕಾಸುರ ಜಟಾಸುರರ ಮಕ್ಕಳಾದ ಅಳಂಭೂಷ, ಹಲಾಯುಧ, ಮುಸಲಾಯುಧ, ಕಾಳನೀಳರೇ ಮೊದಲಾದವರೂ ಕ್ರೂರರಾಕ್ಷಸಸೈನ್ಯದೊಡನೆ ಸುತ್ತಲೂ ವ್ಯಾಪಿಸಿ ಬಳಸಿ ನಿಂತಿದ್ದಾರೆ. ದುಶ್ಶಾಸನನೇ ಮೊದಲಾದ ನೂರು ಜನ ತಮ್ಮಂದಿರೂ ಲಕ್ಷಣನೇ ಮೊದಲಾದ ನೂರು ಜನ ಮಕ್ಕಳೂ ಅರವತ್ತು ಸಾವಿರ ರಥದಿಂದಲೂ ಹದಿನೆಂಟು ಸಾವಿರ ಮದದಿಂದ ಕುರುಡಾದ ಶ್ರೇಷ್ಠವಾದ ಆನೆಗಳಿಂದಲೂ ಕೂಡಿ ಪಂಚಮಹಾಶಬ್ದಗಳು ಪ್ರಳಯಕಾಲದ ಕರಿಯ ಮೋಡಗಳು ಮೊಳಗುವ ಹಾಗೆ ಮೊಳಗುತ್ತಿರಲು ಆಕಾಶ ಪ್ರದೇಶವೇ ಚಿಗುರಿದ ಹಾಗೆ ಹೊಳೆದು

ಕಾಳ ನೀಳ ಜಳಧರಂಗಳ್ ಪೊಲಗುವಂತೆ ಮೊಟಗೆ ಗಗನತಳಂ ತಳಿರ್ತಂತೆ ಪೊಳೆದು ಮಿಳಿರ್ವ ಪಾಳಿ ಮಹಾಧ್ವಜಂಗಳುಂ ಗಗನಸಿಂಧು ಫೇನ ಪಟಳ ಶಂಖ ಸಂಕಾಶ ಪಾಂಡು ಛತ್ರಚಾಮರಂಗಳುಂ ಪೆಱವುಂ ರಾಜಚಿಹ್ನಂಗಳುಮೆಸೆಯೆ-

ಚಂ|| ಕನಕ ಗಿರೀಂದ್ರ ರುಂದ್ರ ಶಿಖರಸ್ಥಿತ ಬಾಳದಿನೇಶಬಿಂಬಮಂ
ನೆನೆಯಿಸೆ ತನ್ನ ಪೊನ್ನ ರಥದೊಳ್ ನೆಲಸಿರ್ದು ವಿಳಾಸದಿಂದೆ ಭೀ |
ಮನ ಮೊನೆಯಂ ವನೀಪಕರನಾರಯಲಟ್ಟಿ ಯುಗಾಂತವಾರ್ಧಿ ಭೋಂ
ಕೆನೆ ತಳರ್ವಂದದಿಂ ತಳರಲಟ್ಟಿಪನಲ್ತೆ ಫಣೀಂದ್ರಕೇತನಂ || ೫೮

ಕಂ|| ಸೆಱಿಕೋಲ್ ಸೆಱಿಕೋಲಿಂ ಪ
ತ್ತುಱುಗಾವುದ ಬಲದ ಪವಣನನಿತಿನಿತೆಂದಾ |
ನಱಿಯೆಂ ದೇವಾಸುರರೊಳ
ಮಱಿಯೆಂ ಕಂಡಿನಿತು ಬಲಮನಾನವನಿಪತೀ || ೫೯

ವ|| ಎಂದು ನಾಮುಂ ನಮ್ಮ ಬಲದ ನಾಯಕರನೆಡೆಯಱಿದೊಡ್ಡುವಮೆಂದು ದ್ರೋಣನ ಮೊನೆಗಱುವತ್ತು ಸಾಸಿರ ರಥಂಬೆರಸು ಧೃಷ್ಟದ್ಯುಮ್ನನುಮನಶ್ವತ್ಥಾಮನ ಮೊನೆಗೆ ನಾಲ್ವತ್ತು ಸಾಸಿರ ರಥಂ ಬೆರಸು ಶಿಖಂಡಿಯುಮಂ ಕೃತವರ್ಮನ ಮೊನೆಗೊಂದಕ್ಷೋಹಿಣೀ ಬಲಂ ಬೆರಸು ಸಾತ್ಯಕಿಯುಮಂ ದುರ್ಯೋಧನನ ಮೊನೆಗೊಂದು ಕೋಟಿ ರಥಮುಮೊಂದು ಲಕ್ಕ ಭದ್ರಹಸ್ತಿಯುಂ ಬೆರಸು ಭೀಮನುಮಂ ಬೃಹದ್ಬಳನ ಮೊನೆಗೆ ಮೂವತ್ತು ಸಾಸಿರ ರಥಂಬೆರಸಭಿಮನ್ಯುವುಮಂ ದುಶ್ಯಾಸನನ ಮೊನೆಗೆ ನಾಲ್ವತ್ತು ಸಾಸಿರ ರಥಂಬೆರಸು ನಕುಲನುಮಂ

ಚಲಿಸುತ್ತಿರುವ ಧ್ವಜ ಮಹಾಧ್ವಜಗಳೂ ದೇವಗಂಗಾನದಿಯ ನೊರೆ ಮತ್ತು ಶಂಖಗಳಿಗೆ ಸಮಾನವಾದ ಬಿಳಿಯ ಬಣ್ಣದಿಂದ ಕೂಡಿದ ಛತ್ರಚಾಮರಗಳೂ ಇನ್ನೂ ಇತರ ರಾಜ್ಯಚಿಹ್ನೆಗಳೂ ಪ್ರಕಾಶಿಸುತ್ತಿರಲು-೫೮. ಮೇರುಪರ್ವತದ ವಿಶಾಲವಾದ ಶಿಖರದ ಮೇಲಿರುವ ಬಾಲಸೂರ್ಯನ ಬಿಂಬವನ್ನು ಜ್ಞಾಪಕಕ್ಕೆ ತರುತ್ತ ತನ್ನ ಸುವರ್ಣರಥದಲ್ಲಿದ್ದುಕೊಂಡು ವೈಭವದಿಂದ ಭೀಮನ ಯುದ್ಧರೀತಿಯನ್ನು ವಿಚಾರಮಾಡಿ ಬರಲು ಗೂಢಚಾರರನ್ನು ಕಳುಹಿಸಿ, ಪ್ರಳಯಕಾಲದ ಸಮುದ್ರವು ಇದ್ದಕ್ಕಿದ್ದ ಹಾಗೆ ಚಲಿಸುವಂತೆ ಚಲಿಸಲು ದುರ್ಯೋಧನನು (ಸಂದೇಶವನ್ನು) ಕಳುಹಿಸಿದನು. ೫೯. ಒಂದು ಪಕ್ಕದ ಅಂಚಿನಿಂದ ಇನ್ನೊಂದು ಪಕ್ಕದ ಅಂಚಿನವರೆಗಿರುವ ಹತ್ತಾರು ಗಾವುದ ವಿಸ್ತಾರವಾದ ಪ್ರದೇಶದಲ್ಲಿರುವ ಸೈನ್ಯದ ಪ್ರಮಾಣವನ್ನು ಇಷ್ಟಿಷ್ಟೆಂದು ನಾನು ಹೇಳಲಾರೆ, ರಾಜನೇ ದೇವಾಸುರರ ಯುದ್ಧದಲ್ಲಿಯೂ ಇಷ್ಟು ಸೈನ್ಯವನ್ನು ನಾನು ಕಂಡಿರಲಿಲ್ಲ. ವ|| ಎಂದು ನಾವೂ ನಮ್ಮ ಸೈನ್ಯದ ನಾಯಕರನ್ನು ವಿಚಾರಮಾಡಿ ಒಡ್ಡೋಣ ಎಂದನು. ದ್ರೋಣನ ಸೈನ್ಯಕ್ಕೆ ಪ್ರತಿಯಾಗಿ ಅರವತ್ತು ಸಾವಿರ ರಥದೊಡನೆ ಕೂಡಿದ ಧೃಷ್ಟದ್ಯುಮ್ನನನ್ನು ಗೊತ್ತುಮಾಡಿದನು. ಅಶ್ವತ್ಥಾಮನ ಸೈನ್ಯಕ್ಕೆ ನಲವತ್ತು ಸಾವಿರ ತೇರಿನಿಂದ ಕೂಡಿದ ಶಿಖಂಡಿಯನ್ನು ನೇಮಿಸಿದನು. ಕೃತವರ್ಮನ ಕಾಳಗಕ್ಕೆ ಒಂದಕ್ಷೋಹಿಣೀ ಸೈನ್ಯದಿಂದ

ಶಕುನಿಯ ಮೊನೆಗೆ ನಾಲ್ವತ್ತು ಸಾಸಿರ ರಥಂಬೆರಸು ಸಹದೇವನುಮಂ ಕೃಪನ ಮೊನೆಗೊಂದಕ್ಷೋಹಿಣೀ ಬಲಂಬೆರಸು ಕೇಕಯರುಮಂ ಸಿಂಧುರಾಜನ ಮೊನೆಗೊಂದಕ್ಷೋಹಿಣೀ ಬಲಂಬೆರಸು ದ್ರುಪದನುಮಂ ಭಗದತ್ತನ ಮೊನೆಗೊಂದಕ್ಷೋಹಿಣೀ ಬಲಂಬೆರಸು ವಿರಾಟನುಮಂ ಜಟಾಸುರ ಬಕಾಸುರರ ಮಕ್ಕಳಳಂಭೂಷ ಹಳಾಯುಧ ಮುಸಳಾಯುಧ ಕಾಳ ನೀಳ ನಕ್ತಂಚರರ ಮೊನೆಗೊಂದಕ್ಷೋಹಿಣೀ ಬಲಂಬರೆಸು ಘಟೋತ್ಕಚನುಮಂ ವಿಂದನ ಮೊನೆಗೆ ಪದಿನೆಂಟು ಸಾಸಿರ ರಥಮುಮೊಂದುಲಕ್ಕ ಮದದಾನೆಯುಂ ಬೆರಸು ಕೊಂತಿಯ ಮಾವನಪ್ಪ ಕೊಂತಿಭೋಜನುಮಂ ವಿಂದಾನುವಿಂದರ ಮೊನೆಗಱುವತ್ತು ಸಾಸಿರ ರಥಂಬೆರಸು ನಾಗಕುಮಾರನನಂತಬಲಸಮನ್ವಿತನಿಳಾವಂತನುಮಂ ಭೂರಿಶ್ರವನ ಮೊನೆಗೆ ನಾಲ್ವತ್ತು ಸಾಸಿರ ರಥಮುಂ ನಾಲ್ವತ್ತು ಸಾಸಿರ ಮದಹಸ್ತಿಗಳುಂ ಬೆರಸು ಮದಗಜಾರೂಢನುತ್ತರನುಮಂ ಸುಯೋಧನನ ಮಕ್ಕಳ್ ಲಕ್ಕಣಂ ಮೊದಲಾಗೆ ನೂರ್ವರ ಮೊನೆಗಱುವತ್ತು ಸಾಸಿರ ರಥಂಬೆರಸು ಸುತ ಸೋಮಕ ಪ್ರಮುಖರಪ್ಪ ಪಂಚಪಾಂಡವರುಮಂ ಪೇೞ್ದು ಕಾಂಭೋಜ ಸುದಕ್ಷಿಣ ದಂಡಧಾರರೆಂಬ ಮೂವರಕ್ಷೋಹಿಣೀಪತಿಗಳ ಮೊನೆಗೆ ಮೂಱುಕೋಟಿ ರಥಂಬೆರಸು ಪಾಂಡ್ಯ ಶ್ರೀಜಯ

ಕೂಡಿದ ಸಾತ್ಯಕಿಯನ್ನು ನಿಯಮಿಸಿದನು. ದುರ್ಯೋಧನನೊಡನೆ ಯುದ್ಧ ಮಾಡುವುದಕ್ಕೆ ಒಂದು ಕೋಟಿ ರಥವನ್ನೂ ಒಂದಲಕ್ಷ ಉತ್ತಮಜಾತಿಯ ಆನೆಗಳನ್ನೂ ಒಳಗೊಂಡ ಭೀಮನನ್ನು ಸಿದ್ಧಪಡಿಸಿದನು. ಬೃಹದ್ಬಳನನ್ನು ಎದುರಿಸುವುದಕ್ಕೆ ಮೂವತ್ತು ಸಾವಿರ ರಥದಿಂದ ಕೂಡಿದ ಅಭಿಮನ್ಯುವೂ ದುಶ್ಯಾಸನನ ಕಾಳಗಕ್ಕೆ ನಲವತ್ತು ಸಾವಿರ ರಥದಿಂದ ಕೂಡಿದ ನಕುಲನೂ ಕೃಪನೊಡನೆ ಯುದ್ಧಮಾಡುವುದಕ್ಕೆ ಒಂದಕ್ಷೋಹಿಣೀ ಬಲದಿಂದ ಕೂಡಿದ ಕೇಕಯರೂ ಸೈಂಧವನ ಯುದ್ಧಕ್ಕೆ ಒಂದಕ್ಷೋಹಿಣೀ ಬಲದಿಂದ ಕೂಡಿದ ದ್ರುಪದನೂ ಸಿದ್ಧರಾದರು. ಭಗದತ್ತನ ಸೈನ್ಯಕ್ಕೆ ಒಂದಕ್ಷೋಹಿಣೀ ಬಲದೊಡನೆ ವಿರಾಟನೂ ಬಕಾಸುರನ ಮಕ್ಕಳಾದ ಅಳಂಬೂಷ ಹಳಾಯುಧ ಮುಸಳಾಯುಧ ಕಾಳನೀಳರಾಕ್ಷಸರ ಮೊನೆಗೆ ಒಂದಕ್ಷೋಹಿಣೀಬಲದಿಂದ ಕೂಡಿದ ಘಟೋತ್ಕಚನೂ ನೇಮಕರಾದರು. ವಿಂದನೊಡನೆ ಯುದ್ಧಮಾಡುವುದಕ್ಕೆ ಹದಿನೆಂಟು ಸಾವಿರ ರಥವೂ ಒಂದು ಲಕ್ಷ ಮದ್ದಾನೆಗಳೂ ಕೂಡಿದ ಕುಂತಿಯ ಮಾವನಾದ ಕುಂತಿಭೋಜನು ಸಿದ್ಧನಾದನು. ವಿಂದಾನುವಿಂದರ ಸೈನ್ಯಕ್ಕೆ ಅರವತ್ತು ಸಾವಿರರಥದೊಡಗೂಡಿ ನಾಗಕುಮಾರನನ್ನೂ ಅನಂತಬಲದಿಂದ ಕೂಡಿದ ಇಳಾವಂತನನ್ನೂ ಭೂರಿಶ್ರವನೊಡನೆ ಯುದ್ಧ ಮಾಡುವುದಕ್ಕೆ ನಲವತ್ತು ಸಾವಿರ ತೇರುಗಳನ್ನೂ ನಲವತ್ತು ಸಾವಿರ ಮದ್ದಾನೆಗಳನ್ನೂ ಕೂಡಿ ಮದ್ದಾನೆಯನ್ನೇರಿದ್ದ ಉತ್ತರನನ್ನೂ ಏರ್ಪಡಿಸಿದನು. ದುರ್ಯೋಧನನ ಮಕ್ಕಳಾದ ಲಕ್ಷಣನೇ ಮೊದಲಾದ ನೂರು ಜನಗಳ ಯುದ್ಧಕ್ಕೆ ಅರವತ್ತು ಸಾವಿರ ತೇರಿನೊಡನೆ ಕೂಡಿದ ಸುತ ಸೋಮಕರೇ ಮುಖ್ಯರಾದ ಪಂಚಪಾಂಡವರನ್ನು ನೇಮಿಸಿದನು. ಕಾಂಭೋಜ ಸುದಕ್ಷಿಣ ದಂಡಧಾರರೆಂಬ ಮೂರುಮಂದಿ ಅಕ್ಷೋಹಿಣೀಪತಿಗಳ ಯುದ್ಧಕ್ಕೆ ಮೂರುಕೋಟಿ ರಥಗಳಿಂದ ಕೂಡಿದ ಪಾಂಡ್ಯ ಶ್ರೀಜಯ ಸೋಮಕರನ್ನೂ ಗೊತ್ತುಮಾಡಿದನು. ವೀರರಾದ ಪುಷ್ಕರ ಪಾರಿಯಾತ್ರ ಬರ್ಬರ

ಸೋಮಕರಂ ಪೇೞ್ದು ವೀರ ಪುಷ್ಕರ ಪಾರಿಯಾತ್ರ ಬರ್ಬರ ಶಬರ ನೇಪಾಳ ಮಹೀಪಾಳರ ಮೊನೆಗೆರಡು ಕೋಟಿ ರಥಂಬೆರಸು ಹೈಹಯರುಂ ಪೇೞ್ದು ನೀಳನನಱುವತ್ತು ಸಾಸಿರ ಭದ್ರಹಸ್ತಿವೆರಸು ತನ್ನ ಚಕ್ರರಕ್ಷೆಗೆ ಪೇೞ್ದು ಸಂಸಪ್ತಕರ ಪದಿನೆಂಟು ಕೋಟಿ ರಥಕ್ಕರಿಕೇಸರಿಯ ರಥಮನೊಂದನೆ ಪೇೞ್ದು ಯುಧಿಷ್ಠಿರಂ ಶಲ್ಯನ ಮೊನೆಗೆ ನೆಱೆದು ನಿಂದು ಕೆಯ್ವೀಸುವಾ ಪ್ರಸ್ತಾವದೊಳ್ 'ಶೂರಂ ಭೇದೇನ ಯೋಜಯೇತ್' ಎಂಬ ನಯಮಂ ಕೆಯ್ಕೊಂಡು ವಿನಯಮನೆ ಮುಂದಿಟ್ಟು-

ಕಂ॥ ಬಳಮೆರಡುಂ ತನ್ನನೆ ಮಿಳ
ಮಿಳ ನೋಡೆ ನರೇಂದ್ರನೊಂದೆ ರಥದಿಂದಸುಹೃ।
ದ್ಬಳಮನಿರದೆಯ್ದಿ ಭೀಷ್ಮರ
ಚಳಣಯುಗಕ್ಕೆಱಗೆ ನಿನಗೆ ಜಯಮಕ್ಕೆಂದಂ ॥ ೬೦

ವ॥ ಎಂದು ಭೀಷ್ಮರ್ ತಮ್ಮ ಮೊಮ್ಮನ ವಿನಯಕ್ಕೆ ಮೆಚ್ಚಿ ಪರಸೆ ಪರಕೆಯಂ ಕೆಯ್ಕೊಂಡು-

ಕಂ॥ ಗುರು ಕೃಪ ಗುರುಸುತ ಶಲ್ಯರ
ಚರಣಂಗಳ್ಗೆಱಗಿ ಪೋಗಿ ಪೊಡೆವಡುವುದುಮಾ।
ದರದಿಂದಂ ನಲ್ಮೆಯೊಳಂ
ಪರಸಿ ಮನಂಗೊಂಡು ನುಡಿದರವರಾ ನೃಪನಂ ॥ ೬೧

ನಿನ್ನ ಬರವಿಂದವೆಮ್ಮ ಮ
ನನ್ನಿನಗೆಱಗಿದುದು ಜಯಮುಮೆಮ್ಮೀ ದೆಸೆಯಿಂ।
ದನ್ನಿನಗೆ ಸಾರ್ಗೆ ಪೋಗೆನೆ
ಮನ್ನಿಸಿ ಗುರುಜನಮನಾಗಳಂತಕತನಯಂ ॥ ೬೨

ಶಬರ ನೇಪಾಳ ರಾಜರುಗಳ ಬಲಕ್ಕೆ ಎರಡುಕೋಟಿ ರಥಗಳಿಂದ ಕೂಡಿದ ಹೈಹಯರನ್ನು ನಿಯಮಿಸಿದನು. ಅರವತ್ತು ಸಾವಿರ ಭದ್ರಗಜಗಳೊಡನೆ ನೀಲನನ್ನು ತನ್ನ ಸೇನಾರಕ್ಷಣೆಗೆ ಇರಹೇಳಿದನು. ಸಂಸಪ್ತಕರ ಹದಿನೆಂಟುಕೋಟಿ ರಥಕ್ಕೆ ಅರಿಕೇಸರಿಯ (ಅರ್ಜುನ) ರಥವೊಂದನ್ನೇ ಸಿದ್ಧಪಡಿಸಿದನು. ಧರ್ಮರಾಯನು ತಾನೇ ಶಲ್ಯನ ಇದಿರಾಗಿ ನಿಂತನು. 'ಶೂರನನ್ನು ಭೇದೋಪಾಯದಿಂದಲೇ ಗೆಲ್ಲಬೇಕು' ಎಂಬ ನೀತಿಯನ್ನು ಅಂಗೀಕರಿಸಿ ವಿನಯವನ್ನೇ ಮುಂದುಮಾಡಿಕೊಂಡು ೬೦. ಎರಡು ಬಲವೂ ತನ್ನನ್ನೇ ಮಿಟಮಿಟನೆ ನೋಡುತ್ತಿರಲು ಧರ್ಮರಾಯನು ಸಾವಕಾಶಮಾಡದೆ ಒಂದೇ (ಏಕಾಕಿಯಾಗಿ) ತೇರಿನಿಂದ ಶತ್ರುಸೈನ್ಯವನ್ನು ಸೇರಿ ಭೀಷ್ಮರ ಎರಡು ಕಾಲುಗಳಿಗೂ ನಮಸ್ಕಾರ ಮಾಡಿದನು. ಅವರು ನಿನಗೆ ಜಯವಾಗಲಿ ಎಂದು ಆಶೀರ್ವದಿಸಿದರು. ವ॥ ಆ ಹರಕೆಯನ್ನು ಸ್ವೀಕರಿಸಿದನು. ೬೧. ದ್ರೋಣ ಕೃಪ ಅಶ್ವತ್ಥಾಮ ಶಲ್ಯರ ಪಾದಗಳಿಗೂ ಹಾಗೆಯೇ ಹೋಗಿ ನಮಸ್ಕಾರಮಾಡಿದನು. ಅವರೂ ಆದರದಿಂದಲೂ ಸದ್ಭಾವದಿಂದಲೂ ಹರಸಿ ತೃಪ್ತರಾಗಿ ರಾಜನನ್ನು ಕುರಿತು ಹೇಳಿದರು. ೬೨. ನಿನ್ನ ಬರುವಿಕೆಯಿಂದ ನಮ್ಮ ಮನಸ್ಸು ನಿನ್ನ ಕಡೆಗೆ ಓಸರಿಸಿತು. ಹಾಗೆಯೇ ನಮ್ಮ ಕಡೆಯಿಂದ ನಿನಗೂ ಜಯವು ಉಂಟಾಗುತ್ತದೆ ಹೋಗು ಎಂದರು.

ವ॥ ಮಗುೞ್ದು ತನ್ನೊಡ್ಡಣಕ್ಕೆ ಬರುತ್ತುಂ ದುರ್ಯೋಧನನ ತಮ್ಮನಪ್ಪ ಯುಯುತ್ಸುವಂ ಕಂಡು-

ಚಂ॥ ಪವನಜನಿಂದೆ ಕೌರವಕುಲಂ ಪಡಲಿಟ್ಟವೊಲಕ್ಕುಮಾದೊಡಿ
ನ್ನವರವರಾರುವಿಲ್ಲಣಮೆ ಸಂತತಿ ಕೆಟ್ಟಪುದಿಲ್ಲಿ ಕಾವೆನೀ ।
ಬವರದೊಳೀಗಳಾನಿವನನೆಂದು ನೃಪಂ ದಯೆಯಿಂದಮಾ ಯುಯು
ತ್ಸುವನೊಡಗೊಂಡು ಬಂದನೆನಿತಾದೊಡಮೇಂ ಪ್ರಭು ಪೊಲ್ಲಕೆಯ್ಗುಮೇ ॥ ೬೩

ವ॥ ಅಂತಾ ಯುಯುತ್ಸುವನೊಡಗೊಂಡು ಬಂದು ಧರ್ಮಪುತ್ರನುತ್ಸಾಹದೊಳಿರ್ಪ ಪದದೊಳ್ ವಿಕ್ರಮಾರ್ಜುನನ ಮನದೊಳಾದ ವ್ಯಾಮೋಹಮಂ ಕಳೆಯಲೆಂದು ಮುಕುಂದಂ ದಿವ್ಯಸ್ವರೂಪಮಂ ತೋಱೆ-

ಚಂ॥ ಅದಿರದಿದಿರ್ಚಿ ತಳ್ತಿಱಿಯಲೀ ಮಲೆದೊಡ್ಡಿದ ಚಾತುರಂಗಮೆಂ
ಬುದು ನಿನಗೊಡ್ಡಿ ನಿಂದುದಿದನೋವದೆ ಕೊಲ್ವಡೆ ನೀನುಮೆನ್ನ ಕ ।
ಜ್ಜದೊಳೆಸಗೆಂದು ಸೈತಜಿತನಾದಿಯ ವೇದರಹಸ್ಯದೊಳ್ ನಿರಂ
ತದ ಪರಿಚರ್ಯೆಯಿಂ ನೆಱೆಯೆ ಯೋಜಿಸಿದಂ ಕದನತ್ರಿಣೇತ್ರನಂ ॥ ೬೪

ವ॥ ಆಗಳ್ ಪರಸೈನ್ಯಭೈರವಂ ಪುರಾಣಪುರುಷನಪ್ಪ ಪುರುಷೋತ್ತಮಂಗೆಱಗಿ ಪೊಡಮಟ್ಟು ರಿಪುಪಕ್ಷಕ್ಷಯಕರಮಪ್ಪ ವಿಶ್ವಕರ್ಮನಿರ್ಮಿತಮಾದ ತನ್ನ ದಿವ್ಯರಥಮಂ ಮನೋರಥಂ ಬೆರಸು

ಧರ್ಮರಾಜನು ತಮ್ಮ ಹಿರಿಯರನ್ನು ಗೌರವಿಸಿ ವ॥ ತನ್ನ ಸೈನ್ಯಕ್ಕೆ ಹಿಂತಿರುಗಿ ಬರುತ್ತ ದಾರಿಯಲ್ಲಿ ದುರ್ಯೋಧನನ ತಮ್ಮನಾದ ಯುಯುತ್ಸುವನ್ನು ಕಂಡನು. ೬೩. ಹೇಗೂ ಭೀಮನಿಂದ ಕೌರವಕುಲವು ನಾಶವಾದಂತಾಗುತ್ತದೆ. ಅವರ ಕಡೆಯವರಾರೂ ಇಲ್ಲದಂತಾಗುತ್ತದೆ. ಸಂತತಿಯು ಸಂಪೂರ್ಣವಾಗಿ ನಾಶವಾಗುತ್ತದೆ. ಈ ಯುದ್ಧದಲ್ಲಿ ಇವನನ್ನಾದರೂ ರಕ್ಷಿಸುತ್ತೇನೆ ಎಂದು ರಾಜನು ದಯೆಯಿಂದ ಆ ಯುಯುತ್ಸುವನ್ನು ಒಡಗೊಂಡು ಬಂದನು. ಪ್ರಭುವಾದವನು ಕೆಟ್ಟದ್ದನ್ನು ಮಾಡುತ್ತಾನೆಯೇ? ವ॥ ಯುಯುತ್ಸುವನ್ನು ಒಡಗೊಂಡು ಬಂದು ಧರ್ಮರಾಜನು ಉತ್ಸಾಹದಿಂದಿರುವ ಸಮಯದಲ್ಲಿ ವಿಕ್ರಮಾರ್ಜುನನ ಮನಸ್ಸಿನಲ್ಲುಂಟಾದ ವ್ಯಾಮೋಹವನ್ನು ಕಳೆಯುವುದಕ್ಕಾಗಿ ಕೃಷ್ಣನು ವಿಶ್ವರೂಪವನ್ನು ತೋರಿದನು. ೬೪. "ಹೆದರದೆ ಎದುರಿಸಿ ಪ್ರತಿಭಟಿಸಿ ಯುದ್ಧಮಾಡಲು ಮಲೆತು ಜಾಚಿದ ಈ ಚತುರಂಗ ಸೈನ್ಯವು ನಿನಗೆ ಪ್ರತಿಭಟಿಸಿ ನಿಂತಿದೆ. ಇದನ್ನು ಕೊಲ್ಲಬೇಕಾದರೆ ನೀನು ನಾನು ಹೇಳಿದ ರೀತಿಯಲ್ಲಿ ಕೆಲಸ ಮಾಡು" ಎಂದು ಶ್ರೀಕೃಷ್ಣನು ನೇರವಾಗಿ ಆದಿಕಾಲದಿಂದ ಬಂದ ವೇದ ರಹಸ್ಯವನ್ನು ಮನದಟ್ಟಾಗುವಂತೆ ಉಪದೇಶಿಸಿ ಅರ್ಜುನನನ್ನು ಯುದ್ಧಕಾರ್ಯದಲ್ಲಿ ನಿಯೋಜಿಸಿದನು. ವ॥ ಆಗ ಅರ್ಜುನನು ಪುರಾಣಪುರುಷನಾದ ಶ್ರೀಕೃಷ್ಣನಿಗೆ ನಮಸ್ಕಾರಮಾಡಿ ಶತ್ರುಪಕ್ಷವನ್ನು ನಾಶಮಾಡುವ ಶಕ್ತಿಯನ್ನುಳ್ಳ ವಿಶ್ವಕರ್ಮನಿಂದ ನಿರ್ಮಿತವಾದ ತನ್ನ ದಿವ್ಯರಥವನ್ನು ಶ್ರೀಕೃಷ್ಣನನ್ನು ಮೊದಲು ಹತ್ತಲುಹೇಳಿ ಅವನ್ನು

ರಥಾಂಗಧರನಂ ಮುನ್ನಮೇಱಲ್ವೇೞ್ದು ಮೂಱು ಸೂೞ್ ಬಲವಂದು ಪೊಡಮಟ್ಟು ಬೞಯಂ ತಾನೇಱೆ ವಜ್ರಕವಚಮುಂ ತೊಟ್ಟು ತವದೊಣೆಗಳನೆರಡುಂ ದೆಸೆಯೊಳಂ ಬಿಗಿದು ದ್ರೋಣಾಚಾರ್ಯಂಗೆ ಮನದೊಳ್ ನಮಸ್ಕಾರಂಗೆಯ್ದು ದ್ರೋಣಂ ಬಾೞ್ಗೆಂದು ಮಹಾಪ್ರಚಂಡ ಗಾಂಡೀವಮುಂ ಕೊಂಡೇಱಿಸಿ ನೀವಿ ಜೇವೊಡೆದು ದೇವದತ್ತ ಶಂಖಮುಂ ಪೂರಿಸಿ ಸಂಸಪ್ತಕರೊಡ್ಡಣದತ್ತ ರಥಾಂಗಧರನಂ ರಥಮುಂ ಚೋದಿಸಲ್ವೇೞ್ದಾಗಳ್-

ಮ॥ ಸ್ರ॥ ಕುಳಶೈಳೇಂದ್ರಂಗಳಂಭೋನಿಧಿಗಳಖಿಳ ದಿಗ್ದಂತಿಗಳ್ ವಿಶ್ವಧಾತ್ರೀ
ವಳಯಂ ಪಾತಾಳಮೂಲಂ ಸಕಲ ಭುವನಮೊಂದೊಂದಱೊಳ್ ಕೇಣಿಗೊಂಡು ।
ಚ್ಚಳಿಸಲ್ ಸೂಸಲ್ ಪಳಂಚಲ್ ಸಿಡಿದೊಡೆದಳಱಲ್ ಪಾಱೆ ಜೀಱೆೞಲಂದು
ಮ್ಮಳಿಸುತ್ತತ್ತಿರ್ದರಾವಂ ಹರಿಗನೊಳಿದಿರಂ ಮೀಱೆ ಮಾಱಾಂಪ ಗಂಡಂ ॥ ೬೫

ವ॥ ಎಂಬನ್ನೆಗಂ ಪ್ರಳಯಕಾಲ ಜಾತೋತ್ಪಾತ ವಾತ ನಿರ್ಘಾತದಿಂದಮಳ್ಳಾಡಿ ತಳ್ಳಂಕಂಗುಟ್ಟುವ ಜಳನಿಧಿಗಳಂತೆ ಮೇರೆದಪ್ಪಲ್ ಬಗೆವುಭಯಸೈನ್ಯಂಗಳಂ ಕಂಡತ್ತ ರಾಜರಾಜನು ಮಿತ್ತ ಧರ್ಮರಾಜನುಮೊಡನೊಡನೆ ಕೆಯ್ವೀಸಿದಾಗಳ್-

ಕಂ॥ ಪೂರ್ವಾಪರ ಜಳನಿಧಿಗಳ
ಗುರ್ವಿಸುವಿನಮೊಂದನೊಂದು ತಾಗುವವೊಲಗು ।
ರ್ವುರ್ವಿರೆ ಪರ್ವಿ ಚತುರ್ಬಲ
ಮೇರ್ವೆಸದಿಂದಂದು ಬಂದು ತಾಗಿತ್ತಾಗಳ್ ॥ ೬೬

ಮೂರುಸಲ ಪ್ರದಕ್ಷಿಣೆ ಮಾಡಿ ನಮಸ್ಕರಿಸಿದ ಬಳಿಕ ತಾನೂ ಹತ್ತಿದನು. ವಜ್ರಕವಚ ವನ್ನು ಧರಿಸಿದನು. ಅಕ್ಷಯತೂಣೀರ (ಬತ್ತಳಿಕೆ)ಗಳನ್ನು ಎರಡುಕಡೆಯಲ್ಲಿಯೂ ಬಿಗಿದುಕೊಂಡನು. ದ್ರೋಣಾಚಾರ್ಯರಿಗೆ ಮನಸ್ಸಿನಲ್ಲಿಯೇ ನಮಸ್ಕರಿಸಿ 'ದ್ರೋಣಾಚಾರ್ಯರು ಬಾಳಲಿ' ಎಂದು ಪ್ರಾರ್ಥಿಸಿದನು. ಮಹಾಪ್ರಚಂಡವಾದ ತನ್ನ ಗಾಂಡೀವವೆಂಬ ಬಿಲ್ಲಿಗೆ ಹೆದೆಯನ್ನೇರಿಸಿ ನೀವಿ ಟಂಕಾರಮಾಡಿದನು. ದೇವದತ್ತ ಶಂಖವನ್ನು ಊದಿ ಸಂಸಪ್ತಕರ ಸೈನ್ಯದ ಕಡೆಗೆ ತೇರನ್ನು ನಡೆಸುವಂತೆ ಕೃಷ್ಣನಿಗೆ ಹೇಳಿದನು. ೬೫. ಕುಲಪರ್ವತಗಳೂ, ಸಮುದ್ರಗಳೂ, ದಿಗ್ಗಜಗಳೂ, ಸಮಗ್ರಭೂಮಂಡಲವೂ ಪಾತಾಳಲೋಕದ ತಳಭಾಗವೂ ಸಮಸ್ತಲೋಕಗಳೂ ಒಂದೊಂದೂ ಸಾಲಾಗಿ ಮೇಲಕ್ಕೆ ಚಿಮ್ಮಿ ಚೆಲ್ಲಾಡಿ, ತಾಗಿ, ಸಿಡಿಲೊಡೆದು, ನಡುಗಿ, ಹಾರಿ, ಜೀರೆಂದು ಶಬ್ದಮಾಡಿ ವ್ಯಾಕುಲಪಟ್ಟವು. ಅರ್ಜುನನಿಗೆ ಇದಿರಾಗಿ ಪ್ರತಿಭಟಿಸುವ ಶೂರನು ಯಾವನಿದ್ದಾನೆ? ವ॥ ಎನ್ನುವಷ್ಟರಲ್ಲಿ ಪ್ರಳಯಕಾಲದಲ್ಲಿ ಹುಟ್ಟಿ ಮೇಲಕ್ಕೆ ನೆಗೆದ ಗಾಳಿಯ ಹೊಡೆತದಿಂದ ಅಲುಗಿ ಕ್ಷೋಭೆಗೊಂಡ ಸಮುದ್ರದಂತೆ ಎಲ್ಲೆಯನ್ನು ಮೀರಲು ಯೋಚಿಸುತ್ತಿರುವ ಎರಡು ಕಡೆಯ ಸೈನ್ಯಗಳನ್ನೂ ಕಂಡು ಈ ಕಡೆ ಚಕ್ರವರ್ತಿಯಾದ ದುರ್ಯೋಧನನೂ ಆ ಕಡೆ ಧರ್ಮರಾಜನೂ ಯುದ್ಧ ಸೂಚಕವಾಗಿ ಕೈಬೀಸಿದರು. ೬೬. ಪೂರ್ವಪಶ್ಚಿಮ ಸಮುದ್ರಗಳು ಭಯವನ್ನುಂಟುಮಾಡುತ್ತ ಒಂದನ್ನೊಂದು ತಗಲುವ ಹಾಗೆ ಭಯಂಕರವಾದ ಚತುರಂಗಸೇನೆಗಳು ಉತ್ಸಾಹದಿಂದಲೂ ಯುದ್ಧೋದ್ಯೋಗದಿಂದಲೂ ಬಂದು

ಘಟೆಯ ದಟಿದುಲಿವು ಲಯ ಘನ
ಘಟೆಗಳ ಮೊಟಿಗೆನಿಸೆ ಪೊಟ್ಟುಗೊಡೆದತ್ತು ರಟ ।
ತ್ಪಟು ಪಟಹ ಶಂಖ ಭೇರಿಯ
ಚಟುವಳಿತದಿಂದಟಳಪಟಳಮಂಬರಪಟಳಂ ॥ ೬೭

ಕರಿ ತುರಗ ರಥ ಪದಾತಿಯ
ಚರಣಾಸಂಘಾತ ಜಾತ ರಜಮಾಜಸ್ರಂ ।
ನೆರೆವಂಬರಕೊಗೆಯಲ್ ಬಳ
ಭರದಿಂ ಧರೆಯೆಬ್ಬು ಪಾಱುವಂತಾಯ್ತಾಗಳ್ ॥ ೬೮

ಸಮರ ರಸಪ್ರಿಯರೊಳ್ ಸ
ತ್ತ್ವಮುಮಿಳೆಯೊಳ್ ರಜಮುಮೊದವೆ ರಣಗತ್ತಲೆಯೊಳ್ ।
ತಮಮುಂ ಮಿಗೆ ಸತ್ತ್ವ ರಜ
ಸ್ತಮಂಗಳುಂ ಕಾಣಲಾದುವೆರಡುಂ ಪಡೆಯೊಳ್ ।  ೬೯

ಪಡೆಯ ಪೊಱೆಗಗಿದು ಶೇಷಂ
ಪೆಡೆಗಳನುಡುಗುವ್ವುದುಮೆಳೆ ಬೊದಿಲ್ಲೆನೆ ಬಿಬ್ದಿ ।
ತ್ತಡಿಗಿಡೆ ಕೂರ್ಮನ ಬೆನ್ನಂ
ದೊಡೆದು ಸಿಡಿಲ್ದೊಡನೆ ನುಚ್ಚುನೂಱಪ್ಪನೆಗಂ ॥ ೭೦

ವ॥ ಅಂತು ನೆಲನುಮಾಕಾಶಮೊಂದೊಂದಱೊಳ್ ತಾಗಿದ ಬೇಗದೊಳಂಬರಂ ಬರಂ ನೆಗೆದ ಧೂಳಿಯೊಳ್ ದೆಸೆಯಱಿಯದೆಯುಂ ತಮ್ಮ ಬಲಮಂ ಮಾರ್ಪಲಮನಱಿಯದೆಯುಂ

ಸಂಘಟಿಸಿದುವು. ೬೭. ಆನೆಯ ಸೈನ್ಯದ ಘೀಂಕಾರ ಶಬ್ದವು ಪ್ರಳಯಕಾಲದ ಮೋಡಗಳ ಸಮೂಹದ ಗುಡುಗೆನ್ನಿಸಿತು. ಉಗ್ರವಾಗಿ ಶಬ್ದಮಾಡುತ್ತಿರುವ ದಮಟೆ, ಶಂಖ, ನಗಾರಿಯ ಧ್ವನಿಯಿಂದ ಅತಲವೆಂಬ ಪಾತಾಳ ಲೋಕದ ಮಾಳಿಗೆಯೂ ಆಕಾಶದ ಮೇಲ್ಚಾವಣಿಯೂ ಏಕಕಾಲದಲ್ಲಿ ಒಡೆದು ಹೋದುವು. ೬೮. ಆನೆ ಕುದುರೆ ತೇರು ಕಾಲಾಳುಗಳ ಪಾದಘಟ್ಟಣೆಯಿಂದ ಉಂಟಾದ ಧೂಳು ಒಟ್ಟಿಗೆ ಕೂಡಿ ಆಕಾಶಕ್ಕೆ ಹಾರಲು ಸೈನ್ಯದ ಭಾರದಿಂದ ಭೂಮಿಯೇ ಎದ್ದು ಹಾರುವ ಹಾಗಾಯಿತು. ೬೯. ಯುದ್ಧಾಸಕ್ತರಾದವರಲ್ಲಿ ಸತ್ತ್ವಗುಣವೂ (ಶಕ್ತಿಯೂ) ಭೂಮಿಯಲ್ಲಿ ರಜೋಗುಣವೂ (ಧೂಳೂ) ರಣಗತ್ತಲೆಯಲ್ಲಿ ತಮೋ ಗುಣವೂ (ಕತ್ತಲೆ) ಉಂಟಾಗಲು ಎರಡು ಸೈನ್ಯಗಳಲ್ಲಿಯೂ ಸತ್ತ್ವರಜಸ್ತಮೋಗುಣಗಳು ತೋರಿ ಬಂದುವು. ೭೦. ಸೈನ್ಯಗಳ ಭಾರಕ್ಕೆ ಹೆದರಿ ಆದಿಶೇಷನು ಹೆಡೆಗಳನ್ನು ಸಂಕೋಚ ಮಾಡಿಕೊಂಡನು. ಭೂಮಿಯು ಬೊದಿಲ್ಲೆಂದು ಬಿದ್ದಿತು. ತಳಭಾಗವು ನಷ್ಟವಾಗಲು ಆಮೆಯ ಬೆನ್ನು ಒಡೆದು ತಕ್ಷಣ ನುಚ್ಚುನೂರಾಯಿತು ವ॥ ಹಾಗೆ ಭೂಮ್ಯಾಕಾಶಗಳು ಒಂದೊಂದರಲ್ಲಿ ತಗುಲಿದ ವೇಗದಲ್ಲಿ ಆಕಾಶದವರೆಗೆ ಹಾರಿದ ಧೂಳಿನಿಂದ ದಿಕ್ಕು ಕಾಣದೆಯೂ ತಮ್ಮ ಪಕ್ಷ ಪ್ರತಿಪಕ್ಷಗಳನ್ನರಿಯದೆಯೂ ಚತುರಂಗ ಸೈನ್ಯವು ತಮ್ಮ ಮೊದಲಿನ ವ್ಯವಸ್ಥೆ ತಪ್ಪಿಹೋಗಿ ಹುಡುಕಾಡುತ್ತ ಥಟ್ ಪೊಟ್ಟೆಂದು ಹೊಡೆದು ಇಟ್ಟು ಕತ್ತರಿಸಿ ತರಿದು ಪ್ರತಿಭಟಿಸಿ

ಚಾತುರ್ವಲಂಗಳ್ ಮೊದಲ ಸಮಕಟ್ಟುಗೆಟ್ಟು ತಡವರಿಸಿ ತಟ್ಟುಪೊಟ್ಟೆಂದೆಚ್ಚುಮಿಟ್ಟುಮಿಱಿದು ತಱಿದು ಘಟ್ಟಿಸೆಯುಮಾಂಕೆಗೊಂಡು ಕಿಱಿದುಪೊಟ್ತು ಕಾದೆ ಕಾದೆ ಸುರಿವ ಬಿಸುನೆತ್ತರ ಸರಿಯೊಳಮಂಬಿನ ಸರಿಯೊಳಮಂಬಿರಿವಿಟ್ಟು ಪಾಯ್ವ ಮದಗಜಂಗಳ ಮದಜಲದೊಳಂ ಬಲದ ಕಳಕಳಕ್ಕೆ ಮಸಗಿ ದೆಸೆಯಱಿಯದೆಯುಂ ಪಱಿಯೆ ಘಟ್ಟಿಸಿದ ಕೀಳ ಘಟ್ಟಣೆಯೊಳ್ ಪೊಟ್ಟಗೊಡೆದ ತಾಳುಗೆಗಳ ರುಧಿರಜಲದೊಳ್ ಬೆರಸಿ ಪದಗೆಂಪನಾಳ್ದ ಜಾತ್ಯಶ್ವದ ಲಾಳಾಜಳದೊಳಂ ನೆಲದೊಳೊಗೆವ ರಜಂ ಮೊದಲ್ಲೂಲಂಗಿಡೆಯುಂ ತಿಱಿದಿಕ್ಕಿದಂತೆ ತಲೆಗಳ್ ಪಱಿದುರುಳ್ದೊಡೆ ಪೆರ್ಮರಂಗಳ ಪೋಟ್ಗಳೊಳಗಣಿಂದವೊಗೆದ ಕೇಸುರಿಗಳ ಬಳಗದಂತಟ್ಟೆಗಳಿಂದುಬರಂಬರಂ ನೆಗೆದು ಪಾಱುವ ನೆತ್ತರ ಸುಟ್ಟುರೆಗಳಿಂದಂ ಮೇಗೆ ನೆಗೆದ ರಜಂ ಮಸುಳನಾಗೆ ದೆಸೆಯಱಿದು ತಮ್ಮ ಬಲಮುಮಂ ಮಾರ್ವಲಮುಮನಱಿದು ನವರುಧಿರ ಜಳ ಚಳತ್ಸೇಚನದೊಳ್ ಘಟ್ಟಿಸಿ ಸಿಂದುರದೊಳ್ ನೆಲಗಟ್ಟಿಸಿದಂತಿರ್ದ ರಂಗಭೂಮಿಯೊಳೆರಡುಂ ಪಡೆಯ ನಾಯಕರ್ ಬಿಲ್ಲಾಳೆಗಂಗಾದುವಾಗಳ್-

ಕಂ॥ ಪಿಡಿಕೆಯ್ ತೀವಿದ ಕೂರ್ಗಣೆ
ಮಡಕಾಲ್ವರಮಲೆವ ಕಚ್ಚೆ ನಿಡಿಯಸಿಯೊಱಿ ಕ ॥
ರ್ಪಡಿದ ಪಣೆಗಟ್ಟು ಕೆಯ್ದೊಡೆ
ಬೆಡಂಗನೊಳಕೊಳೆ ಧನುರ್ಧರರ್ ಪೆಣೆದೆಚ್ಚರ್ ॥ ೭೧

ಶರಸಂಧಾನಂ ನಿಟ್ಟಿಸ
ಲರಿದೆಂಬಿನಮೆರಡು ಬಲದ ಕಡುವಿಲ್ಲರ್ ಭೋ ।
ರ್ಗರೆದಿಸೆ ಕೂರ್ಗಣೆಯೊಳ್ ಪಂ
ದರಿಕ್ಕಿದಂತಾಯ್ತು ಗಗನಮಂಡಳಮೆಲ್ಲಂ ॥ ೭೨

ಕೆಲವು ಕಾಲ ಯುದ್ಧಮಾಡಿದರು. ಸುರಿಯುತ್ತಿರುವ ಬಿಸಿರಕ್ತದ ಮಳೆ, ಬಾಣವರ್ಷದಿಂದ ಪ್ರವಾಹವಾಗಿ ಹರಿಯುವ ಮದ್ದಾನೆಗಳ ಮದೋದಕ, ಸೈನ್ಯದ ಗದ್ದಲಕ್ಕೆ ರೇಗಿ ದಿಕ್ಕು ತೋಚದಂತೆ ಓಡಿ ತಗುಲಿದ ಕಡಿವಾಣದ ಸಂಘರ್ಷಣೆಯಿಂದ ಪೂರ್ಣವಾಗಿ ಸೀಳಿದ ನಾಲಗೆಗಳ ರಕ್ತ, ಹದವಾದ ಕೆಂಪು ಬಣ್ಣವನ್ನು ತಾಳಿದ ಜಾತಿಕುದುರೆಗಳ ಜೊಲ್ಲುರಸ, ಇವುಗಳಿಂದ ನೆಲದಿಂದ ಹೊರಟ ಧೂಳಿನ ಮೂಲವು ನಾಶವಾಯಿತು. (ನೆಲವು ಒದ್ದೆಯಾದುದರಿಂದ ಧೂಳೇಳುವುದೂ ನಿಂತುದರಿಂದ) ಕತ್ತರಿಸಿ ಹಾಕಿದ ತಲೆಗಳು ಹರಿದು ಹಾರಲು ದೊಡ್ಡ ಮರಗಳ ಹೋಳುಗಳ ಒಳಭಾಗದಿಂದ ಹುಟ್ಟಿದ ಕೆಂಪುಜ್ವಾಲೆಯ ಸಮೂಹದಂತೆ ಮುಂಡ ಗಳಿಂದ ಆಕಾಶದವರೆಗೆ ಚಿಮ್ಮಿ ಹಾರುವ ರಕ್ತದಿಂದ ಕೂಡಿದ ಸುಂಟರುಗಾಳಿಯಿಂದ ಮೇಲೆ ಎದ್ದಿದ್ದ ಧೂಳೂ ಮಾಯವಾಯಿತು. ಧೂಳು ಅಡಗಲಾಗಿ ದಿಕ್ಕುಗಳನ್ನು ತಿಳಿದು ತಮ್ಮ ಸೈನ್ಯವನ್ನೂ ಪರಸೈನ್ಯವನ್ನೂ ತಿಳಿದು ಹೊಸದಾದ ರಕ್ತವನ್ನು ಚಿಮುಕಿಸುವುದರಿಂದ ದಮ್ಮಸ್ಸು ಮಾಡಿ ಕೆಂಪು ಕಾವಿಕಲ್ಲನ್ನು ನೆಲಕ್ಕೆ ಹಾಸಿದಂತಿದ್ದ ಯುದ್ಧಭೂಮಿಯಲ್ಲಿ ಎರಡು ಸೈನ್ಯದ ನಾಯಕರು ಬಿಲ್ಲಿನ ಕಾಳಗವನ್ನು ಕಾದಿದರು. ೭೧. ಕೈತುಂಬ ತುಂಬಿದ ಹರಿತವಾದ ಬಾಣ, ಮೊಳಕಾಲುವರೆಗೆ ಜೋಲಾಡುವ ವೀರಗಚ್ಚೆ, ದೀರ್ಘವಾದ ಕತ್ತಿಯ ಒರೆ, ಕಪ್ಪಾದ ಹಣೆಗಟ್ಟು, ಕೈಚೀಲ ಇವು ಬೆಡಗನ್ನು ಹುಟ್ಟಿಸುತ್ತಿರಲು ಬಿಲ್ಗಾರರು ಪರಸ್ಪರ ಹೆಣೆದುಕೊಂಡು ಹೊಡೆದಾಡಿದರು. ೭೨. ಬಾಣವನ್ನು ಹೂಡುವುದನ್ನು ನೋಡಲಸಾಧ್ಯವೆನ್ನುವ ಹಾಗೆ ಎರಡು ಸೈನ್ಯದ

ಗಱಿಸನ್ನೆಗೆಯ್ದು ತೆಗೆನೆಱೆ
ದೆಱಗಿ ಪರಂಕಲಿಸಿ ಪರ್ಮಿ ಕೂಕಿಱಿದಿಸೆ ಕೆಂ ।
ಗಱಿಯ ಮೊನೆಯಂಬುಗಳ್ ಕ
ಣ್ದೆಱೆಯಿಸಿದುವು ಪೊಣರ್ವ ಬಿಲ್ಲ ಕಡುವಿತ್ತೆಗರಂ ॥ ೭೩

ಅರಿವ ನಡುವುಡಿವ ನೇರ್ಗೋ
ಲ್ವರಿದುರ್ಚುವ ನಟ್ಟು ತೊನೆವ ಕಣೆಗಳ್ಗೆ ಸೊಗಂ ।
ದಿರಿಯದಿದಿರಿದಿರನದಿರದೆ
ಸುರಿಗಿಱಿವಂತೆಚ್ಚರಂಬನಂಬಟ್ಟುವಿನಂ ॥ ೭೪

ಪಿಡಿಕೆಯ್ಯ ದೊಣೆಯ ಪೊದೆಯಂ
ಬಿಡೆ ಮುಡಿವಿನಮೆಚ್ಚು ಸುರಿಗೆಗಿಱ್ತೆದಿರಿದಿರಂ ।
ಪಡೆ ಪೆಣೆದಿಱಿದುಂ ಬಿಲ್ವಡೆ
ಪಡೆದುದು ಭೋರ್ಗರೆದು ಪರಿವ ನೆತ್ತರ ಕಡಲಂ ॥ ೭೫

ವ॥ ಅಂತುಭಯಬಲ ಧನುರ್ಧರಬಲಂಗಳುಮಟ್ಟೆ ಮಟ್ಟೆಗಿದಾಗಳ್-

ಚಂ॥ ತೊಳಗುವ ಬಾಳ್ ತಳತ್ತಳಿಪ ಕಕ್ಕಡೆ ಬುಂಭುಕದೊಳ್ ತಗುಳ್ದು ಪ
ಜ್ಜಳಿಸುವ ಪಂಚರಾಯುಧಮಗುರ್ವಿಸುವಾವುತಿ ಪೂಸಿದಂತಿರೆ ।
ಟ್ಟಳಮಮರ್ದಿರ್ದ ಮಾಳಜಿಗೆ ಪಕ್ಕರೆಯಿಕ್ಕಿದ ಜಾಯಿಲಂ ಭಯಂ
ಗೊಳಿಸೆ ಕಡಂಗಿ ತಾಗಿದುದಸುಂಗೊಳೆ ತುಂಗ ತುರಂಗ ಸಾಧನಂ ॥ ೭೬

ಗಟ್ಟಿಗರಾದ ಬಿಲ್ಗಾರರು ಶಬ್ದಮಾಡಿ ಹೊಡೆಯಲಾಗಿ ಆಕಾಶಮಂಡಳವೆಲ್ಲ ಚಪ್ಪರ ಹಾಕಿದಂತಾಯಿತು. ೭೩. ಹರಿತವಾದ ಬಾಣಗಳಿಂದ ಗರಿಸನ್ನೆ ಮಾಡಿ ದೀರ್ಘವಾಗಿ ಸೆಳೆದು ವಿಸ್ತಾರವಾಗಿ ಹರಡಿ ಹಬ್ಬಿ ಆರ್ಭಟಮಾಡಿ ಬಾಣಪ್ರಯೋಗ ಮಾಡಲು ಕೆಂಪಾದ ಗರಿಯನ್ನುಳ್ಳ ಬಾಣಗಳು ಯುದ್ಧ ಮಾಡುತ್ತಿರುವ ಶೂರರಾದ ಬಿಲ್ಗಾರರನ್ನು ಕಣ್ಣು ತೆರೆಯುವ ಹಾಗೆ ಮಾಡಿದುವು. ೭೪. ಕತ್ತರಿಸುವ, ನಾಟುವ, ಒಡೆದು ಹಾಕುವ, ನೇರವಾದ ಬಾಣಗಳು ಹಾರಿ ಸೀಳುವ, ನಾಟಿ ತೂಗುವ ಬಾಣಗಳಿಗೆ ಮುಖವನ್ನು ತಿರುಗಿಸಿಕೊಳ್ಳದೆ ಪ್ರತಿಭಟಿಸುವುದಕ್ಕೆ ಹೆದರದೆ ಕತ್ತಿಯಿಂದ ಹೊಡೆದ ಹಾಗೆ ಬಾಣವನ್ನು ಬಾಣವು ಹಿಂಬಾಲಿಸುವ ಹಾಗೆ ಹೊಡೆದರು. ೭೫. ಕಯ್ಯಲ್ಲಿ ಹಿಡಿದಿರುವ ಬತ್ತಳಿಕೆಯ ಹೊದೆಯಂಬುಗಳು ಸಂಪೂರ್ಣವಾಗಿ ಮುಗಿಯುವವರೆಗೂ ಪ್ರಯೋಗಮಾಡಿ ಅದು ಮುಗಿಯಲು ಕತ್ತಿಯನ್ನು ಸೆಳೆದು ಎದುರೆದುರಿಗೆ ಬಂದು ಸೈನ್ಯದಲ್ಲಿ ಹೆಣೆದುಕೊಂಡು ಬಿಲ್ಗಾರರು ಆರ್ಭಟಮಾಡಿ ರಕ್ತ ಸಮುದ್ರವನ್ನು ಹರಿಯಿಸಿದರು. ವ॥ ಹಾಗೆ ಎರಡು ಸೈನ್ಯದ ಬಿಲ್ಗಾರ ಸೈನ್ಯವೂ ಸತ್ತು ನಾಶವಾಗಲು ೭೬. ಹೊಳೆಯುತ್ತಿರುವ ಕತ್ತಿ, ತಳತಳಿಸುತ್ತಿರುವ ಮುಳ್ಳುಗೋಲು, ಕುಚ್ಚಿಲಿನಲ್ಲಿ ಸೇರಿ ಪ್ರಜ್ವಲಿಸುವ ಪಂಚರಾಯುಧ, ಹೆದರಿಸುವ ಆವುತಿ, ಲೇಪಮಾಡಿದಂತೆ ಒತ್ತಾಗಿ ಸೇರಿರುವ ಮಾಳಜಿಗೆ, ಜೀನುಹಾಕಿದ ಜಾತಿಯ ಕುದುರೆಗಳು - ಇವು ಭಯವನ್ನುಂಟುಮಾಡಲು ಕುದುರೆಯ ಸೈನ್ಯವು ಪ್ರಾಣವನ್ನಪಹರಿಸುವ ಹಾಗೆ ತಾಗಿತು. (ಟಿ॥ ಇಲ್ಲಿ ಬರುವ ಪಂಚರಾಯುಧ, ಆವುತಿ, ಮಾಳಜಿಗೆ ಮೊದಲಾದುವುಗಳ

ವ॥ ಅಂತು ಪ್ರಳಯಕಾಳದ ಕಾಳ್ಕಿರ್ಚಿನ ಬೇಗೆ ಪಾರ್ದಂತಿರ್ದಲದಳವುಂ ಕಿರ್ಚುಂ ಕಿಡಿಯುಮಾಗೆ ತಾಗಿದಾಗಳ್-

ಚಂ॥ ಪಸುಗೆ ನೆಲಂ ಜಲಂ ಹಯದೊಡಂಬಡು ವಂಚನೆ ಕೇಣಮಾಸನಂ
ಕೊಸೆ ದೆಸೆ ದಿಟ್ಟಿ ಮುಟ್ಟಿ ಕೆಲಜಂಕೆ ನಿವರ್ತನೆ ಕಾಣ್ಕೆ ಪರ್ವಿದೇ ।
ರ್ವೆಸನದೊಳಾದ ಬಲ್ಮೆಯೊಳೊಡಂಬಡೆ ತಳ್ತಿಜೆವಲ್ಲಿ ಮಿಂಚಿನೊಳ್
ಮುಸುಕಿದ ಮಾಳ್ಕೆಯಾಯ್ತು ಸಮರಾಂಗಣಮುಳ್ಳುವ ಬಾಳ್ಗಳುಳ್ಕದಿಂ ॥ ೨೭

ಕರ ಕರವಾಳಘಾತದೊಳರಾತಿಯ ಪಂದಲೆ ಪಂಚರಾಯುಧಂ
ಬೆರಸೆಸೆವಟ್ಟೆ ತೊಟ್ಟ ಕವಚಂಬೆರಸೇಱಿದ ವಾಜಿ ಲೋಹವ ।
ಕ್ಕರೆವೆರಸೊಂದೆ ಸೂೞಿೞಿಳೆ ಪವಲ್ವಡೆ ದೋರ್ವಲದುರ್ವು ಬೀರದೊಳ್
ಪೊರೆದಿರೆ ಬಿನ್ನಣಂ ನೆಗೞೆ ತಳ್ತಿಱಿದರ್ ಕೆಲರಾಜಿರಂಗದೊಳ್ ॥ ೨೮

ಕಂ॥ ಪಿಡಿದುದಿರ್ವ ಬಾಳ ಕಿಡಿಗಳ
ನೊಡನೊಡನರೆವೊತ್ತಿ ತೊಟ್ಟ ಸನ್ನಣವುರಿಯ ।
ಲ್ಕೊಡರಿಸಿದೊಡವಱ ಪರ್ವಂ
ಬಿಡೆಯಱಿದರಿಸಮಿತಿಯೊಡನೆ ಕಾದಿದರರೆಬರ್ ॥ ೨೯

ಚಂ॥ ಭುಗಭುಗಸುರ್ಚೆ ಪಾಯ್ವ ಬಿಸುನೆತ್ತರ ಸುಟ್ಟುರೆಯಂ ನೆಲಕ್ಕೆ ಪ
ರ್ದುಗಳುಗಲೀಯದವ್ವಳಿಸಿ ಪೀರ್ವಿನಮೊರ್ಮೆಯೆ ಪೊಯ್ವ ಪೊಯ್ಗಳಿಂ ।
ನೆಗೆದು ಮುಗಿಲ್ಗಳಿಟ್ಟೆಡೆಗಳೊಳ್ ತಲೆಗಳ್ ತೊಡರ್ದಿರ್ದ ಜೇನವು
ಟ್ಟಿಗಳನೆ ಪೋಲ್ತುವೇಂ ಕಲಹಮುಚ್ಚರಿಯಾಯ್ತೊ ತುರಂಗಸೈನ್ಯದೊಳ್ ॥ ೩೦

ಅರ್ಥ ಅನಿರ್ದಿಷ್ಟ) ವ॥ ಹಾಗೆ ಪ್ರಳಯಕಾಲದ ಕಾಡುಗಿಚ್ಚಿನ ಬೆಂಕಿಯು ಬರುವ ಹಾಗೆ ಎರಡು ಸೈನ್ಯದ ಸಾಮರ್ಥ್ಯವೂ ಕಿಚ್ಚು ಕಿಡಿಯಾಗಿ ದಳ್ಳಿಸಿ ತಾಗಿತು. ೨೭. ವಿಭಾಗ, ನೆಲ, ಜಲ, ಕುದುರೆಗಳ ಹೊಂದಾಣಿಕೆ, ಮೋಸ, ಮಾತ್ಸರ್ಯ, ಔದಾಸೀನ್ಯ, ವಾಹನದ ಆರೋಹಣ, ದಿಕ್ಕು ದೃಷ್ಟಿ ಮುಷ್ಟಿ, ಮುನ್ನುಗ್ಗುವಿಕೆ, ಹೆದರಿಸುವಿಕೆ, ಹಿಂದಿರುಗುವಿಕೆ, ಪುನಃ ಕಾಣಿಸಿಕೊಳ್ಳುವಿಕೆ ಇವು ವ್ಯಾಪ್ತವಾದ ಯುದ್ಧಕಾರ್ಯದ ಬಲ್ಮೆಯಲ್ಲಿ ಸಮನ್ವಯವಾಗಿರುವಂತೆ ಸೇರಿಕೊಂಡಿರಲು ತಾಗಿ ಯುದ್ಧಮಾಡುವಾಗ ಆ ಯುದ್ಧರಂಗವು ಪ್ರಕಾಶಮಾನವಾದ ಕಾಂತಿಯಿಂದ ಮಿಂಚಿನಲ್ಲಿ ಮುಸುಕಿದಂತಾಯಿತು. ೨೮. ಕೈಗತ್ತಿಯ ಪೆಟ್ಟಿನಿಂದ ಕೂಡಿದ ಶತ್ರುವಿನ ಹಸಿಯ ತಲೆ ಪಂಚರಾಯುಧದಿಂದ ಕೂಡಿದ ಪ್ರಕಾಶಮಾನವಾದ ಮುಂಡ. ಧರಿಸಿದ ಕವಚದೊಡನೆ ಕೂಡಿ ಹತ್ತಿರುವ ಕುದುರೆ, ಕಬ್ಬಿಣದ ಗಾಳ ಸಮೇತವಾಗಿ ಒಂದೇ ಬಾರಿಗೆ ಕೆಳಗೆ ಬೀಳಲು ಬಾಹುಬಲದ ಆಧಿಕ್ಯವು ಪರಾಕ್ರಮದಲ್ಲಿ ತೋರಿ ಬರುತ್ತಿರಲು ಪ್ರಾತಿಮುಖ್ಯ ಉಂಟಾಗುವ ಹಾಗೆ ಕೆಲವರು ಯುದ್ಧರಂಗದಲ್ಲಿ ಬೆರಸಿ ಹೊಯ್ದಾಡಿದರು. ೨೯. ಎಡಬಿಡದೆ ಸುರಿಯುತ್ತಿರುವ ಕತ್ತಿಯ ಕಿಡಿಗಳಿಂದ ತಕ್ಷಣವೇ ಅರ್ಧ ಹತ್ತಿಕೊಂಡ ತೊಟ್ಟ ಕವಚವು ಉರಿಯುವುದಕ್ಕೆ ಮೊದಲಾಗಲು ಆ ಕವಚಗಳ ಜೋಡಣೆಯನ್ನು ಬಿರಿಯುವಂತೆ ಕತ್ತರಿಸಿ ಅನೇಕರು ಶತ್ರುಸಮೂಹದೊಡನೆ ಕಾದಿದರು. ೩೦. ಭುಗಭುಗನೆ ಸೀಳಿಕೊಂಡು ಹಾಯುವ ಬಿಸಿರಕ್ತದ ಪ್ರವಾಹವನ್ನು

ವ॥ ಅಂತೆರಡುಂ ಬಲದ ದಱಿಂಗಳ್ ಕೋಲಾಟಮಾಡುವಂತೆ ಕಿಱಿದಾನುಂ ಬೇಗಂ ತಟ್ಟುಪೊಟ್ಟೆಂದು ಕೋಲ್ಗುಟ್ಟಿ ಪತ್ತೆಂಟು ಸಾಸಿರ ಕುದುರೆಯಟ್ಟೆಯುಮೋಱೆಂಟು ನೆತ್ತರ ಕಡಲ್ ಕಡಲನಟ್ಟೆಯುಂ ಕಾದಿ ಬಸಮೞಿದು ಪೆಱಿಪಿಂಗಿ ನಿಂದಾಗಳ್ ಪ್ರಳಯದುರಿಯನುರುಳಿ ಮಾಡಿದಂತಾನುಂ ಬಡವಾಗ್ನಿಯನನುವಿಸಿದಂತಾನುಂ ಬಱಿಸಿಡಿಲ ಕಿಡಿಗಳ ಬಳಗಮನೊಳಗು ಮಾಡಿದಂತಾನುಂ ಗೊಂದಣಿಸಿ ಸಂದಣಿಸಿ ನಿಂವಣಿಯನೆರಡುಂ ಬಲದ ಕಡಿತಲೆಯ ನಾಯಕರ್ ಕೆಯ್ಗೊಂಡು ಬಳ್ಳುಗೆಡೆದೆಕ್ಕೆವಾಜುವಾಜೆ ಪಲಗೆದಾಡಿ ಗೂಳಿಸೊರ್ಕಿ ಮಾರ್ಕೊಂಡು ಕಾದೆ-

ಕಂ॥ ಪುಸಿ ನಸುವಂಚನೆ ನೋರ್ಪನು
ವಸಿದಗಲಿತು ತಕ್ಕುದಕ್ಕು ಪಗೆ ಕೆಯ್ಬಗೆ ಕೆ ।
ಯ್ಯುಸುರಿ ನುಸುಳೆಂಬ ಕೇಣದ
ಕುಸುರಿಯನಱಿದಿಱಿದು ಮೆಱೆದು ನೆಱೆದುಱಿದರೆಬರ್ ॥* ೮೧

ಬಱಿಸಿಡಿಲೆಱಪಂತಿರೆ ಬಂ
ದೆಱಗಿದರಂ ತಳ್ತು ಬಾಳ ಕೀಲ್ಗೊನೆಯಿಂ ತ
ಳ್ತಱಿವಱಿದುಬ್ಬರಮೆಂಬಿವ
ನಱಿದಿಱಿದಿರ್ ಪೆಣಬಣಂಬೆಗಳ್ ನೆಗೆವಿನೆಗಂ ॥ ೮೨

ನೆಲಕ್ಕೆ ಬೀಳಲು ಬಿಡದಂತೆ ಹದ್ದುಗಳು ಮೇಲಕ್ಕೆ ಹಾರಿ ಕುಡಿಯುತ್ತಿದ್ದುವು. ಒಂದೇ ಸಲ ಹೊಡೆದ ಹೊಡತದಿಂದ ಮೋಡಗಳ ಸಂದುಗಳೊಳಕ್ಕೆ ಹಾರಿ ಸಿಕ್ಕಿಕೊಂಡಿರುವ ತಲೆಗಳು ಜೇನಿನ ಗೂಡುಗಳನ್ನೇ ಹೋಲಿದುವು. ಕುದುರೆಯ ಸೈನ್ಯದಲ್ಲಿ ಕಾಳಗವು ಎಷ್ಟು ಆಶ್ಚರ್ಯಕರವಾಯಿತೋ? ವ॥ ಹಾಗೆ ಎರಡು ಸೈನ್ಯದ ಸಾಮಾನ್ಯದಳಗಳೂ ಕೋಲಾಟವಾಡುವ ಹಾಗೆ ಸ್ವಲ್ಪ ಹೊತ್ತು ಥಟ್ ಪಟ್ ಎಂದು ಬಾಣಗಳಿಂದ ಹೊಡೆದಾಡಲು ಹತ್ತೆಂಟುಸಾವಿರ ಕುದುರೆಯ ಶರೀರಗಳು ನಾಶವಾದವು. ಏಳೆಂಟು ಸಮುದ್ರಗಳು ಸಮುದ್ರವನ್ನೂ ಮುಂದಕ್ಕೆ ನೂಕುವಂತೆ ಹರಿದುವು. ಅಶ್ವಾರೋಹಿಗಳು ಕಾದಿ ಶಕ್ತಿಗುಂದಿ ಹಿಂಜರಿದು ನಿಂದಾಗ ಎರಡು ಪಕ್ಷದ ಕತ್ತಿಯ ನಾಯಕರು ಪ್ರಳಯ ಕಾಲದ ಉರಿಯನ್ನು ಉಂಡೆಮಾಡಿದ ಹಾಗೂ ಬಡಬಾಗ್ನಿಯನ್ನು ಒಟ್ಟುಗೂಡಿಸಿದ ಹಾಗೂ ಬರಸಿಡಿಲಿನ ಕಿಡಿಗಳ ಸಮೂಹವನ್ನು ತನ್ನಲ್ಲಿ ಸೇರಿಕೊಂಡ ಹಾಗೂ ಗುಂಪಾಗಿ ಒಂದುಕೂಡಿ ನಿಂತ ಸೇನೆಯ ಸಾಲನ್ನು ವಹಿಸಿಕೊಂಡು ನರಿಯಂತೆ ಕೂಗಿ ಒಂದೇ ನೆಗೆತವನ್ನು ಹಾರಿ ಕತ್ತಿಗಳನ್ನು ಝಳಪಿಸಿ ಸೊಕ್ಕಿನಿಂದ ಪ್ರತಿಭಟಿಸಿ ಕಾದಿದರು. ೮೧. ವುಸಿ, ನಸುವಂಚನೆ, ನೋರ್ಪನುವಿಸಿದಗಲಿತು, ತಕ್ಕುದಕ್ಕು ಪಗೆ, ಕಯ್ಬಗ, ಕಯ್ಯುಸುರಿ, ನುಸುಳು, ಎನುವ ಮಾತ್ಸರ್ಯದ ಸೂಕ್ಷ್ಮ ವಿವರವನ್ನು ತಿಳಿದು ದಕ್ಷತೆಯಿಂದ ಹೊಡೆದು ಕೆಲವರು ಉತ್ಸಾಹಶೂನ್ಯರಾಗದೆ ಹೊಯ್ದಾಡಿದರು. ೮೨. ಬರಸಿಡಿಲು ಮೇಲೆ ಬೀಳುವಂತೆ ಮೇಲೆ ಬಿದ್ದವರನ್ನು ಸಂಧಿಸಿ ಕತ್ತಿಯ ಕೆಳತುದಿಯಿಂದ ಚೂರುಚೂರಾಗಿ ತರಿದು ಉಬ್ಬರ (?) ವೆಂಬುದನ್ನು ತಿಳಿದು

* ಈ ಪದ್ಯದಲ್ಲಿ ಸುರಗಿಕಾಳಗದ ಹಲವು ಪರಿಭಾಷಾ ಶಬ್ದಗಳಿವೆ. ಅವುಗಳ ಅರ್ಥ ಸ್ಪಷ್ಟವಲ್ಲದುದರಿಂದ ಪದ್ಯದ ಅರ್ಥವೂ ಅಸ್ಪಷ್ಟ.

ಚಾರಿಸಿ ಬಾಳಾಗಮಮವ
ತಾರಂ ಗೆಯ್ದಂತೆ ಕಾಲದಂತಕನನೆ ಪೋ ।
ಲ್ತಾರುತ್ತುಂ ಕವಿವದಟರ
ನೋರೊಂದೋರೊಂದೆವೊಯ್ದು ಕೊಂದರ್ ಪಲರಂ ॥ ೮೩

ಬಾಳ್ವಾಳ್ಗಳ ಘಟ್ಟಣೆಯೊಳ್
ಬಳ್ವಳ ಬಳೆದೊಗೆದು ನೆಗೆದ ಕಿಡಿಗಳ ಬಂಬ ।
ಲ್ಗಳ್ವೆರಸು ಪೊಳೆದು ನೆಗೆದುದು
ಬಾಳ್ವೊಗೆ ಕಾಱಮುಗಿಲ್ ಬಳ್ಳಿಮಿಂಚಿನಿಂದುಳ್ಳುವವೋಲ್ ॥ ೮೪

ತಲೆ ನೆಲದೊಳುರುಳ್ದೊಡಂ ಮೆ
ಯ್ಗಲಿಯೊರ್ವಂ ಪಿಡಿದು ತಲೆಯನಿಟ್ಟಟ್ಟೆಯೊಳ ।
ಗ್ಗಲಿಸಿದ ಮುಳಿಸಿಂ ಮಾಟದ
ತಲೆಯಿಟ್ಟಾಡುವನನಿನಿಸು ಪೋಲ್ತನುಗೆಯ್ದಂ ॥ ೮೫

ವ॥ ಅಂತಣಿ ಮಣಿಯದೆ ಸೆಣಸಿ ಪೊಣರ್ದು ಕಿಱಿದುಪೊಳ್ತು ಕಾದಿ ನಿಂದಾಗಳ್-

ಉ॥ ಮಾರುತ ಘಾತ ಸಂಚಳಿತ ಕೇತು ಸಮೂಹಮುದಗ್ರ ಚಕ್ರ ಚೀ
ತ್ಕಾರಮುದಾರ ವೀರಭಟ ಸಿಂಹನಿನಾದ ವಿಮಿಶ್ರಿತೋತ್ಕಟ ।
ಜ್ಯಾರಾವಮಂಬರತರಮನಳ್ಳಿಱಿದವ್ವಳಿಪನ್ನೆಗಂ ಶಾರಾ
ಸಾರದಗುರ್ವು ಪರ್ವಿನಿಲೆ ತಾಗಿದುವುಗ್ರರಥಂ ರಥಾಳಿಯೊಳ್ ॥ ೮೬

ಹೆಣದ ರಾಶಿಗಳು ಬೀಳುವವರೆಗೆ ಹೊಡೆದಾಡಿದರು. ೮೩. ಶಸ್ತ್ರಶಾಸ್ತ್ರವೇ ಅವತಾರಮಾಡಿದ ಹಾಗೆ ಕತ್ತಿಯನ್ನು ಝಳಪಿಸಿ ಪ್ರಳಯಕಾಲದ ಯಮನ ಹಾಗೆ ಆರ್ಭಟ ಮಾಡುತ್ತ ಮೇಲೆ ಬೀಳುವ ಪರಾಕ್ರಮಶಾಲಿಗಳನೇಕರನ್ನು ಒಂದೊಂದೇ ಸಲ ಹೊಡೆದು ಕೊಂದರು. ೮೪. ಕತ್ತಿಕತ್ತಿಗಳ ತಗಲುವಿಕೆಯಿಂದ ಹುಟ್ಟಿ ಹೆಚ್ಚಿ ಮೇಲಕ್ಕೆ ಹಾರಿದ ಕಿಡಿಗಳ ಸಮೂಹದಿಂದ ಕೂಡಿದ ಕತ್ತಿಯ ಹೊಗೆಯು ಮಳೆಗಾಲದ ಮೋಡವು ಬಳ್ಳಿಮಿಂಚಿನಿಂದ ಪ್ರಕಾಶಿಸುವ ಹಾಗೆ ಹೊಳೆದು ಮೇಲಕ್ಕೆ ಹಬ್ಬಿತು. ೮೫. ತಲೆಯು ನೆಲದಲ್ಲಿ ಉರುಳಿದರೂ ಶೂರನೊಬ್ಬನು ಆ ತಲೆಯನ್ನು ಹಿಡಿದು ಮುಂಡದಲ್ಲಿಟ್ಟುಕೊಂಡು ಅಧಿಕವಾದ ಕೋಪದಿಂದ ಕೃತಕವಾದ ತಲೆಯನ್ನು ಧರಿಸಿ ಆಟವಾಡುವವನನ್ನು ಸ್ವಲ್ಪಮಟ್ಟಿಗೆ ಅನುಕರಿಸಿ ಕಾದಿದನು. ವ॥ ಹಾಗೆ ಸೇನಾಸಮೂಹವು ಭಯಪಡದೆ ಮತ್ಸರಿಸಿ ಜಗಳವಾಡಿ ಸ್ವಲ್ಪ ಕಾಲ ಕಾದಿ ನಿಂತರು. ೮೬. ಗಾಳಿಯ ಹೊಡೆತದಿಂದ ಚಲಿಸುತ್ತಿರುವ ಬಾವುಟಗಳ ಸಮೂಹವೂ ಎತ್ತರವಾದ ಚಕ್ರಗಳ ಚೀತ್ಕಾರ ಶಬ್ದವೂ ಶ್ರೇಷ್ಠರಾದ ವೀರಭಟರ ಸಿಂಹನಾದದಿಂದ ಕೂಡಿದ ಅತ್ಯಧಿಕವಾದ ಬಿಲ್ಲಿನ ಹೆದೆಯ ಟಂಕಾರಧ್ವನಿಯೂ ಆಕಾಶಪ್ರದೇಶದ ಒಳಭಾಗವನ್ನು ನಡುಗುವಂತೆ ಮಾಡಿ ಪ್ರವೇಶಿಸಿದುವು. ಬಾಣದ ಮಳೆಯು ವಿಶೇಷವಾಗಿ ಹಬ್ಬಿ ಹರಿಯಿತು. ಭಯಂಕರವಾದ ರಥಗಳು ರಥಸಮೂಹದೊಡನೆ ತಾಗಿದುವು.

ವ|| ಅಂತು ತಾಗಿದಾಗಳ್

ಚಂ|| ಕುದುರೆಯ ಬಣ್ಣದಿಂ ರಥದ ತೋರ್ಕೆಯಿನೆತ್ತಿದ ಚಿತ್ರಕೇತು ವೃಂ
ದದ ಕುಱುಪಿಂದುದಗ್ರ ರಥಚೋದಕ ಚಿಹ್ನದಿನಾತನೀತನೆಂ ।
ಬುದನಱಿದೊರ್ವರೊರ್ವರನೆ ಮಚ್ಚರದಿಂ ಗಱಿಸನ್ನೆಗೆಯ್ದಿದಿ
ರ್ಚಿದ ಪದದೊಳ್ ಪತತ್ರಿಮಯಮೆಂಬಿನಿತಾಯ್ತು ಸಮಸ್ತ ದಿಕ್ತಟಂ ॥ ೮೭

ಕಂ|| ಪರಶು ಶರ ನಿಕರದಿಂ ಕು
ಮ್ಮರಿಗಡಿದವೊಲೊಡನೆ ಕಡಿಯೆ ರಥಿಗಳ್ ರಥದಿಂ ।
ಧರೆಗಿೞಿದು ವಿರಥರತಿರಥ
ರರೆಬರ್ ಮೇಲ್ವಾಯ್ದು ರಥಿಗಳಂ ಸುರಿಗಿಱಿದರ್ ॥ ೮೮

ತೇರಂ ಪಾಯಿಸಿ ನೋಯಿಸಿ
ಪಾರುವ ಕುದುರೆಗಳನರೆಬರೆರ್ದೆಯುರಿಯೆಚ್ಚರ್ ।
ಸಾರಥಿಯ ರಥಿಯ ತಲೆಗಳ
ನೋರೊಂದಸ್ತ್ರದೊಳೆ ಪಾಱೆ ಜೀಱೀಟ್ವೆನೆಗಂ ॥ ೮೯

ನೆತ್ತರ ಕೆಸಱೊಳ್ ಗಾಲಿಗ
ಳೆತ್ತಂ ತಳರದೆ ಜಗಿಲ್ತು ನಿಲೆ ಧರೆಗಿೞಿದಾ ।
ರ್ದೆತ್ತಿ ಪರಿಯಿಸಿದರೇಂ ಮೆ
ಯ್ವೆತ್ತುದೊ ರಥಕಲ್ಪಮಲ್ಲಿ ಸೂತರ್ ಕೆಲಬರ್ ॥ ೯೦

ವ|| ಅಂತುಭಯ ವರೂಥಿನಿಯ ವರೂಥಂಗಳ್ ಮಲ್ಲಾಮಲ್ಲಿಯಾಗೆ ಕಾದುವಾಗಳ್-

ವ|| ಹಾಗೆ ತಾಗಿದಾಗ-೮೭. ಕುದುರೆಯ ಬಣ್ಣದಿಂದಲೂ ರಥಗಳ ತೋರಿಕೆಯಿಂದಲೂ ಎತ್ತಿ ಕಟ್ಟಿರುವ ಚಿತ್ರಖಚಿತವಾದ ಧ್ವಜಗಳ ಗುರುತಿನಿಂದಲೂ ಶ್ರೇಷ್ಠರಾದ ಸಾರಥಿಗಳ ಚಿಹ್ನೆಗಳಿಂದಲೂ ಪರಸ್ಪರ ಪರಿಚಯ ಮಾಡಿಕೊಂಡು (ಗುರುತು ಹಿಡಿದು) ಒಬ್ಬರನ್ನೊಬ್ಬರು ಮತ್ಸರದಿಂದ ಬಾಣದ ಗರಿಯ ಮೂಲಕ ಸನ್ನೆಮಾಡಿ ಎದುರಿಸಿದ ಸಂದರ್ಭದಲ್ಲಿ ಸಮಸ್ತವಾದ ದಿಕ್ತಟವೂ ಬಾಣಮಯವೆನ್ನುವ ಹಾಗಾಯಿತು. ೮೮. ಕೊಡಲಿಯಾಕಾರದ ಬಾಣಗಳ ಸಮೂಹದಿಂದ ಕಾಡಿನ ಮರಗಳನ್ನು ತರಿಯುವಂತೆ ತಕ್ಷಣವೇ ತರಿದುಹಾಕಲು ರಥದಲ್ಲಿದ್ದವರು ಭೂಮಿಗಿಳಿದು ರಥವಿಲ್ಲದ ಅನೇಕ ಅತಿರಥರ ಮೇಲೆ ಬಿದ್ದು ರಥದಲ್ಲಿದ್ದವರನ್ನು ಕತ್ತಿಯಿಂದ ಕತ್ತರಿಸಿದರು. ೮೯. ಕೆಲವರು ತೇರನ್ನು ಹರಿಯಿಸಿ ಹಾರುತ್ತಿರುವ ಕುದುರೆಗಳನ್ನು ನೋಯಿಸಿ ಸಾರಥಿಯ ಮತ್ತು ರಥದೊಳಗಿರುವವನ ತಲೆಗಳನ್ನು ಒಂದೇ ಬಾಣದಿಂದ ಹಾರಿ ಜೀರೆಂದು ಶಬ್ದ ಮಾಡುವ ಹಾಗೆ ಹೊಡೆದರು. ೯೦. ರಕ್ತದ ಕೆಸರಿನಲ್ಲಿ ಚಕ್ರಗಳು ಹೂತುಹೋಗಿ ಯಾವ ಕಡೆಯೂ ಚಲಿಸದೆ ಅಂಟಿಕೊಂಡು ನಿಲ್ಲಲು ಭೂಮಿಗಿಳಿದು ಆರ್ಭಟಮಾಡಿ ಕೆಲವರು ಸೂತರು ಎತ್ತಿ ಹರಿಯುವ ಹಾಗೆ ಮಾಡಿದರು. ಆ ಸಮಯದಲ್ಲಿ ಅಲ್ಲಿ ಅವರ ರಥಕಲ್ಪಕೌಶಲವು ಅದ್ಭುತವಾಗಿದ್ದಿತು. ವ|| ಹಾಗೆ ಎರಡುಸೈನ್ಯದ ತೇರುಗಳು ಪರಸ್ಪರ ಎದುರೆದುರಿಗೆ ಯುದ್ಧ

ಮ॥ ಉಡಿದಿರ್ದಚ್ಚುಗಿದೀಸು ತಗ್ಗಿದ ನೊಗಂ ಜೀಜಿಟ್ಟಿ ಚಕ್ರಂ ಸಿಡಿಲ್
ಪೊಡೆದಂತೊರ್ಮೆಯೆ ಸೂಸಿ ಪಾಱಿದ ಮಡಂ ಸುಗ್ಗಾದ ಕೀಲ್ ಸಾಯಕಂ ।
ನಡೆ ನೊಂದೆಯ್ದೆ ಸುರುಳ್ದುರುಳ್ದ ತುರಗಂ ಸುರ್ಕಿರ್ದ ಸೂತಂ ಕಡಲ್
ಕಡಲಂ ಮುಟ್ಟೆ ತೆರಳ್ದ ನೆತ್ತರ ಪೊನಲ್ ಕಣ್ಗೊಂಡುದುಗ್ರಾಜಿಯೊಳ್ ॥ ೯೧

ವ॥ ಅಂತು ಪತ್ತುಂಟು ನೆತ್ತರ ಕಡಲ್ ಕಡಲನಟ್ಟೆಯುಂ ವರೂಥಯೂಥಂಗಳಳ್ಳಿ ಮೆಳ್ಳಿದಂತಾದಾಗಳ್-

ಉ॥ ಇಕ್ಕಿದ ಲೋಹವಕ್ಕರೆಯ ಕರ್ಪುಗಳಿಂ ಕವಿತರ್ಪ ವಿಂಧ್ಯ ಶೈ
ಲಕ್ಕೆಣೆಯಾಗೆ ಜೋದರಿಸುವಂಬಿನ ಬಲ್ಸರಿ ತಿಣ್ಣಮಾಗಿ ಕೈ ।
ಮಿಕ್ಕು ವಿರೋಧಿ ಸಾಧನ ಘಟಾಳಿಯನೋಡಿಸಲಾಗಳಾರ್ದು ಪ
ಟ್ಟಕ್ಕಿದರುಗ್ರ ಸಿಂಧುರ ಘಟಾವಳಿಯಂ ಮುಳಿಸಿಂ ನಿಷಾದಿಗಳ್ ॥ ೯೨

ಶಾ॥ ಆದಿತ್ಯಂ ಮಸುಳ್ವನ್ನೆಗಂ ಧ್ವಜ ಘಟಾಟೋಪಂಗಳಿಂದಂ ಲಯಾಂ
ಭೋದಂಗಳ್ ಕವಿವಂತೆವೋಲ್ ಕವಿವುದುಂ ಕಾಲ್ದಾಘು ಕಾಲ್ದಾಳಿನೊಳ್ ।
ಜೋದರ್ ಜೋದರೊಳಾನೆಯಾನೆಯೊಳಗುರ್ವಪ್ಪನ್ನೆಗಂ ಕಾದೆ ಕ
ಣ್ಗಾದಂ ಚೆಲ್ವೆಸೆದತ್ತು ಮೂಱು ನೆಲೆಯಿಂ ಮಾದ್ಯದ್ಗಜೇಂದ್ರಾಹವಂ ॥ ೯೩

ವ॥ ಅಂತಾ ದಂತಿಘಟೆಗಳನಾರೋಹಕರ್ ತೋಱೆಕೊಟ್ಟೊಂದೊಂದರ್ಕೆ ಮೊಗಂಬುಗಿಸಿದಾಗಳುಭಯವ್ಯಾಳದಂತಿ ವಧ್ಯಕ್ರಮಂಗಳೊಳ್ ಭಾರ್ಗವರ್ ಸುರಿಗಿಱಿವಂತಿಱಿಯೆ

ಮಾಡುತ್ತಿರಲು ೯೧. ಒಡೆದುಹೋದ ಅಚ್ಚಿನ ಮರವೂ ನಾಶವಾದ ಈಟಿನ ಮರವೂ ತಗ್ಗಿಹೋದ ನೊಗವೂ ಜೀರೆಂದು ಶಬ್ದಮಾಡುತ್ತಿರುವ ಚಕ್ರಗಳೂ ಸಿಡಿಲು ಹೊಡೆದ ಹಾಗೆ ಒಂದೇ ಸಲ ಹಾರಿದ ಪಾರೆಯ ಮರವೂ ಜಜ್ಜಿಹೋದ ಕೀಲೂ, ಬಾಣವು ನಾಟಲಾಗಿ ನೊಂದು ಸಂಪೂರ್ಣವಾಗಿ ಸೊರಗಿಕೊಂಡು ಬಿದ್ದ ಕುದುರೆಯೂ ಸಮುದ್ರವು ಸಮುದ್ರವನ್ನು ಮುಟ್ಟುವಂತೆ ಹರಿದ ರಕ್ತಪ್ರವಾಹವೂ ಯುದ್ಧಭೂಮಿಯಲ್ಲಿ ಭಯಂಕರವಾಗಿ ಕಂಡವು. ವ॥ ಹಾಗೆ ಹತ್ತೆಂಟು ಸಮುದ್ರವನ್ನು ಹಿಮ್ಮೆಟ್ಟಿಸಲು ರಥಸಮೂಹಗಳು ಸಂಪೂರ್ಣವಾಗಿ ನಾಶವಾದವು. ೯೨. ತೊಡಿಸಿದ ಗುಳದಿಂದ ಕೂಡಿದ ಕಪ್ಪುಬಣ್ಣದ ಆನೆಗಳು ಮೇಲೆ ಕವಿದುಬೀಳುವ ವಿಂಧ್ಯಪರ್ವತಕ್ಕೆ ಸಮಾನವಾಗಿರಲು ಮಾವಟಿಗರು ಪ್ರಯೋಗಿಸುವ ಬಾಣದ ಬಲವಾದ ಮಳೆಯು ಅಧಿಕವಾಗಿ ಕೈಮೀರಿ ಶತ್ರುಪಕ್ಷದ ಆನೆಯ ಸಮೂಹವನ್ನು ಓಡಿಸಲು ಆಗ ಘಟ್ಟಿಯಾಗಿ ಕೂಗಿಕೊಂಡು ಮಾವಟಿಗರು ಭಯಂಕರವಾದ ಆನೆಯ ಸಮೂಹವನ್ನು ಛೂಬಿಟ್ಟರು. ೯೩. ಸೂರ್ಯನು ಕಾಂತಿಹೀನನಾಗುವ ಹಾಗೆ ಧ್ವಜದಿಂದ ಕೂಡಿದ ಆನೆಗಳು ವಿಜೃಂಭಣೆಯಿಂದ ಪ್ರಳಯಕಾಲದ ಮೋಡಗಳು ಮುತ್ತುವ ಹಾಗೆ ಮುತ್ತಲು ಪದಾತಿ ಸೈನ್ಯವು ಪದಾತಿಗಳೊಡನೆಯೂ ಮಾವಟಿಗರು ಮಾವಟಿಗರೊಡನೆಯೂ ಭಯವುಂಟಾಗುವ ಹಾಗೆ ಕಾದುತ್ತಿರಲು ಆ ಮದ್ದಾನೆಗಳ ಕಾಳಗವು ಮೂರು ಅವಸ್ಥೆಗಳಲ್ಲಿಯೂ ಕಣ್ಣಿಗೆ ಸುಂದರವಾಗಿದ್ದಿತು. ವ॥ ಹಾಗೆ ಆ ಮಂದೆಯ ಸಮೂಹಗಳನ್ನು ಮೇಲಿದ್ದ ಮಾವಟಿಗರು ಛೂಬಿಟ್ಟು ಒಂದಕ್ಕೊಂದಕ್ಕೆ

ಸೂಸುವ ಕೆನ್ನೆತ್ತರ್ ಕಟಿಲ್ಲುದಿರ್ವ ಸಕ್ಕದ ಸಿಪ್ಪುಗಳುಂ ಸಿಡಿಲ್ದು ಜೀಱಿೀಲ್ವ ಕೋಟ್ಬುಳುಮುಗುರ್ವಂ ಪಡೆಯೆ–

ಚಂ॥ ನಡುವ ಸರಲ್ಗೆ ಮೆಯ್ಯೊಳಗಡಂಗುವ ಸಂಕುಗೆ ದಿಂಕುಗೊಳ್ವ ಕ
ಕ್ಕಡೆಗಿದಿರುರ್ಚುವಿಟ್ಟಿಗಿದಿರಾನೆಯ ಕೋಟ್ಬುಳ ಕೋಳ್ಗೆ ನೊಂದು ಬಾ ।
ಯ್ಬಿಡದಿನಿಸಪ್ಪೊಡಂ ಪೆಳಱದಳ್ಕದೆ ಪಾವಿನಲಿಟ್ಟವೋಲ್ ಪೊಡ
ರ್ಪುಡುಗದೆ ಬಿಟ್ಟುವಿರ್ದ ನೆಲೆಯಿಂ ಕೆಲವುನ್ಮದ ಗಂಧಸಿಂಧುರಂ ॥ ೯೪

ಕಂ॥ ಪಾಱುವ ಪಾಱುಂಬಳೆ ಕೊಳೆ
ಜೀಱಿಟ್ಟಂಬರಕೆ ತಲೆ ಸಿಡಿಲ್ದೊಡಮಾ ಕಾ ।
ಯ್ಪಾಱದೆ ಹರಣಂಗೆಯ್ದುವು
ಜಾಱಲ್ದದೆ ಜೋದರಟ್ಟೆಗಳ್ ಕೆಲವಾಗಳ್ ॥ ೯೫

ಚಂ॥ ಕಣಕೆಸೆ ಚಕ್ರತೀವ್ರ ಹತಿಯಿಂ ತಲೆ ಪೋದೊಡೆ ಜೋದರಟ್ಟೆ ಸಂ
ದಣಿಸಿದ ಬಂಧದಿಂ ಬಿಸುಗೆಯೊಳ್ ನೆಲಸಿರ್ದೆಸೆದಾಡೆ ನಟ್ಟ ಕೂ ।
ರ್ಗಣೆವೆರಸಿರ್ದ ಕೂರ್ಗಣೆಗಳುಚ್ಚಳಿಸುತ್ತಿರೆ ಸುಯ್ದು ಪುಣ್ಣತೀ
ಥಿಣಿಗಳಿನಂದಗುರ್ವುವೆರಸಾಡಿದುವೊಂದೆರಡಾನೆಯಟ್ಟೆಗಳ್ ॥ ೯೬

ವ॥ ಅಂತೆರಡುಂ ಬಲದ ಕರಿಘಟೆಗಳೊಂದೊಂದಱೊಳ್ ತಾಗಿ ತಟ್ಟಿಱಿಯೆ ಬಿಸುನೆತ್ತರರ್ಬಿಗಳುರ್ಬಿ ಪಾಯೆ ಪೇರರ್ವಿಗಳ್ವೆರಸು ಜಾಜಿನ ಪರ್ವತಗಳಂತೆ ಕೆಡೆವಟ್ಟಿ ತಟ್ಟೆದಾಗಳ್–

ವಿದಾಯಮಾಡಿಸಿದಾಗ ಎರಡು ಕಡೆಯ ತುಂಟಾನೆಗಳೂ ಕೊಲ್ಲುವ ವಿಧಾನಗಳಲ್ಲಿ ಧನುರ್ಧರರು ಕತ್ತಿಯಿಂದ ಇರಿಯುವಂತೆ ಇರಿಯಲು ಚೆಲ್ಲುವ ರಕ್ತವೂ ಸಡಿಲವಾಗಿ ಕೆಳಗೆ ಬೀಳುವ ಕಟವಾಯಿಚಪ್ಪುಗಳೂ ಜೀರೆಂದು ಸಿಡಿಯುವ ಕೊಂಬುಗಳೂ ಭಯವನ್ನುಂಟುಮಾಡಿದುವು. ೯೪. ಶರೀರದೊಳಕ್ಕೆ ನಾಟಿಕೊಳ್ಳುವ ಬಾಣಗಳಿಗೂ ಮೆಯ್ಯೊಳಕ್ಕೆ ಹೋಗಿ ಅಡಗಿಕೊಳ್ಳುವ ಕಠಾರಿಗಳಿಗೂ ಹಾರಿ ಬರುವ ಮುಳ್ಳು ಕೋಲು ಗಳಿಗೂ ಎದುರಾಗಿ ಚುಚ್ಚಿ ಬರುತ್ತಿರುವ ಈಟಿಗಳಿಗೂ ಆನೆಯ ಕೊಂಬುಗಳ ತಿಪಿತಕ್ಕೂ ನೊಂದು ಕೂಗಿಕೊಳ್ಳದೆ ಸ್ವಲ್ಪವೂ ಪದರದೆ ಶಕ್ತಿಗುಂದದೆ ಹಾವಿನಿಂದ ತೊಡೆದ ಹಾಗೆ ಸಾಮರ್ಥ್ಯವನ್ನು ಕಡಿಮೆಮಾಡಿಕೊಳ್ಳದೆ ಕೆಲವು ಮದ್ದಾನೆಗಳು ತಾಪಿದ್ದ ಸ್ಥಳ ದಿಂದಲೇ ಉರುಳಿದುವು. ೯೫. ಹಾರಿ ಬರುವ ಚಕ್ರಾಯುಧವು ತಲೆಗಳನ್ನು ಕತ್ತರಿಸಿ ಜೀರೆಂದು ಶಬ್ದಮಾಡುತ್ತ ಆಕಾಶಕ್ಕೆ ಸಿಡಿದರೂ ಮಾವಟಿಗರ ಕೆಲವು ಮುಂಡಗಳು ಆಗ ಉತ್ಸಾಹಗುಂದದೆ ಹಿಂಜರಿಯದೆ ಶತ್ರುಗಳ ಪ್ರಾಣಾಪಹಾರ ಮಾಡಿದುವು. ೯೬. ಹರಿತವಾದ ಚಕ್ರಾಯುಧದ ಪೆಟ್ಟಿನಿಂದ ತಲೆಗಳು ಕಣಕ್ಕೆಂದು ಕತ್ತರಿಸಿ ಹೋದರೂ ಮಾವಟಿಗರ ಮುಂಡಗಳು ಗುಂಪಾಗಿ ಸೇರಿ ಅಂಬಾರಿಯಲ್ಲಿಯೇ ಇದ್ದು ಸೊಗಸಾಗಿ ನೆಗೆದು ಕುಣಿದುವು. ಹರಿತವಾದ ಬಾಣಗಳು ನಾಟಿಕೊಂಡಿದ್ದರೂ ತೀವ್ರ ಬಾಣಗಳು ಮೇಲಕ್ಕೆದ್ದು ಹಾರುತ್ತಿದ್ದರೂ ಆರುತ್ತಿದ್ದ ಹುಣ್ಣಿನ ಸಮೂಹಗಳು ಭಯಂಕರವಾಗಿ ಕಾಣುತ್ತಿದ್ದರೂ ಒಂದೆರಡು ಆನೆಯ ಮುಂಡಗಳು ಅದ್ಭುತವಾಗಿ ಕುಣಿದಾಡಿದುವು. ವ॥ ಹಾಗೆ ಎರಡು ಸೈನ್ಯದ ಆನೆಯ ಸಮೂಹಗಳು ತಗುಲಿ

ಕಂ॥ ಆನಿರೆಯೇನಿಱಿವುದು ಗಡ
ಮೀ ನಾಲ್ಕುಂ ಬಲಮಿದಲ್ತೆ ಪರಿಭವಮೆನಗಂ ।
ದೇನುಂ ಮಾಣದೆ ಭೀಮನ
ನೂನಬಲಂ ಬಂದು ತಾಗಿದಂ ಕುರುಬಲದೊಳ್ ॥ ೯೭

ವ॥ ಅಂತು ಕುರುಬಲದ ಕರಿಘಟೆಗಳಂ ನುಂಗುವಂತೆ ದೆಸೆದೆಸೆಗೆ ಮಿಳಿರ್ದು ಮಿಳ್ಳಿಸಿದ ಸಿಂಗದ ಪಟಿವಿಗೆಯುಂ ಕುರುಬಲಕ್ಕೆ ಮಿೞ್ತು ಪಲ್ಲೊರೆವಂತೆ ಮೊರೆದು ಪರಿವ ತನ್ನ ಕಿಸುವೊನ್ನ ರಥಮುಂ ಭಯಂಕರಾಕಾರಮಾಗೆ ಪಗೆವರ ಗಂಟಲನೊತ್ತುವಂತೆ ಪೌಂಡ್ರಮೆಂಬ ಶಂಖಮನೊತ್ತಿ ಮುಂದೊಡ್ಡಿದೊಡ್ಡೆಲ್ಲಮನಂಬಿನ ಬಂಬಲೊಳೆ ಪಡಲ್ವಡಿಸುತ್ತುಂ ಬರ್ಪ ಭೀಮಸೇನಂಗೆ ದುರ್ಯೋಧನನದಿರದಿದಿರಾಂತಾಗಳ್-

ಉ॥ ಎಂತಿದಿರಾಂತೆಯಂತೆ ಕಲಿಯಾಗೊಳಸೋರದಿರೆಂದು ಭೀಮನೋ
ರಂತೆ ಕನಲ್ದು ತಿಣ್ಣಮಿಸೆ ಪಾಯ್ವ ಸರಲ್ಗಳನೆಯ್ದಲೀಯದಾಂ ।
ತಾಂತು ನಿರಂತರಂ ತಱಿದು ಸೂತನನಾತನ ವಾಜಿಯಂ ಮಹೀ
ಶಂ ತೆಗೆದೆಚ್ಚನಚ್ಚ ಬಿಸುನೆತ್ತರ ಸುಟ್ಟುರೆ ಸೂಸುವನ್ನೆಗಂ ॥ ೯೮

ಅಪ್ಪಳಿಸಿ ಹೊಡೆಯಲು ಬಿಸಿರಕ್ತದ ಜರಿಗಳು ಉಬ್ಬಿ ಹರಿದುವು. ದೊಡ್ಡ ಝರಿಗಳಿಂದ ಕೂಡಿದ ಕೆಂಪುಕಲ್ಲಿನ ಬೆಟ್ಟಗಳಂತೆ ಆನೆಗಳು ಕೆಳಗೆ ಬಿದ್ದು ನಾಶವಾಗಿ ರಾಶಿಯಾದುವು. ೯೭.'ಈ ಚತುರಂಗಬಲವು ನಾನಿದ್ದರೂ ಯುದ್ಧ ಮಾಡುತ್ತದೆಯಲ್ಲವೇ? ಇದಲ್ಲವೇ ನನಗೆ ಅವಮಾನಕರ' ಎಂದು ಯಾವುದನ್ನೂ ಲಕ್ಷಿಸದೆ ಸ್ವಲ್ಪವೂ ಕಡಿಮೆಯಿಲ್ಲದ ಶಕ್ತಿಯುಳ್ಳ ಭೀಮನು ಕೌರವಸೈನ್ಯವನ್ನು ಬಂದು ತಾಗಿದನು. ವ॥ ಕೌರವಸೈನ್ಯದ ಆನೆಗಳ ಸಮೂಹವನ್ನು ನುಂಗುವ ಹಾಗೆ ದಿಕ್ಕುದಿಕ್ಕಿಗೂ ಕಂಪಿಸಿ ಚಲಿಸುತ್ತಿದ್ದ ಸಿಂಹಧ್ವಜವೂ ಕೌರವಸೈನ್ಯಕ್ಕೆ ಮೃತ್ಯುದೇವತೆಯೇ ಹಲ್ಲುಕಡಿಯುವಂತೆ ಶಬ್ದಮಾಡಿಕೊಂಡು ಬರುತ್ತಿದೆಯೋ ಎಂಬಂತೆ ಹರಿದು ಬರುತ್ತಿದ್ದ ತಾಮ್ರದ ತೇರೂ ಭಯಂಕರವಾಗಿರಲು ಶತ್ರುಗಳ ಗಂಟಲನ್ನು ಒತ್ತುವ ಹಾಗೆ ಪೌಂಡ್ರವೆಂಬ ಶಂಖವನ್ನು ಊದುತ್ತ, ಮುಂದೆ ಒಡ್ಡಿದ್ದ ಸೈನ್ಯವೆಲ್ಲವನ್ನೂ ಬಾಣಗಳ ಸಮೂಹದಿಂದ ಕೆಳಗೆ ಉರುಳಿಸುತ್ತ ಬರುತ್ತಿದ್ದ ಭೀಮಸೇನನಿಗೆ ಹೆದರದೆ ದುರ್ಯೋಧನನು ಪ್ರತಿಭಟಿಸಿದನು-೯೮. ಹೇಗೆ ಎದುರಿಸಿದೆಯೋ ಹಾಗೆಯೇ ಶೂರನೂ ಆಗು; ಹಿಂಜರಿಯಬೇಡ ಎಂದು ಭೀಮನು ಒಂದೇ ಸಮನಾಗಿ ಕೋಪಿಸಿಕೊಂಡು ಬಲವಾಗಿ ಬಾಣಪ್ರಯೋಗ ಮಾಡಲು (ಹಾಗೆ) ಹಾರಿಬರುತ್ತಿದ್ದ ಬಾಣಗಳು ತನ್ನಲ್ಲಿಗೆ ಬರಲು ಅವಕಾಶಕೊಡದೆ ದುರ್ಯೋಧನನು ಅದನ್ನು ಪ್ರತಿಭಟಿಸಿ ಒಂದೇ ಸಮನಾಗಿ ಕತ್ತರಿಸಿ (ಭೀಮನ) ಸಾರಥಿಯನ್ನೂ ಆತನ ಕುದುರೆಯನ್ನೂ ಬಾಣದಿಂದ ಹೊಡೆದು ಸ್ವಚ್ಛವಾದ ಬಿಸಿರಕ್ತದ ಪ್ರವಾಹವನ್ನು

ಕಂ॥ ಇಸೆ ಮಸಗಿ ಭೀಮನೀರ
ಯ್ದು ಶಿತಾಸ್ತ್ರದಿನುರುಳೆ ಸೂತನುಡಿಯೆ ರಥಂ ಕೀ ।
ಲಿಸೆ ಕುದುರೆ ಮುಱಿಯೆ ಪಟವಿಗೆ
ಮಸಕದಿನೆಚ್ಚೆಚ್ಚನೊಂದೆ ಸರಲೊಳ್ ನೊಸಲಂ ॥ ೯೯

ಪಟ್ಟಂಗಟ್ಟಿದ ನೊಸಲಂ
ನಟ್ಟ ಸರಲ್ವಿಡಿದು ನೆತ್ತರಂಬರಿವಿಡೆ ಕ ।
ಣ್ಗೆಟ್ಟಿರ್ದ ನೃಪನನಂಕದ
ಕಟ್ಟಾಳ್ಗಳ್ ಕಾದು ಕಳಿಪೆ ದುರ್ಯೋಧನನಂ ॥ ೧೦೦

ವ॥ ಆಗಳವನನುಜರ್ ನೂರ್ವರುಂ ಬಂದು ತನ್ನನೊರ್ವನಂ ತಾಗಿದೊಡನಿಬರುಮಂ ವಿರಥರ್ಮಾಡಿ ಭಾರತಮನಿಂದೆ ಸಮೆಯಿಸುವೆನೆಂದು ಕೋದಂಡಮಂ ಬಿಸುಟು ಗದಾದಂಡಮಂ ಭುಜಾದಂಡದೊಳಳವಡಿಸಿಕೊಂಡು-

ಚಂ॥ ಕುರುಬಲಮಂ ಪಡಲ್ವಡಿಪ ತಕ್ಕಿನೊಳೆಯ್ತರೆ ಬರ್ಪ ಭೀಮನಂ
ಬರೆ ಬರಲೀಯದಿರ್ದವರನಾ ಪದದೊಳ್ ಪೆಱಗಿಕ್ಕಿ ಗಂಧಸಿಂ ।
ಧುರ ಘಟೆ ನಾಲ್ಕು ಕೋಟಿವೆರಸಾಗಡೆ ಬಂದು ಕಳಿಂಗರಾಜನಾಂ
ತಿರೆ ಪಗೆ ಕೆಯ್ಗೆವಂದು ಬರ್ದುಕಾಡಿದ ಬಲ್ಮುಳಿಸಿಂ ವೃಕೋದರಂ ॥ ೧೦೧

ವ॥ ಅಂತು ಕಳಿಂಗರಾಜ ಮತ್ತಮಾತಂಗಘಟೆಗಳ ಮೇಲೆ ಮುಳಿಸಂ ಕಳೆವೆನೆಂದು ಸಿಂಹನಾದದಿನಾರ್ದು-

ಹರಿಯಿಸಿದನು. ೯೯. ಹಾಗೆ ಹೊಡೆಯಲಾಗಿ ಭೀಮನು ರೇಗಿ ಹರಿತವಾದ ಹತ್ತು ಬಾಣಗಳಿಂದ ಸೂತನು ಉರುಳುವ ಹಾಗೆಯೂ ರಥವು ಒಡೆದುಹೋಗುವ ಹಾಗೆಯೂ ಕುದುರೆಯು ಮೊಳೆಯಿಂದ ನಾಟಿಕೊಂಡಹಾಗೆಯೂ ಧ್ವಜವು ಮುರಿದು ಹೋಗುವ ಹಾಗೆಯೂ ಹೊಡೆದು ಕೋಪದಿಂದ ಒಂದೇ ಬಾಣದಿಂದ ದುರ್ಯೋಧನನ ಹಣೆಗೆ ಹೊಡೆದನು. ೧೦೦. ಪಟ್ಟಕಟ್ಟಿದ ಹಣೆಯನ್ನನುಸರಿಸಿ ನಾಟಿದ ಬಾಣವನ್ನು ಅನುಸರಿಸಿ ರಕ್ತವು ಧಾರಾಕಾರವಾಗಿ ಹರಿಯಲು ಕಣ್ಣು ಕಾಣದೆ ಇದ್ದ ರಾಜನನ್ನು ಪ್ರಸಿದ್ಧರಾದ ಶೂರರು ರಕ್ಷಿಸಿ ಶಿಬಿರಕ್ಕೆ ಕಳುಹಿಸಿದರು. ವ॥ ಆಗ ಅವನ ನೂರು ತಮ್ಮಂದಿರೂ ಬಂದು ತನ್ನೊಬ್ಬನನ್ನು ತಾಗಲು ಅಷ್ಟು ಜನವನ್ನೂ ರಥದಿಂದ ಉರುಳಿಸಿ ಭಾರತಯುದ್ಧವನ್ನು ಈ ದಿನವೇ ಮುಗಿಸಿಬಿಡುತ್ತೇನೆ ಎಂದು ಬಿಲ್ಲನ್ನು ಬಿಸಾಡಿ ಗದಾದಂಡವನ್ನು ದಂಡದಂತಿರುವ ತನ್ನ ತೋಳಿನಲ್ಲಿ ಅಳವಡಿಸಿಕೊಂಡನು. ೧೦೧. ಕೌರವಸೈನ್ಯವನ್ನು ಉರುಳಿಸುವ ಸಾಮರ್ಥ್ಯದಿಂದ ಬರುತ್ತಿದ್ದ ಭೀಮಸೇನನನ್ನು ಬರುವುದಕ್ಕೆ ಅವಕಾಶಮಾಡದೆ ಅಲ್ಲಿದ್ದವರನ್ನು (ಅಲ್ಲಿಂದ) ಹೊರಕ್ಕೆ ತಳ್ಳಿ ಶ್ರೇಷ್ಠವಾದ ನಾಲ್ಕುಕೋಟಿ ಮದ್ದಾನೆಗಳೊಡಗೂಡಿ ಕಳಿಂಗರಾಜನು ಬಂದು ಎದುರಿಸಿದನು. ಶತ್ರುವು ಕೈಗೆ ಸಿಕ್ಕಿಯೂ ನುಣುಚಿಕೊಂಡ ವಿಶೇಷ ಕೋಪವನ್ನು ಭೀಮನು-ವ॥ ಕಳಿಂಗರಾಜನ ಮದ್ದಾನೆಗಳ ಸಮೂಹದ ಮೇಲೆ ತೀರಿಸಿಕೊಳ್ಳುತ್ತೇನೆ ಎಂದು ಸಿಂಹಗರ್ಜನೆಯಿಂದ ಆರ್ಭಟಿಸಿದನು.

ಮ|| ಗಜೆಯಂ ಭೋರೆನೆ ಪರ್ವಿ ಬೀಸಿ ಕಡುಪಿಂದೆಯ್ತಂದು ಮಾಱಾಂತ ಸಾ
ಮಜಸಂಘಾತಮನೊಂದುಗೊಳ್ಳೆರಡುಗೊಳ್ಳೆಂದುರ್ವಿ ಪೊಯ್ವೊಂದು ಪೊ ।
ಯ್ಗೆ ಜವಂಗುಂದಿ ಸಿಡಿಲ್ಪು ಮುನ್ನದಿಗುರುಳ್ವರ್ಪನ್ನೆಗಂ ಬೀೞೆ ದಿ
ಗ್ಗಜಮಂ ಪೋಲ್ವ ಗಜಂಗಳಂ ಪಲವುಮಂ ಕೊಂದು ಮರುನ್ನಂದನಂ ॥ ೧೦೨

ಕಂ|| ಬಡಿಗೊಳೆ ಬಿಡು ಬಬ್ಬರ ಬಿರಿ
ದೊಡನುಗೆ ಪೊಸಮುತ್ತು ಕೋಡನೂಱೆ ಮದೇಭಂ ।
ಕೆಡೆದುವು ಕೊಲ್ಲದಿರೆಂದಿರ
ವಡಿಗೆಱಗುವ ತೆಱನನಿನಿಸನನುಕರಿಸುವಿನಂ ॥ ೧೦೩

ವ|| ಅಂತು ಪತ್ತೆಂಟುಸಾಸಿರಮಾನೆಯಂ ಪಡಲ್ವಡಿಸಿಯುಂ ಸೈರಿಸಲಾಱದೆ -

ಮ|| ಪಿಡಿದೊಂದೊಂದಱ ಗಾತ್ರಮಂ ತಿರಿಪಿಕೊಂಡೊಂದೊಂದಱೊಳ್ ಪೊಯ್ಯುಮೆ
ಲ್ವಡಗಪ್ಪನ್ನೆಗಮೆತ್ತಿಕೊಂಡಸಗವೊಯ್ವೊಯ್ವೊಳ್ ತಡಂಬೊಯ್ಯುಮು ।
ಳ್ವಡುಗುಂ ನೆತ್ತರುಮೆಲ್ಬುಮೆಲ್ಲ ದೆಸೆಗಂ ಜೇಱೆಲ್ಬು ಪಾಱೇಱೆ ಬ
ಲದಿಗಂ ಬೀಸಿಯುಮೊಂದು ಕೋಟಿವರೆಗಂ ಕೊಂದಂ ಮದೇಭಂಗಳಂ ॥೧೦೪

ಮ|| ಸಿಡಿಲಂತೊರ್ಮೆಯೆ ಪೊಯ್ಯೆ ಪೊಯ್ದ ಭರದಿಂದೊಂದಾನೆ ತೋಲ್ ನೆತ್ತರೆ
ಲ್ವಡಗೊಂದೊಂದಱೊಳೊಂದುಮೊಂದದೆ ಗದಾನಿರ್ಘಾತದಿಂ ಮಾಯಮಾ ।
ದೊಡೆ ಪೋ ತಪ್ಪಿದೆನೆಂದು ಪಱ್ಱೊರೆದಗುರ್ವಪ್ಪನ್ನೆಗಂ ಮೀಸೆಯಂ
ಕಡಿದಂ ತೋಳ್ವಲದೇೞ್ಗೆ ಮೆಚ್ಚುವನಿತರ್ಕುಗ್ರಾಜಿಯೊಳ್ ಭೀಮನಾ ॥ ೧೦೫

೧೦೨. ಭೀಮನು ಗದೆಯನ್ನು ಭೋರೆಂದು ವಿಸ್ತಾರವಾಗಿ ಬೀಸಿ ಕ್ರೌರ್ಯದಿಂದ ಬಂದು ಪ್ರತಿಭಟಿಸಿದ ಆನೆಗಳ ಸಮೂಹವನ್ನು ಒಂದು ತಕ್ಕೊ, ಎರಡು ತಕ್ಕೋ ಎಂದು ಉಬ್ಬಿ ಹೊಡೆಯುವ ಹೊಡೆತಕ್ಕೆ ಆನೆಗಳು ತಮ್ಮ ವೇಗವನ್ನು ಕಳೆದುಕೊಂಡು ಸಿಡಿದು ಮೊದಲೇ ಅಡಿಗುರುಳುವ ಹಾಗೆ ಉರುಳಲು ದಿಗ್ಗಜಗಳಂತಿದ್ದ ಅನೇಕ ಆನೆಗಳನ್ನು ಕೊಂದನು. ೧೦೩. ಭೀಮನ ಗದೆಯ ಪೆಟ್ಟಿನಿಂದ ಕುಂಭಸ್ಥಳವು ಸಂಪೂರ್ಣವಾಗಿ ಬಿರಿದುಹೋಯಿತು. ಜೊತೆಯಲ್ಲಿಯೇ (ಕುಂಭಸ್ಥಳದಲ್ಲಿದ್ದ) ಹೊಸಮುತ್ತುಗಳು ಚೆಲ್ಲಾಡಿದುವು. ಮದ್ದಾನೆಗಳು ಕೊಂಬನ್ನು ಕೆಳಕ್ಕೆ ಊರಿ 'ನಮ್ಮನ್ನು ಕೊಲ್ಲಬೇಡ' ಎಂದು ಭೀಮನ ಕಾಲಿಗೆ ಬೀಳುವ ರೀತಿಯನ್ನು ಸ್ವಲ್ಪ ಮಟ್ಟಿಗೆ ಅನುಕರಿಸುತ್ತ ಬಿದ್ದುವು. ವ|| ಹಾಗೆ ಹತ್ತೆಂಟು ಸಾವಿರ ಆನೆಗಳನ್ನೂ ನಾಶಪಡಿಸಿದರೂ ತೃಪ್ತಿಹೊಂದದೆ ೧೦೪. ಒಂದು ಆನೆಯ ಶರೀರವನ್ನು ಹಿಡಿದುಕೊಂಡು ವೇಗವಾಗಿ ತಿರುಗಿಸಿ ಒಂದರೊಡನೆ ಒಂದನ್ನು ಎಲುಬೂ ಮಾಂಸವೂ ಆಗುವ ಹಾಗೆ ಹೊಡೆದು ಮೇಲಕ್ಕೆತ್ತಿಕೊಂಡು ಆಗಸನು ಒಗೆಯುವ ರೀತಿಯಲ್ಲಿ ಬಿರುಸಾಗಿ ಮೇಲಕ್ಕೆತ್ತಿ ಒಗೆದು ಒಳಗಿದ್ದ ಮಾಂಸವೂ ರಕ್ತವೂ ಎಲುಬುಗಳೂ ಜೀರೆಂದು ಶಬ್ದಮಾಡುತ್ತ ಎದ್ದು ಎಲ್ಲ ದಿಕ್ಕುಗಳಿಗೂ ಹಾರಿ ನೆಗೆಯುವ ಹಾಗೆ ಬೀಸಿ ಪರಾಕ್ರಮಶಾಲಿಯಾದ ಭೀಮನು ಒಂದುಕೋಟಿ ಲೆಕ್ಕದವರೆಗಿನ ಮದ್ದಾನೆಗಳನ್ನು ಕೊಂದನು. - ೧೦೫. ಸಿಡಿಲಿನ ಹಾಗೆ ಒಂದೇ ಸಲ ಹೊಡೆಯಲು ಹೊಡೆದ ವೇಗಕ್ಕೆ ಆನೆಯ ಚರ್ಮ ರಕ್ತ ಎಲುಬು

ಕಂ॥ ಧ್ವಜಮುಂ ಬಿಸುಗೆಯುಮೇಱೆ
ರ್ದ ಜೋದರುಂ ಬೆರಸು ಗಜೆಯಿನರಿಗಜಘಟೆಯುಂ ।
ಗಿಜಿಗಿಜಿಯಾಗಿರೆ ಪೊಯ್ದೊಡೆ
ಗುಜುಗುಜುಗೊಂಡಾರ್ದರಮರರಂಬರತಳದೊಳ್॥ ೧೦೬

ವ॥ ಅಂತು ಗಾಳಿಗೊಡ್ಡಿದ ಘನಘಟೆಯಂತೆ ತನಗೊಡ್ಡಿದ ಕಳಿಂಗರಾಜ ಮತ್ತಮಾತಂಗ ಘಟೆಗಳಂ ಕಟಕುಟಿಂ ಮಾಡಿದನನ್ನೆಗಮಿತ್ತ ಶಲ್ಯನ ಮೊನೆಯೊಳ್ ಧರ್ಮಪುತ್ರಂ ಕಾದಿ ನಾಲ್ಕು ಕಲ್ಲಂಬುಗಳಿಂದಾತನ ವರೂಥ ಸೂತಕೇತನಂಗಳಂ ಕಡಿದು-

ಕಂ॥ ಉರಮಂ ಬಿರಿವಿನಮಿಸೆ ಮ
ದ್ರರಾಜನಳಿಯನ ಪರಾಕ್ರಮಕ್ಕೊಸೆದು ಮೊಗಂ ।
ಮುರಿಯದೆ ಪೆಱತುಂ ರಥಮಂ
ತರಿಸಿ ಕನಲ್ದಡರ್ದು ಕದನಕಾಗಳೆ ನೆಱೆದಂ ॥ ೧೦೭

ಮುಱಿದು ರಥಮಂ ರಥಾಶ್ವಮ
ನುಱದೆರಡುಂ ಶರದೆ ನಾಲ್ಕಱಿಂ ಸೂತನನೊಂ ।
ದಱೆಕೆಯ ಸರಲೊಳ್ ಮಾಣದೆ
ತಱದಂ ಪಟವಿಗೆಯನೇಂ ಕೃತಾಸ್ತ್ರನೊ ಶಲ್ಯಂ ॥ ೧೦೮

ವ॥ ಅಂತು ವಿರಥನಂ ಮಾಡಿ ಧರ್ಮಪುತ್ರನಂ ಪಿಡಿಯಲೆಯ್ತರ್ಪ ಮದ್ರರಾಜನಂ ಪನ್ನಿರ್ಛಾಸಿರಮಾನೆವೆರಸು ನೃಪನ ಚಕ್ರರಕ್ಷಕಂ ನೀಳನೆಡೆಗೊಂಡು ತಾಗಿದಾಗಳ್-

ಮಾಂಸಗಳು ಒಂದರಲ್ಲಿ ಒಂದು ಸೇರಿರದೆ ಗದೆಯ ಪೆಟ್ಟಿನಿಂದ ಮಾಯವಾಗಲು ಭೀಮನು 'ಛೀ ತಪ್ಪುಮಾಡಿದೆ' ಎಂದು ಹಲ್ಲುಕಡಿದು ಭಯಂಕರವಾದ ಆ ಯುದ್ಧರಂಗದಲ್ಲಿ ತನ್ನ ಬಾಹುಶಕ್ತಿಯ ಏಳಿಗೆಯನ್ನು ಮೆಚ್ಚುವಷ್ಟು ಭಯಂಕರವಾದ ರೀತಿಯಲ್ಲಿ ಮೀಸೆಯನ್ನು ಕಡಿದನು. ೧೦೬. ಧ್ವಜದಿಂದಲೂ ಅಂಬಾರಿಯನ್ನು ಹತ್ತಿದ್ದ ಯೋಧರಿಂದಲೂ ಕೂಡಿದ ಸಮೂಹವನ್ನು ಗದೆಯಿಂದ ಅಜ್ಜಿಗುಜ್ಜಾಗುವ ಹಾಗೆ ಹೊಡೆಯಲು ಆಕಾಶಪ್ರದೇಶದಲ್ಲಿ ದೇವತೆಗಳು (ಗುಂಪುಕೂಡಿ) ಪಿಸುಗುಟ್ಟುತ್ತ ಆರ್ಭಟ ಮಾಡಿದರು. ವ॥ ಹಾಗೆ ಗಾಳಿಗೆ ಎದುರಾದ ಮೋಡಗಳ ಸಮೂಹದ ಹಾಗೆ ತನಗೆ ಎದುರಾದ ಕಳಿಂಗರಾಜನ ಮದ್ದಾನೆಗಳ ಸಮೂಹವನ್ನು ಚೆಲ್ಲಾಪಿಲ್ಲಿಮಾಡಿದನು. ಅಷ್ಟರಲ್ಲಿ ಈಕಡೆ ಶಲ್ಯನ ಯುದ್ಧದಲ್ಲಿ ಧರ್ಮರಾಜನು ಕಾದಿ ನಾಲ್ಕು ಮೊನಚಾದ ಬಾಣಗಳಿಂದ ಅವನ ತೇರು ಸಾರಥಿ ಧ್ವಜಗಳನ್ನು ಕತ್ತರಿಸಿದನು. ೧೦೭. ಎದೆಯು ಬಿರಿದು ಹೋಗುವ ಹಾಗೆ ಹೊಡೆಯಲು ಶಲ್ಯನು ಅಳಿಯನಾದ ಧರ್ಮರಾಜನ ಪರಾಕ್ರಮಕ್ಕೆ ಸಂತೋಷಪಟ್ಟು ಮುಖ ತಿರುಗಿಸದೆ ಬೇರೊಂದು ರಥವನ್ನುತರಿಸಿ ಕೋಪದಿಂದ ಹತ್ತಿ ಆಗಲೇ ಯುದ್ಧಕ್ಕೆ ಸಿದ್ಧವಾದನು. ೧೦೮. ಶಲ್ಯನು ಅವನ ತೇರನ್ನು ಮುರಿದು ವೇಗವಾಗಿ ಎರಡು ಬಾಣಗಳಿಂದ ರಥದ ಕುದುರೆಯನ್ನೂ ನಾಲ್ಕರಿಂದ ಸಾರಥಿಯನ್ನೂ ಒಂದು ಪ್ರಸಿದ್ಧವಾದ ಬಾಣದಿಂದ ಧ್ವಜವನ್ನೂ ಬಿಡದೆ ತರಿದು ಹಾಕಿದನು. ಶಲ್ಯನು ಶಸ್ತ್ರವಿದ್ಯೆಯಲ್ಲಿ ಮಹಾಪಂಡಿತನಷ್ಟೆ! ವ॥ ಹಾಗೆ ತೇರಿರದವನನ್ನಾಗಿ ಮಾಡಿ ಧರ್ಮರಾಜನನ್ನು ಹಿಡಿಯಲು ಬರುತ್ತಿದ್ದ

ಕಂ|| ಮೃಗರಾಜನಖರ ಬಾಣಾ
ಳಿಗಳಿಂ ತೆಗೆನೆಱೆದು ಶಲ್ಯನುಱದಿಸೆ ಬಿದುವಂ ।
ಮೃಗರಾಜಂಗಳೆ ಪೋೞ್ವವೊ
ಲಗಲ್ವಿನಂ ಪೋೞ್ದುವುಗ್ರ ಬಾಣಾವಳಿಗಳ್ ॥ ೧೦೯

ವ|| ಅಂತಾ ದಂತಿಘಟೆಯಂ ಪಡಲ್ವಡಿಸಿ ನೀಳನೇಱಿದಾನೆಯುಮನೊೞಿ ಕೊಂಡೆಬ್ಬಾಗಳ್-

ಕಂ|| ಪೆಱಗಿಡುವ ದಂತಿಯಂ ಕಲಿ
ನಿಱಿಸಿ ಚಲಂ ನೆಲಸೆ ತೋಱಿಕುಡುವುದುಮಾಗಳ್ ।
ಪೊಱಮುಯ್ವುವರಂ ತೆಗೆನೆಱೆ
ದುಱದೆಚ್ಚಂ ಶಲ್ಯನಾಂತ ನೀಳನ ತಲೆಯಂ ॥ ೧೧೦

ವ|| ಅಂತು ನೀಳಂ ನೀಳಗಿರಿಯ ಮೇಗಣಿಂ ಬಱಸಿಡಿಲ್ ಪೊಡೆಯೆ ಕೆಡೆವ ಮೃಗರಾಜನಂತೆ ಹಸ್ತಿಮಸ್ತಕದಿಂ ಕೆಡೆವುದುಮತ್ತ ಭೂರಿಶ್ರವನ ಮೊನೆಯೊಳ್ ಕಾದುತ್ತಿರ್ದುತ್ತರಂ ನಾಲ್ವತ್ತು ಸಾಸಿರಮಾನೆವೆರಸರಸನಂ ಪೆಱಗಿಕ್ಕಿ ಬಂದಾಂತಾಗಳ್-

ಚಂ|| ನಗೆ ಪಗೆವಾಡಿ ಗೋಗ್ರಹಣದೊಳ್ ಪೊಱಮಾಱಿದ ಬನ್ನಮೊಂದು ನೆ
ಟ್ಟಗೆ ಮನಮಂ ಪಳಂಚಲೆಯೆ ಮಾಣದೆ ಶಲ್ಯನನಂವಶಲ್ಯನಂ ।
ಬಗೆವವೊಲೇಳಿದಂ ಬಗೆದು ದಂತಿಯನಾಗಡೆ ತೋಱಿಕೊಟ್ಟು ತೋ
ಟ್ಟಗೆ ರಥಮಂ ಪಡಲ್ವಡಿಸಿ ಪೂಟ್ದನರಾತಿಯನಸ್ತ್ರಕೋಟಿಯಿಂ ॥ ೧೧೧

ಶಲ್ಯನನ್ನು ರಾಜನ ಸೇನಾಧಿಪತಿಯಾದ ನೀಲನು ಮಧ್ಯೆ ನುಗ್ಗಿ ಹನ್ನೆರಡು ಸಾವಿರ ಆನೆಗಳೊಡನೆ ಕೂಡಿ ಪ್ರತಿಭಟಿಸಿದನು. ೧೦೯. ಸಿಂಹದ ಉಗುರಿನಂತಿದ್ದ ಬಾಣಗಳ ಸಮೂಹದಿಂದ ಶಲ್ಯನು ದೀರ್ಘವಾಗಿ ಸೆಳೆದು ಹೊಡೆಯಲಾಗಿ ಕುಂಭಸ್ಥಳಗಳನ್ನು ಸಿಂಹಗಳೇ ಸೀಳುವ ಹಾಗೆ ಆ ತೀಕ್ಷ್ಣವಾದ ಬಾಣಸಮೂಹಗಳು (ಕುಂಭಸ್ಥಳಗಳನ್ನು) ಬೇರೆಯಾಗುವ ಹಾಗೆ (ಹೋಳುಗಳಾಗುವ ಹಾಗೆ) ಸೀಳಿ ಹಾಕಿದುವು. ವ|| ಹಾಗೆ ಆ ಆನೆಯ ಸಮೂಹವನ್ನು ಚೆಲ್ಲಾಪಿಲ್ಲಿಯಾಗುವ ಹಾಗೆ ಮಾಡಿ ನೀಲನು ಹತ್ತಿದ ಆನೆಯನ್ನೂ ಬಲವಾಗಿ ಅಮುಕಿ ಹೊಡೆದನು. ೧೧೦. ಹಿಮ್ಮೆಟ್ಟುತ್ತಿದ್ದ ಆನೆಯನ್ನು ಶೂರನಾದ ನೀಲನು ನಿಲ್ಲಿಸಿ ಹೆಚ್ಚಿನ ಛಲದಿಂದ ಅದನ್ನು ಶಲ್ಯನ ಮೇಲೆ ಛೂಬಿಡಲು ಆಗ ಶಲ್ಯನು ಭುಜದವರೆಗೆ ಬಾಣಗಳನ್ನು ಸೆಳೆದು ತನ್ನನ್ನು ಪ್ರತಿಭಟಿಸಿದ ನೀಲನ ತಲೆಯನ್ನು ಸಾವಕಾಶಮಾಡದೆ- ವೇಗವಾಗಿ ಹೊಡೆದನು. ವ|| ನೀಲನು ಬರಸಿಡಿಲು ಹೊಡೆಯಲು ನೀಲಪರ್ವತದ ಮೇಲಿನಿಂದ ವೇಗವಾಗಿ ಕೆಳಗುರುಳುವ ಸಿಂಹದ ಹಾಗೆ ಆನೆಯ ಕುಂಭಸ್ಥಳದಿಂದ ಕೆಡೆದನು. ಆಕಡೆ ಭೂರಿಶ್ರವನ ಯುದ್ಧದಲ್ಲಿ ಕಾದುತ್ತಿದ್ದ ಉತ್ತರನು ನಲವತ್ತುಸಾವಿರ ಆನೆಯೊಡನೆ ಕೂಡಿ ಬಂದು ರಾಜನನ್ನು ಹಿಂದಿಕ್ಕಿ ಪ್ರತಿಭಟಿಸಿದನು. ೧೧೧. ಗೋಗ್ರಹಣಕಾಲದಲ್ಲಿ ಶತ್ರುಸೈನ್ಯವು ನುಗ್ಗುವ ಹಾಗೆ ಬೆನ್ನಿತ್ತುಹೋದ ಅವಮಾನವು ನೇರವಾಗಿ ತನ್ನ ಮನಸ್ಸನ್ನು ತಗುಲಿ ವೇದನೆಯನ್ನುಂಟುಮಾಡುತ್ತಿರಲು ತಡೆಯದೆ ಉತ್ತರನು ಶತ್ರುರಾಜನನ್ನು

ವ।। ಅಂತುತ್ತರಂ ತನಗಳವುಮದಟುಂ ರಾಜೋತ್ತರಮಾಗೆ ಕಾದಿದೊಡೆ ಶಲ್ಯಂ ವಿರಥನಾಗಿ ಸಿಗ್ಗಾಗಿ-

ಉ।। ತಾರಕನಂ ಗುಹಂ ಮುಳಿದು ಶಕ್ತಿಯಿನಾಂತಿಡುವಂತರಾತಿ ಸಂ
ಹಾರಕವಪ್ಪ ವಿಸ್ಫುರಿತ ಶಕ್ತಿಯಿನಾತನನಿಟ್ಟು ಖಬ್ಗದಿಂ ।
ವಾರಣಮಂ ಪಡಲ್ವಡಿಸಿ ತಾಂ ಪೆಱಪಿಂಗುವುದುಂ ಬಲಕ್ಕೆ ಹಾ
ಹಾ ರವಮುಣ್ಮೆ ದಂತಿವೆರಸಾಜಿಯೊಳುತ್ತರನಟ್ಟೆ ತಟ್ಟೆದಂ ।। ೧೧೨

ವ।। ಅಂತುತ್ತರನಂ ಜವಂಗೆ ಪೊಸತಿಕ್ಕುವಂತಿಕ್ಕಿ ಬಸವಟೆದ ಶಲ್ಯನಂ ಕೃತವರ್ಮಂ ತನ್ನ ರಥಮನೇಱಿಸಿಕೊಂಡು ನಿಂದನನ್ನೆಗಮಿತ್ತಲಮರಾಪಗಾಸುತನ ಮೊನೆಯೊಳ್ ಭರಂಗೆಯ್ದು ಕಾದುವ ಸೇನಾನಾಯಕಂ ಶ್ವೇತಂ ತನ್ನ ತಮ್ಮನತೀತನಾದುದಂ ಕೇಳ್ದು-

ಚಂ।। ಪ್ರಳಯಪಯೋಧಿವೋಲಲುರ್ದು ಪೆಂಕುಳಿಗೊಂಡ ಮದೇಭವೈರಿವೋಲ್
ಕೆಳರ್ದು ಲಯಾಗ್ನಿವೋಲಳುರ್ದು ಮದ್ರಮಹೀಶನನೆಯ್ದೆ ತಾಗೆ ಬ ।
ಳ್ವಳ ಬಳೆದತ್ತು ಶಲ್ಯನೊಳೆ ಕಾಳೆಗಮೀಗಳೆನುತ್ತುಮಂತೆ ಕೆ
ಯ್ಯೊಳಲಪಿಕೇತು ಸಿಂಧುತನಯಂಬೆರಸಾಗಡೆ ಬಂದು ತಾಗಿದಂ ।। ೧೧೩

ಅಸ್ತ್ರರಹಿತನಾದವನನ್ನು ನೋಡುವ ಹಾಗೆ ಉದಾಸೀನದಿಂದ ಕಡೆಗಣಿಸಿ ನೋಡಿ (ತನ್ನ) ಆನೆಯನ್ನು ಅವನ ಮೇಲೆ ಛೂಬಿಟ್ಟು ಒಮ್ಮೆಯೇ ತೇರಿನಿಂದ ಕೆಳಗುರುಳಿಸಿ ಶತ್ರುವನ್ನು ಬಾಣಸಮೂಹದಿಂದ ಹೂಳಿದನು. ವ।। ಹಾಗೆ ಉತ್ತರನು ತನಗೆ ಪರಾಕ್ರಮವೂ ಶಕ್ತಿಯೂ ಚಂದ್ರನಂತೆ ಅಭಿವೃದ್ಧಿಯಾಗುವ ಹಾಗೆ ಕಾದಲು ಶಲ್ಯನು ರಥಹೀನನಾಗಿ ಅವಮಾನಗೊಂಡು-೧೧೨. ಹಿಂದೆ ತಾರಕಾಸುರನನ್ನು ಷಣ್ಮುಖನು ಎದುರಿಸಿ ಶಕ್ತ್ಯಾಯುಧದಿಂದ ಹೊಡೆದ ಹಾಗೆ ಶತ್ರುಸಂಹಾರವೂ ಕಾಂತಿಯುಕ್ತವೂ ಆದ ಶಕ್ತ್ಯಾಯುಧದಿಂದ ಉತ್ತರನನ್ನು ಹೊಡೆದು ಆತನ ಆನೆಯನ್ನು ಕೆಳಗುರುಳಿಸಿದನು. ಪಾಂಡವಸೈನ್ಯದಲ್ಲಿ ಹಾ ಹಾ ರವವನ್ನುಂಟುಮಾಡಿ ಶಲ್ಯನು ಹಿಂದಿರುಗುತ್ತಿರಲು ಯುದ್ಧದಲ್ಲಿ ಉತ್ತರನು ಆನೆಯೊಡನೆ ಸತ್ತು ಕೆಳಗುರುಳಿದನು (ಕುಸಿದನು). ವ।। ಉತ್ತರನನ್ನು ಯಮನಿಗೆ ಹೊಸದಾಗಿ ಬಲಿ ಕೊಡುವ ಹಾಗೆ ಬಲಿಕೊಟ್ಟು ಶಕ್ತಿಗುಂದಿದ ಶಲ್ಯನನ್ನು ಕೃತವರ್ಮನು ತನ್ನ ರಥದಲ್ಲಿ ಹತ್ತಿಸಿಕೊಂಡು ತಾನು ಯುದ್ಧಕ್ಕೆ ನಿಂತನು. ಅಷ್ಟರಲ್ಲಿ ಈಕಡೆ ಭೀಷ್ಮನು ಯುದ್ಧದಲ್ಲಿ ಆರ್ಭಟಿಸಿ ವೇಗದಿಂದ ಯುದ್ಧಮಾಡುತ್ತಿದ್ದ ಸೇನಾನಾಯಕನಾದ ಶ್ವೇತನು ತನ್ನ ತಮ್ಮನು ಸತ್ತುಹೋದುದನ್ನು ಕೇಳಿದನು -೧೧೩. ಪ್ರಳಯಕಾಲದ ಸಮುದ್ರದಂತೆ ವ್ಯಾಪಿಸಿ ಹುಚ್ಚುಹಿಡಿದ ಸಿಂಹದಂತೆ ಪ್ರಳಯಾಗ್ನಿಯಂತೆ ಹರಡಿ ಶಲ್ಯರಾಜನನ್ನು ವೇಗದಿಂದ ಬಂದು ತಾಗಿದನು. ಈಗ ಶಲ್ಯನಲ್ಲಿ ಯುದ್ಧವು ಅಧಿಕವಾಗಿ ಬೆಳೆದಿದೆ ಎಂದು ಹೇಳುತ್ತ ದುರ್ಯೋಧನನು ಆ ಯುದ್ಧಭಾರವನ್ನು ತಾನೇ ವಹಿಸುವುದಕ್ಕಾಗಿ (ಶಲ್ಯನನ್ನು ರಕ್ಷಿಸುವುದಕ್ಕಾಗಿ) ಭೀಷ್ಮನೊಡನೆ ಅಲ್ಲಿಗೆ ಬಂದು ತಾಗಿದನು.

ವ।। ಇತ್ತ ಧರ್ಮಪುತ್ರನುಂ ವಿರಾಟ ಧೃಷ್ಟದ್ಯುಮ್ನ ಶಿಖಂಡಿ ಚೇಕಿತಾನ ಕೇಕಯ ಸಾತ್ಯಕಿ ನಕುಳ ಸಹದೇವ ಸೌಭದ್ರ ಪ್ರಮುಖ ನಾಯಕರ್ವೆರಸು ರಣಪಟಹಂಗಳಂ ನೆಗಬ್ಚಿ ಕೃಪ ಕೃತವರ್ಮ ವಿವಿಂಶತಿ ವಿಕರ್ಣ ಚಿತ್ರಸೇನ ಸೋಮದತ್ತ ಭಗದತ್ತ ಬಾಹ್ಲೀಕ ಭೂರಿಶ್ರವಃ ಪ್ರಭೃತಿಗಳ್ ಗಱಿಸನ್ನೆಗೈದು ಕಾದುವಾಗಳ್-

ಚಂ।। ನಡುವ ಸರಲ್ ಸರಲ್ಗೊಳೆ ಸುರುಳ್ವ ಹಯಂ ಹಯದುಳ್ಗರುಳ್ಗಳೊಳ್
ತೊಡರ್ವ ಭಟರ್ ಭಟರ್ಕಳೊಳೆ ತೊಟ್ಟುಟಿಮಾಟ್ಟ ರಥಂ ರಥಕ್ಕೆ ವಾ ।
ಯ್ದುಡಿಗಿಡೆ ಮೆಯ್ವೊಣರ್ಚುವ ಮಹಾರಥರಾಜಿಯೊಳಂತಗುರ್ವಿನ
ಚ್ಚುಡಿದಿರೆ ಕಾದಿ ಬಿಚ್ಚಟಿಸಿದರ್ ಬಿಸುನೆತ್ತರ ಸುಟ್ಟುರೆ ಸೂಸುವನ್ನೆಗಂ ।। ೧೧೪

ವ।। ಅಂತೆರಡುಂ ಪಡೆಯ ನಾಯಕರೊರ್ವರೊರ್ವರೊಳ್ ತಲೆಮುಟ್ಟು ಕಾದುವಾಗಳ್ ಶ್ವೇತಂ ತನ್ನ ತಮ್ಮನಟಿವಿನೊಳಾದ ಮುಳಿಸಿನೊಳ್ ಕಣ್ಗಾಣದೆ ಶಲ್ಯನಂ ಮುಟ್ಟೆವಂದು-

ಚಂ।। ಮುಳಿಸಿನೊಳೆಯ್ದೆ ಕೆಂಪಡರ್ದ ಕಣ್ಗಳಿನೊರ್ಮೆಯೆ ನುಂಗುವಂತಸುಂ
ಗೊಳೆ ನಡೆ ನೋಡಿ ಮಾಣದುರಮಂ ಬಿರಿಯೆಚ್ಚೊಡೆ ಸೂಸಿ ಪಾಯ್ವಸೃ ।
ಗ್ಜಳಮವನುಗ್ರ ಕೋಪಶಿಖಿ ತಳ್ತಳುರ್ವಂತೆವೊಲಾಗೆ ಶಲ್ಯನಾ
ಗಳೆ ರಣದೊಳ್ ನೆಱಲ್ದೊಡವನಂ ಪೆಱಗಿಕ್ಕಿ ಸುರಾಪಗಾತ್ಮಜಂ ।। ೧೧೫

ವ।। ಈಕಡೆ ಧರ್ಮರಾಜನೂ ವಿರಾಟ, ಧೃಷ್ಟದ್ಯುಮ್ನ, ಶಿಖಂಡಿ, ಚೇಕಿತಾನ, ಕೇಕಯ, ಸಾತ್ಯಕಿ, ನಕುಲ, ಸಹದೇವ, ಅಭಿಮನ್ಯುವೇ ಮೊದಲಾದ ನಾಯಕರೊಡಗೂಡಿ ಯುದ್ಧರಂಗಕ್ಕೆ ಬಂದು ರಣಭೇರಿಯನ್ನು ಹೊಡೆಯಿಸಿದನು. ಕೃಪ, ಕೃತವರ್ಮ, ವಿವಿಂಶತಿ, ವಿಕರ್ಣ, ಚಿತ್ರಸೇನ, ಸೋಮದತ್ತ, ಭಗದತ್ತ, ಬಾಹ್ಲಿಕ, ಭೂರಿಶ್ರವರೇ ಮೊದಲಾದ ಪ್ರತಿಪಕ್ಷದವರು ಬಾಣದ ಗರಿಗಳಿಂದಲೇ ಸನ್ನೆಮಾಡಿ ಯುದ್ಧಮಾಡಲು ಪ್ರಾರಂಭಿಸಿದರು. ೧೧೪. ಬಾಣಗಳು ನಾಟಿಕೊಂಡವು. ಕುದುರೆಗಳು ಸುರುಳಿಕೊಂಡು ಬಿದ್ದುವು. ಅವುಗಳ ಒಳಗರುಳಿನಲ್ಲಿ ಶೂರರು ಸಿಕ್ಕಿಕೊಂಡರು. ತೇರು ಹರಿದು ಅವರನ್ನು ಅಜ್ಜುಗುಜ್ಜಮಾಡಿದವು. ಮಹಾರಥರು ನುಗ್ಗಿ ತೇರನ್ನೆಡವಿ ಮುರಿದು ಬಿದ್ದು ಬಿಸಿರಕ್ತದ ಪ್ರವಾಹವು ಹರಿಯುವವರೆಗೆ ಅದ್ಭುತವಾಗಿ ಯುದ್ಧಮಾಡಿದರು. ವ।। ಹಾಗೆ ಎರಡುಸೈನ್ಯದ ನಾಯಕರೂ ಪರಸ್ಪರ ಪ್ರತ್ಯಕ್ಷವಾಗಿ ಯುದ್ಧಮಾಡುತ್ತಿದ್ದಾಗ ಶ್ವೇತನು ತನ್ನ ತಮ್ಮನ ಸಾವಿನಿಂದ ಆದ ಕೋಪದಿಂದ ಮುಂದಾಲೋಚನೆಯಿಲ್ಲದೆ ಶಲ್ಯನ ಸಮೀಪಕ್ಕೆ ಬಂದನು. ೧೧೫. ಕೋಪದಿಂದ ವಿಶೇಷವಾಗಿ ಕೆಂಪೇರಿದ್ದ ಕಣ್ಣುಗಳಿಂದ ಒಂದೇಸಲ ನುಂಗುವಹಾಗೆಯೂ ಪ್ರಾಣಾಪಹಾರ ಮಾಡುವ ಹಾಗೆಯೂ ದೀರ್ಘವಾಗಿ (ಗುರಿಗುಟ್ಟಿ) ನೋಡಿ ಅಷ್ಟಕ್ಕೇ ಬಿಡದೆ ಎದೆಯು ಸೀಳುವ ಹಾಗೆ ಹೊಡೆದನು. (ಅದರಿಂದ) ರಕ್ತಪ್ರವಾಹವು ಹರಿಯಿತು. ಅವನ ತೀಕ್ಷ್ಣವಾದ ಕೋಪಾಗ್ನಿಯು ಸೇರಿ ವ್ಯಾಪಿಸಿದ ಹಾಗಾಯಿತು. ಶಲ್ಯನು ಆಗಲೇ ಯುದ್ಧದಲ್ಲಿ ನಿಶ್ಚೇಷ್ಟನಾದನು. ಭೀಷ್ಮನು ಅವನನ್ನು ಹಿಂದಿಕ್ಕಿ ತಾನು ಮುನ್ನುಗ್ಗಿದನು.

ವ॥ ಅಂತು ಪ್ರಳಯಕಾಲದಂದು ಮೂಡುವ ಪನ್ನಿರ್ವರಾದಿತ್ಯರ ತೇಜಮುಮಂ ಮಹೇಶ್ವರ ಭೈರವಾಡಂಬರಮುಮಂ ಯುಗಾಂತ ಕಾಲಾಂತಕನ ಮಸಕಮುಮಂ ತನ್ನೊಳಳವಡಿಸಿಕೊಂಡು-

ಚಂ॥ ಖರ ಕಿರಣ ಪ್ರಚಂಡ ಕಿರಣಾವಳಿ ಲೋಕಮನೆಯ್ದೆ ಪರ್ವುವಂ
ತಿರೆ ಕಡುಕೆಯ್ದು ತನ್ನೆರಡು ಕೆಯ್ಯೊಳಮೆಚ್ಚ ಶರಾಳಿಗಳ್ ಭಯಂ ।
ಕರತರಮಾಗೆ ಭೂಭುವನಮೆಲ್ಲಮನೊರ್ಮೆಯೆ ಸುತ್ತಿ ಮುತ್ತಿ ಕೊಂ
ಡಿರೆ ದೆಸೆಗಾಣಲಾಗದು ದಲಾ ರಣಗತ್ತಲೆ ಮಂದಮಾದುದೋ ॥ ೧೧೬

ವ॥ ಎಂಬಾಣಮುಂಬಿನ ಬಂಬಲೊಳಂ ಜೋಡಾಗಿ ಕೋಡನೂಱೆ ಕೆಡೆದ ಗಜ ವ್ರಜಂಗಳ ಡೊಣೆವುಗಳಿಂದೊಱಿತು ಪರಿವ ನೆತ್ತರ ಕಡಲ್ಗಳುಂ ನೆತ್ತರ ಕಡಲ್ಗಳೊಳ್ ಮಿಳಿರ್ವ ಪಟವಿಗೆಗಳ್ ತಲೆದೋಱೆ ಮುಳುಂಗಿದ ರಥಂಗಳುಂ ರಥಂಗಳ ಗಾಲಿಗಳ್ಗಡ್ಡಮಾಗಿ ಬಿಟ್ಟಿರ್ದ ಮದಹಸ್ತಿಗಳುಂ ಮದಹಸ್ತಿಮಸ್ತಕಂಗಳನೋಸರಿಸಿ ರಥಮಂ ಪರಿಯಿಸುವ ರಥಚೋದಕರುಂ ರಥಚೋದಕರ ಬಿಟ್ಟ ಬಾಯ್ ಬಿಟ್ಟಂತಿರೆ ಬಿಟ್ಟ ತಮ್ಮ ಕರುಳ್ಗಳೊಳ್ ತವೆ ತೊಡರ್ದು ಕೀಲಿಂ ಕರ್ಚಿ ದಿಂಡುಮುಗುಳ್ದು ಕೆಡೆವ ಜಾತ್ಯಶ್ವಂಗಳುಂ ಜಾತ್ಯಶ್ವಂಗಳ ಪೆಣದ ತಿಂತಿಣಿಯೊಳ್ ತೊಡರ್ದೆಡಪುತ್ತುಮಾಡುವ ಸುಭಟರಟ್ಟೆಗಳುಂ ಸುಭಟರಟ್ಟೆಗಳನೆಬ್ಬಿಟ್ಟಿ ಕುಟ್ಟುವ ತೊಂಡು ಮರುಳ್ಗಳುಂ ಮರುಳ್ಗಳಾಟಮಂ ಪಳಪಳನೆಮೆಯಿಕ್ಕದೆ ನೋಡಿ ಮುಗುಳ್ನಗೆ ನಗುವ ವೀರ

ವ॥ ಪ್ರಳಯಕಾಲದ ದ್ವಾದಶಾದಿತ್ಯರ ತೇಜಸ್ಸನ್ನು ಮಹೇಶ್ವರನ ಭಯಂಕರವಾದ ಆಟಾಟೋಪವನ್ನು ಯುಗಾಂತದ ಯಮನ ರೇಗುವಿಕೆಯನ್ನು ತನ್ನಲ್ಲಿ ಅಳವಡಿಸಿಕೊಂಡನು. ೧೧೬. ಸೂರ್ಯನ ತೀಕ್ಷ್ಣವಾದ ಕಿರಣಸಮೂಹಗಳು ಲೋಕವನ್ನೆಲ್ಲ ಪೂರ್ಣವಾಗಿ ಆವರಿಸುವ ಹಾಗೆ ವೇಗಶಾಲಿಯಾದ ತನ್ನ ಎರಡು ಕೈಗಳಿಂದಲೂ ಬಿಟ್ಟ ಬಾಣಸಮೂಹಗಳು ಅತ್ಯಂತ ಭಯಂಕರವಾಗಿ ಪ್ರಪಂಚ ವೆಲ್ಲವನ್ನೂ ಒಟ್ಟಿಗೆ ಸುತ್ತಿಮುತ್ತಿಕೊಂಡುವು. ಆ ಯುದ್ಧದ ಕತ್ತಲೆಯಿಂದ ನಿಜವಾಗಿಯೂ ದಿಕ್ಕೇ ಕಾಣದಂತಾಯಿತು. ಆ ರಣಗತ್ತಲೆ ಅತ್ಯಂತ ಸಾಂದ್ರವಾಗಿತ್ತು. ವ॥ ಬಾಣಗಳ ಸಮೂಹದಿಂದ ಜೊತೆ ಜೊತೆಯಾಗಿ ಕೊಂಬನ್ನೂರಿ ಕೆಡೆದಿದ್ದ ಆನೆಗಳ ಗಾಯದ ಡೊಗರುಗಳಿಂದ ಜಿನುಗಿ ಹರಿಯುವ ರಕ್ತದ ಸಮುದ್ರಗಳೂ, ರಕ್ತಸಮುದ್ರದಲ್ಲಿ ಚಲಿಸುತ್ತಿರುವ ಬಾವುಟಗಳ ತುದಿಗಳು ಮಾತ್ರ ತೋರುತ್ತ ಮುಳುಗಿದ್ದ ತೇರುಗಳೂ ತೇರುಗಳಿಗೆ ಅಡ್ಡವಾಗಿ ಬಿದ್ದಿದ್ದ ಮದ್ದಾನೆಗಳೂ ಮದ್ದಾನೆಗಳ ತಲೆಗಳನ್ನು ಒಂದು ಕಡೆಗೆ ಓಸರಿಸಿ ತೇರನ್ನು ಹರಿಯಿಸುವ ಸಾರಥಿಗಳೂ ಸಾರಥಿಗಳು ಬಿಟ್ಟ ಬಾಯಿ ಬಿಟ್ಟ ಹಾಗೆ ತಮ್ಮ ಕರುಳುಗಳೂ ಸೇರಿಕೊಂಡ ಹಾಗೆಯೇ ಕಡಿವಾಣವನ್ನು ಕಚ್ಚಿಕೊಂಡು ರಾಶಿರಾಶಿಯಾಗಿ ಬಿದ್ದಿದ್ದ ಉತ್ತಮವಾದ ಜಾತ್ಯಶ್ವಗಳೂ ಜಾತಿಕುದುರೆಗಳ ಸಮೂಹದಲ್ಲಿ ಸೇರಿಕೊಂಡು ಎಡವುತ್ತ ಆಡುತ್ತಿರುವ ಶೂರರ ಮುಂಡಗಳೂ ಆ ಶೂರರ ಮುಂಡಗಳನ್ನು ಎಬ್ಬಿಸಿ ಓಡಿಸಿ ಬಡಿಯುತ್ತಿರುವ ತುಂಟ ಪಿಶಾಚಿಗಳ ಆಟವನ್ನು ಪಳಪಳನೆ ರೆಪ್ಪೆಬಡಿಯದೆ ನೋಡಿ ಹುಸಿನಗೆ ನಗುವ ಪರಾಕ್ರಮಶಾಲಿಗಳ ಹಸಿಯ ತಲೆಗಳೂ ಭಯ, ಆಶ್ಚರ್ಯ, ಅದ್ಭುತ, ಭಯಾನಕ, ವೀರ, ಬೀಭತ್ಸ, ರೌದ್ರರಸಗಳನ್ನು

ಭಟರ ಪಂದಲೆಗಳುಮಗುರ್ವುಮದ್ಭುತ ಭಯಾನಕ ವೀರ ಬೀಭತ್ಸ ರೌದ್ರ ರಸಂಗಳಂ ಪುಮುಂಗೊಳಿಸೆ ಗಾಂಗೇಯಂ ನಾಡೆಯುಂ ಪೊೞ್ತು ಕಾದೆ-

ಮ|| ಪಟ್ಟಂಗಟ್ಟಿದಿಳಾಧಿನಾಥರೆ ಪಯಿಂಛಾಸಿರ್ವರೊಳ್ಯಾನೆಗಳ್
ಪಟ್ಟಂಗಟ್ಟಿದುವೊಂದು ಲಕ್ಕ ತುರಗಂ ಪತ್ತೆಂಟು ಲಕ್ಕಂ ಪಡ ।
ಲ್ವಟ್ಟುಬ್ಬಾಡಿದುವೊಂದೆ ಬಿಲ್ಗೆನೆ ನದೀಪುತ್ರಂಗೆ ಪೇೞಾರ್ ಚಲಂ
ಬಟ್ಟುಂ ಮಾರ್ಮಲೆದಂಬುದೊಟ್ಟುಮುೞಿವರ್ ಸಂಗ್ರಾಮರಂಗಾಗ್ರದೊಳ್ ॥ ೧೧೭

ವ|| ಎಂಬನ್ನೆಗಂ ಶ್ವೇತನುಮನವರತ ಶರಾಸಾರದಿಂ ಕುರುಬಲಮೆಲ್ಲಮನರೆದು ಸಣ್ಣಿಸಿದಂತೆ ಮಾಡಿ ತವೆ ನೆರವಿಯನೆನಿತಂ ಕೊಂದೊಡಮೇವಂದಪುದೆಂದು ಗಾಂಗೇಯಂಗ ವಿರದಿದಿರಂ ಮಾರ್ಕೊಂಡು ಬಿಲ್ಗೊಯ್ದು ನಿಂದಾಗಳ್-

ಉ|| ಶ್ವೇತನ ಬಿಲ್ಲೊಳಿರ್ದ ಮದನಾರಿಯ ರೂಪೆರ್ದೆಗೊಳ್ವುದುಂ ನದೀ
ಜಾತನುದಾತ್ತ ಭಕ್ತಿಯೊಳೆ ಕೆಯ್ಮುಗಿದಾಗಳಿದೆಂತೊ ನಿಮ್ಮ ಪೆ ।
ರ್ಮಾತಿನ ಬೀರಮೀಯೆಡೆಗೆವಂದುದೆ ಮುಪ್ಪಿನೊಳೆಯ್ದೆ ಲೋಕ ವಿ
ಖ್ಯಾತರಿರಾಗಿ ಕೆಯ್ದುವಿಡಿವಲ್ಲಿಯೆ ಕಾಲ್ವಿಡಿಯಲ್ಕೆ ತಕ್ಕುದೇ ॥ ೧೧೮

ಚಂ|| ಎನಗೆ ರಣಾಗ್ರದೊಳ್ ಪೊಣರ್ವೊಡಂಕದ ಪೊಂಕದ ಸಿಂಧುಪುತ್ರನೊ
ರ್ವನೆ ದೊರೆಯೆಂದು ನಿಮ್ಮೊಳೆ ವಲಂ ತಱಿಸಂದಿಱಿಯಲ್ಕೆ ಪೂಣ್ದೆನಾ ।
ನೆನಗಿಱಿವಟ್ಟೆಯುಂ ಕಿಡಿಸಿ ನಿಮ್ಮಳವಂ ಪೞಿಗಿಕ್ಕಿ ನೀಮುಮಿಂ
ತಿನಿತೆರ್ದೆಗೆಟ್ಟರಿಂ ತುಱಿಲ ಸಂದರನಾರುಮನೆಂತು ನಂಬುವರ್॥ ೧೧೯

ಒಟ್ಟುಗೂಡಿಸಿದ್ದಂತೆ ಕಾಣುತ್ತಿತ್ತು. ೧೧೭. ಭೀಷ್ಮನ ಒಂದೇ ಬಿಲ್ಲಿಗೆ ಪಟ್ಟಾಭಿಷಿಕ್ತರಾದ ಹತ್ತು ಸಾವಿರ ಚಕ್ರವರ್ತಿಗಳೂ ಪಟ್ಟಾಭಿಷಿಕ್ತವಾದ ಒಂದು ಲಕ್ಷ ಭದ್ರಗಜಗಳೂ (ಮಂಗಳಕರವಾದ ಆನೆ) ಹತ್ತೆಂಟುಲಕ್ಷ ಕುದುರೆಗಳೂ ಕೆಳಗುರುಳಿ ನಾಶವಾದುವು ಎನ್ನಲು ಯುದ್ಧದಲ್ಲಿ ಪಣವೊಡ್ಡಿ (ಹಟಮಾಡಿ) ಭೀಷ್ಮನಿಗೆ ಪ್ರತಿಭಟಿಸಿ ಬಾಣಪ್ರಯೋಗಮಾಡಿ ಉಳಿಯುವವರು ಯಾರಿದ್ದಾರೆ? ವ|| ಎನ್ನುತ್ತಿರುವಲ್ಲಿ ಶ್ವೇತನೂ ಒಂದೇ ಸಮನಾದ ಬಾಣದ ಮಳೆಯಿಂದ ಕೌರವಸೈನ್ಯವನ್ನೆಲ್ಲ ಅರೆದು ಪುಡಿಮಾಡಿದಂತೆ ಮಾಡಿ ನಾಶಪಡಿಸಿ, ಈ ಬಡಪಾಯಿ ಸೈನ್ಯವನ್ನು ಕೊಂದರೆ ಏನು ಪ್ರಯೋಜನ ಎಂಬುದಾಗಿ ಭೀಷ್ಮನಿಗೆ ಹೆದರದೆ ಇದಿರಾಗಿ ಪ್ರತಿಭಟಿಸಿ ಬಿಲ್ಲನ್ನು ಸೆಳೆದು ನಿಂತನು - ೧೧೮. ಶ್ವೇತನ ಬಿಲ್ಲಿನಲ್ಲಿದ್ದ ಮದನಾರಿಯ ಆಕಾರವು ತನ್ನ ಹೃದಯವನ್ನು ಸೂರೆಗೊಂಡಿತು. ಭೀಷ್ಮನು ಅತ್ಯಂತ ಶ್ರೇಷ್ಠವಾದ ಭಕ್ತಿಯಿಂದ ಕೈಮುಗಿದನು. (ಶ್ವೇತನು ಅವರನ್ನು ಕುರಿತು) ಇದೇನಿದು? ನಿಮ್ಮ ಪ್ರಸಿದ್ಧವಾದ ಪರಾಕ್ರಮವು ಮುಪ್ಪಿನಲ್ಲಿ ಈ ಸ್ಥಿತಿಗೆ ಬಂದಿತೇ? ಪೂರ್ಣವಾಗಿ ಲೋಕಪ್ರಸಿದ್ಧವಾಗಿರುವ ನೀವು ಶಸ್ತ್ರಗ್ರಹಣ ಮಾಡಬೇಕಾದ ಕಾಲದಲ್ಲಿ ಶರಣಾಗತರಾಗುವುದು ಯೋಗ್ಯವೇ? ೧೧೯. ಯುದ್ಧಮುಖದಲ್ಲಿ ಕಾದಬೇಕಾದರೆ ಪ್ರಸಿದ್ಧನೂ ಗರ್ವಿಷ್ಠನೂ ಆದ ಭೀಷ್ಮನೊಬ್ಬನೇ ನನಗೆ ಸಮಾನನಾದವನು ಎಂದು ಪೂರ್ಣವಾಗಿ ನಿಷ್ಕರ್ಷೆ ಮಾಡಿಕೊಂಡು ಯುದ್ಧ ಮಾಡುವುದಕ್ಕೆ ನಾನು ಪ್ರತಿಜ್ಞೆ

ವ॥ ಎಂದು ತನ್ನಂ ನೋಯೆ ನುಡಿದೊಡೆ ಸಿಂಧುಪುತ್ರನಿಂತೆಂದಂ-

ಮ॥ ನಿನಗೇನೆಂದೊಡಮೆಂದುದೊಪ್ಪಿದಪುದಂತೇಕೆನ್ನನಿನ್ನೀ ಶರಾ
ಸನದೊಳ್ ಶೂಲಕಪಾಲಪಾಣಿ ದಯೆಯಿಂ ಬಂದಿರ್ದನುಂತಾನುಮಿಂ ।
ತಿನಿತಂ ನೀಂ ನುಡಿವನ್ನೆಗಂ ತಡೆವೆನೇ ತ್ರೈಲೋಕ್ಯನಾಥಂ ಕಣಾ
ವಿನಮನ್ಮಸ್ತಕನಾದೆನಣ್ಮುವೊಡೆ ನೀನೀ ದೇವನಂ ತೋಱುವೈ ॥ ೧೨೦

ಕಂ॥ ಇಱಿವಂತು ನಿನಗೆ ಮನದೊಳ್
ತಱಿಸಲವುಂಟಪ್ಪೊಡೆಲವೊ ದೇವೇಶನನೇಂ ।
ಸೆಱಿವಿಡಿದೆ ತೊಲಗು ದೇವನ
ಮಱಿಯಂ ಬಱಿಕಱಿಯಲಕ್ಕುಮೆನಗಂ ನಿನಗಂ ॥ ೧೨೧

ವ॥ ಎಂಬುದುಂ ಶ್ವೇತನಿಂತೆಂದಂ-

ಉ॥ ಕಾಗೆವೊಲಿಂತು ಬಿಲ್ಗೆ ಕರಮಂಜುವಿರಂಜಲಿಮಾ ತ್ರಿಣೇತ್ರನಂ
ಪೋ ಗೆಡೆಗೊಂಡು ಕಾದುವೆನೆ ಕಾದೆನಿದಂ ಹರನಿತ್ತನೆಂದು ನೋ ।
ಡಾಗಡುಮಟ್ಟೆಯಿಂ ಪಿಡಿವೆನಕ್ಕಟ ನಿಮ್ಮನದಿರ್ಪುವಲ್ಲಿ ಚಾ
ಪಾಗಮಮೇವುದಂತೆನಗೆ ಬಿಲ್ವರಮಾಜಿಯೊಳಾಂಪ ಗಂಡರಾರ್ ॥ ೧೨೨

ಮಾಡಿ ಬಂದೆ. ನನಗುಂಟಾದ ಯುದ್ಧೋತ್ಸಾಹವನ್ನು ಕೆಡಿಸಿ ನಿಮ್ಮ ಪರಾಕ್ರಮವನ್ನು ಹಿಂದುಮಾಡಿ ನೀವೂ ಹೇಗೆ ಧೈರ್ಯಹೀನರಾಗಿದ್ದೀರಿ. ಇನ್ನು ಮೇಲೆ ಪರಾಕ್ರಮಶಾಲಿಗಳನ್ನು ಯಾರನ್ನಾದರೂ ಹೇಗೆ ನಂಬುವುದು? ವ॥ ಎಂದು ತನಗೆ ನೋವುಂಟಾಗುವ ಹಾಗೆ ನುಡಿಯಲು ಭೀಷ್ಮನು ಹೇಳಿದನು - ೧೨೦. ನೀನು ಏನು ಹೇಳಿದರೂ ನಿನಗೆ ಒಪ್ಪುತ್ತದೆ. ಏಕೆನ್ನುವೆಯಾ? ನಿನ್ನ ಈ ಬಿಲ್ಲಿನಲ್ಲಿರುವ ಶೂಲಕಪಾಲಪಾಣಿಯಾದ ಈಶ್ವರನು ದಯೆಯಿಂದ ಕಾಣಿಸಿಕೊಂಡಿದ್ದಾನೆ. ಹಾಗಿಲ್ಲದ ಪಕ್ಷದಲ್ಲಿ ನೀನು ಇಷ್ಟು ಹರಟುವವರೆಗೆ ತಡೆಯುತ್ತಿದ್ದೆನೇ? ಶಿವನು ಮೂರುಲೋಕದ ಒಡೆಯನಲ್ಲವೇ? ಆದುದರಿಂದ ನಮಸ್ಕಾರ ಮಾಡಿದೆ. ನಾನು ಯುದ್ಧ ಮಾಡುವುದಕ್ಕೆ ಬರಲು ನೀನು ಈಶ್ವರದೇವನನ್ನು ತೋರಿಸುತ್ತೀಯೆ. ೧೨೧. ನಿನಗೆ ಮನಸ್ಸಿನಲ್ಲಿ ಯುದ್ಧಮಾಡುವ ನಿಶ್ಚಯವೇ ಇದ್ದರೆ ದೇವಶ್ರೇಷ್ಠನಾದ ಈಶ್ವರನನ್ನೇಕೆ ಮರೆಹಿಡಿದಿದ್ದೀಯೆ? ದೇವನ ಆಶ್ರಯವನ್ನು ಬಿಟ್ಟು ಕಳೆ. ಬಳಿಕ ನನಗೂ ನಿನಗೂ ಇರುವ ಅಂತರವನ್ನು ತಿಳಿಯಲು ಸಾಧ್ಯವಾಗುತ್ತದೆ. ವ॥ ಎನ್ನಲು ಶ್ವೇತನು ಹೀಗೆಂದನು. ೧೨೨. ಕಾಗೆಯ ಹಾಗೆ ಬಿಲ್ಲಿಗೆ ಹೆದರುತ್ತೀರಿ; ಹೆದರಬೇಡಿ, ಛೀ ಆ ಮುಕ್ಕಣ್ಣನನ್ನು ಆಶ್ರಯಿಸಿ ಕಾದುತ್ತೇನೆಯೆ? ನಾನು! ಇಲ್ಲ. ಇದು ಈಶ್ವರದತ್ತವೆಂಬ ಪ್ರೀತಿಯಿಂದ ಮಾತ್ರ ಇದನ್ನು ಯಾವಾಗಲೂ ಧರಿಸಿದ್ದೇನೆ. ಅಯ್ಯೋ ನಿಮ್ಮನ್ನು ಅಡಗಿಸುವುದಕ್ಕೆ ಧನುರ್ವಿದ್ಯೆ ತಾನೆ ಏಕೆ ನನಗೆ? ಅಲ್ಲದೆ ನಾನು ಬಿಲ್ಲನ್ನು ಹಿಡಿದರೆ ನನ್ನನ್ನು ಪ್ರತಿಭಟಿಸುವ

ಮ॥ ಬಿಸುಟೆಂ ಬಿಲ್ಲನದೇವುದೆಂದು ಕಡುಪಿಂದೀಡಾಡಿ ಸೂರ್ಯಪ್ರಭಾ
ಪ್ರಸರಂಗಳ್ ಮಸುಳ್ವನ್ನೆಗಂ ಪೊಳೆವುದೊಂದಂ ಶಕ್ತಿಯಂ ಕೊಂದಗು ॥
ರ್ವಿಸಿ ಗಾಂಗೇಯನನಿಟ್ಟನಿಟ್ಟೊಡದನೀರಯ್ದಸ್ತ್ರದಿಂದೆಚ್ಚು ಖಂ
ಡಿಸಿ ಪೇರಾಳ ತಿಱೆದಿಕ್ಕಿದಂತೆ ತಲೆಯಂ ಪೋಗೆಚ್ಚನಾ ಶ್ವೇತನಾ ॥ ೧೨೩

ಕಂ॥ ಶ್ವೇತನ ಬೀರಮನುಪಮಾ
ತೀತಮನೀ ಧರೆಗೆ ನೆಗಱ್ ನೆಗಱ್ದುದನಿದನಾಂ ।
ಪಾತಾಳಕ್ಕಱೆಪುವೆನೆಂ
ಬೀ ತೆಱದೊಳೆ ದಿನಪನಪರಜಲನಿಧಿಗಿೞಿದಂ ॥ ೧೨೪

ವ॥ ಆಗಳೆರಡುಂ ಪಡೆಯ ನಾಯಕರಪಹಾರತೂರ್ಯಂಗಳಂ ಬಾಜಿಸಿ ತಮ್ಮ ತಮ್ಮ ಬೀಡುಗಳ್ಗೆ ಪೋದರನ್ನೆಗಮಿತ್ತ ಸಂಸಪ್ತಕಬಲಮನೆಲ್ಲಮನೊಂದೆ ರಥದೊಳಾದಿತ್ಯ ನಸುರರನದಿರ್ಪುವಂತಾಟಂದು ವಿಕ್ರಮಾರ್ಜುನನುಮರಾತಿಕಾಳಾನಳನುಮತಿರಥ ಮಥನನುಂ ರಿಪುಕುರಂಗಕಂಠೀರವನುಂ ಸಾಹಸಾಭರಣನುಮಮ್ಮನ ಗಂಧವಾರಣನುಂ ಪಡೆಮೆಚ್ಚೆಗಂಡನುಂ ಪರಸೈನ್ಯಭೈರವನುಮೆಂಬ ಪೆಸರ್ಗಳನನ್ವರ್ಥಂ ಮಾಡಿ-

ಶೂರನೂ ಇದ್ದಾನೆಯೇ? ೧೨೩. ಇದೋ ಬಿಲ್ಲನ್ನು ಬಿಸುಟಿದ್ದೇನೆ. ಅದರಿಂದೇನಾಗಬೇಕು ಎಂದು ವೇಗದಿಂದ ಎಸೆದು ಸೂರ್ಯಕಾಂತಿ ಸಮೂಹವನ್ನೂ ಮಸಕುಮಾಡುವಷ್ಟು ಕಾಂತಿಯುಕ್ತವಾದ ಒಂದು ಶಕ್ತ್ಯಾಯುಧವನ್ನು ತೆಗೆದುಕೊಂಡು ಆರ್ಭಟಮಾಡಿ ಹೊಡೆದನು. ಆ ಹಿರಿಯನು (ಭೀಷ್ಮನು) ಅದನ್ನು ಹತ್ತು ಬಾಣಗಳಿಂದ ಹೊಡೆದು ಕತ್ತರಿಸಿ ಆ ಶ್ವೇತನ ತಲೆಯನ್ನು ತಿರುಪಿ (ಜಿಗಟೆ) ಕತ್ತರಿಸಿದಂತೆ ಹೊಡೆದು ಹಾಕಿದನು. ೧೨೪. ಈ ಲೋಕದಲ್ಲಿ ಪ್ರಸಿದ್ಧವಾಗಿದ್ದು ಹೋಲಿಕೆಗೂ ಮೀರಿದ್ದ ಈ ಶ್ವೇತನ ಪರಾಕ್ರಮವನ್ನು ನಾನು ಪಾತಾಳಕ್ಕೂ ತಿಳಿಸುತ್ತೇನೆ ಎನ್ನುವ ರೀತಿಯಲ್ಲಿ ಸೂರ್ಯನು ಪಶ್ಚಿಮಸಮುದ್ರಕ್ಕೆ ಇಳಿದನು. ವ॥ ಆಗ ಎರಡು ಸೈನ್ಯದ ನಾಯಕರೂ ಯುದ್ಧವನ್ನು ನಿಲ್ಲಿಸಲು ಸೂಚಕವಾದ ವಾದ್ಯಗಳನ್ನು ಬಾಜಿಸಿ ತಮ್ಮತಮ್ಮ ಬೀಡುಗಳಿಗೆ ಹೋದರು. ಅಷ್ಟರಲ್ಲಿ ಈ ಕಡೆ ಸಂಸಪ್ತಕ ಸೈನ್ಯವೆಲ್ಲವನ್ನೂ ಒಂದೇ ತೇರಿನಲ್ಲಿ ಕುಳಿತು ಸೂರ್ಯನು ರಾಕ್ಷಸರನ್ನು ಅಡಗಿಸುವಂತೆ ಶತ್ರುಗಳ ಮೇಲೆ ಬಿದ್ದು ಅರ್ಜುನನೂ ಕೂಡಿ ತನ್ನ ಅರಾತಿಕಾಳಾನಳ, ಅತಿರಥಮಥನ, ರಿಪುಕುರಂಗಕಂಠೀರವ, ಸಾಹಸಾಭರಣ, ಗಂಧವಾರಣ, ಪಡೆಮೆಚ್ಚಗಂಡ, ಪರಸೈನ್ಯಭೈರವ ಎಂಬ ತನ್ನ ಹೆಸರುಗಳನ್ನು ಸಾರ್ಥಕವಾಗುವಂತೆ (ಅರ್ಥಕ್ಕನುಗುಣವಾಗುವಂತೆ) ಮಾಡಿದನು.

ಚಂ॥ ನೆರೆದನುರಾಗದಿಂ ಪಡೆಯ ಪಾಡಿಯ ಬೀರರ ಪೆಂಡಿರೞ್ಕಱಿಂ
ಪರಸಿಯೊಱಲ್ದು ಸೇಸೆಗಳನಿಕ್ಕೆ ಮುರಾರಿಯ ಪಾಂಚಜನ್ಯ ವಿ।
ಸ್ಫುರಿತ ರವಂ ಜಯೋತ್ಸವದ ಘೋಷಣೆಯಂತಿರೆ ಪೊಕ್ಕನಾತ್ಮ ಮಂ
ದಿರಮನುದಾತ್ತಚಿತ್ತನವನೀತಳ ಪೂಜ್ಯಗುಣಂ ಗುಣಾರ್ಣವಂ ॥ ೧೨೫

ಇದು ವಿವಿಧ ವಿಬುಧಜನವಿನುತ ಜಿನಪದಾಂಭೋಜ
ವರ ಪ್ರಸಾದೋತ್ಪನ್ನ ಪ್ರಸನ್ನ ಗಂಭೀರ ವಚನ ರಚನ
ಚತುರ ಕವಿತಾಗುಣಾರ್ಣವ ವಿರಚಿತಮಪ್ಪ
ವಿಕ್ರಮಾರ್ಜುನ ವಿಜಯದೊಳ್
ದಶಮಾಶ್ವಾಸಂ

೧೨೫. ಸೈನ್ಯಸಮೂಹದಲ್ಲಿದ್ದ ವೀರಸ್ತ್ರೀಯರು ಸಂತೋಷದಿಂದ ಒಟ್ಟುಗೂಡಿ ಪ್ರೀತಿಯಿಂದ ಹರಸಿ ಸೇಸೆಯನ್ನಿಕ್ಕಿದರು. ಶ್ರೀಕೃಷ್ಣನ ಪಾಂಚಜನ್ಯವೆಂಬ ಶಂಖದ ವಿಜೃಂಭಿತ ಧ್ವನಿಯು ವಿಜಯೋತ್ಸವದ ಡಂಗುರದಂತಿತ್ತು. ಉದಾತ್ತಚಿತ್ತನೂ ಭೂಮಂಡಲದಲ್ಲಿ ಪೂಜಿಸಲ್ಪಡುವ ಗುಣಗಳಿಂದ ಕೂಡಿದವನೂ ಆದ ಗುಣಾರ್ಣವನು ತನ್ನ ಮಂದಿರವನ್ನು ಪ್ರವೇಶಿಸಿದನು. ಇದು ಅನೇಕ ದೇವತೆಗಳಿಂದ ಸ್ತುತಿಸಲ್ಪಟ್ಟ ಜಿನಪಾದಕಮಲಗಳ ವರಪ್ರಸಾದದಿಂದ ಹುಟ್ಟಿ ತಿಳಿಯೂ ಗಂಭೀರವೂ ಆದ ಮಾತುಗಳ ರಚನೆಯಲ್ಲಿ ಚಾತುರ್ಯವುಳ್ಳ ಕವಿತಾಗುಣಾರ್ಣವನಿಂದ ರಚಿತವಾದುದೂ ಆದ 'ವಿಕ್ರಮಾರ್ಜುನ ವಿಜಯ'ದಲ್ಲಿ ಹತ್ತನೆಯ ಆಶ್ವಾಸ.

# ಏಕಾದಶಾಶ್ವಾಸಂ

ಕಂ॥ ಶ್ರೀ ಯುವತಿಯನಾ ವೀರ
ಶ್ರೀ ಯುವತಿಗೆ ಸವತಿಮಾೞ್ಪೆನೆಂದರಿ ನೃಪರು ।
ಳ್ಳಾಯುವೆರಸೆೞೆದುಕೊಂಡು ಧ
ರಾ ಯುವತಿಗೆ ನೆಗಟ್ದ ಹರಿಗನೊರ್ವನೆ ಗಂಡಂ ॥ ೧

ಎಂಬ ನಿಜ ಚರಿತಮಂ ಪಲ
ರುಂ ಬಣ್ಣಿಸೆ ಕಿವಿಯನಾಂತು ಕೇಳುತ್ತುಮಳುಂ ।
ಬಂ ಬೀರಮೆನಿಸಿ ತನಗಿದಿ
ರಂ ಬಂದು ಕಡಂಗಿ ಸತ್ತರಂ ಪೊಗೞುತ್ತುಂ ॥ ೨

ವ॥ ಅಂತು ವಿಕ್ರಾಂತ ತುಂಗನಿರ್ಪನ್ನೆಗಮಿತ್ತಲೆರಡುಂ ಪಡೆಯ ನಾಯಕರೞಿಯೆ ನೊಂದ ತಮ್ಮಣುಗಾಳ್ಗಳ ಕೊಂಡಾಟದಾನೆಗಳ ನಚ್ಚಿನ ಕುದುರೆಗಳ ಪುಣ್ಗಳನುಡಿಯಲುಮೋವಲುಂ ಮದ್ದುಂಬೆಜ್ಜರಮನಟ್ಟುತ್ತುಮಿಕ್ಕಿದ ಸನ್ನಣಂಗಳಂ ಗೆಲ್ದು ಕಣಕೆನೆ ಪೋಗುರ್ಚೆ ತಮ್ಮ ಮೆಯ್ಯೊಳುಡಿದಂಬುಗಳುಮನೆಲ್ವಂ ನಟ್ಟುಡಿದ ಬಾಳ ಕಕ್ಕಡೆಯುಡಿಗಳುಮನಯಸ್ಕಾಂತಮಂ ತೋಱಿ ತೆಗೆಯಿಸುತ್ತುಂ ವಜ್ರಮುಷ್ಟಿಯ ಪೊಯ್ಲೊಳಂ ಬಾಳ ಕೋಳೊಳಮುಚ್ಚಳಿಸಿದ ಕಪಾಲದೋಡುಗಳಂ ಗಂಗೆಗಟ್ಟುತ್ತುಂ-

೧. ಐಶ್ವರ್ಯಲಕ್ಷ್ಮಿಗೆ ಜಯಲಕ್ಷ್ಮಿಯನ್ನು ಸವತಿಯನ್ನಾಗಿ ಮಾಡುತ್ತೇನೆಂದು ಶತ್ರುರಾಜರನ್ನು ಅವನ ಸಮರಸಾಮರ್ಥ್ಯದಿಂದ ಸೆಳೆದು ಅಧೀನಮಾಡಿಕೊಂಡು ಭೂದೇವಿಯ ಒಡೆಯನಾದ (ಭೂಪತಿ) ಅರ್ಜುನನೊಬ್ಬನೇ ಶೂರನಾದವನು ೨. ಎಂಬ ತನ್ನ ಚರಿತ್ರವನ್ನು ಅನೇಕರು ವರ್ಣಿಸುತ್ತಿರಲು ಅದನ್ನು ಕಿವಿಗೊಟ್ಟು ಕೇಳುತ್ತಲೂ ಅತಿಶಯ ಸಾಹಸಿಗಳೆನಿಸಿಕೊಂಡು ಉತ್ಸಾಹದಿಂದ ತನಗೆ ಇದಿರಾಗಿ ಬಂದು ಕಾದಿ ಸತ್ತವರನ್ನು ಹೊಗಳುತ್ತಲೂ ಇದ್ದನು. ವ॥ ಹಾಗೆ ಅತ್ಯಂತ ಪರಾಕ್ರಮಿಯಾದ ಅರ್ಜುನನು ಇರುತ್ತಿರಲು ಎರಡು ಸೈನ್ಯದ ನಾಯಕರೂ ಸಾಯುವಷ್ಟು ನೋವನ್ನು ಪಡೆದಿದ್ದ ತಮ್ಮ ಪ್ರೀತಿಪಾತ್ರರಾದ ಸೇವಕರ, ತಮ್ಮ ಹೊಗಳಿಕೆಗೆ ಪಾತ್ರವಾದ ಆನೆಗಳ, ತಮ್ಮ ಮೆಚ್ಚಿನ ಕುದುರೆಗಳ ಹುಣ್ಣುಗಳನ್ನು (ಗಾಯವನ್ನು) ಗುಣಪಡಿಸುವುದಕ್ಕೂ ರಕ್ಷಿಸುವುದಕ್ಕೂ ಔಷಧವನ್ನೂ ಲೇಪನವನ್ನೂ ಕಳುಹಿಸುತ್ತಿದ್ದರು. ಅವರು ಧರಿಸಿದ್ದ ಕವಚಗಳನ್ನೂ ಭೇದಿಸಿಕೊಂಡು ನೇರವಾಗಿ ಒಳಕ್ಕೆ ಪ್ರವೇಶಿಸಿ ಚುಚ್ಚಿಕೊಂಡು ಶರೀರದೊಳಗೆ ಮುರಿದುಹೋಗಿದ್ದ ಬಾಣಗಳನ್ನೂ ಎಲುಬುಗಳನ್ನೂ ಕತ್ತಿ ಮತ್ತು ಮುಳ್ಳುಗೋಲುಗಳ ಚೂರುಗಳನ್ನೂ ಸೂಜಿಗಲ್ಲನ್ನು (ಅಯಸ್ಕಾಂತ) ತೋರಿಸಿ ತೆಗೆಯಿಸುತ್ತಿದ್ದರು. ವಜ್ರಮುಷ್ಟಿಯ ಪೆಟ್ಟಿನಿಂದಲೂ ಕತ್ತಿಯ ಇರಿತದಿಂದಲೂ ಸಿಡಿದುಹೋದ ತಲೆಯ ಚಿಪ್ಪುಗಳನ್ನು ಗಂಗಾನದಿಗೆ ಕಳುಹಿಸುತ್ತಿದ್ದರು.

ಉ॥ ಉನ್ನತಮಸ್ತಕಸ್ಥಳದೊಳಂಬುಗಳಬ್ಬುಡಿದಿರ್ದೊಡತ್ತಮಿ
ತ್ತನ್ನೆಱಿ ತಂದು ಬಲ್ಲಡಿಗರಿಟ್ಟುಱಿನೊಳ್ ಕಿಱಿ ನೊಂದೆನೆನ್ನದಃ ।
ಎನ್ನದಣಂ ಮೊಗಂ ಮುರಿಯದಳ್ಕದೆ ಬೇಸೆಗಳೊಳ್ ಮೊಗಂಗಳಂ
ಬಿನ್ನಗೆ ಮಾಡದಿರ್ದರಳವಚ್ಚರಿಯಾಗೆ ಕೆಲರ್ ಮಹಾರಥರ್ ॥ ೩

ಚಂ॥ ರಸಮೊಸರ್ವನ್ನೆಗಂ ತಗುಳೆ ಪಾಡುವ ಗಾಣರ ಗೇಯಮಬ್ಕಱಂ
ಪೊಸಯಿಸೆ ಸೋಂಕುವೊಲ್ದೊಲಿಸುವೋಪಳ ಸೋಂಕು ಪೊದಬ್ದಿ ಜಾದಿಯೊಳ್ ।
ಮಸಗಿದ ಕಂಪು ಕಂಪನೊಳಕೊಂಡಲೆವೊಂದೆಲರೆಂಬಿವಂದು ಪಾ
ಱಿಸುವುವುದಗ್ರ ವೀರ ಭಟರಾಹವಕೇಳಿ ಪರಿಶ್ರಮಂಗಳಂ ॥ ೪

ವ॥ ಆಗಳ್ ಧರ್ಮನಂದನಂ ಮುಕುಂದಂಗೆ ಬಱಿಯನಟ್ಟಿ ಬರಿಸಿ ನಮ್ಮ ಸೇನಾನಾಯಕ ಸುತ್ತಾಯಕನಾಗಿ ಗಾಂಗೇಯರಿಂದಮಱಿದನಿನ್ನಾರ್ಗೆ ವೀರಪಟ್ಟಮಂ ಕಟ್ಟುವಂ ಪೇಱಿಮೆನೆ-

ಕಂ॥ ಬೇಳ್ವೆಯ ಕೊಂಡದೊಳುರ್ಚಿದ
ಬಾಳ್ವೆರಸರಿಬಲಮನರಿಯಲೆಂದಂಕದ ಕ ।
ಟ್ಟಾಳ್ವೀರನತಿ ಬಲಂ ನಿನ
ಗಾಳ್ವೆಸಕೆಂದಿರ್ದನಲ್ತೆ ಧೃಷ್ಟದ್ಯುಮ್ನಂ ॥ ೫

೩. ಎತ್ತರವಾದ ತಲೆಯ ಪ್ರದೇಶದಲ್ಲಿ ಬಾಣಗಳು ನಾಟಿಕೊಂಡು ಮುರಿದಿರಲು ಬಲಿಷ್ಠರಾದ ದಾಂಡಿಗರು ಆ ಕಡೆಯಿಂದ ಈ ಕಡೆಯಿಂದ ಒಟ್ಟಾಗಿ ಬಂದು ಸೇರಿ ಇಕ್ಕಳದಿಂದ ಅವುಗಳನ್ನು ಕೀಳುತ್ತಿದ್ದರೂ ನೋವಾಯಿತು ಎನ್ನದೆ ಅಃ ಎನ್ನದೆ ಸ್ವಲ್ಪವೂ ಮುಖವನ್ನು ತಿರುಗಿಸದೆ ಹೆದರದೆ ಮುಖವನ್ನು ಪೆಚ್ಚಾಗಿ ಮಾಡಿಕೊಳ್ಳದೆ ಕೆಲವು ಮಹಾರಥರು ತಮ್ಮ ಸಾಮರ್ಥ್ಯವು ಆಶ್ಚರ್ಯಕರವಾಗುವ ಹಾಗೆ ಇದ್ದರು. ೪. ರಸವು ಪ್ರಸರಿಸುವವರೆಗೂ ಬಿಡದೆ ಹಾಡುವ ಗಾಯಕಿಯರ ಗಾನ, ಪ್ರೀತಿಯನ್ನು ಉಂಟುಮಾಡುವಂತೆ ಹತ್ತಿರವೇ ಕುಳಿತು ಸುಖವನ್ನು ಹೆಚ್ಚಿಸುತ್ತಿರುವ ಪ್ರಿಯಳ ಸ್ಪರ್ಶ, ಎಲ್ಲೆಡೆಯೂ ಹರಡಿದ ಜಾಜಿಯ ವಿಜೃಂಭಿಸಿದ ವಾಸನೆಯಿಂದ ಕೂಡಿದ ಗಾಳಿ ಎಂಬುವು ಶ್ರೇಷ್ಠರಾದ ವೀರಭಟರ ಯುದ್ಧಪರಿಶ್ರಮವನ್ನು ಹೋಗಲಾಡಿಸುತ್ತಿದ್ದುವು. ವ॥ ಆಗ ಧರ್ಮರಾಜನು ಶ್ರೀಕೃಷ್ಣನಲ್ಲಿಗೆ ದೂತನನ್ನು ಕಳುಹಿಸಿ ಬರಮಾಡಿಕೊಂಡು 'ನಮ್ಮ ನಾಯಕನು ತನ್ನ ಪ್ರತಾಪವನ್ನು ಮೆರೆದು ಭೀಷ್ಮರಿಂದ ನಾಶವಾದನು. ಇನ್ನಾರಿಗೆ ವೀರಪಟ್ಟವನ್ನು ಕಟ್ಟೋಣ ಹೇಳಿ' ಎಂದು ಕೇಳಿದನು. ೫. ಯಜ್ಞಕುಂಡದಲ್ಲಿ ಬಿಚ್ಚಿದ ಕತ್ತಿಯಿಂದ ಕೂಡಿ ಶತ್ರುರಾಜರನ್ನು ಕತ್ತರಿಸುವುದಕ್ಕಾಗಿಯೇ ಉದ್ಭವಿಸಿದ, ಸುಪ್ರಸಿದ್ಧನೂ ಮಹಾಬಲಿಷ್ಠನೂ ವೀರನೂ ಆದ ಧೃಷ್ಟದ್ಯುಮ್ನನು ನಿನಗೆ ಸೇವೆಮಾಡಲೆಂದೇ ಸಿದ್ಧನಾಗಿದ್ದಾನೆಯಲ್ಲವೇ? ವ॥ ಎನ್ನಲು ಈ ಕಾರ್ಯ ನನ್ನ ಮನಸ್ಸಿಗೂ ಒಪ್ಪಿದ ಕಾರ್ಯವೇ. ಅವನೇ ವೀರಪಟ್ಟಕ್ಕೆ ಯೋಗ್ಯನಾದವನು ಎಂದು ಧರ್ಮರಾಜನು ದ್ರುಪದನ ಮಗನಾದ ಧೃಷ್ಟದ್ಯುಮ್ನನಿಗೆ ಹೇಳಿಕಳುಹಿಸಿ ಬರಮಾಡಿ ವಿಶೇಷಪ್ರೀತಿಯಿಂದ

ವ|| ಎಂಬುದುಮೀ ಕಜ್ಜಮೆನ್ನ ಮನದೊಳೊಡಂಬಟ್ಟು ಕಜ್ಜಮಾತನೆ ವೀರಪಟ್ಟಕ್ಕೆ ತಕ್ಕನೆಂದು ಧರ್ಮನಂದನಂ ದ್ರುಪದನಂದನಂಗೆ ಬೞಿಯನಟ್ಟಿ ಬರಿಸಿ ಪಿರಿದುಮೊಸಗೆವೆರಸು ತಾನೆ ವೀರಪಟ್ಟಮಂ ಕಟ್ಟಿ-

ಕಂ|| ಆ ಸಮರಮುಖದೊಳಿಸೆವರಿ
ಕೇಸರಿಯ ವಿರೋಧಿ ರುಧಿರ ಜಲನಿಧಿವೊಲ್ ಸಂ ।
ಧ್ಯಾಸಮಯಮೆಸೆಯೆ ತಟತಟ
ನೇಸಱ್ ಮೂಡುವುದುಮೊಡ್ಡಣಕ್ಕೆಟ್ಟಿಂದರ್ ॥ ೬

ವ|| ಅಂತಜಾತಶತ್ರು ಮುನ್ನಮೆ ಬಂದೊಡ್ಡಿ ಶತ್ರುಬಲಜಲನಿಧಿಯಳ್ಕಾಡೆ ಪ್ರಳಯ ಕಾಳಾನಿಳನೆ ಬೀಸುವಂತೆ ಕೆಯ್ವೀಸಿದಾಗಳ್-

ಮ|| ಚತುರಂಗಂ ಚತುರಂಗ ಸೈನ್ಯದೊಳದುರ್ತ್ತುಂ ತಿಳ್ಸನೆಯ್ತಂದು ತಾ
ಗಿ ತಡಂಮೆಟ್ಟದೆ ಕಾದೆ ಬಾಳ್ಗಳುಡಿಗಳ್ ಜೇಜೇಟ್ಟು ಮಾರ್ತಾಗಿ ಶೋ ।
ಣಿತ ಧಾರಾಳಿಗಳುರ್ಚಿ ಪೆರ್ಚಿ ಸಿಡಿಯಲ್ ತೇಂಕಲ್ ವಿಮಾನಂಗಳ
ಳ್ಕಿ ತಗುಳ್ವಾಗಳೆ ಮತ್ತಮತ್ತ ತಳರ್ದರ್ ದೇವರ್ ನಭೋಭಾಗದೊಳ್ ॥ ೭

ವ|| ಆಗಳೆರಡುಂ ಪಡೆಯ ನಾಯಕರೊಂದೊರ್ವರೊಳ್ ತಾಗಿ ಕಿಡಿಗುಟ್ಟಿದಂತೆ ಕಾದುವಾಗಳಭಿಮನ್ಯು ಉಗ್ರತೇಜಸಪ್ಪ ಮಗಧತನೂಜನನೊಂದೆ ಪಾಱೆಯುಂಬಿನೊಳ್ ಕೆಯ್ಯ ಕೂಸನಿಕ್ಕುವಂತಿಕ್ಕುವುದುಂ ನೆಪ್ಪಿಂಗೆ ನೆಪ್ಪುಗೊಳ್ಳದೆ ಮಾಣೆನೆಂಬಂತೆ ಬಕಾಸುರನ ಮಗನಳಂಭೂಷನರ್ಜುನನ ಮಗನಿಳಾವಂತನನಂತಕಲೋಕಮನೆಯ್ದಿಸುವುದುಂ

ಕೂಡಿ ತಾನೆ ವೀರಪಟ್ಟವನ್ನು ಕಟ್ಟಿದನು. ೬. ಆ ಯುದ್ಧಪ್ರಾರಂಭದಲ್ಲಿ ಪ್ರಸಿದ್ಧನಾದ ಅರ್ಜುನನ ಶತ್ರುಗಳ ರಕ್ತ ಸಮುದ್ರದ ಹಾಗೆ ಸಂಧ್ಯಾಕಾಲವು ಪ್ರಕಾಶಿಸುತ್ತಿರಲು ಸೂರ್ಯನು ತಳತಳನೆ ಉದಯಿಸಿದನು. ಎಲ್ಲರೂ ಯುದ್ಧರಂಗಕ್ಕೆ ಬಂದು ಸೇರಿದರು. ವ|| ಧರ್ಮರಾಜನು ಮೊದಲೇ ಬಂದು ಸೈನ್ಯವನ್ನೊಡ್ಡಿ ಶತ್ರುಸೇನಾಸಮುದ್ರವು ನಡುಗುವಂತೆಯೂ ಪ್ರಳಯಕಾಲದ ಮಾರುತವು ಬೀಸುವ ಹಾಗೆಯೂ ಯುದ್ಧಪ್ರಾರಂಭಸೂಚಕವಾಗಿ ಕೈಬೀಸಿದನು. ೭. ಒಂದು ಚತುರಂಗಸೈನ್ಯವು ಮತ್ತೊಂದು ಚತುರಂಗಸೈನ್ಯವನ್ನು ಸಮೀಪಿಸಿ ಬಂದು ತಿಜ್ರನೆ ತಗುಲಿ ಸಾವಕಾಶ ಮಾಡದೆ ಕಾದಿದವು. ಕತ್ತಿಯ ಚೂರುಗಳು ಜೇರ್ ಎಂದು ಶಬ್ದ ಮಾಡಿಕೊಂಡು ತಮ್ಮತಮ್ಮಲ್ಲೇ ತಗಲಿದುವು. ರಕ್ತಧಾರೆಗಳು ಮೇಲಕ್ಕೆದ್ದು ಹಾರಿ ಸಿಡಿದುವು. ವಿಮಾನಗಳು ತೇಲಾಡಿದುವು. ಅಂತರಿಕ್ಷಭಾಗದಲ್ಲಿ ದೇವತೆಗಳು ಹೆದರಿ ಒಟ್ಟಾಗಿ ಸೇರಿ ಅತ್ತಿತ್ತ ಜಾರಿದರು. ವ|| ಆಗ ಎರಡು ಸೈನ್ಯದ ನಾಯಕರೂ ಒಬ್ಬರಲ್ಲಿ ಒಬ್ಬರು ತಾಗಿ ಕೆಂಡವನ್ನು ಸುರಿಸುವ ಹಾಗೆ ಯುದ್ಧಮಾಡಲು ಅಭಿಮನ್ಯುವು ಬಹಳ ಉಗ್ರವಾದ ತೇಜಸ್ಸನ್ನುಳ್ಳ ಭಗದತ್ತನನ್ನು ಒಂದೇ ಹಾರುವ ಬಾಣದಿಂದ ಕಯ್ಯಲ್ಲಿರುವ ಕೂಸನ್ನು ಬಡಿಯುವಂತೆ ನೆಲಕ್ಕೆ ಅಪ್ಪಳಿಸಿದನು. ಕೊಲೆಗೆ ಪ್ರತಿಯಾಗಿ ಕೊಲೆಮಾಡದೆ ಬಿಡುವುದಿಲ್ಲ ಎನ್ನುವ ಹಾಗೆ ಬಕಾಸುರನ ಮಗನಾದ ಅಳಂಭೂಷನೆಂಬುವನು ಅರ್ಜುನನ ಮಗನಾದ ಇಳಾವಂತನೆಂಬುವನನ್ನು ಯಮಲೋಕಕ್ಕೆ ಕಳುಹಿಸಿದನು.

ಘಟೋತ್ಕಚನಿಳಾವಂತನ ಸಾವಂ ಕಂಡು ಸೈರಿಸದಳಂಭೂಷನನೆಟ್ಟಿಟ್ಟುವುದುಮವನಳ್ಕಿ ಭಗದತ್ತನಾನೆಯ ಮಱೆಯಂ ಪುಗುವುದುಮಳಂಭೂಷನಂ ಪಿಂತಿಕ್ಕಿ ಭಗದತ್ತಂ ಘಟೋತ್ಕಚನಂ ಮಾರ್ಕೊಂಡು-

ಕಂ॥ ಉತ್ಕೋಪ ದಹನದೊಡನೆ ಪೃ
ಷತ್ಕಂಗಳ್ ಕೋಟಿ ಗಣಿತದಿಂದುಱುವಿನಮಾ ।
ದುರ್ತ್ಕಚ ದಿತಿಜನನುಱದೆ ಘ
ಟೋತ್ಕಚನಂ ಬಿಟ್ಟು ಮೂರ್ಛೆವೋಪಿನಮೆಚ್ಚಂ ॥ ೮

ವ॥ ಅನ್ನೆಗಂ ವೃಕೋದರಂ ಚತುರ್ದಶ ಭುವನಂಗಳೆಲ್ಲಮಂ ತೆರಳ್ಚಿ ತೇರ್ರೈಸಿ ನುಂಗುವಂತೆ ಮಸಕದಿಂ ಭಗದತ್ತನಂ ಮಾರ್ಕೊಂಡು-

ಚಂ॥ ಇಸುವುದುಮೆಚ್ಚ ಶಾತ ಶರ ಸಂತತಿಯಂ ಭಗದತ್ತನೆಯ್ದೆ ಖಂ
ಡಿಸಿ ರಥಮಂ ಪಡಲ್ವಡಿಸೆ ಮಚ್ಚರದಿಂ ಗಜೆಗೊಂಡು ತಾಗೆ ಮಾ ।
ಣಿಸಲಮರಾಪಗಾಸುತನಿದಿರ್ಚುವುದುಂ ರಥಮಟ್ಟೆ ಪೊಯ್ದು ಶಂ
ಕಿಸದಿದಿರಾಂತ ಸೈಂಧವನುಮಂ ಪವನಾತ್ಮಜನೋಡೆ ಕಾದಿದಂ ॥ ೯

ವ॥ ಅಂತು ಕಾದೆ ಸಿಂಧುರಾಜನ ಬೆಂಬಲದೊಳ್ ಕಾದಲೆಂದು ಬಂದ ನೂರ್ವರ್ ಕೌರವರುಂ ಭೀಮನೊಳ್ ತಾಗೆ ತಾಗಿದ ಬೇಗದಿಂ ದುರ್ಧರ್ಷಣ ದುರ್ಮರ್ಷಣ ದೀರ್ಘಬಾಹು ಮಹಾಬಾಹು ಚಿತ್ರೋಪಚಿತ್ರ ನಂದೋಪನಂದರ್ ಮೊದಲಾಗೆ ಮೂವತ್ತು ಮೂವರಂ ಜವಂಗೆ ಬಿರ್ದನಿಕ್ಕುವಂತಿಕ್ಕಿ ಮುತ್ತಿನುಟಿದರುಮನುಟಿಯಲೀಯದೆ ಬೞಿಸಂದಾಗಳ್-

ಘಟೋತ್ಕಚನು ಇಳಾವಂತನ ಸಾವನ್ನು ಸೈರಿಸಲಾರದೆ ಅಳಂಭೂಷನನ್ನು ಎದುರಿಸಲು ಅವನು ಹೆದರಿ ಭಗದತ್ತನ ಆನೆಯನ್ನು ಮರೆಹೊಕ್ಕನು. ಭಗದತ್ತನು ಅಳಂಭೂಷನನ್ನು ಹಿಂದಕ್ಕೆ ತಳ್ಳಿ ಘಟೋತ್ಕಚನನ್ನು ಪ್ರತಿಭಟಿಸಿದನು. ೮. ಅತ್ಯತಿಶಯವಾದ ಕೋಪಾಗ್ನಿಯೊಡನೆ ಬಾಣಗಳು ಕೋಟಿಸಂಖ್ಯೆಯಿಂದ ಹೆಚ್ಚಾಗುತ್ತಿರಲು ಆರ್ಭಟಿಸಿ ಕೆದರಿದ ಕೂದಲನ್ನುಳ್ಳ ರಾಕ್ಷಸನಾದ ಘಟೋತ್ಕಚನನ್ನು ಮೂರ್ಛೆಹೋಗುವ ಹಾಗೆ ಭಗದತ್ತನು ಹೊಡೆದನು. ವ॥ ಅಷ್ಟರಲ್ಲಿ ಭೀಮನು ಹದಿನಾಲ್ಕು ಲೋಕಗಳನ್ನೂ ಉಂಡೆ ಮಾಡಿ ಚಪ್ಪರಿಸಿ ನುಂಗುವಂತೆ ರೇಗಿ ಭಗದತ್ತನನ್ನು ಪ್ರತಿಭಟಿಸಿದನು. ೯. ಅವನ ಆ ಹರಿತವಾದ ಬಾಣಸಮೂಹವನ್ನು ಭಗದತ್ತನು ಪೂರ್ಣವಾಗಿ ಕತ್ತರಿಸಿ ರಥವನ್ನು ಉರುಳಿಸಲು ಭೀಮನು ಮತ್ಸರದಿಂದ ಗದೆಯನ್ನು ಧರಿಸಿ ತಾಗಿದನು. ಅದನ್ನು ತಪ್ಪಿಸಲು ಭೀಷ್ಮನು ಎದುರಿಸಿದನು. ಭೀಮನು ಅವನ ರಥವನ್ನು ನಾಶವಾಗುವಂತೆ ಹೊಡೆದು ಸಂದೇಹವೇ ಪಡದೆ, ತನ್ನನ್ನು ಎದುರಿಸಿದ ಸೈಂಧವನನ್ನು ಪಲಾಯನಗೊಳ್ಳುವಂತೆ ಕಾದಿದನು. ವ॥ ಸೈಂಧವನ ಸಹಾಯಕನಾಗಿ ಕಾದಲು ಬಂದ ನೂರುಮಂದಿ ಕೌರವರೂ ಭೀಮನನ್ನು ಮುತ್ತಿದರು. ತಕ್ಷಣವೇ ದುರ್ಧರ್ಷಣ, ದುರ್ಮರ್ಷಣ, ದೀರ್ಘಬಾಹು, ಮಹಾಬಾಹು, ಚಿತ್ರೋಪಚಿತ್ರ, ನಂದೋಪನಂದರೇ ಮೊದಲಾದ ಮೂವತ್ತುಮೂರು ಜನರನ್ನು ಭೀಮನು ಯಮನಿಗೆ ಆತಿಥ್ಯ ಮಾಡುವ ಹಾಗೆ ಹೊಡೆದು ಕೊಂದನು. ಇನ್ನುಳಿದವರನ್ನೂ ಉಳಿಯುವುದಕ್ಕೆ

ಮ|| ಮೊದಲಿಟ್ಟಂ ಕೊಲಲೆಂದು ಕೌರವರನಿನ್ನೇಕಿರ್ಪನಾರ್ದುರ್ಚಿ ಮು
ಕ್ಕಿದಿವಂಗಾಂ ಕರಮೆಯ್ದೆ ಕೂರ್ಪೆನಿವರುಂ ಸತ್ತಪ್ಪರಿಂದಿಂಗ ಕಾ ।
ಪ್ಪವನಾಂ ಕಾವೆನೆನುತ್ತೆ ಬೇಱೆ ರಥಮಂ ಬಂದೇಱೆ ಪೋ ಪೋಗಲೆಂ
ದೊದಱುತ್ತುಂ ಪರಿತಂದು ತಾಗಿ ತಗರ್ದಂ ಗಂಗಾಸುತಂ ಭೀಮನಂ ||೧೦

ವ|| ಅನ್ನೆಗಮತ್ತ ಸಂಸಪ್ತಕ ಬಲಮೆಲ್ಲಮನಳಱೆ ಪೆಳಱೆ ಕಿವುಟೆದುಟೆದು ಕೊಲ್ವಲ್ಲಿ ವಿಕ್ರಮಾರ್ಜುನಂ ಮುರಾಂತಕನೊಳಿಂತೆಂದಂ–

ಚಂ|| ಪ್ರಳಯ ಪಯೋಧಿ ನಾದಮನೆ ಪೋಲ್ತು ರಣಾನಕ ರಾವಮೀಗಳ
ಗ್ಗಳಮೆಸೆದಪ್ಪುದತ್ತ ಕಱೆಪಂಬಸ ಬಲ್ಸರಿಯಿಂದಮಾ ದಿಶಾ ।
ವಳಿ ಮಸುಳ್ದಿಂತು ನೀಳ್ದಪ್ಪುದು ಪೋಗದೆ ಕಾದುವ ಗಂಡರಿಲ್ಲ ನಿ
ನ್ನಳಿಯನುಮಾ ವೃಕೋದರನುಮಲ್ಲದರಿಲ್ಲ ಪೆಱರ್ ಮುರಾಂತಕಾ || ೧೧

ಚಂ|| ಗುರು ಗುರುಪುತ್ರ ಶಲ್ಯ ಭಗದತ್ತ ನದೀಸುತರೆಂಬ ಸಂದ ಬೀ
ರರೆ ಮಱುವಕ್ಕಮಣ್ಣನೊಡನಿರ್ಪರೆ ಕೂಸುಗಳೆಂಬ ಶಂಕೆಯುಂ ।
ಪಿರಿದೆನಗೀಗಳಾದಪುದು ಮಾಣದೆ ಚೋದಿಸು ಬೇಗಮತ್ತಲ
ತ್ತ ರಥಮನೆಂದು ಭೋರ್ಗರೆಯೆ ಬಂದನರಾತಿಗೆ ಮಿಱ್ತು ಬರ್ಪವೋಲ್|| ೧೨

ವ|| ಅಂತು ನೆಲನದಿರೆ ಬರ್ಪ ವಿಕ್ರಮಾರ್ಜುನನ ಬರವಿಂಗೆ ಕುರುಬಲಮೆಲ್ಲ ಮೊಲ್ಲನುಲಿದೋಡಿ ಸುರಾಪಗಾನಂದನನ ಮಱೆಯಂ ಪೊಕ್ಕಾಗಳ್–

ಅವಕಾಶ ಕೊಡದೆ ಸಮೀಪಕ್ಕೆ ಬಂದಾಗ ೧೦. 'ಇವನು ಕೌರವರನ್ನು ಕೊಲ್ಲಬೇಕೆಂದು ಪ್ರಾರಂಭಿಸಿದ್ದಾನೆ. ಆರ್ಭಟಮಾಡಿ ಕತ್ತರಿಸಿ ನುಂಗದೇ ಬಿಡುವುದಿಲ್ಲ. ಇವನನ್ನು ನಾನು ವಿಶೇಷವಾಗಿ ಪ್ರೀತಿಸುತ್ತೇನೆ. ಇವರೂ ಸತ್ತುಹೋಗುತ್ತಾರೆ ಎಂಬುದು ನಿಜವೇ ಆದರೂ ಈ ದಿನ ನಾನು ಸಾಮರ್ಥ್ಯವಾದಷ್ಟು ರಕ್ಷಿಸುತ್ತೇನೆ ಎನ್ನುತ್ತ ಬೇರೊಂದು ರಥವನ್ನು ತರಿಸಿ ಅದನ್ನು ಏರಿಕೊಂಡು 'ಹೋಗಬೇಡ, ಹೋಗಬೇಡ' ಎಂಬುದಾಗಿ ಕೂಗಿಕೊಳ್ಳುತ್ತಾ ಓಡಿ ಬಂದು ಭೀಷ್ಮನು ಭೀಮನನ್ನು ತಡೆಗಟ್ಟಿದನು. ವ|| ಅಷ್ಟರಲ್ಲಿ ಆ ಕಡೆ ವಿಕ್ರಮಾರ್ಜುನನು ಸಂಸಪ್ತಕಬಲವನ್ನೆಲ್ಲ ಹೆದರಿ ಬೆವರುವಂತೆ ಅವುಕಿ ಹಿಂಡಿ ಕೊಲ್ಲುತ್ತ ಕೃಷ್ಣನೊಡನೆ ಹೀಗೆಂದನು- ೧೧. ಈಗ ರಣಭೇರಿಯ ಧ್ವನಿಯು ಪ್ರಳಯಸಮುದ್ರದ ಧ್ವನಿಯಂತೆ ಕೇಳಿಸುತ್ತಿದೆ. ಆ ಕಡೆ ಸುರಿಯುತ್ತಿರುವ ಬಾಣದ ಮಳೆಯಿಂದ ಆ ದಿಕ್ಕುಗಳ ಸಮೂಹವು ಮಾಸಲಾಗಿ ಕಾಂತಿಹೀನವಾಗಿ ಚಾಚಿಕೊಂಡಿದೆ. ಕೃಷ್ಣ, ನಿನ್ನಳಿಯನಾದ ಅಭಿಮನ್ಯು ಮತ್ತು ಭೀಮನು ವಿನಾ ಕಾದುವ ಶೂರರು ಮತ್ತಾರೂ ಅಲ್ಲಿ ಇಲ್ಲ. ೧೨. ಶತ್ರುಪಕ್ಷದಲ್ಲಿ ದ್ರೋಣ, ಅಶ್ವತ್ಥಾಮ, ಶಲ್ಯ, ಭಗದತ್ತ, ಭೀಷ್ಮ ಮೊದಲಾದ ಪ್ರಸಿದ್ಧ ವೀರರಿದ್ದಾರೆ. ನಮ್ಮ ಕಡೆ ಅಣ್ಣನಾದ ಭೀಮನೊಡನೆ ಮಕ್ಕಳಿಬ್ಬರು ಇದ್ದಾರಲ್ಲ (ಅಭಿಮನ್ಯು ಮತ್ತು ಘಟೋತ್ಕಚರು) ಎಂಬ ಶಂಕೆಯಾಗಿದೆ. ಆದುದರಿಂದ ಜಾಗ್ರತೆಯಾಗಿ ರಥವನ್ನು ತಡೆಯದೆ ಆ ಕಡೆ ನಡೆಯಿಸು ಎಂದು ಶಬ್ದಮಾಡುತ್ತ ಶತ್ರುವಿಗೆ ಮೃತ್ಯು ಬರುವ ಹಾಗೆ (ಆ ಕಡೆಗೆ) ಬಂದನು. ವ|| ಹಾಗೆ ನೆಲವು ನಡುಗುವ ಹಾಗೆ ಬರುತ್ತಿರುವ ಅರ್ಜುನನ ಬರುವಿಕೆಗೆ

ಮ॥ ಎಡೆಗೊಂಡಂಕದ ಶಲ್ಯ ಸೈಂಧವ ಕೃಪ ದ್ರೋಣರ್ಕಳುಂ ಸಾಯಕಂ
ಗಿಡೆ ತನ್ನೆಚ್ಚ ಶರಾಳಿಗಳ್ ಪ್ರಳಯ ಕಾಲೋಲ್ಕಂಗಳಂ ತಾಗಿದಾ ।
ಗಡ ತತ್ಸೂತ ರಥಾಶ್ವ ಕೇತನ ಶರವ್ರಾತಂಗಳುಂ ನುರ್ಗಿ ಕ
ಣ್ಗಿಡೆ ಬೆನ್ನಟ್ಟಿದನಂತು ನಮ್ಮ ಹರಿಗಂ ಗಂಡಂ ಪೆಱರ್ ಗಂಡರೇ । ೧೩

ವ॥ ಅಂತತಿರಥ ಸಮರಥ ಮಹಾರಥಾರ್ಧರಥರ್ಕಳನಾನೆ ಮೆಟ್ಟಿದ ಕುಳುಂಪೆಯ ನೀರಂತೆ ದೆಸೆದೆಸೆಗೆ ಕಿದಱುವನ್ನಮೆಬ್ಬಿಟ್ಟಿದಾಗಳ್ ಸೋಲ್ತ ತನ್ನ ಬಲಮನಳುಂಬಮಾದ ವಿಕ್ರಮಾರ್ಜುನನ ಭುಜಬಲಮುಮಂ ಕಂಡು ಕನಕತಾಳಧ್ವಜಂಗೆ ಪನ್ನಗಧ್ವಜನಿಂತೆಂದಂ-

ತರಳ ॥ ಮುಳಿಯೆ ಬಿನ್ನಪಮಜ್ಜ ದಾಯಿಗರೊಳ್ ವಿರೋಧಮನಿಂತು ಬ
ಳ್ವಳನೆ ಮಾಳ್ಪುವನಂದು ನಿಮ್ಮನೆ ನಂಬಿ ಮಾಡಿದೆನಿಂತು ಗೋ ।
ವಳಿಗನಂ ಗೆಡೆಗೊಂಡು ಮುಂ ಬಳೆದೊಟ್ಟ ಪೇಡಿಯೆ ನಿಮ್ಮನಿಂ
ತಿಳಿಸಿ ಮದ್ಬಲಮೆಲ್ಲಮಂ ಕೊಲೆ ನೋಡುತಿರ್ಪುದು ಪಾಟಿಯೇ ॥ ೧೪

ಕಂ॥ ಮೇಳದೊಳೆಂತುಂ ಪೋ ಪೆಱ
ರಾಳಂ ಭಿದ್ರಿಸುವೆವೆಂಬ ಪಾಡವರೊಳ್ ನೀಂ ।
ಮೇಳಿಸಿ ನಣ್ಪನೆ ಬಗೆದಿರ್
ಜೋಳದ ಪಾಟಿಯುಮನಿನಿಸು ಬಗೆಯಿಂ ನಿಮ್ಮೊಳ್ ॥ ೧೫

ವ॥ ಎಂಬುದುಂ ಸಿಂಧುತನೂಜನಿಂತೆಂದಂ-

ಕೌರವಸೈನ್ಯವೆಲ್ಲ ಒಟ್ಟಿಗೆ ಕೂಗಿಕೊಂಡು ಓಡಿ ಭೀಷ್ಮನ ಮರೆಹೊಕ್ಕವು. ೧೩. ನಡುವೆ ಬಂದ ಶಲ್ಯ ಸೈಂಧವ ಕೃಪ ದ್ರೋಣಾದಿಗಳ ಬಾಣಗಳು ನಿಷ್ಪ್ರಯೋಜಕವಾದುವು. ಭೀಷ್ಮರು ಪ್ರಯೋಗಿಸಿದ ಬಾಣಸಮೂಹಗಳು ಪ್ರಳಯಕಾಲದ ಉಲ್ಕಾಪಾತಗಳು ಸರಿ. ಆದರೂ ಅರ್ಜುನನು ಅವರ ಆ ಸಾರಥಿ, ತೇರು, ಕುದುರೆ, ಬಾವುಟ, ಬಾಣಸಮೂಹ - ಎಲ್ಲವೂ ಪುಡಿಯಾಗುವ ಹಾಗೆ ಹಿಂಬಾಲಿಸಿದನು. ಶೂರನೆಂದರೆ ಅರಿಕೇಸರಿ. ಅವನಂತೆ ಮತ್ತಾರಿದ್ದಾರೆ. ವ॥ ಹಾಗೆ ಅತಿರಥ ಸಮರಥ ಮಹಾರಥ ಅರ್ಧರಥರುಗಳನ್ನು ಆನೆ ತುಳಿದು ಕದಡಿದ ಕುಂಟೆಯ ನೀರಿನ ಹಾಗೆ ದಿಕ್ಕುದಿಕ್ಕಿಗೂ ಚೆದುರುವ ಹಾಗೆ ಎಬ್ಬಿಸಿ ಓಡಿಸಿದಾಗ ದುರ್ಯೋಧನನು ಭೀಷ್ಮನನ್ನು ಕುರಿತು ಹೀಗೆಂದನು. ೧೪. ಅಜ್ಜ, ವಿಜ್ಞಾಪನೆ; ಕೋಪಮಾಡಬೇಡಿ, ದಾಯಾದಿಗಳಲ್ಲಿ ಈ ರೀತಿಯ ವಿರೋಧವನ್ನು ಮಾಡುವಾಗ ನಿಮ್ಮ ವಿಶೇಷವಾದ ಸಹಾಯವನ್ನೇ ನಂಬಿ ಮಾಡಿದೆನು. ಹೀಗಿರುವಲ್ಲಿ ಈಗ ಹೀಗೆ ದನಕಾಯುವವನೊಬ್ಬನ ಸ್ನೇಹಮಾಡಿಕೊಂಡು ಬಳೆದೊಟ್ಟ ಹೇಡಿಯೊಬ್ಬನು ನಿಮ್ಮನ್ನು ಹೀಗೆ ಅವಮಾನಮಾಡಿ ನನ್ನ ಸೈನ್ಯವೆಲ್ಲವನ್ನೂ ಕೊಲ್ಲುತ್ತಿರಲು ಅದನ್ನು ನೀವು ಉದಾಸೀನವಾಗಿ ನೋಡುತ್ತಿರುವುದು ಸೂಕ್ತವೇ? ೧೫. 'ಸ್ನೇಹದಿಂದ ಪರಪಕ್ಷದ ಶೂರರನ್ನು ಭೇದಿಸಬಲ್ಲೆವು ಬಿಡು' ಎಂಬುದಾಗಿರುವ ಪಾಂಡವರಲ್ಲಿ ನೀವು ಸೇರಿಕೊಂಡು ಬಾಂಧವ್ಯವನ್ನೇ ಬಗೆದಿರಿ; ನಿಮ್ಮ ಮನಸ್ಸಿನಲ್ಲಿ ಉಪ್ಪಿನ ಋಣವನ್ನು ಸ್ವಲ್ಪ ಯೋಚಿಸಿ. ವ॥ ಎನ್ನಲು ಭೀಷ್ಮನು ಹೀಗೆ ಹೇಳಿದನು.

ಮ॥ ತ್ರಿಜಗಕ್ಕಂ ಗುರು ದೇವನಾದಿಪುರುಷಂ ಕೇಳೊರ್ವನೊರ್ವಂ ರಿಪು
ಧ್ವಜಿನೀ ಧ್ವಂಸಕನಾಗಿ ಸಂದ ಕಲಿಯುಂ ಬಲ್ಲಾಳುಮಿನ್ನೆಂದೊಡೆಂ ।
ತು ಜಗತ್ಖ್ಯಾತರನೇಳಿಪೈ ಮಱೆವೆನೇ ಮುಂ ಪೂಣ್ದುದಂ ಬಿಲ್ ರಥಂ
ಧ್ವಜಮಂಬೆಂಬಿವನೆಯ್ದೆ ಸಂಧಿಸು ಜಸಂ ನಿಲ್ವನ್ನೆಗಂ ಕಾದುವೆಂ॥ ೧೬

ವ॥ ಎಂಬುದುಮನೇಕ ಶರಭರಿತ ಶಕಟಸಹಸ್ರಮನೊಂದುಮಾಡಿ ಗಾಂಗೇಯನ ಪೆಱಗೆ ನಿಲಿಸಿದಾಗಳಮರಾಪಗಾನಂದನನುಮಮರೇಂದ್ರನಂದನನುಮೊರ್ವರೊರ್ವರಂ ಗಱೆಸನ್ನೆಗೆಯ್ದು ಕಾದುವಾಗಳಂಬರತಳದೊಳೆಲ್ಲಂ ಬಳಿಯ ಮುಗಿಲ್ಗಳ ಚೌಪಳಿಗೆಗಳೊಳ್ ಬಂದಿರ್ದ ದೇವ ವಿಮಾನಂಗಳುಮೊಡನೊಡನೆ ಕಲಂಕೆ ಕುಲಗಿರಿಗಳುಂ ದಿಕ್ಕರಿಗಳುಮೊಡನೊಡನೆ ತಾಗಿದಂತೆ ತಾಗಿದಾಗಳ್-

ಮ॥ ಉಪಮಾತೀತದ ಬಿಲ್ಲ ಬಲ್ಮೆ ಸಮಸಂದೊಂದೊರ್ವರೊಳ್ ಪರ್ವೆ ಪ
ರ್ವಿ ಪರವ್ಯೂಹ ಭಯಂಕರಂ ನೆಗೆದು ಪಾರ್ದಾರ್ದೆಚ್ಚೊಡಂಬಂಬನ ।
ಟ್ಟಿ ಪಳಂಚುತ್ತೆ ಸಿಡಿಲ್ದ ತೋರಗಿಡಿಯಿಂದೊಂದೊಂದಱೊಳ್ ಬೇವುದುಂ
ತ್ರಿಪುರಂಬೊತ್ತಿಸಿದಂತೆ ಪೊತ್ತಿ ಪೊಗೆದತ್ತೆತ್ತಂ ವಿಯನ್ಮಂಡಳಂ ॥ ೧೭

ವ॥ ಅಂತು ಬ್ರಹ್ಮಾಂಡಮುರಿಯೆ ಕಾದೆ-

೧೬. "ದುರ್ಯೋಧನ, ಕೇಳು, ಅವರಲ್ಲಿ ಒಬ್ಬನಾದ ಕೃಷ್ಣನು ಮೂರುಲೋಕಕ್ಕೂ ಗುರು, ಒಡೆಯ, ಆದಿಪುರುಷ, ಮತ್ತೊಬ್ಬನಾದ ಅರ್ಜುನನು ಶತ್ರುಪಕ್ಷವನ್ನು ನಾಶಮಾಡುವುದರಲ್ಲಿ ಪ್ರಸಿದ್ಧನಾದ ಶೂರ. ಹೀಗಿರುವಾಗ, ಲೋಕಪ್ರಸಿದ್ಧರಾದವರನ್ನು ಹೇಗೆ ತಿರಸ್ಕರಿಸುತ್ತೀಯೆ? ನಾನು ಮೊದಲು ಮಾಡಿದ ಪ್ರತಿಜ್ಞೆಯನ್ನು ಮರೆಯುತ್ತೇನೆಯೆ? ಬಿಲ್ಲು, ಬಾವುಟ, ಬಾಣ, ತೇರುಗಳನ್ನು ಸಿದ್ಧಮಾಡು. ಯಶಸ್ಸು ಶಾಶ್ವತವಾಗಿ ನಿಲ್ಲುವ ಹಾಗೆ ಕಾದುತ್ತೇನೆ ವ॥ ಎನ್ನಲು ದುರ್ಯೋಧನನು ಅನೇಕ ಬಾಣಗಳಿಂದ ತುಂಬಿದ ಸಾವಿರಾರು ಬಂಡಿಗಳನ್ನು ಒಟ್ಟುಗೂಡಿಸಿ ಭೀಷ್ಮನ ಹಿಂದೆ ನಿಲ್ಲಿಸಿದನು. ಭೀಷ್ಮನೂ ಅರ್ಜುನನೂ ಒಬ್ಬರನ್ನೊಬ್ಬರು ಬಾಣದ ಗರಿಯಿಂದ ಸನ್ನೆಮಾಡಿ ಯುದ್ಧಮಾಡಲು ಪ್ರಾರಂಭಿಸಿದರು. ಆಕಾಶಪ್ರದೇಶದಲ್ಲೆಲ್ಲ ಚೌಕಾಕಾರದ ಮಂಟಪ (ತೇರು)ಗಳಲ್ಲಿ ಬಂದಿದ್ದ ದೇವವಿಮಾನಗಳು ಜೊತೆ ಜೊತೆಯಲ್ಲಿಯೇ ಕ್ರಮತಪ್ಪಿ ಕಲಕಿಹೋದುವು. ಕುಲಪರ್ವತಗಳೂ ದಿಗ್ಗಜಗಳೂ ಒಟ್ಟಿಗೆ ತಾಗುವ ಹಾಗೆ ತಾಗಿದುವು. ೧೭. ಒಬ್ಬೊಬ್ಬರಲ್ಲಿಯೂ ಹೋಲಿಕೆಯಿಲ್ಲದ ಅಸ್ತ್ರವಿದ್ಯಾ ನೈಪುಣ್ಯವು ಕೂಡಿಕೊಂಡು ವ್ಯಾಪಿಸುತ್ತಿತ್ತು. ಶತ್ರುಸೈನ್ಯಭಯಂಕರನಾದ ಅರ್ಜುನನು ಎದುರುನೋಡುತ್ತ ಆರ್ಭಟಿಸಿ ಹೊಡೆಯಲು ಅವನ ಒಂದು ಬಾಣವು ಮತ್ತೊಂದನ್ನು ಹಿಂಬಾಲಿಸುತ್ತ ತಟ್ಟನೆ ತಗುಲಿ ಸಿಡಿದು ಅದರ ದಪ್ಪನಾದ ಕಿಡಿಗಳು ಒಂದೊಂದರಲ್ಲಿಯೂ ಬೇಯುತ್ತಿರಲು ತ್ರಿಪುರಾಸುರರ ಪಟ್ಟಣಗಳು ಹತ್ತಿ ಉರಿದಂತೆ ಆಕಾಶಮಂಡಲವು ಎಲ್ಲೆಡೆಯಲ್ಲಿಯೂ ಹತ್ತಿ ಹೊಗೆಯಾಡುತ್ತಿತ್ತು. ವ॥ ಹಾಗೆ ಬ್ರಹ್ಮಾಂಡವೇ ಉರಿಯುವ ಹಾಗೆ ಕಾದುತ್ತಿರಲು

ಚಂ॥ ನಡಪಿದನಜ್ಜನೆಂದು ವಿಜಯಂ ಕಡುಕೆಯ್ದಿಸನೆನ್ನ ಮಂಮನಾಂ
ನಡಪಿದನೆಂದು ಸಿಂಧುತನಯಂ ಕಡುಕೆಯ್ದಿಸನಿಂತು ಪಾಡುಗಾ ।
ದೊಡನೊಡನಿರ್ವರುಂ ಮೆಱೆಯಲೆಂದೆ ಶರಾಸನ ವಿದ್ಯೆಯ ಪಡ
ಲ್ವಡಿಸಿದರೆತ್ತಮಿದಿರೊಳ್ ಮಲೆದೊಡ್ಡಿದ ಚಾತುರಂಗಮಂ ॥ ೧೮

ವ॥ ಅಂತು ಕಿಱಿದು ಪೊಳ್ತು ಕೆಯ್ಗಾದು ಕಾದೆ ಸರಿತ್ಸುತನ ಸುರಿವ ಸರಲ ಮೞೆಯೊಳಟಿದ ನಿಜ ವರೂಥಿನಿಯ ಸಾವುಂ ನೋವುಮೇವಮಂ ಮಾಡೆ-

ಚಂ॥ ಮುಸಿದೆರಡಂಬಿನೊಳ್ ರಥಮುಮಂ ಪದವಿಲ್ಲುಮನೆಯ್ದೆ ಪಾರ್ಥ ನೆ
ಕ್ಕನೆ ಕಡಿದಿಂದ್ರನಂದನನಳುರ್ಕೆಯಿಸಾರ್ದೊಡೆ ದಿವ್ಯ ಸಿಂಧುನಂ ।
ದನನಿರದೇಱೆ ಬೇಱೆ ರಥಮಂ ಪೆಱೆತೊಂದು ಶರಾಸನಕ್ಕೆ ಮೆ
ಲ್ಲನೆ ನಿಡುದೋಳನುಯ್ದು ಕರಮಚ್ಚರಿಯಾಗೆ ಕಡಂಗಿ ಕಾದಿದಂ ॥ ೧೯

ವ॥ ಅಂತು ತೋಡುಂ ಬೀಡುಂ ಕಾಣಲಾಗದರ್ದೆಗಾಯಲೆಕ್ಕೆಯಿನೆಂಬತ್ತು ನಾಲ್ಕು ಲಕ್ಕ ಬಂಡಿಯೊಳ್ತಂಡ ತಂಡದೆ ತೀವಿದಕಾಂಡ ಪ್ರಳಯಾನಳ ವಿಸ್ಫುಲಿಂಗೋಪಮಾನಂಗಳಪ್ಪ ನಿಶಿತ ಕಾಂಡಂಗಳಿಂದೊಡ್ಡಿದ ಚತುರ್ಬಲಂಗಳ ಮೆಯ್ಯೊಳ್ ರೋಮ ರೋಮಂದಪ್ಪದೆ ನಡುವನ್ನಮೆಚ್ಚು ಪಯಿಂಛಾಸಿರ್ವರ್ ಮಕುಟಬದ್ಧರುಮನೊಂದು ಲಕ್ಕ ಮದದಾನೆಯುಮಂ

೧೮. ಅಜ್ಜನು ನನ್ನನ್ನು ಸಾಕಿದನು ಎಂದು ಅರ್ಜುನನೂ ವಿಶೇಷ ಉತ್ಸಾಹದಿಂದ ಬಾಣಪ್ರಯೋಗಮಾಡುವುದಿಲ್ಲ, ನಾನು ಸಾಕಿದ ನನ್ನ ಮೊಮ್ಮಗ ಎಂದು ಭೀಷ್ಮನೂ ಕ್ರೂರವಾಗಿ ಬಾಣಪ್ರಯೋಗ ಮಾಡುವುದಿಲ್ಲ. ಹೀಗೆ ಇಬ್ಬರೂ ಸಾಂಪ್ರದಾಯಕವಾಗಿ ಶಸ್ತ್ರಕೌಶಲವನ್ನು ಮೆರೆಯುವುದಕ್ಕಾಗಿ ಮಾತ್ರ ಬಾಣಪ್ರಯೋಗಮಾಡಿ ಉತ್ಸಾಹದಿಂದ ಕೂಡಿಗ ಚತುರಂಗಸೈನ್ಯವನ್ನು ಎಲ್ಲೆಡೆಯಲ್ಲಿಯೂ ಉರುಳಿಸಿದರು. ವ॥ ಹಾಗೆ ಭೀಷ್ಮನು ಸ್ವಲ್ಪಕಾಲ (ಶತ್ರುಸೈನ್ಯಕ್ಕೆ) ರಕ್ಷಣೆಕೊಟ್ಟು ಕಾದಿದರೂ ಭೀಷ್ಮನ ಧಾರಾಕಾರವಾಗಿ ಸುರಿಯುತ್ತಿರುವ ಬಾಣದ ಮಳೆಯಲ್ಲಿಯೇ ನಾಶವಾದ ತನ್ನ ಸೈನ್ಯದ ಸಾವೂ ನೋವೂ ಅರ್ಜುನನಿಗೆ ವಿಶೇಷ ಕೋಪವನ್ನುಂಟುಮಾಡಿತು. ೧೯. ಅವನು ಕೋಪಿಸಿಕೊಂಡು ಭೀಷ್ಮರ ರಥವನ್ನು ಹದವಾದ ಬಿಲ್ಲನ್ನು ಚೆನ್ನಾಗಿ ನೋಡಿ ನೆಕ್ಕನೆ ಕತ್ತರಿಸಿ ಅತಿಶಯವಾಗಿ ಆರ್ಭಟಮಾಡಿದನು. ಭೀಷ್ಮನು ಸಾವಕಾಶಮಾಡದೆ ಬೇರೆ ರಥವನ್ನು ಹತ್ತಿಕೊಂಡು ತನ್ನ ದೀರ್ಘವಾದ ತೋಳನ್ನು ಬತ್ತಳಿಕೆಗೆ ನೀಡಿ ವಿಶೇಷ ಆಶ್ಚರ್ಯಕರವಾಗುವ ಹಾಗೆ ಉತ್ಸಾಹದಿಂದ ಕಾದಿದನು. ವ॥ ಹಾಗೆ ಬಾಣವನ್ನು ತೊಡುವುದೂ ಬಿಡುವುದೂ ಕಾಣಲಾಗದ ರೀತಿಯಲ್ಲಿ ಮನಸ್ಸನ್ನು ಹತೋಟಿಯಲ್ಲಿಟ್ಟುಕೊಂಡು ಒಂದೇಸಲ ಎಂಬತ್ತು ನಾಲ್ಕು ಲಕ್ಷ ಬಂಡಿಯಲ್ಲಿ ರಾಶಿರಾಶಿಯಾಗಿ ತುಂಬಿದ್ದ ಅಕಾಲದ ಪ್ರಳಯಾಗ್ನಿಯ ಕಿಡಿಗಳಿಗೆ ಸಮಾನವಾದ ಹರಿತವಾದ ಬಾಣಗಳಿಂದ ಚತುರಂಗಸೈನ್ಯದ ಶರೀರದಲ್ಲಿ ಒಂದು ಕೂದಲೂ ತಪ್ಪದೆ ನಾಟುವ ಹಾಗೆ ಹೊಡೆದು ಹತ್ತು ಸಾವಿರ ರಾಜರನ್ನೂ ಒಂದು ಲಕ್ಷ ಮದ್ದಾನೆಯನ್ನೂ ಮೂರುಲಕ್ಷ ರಥವನ್ನೂ ಒಂದುಕೋಟಿ ತುರುಷ್ಕ ಕುದುರೆಗಳನ್ನೂ ಹದಿನೆಂಟು ಕೋಟಿ ಕಾಲಾಳುಬಲವನ್ನೂ ಶ್ರಮವಿಲ್ಲದೆ

ಮೂಱುಲಕ್ಕ ರಥಮುಮನೊಂದು ಕೋಟಿ ತುರುಷ್ಕ ತುರಂಗಂಗಳುಮಂ ಪದಿನೆಂಟು ಕೋಟಿ ಪದಾತಿಯುಮನಲಸದೆ ಪೇಸೇಱೆ ಕೊಂದು ಪರಶುರಾಮನಲ್ಲಿ ಪಡೆದ ದಿವ್ಯಾಸ್ತ್ರಂಗಳನೊಂದನೊಂದು ಸೂಱೆಗೊಳೆ ತೊಟ್ಟು-

ಕಂ॥ ನುಡಿವಳಿಗೆ ನರನ ರಥಮಂ
ಪಡುವೇಣ್ಗಾವುದುವರಂ ಸಿಡಿಲ್ವಿನಮೆಚ್ಚ ।
ಚ್ಚುಡಿಯೆ ಭುಜಬಲದೆ ಹರಿಯುರ
ದೆಡೆಯುಂ ಬಿರಿಯೆಚ್ಚು ಮೆಱೆದನಳವಂ ಭೀಷ್ಮಂ ॥ ೨೦

ವ॥ ಆಗಳ್-

ಕಂ॥ ದೇವಾಸುರದೊಳಮಿಂದಿನ
ನೋವಂ ನೊಂದಱಿಯೆನುೞಿದ ಕೆಯ್ದುವಿನೊಳಿವಂ ।
ಸಾವನೆ ಸೆರಗಂ ಬಗೆದೊಡೆ
ಸಾವಾದಪುದೆಂದು ಚಕ್ರಿ ಚಕ್ರದೊಳಿಟ್ಟಂ ॥ ೨೧

ಇಟ್ಟೊಡೆ ತನಗಸುರಾರಿಯ
ಕೊಟ್ಟ ಮಹಾ ವೈಷ್ಣವಾಸ್ತ್ರಮಂ ಗಾಂಗೇಯಂ ।
ತೊಟ್ಟಸುವುಮೆರಡುಂ ಕಿಡಿ
ಗುಟ್ಟ ಸಿಡಿಲ್ ಸಿಡಿಯೆ ಪೋರ್ದುವಂಬರತಳದೊಳ್ ॥ ೨೨

ಪೋರ್ವುದುಮಿಂ ಪೆಱತಂಬಿಂ
ತೀರ್ವುದೆ ಪಗೆಯೆಂದು ಪಾಶುಪತಮಂ ಪಿಡಿಯಲ್ ।
ಪಾರ್ವುದುಮರ್ಜುನನಾಗಳ್
ಬೇರ್ವೆರಸು ಕಿೞಲ್ಕೆ ಬಗೆಯೆ ಸುರರೆಡೆವೊಕ್ಕರ್ ॥ ೨೩

ಜುಗುಪ್ಸೆಯಾಗುವ ಹಾಗೆ ಕೊಂದನು. ಪರಶುರಾಮನಿಂದ ಪಡೆದಿದ್ದ ದಿವ್ಯಾಸ್ತ್ರಗಳೊಂದೊಂದನ್ನೂ ಒಂದೊಂದು ಸರದಿಯಿಂದ ತೊಟ್ಟು ೨೦. ಆಡಿದ ಮಾತನ್ನು ಪೂರ್ಣಗೊಳಿಸುವುದಕ್ಕೆ (ಮಾತ್ರ) ಅರ್ಜುನನ ತೇರನ್ನು ಪಶ್ಚಿಮದ ಕಡೆ ಎಂಟುಗಾವುದದವರೆಗೆ ಸಿಡಿದು ಹೋಗುವಂತೆ ಹೊಡೆದನು. ರಥದ ಅಚ್ಚು ಮುರಿಯಿತು. ಬಾಹುಬಲದಿಂದ ಕೃಷ್ಣನ ಹೃದಯಪ್ರದೇಶವನ್ನು ಬಿರಿಯುವಂತೆ ಹೊಡೆದು ಭೀಷ್ಮನು ತನ್ನ ಶಕ್ತಿಯನ್ನು ಪ್ರದರ್ಶಿಸಿದನು. ವ॥ ಆಗ ೨೧. ದೇವಾಸುರರ ಯುದ್ಧದಲ್ಲಿಯೂ ಈ ದಿನದ ನೋವನ್ನು ಅನುಭವಿಸಿರಲಿಲ್ಲ; ಉಳಿದ ಆಯುಧಗಳಿಂದ ಇವನು ಸಾಯುತ್ತಾನೆಯೇ? ಸಹಾಯವನ್ನು ಅಪೇಕ್ಷಿಸಿದರೆ ಮರಣವುಂಟಾಗುತ್ತದೆ ಎಂದು ಶ್ರೀಕೃಷ್ಣನು ಚಕ್ರಾಯುಧದಿಂದಲೇ ಹೊಡೆದನು. ೨೨. ಭೀಷ್ಮನು ವಿಷ್ಣುವು ಕೊಟ್ಟ ಮಹಾವೈಷ್ಣವಾಸ್ತ್ರವನ್ನು ಪ್ರಯೋಗಿಸಿದನು. ಎರಡು ಅಸ್ತ್ರಗಳೂ ಕಿಡಿಗಳನ್ನು ಚೆಲ್ಲಿ ಸಿಡಿಲು ಸಿಡಿಯುವಂತೆ ಆಕಾಶಪ್ರದೇಶದಲ್ಲಿ ಹೋರಾಡಿದುವು. ೨೩. ಶತ್ರುವು ಇನ್ನು ಬೇರೆಯ ಬಾಣದಿಂದ ನಾಶವಾಗುವುದಿಲ್ಲವೆಂದು ಯೋಚಿಸಿ ಮೂಲೋತ್ಪಾಟನಮಾಡುವುದಕ್ಕೆ ಅರ್ಜುನನು ಪಾಶುಪತಾಸ್ತ್ರವನ್ನೇ ಹಿಡಿಯಲು

ವ|| ಆ ಪ್ರಸ್ತಾವದೊಳ್-

ಕಂ|| ಎನ್ನುಮನಸುರಾರಿಯ ಪಿಡಿ
ವುನ್ನತ ಕರಚಕ್ರಮೆಂದು ಭೀಷ್ಮಂ ತಱೆಗುಂ ।
ಮುನ್ನಮಡಂಗುವೆನೆಂಬವೊ
ಲನ್ನೆಗಮಸ್ತಾಚಳಸ್ಥನಾದಂ ದಿನಪಂ ॥ ೨೪

ವ|| ಆಗಳೆರಡುಂ ಪಡೆಗಳಪಹಾರತೂರ್ಯಂಗಳಂ ಬಾಜಿಸಿ ಮುನ್ನೊತ್ತಿದ ವೇಳೆಗಳ್ ಸಮುದ್ರಂಗಳಂ ಪುಗುವಂತೆ ತಂತಮ್ಮ ಬೀಡುಗಳಂ ಪೊಕ್ಕರಾಗಳ್-

ಕಂ|| ಬರಿಸಿ ಮನೆಗಸುರವೈರಿಯ
ನರಸಂ ಭೀಷ್ಮಂಗೆ ಚಕ್ರಮಿಂತೇಕೆ ಮೊಗಂ ।
ದಿರಿದುದೊ ನಿಮ್ಮಂ ಪಿಡಿದೆನ
ಗರಿದೆನಲರಿದುಂಟೆ ಧುರದೊಳೇನಸುರಾರೀ ॥ ೨೫

ಬೆಸಸೆನೆ ನುಡಿದಂ ಮುರನೆಂ
ಬಸುರನನೆನಗಾಗಿ ಕಾದಿ ಭೀಷ್ಮಂ ಪಿಡಿದೊ ।
ಪ್ಪಿಸಿದೊಡೆ ವೈಷ್ಣವ ಬಾಣಮ
ನೊಸೆದಿತ್ತೆನದಂ ಗೆಲಲ್ಕೆ ಕೆಯ್ದುಗಳೊಳವೇ ॥ ೨೬

ಭೇದದೊಳಲ್ಲದೆ ಗೆಲಲರಿ
ದಾದಂ ಸುರಸಿಂಧುಸುತನನಿಂದಿರುಳೊಳ್ ನೀಂ ।
ಭೇದಿಸೆನೆ ನೃಪತಿಯೊರ್ವನೆ
ಆದರದಿಂ ಬಂದು ಸಿಂಧುಸುತನಂ ಕಂಡಂ ॥ ೨೭

ನೋಡುತ್ತಿರಲು (ಅವನನ್ನು ತಡೆಯುವುದಕ್ಕಾಗಿ) ದೇವತೆಗಳು ಮಧ್ಯೆ ಪ್ರವೇಶ ಮಾಡಿದರು. ೨೪. ನನ್ನನ್ನು ಕೃಷ್ಣನು ಹಿಡಿಯುವ ಶ್ರೇಷ್ಠವಾದ ಚಕ್ರವೆಂದೇ ಭೀಷ್ಮನು ತರಿದುಹಾಕುತ್ತಾನೆ. ಮೊದಲೇ ಮರೆಯಾಗುತ್ತೇನೆ ಎನ್ನುವ ಹಾಗೆ ಸೂರ್ಯನು ಅಸ್ತಾಚಲದಲ್ಲಿ ಸೇರುವವನಾದನು. (ಸೂರ್ಯನು ಅಸ್ತವಾದನು). ವ|| ಆಗ ಎರಡು ಸೈನ್ಯಗಳೂ ಯುದ್ಧ ನಿಂತಿತೆಂದು ತಿಳಿಸುವ ವಾದ್ಯಗಳನ್ನು ಬಾಜಿಸಿದುವು. ಮೊದಲು ಎದ್ದಿದ್ದ ಅಲೆಗಳು ಸಮುದ್ರವನ್ನು ಪ್ರವೇಶಿಸುವಂತೆ ಸೈನ್ಯಗಳು ತಮ್ಮ ತಮ್ಮ ಶಿಬಿರಗಳನ್ನು ಪ್ರವೇಶಿಸಿದವು. ಆಗ ೨೫. ಧರ್ಮರಾಜನು ಕೃಷ್ಣನನ್ನು ಮನೆಗೆ ಬರಮಾಡಿಕೊಂಡು ನಿಮ್ಮ ಚಕ್ರವು ಭೀಷ್ಮನಿಗೇಕೆ ವಿಮುಖವಾಯಿತೋ? ಕೃಷ್ಣ! ನಿಮ್ಮನ್ನಾಶ್ರಯಿಸಿದ ನನಗೆ ಯುದ್ಧದಲ್ಲಿ ಅಸಾಧ್ಯವೆಂಬುದಿಲ್ಲ ಎಂದನು. ೨೬. ಕೃಷ್ಣ ಹೇಳಿದನು : ಮುರನೆಂಬ ಅಸುರನೊಂದಿಗೆ ಕಾದಿ ಸೋಲಿಸಿ ನನಗೊಪ್ಪಿಸಿದುದರಿಂದ ಮಚ್ಚಿ ಭೀಷ್ಮನಿಗೆ ನಾನು ವೈಷ್ಣವಾಸ್ತ್ರ ಕೊಟ್ಟಿದ್ದೆ. ಅದನ್ನು ಯಾರೂ ಗೆಲ್ಲಲಾರರು ಎಂದನು. ೨೭. ಭೀಷ್ಮನನ್ನು ಭೇದೋಪಾಯದಿಂದಲ್ಲದೆ ಗೆಲ್ಲಲು ಸಾಧ್ಯವಿಲ್ಲ. ಈ ರಾತ್ರಿ ನೀನು ಅವನನ್ನು ಭೇದಿಸು ಎನ್ನಲು ರಾಜನೊಬ್ಬನೇ ಆದರದಿಂದ ಬಂದು ಭೀಷ್ಮನನ್ನು ಕಂಡನು.

ಕಣ್ಣು ಪೊಡೆವಟ್ಟು ನಯಮೆರ್ದೆ
ಗೊಣ್ಡರೆ ಪತಿ ನುಡಿದನೆನಗೆ ದೇವರ್ ಕಲುಷಂ ।
ಗೊಣ್ಡಾಗಳ್ ಕಾವರ್ ಕಣೆ
ಗೊಣ್ಡವೊಲೆಂದೆಂಬ ಮಾತಿನಂತಾಗಿರದೇ ॥ ೨೮

ತೊಂಬಯ್ಸಾಸಿರ್ವರ್ ನಿ
ಮ್ಮಂಬಿನ ಬಂಬಲೊಳೆ ಮಕುಟಬದ್ಧರ್ ಮಡಿದರ್ ।
ನಂಬಿಂ ನಂಬಲಿಮಿಂದಿಂ
ಗೊಂಬತ್ತು ದಿನಂ ದಲೆಮ್ಮ ಬೆನ್ನಲೆ ನಿಂದಿರ್ ॥ ೨೯

ಚಕ್ರಿಯ ಚಕ್ರದೊಳಂ ತೊಡ
ರ್ದಾಕ್ರಮಿಸಿದುದೆಚ್ಚ ನಿಜ ಪತತ್ರಿ ದಲೆನೆ ನಿ ।
ಮ್ಮೀ ಕ್ರಮಕಮಲಕ್ಕೆಱಗದೆ
ವಕ್ರಿಸಿ ಭೂಚಕ್ರದೊಳಗೆ ಬಾಳ್ವರುಮೊಳರೇ ॥ ೩೦

ಸಾವೆ ನಿಮತಿಚ್ಚೆಯೆನೆ ಪೊಣ
ರ್ದಾವಂ ತಳ್ತಿಱಿದು ಗೆಲ್ವನೆಮಗದಱಿಂದಂ ।
ಸಾವು ದಿಟಂ ನಿಮ್ಮಿಡಿ ಕೊಲೆ
ಸಾವುದು ಲೇಸಲ್ತೆ ಸುಗತಿವಡೆಯಲ್ಕಕ್ಕುಂ ೩೧

ವ॥ ಎಂದೊಡದೆಲ್ಲಮನೆಯ್ದೆ ಕೇಳ್ದು ಕರುಣಾರಸ ಹೃದಯನಾಗಿ ಮಮ್ಮನ ಮೊಗಮಂ ಕೂರ್ಮೆಯಿಂ ನೋಡಿ ಕಣ್ಣ ನೀರಂ ನೆಗಪಿ–

೨೮. ನಮಸ್ಕಾರಮಾಡಿ ಪೂರ್ವಕವಾಗಿ ಧರ್ಮರಾಜನು ಹೇಳಿದನು. ನನಗೆ ಸ್ವಾಮಿಯಾದ ತಾವು ಕೋಪಮಾಡಿದರೆ 'ರಕ್ಷಿಸಬೇಕಾದವರೇ ಬಾಣವನ್ನು ಹೂಡಿದ ಹಾಗೆ' ಎಂಬ ಗಾದೆಯ ಮಾತಿನಂತಾಗುವುದಿಲ್ಲವೆ? ೨೯. ತೊಂಬತ್ತುಸಾವಿರ ಕಿರೀಟಧಾರಿಗಳಾದ ರಾಜರು ನಿಮ್ಮ ಬಾಣದ ಸಮೂಹದಿಂದ ಸತ್ತರು. ನಂಬಿ, ನಂಬದಿರಿ ಈ ಒಂಬತ್ತು ದಿನವೂ ನೀವು ನಮಗೆ ವಿರೋಧವಾಗಿ ನಿಂತಿರಿ. ೩೦. ನೀವು ಪ್ರಯೋಗಿಸಿದ ಬಾಣವು ಶ್ರೀಕೃಷ್ಣನ ಚಕ್ರವನ್ನೂ ಅಡ್ಡಗಟ್ಟಿ ಆಕ್ರಮಿಸಿತು ಎನ್ನುವಾಗ ನಿಮ್ಮ ಈ ಪಾದಕಮಲಕ್ಕೆ ನಮಸ್ಕಾರಮಾಡದೆ ವಕ್ರವಾಗಿ ನಿಂತು ಈ ಭೂಮಂಡಲದಲ್ಲಿ ಬಾಳುವವರೂ ಇದ್ದಾರೆಯೇ? ೩೧. ನಾವು ಸಾಯುವುದೇ ನಿಮ್ಮಿಚ್ಛೆಯಾದರೆ (ನೀವು ಕೊಲ್ಲುವೆನೆಂದು ಮನಸ್ಸು ಮಾಡಿಬಿಟ್ಟರೆ) ನಿಮ್ಮನ್ನು ಪ್ರತಿಭಟಿಸಿ ಯುದ್ಧಮಾಡಿ ಯಾವನು ಗೆಲ್ಲುತ್ತಾನೆ. ಆದುದರಿಂದ ನಮಗೆ ಸಾವೆಂಬುದು ನಿಶ್ಚಯ. ಸದ್ಗತಿಯನ್ನು ಹೊಂದುವುದಕ್ಕೆ ನಿಮ್ಮಿಂದ ಕೋಪಿಸಿಕೊಂಡು ಸಾಯುವುದು ಉತ್ತಮವಲ್ಲವೇ? ವ॥ ಅದನ್ನು ಪೂರ್ಣವಾಗಿ ಕೇಳಿ ಕರುಣಾರಸಹೃದಯನಾಗಿ ಭೀಷ್ಮನು ಮೊಮ್ಮಗನ ಮುಖವನ್ನು ಪ್ರೀತಿಯಿಂದ ನೋಡಿ ಕಣ್ಣಿನಲ್ಲಿ ನೀರನ್ನು ತುಂಬಿಕೊಂಡು ಹೇಳಿದನು.

ಚಂ|| ಜಗದೊಳವಧ್ಯನಂ ಗೆಲಲೆಬಾರದದಾದೊಡಮೇಂ ಶಿಖಂಡಿ ತೊ
ಟ್ಟಗೆ ಕೊಳೆ ಬಂದು ಮುಂದೆ ನಿಲೆ ಸಾವೆನಗಪ್ಪುದು ನಾಳಿನೊಂದು ಕಾ ।
ಳೆಗದೊಳಿದಂ ನರಂಗಱಿಪದೀ ತೆಱದಿಂ ನೆಗಟ್ಟೆಯ್ದೆ ವೀರ ಲ
ಕ್ಷ್ಮಿಗೆ ನೆಲೆಯಾಗು ಪೋಗೆನೆ ನೃಪಂ ಪೊಡೆವಟ್ಟು ಮನೋನುರಾಗದಿಂ || ೩೨

ವ|| ಬಂದು ಮಂದರಧರಂಗೆ ತದ್ವೃತ್ತಾಂತಮನೆಲ್ಲಮನಱಿಪಿ ನಿಶ್ಚಿಂತಮನನಾಗಿ ಪವಡಿಸಿದಾಗಳ್-

ಚಂ|| ಚಲ ಚಲದಾಂತು ಕಾದುವ ಸುಯೋಧನ ಸಾಧನದೊಡ್ಡುಗಳ್ ಕಟಿ
ಲ್ವಲಱಿ ತೆರಳ್ದು ತೂಳ್ದು ಬಿಱುತೋಡೆ ಗುಣಾರ್ಣವನಿಂದಮಾಜಿಯೊಳ್ ।
ಕೊಲಿಸಿ ಸಮಸ್ತ ಧಾತ್ರಿಯುಮನಾಳಿಪೆವೆಂದುಲವಂತೆ ಪಕ್ಕಿಗಳ್
ಚಿಲಿಮಿಲಿಯೆಂಬ ಪೊಟ್ತಱೊಳೆ ಬಂದುಱದೊಡ್ಡಿದನಂತಕಾತ್ಮಜಂ || ೩೩

ವ|| ಆಗಳ್ ಕುರುಧ್ವಜಿನಿಯುಮನೇಕ ಶಂಖ ಕಾಹಳ ಭೇರೀ ಪಣವ ಝುಲ್ಲರೀ ಮೃದಂಗ ತೂರ್ಯಂಗಳಂತಕಾಲಾಂತಕ ವಿಕಟಾಟ್ಟಹಾಸಂಗಳೆಂಬಂತೆ ಮೊೞಗೆ ಘುಳಿದು ಬಂದೊಡ್ಡಿ ನಿಂದಾಗಳ್-

ಕಂ|| ಉಭಯ ಬಲದರಸುಗಳ್ ರಣ
ರಭಸಂಗಳ್ವೆರಸು ಮುಳಿದು ಕೆಯ್ವೀಸೆ ಲಯ ।
ಕ್ಷುಭಿತ ಜಲನಿಧಿ ನಿನಾದಮ
ನಭಿನಯಿಸಿದುದೊಗೆದು ನೆಗೆದ ಸಮರಾರಾವಂ || ೩೪

೩೨. 'ಲೋಕದಲ್ಲಿ ಕೊಲ್ಲಲಾಗದವನನ್ನು ಗೆಲ್ಲಲು ಸಾಧ್ಯವಿಲ್ಲ. ಆದರೆ ತಾನೆ ಏನು? ನಾಳೆಯ ದಿನದ ಯುದ್ಧದಲ್ಲಿ ಶಿಖಂಡಿಯು ಬೇಗನೆ ಮುಂದೆ ಬಂದು ನಿಂತರೆ ನನಗೆ ಮರಣವಾಗುತ್ತದೆ. ಈ ವಿಷಯವನ್ನು ಅರ್ಜುನನಿಗೆ ತಿಳಿಸದೆ ಮಾಡಿ ವೀರಲಕ್ಷ್ಮಿಗೆ ಪೂರ್ಣವಾಗಿ ನೆಲೆಯಾಗು ಹೋಗು' ಎಂದನು. ಧರ್ಮರಾಜನು ಮನಸ್ಸಿನ ಸಂತೋಷದಿಂದ ನಮಸ್ಕಾರ ಮಾಡಿ ಹಿಂತಿರುಗಿದನು. ವ|| ಬಂದು ಶ್ರೀಕೃಷ್ಣನಿಗೆ ಆ ಸಮಾಚಾರವೆಲ್ಲವನ್ನೂ ತಿಳಿಸಿ ಚಿಂತೆಯಿಲ್ಲದ ಮನಸ್ಸಿನಿಂದ ಮಲಗಿದನು- ೩೩. 'ಹೆಚ್ಚಿನ ಹಠದಿಂದ ಕಾದುತ್ತಿರುವ ದುರ್ಯೋಧನನ ಸೈನ್ಯದ ಗುಂಪುಗಳು ಕೃಶವಾಗಿ ಚೆದರಿ ಒತ್ತಗಿಸಲ್ಪಟ್ಟು ಬೆದರಿ ಓಡಿಹೋಗುವಂತೆ ಅರ್ಜುನನಿಂದ ಕೊಲ್ಲಿಸಿ ಸಮಸ್ತ ಭೂಮಂಡಲವನ್ನು ಅವನಿಂದಲೇ ಆಳುವ ಹಾಗೆ ಮಾಡುತ್ತೇವೆ' ಎಂದು ಕೂಗುವ ಹಾಗೆ ಹಕ್ಕಿಗಳು ಚಿಲಿಮಿಲಿಯೆಂದು ಶಬ್ದಮಾಡುತ್ತಿರುವ ಹೊತ್ತಿನಲ್ಲಿಯೇ (ಅರುಣೋದಯದಲ್ಲಿಯೇ) ಧರ್ಮರಾಯನು ಬಂದು ಸಾವಕಾಶ ಮಾಡದೆ ಸೈನ್ಯವನ್ನು ಒಡ್ಡಿದನು. ವ|| ಆಗ ಕೌರವ ಸೈನ್ಯವೂ ಅನೇಕ ಶಂಖ, ಕೊಂಬು, ನಗಾರಿ, ಪಣವ, ಜಲ್ಲರಿ, ಮೃದಂಗವೆಂಬ ವಾದ್ಯಗಳು ಪ್ರಳಯಕಾಲದ ಯಮನ ವಿಕಾರವಾದ ನಗುವಿನಂತೆ ಶಬ್ದಮಾಡಲು ಮದಿಸಿ ಬಂದು ಒಡ್ಡಿ ನಿಂತಿತು. ೩೪. ಎರಡು ಸೈನ್ಯದ ರಾಜರುಗಳೂ ಯುದ್ಧವೇಗದಿಂದ ಕೂಡಿ ಕೋಪದಿಂದ ಕೈಬೀಸಲಾಗಿ ಆಗ ಹುಟ್ಟಿ ಚಿಮ್ಮಿದ ಯುದ್ಧದ ಮೊಳಗು ಪ್ರಳಯಕಾಲದ ಕಲಕಿದ ಸಮುದ್ರಧ್ವನಿಯನ್ನು

ಇಸುವ ಧನುರ್ಧರರಿಂ ಪಾ
ಯಿಸುವ ದಳಂಗಳಿನಗುರ್ವು ಪರ್ವುವಿನಂ ಚೋ ।
ದಿಸುವ ರಥಂಗಳಿನೆಂಟುಂ
ದೆಸೆ ಮಸುಳ್ವಿನಮಿಱಿದುವಾಗಳುಭಯಬಲಂಗಳ್ ॥ ೩೫

ಅೞಿದೞ್ಗಿದ ಕರಿ ಘಟೆಗಳ
ಬಳಗದಿನುಚ್ಚಳಿಸಿ ಮೊರೆವ ನೆತ್ತರ ತೆರೆಗಳ್ ।
ಸುೞಿಸುೞಿದೊಡವರಿದುವು ಕ
ಲ್ವೞಿಯೊಳ್ ಭೋರ್ಗರೆದು ಪರಿವ ತೊಱೆಗಳ ತೆಱದಿಂ ॥ ೩೬

ವ॥ ಅಂತು ಚಾತುರ್ದಂತಮೊಂದೊಂದಱೊಳೋರಂತೆ ನಡುವಗಲ್ವರಂ ಕಾದುವುದುಂ ನಾವಿಂದಿನನುವರಮನನಿಬರುಮೊಂದಾಗಿ ಭೀಷ್ಮರೊಳ್ ಕಾದುವಮೆಂದು ಸಮಕಟ್ಟಿ ಧರ್ಮಪುತ್ರಂ ಕದನತ್ರಿಣೇತ್ರನಂ ಮುಂದಿಟ್ಟು ಸಮಸ್ತಬಲಂಬೆರಸು ಕಾದುವ ಸಮಕಟ್ಟಂ ದುರ್ಯೋಧನ ನಱಿದು–

ಚ॥ ಕುರುಬಲಮೆಂಬುದೀ ಸುರನದೀಜನ ತೋಳ್ವಲಮೆಂಬ ವಜ್ರ ಪಂ
ಜರದೊಳಗಿರ್ದು ಬಳ್ಪುದು ಪಾಂಡವ ಸೈನ್ಯಮುಮಿಂದು ಭೀಷ್ಮರೊ ॥
ರ್ವರೊಳಿರದಾಂತು ಕಾದಲವರಂ ಪೆಱಗಿಕ್ಕಿ ಕಡಂಗಿ ಕಾದಿ ನಿ
ತ್ತರಿಸುವೆನೆಂದು ಪಾಂಡವ ಬಲಕ್ಕಿದಿರಂ ತಱಿಸಂದು ತಾಗಿದಂ ॥ ೩೭

ವ॥ ಅಂತು ತಾಗುವುದುಂ ಸಾತ್ಯಕಿ ಕೃತವರ್ಮನೊಳ್ ಯುಧಿಷಿರಂ ಶಲ್ಯನೊಳ್ ಸೌಭದ್ರನಶ್ವತ್ಥಾಮನೊಳ್ ಸಹದೇವಂ ಶಕುನಿಯೊಳ್ ನಕುಲಂ ಚಿತ್ರಸೇನನೊಳ್ ಚೇಕಿತಾನಂ

ಅನುಕರಿಸಿತು. ೩೫. ಬಾಣಪ್ರಯೋಗಮಾಡುವ ಬಿಲ್ಗಾರರಿಂದಲೂ ಮುನ್ನುಗ್ಗಿಸುವ ಸೈನ್ಯಗಳಿಂದಲೂ ಭಯಂಕರತೆಯು ಹೆಚ್ಚುತ್ತಿರಲು ನಡೆಸುತ್ತಿರುವ ತೇರುಗಳಿಂದ ಎಂಟು ದಿಕ್ಕುಗಳೂ ಮಂಕಾಗುತ್ತಿರಲು ಎರಡು ಸೈನ್ಯಗಳೂ ಯುದ್ಧ ಮಾಡಿದುವು. ೩೬. ಸತ್ತು ನಾಶವಾದ ಆನೆಗಳ ರಾಶಿಯಿಂದ ಮೇಲಕ್ಕೆ ಹಾರಿ ಶಬ್ದಮಾಡುತ್ತಿರುವ ರಕ್ತದ ಅಲೆಗಳು ಸುಳಿಸುಳಿದು ಕಲ್ಲುದಾರಿಯಲ್ಲಿ ಭೋರೆಂದು ಶಬ್ದ ಮಾಡುತ್ತ ಪರಿಯುವ ನದಿಗಳ ರೀತಿಯಿಂದ ಒಡನೆ ಹರಿದುವು. ವ॥ ಚತುರಂಗಬಲವೂ ಒಂದೋಂದು ಒಂದೊಂದರಲ್ಲಿ ನಡುಹಗಲಿನವರೆಗೆ ಒಂದೇ ಸಮನಾಗಿ ಕಾದಿದುವು. ಧರ್ಮರಾಜನು ನಾವು ಭೀಷ್ಮರೊಡನೆ ಇಂದಿನ ಯುದ್ಧವನ್ನು ಎಲ್ಲರೂ ಒಟ್ಟಿಗೆ ಸೇರಿ ಕಾದೋಣ ಎಂದು ನಿಷ್ಕರ್ಷಿಸಿ ಅರ್ಜುನನನ್ನು ಮುಂದಿಟ್ಟುಕೊಂಡು ಸಮಸ್ತಸೈನ್ಯವನ್ನೂ ಕೂಡಿಸಿದನು. ಈ ಸುದ್ದಿ ದುರ್ಯೋಧನನನ್ನೂ ಮುಟ್ಟಿತು. ೩೭. 'ಈ ಕೌರವ ಸೈನ್ಯವೆಂಬುದು ಭೀಷ್ಮನ ಬಾಹುಬಲವೆಂಬ ವಜ್ರಪಂಜರದಲ್ಲಿದ್ದು ಬದುಕುತ್ತಿದೆ. ಪಾಂಡವಸೈನ್ಯವು ಈ ದಿನ ಭೀಷ್ಮರೊಬ್ಬರನ್ನು ಬಿಡದೆ ಪ್ರತಿಭಟಿಸಿ ಕಾದಲು ಯೋಚಿಸಿದೆ. ಆದುದರಿಂದ ಅವರನ್ನು ಈ ದಿನ ನಾನು ಹಿಂದಿಕ್ಕಿ (ರಕ್ಷಿಸಿ) ಉತ್ಸಾಹದಿಂದ ಕಾದಿ ಕಾರ್ಯಸಾಧನೆ ಮಾಡುತ್ತೇನೆ' ಎಂದು ದುರ್ಯೋಧನನು ನಿಶ್ಚಯಿಸಿ ಪಾಂಡವಸೈನ್ಯಕ್ಕೆ ಇದಿರಾಗಿ ಬಂದು ತಾಗಿದನು (ಪ್ರತಿಭಟಿಸಿದನು). ವ॥ ಸಾತ್ಯಕಿಯು ಕೃತವರ್ಮನೊಡನೆಯೂ ಧರ್ಮರಾಜನು ಶಲ್ಯನೊಡನೆಯೂ

ಸೈಂಧವನೊಳ್ ಘಟೋತ್ಕಚಂ ಕೃಪನೊಳ್ ಭೀಮಸೇನಂ ಕೌರವನೊಳ್ ಕಳಿಂಗರಾಜಂ ಪಾಂಚಾಳರಾಜನೊಳ್ ಅತಿರಥಮಥನಂ ದ್ರೋಣಾಚಾರ್ಯರೊಳ್ ಅವರವರೊಳದಿರದಾಂತಾಗಳ್-

ಚಂ॥ ನಡುವಿಡುವುರ್ಚುವಾರ್ದರಿವ ನೇರ್ವ ಪಳಂಚುವ ಪೋರ್ವ ಬಾಣದಿಂ
ದುಡಿದು ಸಿಡಿಲ್ದು ಸೂಸಿಯೆ ಕಬಿಲ್ದು ಬಬಿಲ್ದು ಸಡಿಲ್ದು ಜೋಲ್ದು ನೇ ॥
ಲ್ದುಡಿದ ನೊಗಂ ಧ್ವಜಂ ಪಲಗೆ ಕೀಲ್ ಕವರಚ್ಚು ತುರಂಗಮಂ ರಥಂ
ಕಿಡೆ ಕವರಿಂದಗುರ್ವನೊಳಕೊಂಡಿರೆ ತಳ್ತಿಜಿದರ್ ಮಹಾರಥರ್ ॥ ೩೮

ವ॥ ಅಂತು ಕಿಡಿಗುಟ್ಟದಂತೆ ತಳ್ತಿಱಿಯೆ ಜಗದೇಕಮಲ್ಲಂಗೆ ಮಾರ್ಮಲೆಯಲಾಱದೆ ಕುರುಬಲಮೆಲ್ಲಮೊಲ್ಲನುಲಿದೋಡಿ ಭೀಷ್ಮರ ಮಱೆಯಂ ಪೊಕ್ಕಾಗಳ್-

ಕಂ॥ ಧವಳ ಹಯಂ ಧವಳ ರಥಂ
ಧವಳೋಷ್ಣೀಷಂ ಶಶಾಂಕ ಸಂಕಾಶ ಯಶೋ ।
ಧವಳಿತ ಭುವನಂ ತಾಗಿದ
ನವಯವದಿಂ ಬಂದು ಧರ್ಮತನಯನ ಬಲದೊಳ್ ॥ ೩೯

ವ॥ ಅಂತು ತಾಗಿದ ಸಿಂಧುನಂದನನ ಕೋಪಶಿಖಿ ಶಿಖಾಕಳಾಪಂಗಳೊಳ್ ಪುಡುಪುಡನಟ್ಟೆ ಸಾಯಲೆಂದು ಪಾಯ್ವ ಪತಂಗಂಗಳಂತೆ ಸೋಮಕ ಶ್ರೀಜಯ ಪ್ರಮುಖ ನಾಯಕರೊಂದಕ್ಷೋಹಿಣೀ ಬಲಂಬೆರಸು ಭರಂಗೆಯ್ದಾಂತೊಡೆ-

ಅಭಿಮನ್ಯುವು ಅಶ್ವತ್ಥಾಮನೊಡನೆಯೂ ಸಹದೇವನು ಶಕುನಿಯೊಡನೆಯೂ ನಕುಲನು ಚಿತ್ರಸೇನನೊಡನೆಯೂ ಚೇಕಿತಾನನು ಸೈಂಧವನೊಡನೆಯೂ ಘಟೋತ್ಕಚನು ಕೃಪನೊಡನೆಯೂ ಭೀಮಸೇನನು ದುರ್ಯೋಧನನೊಡನೆಯೂ ಕಳಿಂಗರಾಜನು ದ್ರುಪದನೊಡನೆಯೂ ಅರ್ಜುನನು ದ್ರೋಣಾಚಾರ್ಯರೊಡನೆಯೂ ಪರಸ್ಪರ ಹೆದರದೆ ಪ್ರತಿಭಟಿಸಿದರು. ೩೮. (ಬಾಣಗಳನ್ನು) ನಾಟುವ, ಬೀಸಿ ಎಸೆಯುವ, ಚುಚ್ಚುವ, ಶಬ್ದಮಾಡಿ ಕತ್ತರಿಸುವ, ತುಂಡುಮಾಡುವ, ಪ್ರತಿಭಟಿಸಿ ತಗಲುವ ಹೋರಾಡುತ್ತಿರುವ, ಬಾಣಗಳಿಂದ ಮುರಿದು ಸಿಡಿದು ಚೆಲ್ಲಿ ಶಿಥಿಲವಾಗಿ ಜೋತು ಬಿದ್ದು ನೇತಾಡಿ ತುಂಡರಿಸಿದ ನೊಗ, ಬಾವುಟ, ಹಲಗೆ, ಕೀಲು, ಕವಲುಮರ, (ತೇರಿನ) ಅಚ್ಚು, ಕುದುರೆ, ತೇರು ಇವುಗಳು ನಾಶವಾಗಲು ಮಹಾರಥರು ಒಟ್ಟುಗೂಡಿ ಭಯಂಕರವಾಗಿ ಯುದ್ಧಮಾಡಿದರು. ವ॥ ಬೆಂಕಿಯ ಕಿಡಿಯು ಚೆಲ್ಲುವ ಹಾಗೆ ಜಗದೇಕಮಲ್ಲನಾದ ಅರ್ಜುನನು ಯುದ್ಧಮಾಡುತ್ತಿರಲು ಅವನನ್ನು ಪ್ರತಿಭಟಿಸಲಾರದೆ ಕೌರವಸೈನ್ಯವೆಲ್ಲವೂ ಮೆಲ್ಲನೆ ಕೂಗಿಕೊಂಡು ಓಡಿ ಭೀಷ್ಮರ ಮರೆಯನ್ನು ಸೇರಿತು. ೩೯. ಬಿಳಿಯ ಕುದುರೆ, ಬಿಳಿಯ ತೇರು, ಬಿಳಿಯ ತಲೆಯುಡಿಗೆ, ಚಂದ್ರನಿಗೆ ಸಮಾನವಾದ (ಶುಭ್ರಕಾಂತಿಯಿಂದ ಕೂಡಿದ) ಯಶಸ್ಸಿನಿಂದ ಲೋಕವನ್ನೇ ಬಿಳುಪಾಗಿ ಮಾಡಿದ (ಕೀರ್ತಿ ಇವುಗಳಿಂದ ಕೂಡಿದ) ಭೀಷ್ಮನು ಅಶ್ರಮದಿಂದ ಧರ್ಮರಾಜನ ಸೈನ್ಯದೊಡನೆ ಬಂದು ತಾಗಿದನು. ವ॥ ಭೀಷ್ಮನ ಕೋಪಾಗ್ನಿಜ್ವಾಲೆಯ ರಾಶಿಯಲ್ಲಿ ಬಿಸಿಬಿಸಿಯಾಗಿ ಬೆಂದು ನಾಶವಾಗಿ ಸಾಯಬೇಕೆಂದು ಹಾಯುವ 'ದೀಪದ ಹುಳುಗಳ ಹಾಗೆ ಸೋಮಕ ಶ್ರೀಜಯನೇ ಮೊದಲಾದ ನಾಯಕರು ಒಂದಕ್ಷೋಹಿಣೀ

ಮ॥ ಶರಸಂಧಾನದ ಬೇಗಮಂಬುಗಳಸಂಬೀಂಬಂತೆ ಮೇಣಂಬಿನಾ
ಗರಮೆಂಬಂತೆಸೆ ಪಾಯ್ದರಾತಿ ಶರ ಸಂಘಾತಂಗಳಂ ನುರ್ಗಿ ನೇ ॥
ರ್ದರಿದಟ್ಟುಂಬರಿಗೊಂಡು ಕೂಡೆ ಕಡಿದಂತಾ ಸೈನ್ಯಮಂ ಪರ್ವಿ ಗೋ
ಟ್ಟುರ್ರಿಗೊಂದುರ್ವಿದುವಾ ರಸಾತಳಮುಮಂ ಗಾಂಗೇಯನಸ್ತ್ರಾಳಿಗಳ್ ॥ ೪೦

ವ॥ ಅಂತು ಭೀಷ್ಮಂ ಗ್ರೀಷ್ಮಕಾಲದಾದಿತ್ಯನಂತೆ ಕಾಯ್ದಂತಕಾಲದಂತಕನಂತೆ ಕೆಳರ್ದು ವಿಳಯಕಾಲಮೇಘದಂತೆ ಮೊೞಗಿ ಮಹಾಪ್ರಳಯಭೈರವನಂತೆ ಮಸಗಿ ಪಯಿಂಛಾಸಿರ್ವರ್ ಮಕುಟಬದ್ಧರಂ ಕೊಂದಾಗಳ್-

ಚಂ॥ ಮಣಿಮಕುಟಾಳಿಗಳ್ವೆರಸುರುಳ್ದ ನರೇಂದ್ರಶಿರಂಗಳೊಳ್ಗನಾ
ಮಣಿಗಳ ದೀಪ್ತಿಗಳ್ ಬೆಳಗೆ ಧಾತ್ರಿಯನೊಯ್ಯನೆ ಕಂದಿ ಮಾಡಿ ಕಣ್ ।
ತಣಿವಿನಮಂದು ನಿಂದಿಜೆದ ಕೊಳ್ಗುಳನಂ ನಡೆ ನೋೞ್ಪಹೀಂದ್ರರೊಳ್
ಸೆಣಸಿದುವೆಂದೊಡೇವೊಗೞ್ವುದೇರ್ವಸನಂ ಸುರಸಿಂಧುಪುತ್ರನಾ ॥ ೪೧

ವ॥ ಅಂತು ಸೋಮಕಬಲಮೆಲ್ಲಮಂ ಪೇೞಲ್ ಪೆಸರಿಲ್ಲದಂತು ಕೊಂದು ಶ್ರೀ ಜಯಬಲಕ್ಕಪಜಯಮಾಗೆ ಕೊಂದುಮೋಡಿಸಿಯುಮಿಕ್ಕಿ ಗೆಲ್ದ ಮಲ್ಲನಂತಿರ್ದಾಗಳ್ ಜಗದೇಕಮಲ್ಲಂ ಮೊದಲಾಗೆ ವಿರಾಟ ವಿರಾಟಜ ದ್ರುಪದ ದ್ರುಪದಜ ಚೇಕಿತಾನ ಯುಧಾಮನ್ಯೂತ್ತಮೋಜಸೌಭದ್ರ ಘಟೋತ್ಕಚ ಭೀಮಸೇನ ನಕುಲ ಸಹದೇವ ಸಾತ್ಯಕಿ

ಸೈನ್ಯದಿಂದೊಡಗೂಡಿ ಬಂದು ಆರ್ಭಟಿಸಿ ಮುತ್ತಿದರು. ೪೦. ಭೀಷ್ಮನ ಬಾಣಪ್ರಯೋಗಮಾಡುವ ವೇಗವು ಬಾಣಗಳು ಬಾಣಗಳನ್ನು ಹೆರುತ್ತಿರುವ ಹಾಗೆ, ಅಥವಾ ಬಾಣಗಳ ಆಕರದಂತಿರಲು ಆ ಭೀಷ್ಮನ ಬಾಣಗಳು ಹಾರಿ ಬರುತ್ತಿರುವ ಶತ್ರುಗಳ ಬಾಣಸಮೂಹವನ್ನು ಪುಡಿಮಾಡಿ ನೇರವಾಗಿ ಕತ್ತರಿಸಿ, ತುಂಡುಮಾಡಿ, ಹಿಂಬಾಲಿಸಿ ಆಗಲೇ ಕತ್ತರಿಸಿದಂತೆ, ಆ ಸೈನ್ಯವನ್ನು ಆವರಿಸಿ ಕತ್ತನ್ನು ಕತ್ತರಿಸಿ ಪಾತಾಳವನ್ನು ತುಂಬಿದುವು ವ॥ ಭೀಷ್ಮನು ಬೇಸಿಗೆಯ ಸೂರ್ಯನಂತೆ ಕೋಪಗೊಂಡು ಪ್ರಳಯಕಾಲದ ಯಮನಂತೆ ರೇಗಿ ವಿಳಯಕಾಲದ ಮೋಡದಂತೆ ಶಬ್ದಮಾಡಿ ಮಹಾಪ್ರಳಯಭೈರವನಂತೆ ಕೆರಳಿ ಹತ್ತು ಸಾವಿರ ರಾಜರನ್ನು ಕೊಂದನು. ೪೧. ರತ್ನಖಚಿತವಾದ ಕಿರೀಟಗಳ ಸಮೂಹದೊಡನೆ ಉರುಳಿದ ಚಕ್ರವರ್ತಿಗಳ ತಲೆಗಳು ಆ ದಿನದ ಭಗ್ನವಾದ ಯುದ್ಧವನ್ನು ನೋಡಬೇಕೆಂಬ ಕುತೂಹಲದಿಂದ ಭೂಮಿಯನ್ನು ನಿಧಾನವಾಗಿ ರಂಧ್ರಮಾಡಿಕೊಂಡು ಪಾತಾಳಲೋಕದಿಂದ ಬಂದು ಕಣ್ಣು ತೃಪ್ತಿಯಾಗುವಷ್ಟು ಇಣಿಕಿ ನೋಡುತ್ತಿರುವ ಸರ್ಪಗಳ ಹೆಡೆಯ ರತ್ನಗಳ ಕಾಂತಿಯನ್ನೂ ಸ್ಪರ್ಧಿಸುವಂತಿತ್ತು ಎನ್ನುವಾಗ ವ॥ (ಭೀಷ್ಮನು) ಹಾಗೆ ಸೋಮಕ ಸೈನ್ಯವೆಲ್ಲವನ್ನೂ ಹೇಳಲು ಹೆಸರಿಲ್ಲದ ಹಾಗೆ ಕೊಂದು ಶ್ರೀಜಯಬಲಕ್ಕೆ ಸೋಲುಂಟಾಗುವ ಹಾಗೆ ಸಂಹರಿಸಿಯೂ ಓಡಿಸಿಯೂ ಹೊಡೆದೂ ಗೆದ್ದ ಜಟ್ಟಿಯ ಹಾಗೆ ಇದ್ದನು. ಜಗದೇಕಮಲ್ಲನಾದ ಅರ್ಜುನನೇ ಮೊದಲಾದ ವಿರಾಟ, ಉತ್ತರ, ದ್ರುಪದ, ದ್ರೌಪದೇಯ, ಚೇಕಿತಾನ, ಯುಧಾಮನ್ಯು, ಉತ್ತಮೋಜ, ಅಭಿಮನ್ಯು, ಘಟೋತ್ಕಚ, ಭೀಮಸೇನ, ನಕುಲ, ಸಹದೇವ, ಸಾತ್ಯಕಿ, ಪಂಚಪಾಂಡವರೇ

ಪಂಚಪಾಂಡವ ಪ್ರಮುಖನಾಯಕರೆಲ್ಲರುಂಬೆರಸು ಧರ್ಮಪುತ್ರಂ ಶಿಖಂಡಿಯಂ ಮುಂದಿಟ್ಟುಕೊಂಡು ಬಂದು ಪೇಂಕುಳಿಗೊಂಡ ಸಿಂಹಮಂ ಮುತ್ತುವಂತೆ ಸುತ್ತಿ ಮುತ್ತಿದಾಗಳ್-

ಉ॥ ಅಂಬರಮೆಲ್ಲಮಂಬಿನೊಳೆ ಪೂಟಿ ಮಹೀಭುಜರೆತ್ತಮೆಚ್ಚ ಕಿ
ತ್ತಂಬುಗಳೆತ್ತಮುವ್ವಳಿಸೆ ಮಾಣದವಂ ಕಡಿದಿಕ್ಕಿ ತನ್ನ ನ ।
ಲ್ಲಂಬುಗಳಿಂದಮಾರ್ದಿರದಡುರ್ತಿಸೆ ಭೂಭುಜರೆಲ್ಲಮಲ್ಲಿ ಬಿ
ಲ್ಲುಂ ಬೆಱಗಾಗೆ ಬಂದು ಪೊಣರ್ದಂ ಸೆರಗಿಲ್ಲದೆ ವಿಕ್ರಮಾರ್ಜುನಂ ॥ ೪೨

ವ॥ ಅಂತು ಪೊಣರ್ದಾಗಳೆಮ್ಮ ಮಮ್ಮಂಗಮೆಮಗಮೀಗಳನುವರಂ ದೊರೆಯಾಯ್ತೆಂದು ಪರಶುರಾಮನ ಕೊಟ್ಟ ದಿವ್ಯಾಸ್ತ್ರಂಗಳನೊಂದನೊಂದು ಸೂಟಿಸೊಳೆ ತೊಟ್ಟೆಚ್ಚಾಗಳ್-

ಚಂ॥ ಜ್ವಳನ ಪತತ್ರಿಯಂ ಕಡಿದು ವಾರುಣ ಪತತ್ರಿಯಿನೈಂದ್ರ ಬಾಣಮಂ
ಕಳೆದು ಸಮೀರಣಾಸ್ತ್ರದಿನಿದಿರ್ಚಿದ ಭೂಭುಜರೆಲ್ಲರಂ ಭಯಂ ।
ಗೊಳಿಸಿ ನಿಶಾತ ವಜ್ರಶರದಿಂ ಸುರರಂಬರದೊಳ್ ತಗುಳ್ದು ಬಿ
ಚ್ಚಳಿಸೆ ನದೀಜನುಚ್ಚಳಿಸೆ ಕಾದಿದನೇಂ ಕಲಿಯೋ ಗುಣಾರ್ಣವಂ ॥ ೪೩

ವ॥ ಅಂತವೋಘಾಸ್ತ್ರ ಧನಂಜಯಂ ತನ್ನವೋಘಾಸ್ತ್ರಂಗಳಂ ಕಡಿದೊಡೆ ಸಾಮಾನ್ಯಾಸ್ತ್ರಂಗಳೊಳ್ ಧರ್ಮಪುತ್ರಂಗೆ ತನ್ನ ನುಡಿದ ನುಡಿವಳಿಯಂ ನೆನೆದಲ್ಲಳಿಗಾಳೆಗಂಗಾದೆ-

ಚಂ॥ ಕಡಿದನುದಗ್ರ ನಾಯಕರ ಸಾಯಕಮೆಲ್ಲಮನಾ ಶಿಖಂಡಿ ಪೊ
ಕ್ಕಡಿಗಿಡೆ ಬಂದು ಮುಂದೆ ನಿಲೆಯುಂ ಮೊಗಮುಂ ನಡೆ ನೋಡಿಯಾತನಾ ।
ರ್ದೊಡನೊಡನೆಚ್ಚೊಡೆಚ್ಚ ಮೊನೆಯಂಬುಗಳಟ್ಟಿಡಿವೋಗೆಯುಂ ಮನಂ
ಗಿಡನವನಾಂಕೆಗೊಳ್ಳನಗಿಯಂ ಸುಗಿಯಂ ಸುರಸಿಂಧುನಂದನಂ ॥ ೪೪

ಮುಖ್ಯವಾಗಿರುವ ನಾಯಕರೆಲ್ಲರೊಡಗೂಡಿ ಧರ್ಮರಾಯನು ಶಿಖಂಡಿಯನ್ನು ಮುಂದುಮಾಡಿಕೊಂಡು ಬಂದು, ಹುಚ್ಚು ಹಿಡಿದ ಸಿಂಹವನ್ನು ಮುತ್ತುವ ಹಾಗೆ ಮುತ್ತಿದನು. ೪೨. ಭೀಷ್ಮನು ಆಕಾಶಪ್ರದೇಶವೆಲ್ಲವೂ ಬಾಣಸಮೂಹಗಳಲ್ಲಿಯೇ ಹೂತುಹೋಗುವ ಹಾಗೆ ರಾಜರುಗಳು ಎಲ್ಲ ಕಡೆಗಳಿಂದಲೂ ಪ್ರಯೋಗಿಸಿದ ಬಾಣಗಳು ಯಾವ ಕಡೆಗೂ ನುಗ್ಗಲು ಅವಕಾಶಕೊಡದೆ ತನ್ನ ಉತ್ತಮ ಬಾಣಗಳಿಂದ ಕತ್ತರಿಸುತ್ತಿರಲು ಅರ್ಜುನನು ಆರ್ಭಟಮಾಡಿ ನಾವಕಾಶಮಾಡದೆ ಸಮೀಪಿಸಿ ಹೊಡೆದು ಅಲ್ಲಿಯ ರಾಜರುಗಳೆಲ್ಲ ಸಂಭ್ರಾಂತರಾಗುವ ಹಾಗೆ ಭಯವಿಲ್ಲದೆ ಮುಂದೆ ಬಂದು ಹೋರಾಡಿದನು: ವ॥ ನಮ್ಮ ಮೊಮ್ಮಗನಿಗೂ ನಮಗೂ ಈಗ ಯುದ್ಧವು ಸಮಾನವಾಯಿತು ಎಂದು ಭೀಷ್ಮನು (ತಮ್ಮ ಆಚಾರ್ಯರಾದ) ಪರಶುರಾಮನು ಕೊಟ್ಟ ದಿವ್ಯಾಸ್ತ್ರಗಳನ್ನು ಒಂದೊಂದಾಗಿ ಕ್ರಮದಿಂದ ಪ್ರಯೋಗಿಸಿದನು. ೪೩. ಆಗ್ನೇಯಾಸ್ತ್ರವನ್ನು ವಾರಣಾಸ್ತ್ರದಿಂದ ಕತ್ತರಿಸಿ ಐಂದ್ರಾಸ್ತ್ರವನ್ನು ವಾಯ್ವಸ್ತ್ರದಿಂದ ಎದುರಿಸಿ ರಾಜರುಗಳನ್ನೆಲ್ಲ ಹೆದರುವ ಹಾಗೆ ಮಾಡಿ ದೇವತೆಗಳೆಲ್ಲ ಆಕಾಶದಲ್ಲಿ ಗುಂಪುಗುಂಪಾಗಿ ಕೂಡಿ ಸ್ತೋತ್ರಮಾಡುತ್ತಿರಲು ಅರ್ಜುನನು ಇಂದ್ರಾಸ್ತ್ರದಿಂದ ಭೀಷ್ಮನು ಮೇಲಕ್ಕೆ ನೆಗೆಯುವ ಹಾಗೆ ಹೋರಾಡಿದನು. ಅರ್ಜುನನ ಶೌರ್ಯ ಸಾಮಾನ್ಯವೆ? ವ॥ ಹಾಗೆ ಬೆಲೆಯೇ ಇಲ್ಲದ ಅಸ್ತ್ರಗಳನ್ನುಳ್ಳ ಅರ್ಜುನನು ತನ್ನ ಅಮೋಘಾಸ್ತ್ರಗಳನ್ನು ಕತ್ತರಿಸಲು ಭೀಷ್ಮನು ಧರ್ಮರಾಜನಿಗೆ ತಾನು ಕೊಟ್ಟ ಮಾತನ್ನು ಜ್ಞಾಪಿಸಿಕೊಂಡು ಸಾಮಾನ್ಯವಾದ ಬಾಣಗಳಿಂದ ಮೇಳಗಾಳಿಗವನ್ನು ಕಾದಿದನು. ೪೪. ಶ್ರೇಷ್ಠರಾದ

ಇದು ರಣಮೆನ್ನೊಳಾಂತಿಜೆವ ಮೆಯ್ಗಲಿಯುಂ ಸಮರೈಕಮೇರುವೆ
ನ್ನದಟುಮಳುರ್ಕೆಯುಂ ಪಿರಿದು ಪೇಡಿಗದೆಂತಿದಿರಾಂಪೆನೆಂದಣಂ ॥
ಬೆದಱದೆ ನಟ್ಟ ಕೂರ್ಗಣೆಯ ಬಿಣ್ಪೊಱೆಯಿಂದೆ ಬಱಲ್ದುರ್ವಿ ಪೆ
ರ್ವಿದಿರ ಸಿಡಿಂಬಿನೊಳ್ ಪುದಿದಮೊಂದು ಕುಳಾಚಳದಂತೆ ಸಿಂಧುಜಂ ॥ ೪೫

ಉ॥ ತಿಂತಿಣಿಯಾಗೆ ನಟ್ಟ ಕಣೆಯೊಳ್ ನೆಲ ಮುಟ್ಟದೆ ಮೆಯ್ಯೊಳತ್ತಮಿ
ತ್ತಂ ತೆಱೆದಿರ್ದ ಪುಣ್ಗಳಿಸೆವಕ್ಕರದಂತಿರೆ ನೋಡಿ ಕಲ್ಲಿಮೆಂ ।
ಬಂತೆವೊಲಿರ್ದನಟ್ಟವಣೆ ಕೋಲ್ಗಳ ಮೇಲೆಸೆದಿರ್ದ ವೀರ ಸಿ
ದ್ಧಾಂತದ ಶಾಸನಂ ಬರೆದ ಪೊತ್ತಗೆಯಂತಮರಾಪಗಾತ್ಮಜಂ ॥ ೪೬

ಚಂ॥ ನಡೆದುದು ಬಾಳ ಕಾಲದೊಳೆ ತೊಟ್ಟಿನಗಂಕದ ಶೌಚವೀಗಳೋ
ಗಡಿಪುದೆ ಮುಟ್ಟಿ ನಾಂ ನೆಲನನೇಕದು ಪೆಣ್ಗಡಿಮೆಂದು ಮೆಯ್ಯೊಳ ।
ಟ್ಟಿಡಿದ ವಿಕರ್ಣ ಕೋಟಿಯೊಳಣಂ ನೆಲ ಮುಟ್ಟದೆ ನೋಡೆ ಬಱಿಸ್ಗಿಡಂ
ಬಡಿಸಿದನಯ್ಯ ಶೌಚ ಗುಣದುನ್ನತಿಯಂ ಸುರಸಿಂಧುನಂದನಂ ॥ ೪೭

ವ॥ ಅಂತು ಶರಪಂಜರದೊಳೊಱಗಿಯುಮೊಡಲಿಂ ಪತ್ತುವಿಟ್ಟು ಪೋಪ ಜೀವಮಂ ಪೋಗಲೀಯದೆ ಸ್ವಚ್ಛಂದಮಿಬ್ಬುವಪ್ಪುದಱಿಂದುತ್ತರಾಯಣಂ ಬರ್ಪನ್ನಮಿರಿಸಿದನಂತುಮಾಗಳ್

ನಾಯಕರ ಬಾಣಗಳೆಲ್ಲವನ್ನೂ ಭೀಷ್ಮನು ಕಡಿದು ಹಾಕಿದನು. (ಆಗ) ಆ ಶಿಖಂಡಿಯು ಹೆಜ್ಜೆ ತಪ್ಪಿ ಮುಂದೆ ಬಂದು ನಿಂತರೂ ಮುಖವನ್ನು ದೀರ್ಘವಾಗಿ ನೋಡಿದರೂ ಆರ್ಭಟಮಾಡಿ ಹೊಡೆದರೂ ಮೊನಚಾದ ಬಾಣಗಳು ತನ್ನ ಶರೀರದಲ್ಲಿ ನಾಟಿ ಕಿಕ್ಕಿರಿದರೂ ಭೀಷ್ಮನು ತನ್ನ ಮನಸ್ಥೈರ್ಯವನ್ನು ಕಳೆದುಕೊಳ್ಳಲಿಲ್ಲ, ಪ್ರತಿಭಟಿಸಲಿಲ್ಲ, ಹೆದರಲಿಲ್ಲ, ಬೆದರಲಿಲ್ಲ. ೪೫. ಇದು ಯುದ್ಧ; ನನ್ನನ್ನು ಪ್ರತಿಭಟಿಸುವ ಶೂರನಾದರೋ ಸಮರೈಕಮೇರುವೆಂಬ ಬಿರುದುಳ್ಳ ಅರ್ಜುನ; ನನ್ನ ಪರಾಕ್ರಮವೂ ಅದರ ವ್ಯಾಪ್ತಿಯೂ ಹಿರಿದಾದುದು. ಹೇಡಿಗೆ ಹೇಗೆ ಪ್ರತಿಭಟಿಸಲಿ? ಎಂದು ಸ್ವಲ್ಪವೂ ಹೆದರದೆ ತನ್ನ ಶರೀರದಲ್ಲಿ ನಾಟಿಕೊಂಡಿರುವ ಹರಿತವಾದ ಬಾಣಗಳ ವಿಶೇಷವಾದ ಭಾರದಿಂದ ಉಬ್ಬಿ ಬೆಳೆದ ಹೆಬ್ಬಿದಿರಿನ ಮೆಳೆಯಿಂದ ತುಂಬಿದ ಒಂದು ಕುಲಪರ್ವತದಂತೆ ಭೀಷ್ಮನು ಆಯಾಸದಿಂದ ಜೋತುಬಿದ್ದನು. ೪೬. ಶರೀರದ ನಾನಾಕಡೆಗಳಲ್ಲಿ ಎಲ್ಲೆಲ್ಲಿಯೂ ನೆಲವನ್ನು ಮುಟ್ಟದೆ ಗುಂಪುಗುಂಪಾಗಿ ನಾಟಿಕೊಂಡಿರುವ ಬಾಣಗಳಿಂದ ಬಾಯಿಬಿಟ್ಟುಕೊಂಡಿರುವ ಹುಣ್ಣುಗಳು 'ಇಲ್ಲಿ ನೋಡಿ ಕಲಿಯಿರಿ' ಎಂಬ ಪ್ರಕಾಶಮಾನವಾದ ಅಕ್ಷರಗಳ ಹಾಗಿರಲು ಭೀಷ್ಮನು ವ್ಯಾಸಪೀಠದ ಮೇಲಿರುವ ಪ್ರತಾಪತತ್ವದ ವೀರಶಾಸನವನ್ನು ಬರೆದಿರುವ ಪುಸ್ತಕದ ಹಾಗೆ ಶೋಭಿಸುತ್ತಿದ್ದನು. ೪೭. ಬಾಲ್ಯಕಾಲದಿಂದ ಹಿಡಿದು ಪ್ರಸಿದ್ಧವಾದ ಬ್ರಹ್ಮಚರ್ಯವು ನಡೆದುಬಂದಿದೆ. ಈಗ ನಾನು ಸ್ತ್ರೀಯಾದ ಅವಳನ್ನು ಮುಟ್ಟಿ ನನ್ನ ಶೌಚಗುಣವನ್ನು ಹೋಗಲಾಡಿಸುವುದೇ? ಕೆಡಿಸುವುದೇ? ಎಂದು ಶರೀರದಲ್ಲಿ ನಾಟಿಕೊಂಡು ತುಂಬಿದ್ದ ಲೆಕ್ಕವಿಲ್ಲದ ಬಾಣಗಳಿಂದ ಭೂದೇವಿಯನ್ನು ಸ್ವಲ್ಪವೂ ಮುಟ್ಟದೆ ಭೀಷ್ಮನು ತನ್ನ ಶೌಚಗುಣವನ್ನು ಪ್ರಸಿದ್ಧಪಡಿಸಿದನು. ವ॥ ಹೀಗೆ ಶರಪಂಜರದಲ್ಲೊರಗಿದ್ದರೂ

ಕುರುಬಲಮೆಲ್ಲಂ ಕುರುಕುಳವನಸಿಂಹಂ ಶರಪಂಜರದೊಳೊಱಗಿದನಿನ್ನೆಮ್ಮಂ ಕಾವರಾರೆಂದೊಲ್ಲ ನುಲಿದೋಡಿ ಬೀಡಂ ಪೊಕ್ಕಾಗಳ್ ಧರ್ಮಪುತ್ರಂ ನಿಜಾನುಜ ಸಹಿತಂ ಬಂದು ಬಲಗೊಂಡು ಕಾಲ ಮೇಲೆ ಕವಿದು ಪಟ್ಟು-

ಕಂ॥ ಕರುಣದಿನೆಮ್ಮಂ ತಾಯ್ವೋಲ್
ತರುವಲಿಗಳನೆಯ್ದೆ ನಡಪಿದಜ್ಜರ್ ನೀಮಿಂ ।
ತಿರೆಯುಂ ನೋಡಿದೆವೇನೆಮ
ಗರಸಿಕೆಯೋ ಪೇಟಿಮೆಂದು ಶೋಕಂಗೆಯ್ದರ್ ॥ ೪೮

ವ॥ ಅಂತು ಶೋಕಂಗೆಯ್ವೊಡೆ ನೀಮಂತೆನಲ್ವೇಡ ಕ್ಷತ್ರಿಯಧರ್ಮಮಿಂತದರ್ಕಱಲ್ವೇಡ ಬೀಡಿಂಗೆ ಪೋಗಿಮೆಂದೊಡೆ ಮಹಾಪುಸಾದಮಂತೆ ಗೆಯ್ವೆಮೆಂದನಿಬರುಮೆಱಗಿ ಪೊಡೆವಟ್ಟು ಪೋದರಾಗಳ್ ದುರ್ಯೋಧನಂ ಬಂದು ಪೊಡೆವಟ್ಟು-

ಚಂ॥ ಇಱಿವುದನಾಂತ ಮಾರ್ವಲಮನಿನ್ನೆಗಮಚ್ಚರಿಯಾಗೆ ತಾಗಿ ತ
ಳ್ತಿಱಿದಿರಿದೊಂದವಸ್ಥೆ ನಿಮಗೆನ್ನಯ ಕರ್ಮದಿನಾದುದೆಂದೊಡಿಂ ।
ಮಱವುದು ಕಂದ ಪಾಂಡವರ ವೈರಮನೆನ್ನೊಡವೋಕೆ ಕೋಪಮುಂ
ಕಜುಪುಮೊಡಂಬಡೇವುದದನಿನ್ನುಮೊಡಂಬಡು ಸಂಧಿಮಾಡುವೆಂ ॥ ೪೯

ವ॥ ಎಂಬುದುಂ ದುರ್ಯೋಧನನಿಂತೆಂದಂ-

ಶರೀರದಿಂದ ತೊಲಗಿಹೋಗುವ ಜೀವವನ್ನು ಹೋಗುವುದಕ್ಕೆ ಅವಕಾಶ ಕೊಡದೆ ಸ್ವೇಚ್ಛಾಮರಣೆಯಾದುದರಿಂದ ಉತ್ತರಾಯಣವು ಬರುವವರೆಗೆ ಇರಿಸಿದನು. ಆಗ ಕೌರವಸೈನ್ಯವೆಲ್ಲವೂ ಕುರುಬಲವೆಂಬ ಕಾಡಿಗೆ ಸಿಂಹದೋಪಾದಿಯಲ್ಲಿದ್ದ ಭೀಷ್ಮನು ಶರಪಂಜರದಲ್ಲೊರಗಿದನು, ಇನ್ನು ನಮ್ಮನ್ನು ರಕ್ಷಿಸುವವರಾರು ಎಂದು ನಿಧಾನವಾಗಿ ನುಡಿದು ಓಡಿ ಬೀಡನ್ನು ಸೇರಿತು. ಧರ್ಮರಾಜನು ತನ್ನ ತಮ್ಮಂದಿರೊಡನೆ ಬಂದು ಪ್ರದಕ್ಷಿಣೆ ಮಾಡಿ ಭೀಷ್ಮರ ಕಾಲ ಮೇಲೆ ಕವಿದುಬಿದ್ದು ಅತ್ತನು. ೪೮. ತಬ್ಬಲಿಗಳಾದ ನಮ್ಮನ್ನು ದಯೆಯಿಂದ ತಾಯಿಯ ಹಾಗೆ ಸಾಕಿದ ಅಜ್ಜರಾದ ನೀವು ಈ ಸ್ಥಿತಿಯಲ್ಲಿರುವುದನ್ನು ನೋಡಿದೆವು. ನಮಗೆ ಎಂತಹ ಅರಸಿಕೆಯೋ ಹೇಳಿ ಎಂದು ದುಃಖಪಟ್ಟನು. ವ॥ 'ನೀವು ಹಾಗೆ ಹೇಳಬೇಡಿ; ಕ್ಷತ್ರಧರ್ಮವೇ ಹಾಗೆ; ಬೀಡಿಗೆ ಹೋಗಿ' ಎನ್ನಲು 'ಮಹಾಪ್ರಸಾದ ಹಾಗೆಯೇ ಮಾಡುತ್ತೇವೆ' ಎಂದು ಎಲ್ಲರೂ ಎರಗಿ ನಮಸ್ಕಾರ ಮಾಡಿ ಹೋದರು. ಆಗ ದುರ್ಯೋಧನನು ಬಂದು ನಮಸ್ಕಾರಮಾಡಿ ಹೇಳಿದನು. ೪೯. 'ಪ್ರತಿಭಟಿಸಿದ ಪರಪಕ್ಷವನ್ನು ಇಲ್ಲಿಯವರೆಗೆ ಆಶ್ಚರ್ಯವಾಗುವ ಹಾಗೆ ತಗುಲಿ ಕೂಡಿಕೊಂಡು ಕತ್ತರಿಸಿದಿರಿ. ಈಗ ಈ ಶರಶಯನದಲ್ಲಿ ಮಲಗುವ ದುರವಸ್ಥೆಯು ನನ್ನ ಪುರಾತನ ಕರ್ಮದಿಂದಾಯಿತು ಎನ್ನಲು ಭೀಷ್ಮನು 'ಮಗು, ಪಾಂಡವರ ಮೇಲಿನ ದ್ವೇಷವನ್ನು ಇನ್ನು ಮೇಲಾದರೂ ಬಿಡು. ಕೋಪವೂ ದ್ವೇಷವೂ ನನ್ನೊಡನೆ ಹೋಗಲಿ; ವೈರದಿಂದೇನು ಪ್ರಯೋಜನ? ನೀನು ಒಪ್ಪುವವನಾಗು ಸಂಧಿಯನ್ನು ಮಾಡುತ್ತೇನೆ. ವ॥ ಎನ್ನಲು ದುರ್ಯೋಧನನು

ಚಂ॥ ಅದಟಿನಳುರ್ಕೆಯುಂ ಬಲದಳುರ್ಕೆಯುಮಂ ಗೆಡೆಗೊಂಡು ನೀಮಿದಾ
ವುದು ಪದೆಮಾತನಿಂತು ನುಡಿದಿರ್ ಪುದುವಾೞ್ಕೆಯೊಳೆನ್ನ ಬಳ್ಕಿದ ।
ಳ್ಕಿದ ಬಗೆಗಂಡಿರೇ ಮಗನೆ ನೀಂ ಪಗೆಯುಂ ತಱಿದೊಟ್ಟು ನೆಟ್ಟನೆ
ನ್ನದೆ ಬಗೆಗೆಟ್ಟು ದಾಯಿಗರೊಳಿಂ ಮಗುೞ್ದುಂ ಪುದುವಾೞ್ವುದೆಂಬಿರೇ ॥೫೦

ವ॥ ಎಂಬುದುಮಿಲ್ಲಿಂದಂ ಮೇಲಾದ ಕಜ್ಜಮಂ ನೀನೆ ಬಲ್ಲೆ ಬೀಡಿಂಗೆ ಬಿಜಯಂಗೆಯ್ಯೆಮೆನೆ ಪೊಡೆವಟ್ಟು ಸುಯೋಧನಂ ಪೋದನಾಗಳ್-

ಚಂ॥ ನೆರೆದ ವಿರೋಧಿನಾಯಕರನಾಹವದೊಳ್ ತಱಿದೊಟ್ಟಲೊಂದಿದೊ
ಡ್ಡುರುಳ್ವಿನಮಾ ಗುಣಾರ್ಣವನಡುರ್ತಿಱಿದಲ್ಲಿ ಸಿಡಿಲ್ದ ನೆತ್ತರೊಳ್ ।
ಪೊರೆದು ನಿರಂತರಂ ಪೊಲಸು ನಾಱುವ ಮೆಯ್ಯನೆ ಕರ್ಚಲೆಂದು ಚೆ
ಚ್ಚರಮಪರಾಂಬುರಾಶಿಗಿೞಿವಂತಿೞಿದಂ ಕಮಳೈಕಬಾಂಧವಂ ॥ ೫೧

ವ॥ ಆಗಳ್ ದುರ್ಯೋಧನನಾತ್ಮೀಯ ಸೇನಾನಾಯಕನಪ್ಪ ಗಾಂಗೇಯಂ ಬಿದಿರ ಸಿಡಿಂಬಿನ ಪೊದಱೊಳಗೆ ಮಱೆದೊಱಗಿದ ಮೃಗರಾಜನಂತೆ ಶರಶಯನದೊಳೊಱಗಿದಂ ಕದನತ್ರಿಣೇತ್ರನನೆಂತು ಗೆಲ್ವೆನೆಂದು ಚಿಂತಿಸಿ ಮಂತ್ರಶಾಲೆಯಂ ಪೊಕ್ಕು ಕರ್ಣ ದ್ರೋಣ ಕೃಪ ಕೃತವರ್ಮಾಶ್ವತ್ಥಾಮ ಶಲ್ಯ ಶಕುನಿ ಸೈಂಧವ ಭೂರಿಶ್ರವಃ ಪ್ರಭೃತಿಗಳ್ಗೆಲ್ಲಂ ಬೞಿಯನಟ್ಟಿ ಬರಿಸಿ-

ಶಾ॥ ಆಯ್ತೇ ಸಾಧಿಸಿಕೊಂಡು ಪಾಂಡುಸುತರಂ ನಣ್ಪಿಂಗೆ ಬೆನ್ನಿತ್ತು ವಲ್
ಸಯ್ತಾಯ್ತುಜ್ಜನ ಮಾತು ನಮ್ಮ ಪಡೆಯುಂ ಕಾವನ್ನರಿನ್ನಾರೊ ಸು ।
ಪ್ರೀತಂ ಕಾವೊಡೆ ಕರ್ಣನಕ್ಕುಮದಱಿಂ ನಾಮೆಲ್ಲಮಾತಂಗೆ ನಿ
ರ್ದ್ಧೌತಂ ಬೀರದ ಬೀರವಟ್ಟಮನಿದಂ ನಿರ್ವ್ಯಾಜದಿಂ ಕಟ್ಟುವಂ ೫೨

ಹೀಗೆಂದನು-೫೦. ಪರಾಕ್ರಮದ ಅತಿಶಯವನ್ನೂ ಸೈನ್ಯದ ಆಧಿಕ್ಯವನ್ನೂ ಒಟ್ಟಿಗೇ ಹೊಂದಿ ನೀವು 'ಕೂಡಿ ಬಾಳಿ' ಎಂಬ ಈ ಪ್ರತಿಮಾತನ್ನು (ಉಪದೇಶವನ್ನು) ಈ ರೀತಿ ನುಡಿದಿರಿ. ನನ್ನ ಅಳುಕಿದ ಹೆದರಿದ ಮನಸ್ಸನ್ನೇನಾದರೂ ಕಂಡಿರೇನು? ಮಗನೆ ನೀನು ನೇರವಾಗಿ ಶತ್ರುವನ್ನು ಕತ್ತರಿಸಿ ರಾಶಿಮಾಡು ಎಂದು ಹೇಳದೆ ಜ್ಞಾತಿಗಳಲ್ಲಿ ಇನ್ನೂ ಕೂಡಿ ಬಾಳು ಎನ್ನುವುದೇ? ವ॥ ಎನ್ನಲು 'ಇನ್ನು ಇದಕ್ಕಿಂತಲೂ ಉತ್ತಮವಾದ ಕಾರ್ಯವನ್ನು (ಇನ್ನು ಮೇಲಾಗಬೇಕಾದ ಕಾರ್ಯವನ್ನು) ನೀನೇ ಬಲ್ಲೆ, ಬೀಡಿಗೆ ಹೊರಡು' ಎನ್ನಲು ನಮಸ್ಕಾರಮಾಡಿ ದುರ್ಯೋಧನನು ಹೋದನು. ೫೧. ಒಟ್ಟುಗೂಡಿದ ಶತ್ರುನಾಯಕರನ್ನು ತರಿದು ಯುದ್ಧದಲ್ಲಿ ರಾಶಿ ಮಾಡಲು ಸೇರಿದ್ದ ಆ ಸೈನ್ಯದ ರಾಶಿಯು ಉರುಳುವಂತೆ ಅರ್ಜುನನು ಸಮೀಪಕ್ಕೆ ಬಂದು ಇರಿದಾಗ ಸಿಡಿದ ರಕ್ತದಿಂದ ಲೇಪನಗೊಂಡು ಯಾವಾಗಲೂ ದುರ್ನಾತ ಹೊಡೆಯುತ್ತಿದ್ದ ತನ್ನ ಶರೀರವನ್ನು ತೊಳೆಯಬೇಕೆಂದು ಸೂರ್ಯನು ಜಾಗ್ರತೆಯಾಗಿ ಪಶ್ಚಿಮಸಮುದ್ರಕ್ಕೆ ಇಳಿದನೋ ಎಂಬಂತೆ ಸೂರ್ಯನು ಮುಳುಗಿದನು. ವ॥ ಆಗ ದುರ್ಯೋಧನನು ತನ್ನ ಸೇನಾನಾಯಕನಾದ ಭೀಷ್ಮನು ಬಿದಿರ ಮೆಳೆಯ ಪೊದರಿನಲ್ಲಿ ಮರೆತು ಮಲಗಿದ ಸಿಂಹದಂತೆ ಶರಶಯನದಲ್ಲಿ ಮಲಗಿದನು. ಅರ್ಜುನನನ್ನು ಹೇಗೆ ಗೆಲ್ಲಲಿ ಎಂದು ಚಿಂತಿಸಿ ಮಂತ್ರಶಾಲೆಯನ್ನು ಪ್ರವೇಶಮಾಡಿ ಕರ್ಣ, ದ್ರೋಣ, ಕೃಪ, ಕೃತವರ್ಮ, ಅಶ್ವತ್ಥಾಮ, ಶಲ್ಯ, ಶಕುನಿ, ಸೈಂಧವ, ಭೂರಿಶ್ರವನೇ ಮೊದಲಾದವರಿಗೆಲ್ಲ ದೂತರನ್ನು ಕಳುಹಿಸಿ ಬರಮಾಡಿದನು. ೫೨. ಪಾಂಡವರನ್ನು ಗೆದ್ದುದಾಯಿತೇ? ಬಾಂಧವ್ಯಕ್ಕೆ

ವ|| ಎಂಬುದುಂ ಕರ್ಣನಿಂತೆಂದಂ-

ಮ|| ಸುರಸಿಂಧೂದ್ಭವನಿಂ ಬಳಿಕ್ಕೆ ಪೆಜರಾರ್ ಸೇನಾಧಿಪತ್ಯಕ್ಕೆ ತ
ಕ್ಕರೆ ಲೋಕೈಕ ಧನುರ್ಧರಂ ಕಳಶಜಂ ತಕ್ಕಂ ನದೀನಂದನಂ ।
ಗೆ ರಣಕ್ಕಾಂ ನೆರಮಾದೆನಪ್ಪೊಡಿನಿತೇಕಾದಪ್ಪುದೀ ಪೊಟ್ಟೆ ಪೊ
ಟ್ಟಿರವೇಡೀವುದು ಬೀರವಟ್ಟಮನದಂ ದ್ರೋಣಂಗೆ ನೀಂ ಭೂಪತೀ ॥ ೫೩

ವ|| ಅಂತು ಭೀಷ್ಮಾದನಂತರಂ ದ್ರೋಣಯೆಂಬುದು ಪರಾಶರ ವಚನಮೆನೆ ಕರ್ಣನ ನುಡಿಗೊಡಂಬಟ್ಟು-

ಕಂ|| ವಿಸಸನ ರಂಗಕ್ಕಾನಿರೆ
ಬೆಸಗೊಳ್ವದೆ ಪೆಜರನೆಂದು ಜಯಪಟಹಂಗಳ್ ।
ದೆಸೆದೆಸೆಗೆಸೆವಿನೆಗಂ ಕ
ಟ್ಟಿಸಿಕೊಂಡಂ ಬೀರವಟ್ಟಮಂ ಕಳಶಭವಂ ॥ ೫೪

ವ|| ಅಂತು ಕುಂಭಸಂಭವನನೇಕ ಶಾತಕುಂಭ ಕುಂಭಸಂಭೃತ ಮಂಗಳಗಂಗಾ ಜಲಂಗಳಿಂ ಪವಿತ್ರೀಕೃತಗಾತ್ರನಾಗಿ ಕೌರವಬಳಾಗ್ರಗಣ್ಯನಾಗಿರ್ದನಿತ್ತ ತದ್ವೃತ್ತಾಂತಮ ನೆಲ್ಲಮನಜಾತಶತ್ರು ಕೇಳ್ದು ಜನಾರ್ದನನೊಡನೆ ರಿಪುಬಳಮರ್ದನೋಪಾಯಮಂ ಸಮಕಟ್ಟುತಿರ್ಪನ್ನೆಗಂ -

ಆಶ್ರಯಕೊಟ್ಟು (ಸೋತು) ಅಜ್ಜನಾಡಿದ ಮಾತು ನೆಟ್ಟಗಾಯಿತಲ್ಲವೇ? ಇನ್ನು ಮೇಲೆ ನಮ್ಮ ಸೈನ್ಯವನ್ನು ರಕ್ಷಿಸುವವರಾರಿದ್ದಾರೆ. ರಕ್ಷಿಸುವುದಕ್ಕೆ ಸಮರ್ಥನಾದವನು ಈ ಕರ್ಣನೇ! ಆದುದರಿಂದ ನಾವೆಲ್ಲ ಎರಡನೆಯ ಮಾತಿಲ್ಲದೆ (ಸರ್ವಾನುಮತದಿಂದ) ಯಾವ ನೆಪವೂ ಇಲ್ಲದೆ ವೀರಪಟ್ಟವನ್ನು (ಸೇನಾಧಿಪತ್ಯವನ್ನು) ಅವನಿಗೆ ಕಟ್ಟೋಣ ವ|| ಎನ್ನಲು ಕರ್ಣನು ಹೀಗೆಂದನು-೫೩. ಭೀಷ್ಮನಾದ ಮೇಲೆ ಸೇನಾಧಿಪತ್ಯಕ್ಕೆ ಯೋಗ್ಯರಾದವರು ಬೇರೆ ಯಾರಿದ್ದಾರೆ? ಯೋಗ್ಯರಾದವರಿರುವ ಪಕ್ಷದಲ್ಲಿ ಪ್ರಪಂಚದ ಬಿಲ್ಗಾರರಲ್ಲೆಲ್ಲ ಅಗ್ರೇಸರನಾದ ದ್ರೋಣನೇ ಯೋಗ್ಯನಾದವನು. ನಾನು ಭೀಷ್ಮನಿಗೆ ಸಹಾಯಮಾಡಿದ್ದಿದ್ದರೆ ಹೀಗೇಕಾಗುತ್ತಿತ್ತು. ಈ ಹೊತ್ತೇ ಹೊತ್ತು (ಇದೇ ಸರಿಯಾದ ಕಾಲ). ಸಾವಕಾಶ ಮಾಡಬೇಡ; ದುರ್ಯೋಧನ, ವೀರಪಟ್ಟವನ್ನು ನೀನು ದ್ರೋಣನಿಗೆ ಕೊಡು. ವ|| 'ಭೀಷ್ಮನಾದ ಮೇಲೆ ದ್ರೋಣ ಎಂಬುದು ವ್ಯಾಸಋಷಿಗಳ ಮಾತು' ಎನ್ನಲು ಹಾಗೆಯೇ ಆಗಲಿ ಎಂದು ಕರ್ಣನ ಮಾತಿಗೆ ಒಪ್ಪಿದನು. ೫೪. ಯುದ್ಧರಂಗಕ್ಕೆ ನಾನಿರುವಾಗ ಬೇರೆಯವರನ್ನು ಪ್ರಶ್ನೆಮಾಡುವುದೇ (ವಿಚಾರಮಾಡುವುದೇ) ಎಂದು ಹೇಳುತ್ತ ಜಯಭೇರಿಗಳು ದಿಕ್ಕುದಿಕ್ಕುಗಳಲ್ಲಿಯೂ ಭೋರ್ಗರೆಯುತ್ತಿರಲು ದ್ರೋಣನು ವೀರಪಟ್ಟವನ್ನು ಕಟ್ಟಿಸಿಕೊಂಡನು. ವ|| ಹಾಗೆ ದ್ರೋಣಾಚಾರ್ಯನು ಅನೇಕ ಚಿನ್ನದ ಕಲಶಗಳಲ್ಲಿ ತುಂಬಿಟ್ಟಿದ್ದ ಮಂಗಳ ಗಂಗಾಜಲದಿಂದ ಶುದ್ಧಿ ಮಾಡಲ್ಪಟ್ಟ ಶರೀರ ವುಳ್ಳವನಾಗಿ ಕೌರವಸೈನ್ಯದ ಮೊದಲಿಗನಾಗಿದ್ದನು. ಈ ಕಡೆ ಈ ವೃತ್ತಾಂತವನ್ನೆಲ್ಲ ಧರ್ಮರಾಯನು ಕೇಳಿ ಕೃಷ್ಣನೊಡನೆ ಶತ್ರುಸೈನ್ಯವನ್ನು ನಾಶಪಡಿಸುವ ಉಪಾಯವನ್ನು

ಮ॥ ಅದಟಂ ಸಿಂಧುತನೂಭವಂ ವಿಜಯನೊಳ್ ಮಾರ್ಕೊಂಡಣಂ ಕಾದಲಾ
ಱದೆ ಬೆಂಬಟಿಸ್ಟೊಡೆ ಕಾದಲೆಂದು ಬೆಸನಂ ಪೂಣ್ದಂ ಗಡಂ ದ್ರೋಣನಂ ॥
ತದುವಂ ನೋಡುವೆನೆಂದು ಕಣ್ ತಣಿವಿನಂ ನೋಡಲ್ಕೆ ಬರ್ಪಂತೆ ಬಂ
ದುದಯಾದ್ರೀಂದ್ರಮನೇಱೆ ಭಾನು ಪೊಱಮಟ್ಟೊಡ್ಡಿತ್ತನೀಕಾರ್ಣವಂ ॥ ೫೫

ವ॥ ಆಗಳ್ ಪಾಂಡವ ಬಲದ ಸೇನಾನಾಯಕಂ ಧೃಷ್ಟದ್ಯುಮ್ನನೊಡ್ಡಿದ ವಜ್ರವ್ಯೂಹಕ್ಕೆ ಪದ್ಮವ್ಯೂಹಮನೊಡ್ಡಿ ತದ್ವ್ಯೂಹದ ಮೊನೆಗೆ ವಂದು-

ಮಂ ॥ ಕ್ರಾಂ ॥ ಶೋಣಾಶ್ವಂಗಳ್ ರಜತ ರಥಮಂ ಪೂಡೆ ಕುಂಭಧ್ವಜಂ ಗೀ
ರ್ವಾಣಾವಾಸಂಬರಮಡರೆ ಮಾಱೊಡ್ಡು ದಲ್ ಸಾಲದೆನ್ನೀ ।
ಬಾಣಾವಾಸಕ್ಕೆನುತುಮಳವಂ ಬೀಱುತುಂ ಬಿಲ್ಗೆ ಜಾಣಂ
ದ್ರೋಣಂ ನಿಂದಂ ಮಸಗಿ ತಿರುಪುತ್ತೊಂದು ಕೂರಂಬನಾಗಳ್ ॥ ೫೬

ಕಂ॥ ಆ ಸಕಳ ಧರಾಧೀಶರ
ಬೀಸುವ ಕುಂಚಮನೆ ಪಾರ್ದು ಬೀಸಲೊಡಂ ಕೆ ।
ಯ್ವೀಸಲೊಡಮಱಿದು ತಾಗಿದು
ವಾಸುಕರಂ ಬೆರಸು ತಡೆಯದುಭಯ ಬಲಂಗಳ್॥ ೫೭

ವ॥ ಅಂತು ಚಾತುರ್ದಂತಮೊಂದೊಂದಱೊಳ್ ತಾಗಿ ತಳ್ತಿಱಿವಲ್ಲಿ ತಲೆಗಳ್ ಪಱಿಯೆ ಬರಿಗಳ್ ಮುಱಿಯೆ ತೊಡೆಗಳುಡಿಯೆ ಪುಣ್ಗಳ್ ಸುಲಿಯೆ-

ಏರ್ಪಡಿಸಿದ್ದನು. ೫೫. ಪರಾಕ್ರಮಶಾಲಿಯಾದ ಭೀಷ್ಮನು ಅರ್ಜುನನನ್ನು ಪ್ರತಿಭಟಿಸಿ ವಿಶೇಷವಾಗಿ ಕಾದಲಾರದೆ ಬೆನ್ನು ತಿರುಗಿಸಲು ದ್ರೋಣನು ತಾನು ಕಾದುವೆನೆಂದು ಕಾರ್ಯವನ್ನು ಪ್ರತಿಜ್ಞೆ ಮಾಡಿದನಲ್ಲವೇ? ಅದನ್ನು ನೋಡಿಯೇಬಿಡುತ್ತೇನೆ ಎಂದು ಕಣ್ಣು ತೃಪ್ತಿಪಡುವವರೆಗೆ ನೋಡಲು ಬರುವ ಹಾಗೆ ಸೂರ್ಯನು ಉದಯ ಪರ್ವತವನ್ನೇರಿದನು. ಸೇನಾಸಮುದ್ರವು ಹೊರಟು ಚಾಚಿಕೊಂಡಿತು. ವ॥ ಆಗ ಪಾಂಡವಸೈನ್ಯದ ಸೇನಾನಾಯಕನಾದ ಧೃಷ್ಟದ್ಯುಮ್ನನು ಒಡ್ಡಿದ್ದ ವಜ್ರವ್ಯೂಹಕ್ಕೆ ಪ್ರತಿಯಾಗಿ ಪದ್ಮವ್ಯೂಹವನ್ನೊಡ್ಡಿ ಆ ವ್ಯೂಹದ ಮುಂಭಾಗಕ್ಕೆ ಬಂದು ೫೬. ಬೆಳ್ಳಿಯ ತೇರಿಗೆ ಕೆಂಪುಕುದುರೆಗಳನ್ನು ಹೂಡಿರಲು ಕಲಶದ ಚಿಹ್ನೆಯುಳ್ಳ ಬಾವುಟವು ದೇವಲೋಕದವರೆಗೆ ಹತ್ತಿರಲು, ಶತ್ರುಸೈನ್ಯವು ಈ ನನ್ನ ಬತ್ತಳಿಕೆಗೆ ಸಾಕಾಗುವುದಿಲ್ಲವಲ್ಲವೇ ಎಂದು ಹೇಳಿ ತನ್ನ ಶಕ್ತಿಯನ್ನು ಪ್ರದರ್ಶಿಸುತ್ತ ಬಿಲ್ಲಿನಲ್ಲಿ ಜಾಣನಾದ ದ್ರೋಣನು ರೇಗಿ ಒಂದು ಹರಿತವಾದ ಬಾಣವನ್ನು ಬೀಸುತ್ತ ನಿಂತುಕೊಂಡನು. ೫೭. ಆ ರಾಜರುಗಳಲ್ಲಿ ಬೀಸುವ ಚವುರಿಗಳನ್ನೇ ನೋಡಿಕೊಂಡು ಕೈಬೀಸಿಮೊಡನೆಯೇ ಎರಡುಸೈನ್ಯಗಳೂ ಅದನ್ನು ತಿಳಿದು ಸಾವಕಾಶಮಾಡದೆ ವೇಗದಿಂದ ಕೂಡಿ ತಾಗಿದುವು. ವ॥ ಚತುರಂಗಬಲವೂ ಒಂದರೊಡನೊಂದು ತಾಗಿ ಕೂಡಿಕೊಂಡು ಯುದ್ಧಮಾಡುವಾಗ ತಲೆಗಳು ಹರಿದುವು, ಪಕ್ಕೆಗಳು

ಚಂ॥ ಒಡನೆ ನಭಂಬರಂ ಸಿಡಿಲ್ವ ಪಂದಲೆ ಸೂಸುವ ಕಂಡದಿಂಡೆಗಳ್
ತೊಡರೆ ತೆರಳ್ದ ನೆತ್ತರ ಕಡಲ್ ನೆಣದೊಳ್ಗೆಸಱೊಳ್ ಜಗಿಲ್ತಗು ।
ರ್ವಡರೆ ನಿರಂತರಂ ಪೊಳೆವ ಬಾಳುಡಿ ಸುಯ್ವ ನವ ವ್ರಣಂಗಳೊಳ್
ಪೊಡರೆ ಪೊದಟ್ಪುದದ್ಭುತ ಭಯಾನಕಮಾಹವ ರಂಗಭೂಮಿಯೊಳ್ ॥೫೮

ವ॥ ಆಗಳೆರಡುಂ ಬಲದ ಸೇನಾನಾಯಕರೊಂದೊರ್ವರೊಳ್ ಕಾದುವಾಗಳ್ ಕುಂಭಸಂಭವಂ ಧರ್ಮಪುತ್ರನ ಮೊನೆಯೊಳ್ ಭರಂಗೆಯ್ದು ಕಾದುವಾಗಳ್-

ವ॥ ಧ್ವಜಮಂ ಖಂಡಿಸಿ ಪೂಣ್ವು ಬಾಣದೊಳೆ ಧೃಷ್ಟದ್ಯುಮ್ನನಂ ನೆಟ್ಟನೊ
ಟ್ಟಜೆಯಿಂ ತೂಳ್ದಿ ಶಿಖಂಡಿಯಂ ದ್ರುಪದನಂ ಕಾಯ್ಪಿಂದಮೇಸಾಡಿ ಮಿ ।
ಕ್ಕು ಜವಂ ಕೊಲ್ವವೊಲಾತನಿಂ ಕಿಱಿಯರಂ ಪನ್ನೊರ್ವರಂ ಕೊಂದು ಮ
ತ್ಸ್ಯಜನಂ ಮಾಣದೆ ಕೊಂದನೊಂದೆ ಶರದಿಂ ನಿಶ್ಶಂಕನಂ ಶಂಕನಂ ॥ ೫೯

ವ॥ ಆಗಳ್ ಸಾಲ್ವಲ ದೇಶದರಸಂ ಚೇಕಿತ್ಸಂ ಪ್ರಳಯಕಾಲದ ಮೇಘಘಟೆಗಳೆನಿಸುವ ನೇಕಾನೇಕಪ ಘಟೆಗಳ್ವೆರಸರಸನಂ ಪೆಱಗಿಕ್ಕಿ ಬಂದು ತಾಗಿದಾಗಳ್-

ಕಂ॥ ಓರೊಂದೆ ಪಾರೆಯಂಬಿನೊ
ಳೋರೊಂದೆ ಗಜೇಂದ್ರಮುರುಳೆ ತೆಗೆನೆಱೆದೆಚ್ಚ ।
ಚ್ಛೋರಣದೊಳ್ ಚೇಕಿತ್ಸನ
ನಾರುಮಗುರ್ವಿಸೆ ಘಟೋದ್ಭವಂ ತಱಿದಾರ್ದಂ ॥ ೬೦

ಮುರಿದುವು, ತೊಡೆಗಳು ಒಡೆದುವು, ಹುಣ್ಣುಗಳು ಬಿರಿದುವು-೫೮. ಒಡನೆಯೇ ಆಕಾಶದವರೆಗೂ ಸಿಡಿಯುವ ಹಸಿಯ ತಲೆಯೂ ಚೆಲ್ಲುವ ಮಾಂಸಖಂಡದ ಮುದ್ದೆಗಳೂ ಸಾಂದ್ರವಾದ ರಕ್ತಸಮುದ್ರದ ಕೊಬ್ಬಿನ ಒಳ್ಳೆಯ ಕೆಸರಿನಲ್ಲಿ ಅಂಟಿಕೊಂಡು ಭಯವನ್ನು ಹೆಚ್ಚಿಸುತ್ತಿರಲು, ಒಂದೇ ಸಮನಾಗಿ ಹೊಳೆಯುತ್ತಿರುವ ಕತ್ತಿಯ ಚೂರುಗಳು ದುಡಿಯುತ್ತಿರುವ ಹೊಸಗಾಯಗಳಲ್ಲಿ ಥಳಥಳಿಸುತ್ತಿರಲು ಯುದ್ಧಭೂಮಿಯಲ್ಲಿ ಆಶ್ಚರ್ಯವೂ ಭಯವೂ ವ್ಯಾಪಿಸಿದುವು. ವ॥ ಆಗ ಎರಡು ಸೈನ್ಯದ ಸೇನಾನಾಯಕರೂ ಪರಸ್ಪರ ಕಾದುವಾಗ ದ್ರೋಣನು ಧರ್ಮರಾಜನೊಡನೆ ಆರ್ಭಟಮಾಡಿ ಕಾದಿದನು. ೫೯. ಬಾವುಟವನ್ನು ಕತ್ತರಿಸಿ ಧೃಷ್ಟದ್ಯುಮ್ನನನ್ನು ಬಾಣಗಳಲ್ಲಿ ಹೂಳಿ ಶಿಖಂಡಿಯನ್ನು ನೇರವಾಗಿ ಪೌರುಷದಿಂದ ತಳ್ಳಿ ದ್ರುಪದನನ್ನು ಕೋಪದಿಂದ ಹೊಡೆದು ಮೀರಿ ಆತನ ತಮ್ಮಂದಿರಾದ ಹನ್ನೊಂದು ಜನರನ್ನೂ ಯಮನು ಕೊಲ್ಲುವ ಹಾಗೆ ಕೊಂದು ವಿರಾಟನ ಮಗನಾದ ಶಂಕಾರಹಿತನಾದ ಶಂಖನನ್ನು ಒಂದೇ ಬಾಣದಿಂದ ಕೊಂದು ಹಾಕಿದನು. ವ॥ ಆಗ ಸಾಲ್ವಲದೇಶದ ಅರಸನಾದ ಚೇಕಿತ್ಸನು ಪ್ರಳಯಕಾಲದ ಮೋಡಗಳೆನಿಸುವ ಅನೇಕ ಆನೆಯ ಗುಂಪುಗಳನ್ನು ಕೂಡಿಕೊಂಡು ರಾಜನನ್ನು ಹಿಂದಿಕ್ಕಿ ಬಂದು ತಗುಲಿದನು. ೬೦. ಒಂದೊಂದು ಪಾರೆಯಂಬಿನಿಂದಲೇ ಒಂದೊಂದು ಆನೆಯುರುಳಲು ಹೆದೆಯನ್ನು ಕಿವಿಯವರೆಗೆ ಸೆಳೆದು ಹೊಡೆದು ಕ್ರಮವಾಗಿ ಎಲ್ಲರೂ ಭಯಪಡುವ ಹಾಗೆ ಚೇಕಿತ್ಸನನ್ನು ದ್ರೋಣನು ಕತ್ತರಿಸಿ ಆರ್ಭಟಮಾಡಿದನು.

ವ॥ ಅಂತು ಪಾಂಡವ ಬಲಮೆಲ್ಲಮನಲ್ಲಕಲ್ಲೋಲಂ ಮಾಡಿ ಕಳಶಕೇತನನಜಾತಶತ್ರುವಂ ಪಿಡಿಯಲೆಯ್ತರ್ಪಾಗಳ್-

ಸ್ರ ॥ ಕಾದಲ್ ಸಂಸಪ್ತಕರ್ಕಳ್ ಕರೆದೊಡವರ ಬೆನ್ನಂ ತಗುಳ್ದಾದ ಕಾಯ್ಪಿಂ
ಕಾದುತ್ತಿರ್ಪಾತನಂತಾ ಕಳಕಳಮನದಂ ಕೇಳ್ದು ಭೋರೆಂದು ಬಂದೆ ।
ಚ್ಚಾ ದಿವ್ಯಾಸ್ತ್ರಂಗಳಿಂ ತಮ್ಮೊವಜರುಗಿಯೆ ತಮ್ಮಣ್ಣನಂ ಶೌರ್ಯದಿಂದಂ
ಕಾದಂ ಮುಂ ಬಿಜ್ಜನಂ ಕಾದರಿಗನುಟಿದರಂ ಕಾವುದೇಂ ಚೋದ್ಯಮಾಯ್ತೋ ॥೬೧

ವ॥ ಆಗಳ್ ಮಾರ್ತಾಂಡಂ ಪ್ರಚಂಡಮಾರ್ತಾಂಡನ ಶರ ನಿಕರ ಸ್ಫುರಿತ ಕಿರಣಂಗಳ್ ಕವಿಯೆ ತನ್ನ ಕಿರಣಂಗಳ್ ಮಸುಳ್ದಪರಜಳನಿಧಿಗಿಟಿದನಾಗಳೆರಡುಂ ಪಡೆಗಳಪಹಾರತೂರ್ಯಂಗಳಂ ಬಾಜಿಸಿದಾಗಳ್-

ಹರಿಣೀಪ್ಲುತಂ ॥ ಪಡೆಗಳೆರಡುಂ ಬೀಡಿಂಗೆತ್ತಂ ತೆರಳ್ದು ನೆಗಟ್ತೆಯಂ
ಪಡೆದಟೆದರಂ ಮೆಚ್ಚುತ್ತುತ್ಸಾಹದಿಂ ಪೊಗಟುತ್ತುಮೊ ।
ಳ್ಪಡರೆ ನುಡಿಯುತ್ತಂತಿರ್ದಾದಿತ್ಯನಂದುದಯಾದ್ರಿಯ
ತ್ತಡರೆ ಪೊಱಮಟ್ಟಾಗಳ್ ಬಂದೊಡ್ಡಿ ನಿಂದುವು ಕೋಪದಿಂ ॥ ೬೨

ಕಂ॥ ಅಂತೊಡ್ಡಿ ನಿಂದ ಚಾತು
ರ್ದಂತಂ ಕೆಯ್ವೀಸುವನ್ನೆಗಂ ಸೈರಿಸದೋ ।
ರಂತೆ ಪೆಣೆದಿಱಿದುವಂತೆ ದಿ
ಗಂತಾಂತಮನೆಯ್ದಿ ಪರಿಯೆ ನೆತ್ತರ ತೊಱೆಗಳ್ ॥ ೬೩

ವ॥ ಪಾಂಡವಸೈನ್ಯವನ್ನೆಲ್ಲ ಚೆಲ್ಲಾಪಿಲ್ಲಿಯಾಗಿ ಚೆದುರಿಸಿ ದ್ರೋಣನು ಧರ್ಮರಾಜನನ್ನು ಹಿಡಿಯಲು ಬಂದನು. ೬೧. ಸಂಸಪ್ತಕರುಗಳು ತಮ್ಮೊಡನೆ ಕಾದಲು ಕರೆಯಲಾಗಿ ಅವರ ಬೆನ್ನಟ್ಟಿಹೋಗಿ ವಿಶೇಷಕೋಪದಿಂದ ಕಾದುತ್ತಿದ್ದ ಅರ್ಜುನನು ಆ ಕಳಕಳಶಬ್ದವನ್ನು ಕೇಳಿ ಭೋರೆಂದು ಬಂದು ಪ್ರಯೋಗಿಸಿದ ಶ್ರೇಷ್ಠವಾದ ಬಾಣಗಳಿಂದ ದ್ರೋಣಾಚಾರ್ಯರು ಹಿಮ್ಮೆಟ್ಟಿಸಲು ಅರ್ಜುನನು ತಮ್ಮಣ್ಣನಾದ ಧರ್ಮರಾಜನನ್ನು ಪರಾಕ್ರಮದಿಂದ ರಕ್ಷಿಸಿದನು. ಮೊದಲು ವಿಜಯಾದಿತ್ಯನನ್ನು ರಕ್ಷಿಸಿದವನಿಗೆ ಉಳಿದವರನ್ನು ರಕ್ಷಿಸುವುದೇನು ಆಶ್ಚರ್ಯವೇ? ವ॥ ಆಗ ಸೂರ್ಯನು ಪ್ರಚಂಡಮಾರ್ತಾಂಡನಾದ ಅರ್ಜುನನ ಬಾಣರಾಶಿಯ ಪ್ರಕಾಶಮಾನವಾದ ಕಿರಣಗಳಿಂದ ನಿಸ್ತೇಜವಾಗಿ ಪಶ್ಚಿಮಸಮುದ್ರಕ್ಕಿಳಿದನು. ಆಗ ಎರಡುಸೈನ್ಯಗಳೂ ಯುದ್ಧವನ್ನು ನಿಲ್ಲಿಸಬೇಕೆಂಬ ಸೂಚನೆಯನ್ನು ಕೊಡುವ ವಾದ್ಯಗಳನ್ನು ಬಾಜಿಸಿದುವು. ೬೨. ಸೈನ್ಯಗಳೆರಡೂ ತಮ್ಮ ಪಾಳೆಯಗಳ ಕಡೆಗೆ ಹೋಗಿ (ಸೇರಿ) ಖ್ಯಾತಿಯನ್ನು ಪಡೆದು ಸತ್ತವರನ್ನು ಉತ್ಸಾಹದಿಂದ ಮೆಚ್ಚಿ ಹೊಗಳುತ್ತ ಸದ್ಗುಣವು ಪ್ರಕಾಶವಾಗುವ ಹಾಗೆ ಮಾತನಾಡುತ್ತ ಸೂರ್ಯನು ಉದಯಪರ್ವತವನ್ನೇರಲು ಹೊರಟು ಕೋಪದಿಂದ ಬಂದೊಡ್ಡಿ ನಿಂದವು. ೬೩. ಹಾಗೆ ಬಂದೊಡ್ಡಿ ನಿಂತ ಚತುರಂಗಸೈನ್ಯವು (ಯುದ್ಧಸೂಚಕವಾದ) ಕೈಬೀಸುವಷ್ಟರವರೆಗೂ ಸೈರಿಸದೆ ಒಂದೇಸಮನಾಗಿ ಹೆಣೆದುಕೊಂಡು ರಕ್ತಪ್ರವಾಹವು ದಿಗಂತದ ಕೊನೆಯನ್ನು ಸೇರಿ ಹರಿಯುವ ಹಾಗೆ

ಅಟ್ಟಿದ ಬಿಲ್ವಡೆ ಮಾಣದೆ
ತಟ್ಟಿದ ರಥಮೆಯ್ದೆ ಬಗಿದ ಪುಣ್ಗಳ ಪೊಱೆಯಿಂ ।
ಮೊಟ್ಟಿದ ಕರಿ ಘಟೆ ಜವನಡು
ವಟ್ಟಿಗೆಯನನುಕರಿಸೆ ವೀರ ಭಟ ರಣರಂಗಂ ॥ ೬೪

ವ॥ ಆಗಳ್ ಧೃಷ್ಟಕೇತು ವೃಷಸೇನನೊಳ್ ಸಾತ್ಯಕಿ ಭಗದತ್ತನೊಳ್ ದ್ರುಪದ ಧೃಷ್ಟಧ್ಯುಮ್ನರಿರ್ವರುಂ ದ್ರೋಣಾಚಾರ್ಯನೊಳ್ ಪ್ರತಿವಿಂಧ್ಯಂ ಸೌಬಲನೊಳ್ ಘಟೋತ್ಕಚಂ ಕರ್ಣನೊಳ್ ಪೆಣೆದು ಕಾದೆ-

ಚಂ॥ ಪೊಸಮಸೆಯಂಬುಗಳ್ ದೆಸೆಗಳಂ ಮಸುಳ್ವನ್ನೆಗಮೆಯ್ದೆ ಪಾಯೆ ಪಾ
ಯಿಸುವ ರಥಂಗಳಾ ರಥದ ಕೀಲ್ಮುಱಿದಾಗಳೆ ಕಯ್ಯನಲ್ಲಿ ಕೋ‌ಱ ।
ದೆಸಗುವ ಸೂತರಂಬು ಕೊಳೆ ಸೂತರುರುಳ್ದುಮಿಳಾತಳಕ್ಕೆ ಪಾ
ಯ್ದುಸಿಯೊಳೆ ತಾಗಿ ತಳ್ತಿಱಿವ ನಿಚ್ಚಟರೊಪ್ಪಿದರಾಜಿರಂಗದೊಳ್ ॥ ೬೫

ವ॥ ಆಗಳ್ ಕಳಿಂಗರಾಜನ ಗಜಘಟೆಗಳನಿತುಮೊಂದಾಗಿ ಭೀಮಸೇನನ ರಥಮಂ ಪ್ರಳಯ ಕಾಳ ಜಳಧರಂಗಳೆಲ್ಲಮೊಂದಾಗಿ ಕುಲಗಿರಿಯಂ ಮುತ್ತುವಂತೆ ಸುತ್ತಿ ಮುತ್ತಿದಾಗಳ್

ಮ॥ ರಥದಿಂ ಧಾತ್ರಿಗೆ ಪಾಯ್ದು ಕೊಂಡು ಗದೆಯಂ ಕೆಯ್ಸಾರ್ದುದಸ್ಮನ್ಮನೋ
ರಥಮಿಂದೆಂದು ಕಡಂಗಿ ಮಾಣದೆ ಸಿಡಿಲ್ ಪೊಯ್ವಂತೆವೊಲ್ ಪೊಯ್ವುದುಂ ।
ರಥಯೂಥ ಧ್ವಜ ಶಸ್ತ್ರ ಶಂಖಪುಟದೊಳ್ ಘಂಟಾಸಮೇತಂ ಮಹಾ
ರಥನಿಂದಂ ಕುಳಶೈಳದಂತೆ ಕರಿಗಳ್ ಬೀಱ್ದುಂದುವುಗ್ರಾಜಿಯೊಳ್ ॥ ೬೬

ಯುದ್ಧಮಾಡಿದುವು. ೬೪. ವೀರಭಟ ರಣರಂಗವು ನಾಶವಾದ ಬಿಲ್ಗಾರರ ಸೈನ್ಯದಿಂದಲೂ ತಪ್ಪದೆ ತಗ್ಗಿದ ರಥದಿಂದಲೂ ಅದರುವ ಹುಣ್ಣುಗಳ ಭಾರದಿಂದಲೂ ಕುಗ್ಗಿದ ಆನೆಗಳ ಸಮೂಹದಿಂದಲೂ ಯಮನು ಅಡುಗೆಮಾಡುವ ಅಡುಗೆಯ ಮನೆಯನ್ನು ಹೋಲುತ್ತಿತ್ತು. ವ॥ ಆಗ ಧೃಷ್ಟಕೇತುವು ವೃಷಸೇನನಲ್ಲಿಯೂ ಸಾತ್ಯಕಿಯು ಭಗದತ್ತನಲ್ಲಿಯೂ ದ್ರುಪದ ಧೃಷ್ಟದ್ಯುಮ್ನರಿಬ್ಬರೂ ದ್ರೋಣಾಚಾರ್ಯನಲ್ಲಿಯೂ ಪ್ರತಿವಿಂಧ್ಯನು ಶಕುನಿಯಲ್ಲಿಯೂ ಘಟೋತ್ಕಚನು ಕರ್ಣನಲ್ಲಿಯೂ ಹೆಣೆದುಕೊಂಡು ಕಾದಿದರು. ೬೫. ಹೊಸದಾಗಿ ಮಸೆದ ಬಾಣಗಳೂ, ದಿಕ್ಕುಗಳನ್ನೆಲ್ಲ ಮಲಿನಮಾಡುವ ರೀತಿಯಲ್ಲಿ ವ್ಯಾಪಿಸಲು ಚೋದಿಸುತ್ತಿದ್ದ ರಥಗಳೂ, ಆ ರಥಗಳ ಕೀಲು ಮುರಿದೊಡನೆ ತಮ್ಮ ಕೈಗಳನ್ನೇ ಆ ಕೀಲಿನ ಸ್ಥಾನದಲ್ಲಿ ಪೋಣಿಸಿ ರಥವನ್ನು ನಡೆಸುತ್ತಿದ್ದ ಸಾರಥಿಗಳೂ, ಪ್ರತಿಪಕ್ಷದಿಂದ ಬಂದ ಬಾಣಗಳು ತಮ್ಮ ಶರೀರದಲ್ಲಿ ನಾಟಲು ಸೂತರು ನೆಲಕ್ಕೆ ಉರುಳಿದರೂ ರಥದಿಂದ ನೆಲಕ್ಕೆ ನೆಗೆದು ಕತ್ತಿಯಿಂದ ಘಟ್ಟಿಸಿ (ಪರಸೈನ್ಯವನ್ನು) ಪ್ರತಿಭಟಿಸಿ ಸ್ಥೈರ್ಯದಿಂದ ಹೋರಾಡುವ ಯೋಧಾಗ್ರೇಸರರೂ ಯುದ್ಧರಂಗದಲ್ಲಿ ಶೋಭಿಸಿದರು. ವ॥ ಆಗ ಕಳಿಂಗರಾಜನ ಆನೆಯ ಸಮೂಹವಷ್ಟೂ ಒಂದಾಗಿ ಭೀಮಸೇನನ ತೇರನ್ನು ಪ್ರಳಯಕಾಲದ ಮೋಡಗಳೆಲ್ಲ ಒಂದಾಗಿ ಕುಲಪರ್ವತವನ್ನು ಮುತ್ತುವಂತೆ ಸುತ್ತಿ ಮುತ್ತಿದುವು. ೬೬. ಭೀಮಸೇನನು ರಥದಿಂದ ಭೂಮಿಗೆ ಹಾರಿ ಗದೆಯನ್ನೆತ್ತಿಕೊಂಡು 'ನನ್ನ ಇಷ್ಟಾರ್ಥ ಈದಿನ ಕೈಗೂಡಿತು' ಎಂದು ಉತ್ಸಾಹಿಸಿ

ಮ॥ ಮದವದ್ದಂತಿಗಳಂ ಕಱುತ್ತಸಗವೊಯ್ಲೊಯ್ದಾಜಿಯೊಳ್ ಭೀಮನಾ
ರ್ದೊದೆದೀಡಾಡಿದೊಡತ್ತಜಾಂಡ ತಟಮಂ ತಾಪನ್ನೆಗಂ ಪಾಱೆ ತಾ ।
ಱೆದ ಪೇರಾನೆಯೊಡಲ್ಗಳಭ್ರತಳದೊಳ್ ಸಿಲ್ಕಿರ್ದುವೋರೊಂದು ಮಾ
ಣದೆ ಬೀೞ್ತಿರ್ಪುವು ಬೆಟ್ಟು ಬೀೞ್ವ ತೆಱದಿಂದಿನ್ನುಂ ಕುರುಕ್ಷೇತ್ರದೊಳ್ ॥೬೭

ಕಂ॥ ತೊಡರೆ ತಡಂಗಾಲ್ ಪೊಯ್ದೊಡೆ
ಕೆಡೆದುಂ ತಿವಿದೊಡೆ ಸುರುಳ್ದು ಮೋದಿದೊಡಿರದೆ ।
ಲ್ವಡಗಾಗಿ ಮಡಿದು ಬಿೞ್ದುವು
ಗಡಣದೆ ಕರಿಘಟೆಗಳೇಂ ಬಲಸ್ಥನೊ ಭೀಮಂ ॥ ೬೮

ವ॥ ಅಂತಲ್ಲಿ ಪದಿನಾಲ್ಸಾಸಿರ ಮದದಾನೆಯುಮಂ ಕಳಿಂಗನಾಯಕಂ ಭಾನುದತ್ತಂ ಮೊದಲಾಗೆ ನೂರ್ವರರಸುಮಕ್ಕಳುಮಂ ಕೊಂದೊಡೆ ಕೌರವಬಲಮೆಲ್ಲಮೊಲ್ಲನುಲಿದೋಡಿ ಭಗದತ್ತನಾನೆಯ ಮಱೆಯಂ ಪೊಕ್ಕಾಗಳ್-

ಮ॥ ಸ್ರ ॥ ನೆಗೞ್ದಿಂ ದೇವೇಂದ್ರನೈರಾವತದ ಕೆಳೆಯನೆನ್ನೇಱೆದೀಯಾನೆಯುಂ ದಲ್
ದಿಗಿಭಂ ದುರ್ಯೋಧನಂ ನಚ್ಚಿದನೆನಗಿದಿರಂ ಭೀಮನೆೞ್ತಂದನೀಗಳ್ ।
ಮುಗಿಲಂ ಮುಟ್ಟಿತ್ತು ಸಂದೆನ್ನಳವುಮದಟುಮೆಂದಾರ್ದು ದೋರ್ದರ್ಪಯುಕ್ತಂ
ಭಗದತ್ತಂ ಸುಪ್ರತೀಕದ್ವಿಪಮನುಪಚಿತೋತ್ಸಾಹದಿಂ ತೋಱೆಕೊಟ್ಟಂ ॥ ೬೯

ತಡಮಾಡದೆ ಸಿಡಿಲು ಹೊಡೆಯುವ ಹಾಗೆ ಹೊಡೆಯಲು ರಥಗಳ ಸಮೂಹ, ಬಾವುಟಗಳು, ಆಯುಧಗಳು ಇವುಗಳ ಪರಸ್ಪರ ತಾಕಲಾಟದಲ್ಲಿ ಕತ್ತಿನ ಗಂಟೆಯೊಡನೆ ಆನೆಗಳು ಆ ಘೋರಯುದ್ಧದಲ್ಲಿ ಕುಲಪರ್ವತಗಳ ಹಾಗೆ ಕೆಳಕ್ಕೆ ಬಿದ್ದವು. ೬೭. ಸೊಕ್ಕಿದ ಆನೆಗಳನ್ನು ಗುರಿಯಿಟ್ಟು ಅಗಸನು ಒಗೆಯುವ ಹಾಗೆ ಒಗೆದು ಆರ್ಭಟಮಾಡಿ ಭೀಮನು ಯುದ್ಧದಲ್ಲಿ ಒದ್ದು ಎಸೆದನು. ಆ ಒಣಗಿದ ಹಿರಿಯಾನೆಯ ಶರೀರಗಳು ಬ್ರಹ್ಮಾಂಡದ ದಡವನ್ನು ತಗಲುವಷ್ಟು ದೂರ ಹಾರಿ ಮೋಡಗಳ ಪದರದ ಮಧ್ಯೆ ಸಿಕ್ಕಿದ್ದು ಅಲ್ಲಿಂದ ಬೆಟ್ಟಗಳು ಬೀಳುವ ಹಾಗೆ ಇನ್ನೂ ಕುರುಕ್ಷೇತ್ರದಲ್ಲಿ ಬೀಳುತ್ತಿವೆ. ೬೮. ಭೀಮನು ಅಡ್ಡಗಾಲಿಗೆ ಸಿಕ್ಕಿಸಿಕೊಂಡು ಒದೆದರೆ ಕೆಳಕ್ಕೆ ಬಿದ್ದೂ ತಿವಿದರೆ ಸುರುಳಿಕೊಂಡೂ ಗುದ್ದಿದರೆ ತಡವಿಲ್ಲದೆ ಎಲುಬು ಮಾಂಸಗಳಾಗಿಯೂ ಆನೆಗಳ ಸಮೂಹವು ರಾಶಿಯಾಗಿ ಬಿದ್ದವು. ಭೀಮನು ಎಷ್ಟು ಬಲಶಾಲಿಯೋ! ವ॥ ಹಾಗೆ ಅಲ್ಲಿ ಹದಿನಾಲ್ಕು ಸಾವಿರ ಮದ್ದಾನೆಗಳನ್ನೂ ಕಳಿಂಗನಾಯಕನಾದ ಭಾನುದತ್ತನೇ ಮೊದಲಾದ ನೂರುಮಂದಿ ರಾಜಕುಮಾರರನ್ನೂ ಕೊಂದನು. ಕೌರವಸೈನ್ಯವೆಲ್ಲ ಮೆಲ್ಲಗೆ ಕೂಗಿಕೊಂಡು ಭಗದತ್ತನಾನೆಯ ಮರೆಯನ್ನು ಹೊಕ್ಕಿತು. ೬೯. ನಾನು ಪ್ರಖ್ಯಾತನಾದವನು; ನಾನು ಹತ್ತಿರುವ ಈ ಆನೆಯೂ ದೇವೇಂದ್ರನ ಐರಾವತದ ಸ್ನೇಹಿತ. ಹಾಗೆಯೇ ದಿಗ್ಗಜವೂ ಹೌದು. ನನ್ನನ್ನು ದುರ್ಯೋಧನನು ನಂಬಿಕೊಂಡಿದ್ದಾನೆ. ಈಗ ನನಗೆ ಭೀಮನೇ ಪ್ರತಿಭಟಿಸಿ ಬಂದಿದ್ದಾನೆ. ಈಗ ನನ್ನ ಪೌರುಷವೂ ಪರಾಕ್ರಮವೂ ಗಗನವನ್ನು ಮುಟ್ಟಿದೆ ಎಂದು ಆರ್ಭಟಮಾಡಿ ಬಾಹುಬಲದ ಅಹಂಕಾರದಿಂದ ಕೂಡಿದ ಭಗದತ್ತನು ಕೂಡಿಕೊಂಡಿರುವ ಉತ್ಸಾಹದಿಂದ ಸುಪ್ರತೀಕವೆಂಬ ಆನೆಯನ್ನು

ಕಂ॥ ಮದಕರಿಯ ಪರಿವ ಭರದಿಂ
ದದಿರ್ದೊಡೆ ನೆಲನೊಡ್ಡಿ ನಿಂದ ಚತುರಂಗಮುಮೊ ।
ರ್ಮೊದಲೆ ನಡುಗಿದುದು ಕೂಡಿದ
ಚದುರಂಗದ ಮಣೆಯನಲ್ಗಿದಂತಪ್ಪಿನೆಗಂ ॥ ೭೦

ವ॥ ಆಗಳಸುರನುಯ್ದು ನೆಲನನಾದಿ ವರಾಹನಱಸಲೆಂದು ಸಕಳ ಜಳಚರಕಳಿತ ಜಳನಿಧಿಗಳಂ ಕಲಂಕುವಂತೆ ಪಾಂಡವ ಬಳ ಜಳನಿಧಿಯನಳಿಕುಳ ಝೇಂಕಾರ ಮುಖರಿತ ವಿಶಾಳ ಕರಟ ತಟಮಾ ದಿಶಾಗಜೇಂದ್ರಂ ಕಲಂಕೆ-

ಚಂ॥ ತಳರ್ದುದು ಕರ್ಣತಾಳ ಪವನಾಹತಿಯಿಂ ಜಳರಾಶಿ ಕೆಯ್ಯ ಬ
ಳ್ವಳಿಕೆಗೆ ದಿಗ್ಗಜಂ ದೆಸೆಯಿನತ್ತ ತೆರಳ್ದುವು ಕಾಯ್ಪಿನಿಂ ದಿಶಾ ।
ವಳಿವೆರಸಂಬರಂ ಪೊಗೆದು ಪೊತ್ತಿದುದಾದ ಮದಾಂಬುವಿಂ ಜಗಂ
ಜಳಧಿವೊಲಾಯ್ತದಂ ನೆಱಿಯೆ ಬಣ್ಣಿಪರಾರ್ ಗಳ ಸುಪ್ರತೀಕಮಂ ॥ ೭೧

ಚಂ॥ ಕರ ನಖ ದಂತ ಘಾತದಿನುರುಳ್ವ ಚತುರ್ಬಲದಿಂ ತೆರಳ್ದ ನೆ
ತ್ತರ ಕಡಲಾ ಕಡಲ್ವರೆಗಮೆಯ್ದೆ ಮಹಾಮಕರಂ ಸಮುದ್ರದೊಳ್ ।
ಪರಿವವೊಲಿಂತಗುರ್ವುವೆರಸಾ ಭಗದತ್ತನ ಕಾಲೊಳಂತದೇಂ
ಪರಿದುದೊ ಸುಪ್ರತೀಕ ಗಜಮಚ್ಚರಿಯಪ್ಪಿನಮಾಜಿರಂಗದೊಳ್ ॥ ೭೨

ವ॥ ಅಂತು ಪರಿದ ಬೀದಿಗಳೊಳೆಲ್ಲಂ ನೆತ್ತರ ತೊಱೆಗಳ್ ಪರಿಯೆ ಕೆಂಡದ ತೊಱೆಯಂತೆ ಪರಿದ ಸುಪ್ರತೀಕಂ ಕೆಯ್ಯ ಕಾಲ ಕೋಡೇಱಿನೊಳ್ ಬಲಮನೆಲ್ಲಂ ಜವನೆ

ಸೈನ್ಯದ ಮುಂದುಗಡೆ ನೂಕಿದನು. ೭೦. ಆ ಮದ್ದಾನೆಯು ನಡೆಯುವ ವೇಗದಿಂದ ಭೂಮಿಯು ಅಲುಗಾಡಲು ಅದರ ಮೇಲೆ ನಿಂತಿರುವ ಚತುರಂಗ ಸೈನ್ಯವೂ ಕಾಯಿಗಳಿಂದ ಕೂಡಿದ ಚದುರಂಗದ ಮಣೆಯನ್ನು ಅಲುಗಾಡಿಸಿದಂತೆ ಇದ್ದಕ್ಕಿದ್ದ ಹಾಗೆ ಒಡನೆಯೇ ನಡುಗಿದವು. ವ॥ ಆಗ ರಾಕ್ಷಸನಾದ ಹಿರಣ್ಯಾಕ್ಷನು ಎತ್ತಿಕೊಂಡು ಹೋದ ಭೂದೇವಿಯನ್ನು ಆದಿವರಾಹನಾದ ವಿಷ್ಣುವು ಹುಡುಕಬೇಕೆಂದು ಸಮಸ್ತ ಜಲಚರಗಳಿಂದ ತುಂಬಿದ ಸಮುದ್ರಗಳನ್ನು ಕಲಕಿದ ಹಾಗೆ ಪಾಂಡವಸೇನಾಸಮುದ್ರವನ್ನು ದುಂಬಿಗಳ ಝೇಂಕಾರಶಬ್ದದಿಂದ ಧ್ವನಿಮಾಡಲ್ಪಟ್ಟ ವಿಶಾಲವಾದ ಕಪೋಲಪ್ರದೇಶವುಳ್ಳ ಆ ದಿಗ್ಗಜವು ಕಲಕಿತು. ೭೧. ಅದು ಕಿವಿಯನ್ನು ಬೀಸುವುದರಿಂದುಂಟಾದ ಗಾಳಿಯ ಹೊಡೆತದಿಂದ ಸಮುದ್ರವು ಚಲಿಸಿತು. ಸೊಂಡಿಲಿನ ಬಲವಾದ ಬೀಸುವಿಕೆಗೆ ದಿಗ್ಗಜಗಳು ದಿಕ್ಕುಗಳಿಂದ ಆಚೆಗೆ ಹೋದುವು. (ಅದರ) ಕೋಪದಿಂದ ದಿಕ್ಕುಗಳ ಸಮೂಹದೊಡನೆ ಆಕಾಶವೂ ಹೊಗೆಯಿಂದ ಕೂಡಿ ಉರಿಯಿತು. ಸುರಿದ ಮದೋದಕದಿಂದ ಭೂಮಂಡಲವು ಸಮುದ್ರದ ಹಾಗಾಯಿತು. ಆ ಸುಪ್ರತೀಕವನ್ನು ಸಂಪೂರ್ಣವಾಗಿ ವರ್ಣಿಸುವವರಾರಿದ್ದಾರೆ? ೭೨. ಸೊಂಡಿಲು, ಉಗುರು, ದಂತಗಳ ಹೊಡೆತದಿಂದ ಉರುಳಿ ಬೀಳುವ ಚತುರಂಗ ಬಲದಿಂದ ಹೊರಡುವ ರಕ್ತಸಮುದ್ರವು ಆ ಸಮುದ್ರದವರೆಗೂ ಹರಿಯಲು ಸಮುದ್ರ ಮಧ್ಯೆ ಹರಿಯುವ ದೊಡ್ಡ ಮೊಸಳೆಯ ಹಾಗೆ ಭಯಂಕರತೆಯಿಂದ ಕೂಡಿ ಆ

ಜಿಪ್ಪಳಿದುಬೆವಂತ ತೊಟ್ಟುಚಿದುಬಿದು ಪದಿನಾಲ್ಸಾಸಿರ ಮದಾಂಧ ಗಂಧಸಿಂಧುರಂಗಳುಮನೊಂದು ಲಕ್ಕ ರಥಮುಮನರೆದು ಸಣ್ಣಿಸಿದಂತೆ ಮಾಡಿದಾಗಳ್ ಗಜಾಸುರನೊಳಾಸುರಂಬೆರಸು ತಾಗುವಂಧಕಾರಾತಿಯಂತೆ ಭೀಮಸೇನಂ ಬಂದು ಪೊಣರೆ-

ಚಂ॥ ತೊಲಗಿದು ಸುಪ್ರತೀಕ ಗಜಮಾಂ ಭಗದತ್ತನೆನಿಲ್ಲಿ ನಿನ್ನ ತೋ
ಳ್ವಲದ ಪೊಡರ್ಪು ಸಲ್ಲದೆಲೆ ಸಾಯದೆ ಪೋಗೆನೆ ಕೇಳ್ದು ಭೀಮನಾಂ ।
ತೊಲೆಯದಿರುರ್ಕಿನೊಳ್ ನುಡಿವೆಯೇ ಕರಿ ಸೂಕರಿಯಲ್ತೆ ಪತ್ತಿ ಗಂ
ಟಲನೊಡೆಯೊತ್ತಿ ಕೊಂದಪೆನಿದಲ್ತಿದಜಮ್ಮನುಮೆನ್ನನಾಂಪುದೇ ॥ ೭೩

ವ॥ ಎಂದು ನಾರಾಚಂಗಳಿಂ ತೋಡುಂ ಬೀಡುಂ ಕಾಣಲಾಗದಂತು ಸುಪ್ರತೀಕ ಕರಿಯೆಂಬ ಗಿರಿಯ ಮೇಲೆ ಭೀಮನೆಂಬ ಕಾಲಮೇಘಂ ಸರಲ ಸರಿಯಂ ಸುರಿಯೆ-

ಚಂ॥ ಸಿಡಿಲೆಜಿಪಂದದಿಂದೆಜಿಗಿ ದಿಕ್ಕರಿ ತನ್ನ ವರೂಥಮಂ ಪಡ
ಲ್ವಡಿಸೆ ಮರುತ್ಸುತಂ ಮುಳಿದು ಮಚ್ಚರದಿಂ ಗಜೆಗೊಂಡು ಸುತ್ತುಗೊಂ ॥
ಡಡಿಗಿಡೆ ನುರ್ಗಿ ಪೊಯ್ದು ಪೆಜಿಪಿಂಗುವುದುಂ ಕರಿ ನೊಂದು ಕೋಪದಿಂ
ಪಿಡಿದೆಜಿಗಿತ್ತು ಭೀಮನನಗುರ್ವಿಸಿ ಪಾಂಡವ ಸೈನ್ಯಮಳ್ಕುಜಿಲ್ ॥ ೭೪

ಭಗದತ್ತನು ನಡೆಸುತ್ತಿದ್ದ ಸುಪ್ರತೀಕವೆಂಬ ಆನೆಯು ಯುದ್ಧರಂಗದ ಮಧ್ಯೆ ಆಶ್ಚರ್ಯವಾಗುವ ಹಾಗೆ ನಿರಾಯಾಸವಾಗಿ ಹರಿಯಿತು! ವ॥ ಹಾಗೆ ಓಡಿದ (ಹರಿದ) ಬೀದಿಗಳಲ್ಲೆಲ್ಲ ರಕ್ತನದಿಗಳು ಹರಿದುವು. ಕೆಂಡದ ಪ್ರವಾಹದಂತೆ ಹರಿಯುತ್ತಿರುವ ಸುಪ್ರತೀಕದ ಸೊಂಡಲಿನ, ಕಾಲಿನ, ಕೊಂಬಿನ ಪೆಟ್ಟಿನಿಂದ ಸೈನ್ಯವೆಲ್ಲವನ್ನು ಯಮನೇ ಚೂರ್ಣ ಮಾಡಿದಂತೆ (ಚಿಗುಳಿಯನ್ನು ತುಳಿದಂತೆ) ಸಂಪೂರ್ಣವಾಗಿ ತುಳಿದು ಹದಿನಾಲ್ಕು ಸಾವಿರ ಮದದಿಂದ ಕುರುಡಾದ ಶ್ರೇಷ್ಠವಾದ ಆನೆಗಳನ್ನೂ ಒಂದು ಲಕ್ಷ ರಥವನ್ನೂ ಅರೆದು ಪುಡಿಮಾಡಿತು. ಅದನ್ನು ನೋಡಿದ ಭೀಮನು ಗಜಾಸುರನೆಂಬ ರಾಕ್ಷಸನೊಡನೆ ರಭಸದಿಂದ ಕೂಡಿ ತಗಲುವ ಈಶ್ವರನಂತೆ ಬಂದು ಹೋರಾಡಿದನು-೭೩. (ಭಗದತ್ತನು ಭೀಮನನ್ನು ಕುರಿತು) ತೊಲಗು ಇದು ಸುಪ್ರತೀಕವೆಂಬ ಆನೆ. ನಾನೇ ಭಗದತ್ತ. ಇಲ್ಲಿ ನಿನ್ನ ತೋಳಿನ ಶಕ್ತಿಯ ಹಿರಿಮೆಯು ಸಲ್ಲುವುದಿಲ್ಲ. ಎಲವೋ ಸಾಯದೆ ಹೋಗು ಎಂದನು. ಅದನ್ನು ಕೇಳಿ ಭೀಮನು (ಎಲವೋ) ನಾನು ಭೀಮ; ಅಹಂಕಾರದಿಂದ ತೂಗಾಡಬೇಡ. ಗರ್ವದಿಂದ ಅಹಂಕಾರದಿಂದ ಮಾತನಾಡುತ್ತಿದ್ದೀಯೆ. ಈ ಆನೆಯು ನನಗೆ ಹಂದಿಗೆ ಸಮಾನ. ಇದರ ಮೇಲೆ ಹತ್ತಿ ಇದರ ಗಂಟಲನ್ನು ಅಮುಕಿ ಕೊಲ್ಲುತ್ತೇನೆ. ಇದಲ್ಲ ಇದರಪ್ಪನೂ ನನ್ನನ್ನು ಪ್ರತಿಭಟಿಸಬಲ್ಲುದೇ? ವ॥ ಎಂದು ಬಾಣಗಳನ್ನು ತೊಡುವುದೂ ಬಿಡುವುದೂ ಕಾಣದಂತೆ ಸುಪ್ರತೀಕಗಜವೆಂಬ ಬೆಟ್ಟದ ಮೇಲೆ ಭೀಮನೆಂಬ ಪ್ರಳಯಕಾಲದ ಮೋಡವು ಬಾಣದ ಮಳೆಯನ್ನು ಸುರಿಸಿತು. ೭೪. ದಿಗ್ಗಜವಾದ ಸುಪ್ರತೀಕವು ಸಿಡಿಲೆರಗುವ ವೇಗದಿಂದ ಎರಗಿ ತನ್ನ ತೇರನ್ನು ತಲೆಕೆಳಗುಮಾಡಲು ಭೀಮನು ಕೋಪಿಸಿಕೊಂಡು ಮತ್ಸರದಿಂದ ಗದೆಯನ್ನು ತೆಗೆದುಕೊಂಡು ಸುತ್ತಲೂ ಬಳಸಿ ಹೆಜ್ಜೆ ಕೆಡುವಂತೆ ನುಗ್ಗಿ ಹೊಡೆದು ಹಿಂದಕ್ಕೆ ಹೋದನು. ಆನೆಯು ವಿಶೇಷವಾಗಿ

ವ|| ಅಂತೆಱಗಿದೊಡೆ ಕೋಡಕೆಯ್ಯ ಕಾಲೆಡೆಗಳೊಳ್ ಬಿಣ್ಪುಮಂ ಪೆಸೆವಂದದಿಂದೇರ್ದು ಡೊಕ್ಕರಂಗೊಂಡು ಕುರುಕ್ಷೇತ್ರದಿಂದತ್ತ ಪನ್ನೆರಡು ಯೋಜನಂಬರಮೊತ್ತುವುದುಂ-

ಕಂ|| ಕರಿಯುಂ ಕುರುಭೂಮಿಯ ನಡು
ವರೆಗಂ ಪವನಜನನೊತ್ತೆ ತೋಳ್ವಲಮಾಗಳ್ ।
ಸರಿ ಸರಿಯಾದುದು ತದ್ಗಿ
ಕ್ಕರಿಗಂ ಭೀಮಂಗಮುಗ್ರ ಸಂಗರ ಧರೆಯೊಳ್ ॥ ೭೫

ವ|| ಅನ್ನೆಗಮಿತ್ತ ಸಂಸಪ್ತಕಬಲಮೆಲ್ಲಮನಳಱೆ ಪೆಳಱೆ ಕಿವುಟಿದುಟಿದು ಕೊಲ್ವ ವಿಕ್ರಾಂತತುಂಗಂ ಚಕ್ರಿಯನಿಂತೆಂದಂ-

ಚಂ|| ಪರಿದುದು ಸುಪ್ರತೀಕ ಗಜಮೇಱೆದವಂ ಭಗದತ್ತನಾಮದ
ದ್ವಿರದಮನಾಂಕೆಗೊಂಡು ಪೆಸೆವಂ ಪವನಾತ್ಮಜನೀಗಳಾಹವಂ ।
ಪಿರಿದುದಲತ್ತ ಪೋಪಮೆನೆ ತದ್ರಥಮಂ ಹರಿ ವಾಯುವೇಗದಿಂ
ಪರಿಯಿಸೆ ತಾಗಿದಂ ಹರಿಗನಂಕದ ಪೊಂಕದ ಸುಪ್ರತೀಕಮಂ ॥ ೭೬

ವ|| ಅಂತು ತಾಗಿ ಮೃಗರಾಜ ನಖರ ಮಾರ್ಗಣಂಗಳೊಳಂ ಕೂರ್ಮನಖಾಸ್ತ್ರಂಗಳೊಳ ಮಾನೆಯುಮಂ ಭಗದತ್ತನುಮಂ ಪೂಟಿಸ್ಟೊಡೆ ಭಗದತ್ತಂ ಮುಳಿದು ಭೂದತ್ತಮಪ್ಪ ದಿವ್ಯಾಂಕುಶಮಂ ಕೊಂಡು-

ಯಾತನೆಯನ್ನನುಭವಿಸಿ ಕೋಪದಿಂದ ಭೀಮನನ್ನು ಹೆದರಿಸಿ ಪಾಂಡವಸೈನ್ಯವು ಭಯಪಡುವ ಹಾಗೆ ಅವನನ್ನು ಹಿಡಿದು ಮೇಲೆ ಬಿದ್ದಿತು. ವ|| ಭೀಮನು ಆ ಆನೆಯ ಕೊಂಬು, ಸೊಂಡಿಲು ಕಾಲಿನ ಮಧ್ಯದಲ್ಲಿ ಭಾರವನ್ನು ಹೊರಳಿಸುವ ರೀತಿಯಿಂದ ಹತ್ತಿ ಡೊಕ್ಕರವೆಂಬ ಪಟ್ಟಿನಿಂದ ಆನೆಯನ್ನು ಕುರುಕ್ಷೇತ್ರದಿಂದ ಆ ಕಡೆಗೆ ಹನ್ನೆರಡುಯೋಜನದವರೆಗೆ ನೂಕಿದನು. ೭೫. ಆನೆಯೂ ಭೀಮನನ್ನು ಕುರುಭೂಮಿಯ ಮಧ್ಯದವರೆಗೆ ನೂಕಲು ಆಗ ಆ ಭಯಂಕರವಾದ ಯುದ್ಧರಂಗದಲ್ಲಿ ಬಾಹುಬಲ ಭೀಮನಿಗೂ ಆ ಆನೆಗೂ ಸರಿಸಮಾನವಾಯಿತು. ವ|| ಅಷ್ಟರಲ್ಲಿ ಸಂಸಪ್ತಕರ ಸೈನ್ಯವನ್ನೆಲ್ಲ ಹೆದರಿ ಬೆದರುವಂತೆ ಅಜ್ಜುಗುಜ್ಜಿಯಾಗುವ ಹಾಗೆ ತುಳಿದು ಕೊಲ್ಲುವ ಮಹಾಪರಾಕ್ರಮಿಯಾದ ಅರ್ಜುನನು ಕೃಷ್ಣನನ್ನು ಕುರಿತು ಹೀಗೆಂದನು. ೭೬. ಸುಪ್ರತೀಕವೆಂಬ ಆನೆಯು ಓಡಿಬರುತ್ತಿದೆ. ಅದನ್ನು ಹತ್ತಿ ಬರುತ್ತಿರುವವನು ಭಗದತ್ತ; ಆ ಮದ್ದಾನೆಯನ್ನು ತಡೆದು ಹೆಸೆದುಕೊಂಡಿರುವವನು ಭೀಮ. ಈಗ ಆ ಕಡೆ ಯುದ್ಧವು ಹಿರಿದಾಗಿದೆ. ಆ ಕಡೆ ಹೋಗೋಣ' ಎಂದನು. ಆ ತೇರನ್ನು ಕೃಷ್ಣನು ವಾಯುವೇಗದಿಂದ ಆ ಕಡೆಗೆ ಓಡಿಸಿದನು. ಅರ್ಜುನನು ಖ್ಯಾತವೂ ಅಹಂಕಾರಿಯೂ ಆದ ಸುಪ್ರತೀಕವೆಂಬ ಆನೆಯನ್ನು ಬಂದು ತಾಗಿದನು. ವ|| ಸಿಂಹದ ಉಗುರಿನಂತಿರುವ ಬಾಣಗಳಲ್ಲಿಯೂ ಆಮೆಯ ಉಗುರಿನಂತಿರುವ ಅಸ್ತ್ರಗಳಲ್ಲಿಯೂ ಆನೆಯನ್ನೂ ಭಗದತ್ತನನ್ನೂ ಹೂಳಿದನು. ಭಗದತ್ತನು ಕೋಪಿಸಿಕೊಂಡು ಭೂದೇವಿಯಿಂದ

ಕಂ॥ ಇಡುವುದುಮದು ಪ್ರಳಯಾಗ್ನಿಯ
ಕಿಡಿಗಳನುಗುಳುತ್ತುಮೆಯ್ದೆವರ್ಪುದುಮಿದಿರಂ ।
ನಡೆದಜರನುರದಿನಾಂತೊಡೆ
ತುಡುಗೆವೊಲೆಸೆದಿರ್ದುದಂಕುಶಂ ಕಂಧರದೊಳ್ ॥ ೭೭

ವ॥ ಆಗಳ್ ವಿಕ್ರಾಂತತುಂಗಂ ಚೋದ್ಯಂಬಟ್ಟಿದೇನೆಂದು ಬೆಸಗೊಳೆ-

ಚಂ॥ ಇದು ಪೆಱತಲ್ತು ಭೂತಲಮನಾಂ ತರಲಾದಿ ವರಾಹನಾದೆನಂ
ದದಱ ವಿಷಾಣಮಂ ಬೞಿಯಮಾ ವಸುಧಾಂಗನೆಗಿತ್ತೆನೀತನಾ ।
ಸುದತಿಯ ಪೌತ್ರನಾಕೆ ಕುಡೆ ಬಂದುದಿವಂಗೆನಗಲ್ಲದಾನಲಾ
ಗದುದಱೆನಾಂತೆನಿಂ ತಱೆವುದೀ ಕರಿ ಕಂಧರಮಂ ಗುಣಾರ್ಣವಾ ॥ ೭೮

ಉ॥ ಎಂಬುದುಮೊಂದೆ ದಿವ್ಯಶರದಿಂ ಶಿರಮಂ ಪಱೆಯೆಚ್ಚೊಡಾತನೊ
ತ್ತಂಬದಿನಾಂತೊಡಾಂ ಬಱೆದೆ ತಪ್ಪಿದೆನೆಂದು ಕಿರೀಟಿ ತನ್ನ ಬಿ ।
ಲ್ಲಂ ಬಿಸುಟಿರ್ದೊಡಚ್ಯುತನಿದೇತರಿನಾಕುಲಮಿರ್ದೆ ನೋಡಿದೆಂ
ತೆಂಬುದುಮೆಚ್ಚನಂತೆರಡು ಕೆಯ್ಗಳುಮಂ ಮುಳಿಸಿಂ ಗುಣಾರ್ಣವಂ ॥ ೭೯

ಕಂ॥ ಎಚ್ಚವನ ತಲೆಯುಮಂ ಪಱೆ
ಯೆಚ್ಚೊಡೆ ದಿಕ್ಕರಿಯ ತಲೆಯುಮಾತನ ತಲೆಯುಂ ।
ಪಚ್ಚುಕ್ಕಿದಂತೆ ಕೆಯ್ಗಳು
ಮುಚ್ಚರಿಯಪ್ಪಿನೆಗಮೊಡನುರುಳ್ದುವು ಧರೆಯೊಳ್ ॥ ೮೦

ಕೊಡಲ್ಪಟ್ಟ ದಿವ್ಯಾಂಕುಶವನ್ನು ತೆಗೆದುಕೊಂಡು ೭೭. ಎಸೆಯಲು ಅದು ಪ್ರಳಯಾಗ್ನಿಯ ಕಿಡಿಯನ್ನು ಉಗುಳುತ್ತ ಸಮೀಪಕ್ಕೆ ಬರಲು ಕೃಷ್ಣನು ಎದುರಾಗಿ ಹೋಗಿ ಎದೆಯಿಂದ ಅದನ್ನು ಎದುರಿಸಿದನು. ಆ ಅಂಕುಶವು ಅವನ ಕತ್ತಿನಲ್ಲಿ ಆಭರಣದ ಹಾಗೆ ಪ್ರಕಾಶಿಸಿತು. ವ॥ ಆಗ ವಿಕ್ರಾಂತತುಂಗನಾದ ಅರ್ಜುನನು ಆಶ್ಚರ್ಯಪಟ್ಟು ಇದೇನೆಂದು ಪ್ರಶ್ನೆಮಾಡಿದನು-೭೮. ಇದು ಬೇರೆಯಲ್ಲ; ಭೂಮಂಡಲವನ್ನು ತರಲು ನಾನು ಆದಿವರಾಹನಾದೆನು. ಇದು ಅದರ ಕೋರೆಹಲ್ಲು. ಬಳಿಕ ಅದನ್ನು ನಾನು ಭೂದೇವಿಗೆ ಕೊಟ್ಟೆನು. ಈತನು ಆ ಭೂದೇವಿಯ ಮೊಮ್ಮಗ, ಅವಳು ಕೊಡಲು ಇವನಿಗೆ ಬಂದಿತು. ನಾನಲ್ಲದೆ ಮತ್ತಾರೂ ಇದನ್ನು ಎದುರಿಸಲಾಗದುದರಿಂದ ನಾನು ಎದುರಿಸಿದೆನು. ಅರ್ಜುನಾ, ಇನ್ನು ಈ ಆನೆಯ ಕತ್ತನ್ನು ಕತ್ತರಿಸು ಎಂದನು. ೭೯. ಒಂದೆ ದಿವ್ಯಾಸ್ತ್ರದಿಂದ ಆನೆಯ ತಲೆಯನ್ನು ಹರಿದುಹೋಗುವ ಹಾಗೆ ಹೊಡೆದನು. ಆ ಭಗದತ್ತನು ಅದನ್ನು ಬಲಾತ್ಕಾರದಿಂದ ತಾನು ಎದುರಿಸಿದನು. ಅರ್ಜುನನು ನಾನು ವ್ಯರ್ಥವಾಗಿ ಪ್ರಯೋಗಮಾಡಿದೆ (ಆನೆಯ ತಲೆಯನ್ನೂ ಭಗದತ್ತನ ತಲೆಯನ್ನೂ ಒಟ್ಟಿಗೆ ಹೊಡೆಯಬೇಕಾಗಿದ್ದಿತು) ಎಂದು ಬಿಲ್ಲನ್ನು ಬಿಸುಟಿರಲು ಕೃಷ್ಣನು ಇದೇಕೆ ವ್ಯಾಕುಲನಾಗಿದ್ದೀಯೆ? 'ನೋಡು ಇದು ಹೀಗೆ' ಎಂದು ತೋರಿಸಿದನು. ಅರ್ಜುನನು ಕೋಪದಿಂದ ಭಗದತ್ತನ ಎರಡು ಕೈಗಳನ್ನು ಹೊಡೆದನು. ೮೦. ಕೈಗಳನ್ನು ಕತ್ತರಿಸಿ ಅವನ ತಲೆಯನ್ನು

ಉ॥ ಇತ್ತರಿಗಂಗಮಿತ್ರ ಜಯಮಪ್ಪುದುಮತ್ತಮರರ್ಕಳಾರ್ದು ಸೂ
ಸುತ್ತಿರೆ ಪುಷ್ಪವೃಷ್ಟಿಗಳನೋಗರವೂಗಳ ಬಂಡನೆಯ್ದೆ ಪೀ ।
ರುತ್ತೊಡವಂದುವಿಂದ್ರವನದಿಂ ಮಱಿದುಂಬಿಗಳಿಂದ್ರನೀಲಮಂ
ಮುತ್ತುಮನೋಳಿಯೋಳಿಯೊಳಿ ಕೋದೆಬಲಿಕ್ಕಿದ ಮಾಲೆಯಂತೆವೋಲ್ ॥ ೮೧

ಕಂ॥ ಧರಣೀಸುತನಳಿದಂ ದಿ
ಕ್ಕರಿ ಕೆಡೆದುದು ನರಶರಂಗಳಿಂ ಭುವನಮುಮಿ ।
ನ್ನುರಿಯದಿರದಾನಡಂಗುವೆ
ನಿರದೆಂಬವೊಲರ್ಕನಪರಜಳನಿಧಿಗಿಳಿದಂ ॥ ೮೨

ವ॥ ಆಗಳೆರಡುಂ ಪಡೆಗಳಪಹಾರತೂರ್ಯಂಗಳಂ ಬಾಜಿಸಿ ತಂತಮ್ಮ ಬೀಡುಗಳ್ಗೆ ಪೋಪುದುಂ ಸುಯೋಧನಂ ಭಗದತ್ತನ ಸಾವಿಂಗಟಲ್ದು ತೊಟ್ಟ ಸನ್ನಣಮನಪ್ಪೊಡಂ ಕಳೆಯದೆಯು ಮರಮನೆಗೆ ಪೋಗದೆ ಕುಂಭಸಂಭವನಲ್ಲಿಗೆ ವಂದು-

ಮ॥ ಮಸಕಂಗುಂದದ ಸುಪ್ರತೀಕ ಗಜಮಂ ಧಾತ್ರೀಸುತಂ ಕೀಱಿ ಚೋ
ದಿಸಿ ಭೀಮಂ ಗೆಲೆ ಮುಟ್ಟೆವಂದು ಹರಿಯುಂ ತಾನುಂ ಭರಂಗೆಯ್ದು ತ ।
ನ್ನೆಸಕಂಗಾಯ್ದಧರ್ಮಯುದ್ಧದೆ ನರಂ ಕೊಲ್ವಲ್ಲಿ ಕಂಡಿಂತುಪೇ
ಕ್ಷಿಸಿ ನೀಮುಂ ನಡೆ ನೋಡುತಿರ್ದಿರೆನೆ ಮತ್ತಿನ್ನಾರನಾಂ ನಂಬುವೆಂ ॥ ೮೩

ಹರಿದುಹೋಗುವಂತೆ ಹೊಡೆಯಲು ದಿಕ್ಕರಿಯ ತಲೆಯೂ ಆತನ ತಲೆಯೂ ಕೈಗಳೂ ಭಾಗಮಾಡಿದಂತೆ ಆಶ್ಚರ್ಯಯುತವಾಗಿ ಜೊತೆಯಾಗಿಯೇ ಭೂಮಿಯ ಮೇಲೆ ಉರುಳಿದುವು. ೮೧. ಈ ಕಡೆ ಅರಿಗನಿಗೆ (ಅರ್ಜುನನಿಗೆ) ಶತ್ರುಜಯವಾಗಲು ಆ ಕಡೆ ದೇವತೆಗಳು ಜಯಘೋಷಮಾಡಿ ಹೂಮಳೆಯನ್ನು ಸುರಿಸಿದರು. ಆ ಮಿಶ್ರಪುಷ್ಪಗಳ ವಾಸನೆಯನ್ನು ಪೂರ್ಣವಾಗಿ ಹೀರುತ್ತ ಇಂದ್ರನ ತೋಟವಾದ ನಂದನವನದಿಂದ ಮರಿದುಂಬಿಗಳು ಇಂದ್ರನೀಲಮಣಿರತ್ನವನ್ನೂ ಮುತ್ತುಗಳನ್ನೂ ದಂಡೆದಂಡೆಯಾಗಿ ಸಾಲಾಗಿ ಪೋಣಿಸಿ ಜೋಲುಬಿಟ್ಟ ಹಾರದಂತೆ ಜೊತೆಯಲ್ಲಿಯೇ ಬಂದುವು. ೮೨. ಅರ್ಜುನನ ಬಾಣದಿಂದ ಭೂಪುತ್ರನಾದ ಭಗದತ್ತನು ನಾಶವಾದನು. ದಿಗ್ಗಜವು ಕೆಳಗುರುಳಿತು. ಪ್ರಪಂಚವು ಇನ್ನು ಸುಟ್ಟು ಹೋಗದೇ ಇರುವುದಿಲ್ಲ; ನಾನು ಇಲ್ಲಿರದೆ ಮರೆಯಾಗುತ್ತೇನೆ ಎನ್ನುವ ಹಾಗೆ ಸೂರ್ಯನು ಪಶ್ಚಿಮ ಸಮುದ್ರಕ್ಕಿಳಿದನು. ವ॥ ಆಗ ಎರಡು ಸೈನ್ಯಗಳೂ ಯುದ್ಧವನ್ನು ನಿಲ್ಲಿಸುವುದಕ್ಕಾಗಿ ಸೂಚಿಸುವ ವಾದ್ಯಗಳನ್ನು ಬಾಜಿಸಲು ತಮ್ಮ ತಮ್ಮ ಶಿಬಿರಕ್ಕೆ ಹೋದುವು. ದುರ್ಯೋಧನನು ಭಗದತ್ತನ ಸಾವಿಗೆ ದುಃಖಪಟ್ಟು ಧರಿಸಿದ ಯುದ್ಧಕವಚವನ್ನು ಕಳೆಯದೆಯೂ ಅರಮನೆಗೆ ಹೋಗದೆಯೂ ದ್ರೋಣಾಚಾರ್ಯರ ಹತ್ತಿರಕ್ಕೆ (ಬಳಿಗೆ) ಬಂದನು-೮೩. ಮದವಡಗದ ಸುಪ್ರತೀಕಗಜವನ್ನು ಭಗದತ್ತನು ಭಯಶಬ್ದಮಾಡುತ್ತ ರೇಗಿಸಿ ಮುಂದೆ ನುಗ್ಗಿಸಿ ಭೀಮನನ್ನು ಗೆಲ್ಲಲು ಕೃಷ್ಣನೂ ಅರ್ಜುನನೂ ಹತ್ತಿರಕ್ಕೆ ಬಂದು ವೇಗದಿಂದ (ತನ್ನ ಮಾತಿನಂತೆ ನಡೆದುಕೊಳ್ಳದೆ ಯುದ್ಧ ಮಾಡುವುದಿಲ್ಲವೆಂಬ ತನ್ನ ಪ್ರತಿಜ್ಞೆಯನ್ನು, ಕಾರ್ಯವನ್ನು, ಮಾತನ್ನು ಪರಿಪಾಲಿಸದೆ) ಅಧರ್ಮಯುದ್ಧದಲ್ಲಿ ಅರ್ಜುನನು

ವ|| ಎಂದು ನುಡಿದ ಪನ್ನಗಧ್ವಜನ ನುಡಿಗೆ ಕಾರ್ಮುಕಾಚಾರ್ಯನಿಂತೆಂದಂ-

ಮ|| ಎನಗಲ್ತಾರ್ಗಮಸಾಧ್ಯನಲ್ತೆ ವಿಜಯಂ ನೀನಾತನಂ ಗೆಲ್ವ ಮಾ
ತನಮೋಘಂ ಬಿಸುಡಿಂದೆ ನಾಳೆ ವಿಜಯಂ ಮಾರ್ಕೊಳ್ಳದಂದುರ್ಕಿ ಪೊ |
ಕ್ಕನನಾಂತೊರ್ವನನಿಕ್ಕುವೆಂ ಕದನದೊಳ್ ಮೇಣ್ ಕಟ್ಟುವೆಂ ಧರ್ಮ ನಂ
ದನನಂ ನೀನಿದನಿಂತು ನಂಬು ಬಗೆಯಲ್ವೇಡೆನ್ನನಂ ಭೂಪತೀ | ೮೪

ವ|| ಎಂಬುದುಮಾನಿನಿತಂ ನಿಮ್ಮ ಪೂಣಿಸಲೆ ಬಂದೆನೆಂದು ಪೊಡೆಮಟ್ಟು ಬೀಳ್ಕೊಂಡು ಪೋಗಿ ಸಂಸಪ್ತಕರ್ಕಳ್ಗೆ ಬಟೆಯನಟ್ಟಿ ಬರಿಸಿ-

ಚಂ|| ಅರಿಗನನಾಂಪ ಗಂಡುಮದಟುಂ ನಿಮಗಾವಗಮಾದುದಾಹವಾ
ಜಿರದೊಳದರ್ಕೆ ನಾಳೆ ನರನಂ ತೆಗೆದುಯ್ವುದು ಧರ್ಮಪುತ್ರನಂ |
ಗುರು ಪಿಡಿದಪ್ಪನೆಂದವರನಾಗಳೆ ಪೂಣಿಸಿ ಪೋಗವೇಳ್ದು ಮ
ಚ್ಚರದೊಳೆ ಮಾಣದೊಡ್ಡಿದನಸುಂಗೊಳೆ ಕಕ್ಕರ ಸಂಜೆ ಸಂಜೆಯೊಳ್ || ೮೫

ವ|| ಆಗಳ್ ಪಾಂಡವ ಪತಾಕಿನಿಯುಮಿರದೆ ಪೊಱಮಟ್ಟರ್ಧಚಂದ್ರವ್ಯೂಹಮನೊಡ್ಡಿ ನಿಲೆ ಸಂಸಪ್ತಕರ್ ತಮಗೆ ಮಿಟ್ಟುಗರೆವಂತೆ ವಿಕ್ರಮಾರ್ಜುನನಂ ಕರೆದುಯ್ದರಿತ್ತ-

ಕೊಲ್ಲುತ್ತಿರುವುದನ್ನು ನೋಡಿ ನೀವು ಹೀಗೆ ಉಪೇಕ್ಷಿಸಿ ನೋಡುತ್ತೀರಿ ಎಂದ ಮೇಲೆ ನಾನು ಮತ್ತಾರನ್ನು ನಂಬಲಿ ವ|| ಎಂದು ಹೇಳಿದ ದುರ್ಯೋಧನನ ಮಾತಿಗೆ ದ್ರೋಣನು ಹೀಗೆ ಹೇಳಿದನು-೮೪. ಮಹಾರಾಜನೇ ಅರ್ಜುನನು ನನಗಲ್ಲ, ಯಾರಿಗೂ ಅಸಾಧ್ಯನಾದವನು. ನೀನು ಅವನನ್ನು ಗೆಲ್ಲುವ ಮಾತು ವ್ಯರ್ಥವಲ್ಲವೇ? ಅದನ್ನು ಈ ದಿನವೇ ಬಿಸಾಡು. ನಾಳೆಯ ದಿನ ಅರ್ಜುನನು ಪ್ರತಿಭಟಿಸದಿರುವಾಗ ಅಹಂಕಾರದಿಂದ ಮೊಕ್ಕಂಥ ಯಾವನನ್ನಾದರೂ ಎದುರಿಸಿ ಯುದ್ಧದಲ್ಲಿ ಕೊಲ್ಲುತ್ತೇನೆ. ಅಲ್ಲದೆ ಧರ್ಮರಾಜನನ್ನು ಸೆರೆಹಿಡಿಯುತ್ತೇನೆ. ನೀನು ಇದನ್ನು ನಂಬು ನನ್ನನ್ನು ಅಂಥವನೆಂದು ಗಣಿಸಬೇಡ. ವ|| ಎನ್ನಲು ನಾನು ನಿಮ್ಮಲ್ಲಿ ಇಷ್ಟನ್ನು ಪ್ರತಿಜ್ಞೆಮಾಡಿಸಬೇಕೆಂದೇ ಬಂದೆನೆಂದು ನಮಸ್ಕಾರಮಾಡಿ ಅವರನ್ನು ಬಿಟ್ಟುಹೋಗಿ ಸಂಸಪ್ತಕರುಗಳಿಗೆ ದೂತರನ್ನು ಕಳುಹಿಸಿ ಬರಮಾಡಿಕೊಂಡನು. ೮೫. ಯುದ್ಧರಂಗದಲ್ಲಿ ಅರ್ಜುನನನ್ನು ಪ್ರತಿಭಟಿಸುವ ಪೌರುಷವೂ ಶಕ್ತಿಯೂ ನಿಮಗೆ ಯಾವಾಗಲೂ ಇದೆ. ಆದಕ್ಕಾಗಿ ನಾಳೆ ಅರ್ಜುನನನ್ನು ದೂರಕ್ಕೆ ಕರೆದುಕೊಂಡು ಹೋಗುವುದು. ದ್ರೋಣಾಚಾರ್ಯನು ಧರ್ಮಪುತ್ರನನ್ನು ನಾಳೆ ಸೆರೆಹಿಡಿಯುತ್ತಾನೆ ಎಂದು ಅವರನ್ನು ಆಗಲೇ ಪ್ರತಿಜ್ಞೆ ಮಾಡಿಸಿ ಹೋಗಹೇಳಿದನು. ಮಾತ್ಸರ್ಯದಿಂದ ತಡವಿಲ್ಲದೆ ಬೆಳಗಿನ ಜಾವದಲ್ಲಿಯೇ ಎಂತಹ ಕಠಿಣರಾದವರೂ ಹೆದರುವ ಹಾಗೆ ಶತ್ರುಗಳ ಪ್ರಾಣಾಪಹಾರಕ್ಕಾಗಿ ಭಯಂಕರವಾದ ಸೈನ್ಯವನ್ನು ಒಡ್ಡಿದನು-ವ|| ಆಗ ಪಾಂಡವಸೈನ್ಯವೂ ಸುಮ್ಮನಿರದೆ ಹೊರಟು ಅರ್ಧಚಂದ್ರಾಕಾರದ ಸೈನ್ಯರಚನೆಯನ್ನು ಮಾಡಿ ನಿಲ್ಲಲು ಸಂಸಪ್ತಕರು ತಮಗೆ ಮೃತ್ಯುವನ್ನು ಕರೆಯುವಂತೆ ಅರ್ಜುನನನ್ನು

ಅನವದ್ಯ ॥ ಅಱಿಪಿದಂ ಗುರು ಭಾರ್ಗವನಿಂತೀಯೊಡ್ಡನಿದಾ ಗೆಲಲಾವನುಂ
ನೆಱೆಯನುರ್ಕಿನಳುರ್ಕೆಯಿನೊರ್ವಂ ಪೊಕ್ಕೊಡೆ ಪೊಕ್ಕನೆ ಮತ್ತಣಂ ।
ಪೊಱಮಡಂ ತಱಿದೊಟ್ಟುವೆನಂತಾ ಪಾಂಡವಸೈನ್ಯಮನೆಂದು ಬಿ
ಲ್ಲೆಱೆಯನೊಡ್ಡಿದನಂಕದ ಚಕ್ರವ್ಯೂಹಮನಾಹವರಂಗದೊಳ್ ॥ ೮೬

ವ॥ ಅಂತೊಡ್ಡಿದ ಚಕ್ರವ್ಯೂಹದ ನಡುವೆಡೆಯಱಿದು ಕಳಿಂಗರಾಜನ ಕರಿಘಟೆಗಳುಮಂ ಕರ್ಣ ಶಲ್ಯ ಶಕುನಿ ಕೃಪ ಕೃತವರ್ಮ ಭೂರಿಶ್ರವೋಽಶ್ವತ್ಥಾಮ ದುರ್ಯೋಧನ ವೃಷಸೇನ ಲಕ್ಷಣಾದಿಗಳಪ್ಪತಿರಥ ಮಹಾರಥ ಸಮರಥಾರ್ಧರಥರ್ಕಳನಿರಿಸಿ ಮತ್ತಮವರ ಬಳಸಿಯುಮನೇಕ ಸಾಮಜಬಲಂಬೆರಸು ಜಯತ್ಸೇನ ಸುದಕ್ಷಿಣ ಕಾಂಭೋಜಾದಿ ನಾಯಕರನಿರಿಸಿ ಮತ್ತಮವರ ಕೆಲದೊಳೆಡೆಯಱಿದು ಬಕಾಸುರ ಜಟಾಸುರರ ಮಕ್ಕಳಪ್ಪಳಂಭೂಷಣ ಹಳಾಯುಧ ಮುಸಳಾಯುಧ ಕಾಳ ನೀಳ ರೂಕ್ಷ ರಾಕ್ಷಸ ಬಲಮನಿರಿಸಿ ಮತ್ತಮವರ ಕೆಲದೊಳಿವರ್ಗಿವರ್ ಪಾಸಟಿಯಾಗಿರ್ಪರೆಂದು ನಿಂದ ನೆಲೆಯೊಳ್ ತಳರದೆ ನಿಲ್ವಂತಾಗಿರಿಸಿ ಗುಹೆಯ ಬಾಗಿಲೊಳ್ ಸಿಂಹಮಿರ್ಪಂದದಿಂ ಭಾರದ್ವಾಜಂ ಸಿಂಧುರಾಜಂಬೆರಸು ಚಕ್ರವ್ಯೂಹದ ಬಾಗಿಲೊಳ್ ನೆಱೆದು ಮೆಱೆದು ನಿಂದಾಗಳ್ ಧರ್ಮಪುತ್ರನೇಗೆಯ್ವ ತೆಱನುಮನಱಿಯದಭಿಮನ್ಯುವಂ ಕರೆದಿಂತೆಂದಂ-

ಕರೆದುಕೊಂಡೊಯ್ದರು. ಈ ಕಡೆ ೮೬. ಚಕ್ರವ್ಯೂಹ ರಚನೆಯನ್ನು ಆಚಾರ್ಯನಾದ ಪರಶುರಾಮನು ನನಗೆ ಉಪದೇಶಮಾಡಿದ್ದಾನೆ. ಇದನ್ನು ಯಾರೂ ಗೆಲ್ಲಲು ಸಾಧ್ಯವಿಲ್ಲ. ಉತ್ಸಾಹಾತಿಶಯದಿಂದ ಯಾವನಾದರೊಬ್ಬ ಪ್ರವೇಶಮಾಡಿದರೆ ಅವನು ಪ್ರವೇಶಮಾಡಿದವನೇ. ಪುನಃ ಹೇಗೂ ಹೊರಟುಹೋಗಲಾರ; ಆ ಪಾಂಡವ ಸೈನ್ಯವನ್ನು ಇದರಿಂದ ಕತ್ತರಿಸಿ ಹಾಕುತ್ತೇನೆ ಎಂದು ಬಿಲ್ಲೋಜನಾದ ದ್ರೋಣನು ಪ್ರಸಿದ್ಧವಾದ ಚಕ್ರವ್ಯೂಹವನ್ನು ಯುದ್ಧರಂಗದಲ್ಲಿ ಹೂಡಿದನು - ವ॥ ಹಾಗೆ ಒಡ್ಡಿದ ಚಕ್ರವ್ಯೂಹದ ಮಧ್ಯಭಾಗದಲ್ಲಿ ಯೋಗ್ಯವಾದ ಸ್ಥಳಗಳನ್ನು ಗೊತ್ತುಮಾಡಿ ಕಳಿಂಗ ರಾಜನ ಆನೆಯ ಸಮೂಹವನ್ನೂ ಕರ್ಣ, ಶಲ್ಯ, ಶಕುನಿ, ಕೃತವರ್ಮ, ಭೂರಿಶ್ರವ, ಅಶ್ವತ್ಥಾಮ, ದುರ್ಯೋಧನ, ವೃಷಸೇನ, ಲಕ್ಷಣನೇ ಮೊದಲಾದ ಅತಿರಥ ಮಹಾರಥ ಸಮರಥ ಅರ್ಧರಥರುಗಳನ್ನು ಇರಿಸಿದನು. ಅದರ ಸುತ್ತಲೂ ಅನೇಕ ಆನೆಯ ಸೈನ್ಯದೊಡನೆ ಜಯತ್ಸೇನ, ಸುದಕ್ಷಿಣ, ಕಾಂಭೋಜರೇ ಮೊದಲಾದ ನಾಯಕರುಗಳನ್ನಿಟ್ಟನು. ಮತ್ತು ಅವರ ಪಕ್ಕದಲ್ಲಿ ಸೂಕ್ತ ಸ್ಥಳವನ್ನು ವಿಚಾರಮಾಡಿ ಬಕಾಸುರ ಜಟಾಸುರರ ಮಕ್ಕಳಾದ ಅಳಂಭೂಷಣ, ಹಳಾಯುಧ, ಮುಸಳಾಯುಧ, ಕಾಳನೀಳರ ಭಯಂಕರವಾದ ರಾಕ್ಷಸ ಸೈನ್ಯವನ್ನಿರಿಸಿದನು. ಅವರ ಪಕ್ಕದಲ್ಲಿ ಇವರಿಗ ಇವರು ಸಮನಾಗಿರುತ್ತಾರೆ ಎಂದು ನಿಂತ ಸ್ಥಳದಲ್ಲಿಯೇ ಚಲಿಸದೆ ನಿಲ್ಲುವ ಹಾಗೆ ಇರಿಸಿ ಗುಹೆಯ ಬಾಗಿಲಿಗೆ ಸಿಂಹವಿರುವ ಹಾಗೆ ದ್ರೋಣಾಚಾರ್ಯನು ಸೈಂಧವನೊಡಗೂಡಿ ಚಕ್ರವ್ಯೂಹದ ಬಾಗಿಲಿನಲ್ಲಿ ಕೂಡಿಕೊಂಡು ಮೆರೆದು ನಿಂತನು. ಧರ್ಮರಾಜನು ಏನು

ಮ॥ ಸ್ರ ॥ ಇದು ಚಕ್ರವ್ಯೂಹಮೀ ವ್ಯೂಹಮನೊಡೆವದಟಂ ಪಾರ್ಥನಂತಾತನುಂ ಗೆಂ
ಟದನೆಮ್ಮೀ ನಾಲ್ವರುಂ ಭೇದಿಸಲಱಿಯೆವಿದಂ ಕಂದ ನೀಂ ಬಲ್ಲ ಪೇೞಿಂ ।
ಬುದುಮಾನೆಮ್ಮಯ್ಯನಲ್ ಕೇಳ್ದಱಿವೆನಿದನಿದೇನಯ್ಯ ಚಿಂತಾಂತರಂ ಪೊ
ಕ್ಕಿದನೀಗಳ್ ವನ್ಯಗಂಧದ್ವಿರದಮ ಕೊಳನಂ ಪೊಕ್ಕವೋಲ್ ಕಾದಿ

ತೋರ್ಪೆಂ ॥ ೮೭

ಚಂ॥ ಅನಲನ ಕೊಟ್ಟ ಗಾಂಡಿವದ ತೇರ ಮುರಾರಿಯ ಮೆಚ್ಚ ದೇವ ದೇ
ವನ ದಯೆಗೆಯ್ದ ಸಾಯಕದ ಚೆಂಬಲದೊಳ್ ಕಲಿಯೆಂದು ಕೆಮ್ಮನ ।
ಮ್ಮನನದಟಟ್ಟುಗಿರ್ಪಿರವಿದೇಂ ಪಗೆಯೊಡ್ಡು ಗೆಲಲ್ಕೞುಂಬಮೆಂ
ಬನಿತುವರಂ ಮನಕ್ಕೆ ನಿಮಗತ್ತಳಗಂ ಬರೆ ಮತ್ತೆ ಮಾಣ್ಬೆನೇ ॥ ೮೮

ಚಂ॥ ನೆಱಿದು ಚತುರ್ವಲಂಬೆರಸು ಬಂದುಱಿದೊಡ್ಡಿದ ಗಂಡರಾರುಮೆ
ನ್ನಱಿಯದ ಗಂಡರೇ ನೆಗೆದ ನೆತ್ತರ ಸುಟ್ಟುರೆ ಕಂಡದಿಂಡೆಗಳ್ ।
ಪಱಿದು ನಭಂಬರಂ ಪರೆದು ಪರ್ವಿ ಲಯಾಗ್ನಿ ಶಿಖಾಕಳಾಪಮಂ
ಮಱಿಯಿಸೆ ತಾಗಿ ತಳ್ತಿಱಿಯದನ್ನೆಗಮೆಂತು ನರಂಗೆ ಪುಟ್ಟಿದೆಂ ॥ ೮೯

ವ॥ ಎಂಬುದುಂ ಯಮನಂದನನಿಂತೆಂದಂ-

ಚಂ॥ ಅನುವರದಲ್ಲಿ ತಳ್ತು ಪಗೆಯಂ ತವೆ ಕೊಂದೊಡಮಾಂತರಾತಿ ಸಾ
ಧನದೊಳಗಟ್ಟಿ ತಟ್ಟಿದೊಡಮೆನ್ನಯ ಸಂತತಿಗಾಗಿಸಿರ್ದ ನಿ ।
ನ್ನನೆ ಮದದಂತಿ ದಂತ ಮುಸಲಾಹತಿಗಂ ಕರವಾಳ ಬಾಯ್ಗುಮಂ
ಬಿನ ಮೊನೆಗಂ ಮಹಾರಥರ ತಿಂತಿಣಿಗಂ ಒಡಿದೆಂತು ನೂಂಕುವೆಂ ॥ ೯೦

ಮಾಡಬೇಕೆಂಬುದನ್ನು ತಿಳಿಯದೆ ಅಭಿಮನ್ಯುವನ್ನು ಕರೆದು ಹೀಗೆ ಹೇಳಿದನು. ೮೭. ಇದು ಚಕ್ರವ್ಯೂಹ, ಈ ಚಕ್ರವ್ಯೂಹವನ್ನು ಒಡೆಯುವ ವೀರ ಅರ್ಜುನ, ಅವನೂ ದೂರವಾದನು. ನಾವು ನಾಲ್ಕು ಜನವೂ ಇದನ್ನು ಭೇದಿಸಲು ತಿಳಿಯೆವು. ಮಗು ನೀನೇನಾದರೂ ತಿಳಿದಿದ್ದೀಯಾ ಹೇಳು ಎನ್ನಲು ಇದನ್ನು ತಂದೆಯಲ್ಲಿ ಕೇಳಿ ತಿಳಿದಿದ್ದೇನೆ. ಇದಕ್ಕೇಕೆ ವಿಶೇಷ ಚಿಂತೆ. ಇದನ್ನು ಈಗಲೇ ಪ್ರವೇಶಿಸಿ ಮಹಾಸತ್ವಶಾಲಿಯಾದ ಕಾಡಾನೆಯು ಕೊಳವನ್ನು ಪ್ರವೇಶಿಸುವ ಹಾಗೆ ಕಾದಿ ತೋರಿಸುತ್ತೇನೆ. ೮೮. ಅಗ್ನಿಯು ದಾನಮಾಡಿದ ಗಾಂಡೀವಾಸ್ತ್ರದ, ಸಾರಥಿಯಾಗಿರುವ ಕೃಷ್ಣನ ಪ್ರಸಾದದ, ದೇವದೇವನಾದ ಈಶ್ವರನು ಅನುಗ್ರಹಿಸಿದ ಪಾಶುಪತಾಸ್ತ್ರದ ಬೆಂಬಲದಿಂದ ಶೂರನೆಂದು ವ್ಯರ್ಥವಾಗಿ ಕರೆಯಿಸಿಕೊಳ್ಳುವ ತಂದೆಯಾದ ಅರ್ಜುನನ ಪರಾಕ್ರಮವನ್ನು ಒಲಿದು ಮೆಚ್ಚುತ್ತಿರುವ ಈ ಸ್ಥಿತಿಯದೇನು? ಶತ್ರುಸೈನ್ಯವು ಗೆಲ್ಲುವುದಕ್ಕೆ ಸಾಧ್ಯವೆಂದು ಹೇಳುವವರೆಗೆ ಮನಸ್ಸಿಗೆ ಚಿಂತೆಯುಂಟಾದರೆ ಪುನಃ ನಿಲ್ಲುತ್ತೇನೆಯೇ? (ಇಲ್ಲಿ ಈಗಲೇ ಯುದ್ಧಕ್ಕೆ ಹೊರಡುತ್ತೇನೆ) ೮೯. ಚತುರಂಗ ಬಲದೊಡನೆ ಕೂಡಿಕೊಂಡು ವೇಗವಾಗಿ ಸೈನ್ಯವನ್ನೊಡ್ಡಿರುವ ಶೂರರು ನನಗೆ ತಿಳಿಯದ ಶೂರರೇ? ಮೇಲಕ್ಕೆ ಚಿಮ್ಮಿದ ರಕ್ತಪ್ರವಾಹವು ಆಕಾಶಕ್ಕೆ ಚಿಮ್ಮುವಂತೆಯೂ ಮಾಂಸಖಂಡದ ರಾಶಿಗಳು ಕತ್ತರಿಸಿ ಮುಗಿಲವರೆಗೆ ಚೆಲ್ಲಾಡುವಂತೆಯೂ ಪ್ರಳಯಾಗ್ನಿ ಜ್ವಾಲೆಗಳನ್ನು ಮರೆಮಾಡುತ್ತಿರಲು ಎದುರಿಸಿ ಕೂಡಿ ಯುದ್ಧ ಮಾಡದಿದ್ದರೆ ನಾನು ಅರ್ಜುನನಿಗೆ ಹೇಗೆ ಹುಟ್ಟಿದವನಾಗುತ್ತೇನೆ? ವ॥ ಎನ್ನಲು ಯಮನ ಪುತ್ರನಾದ ಧರ್ಮರಾಯನು ಹೀಗೆಂದನು-೯೦. ಯುದ್ಧದಲ್ಲಿ ಸೇರಿ ಶತ್ರುವನ್ನು ಪೂರ್ಣವಾಗಿ ಕೊಲ್ಲಬಹುದು

ಕಂ॥ ಮಗನೆ ಪದಿನಾಲ್ಕು ವರುಷದ
ಮಗನೈ ನಿನ್ನನ್ನನೊರ್ವನಂ ಪಗೆವಡೆಯೊ ।
ಡ್ಡುಗಳನೊಡೆಯಲ್ಕೆವೇೞ್ದಿರ್ದೆ
ಧಗಮೆನೆ ಸೈರಿಸುವುಪಾಯಮಾವುದು ಕಱುವೇ ॥ ೯೧

ವ॥ ಎಂದೊಡಾ ಮಾತಂ ಮಾರ್ಕೊಂಡಭಿಮನ್ಯುವಿಂತೆಂದಂ-

ಮ॥ ಕ್ರಮಮಂ ಕೆಯ್ಕೊಳಲೆಂದು ಪುಟ್ಟ ರಣದೊಳ್ ಸಾವನ್ನೆಗಂ ಮಾಣ್ದೊಡ
ಕ್ರಮಮಕ್ಕುಂ ಕ್ರಮಮಕ್ಕುಮೇ ಕ್ರಮಮನಾನೇಗೆಯ್ವಪೆಂ ವಿಕ್ರಮಂ ।
ಕ್ರಮಮಾಂ ವಿಕ್ರಮದಾತನೆಂ ಕ್ರಮದ ಮಾತಂತಿರ್ಕೆ ಮಾಣ್ದಿರ್ದೊಡಾಂ ।
ಕ್ರಮಕೆಂದಿರ್ದೆನೆ ಬಿಟ್ಟೊಡಂ ಬಿಡದೊಡಂ ಬೀೞ್ಕೊಂಡೆನಿಂ ಮಾಣ್ಬೆನೇ ॥೯೨

ವ॥ ಎಂದು ತನ್ನೇಱಿದ ಕನಕ ರಥಮಂ ತನ್ನ ಮನದನ್ನನಪ್ಪ ಜಯನೆಂಬ ಸಾರಥಿಯಂ ಚೋದಿಸೆಂಬಾಗಳ್-

ಚಂ॥ ಎಱಗುವ ಬಟ್ಟನಂಬುಗಳ ಬಲ್ಸರಿ ಕುಂಭಜನಂ ಮರಳ್ಚೆ ಪಾ
ಯ್ವಱಿಕೆಯ ಪಾರೆಯಂಬುಗಳ ತಂದಲಗುರ್ವಿಸಿ ಸಿಂಧುರಾಜನಂ ।
ಮಱುಗಿಸೆ ಬಾಗಿಲೊಳ್ ಮುಸುಱಿ ನಿಂದ ಘಟಾವಳಿಯಂ ತೆರಳ್ಚಿ ತ
ತ್ತಱದಱಿದೊತ್ತಿ ಪೊಕ್ಕನಭಿಮನ್ಯು ವಿರೋಧಿಬಳಾಂಬುರಾಶಿಯಂ ॥ ೯೩

ಅಥವಾ ಪ್ರತಿಭಟಿಸಿದ ಶತ್ರುಸೈನ್ಯದಲ್ಲಿ ನಾಶವಾಗಬಹುದು. ಆದರೆ ನನ್ನ ವಂಶೋದ್ಧಾರಕ್ಕಾಗಿಯೇ ಹುಟ್ಟಿರುವ ನಿನ್ನನ್ನೇ ಮದ್ದಾನೆಯ ದಂತವೆಂಬ ಒನಕೆಯ ಪೆಟ್ಟಿಗೂ ಕತ್ತಿಯ ಬಾಯಿಗೂ ಬಾಣದ ತುದಿಗೂ ಮಹಾರಥರ ಸಮೂಹಕ್ಕೂ ಹಿಡಿದು ಹೇಗೆ ನೂಕಲಿ? ೯೧. ಮಗು ನೀನು ಇನ್ನೂ ಹದಿನಾಲ್ಕು ವರ್ಷದ ಮಗುವಪ್ಪಾ. ನಿನ್ನಂತಹ ಒಬ್ಬನನ್ನು ಶತ್ರುಸೈನ್ಯದ ಗುಂಪನ್ನು ಭೇದಿಸಲು ಹೇಳಿ ಎದೆ ಧಗ್ಗೆಂದು ಉರಿಯಲು ತಡೆದುಕೊಳ್ಳುವ ಉಪಾಯವಾವುದು ಕಂದಾ? ವ॥ ಎನ್ನಲು ಆ ಮಾತನ್ನು ಪ್ರತಿಭಟಿಸಿ ಅಭಿಮನ್ಯುವು ಹೀಗೆ ಹೇಳಿದನು. ೯೨. ಯುದ್ಧದಲ್ಲಿ ಕ್ರಮಪ್ರಾಪ್ತವಾದುದನ್ನು ಸ್ವೀಕರಿಸುವುದಕ್ಕಾಗಿಯೇ ಹುಟ್ಟಿ, ಸಾಯುವುದಕ್ಕೆ ತಪ್ಪಿದರೆ (ಹೆದರಿದರೆ) ಅದು ಅಕ್ರಮವಾಗುತ್ತದೆ; ಕ್ರಮವಾಗುತ್ತದೆಯೇ? ಕ್ರಮವನ್ನು ನಾನು ಏನು ಮಾಡುತ್ತೇನೆ. ಕ್ರಮದ ಮಾತು ಹಾಗಿರಲಿ; ಪರಾಕ್ರಮವೇ ಕ್ರಮ. ನಾನು ಪರಾಕ್ರಮಶಾಲಿ. ನೀವು ಅಪ್ಪಣೆ ಕೊಡದಿದ್ದರೂ ನಾನು ಕ್ರಮಕ್ಕಾಗಿ ಇದ್ದೇನೆ. ನೀವು ಬಿಡಲಿ ಬಿಡದಿರಲಿ ಹೊರಟಿದ್ದೇನೆ. ಅದನ್ನು ಇನ್ನು ಬಿಡುತ್ತೇನೆಯೇ? ವ॥ ಎಂದು ತಾನು ಹತ್ತಿದ್ದ ಚಿನ್ನದ ತೇರನ್ನು ತನಗೆ ಪ್ರೀತಿಪಾತ್ರನಾದ ಜಯನೆಂಬ ಸಾರಥಿಯನ್ನು ನಡಸೆಂದು ಹೇಳಿ-ಹೊರಟೇಬಿಟ್ಟನು. ೯೩. ಮೇಲೆ ಬೀಳುತ್ತಿರುವ ದುಂಡಾದ ಬಾಣಗಳ ಬಲವಾದ ಮಳೆಯು ದ್ರೋಣನನ್ನು ಹಿಂದಿರುಗಿಸಿತು. ಹಾರಿಹೋಗುತ್ತಿರುವ ಪ್ರಸಿದ್ಧವಾದ ಪಾರೆಯಂಬುಗಳ ಜಿನುಗು ಮಳೆಯು ಸೈಂಧವನನ್ನು ಹೆದರಿಸಿ ವ್ಯಥೆಪಡಿಸಿತು. ಚಕ್ರವ್ಯೂಹದ ಬಾಗಿಲಿನಲ್ಲಿ ಮುತ್ತಿಕೊಂಡು ನಿಂತಿದ್ದ ಆನೆಯ ಸೈನ್ಯವನ್ನು ಓಡಿಸಿ ಚೂರುಚೂರಾಗಿ ತರಿದು ಶತ್ರುಸೇನಾಸಮುದ್ರವನ್ನು ಅಭಿಮನ್ಯುವು ನೂಕಿ

ವ|| ಅಂತು ಪೊಕ್ಕು ವಿರೋಧಿ ಸೈನ್ಯಮಂ ಪಾರಿ ಪೊಕ್ಕಂತೆ ಪೆಣಮಯಂ ಮಾಡಿ ತೂಱಿಕೊಂಡ ಜೋಳದಂತಿರೆ ಪಡಲ್ವಡಿಸಿದಾಗಳ್-

ಚಂ|| ಒಣಗಿದುದೊಂದು ಪೆರ್ಬಿದಿರ ಪೆರ್ವೊಱದಱಿಂ ಮೊರೆದುರ್ವುವಾಶುಶು
ಕ್ಷಣಿಯವೊಲಾಂತ ಖಡ್ಗಿ ನಿವಹಕ್ಕೆ ರಥಕ್ಕೆ ದೞಕ್ಕೆ ಮತ್ತವಾ ।
ರಣ ನಿವಹಕ್ಕೆ ತಕ್ಕನಭಿಮನ್ಯುವ ಕೂರ್ಗಣೆ ಪಾಯ್ದು ನುಂಗಲುಂ
ಟೊಣೆಯಲುಮುರ್ಚೆ ಮುಕ್ಕಲುಮಿದೇಂ ನೆಱೆ ಕಲ್ತುವೊ ಯುದ್ಧರಂಗದೊಳ್ ||೯೪

ವ|| ಅಂತಿವಿರಾಂತ ಮಾರ್ಪಡೆಯೆಲ್ಲಮಂ ಜವನ ಪಡೆಗೆ ಪಡಿಗಟ್ಟಿಕ್ಕುವಂತಿಕ್ಕಿ ನಿಂದ ನರನಂದನನಂ ಕಂಡು ವಿಕ್ರಮಕ್ಕಂ ಕ್ರಮಕ್ಕಂ ಪುರುಡಿಸುವ ಸುಯೋಧನನ ಮಕ್ಕಳ್ ಲಕ್ಕಣಂ ಮೊದಲಾಗೆ ನೂರ್ವರುಮೊಂದಾಗೆ ಬಂದು ತಾಗಿದಾಗಳ್-

ಸ್ರ || ಸೂೞ್ಸೆಚ್ಚೆಚ್ಚು ಬಿಲ್ಲುಂ ರಥದ ಕುದುರೆಯುಂ ಸೂತನಂ ಖಂಡಿಸುತ್ತಾ
ಆಱೇೞೆಂಟೊಂಬತ್ತು ಪತ್ತೆಂಬೞಿಕೆಯ ಸರಲಿಂದೂಱಿಕೊಂಡಾವ ಮೆಯ್ಯುಂ ।
ಪಾೞೆಂಬಂತಾಗೆ ಪಾರ್ದಾರ್ದುಱಿದಿಸೆ ಮುಳಿಸಿಂ ನೂರ್ವರುಂ ಪೊನ್ನ ತಾೞ್ಗಳ್
ಸೂೞಿನೊಳ್ ಬೀೞ್ವಂತೆ ಬಿೞ್ದರ್ ಮಕುಟಮಣಿಗಣದ್ಯೋತಿಸಾರರ್
ಕುಮಾರರ್ || ೯೫

ವ|| ಆಗಳ್ ಸುಯೋಧನನ ಮಕ್ಕಳ ಸಾವಂ ಕಂಡು ತಮ್ಮಣ್ಣನ ಮೊಗಮನಾವ ಮೊಗದೊಳ್ ನೋೞ್ಪೆನೆಂದು ದುಶ್ಶಾಸನಂ ಬಂದು ತಾಗಿದಾಗಳ್-

ನುಗ್ಗಿದನು. ವ|| ಹಾಗೆ ಶತ್ರುಸೈನ್ಯವನ್ನು ಪ್ರವೇಶಮಾಡಿ ಪಾರಿ ಹೊಕ್ಕಂತೆ ಹೆಣಮಯವನ್ನಾಗಿ ಮಾಡಿ ಗಾಳಿಯಲ್ಲಿ ತೂರಿದ ಜೋಳದ ಹಾಗೆ ನೆಲಕ್ಕೆ ಚೆಲ್ಲಾಪಿಲ್ಲಿಯಾಗಿ ಬೀಳಿಸಿದನು. ೯೪. ಒಣಗಿಸಿದ ಒಂದು ಹೆಬ್ಬಿದಿರಿನ ದೊಡ್ಡ ಮೆಳೆಯಿಂದ ಶಬ್ದಮಾಡಿಕೊಂಡು ಉಬ್ಬುವ ಅಗ್ನಿಯ ಹಾಗೆ ಪ್ರತಿಭಟಿಸಿದ ಖಡ್ಗಧಾರಿಗಳ ಗುಂಪಿಗೆ, ತೇರಿಗೆ, ಸೈನ್ಯಕ್ಕೆ, ಮದ್ದಾನೆಗಳ ಸಮೂಹಕ್ಕೆ, ಯೋಗ್ಯವಾದ (ಸಮರ್ಥವಾದ) ಅಭಿಮನ್ಯುವಿನ ಹರಿತವಾದ ಬಾಣಗಳು ಹಾಯ್ದು ನುಂಗುವುದಕ್ಕೂ ಚಪ್ಪರಿಸುವುದಕ್ಕೂ ಮುಕ್ಕುವುದಕ್ಕೂ ಯುದ್ಧರಂಗದಲ್ಲಿ ಎಷ್ಟು ಚೆನ್ನಾಗಿ ಕಲಿತುವೋ! ವ|| ಹಾಗೆ ಪ್ರತಿಭಟಿಸಿದ ಸೈನ್ಯವೆಲ್ಲವನ್ನೂ ಯಮನ ಸೈನ್ಯಕ್ಕೆ ನಿಯಮಿತ ನಿತ್ಯಾಹಾರ(?)ವನ್ನು ಕೊಡುವ ಹಾಗೆ ಕೊಟ್ಟು ನಿಂತಿರುವ ಅಭಿಮನ್ಯುವನ್ನು ಕಂಡು ಪರಾಕ್ರಮಕ್ಕೂ ಸಂಪ್ರದಾಯಕ್ಕೂ ಸ್ಪರ್ಧೆಮಾಡುತ್ತಿದ್ದ ದುರ್ಯೋಧನನ ಮಕ್ಕಳಾದ ಲಕ್ಷಣನೇ ಮೊದಲಾದ ನೂರುಮಂದಿಯೂ ಒಟ್ಟಾಗಿ ಬಂದು ತಾಗಿದರು. ೯೫. ಸರದಿಯ ಪ್ರಕಾರ ಬಿಲ್ಲನ್ನೂ ರಥದ ಕುದುರೆಯನ್ನೂ ಸಾರಥಿಯನ್ನೂ ಹೊಡೆಹೊಡೆದು ಕತ್ತರಿಸುತ್ತ ಆರು, ಏಳು, ಎಂಟು, ಒಂಬತ್ತು, ಹತ್ತು ಎಂಬ ಸಂಖ್ಯೆಯ ಸಿದ್ಧವಾದ ಬಾಣಗಳಿಂದ ನಾಟಿಕೊಳ್ಳುವ ಹಾಗೆ ಮಾಡಿ ಎಲ್ಲ ಶರೀರಗಳೂ ಹಾಳು (ಪದ್ದು -ಪೊಳ್ಳು) ಎನ್ನುವ ಹಾಗೆ ಆರ್ಭಟ ಮಾಡಿ ಹೊಡೆಯಲು ಕಿರೀಟದ ರತ್ನಸಮೂಹದ ಕಾಂತಿಯಿಂದ ಪ್ರಕಾಶರಾದ ನೂರ್ವರು ಕುಮಾರರು ಹೊಂಬಾಳೆಯ ಮರಗಳು ಸರದಿಯ ಮೇಲೆ ಬೀಳುವ ಹಾಗೆ ಬಿದ್ದರು. ವ|| ಆಗ ದುರ್ಯೋಧನನ

ಕಂ॥ ಒಂದೆ ಸರಲಿಂದಮವನೆರ್ದೆ
ಯಂ ದೊಕ್ಕನೆ ತಿಣ್ಣಮೆಚ್ಚು ಕೊಲಲೊಲ್ದನೆ ಸಂ ।
ಕ್ರಂದನ ನಂದನ ತನಯಂ
ತಂದೆಯ ಪೂಣ್ಕೆಯನೆ ನೆನೆದು ದುಶ್ಶಾಸನನಂ ॥ ೯೬

ವ॥ ಆಗಳ್ ಕಾನೀನಸೂನು ವೃಷಸೇನನೇನುಂ ಮಾಣದೆ ಕಾದುತ್ತಿರ್ದನನ್ನೆಗಮಿತ್ತ ನರನಂದನನ ಬೞಿವೞಿಯಂ ತಗುಳ್ದು ಗೞಿವೞಿಯ ಪಾವಿನಂತೆ ಚಕ್ರವ್ಯೂಹಮಂ ಪುಗಲೆಂದು ಬರ್ಪ ದ್ರುಪದ ವಿರಾಟ ಧೃಷದ್ಯುಮ್ನ ಭೀಮಸೇನ ಸಹದೇವ ನಕುಲ ಯುಧಿಷ್ಠಿರ ಘಟೋತ್ಕಚಾದಿಗಳೊಡನೆ ಮಲ್ಲಾಮಲ್ಲಿಯಾಗಿ ಕಾದುವ ಕುಂಭಸಂಭವನಲ್ಲಿಗೆ ದುರ್ಯೋಧನಂ ಬಂದು ನಮ್ಮ ಬಲಮೆಲ್ಲಮಭಿಮನ್ಯುವಿನಂಬಿನ ಮೊನೆಯೊಳ್ ತೂಳ್ದು ತೆರಳ್ದೋಡಿದಪ್ಪುದು ನಿಮಗಲ್ಲಿ ಕಾಳೆಗಮತಿಭರಮೇಗೆಯ್ವಮೆನೆ ಸಿಂಧುರಾಜನಿಂದಿನನುವರಕೀಯೆಡೆಯೊಳ್ ನಿತಾದೊಡಮೀಶ್ವರ ವರಪ್ರಸಾದದೊಳಾನೆ ಸಾಲ್ವೆನೆಂದಿಂತೆಂದಂ-

ಚಂ॥ ಉಱದಿದಿರಾಂತು ನಿಂದ ರಿಪುಸೈನ್ಯಮನಾಹವರಂಗದಲ್ಲಿ ತ
ತ್ತಱದಱದಿಕ್ಕಲಾಂ ನೆಱವೆನಿನ್ನಿರವೇಡೊಡಗೊಂಡು ಪೋಗು ನಿ ।
ನ್ನಱಕೆಯ ಕುಂಭಸಂಭವನನೆಂದೊಡೆ ಪಾಂಡವಸೈನ್ಯಮಂ ಕಱು
ತ್ತಿಱವನಿತೊಂದಳುರ್ಕೆ ನಿನಗೇತಱಿನಾದುದೊ ಪೇೞ್ ಜಯದ್ರಥಾ ॥ ೯೭

ಮಕ್ಕಳ ಸಾವನ್ನು ನೋಡಿ ನಮ್ಮಣ್ಣನ ಮುಖವನ್ನು ಯಾವ ಮುಖದಲ್ಲಿ ನೋಡಲಿ ಎಂದು ದುಶ್ಶಾಸನನು ಬಂದು ಮೇಲೆ ಬಿದ್ದನು. ೯೬. ಒಂದೇ ಬಾಣ ಅವನ ಎದೆಯನ್ನು ದೊಕ್ಕೆಂದು ತೀಕ್ಷ್ಣವಾಗಿ ಹೊಡೆದು ತಂದೆಯಾದ ಭೀಮನ ಪ್ರತಿಜ್ಞೆಯನ್ನು ಜ್ಞಾಪಿಸಿಕೊಂಡು ಅಭಿಮನ್ಯುವು ದುಶ್ಶಾಸನನನ್ನು ಕೊಲ್ಲಲು ಒಪ್ಪದವನಾದನು. ವ॥ ಆಗ ಕರ್ಣನ ಮಗನಾದ ವೃಷಸೇನನು ಒಂದೇ ಸಮನಾಗಿ ಕಾದುತ್ತಿದ್ದನು. ಅಷ್ಟರಲ್ಲಿ ಈ ಕಡೆ ಅಭಿಮನ್ಯುವು ಬಂದ ದಾರಿಯನ್ನೇ ಹಿಡಿದು ಬಿದುರುಗಣೆಯ ಮೇಲಿರುವ ಹಾವಿನಂತೆ ಚಕ್ರವ್ಯೂಹವನ್ನು ಪ್ರವೇಶಿಸಬೇಕೆಂದು ಬರುತ್ತಿರುವ ದ್ರುಪದ, ವಿರಾಟ, ಧೃಷ್ಟದ್ಯುಮ್ನ, ಭೀಮಸೇನ, ಸಹದೇವ, ನಕುಲ, ಯುಧಿಷ್ಠಿರ, ಘಟೋತ್ಕಚನೇ ಮೊದಲಾದವರೊಡನೆ ದ್ವಂದ್ವಯುದ್ಧದಿಂದ ಯುದ್ಧಮಾಡುತ್ತಿರುವ ದ್ರೋಣನಲ್ಲಿಗೆ ದುರ್ಯೋಧನನು ಬಂದು ನಮ್ಮ ಸೈನ್ಯವೆಲ್ಲ ಅಭಿಮನ್ಯುವಿನ ಬಾಣದ ತುದಿಯಲ್ಲಿ ತೂಗಲ್ಪಟ್ಟು ಚದುರಿ ಓಡಿಹೋಗುತ್ತಿದೆ. ನಿಮಗೆ ಅಲ್ಲಿ ಕಾಳಗವು ಬಹಳ ಜೋರಾಗಿದೆ. ಏನು ಮಾಡೋಣ ಎಂದು ಕೇಳಿದನು. ಸೈಂಧವನು ಈ ದಿನ ಯುದ್ಧಕ್ಕೆ ಹೇಗಾದರೂ ಈಶ್ವರನ ಪ್ರಸಾದದಿಂದ ಈ ಸಂದರ್ಭದಲ್ಲಿ ನಾನೇ ಸಮರ್ಥನಾಗುತ್ತೇನೆ ಎಂದು ಹೀಗೆ ಹೇಳಿದನು. ೯೭. ವೇಗವಾಗಿ ಪ್ರತಿಭಟಿಸಿ ನಿಂತಿರುವ ಶತ್ರುಸೈನ್ಯವನ್ನು ಯುದ್ಧರಂಗದಲ್ಲಿ ಚೂರು ಚೂರಾಗಿ ಕತ್ತರಿಸಿ ತರಿದಿಕ್ಕಲು ನಾನು ಸಮರ್ಥನಾಗಿದ್ದೇನೆ. ಇನ್ನು ನೀನು ಇಲ್ಲಿರಬೇಕಾಗಿಲ್ಲ. ಪ್ರಸಿದ್ಧನಾದ ನಿನ್ನ ದ್ರೋಣನನ್ನೂ ಜೊತೆಯಲ್ಲಿಯೇ ಕರೆದುಕೊಂಡುಹೋಗು ಎಂದನು. ಅದಕ್ಕೆ ರಾಜರಾಜನು 'ಎಲೈ ಸೈಂಧವನೇ ಪಾಂಡವ ಸೈನ್ಯವನ್ನು ಗುರಿಯಿಟ್ಟು ಕತ್ತರಿಸುವ ಅಷ್ಟೊಂದು ಪರಾಕ್ರಮವು ನಿನಗೆ ಹೇಗೆ ಬಂದಿತು'

ವ|| ಎನೆ ಜಯದ್ರಥನಿಂತೆಂದಂ-

ಮ|| ನರನೊಳ್ ಮುನ್ನಗಪಟ್ಟುದೊಂದಟಿಲೊಳಾಂ ಕೈಳಾಸ ಶೈಳೇಶನಂ
ಪಿರಿದುಂ ಭಕ್ತಿಯೊಳರ್ಚಿಸುತ್ತುಮಿರೆ ತದ್ದೇವಾಧಿಪಂ ಮೆಚ್ಚಿದೆಂ ।
ನರನೊರ್ವಂ ಪೊಱಗಾಗಲೊಂದು ದಿವಸಂ ಕೌಂತೇಯರಂ ಕಾದಿ ಗೆಲ್
ನಿರುತಂ ನೀನೆನೆ ಪೆತ್ತೆನಾಂ ಬರಮನದ್ರೀಂದ್ರಾತ್ಮಜಾಧೀಶನೊಳ್ ॥ ೯೮

ವ|| ಎಂದ ಸಿಂಧುರಾಜನ ನುಡಿಗೆ ರಾಜಾಧಿರಾಜನೆರಡು ಮುಯ್ವುಮಂ ನೋಡಿ-

ಉ|| ನಿನ್ನನೆ ನಚ್ಚಿ ಪಾಂಡವರೊಳಾಂತಿಱಿಯಲ್ ತಱಿಸಂದು ಪೂಣ್ದೆನಾಂ
ನಿನ್ನ ಶರಾಳಿಗಳ್ಗಗಿದು ನಿಂದುವು ಪಾಂಡವ ಸೈನ್ಯಮೆಂದೊಡಿಂ ।
ನಿನ್ನ ಭುಜಪ್ರತಾಪದಳವಾರ್ಗಮಸಾಧ್ಯಮಾಯ್ತದೇಂ
ನಿನ್ನಳವಿಂದಮಿನ್ನೆನಗೆ ಸಾರ್ದುದರಾತಿ ಜಯಂ ಜಯದ್ರಥಾ ॥ ೯೯

ವ|| ಎಂದು ಪೊಗೞ್ದು ಸಿಂಧುರಾಜನನಿರಲ್ವೇೞ್ದು ಕುಂಭಸಂಭವನುಂ ತಾನುಮಭಿಮನ್ಯುವಿನ ಸಂಗ್ರಾಮರಂಗಮನಯ್ದೆ ವಂದು-

ಚಂ|| ಉಡಿದ ರಥಂಗಳಿಟ್ಟೆಡೆಗಳೊಳ್ ಮಕುಟಂಗಳ ರತ್ನದೀಪ್ತಿಗಳ್
ಪೊಡರ್ವಿನಮಟ್ಟೆ ತಟ್ಟೆದ ನಿಜಾತ್ಮಜರಂ ನಡೆ ನೋಡಿ ಕಣ್ಣ ನೀ ।
ರೊಡನೊಡನುರ್ಚಿ ಪಾಯೆ ಮುಳಿಸಿಂದದನೊಯ್ಯನೆ ತಾಳ್ದಿ ಕಾಯ್ಪಿನೊಳ್
ಕಡಗಿ ಜಗಂಗಳಂ ನೊಣೆದು ನುಂಗಲುಮಾಟಿಸಿದಂ ಸುಯೋಧನಂ ॥೧೦೦

ಎಂದು ಕೇಳಿದನು. ವ|| ಎನ್ನಲು ಸೈಂಧವನು ಹೀಗೆಂದನು. ೯೮. ಅರ್ಜುನನಲ್ಲಿ ಮೊದಲು ಸೆರೆಸಿಕ್ಕಿದ ಒಂದು ವ್ಯಥೆಯಿಂದ ನಾನು ಕೈಲಾಸಾಧಿಪತಿಯಾದ ಈಶ್ವರನನ್ನು ಭಕ್ತಿಯಿಂದ ಪೂಜೆ ಮಾಡುತ್ತಿರಲು ಆ ದೇವತೆಗಳ ಒಡೆಯನಾದ ಈಶ್ವರನು 'ಮೆಚ್ಚಿದ್ದೇನೆ', ಅರ್ಜುನನೊಬ್ಬನನ್ನು ಬಿಟ್ಟು ಉಳಿದ ಪಾಂಡವರೊಡನೆ ನೀನು ಕಾದಿ ಒಂದು ದಿವಸ ನಿಶ್ಚಯವಾಗಿ ಗೆಲ್ಲು ಎನ್ನಲು ಆ ವರವನ್ನು ಪಾರ್ವತಿಪತಿಯಿಂದ ಪಡೆದೆನು. ವ|| ಎಂದು ಹೇಳಿದ ಸೈಂಧವನ ಮಾತಿಗೆ ಚಕ್ರವರ್ತಿಯಾದ ದುರ್ಯೋಧನನು (ತನ್ನ) ಎರಡು ಹೆಗಲುಗಳನ್ನು ನೋಡಿಕೊಂಡು ಸಂತೋಷಪಟ್ಟನು. ವ|| ನಿನ್ನನ್ನು ನಂಬಿಕೊಂಡೇ ಪಾಂಡವರನ್ನು ಪ್ರತಿಭಟಿಸಿ ಯುದ್ಧಮಾಡಲು ನಿಷ್ಕರ್ಷಿಸಿ ಪ್ರತಿಜ್ಞೆಮಾಡಿದೆನು. ನಿನ್ನ ಬಾಣಗ ಸಮೂಹಗಳಿಗೆ ಹೆದರಿ ಪಾಂಡವಸೈನ್ಯವು ನಿಂತಿತು ಎಂದಾಗ ನಿನ್ನ ತೋಳಿನ ಬಲದ ಪ್ರಮಾಣ ಮತ್ತಾರಿಗೂ ಅಸಾಧ್ಯವಾಯಿತು. ಸೈಂಧವನೇ ನಿನ್ನ ಪರಾಕ್ರಮದಿಂದ ನನಗೆ ಶತ್ರುಜಯವುಂಟಾಯಿತು ವ|| ಎಂದು ಹೊಗಳಿ ಸೈಂಧವನನ್ನು ಅಲ್ಲಿಯೇ ಇರುವಂತೆ ಹೇಳಿ ದ್ರೋಣನೂ ತಾನೂ ಅಭಿಮನ್ಯುವಿನ ಯುದ್ಧರಂಗವನ್ನು ಸೇರಿದರು. ೧೦೦. ಮುರಿದ ತೇರುಗಳ ಸಂದಿಯಲ್ಲಿ ಕಿರೀಟಗಳ ರತ್ನಕಾಂತಿಗಳು ಹೊಳೆಯುತ್ತಿರಲು ನಾಶವಾಗಿ ಸತ್ತುಬಿದ್ದಿರುವ ತನ್ನ ಮಕ್ಕಳುಗಳನ್ನು ದುರ್ಯೋಧನನು ನಿಟ್ಟಿಸಿ ನೋಡಿದಾಗ ಕಣ್ಣೀರು ಒಡನೆಯೇ ಚಿಮ್ಮಿ ಹರಿಯಿತು. ಅದನ್ನು ನಿಧಾನವಾಗಿ ಸಹಿಸಿಕೊಂಡು ಕೋಪದಿಂದ ರೇಗಿ ಲೋಕವನ್ನೆಲ್ಲ

ವ॥ ಆಗಳ್ ದ್ರೋಣ ದ್ರೋಣಪುತ್ರ ಕೃಪ ಕೃತವರ್ಮ ಕರ್ಣ ಶಲ್ಯ ಶಕುನಿ ದುಶ್ಶಾಸನ ವೃಷಸೇನಾದಿಗಳಾಳ್ದನ ಮುಳಿದ ಮೊಗಮನಱಿದು ಧರ್ಮಯುದ್ಧಮಂ ಬಿಸುಟು ನರನಂದನನ ರಥಮಂ ಸುತ್ತಿ ಮುತ್ತಿಕೊಂಡು-

ಕಂ॥ ತೇರಂ ಕುದುರೆಯನೆಸಗುವ
ಸಾರಥಿಯಂ ಬಿಲ್ಲನದಱ ಗೊಣೆಯುಮನುಱದಾ ।
ರ್ದೋರೊರ್ವರೊಂದನೆಚ್ಚೊಡೆ
ಬೀರಂ ಗದೆಗೊಂಡು ಬೀರರಂ ಬೆಂಕೊಂಡಂ ॥ ೧೦೧

ಬೆಂಕೊಳೆ ಕಳಿಂಗ ರಾಜನ
ನೂಂಕಿದ ಕರಿಘಟೆಯನುಡಿಯೆ ಬಡಿ ಬಡಿದೆತ್ತಂ ।
ಕಿಂಕೊಟಿಮಾಟ್ಪುದುಮುಱದೆ
ಚ್ಚಂ ಕರ್ಣಂ ನಿಶಿತ ಶರದಿನೆರಡುಂ ಕರಮಂ ॥ ೧೦೨

ಕರಮೆರಡುಂ ಪಱೆವುದುಮಾ
ಕರದಿಂದಂ ತನ್ನ ಕುನ್ನಗೆಯ್ಯೊಳೆ ಕೊಂಡು
ದ್ಧುರ ರಥಚಕ್ರದಿನಿಟ್ಟಂ
ತಿರಿಪಿ ನರಪ್ರಿಯ ತನೂಜನಕ್ಷೋಹಿಣಿಯಂ ॥ ೧೦೩

ವ॥ ಆಗಳ್ ದುಶ್ಶಾಸನನ ಮಗಂ ಗದಾಯುಧನಟಿಯೆ ನೊಂದ ಸಿಂಗದ ಮೇಲೆ ಬೆರಗಱಿಯದ ಬೆಳ್ವಾಳ್ ಪಾಯ್ವಂತೆ ಕಿಟ್ಟಿ ಬಾಳ್ವಿರಸು ಪಾಯ್ವುದುಂ-

ಚಪ್ಪರಿಸಿ ನುಂಗಲು ಆಶಿಸಿದನು. ವ॥ ಆಗ ದ್ರೋಣ, ಅಶ್ವತ್ಥಾಮ, ಕೃಪ, ಕೃತವರ್ಮ, ಕರ್ಣ,ಶಲ್ಯ, ಶಕುನಿ, ದುಶ್ಶಾಸನ, ವೃಷಸೇನನೇ ಮೊದಲಾದವರು ಒಡೆಯನಾದ ದುರ್ಯೋಧನನ ಕೋಪದಿಂದ ಕೂಡಿದ ಮುಖವನ್ನು ನೋಡಿ ತಿಳಿದು ಧರ್ಮಯುದ್ಧವನ್ನು ಬಿಸಾಡಿ (ಬಿಟ್ಟು) ಅಭಿಮನ್ಯುವಿನ ರಥವನ್ನು ಸುತ್ತಿ ಮುತ್ತಿಕೊಂಡರು. ೧೦೧. ತೇರನ್ನೂ ಕುದುರೆಯನ್ನೂ ಅದನ್ನು ನಡೆಸುವ ಸಾರಥಿಯನ್ನೂ ಬಿಲ್ಲನ್ನೂ ಅದರ ಹೆದೆಯನ್ನೂ ಸಾವಕಾಶವಾಡದೆ ಒಬ್ಬೊಬ್ಬರೊಂದನ್ನು ಹೊಡೆಯಲು ವೀರನಾದ ಅಭಿಮನ್ಯುವು ಗದೆಯನ್ನು ತೆಗೆದುಕೊಂಡು ವೀರರನ್ನು ಬೆನ್ನಟ್ಟಿದನು. ೧೦೨. ಕಳಿಂಗ ರಾಜನು ಮುಂದಕ್ಕೆ ತಳ್ಳಿದ ಆನೆಯ ಸಮೂಹವನ್ನು ಒಡೆಯುವ ಹಾಗೆ ಬಡಿಬಡಿದು ಎಲ್ಲೆಲ್ಲಿಯೂ ಸಂಕಟಪಡಿಸಲು ಕರ್ಣನು ವೇಗವಾಗಿ ಬಂದು ಹರಿತವಾದ ಬಾಣದಿಂದ ಅಭಿಮನ್ಯುವಿನ ಎರಡುಕೈಗಳನ್ನು ಹೊಡೆದನು (ಕತ್ತರಿಸಿದನು). ೧೦೩. ಕೈಗಳೆರಡೂ ಕತ್ತರಿಸಿಹೋದರೂ ಅಭಿಮನ್ಯುವು ವೇಗವಾಗಿ ತನ್ನ ಮೋಟುಗೈಗಳಿಂದಲೇ ಕಳಚಿ ಬಿದ್ದಿದ್ದ ಗಾಲಿಯೊಂದನ್ನು ತೆಗೆದುಕೊಂಡು ಸುತ್ತಿ ತಿರುಗಿ ಪ್ರಯೋಗಮಾಡಿ ಒಂದಕ್ಷೋಹಿಣೀ ಸೈನ್ಯವನ್ನು ಹೊಡೆದು ಹಾಕಿದನು. ವ॥ ಆಗ ದುಶ್ಶಾಸನನ ಮಗನಾದ ಗದಾಯುಧನು ಸಾಯುವ ಹಾಗೆ ಯಾತನೆಪಡುತ್ತಿರುವ ಸಿಂಹದ ಮೇಲೆ ಅವಿವೇಕಿಯಾದ ದಡ್ಡನು ಹಾಯುವ ಹಾಗೆ ಒರೆಯಿಂದ ಹೊರೆಗೆ ಕಿತ್ತ (ಸೆಳೆದ)

ಚಂ॥ ಹರಿ ನಿಜಯೋಗದಿಂದಱಿದು ತನ್ನಳಿಯಂ ಲಯಮಾದುದಂ ಭಯಂ
ಕರ ಕಪಿಕೇತನಂಗಱಿಪಲೊಲ್ಲದೆ ಬಂದು ಶಮಂತ ಪಂಚಕಂ ।
ಬರಮಿೞಿದಲ್ಲಿ ಸಂಗರ ಪರಿಶ್ರಮಮಂ ಕಳೆಯೆಂದು ಮಯ್ದುನಂ
ಬೆರಸು ಜಳಾವಗಾಹದೊಳಿರುತ್ತೆ ಮಹಾಕಪಟಪ್ರಪಂಚದಿಂ ॥ ೧೧೦

ಕಂ॥ ಜಳಮಂತ್ರ ಮಂತ್ರಿತಾಶಯ
ಜಳದೊಳ್ ನರನಿನಿಸು ಮುೞುಗೆ ನಿಜಸುತನ ಸುಹೃ ।
ದ್ಬಳ ಜಳನಿಧಿಯೊಳ್ ಫಲ್ಗುಣ
ಮುೞುಗಿದನೆಂಬಿದನೆ ನುಡಿದು ಹರಿ ಮುೞುಗುವುದುಂ ॥ ೧೧೧

ಭೋಂಕನೆ ಕೇಳ್ದೆರ್ದೆ ಕದಡಿ ಕ
ಲಂಕಿದ ಬಗೆವೆರಸು ನೆಗೆದು ನಾಲ್ಕುಂ ದೆಸೆಯಂ ।
ಶಂಕಾಕುಳಿತಂ ನೋಡಿ ಮ
ನಂ ಕೊಳುಕೆನೆ ಮುೞುಗಿ ನೆಗೆವ ಹರಿಯಂ ನುಡಿದಂ ॥ ೧೧೨

ಆಕಾಶ ವಚನಮಿದು ಸುತ
ಶೋಕಮನೆನಗಱಿಪಿದಪ್ಪುದಸ್ಮತ್ತನಯಂ ।
ಗೇಕೆಂದಱಿಯೆಂ ಮರಣಮ
ದಾ ಕುರುಪತಿಯಿಂದಮಾದುದಾಗಲೆವೇೞ್ಕುಂ ॥ ೧೧೩

ಇಂದಿನ ಚಕ್ರವ್ಯೂಹಮ
ನಾಂ ದಲಣಂ ಮೆಚ್ಚಲಾಱೆನೆನುತುಂ ರಥಮಂ ।
ಬಂದೇಱಿ ಮಗನ ಮನಕತ
ಮೊಂದುತ್ತರಮೆರ್ದೆಯನಲೆಯೆ ನರನಿಂತೆಂದಂ ॥ ೧೧೪

ಅರ್ಜುನನು ಹಿಂತಿರುಗಿ ಬರುತ್ತಿರಲು ೧೧೦. ಕೃಷ್ಣನು ತನ್ನ ಯೋಗದೃಷ್ಟಿಯಿಂದ ತನ್ನಳಿಯನಾದ ಅಭಿಮನ್ಯುವು ಸತ್ತುದನ್ನು ತಿಳಿದನು. ಅದನ್ನು ಭಯಂಕರಾಕಾರನೂ ಕಪಿಧ್ವಜನೂ ಆದ ಅರ್ಜುನನಿಗೆ ತಿಳಿಸಲಾರದೆ ಶಮಂತಪಂಚಕವೆಂಬ ಕೊಳದವರೆಗೂ ಬಂದನು. ಅಲ್ಲಿ ಇಳಿದು ಯುದ್ಧಾಯಾಸವನ್ನು ಕಳೆಯೋಣ ಬಾ ಎಂದು ಮಯ್ದುನನಾದ ಅರ್ಜುನನೊಡಗೂಡಿ ಅಂದು ಸ್ನಾನಮಾಡುತ್ತಿರುವಾಗ ವಿಶೇಷವಾದ ಕೃತ್ರಿಮದ ರೀತಿಯಲ್ಲಿ ೧೧೧. ಜಲಸ್ತಂಭನಮಂತ್ರದಿಂದ ಮಂತ್ರಿಸಲ್ಪಟ್ಟ ಕೊಳದಲ್ಲಿ ಅರ್ಜುನನು ಸ್ವಲ್ಪ ಮುಳುಗಲು ಕೃಷ್ಣನು 'ಅರ್ಜುನಾ ನಿನ್ನ ಮಗನು ಶತ್ರುಸೇನಾಸಮುದ್ರದಲ್ಲಿ ಮುಳುಗಿದನು' ಎಂದು ಹೇಳಿ ತಾನೂ ಮುಳುಗಿದನು. ೧೧೨. ಥಟ್ಟನೆ (ಈ ಮಾತನ್ನು) ಕೇಳಿ ಎದೆ ಕದಡಿ ಕಲಕಿದ ಮನಸ್ಸಿನಿಂದೊಡಗೂಡಿ ನೀರಿನಿಂದ ಮೇಲೆದ್ದು ಸಂದೇಹದಿಂದ ಕೂಡಿ ನಾಲ್ಕು ದಿಕ್ಕುಗಳನ್ನೂ ನೋಡಿ ಮನಸ್ಸು ಕಳಕ್ಕೆನಲು ಮುಳುಗಿ ಮೇಲೆದ್ದ ಕೃಷ್ಣನನ್ನು ಕೇಳಿದನು. ೧೧೩. ಈ ಅಶರೀರವಾಣಿಯು ಸುತಶೋಕವನ್ನು ನನಗೆ ತಿಳಿಸುತ್ತಿದೆ. ನನ್ನ ಮಗನಿಗೆ ಸಾವು ಆ ದುರ್ಯೋಧನನಿಂದಲೇ ಆಗಿರಬೇಕು. ಏಕಾಯಿತೆಂದು ತಿಳಿಯದವನಾಗಿದ್ದೇನೆ. ೧೧೪. ಈ ದಿನದ ಚಕ್ರವ್ಯೂಹವನ್ನು ನಾನು ಸ್ವಲ್ಪವೂ ಮೆಚ್ಚಲಾರೆ ಎನ್ನುತ್ತ (ನೀರಿನಿಂದೆದ್ದು) ತೇರನ್ನು ಬಂದೇರಿ ಬೀಡಿನ ಕಡೆ

ಕದನದಿನಾಂ ಬರೆ ನಿಚ್ಚಲು
ಮಿದಿರ್ವಂದು ಕೊರಲ್ಗೆ ವಾಯ್ದು ಬಾಯ್ದಾಯೊಳಲಂ ।
ಪಿದಿರ್ಗೊಳೆ ತಂಬುಲಮಂ ಕೊ
ಳ್ಳದೆ ಮಾಣ್ದೀ ಮಗನ ತಡವಿದೇನಸುರಾರೀ ॥ ೧೧೫

ವ॥ ಎನುತ್ತುಂ ಬೀಡನೆಯ್ದೆ ವಂದು ಶೋಕಸಾಗರದೊಳ್ ಮುಳುಗಾಡುವ ಪರಿಜನಮುಂ ತನ್ನ ಮೊಗಮಂ ನೋಡಲ್ ನಾಣ್ಚಿ ತಲೆಯಂ ಬಾಗಿ ನೆಲನಂ ಬರೆಯುತ್ತುಮಿರ್ದ ವೀರಭಟರುಮಂ ಕಂಡು ಮಗನ ಸಾವಂ ನಿಶ್ಚೈಸಿ ರಾಜಮಂದಿರಮಂ ಪೊಕ್ಕು ರಥದಿಂದಮಿೞಿದು ಧರ್ಮಪುತ್ರಂಗಂ ವಾಯುಪುತ್ರಂಗಂ ಪೊಡೆವಟ್ಟು ಕುಳ್ಳಿರ್ಪುದುಮವರ್ ತಲೆಯಂ ಬಾಗಿ ನೆಲನಂ ಬರೆಯುತ್ತುಮಿರೆ ಕಿರೀಟ ಕಂಡಿದೇನೆಂದು ಬೆಸಗೊಳೆ ಧರ್ಮಪುತ್ರನಿಂತೆಂದಂ-

ಮ॥ಸ್ರ॥ ಗುರು ಚಕ್ರವ್ಯೂಹಮಂ ಪಣ್ಣಿದೊಡೆ ಪುಗಲಿದಂ ಬಲ್ಲರಾರೆಂದೊಡಿಂ ನಾ
ನಿರೆ ಮತ್ತಾರ್ ಬಲ್ಲರೆಂದೊರ್ವನೆ ರಿಪುಬಳವಾರಾಶಿಯಂ ಪೊಕ್ಕು ಮಿಕ್ಕಾಂ ।
ತರನಾಟಂದಿಕ್ಕಿ ದುರ್ಯೋಧನನ ತನಯರಂ ನೂರ್ವರಂ ಕೊಂದು ತತ್ಸಂ
ಗರದೊಳ್ ಕಾದೆಮ್ಮನಿಂತಾಂತಿಱಿದು ನಿಜಸುತಂ ದೇವಲೋಕಕ್ಕೆ ಸಂದಂ ॥೧೧೬

ಬಂದನು. ಮಗನ ಬಗೆಗೆ ಮನೋವ್ಯಥೆ ಮನಸ್ಸನ್ನು ವಿಶೇಷವಾಗಿ ಪೀಡಿಸುತ್ತಿರಲು ಅರ್ಜುನನು ಹೀಗೆಂದನು ೧೧೫. ದಿನದಂತೆ ನಾನು ಯುದ್ಧದಿಂದ ಬರಲು ಎದುರಾಗಿ ಬಂದು ಕೊರಳಿಗೆ ಹಾರಿ ಅಪ್ಪಿಕೊಂಡು ನನ್ನ ಬಾಯಿಂದ ತನ್ನ ಬಾಯಿಗೆ ಸುಖವಾಗಿರುವ ಹಾಗೆ ತಾಂಬೂಲವನ್ನು ಕೊಳ್ಳದೇ ಇರುವ ಮಗನ ಈ ಸಾವಕಾಶವಿದೇನು ಕೃಷ್ಣ? ವ॥ ಎನ್ನುತ್ತ ಬೀಡನ್ನು ಸೇರಿ (ಮನೆಯ ಹತ್ತಿರಕ್ಕೆ ಬಂದು) ದುಃಖಸಮುದ್ರದಲ್ಲಿ ಮುಳುಗಾಡುವ ಸೇವಕರನ್ನೂ ತನ್ನ ಮುಖವನ್ನು ನೋಡಲು ನಾಚಿಕೆಯಿಂದ ಕೂಡಿ ತಲೆಯನ್ನು ಬಗ್ಗಿಸಿಕೊಂಡು ನೆಲವನ್ನು ಬರೆಯುತ್ತಿದ್ದ ವೀರಭಟರನ್ನೂ ನೋಡಿ ಮಗನ ಸಾವನ್ನು ನಿಶ್ಚಯಿಸಿದನು. ಅರಮನೆಯನ್ನು ಪ್ರವೇಶಮಾಡಿದನು. ರಥದಿಂದಿಳಿದು ಧರ್ಮರಾಜನಿಗೂ ಭೀಮಸೇನನಿಗೂ ನಮಸ್ಕಾರಮಾಡಿ ಕುಳಿತುಕೊಂಡನು. ಅವರು ತಲೆಯನ್ನು ತಗ್ಗಿಸಿ (ದುಃಖದಿಂದ) ನೆಲವನ್ನು ಬರೆಯುತ್ತಿರಲು ಅರ್ಜುನನು ಇದೇನೆಂದು ಪ್ರಶ್ನೆಮಾಡಿದನು. ಧರ್ಮರಾಜನು ಹೀಗೆ ಹೇಳಿದನು. ೧೧೬. ಗುರುವಾದ ದ್ರೋಣಾಚಾರ್ಯರು ಚಕ್ರವ್ಯೂಹವನ್ನು ರಚಿಸಲು ಇದನ್ನು ಪ್ರವೇಶಿಸಲು ತಿಳಿದವರಾರು ಎಂದು ಕೇಳುತ್ತಿರುವಾಗಲೇ ಮತ್ತಾರು ತಿಳಿದಿದ್ದಾರೆ ಎಂದು ಶತ್ರುಸೇನಾಸಮೂಹವನ್ನು ಒಬ್ಬನೇ ಪ್ರವೇಶಿಸಿದನು. ಮೀರಿ ಪ್ರತಿಭಟಿಸಿದವರನ್ನು ಕೊಂದು ದುರ್ಯೋಧನನ ನೂರು ಜನ ಮಕ್ಕಳನ್ನೂ ಸಂಹರಿಸಿ ಆ ಯುದ್ಧದಲ್ಲಿ ನಮ್ಮನ್ನು ರಕ್ಷಿಸಿ ಹೀಗೆ ಎದುರಾಗಿ ಯುದ್ಧಮಾಡಿ ನಿನ್ನ ಮಗನಾದ ಅಭಿಮನ್ಯುವು ದೇವಲೋಕವನ್ನು ಸೇರಿದನು.

ಮ|| ಬರಮಂ ಬಾಳ ಶಶಾಂಕಮೌಳಿ ಕುಡೆ ಪೆತ್ತೊಂದುರ್ಕಿನಿಂದೋವದಾಂ
ತು ರಣೋತ್ಸಾಹದಿನೆಮ್ಮನೊರ್ವನೆ ಭರಂಗೆಯ್ದತ್ತ ದುರ್ಯೋಧನಂ ।
ಬೆರಸಾ ದ್ರೋಣನನಟ್ಟಿ ಸಿಂಧು ವಿಷಯಾಧೀಶಂ ಪೊದಟ್ಟೊಂದು ಮ
ಚ್ಚರದಿಂ ನಿನ್ನ ತನೂಜನಂ ಕೊಲಿಸಿದಂ ಮತ್ತಾಂತವರ್ ಕೊಲ್ವರೇ ॥ ೧೧೭

ವ|| ಎಂಬುದುಂ ಪ್ರಚಂಡ ಕೋಪ ಪಾವಕ ಪ್ರಶಮಿತ ಶೋಕರಸನುಮುನ್ನತ ಲಲಾಟ ತಟ ಘಟಿತ ಭೀಷಣ ಭ್ರುಕುಟಿಯುಂ ಕಲ್ಪಾಂತ ದಿನಕರ ದುರ್ನಿರೀಕ್ಷನುಮುತ್ಪಾತ ಮಾರುತನಂತೆ ಸಕಲ ಭೂಭೃತ್ಕಂಪಕಾರಿಯುಂ ವಿಂಧ್ಯಾಚಳದಂತೆ ವರ್ಧಮಾನೋತ್ಸೇಧನು ಮಂಧಕಾರಾತಿಯಂತೆ ಭೈರವಾಕಾರನುಮಾಗಿ-

ಮ|| ರಸೆಯಿಂ ಭೂತಳದಿಂ ಕುಳಾದ್ರಿ ದಿಗ್ದಂತಿಯಿಂ ವಾರ್ಧಿಯಿಂ
ದೆಸೆಯಿಂದಾಗಸದಿಂದಜಾಂಡ ತಟದಿಂದತ್ತೆಲ್ಲಿ ಪೊಕ್ಕಿರ್ದುಮಿಂ ।
ಮಿಸುಕಲ್ ತೀರ್ಗುಮೆ ವೈರಿಗೆನ್ನ ಸುತನಂ ಕೊಂದಿರ್ದುದಂ ಕೇಳ್ದು ಸೈ
ರಿಸಿ ಮಾಣ್ದಿರ್ದಪೆನಿನ್ನುಮೆಂದೊಡಿದನಾಂ ಪೇಟೀತಱಿಕೊಳ್ ನೀಗುವೆಂ ॥ ೧೧೮

ಕಂ|| ಬಳೆದ ಸುತಶೋಕದಿಂದೀ
ಗಳೆ ಸುರಿಗುಮೆ ಸುರಿಯವಾ ಜಯದ್ರಥನ ಚಿತಾ ।
ನಳನಿಂದಮೊಗೆದ ಪೊಗೆಗಳ್
ಕೊಳೆ ಸುರಿವೊಡೆ ಸುರಿವುವೆನ್ನ ನಯನಜಲಂಗಳ್ ॥ ೧೧೯

೧೧೭. ಸೈಂಧವನು ಈಶ್ವರನಿಂದ ಪಡೆದ ವರದ ಅಹಂಕಾರದಿಂದ ದಾಕ್ಷಿಣ್ಯರಹಿತನಾಗಿ ನಮ್ಮನ್ನು ಎದ್ದು ಎದುರಿಸಿ ಆರ್ಭಟ ಮಾಡುತ್ತ, ದುರ್ಯೋಧನನೊಡನೆ ದ್ರೋಣನನ್ನು ಬೇರೆಕಡೆಗೆ ಕಳುಹಿಸಿ ತನ್ನಲ್ಲಿ ನೆಲೆಗೊಂಡಿದ್ದ ಮತ್ಸರದಿಂದ ನಿನ್ನ ಮಗನನ್ನು ಕೊಲ್ಲಿಸಿದನು. ಬೇರೆಯವರು ಅಭಿಮನ್ಯುವನ್ನು ಕೊಲ್ಲಲು ಸಾಧ್ಯವೇ? ವ|| ಎನ್ನಲು ಅತ್ಯಂತ ಘೋರವಾದ ಕೋಪಾಗ್ನಿಯಿಂದ ಶೋಕರಸವು ಆರಿಹೋಯಿತು. ಎತ್ತರವಾದ ಮುಖದಲ್ಲಿ ಹುಬ್ಬು ಭಯಂಕರವಾಗಿ ಗಂಟಿಕ್ಕಿತು. ಪ್ರಳಯಕಾಲದ ಸೂರ್ಯನಂತೆ (ಕಣ್ಣಿನಿಂದ) ನೋಡಲಾಗದವನೂ ವಿಪತ್ಕಾಲದ ಗಾಳಿಯಂತೆ ಸಮಸ್ತ ಬೆಟ್ಟಗಳನ್ನೂ ನಡುಗಿಸುವವನೂ ವಿಂಧ್ಯಪರ್ವತದಂತೆ ಎತ್ತರವಾಗಿ ಬೆಳೆಯುತ್ತಿರುವವನೂ ಈಶ್ವರನಂತೆ ಭಯಂಕರಾಕಾರವುಳ್ಳವನೂ ಆದನು. ೧೧೮. ಪಾತಾಳದಿಂದಲೂ ಭೂಮಂಡಲದಿಂದಲೂ ಕುಲಪರ್ವತಗಳ ಸಮೂಹದಿಂದಲೂ ದಿಗ್ಗಜಗಳಿಂದಲೂ ಸಮುದ್ರಗಳಿಂದಲೂ ದಿಕ್ಕುಗಳಿಂದಲೂ ಬ್ರಹ್ಮಾಂಡದಿಂದಲೂ ಆಚೆಯ ಕಡೆ ಎಲ್ಲಿ ಹೊಕ್ಕಿದ್ದರೂ ನನ್ನ ಶತ್ರುವಿಗೆ (ಅಲ್ಲಿಂದ) ಅಲ್ಲಾಡಲು ಸಾಧ್ಯವೇ? ನನ್ನ ಮಗನನ್ನು ಕೊಂದಿರುವುದನ್ನು ಕೇಳಿಯೂ ಸೈರಿಸಿಕೊಂಡು ಇನ್ನೂ ಸುಮ್ಮನಿದ್ದೇನೆ ಎಂದರೆ ಈ ದುಃಖವನ್ನು ನಾನು ಮತ್ತಾವುದರಿಂದ ಪರಿಹಾರಮಾಡಿಕೊಳ್ಳಲಿ. ೧೧೯. ಅಭಿವೃದ್ಧಿಯಾಗುತ್ತಿರುವ ಪುತ್ರಶೋಕದಿಂದ ಈಗ ನನ್ನ ಕಣ್ಣೀರು ಸುರಿಯುತ್ತಿಲ್ಲ, ಸುರಿಯುವುದಿಲ್ಲ; ಆ ಸೈಂಧವನ ಚಿತಾಗ್ನಿಯಿಂದ ಹುಟ್ಟಿದ ಹೊಗೆಗಳು ಸುತ್ತಿ ಆವರಿಸಲು

ಬಿಸಜಭವನಕ್ಕೆ ಮೃಡನ
ಕ್ಕಸುರಾಂತಕನಕ್ಕೆ ಕಾವೊಡಂ ನಾಳಿನೊಳ ।
ರ್ವಿಸೆ ಕೊಂದು ಸಿಂಧುರಾಜನ
ಬಸಿಱಂ ಪೋೞ್ದೆನ್ನ ಮಗನನಾಂ ತೆಗೆಯದಿರೆಂ ॥ ೧೨೦

ಕೊಂದೆನ್ನ ಮಗನನಿಂ ಭಯ
ದಿಂದಂ ರಸೆವೊಕ್ಕುಮಜನ ಗುಂಡಿಗೆವೊಕ್ಕುಂ ।
ಮಂದರಧರನೀ ಪೊರ್ಕುೞ
ಪೊಂದಾವರೆವೊಕ್ಕು ಮೇಣವಂ ಬರ್ದುಕುವನೇ ॥ ೧೨೧

ಚಂ॥ ಪಡೆ ಪಡೆಮೆಚ್ಚೆಗಂಡನೆನೆ ಸಂದರಿಕೇಸರಿಯೆಂಬಗುರ್ವು ನೇ
ರ್ಪಡೆ ನೆಗೞ್ದಾನಣಂ ಸೆಡೆದು ಮಾಣ್ಪೆನೆ ನಾಳೆ ದಿನೇಶನಸ್ತದ ।
ತ್ತುಡುಗದ ಮುನ್ನ ಸೈಂಧವನಗುರ್ವಿಸೆ ಕೊಲ್ಲದೊಡೇನೊ ಗಾಂಡಿವಂ
ಬಿಡಿದೆನೆ ಚಿಃ ತೊವಲ್ವಿಡಿದೆನಲ್ಲೆನೆ ವೈರಿಗೆ ಯುದ್ಧರಂಗದೊಳ್ ॥ ೧೨೨

ವ॥ ಎಂದು ನೃಪ ಪರಮಾತ್ಮಂ ಕೃತಪ್ರತಿಜ್ಞನಾದುದಂ ಸೈಂಧವನ ಸಜ್ಜನಂ ದುರ್ಯೋದನನ ತಂಗೆ ದುಶ್ಶಳೆ ಕೇಳ್ದು ಮಲಮಲ ಮಱುಗಿ ತಮ್ಮಣ್ಣನಲ್ಲಿಗೆ ವಂದು ಕಾಲ ಮೇಲೆ ಕವಿದು ಪಟ್ಟು-

ಕಂ॥ ತನ್ನ ಸುತನಟಿಯಲಟಿಯಲ್
ನಿನ್ನಯ ಮಯ್ದುನನನರ್ಜುನಂ ಪೂಣ್ದನದ ।
ರ್ಕಾನ್ನಡುಗಿ ಬಂದೆನಿನ್ನೀ
ನೆನ್ನೋಲೆಯ ಕಡಗದಟಿವನೇಂ ನೋಡಿದಪಾ ॥ ೧೨೩

ಆಗ ಮಾತ್ರ ನನ್ನ ಕಣ್ಣೀರು ಸುರಿಯುವುದು. ೧೨೦. ಬ್ರಹ್ಮನಾಗಲಿ ರುದ್ರನಾಗಲಿ ವಿಷ್ಣುವಾಗಲಿ ರಕ್ಷಿಸಿದರೂ ನಾಳೆ ಭಯಂಕರವಾದ ರೀತಿಯಲ್ಲಿ ಕೊಂದು ಆ ಸೈಂಧವನ ಹೊಟ್ಟೆಯನ್ನು ಸೀಳಿ ನನ್ನ ಮಗನನ್ನು ತೆಗೆಯದೆ ಇರುವುದಿಲ್ಲ. ೧೨೧. ನನ್ನ ಮಗನನ್ನು ಕೊಂದು ಭಯದಿಂದ ಇನ್ನು ಅವನು ಪಾತಾಳವನ್ನು ಪ್ರವೇಶಿಸಿದರೂ ಬ್ರಹ್ಮನ ಕಮಂಡಲವನ್ನು ಪ್ರವೇಶಿಸಿದರೂ ವಿಷ್ಣುವಿನ ನಾಭಿಕಮಲವನ್ನು ಸೇರಿದರೂ ಪುನಃ ಆ ಸೈಂಧವನು ಬದುಕಬಲ್ಲನೇ? ೧೨೨. ಸೈನ್ಯವು ನನ್ನನ್ನು 'ಪಡೆಮೆಚ್ಚೆಗಂಡ' ಎನ್ನುತ್ತಿರುವಾಗ ಪ್ರಸಿದ್ಧವಾದ ಅರಿಕೇಸರಿಯೆಂಬ ಪ್ರಶಸ್ತಿಯಿಂದ ನೇರವಾಗಿ ಪ್ರಸಿದ್ಧವಾಗಿರುವಾಗ ನಾನು ಸ್ವಲ್ಪ ಹೆದರಿ ಭಯದಿಂದ ಕುಗ್ಗಿಬಿಡುತ್ತೇನೆಯೇ? ನಾಳೆ ಸೂರ್ಯನು ಮುಳುಗುವುದಕ್ಕೆ ಮುಂಚೆಯೇ ಜಯದ್ರಥನು ಹೆದರುವಂತೆ ಅವನನ್ನು ಕೊಲ್ಲದಿದ್ದರೆ ನಾನು ಗಾಂಡೀವವನ್ನು ಧರಿಸಿದವನೇ ಅಲ್ಲ. ಯುದ್ಧರಂಗದಲ್ಲಿ ಹೆದರಿ ಭಯಸೂಚಕವಾದ ಚಿಗುರು ಹಿಡಿದವನಾಗುವುದಿಲ್ಲವೇ? ವ॥ ಎಂದು ನೃಪಪರಮಾತ್ಮನಾದ ಅರ್ಜುನನು ಪ್ರತಿಜ್ಞೆಮಾಡಿದುದನ್ನು ಸೈಂಧವನ ಪತ್ನಿಯೂ ದುರ್ಯೋಧನನ ತಂಗಿಯೂ ಆದ ದುಶ್ಶಳೆಯು ಕೇಳಿ ವಿಶೇಷವಾಗಿ ದುಃಖಪಟ್ಟು ತಮ್ಮ ಅಣ್ಣನ ಹತ್ತಿರಕ್ಕೆ ಬಂದು ಕಾಲಿನ ಮೇಲೆ ಕವಿದು ಬಿದ್ದಳು. ೧೨೩. ಅರ್ಜುನನು ತನ್ನ ಮಗನು ಸಾಯಲು ನಿನ್ನ ಮಯ್ದುನನ ಸಾವಿಗೆ ಪ್ರತಿಜ್ಞೆಮಾಡಿದ್ದಾನೆ. ಅದಕ್ಕಾಗಿ

ವ|| ಎಂಬುದುಂ ಸುಯೋಧನಂ ಮುಗುಳ್ನಗೆ ನಕ್ಕಂತೆಂದಂ-

ಕಂ|| ಮರುಳಕ್ಕ ಮಗನ ಶೋಕದಿ
ನುರುಳ್ದುಂ ಪೂಣ್ದವನ ಪೂಣ್ಕೆ ದುಶ್ಶಾಸನನೊಳ್ ।
ಕರತನದಿಂದೆನ್ನೊಳಮಾ
ಮರುತ್ಸುತಂ ಪೂಣ್ದ ಪೂಣ್ಕೆಯಂತೆವೊಲಕ್ಕುಂ ॥ ೧೨೪

ಚಂ|| ಕೃತ ವಿವಿಧಾಸ್ತ್ರಶಸ್ತ್ರ ಯಮಪುತ್ರ ಮರುತ್ಸುತ ಯಜ್ಞಸೇನರು
ದ್ಧತ ಬಳರೆತ್ತಿ ಕಾದಿ ಸುಗಿದೋಡಿದರಲ್ಲರೆ ಕಾವರೀ ವಿವಿಂ ।
ಶತಿ ಕೃಪ ಕರ್ಣ ಶಲ್ಯ ಕಳಶೋದ್ಭವ ತತ್ಪ್ರಿಯ ಪುತ್ರರೆಂದೊಡ
ಪ್ರತಿರಥನಂ ಜಯದ್ರಥನನಾಜಿಯೊಳೆಯ್ತರೆ ವರ್ಪ ಗಂಡರಾರ್ ॥ ೧೨೫

ವ|| ಎಂದು ದುಶ್ಶಳೆಯನೊಡಗೊಂಡು ಕುಂಭಸಂಭವನಲ್ಲಿಗೆ ವಂದಿಂತೆಂದಂ-

ಮ|| ಸ್ರ|| ಸುತಶೋಕೋದ್ರೇಕದಿಂ ಸೈಂಧವನನಟಿವೆನೆಂದರ್ಜುನಂ ಪೂಣ್ದನಿಂತೀ
ಸತಿ ಬಂದಳ್ ಕಾವುದಾತ್ಮಾನುಜೆಯ ಕಡಗಮುಂ ನೀಮೆ ಮಾರ್ಕೊಳ್ವೊಡಾರ್ ತಾ ।
ವಿತರರ್ ಮುಟ್ಟಲ್ ಸಮರ್ಥರ್ ಕದನದೊಳೆನೆ ಗೆಲ್ವಾಸೆಯಂತಿರ್ಕೆ ಸಿಂಧು
ಕ್ಷಿತಿಪಂ ತಾನೇನನಾದಂ ರಣದೊಳದನೆ ಪೋಗಾನುಮಪ್ಪೆಂ ನರೇಂದ್ರಾ ॥ ೧೨೬

ನಾನು ನಡುಗಿ ಬಂದೆನು. ನೀನು ನನ್ನ ಓಲೆ ಮತ್ತು ಕಡಗದ ನಾಶವನ್ನು (ಸೌಮಂಗಲ್ಯದ ನಾಶವನ್ನು) ನೋಡುತ್ತೀಯಾ? ವ|| ಎನ್ನಲು ದುರ್ಯೋಧನನು ಹುಸಿನಗೆ ನಕ್ಕು ಹೀಗೆಂದನು. ೧೨೪. ಹುಚ್ಚುತಂಗೀ, ಮಗನ ದುಃಖದಿಂದ ಅರ್ಜುನನು ಉರುಳಾಡಿಮಾಡಿದ ಪ್ರತಿಜ್ಞೆಯು ಭೀಮನು ದುಶ್ಶಾಸನನಲ್ಲಿಯೂ ನನ್ನಲ್ಲಿಯೂ ಬಹಳ ತೀವ್ರತೆಯಿಂದ ಮಾಡಿದ ಪ್ರತಿಜ್ಞೆಯಂತೆಯೇ ನಿಷ್ಫಲವಾಗುತ್ತದೆ. ೧೨೫. ನಾನಾ ಶಸ್ತ್ರಾಸ್ತ್ರಗಳಲ್ಲಿ ಪ್ರವೀಣರಾದ ಧರ್ಮರಾಜ, ಭೀಮ, ಧೃಷ್ಟದ್ಯುಮ್ನರು ವಿಶೇಷ ಶಕ್ತಿಯುಳ್ಳವರು - ದಂಡೆತ್ತಿ ಬಂದು ಯುದ್ಧಮಾಡಿ ಹೆದರಿ ಓಡಿದವರಲ್ಲವೇ? (ಜಯದ್ರಥನೊಡನೆ ಕಾದಲಾರದೆ ಹೆದರಿ ಓಡಿ ಹೋದರಲ್ಲವೇ?) ವಿವಿಂಶತಿ, ಕೃಪ, ಕರ್ಣ, ಶಲ್ಯ, ದ್ರೋಣ, ಅವನ ಪ್ರಿಯಪುತ್ರನಾದ ಅಶ್ವತ್ಥಾಮ ಮೊದಲಾದವರು ಜಯದ್ರಥನನ್ನು ರಕ್ಷಿಸುವರು ಎನ್ನುವಾಗ ಸಮಾನವಾದ ರಥಿಕರೇ ಇಲ್ಲದ ಜಯದ್ರಥನು ಯುದ್ಧದಲ್ಲಿ ಬರುತ್ತಿದ್ದರೆ ಅವನನ್ನು ಬಂದು ಎದುರಿಸುವ ಶೂರರಾರಿದ್ದಾರೆ? ವ|| ಎಂದು ದುಶ್ಶಳೆಯನ್ನು ಜೊತೆಯಲ್ಲಿ ಕರೆದುಕೊಂಡು ದ್ರೋಣಾಚಾರ್ಯರಲ್ಲಿಗೆ ಬಂದು ಹೀಗೆಂದು ಹೇಳಿದನು - ೧೨೬. ಪುತ್ರಶೋಕೋದ್ರೇಕದಿಂದ ಅರ್ಜುನನು ಸೈಂಧವನನ್ನು ಕೊಲ್ಲುವೆನೆಂದು ಪ್ರತಿಜ್ಞೆಮಾಡಿದನು. ಅದಕ್ಕಾಗಿ ಈ ತಂಗಿ ಬಂದಿದ್ದಾಳೆ. ನನ್ನ ತಂಗಿಯ ಕಡಗವನ್ನು ನೀವೆ ರಕ್ಷಿಸಬೇಕು. ಯುದ್ಧದಲ್ಲಿ ನೀವೆ ಪ್ರತಿಭಟಿಸಿದರೆ ಅವನನ್ನು ಮುಟ್ಟಲು ಸಮರ್ಥರಾಗುತ್ತಾರೆಯೇ ಎಂದನು. ಗೆಲ್ಲುವಾಸೆ ಹಾಗಿರಲಿ, ದುರ್ಯೋಧನಾ, ಯುದ್ಧದಲ್ಲಿ ಸೈಂಧವನೇನಾಗುತ್ತಾನೆಯೋ ಅದನ್ನೇ ನಾನೂ ಆಗುತ್ತೇನೆ ಹೋಗು.

ಮ॥ ಬಿಜಯಂಗೆಯ್ಯೆನೆ ಪೋಪುದುಂ ನೃಪನದಂ ಧರ್ಮಾತ್ಮಜಂ ಕೇಳ್ದು ಪೇ
ಲ್ದಜಿತಂಗಾ ಹರಿ ಪೇಟ್ದುದೊಂದು ನಯದಿಂದಾ ರಾತ್ರಿಯೊಳ್ ಪೋಗಿ ಕುಂ ।
ಭಜನಂ ಕಂಡು ವಿನಮ್ರನಾಗಿ ನುಡಿದಂ ನೀಮಿಂತು ಕೆಯ್ಕೊಂಡು ಕಾ
ದೆ ಜಗತ್ಪೂಜಿತ ಬೆಟ್ಟನಾದೊಡೆಮಗಿಂ ಬಾಟ್ವಾಸೆಯಾವಾಸೆಯೋ ॥ ೧೨೭

ಕಂ॥ ನಿಮ್ಮಳವನಱಿದು ಮುನ್ನಮೆ
ನಿಮ್ಮಂ ಪ್ರಾರ್ಥಿಸಿದೆಮೀಗಳದುವಂ ಮಱೆದಿರ್ ।
ನಿಮ್ಮಯ ಧರ್ಮದ ಮಕ್ಕಳೆ
ವೆಮ್ಮಂ ಕಡೆಗಣಿಸಿ ನಿಮಗೆ ನೆಗೞ್ವುದು ದೊರೆಯೇ ॥ ೧೨೮

ಎನೆ ಗುರು ಕರುಣಾರಸಮದು
ಮನದಿಂ ಪೊಱಪೊಣ್ಮೆ ನಿನಗೆ ಜಯಮಕ್ಕುಮನಂ ।
ತನ ಪೇೞ್ದ ತೆಱದೆ ನೆಗೞೆನೆ
ವಿನಯದೆ ಬೀಱ್ಕೊಂಡು ನೃಪತಿ ಬೀಡಂ ಪೊಕ್ಕಂ ॥ ೧೨೯

ವ॥ ಆಗಳಾರೂಢಸರ್ವಜ್ಞಂ ಪ್ರತಿಜ್ಞಾರೂಢನಾಗಿ ಗಂಗಾನದೀ ತರಂಗೋಪಮಾನ ದುಕೂಲಾಂಬರ ಪರಿಧಾನನುಮಾಗಿ ಧವಳಶಯ್ಯಾತಳದೊಳ್ ಮಱೆದೊಱಗಿದನಮೋಘಾಸ್ತ್ರ ಧನಂಜಯನಂ ಪುಂಡರೀಕಾಕ್ಷಂ ನೋಡಿ–

ಚಂ॥ ಅರಿದು ಕೊಲಲ್ಕೆ ಸೈಂಧವನನಾಜಿಯೊಳೀತನ ಪೂಣ್ದ ಪೂಣ್ಕೆಯುಂ
ಪಿರಿದವನುಗ್ರ ಪಾಶುಪತ ಬಾಣದಿನಲ್ಲದೆ ಸಾಯನಂತದಂ ।
ಹರನೊಸೆದಿತ್ತುಮೇನದಱ ಮುಷ್ಟಿಯನೀಯನೆ ಬೇಡವೇೞ್ದುದಾ
ದರದದನೆಂದು ಚಕ್ರಿ ಶಿವನಲ್ಲಿಗೆ ಕೊಂಡೊಗೆದಂ ಕಿರೀಟಿಯಂ ॥ ೧೩೦

೧೨೭. ನೀನು ದಯಮಾಡಿಸು ಎನ್ನಲು ರಾಜನು ಹೊರಟು ಹೋದನು. ಅದನ್ನು ಧರ್ಮರಾಯನು ಕೇಳಿ ಕೃಷ್ಣನಿಗೆ ತಿಳಿಸಿದನು. ಅದನ್ನು ಹೇಳಿದ ಒಂದು ನೀತಿ (ಉಪಾಯ)ಯಿಂದ ರಾತ್ರಿಯಲ್ಲಿ ಹೋಗಿ ದ್ರೋಣನನ್ನು ಕಂಡು ಬಹಳ ನಮ್ರತೆಯಿಂದ ಹೇಳಿದನು. ನೀವು ಹೀಗೆ ಅಂಗೀಕಾರಮಾಡಿ (ದುರ್ಯೋಧನನ ಪಕ್ಷವನ್ನು) ಕರುಣವಿಲ್ಲದೆ ಕಾದಿದರೆ ಲೋಕಪೂಜ್ಯರಾದವರೇ ನಮಗೆ ಇನ್ನು ಬಾಳುವಾಸೆ ಯಾವುದು? ೧೨೮. ನಿಮ್ಮ ಶಕ್ತಿಯನ್ನು ತಿಳಿದು ಮೊದಲೇ ನಿಮ್ಮನ್ನು ಪ್ರಾರ್ಥಿಸಿದೆನು. ಈಗ ಅದನ್ನೂ ಮರೆತು ನಿಮ್ಮ ಧರ್ಮದ ಮಕ್ಕಳಾದ ನಮ್ಮನ್ನು ಉದಾಸೀನ ಮಾಡಿ ನೀವು ನಡೆದುಕೊಳ್ಳುವುದು ಸರಿಯೇ? ೧೨೯. ಎನ್ನಲು ಆಚಾರ್ಯನಾದ ದ್ರೋಣನು ಕರುಣಾರಸವು ಮನಸ್ಸಿನಿಂದ ಹೊರಹೊಮ್ಮುತ್ತಿರಲು 'ಕೃಷ್ಣನು ಹೇಳಿದ ಹಾಗೆ ಮಾಡು, ನಿನಗೆ ಜಯವಾಗುತ್ತದೆ' ಎಂದನು. ವಿನಯದಿಂದ ಅಪ್ಪಣೆಯನ್ನು ಪಡೆದು ಹೊರಟು ಧರ್ಮರಾಜನು ತನ್ನ ಮನೆಯನ್ನು ಪ್ರವೇಶಿಸಿದನು. ವ॥ ಆಗ ಆರೂಢಸರ್ವಜ್ಞನಾದ ಅರ್ಜುನನು ಪ್ರತಿಜ್ಞೆಯನ್ನು ಮಾಡಿದವನಾಗಿ ಗಂಗಾನದಿಯ ಅಲೆಗಳಿಗೆ ಸಮಾನವಾದ ರೇಷ್ಮೆಯ ಬಟ್ಟೆಯ ಹೊದಿಕೆಯುಳ್ಳವನಾಗಿ ಬಿಳಿಯ ಹಾಸಿಗೆಯ ಮೇಲೆ ಮರೆತು ಮಲಗಿದನು. ಹಾಗೆ ಮಲಗಿದ್ದ ಅಮೋಘಾಸ್ತ್ರಧನಂಜಯನಾದ ಅರ್ಜುನನನ್ನು ಕೃಷ್ಣನು ನೋಡಿ -೧೩೦. ಸೈಂಧವನನ್ನು ಯುದ್ಧದಲ್ಲಿ ಕೊಲ್ಲುವುದು ಅಸಾಧ್ಯ. ಇವನು (ಅರ್ಜುನನು) ಮಾಡಿದ ಆಜ್ಞೆಯೂ ಗುರುತರವಾದುದು. ಜಯದ್ರಥನು ಉಗ್ರವಾದ

ವ॥ ಅಂತು ಮನಃಪವನವೇಗದಿಂ ಕೈಳಾಸ ಶೈಳಮನೆಯ್ದಿ ಕದನತ್ರಿಣೇತ್ರನಂ ತ್ರಿಣೇತ್ರನ ಮುಂದಿಟ್ಟೆಪುವುದುಮಭವಂ ತನ್ನ ಪಾದಪದ್ಮಂಗಳ್ಗೆಱಗಿದತಿರಥ ಮಥನನುಮಂ ಮಧುಮಥನನು ಮನಮೃತದೃಷ್ಟಿಯಿಂ ನೋಡಿ ಪಾಶುಪತದ ಮುಷ್ಟಿಯಂ ಬೇಡಲೆಂದು ಬಂದುದಂ ತನ್ನ ದಿವ್ಯಜ್ಞಾನದಿಂದಮಱಿದು-

ಕಂ॥ ಅಪಗತ ಕಪಟದೆ ನಟನದ
ನುಪದೇಶಂಗೆಯ್ದು ಪರಸಿ ಪೋಗೆನೆ ಪೊಡೆಮ ।
ಟ್ಟು ಪಸಾದಮೆಂದ ಹರಿಗನ
ನುಪೇಂದ್ರನಾ ದರ್ಭಶಯನ ತಳಕಿಟೆಪುವುದುಂ ॥ ೧೩೧

ವ॥ ಅಂತುದಾರ ಮಹೇಶ್ವರನೀಶ್ವರ ವರಪ್ರಸಾದಮೆಲ್ಲಂ ತನಗೆ ನನಸಾಗೆಯುಂ ಕನಸಿನಂದಮಾಗಿ ತೋಱೆ ಮಂಗಳಪಾಠಕರವಂಗಳೊಳ್ ಭೋಂಕನೆಚ್ಚತ್ತನನ್ನೆಗಂ-

ಕಂ॥ ತನ್ನ ಸುತನಟಿಲೊಳರ್ಜುನ
ನೆನ್ನುದಯಮನೆಯ್ದೆ ಪಾರ್ದು ಪಗೆವರ ಬೇರೊಳ್ ।
ಬೆನ್ನೀರನೆಱೆಯದಿರನದ
ನಾನ್ನೋಡುವೆನೆಂಬ ತೆಱದಿನಿನನುದಯಿಸಿದಂ ॥ ೧೩೨

ವ॥ ಅಗಳುಭಯ ಸೈನ್ಯಾಂಬುರಾಶಿಗಳಂಬುರಾಶಿಗಳ್ ನೆಲೆಯಿಂ ತಳರ್ವಂತೆ ತಳರೆ ಕಳಶಸಂಭವನಂದಿನನುವರದೊಳ್ ತನ್ನಂ ಪರಿಚ್ಛೇದಿಸಿ ಕನಕ ಕಳಶ ಸಂಭೃತ ಮಂಗಳ ಜಳಂಗಳಂ

ಪಾಶುಪತದಿಂದಲ್ಲದೆ ಸಾಯುವುದಿಲ್ಲ. ಹಾಗೆ ಅದನ್ನು ಈಶ್ವರನು ಪ್ರೀತಿಯಿಂದ ಕೊಟ್ಟಿದ್ದರೆ ತಾನೆ ಏನು ಪ್ರಯೋಜನ? ಅದರ ಪ್ರಯೋಗ ಮಂತ್ರವನ್ನು ಕೊಟ್ಟಿಲ್ಲವಲ್ಲ; ಅದನ್ನು ಭಕ್ತಿಯಿಂದ ಬೇಡಬೇಕಾಗಿದೆ ಎಂದು ಕೃಷ್ಣನು ಅರ್ಜುನನನ್ನು ಶಿವನಲ್ಲಿಗೆ ಕರೆದುಕೊಂಡು ಹೋದನು. ವ॥ ಮನೋವೇಗ ವಾಯುವೇಗದಿಂದ ಕೈಲಾಸಪರ್ವತವನ್ನು ಸೇರಿ ಅರ್ಜುನನನ್ನು ಈಶ್ವರನ ಮುಂದೆ ಇಳಿಸಿದನು. ಶಿವನು ತನ್ನ ಪಾದಕಮಲಗಳಿಗೆರಗಿದ ಅರ್ಜುನನನ್ನೂ ಕೃಷ್ಣನನ್ನೂ ಅಮೃತದೃಷ್ಟಿಯಿಂದ ನೋಡಿದನು. ಪಾಶುಪತದ ಮುಷ್ಟಿಯನ್ನು ಬೇಡುವುದಕ್ಕಾಗಿ ಬಂದಿರುವುದನ್ನು ತನ್ನ ದಿವ್ಯಜ್ಞಾನದಿಂದ ತಿಳಿದನು. ೧೩೧. ನಿಷ್ಕಪಟದಿಂದ ಆ ಮಂತ್ರೋಪದೇಶ ಮಾಡಿ ಹರಸಿದನು. ನಮಸ್ಕರಿಸಿ ಅನುಗ್ರಹೀತನಾದೆನೆಂದು ಹೇಳಿದ ಅರ್ಜುನನನ್ನು ಕೃಷ್ಣನು ದರ್ಭೆಯಿಂದ ಮಾಡಿದ (ಹಿಂದಿನ) ಹಾಸಿಗೆಯ ಮೇಲಕ್ಕೆ ತಂದು ಇಳಿಸಿದನು. ವ॥ ಉದಾರಮಹೇಶ್ವರನಾದ ಅರ್ಜುನನು ಈಶ್ವರನ ವರಪ್ರಸಾದವೆಲ್ಲ ತನಗೆ ಪ್ರತ್ಯಕ್ಷನಾಗಿದ್ದರೂ ಕನಸಿನಂತೆ ತೋರುತ್ತಿರಲು ಸ್ತುತಿಪಾಠಕರ ಮಂಗಳಧ್ವನಿಯಿಂದ ಭೋಂಕನೆ ಎಚ್ಚರಗೊಂಡನು; ಅಷ್ಟರಲ್ಲಿ ೧೩೨. ತನ್ನ ಮಗನ ಸಾವಿನ ದುಃಖದಲ್ಲಿ ಅರ್ಜುನನು ನನ್ನುದಯವನ್ನೇ ನಿರೀಕ್ಷಿಸುತ್ತಿದ್ದು ಶತ್ರುಗಳ ಬೇರಿನಲ್ಲಿ ಬಿಸಿನೀರನ್ನು ಎರೆಯದೇ ಇರುವುದಿಲ್ಲ; ಅದನ್ನು ನಾನು ನೋಡುತ್ತೇನೆ ಎಂಬ ರೀತಿಯಲ್ಲಿ ಸೂರ್ಯನು ಉದಯವಾದನು. ವ॥ ಆಗ ಎರಡು ಸೇನಾಸಮುದ್ರಗಳೂ ನೆಲೆಯಿಂದ ಹೊರಡುವಂತೆ ಹೊರಟರು. ದ್ರೋಣಾಚಾರ್ಯನು ಆ ದಿನದ ಯುದ್ಧದಲ್ಲಿ ತನ್ನನ್ನು

ಮಿಂದು ಧವಳ ವಸನ ದುಕೂಲಾಂಬರ ಮಂಗಳ ವಿಭೂಷಣನುಂ ನಿರ್ವರ್ತಿತ ಸಂಧ್ಯೋಪಾಸನನುಂ ಪರಿಸಮಾಪ್ತ ಜಪನುಮರ್ಚಿತ ಶಿತಿಕಂಠನುಮಾಹುತಿ ಹುತಾಗ್ನಿಹೋತ್ರನುಂ ಪೂಜಿತ ಧರಾಮರನುಂ ನೀರಾಜಿತ ರಥತುರಗನುಮಾಗಿ ರಜತ ರಥಮನೇಱಿ ಸಂಗ್ರಾಮ ಭೂಮಿಯನೆಯ್ದೆವಂದು ಸಾಮಂತ ಚೂಡಾಮಣಿಯನಿನಿಸು ಮಾರ್ಕೊಂಡು ನಿಲ್ವೊಡಂ ಸಿಂಧುರಾಜನಂ ಕಾವೊಡಮನೇಕ ವ್ಯೂಹರಚನೆಯೊಳಲ್ಲದೆ ಗೆಲಲ್ ಬಾರದೆಂದು ಚಕ್ರವ್ಯೂಹಮನಿದಿರೊಳೊಡ್ಡಿ ಸಕಳ ಸಾಮಂತ ಚಕ್ರಮನಿರಲ್ವೇೞ್ದಲ್ಲಿಗೆ ನಾಲ್ಕುಂ ಯೋಜನದ ಪದುಮವ್ಯೂಹದೊಳಂಗರಾಜ ಶಲ್ಯ ವೃಷಸೇನ ಕೃಪ ಕೃತವರ್ಮಾಶ್ವತ್ಥಾಮರಂ ದುರ್ಯೋಧನಂ ಬೆರಸಿರಿಸಿ ಮತ್ತಿತ್ತ ನಾಲ್ಕು ಯೋಜನದ ಶಕಟವ್ಯೂಹದ ಬಾಗಿಲೊಳ್ ಬಾಹ್ಲೀಕ ಸೋಮದತ್ತ ವಿಂದಾನುವಿಂದರೊಡನೆ ಸಂಸಪ್ತಕರನಿರಿಸಿ ಶಕಟವ್ಯೂಹದ ಪೆಱಗೆ ನಾಲ್ಕು ಯೋಜನದೊಳರ್ಧಚಂದ್ರವ್ಯೂಹದೊಳಧಿಕ ಬಲರಪ್ಪ ಸೌಬಲ ದುಶ್ಶಾಸನಾದಿ ಪ್ರಧಾನ ವೀರಭಟ ಕೋಟಿಯ ನಡುವೆ ಸಿಂಧುರಾಜನನಿರಿಸಿ ಮೊದಲ ಚಕ್ರವ್ಯೂಹದ ಬಾಗಿಲೊಳ್ ಶರಾಸನಾಚಾರ್ಯಂ ನಿಂದನಿತ್ತ ಪಾಂಡವಬಲಮೆಲ್ಲಮುಂ ವಿಕ್ರಮಾರ್ಜುನನುಂ ವಜ್ರಪಂಜರದಂತಭೇದ್ಯಮಪ್ಪ ವಜ್ರವ್ಯೂಹಮನೊಡ್ಡಿ ಧರ್ಮರಾಜನೊಡನೆ ಭೀಮ ನಕುಳ ಸಹದೇವ ಸಾತ್ಯಕಿ ಧೃಷ್ಟದ್ಯುಮ್ನ ಘಟೋತ್ಕಚ ಪ್ರಮುಖ ನಾಯಕರಂ ಪೇೞ್ದು ದ್ರುಪದ ವಿರಾಟ ಶಿಖಂಡಿ

(ತನ್ನ ಸ್ಥಿತಿಯನ್ನು) ನಿಶ್ಚಯಿಸಿಕೊಂಡು ಚಿನ್ನದ ಕಲಶಗಳಲ್ಲಿ ತುಂಬಿದ ಮಂಗಳಜಲದಲ್ಲಿ ಸ್ನಾನಮಾಡಿ ಬಿಳಿಯ ರೇಷ್ಮೆಯ ಉಡುಪೇ ಮೊದಲಾದ ಮಂಗಳಾಭರಣಯುತನಾಗಿ ಸಂಧ್ಯಾವಂದನವನ್ನೂ ಜಪವನ್ನೂ ಮುಗಿಸಿ ಶಿವನನ್ನು ಆರಾಧಿಸಿ ಅಗ್ನಿಗಾಹುತಿಯನ್ನಿತ್ತು ಬ್ರಾಹ್ಮಣರನ್ನು ವಂದಿಸಿ ರಥ ಕುದುರೆಗಳಿಗೆ ಆರತಿಮಾಡಿ ಬೆಳ್ಳಿಯ ತೇರನ್ನು ಹತ್ತಿ ಯುದ್ಧರಂಗದ ಸಮೀಪಕ್ಕೆ ಬಂದನು. ಸಾಮಂತ ಚೂಡಾಮಣಿಯಾದ ಅರ್ಜುನನನ್ನು ಸ್ವಲ್ಪ ಎದುರಿಸಿ ನಿಲ್ಲಬೇಕಾದರೂ ಸೈಂಧವನನ್ನು ರಕ್ಷಿಸಬೇಕಾದರೂ ಅನೇಕ ವ್ಯೂಹರಚನೆಯಿಂದಲ್ಲದೆ ಗೆಲ್ಲಲು ಸಾಧ್ಯವಿಲ್ಲವೆಂದು ಚಕ್ರವ್ಯೂಹವನ್ನೇ ಮುಂಭಾಗದಲ್ಲಿ ಒಡ್ಡಿ ಸಾಮಂತರಾಜರ ಸಮೂಹವನ್ನು ಅಲ್ಲಿ ಇರಹೇಳಿದನು. ಅಲ್ಲಿಗೆ ನಾಲ್ಕು ಯೋಜನದ ದೂರದಲ್ಲಿದ್ದ ಪದ್ಮವ್ಯೂಹದಲ್ಲಿ ಕರ್ಣ, ಶಲ್ಯ, ವೃಷಸೇನ, ಕೃಪ, ಕೃತವರ್ಮಾಶ್ವತ್ಥಾಮರನ್ನು ದುರ್ಯೋಧನನೊಡನೆ ಇರಿಸಿದನು. ಮತ್ತೆ ಈ ಕಡೆ ನಾಲ್ಕು ಯೋಜನದ ಶಕಟವ್ಯೂಹದ ಬಾಗಿಲಿನಲ್ಲಿ ಬಾಹ್ಲಿಕ ಸೋಮದತ್ತ ವಿಂದಾನುವಿಂದರೊಡನೆ ಸಂಸಪ್ತಕರನಿಟ್ಟನು. ಶಕಟವ್ಯೂಹದ ಹಿಂದೆ ನಾಲ್ಕು ಯೋಜನದಲ್ಲಿ ಅರ್ಧಚಂದ್ರವ್ಯೂಹದಲ್ಲಿ ಅಧಿಕಬಲರಾದ ಶಕುನಿ ದುಶ್ಶಾಸನನೇ ಮೊದಲಾದ ಪ್ರಧಾನ ನಾಯಕರ ಸಮೂಹದ ಮಧ್ಯದಲ್ಲಿ ಸಿಂಧುರಾಜನನ್ನು ಇರಿಸಿದನು. ಮೊದಲನೆಯ ಚಕ್ರವ್ಯೂಹದ ಬಾಗಿಲಿನಲ್ಲಿ ಚಾಪಾಚಾರ್ಯನಾದ ದ್ರೋಣನೇ ನಿಂತುಕೊಂಡನು. ಈ ಕಡೆ ಅರ್ಜುನನೂ ಪಾಂಡವಸೈನ್ಯವನ್ನೆಲ್ಲ ವಜ್ರಪಂಜರದಂತೆ ಭೇದಿಸುವುದಕ್ಕಾಗದಿರುವ ವಜ್ರವ್ಯೂಹವನ್ನೊಡ್ಡಿ ಧರ್ಮರಾಜನೊಡನೆ ಭೀಮ ನಕುಳ ಸಹದೇವ ಸಾತ್ಯಕಿ ಧೃಷ್ಟದ್ಯುಮ್ನ ಘಟೋತ್ಕಚರೇ ಮುಖ್ಯರಾದ ನಾಯಕರನ್ನು ಇರಹೇಳಿ ದ್ರುಪದ ವಿರಾಟ ಶಿಖಂಡಿ

ಯುಧಾಮನ್ಯೂತ್ತಮೌಜಃಕೈಕಯ ಪ್ರಧಾನ ನಾಯಕರಂ ತನ್ನೊಡನೆ ಕೂಡಿಕೊಂಡು ನಿಜಾಗ್ರಜನಂ ಬೀೞ್ಕೊಂಡು ನಿಜರಥಮಂ ರಥಾಂಗಧರನಂ ಮುನ್ನಮೇಱಲ್ವೇೞ್ದು ಮೂಱು ಸೂೞ್ ಬಲವಂದು ಪೊಡಮಟ್ಟು ರಥಮನೇಱ ವಜ್ರಕವಚಮಂ ತೊಟ್ಟು ತವದೊಣೆಗಳನಮರೆ ಬಿಗಿದು ಗಾಂಡೀವಮನೇಱಸಿ ನೀವಿ ಜೇವೊಡೆದಾಗಳ್-

ಪೃಥ್ವಿ ॥ ಭವಂ ಭವನ ಗೋತ್ರದಿಂದಜನಜಾಂಡದಿಂ ಭಾಸು ಭಾ
ನು ವೀಧಿಯಿನಿಳಾತಳಂ ತಳದಿನೆಯ್ದೆ ಕಿೞ್ತೆೞ್ದು ತೂ ।
ಳ್ವವಾರ್ಯ ಭುಜವೀರ್ಯಮಂ ನೆಱಯೆ ತೋರ್ಪಿನಂ ಕುಂಭ ಸಂ
ಭವಂ ಮರಲೆ ತಾಗಿದಂ ರಿಪುಕುರಂಗ ಕಂಠೀರವಂ ॥ ೧೩೩

ವ॥ ಅಂತು ತಾಗಿ ಚಕ್ರವ್ಯೂಹದ ಬಾಗಿಲೊಳ್ ತನ್ನಂ ಪುಗಲೀಯದಡ್ಡಮಾಗಿ ನಿಂದ ಕಾರ್ಮುಕಾಚಾರ್ಯನನುಱೆ ಸೆಱೆಗೆಯ್ಯದೆ ವಿನಯಾಸ್ತ್ರಮನೆಚ್ಚು ವಿನಯಮನೆ ಮುಂದಿಟ್ಟು ಬಲವಂದು ಪೊಡೆಮಟ್ಟು ಪೋಗೆವೋಗೆ-

ಮ॥ ಕಮನೀಯಂ ಬಲವಂದು ಪೋಪನನೆಲೇ ಪೋಪೋಗದಿರ್ ಪೋಗದಿರ್
ಸಮರಕ್ಕೆನ್ನೊಡನಂಜಿ ಪೋದೆಯೆನಲಿಂತೆಂದಂ ನರಂ ದ್ರೋಣರಂ ।
ನಿಮಗಾನಂಜುವುದೆನ್ನ ಬಾಲತನದಿಂದಂದಾದುದಿಂದಾದುದೇ
ನಿಮಗಾನಂಜದೊಡಂಜಿಸಲ್ ನೆಱವೆನೇ ತ್ರೈಲೋಕ್ಯಮಂ ಯುದ್ಧದೊಳ್॥ ೧೩೪

ಯುಧಾಮನ್ಯೂತ್ತಮೌಜಸ್ ಕೈಕಯರೇ ಮೊದಲಾದ ನಾಯಕರನ್ನು ತನ್ನೊಡನೆ ಸೇರಿಸಿಕೊಂಡು ತಮ್ಮಣ್ಣನ ಅಪ್ಪಣೆಯನ್ನು ಪಡೆದು ಹೋದನು. ಕೃಷ್ಣನನ್ನು ಮೊದಲು ತನ್ನ ತೇರನ್ನು ಹತ್ತಲು ಹೇಳಿ ಮೂರು ಸಲ ಪ್ರದಕ್ಷಿಣ ನಮಸ್ಕಾರಮಾಡಿ ರಥವನ್ನು ಹತ್ತಿ ವಜ್ರಕವಚವನ್ನು ತೊಟ್ಟು ಬರಿದಾಗದ ಬತ್ತಳಿಕೆಯನ್ನು (ಅಕ್ಷಯತೂಣೀರ) ಬಿಗಿಯಾಗಿ ಬಿಗಿದುಕೊಂಡು ಗಾಂಡೀವಕ್ಕೆ ಹೆದೆಯೇರಿಸಿ ನೀವಿ ಶಬ್ದಮಾಡಿದನು. ೧೩೩. ಆ ಶಬ್ದದಿಂದ ಈಶ್ವರನು ಕೈಲಾಸಪರ್ವತದಿಂದಲೂ ಬ್ರಹ್ಮನು ಬ್ರಹ್ಮಾಂಡದಿಂದಲೂ ಸೂರ್ಯನು ಆಕಾಶಮಾರ್ಗದಿಂದಲೂ ಭೂಮಂಡಲವು ತನ್ನ ಮೂಲದಿಂದಲೂ ಪೂರ್ಣವಾಗಿ ಕಿತ್ತು ಎದ್ದು ಬರುವ ಹಾಗಾಯಿತು. ತಡೆಯಲಸಾಧ್ಯವಾದ ತನ್ನ ಬಾಹುಬಲವನ್ನು (ಅರ್ಜುನನು) ಪೂರ್ಣವಾಗಿ ಪ್ರದರ್ಶಿಸಿ ದ್ರೋಣಾಚಾರ್ಯನು ಸಂತೋಷಪಡುವಂತೆ ರಿಪುಕುರಂಗ ಕಂಠೀರವನಾದ ಅರ್ಜುನನು (ಪ್ರತಿಸೈನ್ಯವನ್ನು) ತಾಗಿದನು. ವ॥ ಚಕ್ರವ್ಯೂಹದ ಬಾಗಿಲಿನಲ್ಲಿ ತಾನು ಪ್ರವೇಶಿಸುವುದಕ್ಕೆ ಅಡ್ಡವಾಗಿ ನಿಂತಿದ್ದ ಚಾಪಾಚಾರ್ಯನಾದ ದ್ರೋಣಾಚಾರ್ಯನನ್ನು ಚೆನ್ನಾಗಿ ಸೆರೆಹಿಡಿಯದೆ ವಿನಯಾಸ್ತ್ರವನ್ನೇ ಪ್ರಯೋಗಿಸಿ ನಮ್ರತೆಯನ್ನೆ ಮುಂದುಮಾಡಿಕೊಂಡು ಪ್ರದಕ್ಷಿಣನಮಸ್ಕಾರಮಾಡಿ ಮುಂದೆ ಹೋದನು. ೧೩೪. ಮನಗೊಳ್ಳುವಂತೆ (ಆಕರ್ಷಕವಾದ ರೀತಿಯಲ್ಲಿ) ಪ್ರದಕ್ಷಿಣೆ ಮಾಡಿ ಹೋಗುತ್ತಿರುವ ಅರ್ಜುನನನ್ನು ದ್ರೋಣಾಚಾರ್ಯರು ತಡೆದು 'ಎಲವೋ ಹೋಗಬೇಡ, ಹೋಗಬೇಡ, ನನ್ನೊಡನೆ ಯುದ್ಧಮಾಡುವುದಕ್ಕೆ ಹೆದರಿ ಹೋಗುತ್ತಿದ್ದೀಯೆ' ಎಂದರು. ಅರ್ಜುನನು ಆಚಾರ್ಯರನ್ನು ಕುರಿತು ಹೀಗೆಂದನು-'ನಿಮಗೆ ಹೆದರುವುದು

ವ|| ಅಂತು ವಿನಯಮನೆ ನುಡಿದ ವಿಕ್ರಮಾರ್ಜುನನಂ ಗುರುವನೇಕಾಶೀರ್ವಚನಂಗಳಿಂ ಪರಸುವುದುಂ ಪದುಮನಾಭನ ಚೋದಿಸುವ ರಥವೇಗದಿಂ ಪದ್ಮವ್ಯೂಹಮನೆಯ್ದೆವಂದು ಸುಯೋಧನನ ಸಾಧನದೊಳ್ ತಾಗಿದಾಗಳ್-

ಚಂ|| ಪೊಸ ಮಸೆಯಂಬು ಕಾರಮಱೆವೊಲ್ ಕಱೆಯುತ್ತಿರೆ ನೇರ್ದು ಸೀಳ್ದು ಖಂ<br>
ಡಿಸಿ ಕಡಿದೊಟ್ಟಿ ಸುಟ್ಟನಿತುಮಂ ನಿಜ ಮಾರ್ಗಣ ಕೋಟಿಯಿಂದಗು ।<br>
ರ್ವಿಸೆ ತೆಗೆದೆಚ್ಚು ತನ್ನ ಮೊನೆಯಂಬುಗಳಿಂ ಚತುರಂಗಮೆಯ್ದೆ ಕೀ<br>
ಲಿಸೆ ಪಡೆ ಚಿತ್ರದೊಂದೆ ಪಡೆಯಂತೆವೊಲಾಯ್ತಕಳಂಕರಾಮನಿಂ ॥ ೧೩೫

ಅಡಿ ತೊಡೆ ಪೊರ್ಕುಳುಂ ತೆಗಲೆ ಕೈ ಕಣಕಾಲ್ ಕೊರಲೆಂಬಿವುಂ ಬೆರಲ್<br>
ನಡುವುರ ಬೆನ್ ಬಸಿಱ್ ತೊಳಕು ಕರ್ಚರೆ ಮುಯ್ಯು ಮುಸುಂಬು ಮೂಗು ಪೆ<br>
ರ್ದೊಡೆ ಕಟ ಮುಂಮಡಂ ಪರಡು ಸಂದಿ ನೊಸಲ್ ಪಣೆ ಕಣ್ ಕದಂಪಿವೆಂ<br>
ಬೆಡೆಯನೆ ನಟ್ಟುವುರ್ಚಿದುವು ನೇರ್ದುವು ಸೀಳ್ದುವು ಪಾರ್ಥನಂಬುಗಳ್ ॥ ೧೩೬

ವ|| ಅಂತು ಮಾಱಾಂತ ಮಾರ್ಪಡೆಯೆಲ್ಲಮಂ ಜವನೊಕ್ಕಲಿಕ್ಕಿ ತನ್ನೊಳ್ ಪೋಗದೆ ಪೆಣೆದ ಬಾಹ್ಲೀಕ ಸೋಮದತ್ತ ಭೂರಿಶ್ರವರನಾನೆ ಮೆಟ್ಟಿದ ಕುಳುಂಪೆಯ ನೀರಂತೆ ದೆಸೆ ದೆಸೆಗೆ ಸೂಸುವನ್ನೆಗಮೆಲ್ಬಟ್ಟಿ ಕಾಂಭೋಜ ಸುದಕ್ಷಿಣ ಜಯತ್ಸೇನರೆಂಬರೆಯ್ದರೆ ಮೂವರಕ್ಶೋಹಿಣೀ ಪತಿಗಳ್ವೆರಸು ನಾಲ್ಸಾಸಿರ್ವರ್ ಮಕುಟವರ್ಧನರಂ ಕೊಂದು ಶಲ್ಯನುರಮಂ ಬರಿಯೆಚ್ಚು

ಬಾಲ್ಯದಿಂದಾದುದು, ಇಂದಾಯಿತೇ? ನಿಮಗೆ ನಾನು ಹೆದರದಿದ್ದರೆ ಯುದ್ಧದಲ್ಲಿ ಮೂರುಲೋಕವನ್ನು ಹೆದರಿಸಲು ಸಮರ್ಥನಾಗುತ್ತೇನೆಯೇ?' ವ|| ಎಂದು ನಮ್ರತೆಯಿಂದಲೇ ಮಾತನಾಡಿದ ವಿಕ್ರಮಾರ್ಜುನನನ್ನು ದ್ರೋಣಾಚಾರ್ಯರು ಅನೇಕ ಆಶೀರ್ವಚನಗಳಿಂದ ಹರಸಿದರು. ಕೃಷ್ಣನು ನಡೆಸಿದ ರಥದ ವೇಗದಿಂದ ಪದ್ಮವ್ಯೂಹದ ಸಮೀಪಕ್ಕೆ ಬಂದು ದುರ್ಯೋಧನನ ಸೈನ್ಯವನ್ನು ತಾಗಿದನು. ೧೩೫. ಹೊಸದಾಗಿ ಮಸೆದಿರುವ ಬಾಣಗಳು ಕಾರ್ಗಾಲದ ಮಳೆಯ ಹಾಗೆ ಸುರಿಯುತ್ತಿರಲು ಅರ್ಜುನನು ಅಷ್ಟನ್ನೂ ತನ್ನ ಬಾಣಗಳ ತುದಿಯಿಂದ ಕತ್ತರಿಸಿ, ಸೀಳಿ, ಮುರಿದು, ತುಂಡಿಸಿ, ರಾಶಿಮಾಡಿ ಸುಟ್ಟು ತನ್ನ ಬಾಣಗಳ ಸಮೂಹದಿಂದ ಚತುರಂಗಸೈನ್ಯವೂ ಹೆದರುವ ಹಾಗೆ ಸೆಳೆದು ಹೊಡೆದು ಚೆನ್ನಾಗಿ ನಾಟಿಸಲು ಸೈನ್ಯವು ಚಿತ್ರದಲ್ಲಿ ಬರೆದ ಸೈನ್ಯದಂತೆ ಆಯಿತು. ೧೩೬. ಪಾದ, ತೊಡೆ, ಹೊಕ್ಕಳು, ಹೆಗ್ಗತ್ತು, ಕೈ, ಕಾಲಿನ ಕೆಳಭಾಗ, ಕೊರಳು ಎಂಬುವುಗಳನ್ನೂ ಬೆರಳು, ನಡು, ಎದೆ, ಬೆನ್ನು, ಹೊಟ್ಟೆ, ತೊಳಕುಸ(?) ಕರ್ಚರೆ, ಹೆಗಲು, ಮೂತಿ, ಹೆದ್ದೊಡೆ, ಸೊಂಟ, ಕಾಲ ಹರಡಿನ ಹಿಂಭಾಗ ಮತ್ತು ಮುಂಭಾಗ, ಕಾಲಿನ ಹರಡು, ಕೀಲು, ಹಣೆ, ಕಣ್ಣು, ಕೆನ್ನೆ- ಈ ಎಲ್ಲಾ ಸ್ಥಳಗಳನ್ನೂ ಅರ್ಜುನನ ಬಾಣಗಳು ನಾಟಿದುವು, ಸೀಳಿದವು ಮತ್ತು ಹೋಳು ಮಾಡಿದುವು. ವ|| ಎದುರಿಸಿದ ಪ್ರತಿ ಸೈನ್ಯವೆಲ್ಲವನ್ನೂ ಯಮನ ಒಕ್ಕಲವರನ್ನಾಗಿ ಮಾಡಿದನು. ಹೋಗದೆ ತನ್ನಲ್ಲಿಯೆ ಹೆಣೆದುಕೊಂಡ ಬಾಹ್ಲೀಕ ಸೋಮದತ್ತ ಭೂರಿಶ್ರವರನ್ನು ಆನೆಯು ತುಳಿದ ಕುಂಟೆಯ ನೀರಿನಂತೆ ದಿಕ್ಕು ದಿಕ್ಕಿಗೂ ಚೆಲ್ಲುವವರೆಗೆ ಎಬ್ಬಿಸಿದನು. ಕಾಂಭೋಜ, ಸುದಕ್ಷಿಣ, ಜಯತ್ಸೇನರೆಂಬುವರು ಮೂರು ಅಕ್ಶೋಹಿಣೀಪತಿಗಳನ್ನೂ

ಕೃಪರಂ ವಿರಥರ್ಮಾಡಿ ನಡುವಗಲಿಟೆವಿನಂ ಕಾದಿ ಬಟಲ್ದು ಕುದುರೆಗಳಂ ನೀರೊಳಿಕ್ಕಲೆಂದು ದೇವಖಾತಮೆಂಬ ಮಡುವಿಂಗೆ ಬರ್ಪುದುಮಿತ್ತ ದುರ್ಯೋಧನಂ ದ್ರೋಣರಲ್ಲಿಗೆ ವಂದು-

ಚಂ॥ ಅಟೆದುದು ಚಾತುರಂಗ ಬಲಮಳ್ಕುಜಿದಾಂತ ಮಹಾರಥರ್ಕಳುಂ
ಕಟಕುಟಮಾದುದೊಡ್ಡಣಮಣಂ ತಲೆದೋಱಲೆ ಗಂಡರಿಲ್ಲ ತೊ ।
ತ್ತಟದುಟೆದಪ್ಪನಿನ್ನಿನಿಸು ಬೇಗದೆ ಸೈಂಧವನಂ ನೆಗಟ್ತೆಯಂ
ಗಟೆಯಿಸಿಕೊಳ್ವೊಡಿನ್ನಿನಿಸು ನಿಂದಿಱೆಯಿಂ ತಱಸೆಂದು ಪಾರ್ಥನೊಳ್ ॥ ೧೩೭

ವ॥ ಎಂಬುದುಂ ದ್ರೋಣಾಚಾರ್ಯಂ ಮುಗುಳ್ನಗೆ ನಕ್ಕು ವಿಕ್ರಮಾರ್ಜುನನನಿಳಿಸಿ ನುಡಿವ ನಿನ್ನೆಣಗೋಣಂಗಳುಮೆಕ್ಕಸಕ್ಕತನಂಗಳುಮೆತ್ತವೋದುವು-

ಚಂ॥ ನಿನಗರಸಾಳ್ತನಂ ನುಡಿವ ಬೀರರ ಬೀರದಳುರ್ಕೆ ವಿಕ್ರಮಾ
ರ್ಜುನನೊಳದೇಕೆ ಸಲ್ಲದೆನಗಾತನಸಾಧ್ಯನವಧ್ಯನಾನುಮೀ ।
ಮೊನೆಯೊಳೆ ನಿಂದು ಕಾದಿದಪೆನನ್ನೆಗಮೆನ್ನ ವರೂಥ ಸೂತ ಕೇ
ತನ ಕವಚಂಗಳಿಂ ನೆಱೆದು ತಳ್ತಿಱೆ ನೀಂ ಜಗದೇಕಮಲ್ಲನೊಳ್ ॥ ೧೩೮

ವ॥ ಎಂಬುದುಂ ಸುಯೋಧನನೇನಾದೊಡೇನಾದುದೆನ್ನ ಪಗೆಯ ನಾನೇ ಕೊಲ್ವೆನೆಂದ ಭೇದ್ಯ ಕವಚಮುಂ ತೊಟ್ಟು ದಿವ್ಯಶರಾಸನ ಶರಂಗಳಂ ಕೊಂಡು ಕಳಶ ಕೇತನ ವರೂಥನಾಗಿ ಪೋಗಿ-

ಕೂಡಿಕೊಂಡು ಬರಲು ನಾಲ್ಕು ಸಾವಿರ ರಾಜರನ್ನು ಕೊಂದು ಶಲ್ಯನ ಎದೆಯನ್ನು ಬಿರಿಯುವ ಹಾಗೆ ಹೊಡೆದು ಕೃಪರನ್ನು ರಥವಿಲ್ಲದವರಂತೆ ಮಾಡಿ ನಡುಹಗಲು ಇಳಿಯುವವರೆಗೂ ಕಾದಿ ಬಳಲಿ ಕುದುರೆಯನ್ನು ನೀರಿಗೆ ಬಿಡಬೇಕೆಂದು ದೇವಖಾತವೆಂಬ ಮಡುವಿಗೆ ಬಂದನು. ದುರ್ಯೋಧನನು ದ್ರೋಣ ನಲ್ಲಿಗೆ ಬಂದನು. ೧೩೭. ಚತುರಂಗಬಲವೂ ನಾಶವಾಯಿತು. ಹೆದರದೆ ಪ್ರತಿಭಟಿಸಿದ ಮಹಾರಥರುಗಳೂ ಚೆಲ್ಲಾಪಿಲ್ಲಿಯಾದರು. ಸೈನ್ಯವು ಸ್ವಲ್ಪವಾದರೂ ಕಾಣಿಸಿಕೊಳ್ಳಲು ಶೂರರಾದವರಾರೂ ಇಲ್ಲ. ಸ್ವಲ್ಪ ಕಾಲದಲ್ಲಿಯೇ ಸೈಂಧವನನ್ನು ತುಳಿದುಹಾಕುತ್ತಾನೆ. ಪ್ರಸಿದ್ಧಿಯನ್ನು ಪಡೆಯಬೇಕಾದರೆ ಸ್ವಲ್ಪ ಸ್ಥಿರವಾಗಿ ನಿಂತುಕೊಂಡು ಅರ್ಜುನನೊಡನೆ ಯುದ್ಧಮಾಡಿ ಎಂದನು. ವ॥ ದ್ರೋಣಾಚಾರ್ಯನು ಮುಗುಳ್ನಗೆ ನಕ್ಕು ವಿಕ್ರಮಾರ್ಜುನನನ್ನು ತಿರಸ್ಕರಿಸಿ ಮಾತನಾಡುವ ವಕ್ರವಾದ ಅಹಂಕಾರದ ಮಾತುಗಳೂ ನಿಂದೆ ಮತ್ತು ಪರಿಹಾಸದ ಮಾತುಗಳೂ ಈಗೆಲ್ಲಿಗೆ ಹೋದುವು -೧೩೮. ನಿನಗೆ ಚಕ್ರವರ್ತಿತ್ವವನ್ನು ಘೋಷಿಸುವ ವೀರರ ಶೌರ್ಯದ ಆಧಿಕ್ಯವು ವಿಕ್ರಮಾರ್ಜುನನಲ್ಲಿ ಅದೇಕೆ ಸಲ್ಲುವುದಿಲ್ಲ. ನನಗೆ ಅವನು ಗೆಲ್ಲುವುದಕ್ಕೆ ಅಸಾಧ್ಯನಾದವನು. ಕೊಲ್ಲಲಾಗ ದವನು. ನಾನೂ ಈ ಯುದ್ಧಮುಖದಲ್ಲಿಯೇ ನಿಂತು ಕಾದುತ್ತೇನೆ. ಅಲ್ಲಿಯವರೆಗೆ ನೀನೂ ನನ್ನ ತೇರು, ಸಾರಥಿ, ಧ್ವಜ ಕವಚಗಳಿಂದ ಕೂಡಿಕೊಂಡು ಜಗದೇಕಮಲ್ಲನಲ್ಲಿ ಸಂಧಿಸಿ ಯುದ್ಧಮಾಡು. ವ॥ ಎನ್ನಲು ದುರ್ಯೋಧನನು ಏನಾದರೇನಾಯಿತು. ನನ್ನ ಶತ್ರುವನ್ನು ನಾನೇ ಕೊಲ್ಲುತ್ತೇನೆ ಎಂದು ಒಡೆಯಲಾಗದ ಕವಚವನ್ನು ತೊಟ್ಟು ಶ್ರೇಷ್ಠವಾದ ಬಿಲ್ಲುಬಾಣಗಳನ್ನು ತೆಗೆದುಕೊಂಡು ಕಳಶಧ್ವಜರಥದಿಂದ ಕೂಡಿಕೊಂಡು

ಚಂ॥ ತಡೆಯದೆ ರಾಜರಾಜನಿದಿರಂ ಬರೆ ಭೋರ್ಗರೆದೆಚ್ಚೊಡಂಬುಗಳ್
ನಡದೆ ಸಿಡಿಲ್ವುದುಂ ಕರತಳದ್ವಯಮಂ ಬರಿಯೆಚ್ಚು ಕೆಯ್ದುವಂ ।
ಪಿಡಿವದಟೆಲ್ಲಮಂ ಕಿಡಿಸಿ ತಾಂ ಕೊಲಲೊಲ್ಲನೆ ಭೀಮನಾತನಂ
ಮಡಿಪುವೆನೆಂದ ಪೂಣ್ಕೆ ಪುಸಿಯಾದಪುದೆಂದಮರೇಂದ್ರನಂದನಂ ॥ ೧೩೯

ವ॥ ಅನ್ನೆಗಮಿತ್ತ ಧರ್ಮಪುತ್ರನಮೋಘಾಸ್ತ್ರ ಧನಂಜಯನಂ ಕೆಯ್ಕೊಳಲಟ್ಟಿದೊಡೆ ಕೌರವಬಳ ಜಳನಿಧಿಯ ನಡುವನುತ್ತರಿಸಿ ಬರ್ಪ ಸಾತ್ಯಕಿಯಂ ಭೂರಿಶ್ರವನೆಡೆಗೊಂಡಾಂತು-

ಉ॥ ಪೋಗದಿರೆಂದು ಮೂದಲಿಸೆ ಸಾತ್ಯಕಿ ತೀವ್ರ ಶರಾಳಿಯಿಂದಗು
ರ್ವಾಗೆ ವರೂಥಮಂ ಕಡಿದೊಡುರ್ಚಿದ ಬಾಳ್ವೆರಸಾತನೆಯ್ದಿವಂ ।
ದಾಗಳಿದಿರ್ಚೆ ತಾನುಮಸಿಯಂ ಸೆರಗಿಲ್ಲದೆ ಕಿಱ್ತು ಪಾಯ್ದು ಭೂ
ಭಾಗ ನಭೋವಿಭಾಗವರಮಳ್ಕುಱೆ ತಳ್ತಿಱಿದರ್ ವಿರೋಧಿಗಳ್ ॥ ೧೪೦

ವ॥ ಅಂತಿರ್ವರುಮೋರೊರ್ವರೊಳ್ ಬೀರಮುಮಂ ಬಿಂಕಮುಮಂ ಮೆಱೆದು ದಾಸವಣದಂಡೆಯಂ ತೋರದಿಂಡೆಯಾಡಿದಂತೆ ದೆಸೆ ದೆಸೆಗೆ ಕೆದಱಿದ ಕಂಡದಿಂಡೆಗಳುಂ ನಾರಂಗ ಸಕಳವಟ್ಟೆಯ ಪಟಿಯಿಗೆಗಳಂತೆ ನಭಕ್ಕೆ ಮಿಳಿರ್ದು ಮಿಳ್ಳಿಸಿ ಪಾಱುವ ನೆತ್ತರ ಸುಟ್ಟುರೆಗಳುಮತಿ ಭಯಂಕರಾಕಾರಮಾಗೆ ಕಾದಿ ಬಸವಳಿದ ಸಾತ್ಯಕಿಯಂ ಭೂರಿಶ್ರವನಶ್ರಮದೊಳ್ ನೆಲಕಿಕ್ಕಿ ಗಂಟಲಂ ಮೆಟ್ಟಿ ತಲೆಯನರಿವಾಗಳ್ ಸಾತ್ಯಕಿ ಭೂಮಿಯುದ್ಧ ಪ್ರವೀಣನಪ್ಪುದಱಿಂದಾತನ

ಹೋದನು. ೧೩೯. ದುರ್ಯೋಧನನು ತಡೆಯದೆ ಎದುರಾಗಿ ಬಂದು ಭೋರ್ಗರೆದು ಬಾಣಪ್ರಯೋಗ ಮಾಡಲು ಬಾಣಗಳು ನಾಟಿಕೊಳ್ಳದೆ ಸಿಡಿದುವು. ಅರ್ಜುನನು ಅವನ ಎರಡು ಕೈಗಳನ್ನೂ ಬಿರಿದುಹೋಗುವ ಹಾಗೆ ಹೊಡೆದು ಆಯುಧವನ್ನು ಹಿಡಿಯುವ ಶಕ್ತಿಯನ್ನೂ ಕೆಡಿಸಿದನು. ಭೀಮನು ಆತನನ್ನು ಕೊಲ್ಲುವೆನೆಂದು ಮಾಡಿದ ಪ್ರತಿಜ್ಞೆಯು ಹುಸಿಯಾಗುವುದೆಂದು ಅವನನ್ನು ಕೊಲ್ಲಲಾರದೆ ಹೋದನು. ವ॥ ಅಷ್ಟರಲ್ಲಿ ಈ ಕಡೆ ಧರ್ಮರಾಯನು ಅರ್ಜುನನ ರಕ್ಷಣೆಗಾಗಿ ಸಾತ್ಯಕಿಯನ್ನು ಕಳುಹಿಸಲು ಕೌರವಸೇನಾಸಮುದ್ರದ ಮಧ್ಯಭಾಗವನ್ನು ದಾಟಿ ಬರುತ್ತಿದ್ದ ಸಾತ್ಯಕಿಯನ್ನು ಭೂರಿಶ್ರವನು ಅಡ್ಡಗಟ್ಟಿ ಎದುರಿಸಿದನು. ೧೪೦. ಹೋಗಬೇಡ ಎಂದು ಮೂದಲಿಸಲು ಸಾತ್ಯಕಿಯು ಹರಿತವಾದ ಬಾಣ ಸಮೂಹದಿಂದ ಭಯಂಕರವಾಗಿ ಅವನ ತೇರನ್ನು ಕತ್ತರಿಸಲು ಹಿರಿದ ಕತ್ತಿಯೊಡನೆ ಆತನು ಸಮೀಪಕ್ಕೆ ಬಂದು ಎದುರಿಸಿದನು. ಆಗ ತಾನೂ ಭಯವಿಲ್ಲದೆ ಕತ್ತಿಯನ್ನು ಹೊರಸೆಳೆದು ನುಗ್ಗಿ ಭೂಮ್ಯಾಕಾಶಗಳವರೆಗೆ ಭಯಂಕರವಾಗಿ ವಿರೋಧಿಗಳು ಸಂಧಿಸಿ ಯುದ್ಧಮಾಡಿದರು. ವ॥ ಹಾಗೆ ಇಬ್ಬರೂ ಒಬ್ಬೊಬ್ಬರಲ್ಲಿ ವೀರವನ್ನೂ ಗರ್ವವನ್ನೂ ಪ್ರಕಾಶಿಸಲು ದಾಸವಾಳದ ಹೂವಿನ ಹಾರವನ್ನು ದೊಡ್ಡದಾಗಿ ರಾಶಿಮಾಡಿದಂತೆ ದಿಕ್ಕು ದಿಕ್ಕಿಗೆ ಚೆದುರಿ ಮಾಂಸದ ಉಂಡೆಗಳೂ ಕಿತ್ತಳೆಯ ಮತ್ತು ಬಣ್ಣ ಬಣ್ಣದ ಬಟ್ಟೆಯ ಬಾವುಟಗಳಂತೆ ಗಗನಕ್ಕೆ ಅತ್ತಿತ್ತ ಚಲಿಸುವ ಮತ್ತು ಚಿಮ್ಮಿ ಹಾರುವ ರಕ್ತದ ಸುಂಟುರುಗಾಳಿಗಳೂ ಅತಿ ಭಯಂಕರಾಕಾರವಾದುವು. ಹಾಗೆ ಕಾದಿ ಶಕ್ತಿಗುಂದಿದ ಸಾತ್ಯಕಿಯನ್ನು ಭೂರಿಶ್ರವನು ಶ್ರಮಪಿಲ್ಲದೆಯೇ ನೆಲಕ್ಕೆ ಬಡಿದು ಗಂಟಲನ್ನು ಮೆಟ್ಟಿ ತಲೆಯನ್ನು ಕತ್ತರಿಸುವಾಗ ಸಾತ್ಯಕಿಯು ಭೂಮಿಯುದ್ಧದಲ್ಲಿ ಪ್ರವೀಣನಾಗಿದ್ದುದರಿಂದ ಆತನ ಕತ್ತಿಯ ಬಾಯಲ್ಲಿ

ಬಾಳ ಬಾಯೊಳ್ ಚಕ್ರಾಕೃತಿಯೊಳ್ ತಲೆಯಂ ತಿರುಪುತ್ತುಮಿರ್ದಾಗಳದಂ ಮುರಾಂತಕಂ ಕಂಡು ವಿದ್ವಿಷ್ಟ ವಿದ್ರಾವಣಂಗೆ ತೋಱಿದೊಡೆ-

ಕಂ॥ ನರನೆಚ್ಚೊಡೆ ಪಱಿದು ಕರಂ
ಕರವಾಳೊಡನಮರೆ ಕಾಸಿ ಬೆಚ್ಚಂತೆ ವಸುಂ।
ಧರೆಯೊಳ್ ಬಿಟ್ಟಿರ್ದುದದೇಂ
ತಿರವೋ ಪೂಣಿಸಿದ ಮುಷ್ಟಿ ಭೂರಿಶ್ರವನಾ ॥ ೧೪೧

ವ॥ ಆಗಳ್ ಸಾತ್ಯಕಿ ಮುಳಿಸಿನೊಳ್ ಕಣ್ಗಾಣದೆ ಭೂರಿಶ್ರವನ ತಲೆಯನರಿದು ತನ್ನೇಱಿಂಗೆ ತಾನೆ ಸಿಗ್ಗಾಗಿ ಪೋದನನ್ನೆಗಂ ಯಮನಂದನನ ಬೆಸದೊಳ್ ಫಲ್ಗುಣನಂ ಕೆಯ್ಗೊಳಲ್ ಬರ್ಪ ಮರುನ್ನಂದನನಂಗಾ ದ್ರೋಣರಡ್ಡಂ ಬಂದೊಡೆ ಗುರುಗೆ ಗುರುದಕ್ಷಿಣೆಗುಡುವಂತವರ ರಥಮಂ ಶತಚೂರ್ಣಂ ಮಾಡಿ ಕಳಿಂಗರಾಜ ಗಜಘಟೆಗಳನೌಂಕಿ ಸೊರ್ಕುತ್ತುಂ ಬರೆ ದುಶ್ಶಾಸನಾದಿಗಳದಿರದಿದಿರಂ ಬಂದಾಂತೊಡೆ-

ಚಂ॥ ನಿಡುವಗೆ ಸೈಪಿನಿಂದೆ ದೊರೆಕೊಂಡುದಿವರ್ ಗಜೆಗೊಂಡೆನಪ್ಪೊಡೀ
ಗಡೆ ಪರೆದಪ್ಪರೆಚ್ಚು ತವೆ ಕೊಲ್ವೆನಿವಂದಿರನೆಂದು ನಚ್ಚನ।
ಚ್ಚುಡಿವಿನಮೆಚ್ಚೊಡೆಯಿನೆಚ್ಚರುಣಾಂಬು ಕಲಂಕಿ ಪಾಯೆ ಮು
ನ್ನಡಿಯೊಳುರುಳ್ದರಂಧನೃಪನಂದನರಂದು ಮರುತ್ತನೂಜನಾ ॥ ೧೪೨

ಚಕ್ರಾಕೃತಿಯಿಂದ ತಲೆಯನ್ನು ತಿರುಗಿಸುತ್ತಿದ್ದಾಗ ಅದನ್ನು ಕೃಷ್ಣನು ನೋಡಿ ವಿದ್ವಿಷ್ಟ ವಿದ್ರಾವಣನಾದ ಅರ್ಜುನನಿಗೆ ತೋರಿಸಿದನು. ೧೪೧. ಅರ್ಜುನನು (ಭೂರಿಶ್ರವನನ್ನು) ಹೊಡೆಯಲು ಅವನ ಕೈ ಕತ್ತರಿಸಿಹೋಗಿ ಕತ್ತಿಯೊಡನೆ ಕಾಯಿಸಿ ಬೆಸೆದ ಹಾಗೆ ಅಂಟಿಕೊಂಡಿದ್ದು ಭೂಮಿಯಲ್ಲಿ ಬಿದ್ದಿತು. ಭೂರಿಶ್ರವನು ಪ್ರತಿಜ್ಞೆಮಾಡಿ ಹಿಡಿದ ಮುಷ್ಟಿಯು ಎಷ್ಟು ಸ್ಥಿರವಾದುದೊ! ವ॥ ಆಗ ಸಾತ್ಯಕಿಯು ಕೋಪದಿಂದ ಕುರುಡನಾಗಿ ಭೂರಿಶ್ರವನ ತಲೆಯನ್ನು ಕತ್ತರಿಸಿದನು. ತನ್ನ ಯುದ್ಧಕಾರ್ಯಕ್ಕೆ ತಾನೆ ನಾಚಿಕೊಂಡು ಹೋದನು. ಅಷ್ಟರಲ್ಲಿ ಧರ್ಮರಾಜನ ಆಜ್ಞೆಯ ಪ್ರಕಾರ ಅರ್ಜುನನಿಗೆ ಸಹಾಯಕನಾಗಿ ಬರುತ್ತಿದ್ದ ಭೀಮನಿಗೆ ದ್ರೋಣಾಚಾರ್ಯರು ಅಡ್ಡಲಾಗಿ ಬರಲು ಭೀಮನು ಗುರುವಿಗೆ ಗುರುದಕ್ಷಿಣೆಯನ್ನು ಕೊಡುವಂತೆ ಅವರ ತೇರನ್ನು ನೂರು ಚೂರುಗಳನ್ನಾಗಿ ಮಾಡಿ ಕಳಿಂಗರಾಜನ ಆನೆಯ ಸಮೂಹವನ್ನು ಒತ್ತಿ ಸೋಕುತ್ತ ಬರಲು ದುಶ್ಶಾಸನನೇ ಮೊದಲಾದವರು ಹೆದರದೆ ಎದುರಾಗಿ ಬಂದು ಪ್ರತಿಭಟಿಸಿದರು. ೧೪೨. ದೀರ್ಘಕಾಲದ ಶತ್ರುಗಳಾದ ಇವರು ಅದೃಷ್ಟದಿಂದ ದೊರೆಕೊಂಡಿದ್ದಾರೆ. ಗದೆಯನ್ನು ತೆಗೆದುಕೊಂಡರೆ ಇವರು ಈಗಲೇ ಚದುರಿ ಓಡಿಹೋಗುತ್ತಾರೆ. ಇವರನ್ನು ಬಿಲ್ಲಿನಿಂದಲೇ ಪೂರ್ಣವಾಗಿ ಹೊಡೆದು ಕೊಂದುಹಾಕುತ್ತೇನೆ. ಎಂದು ತನ್ನ ಆತ್ಮವಿಶ್ವಾಸಕ್ಕೆ ಪಾತ್ರವಾದ ಮುದ್ರೆಯನ್ನು ಒಡೆಯುವ ಹಾಗೆ ಹೊಡೆಯಲು ಆ ಹೊಡೆದ ಕಡೆಯು ಗಾಯದಿಂದ ಹೊರಟ ರಕ್ತವು ಕದಡಿ ಹಾಯಲು

ವ|| ಅಂತು ದುರ್ಮುಖ ದುರ್ಮದ ದುರ್ಧರ್ಷಣರ್ ಮೊದಲಾಗೆ ಮೂವತ್ತು ಮೂವರಂ ಕೊಂದು ದುಶ್ಶಾಸನನಂ ವಿರಥನಂ ಮಾಡಿ ದುರ್ಯೋಧನನನೊಂದೆ ನಿಶಿತ ವಿಶಿಖ ಹತಿಯಿಂ ಸುರುಳ್ದುರುಳ್ವಿನಮೆಚ್ಚು ಮೂರ್ಛಾಗತನಂ ಮಾಡಿ ಸಿಂಹನಾದದಿನಾರ್ದು ಮುಟ್ಟೆವರ್ಪಾಗಳಾಳ್ದನ ಸಾವಂ ನೋಡಲಾಱದೆ-

ಮ|| ಎಡೆಗೊಂಡಂಕದ ಕರ್ಣನೆಯ್ದೆವರೆ ದಿವ್ಯಾಸ್ತ್ರಂಗಳಿಂದಂ ಸಿಡಿಲ್
ಪೊಡೆವಂತಪ್ಪಿನಮೆಚ್ಚುವಗ್ರರಥಮಂ ಮುಯ್ಯೇೞು ಸೋೞ್ ಕೋಪದಿಂ ।
ಕಡಿಯಲ್ ಸಾರ್ದೊಡಟಲ್ದು ಸೂತಸುತನೊಂದುಗ್ರೇಷುವಿಂ ತಿಣ್ಣಮೆ
ಚ್ಚೊಡನಾರ್ದಂ ನಸುಮೂರ್ಛೆವೋಗಿ ರಥದೊಳ್ ಭೀಮಂ ನರಲ್ವನ್ನೆಗಂ ||೧೪೩

ವ|| ಅಂತು ಮೂರ್ಛಾಗತನಾದ ಭೀಮನ ಕೊರಲೊಳ್ ಬಿಲ್ಲಂ ಕೋದು ಮೇಗಿಲ್ಲದೆ ತೆಗೆದು-

ಕಂ|| ತಾಂ ಗಡಮೆನ್ನಾಳ್ದನ ತೊಡೆ
ಯಂ ಗಡಮಿನ್ನುಡಿವನೆನ್ನೊಳಂ ಕಾದುಪನೆಂ ।
ದಂಗಱಿತಿ ನುಡಿದು ಕೊಲ್ಲದೆ
ತಾಂಗಿಪನಂಬಿಕೆಗೆ ನುಡಿದ ನುಡಿ ನಿಲೆ ಮನದೊಳ್ || ೧೪೪

ವ|| ಅನ್ನೆಗಮಿತ್ತ ಚಾಣೂರಾರಿ ಜರಾಸಂಧಾರಿಯ ಮುನ್ನೆಗೆದು ಬಟೆಕ್ಕಡಂಗಿದ ಸಿಂಹನಾದಕ್ಕೆ ಮನಃಕ್ಷತಂಬಟ್ಟು ಸಾತ್ಯಕಿಯುನಾರಯಲಟ್ಟಿದೊಡಾತಂ ಬಂದಚೇತನನಾಗಿ ಬಿಟ್ದಿರ್ದ

ಕುರುಡುದೊರೆಯಾದ ಧೃತರಾಷ್ಟ್ರನ ಮಕ್ಕಳು ಆ ವಾಯುಪುತ್ರನಾದ ಭೀಮನ ಕಾಲಿನ ಮುಂಭಾಗದಲ್ಲಿ ಉರುಳಿದರು. ವ|| ಹಾಗೆ ದುರ್ಮುಖ, ದುರ್ಮದ, ದುರ್ಧರ್ಷಣರೇ ಮೊದಲಾದ ಮೂವತ್ತು ಮೂರು ಮಂದಿಯನ್ನೂ ಕೊಂದು ದುಶ್ಶಾಸನನನ್ನು ರಥವಿಲ್ಲದವನನ್ನಾಗಿ ಮಾಡಿ (ತೇರಿನಿಂದ ಉರುಳಿಸಿ) ದುರ್ಯೋಧನ ನನ್ನು ಒಂದೇ ಹರಿತವಾದ ಬಾಣದ ಪೆಟ್ಟಿನಿಂದ ಮುರಿದುಕೊಂಡು ಉರುಳಿ ಬೀಳುವ ಹಾಗೆ ಹೊಡೆದು ಮೂರ್ಛಿತನನ್ನಾಗಿ ಮಾಡಿ ಸಿಂಹಧ್ವನಿಯಿಂದ ಗರ್ಜಿಸಿ ಹತ್ತಿರಕ್ಕೆ ಬಂದಾಗ ತನ್ನನ್ನಾಳಿದ ಯಜಮಾನನ ಸಾವನ್ನು ನೋಡಲಾರದೆ -೧೪೩. ಪ್ರಸಿದ್ಧನಾದ ಕರ್ಣನು ದುರ್ಯೋಧನ ಮತ್ತು ಭೀಮರ ಮಧ್ಯೆ ಪ್ರವೇಶಿಸಿ ಹತ್ತಿರ ಬರಲು (ಭೀಮನು ತನ್ನ) ಶ್ರೇಷ್ಠವಾದ ಬಾಣಗಳಿಂದ ಸಿಡಿಲು ಹೊಡೆಯುವ ಹಾಗೆ ಹೊಡೆದು (ಕರ್ಣನ) ಎತ್ತರವಾದ (ಶ್ರೇಷ್ಠವಾದ) ತೇರನ್ನು ಇಪ್ಪತ್ತೊಂದುಸಲ ಕೋಪದಿಂದ ಕಡಿದು ಹಾಕಿದನು. ಕರ್ಣನು ವ್ಯಥೆಪಟ್ಟು ತನ್ನ ಶ್ರೇಷ್ಠವಾದ ಬಾಣದಿಂದ ತೀಕ್ಷ್ಣವಾಗಿ ಹೊಡೆದು ಭೀಮನು ರಥದಲ್ಲಿಯೇ ಸ್ವಲ್ಪ ಮೂರ್ಛೆಹೋಗಿ ನರಳುವ ಹಾಗೆ ಹೊಡೆದು ಆರ್ಭಟಮಾಡಿದನು. ವ|| ಹಾಗೆ ಮೂರ್ಛೆ ಹೋದ ಭೀಮನ ಕತ್ತಿಗೆ ಬಿಲ್ಲಿನ ಹಗ್ಗವನ್ನು ಸುತ್ತಿ ಅಸಮಾನವಾದ ರೀತಿಯಲ್ಲಿ ಸೆಳೆದು ೧೪೪. ಇವನೇ ಅಲ್ಲವೇ ನನ್ನ ಯಜಮಾನನ ತೊಡೆಯನ್ನು ಒಡೆಯುವವನು; ಇನ್ನು ನನ್ನಲ್ಲಿಯೂ ಕಾದುವವನು ಎಂದು ಹೇಳಿ ಕರ್ಣನು ತಾಯಿಗೆ ಕೊಟ್ಟ ಮಾತು (ಭಾಷೆ) ಮನಸ್ಸಿನಲ್ಲಿ ನಿಂತಿರಲಾಗಿ ಭೀಮನನ್ನು ಕೊಲ್ಲದೆ ತಡೆದನು. ವ|| ಅಷ್ಟರಲ್ಲಿ ಈ ಕಡೆ ಕೃಷ್ಣನು ಭೀಮನ ಮುಂದಕ್ಕೆ ಹಾರಿ ಬಳಿಕ ಕುಗ್ಗಿದ ಸಿಂಹಧ್ವನಿಗೆ ಮನಸ್ಸಿನಲ್ಲಿಯೇ ವ್ಯಥೆಪಟ್ಟು ಸಾತ್ಯಕಿಯನ್ನು

ವೃಕೋದರನಂ ತನ್ನ ರಥಮನೇಱಿಸಿಕೊಂಡು ಕೂಡೆ ವಂದಸನ್ನೆಗಂ ದುರ್ಯೋಧನಂ ಕರ್ಣಂ ಬೆರಸು ಸೈಂಧವನ ಮೊನೆಯೊಳಾತನಂ ಪೆಱಗಿಕ್ಕಿ ಮುಂದೆ ನಿಂದಾಗಳ್-

ಚಂ॥ ದಿನಕರನಸ್ತಮಸ್ತಕಮನಾಸೆವಡಲ್ ಬಗೆದಪ್ಪನೇಕೆ ಕೆ
ಮ್ಮನೆ ತಡೆವೈ ಜಯದ್ರಥನನಿಕ್ಕುಟಿದಾರೊಳಮಿಂ ತೊಡಂಕವೇ ।
ಡೆನುತುಮಜಂ ಮರುಜ್ಜವದೆ ಚೋದಿಸೆ ಪಾರ್ಥನ ದೇವದತ್ತ ನಿ
ಸ್ವನದೊಳೆ ತೀವಿ ಪೊಟ್ಟುಸೊಡೆವಂತೆವೊಲಾದುದಜಾಂಡಮಂಡಳಂ ॥ ೧೪೫

ಚಂ॥ ಚಟುಳಿತ ಚಕ್ರನೇಮಿ ಪರಿವರ್ತನ ಘಟ್ಟನ ಘಾತ ನಿರ್ಭರ
ಸ್ಫುಟಿತ ಧರಾತಳಂ ವಿಜಯನುಗ್ರರಥಂ ಪರಿದತ್ತು ದಲ್ ಘಟಾ ।
ಘಟಿತ ಹಟದ್ವಿರೋಧಿ ರುಧಿರಪ್ಲವಲಂಪಟ ಸಂಕಟೋತ್ಕಟಂ
ಕಟಕಟ ಘಾತ ನಾಕತಟ ಸಂಕಟ ಸಂಗರ ರಂಗಭೂಮಿಯೊಳ್ ॥ ೧೪೬

ವ॥ ಆಗಳ್ ಕುರುಧ್ವಜಿನಿಗೆ ಭಯಜ್ವರಮುಂ ಮಹೇಶ್ವರಜ್ವರಮುಂ ಬರೆ ಬರ್ಪುದಾರ ಮಹೇಶ್ವರನ ರಥದ ಬರವಂ ಕಂಡು ಕರ್ಣ ಶಲ್ಯ ಶಕುನಿ ಶಾರದ್ವತ ಕೃತವರ್ಮ ದುರ್ಯೋಧನ ದುಶ್ಶಾಸನರ್ ಮೊದಲಾದತಿರಥ ಸಮರಥ ಮಹಾರಥಾರ್ಧರಥರೊಂದೆವಿಂದೆಯಲ್ಲ ದೊಂದೊರ್ವರೊಳ್ ಸಂಧಿಸಿ ಗೊಂದಣಿಸಿ ನಿಂದಾಗಳ್-

ನೋಡಿಕೊಂಡು ಬರಲು ಕಳುಹಿಸಿದನು. ಆತನು ಬಂದು ಶಕ್ತಿಗುಂದಿ ಬಿದ್ದಿದ್ದ ಭೀಮನನ್ನು ತನ್ನ ರಥದಲ್ಲಿ ಏರಿಸಿಕೊಂಡು ಜೊತೆಯಲ್ಲಿಯೇ ಬಂದನು. ಅಷ್ಟರಲ್ಲಿ ಕರ್ಣನೊಡಗೂಡಿ ದುರ್ಯೋಧನನು ಸೈಂಧವನ ಯುದ್ಧಭೂಮಿಗೆ ಬಂದು ಆತನನ್ನು ಹಿಂದೆ ಹಾಕಿ ತಾನು ನಿಂತನು. ೧೪೫. ಸೂರ್ಯನು ಅಸ್ತಪರ್ವತದ ನೆತ್ತಿಯನ್ನು ಸೇರಲು (ಮುಳುಗಲು) ಯೋಚಿಸುತ್ತಿದ್ದಾನೆ. ಏಕೆ ಸುಮ್ಮನೆ ಸಾವಕಾಶ ಮಾಡುತ್ತಿದ್ದೀಯೇ? ಜಯದ್ರಥನನ್ನು ಹೊಡೆ; ಮಿಕ್ಕವರಾರಲ್ಲಿಯೂ ತೊಡಕಿಕೊಳ್ಳ ಬೇಡ ಎನ್ನುತ್ತ ಕೃಷ್ಣನು ವಾಯುವೇಗದಿಂದ ರಥವನ್ನು ಚೋದಿಸಿದನು. ಅರ್ಜುನನ ದೇವದತ್ತವೆಂಬ ಶಂಖದ ಧ್ವನಿಯಿಂದ ತುಂಬಿ ಬ್ರಹ್ಮಾಂಡಮಂಡಲವು ಒಡೆಯು ವಂತಾಯಿತು. ೧೪೬. ವೇಗವಾಗಿ ಚಲಿಸುತ್ತಿರುವ ತೇರಿನ ಚಕ್ರದ ಬಳೆಯ ಸುತ್ತುವುದರ ಪೆಟ್ಟಿನ ಹೊಡೆತದಿಂದ ಭರಿಸಲಸಾಧ್ಯವಾಗಿ ಭೂಪ್ರದೇಶವು ಸೀಳಿತು. ಅರ್ಜುನನ ಭಯಂಕರವಾದ ರಥವು ಆನೆಗಳ ಗುಂಪಿನಿಂದ ಕೂಡಿದ ಶತ್ರುಗಳ ಪ್ರಕಾಶಮಾನವಾದ ರಕ್ತಪ್ರವಾಹದಲ್ಲಿ ಆಸಕ್ತಿಯುಳ್ಳ ತಮ್ಮ ಕಟಕಟವೆಂಬ ಹೊಡೆತದಿಂದ ಸ್ವರ್ಗಕ್ಕೂ ಹಿಂಸೆಯನ್ನುಂಟುಮಾಡುತ್ತ ಯುದ್ಧಭೂಮಿಯಲ್ಲಿ ಹರಿಯಿತು. ವ॥ ಆಗ ಕೌರವಸೈನ್ಯಕ್ಕೆ ಭಯವೆಂಬ ಜ್ವರವೂ ಈಶ್ವರನ ಹಣೆಗಣ್ಣಿನ ಜ್ವರವೂ ಬರುವ ಹಾಗೆ ಬರುತ್ತಿರುವ ಉದಾರಮಹೇಶ್ವರನಾದ ಅರ್ಜುನನ ರಥದ ಬರುವಿಕೆಯನ್ನು ಕಂಡು ಕರ್ಣ, ಶಲ್ಯ, ಶಕುನಿ, ಶಾರದ್ವತ, ಕೃತವರ್ಮ, ದುರ್ಯೋಧನ, ದುಶ್ಶಾಸನನೇ ಮೊದಲಾದ ಅತಿರಥ, ಸಮರಥ, ಮಹಾರಥ, ಅರ್ಧರಥರು ಗುಂಪಾಗಿರದೆ ಬೇರೆ

ಚಂ॥ ಶರದೊಳಗುರ್ಚಿಪೋಪ ಪೊಳಪಿಂಗೊಳಗಾಗಿ ತಗುಳ್ದುದೊಂದು ಬೆ
ಳ್ಸರಿಗೆಣೆಯಾದುದೀಯೆಱಗುವಂಬಿನ ಬಲ್ಸರಿಯೆಂಬಿನಂ ನಿರಂ ।
ತರದೊಳೆ ಪಾಯ್ದ ಕೂರ್ಗಣೆಗಳಂ ತಱಿದೊಟ್ಟ ತೆರಳ್ಚಿ ತೂಳ್ದಿಕೊಂ
ಡರೆದು ಮುಗುಳ್ಚೆ ಸಣ್ಣಿಸಿದನಾಂತ ಚತುರ್ಬಲಮಂ ಗುಣಾರ್ಣವಂ ॥೧೪೭

ಮ॥ ಸ್ರ॥ ಕಲಿಗಂ ಬಲ್ಲಾಳ್ಗಮಂಬೆತ್ತಿದೆನಿದುವೆ ಪದಂ ಮಾರ್ಕೊಳಲ್ ಸಿಂಧುರಾಜಂ
ಗೆಲಲೆಂದಾಂ ಬಂದೆನಿಂ ಕೊಂದಪನೆ ನೆರದು ನಿಂದಾನಿಮೆಂದಾಂತರಂ ಮೂ ।
ದಲಿಸುತ್ತೆಚ್ಚಂ ಪ್ರಚಂಡ ಪ್ರಳಯ ಘನ ಘಟಾರಾವದಿಂದಾರ್ದು ಬಾಣಾ
ವಲಿಯಿಂದಂ ಪೂೞ್ ರೋದೋವಿವರಮನೊದವಿತ್ತೊಂದು
ಘೋರಾಂಧಕಾರಂ ॥ ೧೪೮

ವ॥ ಅಂತಮೋಘಾಸ್ತ್ರಧನಂಜಯನೆಚ್ಚ ಶರಸಂಘಾತದಿನೊಗೆದ ರಣಗೞ್ತಲೆಯೆ ಮೊಲಗೞ್ತಲೆಯಂ ಮಾಡೆ ನೇಸಱ್ ಪಟ್ಟತ್ತು ವಿಜಯಂ ಸೋಲ್ತನೆಂದು ಕೌರವಬಲಮಾರ್ದೊಡೆ-

ಚಂ॥ ಜ್ವಳದನಳಾಸ್ತ್ರದಿಂದಮಿಸೆ ಕೞ್ತಲೆ ತೂಳ್ದು ತೆರಳ್ದುದಾಗಳು
ಮ್ಮಳಿಸಿ ಮಹಾರಥರ್ ಪೆಳಱ್ ಸೈಂಧವನೆನ್ನಳವಿಂಗಮೆನ್ನ ದೋ ।
ರ್ವಳದಳವಿಂಗಮಿಂ ಸೆಡೆದಿರಲ್ ದೊರೆಯಲ್ತೆನಗೆಂದು ಬಂದಸುಂ
ಗೊಳೆ ಪೊಣರ್ದಂ ಸುರರ್ ಪೊಗೞ್ ತನ್ನಳವಂ ಜಗದೇಕಮಲ್ಲನೊಳ್ ॥೧೪೯

ಬೇರೆಯಾಗಿ ಒಬ್ಬೊಬ್ಬರಲ್ಲಿ ಸೇರಿಕೊಂಡು ನಿಂತರು. ೧೪೭. ನಿರಂತರವಾಗಿ ಬೀಳುವ ಬಾಣಗಳ ಮಳೆಯ ನಡುವೆ ನುಸುಳಿಕೊಂಡು ಬಂದು ಪ್ರಕಾಶಿಸುವ ಸೂರ್ಯಕಿರಣವು ಬಾಣದ ಮಳೆಯ ಮಧ್ಯೆ ಸುರಿಯುವ ಬಿಳಿಯ ಕಿರಣಗಳ ಮಳೆಯೆಂಬಂತಾಯಿತು ಎನ್ನುವ ಹಾಗೆ ಎಡಬಿಡದೆ ಹಾದು ಬರುತ್ತಿರುವ ಬಾಣಗಳಿಂದ ಪ್ರತಿಭಟಿಸಿದ ಚತುರಂಗಸೈನ್ಯವನ್ನು ಅರ್ಜುನನು ಕತ್ತರಿಸಿ, ಓಡಿಸಿ ರಾಶಿಮಾಡಿಕೊಂಡು ಅರೆದು ಪುಡಿಮಾಡಿದನು. ೧೪೮. 'ಶೂರರಿಗೂ ಬಲಿಷ್ಠರಾದ ವೀರರಿಗೂ ಸವಾಲು ಮಾಡುತ್ತಿದ್ದೇನೆ. (ಬಾಣಗಳನ್ನು ಎತ್ತಿದ್ದೇನೆ). ಪ್ರತಿಭಟಿಸುವುದಕ್ಕೆ ಇದೇ ಹದವಾದ ಕಾಲ. ಸೈಂಧವನನ್ನು ಗೆಲ್ಲುವುದಕ್ಕಾಗಿ ನಾನು ಬಂದಿದ್ದೇನೆ. ಕೊಲ್ಲುತ್ತೇನೆ. ಗುಂಪಾಗಿ ನಿಂತು ಎದುರಿಸಿ ಎಂದು ಪ್ರತಿಭಟಿಸಿದವರನ್ನು ಮೂದಲಿಸಿದನು (ಅಣಕವಾಡಿದನು). ಪ್ರಚಂಡವಾದ ಪ್ರಳಯಕಾಲದ ಗುಡುಗಿನ ಶಬ್ದದಿಂದ ಆರ್ಭಟಮಾಡಿ ಹೊಡೆದು ಬಾಣಗಳ ಸಮೂಹದಿಂದ ಆಕಾಶಪ್ರದೇಶವನ್ನು ಹೂಳಿದನು. ಅದರಿಂದ ಭಯಂಕರವಾದ ಕತ್ತಲೆಯು ಆವರಿಸಿತು. ವ॥ ಹಾಗೆ ಅಮೋಘಾಸ್ತ್ರ ಧನಂಜಯನಾದ ಅರ್ಜುನನು ಹೊಡೆದ ಬಾಣಗಳ ಸಮೂಹದಿಂದುಂಟಾದ ಯುದ್ಧಗತ್ತಲೆಯೇ ಮೊಲಗತ್ತಲೆಯನ್ನು (ಚಂದ್ರನಲ್ಲಿರುವ ಮೊಲಗತ್ತಲೆಯನ್ನು - ರಾತ್ರಿಯ ಭ್ರಮೆಯನ್ನು) ಉಂಟುಮಾಡಲು "ಸೂರ್ಯನು ಮುಳುಗಿದನು-ಅರ್ಜುನನು ಸೋತನು" ಎಂದು ಕೌರವ ಸೈನ್ಯವು ಕೂಗಿಕೊಂಡಿತು. ೧೪೯. ತಕ್ಷಣವೇ ಅರ್ಜುನನು ಪ್ರಕಾಶಮಾನವಾದ ಆಗ್ನೇಯಾಸ್ತ್ರವನ್ನು ಪ್ರಯೋಗಿಸಲು ಕತ್ತಲೆ ಹರಿದು ಓಡಿಹೋಯಿತು. ಆಗ ಮಹಾರಥರು ವ್ಯಥೆಪಟ್ಟು ಹೆದರಿದರು. ಸೈಂಧವನು ತನ್ನ ಶಕ್ತಿಗೂ ತನ್ನ ಬಾಹುಬಲದ

ವ॥ ಅಂತತಿರಥ ಮಥನನ ರಥಕ್ಕದಿರದಿದಿರಂ ತನ್ನ ರಥಮಂ ಪರಿಯಿಸಿ ಜಯದ್ರಥಂ ಮುಟ್ಟೆವಂದು-

ಉ॥ ನಿನ್ನೆ ಪೊರಳ್ಚಿ ನಿನ್ನ ಮಗನಂ ಸೆರಗಿಲ್ಲದೆ ಕೊಂದನಿಂದುಮಿಂ
ತಿನ್ನೆಗಮಿರ್ಪುದಂ ಭಯದಿನಿರ್ದೆನೆ ನಿನ್ನನೆ ಪಾರುತಿರ್ದೆನೆಂ ।
ದುನ್ನತ ಶೌರ್ಯದಿಂದಜಿತನಂ ನರನಂ ಮುನಿದೆಚ್ಚನೇೞುಮೆಂ
ಟುನ್ನಿಶಿತಾಸ್ತ್ರದಿಂದದಟದೇಂ ದೊರೆವೆತ್ತುದೊ ಸಿಂಧುರಾಜನಾ ॥ ೧೫೦

ವ॥ ಅಂತೆಚ್ಚು ಕಿಚ್ಚುಂ ಕಿಡಿಯುಮಾಗಿ ಪೆರ್ಚಿದುಮ್ಮಚ್ಚರದಿಂದಚ್ಚರಿಯಾಗಿ ಕಾದೆ-

ಸ್ರ ॥ ಎಂತಸ್ಮತ್ಪುತ್ರನಂ ಸಂಗರದೊಳಟಿದೆಯಿನ್ನಂತೆ ನಿಲ್ ಶಕ್ತಿ ಚಾತು
ರ್ದಂತಂಗಳ್ ನಿನ್ನನಾಂ ಕೊಲ್ವೆಡೆಯೊಳೆಲವೊ ಪೇೞ್ ಕಾವುವೇ ಕಾಯವಣ್ಮಿಂ ।
ದಂತಾಂತೆಚ್ಚೆಚ್ಚು ಸೂತ ಧ್ವಜ ಹಯ ರಥ ಸಂಘಾತಮಂ ನುರ್ಗೆ ಲೋಕ
ಕ್ಕಂತಂ ಮಾೞ್ಪಂತಕಂಬೋಲ್ ಗದೆವಿಡಿದುಱದೆಯ್ತರ್ಪನಂ ಕಂಡನಂತಃ ॥ ೧೫೧

ಕಂ॥ ತುಡು ಪಾಶುಪತಮನೆನೆ ನರ
ನೆಡೆಮಡಗದೆ ತುಡೆ ದಿಶಾಳಿ ನಡುಗಿದುದು ಸುರು ।
ೞ್ದುಡುಗಿದುದು ವಿಯತ್ತಳಮೆಳೆ
ಪಿಡುಗಿದುದು ಕಲಂಕಿ ಕದಡಿದುದು ಶಿವನ ಮನಂ ॥ ೧೫೨

ಶಕ್ತಿಗೂ ಇನ್ನು ಭಯದಿಂದ ನಾನು ಕುಗ್ಗಿರುವುದು ಯೋಗ್ಯವಲ್ಲ ಎಂದು ಹೊರಗೆ ಬಂದು ಪ್ರಾಣಾಪಹಾರಮಾಡುವ ಹಾಗೆ ತನ್ನ ಪರಾಕ್ರಮವನ್ನು ದೇವತೆಗಳೂ ಹೊಗಳುತ್ತಿರಲು ಜಗದೇಕಮಲ್ಲನಾದ ಅರ್ಜುನನಲ್ಲಿ ಹೋರಾಡಿದನು-ವ॥ ಅತಿರಥಮಥನನಾದ ಅರ್ಜುನನ ರಥಕ್ಕಿದಿರಾಗಿ ಹೆದರದೆ ತನ್ನ ರಥವನ್ನು ಹಾಯಿಸಿ ಸೈಂಧವನು ಸಮೀಪಕ್ಕೆ ಬಂದು ೧೫೦. "ನಿನ್ನೆಯ ದಿನ ಭಯವಿಲ್ಲದೆ ನಿನ್ನ ಮಗನಾದ ಅಭಿಮನ್ಯುವನ್ನು ಹೊರಳಿಸಿ ಕೊಂದೆ. ಇಂದು ಇಲ್ಲಿಯವರೆಗೆ ಭಯದಿಂದ ಮರೆಯಾಗಿದ್ದೆನೆ? ನಿನ್ನನ್ನೇ ನಿರೀಕ್ಷಿಸುತ್ತಿದ್ದೆ" ಎಂದು ಕೋಪದಿಂದಲೂ ಅತಿಶಯವಾದ ಪರಾಕ್ರಮದಿಂದಲೂ ಕೃಷ್ಣನನ್ನೂ ಅರ್ಜುನನ್ನೂ ಬಹಳಹರಿತವಾದ ಏಳೆಂಟು ಬಾಣಗಳಿಂದ ಹೊಡೆದನು. ಸೈಂಧವನ ಪರಾಕ್ರಮವು ಅದ್ಭುತವಾಯಿತು! ವ॥ ಕೋಪಗೊಂಡು ಹೆಚ್ಚಿದ ಮತ್ಸರದಿಂದ ಆಶ್ಚರ್ಯವಾಗವ ಹಾಗೆ ಕಾದಿದನು. ೧೫೧. "ನನ್ನ ಮಗನನ್ನು ಹೇಗೆ ಕೊಂದೆಯೋ ಇದು ಹಾಗೆಯೇ; ನಿಲ್ಲು, ಶಕ್ತಿಯುಕ್ತವಾದ ಚತುರಂಗಸೈನ್ಯಗಳು ನಾನು ನಿನ್ನನ್ನು ಕೊಲ್ಲುವ ಸಂದರ್ಭದಲ್ಲಿ ರಕ್ಷಿಸಲಾರವು. ಸಾಯಿ" ಎಂದು ಪ್ರತಿಭಟಿಸಿ ಸಾರಥಿ, ಬಾವುಟ, ಕುದುರೆ ಮತ್ತು ತೇರಿನ ಸಮೂಹಗಳನ್ನು ನುಚ್ಚುನೂರಾಗಿ ಪುಡಿಯಾಗುವ ಹಾಗೆ ಹೊಡೆದನು. ಸೈಂಧವನು ರೋಷಾವೇಶದಿಂದ ಪ್ರಪಂಚಕ್ಕೆ ಅಂತ್ಯವನ್ನುಂಟುಮಾಡುವ ಯಮನಂತೆ ಗದೆಯನ್ನು ಹಿಡಿದು ವೇಗವಾಗಿ ಬರುತ್ತಿದ್ದುದ್ದನ್ನು ಕೃಷ್ಣನು ನೋಡಿ ಅರ್ಜುನನಿಗೆ ೧೫೨. 'ಪಾಶುಪತಾಸ್ತ್ರವನ್ನು ಪ್ರಯೋಗಿಸು' ಎಂದು (ಕೃಷ್ಣನು) ಹೇಳಿದನು. ಅರ್ಜುನನು ಸಾವಕಾಶಮಾಡದೆ ಅದನ್ನು ಪ್ರಯೋಗಿಸಲು ದಿಕ್ಕುಗಳ ಸಮೂಹವು ನಡುಗಿತು.

ಚಂ॥ ಸುಟಿಯೊಳಗಿರ್ದು ಬೆಟ್ಟು ಪೊಱಪೊಣ್ಮುವಿನಂ ಲವಣಾಂಬುರಾಶಿ ಕು
ಕ್ಕುಟಿಗುದಿವಲ್ಲಿ ಕೊಬ್ಬುಗ್ಗಿದಿಯೆ ಮೇಗೆ ಸಿಡಿಲ್ದಗುಳಂತೆ ಕೂಡೆ ತ ।
ತ್ತಟಿಗುದಿಯುತ್ತುಮಿರ್ಪ ಕುದಿಯೊಳ್ ಸಿಡಿದಲ್ಲಿಯ ಮುತ್ತುಗಳ್ ಛಟಿಲ್
ಛಟಿಲೆನೆ ಕೊಂಡುವೊರ್ಮೊದಲೆ ರುದ್ರ ಸುರೇಂದ್ರ ವಿಮಾನಪಙ್ಕ್ತಿಯಂ ॥೧೫೩

ವ॥ ಅಂತು ಸಮುದ್ರಕ್ಷೋಭಮುಂ ತ್ರೈಲೋಕ್ಯಕ್ಷೋಭಮುಮೊಡನೊಡನಾಗೆ

ಚಂ॥ ತೆಗೆನೆಱೆದೂಱೆಕೊಂಡಿಸೆ ಶಿರಂ ಪರಿದತ್ತ ವಿಯತ್ತಳಂಬರಂ
ನೆಗೆದೊಡೆ ರಾಹು ಬಾಯ್ದೆಱೆದು ನುಂಗಲೆ ಬಂದಪುದೆಂಬ ಶಂಕೆಯಿಂ ।
ದಗಿದು ದಿನೇಶನಸ್ತಗಿರಿಯಂ ಮಱೆಗೊಂಡನಮೋಘಮೆಂಬ ಮಾ
ತುಗಳ ನೆಗಟ್ತೆಯಂ ಪಡೆದನಾಹವದೊಳ್ ಪರಸೈನ್ಯಭೈರವಂ ॥ ೧೫೪

ಚಂ॥ ಬರಿದಲರೋಳಿ ಸಗ್ಗದ ಮದಾಳಿಗಳಂ ಗೆಡಗೊಂಡು ದೇವಸುಂ
ದರಿಯರ ಕೆಯ್ಗಳಿಂದಮುಗೆ ತುಂಬುರು ನಾರದರೊಂದು ಗೇಯದಿಂ ।
ಚರಮೆರ್ದೆಯಂ ಪಳಂಚಲೆಯೆ ವೀರಲತಾಂಗಿಯ ಸೋಂಕು ಮೆಯ್ಯೊಳಂ
ಕುರಿಸೆ ನಿರಾಕುಳಂ ಕಳೆದನಾಜಿ ಪರಿಶ್ರಮಮಂ ಗುಣಾರ್ಣವಂ ॥ ೧೫೫

ಆಕಾಶಪ್ರದೇಶವು ಸುರುಳಿಯಾಗಿ ಸುಕ್ಕಿಹೋಯಿತು. ಭೂಮಿಯು ಒಡೆಯಿತು. ಈಶ್ವರನ ಮನಸ್ಸು ಕದಡಿಹೋಯಿತು. ೧೫೩. ಸಮುದ್ರದ ಸುಳಿಯಲ್ಲಿದ್ದ ಪರ್ವತಗಳು ಹೊರಹೊಮ್ಮುತ್ತಿರಲು ಉಪ್ಪುನೀರಿನ ಸಮುದ್ರವು ಅನ್ನವು ಕುದಿಯುವಂತೆ ಕುದಿಯುವಾಗ ಮೇಲಕ್ಕೆ ಸಿಡಿದ ಅನ್ನದ ಅಗುಳಂತೆ ಕೂಡಲೆ ತಳತಳವೆಂದು ಕುದಿಯುತ್ತಿರುವ ಕುದಿತದಲ್ಲಿ ಆ ಸಮುದ್ರದ ಮುತ್ತುಗಳು ಛಿಟಿಲ್ ಛಿಟಿಲ್ ಎಂದು ಆಕಾಶಕ್ಕೆ ಹಾರಿ ಶಿವನ ಮತ್ತು ದೇವೇಂದ್ರನ ವಿಮಾನಗಳ ಸಾಲುಗಳನ್ನು ಒಂದೇಸಲ ಆಕ್ರಮಿಸಿದುವು. ವ॥ ಹಾಗೆ ಸಮುದ್ರದ ಕ್ಷೋಭವೂ (ಕಲಕುವಿಕೆಯೂ) ಮೂರು ಲೋಕಗಳ ಕ್ಷೋಭವೂ (ಭಯಕಂಪನಾದಿಗಳೂ) ಜೊತೆಜೊತೆಯಲ್ಲಿಯೇ ಉಂಟಾದವು. ೧೫೪. ಅರ್ಜುನನು ಬಾಣವನ್ನು ದೀರ್ಘವಾಗಿ ಕಿವಿಯವರೆಗೂ ಸೆಳೆದು ಬಲವಾಗಿ ಅದುಮಿಕೊಂಡು ಹೊಡೆಯಲು ಸೈಂಧವನ ತಲೆಯು ಕತ್ತರಿಸಿ ಆಕಾಶದೆಡೆ ಹಾರಲು ರಾಹುಗ್ರಹವು ಬಾಯಿ ತೆರೆದುಕೊಂಡು ನುಂಗಲು ಬಂದಿದೆಯೋ ಎನ್ನುವ ಭಯದಿಂದ ಸೂರ್ಯನು ಹೆದರಿ ಅಸ್ತಪರ್ವತದಲ್ಲಿ ಅಡಗಿದನು. (ಮರೆಯಾದನು). ಪರಸೈನ್ಯಭೈರವನಾದ ಅರ್ಜುನನು ಇದರಿಂದ ಯುದ್ಧದಲ್ಲಿ ಬೆಲೆಯಿಲ್ಲದ ಶಕ್ತಿಯುಳ್ಳವನು ಎಂಬ ಕೀರ್ತಿಯನ್ನು ಪಡೆದನು. ೧೫೫. ಅರಳಿದ ಪುಷ್ಪಗಳ ಸಮೂಹವು ಸ್ವರ್ಗದ ಮದಾಳಿ (ಮದಿಸಿದ ದುಂಬಿ)ಗಳಿಂದ ಕೂಡಿ ದೇವಸುಂದರಿಯರ ಕೈಗಳಿಂದ ಸುರಿಯುತ್ತಿರಲು (ಪುಷ್ಪವೃಷ್ಟಿಯಾಗುತ್ತಿರಲು) ತುಂಬುರು ನಾರದರ ಗೀತದ ಒಂದು ಇಂಪಾದ ಸ್ವರವು ಎದೆಯನ್ನು ತಾಗಿ

ಇದು ವಿವಿಧ ವಿಬುಧಜನವಿನುತ ಜಿನಪದಾಂಭೋಜ
ವರ ಪ್ರಸಾದೋತ್ಪನ್ನ ಪ್ರಸನ್ನ ಗಂಭೀರ ವಚನ ರಚನ
ಚತುರ ಕವಿತಾಗುಣಾರ್ಣವ ವಿರಚಿತಮಪ್ಪ
ವಿಕ್ರಮಾರ್ಜುನ ವಿಜಯದೊಳ್
ಏಕಾದಶಾಶ್ವಾಸಂ

ಅಲೆಯುತ್ತಿರಲು ವಿಜಯಲಕ್ಷ್ಮಿಯ ಸ್ಪರ್ಶವು ಶರೀರದಲ್ಲಿ ರೋಮಾಂಚನವಾಗುತ್ತಿರಲು ಅರ್ಜುನನು ಯುದ್ಧದ ಆಯಾಸವನ್ನು ಶ್ರಮವಿಲ್ಲದೆಯೇ ಕಳೆದನು. ಇದು ಅನೇಕ ದೇವತೆಗಳಿಂದ ಸ್ತುತಿಸಲ್ಪಟ್ಟ ಜಿನಪಾದಕಮಲಗಳ ವರಪ್ರಸಾದದಿಂದ ಹುಟ್ಟಿದುದೂ ತಿಳಿಯೂ ಗಂಭೀರವೂ ಆದ ಮಾತುಗಳ ರಚನೆಯಲ್ಲಿ ಚಾತುರ್ಯವುಳ್ಳ ಕವಿತಾಗುಣಾರ್ಣವನಿಂದ ರಚಿತವಾದುದೂ ಆದ ವಿಕ್ರಮಾರ್ಜುನ ವಿಜಯದಲ್ಲಿ ಹನ್ನೊಂದನೆಯ ಆಶ್ವಾಸ.

# ದ್ವಾದಶಾಶ್ವಾಸಂ

ಕಂ|| ಶ್ರೀ ಶ್ರೀಕಾಂತಾಕಾಂತನಿಳಾ
ಲೋಕೈಕಲಲಾಮನಾ ಮಹೋಗ್ರಾರಿ ನೃಪಾ ।
ನೀಕಮನನೇಕಮಂ ಗೆ
ಲ್ದಾ ಕಲಹದೊಳರಿಗನುಱದೆ ನಿಲ್ವುದುಮಾಗಳ್ ॥ ೧

ನಂಬಿ ನೃಪನೆನಗೆ ಸೈಂಧವ
ನಂ ಬಂದಪ್ಪೈಸೆ ಪೂಣ್ದೆನಾದುದನಾಗ ।
ಲ್ಕಿಂಬಟಿದನುವರದೊಳವಂ
ಮುಂಬಯಣಂಬೋದನೆನಗೆ ಮಾಣ್ಬುದು ದೊರೆಯೇ ॥ ೨

ಬವರದೊಳೇಂ ಬಲ್ಲಂ ಕರ
ಮೊವಜುಗೆಯಲ್ ಪೆಱರ್ಗೆ ಕಂಡು ತನಗಱಿಯನದೆಂ ।
ತುವೊ ನುಡಿ ತಪ್ಪದು ಕಮ್ಮಟಿ
ಯೊವಜಂ ಬಿಲ್ಲೊವಜನೆಂಬುದಂ ಮಾಡುವೆನೇ ॥ ೩

ಒಪ್ಪೆ ಜಯದ್ರಥನಾದುದ
ನಪ್ಪೆಂ ಪೋಗೆಂದು ಮುನ್ನೆ ನುಡಿದುದನೀಗಳ್ ।
ತಪ್ಪುವೆನೆ ಧರೆಯೊಳೆಂತುಂ
ತಪ್ಪದು ವಲಮೆನ್ನ ನುಡಿಯುಮೆನ್ನೆಚ್ಚಂಬುಂ ॥ ೪

೧. ಜಯಲಕ್ಷ್ಮಿಯೆಂಬ ಸ್ತ್ರೀಗೆ ಒಡೆಯನಾದವನೂ ಭೂಮಂಡಲದಲ್ಲೆಲ್ಲ ಏಕಮಾತ್ರ ಶ್ರೇಷ್ಠನಾದವನೂ ವಿಶೇಷಭಯಂಕರವಾದ ಅನೇಕ ಶತ್ರುರಾಜರುಗಳ ಸಮೂಹವನ್ನು ಗೆದ್ದಿರುವವನೂ ಆದ ಅರ್ಜುನನು ಆ ಯುದ್ಧದಲ್ಲಿ ವೇಗವಾಗಿ ಬಂದು ನಿಂತನು. ೨. ರಾಜನಾದ ದುರ್ಯೋಧನನು ನನ್ನನ್ನು ನಂಬಿ ಸೈಂಧವನನ್ನು ತಂದು ನನಗೆ ಒಪ್ಪಿಸಿದನು. ಅವನಾದುದನ್ನಾಗುತ್ತೇನೆಂದು ನಾನು ಪ್ರತಿಜ್ಞೆ ಮಾಡಿದೆನು. ಆಶ್ರಯವಿಲ್ಲದೆ (ಕ್ರಮ ತಪ್ಪಿ) ಅವನು ಯುದ್ಧದಲ್ಲಿ ಮೊದಲು ಮಡಿದನು. ನಾನು ತಡೆದಿರುವುದು (ಹಾಗಾಗದಿರುವುದು) ಉಚಿತವೇ?-೩. ಇತರರಿಗೆ ಉಪದೇಶ ಮಾಡುವುದಕ್ಕೆ ಬಲ್ಲನೇ ವಿನಾ ಯುದ್ಧದಲ್ಲಿ ತಾನು ಏನು ಮಾಡಬಲ್ಲ? (ಯುದ್ಧದಲ್ಲಿ ತಾನು ಏನು ಮಾಡಬೇಕೆಂಬುದು ಅವನಿಗೇನು ಗೊತ್ತು?) ಎಂತಹುದೋ ಈ ಮಾತು. ಈ ಅಪಪ್ರಥೆ ನನಗೆ ತಪ್ಪುವುದಿಲ್ಲ. ಚಾಪಾಚಾರ್ಯನಾದ ನಾನು (ಸಾಮಾನ್ಯವಾದ ಮರಗೆಲಸದ ಓಜೆಯಂತೆ) ಆಡಿದಂತೆ ಮಾಡುವವನಲ್ಲ ಎಂಬ ಲೋಕಾಪವಾದಕ್ಕೆ ಗುರಿಯಾಗಲೆ! ೪. ಎಲ್ಲರಿಗೂ ಗೊತ್ತಿರುವ ಹಾಗೆ ಜಯದ್ರಥನಾದುದನ್ನು ನಾನು ಆಗುತ್ತೇನೆ ಹೋಗು ಎಂದು ಮೊದಲಾಡಿದ ಮಾತನ್ನು ಈಗ ತಪ್ಪುತ್ತೇನೆಯೇ? ಭೂಮಿಯಲ್ಲಿ ನಿಶ್ಚಯವಾಗಿಯೂ ನನ್ನ ಮಾತೂ ನಾನು ಪ್ರಯೋಗಿಸಿದ ಬಾಣವೂ

ವ॥ ಎಂದು ಕುಂಭಸಂಭವಂ ಜಳನಿಧಿಯಂ ಕುಡಿದ ಕುಂಭಸಂಭವನಂತೆ ಪಾಂಡವ ಬಳ ಜಳನಿಧಿಯನಳುರಲ್ ಬಗೆದು ನೇಸಱ್ ಪಟ್ಟೊಡಂ ಪೋಗದೆ ಪಗಲಿನನುವರ ದೊಳ್ಳೆವಿಳ್ಳೆಯಾದ ಪಾಂಡವರನಿರುಳೊಳೆ ಗೆಲ್ವೆನೆಂದು ಚತುರ್ಬಲಂಗಳನೊಂದುಮಾಡಿ-

ಉ॥ ತಕ್ಕನ ವಿಕ್ರಮಾರ್ಜುನನ ಕೋಪದ ದಳ್ಳುರಿಗಳ್ ವಿರೋಧಿಯಂ ।
ಮುಕ್ಕಲೆ ಮುತ್ತಿದಂತೆ ಕರಿಗೆಂಟು ರಥಕ್ಕನುವಾಗೆ ನಾಲ್ಕು ವಾ ।
ಹಕ್ಕೆರಡಲ್ಲಿ ಪಾದಚರರ್ಗೊಂದೆನೆ ದೀವಿಗೆಗಳ್ ಜಲಕ್ಕನೆ
ಕ್ಕೆಕ್ಕೆಯಿನಿಟ್ಟಳಂ ಬೆಳಗುತಿರ್ದುವೆರಟ್ಟಿಸೆಯೊಡ್ಡಣಂಗಳೊಳ್ ॥ ೫

ವ॥ ಅಂತು ಪಗಲಿಱಿದು ತಣಿಯದಿರುಳಂ ಪಗಲ್ಮಾಡಿ ಕಾದುವೆರಡುಪಡೆಗಳೇರ್ವೆಸನಂ ಕಣ್ಣಾರೆ ನೋಡಲೆಂದು ವೈಮಾನಿಕ ದೇವರಂಬರತಳದೊಳಿರ್ದು ಕಿರ್ಚಿಟ್ಟ ಲಂಕೆಯಂ ನೋೞ್ಪಂತೆ ನೋಡೆ ಧರ್ಮಪುತ್ರನನಧೋಕ್ಷಜನಿಂತೆಂದಂ-

ಚಂ॥ ಇರುಳೊಳುಮಿಂತು ಪೋಗದಿಱಿಯಲ್ ಘಟಸಂಭವನಿರ್ದನೆಂತು ನಿ
ತ್ತರಿಸುವಮೀ ಮಹಾಹವಮನೆಂಬುದುಮಿನ್ನಿರುಳೊಳ್ ಬಲಂ ನಿಶಾ ।
ಚರ ಬಲಕುಂಟು ಮಾಣದೆ ಘಟೋತ್ಕಚನಂ ಬೆಸವೇೞ್ಪುದೆಂದೊಡಾ
ಪರದೊಳೆ ಭೀಮನಂದನನನಾ ಪದದೊಳ್ ಯಮರಾಜನಂದನಂ ॥ ೬

ಹೇಗೂ ವ್ಯರ್ಥವಾಗುವುದಿಲ್ಲವಲ್ಲವೇ? ವ॥ ಎಂದು ದ್ರೋಣಾಚಾರ್ಯನು ಸಮುದ್ರಪಾನಮಾಡಿದ ಅಗಸ್ತ್ಯರಂತೆ ಪಾಂಡವ ಸೇನಾಸಮುದ್ರವನ್ನು ಸುಟ್ಟು ಹಾಕಲು ಯೋಚಿಸಿ ಸೂರ್ಯಾಸ್ತಮಾನವಾದರೂ ಪಾಳೆಯಕ್ಕೆ ಹೋಗದೆ ಹಗಲಿನ ಯುದ್ಧದಲ್ಲಿ ಅತ್ಯಾಯಾಸಗೊಂಡಿರುವ ಪಾಂಡವರನ್ನು ರಾತ್ರಿಯಲ್ಲಿ ಗೆಲ್ಲುತ್ತೇನೆ ಎಂದು ಚತುರಂಗಸೈನ್ಯವನ್ನು ಒಟ್ಟುಗೂಡಿಸಿದನು. ೫. ಯೋಗ್ಯನಾದ ವಿಕ್ರಮಾರ್ಜುನನ ಕೋಪದ ಮಹಾಜ್ವಾಲೆಗಳು ಶತ್ರುವನ್ನು ಮುತ್ತುವುದಕ್ಕಾಗಿಯೇ ಮುತ್ತಿದೆಯೋ ಎನ್ನುವಂತೆ ಒಂದು ಆನೆಗೆ ಎಂಟು, ರಥಕ್ಕೆ ನಾಲ್ಕು, ಕುದುರೆಗೆ ಎರಡು, ಪಾದಚರರಿಗೆ ಒಂದು ಎನ್ನುವ ಕ್ರಮದಲ್ಲಿ ದೀವಟಿಗೆಗಳು ಜಲಕ್ಕನೆ ಪಕ್ಕಪಕ್ಕದಲ್ಲಿಯೇ ಎರಡುಸೈನ್ಯಗಳಲ್ಲಿಯೂ ಮನೋಹರವಾಗಿ ಬೆಳಗುತ್ತಿದ್ದುವು. ವ॥ ಹಾಗೆ ಹಗಲು ಯುದ್ಧಮಾಡಿ ತೃಪ್ತಿಯಾಗದೆ ರಾತ್ರಿಯನ್ನೇ ಹಗಲುಮಾಡಿಕೊಂಡು ಕಾದುವ ಎರಡೂ ಸೈನ್ಯಗಳ ಯುದ್ಧಕಾರ್ಯವನ್ನು ಪ್ರತ್ಯಕ್ಷವಾಗಿ ನೋಡಬೇಕೆಂದು ವೈಮಾನಿಕ ದೇವರುಗಳು ಆಕಾಶ ಪ್ರದೇಶವಲ್ಲಿದ್ದುಕೊಂಡು ಉರಿಯುತ್ತಿದ್ದ ಲಂಕಾಪಟ್ಟಣವನ್ನು ನೋಡುವಂತೆ ನೋಡಲು ಧರ್ಮರಾಯನು ಕೃಷ್ಣನನ್ನು ಕುರಿತು ಹೀಗೆಂದನು. ೬. ದ್ರೋಣನು ರಾತ್ರಿಯಲ್ಲಿಯೂ ಹಿಂತಿರುಗದೆ ಯುದ್ಧಮಾಡಲಿದ್ದಾನೆ. ಈ ಮಹಾಯುದ್ಧವನ್ನು ನಾವು ಹೇಗೆ ನಿರ್ವಹಿಸೋಣ ಎನ್ನಲು ರಾಕ್ಷಸರು ರಾತ್ರಿಯಲ್ಲಿ ಶಕ್ತಿಯುಕ್ತರು. ಸಾವಕಾಶ ಮಾಡದೆ ಘಟೋತ್ಕಚನಿಗೆ ಆಜ್ಞೆ ಮಾಡು ಎಂದು ಕೃಷ್ಣನು ಹೇಳಿದನು. ಅದರಂತೆ

ವ॥ ಕರೆದು ಮಗನೆ ನೀನಿಂದಿರುಳಿನನುವರಮನೆನಗೆ ಗೆಲ್ದೀಯಲ್ವೇಟ್ಕುಮೆಂದೊಡಿದಾವುದರಿದುಂ ಪಿರಿದುಮಾಗಿ ಬೆಸಸಿದಿರಂತೆಗೆಯ್ವೆನೆನ್ನ ತೊಟ್ಟುವೆಸನನೀ ವಿಶಸನರಂಗದೊಳ್ ತೋರ್ಪೆನೆಂದು-

ಚಂ॥ ಪರೆದುರಿಗೇಸಮುವ್ವಳಿಪ ನಾಲಗೆ ಮಿಂಚುವ ದಾಟೆ ಬಟ್ಟ ಕಣ್
ತಿರುಪಿದ ಮೀಸೆ ಕೊಂಕಿದ ಸಟಂ ಕಜಿದಪ್ಪ ಕದಂಪು ನೀಟ್ದ ತಾ ।
ಟ್ಟರದವೊಲಪ್ಪೊಡಲ್ ಕಹ ಕಹ ಧ್ವನಿ ಕೌಳಿಕ ನಾದಮಾದಮಾ
ಸುರತರಮಾಗೆ ಬಂದು ಕವಿದತ್ತು ಘಟೋತ್ಕಚ ರೌದ್ರ ಸಾಧನಂ ॥ ೭

ವ॥ ಅಂತು ನಿಶಾಚರ ಬಲಮಱವಱಗಾದ ಕಾಡನಳುರ್ವ ಬೇಗೆಯ ದಳ್ಳುರಿಯಂತೆ ದಳ್ಳಿಸಿ ಕೊಳ್ಳೆಂದರಾತಿ ಬಲಮನಳುರೆ ಕರಡಿಯ ತೊವಲೊಳ್ ಪುದಿದ ಕರ್ಬೊನ್ನ ರಥಮುಮಾ ರಥದೊಳೊಡಂಬಡೆ ಪೂಡಿದ ನಾಲ್ನೂಱು ಗೊಂಕುಱುಗಟ್ತೆಯುಮಂಬರಸ್ಥಲಮನ್ನಡರ್ವ ಗೃಧ್ರಧ್ವಜಮುಮಂಜನ ಪುಂಜದಂತಾಗಿ ಬ್ರಹ್ಮಾಂಡಮಂ ತಾಗಿದ ವಿಕಟಾಂಗಮುಮೆಳವೆಱೆಯನಡಸಿದಂತಪ್ಪ ದಾಡೆಯುಮುಗುರ್ವಾಗೆ ಬಂದು ತಾಗಿದಾಗಳ್-

ಚಂ॥ ಕುದುರೆಯ ಬಿಲ್ಲ ಬಲ್ಲಣಿಯ ಕೇಣಿಯನಲ್ಲಿ ಕೆಲರ್ ನಿಶಾಟರು
ಣ್ಮಿದ ಬಿಸುನೆತ್ತರೊಳ್ ಮಿದಿದು ನುಣ್ಣನೆ ನುಂಗಿದರೆಲ್ಲಿಯುಂ ಕೆಲರ್ ।
ಕುದುಗುಳಿ ರಕ್ಕಸರ್ ಬಿಸುಗೆಗಳ್ವೆರಸುಗ್ರ ಮಹಾಗಜಂಗಳಂ
ಚದುರ್ಗಿಡೆ ನುಂಗಿ ಬಿಕ್ಕ ಕುಡಿದರ್ ಬಿಸುನೆತ್ತರ ಕಾಟ್ಟುರಂಗಳಂ ॥ ೮

ಧರ್ಮರಾಯನು ಘಟೋತ್ಕಚನನ್ನು ವ॥ ಕರೆದು, ಮಗನೆ ನೀನು ಈ ದಿನ ರಾತ್ರಿಯುದ್ಧವನ್ನು ನನಗೆ ಗೆದ್ದುಕೊಡಬೇಕು ಎಂದನು. ಅದಕ್ಕೆ ಘಟೋತ್ಕಚನು ಇದೇನಸಾಧ್ಯವೂ ಹಿರಿದೂ ಎನ್ನುವ ಹಾಗೆ ಅಪ್ಪಣೆಕೊಡುತ್ತೀರಿ; ಹಾಗೆಯೇ ಮಾಡುತ್ತೇನೆ; ನನ್ನ ಸೇವಾಕಾರ್ಯವನ್ನು ಯುದ್ಧರಂಗದಲ್ಲಿ ತೋರಿಸುತ್ತೇನೆ ಎಂದನು. ೭. ಉರಿಯಂತೆ ಕೆಂಪಗಿರುವ ಕೆದರಿದ ಕೂದಲು ಮುಂದಕ್ಕೆ ಚಾಚಿಕೊಂಡಿರುವ ನಾಲಿಗೆ, ಮಿಂಚುವ ಕೋರೆಹಲ್ಲು, ತೆರೆದ ಕಣ್ಣು, ಹುರಿಮಾಡಿರುವ ಮೀಸೆ, ವಕ್ರವಾದ ಕೇಸರಗಳು, ಕಪ್ಪಗಿರುವ ಕೆನ್ನೆ, ಉದ್ದವಾದ ತಾಳೆಯ ಮರದಂತಿರುವ ಶರೀರ, ಕಹಕಹವೆಂಬ ಧ್ವನಿ, ಭಯಂಕರವಾದ ಶಬ್ದ-ಇವೆಲ್ಲ ಅತ್ಯಂತ ಭಯಂಕರವಾಗಿರಲು ಘಟೋತ್ಕಚನ ಭಯಂಕರವಾದ ಸೈನ್ಯವು ಬಂದು ಮುತ್ತಿಕೊಂಡಿತು. ವ॥ ರಾಕ್ಷಸ ಪಡೆಯು ಚೆನ್ನಾಗಿ ಒಣಗಿರುವ ಕಾಡನ್ನು ಸುಡುವ ಬೇಸಿಗೆಯ ಮಹಾಜ್ವಾಲೆಯಂತೆ ಪ್ರಜ್ವಲಿಸಿ 'ತೆಕೊ' ಎಂದು ಶತ್ರುಸೈನ್ಯವನ್ನು ಸುಡುತ್ತಿರಲು ಕರಡಿಯ ಚರ್ಮದಿಂದ ಆವರಿಸಲ್ಪಟ್ಟ ಕಬ್ಬಿಣದ ತೇರು, ಆ ರಥಕ್ಕೆ ಒಪ್ಪುವ ಹಾಗೆ ಹೂಡಿದ್ದ ಹೇಸರಕತ್ತೆ, ಆಕಾಶ ಪ್ರದೇಶವನ್ನು ಹತ್ತುವ ಹದ್ದಿನ ಬಾವುಟಗಳು, ಕಾಡಿಗೆಯ ರಾಶಿಯಂತಾಗಿ ಬ್ರಹ್ಮಾಂಡವನ್ನೂ ತಾಗಿದ ವಿಕಾರವಾದ ದೇಹ, ಬಾಲಚಂದ್ರನನ್ನು ಜೋಡಿಸಿದ ಹಾಗಿದ್ದ ದಾಡೆ ಇವುಗಳಿಂದ ಭಯಂಕರವಾಗಿ ಬಂದು ತಾಗಿತು. ೮. ಕುದುರೆಗಳನ್ನು ಬಿಲ್ಗಾರರನ್ನು ಬಲಿಷ್ಠರಾದ ಕಾಲಾಳುಗಳ ಸಾಲುಗಳನ್ನು ಅಲ್ಲಿ ಕೆಲವು ರಾಕ್ಷಸರು ಚಿಮ್ಮಿದ ಬಿಸಿರಕ್ತದಲ್ಲಿ ಮರ್ದನ ಮಾಡಿ (ಕುಟ್ಟಿ) ನಯವಾಗಿ

ವ|| ಅಂತು ರಕ್ಕಸವಡೆ ತನ್ನ ಪಡೆಯೆಲ್ಲಮಂ ತೆರಳ್ಚಿ ತೇರಯಿಸಿ ನುಂಗಿದೊಡೆ ಬೆಱಗಾದ ಸುಯೋಧನನಂ ಬಕಾಸುರ ಜಟಾಸುರರ ಮಕ್ಕಳಪ್ಪಳಂಭೂಪ ಹಲಾಯುಧ ಮುಸಲಾಯುಧ ಕಾಳ ನೀಳ ರೂಕ್ಷರಾಕ್ಷಸರ್ ಮುನ್ನೆ ತಮ್ಮಣ್ಣನ ತಂದೆಯ ಪಗೆಯಂ ನೆಱಪಲೆಂದು ಬೆಸನಂ ಬೇಡಿದಾಗಳ್-

ಚಂ|| ಪ್ರತಿವಿಷಮಗ್ನಿಗಗ್ನಿ ವಿಷಕಂ ವಿಷಮೆಂಬವೊಲಾ ನಿಶಾಚರಂ
ಗತಿ ಬಲರೀ ನಿಶಾಟರಿವರಕ್ಕೆನುತುಂ ಬೆಸವೇೞೆ ತಾಗಿದಾ ।
ದಿತಿಸುತರಂ ಘಟೋತ್ಕಚನಸುಂಗೊಳೆ ಕಾದಿ ನಿಶಾಟಕೋಟಿ ಸಂ
ತತಿಗಳನಿಕ್ಕಿ ಪಾಂಡವಬಲಕ್ಕಸುರಾಗಮನುಂಟುಮಾಡಿದಂ ॥ ೯

ವ|| ಅಂತು ಕುರುಬಲಮೆಲ್ಲಮಂ ಜೀರಗೆಯೊಕ್ಕಲ್ಮಾಡಿ ತುೞಿದು ಕೊಲೆ ರಾಜರಾಜನ ಬೆಸದೊಳಂಗರಾಜಂ ಬಂದು ತಾಗೆ-

ಮ|| ಸಮದೇಭೇಂದ್ರ ಸಮೂಹದಿಂದಮಿಡುತುಂ ಕಂಠೀರವಧ್ವಾನದಿಂ
ದಮುಗುರ್ವಪ್ಪಿನಮಾರುತುಂ ಪೆಣಗಳಂ ನುಂಗುತ್ತುಮಾಕಾಶದಂ ।
ತಮನೆಯ್ದುತ್ತುಮಿದಿರ್ಚಿ ಕಾದುವೆಡೆಯೊಳ್ ಕಾಣುತ್ತೆ ದೇವರ್ಕಳಿ
ನ್ನುಮೊಳಂ ರಾವಣನೆಂಬಿನಂ ನೆಗೞ್ದುದಾ ಹೈಡಿಂಬನಾಡಂಬರಂ ॥ ೧೦

ನುಂಗಿದರು. ಮತ್ತೆ ಕೆಲವು ಬಹಳ ಉತ್ಸಾಹಶಾಲಿಗಳಾದ (ಕುಡಿಯುವ ಸ್ವಭಾವವುಳ್ಳ?) ರಾಕ್ಷಸರು ಅಂಬಾರಿ ಸಹಿತವಾಗಿ ಭಯಂಕರವಾದ ಆನೆಗಳನ್ನು ವಿಕಾರವಾದ ರೀತಿ ಯಲ್ಲಿ ನುಂಗಿ ಬಿಸಿರಕ್ತದ ಪ್ರವಾಹಗಳನ್ನು ಹೀರಿ ಕುಡಿದರು. ವ|| ರಾಕ್ಷಸಸೈನ್ಯವು ತನ್ನ ಸೈನ್ಯವನ್ನೆಲ್ಲ ಉಂಡೆಮಾಡಿ ಆತುರದಿಂದ ನುಂಗಲು ಆಶ್ಚರ್ಯಪಡುತ್ತಿದ್ದ ದುರ್ಯೋಧನನನ್ನು ಬಕಾಸುರ ಮತ್ತು ಜಟಾಸುರರ ಮಕ್ಕಳಾದ ಅಳಂಭೂಷ, ಹಲಾಯುಧ, ಮುಸಲಾಯುಧ, ಕಾಳ ನೀಳರೆಂಬ ರೂಕ್ಷ ರಾಕ್ಷಸರು ತಮ್ಮಣ್ಣನ ಮತ್ತು ತಂದೆಯ ಹಿಂದಿನ ದ್ವೇಷವನ್ನು ತೀರಿಸಿಕೊಳ್ಳುವುದಕ್ಕಾಗಿ ತಮಗೆ ಆ ಕಾರ್ಯದಲ್ಲಿ ಭಾಗವಹಿಸಲು ಅಪ್ಪಣೆಯಾಗಬೇಕೆಂದು ಕೇಳಿಕೊಂಡರು. ೯. ವಿಷಕ್ಕೆ ವಿಷವೂ ಅಗ್ನಿಗೆ ಅಗ್ನಿಯೂ ಪ್ರತಿವಿಷವೆನ್ನುವ ಹಾಗೆ ಆ ಘಟೋತ್ಕಚನೆಂಬ ರಾಕ್ಷಸನಿಗೆ ಅತಿ ಬಲಿಷ್ಠರಾದ ಈ ರಾಕ್ಷಸರು ಪ್ರತಿಶಕ್ತಿಯಾಗಲಿ ಎನ್ನುತ್ತ ದುರ್ಯೋಧನನು ಆಗಬಹುದೆಂದು ಅವರಿಗೆ ಆಜ್ಞೆಮಾಡಿದನು. ಬಂದು ತಗುಲಿದ ಆ ರಾಕ್ಷಸರನ್ನು ಘಟೋತ್ಕಚನು ಪ್ರಾಣಾಪಹಾರ ಮಾಡುವ ಹಾಗೆ ಕಾದಿ ಆ ರಾಕ್ಷಸಸಮೂಹವನ್ನು ಸಂಹರಿಸಿ ಪಾಂಡವಸೈನ್ಯಕ್ಕೆ ಪ್ರೀತಿಯನ್ನುಂಟುಮಾಡಿದನು. ವ|| ಕೌರವಸೈನ್ಯವನ್ನೆಲ್ಲ ಜೀರಿಗೆಯನ್ನು ಒಕ್ಕಣೆಮಾಡುವಂತೆ ಮಾಡಿ ತುಳಿದು ಕೊಲ್ಲಲು ದುರ್ಯೋಧನನ ಆಜ್ಞೆಯ ಪ್ರಕಾರ ಕರ್ಣನು ಬಂದು ತಾಗಿದನು. ೧೦. ಶ್ರೇಷ್ಠವಾದ ಮದ್ದಾನೆಗಳ ಸಮೂಹದಿಂದ ಹೊಡೆಯುತ್ತಲೂ ಸಿಂಹದ ಧ್ವನಿಯಿಂದ ಭಯವುಂಟಾಗುವ ಹಾಗೆ ಆರ್ಭಟಿಸುತ್ತಲೂ ಹೆಣಗಳನ್ನು ನುಂಗುತ್ತಲೂ ಆಕಾಶದ ಕೊನೆಗೂ ಹೋಗಿ ಎದುರಿಸಿ ಕಾದುವ ಸನ್ನಿವೇಶವನ್ನು ನೋಡಿ ದೇವತೆಗಳು ರಾವಣನೆಂಬುವನು ಇನ್ನೂ ಇದ್ದಾನೆ ಎನ್ನುವಷ್ಟು ಆ ಘಟೋತ್ಕಚನ ಆಡಂಬರವು ಪ್ರಸಿದ್ಧವಾಯಿತು.

ಕಂ|| ಸರಿದಧಿಪತಿ ಮೊಳಕಾಲ್ವರ
ಮುರಂಬರಂ ಮೇರು ಮುಯ್ಯುವರೆಗಮಜಾಂಡಂ ।
ಬರೆ ತಲೆಯ ನೆಲೆಗೆ ಲೋಕಾಂ
ತರಮೆಡೆಯಿಲ್ಲೆನಿಸೆ ಪೆರ್ಚಿದಂ ದನುತನಯಂ ॥ ೧೧

ಬೆಳ್ಳಾಳ್ಗೆ ಪೊಳೆಪುದೋಱುವು
ದೊಳ್ಳಾಳ್ಗೆ ಪೊಡರ್ಪುದೋರ್ಪುದಿರದಣ್ಮಕ್ಕೆಂ ।
ದೊಳ್ಳಲಗಿನ ಶರತತಿಯಿಂ
ಕೊಳ್ಳ ಕೊಳೆಂದಂಗರಾಜನಸುರನನೆಚ್ಚಂ ॥ ೧೨

ಉತ್ಸಾಹ ॥ ಎಚ್ಚೊಡಸುರನಿಟ್ಟ ಬೆಟ್ಟನೊಂದು ವಜ್ರಶರದಿನಾ
ರ್ದೆಚ್ಚು ದಿತಿಜನೆಚ್ಚ ಸಿಡಿಲ ಶರಮನುದಕಬಾಣದಿಂ ।
ದೆಚ್ಚು ದನುತನೂಜನೆಚ್ಚ ವಾರ್ಧಿಗನಲಬಾಣದಿಂ
ದೆಚ್ಚು ನಚ್ಚುಗಿಡಿಸೆ ಕೊಂಡು ಶೂಲಮಂ ಘಟೋತ್ಕಚಂ ॥ ೧೩

ಕಂ|| ನೆಲನದಿರ್ವಿನಮಿದಿರಂ ಬರೆ
ಕುಲಿಶಾಯುಧನಿತ್ತ ಶಕ್ತಿಯಿಂದಾತನುರ ।
ಸ್ಥಲಮನಿಡೆ ವಜ್ರಹತಿಯಿಂ
ಕುಲಗಿರಿ ಕೆಡೆವಂತೆ ಕೆಡೆದನಾ ದನುತನಯಂ । ೧೪

೧೧. ಸಮುದ್ರವು ಮೊಣಕಾಲಿನವರೆಗೂ ಮೇರುಪರ್ವತವು ಎದೆಯವರೆಗೂ ಬ್ರಹ್ಮಾಂಡವು ಭುಜದವರೆಗೂ ಬರಲು ತಲೆಯವರೆಗೆ ಲೋಕಾಂತರದಲ್ಲಿಯೂ ಸ್ಥಳವಿಲ್ಲವೆನ್ನುವಷ್ಟು ದೀರ್ಘವಾಗಿ ರಾಕ್ಷಸನಾದ ಘಟೋತ್ಕಚನು ಬೆಳೆದನು. ೧೨. ಅಂಜುಪುರಕನಿಗೆ ಆಯುಧದ ಹೊಳಪನ್ನು ತೋರಿಸತಕ್ಕದ್ದು, ಸುಪ್ರಸಿದ್ಧ ವೀರಭಟನಿಗೆ ಪರಾಕ್ರಮವನ್ನು ತೋರಿಸತಕ್ಕದ್ದು; ಆದುದರಿಂದ ಈಗ ನೀನು ನನಗೆ ಸಾವಕಾಶಮಾಡದೆ ನಿನ್ನ ಪರಾಕ್ರಮವನ್ನು ತೋರು, ತೋರು, ತೆಕೊ ತೆಕೊ ಎಂದು ಕರ್ಣನು ಒಳ್ಳೆಯ ಅಲಗಿನಿಂದ ಕೂಡಿದ ಬಾಣಗಳ ಸಮೂಹದಿಂದ ರಾಕ್ಷಸನನ್ನು ಹೊಡೆದನು. ೧೩. ರಾಕ್ಷಸನು ಎಸೆದ ಒಂದು ಬೆಟ್ಟವನ್ನು ವಜ್ರಾಸ್ತ್ರದಿಂದಲೂ ಅವನಿಟ್ಟ ಸಿಡಿಲ ಬಾಣವನ್ನು ಉದಕಾಸ್ತ್ರದಿಂದಲೂ ಅವನು ಇಟ್ಟ ಸಮುದ್ರಾಸ್ತ್ರವನ್ನು ಆಗ್ನೇಯಾಸ್ತ್ರದಿಂದಲೂ ಕರ್ಣನು ಹೊಡೆದು ಅವನ ಆತ್ಮಪ್ರತ್ಯಯವನ್ನು ಹಾಳುಮಾಡಲಾಗಿ ಘಟೋತ್ಕಚನು ಶೂಲಾಯಧವನ್ನು ತೆಗೆದುಕೊಂಡು-೧೪. ನೆಲವು ನಡುಗುವಂತೆ ಎದುರಾಗಿ ಬರಲು ಕರ್ಣನು ಇಂದ್ರನು ಕೊಟ್ಟಿದ್ದ ಶಕ್ತ್ಯಾಯುಧದಿಂದ ಆತನ ಹೃದಯಸ್ಥಳವನ್ನು ಹೊಡೆದನು. ವಜ್ರಾಯುಧದ ಪೆಟ್ಟಿನಿಂದ ಕುಲಪರ್ವತಗಳುರುಳುವಂತೆ ಆ ರಾಕ್ಷಸಕುಮಾರನು ಕೆಳಗುರುಳಿದನು. ೧೫. ಇವನ ಶರೀರವು (ಮುಂಡ) ಕೆಳಗೆ ಬಿದ್ದುದರಿಂದ ಒಂದಕ್ಷೋಹಿಣೀ ಸೈನ್ಯವು ಪುಡಿಪುಡಿಯಾಯಿತು. ತಾನು ಸತ್ತೂ ಇವನು ಇಷ್ಟನ್ನು ಕೊಂದನು. ಇಂತಹವನನ್ನು ಭಯವುಂಟಾಗುವ ಹಾಗೆ ಕೊಂದ ಪರಾಕ್ರಮವು ಕರ್ಣನಲ್ಲದವನಿಗೆ ಒಪ್ಪುತ್ತದೆಯೇ?

ಒಂದಕ್ಷೋಹಿಣಿ ನುರ್ಗಿದು
ದಿಂದಿವನ ಕಬಂಧಘಾತದಿಂ ಸತ್ತಿನಿತಂ ।
ಕೊಂದನಿವನಿವನನಳ್ಳುಱಿ
ಕೊಂದಳವಿನತನಯನಲ್ಲದಂಗೊಪ್ಪುಗುಮೇ ॥ ೧೫

ವ॥ ಎಂದೆರಡುಂ ಪಡೆಗಳುಂ ದೇವರ ಪಡೆಗಳುಂ ಕರ್ಣನನೆ ಪೊಗೞ ಕಾದಲ್ವೇಡೆಂಬಂತುಭಯಸೈನ್ಯಂಗಳ್ಗಡ್ಡಮಾಗಿ ಕುಲಗಿರಿ ಕೆಡೆವಂತಯ್ಗಾವುದು ನೆಲನೊಡಲಳವಿಯಾಗೆ ಬಿೞ್ದಿರ್ದ ಘಟೋತ್ಕಚನ ಸಾವಿಂಗೆ ಕರಮುಱಲ್ದು ಕಣ್ಣ ನೀರಂ ಸಿಡಿವಂತಕಾತ್ಮಜನನಸಂತನಿಂತೆಂದಂ–

ಮ॥ ದಿವಿಜಾಧೀಶನ ಕೊಟ್ಟ ಶಕ್ತಿಯನದಂ ಕರ್ಣಂ ನರಂಗೆಂದು ಬ
ಯ್ತಿವನಿಂದಿಂದಟಿವೆಯ್ದೆ ವಂದೊಡದಱಿಂದಿಂದಾತನಂ ಕೊಂದನಿ ।
ನ್ನಿವನಂ ಕೊಲ್ವುದು ಮೊಗ್ಗದರ್ಕಟಲವೇಡೆಂಬನ್ನಮತ್ತೇಱಿದಂ
ರವಿ ಪೂರ್ವಾಚಲಮಂ ನಿಜಾತ್ಮಜನ ಗೆಲ್ವುಗ್ರಾಜಿಯಂ ನೋಟ್ಪವೋಲ್ ॥ ೧೬

ವ॥ ಆಗಳ್ ಕುಂಭಸಂಭವಂ ಶೋಣಾಶ್ವಂಗಳೊಳ್ ಪೂಡಿದ ಕನಕ ಕಳಶಧ್ವಜ ವಿರಾಜಿತಮಪ್ಪ ತನ್ನ ರಥಮನೇಱಿ ಘಟೋತ್ಕಚನ ಕಳೇಬರ ಗಿರಿ ದುರ್ಗಮಲ್ಲದ ಸಮಭೂಮಿಯೊಳ್ ಚತುರ್ಬಲಂಗಳನೊಂದುಮಾಡಿ ಶೃಂಗಾಟಕವ್ಯೂಹಮನೊಡ್ಡಿ ನಿಂದಾಗಳ್ ಧೃಷ್ಟದ್ಯುಮ್ನನಂ ಪಾಂಡವ ಪತಾಕಿನಿಯುಮಂ ವಜ್ರವ್ಯೂಹಮನೊಡ್ಡಿ ನಿಲೆ ಧರ್ಮಪುತ್ರನುಂ ಸುಯೋಧನನುಮೊಡನೊಡನೆ ಕೆಯ್ವೀಸಿದಾಗಳ್–

ವ॥ ಎಂದು ಎರಡು ಸೈನ್ಯಗಳೂ ದೇವಸಮೂಹವೂ ಕರ್ಣನನ್ನೇ ಹೊಗಳಿದವು. ಇನ್ನು ಕಾದಬೇಡಿ ಎನ್ನುವ ಹಾಗೆ ಎರಡು ಸೈನ್ಯಗಳಿಗೆ ಅಡ್ಡಲಾಗಿ ಕುಲಗಿರಿ ಕೆಡೆಯುವಂತೆ ಅಯ್ದುಗಾವುದ ಭೂಮಿಯನ್ನು ಆಕ್ರಮಿಸುವ ಶರೀರದ ಅಳತೆಯನ್ನುಳ್ಳವನಾಗಿ ಬಿದ್ದಿದ್ದ ಘಟೋತ್ಕಚನ ಸಾವಿಗೆ ವಿಶೇಷವಾಗಿ ಧರ್ಮರಾಯನು ದುಃಖಪಟ್ಟು ಕಣ್ಣೀರನ್ನು ಚಿಮ್ಮಿಸಿದನು. ಅವನನ್ನು ಕೃಷ್ಣನು ಹೀಗೆ ಸಮಾಧಾನಪಡಿಸಿದನು. ೧೬. "ಇಂದ್ರನು ವರವಾಗಿ ಕೊಟ್ಟ ಶಕ್ತ್ಯಾಯುಧವನ್ನು ಕರ್ಣನು ಅರ್ಜುನನಿಗೆಂದು ಮುಚ್ಚಿಟ್ಟಿದ್ದನು. ಈ ದಿನ (ತನಗೆ) ಸಾವು ಸಮೀಪಿಸಿದ್ದರಿಂದ ಆ ಶಕ್ತ್ಯಾಯುಧದಿಂದ ಘಟೋತ್ಕಚನನ್ನು ಕೊಂದನು. ಇನ್ನು ಈ ಕರ್ಣನನ್ನು ಗೆಲ್ಲುವುದು ಸುಲಭ ಸಾಧ್ಯ; ಅದಕ್ಕಾಗಿ ನೀನು ದುಃಖಪಡಬೇಡ" ಎನ್ನುವಷ್ಟರಲ್ಲಿ ಆ ಕಡೆ ಸೂರ್ಯನು ತನ್ನ ಮಗನು ಗೆದ್ದ ಭಯಂಕರವಾದ ಯುದ್ಧವನ್ನು ನೋಡುವ ಹಾಗೆ ಉದಯಪರ್ವತವನ್ನೇರಿದನು. (ಸೂರ್ಯೋದಯವಾಯಿತು). ವ॥ ಆಗ ದ್ರೋಣಾಚಾರ್ಯನು ಕೆಂಪುಕುದುರೆಗಳನ್ನು ಹೂಡಿದ್ದ ಚಿನ್ನದ ಕಳಶಧ್ವಜದಿಂದ ವಿರಾಜಿತವಾಗಿರುವ ತನ್ನ ರಥವನ್ನು ಹತ್ತಿ ಘಟೋತ್ಕಚನ ಶರೀರವೆಂಬ ಬೆಟ್ಟದುರ್ಗವಿಲ್ಲದ ಸಮಭೂಮಿಯಲ್ಲಿ ಚತುರಂಗಸೈನ್ಯವನ್ನು ಒಟ್ಟುಗೂಡಿಸಿ (ನಾಲ್ಕು ಬೀದಿಗಳು ಕೂಡುವ ಸ್ಥಳದಂತಿರುವ ಒಂದು ಸೇನಾರಚನೆಯನ್ನು, ಶೃಂಗಾಟಕವ್ಯೂಹವನ್ನು) ಒಡ್ಡಿ ನಿಂತನು. ಧೃಷ್ಟದ್ಯುಮ್ನನು ಪಾಂಡವಸೈನ್ಯವನ್ನು ವಜ್ರವ್ಯೂಹವನ್ನಾಗಿ ಒಡ್ಡಿನಿಂತನು. ಧರ್ಮರಾಜನೂ ದುರ್ಯೋಧನನೂ (ಯುದ್ಧಪ್ರಾರಂಭಸೂಚಕವಾಗಿ) ಕೈ ಬೀಸಿದಾಗ ಪುನಃ ಯುದ್ಧ

ಮ॥ ಸ್ರ ॥ ಎಳೆಯುಂ ಬ್ರಹ್ಮಾಂಡಮುಂ ತಾಗುವವೊಲುಭಯಸೈನ್ಯಾಬ್ಧಿಗಳ್ ತಾಗಿ ಬಿಲ್ ಬಿ
ಲ್ಲೊಳುದಗ್ರಾಶ್ವಂಗಳೊಳಣಿಯಣಿಯೊಳ್ ಸ್ಯಂದನಂ ಸ್ಯಂದನೌಘಂ ।
ಗಳೊಳುಗ್ರೇಭಂ ಮದೇಭಂಗಳೊಳಿಱಿಯೆ ತೆರಳ್ತರ್ಪ ಕೆನ್ನೆತ್ತರಿಂದೋ
ಕುಳಿಯಂ ಖಂಡಂಗಳೊಂದಿಂಡೆಯೊಳೆ ಜವನಡುರ್ತಾಡಿದಂತಾದುದಾಗಳ್ ॥ ೧೭

ವ॥ ಅಂತು ವೀರರಸದ ತೊಱೆಯುಂ ನೆತ್ತರ ತೊಱೆಯುಮೊಡನೊಡನೆ ಬೆಳ್ಳಂಗೆಡೆದು ಪರಿಯೆ ಚತುರ್ಬಲಂಗಳ್ ಕಾದಿ ಬಸವೞಿದು ಪೆಱಪಿಂಗಿ ನಿಂದಾಗಳ್ ವಿರಾಟಂ ತನ್ನ ಚತುರ್ಬಲಂಗಳನೊಂದುಮಾಡಿಕೊಂಡು ಪಾಂಡವರ್ ತನ್ನ ಮಾನಸಿಕೆಯಂ ನಚ್ಚಿ ತನ್ನ ಪೊೞಲೊಳಜ್ಞಾತವಾಸಂ ಮಾಡಿದುದುಮಂ ದಕ್ಷಿಣೋತ್ತರ ಗೋಗ್ರಹಣದೊಳ್ ತನಗಾಗಿ ಕಾದಿ ತುಱುವಂ ಮಗುಳ್ಚಿದುದುಮಂ ನೆನೆದು-

ಮ॥ ಸ್ರ ॥ ಮಗಳಂ ಪಾರ್ಥಾತ್ಮಜಂಗಂ ತಲೆ ಬೞಿವೞಿಯೆಂದಿತ್ತುದಂ ತನ್ನ ಮಕ್ಕಳ್
ನೆಗಱ್ದಾ ಸಂಗ್ರಾಮದೊಳ್ ಸತ್ತುದುಮನೆ ಮನದೊಳ್ ತಾಳ್ದಿ ತಾಪಾಗಳಾ ಜೆ ।
ಟ್ಟಿಗನಂ ಕುಂಭೋದ್ಭವಂ ಬಂದದಿರದಿದಿರನಾಂತೊಂದೆ ಕೆಲ್ಲಂಬನಿಂ ಮೆ
ಲ್ಲಗೆ ಪಾರ್ದಾರ್ದೆಚ್ಚನೇಸಿಂ ತಲೆಪಱಿದು ಸಿಡಿಲ್ದತ್ತ ಬೀೞ್ವನ್ನಮಾಗಳ್ ॥ ೧೮

ವ॥ ಅಂತು ವಿರಾಟನನಿಕ್ಕಿ ಮನದೊಳಳ್ಕಾಟಮಿಲ್ಲದರಿನೃಪಕೋಟಿಯನಾಟರಲೆಂದಾ ಸ್ಫೋಟಿಸಿ ನಿಶಿತ ಶರಕೋಟಿಯೊಳ್ ತಳಿಗೋಂಟೆಯನಿಕ್ಕಿ ವೀರರಸನಿಕೇತನನಾಗಿರ್ದ ಕಳಶಕೇತನನಂ ನೋಡಿ ದ್ರುಪದಂ ಸೈರಿಸದೆ-

ಪ್ರಾರಂಭವಾಯಿತು. ೧೭. ಭೂಮಿಯೂ ಬ್ರಹ್ಮಾಂಡವೂ ತಾಗುವ ಹಾಗೆ ಎರಡು ಸೇನಾಸಮುದ್ರಗಳೂ ತಾಗಿದುವು. ಬಿಲ್ಗಾರರು ಬಿಲ್ಗಾರರಲ್ಲಿಯೂ ಅತ್ಯುತ್ತಮವಾದ ಅಶ್ವಾರೋಹಕರು ಅಶ್ವಾರೋಹಕರಲ್ಲಿಯೂ ಕಾಲುಬಲದವರು ಕಾಲುಬಲದವರಲ್ಲಿಯೂ ತೇರು ತೇರುಗಳ ಸಮೂಹದಲ್ಲಿಯೂ ಶ್ರೇಷ್ಠವಾದ ಆನೆಗಳು ಮದ್ದಾನೆಗಳಲ್ಲಿಯೂ ಸೇರಿಕೊಂಡು ಯುದ್ಧಮಾಡಿದುವು. ಅಲ್ಲಿ ಹರಿದು ಬರುತ್ತಿರುವ ರಕ್ತದಿಂದಲೂ ಮಾಂಸಖಂಡಗಳ ರಾಶಿಯಿಂದಲೂ ಯಮನು ಮೇಲೆಬಿದ್ದು ಓಕುಳಿಯಾಟವನ್ನಾಡಿದಂತಾಯಿತು. ವ॥ ವೀರರಸದ ಪ್ರವಾಹವೂ ರಕ್ತಪ್ರವಾಹವೂ ಜೊತೆ ಜೊತೆಯಲ್ಲಿಯೇ ಹುಚ್ಚುಹೊಳೆಯಾಗಿ ಹರಿದುವು. ಚತುರಂಗಸೈನ್ಯವೂ ಕಾದಿ ಶಕ್ತಿಗುಂದಿ ಹಿಂದಕ್ಕೆ ಹೋಗಿ ನಿಂತವು. ವಿರಾಟನು ತನ್ನ ನಾಲ್ಕು ತೆರನಾದ ಸೈನ್ಯವನ್ನೂ ಒಟ್ಟುಗೂಡಿಸಿ ಪಾಂಡವರು ತನ್ನ ಪೌರುಷವನ್ನು ನಂಬಿ ತನ್ನ ಪಟ್ಟಣದಲ್ಲಿ ಅಜ್ಞಾತವಾಸಮಾಡಿದುದನ್ನೂ ದಕ್ಷಿಣೋತ್ತರ ಗೋಗ್ರಹಣದಲ್ಲಿ ತನಗಾಗಿ ಯುದ್ಧಮಾಡಿ ಗೋವುಗಳನ್ನು ಹಿಂತಿರುಗಿಸಿದುದನ್ನೂ ಜ್ಞಾಪಿಸಿಕೊಂಡು ೧೮. ತನ್ನ ಮಗಳಾದ ಉತ್ತರೆಯನ್ನು ಅರ್ಜುನನ ಮಗನಾದ ಅಭಿಮನ್ಯುವಿಗೆ ಬಳುವಳಿಯಾಗಿ ಕೊಟ್ಟುದನ್ನೂ ಆ ಪ್ರಸಿದ್ಧವಾದ ಯುದ್ಧದಲ್ಲಿ ತನ್ನ ಮಕ್ಕಳು ಸತ್ತುದನ್ನೂ ಮನಸ್ಸಿನಲ್ಲಿ ಜ್ಞಾಪಿಸಿಕೊಂಡು ತಾಗಿದನು. ದ್ರೋಣನು ಹೆದರದೆ ಬಂದು ಪ್ರತಿಭಟಿಸಿ ಒಂದೆ ಕೆಲ್ಲಂಬಿ (?) ನಿಂದ ಮೆಲ್ಲಗೆ ಗುರಿಯಿಟ್ಟು ಆರ್ಭಟಮಾಡಿ ತಲೆಹರಿದು ಸಿಡಿದು ಅತ್ತ ಕಡೆ ಬೀಳುವ ಹಾಗೆ ಹೊಡೆದನು. ವ॥ ಹಾಗೆ ವಿರಾಟನನ್ನು ಹೊಡೆದು ಮನಸ್ಸಿನಲ್ಲಿ ಸಂಶಯವೇ ಇಲ್ಲದೇ ಶತ್ರುರಾಜಸಮೂಹದ ಮೇಲೆ ಬೀಳಬೇಕೆಂದು ತೋಳನ್ನು ತಟ್ಟಿ ಶಬ್ದಮಾಡಿ

ಹರಿಣೀಪ್ಲುತಂ ॥ ಗುರುಗಳೆನಗಂ ಭಾರದ್ವಾಜಂಗಮೊರ್ವರೆ ವಿದ್ದೆಯೊಳ್
ಪುರುಡ ಪಿರಿದುಂಟೆನ್ನಂ ಬಿಲ್ಬಲ್ಮೆಯೊಳ್ ಮಿಗಲೆಯ್ದೆ ಬೇ ।
ರ್ವರಿದ ಪಗೆಯುಂ ಬನ್ನಂಬಟ್ಟೆನ್ನ ಮುನ್ನಿನ ಬನ್ನಮುಂ
ಪಿರಿದದೆ ನೆವಂಗೊಂಡಾನಿಂದಿಲ್ಲಿ ನೀಗದೆ ಮಾಣ್ಬೆನೇ ॥ ೧೯

ವ॥ ಎಂದೊಂದಕ್ಷೋಹಿಣೀ ಬಲಂಬೆರಸು ಪ್ರಳಯದ ಮಾರಿಯುಮಾಕಾಶದ ಕವಿಯುಂ ನೆಲದ ಕಲ್ಲೆಯುಂ ಮುನ್ನಮೆ ಮೇರೆದಪ್ಪುವುದುಮಂ ತನ್ನೊಳಳವಡಿಸಿಕೊಂಡು ತಾಗಿದಾಗಳ್ ಶಲ್ಯನೊಳ್ ಸಾತ್ಯಕಿ ಶಾರದ್ವತನೊಳ್ ಕೃತಾಂತನಂದನಂ ಕೃತವರ್ಮನೊಳ್ ನಕುಳಂ ಶಕುನಿಯೊಳ್ ಸಹದೇವಂ ಕರ್ಣನೊಳ್ ಭೀಮಸೇನನಶ್ವತ್ಥಾಮನೊಳಕಳಂಕ ರಾಮಂ ದ್ವಂದ್ವಯುದ್ಧದೊಳ್ ತಾಗಿದಾಗಳ್-

ಮ॥ ಸ್ರ॥ ದೆಸೆಯೆಲ್ಲಂ ತೀವ್ರ ಬಾಣಾಳಿಯೊಳೆ ಮೆಡಱಿದಂತಂಬರಂ ಬಾಣದಿಂದಂ
ಮುಸುಕಿಟ್ಟಂತಾಗೆ ಬೇಗಂ ತುಡುವ ಬಿಡುವ ಸೂಟಿಗ್ಗೆಯ್ಯ ಬೇಗಂಗಳಂ ನಿ ।
ಟ್ಟಿಸಲಾರ್ಗಂ ಬಾರದಂತಾಗಸದಳಮಿಸೆ ತದ್ರಾಜಚಕ್ರಂ ಪೊದಱ್ದ
ಬ್ಬಿಸಿದತ್ತುದ್ದಾಮ ಮೌರ್ವೀ ರವ ಮುಖರ ಮಹಾಚಾಪ ಚಕ್ರಾಂಧಕಾರಂ ॥೨೦

ವ॥ ಅನ್ನೆಗಂ ಕಪ್ಪಂಗವಿಯಾಗಿ ಕವಿದ ದ್ರುಪದ ಏಳಯಾನಳನಂ ದ್ರೋಣಂ ಮಹಾದ್ರೋಣ ಪುಷ್ಕಳಾವರ್ತಕಂಗಳೆಂಬ ಏಳಯ ಕಾಳ ನೀಳ ಜಳಧರವರ್ಷಂಗಳಿಂ ನಂದಿಸೆಯುಂ

ಹರಿತವಾದ ಬಾಣರಾಶಿಯಿಂದ ಬೇಲಿಯನ್ನು ಹಾಕಿ ವೀರರಸಕ್ಕೆ ಆವಾಸಸ್ಥಾನನಾಗಿದ್ದ ದ್ರೋಣಾಚಾರ್ಯನನ್ನು ದ್ರುಪದನು ನೋಡಿ ಸೈರಿಸಲಾರದೆ ಮುಂದೆ ಬಂದು ೧೯. ನನಗೂ ದ್ರೋಣನಿಗೂ ವಿದ್ಯಾಭ್ಯಾಸದಲ್ಲಿ ಒಬ್ಬರೇ ಗುರು. ನನ್ನನ್ನು ಧನುರ್ವಿದ್ಯೆಯಲ್ಲಿ ಮೀರಿಸಬೇಕೆಂಬ ಸ್ಪರ್ಧೆಯೂ ಅವನಲ್ಲಿ ಉಂಟು. ನನಗೆ ರೂಢಮೂಲವಾದ ಶತ್ರುತ್ವವೂ ತಿರಸ್ಕೃತವಾದ ಮೊದಲಿನ ಅವಮಾನವೂ ಹಿರಿದಾಗಿಯೇ ಇದೆ. ಅದನ್ನೇ ಕಾರಣವನ್ನಾಗಿ ಮಾಡಿಕೊಂಡು ಇಂದು ಇಲ್ಲಿ ಅವುಗಳನ್ನು ಪರಿಹರಿಸದೆ ಬಿಡುತ್ತೇನೆಯೇ? ವ॥ ಎಂದು ಒಂದಕ್ಷೋಹಿಣಿ ಸೈನ್ಯದಿಂದ ಕೂಡಿ ಪ್ರಳಯಕಾಲದ ಮಾರಿದೇವತೆಯೂ ಆಕಾಶದ ಮುಚ್ಚಳವೂ ನೆಲದ ಮೇರೆಯಾದ ಸಮುದ್ರವೂ ಮೊದಲೇ ತಮ್ಮ ಎಲ್ಲೆಯನ್ನು ಮೀರುವಂತೆ ತಾಗಿದನು. ಶಲ್ಯನೊಡನೆ ಸಾತ್ಯಕಿಯೂ ಕೃಪನೊಡನೆ ಧರ್ಮರಾಯನೂ ಕೃತವರ್ಮನೊಡನೆ ನಕುಳನೂ ಶಕುನಿಯೊಡನೆ ಸಹದೇವನೂ ಕರ್ಣನೊಡನೆ ಭೀಮನೂ ಅಶ್ವತ್ಥಾಮನೊಡನೆ ಅಕಳಂಕರಾಮನಾದ ಅರ್ಜುನನೂ ದ್ವಂದ್ವಯುದ್ಧದಲ್ಲಿ (ಇಬ್ಬರು ಜೊತೆಜೊತೆಯಾಗಿ ಮಾಡುವ ಯುದ್ಧ) ಸಂಧಿಸಿದರು. ೨೦. ದಿಕ್ಕುಗಳೆಲ್ಲವೂ ತೀಕ್ಷ್ಣವಾದ ಬಾಣಸಮೂಹದಿಂದ ಹೆಣೆದ ಹಾಗಾದುವು. ಆಕಾಶವು ಬಾಣದಿಂದ ಮುಸುಕಿಕ್ಕಿದಂತಾಯಿತು. ಬಾಣಗಳನ್ನು ಬಿಲ್ಲಿಗೆ ಹೂಡುವ ಮತ್ತು ಅದನ್ನು ಪ್ರಯೋಗಿಸುವ ಸರದಿಯ ಕೈಗಳ ವೇಗವನ್ನು ನೋಡುವುದಕ್ಕೆ ಯಾರಿಗೂ ಸಾಧ್ಯವಿಲ್ಲದ ಹಾಗಾಯಿತು. ಆ ರಾಜಸಮೂಹವು ವಿಶೇಷವಾಗಿ ಬಾಣಪ್ರಯೋಗ ಮಾಡುವುದಕ್ಕಾಗಿ (ಮೊದಲು) ಮಾಡಿದ ಹೆದೆಯ ಟಂಕಾರ ಶಬ್ದದಿಂದ ಶಬ್ದಾಯಮಾನವಾಗಿರುವ ಬಿಲ್ಲುಗಳ ಸಮೂಹದ ಕತ್ತಲೆಯು ವ್ಯಾಪಿಸಿ

ನಂದದೆ ಮುಟ್ಟುವರೆ ದುರ್ಯೋಧನನನೇಕಾಯುಧ ಶರಭರಿತಂಗಳಪ್ಪ ರಥಂಗಳಂ ದ್ರೋಣಾಚಾರ್ಯರ ಪೆಱಗೆ ನಿಱಿಸಿಯಾಯುಧಾಧ್ಯಕ್ಷರಂ ಪೇಳ್ದು ಚಕ್ರರಕ್ಷೆಗೆ ದುಶ್ಯಾಸನಾದಿಗಳ್ವೆರಸು ತಾನೆ ಬಂದಿರ್ದಾಗಳ್-

ಚಂ॥ ದ್ರುಪದ ಬಳಾಂಬುರಾಶಿಯನಗುರ್ವಿಸೆ ಪರ್ವಿಪ ಬಾಡಬಾಗ್ನಿಯಾ
ಯ್ತುಪಚಯಮಪ್ಪ ಬಿಲ್ಲೊವಜನಂಬಿನ ಬೆಳ್ಸರಿಯಾದಮಾ ರಥ ।
ದ್ವಿಪಘಟೆಯೆಂಬವನಂಬಿನೊಳೆ ಪೂಳ್ದು ಪಡಲ್ವಡೆ ತಿಣ್ಣಮೆಚ್ಚನಾ
ತ್ರಿಪುರಮನೆಚ್ಚ ರುದ್ರನ ನೆಗಟ್ತೆಯುಮಂ ಗೆಲೆ ಕುಂಭಸಂಭವಂ ॥ ೨೧

ವ॥ ಅಂತು ತನ್ನ ಬಲಮೆಲ್ಲಮಂ ಜವನಂತೊಕ್ಕಲಿಕ್ಕೆ ಕೊಲ್ವ ಕಳಶಕೇತನಂ ಯಜ್ಞಸೇನ ನೇಸುಂ ಮಾಣದಾತನ ಮೇಲೆ ಬಟ್ಟನಂಬಿನ ಬೆಳ್ಸರಿಯುಮಂ ಕೆಲ್ಲಂಬಿನ ತಂದಲುಮಂ ಪಾರೆಯಂಬಿನ ಸೋನೆಯುಮಂ ಸುರಿಯೆ ಕಳಶಯೋನಿ ಮುಳಿದು-

ಮ॥ ಪದಿನೆಂಟಂಬಿನೊಳೆಚ್ಚೊಡೆಚ್ಚು ಪದಿನೆಂಟಸ್ತ್ರಂಗಳಿಂ ಸೀಳ್ದು ಕೋ
ಪದಿನೆಂಬತ್ತು ಸರಂಗಳಿಂ ಗುರು ಭರಂಗೆಯ್ದೆಚ್ಚೊಡೆಂಬತ್ತು ಬಾ ।
ಣದಿನಾಗಳ್ ಕಡಿದುಗ್ರ ಸೂತ ಹಯ ಸಂಘಾತಂಗಳಂ ತಿಣ್ಣಮೆ
ಚ್ಚದಿರೊಳ್ ನಿಲ್ಲದಿರೋಡು ಸತ್ತೆಯೆನುತುಂ ಪಾಂಚಾಳರಾಜಾಧಿಪಂ ॥ ೨೨

ಹೆದರಿಸಿತು. ವ॥ ಅಷ್ಟರಲ್ಲಿ ಆನೆಯನ್ನು ಹಿಡಿಯುವ ಗುಳಿಯ ಮುಚ್ಚಳದಂತೆ ಸಾಂದ್ರವಾಗಿ ಮುತ್ತಿಕೊಳ್ಳುತ್ತಿರುವ ದ್ರುಪದನೆಂಬ ಪ್ರಳಯಾಗ್ನಿಯನ್ನು ದ್ರೋಣನು ಮಹಾದ್ರೋಣ ಮತ್ತು ಪುಷ್ಕಳಾವರ್ತಕಗಳೆಂಬ ಪ್ರಳಯಕಾಲದ ಕರಿಯ ಮೋಡಗಳ ಮಳೆಯಿಂದ ಆರಿಸಿದರೂ ಆರದೆ ಮುಟ್ಟುವ ಹಾಗೆ ಹತ್ತಿರಕ್ಕೆ ಬರಲು ದುರ್ಯೋಧನನು ಅನೇಕ ಆಯುಧ ಮತ್ತು ಬಾಣಗಳಿಂದ ತುಂಬಿರುವ ತೇರುಗಳನ್ನು ದ್ರೋಣಾಚಾರ್ಯರ ಹಿಂದೆ ಸ್ಥಾಪಿಸಿ ಆಯುಧಾಧ್ಯಕ್ಷರನ್ನು ನೇಮಿಸಿ ಚಕ್ರವ್ಯೂಹದ ರಕ್ಷೆಗೆ ದುಶ್ಯಾಸನಾದಿ ಗಳೊಡನೆ ತಾನೆ ಬಂದು ನಿಂತನು. ೨೧. ಅಭಿವೃದ್ಧಿಯಾಗುತ್ತಿರುವ ದ್ರೋಣಾ ಚಾರ್ಯರ ಬಾಣಗಳ ಬಿಳಿಯ ಸೋನೆಯ ಮಳೆಯು ದ್ರುಪದನ ಸೈನ್ಯಸಾಗರವನ್ನು ಹೆದರಿಸುವ ಮತ್ತು ಬೆದರಿಸುವ ಬಡಬಾಗ್ನಿಯಾಯಿತು. ಆ ರಥಗಳೂ ಆನೆಯ ಸಮೂಹವೂ ಬಾಣಗಳಲ್ಲಿ ಹೂತುಹೋಗಿ ಚೆದುರಿಹೋಗುತ್ತಿರಲು ದ್ರೋಣನು ಆ ತ್ರಿಪುರವನ್ನು ಹೊಡೆದ ಈಶ್ವರನ ಕಾರ್ಯವನ್ನೂ ಮೀರಿಸಿ ತೀಕ್ಷ್ಣವಾಗಿ ಹೊಡೆದನು. ವ॥ ಹಾಗೆ ತನ್ನ ಸೈನ್ಯವೆಲ್ಲವನ್ನೂ ಯಮನಂತೆ ಒಕ್ಕಣೆಮಾಡಿ ಕೊಲ್ಲುತ್ತಿರುವ ದ್ರೋಣನನ್ನು ದ್ರುಪದನು ಹೇಗೂ ತಡೆಯಲಾರದೆ ಅವನ ಮೇಲೆ ಗುಂಡಾದ ಅಲಗುಳ್ಳ ಬಾಣಗಳ ಬಲವಾದ ಸೋನೆಮಳೆಯನ್ನೂ ಕೆಲ್ಲಂಬುಬಾಣಗಳ ತುಂತುರು ಮಳೆಯನ್ನೂ ಹಾರೆಯಾಕಾರದ ಬಾಣಗಳ ಜಡಿಮಳೆಯನ್ನೂ ಸುರಿಯಲು ದ್ರೋಣನು ಕೋಪಗೊಂಡನು. ೨೨. ಹದಿನೆಂಟು ಬಾಣಗಳಿಂದ ಹೊಡೆದರೆ ಹದಿನೆಂಟಸ್ತ್ರಗಳಿಂದ ಅವನ್ನು ಸೀಳಿದನು. ದ್ರೋಣನು ಕೋಪದಿಂದ ಎಂಬತ್ತು ಬಾಣಗಳಿಂದ ಆರ್ಭಟ ಮಾಡಿ ಹೊಡೆದರೆ ದ್ರುಪದನು ಎಂಬತ್ತು ಬಾಣಗಳಿಂದ ಆಗಲೇ ಕತ್ತರಿಸಿ ಹಾಕಿದನು. ದ್ರೋಣನ ಸಾರಥಿ ಮತ್ತು ಭಯಂಕರವಾದ ಕುದುರೆಗಳ ಸಮೂಹಗಳನ್ನು ತೀಕ್ಷ್ಣವಾಗಿ

ವ॥ ಮೆಯ್ವೆರ್ಚೆ ಪೆರ್ಚಿದುಮ್ಮಚ್ಚರದೊಳಚ್ಚರಿಯಾಗೆಚ್ಚೊಡೆ ಪೂಣ್ದೂರ್ತು-

ಉ॥ ಎನ್ನೊಳೆ ಮುನ್ನೆ ಮಚ್ಚರಿಪನೇ ಒಡನೋದಿದೆನೆಂಬ ಮೇಳದಿಂ
ದೆನ್ನನೆ ಮೆಚ್ಚನೆನ್ನೊಳಮಿವಂ ಸಮನೆಚ್ಚಪನಕ್ಕುಮಾದೊಡೇ ।
ನಿನ್ನವನಂ ಪಡಲ್ವಡಿಪೆನೆಂದಿರದಾಗಳೆ ಭಾರ್ಗವಾಸ್ತ್ರದಿಂ
ದನ್ನೆಱಿದೆಚ್ಚನಾ ದ್ರುಪದರಾಜಶಿರೋಂಬುಜಮಂ ಘಟೋದ್ಭವಂ ॥ ೨೩

ವ॥ ಅಂತು ದ್ರುಪದನಟಿವಂ ಕಂಡಾತನ ತಮ್ಮಂದಿರಪ್ಪ ಶತಾನೀಕ ಶತಚಂದ್ರರ್ ಮೊದಲಾಗೆ ಪನ್ನೊರ್ವರುಮಯ್ವರ್ ಕೈಕಯರುಂ ಕುಂತಿಯ ಮಾವನಪ್ಪ ಕುಂತಿಭೋಜನುಂಬೆರಸು ಪದಿನಾಲ್ಸಾಸಿರ ರಥಂಬೆರಸು ಬಂದು ತಾಗಿದೊಡೆ-

ಮ॥ ಶಕಟಂಗಳ್ ಪದಿನೆಂಟು ಕೋಟಿವರೆಗಂ ತೀವಿರ್ದನೇಕೋಗ್ರ ಸಾ
ಯಕದಿಂದಂ ಚತುರಂಗ ಸಾಧನದ ಮೆಯ್ಮೆಯ್ಯೊಳ್ ಜಗಿಲ್ದಾಂತ ನಾ ।
ಯಕರಂ ಸುಂಟಗೆಯಾಱಿದಂತೆ ರಥದೊಳ್ ಜೋಲ್ವನ್ನೆಗಂ ಕೋದು ಚಾ
ಪ ಕಳಾಕೌಶಳಮಂ ಜಗಕ್ಕೆ ಮೆಱಿದಂ ಮೆಯ್ವೆರ್ಚಿ ಕುಂಭೋದ್ಭವಂ ॥೨೪

ವ॥ ಅಂತು ದ್ರುಪದ ದ್ರುಪದಾನುಜ ವಿರಾಟ ವಿರಾಟಾನುಜ ಕೈಕಯ ಕುಂತಿಭೋಜಾದಿಗಳಪ್ಪ ನಾಯಕರೆಲ್ಲರುಮಂ ಪೇೞಿ ಪೆಸರಿಲ್ಲದಂತೆ ಕೊಂದು ಮುಂದಾಂಪರಾರುಮಿಲ್ಲದಿಕ್ಕಿಗೆಲ್ದ ಮಲ್ಲನಿರ್ದಂತಿರ್ದಾಗಳ್-

ಹೊಡೆದು ಎದುರಿಗೆ ನಿಲ್ಲಬೇಡ ಓಡು ಸತ್ತೆ ಎನ್ನುತ್ತ ಪಾಂಚಾಳರಾಜಾಧೀಶ್ವರನಾದ ದ್ರುಪದನು ವ॥ ಕೊಬ್ಬಿ ಹೆಚ್ಚಿದ ಕೋಪದಲ್ಲಿ ಆಶ್ಚರ್ಯವಾಗುವಂತೆ ಹೊಡೆಯಲು ದ್ರೋಣನು ಗಾಯಗೊಂಡು ೨೩. ಇವನು ಮೊದಲಿನಿಂದಲೂ ನನ್ನಲ್ಲಿ ಮತ್ಸರಿಸುತ್ತಾನೆ. ಜೊತೆಯಲ್ಲಿ ಓದಿದೆನು ಎಂಬ ಸಲಿಗೆಯಿಂದ ನನ್ನನ್ನು ಮೆಚ್ಚಲಾರ; ನನ್ನ ಸಮಾನನಾಗಿಯೇ ಯುದ್ಧಮಾಡುವ ಶಕ್ತಿಯುಳ್ಳವನೇನೋ ಹೌದು; ಆದರೇನು? ಇನ್ನಿವನನ್ನು ಕೆಳಗುರುಳಿಸುತ್ತೇನೆಂದು ಸಾವಕಾಶಮಾಡದೆ ಭಾರ್ಗವಾಸ್ತ್ರದಿಂದ ಕೂಡಿಕೊಂಡು ದ್ರುಪದ ರಾಜನ ತಲೆಯೆಂಬ ಕಮಲವನ್ನು ದ್ರೋಣನು ಕತ್ತರಿಸಿದನು. ವ॥ ಹಾಗೆ ದ್ರುಪದನ ಸಾವನ್ನು ನೋಡಿದ ಆತನ ತಮ್ಮಂದಿರಾದ ಶತಾನೀಕ ಶತಚಂದ್ರರೇ ಮೊದಲಾದ ಹನ್ನೊಂದು ಜನವೂ ಅಯ್ದು ಮಂದಿ ಕೈಕೆಯರೂ ಕುಂತಿಯ ಮಾವನಾದ ಕುಂತಿಭೋಜನೂ ಕೂಡಿ ಹದಿನಾಲ್ಕು ಸಾವಿರರಥದೊಡನೆ ಬಂದು ತಾಗಿದರು. ೨೪. ಹದಿನೆಂಟು ಕೋಟಿಯವರೆಗೂ ತುಂಬಿದ ಗಾಡಿಗಳ ಅತಿಭಯಂಕರವಾದ ಬಾಣಗಳಿಂದ ಒಂದೊಂದು ಮೆಯ್ಯಲ್ಲಿಯೂ ಅಂಟಿಕೊಂಡು, ಪ್ರತಿಭಟಿಸಿದ ನಾಯಕರ, ಸೇನಾಪತಿಗಳ ಸುಟ್ಟಮಾಂಸವನ್ನು ಆರಲಿಟ್ಟಿರುವ ಹಾಗೆ ಜೋತು ಬೀಳುತ್ತಿರುವಂತೆ ರಥದಲ್ಲಿ ಪೋಣಿಸಿ (ನೇತುಹಾಕಿ-ಜೋಲುಬಿಟ್ಟು) ದ್ರೋಣನು ಮಯ್ಯುಬ್ಬಿ ತನ್ನ ವಿದ್ಯಾಕೌಶಲವನ್ನು ಪ್ರದರ್ಶಿಸಿದನು. ವ॥ ಹೀಗೆ ದ್ರುಪದ, ದ್ರುಪದನ ತಮ್ಮ, ವಿರಾಟ, ವಿರಾಟನ ತಮ್ಮ ಕೈಕಯ, ಕುಂತೀಭೋಜನೇ ಮೊದಲಾದ ನಾಯಕರೆಲ್ಲರನ್ನೂ ಹೇಳುವುದಕ್ಕೂ ಒಂದು ಹೆಸರಿಲ್ಲದಂತೆ ಕೊಂದು

ಮ॥ ಸಕಲಾರಾತಿ ನರೇಂದ್ರಮೌಳಿಗಳುರುಳ್ಬಾ ದೀಪ್ತ ರತ್ನಾಂಶು ಮಾ
ಳಿಕೆಯಿಂದಾ ರಣರಂಗಮಂ ಬೆಳಗೆ ಕಾಟ್ಕೆರ್ಚಿಂದು ಭೂತಾಂಗನಾ ।
ನಿಕರಂ ಶೋಣಿತವಾರಿಯಂ ಕುಡಿದಗುರ್ವಪ್ಪನ್ನೆಗಂ ಸೂಸೆ ನೋ
ಡ ಕವಿಲ್ತಿರ್ದುದು ಕೂಡೆ ಸಂಜೆಗವಿದಂತಾ ದ್ರೋಣನಿಂ ಕೊಳ್ಗುಳಂ ॥ ೨೫

ವ॥ ಆಗಳ್ ಯುಧಿಷ್ಠಿರಂ ನಾರಾಯಣಂ ಪೇಲ್ದ ಕಪಟೋಪದೇಶದಿಂ ದ್ರೋಣನಂ ಕೆಯ್ಗೆ ಮಾಡಲೆಂದು ಪಾಂಡ್ಯ ಗಜಘಟೆಗಳನಿದಿರೊಳ್ ತಂದೊಡ್ಡಿದಾಗಳ್-

ಕಂ॥ ನಿಶಿತ ವಿಶಿಖಂಗಳಿಂದೊಂ
ದಶನಿಯೆ ಗಿರಿಕುಲಮನಳಱುವಂತೆ ಮದೇಭ ।
ಪ್ರಸರ ಸಹಸ್ರಂ ಕೆಡೆದುವು
ವಿಸಸನದೊಳ್ ದ್ರೋಣನಿದಿರ್ಗೆ ಮಾರ್ವಲಮೊಳವೇ ॥ ೨೬

ವ॥ ಅಂತು ತನಗೆ ಮಾಱಾಂತ ಮದಾಂಧಸಿಂಧುರಂಗಳಂ ಸಿಂಧುರಂಗಳಂ ಸಿಂಧುರಾರಾತಿಯೆ ಕೊಲ್ವಂತೆ ಕೊಲೆ-

ಕಂ॥ ಸಾಮಜಮಶ್ವತ್ಥಾಮಂ
ನಾಮದಿ ನೊಂದಟಿದೊಡಲ್ಲಿ ಕಂಡು ಹತೋಶ್ವ ।
ತ್ಥಾಮಾ ಎನೆ ನೃಪನಶ್ವ
ತ್ಥಾಮನೆ ಗೆತ್ತೊಣರ್ದನೊವಜನೊರ್ವೆಸರಿಭಮಂ ॥ ೨೭

ಪ್ರತಿಭಟಿಸುವವರಾರೂ ಇಲ್ಲದಂತೆ ಸಂಹರಿಸಿ ಗೆದ್ದ ಜಟ್ಟಿಯಿದ್ದಂತೆ ಇದ್ದನು. ೨೫. ಸಮಸ್ತ ಶತ್ರುರಾಜರ ಕಿರೀಟಗಳುರುಳಿ ಆ ರತ್ನಕಿರಣಗಳ ಸಮೂಹದಿಂದ ಆ ರಣರಂಗವು ಕೆಂಪಗೆ ಪ್ರಕಾಶಮಾನವಾಯಿತು. ಅದು ಕಾಡ್ಗಿಚ್ಚೆಂದು ಪಿಶಾಚಸ್ತ್ರೀಯರ ಸಮೂಹವು ಬಂದು ರಕ್ತಜಲವನ್ನು ಕುಡಿದು ಭಯಂಕರವಾಗುವ ಹಾಗೆ ಚೆಲ್ಲಾಡಿತು. ಆ ದ್ರೋಣನಿಂದ ಆ ಯುದ್ಧಭೂಮಿಯು ಸಂಜೆಕವಿದಂತೆ ಮಾಸಲು ಕೆಂಪುಬಣ್ಣದಿಂದ ಕೂಡಿದ್ದಿತು. ವ॥ ಆಗ ಧರ್ಮರಾಜನು ಕೃಷ್ಣನು ಹೇಳಿದ ಕಪಟೋಪದೇಶದಿಂದ ದ್ರೋಣನನ್ನು ವಶಪಡಿಸಿಕೊಳ್ಳಬೇಕೆಂದು ಪಾಂಡ್ಯರ ಆನೆಗಳ ಸಮೂಹವನ್ನು ಎದುರಾಗಿ ತಂದೊಡ್ಡಿದನು. ೨೬. ಹರಿತವಾದ ಬಾಣಗಳಿಂದ ಒಂದು ವಜ್ರಾಯುಧವೇ ಪರ್ವತಗಳ ಸಮೂಹವನ್ನು ನಾಶಮಾಡುವ ಹಾಗೆ ಸಾವಿರ ಮದ್ದಾನೆಯ ಗುಂಪು ಯುದ್ಧರಂಗದಲ್ಲಿ ಕೆಡೆದುಬಿದ್ದುವು. ದ್ರೋಣನಿಗಿದಿರಾಗುವ ಪ್ರತಿಬಲವುಂಟೇ? ವ॥ ಹಾಗೆ ತನಗೆ ಪ್ರತಿಭಟಿಸಿದ ಮದ್ದಾನೆಗಳನ್ನು ಸಿಂಹವು ಕೊಲ್ಲುವ ಹಾಗೆ ಕೊಂದನು. ೨೭. ಅಶ್ವತ್ಥಾಮನೆಂಬ ಹೆಸರಿನ ಆನೆಯೊಂದು ಯುದ್ಧರಂಗದಲ್ಲಿ ಸಾಯಲು ಧರ್ಮರಾಯನು ನೋಡಿ 'ಹತೋಶ್ವತ್ಥಾಮ' (ಅಶ್ವತ್ಥಾಮ ಹತನಾದನು) ಎಂದು ಘೋಷಿಸಿದನು. ಗುರುವಾದ ದ್ರೋಣನು ಒಂದೇ ಹೆಸರಿನ ಆನೆಯುನ್ನು

ಒಗೆದ ಸುತಶೋಕದಿಂದಾ
ವಗೆಯಂತೊಳಗುರಿಯೆ ಭೋಂಕನೆರ್ದೆ ತೆಱೆಯಲ್ ಹಾ ।
ಮಗನೇ ಎಂದಶ್ರುಜಲಾ
ರ್ದ್ರಗಂಡನಾ ಗಂಡಿನೊಡನೆ ಬಿಸುಟಂ ಬಿಲ್ಲಂ ೨೮

ವ॥ ಅಂತು ಬಿಸುಟು ವಿಚ್ಛಿನ್ನ ವೀರರಸನುಮುತ್ಪನ್ನ ಶೋಕರಸನುಮಾಗಿ ನಿಜ ವರೂಥಮಂ ಧರ್ಮಪುತ್ರನ ಸಮೀಪಕ್ಕುಯ್ದು ಮಗನ ಮಾತಂ-

ಚಂ॥ ಬೆಸಗೊಳೆ ಕುಂಜರಂ ಮಡಿದುದೆಂದು ಮಹೀಭುಜನುಳ್ಳ ಮಾೞ್ಕೆಯಿಂ
ಪುಸಿಯದೆ ಪೇೞ್ದೊಡಂ ಕಿಱಿದು ನಂಬದೆಯುಂ ರಣದಲ್ಲಿ ಮುನ್ನೆ ಬಿ ।
ಲ್ವಿಸುಟೆನಿದೆಂತು ಪೇೞ್ ಪಿಡಿವೆನಿನ್ನಿದನೆಂದಿರದಾತ್ಮಯೋಗಿ ತ
ನ್ನಸುವನುದಾತ್ತಯೋಗದೊಳೆ ಬಿಲ್ಲೊವಜಂ ಕಳೆದಂ ರಣಾಗ್ರದೊಳ್ ॥ ೨೯

ವ॥ ಅಂತು ಭಾವಿತಾತ್ಮನಧ್ಯಾತ್ಮ ವಿಶಾರದನಾಗಿ ಪರಮಾತ್ಮನೊಳ್ ಕೂಡಿದನಾಗಳ್ ಪೆಣನನಿಱಿದು ಪಗೆಗೊಂಡರೆಂಬ ನಾಣ್ನುಡಿಯಂ ನನ್ನಿ ಮಾಡಿ ತಮ್ಮಯ್ಯಂ ಸತ್ತ ಮುಳಿಸಿನೊಳ್ ಕಣ್ಗಾಣದೆ ಧೃಷ್ಟದ್ಯುಮ್ನಂ ಧರ್ಮತನೂಜಂ ಬಾರಿಸೆ ವಾರಿಸೆ-

ಕಂ॥ ಕರವಾಳಂ ಘರವಟ್ಟಿಸಿ
ಶಿರೋಜಮಂ ಪಿಡಿದು ತೆಗೆದು ಗುರುವಂ ಪಚ್ಚಂ ।
ತಿರೆ ಪಱಿದು ಪೊಯ್ದನೆಂತ
ಪ್ಪರೊಳಂ ಮುಳಿಸಱಿವನಾಗಲೇನಿತ್ತಪುದೇ ॥ ೩೦

(ನಾಮಸಾದೃಶ್ಯದಿಂದ) ಮಗನಾದ ಅಶ್ವತ್ಥಾಮನೆಂದೇ ಭಾವಿಸಿ ದುಃಖಿಸಿದನು. ೨೮. ಉಂಟಾದ ಪುತ್ರಶೋಕದಿಂದ ಕುಂಬಾರರ ಆವುಗೆಯ ಒಲೆಯಂತೆ ಮನಸ್ಸು ಉರಿಯಲು ಇದ್ದಕ್ಕಿದ್ದ ಹಾಗೆ ಎದೆಯು ಬಿರಿಯಲು 'ಅಯ್ಯೋ ಮಗನೆ' ಎಂದು ಕಣ್ಣೀರಿನಿಂದ ತೊಯ್ದ ಕೆನ್ನೆಯುಳ್ಳವನಾಗಿ ತನ್ನ ಪೌರುಷದೊಡನೆ ಬಿಲ್ಲನ್ನೂ ಬಿಸಾಡಿದನು. ವ॥ ಕತ್ತಿಯನ್ನೆಸೆದು ವೀರರಸವಿರಹಿತನಾಗಿ ದುಃಖರಸದಿಂದ ಕೂಡಿ ತನ್ನ ತೇರನ್ನು ಧರ್ಮರಾಯನ ಸಮೀಪಕ್ಕೆ ತೆಗೆದುಕೊಂಡುಹೋಗಿ ಮಗನ ಮಾತನ್ನು ೨೯. (ವಾಸ್ತವಾಂಶವೇನೆಂದು) ಪ್ರಶ್ನೆಮಾಡಲು ಆನೆಯು ಸತ್ತಿತೆಂದು ರಾಜನು (ಸತ್ಯವಾಗಿ) ಇರುವ ರೀತಿಯಲ್ಲಿಯೇ ಹುಸಿಯದೆ ಹೇಳಿದರೂ ಸ್ವಲ್ಪವೂ ನಂಬದೆ "ಯುದ್ಧದಲ್ಲಿ ಈ ಮೊದಲು ಬಿಲ್ಲನ್ನು ಬಿಸಾಡಿದ್ದೇನೆ. ಪುನಃ ಅದನ್ನು ಹೇಗೆ ಹಿಡಿಯಲಿ ಹೇಳು" ಎಂದು ಆತ್ಮಯೋಗಿಯಾದ ದ್ರೋಣನು ಸಾವಕಾಶಮಾಡದೆ ತನ್ನ ಪ್ರಾಣವನ್ನು ಉದಾತ್ತವಾದ ಯೋಗಮಾರ್ಗದಲ್ಲಿ ಯುದ್ಧಮುಖದಲ್ಲಿ ನೀಗಿದನು. ವ॥ ಹಾಗೆ ಆತ್ಮಧ್ಯಾನಪರನಾದ ದ್ರೋಣನು ಅಧ್ಯಾತ್ಮಪರಾಯಣನಾಗಿ ಪರಮಾತ್ಮನಲ್ಲಿ ಕೂಡಿದನು. ಆಗ 'ಹೆಣವನ್ನು ಕತ್ತರಿಸಿ ಹಗೆಯನ್ನು ತೀರಿಸಿಕೊಂಡರು' ಎಂಬ ಗಾದೆಯ ಮಾತನ್ನು ಸತ್ಯವನ್ನಾಗಿ ಮಾಡಿ ತಮ್ಮಯ್ಯನಾದ ದ್ರುಪದನು ಸತ್ತ ಕೋಪದಿಂದ ಬುದ್ಧಿಶೂನ್ಯನಾಗಿ ಧೃಷ್ಟದ್ಯುಮ್ನನು ಧರ್ಮರಾಜನು ಬೇಡವೆಂದು ತಡೆದರೂ-೩೦. ಕತ್ತಿಯನ್ನು ಬೀಸಿ ಕೂದಲನ್ನು ಹಿಡಿದೆಳೆದು ಗುರುವನ್ನು ಎರಡುಭಾಗ ಮಾಡಿದ ಹಾಗೆ ಘಟ್ಟಿಯಾಗಿ

**ವ॥ ಅಂತು ದ್ರೋಣನೆಳೆಗೋಣ ಸಾವಂ ಸಾವುದುಂ ಭೋರ್ಗರೆದಾರ್ದ ಪಾಂಡವ ಪತಾಕಿನಿಯುಮನೊಂದು ತಲೆಯಾಗೋಡುವ ಕೌರವಧ್ವಜಿನಿಯುಮಂ ಬೇಱೊಂದು ಮೊನೆಯೊಳ್ ಕಾದುತಿರ್ದಶ್ವತ್ಥಾಮಮಂ ಕಂಡು ಮುಟ್ಟೆವರ್ಪನ್ನೆಗಂ ಶೋಣಾಶ್ವೋಪಲಕ್ಷಿತ ನಿಜ ಪಿತೃ ಸೂತ ಕೇತನ ಕಥಿತಮಾಗಿರ್ದ ರಥಮನುಪಲಕ್ಷಿಸಿ ನೋಡಿ ತಮ್ಮಯ್ಯನತೀತನಾದುದನಱಿದು-**

**ಚಂ॥ ಒಱೆತುಗುತರ್ಪ ಕಣ್ಬನಿಗಳಂ ಬರಲೀಯದೆ ಕೋಪ ಪಾವಕಂ**
**ನಿಱಿಸೆ ಕನಲ್ದು ರೋಷದಿನಪಾಂಡವಮಾಗಿರೆ ಮಾಡದಂದು ಬಿ ।**
**ಲ್ಲೞಿಯನ ಪುತ್ರನಲ್ಲೆನೆನುತುಂ ಗುರುಪುತ್ರನಿದಿರ್ಚೆ ಭೀತಿಯಿಂ**
**ಮಱುಗಿ ತೆರಳ್ದು ತೂಳ್ದಿ ಸುಳಿಗೊಂಡುದು ಪಾಂಡವ ಸೈನ್ಯಸಾಗರಂ ॥ ೩೧**

**ವ॥ ಆಗಳುರಿಯುರುಳಿಯಂತಪ್ಪ ತನ್ನ ನೊಸಲ ಕಣ್ಣಂ ತೋಱೆ ತನ್ನ ಸಾಹಸಮಂ ತೋಱಲೆಂದು ನಾರಾಯಣಾಸ್ತ್ರಮಂ ತೊಟ್ಟೆಚ್ಚಾಗಳ್-**

**ಚಂ॥ ದೆಸೆ ಮಸುಳ್ದತ್ತು ವಾರ್ಧಿ ತಳರ್ದತ್ತು ನೆಲಂ ಪಿಡುಗಿತ್ತು ತೊಟ್ಟನಾ**
**ಗಸಮೊಡೆದತ್ತಜಾಂಡಮಳಱೆತ್ತೆನುತಿರ್ದೆಡೆಯಲ್ಲಿ ಲೋಕಮಂ ।**
**ಬಸಿಱೊಳಗಿಟ್ಟು ಕಾದಳವನಾರಳವೊಡ್ಡಿಸೆ ಕಾದನಾಗಳ**
**ರ್ವಿಸೆ ತೆಗೆದೆಚ್ಚ ವೈಷ್ಣವಮನೊಡ್ಡಿಸಿ ವೈಷ್ಣವದಿಂ ಮುರಾಂತಕಂ ॥ ೩೨**

ಹೊಡೆದನು. ಕೋಪವು ಎಂತಹವರಲ್ಲಿಯೂ ವಿವೇಕವುಂಟಾಗಲು ಅವಕಾಶ ಕೊಡುತ್ತದೆಯೇ ಏನು? ವ॥ ಹಾಗೆ ದ್ರೋಣನು ಎಳೆದು ತಂದ ಕೋಣನ ಸಾವಿನ ಮಾದರಿಯ ಸಾವನ್ನು (ಎಳಗೋಣಸಾವು) ಸಾಯಲಾಗಿ ಶಬ್ದಮಾಡಿ ಆರ್ಭಟ ಮಾಡುವ ಪಾಂಡವಸೈನ್ಯವನ್ನೂ ಒಂದೇದಿಕ್ಕಿಗೆ ತಲೆತಿರುಗಿಸಿಕೊಂಡು ಓಡುವ ಕೌರವ ಸೈನ್ಯವನ್ನೂ ಯುದ್ಧಭೂಮಿಯ ಮತ್ತೊಂದೆಡೆಯಲ್ಲಿ ಕಾದುತ್ತಿದ್ದ ಅಶ್ವತ್ಥಾಮನು ನೋಡಿದನು. ಹತ್ತಿರ ಬರುವಷ್ಟರಲ್ಲಿ ಕೆಂಪುಕುದುರೆಗಳಿಂದ ಗುರುತಿಸಲ್ಪಟ್ಟ ತನ್ನ ತಂದೆ, ಸಾರಥಿ, ಧ್ವಜಗಳಿಂದ ಕೂಡಿದ್ದ ತೇರನ್ನು ದೃಷ್ಟಿಸಿ ನೋಡಿ ತಮ್ಮ ತಂದೆಯು ಸತ್ತು ಹೋಗಿದ್ದುದನ್ನು ತಿಳಿದನು. ೩೧. ಜಿನುಗಿ ಸೋರುತ್ತಿದ್ದ ಕಣ್ಣೀರಿನ ಹನಿಗಳನ್ನು ತಡೆದುಕೊಂಡು ಕೋಪಾಗ್ನಿಯು ಉಜ್ವಲವಾಗುತ್ತಿರಲು ರೇಗಿ ಕೋಪದಿಂದ 'ಪ್ರಪಂಚ ವನ್ನು ಪಾಂಡವರಿಲ್ಲದಂತೆ ಮಾಡದಿರುವಾಗ ನಾನು ಚಾಪಾಚಾರ್ಯನ ಮಗನೇ ಅಲ್ಲ' ಎನ್ನುತ್ತ ಅಶ್ವತ್ಥಾಮನು ಎದುರಿಸಲು ಪಾಂಡವಸೇನಾಸಮುದ್ರವು ಭಯದಿಂದ ದುಃಖಪಟ್ಟು ಚಲಿಸಿ ತಳ್ಳಲ್ಪಟ್ಟು ಸುಳಿಸುಳಿಯಾಗಿ ತಿರುಗಿತು. ವ॥ ಆಗ ಉರಿಯ ಉಂಡೆಯ ಹಾಗಿದ್ದ ತನ್ನ ಹಣೆಗಣ್ಣನ್ನು ತೋರಿ ತನ್ನ ಸಾಹಸವನ್ನು ಪ್ರದರ್ಶಿಸಬೇಕೆಂದು ನಾರಾಯಾಣಾಸ್ತ್ರವನ್ನು ಪ್ರಯೋಗಿಸಿದನು. ೩೨. ದಿಕ್ಕುಗಳು ಮಾಸಲಾದುವು, ಸಮುದ್ರಗಳು ಚಲಿಸಿದುವು, ಭೂಮಿಯು ಸಿಡಿಯಿತು, ಇದ್ದಕ್ಕಿದ್ದ ಹಾಗೆ ಆಕಾಶವು ಒಡೆದುಹೋಯಿತು ಎನ್ನುತ್ತಿದ್ದ ಸಮಯದಲ್ಲಿ ಇರುವ ಸ್ಥಳದಲ್ಲಿಯೇ ಲೋಕವನ್ನು ತನ್ನ ಹೊಟ್ಟೆಯೊಳಗಿಟ್ಟು ಯಾವ ಶಕ್ತಿಯನ್ನಾದರೂ ಪ್ರತಿಭಟಿಸಿ ರಕ್ಷಿಸುವ ಶಕ್ತಿಯುಳ್ಳ ಶ್ರೀಕೃಷ್ಣನು, ಭಯಂಕರವಾಗಿ ಸೆಳೆದು ಪ್ರಯೋಗಿಸಿದ ನಾರಾಯಣಾಸ್ತ್ರವನ್ನು

ವ|| ಅಂತಶ್ವತ್ಥಾಮನೆಚ್ಚ ನಾರಾಯಣಾಸ್ತ್ರಮಂ ನಾರಾಯಣನುಪಾಯದೊಳ್ ಗೆಲ್ದನನ್ನೆಗಂ-

ಚಂ|| ಕವಿದೆರಡುಂ ಪತಾಕಿನಿಗಳಾಗಡುಮೆನ್ನನೆ ಸಕ್ಕಿ ಮಾಡಿ ಕಾ
ದುವುದಜೆನಿಲ್ಲಿ ಸತ್ತರಸುಮಕ್ಕಳ ಪಾಪಮಿದೆಲ್ಲಮೆನ್ನನೆ ।
ಯ್ದುವುದುಪವಾಸದಿಂ ಜಪದಿನಾನದನೋಡಿಸಿ ಶುದ್ಧನಪ್ಪೆನೆಂ
ಬವೊಲಪರಾಂಬುರಾಶಿಗಿಟೆದಂ ನಳಿನೀವರಜೀವಿತೇಶ್ವರಂ ॥ ೩೩

ವ|| ಅಂತೆರಡುಂ ಪಡೆಗಳೊಂದಿರುಳುಮೆರಡುಂ ಪಗಲುಮೋರಂತೆ ಕಾದಿ ಚಳಿತಪಹಾರ ತೂರ್ಯಂಗಳಂ ಬಾಜಿಸೆ ತಂತಮ್ಮ ಬೀಡುಗಳ್ಗೆ ಪೋದರಾಗಳ್-

ಚಂ|| ಗುರುವಿನ ಶೋಕದಿಂದೆ ರಥಮಧ್ಯದೊಳೊಯ್ಯನೆ ಜೋಲ್ದು ಬಿಟ್ಟನಂ
ಗುರುಸುತನಂ ಕೃಪಂ ಕೃಪೆಯಿನಾತ್ಮವಿಳಾಸದೊಳಾಜೆಸುತ್ತುಮಂ ।
ತಿರೆ ಗುರುಶೋಕಮಗ್ಗಳಿಸೆ ತಾತವಿಯೋಗಮುಮಕ್ಕುಮಾಗಡುಂ
ಗುರುವೆನೆ ಪೇಟಿಮಾ ಗುರುವಿಯೋಗಭರಂ ಗುರುವಾಗದಿರ್ಕುಮೇ॥ ೩೪

ವ|| ಅನ್ನೆಗಂ ಪನ್ನಗಕೇತನಂ ಶೋಕಮನಾಜೆಸಲೆಂದು ಕರ್ಣ ಶಲ್ಯ ಸೌಬಲ ಸಮೇತಂ ಬಂದಶ್ವತ್ಥಾಮನನಿಂತೆಂದಂ-

ಮ|| ಪುದಿದೌರ್ವಾನಳನಬ್ಧಿಯಂ ಸುಡುವವೋಲ್ ಶಸ್ತ್ರಾಗ್ನಿಯಿಂ ತೀವ್ರ ಕೋ
ಪದಿನುದ್ವೃತ್ತ ಬಳಾಬ್ಧಿಯಂ ಸುಡೆ ಕರಂ ಬೆಂಬಿಟ್ಟು ದುರ್ಯುಕ್ತಿಯಿಂ ।
ದದಯಂ ಧರ್ಮಜನಿಕ್ಕಿದಂ ಗುರುವನಿನ್ನೀನಾತನಂ ಬೇಗಮಿ
ಕ್ಕದೆ ಕಣ್ಣೀರ್ಗಳನಿಕ್ಕೆ ಚಂದ್ರಧವಳಂ ನಿನ್ನನ್ವಯಂ ಮಾಸದೇ ॥ ೩೫

ವೈಷ್ಣವಾಸ್ತ್ರದಿಂದ ಎದುರಿಸಿ ಲೋಕವನ್ನು ರಕ್ಷಿಸಿದನು- ವ|| ಹಾಗೆ ಅಶ್ವತ್ಥಾಮನು ಪ್ರಯೋಗಿಸಿದ ನಾರಾಯಣಾಸ್ತ್ರವನ್ನು ನಾರಾಯಣನಾದ ಕೃಷ್ಣನು ಉಪಾಯದಿಂದಲೇ ಗೆದ್ದನು. ಅಷ್ಟರಲ್ಲಿ ೩೩. ಎರಡು ಸೈನ್ಯಗಳೂ ಮೇಲೆಬಿದ್ದು ಯಾವಾಗಲೂ ನನ್ನನ್ನೇ ಸಾಕ್ಷಿಯನ್ನಾಗಿಮಾಡಿ ಯುದ್ಧಮಾಡುವುದರಿಂದ ಸತ್ತ ರಾಜಕುಮಾರರ ಈ ಪಾಪವೆಲ್ಲ ನನ್ನನ್ನೇ ಸೇರುವುದು. ಆ ಪಾಪವನ್ನು ಉಪವಾಸದಿಂದಲೂ ಜಪದಿಂದಲೂ ಓಡಿಸಿ ಶುದ್ಧನಾಗುತ್ತೇನೆ ಎನ್ನುವ ಹಾಗೆ ಸೂರ್ಯನು ಪಶ್ಚಿಮಸಮುದ್ರಕ್ಕಿಳಿದನು. ವ|| ಒಂದು ರಾತ್ರಿ ಮತ್ತು ಎರಡು ಹಗಲು ಒಂದೇ ಸಮನಾಗಿ ಕಾದಿ ಬಲಗುಂದಿದ್ದ ಎರಡು ಸೈನ್ಯಗಳೂ ಯುದ್ಧವನ್ನು ನಿಲ್ಲಿಸಬೇಕೆಂಬ ಸೂಚನೆಯನ್ನು ಕೊಡುವ ವಾದ್ಯಗಳನ್ನು ಬಾಜಿಸಲು ತಮ್ಮ ತಮ್ಮ ನಿವಾಸಗಳಿಗೆ (ಬೀಡುಗಳಿಗೆ) ಹೋದುವು; ಆಗ ೩೪. ತಂದೆಯು ಸತ್ತ ದುಃಖದಿಂದ ರಥದ ಮಧ್ಯಭಾಗದಲ್ಲಿಯೇ ನಿಧಾನವಾಗಿ ಜೋತು ಬಿದ್ದಿದ್ದ ಅಶ್ವತ್ಥಾಮನನ್ನು ಕೃಪನು ಮೃದುವಾದ ಮಾತುಗಳಿಂದಲೂ; ತನ್ನ ಸಮಾಧಾನೋಕ್ತಿಯಿಂದಲೂ ಬೀಡಿಗೆ ಕರೆದು ತಂದನು. ತಂದೆಯ ಸಾವೇ (ಅಗಲಿಕೆಯೇ) ಹೆಚ್ಚಿನ ದುಃಖಕ್ಕೆ ಕಾರಣವಾಗಿರುವಾಗ ಆ ತಂದೆಯು ಗುರುವೂ ಆಗಿದ್ದಾಗ ಆ ಗುರುವಿಯೋಗದುಃಖವು ಗುರುತರವಾಗಿರುವುದಿಲ್ಲವೇ? ವ|| ಅಷ್ಟರಲ್ಲಿ ದುರ್ಯೋಧನನು ಅಶ್ವತ್ಥಾಮನ ದುಃಖವನ್ನು ಆರಿಸಬೇಕೆಂದು ಕರ್ಣ, ಶಲ್ಯ, ಶಕುನಿಯರೊಡನೆ ಬಂದು ಅವನಿಗೆ ಹೀಗೆ ಹೇಳಿದನು. ೩೫. ಆಚಾರ್ಯರು ಆವರಿಸಿ

ದ್ರುತವಿಲಂಬಿತಂ ॥ ಎನಗೆ ಕೂರ್ಪುದನಾ ಘಟಸಂಭವಂ
ನಿನಗೆ ಕೂರನಬಲ್ ನಿನತಲ್ತು ಕೇ ॥
ಳಿನತುಮಾಱದ ಶೋಕಮನಿರ್ವರುಂ
ಮುನಿವರಂ ತವೆ ಕೊಂದೊಡನೀಗುವಂ ॥ ೩೬

ವ॥ ಎಂಬುದುಮಶ್ವತ್ಥಾಮನಿಂತೆಂದಂ-

ತರಳಂ ॥ ಗುರು ಮದೀಯ ವಿಮೋಹದಿಂ ಕೃಪೆಯಂ ಜವಂ ಬಿಸುಟಂತೆ ಕೊ
ಕ್ಕರಿಸಿ ಬಿಲ್ವಿಸುಟಿರ್ದೊಡಾ ಪದದೊಳ್ ಗಡಂ ದ್ರುಪದಾತ್ಮಜಂ ।
ಗುರುವ ಕೇಶಕಳಾಪಮಂ ತೆಗೆದಂತೆ ಗಂಡನುಮಾದನೀ
ಪರಿಭವಕ್ಕನುರೂಪಮಿಂ ಪೆಱತೊಂದುಮಿಲ್ಲಹಿಕೇತನಾ ॥ ೩೭

ಶಾ॥ ರಾಯೆಂಬೀ ಪೆಸರಿಲ್ಲದಂತು ಮುಳಿಸಿಂ ಮುಯ್ಯೇೞು ಸೂೞಿಂತು ಕ
ಟ್ಟಾಯಂ ಪೊಂಪುಳಿವೋಗೆ ತಂದೆಯೞಿವಿಂಗಾ ಭಾರ್ಗವಂ ಕೊಂದನಂ ।
ತೀಯೆಮ್ಮಯ್ಯನಿನಾದುದೊಂದು ಪಗೆಯಿಂ ಸೀಳ್ದುಗ್ರಪಾಂಚಾಳರಾ
ಜಾಯುಃಪಾರಮನನ್ಯಭೂಪಬಲಮಂ ಪರ್ದಿಂಗೆ ಬರ್ದಿಕ್ಕುವೆಂ ॥ ೩೮

ಕೊಂಡಿರುವ ಬಡಬಾಗ್ನಿಯು ಕಡಲನ್ನು ಸುಡುವಂತೆ ಶಸ್ತ್ರಾಗ್ನಿಯಿಂದಲೂ ತೀಕ್ಷ್ಣವಾದ ಕೋಪಾಗ್ನಿಯಿಂದಲೂ ಕೊಬ್ಬಿದ ಶತ್ರು ಸೈನ್ಯಸಾಗರವನ್ನು ಸುಡುತ್ತಿರಲು ವಿಶೇಷವಾದ ಉಪಸರ್ಪಣೆಯಿಂದಲೂ ಹೀನೋಪಾಯಗಳಿಂದಲೂ ದಯಾಹೀನನಾದ ಧರ್ಮರಾಯನು ಗುರುವನ್ನು ಕೊಂದನು. ಇನ್ನು ನೀನು ಅವನನ್ನು ಬೇಗನೆ ಕೊಲ್ಲದೆ ಕಣ್ಣೀರನ್ನು ಸುರಿಸುತ್ತಿದ್ದರೆ ಚಂದ್ರನಷ್ಟು ಬೆಳ್ಳಗಿರುವ ನಿನ್ನ ವಂಶವು ಮಲಿನವಾಗದೆ ಇರುತ್ತದೆಯೇ? ೩೬. ದ್ರೋಣಾಚಾರ್ಯನು ನನ್ನನ್ನು ಪ್ರೀತಿಸುತ್ತಿದಷ್ಟು ನಿನ್ನನ್ನು ಪ್ರೀತಿಸುತ್ತಿರಲಿಲ್ಲ. ಈ ದುಃಖವು ನಿನ್ನದು ಮಾತ್ರವಲ್ಲ; ಕೇಳು, ನನ್ನದೂ ಅಹುದು. ಕಡಿಮೆಯಾಗದ ಈ ದುಃಖವನ್ನು, ನಾವಿಬ್ಬರೂ ನಮಗೆ ಸಮಾನ ಶತ್ರುಗಳಾದ ಪಾಂಡವರನ್ನು ಪೂರ್ಣವಾಗಿ ಕೊಂದು, ಜೊತೆಯಲ್ಲಿಯೇ ಪರಿಹಾರ ಮಾಡಿ ಕೊಳ್ಳೋಣ. ವ॥ ಎನ್ನಲು ಅಶ್ವತ್ಥಾಮನು ಹೀಗೆ ಹೇಳಿದನು. ೩೭. ಆಚಾರ್ಯನಾದ ನನ್ನ ತಂದೆಯು ನನ್ನ ಮೇಲಿನ ಪ್ರೀತಿಯಿಂದ ಯಮನು ಕರುಣವನ್ನು ಬಿಸಾಡುವ ಹಾಗೆ ಅಸಹ್ಯಪಟ್ಟು ಬಿಲ್ಲನ್ನು ಬಿಸುಟಿದ್ದ ಆ ಸಮಯದಲ್ಲಿಯೇ ಅಲ್ಲವೇ ಧೃಷ್ಟದ್ಯುಮ್ನನು ಗುರುವಿನ ಕೂದಲ ಗಂಟನ್ನು ಎಳೆದು ಮಹಾಶೂರನಾದುದು. ದುರ್ಯೋಧನಾ! ಈ ಅವಮಾನಕ್ಕೆ ಸಮಾನವಾದುದು ಬೇರೊಂದಿಲ್ಲ. ೩೮. ಪರಶುರಾಮನು ತಂದೆಯ ಸಾವಿಗಾಗಿ ಕೋಪದಿಂದ 'ರಾಜ' ಎಂಬ ಹೆಸರೇ ಇಲ್ಲದಿರುವ ಹಾಗೆ ಇಪ್ಪತ್ತೊಂದು ಸಲ ತನ್ನ ಪೌರುಷವು ಅತ್ಯಂತ ಅಧಿಕವಾಗುತ್ತಿರಲು (ರಾಜಕುಲವನ್ನೆ) ಹೇಗೆ ಕೊಂದನೋ ಹಾಗೆಯೇ ಈಗ ನಮ್ಮ ತಂದೆಯ ಕಾರಣದಿಂದಾದ ದ್ವೇಷದಿಂದ ಭಯಂಕರವಾದ ಪಾಂಚಾಲರಾಜರ ಆಯಸ್ಸಿನ ದಡವನ್ನು ಸೀಳಿ ಶತ್ರುರಾಜರ ಸೈನ್ಯವನ್ನು ಹದ್ದುಗಳಿಗೆ ಔತಣಮಾಡಿಸುತ್ತೇನೆ.

ಕಂ॥ ಪಗೆಯಂದಮುಮಾ ರಾಮರ
ಪಗೆಯೊಳ್ ಸಮಮವರ ಪಿಡಿವ ಬಿಲ್ ಬಿಲ್ಲೆಮ್ಮಂ ।
ಬುಗಳುಮವರಿತ್ತ ನಲ್ಲಂ
ಬುಗಳೆನೆ ಬಳೆಗಾಯದಂತು ಚಲಮನೆ ಕಾವೆಂ ॥ ೩೯

ವ॥ ಎಂಬುದುಂ ತನ್ನಳಿಯನ ನುಡಿಗೆ ಶಾರದ್ವತಂ ಸಂತೋಷಂಬಟ್ಟು ಕೌರವೇಶ್ವರನ ನಿಂತೆಂದಂ ನೀನೀತಂಗೆ ವೀರವಟ್ಟಮಂ ಕಟ್ಟಿ ರಿಪುನೃಪಬಲಕ್ಕೆ ತೋಱಿ ಬಿಡುವುದೆನೆ ಕಳಶಜನಿಂ ಬಳಿಕ್ಕೆ ಕರ್ಣಂಗೆಂದು ನುಡಿದ ಬೀರವಟ್ಟಮನೆಂತು ಕಟ್ಟುವೆನೆಂದೊಡಶ್ವತ್ಥಾಮ ನಿಂತೆಂದಂ-

ಚಂ॥ ನಿಜದೊಳೆ ಭೂಪರೆಂಬರವಿವೇಕಿಗಳಪ್ಪರದಕ್ಕೆ ನೀಂ ಫಣಿ
ಧ್ವಜ ಕಡುಕೆಯ್ದು ಕರ್ಣನನೆ ನಚ್ಚುವೆಯಪ್ಪೊಡೆ ಯುದ್ಧದೊಳ್ ವೃಷ ।
ಧ್ವಜನುಮನಿಕ್ಕಿ ಗೆಲ್ದರಿಗನೊಳ್ ತಲೆವಟ್ಟದಿರಾಗಿ ನಿಂದು ಸೂ
ತಜನಿಱಿವಂ ಗಡಂ ಪಗೆಯನೇಂ ಗಳ ಪಟ್ಟಮೆ ಪಾಱಿ ತಿಂಬುದೇ ॥ ೪೦

ವ॥ ಎಂಬುದುಮಂಗರಾಜಂ ಗುರುತನೂಜನನಿಂತೆಂದಂ-

ಚಂ॥ ಎನಿತಳವುಳ್ಳೊಡಂ ದ್ವಿಜನ ಗಂಡಗುಣಕ್ಕಗಿವನ್ನರಾರೊ ನೆ
ಟ್ಟನೆ ವಿಷಮೊಳ್ಳಿಗುಳ್ಳೊಡಮದೊಳ್ಳೆಯೆ ಕಾಳಿಯ ನಾಗನಾಗದ ।
ಣ್ಮಿನ ಪಡೆಮಾತದೊಂದೆ ನೆವಮಾಗಿರೆ ಕೆಯ್ದುವನಿಕ್ಕಿ ಸತ್ತ ಸಾ
ವಿನ ಪಡಿಚಂದಮಾಗಿಯುಮಿದೇಂ ನಿಮಗಟ್ಟಿಯೊ ಗಂಡುವಾತುಗಳ್॥ ೪೧

೩೯. 'ನಮ್ಮ ಶತ್ರುತ್ವದ ರೀತಿಯೂ ರಾಮರ ಶತ್ರುತ್ವಕ್ಕೆ ಸಮಾನವಾದುದು. ಅವರು ಹಿಡಿಯುತ್ತಿದ್ದ ಬಿಲ್ಲೇ ನನ್ನ ಬಿಲ್ಲು ನಮ್ಮ ಬಾಣಗಳೂ ಅವರು ಕೊಟ್ಟ ಒಳ್ಳೆಯ ಬಾಣಗಳೇ ಆಗಿರಲು ವಂಶವನ್ನು (ಕ್ಷತ್ರಿಯ ವಂಶವನ್ನು) ರಕ್ಷಿಸದೆ (ಹಾಗೆಯೇ) ಹಟವನ್ನೇ ಸಾಧಿಸುತ್ತೇನೆ' ವ॥ ಎಂದ ತನ್ನಳಿಯನ ಮಾತಿಗೆ ಕೃಪನು ಸಂತೋಷಪಟ್ಟು ದುರ್ಯೋಧನನಿಗೆ ಹೀಗೆ ಹೇಳಿದನು- 'ನೀನು ಇವನಿಗೆ ವೀರಪಟ್ಟವನ್ನು ಕಟ್ಟಿ ಶತ್ರುಸೈನ್ಯದ ಕಡೆಗೆ ತೋರಿಸಿ ಬಿಡತಕ್ಕದ್ದು' ಎನ್ನಲು 'ದ್ರೋಣನ ಬಳಿಕ ಕರ್ಣನಿಗೆ' ಎಂದು ಹೇಳಿದ ವೀರಪಟ್ಟವನ್ನು ಈಗ ಇವನಿಗೆ ಹೇಗೆ ಕಟ್ಟಲಿ ಎನ್ನಲು ಅಶ್ವತ್ಥಾಮನು ಹೀಗೆ ಹೇಳಿದನು. ೪೦. ರಾಜರೆನ್ನುವವರು ವಾಸ್ತವವಾಗಿಯೂ ಬುದ್ಧಿಯಿಲ್ಲದವರೆಂಬುದು ಸತ್ಯ. ಅದು ಹಾಗಿರಲಿ; ಎಲೈ ದುರ್ಯೋಧನನೇ, ಬಹಳವಾಗಿ ಪ್ರೀತಿಸಿ ಕರ್ಣನನ್ನೇ ನಂಬುವೆಯಾದರೆ ಯುದ್ಧದಲ್ಲಿ ಈಶ್ವರನನ್ನೇ ಇಕ್ಕಿ ಗೆದ್ದ ಅರ್ಜುನನಿಗೆ ಅಭಿಮುಖವಾಗಿ ನಿಂತು ಕರ್ಣನು ಯುದ್ಧಮಾಡುತ್ತಾನಲ್ಲವೇ? ಕಟ್ಟುವ ವೀರಪಟ್ಟವೇ ಹಾರಿ ಮೇಲೆ ಬಿದ್ದು ಶತ್ರುವನ್ನು ತಿನ್ನುವುದೇ ಏನು? ವ॥ ಎನ್ನಲು ಕರ್ಣನು ಅಶ್ವತ್ಥಾಮನನ್ನು ಕುರಿತು ಹೀಗೆಂದನು ೪೧. 'ಎಷ್ಟು ಶಕ್ತಿಯಿದ್ದರೂ ಬ್ರಾಹ್ಮಣನ ಪೌರುಷಕ್ಕೆ ಹೆದರುವವರಾರಿದ್ದಾರೋ? ಕೇರೆ ಹಾವಿಗೆ ನೇರವಾಗಿ ವಿಷವಿದ್ದರೂ ಅದು ಒಳ್ಳೆಯೇ (ಕೇರೆಯ ಹಾವೇ); ಕೃಷ್ಣಸರ್ಪವಾಗಲಾರದು. ಪೌರುಷದ ಸುದ್ದಿಯೊಂದಿದೆ! ಯಾವುದೋ ಒಂದು ನೆಪದಿಂದ ಆಯುಧವನ್ನು ಬಿಸಾಡಿ ಸತ್ತ

ವ॥ ಎಂಬುದುಂ ತ್ರೈಲೋಕ್ಯ ಧನುರ್ಧರನಪ್ಪೆಮ್ಮಯ್ಯನ ಗಂಡವಾತನೀ ಮೀಂಗುಲಿಗಂ ಮೆಚ್ಚನಿವನಂ ಮುಂ ಕೊಂದು ಬೞಿಯಂ ಪಾಂಡವರಂ ಕೊಲ್ವೆನೆಂದು ಬಾಳಂ ಕಿೞ್ತು ಕರ್ಣನ ಮೇಲೆವಾಯ್ವುದುಂ ಕೃಪನೆಡೆವೊಕ್ಕಿದಾಗದೆಂದು ಬಾರಿಸಿ-

ಕಂ॥ ಅಸದಳಮಾಗಿಯುಮೀ ನ
ಮ್ಮ ಸೈನ್ಯಮಿಂತೊರ್ವರೊರ್ವರೊಳ್ ಸೆಣಸಿ ಖಳ ।
ವ್ಯಸನದೊಳೆ ಕೆಟ್ಟುದಲ್ಲದೊ
ಡೆ ಸುಯೋಧನ ನಿನಗೆ ಮಲೆವ ಮಾರ್ವಲಮೊಳವೇ ॥ ೪೨

ವ॥ ಎಂಬುದುಮಶ್ವತ್ಥಾಮಂ ಕರ್ಣನೊಳಾದ ಮುಳಿಸನವಧಾರಿಸಲಾಱದೆ ಸುಯೋಧನನ ನಿಂತೆಂದಂ-

ಖಚರಪ್ಲುತಂ ॥ ಬೀರವಟ್ಟಮನಾನಿರೆ ನೀನೀ ಸೂತಸುತಂಗೆಡೆಗೊಂಡು ಕೈ
ವಾರದಿಂದೊಸೆದಿತ್ತೊಡಮೇನಾಯ್ತೀ ಖಳನಿಲ್ಲಿ ಧನಂಜಯ ।
ಕ್ರೂರಬಾಣಗಣಾವಳಿಯಿಂದೞ್ಕಾಡಿದೊಡಲ್ಲದೆ ವೈರಿ ಸಂ
ಹಾರ ಕಾರಣ ಚಾಪಮನಾನೀ ಸಂಗರದೊಳ್ ಪಿಡಿಯೆಂ ಗಡಾ ॥ ೪೩

ವ॥ ಎಂಬುದುಂ ಮುಳಿಸುವೆರಸಿದ ಮುಗುಳ್ನಗೆಯಿಂ ಕರ್ಣನಿಂತೆಂದಂ-

ಮ॥ ಭುವನಂಗಳ್ ಪದಿನಾಲ್ಕುಮಂ ನಡುಗಿಸಲ್ ಸಾಮರ್ಥ್ಯಮುಳ್ಳೆನ್ನ ಕೆ
ಯ್ದುವಿನೊಳ್ ತೀರದುದಾವ ಕೆಯ್ದುವಿನೊಳಂ ತೀರ್ದಪ್ಪುದೇ ನಿನ್ನ ಕೆ ।
ಯ್ದುವನೆಂತುಂ ಬಿಸುಟಿರ್ದ ಲೆಕ್ಕಮೆ ವಲಂ ನಿಷ್ಕಾರಣಂ ಕೆಯ್ದುವಿ
ಕ್ಕುವ ಕಣ್ಣೀರ್ಗಳನಿಕ್ಕುವೀಯೆರಡುಮಂ ನಿಮ್ಮಯ್ಯನೊಳ್ ಕಲ್ತಿರೇ ॥ ೪೪

ಸಾವಿನ ಪ್ರತಿಬಿಂಬ ಕಣ್ಣಮುಂದಿದ್ದರೂ ನಿಮಗೆ ಪೌರುಷದ ಮಾತುಗಳಲ್ಲಿ ಇನ್ನೂ ಪ್ರೀತಿಯಿದೆಯೇನು?' (ಎಷ್ಟು ಪ್ರೀತಿಯೋ) ವ॥ ಎನ್ನಲು 'ಮೂರುಲೋಕಗಳಲ್ಲಿಯೂ ಬಿಲ್ವಿದ್ಯೆಯಲ್ಲಿ ಪ್ರಸಿದ್ಧನಾದ ನನ್ನ ತಂದೆಯನ್ನು ಈ ಬೆಸ್ತರವನು (ಮೀನನ್ನು ಕೊಲ್ಲುವ ಸ್ವಭಾವವುಳ್ಳವನು) ಮೆಚ್ಚುವುದಿಲ್ಲ. ಇವನನ್ನು ಮೊದಲು ಕೊಂದು ಬಳಿಕ ಪಾಂಡವರನ್ನು ಕೊಲ್ಲುತ್ತೇನೆ' ಎಂದು ಕತ್ತಿಯನ್ನು ಒರೆಯಿಂದ ಹೊರಕ್ಕೆ ಸೆಳೆದು ಕರ್ಣನ ಮೇಲೆ ಹಾಯ್ದನು. ಕೃಪನು ಮಧ್ಯೆ ಪ್ರವೇಶಿಸಿ ಹೀಗೆ ಮಾಡಬಾರದು ಎಂದು ತಡೆದನು - ೪೨. 'ದುರ್ಯೋಧನಾ, ಈ ನಮ್ಮ ಸೈನ್ಯವು ಅಸದೃಶವಾಗಿದ್ದರೂ ಹೀಗೆ ಒಬ್ಬೊಬ್ಬರಲ್ಲಿಯೂ ಜಗಳವಾಡಿ (ಮತ್ಸರಿಸಿ) ಒಳಜಗಳದಿಂದಲೇ ಕೆಟ್ಟುಹೋಯಿತು. ಹಾಗಲ್ಲದಿದ್ದರೆ ನಿನಗೆ ಪ್ರತಿಭಟಿಸುವ ಪ್ರತಿಸೈನ್ಯವಿರುತ್ತಿದ್ದಿತೆ?' ವ॥ ಎನ್ನಲು ಅಶ್ವತ್ಥಾಮನು ಕರ್ಣನಲ್ಲುಂಟಾದ ಕೋಪವನ್ನು ತಡೆಯಲಾರದೆ ದುರ್ಯೋಧನನಿಗೆ ಹೀಗೆ ಹೇಳಿದನು - ೪೩. 'ನಾನಿರುವಾಗ ನೀನು ಸ್ನೇಹದಿಂದ ವೀರಪಟ್ಟವನ್ನು ಈ ಸೂತನ ಮಗನಿಗೆ ಮೋಸದಿಂದ ಕೊಟ್ಟರೆ ತಾನೇ ಏನಾಯ್ತು? ಈ ದುಷ್ಟನು ಅರ್ಜುನನ ಕ್ರೂರವಾದ ಬಾಣಗಳ ಸಮೂಹದಿಂದ ನಾಶವಾಗದ ಹೊರತು ನಾನು ಶತ್ರುನಾಶಕ್ಕೆ ಕಾರಣವಾದ ಈ ಬಿಲ್ಲನ್ನು ಯುದ್ಧರಂಗದಲ್ಲಿ ಹಿಡಿಯುವುದೇ ಇಲ್ಲ.' ವ॥ ಎನ್ನಲು ಕರ್ಣನು ಕೋಪಮಿಶ್ರಿತವಾದ ಹುಸಿನಗೆಯಿಂದ ಹೀಗೆ ಹೇಳಿದನು-೪೪. 'ಹದಿನಾಲ್ಕು ಲೋಕಗಳನ್ನೂ ನಡುಗಿಸುವ ಸಾಮರ್ಥ್ಯವುಳ್ಳ ನನ್ನ

ವ।। ಎಂಬುದುಮಶ್ವತ್ಥಾಮಂ ಕರ್ಣನ ನುಡಿಗೆ ಸಿಗ್ಗಾಗಿ-

ಮ।। ಸ್ರ।। ಮುನಿಸಂ ಮುಂದಿಟ್ಟು ಬಿಲ್ಲಂ ಬಿಸುಡದೆ ಬಗೆದೆಂ ಮುನ್ನಮಿನ್ನುರ್ಕಿನಿಂ ನಿ
ನ್ನನೆ ಪೀನಂ ನಚ್ಚಿ ನಿನ್ನಾಳ್ದನೆ ನುಡಿಯಿಸೆ ನೀನಾಡಿದೈ ಮಾತನಾಡ ।
ಲ್ಕೆನಗೀ ಸೂಟಲ್ತು ಸೇನಾಧಿಪ ಪದವಿಯೊಳಿಂ ನೀನೆ ನಿಲ್ ನಾಳೆ ದುರ್ಯೋ
ಧನನಂ ಸಕ್ಕಿಟ್ಟು ಮಾಱಾಂತದಟರೊಳಳವಂ ತೋಱುವಂ ನೀನುಮಾನುಂ ।। ೪೫

ಕಂ।। ಸಾರಂಗಳ್ ನಿನ್ನ ಶರಾ
ಸಾರಂಗಳಸಾರಮುೞಿದ ಕೆಯ್ದುಗಳೆಂತುಂ ।
ಸಾರಾಸಾರತೆಯಂ ನಾ
ಮಾರಯ್ವಮಿದಿರ್ಚಿದರಿನೃಪಧ್ವಜನಿಗಳೊಳ್ ।। ೪೬

ವ।। ಎಂಬುದುಂ ದುರ್ಯೋಧನ ಕರ್ಣನುಮನಶ್ವತ್ಥಾಮನುಮಂ ನಿಮ್ಮೊಳ್ಗೆ ನೀಂ ಮುಳಿಯಲ್ವೇಡ ನಿಮ್ಮ ಪುರುಷಕಾರಮನೆ ಬಗೆದು ನೆಗಲ್ವುದಾನುಮನ್ನೆತ್ತಿ ಕೊಂಡ ಕಜ್ಜಮಂ ನೆಗಲ್ಸಿಲ್ಲದಿರೆನೆಂದಾಯೆಡೆಯಿನೆಟ್ಟು ನಾಯಕರಂ ಬೀಡಿಂಗೆ ಪೋಗಲ್ವೇೞ್ದರಮನೆಯಂ ಪೊಕ್ಕು ಮಜ್ಜನ ಭೋಜನ ತಾಂಬೂಲಾನುಲೇಪನಂಗಳಿಂ ಸಂಗರ ಪರಿಶ್ರಮಮನಾಱಿಸಿ ಮಂತ್ರಶಾಲೆಗೆ ವಂದು ಶಲ್ಯ ಶಕುನಿ ಶಾರದ್ವತ ಕೃತವರ್ಮ ದುಶ್ಶಾಸನಾದಿಗಳಂ ಬರಿಸಿ ಯಥೋಚಿತ ಪ್ರತಿಪತ್ತಿಗಳಿಂದಿರಿಸಿ-

ಆಯುಧಗಳಿಂದ ಸಾಧ್ಯವಾಗದೇ ಇರುವುದು ಮತ್ತಾವ ಆಯುಧದಿಂದಾಗಲಿ ಸಾಧ್ಯವಾಗುತ್ತದೆಯೇ? ನಿನ್ನ ಆಯುಧಗಳು ಯಾವಾಗಲೂ ಬಿಸಾಡಿರುವ ಲೆಕ್ಕವೇ (ಅಪ್ರಯೋಜಕವೇ). ಕಾರಣವಿಲ್ಲದೇ ಬಿಲ್ಲನ್ನು ಬಿಸಾಡುವ ಮತ್ತು ಕಣ್ಣೀರನ್ನು ಸುರಿಸುವ ಈ ಎರಡನ್ನೂ ನಿಮ್ಮಯ್ಯನಿಂದ ಕಲಿತಿದ್ದೀರಾ?' ವ।। ಎನ್ನಲು ಅಶ್ವತ್ಥಾಮನು ಕರ್ಣನ ಮಾತಿಗೆ ಲಜ್ಜಿತನಾಗಿ ೪೫. ನಾನು ಮೊದಲು ಕೋಪವನ್ನು ಮುಂದಿಟ್ಟು ಬಿಲ್ಲನ್ನು ಬಿಸುಡಲು ನಿರ್ಧರಿಸಿದೆನು. ಇನ್ನು ನಿನ್ನನ್ನು ನಿನ್ನ ಯಜಮಾನನು ಪೂರ್ಣವಾಗಿ ನಂಬಿ ಮಾತನಾಡಿಸಲು ನೀನು ಗರ್ವದಿಂದ ಮಾತನಾಡಿದೆ. ನಾನು ಮಾತನಾಡುವುದಕ್ಕೆ ಇದು ನನಗೆ ಸಮಯವಲ್ಲ. ಸೇನಾಧಿಪತಿಯ ಸ್ಥಾನದಲ್ಲಿ ನೀನೇ ನಿಲ್ಲು; ನಾಳೆ ದುರ್ಯೋಧನನನ್ನೇ ಸಾಕ್ಷಿಯಾಗಿಟ್ಟುಕೊಂಡು ಪ್ರತಿಭಟಿಸಿದ ಶೂರರಲ್ಲಿ ನೀನೂ ನಾನೂ ನಮ್ಮ ಪರಾಕ್ರಮವನ್ನು ತೋರಿಸೋಣ. ೪೬. ನಿನ್ನ ಬಾಣದ ಮಳೆಯು ಶಕ್ತಿಯುಕ್ತವಾದುದು ಉಳಿದ ಆಯುಧಗಳು ಹೇಗೂ ಅಸಾರವಾದುವು. (ಶಕ್ತಿಯಿಲ್ಲದುವು) ಈ ಸಾರಾಸಾರತೆಯನ್ನು ನಮ್ಮನ್ನು ಎದುರಿಸಿದ ಶತ್ರುರಾಜರ ಸೈನ್ಯದಲ್ಲಿ ವಿಚಾರ ಮಾಡೋಣ'. ವ।। ಎನ್ನಲು ದುರ್ಯೋಧನನು ಕರ್ಣನನ್ನೂ ಅಶ್ವತ್ಥಾಮನನ್ನೂ ಕುರಿತು 'ನೀವು ನಿಮ್ಮನಿಮ್ಮಲ್ಲಿ ಕೋಪಿಸಬೇಡಿ; ನಿಮ್ಮ ಪೌರುಷವನ್ನು ಯೋಚಿಸಿ ಕೆಲಸಮಾಡುವುದು. ನಾನೂ ಅಂಗೀಕಾರಮಾಡಿದ ಕೆಲಸವನ್ನು ಮಾಡದೇ ಇರುವುದಿಲ್ಲ' ಎಂದು ಆ ಸ್ಥಳದಿಂದೆದ್ದು ನಾಯಕರನ್ನು ಬೀಡಿಗೆ ಹೋಗಲು ಹೇಳಿ ತಾನು ಅರಮನೆಯನ್ನು ಪ್ರವೇಶಿಸಿ ಸ್ನಾನ ಭೋಜನ ತಾಂಬೂಲ ಅನುಲೇಪನಗಳಿಂದ ಯುದ್ಧಾಯಾಸವನ್ನು ಹೋಗಲಾಡಿಸಿಕೊಂಡು ಮಂತ್ರಶಾಲೆಗೆ ಬಂದು ಶಲ್ಯ, ಶಕುನಿ,

ಶಾ॥ ಅಂತರ್ಭೇದದೊಳಂತು ಭಿದ್ರಿಸಿದರಾ ಗಾಂಗೇಯರಂ ಕೊಂದರಿಂ
ದಿಂತೀಗಳ್ ಪುಸಿದೀ ಘಟೋದ್ಭವನನಾ ಕೌಂತೇಯರಾಯಕ್ಕೆ ಗಂ ।
ಟೆಂತೆಂತಕ್ಕುಮದಂ ಮದುದ್ಯಮಮೆ ಪೇೞ್ವಾ ವೈರಿಗಳ್ಗೊಲ್ವೆನಾ
ನೆಂತೊಳ್ಪಂ ತಳೆವಂತು ತೇಜಮೆನಗಿನ್ನೆಂತಕ್ಕುಮಿಂ ಪೇೞಿರೇ ॥ ೪೭

ವ॥ ಎನೆ ಶಾರದ್ವತನಿಂತೆಂದಂ-

ಚಂ॥ ಚಲಮನೆ ಪೇೞ್ವೊಡಯ್ವರುಮನಯ್ದುಟಿಯೂರೊಳಿ ಬಾೞಿಸೆಂದು ಮುಂ
ಬಲಿಬಲಸೂದನಂ ನುಡಿಯೆಯುಂ ಕುಡದಿರ್ದುದೆ ಪೇೞ್ಗುಮೆಯ್ದೆ ಮೆ ।
ಯ್ಗಲಿತನಮಂ ಸರಿತ್ಸುತ ಘಟೋದ್ಭವರಂ ಪೊಣರ್ದಿಕ್ಕಿ ಗೆಲ್ದರೊಳ್
ಕಲಹಮೆ ಪೇೞ್ಗುಮಿಂ ಪೆಱತು ಪೇೞ್ವೆಡೆಯಾವುದೊ ಕೌರವೇಶ್ವರಾ ॥ ೪೮

ವ॥ ಅದಱಿಂದಮಿಂ ಪೆಱತು ಮಂತಣಕ್ಕೆಡೆಯಿಲ್ಲ ಮುನ್ನೆ ಚಕ್ಷುಷ್ಮನೆಂಬ ಮನುವಾದ ಕಾಲದೊಳ್ ಧರಾತಳಮನೊಲ್ಲಣಿಗೆಯಿಂ ಪಿಟಿವಂತೆ ತಳಮೆಯ್ದೆ ಸುರುಳ್ವಿನಂ ಮುಯ್ಯೇೞ್ ಸೂೞ್ ಪಿಟಿದ ಸಾಹಸಮುಮನಿಂದ್ರಂಗೆ ತನ್ನ ಸಹಜ ಕವಚಮಂ ತಿದಿಯುಗಿದು ಕೊಟ್ಟ ಚಾಗದ ಪೆಂಪುಮಂ ದಿಗ್ವಿಜಯಂಗೆಯ್ದು ಮಿಡಿದನಿತು ಬೇಗದಿಂ ಜರಾಸಂಧನಂ ನೆಲಕ್ಕಿಕ್ಕಿ ಪುಡಿಯೊಳ್ ಪೊರಳ್ಚಿ ಮಲ್ಲಯುದ್ಧದೊಳ್ ಪಿಡಿದಡಿಗೊತ್ತಿದ ಭುಜಬಲಭೀಮನಂ ಗೆಲ್ದ ಸಾಹಸಮುಮಂ ನಮ್ಮ ಪಡೆಯೆಲ್ಲಮಂ ತೊತ್ತೞದುೞಿದು ಕೊಲ್ವ ಘಟೋತ್ಕಚನೆಂಬ ರೂಕ್ಷ ರಾಕ್ಷಸನಂ ಕೊಂದ ಬೀರಮುಮನಾಲೋಕಾಂತರಂ ನೆಗೞ್-

ಶಾರದ್ವತ, ಕೃತವರ್ಮ, ದುಶ್ಶಾಸನನೇ ಮೊದಲಾದವರನ್ನು ಬರಮಾಡಿ ಯೋಗ್ಯವಾದ ಸತ್ಕಾರಗಳಿಂದ ಕುಳ್ಳಿರಿಸಿ ೪೭. ರಹಸ್ಯವಾದ ಭೇದೋಪಾಯದಿಂದ ಹಾಗೆ ಆ ಭೀಷ್ಮರನ್ನು ಒಡೆದು ಹಾಕಿದರು. ಈ ದಿನ ಹೀಗೆ ಸುಳ್ಳು ಹೇಳಿ ದ್ರೋಣಾಚಾರ್ಯರನ್ನು ಕೊಂದರು. ಈಗ ಆ ಪಾಂಡವರಿಗೆ ಜಯವಾಗದಿರುವ ರೀತಿ ಯಾವುದು ಎಂಬುದನ್ನು ತಿಳಿಸಿ. ಆ ಶತ್ರುಗಳಲ್ಲಿ ನನಗೆ ಹೇಗೆ ಸ್ನೇಹವುಂಟಾದೀತು. ಪಾಂಡವರ ವಿಷಯದಲ್ಲಿ ಒಳ್ಳೆಯ ಭಾವವು ಬರುವುದು ಹೇಗೆ ಸಾಧ್ಯ? ನೀವೇ ಹೇಳಿರಿ. ವ॥ ಎನ್ನಲು ಕೃಪನು ಹೀಗೆಂದನು- ೪೮. ನಿನ್ನ ಬಲವನ್ನು ಹೇಳುವುದಾದರೆ ಮೊದಲು ಕೃಷ್ಣನು ಬಂದು ಪಾಂಡವರೈವರನ್ನು ಅಯ್ದು ಕುಗ್ರಾಮಗಳಲ್ಲಿ ಬಾಳುವ ಹಾಗೆ ಮಾಡು ಎಂದು ಹೇಳಿದರೂ ಕೊಡದಿರುವುದೇ ಹೇಳುವುದು. ಭೀಷ್ಮ ದ್ರೋಣರನ್ನು ಪ್ರತಿಭಟಿಸಿ ಯುದ್ಧದಲ್ಲಿ ಸಂಹರಿಸಿ ಅವರನ್ನು ಗೆದ್ದ ಪಾಂಡವರಲ್ಲಿ ಯುದ್ಧಕ್ಕೆ ತೊಡಗಿರುವುದೇ ನಿನ್ನ ಪರಾಕ್ರಮವನ್ನು ಹೇಳುತ್ತದೆ. ದುರ್ಯೋಧನ! ಹೇಳುವುದು ಮತ್ತೇನಿದೆ? ವ॥ ಆದುದರಿಂದ ಬೇರೆ ಮಂತ್ರಾಲೋಚನೆಗೆ ಅವಕಾಶವೇ ಇಲ್ಲ. ಹಿಂದೆ ಚಕ್ಷುಷ್ಮನೆಂಬ ಮನುವಾದ ಕಾಲದಲ್ಲಿ ಭೂಮಂಡಲವನ್ನು ಒದ್ದೆ ಬಟ್ಟೆಯನ್ನು ಹಿಂಡುವಂತೆ ಅಂಗೈಯಲ್ಲಿ ಸುರುಟಿಕೊಂಡು ಇಪ್ಪತ್ತೊಂದು ಸಲ ಹಿಂಡಿದ ಸಾಹಸವೂ ಇಂದ್ರನಿಗೆ ತನ್ನ ಸಹಜಕವಚವನ್ನು ತಿದಿಯ ಚರ್ಮವನ್ನು ಸುಲಿಯುವ ಹಾಗೆ ಅನಾಯಾಸವಾಗಿ ಸುಲಿದುಕೊಟ್ಟ ತ್ಯಾಗದ ಆಧಿಕ್ಯವೂ ದಿಗ್ವಿಜಯವನ್ನು ಮಾಡಿ ಚಿಟಿಕೆ ಹಾಕುವಷ್ಟು ಅಲ್ಪ ಕಾಲದಲ್ಲಿ ಜರಾಸಂಧನನ್ನು ನೆಲಕ್ಕೆ ಅಪ್ಪಳಿಸಿ ಹುಡಿಯಲ್ಲಿ ಹೊರಳಿಸಿ

ಕಂ॥ ನೆಗಳ್ದ ಕಲಿತನದ ಚಾಗದ
ಬಗೆ ತನ್ನೊಳ್ ನೆಗಳ್ತೆವೆತ್ತು ನೆಗಳ್ದಿರೆ ಸಂದಂ ।
ಗಗಣಿತ ಗುಣಂಗೆ ಕರ್ಣಂ
ಗೊಗಸುಗುಮೇ ಕಟ್ಟು ಬೀರವಟ್ಟಮನರಸಾ ॥ ೪೯

ರಥ ಯಾನಪಾತ್ರದಿಂ ಪರ
ರಥಿನೀ ಜಳನಿಧಿಯ ಪಾರಮಂ ಸಲ್ವ ಜಗ ।
ತ್ಪ್ರಥಿತ ಭುಜದರ್ಪದಿಂದತಿ
ರಥಮಥನಂ ಕರ್ಣಧಾರನಲ್ಲನೆ ಕರ್ಣಂ ॥ ೫೦

ವ॥ ಎಂದು ನುಡಿದ ಕೃಪನ ಮಾತಂ ನೃಪಂ ಮನದೆಗೊಂಡು ಕರ್ಣನ ಮೊಗಮಂ ನೋಡಿ-

ಚಂ॥ ನಡುಗುವುದುಂತೆ ಪಾಂಡವ ಬಲಂ ನಿನಗರ್ಜುನನೆಂಬನೆಂದುಮು
ರ್ಕುಡುಗಿ ಪುರುಳ್ವನೀಯೆಡೆಗೆ ಪೇಟ್ ಪೆಜಿರಾರ್ ದೊರೆ ವೀರವಟ್ಟಮಂ ।
ತಡೆಯದೆ ಕಟ್ಟಿ ವೈರಿಗಳ ಪಟ್ಟನೆ ಪಾಜೆಸಿ ಕಾವುದೆನ್ನ ಬೆ
ಳ್ಗೊಡೆಯುಮನೆನ್ನ ಪಟ್ಟಮುಮನೆನ್ನುಮನಂಗಮಹೀತಳಾಧಿಪಾ ॥ ೫೧

ವ॥ ಎಂಬುದುಮಂಗಾಧಿರಾಜಂ ನಿನ್ನಾಳ್ಗಳೊಳಾನಾರ ದೊರೆಯೆನಗೆ ಕಾರುಣ್ಯಂಗೆಯ್ದೆಯಾಗಿ ಬೆಸಸಿದ ನಿನ್ನ ದಯೆಗೆಯ್ದ ವೀರವಟ್ಟಮೆಂಬುದೆನಗೆಣ್ಬೆರಲ ಪಟ್ಟಮೆಂಬುದುಂ ಬದ್ದವಣಂ ಬಾಜಿಸಿ ಕರ್ಣನಂ ಕನಕಪೀಠದೊಳ್ ಕುಳ್ಳಿರಿಸಿ-

ಮಲ್ಲಯುದ್ಧದಲ್ಲಿ ಹಿಡಿದು ಕಾಲಿನ ಕೆಳಕ್ಕೆ ಅಮುಕಿದ ಭುಜಬಲವನ್ನುಳ್ಳ ಭೀಮನನ್ನು ಗೆದ್ದ ಸಾಹಸವೂ ನಮ್ಮ ಸೈನ್ಯವನ್ನೆಲ್ಲ ತುಳಿದು ತುಳಿದು ಕೊಲ್ಲುತ್ತಿದ್ದ ಘಟೋತ್ಕಚನೆಂಬ ಕ್ರೂರರಾಕ್ಷಸನನ್ನು ಕೊಂದ ವೀರ್ಯವೂ ಲೋಕದ ಒಳಗೂ ಹೊರಗೂ ಪ್ರಸಿದ್ಧವಾಗಿವೆ. ೪೯. 'ಪ್ರಸಿದ್ಧವಾದ ಶೌರ್ಯದ ತ್ಯಾಗದ ರೀತಿಗಳೆರಡೂ ಅವನಲ್ಲಿ ಖ್ಯಾತಿಗೊಂಡಿವೆ. ಅಸಂಖ್ಯಾತಗುಣಗಳಿಂದ ಕೂಡಿದ ಕರ್ಣನಿಗೆ ಇದು ಅತಿಶಯವೇ? ರಾಜನೇ ಅವನಿಗೆ ವೀರಪಟ್ಟವನ್ನು ಕಟ್ಟು. ೫೦. ರಥವೆಂಬ ನಾವೆಯಿಂದ ಶತ್ರುಸೇನಾಸಮುದ್ರದ ಆಚೆಯ ದಡವನ್ನು ತನ್ನ ಭುಜಬಲದಿಂದ ದಾಟಿಸಬಲ್ಲ ಶೂರನಾದ ಕರ್ಣಧಾರನಲ್ಲವೇ ಕರ್ಣ! ವ॥ ಎಂದು ಹೇಳಿದ ಕೃಪನ ಮಾತನ್ನು ರಾಜನು ಒಪ್ಪಿ ಕರ್ಣನ ಮುಖವನ್ನು ನೋಡಿ-೫೧ 'ಕರ್ಣಾ! ಪಾಂಡವಸೈನ್ಯವು ಸುಮ್ಮನೆ ನಿನಗೆ ನಡುಗುತ್ತದೆ. ಅರ್ಜುನನೆಂಬುವನು ಯಾವಾಗಲೂ ಉತ್ಸಾಹಶೂನ್ಯನಾಗಿ ಮುದುರಿಕೊಳ್ಳುತ್ತಾನೆ. ಈ ಸ್ಥಾನಕ್ಕೆ ಮತ್ತಾರು ಅರ್ಹರು? ಹೇಳು. ವೀರಪಟ್ಟವನ್ನು ತಡಮಾಡದೆ ಕಟ್ಟಿಕೊಂಡು ವೈರಿಗಳನ್ನು ಪಟ್ಟನೆ ಹಾರಿಹೋಗುವಂತೆ ಮಾಡಿ ನನ್ನ ಶ್ವೇತಛತ್ರವನ್ನೂ ನನ್ನ ರಾಜಪಟ್ಟವನ್ನೂ ನನ್ನನ್ನೂ ಕಾಪಾಡಬೇಕು.' ವ॥ ಎನ್ನಲು ಕರ್ಣನು ದುರ್ಯೋಧನಾ! ನಿನ್ನ ಸೇವಕರಲ್ಲಿ ನಾನು ಯಾರಿಗೆ ಸಮಾನ? ನೀನು ಕರುಣೆಯಿಂದ ದಯಮಾಡಿ ಆಜ್ಞೆಮಾಡಿಕೊಟ್ಟ ಈ ವೀರಪಟ್ಟವೆಂಬುದು ನನ್ನ ಎಂಟುಬೆರಳಿನಗಲವಿರುವ ನನ್ನ ಹಣೆಗೆ ಕಟ್ಟುವ ಪಟ್ಟ ಎಂದನು. ಮಂಗಳವಾದ್ಯವನ್ನು ಬಾಜಿಸಿ ಕರ್ಣನನ್ನು ಚಿನ್ನದ

ಹರಿಣಿ ॥ ಮೊರೆಯೆ ಪಱೆಗಳ್ ಭೋರೆಂದೋರಂತೆ ಮಂಗಳಗೀತಿಗಳ್
ನೆರೆಯೆ ಗಣಿಕಾನೀಕಂ ಬಂದಾಡೆ ಪುಣ್ಯಜಲಂಗಳಿಂ ।
ತರಿಸಿ ಮಿಸಿಸುತ್ತಾಗಳ್ ತಾಂ ತನ್ನ ಕೆಯ್ಯೊಳೆ ಕಟ್ಟಿದಂ
ಕುರುಪರಿವೃಢಂ ಕರ್ಣಂಗಾ ವೀರವಟ್ಟದ ಪಟ್ಟಮಂ ॥ ೫೨

ವ॥ ಅಂತು ವೀರವಟ್ಟಮಾ ವೀರನ ನೊಸಲೊಳಸದಳಮೆಸೆದುಪಾಶ್ರಯಂಬಡೆಯೆ ಕಟ್ಟಿ ನಿಜಾಂತಃಪುರ ಪರಿವಾರಂಬೆರಸು ಸೇಸೆಯಿಕ್ಕಿ ತನ್ನ ತುಡುವ ತುಡಿಗೆಗಳೆಲ್ಲಮಂ ನೆಱೆಯೆ ತುಡಿಸಿ ದೇವಸಬಳದ ಪದಿನೆಂಟು ಕೋಟಿ ಪೊನ್ನುಮಂ ತರಿಸಿಕೊಟ್ಟು ಮಣಿಮಯ ಮಂಡನಾಯೋಗದೊಳ್ ನೆಱೆಯೆ ಪಣ್ಣಿದ ಮದಾಂಧಸಿಂಧುರಮನೇಱಲ್ ತರಿಸಿಕೊಟ್ಟು ಬೀಡಿಂಗೆ ಪೋಗೆನೆ ಪೋಗೆ ಹಸ್ತಿಯ ಬೆಂಗೆವಂದು ಸುತ್ತಿಱಿದು ಪಗಲಂ ತಡವಿಕ್ಕಿದಂತೆ ಬೆಳಗುವ ಕೆಯ್ದೀವಿಗೆಗಳ ಬೆಳಗೆ ಬೆಳಗಾಗೆ ತಲೆಯೊಳ್ ನಾಲಗೆಯುಳ್ಳ ಬೂತುಗಳ್ಗಿಲ್ಲ ಮಿಲ್ಲೆನ್ನದೀಯುತ್ತುಂ ನಿಜನಿವಾಸಕ್ಕೆ ವಂದು ನಿತ್ಯದಾನಕ್ಕೆಂದು ನಿಯೋಗಿಗಳ್ ತಂದು ಪುಂಜಿಸಿದ ಪಂಚರತ್ನದ ಪೊನ್ನರಾಶಿಗಳನರ್ಥಿ ಜನಕ್ಕೆ ಗೋಸನೆಯಿಟ್ಟು ಕುಡುವೇೞ್ದು ನಾಯಕರ್ಗೆಲ್ಲಮುಡಲುಂ ತುಡಲುಂ ಕೊಟ್ಟು ನೇಸಱ್ ಮೂಡುವಾಗಳ್ ತಮ್ಮ ಪಡೆಯನೀ ಮಾೞ್ಕೆಯೊಳೊಡ್ಡಿಮೆಂದು ಪಡೆವಳರ್ಗೆ ಬೆಸಸಿ ನಿಜವಿಜಯತುರಗರಥಂಗಳನರ್ಚಿಸಿ ಪೊಡೆವಟ್ಟು ದರ್ಭಾಸ್ತರಣ ದೊಳಾಯಿರುಳಂ ಕಳೆದಾಗಳ್-

ಪೀಠದಲ್ಲಿ ಕುಳ್ಳಿರಿಸಿ ೫೨. ತಮಟೆಗಳು ಭೋರೆಂದು ಒಂದೇ ಸಮನಾಗಿ ಶಬ್ದಮಾಡುತ್ತಿರಲು ಮಂಗಳಗೀತೆಗಳು ಕೂಡಿರಲು ವೇಶ್ಯೆಯರ ಸಮೂಹವು ಬಂದು ನೃತ್ಯಮಾಡುತ್ತಿರಲು ಕೌರವಶ್ರೇಷ್ಠನಾದ ದುರ್ಯೋಧನನು ಪುಣ್ಯತೀರ್ಥಗಳನ್ನು ತರಿಸಿ ಕರ್ಣನಿಗೆ ಸ್ನಾನಮಾಡಿಸಿ ಆಗ ತಾನೆ ತನ್ನ ಕಯ್ಯಿಂದಲೆ ವೀರಪಟ್ಟವನ್ನು ಹಣೆಗೆ ಕಟ್ಟಿದನು. ವ॥ ಹಾಗೆ ಆ ವೀರಪಟ್ಟವು ಆ ವೀರನ ಹಣೆಯಲ್ಲಿ ಅತಿಶಯವಾಗಿ ಪ್ರಕಾಶಿಸಿ ವಿಶೇಷಾಶ್ರಯವನ್ನು ಪಡೆಯುವಂತೆ ಕಟ್ಟಿ ತನ್ನ ಅಂತಃಪುರ ಪರಿವಾರದೊಡನೆ ಕೂಡಿ ಅಕ್ಷತೆಯಿಂದ ಹರಸಿ ತಾನು ತೊಡುವ ಆಭರಣಗಳನ್ನೆಲ್ಲವನ್ನೂ ಅವನಿಗೆ ತುಂಬ ತೊಡಿಸಿದನು. ದೇವತೆಗಳ ಅಳತೆಯಲ್ಲಿ ಹದಿನೆಂಟುಕೋಟಿ ಸುವರ್ಣವನ್ನು ತರಿಸಿಕೊಟ್ಟನು. ರತ್ನಖಚಿತವಾದ ಅಲಂಕಾರಗಳಿಂದ ಪೂರ್ಣವಾಗಿ ಸಿದ್ಧಪಡಿಸಿದ ಮದ್ದಾನೆಯನ್ನು ಏರುವುದಕ್ಕೆ ತರಿಸಿಕೊಟ್ಟು ಬೀಡಿಗೆ ಹೋಗು ಎಂದು ಕಳುಹಿಸಿ ಕೊಟ್ಟನು. ಕರ್ಣನು ಆನೆಯ ಬೆನ್ನಿಗೆ ಸುತ್ತಲೂ ವ್ಯಾಪಿಸಿ ಹಗಲನ್ನು ದೊಡ್ಡದು ಮಾಡಿದ ಹಾಗೆ ಬೆಳಗುತ್ತಿರುವ ಕೈದೀವಟಿಗೆಗಳ ಬೆಳಕೇ ಬೆಳಕಾಗಿರಲು ತಲೆಯಲ್ಲಿ ನಾಲಗೆಯಿರುವ ಎಲ್ಲ ಪ್ರಾಣಿಗಳಿಗೂ ಇಲ್ಲ ಎನ್ನದೆ ದಾನಮಾಡುತ್ತ ತನ್ನ ಮನೆಗೆ ಬಂದನು. ನಿಯೋಗಿಗಳು ತಂದು ರಾಸಿ ಹಾಕಿಸಿದ ಪಂಚರತ್ನದ ಮತ್ತು ಚಿನ್ನದ ರಾಶಿಗಳನ್ನು ಬೇಡುವವರಿಗೆ ಕೂಗಿ ಕರೆದು ದಾನಮಾಡಹೇಳಿ ನಾಯಕರುಗಳಿಗೆಲ್ಲ ಉಡುವುದಕ್ಕೂ ತೊಡುವುದಕ್ಕೂ ಕೊಟ್ಟು ಸೂರ್ಯೋದಯವಾದಾಗ ನಮ್ಮ ಸೈನ್ಯವನ್ನು ಈ ರೀತಿಯಲ್ಲಿ ರಚಿಸಿ ಎಂದು ನಾಯಕರಿಗೆ ಆಜ್ಞೆಮಾಡಿ ತನ್ನ ವಿಜಯಶಾಲಿಯಾದ ಕುದುರೆ ಮತ್ತು ತೇರುಗಳನ್ನು ಪೂಜೆ ಮಾಡಿ ನಮಸ್ಕರಿಸಿ ದರ್ಭಾಸನದಲ್ಲಿ ಆ

ಕಂ॥ ಉದಯಗಿರಿ ತಟದೊಳುದಯಿಸು
ವದಿತಿಪ್ರಿಯಪುತ್ರನಲ್ಲದಿತ್ತೊರ್ವಂ ಭಾ ।
ನು ದಲೊಗೆದನೆನಿಪ ತೇಜದ
ಪೊದಟ್ಕೆಯಿಂ ಜನದ ಮನಮನಲೆದಂ ಕರ್ಣಂ ॥ ೫೩

ವ॥ ಆಗಳಾ ಚತುರ್ವೇದ ಪಾರಗರಪ್ಪ ಧರಾಮರರ್ಗೆ ನಿತ್ಯದಾನಮಂ ಕೊಟ್ಟು ಸಿಡಿಲ ಬಳಗಮನೊಳಕೊಂಡಂತೆ ತಟತಟಿಸಿ ಪೊಳೆವ ಕೆಯ್ದುಗಳ್ ತೀವಿದ ವಾರುವದ ಚೋರಗುದುರೆಗಳೊಳ್ ಪೂಡಿದ ಪಸುರ್ಪೊನ್ನ ರಥಮನೇಱಿ ಮುನ್ನೊರ್ವನೆ ಶರಶಯನದೊಳಿರ್ದ ಗಾಂಗೇಯನಲ್ಲಿಗೆ ಬಂದು ರಥದಿಂದಮಿೞಿದು ಮೂಱು ಬಲವಂದು ತದೀಯ ಪಾದಪದ್ಮಂಗಳಂ ತಲೆಯೊಳಿಟ್ಟುಕೊಂಡು–

ಕಂ॥ ಆಮ್ನಾತಱಿಯದೆ ಮುಳಿದುಂ
ನಿಮ್ಮಣ್ಣಿಯಂ ನೋಯೆ ನುಡಿದೆನುಱಿದೇಳಿಸಲೇ ।
ನೆಮ್ಮಳವೆ ಮಱೆವುದಾ ಮನ
ದುಮ್ಮಚ್ಚರಮಜ್ಜ ನಿಮ್ಮನೆರೆಯಲೆ ಬಂದೆಂ ॥ ೫೪

ಧುರದೊಳ್ ನಿಮ್ಮಣ್ಣಿಯುಂ ಗೆಲ
ಲರಿಯವುಮಾಪಾಂಡುಸುತರನೆಮ್ಮಂದಿಗರ ।
ಚ್ಚರಿಯಲ್ತೆ ಗೆಲ್ವರೆಂಬುದು
ಹರಿಗನೊಳಿಱಿದೆಂತುಮೆನ್ನ ಚಲಮನೆ ಮೆಱೆವೆಂ ॥ ೫೫

ರಾತ್ರಿಯನ್ನು ಕಳೆದನು. ೫೩. ಉದಯಪರ್ವತದ ದಡದಲ್ಲಿ ಹುಟ್ಟುವ ಅದಿತಿದೇವಿಯ ಪ್ರಿಯಪುತ್ರನಾದವನೇ ಅಲ್ಲದೆ ಈ ಕಡೆ ಬೇರೊಬ್ಬ ಸೂರ್ಯನು ಹುಟ್ಟಿದ್ದಾನಲ್ಲವೇ ಎನ್ನುವಂತಿರುವ ತೇಜಸ್ಸಿನ ವ್ಯಾಪ್ತಿಯಿಂದ ಜನರ ಮನಸ್ಸನ್ನು ಕರ್ಣನು ಆಕರ್ಷಿಸಿದನು. ವ॥ ಆಗ ನಾಲ್ಕು ವೇದಗಳಲ್ಲಿ ಪಂಡಿತರಾಗಿರುವ ಬ್ರಾಹ್ಮಣರಿಗೆ ನಿತ್ಯದಾನವನ್ನು ಕೊಟ್ಟು ಸಿಡಿಲರಾಶಿಯನ್ನು ಒಳಗೊಂಡಿರುವ ಹಾಗೆ ಥಳಥಳಿಸಿ ಹೊಳೆಯುವ ಆಯುಧಗಳು ತುಂಬಿರುವ, ವಿವಿಧಜಾತಿಯ ಕುದುರೆಗಳನ್ನು ಹೂಡಿರುವ ಹಸುರು ಚಿನ್ನದ ರಥವನ್ನು ಏರಿ ಮೊದಲು ಒಬ್ಬನೇ (ಏಕಾಕಿಯಾಗಿ) ಬಾಣದ ಹಾಸಿಗೆಯಲ್ಲಿ ಮಲಗಿದ್ದ ಭೀಷ್ಮನ ಹತ್ತಿರಕ್ಕೆ ಬಂದು ತೇರಿನಿಂದಿಳಿದು ಮೂರುಸಲ ಪ್ರದಕ್ಷಿಣೆ ಮಾಡಿ ಅವನ ಪಾದಕಮಲಗಳನ್ನು ತನ್ನ ತಲೆಯಲ್ಲಿಟ್ಟು ಹೇಳಿದನು. ೫೪. 'ನಾನು ಮಾತನಾಡುವ ರೀತಿಯನ್ನು ತಿಳಿಯದೆ ಕೋಪಿಸಿಕೊಂಡು ನಿಮ್ಮ ಮನಸ್ಸು ನೋಯುವ ಹಾಗೆ ಮಾತನಾಡಿದೆ. ಸುಮ್ಮನೆ ನಿಮ್ಮನ್ನು ತಿರಸ್ಕಾರಮಾಡಲು ಸಾಧ್ಯವೇನು? ಅಜ್ಜ, ಮನಸ್ಸಿನ ಆ ಹೆಚ್ಚಾದ ಕೋಪವನ್ನು ಮರೆತುಬಿಡುವುದು. ನಿಮ್ಮನ್ನು ಪ್ರಾರ್ಥಿಸುವುದಕ್ಕಾಗಿಯೇ ಬಂದಿದ್ದೇನೆ' ೫೫. ಯುದ್ಧದಲ್ಲಿ (ನಿಮ್ಮ ಪಾದಗಳೂ) ನೀವೂ ಗೆಲ್ಲುವುದಕ್ಕೆ ಅಸಾಧ್ಯರಾದ ಆ ಪಾಂಡವರನ್ನು ನಮ್ಮಂತಹವರು ಗೆಲ್ಲುವರೆಂಬುದು ಆಶ್ಚರ್ಯವಲ್ಲವೇ? ಆದರೂ ಅರ್ಜುನನೊಡನೆ ಯುದ್ಧ ಮಾಡಿ

ವ॥ ಎಂಬುದುಂ ಕುರುಪಿತಾಮಹನಹರ್ಪತಿಸುತನನಿಂತೆಂದಂ-

ಅನವದ್ಯಂ ॥ ನುಡಿವುದಂ ಪತಿಭಕ್ತಿಯ ಪೆಂಪಿಂ ನೀಂ ನುಡಿದೈ ಪೆಱತಂದದಿಂ
ನುಡಿದೆಯಲ್ಲೆ ಮದಾಯುಮಮೋಘಂ ಸೂಟ್ಟಡೆಯಲ್ಲೆನಗಕ್ಕುಮಿ ।
ನ್ನೆಡೆಯೊಳೆಂದೆಮದೆಂದುದದೇಂ ತಪ್ಪಾದುದೆ ನಮ್ಮೊವಜರ್ ಜಸಂ
ಬಡೆದ ಭಾರ್ಗವರಪ್ಪುದಱಿಂದಂ ನಂಟರುಮಂಗಮಹೀಪತೀ ॥ ೫೬

ವ॥ ಅದಲ್ಲದೆಯುಂ ನೀನೆಮಗೆ ಕುಂತಿಯ ಗಾಂಧಾರಿಯ ಮಕ್ಕಳ ಲೆಕ್ಕದ ಮೊಮ್ಮನೈ-

ಉ॥ ನಿನ್ನನೆ ನಚ್ಚಿದಂ ಕುರುಮಹೀಪತಿ ನಿನ್ನ ಶರಾವಳಿಗಳ್ಗೆ ಮು
ನ್ನನ್ನಡುಗುತ್ತುಮಿರ್ಪುದರಿಸಾಧನಸಂಪದಮಂತೆ ಶಸ್ತ್ರ ಸಂ ।
ಪನ್ನನೆ ಆಗಿ ಶಲ್ಯನನೆ ಸಾರಥಿಯಾಗಿರೆ ಮಾಡಿ ಕಾದು ನೀಂ
ನಿನ್ನಯ ಬಲ್ಲ ಮಾೞ್ಕೆಯೊಳಿದಂ ನುಡಿದೆಂ ನಿನಗಂಗವಲ್ಲಭಾ ॥ ೫೭

ಕಂ॥ ಎನೆ ನೆಗಟ್ದ ಕುಲದ ಚಲದೊ
ಳ್ವಿನ ಭೂಪನನೆನಗೆ ತೇರನೆಸಗೆಂದೊಡೆ ಸ ।
ದ್ವಿನಯಮುಱಿದುರ್ಕಿ ಕುಲಹೀ
ನನೆಂಬ ಪರಿವಾದಮೀಗಳೆನಗಾಗಿರದೇ ॥ ೫೮

ಆಯದ ಕಟ್ಬಾಳ್ ನೀಂ ಮೊದ
ಲೀ ಯುಗದೊಳ್ ಪೆಱರುಮೊಳರೆ ಸಾವಕ್ಕೆ ಜಯ ।
ಶ್ರೀಯಕ್ಕೆ ಧಾತ್ರನಿಂ ಕ
ಟ್ಟಾಯದ ಬಟೆಸಂದು ನಿಮ್ಮನಾಂ ಮೆಚ್ಚಿಸುವೆಂ ॥ ೫೯

ನನ್ನ ಛಲವನ್ನೇ ಪ್ರಕಾಶಪಡಿಸುತ್ತೇನೆ. ವ॥ ಎನ್ನಲು ಕುರುಪಿತಾಮಹನಾದ ಭೀಷ್ಮನು ಸೂರ್ಯಪುತ್ರನಾದ ಕರ್ಣನಿಗೆ ಹೀಗೆಂದನು. ೫೬. ಹೇಳುವುದನ್ನು ನೀನು ಸ್ವಾಮಿ ಭಕ್ತಿಯ ಆಧಿಕ್ಯದಿಂದ ಹೇಳಿದ್ದೀಯೆ. ಬೇರೆ ರೀತಿಯಿಂದ ನುಡಿಯಲಿಲ್ಲ; 'ನನ್ನ ಶಕ್ತಿಯು ಬೆಲೆಯಿಲ್ಲದ್ದು, ಸರದಿಯನ್ನು ಪಡೆಯುವುದಕ್ಕೆ ಈ ಸನ್ನಿವೇಶದಲ್ಲಿ ನನಗೂ ಅವಕಾಶವುಂಟು' ಎಂದು ಹೇಳುವುದು ತಪ್ಪಾದುದೇನು? ನಮ್ಮಿಬ್ಬರ ಉಪಾಧ್ಯಾಯರಾಗಿದ್ದವರು ಯಶಶ್ಶಾಲಿಗಳಾದ ಪರಶುರಾಮರಾದುದರಿಂದ ಕರ್ಣ, ನಾವು ನಂಟರೂ ಆಗಿದ್ದೇವೆ. ವ॥ ಅಷ್ಟೇ ಅಲ್ಲದೆ ನೀನು ನಮಗೆ ಕುಂತಿ ಮತ್ತು ಗಾಂಧಾರಿಯರ ಮಕ್ಕಳಾದ ಪಾಂಡವ ಕೌರವರ ಹಾಗೆಯೇ ಮೊಮ್ಮಗನಪ್ಪ. ೫೭. ಕೌರವ ಮಹಾರಾಜನು ನಿನ್ನನ್ನೇ ನಂಬಿದ್ದಾನೆ. ನಿನ್ನ ಈ ಬಾಣಗಳ ಸಮೂಹಕ್ಕೆ ಶತ್ರುಸಾಧನಸಂಪತ್ತೆಲ್ಲ ಮೊದಲೇ ನಡುಗುತ್ತಿದೆ. ಹಾಗೆಯೇ ಆಯುಧಸಂಪತ್ತುಳ್ಳವನಾಗಿ ಶಲ್ಯನನ್ನೇ ಸಾರಥಿಯನ್ನಾಗಿರುವಂತೆ ಮಾಡಿಕೊಂಡು ನಿನಗೆ ತಿಳಿದ ರೀತಿಯಲ್ಲಿ ಯುದ್ಧಮಾಡು ಕರ್ಣ, ಇದು ನನ್ನ ಸೂಚನೆ, ಅಷ್ಟೆ, ೫೮. ಎನ್ನಲು ಒಳ್ಳೆಯ ಕುಲವನ್ನೂ ಚಲವನ್ನೂ ಉಳ್ಳ ರಾಜನಾದ ಶಲ್ಯನನ್ನು ನನಗೆ ಸಾರಥಿಯಾಗಿರು ಎಂದು ಹೇಳಿದರೆ ಉಚಿತವಾದ ವಿನಯವನ್ನು ಬಿಟ್ಟು ಗರ್ವಿಸಿ ನುಡಿದ ಹೀನಕುಲದವನೆಂಬ ಅಪವಾದವು ಈಗ ನನಗೆ ತಟ್ಟುವುದಿಲ್ಲವೆ? ೫೯. ಈ ಯುಗದ ಶಕ್ತಿಯುತರಾದವರಲ್ಲಿ ನೀವು ಮೊದಲಿಗರು. ಬೇರೆಯವರಿದ್ದಾರೆಯೇ? ಸಾವಾಗಲಿ

ವ॥ ಎಂಬುದು ಸಿಂಧುತನೂಜನಂಗಾಧಿರಾಜನ ನಯದ ವಿನಯದ ಪಾಟಿಯ ಪಸುಗೆಯ ನುಡಿಗಳ್ಗೆ ಮನದೇಗೊಂಡೀತಂ ಕುಲಹೀನನಲ್ಲನುಭಯಕುಲ ಶುದ್ಧನಾಗಲೆ ವೇಟ್ಕುಮೆಂದು ನಿಶ್ಚೈಸಿ ನೀನೆಮಗಿಂಬು ಕೆಯ್ವೊಡಂ ಸುಯೋಧನನ ರಾಜ್ಯಮನೊಲ್ವೊಡಂ ಶಲ್ಯನನೆ ಸಾರಥಿ ಮಾಡಿ ಕಾದುವುದೆಂದು ಪರಸಿ ಪೋಗೆಂಬುದುಂ ಮಹಾ ಪ್ರಸಾದಮೆಂದು ಪೊಡೆವಟ್ಟು ಸಂಗ್ರಾಮಭೂಮಿಗೆ ವಂದು ಹಸ್ತ್ಯಶ್ವರಥ ಪದಾತಿಬಲಂಗಳನೊಂದುಮಾಡಿ ಮಕರವ್ಯೂಹಮನೊಡ್ಡಿದಂ ಪಾಂಡವ ಪತಾಕಿನಿಯುಮರ್ಧಚಂದ್ರವ್ಯೂಹಮನೊಡ್ಡಿ ನಿಂದುದಿತ್ತ ಪರಸೈನ್ಯಭೈರವಂ ಪುರುಷೋತ್ತಮನನಿಂತೆಂದಂ-

ಮ॥ ಸ್ರ॥ ಪಿರಿದುಂ ಕಾಯ್ಪಿಂದಮೆನ್ನೊಳ್ ನೆರೆದಿಜೆಯಲೆ ಪೂಣ್ದತ್ತ ಸಂಸಪ್ತಕರ್ಕಳ್
ಕರೆವರ್ ಮತ್ತಿತ್ತ ಕರ್ಣಂ ಚಲ ಚಲದಿಜೆಯಲ್ ನಿಂದನೇಗೆಯ್ವುದೆಂದಾಂ ।
ನರನಂ ಮುನ್ನಂ ತ್ರಿಗರ್ತಾಧಿಪ ಬಲಮನದಂ ನುರ್ಗು ನೀನೆಂದು ತೇರಂ
ಹರಿ ಕೊಂಡತ್ತುಯ್ದನಿತ್ತೊರ್ಮೊದಲುಭಯಬಲಂ ತಾಗಿ ಕಾದಿತ್ತು ಬೇಗಂ ॥ ೬೦

ವ॥ ಅಂತು ಚತುರ್ವಲಂಗಳೊಂದೊಂದಜಿೊಳ್ ಕಾದೆ ನಟ್ಟ ಸರಲ್ವಿಡಿದು ಕರಗದ ಧಾರೆಯಂತೆ ಸುರಿವ ನೆತ್ತರ ಧಾರೆಗಳಂಬರಿವಿಡುವಿನಮತ್ತಮಿತ್ತಮುರ್ಚವೋಪ ಕಿತ್ತಂಬುಗಳಿಂ

ಜಯಸಂಪದವಾಗಲಿ ವಿಧಾತ್ರನಿಂದ (ವಿಧಿವಶದಿಂದ) ಹೆಚ್ಚಿನ ಶೌರ್ಯದ ದಾರಿಯನ್ನೇ ಹಿಡಿದು ನಿಮ್ಮನ್ನು ಮೆಚ್ಚಿಸುತ್ತೇನೆ. ವ॥ ಎನ್ನಲು ಭೀಷ್ಮನು ಕರ್ಣನ ನೀತಿಯಿಂದಲೂ ನಮ್ರತೆಯಿಂದಲೂ ಧರ್ಮದಿಂದಲೂ (ಸಂಪ್ರದಾಯಬದ್ಧವಾದ) ಕೂಡಿದ ವಿವೇಕದ ಮಾತುಗಳಿಗೆ ಮನಸ್ಸಿನಲ್ಲಿ ಸಂತೋಷಸಿ (ಒಪ್ಪಿ) ಇವನು ಹೀನಕುಲದವನಲ್ಲ; (ತಾಯಿ ತಂದೆಗಳ) ಎರಡು ವಂಶಗಳ ಕಡೆಯಿಂದಲೂ ಶುದ್ಧನೇ ಆಗಿರಬೇಕು ಎಂದು ನಿಶ್ಚೈಸಿ ನೀನು ನನಗೆ ಹಿತವಾದುದನ್ನು ಮಾಡುವುದಾದರೆ ದುರ್ಯೋಧನನ ರಾಜ್ಯವನ್ನು ಪ್ರೀತಿಸುವುದಾದರೆ ಶಲ್ಯನನ್ನೇ ಸಾರಥಿಯನ್ನಾಗಿ ಮಾಡಿ ಕಾದುವುದು ಎಂದು ಹರಸಿ ಬೀಳ್ಕೊಟ್ಟನು. ಕರ್ಣನು 'ಇದು ಪರಮಾನುಗ್ರಹ' ಎಂದು ನಮಸ್ಕಾರ ಮಾಡಿ ಯುದ್ಧರಂಗಕ್ಕೆ ಬಂದು ಆನೆ, ಕುದುರೆ, ತೇರು ಮತ್ತು ಕಾಲಾಳು ಸೈನ್ಯವನ್ನು ಒಟ್ಟಿಗೆ ಸೇರಿಸಿ ಮೊಸಳೆಯ ಆಕಾರದ ಸೇನಾರಚನೆಯನ್ನು ಮಾಡಿ ಚಾಚಿದನು. ಪಾಂಡವಸೈನ್ಯವೂ ಅರ್ಧಚಂದ್ರಾಕಾರದ ರಚನೆಯನ್ನು ರಚಿಸಿ ಚಾಚಿ ನಿಂತಿತು. ಈ ಕಡೆ ಪರಸೈನ್ಯಭೈರವನಾದ ಅರ್ಜುನನು ಪುರುಷೋತ್ತಮನಾದ ಕೃಷ್ಣನನ್ನು ಕುರಿತು ಹೀಗೆಂದನು. ೬೦. ಸಂಸಪ್ತಕರುಗಳು ವಿಶೇಷಕೋಪದಿಂದ ಕೂಡಿ ನನ್ನಲ್ಲಿ ಯುದ್ಧಮಾಡಲು ಪ್ರತಿಜ್ಞೆ ಮಾಡಿ ಆ ಕಡೆಗೆ ಕರೆಯುತ್ತಿದ್ದಾರೆ. ಮತ್ತು ಈ ಕಡೆ ಕರ್ಣನು ವಿಶೇಷಛಲದಿಂದ ಯುದ್ಧಮಾಡಲು ನಿಂತಿದ್ದಾನೆ. ಏನು ಮಾಡುವುದು ಎಂದು ಕೇಳಿದನು. 'ಮೊದಲು ತ್ರಿಗರ್ತದೇಶದ ರಾಜನ ಸೈನ್ಯವನ್ನು ಪುಡಿಮಾಡು' ಎಂದು ಹೇಳಿ ತೇರನ್ನು ಕೃಷ್ಣನು ಆ ಕಡೆಗೆ ನಡೆಸಿಕೊಂಡು ಹೋದನು. ಈ ಕಡೆ ತಕ್ಷಣವೇ ಎರಡು ಸೈನ್ಯಗಳೂ ಸಂಘಟ್ಟಿಸಿ ವೇಗವಾಗಿ ಯುದ್ಧಮಾಡಿದವು. ವ॥ ಹಾಗೆ ನಾಲ್ಕು ಸೈನ್ಯಗಳೂ ಒಂದರೊಡನೊಂದು ಸೇರಿ ಯುದ್ಧಮಾಡಲು ನಾಟಿದ ಬಾಣವನ್ನೇ ಅನುಸರಿಸಿ ಗಿಂಡಿ(ಕರಗ)ಯಿಂದ ಸುರಿಯುವ ಧಾರೆಯಂತೆ

ಸುರುಳ್ದುರುಳ್ದ ಧನುರ್ಧರರುಮಂ ಧನುರ್ಧರರೆಚ್ಚ ಶರನಿಕರಂಗಳಿಂ ನೆಯ್ ಪೇಱುವಂತಂಬನೆ ಪೇಱಿ ಪೆಱಗೆಡೆದ ತುರುಷ್ಕ ತುರಂಗಂಗಳುಮಂ ಕೆದಱಿ ಬೆದಱಿ ಬೆಂಕೊಂಡು ತೊತ್ತಳಿದುೞಿವ ಮದೇಭಂಗಳುಮಂ ಮದೇಭಂಗಳನಾರ್ದು ಬಟ್ಟಕ್ಕುವ ನಿಷಾದಿಗಳೞಿಯೆ ಪೊರಜೆವಿಡಿದು ಕೊರಲ ಬಳಿಗಳೊಳೆ ಕಾಲ್ಗೋದು ಪರಿಯಿಸುವ ರಸತ್ತಾರುಗರುಮಂ ಆ ರಸತ್ತಾರುಗರಿಡುವಿಟ್ಟಿಯ ಪಿಡಿಕುತ್ತಿನ ಕಕ್ಕಡೆಯ ಕೋಳ್ಗೆ ಮರಪಟಲಂ ಪಾಯ್ದು ಕೆಡೆದನಾರೂಢದಿಂ ಪೇಸೇಱಿ ತುೞಿದು ಕೊಲ್ವ ಕರಿಗಳ ಕರ ವದನ ಗಾತ್ರ ಲಾಂಗೂಲ ಘಾತದಿಂದಮುಡಿದು ಕೆಡೆದ ರಥಂಗಳಂ ರಥಂಗಳಿಟ್ಟೆಡೆಯೊಳ್ ಕಿಂಕೊಱಿಯಾಗಿ ಪೆತ್ತ ಕೆನ್ನೆತ್ತರೊಳ್ ಮೆತ್ತಿ ರೂಪಱಿಯಲಾಗದಂತಿರ್ದ ವೀರಭಟರಗುರ್ವಂ ಪಡೆಯೆ ಕರ್ಣನನೇಕ ವಿಕರ್ಣಕೋಟಿಗಳಿಂ ಪಾಂಡವ ಬಲಮನಸುಂಗೊಳೆ ಕಾದುವಲ್ಲಿ ಪಾಂಡವ ಬಲದೊಳ್ವೆಸರಱಿಕೆಯ ನಾಯಕಂ ಕೃತವರ್ಮಂ ಕೌರವಬಲದ ನಾಯಕಂ ಚಿತ್ರಸೇನನನಗುರ್ವಾಗೆ ತಾಗಿ-

ಕಂ॥ ಚಿತ್ರ ಪತತ್ರಿಯೊಳೆಱಪ ಪ
ತತ್ರಿಗಳಂ ಕಡಿದು ಚಿತ್ರಸೇನನಾಗಳ್ ।
ಚಿತ್ರವಧಮಾಗೆ ಕೊಂದೊಡೆ
ಧಾತ್ರಿಗೆ ತಾಂ ಚಿತ್ರಮಾಯ್ತು ಭುಜಬಲಮವನಾ ॥ ೬೧

ಸುರಿಯುತ್ತಿರುವ ರಕ್ತಧಾರೆಗಳು ಪ್ರವಾಹವಾಗಿ ಹರಿದುವು. ಆ ಕಡೆ ಈ ಕಡೆ ಭೇದಿಸಿ ಹೋಗುವ ಸಣ್ಣ ಬಾಣಗಳಿಂದ ಸುರುಳಿಗೊಂಡು ಉರುಳಿಬಿದ್ದಿರುವ ಬಿಲ್ಗಾರರಿಂದಲೂ ಬಿಲ್ಗಾರರು ಹೊಡೆದ ಬಾಣಗಳ ಸಮೂಹದಿಂದ ಮುಳ್ಳುಹಂದಿಗಳನ್ನು ಹೇರುವಂತೆ ಬಾಣವನ್ನು ಹೇರಿ ಹಿಂದೆಬಿದ್ದ ತುರುಕದೇಶದ ಕುದುರೆಗಳಿಂದಲೂ ಚೆಲ್ಲಾಪಿಲ್ಲಿಯಾಗಿ ಹೆದರಿ ಹಿಂಬಾಲಿಸಿ ಅಜ್ಜುಗುಜ್ಜಾಗಿ ತುಳಿದು ಹಾಕುವ ಮದ್ದಾನೆಗಳಿಂದಲೂ ಮದ್ದಾನೆಗಳನ್ನು ಕೂಗಿಕೊಂಡು ಛೂಬಿಡುವ ಮಾವಟಿಗರು ನಾಶವಾಗಲು ಹಗ್ಗವನ್ನೇ ಹಿಡಿದುಕೊಂಡು ಕತ್ತಿನ ಪಕ್ಕದಲ್ಲಿಯೇ ತಮ್ಮ ಕಾಲನ್ನು ಪೋಣಿಸಿ ಹರಿಯಿಸುವ ಹೊಸ ಮಾವಟಿಗರಿಂದಲೂ ಆನೆಯ ಮೇಲೆಯೇ ಕುಳಿತು ಯುದ್ಧಮಾಡುವವರಿಂದಲೂ ಆ ಗಜಾರೋಹಕರು ಎಸೆಯುತ್ತಿರುವ ಈಟಿಯ ಹೊಡೆತಕ್ಕೆ ಚಿಮ್ಮಿ ಕೆಳಗೆ ಬಿದ್ದವರನ್ನು ತುಳಿಯುತ್ತಿರುವ ಆನೆಗಳಿಂದಲೂ ಆನೆಗಳ ಸೊಂಡಿಲು, ಮುಖ, ಶರೀರ ಮತ್ತು ಬಾಲಗಳ ಪೆಟ್ಟಿನಿಂದ ಒಡೆದು ಕೆಳಗೆ ಬಿದ್ದ ತೇರುಗಳಿಂದಲೂ ತೇರಿನ ಇಕ್ಕಟ್ಟುಗಳಲ್ಲಿ ಕೆಸರಿನ ಹಳ್ಳವಾಗಿ ಹೆತ್ತು ಹೆಪ್ಪುಗೊಂಡಿರುವ ಕೆಂಪುರಕ್ತದಲ್ಲಿ ಅಂಟಿಕೊಂಡು ಆಕಾರವನ್ನು (ರೂಪನ್ನು) ತಿಳಿಯುವುದಕ್ಕಾಗದಂತೆ ವಿರೂಪವಾಗಿದ್ದರಿಂದಲೂ ಭಯವನ್ನು ಉಂಟುಮಾಡುವಂತೆ ಕರ್ಣನು ಅನೇಕ ಬಾಣಸಮೂಹಗಳಿಂದ ಪಾಂಡವಸೈನ್ಯದೊಡನೆ ಪ್ರಾಣಾಪಹಾರಮಾಡುವ ರೀತಿಯಲ್ಲಿ ಯುದ್ಧಮಾಡುತ್ತಿರಲು ಪಾಂಡವಸೈನ್ಯದ ಪ್ರಖ್ಯಾತನಾದ ಕೃತವರ್ಮನೂ ಕೌರವಬಲ ನಾಯಕನಾದ ಚಿತ್ರಸೇನನೂ ಭಯಂಕರವಾದ ರೀತಿಯಲ್ಲಿ ಕಾದಲು ತೊಡಗಿದರು.
೬೧. ವಿವಿಧರೀತಿಯಲ್ಲಿ ಮೇಲೆಬೀಳುವ ಬಾಣಗಳನ್ನು ಅಂತಹ ಬಾಣಗಳಿಂದಲೇ ಕಡಿದು ಚಿತ್ರಸೇನನನ್ನು ವಿಚಿತ್ರವಾದ ರೀತಿಯಲ್ಲಿ ಕೊಲ್ಲಲು ಅವನ ಭುಜಬಲವು

ವ|| ಅಂತು ಕೌರವಬಲಪ್ರಧಾನನಾಯಕನಪ್ಪ ಚಿತ್ರಸೇನಂ ಕೃತವರ್ಮನ ಕೆಯ್ಯೊಳತೀತ ನಾದದುರ್ಕೇವ್ವೆಸಿ-

ಕಂ|| ಅತಿ ಚಿತ್ರಂ ಚಿತ್ರನವಿ
ಶ್ರುತ ಶೌರ್ಯಮಿದೆನಿಸಿ ತಾಪ ಚಿತ್ರನನಂತಾ ।
ಪ್ರತಿವಿಂಧ್ಯಂ ವಿಂಧ್ಯಾಚಲ
ಪತಿಯವೊಲವಿಚಳಿತನಾತನಂ ಬಂದಾಂತಂ ॥ ೬೨

ಆಂತನ ಮೇಗೆ ಶಿತ ಶರ
ಸಂತತಿಯಂ ಸುರಿಯೆ ನೋಡಿ ಶರಪರಿಣತಿಯಂ ।
ತಾಂ ತೋರ್ಪನೆನಗೆನುತ್ತಿರ
ದಂತನಿತುಮನೊಡನೆ ಕಡಿದನೆಡೆಯೊಳೆ ಚಿತ್ರಂ ॥ ೬೩

ಕಡಿದೊಡೆ ಕಡುಪಿಂದಂ ಕಿಡಿ
ಕಿಡಿಯಾಗಿ ಶಿತಾಸ್ತ್ರನಿಕರಮಂ ಪ್ರತಿವಿಂಧ್ಯಂ ।
ಕಡಿದವನ ರಥಮನೊರ್ಮೆಯೆ
ಕಡಿದಂ ತಲೆಯುಮನದೊಂದು ದಾರುಣಶರದಿಂ ॥ ೬೪

ವ|| ಅಂತು ಚಿತ್ರನಂ ಕೊಂದು ಕುರುಕ್ಷೇತ್ರದೊಳ್ ತನ್ನ ಮಾತೆ ಮಾತಾಗೆ ಕೌರವ ಬಲಮೆಲ್ಲಮಂ ಪ್ರತಿವಿಂಧ್ಯನವಂಧ್ಯ ಕೋಪೋದ್ರೇಕದಿಂದಾಸ್ಫೋಟಿಸಿ ಕೊಲ್ವಾಗಳ್-

ಮ|| ಸ್ರ|| ಕುರುಸೈನ್ಯಾಂಭೋಧಿ ತೂಳ್ದೆಯ್ದುಗ್ಗಿದಪುವಿದನಾರಿಲ್ಲಿ ಕೆಯ್ಯೊಳ್ವರೀ ಸಂ
ಗರದೊಳ್ ನಿಲ್ವನ್ನರಾರೆಂಬೆಡೆಯೊಳಿದಿರೊಳಾನಲ್ತೆ ಬಂದಿರ್ದೆನೆಂದೆ ।
ಲ್ಲರುಮಂ ಸಂತೈಸಿ ಕಣ್ಬಿಲ್ ಕಱೆ ಪೆಱೆ ನೊಸಲೊಳ್ ಚಂಡ
ದೋರ್ದಂಡದೊಳ್ ಕಂ
ಧರದೊಳ್ ತನನುತ್ತಮಾಂಗಾಂತರದೊಳೆಸೆಯೆ ನಿಂದಾಂತನಾಚಾರ್ಯಪುತ್ರಂ ॥ ೬೫

ಭೂಮಿಗೇ ವಿಚಿತ್ರವಾಯಿತು. ವ|| ಹಾಗೆ ಕೌರವಸೈನ್ಯದ ಮುಖ್ಯ ಸೇನಾಧಿಪತಿಯಾದ ಚಿತ್ರಸೇನನು ಕೃತವರ್ಮನ ಕಯ್ಯಲ್ಲಿ ಸತ್ತುದಕ್ಕೆ ದುಃಖಪಟ್ಟು ೬೨. ಈ ಹಿಂದೆಂದೂ ಕೇಳದೆಯೇ ಇದ್ದ ಈ ಚಿತ್ರನ ಶೌರ್ಯವು ಬಹಳ ಆಶ್ಚರ್ಯಕರವಾದುದು ಎನ್ನಿಸಿಕೊಂಡು ಮೇಲೆಬೀಳುವ ಚಿತ್ರನನ್ನು ಶ್ರೇಷ್ಠವಾದ ವಿಂಧ್ಯಾಚಲ ಪರ್ವತದಂತೆ ಸ್ಥಿರವಾಗಿರುವ ಪ್ರತಿವಿಂಧ್ಯನು ಬಂದು ಎದುರಿಸಿದನು. ೬೩. ಅವನ ಮೇಲೆ ಹರಿತವಾದ ಬಾಣಗಳ ಸಮೂಹವನ್ನು ಸುರಿಯಲು ನೋಡಿ ತಾನು ತನ್ನ ಬಿಲ್ವಿದ್ಯೆಯ ಪಾಂಡಿತ್ಯವನ್ನು ನನ್ನ ಮೇಲೆ ತೋರಿಸುತ್ತಾನೆಯಲ್ಲವೇ ಎನ್ನುತ್ತ ಸಾವಕಾಶ ಮಾಡದೆ ಆ ಅಷ್ಟನ್ನೂ ತಕ್ಷಣವೇ ಚಿತ್ರನು ಮಧ್ಯದಲ್ಲಿಯೇ ಕಡಿದುಹಾಕಿದನು. ೬೪. ವೇಗದಿಂದ ಕಿಡಿಕಿಡಿಯಾಗಿ ಬರುತ್ತಿರುವ ಹರಿತವಾದ ಬಾಣಗಳ ಸಮೂಹವನ್ನು ಪ್ರತಿವಿಂಧ್ಯನು ಕತ್ತರಿಸಿ ಅವನ ತೇರನ್ನೂ ತಲೆಯನ್ನೂ ಒಂದು ಭಯಂಕರವಾದ ಬಾಣದಿಂದ ಒಂದೇ ಸಲ ಕತ್ತರಿಸಿ ಹಾಕಿದನು. ವ|| ಚಿತ್ರನನ್ನು ಕೊಂದು ಕುರುಕ್ಷೇತ್ರದಲ್ಲಿ ತನ್ನ ಮಾತೇ ಮಾತಾಗಿರಲು ಪ್ರತಿವಿಂಧ್ಯನು ಕೌರವಸೈನ್ಯವನ್ನೆಲ್ಲ ವ್ಯರ್ಥವಾಗದ ಕೋಪೋದ್ರೇಕದಿಂದ ಶಬ್ದಮಾಡಿ (ತೋಳನ್ನು ತಟ್ಟಿ)-೬೫. ಕೌರವಸೇನಾಸಮುದ್ರವು ನೂಕಲ್ಪಟ್ಟು

ವ|| ಆಗಳ್ ಪ್ರತಿವಿಂಧ್ಯನಂ ವಿಂಧ್ಯಾಚಲಮನೆಡೆಗಲಿಸಿದಗಸ್ತ್ಯನಂತೆ ಭೀಮಸೇನಂ ತಡೆಯದೆಡೆಗಲಿಸಿ ರುದ್ರಾವತಾರನ ರಥಕ್ಕೆದಿರದೆ ತನ್ನ ರಥಮಂ ಪರಿಯಿಸಿ-

ಚಂ|| ನಿನಗುಱದೇನುಮಲ್ಲದವಟೆಗಂಡರಿದಿರ್ಚುವರಲ್ಲರೆನ್ನನಾಂ
ಪನಿತಳವುಳ್ಳೊಡಿತ್ತ ಮಗುಟೆಂದು ಶರಾವಳಿಯಿಂದೆ ಪೂಟ್ದೊಡಂ ।
ಬನ ಸರಿ ಸೋನೆ ತಂದಲಿದು ದಲ್ ಪೊಸತಾಯ್ತೆನೆ ಕಂಡರೆಲ್ಲಮಂ
ಬನ ಮಟೆಗಾಲವಾಯ್ತು ಕುರುಭೂಮಿಗೆ ಭೀಮನದೇಂ ಪ್ರತಾಪಿಯೋ ॥ ೬೬

ಚಂ|| ಗದೆಯೊಳೆ ಜಟ್ಟಿಗಂ ಪವನನಂದನನೆಂಬರ ಮಾತು ಮಾತದ
ಲ್ಲದು ಸುರಸಿಂಧುಪುತ್ರ ಗುರು ಕರ್ಣ ಕೃಪ ಪ್ರಮುಖರ್ಕಳಿಂತು ನೇ ।
ರಿದರೆ ಶರಾಸನಾಗಮದೊಳೆಂಬಿನಮಂಬರದೊಳ್ ಸುರರ್ಕಳೀಂ
ಪುದಿದನೊ ಬಾಣಜಾಲದೆ ಗುರುಪ್ರಿಯನಂದನನಂ ಮರುತ್ಸುತಂ ॥ ೬೭

ವ|| ಆಗಳಶ್ವತ್ಥಾಮಂ ಭೀಮೋದ್ದಾಮ ಶ್ಯಾಮ ಜಳಧರ ವಿಮುಕ್ತ ಶರಾವಳಿಯ ಬಳಸಂ ಕಂಡು ಮುಗುಳ್ನಗೆ ನಕ್ಕುಮೀತನುಮೆಮ್ಮಂ ಬಳಸಿದಪ್ಪನೆಂದು-

ವಿಶೇಷವಾಗಿ ಸೆಳೆಯಲ್ಪಡುತ್ತಿದೆ. ಇದನ್ನು ಕಾಯುವವರಾರು, ಯುದ್ಧದಲ್ಲಿ ನಿಲ್ಲುವಂತಹವರು ಯಾರು ಎನ್ನುವ ಸಮಯಕ್ಕೆ ಸರಿಯಾಗಿ ಆಚಾರ್ಯಪುತ್ರನಾದ ಅಶ್ವತ್ಥಾಮನು ಆ ಕಾರ್ಯಕ್ಕೆ ಇದೋ ನಾನು ಬಂದಿದ್ದೇನೆ ಎಂದು ಎಲ್ಲರನ್ನೂ ಸಮಾಧಾನಮಾಡಿ ಬಂದು ಮುಖದಲ್ಲಿ ಕಣ್ಣೂ, ಪ್ರಚಂಡವಾದ ದೋರ್ದಂಡದಲ್ಲಿ ಬಿಲ್ಲೂ, ಕತ್ತಿನಲ್ಲಿ ಕರೆಯೂ (ವಿಷದ ಗುರುತು) ತಲೆಯಲ್ಲಿ ಚಂದ್ರನೂ ಪ್ರಕಾಶಿಸುತ್ತಿರಲು ನಿಂತು ಎದುರಿಸಿದನು. ವ|| ಆಗ ವಿಂಧ್ಯಪರ್ವತವನ್ನು ದಾಟಿದ ಅಗಸ್ತ್ಯಋಷಿಯ ಹಾಗೆ ಭೀಮನು ಸಾವಕಾಶಮಾಡದೆ ದಾಟಿ (ಅವರಿಬ್ಬರ ಮಧ್ಯೆ ಹಾರಿ ಬಂದು) ಅಶ್ವತ್ಥಾಮನ ತೇರಿಗೆ (ಎದುರಾಗಿ) ಹೆದರದೆ ತನ್ನ ರಥವನ್ನು ಹರಿಯಿಸಿದನು. ೬೬. ಶಕ್ತಿಯಿಲ್ಲದ ಸಾಮಾನ್ಯ ಶಕ್ತಿಹೀನರನ್ನು ನೀನು ಎದುರಿಸಬಲ್ಲೆ. ನನ್ನನ್ನು ಪ್ರತಿಭಟಿಸುವಷ್ಟು ನಿನಗೆ ಸಾಮರ್ಥ್ಯವಿದ್ದರೆ ಈ ಕಡೆ ತಿರುಗು ಎಂದು ಭೀಮನು ಬಾಣಗಳ ಸಮೂಹದಿಂದ ಅವನನ್ನು ಹೂಳಲು ಬಾಣದ ಮಳೆ, ಜಡಿಮಳೆ, ತುಂತುರುಮಳೆಗಳು ಹೊಸತಾಯಿತು ಎಂದು ಕಂಡವರೆಲ್ಲರೂ ಹೇಳುವ ಹಾಗೆ ಕುರುಭೂಮಿಗೆ ಹೊಸ ಮಳೆಗಾಲವನ್ನು ಭೀಮನು ಉಂಟುಮಾಡಿದನು. ಭೀಮನು ಅದೆಂತಹ ಪ್ರತಾಪಶಾಲಿಯೋ! ೬೭. ಭೀಮನು ಗದಾಪ್ರಯೋಗದಲ್ಲಿ ಮಾತ್ರ ಗಟ್ಟಿಗ ಎನ್ನುವವರ ಮಾತು ಮಾತಲ್ಲ; ಭೀಷ್ಮ, ದ್ರೋಣ, ಕರ್ಣ, ಕೃಪನೇ ಮೊದಲಾದ ಪ್ರಮುಖರು ಹೀಗೆ ಬಿಲ್ವಿದ್ಯೆಯಲ್ಲಿ ಪಂಡಿತರಾಗಿರಲಾರರು ಎಂದು ದೇವತೆಗಳು ಆಕಾಶದಲ್ಲಿ ಹೊಗಳುವ ಹಾಗೆ ಭೀಮನು ಅಶ್ವತ್ಥಾಮನನ್ನು ಬಾಣಗಳ ಸಮೂಹದಿಂದ ಪೂರ್ಣವಾಗಿ ಮುಚ್ಚಿಬಿಟ್ಟನು. ವ|| ಆಗ ಅಶ್ವತ್ಥಾಮನು ಭೀಮನೆಂಬ ವಿಸ್ತಾರವಾದ ನೀಲಮೇಘದಿಂದ ಬಿಡಲ್ಪಟ್ಟ ಬಾಣಸಮೂಹದ ವಿಸ್ತಾರವನ್ನು ಕಂಡು ಹುಸಿನಗೆ

ಚಂ॥ ಅನಲಶಿಖಾಕಳಾಪವನೆ ಭೋರ್ಗರೆದಾರ್ದುಗುಳ್ವನ್ನಮಪ್ಪುಗು
ರ್ವಿನ ಶರಸಂಕುಳಂಗಳೊಳೆ ಭೋರ್ಗರೆದಾರ್ದಿಸೆ ಭೀಮನೆಚ್ಚ ನ।
ಚ್ಚಿನ ಘನ ಬಾಣಜಾಳಮದು ಭೋಂಕನೆ ನೋಡುವೊಡಾಳಜಾಳವಾ
ಯ್ತೆನೆ ಕಡಿದೊಟ್ಟಿ ಸುಟ್ಟುವು ಪತತ್ರಿಗಳಂ ಗುರುಪುತ್ರನಂಬುಗಳ್ ॥ ೬೮

ವ॥ ಅಂತು ಗುರುನಂದನಂ ಮರುನ್ನಂದನವಿರಚಿತ ನಿಶಾತ ವಿಶಿಖ ಪಂಜರಮನಟೆದು ಕಟಕುಟಿಂಮಾಡಿಯುಮನಿತಱೊಳ್ ಮಾಣದೆ-

ಕಂ॥ ತೇರಂ ಕುದುರೆಯನೆಸಗುವ
ಸಾರಥಿಯ ಪೊಡರ್ಪನಯ್ದು ಬಾಣದೊಳುಪಸಂ।
ಹಾರಿಸಿ ತಟತಟ ತೊಳಗುವ
ನಾರಾಚದಿನೆಚ್ಚನೂಱೆ ಭೀಮನ ನೊಸಲಂ ॥ ೬೯

ಮಿಸುಗುವ ನೊಸಲಂ ನಟ್ಟ
ರ್ವಿಸುವಿನೆಗಂ ತೂಗಿ ತೊನೆವ ನಾರಾಚಮದೇ।
ನೆಸೆದುದೊ ತದ್ವದನಾಂಭೋ
ಜ ಸೌರಭಾಕೃಷ್ಟ ಮಧುಪ ಮಾಲಾಕೃತಿಯಿಂ ॥ ೭೦

ನಡೆ ನಾರಾಚದ ನೋವಿನ
ನಡುಕಂ ಪಿರಿದಾಯ್ತು ಸರ್ಪಯೋನಿಯ ಸೆರೆಯಂ।
ಬಿಡಿಸಿದವೊಲೆಚ್ಚು ಪಾಯ್ದು
ತ್ತೊಡನೊಡನೆ ಕದುಷ್ಣ ಕೃಷ್ಣ ರುಧಿರ ಜಲೌಘಂ ॥ ೭೧

ನಕ್ಕು ಇವನೂ ನಮ್ಮನ್ನು ಬಳಸುತ್ತಾನಲ್ಲವೆ ಎಂದು-೬೮. ಅಗ್ನಿಜ್ವಾಲೆಯ ಸಮೂಹವನ್ನೇ ಭೋರೆಂದು ಶಬ್ದಮಾಡಿ ಉಗುಳುವಂತಹ ಭಯಂಕರವಾದ ಬಾಣಸಮೂಹದಿಂದಲೇ ಆರ್ಭಟಿಸಿ ಶಬ್ದಮಾಡಿ ಅಶ್ವತ್ಥಾಮನನ್ನು ಹೊಡೆದನು. ಅವುಗಳಿಂದ ಭೀಮನು ಹೊಡೆದ (ಸಾರವತ್ತಾದ) ಆ ಬಾಣಸಮೂಹವು ನೋಡುತ್ತಿರುವ ಹಾಗೆಯೇ ನಿಸ್ಸಾರವಾದ ಹಂದರವಾಯ್ತು ಎನ್ನುವ ಹಾಗೆ ಅಶ್ವತ್ಥಾಮನ ಬಾಣಗಳು ಭೀಮನ ಬಾಣಗಳನ್ನು ಕಡಿದು ರಾಶಿ ಮಾಡಿ ಸುಟ್ಟು ಹಾಕಿದವು. ವ॥ ಹಾಗೆ ಅಶ್ವತ್ಥಾಮನು ಭೀಮನಿಂದ ರಚಿತವಾದ ಹರಿತವಾದ ಬಾಣಜಾಲವನ್ನು ನಾಶಪಡಿಸಿ ಚದುರಿಸಿ ಅಷ್ಟಕ್ಕೇ ಬಿಡದೆ ೬೯. ಅವನ ತೇರನ್ನೂ ಕುದುರೆಯನ್ನೂ ಅದನ್ನು ನಡೆಸುವ ಸಾರಥಿಯ ಶಕ್ತಿಯನ್ನೂ ಅಯ್ದುಬಾಣಗಳಿಂದ ನಾಶಮಾಡಿ ತಳತಳನೆ ಹೊಳೆಯುವ ಬಾಣದಿಂದ ಭೀಮನ ಮುಖವನ್ನು ನಾಟುವ ಹಾಗೆ ಹೊಡೆದನು. ೭೦. ಹೊಳೆಯುವ ಹಣೆಯಲ್ಲಿ ನಾಟಿಕೊಂಡು ವ್ಯಾಪಿಸುತ್ತ ಆ ಕಡೆಗೂ ಈ ಕಡೆಗೂ ತೂಗಾಡುತ್ತಿರುವ ಆ ಬಾಣವು ಭೀಮನ ಮುಖಕಮಲದ ವಾಸನೆಯಿಂದ ಆಕರ್ಷಿತವಾದ ದುಂಬಿಗಳ ಸಮೂಹದ ಆಕಾರದಿಂದ ವಿಶೇಷ ಸುಂದರವಾಗಿದ್ದಿತು. ೭೧. ಬಾಣದ ನೋವಿನ ತುಡಿತವು ಹೆಚ್ಚಾಯಿತು. ವಿಸರ್ಪಿಣಿಯೆಂಬ ರೋಗವುಳ್ಳವನ ರಕ್ತನಾಳವನ್ನು ಕತ್ತರಿಸಿದಂತೆ ಸ್ವಲ್ಪ ಬೆಚ್ಚಗಿರುವ ಕಪ್ಪಾದ ರಕ್ತಸಮೂಹವು ಒಡನೆಯೇ ಸೂಸಿ ಹರಿಯಿತು.

ನಡುಗಲ್ಕೆರ್ದೆ ಬೆಮರಲ್ ತನು
ತೊಡರಲ್ ನಾಲಗೆ ತಗುಳ್ದುದಾ ಮಾರ್ಗಣದಿಂ ।
ಗಡ ಮತ್ತುಟೆದರನೆಂತುಂ
ಮಡಿಪದೆ ಗುರುತನಯನೆಚ್ಚ ಶಿತ ನಾರಾಚಂ ॥ ೭೨

ವ॥ ಅಂತು ಭೀಮಸೇನಂ ನಾರಾಚಘಾತದಿಂ ಪುಣ್ಣೂರ್ತು ಬಸವಟೆದುಸಿರಲಪ್ಪೊಡ ಮಾಱದೆ ಬಿಲ್ಲ ಕೊಪ್ಪಂ ಪಿಡಿದೆಱಗಿ ಕಿಱಿದಾನುಂ ಬೇಗಮಿರ್ದು ನೊಸಲೊಳ್ ನಟ್ಟ ನಾರಾಚಮನೆಂತಾನುಂ ಕಿಳ್ತು ತನ್ನಿಂ ತಾನೆ ಚೇತರಿಸಿ ಸಿಂಹನಾದದಿನಾರ್ದು-

ಚಂ॥ ಖರಕರಬಿಂಬದಿಂ ಕಿರಣಸಂತತಿಗಳ್ ಪೊಱಪೊಣ್ಮೆದಪ್ಪುವೆಂ
ಬರ ಸುಡಿ ಪೋಲ್ವವೆತ್ತುದೆನೆ ಬಾಣಧಿಯಿಂದಿರದುರ್ಚಿಕೊಂಡು ವಿ ।
ಸ್ಫುರಿತ ಶರಂಗಳೆಂಟನವಱೊಳ್ ಪೊಳೆವಯ್ದು ಶರಂಗಳಿಂ ಸುರು
ಳ್ದುರುಳ್ವಿನಮೆಚ್ಚನಾ ದ್ವಿಜನ ಸೂತ ವರೂಥ ತುರಂಗಮಂಗಳಂ ॥ ೭೩

ಕಂ॥ ಪೆಱವುಟೆದ ಮೂಱು ಮಿಱುಮಿಱು
ಮಿಱುಪ ಶಿತಾಸ್ತ್ರಂಗಳಿಂ ದ್ವಿಜನ್ಮನ ನೊಸಲಂ ।
ನೆಱಗೊಳ್ವಿನಮೆಚ್ಚೊಡೆ ಕ
ಣ್ದೆಱೆದವೊಲಾಯ್ತದಟುಮಳವುಮಾ ಮಾರುತಿಯಾ ॥ ೭೪

ವ॥ ಆಗಳಶ್ವತ್ಥಾಮಂ ಹೇಮಪುಂಖಾಂಕಿತ ಭೀಮಸಾಯಕನಿರ್ಘಾತದಿಂದಟೆಯೆ ನೊಂದು ಭೋರೆಂದು ಕವಿವ ಬಸುನೆತ್ತರ್ ಕಣ್ಣಂ ಕವಿಯೆ ಸೀಂಟಿಕಳೆದು ನಡುಕೋಲ್ವರಂ ನಟ್ಟ ಕೂರ್ಗಣೆಗಳಂ ಗಱೆವೆರಸು ತೊರೆದು ಕಳೆದು-

೭೨. ಆ ಬಾಣದಿಂದ (ಭೀಮನ) ಎದೆ ನಡುಗುವುದಕ್ಕೂ ಮೈ ಬೆವರುವುದಕ್ಕೂ ನಾಲಗೆ ತೊಡರುವುದಕ್ಕೂ ಪ್ರಾರಂಭವಾಯಿತು. (ಎಂದ ಮೇಲೆ) ಅಶ್ವತ್ಥಾಮನು ಪ್ರಯೋಗಿಸಿದ ಹರಿತವಾದ ಬಾಣವು ಇನ್ನುಳಿದವರನ್ನು ಕೊಲ್ಲದಿರುತ್ತದೆಯೇ? ವ॥ ಭೀಮಸೇನನು ಬಾಣದ ಪೆಟ್ಟಿನಿಂದ ಗಾಯಗೊಂಡು ಶಕ್ತಿಗುಂದಿ ಉಸಿರಾಡು ವುದಕ್ಕೂ ಆಗದೆ ಬಿಲ್ಲಿನ ತುದಿಯನ್ನು ಹಿಡಿದು ಊರಿಕೊಂಡು ಸ್ವಲ್ಪ ಕಾಲವಿದ್ದು ಹಣೆಯಲ್ಲಿ ನಾಟಿದ್ದ ಬಾಣವನ್ನು ಹೇಗೋ ಕಿತ್ತು ತನ್ನಷ್ಟಕ್ಕೆ ತಾನೇ ಚೇತರಿಸಿಕೊಂಡು ಸಿಂಹಧ್ವನಿಯಿಂದ ಆರ್ಭಟಿಸಿದನು. ೭೩. ಸೂರ್ಯಬಿಂಬದಿಂದ ಕಿರಣಗಳು ಹೊರಕ್ಕೆ ಹೊರಟು ಬರುತ್ತಿರುವ ಹಾಗೆ ಬತ್ತಳಿಕೆಯಿಂದ ಪ್ರಕಾಶಮಾನವಾದ ಎಂಟುಬಾಣಗಳನ್ನು ಸೆಳೆದುಕೊಂಡು ಅವುಗಳಲ್ಲಿ ಹೊಳೆಯುತ್ತಿರುವ ಅಯ್ದುಬಾಣಗಳಿಂದ ಆ ಬ್ರಾಹ್ಮಣನಾದ ಅಶ್ವತ್ಥಾಮನ ಸಾರಥಿ, ತೇರು ಮತ್ತು ಕುದುರೆಗಳು ಸುರುಳಿಕೊಂಡು ಉರುಳುವ ಹಾಗೆ ಹೊಡೆದನು. ೭೪. ಇನ್ನುಳಿದ ಮೂರು ಮಿರುಮಿರುಗುವ ಹರಿತವಾದ ಬಾಣಗಳಿಂದ ಬ್ರಾಹ್ಮಣನ ಹಣೆಗೆ ಮರ್ಮವನ್ನು ಭೇದಿಸುವಂತೆ ಹೊಡೆಯಲು ಆ ಭೀಮಸೇನನ ಪರಾಕ್ರಮವೂ ಶಕ್ತಿಯೂ ಕಣ್ಣು ಬಿಟ್ಟಂತಾಯಿತು. ವ॥ ಆಗ ಅಶ್ವತ್ಥಾಮನು ಚಿನ್ನದ ಗರಿಗಳಿಂದ ಗುರುತುಮಾಡಲ್ಪಟ್ಟ ಹಿಂಭಾಗವನ್ನುಳ್ಳ ಭೀಮನ ಬಾಣಗಳ ಪೆಟ್ಟಿನಿಂದ ಸಾಯುವಷ್ಟು ವ್ಯಥೆಪಟ್ಟು ಭೋರೆಂದು ಸುರಿಯುತ್ತಿರುವ

ಕಂ॥ ಅಳವೆನಿತು ಚಾಪವಿದ್ಯಾ
ಬಳಮೆನಿತುಂಟನಿತುಮೆಯ್ದೆವಂದಿಲ್ಲಿ ಪುದುಂ ।
ಗೊಳಿಳಿದುದೆನೆ ಕಲ್ಪಾನಲ
ವಿಳಯಾಂತಕರೂಪನಾದನಶ್ವತ್ಥಾಮಂ ॥ ೭೫

ವ॥ ಆಗಳ್ ಸವ್ಯಾಪಸವ್ಯ ಭ್ರಾಂತೋದ್ಭ್ರಾಂತಂಗಳೆಂಬ ರಥಕಲ್ಪ ವಿಶೇಷ ವಿನ್ಯಾಸಂಗಳ ನಱಿದು ಸಾರಥಿಗಳ್ ಚೋದಿಸುವಾಗಳಿರ್ವರ ರಥಂಗಳುಂ ಸುಟ್ಟುರೆಯೊಳಗಣ ತಱಗೆಲೆಯಂತೆ ತಿಱ್ರನೆ ತಿರಿಯೆ-

ಚಂ॥ ಮುಳಿಸಳುರ್ದೆಯ್ದೆ ಕಣ್ಗಳೊಳೆ ಪೀರ್ವವೊಲುಗ್ರಶರಾನಲಾರ್ಚಿಯಿಂ
ದಳುರ್ವವೊಲೆಯ್ದೆ ಚೋದಿಸಿ ವರೂಥಮನಿಂ ಬರ್ದುಕಾಡೆಯೆಂದಸುಂ ।
ಗೊಳೆ ಮೊನೆಯಂಬುಗಳ್ ತನುವನಳ್ದಳಿವೋಪಿನಮೆಚ್ಚು ನೆತ್ತರು
ಚ್ಚಳಿಸಿ ರಥಂಗಳೊಳ್ ಕೊಳಗೊಳುತ್ತಿರೆ ಕಾದಿದರೋರ್ವರೋರ್ವರೊಳ್ ॥ ೭೬

ವ॥ ಅಂತು ಮುಳಿಸಿನ ಮೋಪಿನ ಗಂಡಮಚ್ಚರದ ಮೆಚ್ಚುವಣಿಗೆಯಂಕಕಾಱರೆಕ್ಕತುಳ ಕ್ಕೆಕ್ಕೆಯಿಂ ಸೂಟೀಱೆಟೆವಂತೋರ್ವರೋರ್ವರೊಳ್ ಕಾದೆ-

ಉ॥ ಸೂತರುರುಳ್ವಿನಂ ರಥ ತುರಂಗಮರಾಜಿ ಸುರುಳ್ವಿನಂ ಚಳ
ತ್ಕೇತುಗಳೆತ್ತಮವ್ವಳಿಸಿ ಬೀಳ್ವಿನಮಳ್ಕುಱೆ ಕಾದಿ ಬಾಣ ಸಂ ।
ಘಾತದ ಕೋಳೊಳುಚ್ಚಳಿಪ ನೆತ್ತರೊಳಿಚ್ಚೆಯೆ ಕೆಟ್ಟೊಡಾತನ
ತ್ತೀತನುಮಿತ್ತ ಜೋಲ್ದ ರಣಮಂ ಪೊಗಟುತ್ತಿರೆ ದೇವಕೋಟಿಗಳ್ ॥ ೭೭

ಬಿಸಿರಕ್ತವು ಕಣ್ಣನ್ನು ಆವರಿಸಲು ಅದನ್ನು (ಬೆರಳಿನಿಂದ) ಸೀಂಟಿ ಕಳೆದು ಬಾಣದ ಮಧ್ಯದವರೆಗೂ ನಾಟಿಕೊಂಡಿದ್ದ ಹರಿತವಾದ ಬಾಣಗಳನ್ನು ಗರಿಗಳೊಡನೆ ಕಿತ್ತು ಬಿಸಾಡಿದನು. ೭೫. ತನ್ನ ಶಕ್ತಿಯೆಷ್ಟಿದೆ, ಬಿಲ್ವಿದ್ಯೆಯ ಬಲವೆಷ್ಟಿದೆ ಅಷ್ಟನ್ನೂ ಇಲ್ಲಿ ಸಂಪೂರ್ಣವಾಗಿ ಹೊಂದಾಣಿಕೆಯಾಗುವ ಹಾಗೆ ಸೇರಿಸಿದೆ ಎನ್ನುವ ಹಾಗೆ ಅಶ್ವತ್ಥಾಮನು ಪ್ರಳಯಾಗ್ನಿಯ ಮತ್ತು ಪ್ರಳಯಕಾಲದ ಯಮನ ರೂಪವುಳ್ಳವನಾದನು. ವ॥ ಆಗ ಸವ್ಯ, ಅಪಸವ್ಯ, ಭ್ರಾಂತ ಮತ್ತು ಉದ್ಭ್ರಾಂತಗಳೆಂಬ ರಥವಿದ್ಯೆಯ ನಾನಾರೀತಿಗಳನ್ನು ತಿಳಿದು ಸಾರಥಿಗಳು ನಡೆಸುತ್ತಿರಲು ಇಬ್ಬರ ತೇರುಗಳೂ ಸುಂಟರುಗಾಳಿಯ ಮಧ್ಯದಲ್ಲಿರುವ ತರಗೆಲೆಯ ಹಾಗೆ ತಿರ್ರನೆ ಸುತ್ತುತ್ತಿದ್ದುವು. ೭೬. ಕೋಪವು ಹರಡಿ ಕಣ್ಣುಗಳಿಂದಲೇ ಕುಡಿಯುವ ಹಾಗೆ ಭಯಂಕರವಾದ ಬಾಣಾಗ್ನಿಯ ಜ್ವಾಲೆಯಿಂದ ಸುಡುವ ಹಾಗೆ ರಥವನ್ನು ಹತ್ತಿರಕ್ಕೆ ನಡೆಸಿ 'ಇನ್ನು ನೀನು ಬದುಕಲಾರೆ' ಎಂದು ಮೊನಚಾದ ಬಾಣಗಳು ಪ್ರಾಣಾಪಹಾರಮಾಡುವಂತೆ ಶರೀರವನ್ನು ನಾಟಿ ನಾಶವಾಗುತ್ತಿರಲು ಬಾಣ ಪ್ರಯೋಗಮಾಡಿ ರಕ್ತವು ಚಿಮ್ಮಿ ರಥದಲ್ಲಿಯೇ ಕೊಳವಾಗುತ್ತಿರಲು ಒಬ್ಬರೊಡನೊಬ್ಬರು ಕಾದಿದರು. ವ॥ ಹಾಗೆ ಕೋಪದ, ಆಸಕ್ತಿಯ, ಪೌರುಷದ, ಮಾತ್ಸರ್ಯದ, ಪರಸ್ಪರ ಮೆಚ್ಚಿಗೆಯುಳ್ಳ ಜಟ್ಟಿಗಳು ಮಲ್ಲಯುದ್ಧಕ್ಕೆ ಅಂಕಕಾರರು ಮೇಲಿಂದ ಮೇಲಕ್ಕೆ ಸರದಿಯ ಪ್ರಕಾರ ಹತ್ತಿ ಇಳಿದು ಯುದ್ಧಮಾಡುವ ಹಾಗೆ ಒಬ್ಬರೊಡನೊಬ್ಬರು ಕಾದಿದರು - ೭೭. ಸಾರಥಿಗಳು ಉರುಳಿ ಬೀಳುವ ಹಾಗೆಯೂ ರಥಕುದುರೆಗಳ ಗುಂಪು

ವ॥ ಆಗಳ್ ಧರ್ಮರಾಜನುಮಿತ್ತ ರಾಜರಾಜನುಮೊರ್ವರೊರ್ವರಂ ಕೆಯ್ಕೊಂಡು ತಂತಮ್ಮ ರಥಂಗಳನೇಱಿಸಿಕೊಂಡುಯ್ದರಿತ್ತ ಕರ್ಣನುಂ ಪಾಂಡವಬಳ ಜಳನಿಧಿಯಂ ಬಡಬಾನಳನಳುರ್ವಂತಳುರ್ದು ತನ್ನೊಳ್ ಪೋಗದೆ ಪೆಣೆದ ಪ್ರಭದ್ರಕ ಬಲಮೆಲ್ಲಮಂ ಕೊಂದನನ್ನೆಗಮಿತ್ತ ಭೀಮಾಶ್ವತ್ಥಾಮರಿರ್ವರುಂ ಚೇತರಿಸಿ ಸೂತ ಪತಾಕಾ ತುರಂಗಮೋಪೇತ ರಥಂಗಳನೇಱಿಕೊಂಡು ಮತ್ತಮೊರ್ವರೊರ್ವರನಱಸುತ್ತುಂ ಸಂಗ್ರಾಮಭೂಮಿಯೊಳಗನೆ ಬರೆ ಜರಾಸಂಧನ ಮಗಂ ಕ್ಷೇಮಧೂರ್ತಿ ತಮ್ಮಯ್ಯನಂ ಕೊಂದ ಪಗೆಯಂ ನೆನೆದು ತನ್ನೇಱಿದ ಮತ್ತಹಸ್ತಿಯಂ ಭೀಮಸೇನಂಗೆ ತೋಱಿ ಕೊಟ್ಟಾಗಳ್-

ಕಂ॥ ಬಡಿಗೊಂಡು ಮುಸಗಿ ಬೈತ್ರಮ
ನೊಡೆವ ಮಹಾ ಮಕರದಂತೆ ಕರಿಘಟೆಗಳನಾ ।
ರ್ದುಡಿಯೆ ಬಡಿದಾನೆವೆರಸಾ
ಗಡೆ ಕೊಂದಂ ಕ್ಷೇಮಧೂರ್ತಿಯಂ ಪವನಸುತಂ ॥ ೭೮

ವ॥ ಅಂತು ಕ್ಷೇಮಧೂರ್ತಿಯಂ ಕ್ಷೇಮದಿಂ ಕೊಂದನನ್ನೆಗಮತ್ತ ಮರುನ್ನಂದನನ ನಱಸುತ್ತುಂ ಬರ್ಪಶ್ವತ್ಥಾಮನಂ ಪಾಂಡ್ಯನೆಡೆಗೊಂಡು ಬಂದು ಮಾರ್ಕೊಂಡು-

ಸುರುಳಿಕೊಳ್ಳುವ ಹಾಗೆಯೂ ಚಲಿಸುತ್ತಿರುವ ಧ್ವಜಗಳು ಎಲ್ಲ ಕಡೆಗೂ ಹಾರಿ ಬೀಳುತ್ತಿರುವಂತೆಯೂ ಉಗ್ರವಾಗಿ ಕಾದಿ ಬಾಣಸಮೂಹದ ತಿವಿತದಿಂದ ಚಿಮ್ಮಿದ ರಕ್ತದಲ್ಲಿ ಇಚ್ಛಾಶಕ್ತಿಯೇ ನಷ್ಟವಾಗಲು ಆ ಭೀಮನು ಆ ಕಡೆ, ಈ ಅಶ್ವತ್ಥಾಮನು ಈ ಕಡೆ ಜೋತುಬಿದ್ದ ಯುದ್ಧವನ್ನು ದೇವತೆಗಳ ಸಮೂಹವು ಹೊಗಳುತ್ತಿದ್ದಿತು. ವ॥ ಆ ಕಡೆ ಧರ್ಮರಾಜನೂ ಈ ಕಡೆ ಕೌರವನೂ ಒಬ್ಬೊಬ್ಬರನ್ನೂ ಕರೆದುಕೊಂಡು ತಮ್ಮ ರಥವನ್ನು ಹತ್ತಿಸಿಕೊಂಡು ಹೋದರು. ಕರ್ಣನು ಪಾಂಡವಸಮುದ್ರವನ್ನು ಬಡಬಾಗ್ನಿಯು ಸುಡುವಂತೆ ಸುಟ್ಟು ತನ್ನನ್ನು ಬಿಟ್ಟುಹೋಗದೆ ತನ್ನಲ್ಲಿಯೇ ಹೆಣೆದುಕೊಂಡಿದ್ದ ಪ್ರಭದ್ರಕಬಲವೆಲ್ಲವನ್ನೂ ಕೊಂದನು. ಅಷ್ಟರಲ್ಲಿ ಈ ಕಡೆ ಭೀಮಾಶ್ವತ್ಥಾಮರು ಚೇತರಿಸಿ ಸಾರಥಿ ಧ್ವಜ ಮತ್ತು ಕುದುರೆಗಳಿಂದ ಕೂಡಿದ ರಥಗಳನ್ನು ಹತ್ತಿಕೊಂಡು ಪುನಃ ಒಬ್ಬರು ಮತ್ತೊಬ್ಬರನ್ನು ಹುಡುಕುತ್ತ ಯುದ್ಧಭೂಮಿಯಲ್ಲಿ ಬರುತ್ತಿರಲು ಜರಾಸಂಧನ ಮಗನಾದ ಕ್ಷೇಮಧೂರ್ತಿಯು ತಮ್ಮ ತಂದೆಯನ್ನು ಕೊಂದ ಶತ್ರುತ್ವವನ್ನು ಜ್ಞಾಪಿಸಿಕೊಂಡು ತಾನು ಹತ್ತಿದ್ದ ಮದ್ದಾನೆಯನ್ನು ಭೀಮನ ಕಡೆ ಛೂಬಿಟ್ಟನು. ೭೮. ಪೆಟ್ಟುತಿಂದು ರೇಗಿ ಹಡಗನ್ನು ಮುರಿಯುವ ದೊಡ್ಡ ಮೊಸಳೆಯ ಹಾಗೆ ಭೀಮಸೇನನು ಆನೆಯ ಸಮೂಹವನ್ನು ನಾಶಮಾಡುವಂತೆ ಹೊಡೆದು, ಆರ್ಭಟಮಾಡಿ, ಕ್ಷೇಮಧೂರ್ತಿಯನ್ನು ಆಗಲೇ ಕೊಂದು ಹಾಕಿದನು. ವ॥ ಅಷ್ಟರಲ್ಲಿ ಆ ಕಡೆ ಭೀಮನನ್ನು ಹುಡುಕುತ್ತ ಬರುತ್ತಿದ್ದ ಅಶ್ವತ್ಥಾಮನನ್ನು ಪಾಂಡ್ಯನು ಮಧ್ಯೆ ಬಂದು ಎದುರಿಸಿ

ಕಂ॥ ನೀನಲ್ಲದೆನ್ನ ಶರಸಂ
ಧನಮನಾನಲ್ಕೆ ನೆಱೆವರಿಲ್ಲೀ ಪಡೆಯೊಳ್ ।
ನೀನಿನಿಸನಾಂಪುದೆಂಬುದು
ಮಾನಲ್ಲದೆ ನಿನ್ನನಾಂಪ ಗಂಡರುಮೊಳರೇ ॥ ೭೯

ಎನೆ ಬೆಳ್ಮಸೆಯಂಬಿನ ಸರಿ
ಮೊನೆಯಂಬಿನ ಸೋನೆ ಪಾಱೆಯಂಬಿನ ತಂದಲ್ ।
ಘನಮಾದುದಲ್ಲಿ ಕಿತ್ತಂ
ಬಿನ ಬಡಪಮಿದೆನಿಸಿ ಪಾಂಡ್ಯನಂಬಂ ಕಱೆದಂ ॥ ೮೦

ಕಱೆದೊಡವನಿತುಮನಂತಂ
ತುಱಿದೆಚ್ಚು ಕಡಂಗಿ ತಱಿದು ಶರವರ್ಷದಿನಂ ।
ದಱಿಯೆ ಕಡಿಕೆಯ್ದು ಬಿಡದೆಡೆ
ವಱಿನಂ ಮಾಡಿದುವು ಗುರುತನೂಜನ ಕಣೆಗಳ್ ॥ ೮೧

ಎಡೆವಱಿದೊಳೆಱಗಿ ಬಱಿಸಿಡಿ
ಲಿಡುಮುಡುಕನೆ ಪೊಡೆದುದೆನಿಸಿ ಪಾಂಡ್ಯನ ರಥದ ।
ಚ್ಚುಡಿದಟ್ಟೆ ತಟ್ಗಿ ಕೊಂಡುವು
ಕಡುಗೂರಿದುವೆನಿಪ ಗುರುತನೂಜನ ಕಣೆಗಳ್ ॥ ೮೨

ವಿರಥಂ ಪಾಂಡ್ಯಂ ಕೋಪ
ಸ್ಫುರಿತಾಧರನುಡಿದು ಕೆಡೆಯೆ ಪಟಯಿಗೆಯುಂ ಬಿ ।
ಬ್ಬರ ಬರಿಯೆ ಗುರುತನೂಭವ
ನುರಮಂ ಬರಿಯೆಚ್ಚು ಬೆಂಗೆವಂದಂ ಗಜದಾ ॥ ೮೩

೭೯. ನನ್ನ ಬಾಣಪ್ರಯೋಗವನ್ನು ಎದುರಿಸುವುದಕ್ಕೆ ನಿನ್ನನ್ನು ಬಿಟ್ಟು ಈ ಸೈನ್ಯದಲ್ಲಿ ಸಮರ್ಥರಾದವರು ಬೇರೆ ಯಾರೂ ಇಲ್ಲ, ನೀನೇ ಒಂದಿಷ್ಟು ತಾಳುವುದು ಎನ್ನಲು ನಾನಲ್ಲದೇ ನಿನ್ನನ್ನು ಪ್ರತಿಭಟಿ ತಕ್ಕ ಶೂರರೂ ಇದ್ದಾರೆಯೇ? ೮೦. ಎನ್ನಲು ಬೆಳ್ಳಗೆ ಮಸೆದಿರುವ ಬಾಣದ ಮಳೆ, ಮೊನಚಾದ ಬಾಣಗಳ ತುಂತುರುಮಳೆ- ಇವು ಅತಿಶಯವಾದವು. ಅಲ್ಲಿಯ ಕಿರಿಯಬಾಣಗಳ ನಿರಂತರವಾದ ಮಳೆ ಇದು ಎನಿಸಿ ಪಾಂಡ್ಯನು ಬಾಣಗಳನ್ನು ಕರೆದನು. ೮೧. ಅವಷ್ಟನ್ನೂ ಹಾಗೆ ಹಾಗೆಯೇ ಉತ್ಸಾಹಗೊಂಡು ಜಾಗ್ರತೆಯಾಗಿ ಕತ್ತರಿಸಿ ಬಾಣದ ಮಳೆಯಿಂದ (ಶರವರ್ಷ) ಸಂಪೂರ್ಣವಾಗಿ ತುಂಡರಿಸಿ, ನಿಲ್ಲದೆ ಅಶ್ವತ್ಥಾಮನ ಬಾಣಗಳು ನಡುವೆ ಬರಗಾಲವನ್ನು ಉಂಟುಮಾಡಿದುವು. ೮೨. ಬರಗಾಲದ ಮಧ್ಯದಲ್ಲಿ ಬರಸಿಡಿಲು ಇಡುಕುಮುಡುಕುಗಳಲ್ಲಿಯೇ ಶಬ್ದಮಾಡಿ ಹೋಯಿತು ಎನ್ನಿಸಿ ಅಶ್ವತ್ಥಾಮನ ಬಹಳ ಹರಿತವಾದ ಬಾಣಗಳು ಪಾಂಡ್ಯನ ರಥದ ಅಚ್ಚುಮುರಿದು ನಾಶವಾಗಿ ಕುಸಿಯುವಂತೆ ಹೊಡೆದುವು. ೮೩. ರಥವಿಲ್ಲದ ಕೋಪದಿಂದ ನಡುಗುತ್ತಿರುವ ತುಟಿಯುಳ್ಳ ಪಾಂಡ್ಯನು ಮುರಿದು ಬೀಳಲು ಬಾವುಟವೂ ಪೂರ್ಣವಾಗಿ ಬಿರಿಯಲು (ಪಾಂಡ್ಯನು) ಅಶ್ವತ್ಥಾಮನ ಎದೆಯನ್ನೂ ಬಿರಿದುಹೋಗುವಂತೆ ಹೊಡೆದು ಆನೆಯ ಬೆನ್ನಿಗೆ ಬಂದನು.

ವ|| ಅಂತು ತನ್ನ ನಚ್ಚುವ ಕೆಯ್ದುಗಳನಿತು ಪೊಳೆಯೆ ಮಸೆದೊಟ್ಟ ಮತ್ತಹಸ್ತಿಯನಣೆದು ತೋಳೆಕೊಟ್ಟಾಗಳ್-

ಉ|| ಈ ಮದದಂತಿಯೆಟ್ಟರವುಮೀತನ ಶೌರ್ಯಮುಮೀ ಮಹೋಗ್ರ ಸಂ
ಗ್ರಾಮದೊಳೆನ್ನುಮಂ ಚಳಿಯಿಸಲ್ ಬಗೆದಪ್ಪುದು ಪಾಂಡ್ಯನನ್ನನಿ ।
ನ್ನೀ ಮಹಿಯೊಳ್ ಪೆಱಂ ಕಲಿಯೆ ನೆಟ್ಟನಿದಿರ್ಚುವ ನಿಚ್ಚಟಿಕೆಯೊಳ್
ಭೀಮನುಮಿನ್ನನಲ್ಲನೆನೆ ಪೋಲ್ವೆಗಿವಂಗೆಣೆ ಗಂಡರೆಂಬರಾರ್ ॥ ೮೪

ವ|| ಎಂಬನ್ನೆಗಂ ಪಾಂಡ್ಯನಶ್ವತ್ಥಾಮನ ರಥಮಂ ಮುಟ್ಟೆವಂದು-

ಕಂ|| ವಿಳಯಾನಳ ವಿಳಸನ ವಿ
ಸ್ಫುಳಿಂಗ ಸಂಘಾತದಿಂ ತಗುಳ್ದಡರ್ವನಿತೊಂ ।
ದಳವಿಯ ತೋಮರದಿಂದಿಡೆ
ಪೊಳೆವಸ್ತ್ರದೆ ಗುರುತನೂಜನೆಡೆಯೊಳೆ ಕಡಿದಂ ॥ ೮೫

ವ|| ಅಂತದಂ ಕಡಿದು ಕೂರಿದುವುಂ ನೇರಿದುವುಮಪ್ಪಯ್ದುಮೋಘಾಸ್ತ್ರಂಗಳಂ ಬಾಣಧಿಯಿಂದುರ್ಚಿಕೊಂಡು ತನ್ನ ಮನದೊಳೆ ಸಮಕಟ್ಟಿಕೊಂಡೆಚ್ಚಾಗಳ್-

ಕಂ|| ಕರಿಕರಮುಂ ಮಾವಂತನ
ಕರಮುಂ ತತ್ಪಾಂಡ್ಯಶಿರಮುಮೊಡನುರುಳೆ ಭಯಂ ।
ಕರಮುಮನುರ್ವಿಗಗುರ್ವುಮ
ನೆರಡುಂ ಪಡೆಗಳ್ಗೆ ತೋಱಿದಂ ಗುರುತನಯಂ ॥ ೮೬

ವ|| ತಾನು ನಂಬಿದ್ದ ಆಯುಧಗಳೆಲ್ಲ ಹೊಸತಾಗಿ ಮಸೆಯಲ್ಪಟ್ಟು ರಾಶಿಯಾಗಿ ಹೊಳೆಯುತ್ತಿರಲು ಮದ್ದಾನೆಯನ್ನು ಅಂಕುಶದಿಂದ ತಿವಿದು ಪಾಂಡ್ಯನು ಅಶ್ವತ್ಥಾಮನ ಮೇಲೆ ಛೂಬಿಟ್ಟನು. ೮೪. ಈ ಮದ್ದಾನೆಯ ಬರುವಿಕೆಯೂ ಈತನ ಪರಾಕ್ರಮವೂ ಈ ಘೋರಯುದ್ಧದಲ್ಲಿ ನನ್ನನ್ನು ಶಕ್ತಿಹೀನನನ್ನಾಗಿಮಾಡಲು ಯೋಚನೆ ಮಾಡುತ್ತಿದೆಯಲ್ಲವೇ? ಪಾಂಡ್ಯನಂತಹವನೂ ಈ ಭೂಮಿಯಲ್ಲಿ ಇನ್ನೊಬ್ಬ ಶೂರನಿರುವನೇ? ನೇರವಾಗಿ ವೈರಿಯನ್ನು ಎದುರಿಸುವ ಸ್ಥೈರ್ಯದಲ್ಲಿ ಭೀಮನು ಕೂಡ ಇಂತಹ ಶಕ್ತಿಯುಳ್ಳವನಲ್ಲ, ಎನ್ನುವಾಗ ಹೋಲಿಕೆಮಾಡಲು ಇವನಿಗೆ ಸಮಾನರಾದವರು ಯಾರು ಇದ್ದಾರೆ? ವ|| ಎನ್ನುವಷ್ಟರಲ್ಲಿ ಪಾಂಡ್ಯನು ಅಶ್ವತ್ಥಾಮನ ತೇರಿನ ಸಮೀಪಕ್ಕೆ ಬಂದು ೮೫. ಪ್ರಳಯಾಗ್ನಿಯ ಪ್ರಕಾಶಮಾನವಾದ ಕಿಡಿಗಳ ಸಮೂಹದಿಂದ ಹಿಂಬಾಲಿಸಿ ಮೇಲೇರುವಷ್ಟು ಶಕ್ತಿಯುಳ್ಳ ತೋಮರವೆಂಬ ಆಯುಧ (ದೊಡ್ಡಗದೆ) ಹೊಡೆಯಲು ಅಶ್ವತ್ಥಾಮನು ಮಧ್ಯಮಾರ್ಗದಲ್ಲಿಯೇ ಅದನ್ನು ಕತ್ತರಿಸಿದನು. ವ|| ಹಾಗೆ ಅದನ್ನು ಕತ್ತರಿಸಿ ಹರಿತವೂ ಸರಳವೂ ಆದ ಬೆಲೆಯೇ ಇಲ್ಲದ ಅಯ್ದು ಬಾಣಗಳನ್ನು ಬತ್ತಳಿಕೆಯಿಂದ ಸೆಳೆದುಕೊಂಡು ತನ್ನ ಮನಸ್ಸಿನಲ್ಲಿಯೇ ಹೇಗೆ ಪ್ರಯೋಗಮಾಡಬೇಕೆಂದು ಸಿದ್ಧಾಂತಮಾಡಿಕೊಂಡು ಹೊಡೆದನು. ೮೬. ಆನೆಯ ಸೊಂಡಿಲೂ ಮಾವಟಿಗನ ಕೈಯೂ ಆ ಪಾಂಡ್ಯನ ತಲೆಯೂ ಜೊತೆಯಾಗಿಯೇ ಉರುಳಲು ಅಶ್ವತ್ಥಾಮನು ಲೋಕಕ್ಕೆ ಭಯಂಕರತ್ವವನ್ನೂ

ವ॥ ಅನ್ನೆಗಂ ಸಂಸಪ್ತಕನಿಕಾಯಮನತಿ ನಿಶಿತ ಸಾಯಕನಿಕಾಯದಿಂ ನಿಶ್ಶೇಷಮಾಗೆ ಮಾಳ್ಪ ಸಾಮಂತಚೂಡಾಮಣಿ ಕೌರವಬಲದ ಕಳಕಳಮಂ ಕೇಳ್ದು ಮನಃಪವನವೇಗದಿಂ ಜವನೆ ಬರ್ಪಂತೆ ಬಂದು ತಾಗಿದಾಗಳಕ್ಷೋಹಿಣೀ ನಾಯಕಂ ದಂಡಧಾರಂ ಗಂಡಗುಣಕ್ಕಾಧಾರ ಮಾಗಿ ಮದಗಳಿತ ಗಂಡ ಪ್ರಚಂಡ ಮದವೇತಂಡಮನಣೆದು ಬಟ್ಟಕಿದಾಗಳ್-

ಉ॥ ಕಾದಲಿದಿರ್ಚಿ ಬಂದ ಪಗೆ ಸಂಪಗೆಯಂತೆ ಶಿಳೀಮುಖಕ್ಕೆ ಗಂ
ಟಾದುದಿದೊಂದೆ ಸಿಂಧುರದೊಳಿಂತಿವನೊರ್ವನೆ ತಳ್ತನಾದೊಡೇ ।
ನಾದುದೋ ಬಲ್ಲೆನೆಂದು ಮುಳಿದೆಚ್ಚೊಡೆ ಸೌಳನೆ ಸೀಳ್ದು ಪಚ್ಚವೋ
ಲಾದುದು ದಂಡಧಾರ ಗಜಮಾತನೊಡಲ್ವೆರಸಂದು ಪಾರ್ಥನಿಂ ॥ ೮೭

ವ॥ ಅಂತಾತಂ ಕೃತಾಂತನಿವಾಸಮನೆಯ್ದುವುದುಂ-

ಕಂ॥ ಇನ್ನಿನಿಸನಿರ್ದೊಡಾಜಿಯೊ
ಳೆನ್ನ ತನೂಜನುಮನಟ್ಟಿಪಂ ನರನದನಿ ।
ನ್ನಾನ್ನೋಡಲಾಱೆನೆಂಬವೊ
ಲನ್ನೆಗಮಸ್ತಾಚಳಸ್ಥನಾದಂ ದಿನಪಂ ॥ ೮೮

ವ॥ ಅಂತು ಪತಂಗಮಂಡಲಮಪರಗಿರಿತಟಮನೆಯ್ದುವುದುಮೆರಡುಂ ಪಡೆಗಳಪಹಾರ ತೂರ್ಯಂಗಳಂ ಬಾಜಿಸಿ ತಂತಮ್ಮ ಬೀಡುಗಳ್ಗೆ ಪೋದುವಾಗಳ್ ರಾಜರಾಜನಲ್ಲಿಗಂಗರಾಜಂ ಎಂದು ಹಯೋಪಾಯಕುಶಲರಪ್ಪ ಗಾಂಗೇಯರಱಿಪಿದ ಮಾತನೇಕಾಂತದೊಳಱಿಪುವುದುಂ

ಅದ್ಭುತವನ್ನೂ ಜೊತೆಯಲ್ಲಿಯೇ ತೋರಿದನು. ವ॥ ಅಷ್ಟರಲ್ಲಿ ಸಂಸಪ್ತಕಸಮೂಹವನ್ನು ಬಹಳ ಹರಿತವಾದ ಬಾಣಗಳ ಸಮೂಹದಿಂದ ಸ್ವಲ್ಪವೂ ಉಳಿಯದ ಹಾಗೆ ಮಾಡುವ ಸಾಮಂತಚೂಡಾಮಣಿಯಾದ ಅರ್ಜುನನು, ಕೌರವಸೈನ್ಯದ ಕಳಕಳಶಬ್ದವನ್ನು ಕೇಳಿ ಮನೋವೇಗ ವಾಯುವೇಗದಿಂದ ಯಮನೇ ಬರುವ ಹಾಗೆ ಬಂದು ತಾಗಿದನು. ಅಕ್ಷೋಹಿಣೀಸೈನ್ಯದ ಒಡೆಯನಾದ ದಂಡಧಾರನು ಪೌರುಷಗುಣಕ್ಕೆ ಆಶ್ರಯವಾಗಿ ಮದೋದಕವು ಸುರಿಯುತ್ತಿರುವ ಕಪೋಲವುಳ್ಳ ಮದ್ದಾನೆಯನ್ನು ತಿವಿದು ಛೂಬಿಟ್ಟನು. ೮೭. ಅರ್ಜುನನೊಡನೆ ಕಾದಲು ಎದುರಿಸಿ ಬಂದ ಶತ್ರುವು ದುಂಬಿಗೆ ಎದುರಾದ ಸಂಪಗೆಯ ಹೂವಿನಂತೆ ದೂರವಾಯಿತು. ಇದೊಂದೇ ಆನೆಯೊಡನೆ ಇವನೊಬ್ಬನೆ ಪ್ರತಿಭಟಿಸಿದರೇನಾಯಿತು. ಇದಕ್ಕೆ ಪರಿಹಾರವನ್ನು ನಾನು ತಿಳಿದಿದ್ದೇನೆ ಎಂದು ಕೋಪಿಸಿ ಹೊಡೆಯಲು ಅರ್ಜುನನಿಂದ ದಂಡಧಾರನ ಶರೀರದೊಡನೆ ಆ ಆನೆಯು ಸೌಳೆಂದು ಸೀಳಿ ವಿಭಾಗಿಸಿದ ಹಾಗಾಯಿತು. ವ॥ ಹಾಗೆ ಅವನು ಯಮನ ಮನೆಯನ್ನು ಸೇರಲಾಗಿ ೮೮. ಇನ್ನು ಸ್ವಲ್ಪ ಕಾಲವಿದ್ದರೆ ಯುದ್ಧದಲ್ಲಿ ಅರ್ಜುನನು ನನ್ನ ಮಗನಾದ ಕರ್ಣನನ್ನೂ ಸಾಯಿಸುತ್ತಾನೆ. ಇದನ್ನು ನಾನು ನೋಡಲಾರೆ ಎನ್ನುವ ಹಾಗೆ ಅಷ್ಟರಲ್ಲಿ ಸೂರ್ಯನು ಮುಳುಗಿದನು. ವ॥ ಯುದ್ಧವನ್ನು ನಿಲ್ಲಿಸಲು ಸೂಚನೆಕೊಡುವ ವಾದ್ಯವನ್ನು ಬಾಜಿಸಲು ಎರಡು ಸೈನ್ಯಗಳೂ ತಮ್ಮ ತಮ್ಮ ಬೀಡುಗಳಿಗೆ ತೆರಳಿದುವು. ಆಗ ದುರ್ಯೋಧನನಲ್ಲಿಗೆ ಕರ್ಣನು ಬಂದು ಅಶ್ವಶಾಸ್ತ್ರವನ್ನು ಚೆನ್ನಾಗಿ ತಿಳಿದ ಭೀಷ್ಮರು ತಿಳಿಸಿದ ಮಾತನ್ನು ರಹಸ್ಯವಾಗಿ ತಿಳಿಸಿದನು. ಮುಕ್ಕಣ್ಣನಾದ ಈಶ್ವರನಲ್ಲಿ ಕಲಿತ

ತ್ರಿಣೇತ್ರನೊಳ್ ಕಲಶ್ವಹೃದಯದೊಳಂ ರಥಕಲ್ಪದೊಳಂ ಶಲ್ಯಂ ಮುರಾಂತಕಂಗಂ ಪ್ರವೀಣನಪ್ಪುದಱಿಂದಾತನನೆಂತಾನುಮೊಡಂಬಡೆ ನುಡಿದು ನಿನಗೆ ಸಾರಥಿ ಮಾಡುವೆನೆಂದು ದಿನಕರತನೂಜನಂ ಬೀಡಿಂಗೆ ಪೋಗಲ್ವೇೞ್ದು ಪೊನ್ನ ಪಣ್ಣುಗೆಯ ಪಿಡಿಯನೇಱೆ ದಿನಕರನ ಬಟೆದಪ್ಪಿದ ಕಿರಣಂಗಳ್ ಕಟ್ಟಲೆಯಂ ಕಂಡಳ್ಕಿ ತನ್ನ ಮಱೆಯಂ ಪೊಕ್ಕಂತೆ ಕೆಯ್ದೀವಿಗೆಗಳ್ ಬೆಳಗೆ ಕಿಱಿದಾನುಂ ಮಾನಸರ್ವೆರಸು ರಾಜರಾಜಂ ಮದ್ರರಾಜನ ಮನೆಗೆ ಬರ್ಪುದುಮಾತನತ್ಯಂತ ಸಂಭ್ರಮಾಕ್ರಾಂತಹೃದಯನಾಗಿ ಬೇಗಮಿದಿರೇೞೆ-

ಮಲ್ಲಿಕಾಮಾಲೆ ॥ ಅಂತೆ ಕುಳ್ಳಿರಿರಪ್ಪೊಡಿಂ ನಿಮಗಾಣೆಯೆಂದಿರವೇಟ್ಟೆಳಾ
ಕಾಂತನುಂ ತೊಡೆಸೋಂಕ ಕುಳ್ಳಿರೆ ಬಾೞ್ತೆಯುಳ್ಳೊಡೆ ನೀನೆ ಬ
ರ್ಪಂತುಟಾದುದೆ ಪೇೞಿ ನೀಂ ಬಟೆಯಟ್ಟಲಾಗದೆ ಕೆಮ್ಮನಿ
ನ್ನೆಂತುಮೇಂ ಮನೆವಾೞ್ತೆಯಂ ಬೆಸಸಲ್ಕೆ ಬಂದೆಯಿಳಾಧಿಪಾ ॥ ೮೯

ಕಂ॥ ಬೆಸಸೆನೆಯುಂ ನುಡಿಯಲ್ ಶಂ
ಕಿಸಿದಪೆ ನಾನೆಂದೊಡೇಕೆ ಶಂಕಿಸುವೈ ನೀಂ ।
ಬೆಸವೇೞೆನೆ ಜಯವಧು ಕೂ
ರ್ತೊಸೆದಿರ್ಕುಂ ಮಾವ ನಿಮ್ಮ ದಯೆಯಿಂದೆಮ್ಮಂ ॥ ೯೦

ಕಂ॥ ಪುಸಿಯೆನೆ ರಥಮಂ ಹರಿ ಚೋ
ದಿಸುವಂತೆವೊಲಿರ್ದದೆಂತು ನರನಂ ಗೆಲಿಪಂ ।
ವಿಸಸನದೊಳಂತೆ ನೀಮುಂ
ಪೆಸರಂ ಕರ್ಣಂಗೆ ಮಾಡಿ ಗೆಲ್ಲಂಗೊಳ್ಳಿಂ ॥ ೯೧

ಅಶ್ವಹೃದಯದಲ್ಲಿಯೂ ರಥಕಲ್ಪದಲ್ಲಿಯೂ ಶಲ್ಯನು ಶ್ರೀಕೃಷ್ಣನಿಗಿಂತಲೂ ಹೆಚ್ಚು ತಿಳಿದವನಾದುದರಿಂದ ಅವನನ್ನು ಹೇಗಾದರೂ ಮಾಡಿ ಒಪ್ಪುವ ಹಾಗೆ ಮಾಡಿ ನಿನಗೆ ಸಾರಥಿಯನ್ನಾಗಿ ಮಾಡುತ್ತೇನೆ ಎಂದು ಕರ್ಣನನ್ನು ಬೀಡಿಗೆ ಹೋಗಹೇಳಿದನು. ಚಿನ್ನದಿಂದ ಅಲಂಕಾರಮಾಡಿದ ಹೆಣ್ಣಾನೆಯನ್ನು ಹತ್ತಿಕೊಂಡು ಸೂರ್ಯನ ದಾರಿಯನ್ನು ತಪ್ಪಿದ ಕಿರಣಗಳು ಕತ್ತಲೆಯನ್ನು ಕಂಡು ಹೆದರಿ ತನ್ನ ಆಶ್ರಯವನ್ನು ಪ್ರವೇಶಿಸಿದ ಹಾಗೆ ಕೈದೀವಟಿಗೆಗಳು ಪ್ರಕಾಶಿಸಲು ಕೆಲವೇ ಪರಿಜನರೊಡನೆ ದುರ್ಯೋಧನನು ಮದ್ರರಾಜನಾದ ಶಲ್ಯನ ಮನೆಗೆ ಬಂದನು. ಅವನು ಅತ್ಯಂತ ಸಂಭ್ರಮದಿಂದ ಕೂಡಿದ ಮನಸ್ಸುಳ್ಳವನಾಗಿ ವೇಗದಿಂದ ಇದಿರಾಗಿ ಎದ್ದು ಬಂದನು- ೮೯. ಹಾಗೆಯೇ ಕುಳಿತುಕೊಳ್ಳಿ; ಇರದಿದ್ದರೆ ನಿಮ್ಮ ಮೇಲಾಣೆಯೆಂದು ಕುಳಿತುಕೊಂಡೇ ಇರಬೇಕೆಂದು ಹೇಳಿ ರಾಜನ ತೊಡೆಸೋಂಕಿನಷ್ಟು ಹತ್ತಿರ ಕುಳಿತುಕೊಂಡನು. "ಕಾರ್ಯವಿದ್ದರೆ ನೀನೇ ಬರುವ ಹಾಗಾಯಿತೇ ಹೇಳು, ನೀನು ದೂತರ ಮೂಲಕ ಹೇಳಿ ಕಳುಹಿಸ ಬಾರದಾಗಿತ್ತೇ? ಸುಮ್ಮನೆ ಇನ್ನು ನೀನೇ ಬಂದಮೇಲೆ ಹೇಗೆ? ರಾಜನೇ ಯಾವ ಗೃಹಕೃತ್ಯದ ಮಾತನ್ನು ತಿಳಿಸುವುದಕ್ಕೆ, ಆಜ್ಞೆ ಮಾಡುವುದಕ್ಕೆ ಬಂದಿರುವೆ" ೯೦. ಹೇಳು, ಎಂದರೂ 'ನುಡಿಯುವುದಕ್ಕೆ ನಾನು ಸಂದೇಹಪಡುತ್ತೇನೆ' ಎನ್ನಲು 'ಏಕೆ ಶಂಕಿಸುತ್ತೀಯೆ. ಆಜ್ಞೆಮಾಡು' ಎನ್ನಲು, 'ಮಾವ, ಜಯಲಕ್ಷ್ಮಿಯು ನಿಮ್ಮ ದಯೆಯಿಂದ ನಮ್ಮನ್ನು ಪ್ರೀತಿಸಿ ಅನುರಾಗದಿಂದಿರುತ್ತಾಳೆ' ೯೧. ಕೃಷ್ಣನು ಅರ್ಜುನನ ತೇರನ್ನು

ವ|| ಎಂಬುದುಂ ಮದ್ರರಾಜನುಮ್ಮಚ್ಚರದೊಳುಮ್ಮನೆ ಬೆಮರ್ತು ಕಿನಿಸಿ ಕಿಂಕಿಱಿ ವೋಗಿ-

ಚಂ|| ಕಲಿಯನೆ ಪಂದೆ ಮಾೞ್ಪ ಕಡುಪಂದೆಯನೊಳ್ಗಲಿ ಮಾೞ್ಪ ತಕ್ಕನಂ
ಪೊಲೆಯನೆ ಮಾೞ್ಪ ಮುಂ ಪೊಲೆಯನಂ ನೆಱೆ ತಕ್ಕನೆ ಮಾೞ್ಪ ತಮ್ಮೊಳ |
ಗ್ಗಲಿಸಿ ಪೊದಱ್ದ ಪರ್ವಿದವಿವೇಕತೆಯಿಂ ನೃಪಚಿತ್ತವೃತ್ತಿ ಸಂ
ಚಲಮದಱಿಂದಮೋಲಗಿಸಿ ಬಾೞ್ವುದೆ ಕಷ್ಟಮಿಳಾಧಿನಾಥರಂ || ೯೨

ಅನುಪಮ ವಿಕ್ರಮಕ್ರಮಮುದಾರಗುಣಂ ಋತವಾಕ್ಯಮೆಂಬ ಪೆಂ
ಪೆನಲಿವು ಮೂಱೆ ನಾಲ್ಕೆ ಗುಣಮತ್ತ ಮದಾನ್ವಿತರಾಜಬೀಜಸಂ |
ಜನಿತಗುಣಂ ಮದಂ ಮದಮನಾಳ್ದವಿವೇಕತೆಯಿಂದಮಲ್ತೆ ತೊ
ಟ್ಟೆನ ಮೊಲೆವಾಲನುಂಡ ಗುಣಮಿಂತಿವನಾರ್ ಕಿಡಿಪರ್ ನರೇಂದ್ರರೊಳ್|| ೯೩

ಉ|| ಪಿಂದೆ ಕಡಂಗಿ ತೇರನೆಸಗೆಂಬವನಂಬಿಗನಾಜಿ ರಂಗದೊಳ್
ಮುಂದೆ ಸಮಾನನಾಗಿ ಬೆಸದಿರ್ಪವನುಂ ತುಱುಕಾಱನಾಗೆ ಮ |
ತ್ಸ್ಯಂದನಚೋದನಕ್ರಮಮದುಂ ಪೊಲೆಯಂಗಮರ್ದಿರ್ಕುಮಂತುಟಂ
ನೀಂ ದಯೆಗೆಯ್ದು ಪೇೞ್ದಿಯಿದನಾರ್ ಪಡೆವರ್ ಫಣಿರಾಜಕೇತನಾ | ೯೪

ನಡೆಸುವವನಂತೆ ನಟಿಸಿಕೊಂಡಿದ್ದು ಅರ್ಜುನನು ಗೆಲ್ಲುವಂತೆ ಹೇಗೆಮಾಡುವನೋ ಹಾಗೆಯೆ ಯುದ್ಧರಂಗದಲ್ಲಿ ನೀವೂ ಕೂಡ ಕರ್ಣನಿಗೆ ಹೆಸರನ್ನುಂಟುಮಾಡಿ ಗೆಲುವನ್ನು ಸಂಪಾದಿಸಿ ಕೊಡಬೇಕು' ವ|| ಎನ್ನಲು ಶಲ್ಯನು ಕೋಪದಿಂದ ಬಿಸಿಬಿಸಿಯಾಗಿ ಬೆವರಿ ಕೆರಳಿ ಕಿಡಿ ಕಿಡಿಯಾದನು. ೯೨. ಶೂರನನ್ನು ಹೇಡಿಯಾಗಿ ಮಾಡುವ, ಪೂರ್ಣಹೇಡಿಯನ್ನು ಉತ್ತಮಶೂರನನ್ನಾಗಿ ಮಾಡುವ, ಯೋಗ್ಯನನ್ನು ಹೊಲೆಯನನ್ನಾಗಿ ಮಾಡುವ, ಮೊದಲು ಹೊಲೆಯನಾಗಿದ್ದವನನ್ನು ಪೂರ್ಣಯೋಗ್ಯನನ್ನಾಗಿ ಮಾಡುವ, ತಮ್ಮಲ್ಲಿ ಅತ್ಯಧಿಕವಾಗಿ ಹಬ್ಬಿರುವ ಅವಿವೇಕತೆಯಿಂದ ರಾಜರ ಮನಸ್ಸಿನ ಸ್ಥಿತಿ ಬಹಳ ಚಂಚಲವಾದುದು. ಆದುದರಿಂದ ರಾಜರನ್ನು ಸೇವೆ ಮಾಡಿ ಬಾಳುವುದೇ ಕಷ್ಟ. ೯೩. ಅಸಮಾನವಾದ ಪರಾಕ್ರಮದ ರೀತಿ, ಔದಾರ್ಯಗುಣ, ನೇರವಾದ ಸತ್ಯವಾಕ್ಕು, ಇವು ಮೂರು ನಾಲ್ಕೇ ಗುಣಗಳು. ಇದು ಒಂದು ಕಡೆಯಾದರೆ ಇನ್ನೊಂದು ಕಡೆ ರಾಜವಂಶದಲ್ಲಿ ಹುಟ್ಟಿದ ಗುಣ (ವಂಶಮದ) ಅಹಂಕಾರ, ಅಹಂಕಾರದಿಂದ ಕೂಡಿದ ಅವಿವೇಕತೆ, ಇದರೊಡನೆ ಕೂಡಿದ ದಾದಿಯ ಮೊಲೆಹಾಲನ್ನು ಕುಡಿದ ಗುಣ ಇವುಗಳಲ್ಲವೇ? ೯೪. ಹಿಂದುಗಡೆ ಉತ್ಸಾಹದಿಂದ ಕೂಡಿ ತೇರನ್ನು ನಡೆಸು ಎನ್ನುವವನು ಅಂಬಿಗ, ಯುದ್ಧದಲ್ಲಿ ಮುಂಭಾಗದಲ್ಲಿ ನನಗೆ ಸಮಾನನಾಗಿ (ಸಾರಥಿಯಾಗಿ) ಕೆಲಸದಲ್ಲಿರುವವನು ದನಕಾಯುವವನು (ಗೋವಳಿಗ). ರಥವನ್ನು ನಡೆಸುವ ನನ್ನ ರೀತಿಯದು ಹೊಲೆಯನಿಗೆ ಸರಿಯಾದುದಾಗಿ ಒಪ್ಪಿರಲು ಅಷ್ಟನ್ನು ನೀನು ದಯಮಾಡಿ ಹೇಳಿದೆಯಲ್ಲ ದುರ್ಯೋಧನ ಇಂತಹ ಅದೃಷ್ಟವನ್ನು ಯಾರು ತಾನೆ ಪಡೆಯುತ್ತಾರೆ?

ಕಂ॥ ಎನಿತೊಲ್ಲದಿರ್ದೊಡಂ ಸ
ಜ್ಜನರುಂ ಪತಿಹಿತರುಮಱಿಯವೇಳ್ಕುಂ ನೀನಿ ।
ನ್ನೆನಿತಂ ಕೂರದೊಡಂ ನಿ
ನ್ನ ನುಡಿಯನಾನಾಜಿರಂಗದೊಳ್ ಮೀಱುವೆನೇ ॥ ೯೫

ವ॥ ಎಂದು ನೊಂದು ನುಡಿದ ಮದ್ರರಾಜನ ನುಡಿಗೆ ಫಣಿರಾಜಕೇತನನಿಂತೆಂದಂ-

ಕಂ॥ ನೀಮೆನಗಿನಿತಂ ಕೆಮ್ಮನೆ
ಮಾಮ ಮನಂ ನೊಂದು ಬೆಸಸಿದಿರ್ ಬಿನ್ನಪಮಂ ।
ನೀಮವಧಾರಿಸಿಮೆಂತೆನೆ
ಸಾಮಾನ್ಯದ ಮನುಜನಲ್ಲನಂಗಮಹೀಶಂ ॥ ೯೬

ಕುಲಹೀನನನೆ ಅಪ್ಪೊಡೆ ಕೇ
ವಲಬೋಧಂ ಪರಶುರಾಮನೇನೀಗುಮೆ ನಿ ।
ರ್ಮಲಿನಕುಲಂಗಲ್ಲದೆ ಪಿಡಿ
ಯಲಲ್ಲದಂತಪ್ಪ ದಿವ್ಯಬಾಣಾವಳಿಯಂ ॥ ೯೭

ಮಣಿಕುಂಡಲಮುಂ ಕವಚಂ
ಮಣಿಯದ ಚಾರಿತ್ರಮುಗ್ರತೇಜಮುಮೀಯೊ ।
ಳ್ಗುಣಮುಂ ಕಲಿತನಮುಮವೇಂ
ಪ್ರಣತಾರೀ ಸೂತಸುತನೊಳೊಡವುಟ್ಟುಗುಮೇ ೯೮

ಕಲಿತನದ ನೆಗಟ್ದಿ ಕಸವರ
ಗಲಿತನದ ಪೊದಟ್ದ ಪರಮಕೋಟಿಗೆ ಪೆಱರಾರ್ ।
ಸಲೆ ಕರ್ಣನಲ್ಲದೆನಿಸುವ
ಕಲಿತನಮಂ ಹರಿಗೆ ಕವಚಮಿತ್ತುದೆ ಪೇಳ್ಗುಂ ॥ ೯೯

೯೫. ಎಷ್ಟು ಮನಸ್ಸಿಗೆ ಒಪ್ಪದಿದ್ದರೂ ಸತ್ಪುರುಷರೂ ಪತಿಗೆ ಹಿತರಾದವರೂ ಒಪ್ಪಬೇಕು ತಾನೇ? ನೀನು ಇನ್ನೆಷ್ಟು ಪ್ರೀತಿಸದಿದ್ದರೂ ನಿನ್ನ ಮಾತನ್ನು ನಾನು ಯುದ್ಧರಂಗದಲ್ಲಿ ಮೀರುತ್ತೇನೆಯೇ? ವ॥ ಎಂದು ವ್ಯಥೆಯಿಂದ ಆಡಿದ ಶಲ್ಯನ ಮಾತಿಗೆ ದುರ್ಯೋಧನನು ಹೀಗೆಂದನು. ೯೬. ಮಾವ ನೀವು ನನಗೆ ಇಷ್ಟನ್ನು ಮನಸ್ಸಿನಲ್ಲಿ ವೃಥಾ ವ್ಯಥೆಪಟ್ಟು ಹೇಳಿದಿರಿ, ನನ್ನ ವಿಜ್ಞಾಪನೆಯನ್ನು ನೀವು ಲಾಲಿಸಿ. ಹೇಗೆಂದರೆ ಕರ್ಣನು ಸಾಮಾನ್ಯ ಮನುಷ್ಯನಲ್ಲ. ೯೭. ಕುಲಹೀನನೇ ಆಗಿದ್ದರೆ ಅಧ್ಯಾತ್ಮಜ್ಞಾನಿಯಾದ ಪರಶುರಾಮನು ಪರಿಶುದ್ಧವಾದ ಕುಲದವರಲ್ಲದವರು ಹಿಡಿಯಲಾಗದ ದಿವ್ಯಾಸ್ತ್ರಸಮೂಹವನ್ನು ಅವನಿಗೆ ಕೊಡುತ್ತಿದ್ದನೇ? ೯೮. ವಿಧೇಯರಾದ ಶತ್ರುಗಳನ್ನುಳ್ಳ ಎಲೈ ಶಲ್ಯನೇ ಮಣಿಕುಂಡಲವೂ ಕವಚವೂ ಬಗ್ಗದ ನಡತೆಯೂ ಉಗ್ರವಾದ ತೇಜಸ್ಸೂ - ಈ ಒಳ್ಳೆಯ ಗುಣ ಮತ್ತು ತೇಜಸ್ಸು ಇವು ಸೂತಪುತ್ರನಲ್ಲಿ ಜೊತೆಯಾಗಿ ಹುಟ್ಟುತ್ತವೆಯೇ? ೯೯. ಶೌರ್ಯದ ಮತ್ತು ಪ್ರಸಿದ್ಧವಾದ ಔದಾರ್ಯದ ಪರಾಕಾಷ್ಠತೆಗೆ ಸಲ್ಲಲು ಕರ್ಣನಲ್ಲದೆ ಮತ್ತಾರಿದ್ದಾರೆ ಎನ್ನಿಸುವ ಶೌರ್ಯವನ್ನು ಇಂದ್ರನಿಗೆ ಕವಚವನ್ನು

ವ॥ ಎಂದು ಕುರುಕುಲಚೂಡಾಮಣಿ ಶಲ್ಯನ ಹೃಚ್ಛಲ್ಯಮೆಲ್ಲಮುಂ ಕಟಲೆ ನುಡಿದೊಡಾತ ನಿಂತೆಂದಂ–

ಚಂ॥ ಅಜೆಯದೆಯುಂ ವಿಚಾರಿಸದೆಯುಂ ನೃಪ ನೀಂ ನೆಗಳ್ವನ್ನೆಯಲ್ಲೆಯಾ
ನಜೆವೆನದಂತೆ ಕರ್ಣನೆಣೆಗಂ ತೊಣೆಗಂ ನೃಪರಾರುಮಿಲ್ಲ ಬೆ ।
ಳ್ಕುಜೆ ರಿಪುಸೇನೆ ತೇರನೊಸೆದಾನೆಸಗುತ್ತಿರೆ ಕರ್ಣನಂ ಗೆಲಲ್
ನೆಜೆವರೆ ನಾಳೆ ಫಲ್ಗುಣನುಮಚ್ಯುತನುಂ ರಣರಂಗಭೂಮಿಯೊಳ್ ॥ ೧೦೦

ಕಂ॥ ಒಂದೆ ಗಡ ಹರಿಯ ಪೇಟ್ದೊಂ
ದಂದದೆ ನರನೆಸಗುವಂತೆ ಕರ್ಣನುಮೆನ್ನೆಂ ।
ದೊಂದೋಜೆಯೊಳೆಸಗದೊಡಾಂ
ಸ್ಯಂದನದಿಂದಿಟೆದು ಪೋಪೆನೆಸಗೆಂ ತೇರಂ ॥ ೧೦೧

ಎಂಬುದುಮಂಗಮಹೀಪತಿ
ಯಂ ಬರಿಸಿ ಮಹಾಜಿಯಲ್ಲಿ ಮಾವಂ ತಾನೇ ।
ನೆಂಬನದನಂತೆ ಮೀಜದೊ
ಡಂಬಡು ನೀನೆಂದು ಭೂಭುಜಂ ಪ್ರಾರ್ಥಿಸಿದಂ ॥ ೧೦೨

ವ॥ ಅಂತಿರ್ವರುಮನೊರ್ವರೊರ್ವರೊಳೊಡಂಬಡಿಸಿ ತನ್ನೊಡನೆಟ್ದು ನಿಂದಿರ್ದ ಮದ್ರರಾಜನನಿರಲ್ವೇಟ್ದು ಕರ್ಣನುಂ ತಾನುಂ ನಿಜನಿವಾಸಂಗಳ್ಗೆ ಪೋದರಾಗಳಾ ಪಡೆಮಾತನಜಾತಶತ್ರು ಕೇಳ್ದು ಮುರಾಂತಕಂಗೆ ಬಟೆಯನಟ್ಟಿ ಬರಿಸಿ–

ಕೊಟ್ಟಿದ್ದೇ ಹೇಳುತ್ತದೆ. ವ॥ ಎಂದು ಕುರುಕುಲಚೂಡಾಮಣಿಯಾದ ದುರ್ಯೋಧನನು ಶಲ್ಯನ ಹೃದಯದ ನೋವೆಲ್ಲವೂ ಸಡಿಲವಾಗುವಂತೆ ಹೇಳಲು ಅವನು ಹೀಗೆಂದನು. ೧೦೦. ರಾಜನೇ ನೀನು ತಿಳಿಯದೆಯೂ ವಿಚಾರಮಾಡದೆಯೂ ಕಾರ್ಯ ಮಾಡುವಂಥವನಲ್ಲ. ಅದನ್ನು ನಾನು ಬಲ್ಲೆ.ಕರ್ಣನಿಗೆ ಸಮಾನರಾದ ರಾಜರಾರೂ ಇಲ್ಲ. ಶತ್ರುಸೈನ್ಯಕ್ಕೆ ಭಯವಾಗುವ ರೀತಿಯಲ್ಲಿ ನಾನು ಪ್ರೀತಿಯಿಂದ (ಮನಃಪೂರ್ವಕವಾಗಿ) ತೇರನ್ನು ನಡೆಸುತ್ತಿದ್ದರೆ ನಾಳೆ ಕೃಷ್ಣನೂ ಅರ್ಜುನನೂ ಯುದ್ಧಭೂಮಿಯಲ್ಲಿ ಕರ್ಣನನ್ನು ಗೆಲ್ಲಲು ಸಮರ್ಥರಾಗುತ್ತಾರೆಯೇ? ೧೦೧. ಆದರೆ ಒಂದು ವಿಷಯ, ಕೃಷ್ಣನು ಹೇಳಿದ ರೀತಿಯಲ್ಲಿ ಅರ್ಜುನನು ಮಾಡುವಂತೆ ಕರ್ಣನೂ ನಾನು ಹೇಳಿದ ಕ್ರಮದಲ್ಲಿ ಮಾಡದೇ ಹೋದರೆ ತೇರನ್ನು ಇಳಿದು ಹೋಗುತ್ತೇನೆ. ತೇರನ್ನು ನಡೆಸುವುದಿಲ್ಲ. ೧೦೨. ಎನ್ನಲು ಕರ್ಣನನ್ನು ಬರಮಾಡಿ ಈ ಮಹಾಯುದ್ಧದಲ್ಲಿ ಮಾವನು ತಾನೇನು ಹೇಳುತ್ತಾನೆಯೋ ನೀನು ಅದನ್ನು ಹಾಗೆಯೇ ಮೀರದೆ ಒಪ್ಪಿಕೊ ಎಂದು ಮಹಾರಾಜನು ಪ್ರಾರ್ಥಿಸಿದನು. ವ॥ ಹಾಗೆ ಇಬ್ಬರನ್ನೂ ಒಬ್ಬರನ್ನೊಬ್ಬರು ಒಪ್ಪುವ ಹಾಗೆ ಮಾಡಿ ತನ್ನೊಡನೆ ಎದ್ದು ನಿಂತಿದ್ದ ಶಲ್ಯನನ್ನು ಅಲ್ಲಿಯೇ ಇರಲು ಹೇಳಿ ಕರ್ಣನೂ ತಾನೂ ತಮ್ಮ ಮನೆಗಳಿಗೆ ಹೋದರು. ಈ ಸಮಾಚಾರವನ್ನು ಧರ್ಮರಾಯನು ಕೇಳಿ ಕೃಷ್ಣನಲ್ಲಿಗೆ ದೂತರನ್ನು ಕಳುಹಿಸಿ ಬರಮಾಡಿ

ಚಂ॥ ಗೆಲಲರಿದುಂತೆ ಸೂತಸುತನಂ ರಣರಂಗದೊಳೆಂಬುದೊಂದು ಪಂ
ಬಲೆ ಪಿರಿದಂತವಂಗೊಸೆದು ತೇರೆಸಪಂ ಗಡ ನಾಳೆ ಶಲ್ಯನೀ ।
ಕಲಹಮಿದೆಂತು ದಲ್ ಬಿದಿರ ಗಂಟುಗಳಂ ಕಳೆವಂತೆ ಮನ್ಮನಃ
ಸ್ಖಲನೆಯನುಂಟುಮಾಡಿದಪುದಿಲ್ಲಿಗೆ ಕಜ್ಜಮದಾವುದಚ್ಯುತಾ ॥ ೧೦೩

ವ॥ ಎಂಬುದುಂ ನೀನೆಂದಂತೆ ರಥಕಲ್ಪಮೆಂಬುದು ಶಲ್ಯಂಗೊಡವುಟ್ಟಿದುದಾದೊಡ ಮವರಿರ್ವರ್ಗಮೊರ್ವರೊರ್ವರೊಳ್ ಮೂಗುದುಱಿಸಲಾಗದ ಕಡ್ಡಮವರ್ಗೆಂತುಮೊಡಂಬಡಾಗದ ದಲ್ಲದೆಯುಂ-

ಸ್ರ ॥ ಕರ್ಣಂಗಂಡಲ್ತೆ ಕಲ್ತರ್ ನುಡಿವ ಪಸುಗೆಯಂ ಗಂಡರಾ ಗಂಡವಾತುಂ
ಕರ್ಣಂ ಮುಂ ಪುಟ್ಟೆ ಪುಟ್ಟಿತ್ತಳವಮದರ್ೊಡವುಟ್ಟಿತ್ತು ಪೂರ್ಣ್ದೇವ ಚಾಗಂ ।
ಕರ್ಣಂಗೊಡ್ಡಿತ್ತು ದಲ್ ಭಾರತಮನೆ ಜಗದೊಳ್ ಸಂದನೇಂ ಸಂದೊಡಾಂತಾ
ಕರ್ಣಾಂತಾಕೃಷ್ಟ ಬಾಣಾವಳಿಯೊಳೆ ಹರಿಗಂ ಕರ್ಣನಂ ನಾಳೆ ಕೊಲ್ಗುಂ । ೧೦೪

ಕಂ॥ ಎಂಬಿನೆಗಮಾಗಳಾ ವಿಕ
ಚಾಂಬುಜಸೌರಭಮನೊಸೆದು ಸೇವಿಸುವಾ ಪೆ
ಣ್ದುಂಬಿಗಳ ಸರಮನೆತ್ತಿ ತ
ಱುಂಬುತ್ತುಂ ಬಂದುದಾ ಪ್ರಭಾತಸಮೀರಂ ॥ ೧೦೫

೧೦೩. ಯುದ್ಧರಂಗದಲ್ಲಿ ಕರ್ಣನನ್ನು ಸುಮ್ಮನೆ (ಯಾರ ಸಹಾಯವಿಲ್ಲದೆ ಏಕಾಕಿಯಾಗಿರುವಾಗಲೇ) ಗೆಲ್ಲಲು ಸಾಧ್ಯವಿಲ್ಲವೆಂಬ ಚಿಂತೆಯೇ ಹಿರಿದಾಗಿದೆ. ಅಂತಹ ಅವನಿಗೆ ನಾಳೆ ಪ್ರೀತಿಯಿಂದ ಶಲ್ಯನು ತೇರನ್ನು ನಡೆಸುತ್ತಾನಂತೆ. ಈ ಯುದ್ಧದಲ್ಲಿ ನಾವು ಹೇಗೆ ಗೆಲ್ಲುವುದು? ಬಿದಿರಿನ ಗಿಣ್ಣುಗಳನ್ನು ಒಡೆಯುವಂತೆ ನನ್ನ ಮನಸ್ಥೈರ್ಯವನ್ನು ಕದಲಿಸುತ್ತಿದೆ. ಕೃಷ್ಣ, ಈ ಸಮಯದಲ್ಲಿ ಮಾಡಬೇಕಾದ ಕಾರ್ಯವಾವುದು? ವ॥ ಎನ್ನಲು ನೀನು ಹೇಳಿದಂತೆ ರಥವಿದ್ಯೆಯೆಂಬುದು ಶಲ್ಯನ ಜೊತೆಯಲ್ಲಿ ಹುಟ್ಟಿದುದಾದರೂ ಅವರಿಬ್ಬರಿಗೂ ಒಬ್ಬೊಬ್ಬರಲ್ಲಿ ಮೂಗುತುರಿಸಿ ಕೊಳ್ಳುವುದಕ್ಕಾಗದ ದ್ವೇಷಾಸೂಯೆಗಳಿವೆ. ಅವರಿಗೆ ಯಾವತ್ತೂ ಒಪ್ಪಿಗೆ ಯೆಂಬುವುದಾಗುವುದಿಲ್ಲ. ಅಲ್ಲದೆಯೂ ೧೦೪. ಶೂರರಾದವರು ಕರ್ಣನನ್ನು ನೋಡಿಯಲ್ಲವೇ ಮಾತನಾಡುವ ವಿವೇಕವನ್ನು ಕಲಿತರು. ಆ ಪೌರುಷಯುಕ್ತವಾದ ಮಾತುಗಳು ಕರ್ಣನು ಹುಟ್ಟಿದ ಮೇಲೆಯೇ ಹುಟ್ಟಿದುವು. ಪ್ರತಾಪಸಹಿತವಾದ ತ್ಯಾಗವೂ ಅವನೊಡನೆಯೇ ಸೇರಿಕೊಂಡು ಹುಟ್ಟಿದುವು. ಭಾರತಯುದ್ಧವೂ ಕರ್ಣನಿಗಾಗಿಯೇ ಒಡ್ಡಿದೆ ಎಂಬ ಜಗತ್ಪ್ರಸಿದ್ಧಿಯನ್ನು ಪಡೆದಿದ್ದಾನೆ. ಏನು ಪಡೆದಿದ್ದರೇನು? ಹರಿಗನಾದ ಅರ್ಜುನನು ನಾಳೆ ಕಿವಿಯವರೆಗೆ ಸೆಳೆದ ತನ್ನ ಬಾಣಸಮೂಹದಿಂದಲೇ ಕರ್ಣನನ್ನು ಕೊಲ್ಲುವನು. ೧೦೫. ಎನ್ನುವಷ್ಟರಲ್ಲಿ ಆ ಅರಳಿದ ಕಮಲದ ಸುವಾಸನೆಯನ್ನು ಸಂತೋಷದಿಂದ ಸೇವಿಸುವ (ಆಘ್ರಾಣಿಸುವ) ಪೆಣ್ದುಂಬಿಗಳ ಸ್ವರವನ್ನು ಎಬ್ಬಿಸಿ ಅಟ್ಟುತ್ತಾ ಪ್ರಾತಃಕಾಲದ ಮಾರುತವು ಬೀಸಿತು.

ಸೂತ ನಟ ವಂದಿ ಮಾಗಧ
ವೈತಾಳಿಕ ಕಥಕ ಪುಣ್ಯಪಾಠಕ ವಿಪ್ರೋ ।
ದ್ಭೂತರವಮೆಸೆಯೆ ಜಯ ಜಯ
ಗೀತಿಗಳೊರ್ಮೊದಲೆ ತಡೆಯದೆರಡುಂ ಪಡೆಯೊಳ್ ॥ ೧೦೬

ಎರಡುಂಪಕ್ಕಮನೆಜಗಿದ
ಕರಿಗಳ್ ಪಾರ್ದೆಯ್ದೆ ವೇಟ್ಪ ಕೊರಲ ಸರಂಬೆ ।
ತ್ತಿರೆ ಮುರಿವಿಟ್ಟೀಹೇಷಾ
ಸ್ವರಮಂ ತೋಱಿದಪುವಲ್ಲಿ ನೃಪ ತುರಗಂಗಳ್ ॥ ೧೦೭

ಇಂದೆನ್ನ ಮಗನನರ್ಜುನ
ನೊಂದುಂ ತಳ್ವಿಲ್ಲದಟೆವನವನಂ ನೀಂ ಕಾ ॥
ಯೆಂದು ಸುರಪತಿಯ ಕಾಲ್ವಿಡಿ
ವಂದಮನಿಟೆಸಿದುವು ಪಸರಿಪಿನಕಿರಣಂಗಳ್ ॥ ೧೦೮

ವ॥ ಆಗಳಂಗರಾಜಂ ತನ್ನಂ ಪರಿಚ್ಛೇದಿಸಿ ನೇಸಱ್ ಮೂಡೆಯಾಜ್ಯಾವೇಕ್ಷಣಂಗೆಯ್ದು ಸವತ್ಸ ಸುರಭಿಯನಭಿವಂದಿಸಿ ನಿಜ ರಥ ತುರಗ ದಿವ್ಯಾಸ್ತ್ರಂಗಳುಟೆಯೆ ಪಸುರ್ಮಣಿಯನಪ್ಪೊಡ ಮುಟೆಯದಂತು ಚಾಗಂಗೆಯ್ದು ಚಾಗ ಬೀರದ ಪಟಯಿಗೆಯನೆತ್ತಿಸಿ ಪಂಚರತ್ನಗರ್ಭಂಗಳಪ್ಪ ಮಂಗಳಜಳಂಗಳಂ ಮಿಂದು ಮೆಯ್ಯನಾಱಿಸಿ ದುಕೂಲಾಂಬರಮನುಟ್ಟು ಪೊಸವಾವುಗೆಯಂ

೧೦೬. ಪೌರಾಣಿಕರು, ನಟುವರು, ಹೊಗಳುಭಟರು, ಸ್ತುತಿಪಾಠಕರು, ಹಾಡುವವರು, ಕತೆಹೇಳುವವರು, ಮಂಗಳಪಾಠಕರು, ಬ್ರಾಹ್ಮಣರು ಮೊದಲಾದವರಿಂದ ಎದ್ದ ಜಯಜಯಮಿಶ್ರವಾದ ಗೀತೆಗಳು ಎರಡುಸೈನ್ಯದಲ್ಲಿಯೂ ಸಾವಕಾಶಮಾಡದೆ ಒಟ್ಟಿಗೆ ಪ್ರಕಾಶಿಸಿದುವು. ೧೦೭. ಎರಡು ಪಕ್ಷದಲ್ಲಿಯೂ ಮೇಲೆಬಿದ್ದ (ಮುತ್ತಿದ) ಆನೆಗಳು ನಿಟ್ಟಿಸಿ ಕುಗ್ಗಿದ ಕೊರಳಸ್ವರದಿಂದ ಕೂಡಿರಲು ರಾಜಾಶ್ವಗಳು ಆಹಾರವನ್ನು ಬಿಟ್ಟು ಕೆನೆಯುತ್ತಿರುವುವು. (ಇವು ಅಪಶಕುನದ ಸೂಚನೆಗಳು). ೧೦೮. ಈ ದಿನ ನನ್ನ ಮಗನಾದ ಕರ್ಣನನ್ನು ಅರ್ಜುನನು ಸ್ವಲ್ಪವೂ ಸಾವಕಾಶವಿಲ್ಲದೆ ನಾಶಮಾಡುವನು. ಅವನನ್ನು ನೀನು ಕಾಪಾಡು ಎಂದು ಇಂದ್ರನ ಕಾಲನ್ನು ಹಿಡಿಯುವ ರೀತಿಯನ್ನು ಪ್ರಸರಿಸುತ್ತಿರುವ ಸೂರ್ಯನ ಕಿರಣಗಳು ಕೀಳ್ಮಾಡಿದುವು. ವ॥ ಆಗ ಕರ್ಣನು ತಾನು ನಿಶ್ಚೈಸಿಕೊಂಡು ಸೂರ್ಯೋದಯವಾಗಲು ತುಪ್ಪದಲ್ಲಿ ತನ್ನ ಮುಖಬಿಂಬವನ್ನು ನೋಡಿ ಕರುವಿನಿಂದ ಕೂಡಿದ ಗೋವನ್ನು ಪೂಜಿಸಿದನು. ತನ್ನ ತೇರು, ಕುದುರೆ, ದಿವ್ಯಾಸ್ತ್ರಗಳನ್ನು ಬಿಟ್ಟು ಒಂದು ಹಸಿರು ಮಣಿಯೂ ಉಳಿಯದಂತೆ ದಾನಮಾಡಿ ತ್ಯಾಗವೀರದ ಧ್ವಜವನ್ನು ಎತ್ತಿ ಕಟ್ಟಿದನು. ಪಂಚರತ್ನಗಳಿಂದ ಕೂಡಿದ ಮಂಗಳತೀರ್ಥಗಳಲ್ಲಿ ಸ್ನಾನಮಾಡಿ ಶರೀರವನ್ನು ಒಣಗಿಸಿಕೊಂಡು ರೇಷ್ಮೆಯಂಥ ಬಟ್ಟೆಯನ್ನುಟ್ಟು ಹೊಸಪಾದುಕೆಗಳನ್ನು ಮೆಟ್ಟಿ ಚಿನ್ನದ ಉತ್ತರೀಯವನ್ನೂ ಕಟಿಸೂತ್ರವನ್ನೂ ಧರಿಸಿದನು. ಆಚಮನಮಾಡಿ ಚಿನ್ನದ ಕಮಲಗಳಿಂದ ಸೂರ್ಯನಿಗೆ ಅರ್ಘ್ಯವನ್ನೆತ್ತಿ ಕ್ಷೀರಸಮುದ್ರದ ಅಲೆಯ ನೊರೆಗೆ ಸಮಾನವಾದ

ಮೆಟ್ಟಿ ಕನಕಸಂವ್ಯಾನಸೂತ್ರಸಾಚಮಿಸಿ ಕನಕಕಮಳಂಗಳಿಂ ಕಮಳಾಕರಬಾಂಧವಂಗರ್ಘ್ಯಮೆತ್ತಿ ಪಾಲ್ಗಡಲ ತೆರೆಯ ನೊರೆಯ ದೊರೆಯ ದುಕೂಲಾಂಬರದೊಳಿಂಬಾಗಿ ಚಲ್ಲಣಮನುಟ್ಟು ಪುಡಿಗತ್ತುರಿಯಂ ತಲೆಯೊಳ್ ತೀವೆ ಪೊಯ್ದು ಪಸಿಯ ನೇತ್ರದಸಿಯ ಪಾಳೆಯೊಳ್ ತಲೆನವಿರಂ ಪಚ್ಚುಗಂಟಿಕ್ಕಿ ಮಣಿಮಯಮಕುಟಮಂ ಕವಿದು ತೋರ ನೆಲ್ಲಿಯ ಕಾಯಿಂ ಪಿರಿಯವಪ್ಪ ಮುತ್ತಿನ ಬ್ರಹ್ಮಸೂತ್ರಮನೆಲಲಿಕ್ಕಿ ಪಸದನಮನೆನಗಿಂದಿನಿತೆ ಎಂಬಂತೆ ನೆಱಿಯೆ ಕೆಯ್ಗೆಯ್ದು ಬಂದು ಮದ್ರರಾಜಂಗೆ ಪೊಡೆವಟ್ಟು ಸನ್ನಣಂಗಳನೆಲ್ಲಮನಾತಂಗೆ ನೆಱಿಯೆ ತುಡಿಸಿ-

ಕಂ॥ ತಿದಿಯುಗಿದು ಕೊಟ್ಟೆನೊಡವು
ಟ್ಟದ ಕವಚಮನಮರಪತಿಗೆ ಮುನ್ನಿನ್ನೆನಗೊ ।
ಪ್ಪದು ಮಱಿಯನಾಸೆವಡಲೆಂ
ದದಟನಣಂ ತುಡನೆ ಕವಚಮಂ ರಾಧೇಯಂ ॥ ೧೦೯

ವ॥ ಆಗಳ್ ಮದಗಜ ಕಕ್ಷಧ್ವಜ ವಿರಾಜಿತಮಪ್ಪ ತನ್ನ ಪೊನ್ನ ರಥಮಂ ಮದ್ರರಾಜನ ನೇಱಲ್ವೇಟ್ಟು ಮೂಱು ಸೂಟಿ್ ಬಲವಂದು ಪೊಡೆವಟ್ಟು ತನ್ನ ಸಗ್ಗಮನೇಱುವುದನನು ಕರಿಸುವಂತೇಱಿ ನೆಲನಂಬರದೆಡೆಗೆ ಬರ್ಪಂತೆ ರಣರಂಗಭೂಮಿಗೆ ವಂದು ಕುರುರಾಜಧ್ವಜಿನಿಯಂ ಪದ್ಮವ್ಯೂಹಮನೊಡ್ಡಿದೊಡೆ-

ಕಂ॥ ಕಂಸಾರಿಸಖಂ ಪರಿವಿ
ಧ್ವಂಸಿತ ರಿಪುನೃಪಸಮೂಹನೊಡ್ಡಿದನಾಗಳ್ ।
ಹಂಸವ್ಯೂಹಮನುತ್ತುಂ
ಗಾಂಸಂ ತಾಂ ವಿಬುಧವನಜವನಕಳಹಂಸಂ ॥ ೧೧೦

ರೇಷ್ಮೆಯ ಬಟ್ಟೆಯಲ್ಲಿ ಮನೋಹರವಾಗಿ ಕಚ್ಚೆಯನ್ನುಟ್ಟನು. ಕಸ್ತೂರಿಯ ಹುಡಿ ತಲೆಯ ಮೇಲೆ ತುಂಬ ಚೆಲ್ಲಿಕೊಂಡು ಹಸಿರು ಬಣ್ಣದ ನವುರಾದ ಪಟ್ಟಿಯಲ್ಲಿ ತಲೆಗೂದಲನ್ನು ಭಾಗಮಾಡಿ ಗಂಟಿಕ್ಕಿಕೊಂಡನು. ರತ್ನಮಯಕಿರೀಟವನ್ನು ತಲೆಗೆ ಧರಿಸಿಕೊಂಡನು. ದಪ್ಪವಾದ ನೆಲ್ಲಿಯ ಕಾಯಿಗಿಂತಲೂ ದಪ್ಪವಾದ ಮುತ್ತಿನ ಯಜ್ಞೋಪವೀತವನ್ನು ಜೋಲುಬಿಟ್ಟು ಈ ಅಲಂಕಾರ ಈ ದಿನಕ್ಕೆ ಮಾತ್ರ ಎನ್ನುವ ಹಾಗೆ ಸಂಪೂರ್ಣವಾಗಿ ಅಲಂಕಾರ ಮಾಡಿಕೊಂಡನು. ಶಲ್ಯನಿಗೆ ನಮಸ್ಕಾರಮಾಡಿ ಕವಚಗಳನ್ನೆಲ್ಲ ಆತನಿಗೆ ಪೂರ್ಣವಾಗಿ ತೊಡಿಸಿದನು. ೧೦೯. ಜೊತೆಯಲ್ಲಿ ಹುಟ್ಟಿದ ಕವಚವನ್ನು ಚರ್ಮವನ್ನು ಸುಲಿಯುವ ಹಾಗೆ ಮೊದಲು ಇಂದ್ರನಿಗೆ ಸುಲಿದು ಕೊಟ್ಟೆನು. ಇನ್ನು ನನಗೆ ದೇಹಕ್ಕೆ ಮರೆಯಾದ ಕವಚಾದಿಗಳನ್ನು ಅಪೇಕ್ಷೆಪಡುವುದು ಒಪ್ಪುವುದಿಲ್ಲ ಎಂದು ಪರಾಕ್ರಮಶಾಲಿಯಾದ ಕರ್ಣನು ಕವಚವನ್ನು ತೊಡಲಿಲ್ಲವಲ್ಲ! ವ॥ ಆಗ ಮದ್ದಾನೆಯ ಪಾರ್ಶ್ವದಲ್ಲಿ ವಿರಾಜಮಾನವಾಗಿರುವ ತನ್ನ ಸುವರ್ಣರಥವನ್ನು ಶಲ್ಯನನ್ನು ಹತ್ತಲು ಹೇಳಿ ಮೂರು ಸಲ ಪ್ರದಕ್ಷಿಣೆ ಮಾಡಿ ನಮಸ್ಕರಿಸಿ ತಾನು ಸ್ವರ್ಗವನ್ನು ಹತ್ತುವುದನ್ನು ಅನುಕರಿಸುವಂತೆ ಹತ್ತಿದನು. ಭೂಮಿಯು ಆಕಾಶದೆಡೆಗೆ ಬರುವ ಹಾಗೆ ಯುದ್ಧಭೂಮಿಗೆ ಬಂದು ಕೌರವಸೈನ್ಯವನ್ನು ಪದ್ಮವ್ಯೂಹದಾಕಾರದಲ್ಲಿ ರಚಿಸಿ ಮುಂದಕ್ಕೆ ಚಾಚಿದನು. ೧೧೦. ಶತ್ರುರಾಜರ ಸಮೂಹವನ್ನು ಪೂರ್ಣವಾಗಿ

ವ|| ಅಂತೊಡ್ಡಿದೊಡ್ಡನೆರಡುಂ ಬಲದ ನಾಯಕರುಂ ತಮ್ಮ ಕೋಪಾಗ್ನಿಗಳನೆ ಬೀಸುವಂತೆ ಕೆಯ್ವೀಸಿದಾಗಳ್-

ಚಂ|| ಕರದಸಿಗಳ್ ಪಳಂಚೆ ಕಿಡಿವಿಟ್ಟೊಗೆದೊಳ್ಗಿಡಿ ತಾರಕಾಳಿಯಂ
ತಿರೆ ರಜಮೊಡ್ಡಿನಿಂದ ಮುಗಿಲಂತಿರೆ ಬಾಳುಡಿ ಪಾಱುವುಳ್ಕದಂ ।
ತಿರೆ ತಡಮಾದುದಂಬರದೊಳಂಬರಮೆಂಬಿನೆಗಂ ಜಗತ್ರಯಂ
ಬರಮೆಸೆವಂತು ತಳ್ತಿಱಿದುವಂದೆರಡುಂ ಬಲಮುಗ್ರಕೋಪದಿಂ || ೧೧೧

ವ|| ಅನ್ನೆಗಂ ದುರ್ಯೋಧನಂಗಾಪ್ತರಪ್ಪ ಸಂಸಪ್ತಕರತಿರಥಮಥನನ ರಥಮಂ ತಮತ್ತ ತೆಗೆಯಲೊಡಮವರ ರಥಕ್ಕೆ ಮದಾಂಧ ಗಂಧಸಿಂಧುರದಂತಮ್ಮನ ಗಂಧವಾರಣಂ ಪರಿದು-

ಚಂ|| ಪಱಿಪಡದಾಯ್ತು ಭಾರತಮಿವಂದಿರ ಕಾರಣದಿಂದಿವಂದಿರಂ
ಪಱಿಪಡೆ ಕೊಂದು ಕರ್ಣನೊಳೆ ಕಾದಲೆವೇಬ್ಕುಮಮೋಘಮೆಂದು ಕೆಂ ।
ಗಱಿಗಳ ಪಾರೆಯಂಬುಗಳೊಳೂಱಿ ಕಱುತ್ತಿಸೆ ಬಟ್ಟರೆಯ್ದೆ ಪ
ರ್ದೆಱಗೆ ಸುರುಳ್ದು ಬೀೞ್ವ ಕಿಱುವಕ್ಕಿವೊಲುಗ್ರ ವಿರೋಧಿನಾಯಕರ್ || ೧೧೨

ಧ್ವಂಸಮಾಡಿದವನೂ ಕೃಷ್ಣನ ಸ್ನೇಹಿತನೂ ಎತ್ತರವಾದ ಹೆಗಲನ್ನುಳ್ಳವನೂ ವಿದ್ವಾಂಸರೆಂಬ ಸರೋವರಕ್ಕೆ ರಾಜಹಂಸದಂತಿರುವವನೂ ಆದ ಅರ್ಜುನನು ಹಂಸವ್ಯೂಹವನ್ನು ಒಡ್ಡಿದನು. ವ|| ಹಾಗೆ ಒಡ್ಡಿರುವ ಸೈನ್ಯಗಳ ಎರಡು ಪಕ್ಷದ ನಾಯಕರೂ ತಮ್ಮ ತಮ್ಮ ಕೋಪಾಗ್ನಿಗಳನ್ನೇ ಬೀಸುವಂತೆ (ಯುದ್ಧ ಪ್ರಾರಂಭಸೂಚಕವಾಗಿ) ಕೈಗಳನ್ನು ಬೀಸಿದರು. ೧೧೧. ಕಯ್ಯಲ್ಲಿರುವ ಕತ್ತಿಗಳು ಒಂದಕ್ಕೊಂದು ತಗಲಲು ಕಿಡಿಗಳನ್ನು ಹಾರಿಸಿ ಹುಟ್ಟಿದ ಒಳ್ಳೆಯ ಕಿಡಿಗಳು ನಕ್ಷತ್ರಮಂಡಲದಂತೆ ಕಾಣಿಸಿದುವು. ಧೂಳು ಹರಡಿನಿಂತಿರುವ ಮೋಡದಂತಿದ್ದುವು. ಕತ್ತಿಯ ಚೂರುಗಳು ಹಾರುವ ಉಳ್ಕದ ಹಾಗಿತ್ತು. ಆಕಾಶವು ಆಕಾಶಕ್ಕೆ ತಗುಲಿತು ಎನ್ನುವ ಹಾಗೆ ಮೂರುಲೋಕದವರೆಗೆ ಪ್ರಕಾಶಮಾನವಾಗುವ ಹಾಗೆ ಎರಡು ಸೈನ್ಯಗಳೂ ಉಗ್ರವಾದ ಕೋಪದಿಂದ ತಾಗಿ ಯುದ್ಧಮಾಡಿದುವು. ವ|| ಅಷ್ಟರಲ್ಲಿ ದುರ್ಯೋಧನನಿಗಾಪ್ತರಾದ ಸಂಸಪ್ತಕರು ಅತಿರಥಮಥನನಾದ ಅರ್ಜುನನ ತೇರನ್ನು ತಮ್ಮ ಕಡೆ ತೆಗೆಯಿಸಿಕೊಂಡು ಹೋಗಲು ಅಮ್ಮನ ಗಂಧವಾರಣನಾದ ಅರ್ಜುನನು ಅವರ ರಥಕ್ಕೆ ಅಭಿಮುಖವಾಗಿ ಮದದಿಂದ ಕುರುಡಾದ ಶ್ರೇಷ್ಠವಾದ ಆನೆಯಂತೆ ನುಗ್ಗಿದನು. ೧೧೨. ಈ ಸಂಸಪ್ತಕರಿಂದ ಈ ಭಾರತಯುದ್ಧವು ನಿಷ್ಕರ್ಷೆಯಾಗದೆ (ಮುಗಿಯದೇ) ಇದೆ. ಇವರನ್ನು ಕತ್ತರಿಸಿ ಬೀಳುವಂತೆ ಕೊಂದು ಆಮೇಲೆ ಬೆಲೆಯೇ ಇಲ್ಲದ ರೀತಿಯಲ್ಲಿ (ಅದ್ಭುತವಾಗಿ) ಕರ್ಣನಲ್ಲಿ ಕಾದಲೇಬೇಕು ಎಂದು ಕೆಂಪಾದ ಗರಿಗಳನ್ನುಳ್ಳ ಹಾರೆಯಂತಿರುವ ಬಾಣಗಳನ್ನು ನಾಟಿ ಗುರಿಯಿಟ್ಟು ಹೊಡೆಯಲು ಶತ್ರುನಾಯಕರು ರಭಸದಿಂದ ಹದ್ದು ಮೇಲೆರಗಲು ಸಣ್ಣ ಹಕ್ಕಿಗಳು ಸುರುಳಿಕೊಂಡು

ಕಂ॥ ಕಟಕುಟಮಾದ ರಥಂಗಳಿ
ನಟಿದರಿಭಟರಿಂ ಸುರುಳ್ದ ಮದಗಜಘಟೆಯಿಂ ।
ಸುಟಿಸುಟಿದೊಡವರಿದುದು ಕ
ಲ್ವಟಿಯೊಳ್ ಭೋರ್ಗರೆವ ತೊಜೆಯವೋಲ್ ರುಧಿರಜಳಂ ॥ ೧೧೩

ಪಿರಿದು ಪೊಗಟಿಸಿದ ಪಾಡಿಸಿ
ದರಿಯರನಾನಲ್ಕೆ ಪಿರಿಯರಂ ಪೂಣಿಗರಂ ।
ಬಿರುದರನದಟನೊಳುಬ್ಬರ
ಮುರಿವರನಾಯ್ದಜಿಸಿ ಕೊಂಡುವರಿಗನ ಕಣೆಗಳ್ ॥ ೧೧೪

ಕಣೆ ಕೊಳೆ ಪಜೆದರಿ ನರಪರ
ಕಣೆಕಾಲ್ಗಳ್ ಬೆರಲ ರತ್ನಮುದ್ರಿಕೆಗಳ ಸಂ ।
ದಣಿಯ ಬೆಳಗುಗಳಿನೆಸೆದುವು
ರಣರಂಗದೊಳಯ್ದುಪೆಡೆಯ ನಾಗಂಗಳವೋಲ್ ॥ ೧೧೫

ಆಗಳ್ ವಿಜಯನ ವೀರ
ಶ್ರೀಗೆ ಕರಂ ಕಿನಿಸಿ ಕಲಿ ಸುಶರ್ಮಂ ಮೆಯ್ಯೊಳ್ ।
ತಾಗೆ ಪಗೆ ನೀಗೆ ತಲೆಯುಂ
ಪೋಗೆಚ್ಚನದೊಂದು ಪರಶು ದಾರುಣಶರದಿಂ ॥ ೧೧೬

ವ॥ ಅಂತು ಸಂಸಪ್ತಕಬಲಕ್ಕಾಳ್ದನಾಗಿರ್ದ ಸುಶರ್ಮನಂ ರಾವಣನಂ ರಾಘವಂ ಕೊಲ್ವಂತೆ ವಿದ್ವಿಷ್ಟವಿದ್ರಾವಣಂ ಕೊಂದೊಡುಟಿದ ನಾಯಕರೆಲ್ಲರ್ ತಮ್ಮಾಳ್ದನ ಸಾವಂ ಕಂಡು ರಿಪುಕುರಂಗ

ಬೀಳುವ ಹಾಗೆ ಬಿದ್ದರು. ೧೧೩. ಅಸ್ತವ್ಯಸ್ತವಾದ ತೇರುಗಳಿಂದಲೂ ಸತ್ತ ಶತ್ರುವೀರರಿಂದಲೂ ಸುರುಳಿಗೊಂಡು ಬಿದ್ದ ಮದ್ದಾನೆಗಳಿಂದಲೂ ರಕ್ತಪ್ರವಾಹವು ಭೋರೆಂದು ಶಬ್ದ ಮಾಡುತ್ತ ಕಲ್ಲುಗಳಿಂದ ಕೂಡಿರುವ ಪಾತ್ರದಲ್ಲಿ ಹರಿಯುವ ನದಿಯಂತೆ ಸುಳಿಸುಳಿಯಾಗಿ ಜೊತೆಯಲ್ಲಿಯೇ ಹರಿಯಿತು. ೧೧೪. ಹಿರಿದಾಗಿ ಹೊಗಳಿಸಿಕೊಂಡವರು ಹಾಡಿಸಿಕೊಂಡವರು ಎದುರಿಸಲು ಅಸಾಧ್ಯರಾದವರು ಪ್ರತಿಜ್ಞೆಮಾಡಿದವರು ಬಿರುದುಳ್ಳವರು ಪರಾಕ್ರಮದಿಂದ ವಿಶೇಷವಾಗಿ ಉರಿಯುತ್ತಿರುವವರು ಮೊದಲಾದವರನ್ನೆಲ್ಲ ಅರ್ಜುನನ ಬಾಣಗಳು ಹುಡುಕಿಕೊಂಡು ಬಂದು ನಾಟಿದುವು. ೧೧೫. ತಗಲಲು ಕತ್ತರಿಸಿಬಿದ್ದಿದ್ದ ಶತ್ರುರಾಜರ ಅಡಿಯ ಕಾಲುಗಳ ಬೆರಳಿನ ರತ್ನದುಂಗುರಗಳ ಬೆಳಗಿನ ಸಮೂಹದಿಂದ ಯುದ್ಧರಂಗದಲ್ಲಿ ಅಯ್ದು ಹೆಡೆಯ ಹಾವುಗಳ ಹಾಗೆ ಪ್ರಕಾಶಿಸಿದುವು. ೧೧೬. ಆಗ ಅರ್ಜುನನ ಶೌರ್ಯದ ಮಹತ್ವಕ್ಕೆ (ವಿಜಯಲಕ್ಷ್ಮಿಗೆ) ವಿಶೇಷವಾಗಿ ಕೋಪಿಸಿಕೊಂಡು ಶೂರನಾದ ಸುಶರ್ಮನು ಶರೀರವನ್ನು ತಾಗಲು (ಮೇಲೆ ಬೀಳಲು) (ಅರ್ಜುನನು) ದ್ವೇಷವು ತೀರುವಂತೆ ಒಂದು ಕೊಡಲಿಯಂತಿರುವ ಕ್ರೂರವಾದ ಬಾಣದಿಂದ ತಲೆಯು ಕತ್ತರಿಸಿ ಹೋಗುವ ಹಾಗೆ ಹೊಡೆದನು. ವ॥ ಹಾಗೆ ಸಂಸಪ್ತಕರ ಸೈನ್ಯಕ್ಕೆ ಯಜಮಾನನಾಗಿದ್ದ (ಒಡೆಯನಾಗಿದ್ದ) ಸುಶರ್ಮನನ್ನು, ರಾವಣನನ್ನು ರಾಮನು

ಕಂಠೀರವನಂ ಮಾರ್ಕೊಂಡು ಕಾದುತ್ತಿರ್ದರನ್ನೆಗಮಿತ್ತ ಕರ್ಣನುಮುದೀರ್ಣವೀರ ರಸಾಸ್ವಾದನಲಂಪಟನಾಗಿ ನೀಮೆಲ್ಲಮಿಂದೆನ್ನ ಕಾಳೆಗಮಂ ಸುರಿಗೆಗಾಳೆಗಮಂ ನೋೞ್ಪಂತೆ ನೋೞ್ಪುದೆಂದು ಕೌರವಬಲದ ನಾಯಕರೆಲ್ಲರುಮನೊಡ್ಡಿ ಪಾಂಡವಬಲಕ್ಕೆ ಮಿೞ್ತು ಬರ್ಪಂತೆ ಬಂದು ತಾಗಿದಾಗಳ್ ತನಗಿದಿರೊಳದಿರದಾಂತ ಸೋಮಕ ಶ್ರೀಜಯ ಪ್ರಮುಖ ಕೋಸಲಾಧೀಶ ಸೈನ್ಯಂಗಳನಲ್ಲಕಲ್ಲೋಲಂ ಮಾಡಿ ಪೆಸರಜೆಕೆಯ ನಾಯಕರನಱುವತ್ತು ಸಾಸಿರ್ವರನೊರ್ವನಂ ಕೊಲ್ವಂತೆ ಕೊಂದು ನಿಟ್ಟಾಲಿಗೊಂಡು ಯುಧಿಷ್ಠಿರನಂ ಮುಟ್ಟೆವಂದಾಗಳ್-

ಚಂ॥ ಯಮಸುತನಣ್ಮಿ ಸತ್ತೆಯೆನುತುಂ ನಿಶಿತಾಸ್ತ್ರಮನುರ್ಚಕೊಂಡು ವ
ಕ್ಷಮನಿರದೆಚ್ಚಡೆಚ್ಚ ಶರಮಂ ಕಲಿ ಚಕ್ಕನೆ ಕಿೞ್ತುರಃಪ್ರದೇ ॥
ಶಮನಿಸೆ ನೆತ್ತರೊಕ್ಕು ಪತಿ ಮುರ್ಚೆಯೊಳಿರ್ಚೆಯೆಗೆಟ್ಟು ಜೋಲ್ದೊಡಾ
ದಮೆ ನಸುನೊಂದು ನಂದಿಸದೆ ತನ್ನನೆ ನಿಂದಿಸಿದಂ ದಿನೇಶಜಂ ॥ ೧೧೭

ವ॥ ಅಂತು ಕೊಂತಿಗೆ ನಾಲ್ವರೊಳಾರುಮಂ ಕೊಲ್ಲೆನೆಂದು ನುಡಿದ ತನ್ನ ನನ್ನಿಗೆ ಬನ್ನಂ ಬಂದಪುದೆಂದು ಕರ್ಣಂ ಚಿಂತಿಸುತ್ತಿರ್ದನಿತ್ತಲರಸನಂ ಪೆಱಗಿಕ್ಕಿ ನಕುಳಸಹದೇವರಿರ್ವರುಂ ಬಂದಾಂತೊಡಿವರನೇಗೆಯ್ವುದೆಂದು ಕರುಣಿಸಿ ಶಲ್ಯನ ಮನಮಂ ನೋಡಲೆಂದು ಬೆಸಗೊಂಡೊಡೆ ತನ್ನಳಿಯಂದಿರ ಸಾವಿಂಗಾಱದೆ ಶಲ್ಯನಿಂತೆಂದಂ-

ಕೊಂದಹಾಗೆ ವಿದ್ವಿಷ್ಟವಿದ್ರಾವಣನಾದ ಅರ್ಜುನನು ಕೊಲ್ಲಲು ಉಳಿದ ನಾಯಕರೆಲ್ಲ ತಮ್ಮ ಯಜಮಾನನ ಸಾವನ್ನು ನೋಡಿ ಶತ್ರುಗಳೆಂಬ ಜಿಂಕೆಗಳಿಗೆ ಸಿಂಹದ ಹಾಗಿರುವ ಅರ್ಜುನನನ್ನು ಎದುರಿಸಿ ಯುದ್ಧಮಾಡುತ್ತಿದ್ದರು. ಅಷ್ಟರಲ್ಲಿ ಈ ಕಡೆ ಕರ್ಣನು ಹೆಚ್ಚುತ್ತಿರುವ ವೀರರಸವನ್ನು ರುಚಿನೋಡುವುದರಲ್ಲಿ ಆಸಕ್ತನಾಗಿ ನೀವೆಲ್ಲರೂ ಈ ದಿವಸ ನನ್ನ ಯುದ್ಧವನ್ನು ಸಣ್ಣ ಕತ್ತಿಯ ದ್ವಂದ್ವಯುದ್ಧವನ್ನು ನೋಡುವ ಹಾಗೆ ನೋಡುವುದು ಎಂದು ಕೌರವಸೈನ್ಯದ ನಾಯಕರೆಲ್ಲರನ್ನೂ ಒಟ್ಟುಗೂಡಿಸಿ ಪಾಂಡವ ಸೈನ್ಯದ ಮೃತ್ಯು ಬರುವ ಹಾಗೆ ಬಂದು ತಾಗಿದನು. ತನ್ನ ಎದುರಿಗೆ ಭಯಪಡದೆ ಪ್ರತಿಭಟಿಸಿದ ಸೋಮಕ ಶ್ರೀಜಯರೇ ಮುಖ್ಯರಾದ ಕೋಸಲದೇಶದ ರಾಜರುಗಳ ಸೈನ್ಯವನ್ನೆಲ್ಲ ಕಲಕಿಹಾಕಿದನು. ಹೆಸರಿನಿಂದಲೇ ಪ್ರಸಿದ್ಧರಾದ ಅರವತ್ತುಸಾವಿರ ನಾಯಕರನ್ನು ಒಬ್ಬನನ್ನು ಕೊಲ್ಲುವ ಹಾಗೆ (ಅಶ್ರಮವಾಗಿ) ಕೊಂದು ದೀರ್ಘವಾಗಿ ದಿಟ್ಟಿಸಿನೋಡಿ ಧರ್ಮರಾಯನನ್ನು ಮುಟ್ಟುವಷ್ಟು ಸಮೀಪಕ್ಕೆ ಬಂದನು. ೧೧೭. ಧರ್ಮರಾಜನು (ಕರ್ಣನನ್ನು ಕುರಿತು) ನೀನು ಸತ್ತೆ ಎನ್ನುತ್ತ ಹರಿತವಾದ ಬಾಣವನ್ನು ಸೆಳೆದುಕೊಂಡು ತಡೆಯದೆ ಎದೆಗೆ ಹೊಡೆದನು. ಹೊಡೆದ ಆ ಬಾಣವನ್ನು ಶೂರನಾದ ಕರ್ಣನು ಚಕ್ಕನೆ ಕಿತ್ತುಹಾಕಿ ಧರ್ಮರಾಜನ ಹೃದಯ ಪ್ರವೇಶವನ್ನು ಹೊಡೆಯಲಾಗಿ ರಕ್ತವು ಸುರಿದು ಧರ್ಮರಾಜನು ಮೂರ್ಛೆಯಲ್ಲಿ ಮರೆತು ಜ್ಞಾನಶೂನ್ಯನಾಗಿ ಜೋತುಬೀಳಲು ಕರ್ಣನು ಸ್ವಲ್ಪ ವ್ಯಥೆಪಟ್ಟು ಪೂರ್ಣವಾಗಿ ಕೊಲ್ಲದೆ ತನ್ನನ್ನೇ ತಾನು ನಿಂದಿಸಿಕೊಂಡನು -ವ॥ ಕುಂತೀದೇವಿಗೆ ನಾಲ್ಕು ಜನರಲ್ಲಿ ಯಾರನ್ನೂ ಕೊಲ್ಲುವುದಿಲ್ಲವೆಂದು ಮಾತು ಕೊಟ್ಟಿದ್ದ ತನ್ನ ಸತ್ಯವಾಕ್ಕಿಗೆ ಭಂಗವುಂಟಾಗುತ್ತೆಂದು ಕರ್ಣನು ಯೋಚಿಸುತ್ತಿದ್ದನು. ಈ ಕಡೆ ಧರ್ಮರಾಜನನ್ನು ಹಿಂದಕ್ಕೆ ಹಾಕಿ

ಚಂ॥ ಎರೆದನ ಪೆಂಪುಮಾಂತಧಿಕನಪ್ಪನ ಪೆಂಪುಮನೀವ ಕಾವ ನಿ
ನ್ನೆರಡುಗುಣಂಗಳುಂ ಬಯಸುತಿರ್ಪುವು ನಿನ್ನೊಳಿವಂದಿರೇತಱೊಳ್ ।
ದೊರೆ ದೊರೆವೆತ್ತ ಕಾಳೆಗದ ಗೆಲ್ಲದ ಸೋಲದ ಮಾತು ನಿನ್ನೊಳಂ
ನರನೊಳಮಿರ್ದುದುಯ್ಗೆ ಸಿಸುಗಳ್ ಸಿಬಿರಕ್ಕೆ ಬಲಲ್ಪ ಭೂಪನಂ ॥ ೧೧೮

ವ॥ ಅದಲ್ಲದೆಯುಮುತ್ತ ದುರ್ಯೋಧನಂಗಂ ಭೀಮಂಗಮುನುವರಂ ಪೊಣರ್ದಿರ್ದುದರಸನಂ ಬೇಗಂ ಪೋಗಿ ಕೆಯ್ಕೊಳ್ವಮೆಂದು ಬರೆವರೆ ಯುಧಿಷ್ಠಿರನಟೆಯೆನೊಂದ ನೋವಂ ಕಂಡು ಪಾಂಡವಬಲದ ನಾಯಕರುತ್ತಾಯಕರಾಗಿ ತಂತಮ್ಮ ಚತುರ್ಬಲಂಗಳನೊಂದು ಮಾಡಿಕೊಂಡು ಕಾಲಾಗ್ನಿಯಂ ಕಿಡಿ ಸುತ್ತುವಂತೆ ಕರ್ಣನಂ ಸುತ್ತಿ ಮುತ್ತಿಕೊಂಡು ಕಣಯ ಕಂಪಣ ಮುಸಲ ಮುಸುಂಡಿ ಭಿಂಡಿವಾಳ ತೋಮರ ಮುದ್ಗರ ಮಹಾ ವಿವಿಧಾಯುಧಂಗಳೊಳಿಟ್ಟುಮೆಚ್ಚುಮಿಱಿದುಮಗುರ್ವುಮದ್ಭುತಮುಮಾಗೆ ಕಾದುವಾಗಳ್-

ಚಂ॥ ಎನಗಮರಾತಿ ಸಾಧನಮಿದಿರ್ಚುಗುಮಳ್ಕದಿದಿರ್ಚಿ ಬಾಳ್ದುಮಿ
ನ್ನೆನೆ ಪೆಱತುಂಟೆ ದೋಷಮೆನಗಂತದೆ ದೋಷಮದಾಗಲಾಗದೆಂ ।
ದಿನ ತನಯಂ ತಗುಳ್ದಿಸೆ ನಿಶಾತ ಶರಾಳಿಗಳೆಯ್ದೆ ಚಕ್ಕು ಚ
ಕ್ಕನೆ ಕೊಳೆ ಮೊಕ್ಕುಮೊಕ್ಕನೆ ಶಿರಂಗಳುರುಳ್ದುವು ವೈರಿಭೂಪರಾ ॥ ೧೧೯

ನಕುಲಸಹದೇವರಿಬ್ಬರೂ ಬಂದು ಎದುರಿಸಲು ಇವರನ್ನು ಏನುಮಾಡುವುದು (ತನಗೆ ಸಮಾನರಲ್ಲದ ಇವರೊಡನೆ ಏನು ಯುದ್ಧಮಾಡುವುದು) ಎಂದು ದಯೆತೋರಿ ಶಲ್ಯನ ಮನಸ್ಸನ್ನು ಪರೀಕ್ಷಿಸೋಣವೆಂದು ಪ್ರಶ್ನೆಮಾಡಲು, ಶಲ್ಯನು ತನ್ನಳಿಯಂದಿರಾದ ನಕುಲಸಹದೇವರ ಸಾವಿಗೆ ಸೈರಿಸಲಾರದೆ ಹೀಗೆಂದನು -೧೧೮. ನಿನ್ನ ದಾನಮಾಡುವ (ಔದಾರ್ಯ), ರಕ್ಷಿಸುವ (ಪರಾಕ್ರಮ) ಗುಣಗಳು ಬೇಡುವವನ ಆಧಿಕ್ಯವನ್ನೂ ಪ್ರತಿಭಟಿಸಿದ ಪರಾಕ್ರಮಿಯ ಆಧಿಕ್ಯವನ್ನೂ ಬಯಸುವುವು. ನಿನ್ನಲ್ಲಿ ಈ ನಕುಲಸಹದೇವರು ಯಾವಗುಣಗಳಲ್ಲಿ ಸಮಾನರು. ಯುದ್ಧದ ಜಯಾಪಜಯಗಳ ಮಾತು ನಿನಗೆ ಸಮಾನತೆಯನ್ನು ಪಡೆದಿರುವ ಅರ್ಜುನನಲ್ಲಿಯೂ ನಿನ್ನಲ್ಲಿಯೂ ಇದೆ. ಈ ಶಿಶುಗಳು ಬಳಲಿರುವ ಧರ್ಮರಾಯನನ್ನು ಬೀಡಿಗೆ ಕರೆದುಕೊಂಡು ಹೋಗಲಿ. ವ॥ ಅದಲ್ಲದೆಯೂ ಆ ಕಡೆ ದುರ್ಯೋಧನನಿಗೂ ಭೀಮನಿಗೂ ಯುದ್ಧವು ಹೆಣೆದುಕೊಂಡಿದೆ. ಬೇಗಹೋಗಿ ರಾಜನನ್ನು ರಕ್ಷಿಸೋಣ ಎಂದು ತೇರನ್ನು ಬೇರೆಕಡೆಗೆ ತಿರುಗಿಸಿದನು. ಧರ್ಮರಾಜನು ಸಾಯುವಷ್ಟು ಬಲವಾಗಿ ನೊಂದನೋವನ್ನು ಪಾಂಡವಬಲದ ನಾಯಕರು ನೋಡಿ ಪ್ರತಿಭಟಿಸಿದವರಾಗಿ ತಮ್ಮತಮ್ಮ ಚತುರಂಗ ಬಲವನ್ನು ಒಟ್ಟಾಗಿ ಸೇರಿಸಿಕೊಂಡು ಕಾಲಾಗ್ನಿಯನ್ನು ಬೆಂಕಿಯ ಕಿಡಿಗಳು ಬಳಸಿಕೊಳ್ಳುವ ಹಾಗೆ ಕರ್ಣನನ್ನು ಮುತ್ತಿ ಆವರಿಸಿಕೊಂಡರು. ಕಣಯ, ಕಂಪಣ, ಮುಸಲ, ಮುಸುಂಡಿ, ಭಿಂಡಿವಾಳ, ತೋಮರ, ಮುದ್ಗರ ಎಂಬ ದೊಡ್ಡದಾದ ಬೇರೆಬೇರೆಯ ನಾನಾವಿಧವಾದ ಆಯುಧ ವಿಶೇಷಗಳಿಂದ ಎಸೆದೂ ಹೊಡೆದೂ ಕತ್ತರಿಸಿಯೂ ಭಯಂಕರವೂ ಆಶ್ಚರ್ಯಕರವೂ ಆಗುವ ಹಾಗೆ ಯುದ್ಧಮಾಡಿದರು. ೧೧೯. 'ನನ್ನನ್ನು ಶತ್ರುಸೈನ್ಯವು ಎದುರಿಸುತ್ತಿದೆ; ಹೆದರದೆ ಪ್ರತಿಭಟಿಸಿ ಇನ್ನೂ ಬದುಕಿದೆ ಎಂದರೆ ನನಗೆ

ವ|| ಆ ಪ್ರಸ್ತಾವದೊಳ್-

ಉ|| ಮಂತ್ರ ಪದಪ್ರವೀಣ ಬಹು ಸಾಧನ ಹೂಂಕರಣಾದಿ ಮಂತ್ರಮಾ
ಮಂತ್ರಿತ ಡಾಕಿನೀ ದಶನ ಘಟ್ಟನ ಜಾತ ವಿಭೀಷಣಂ ಮದೇ ।
ಭಾಂತ್ರ ನಿಯಂತ್ರಿತಾಶ್ವ ಶವ ಮಾಂಸ ರಸಾಸವ ಮತ್ತಯೋಗಿನೀ
ತಂತ್ರಮಿದೇನಗುರ್ವನೊಳಕೊಂಡುದೊ ಕರ್ಣನ ಗೆಲ್ದ ಕೊಳ್ಗುಳಂ ॥ ೧೨೦

ವ|| ಅನ್ನೆಗಮಿತ್ತ ಸಂಸಪ್ತಕ ನಿಕುರುಂಬದೊಳಗೊರ್ವರುಮಂ ಕಿಡಿವೀಡಲೀಯದೆ ರಸಮಂ ಕೊಲ್ವಂತೆಂತಾನುಂ ಕೊಂದು ಕರ್ಣನೊಳ್ ಪೊಣರಲ್ ಬರ್ಪ ವಿಕ್ರಾಂತ ತುಂಗಂ ನಿಜ ಪತಾಕಿನಿಯ ನಡುವೆ ಮೆಱೆವ ಪತಾಕಾ ವಿರಾಜಮಾನುಮಪ್ಪ ತಮ್ಮಣ್ಣನ ರಥಮಂ ಕಾಣದೆ ಕೌರವಬಳಜಳನಿಧಿಯೊಳ್ ಬಳ್ವಳ ಬಳೆದೊಗೆದ ಕೇಸುರಿಯಂತೆ ತಲತಟಿಸಿ ಮಿಳಿರ್ವ ಪವನತನೂಜನ ಕೇಸರಿಕೇತನಮಪ್ಪ ಪಟಯಿಗೆಯಂ ಕಂಡು ಮುಟ್ಟೆ ವರ್ಪನ್ನೆಗಮರಸನಂ ಬೀಡಿಂಗೆ ಕಳಿಪಿ ಮಗುಟ್ಟು ಬಂದ ನಕುಳ ಸಹದೇವರಿಂದರವಿಂದಬಾಂಧವತನೂಜನ ಮಹಾ ಪ್ರಹರಣಹತಿಯೊಳ್ ಯಮನಂದನನ ನೋವುಮನಾತ್ಮೀಯಬಲದ ನಾಯಕರ ಸಾವುಮನಱಿದು-

ಚಂ|| ಪವನಸುತಂಗೆ ಪಾಸಟಿಗಳೊರ್ವರುಮಿಲ್ಲದಱೆಂದಮಾಂತ ಕೌ
ರವಬಲದುರ್ಕನೊಂದಿನಿಸು ಮಾಣಿಸಿ ಪೋಪಮಿಳೇಶನಲ್ಲಿಗೆಂ ।
ದವನತ ವೈರಿ ವೈರಿಬಲ ವಾರಿಧಿಯಂ ವಿಶಿಖೌರ್ವವಹ್ನಿಯಿಂ
ತವಿಸಿ ಮರುತ್ತನೂಭವನಲ್ಲಿಗೆ ಪೇಟ್ದೆರದೆಯ್ದಿ ಭೂಪನಂ ॥ ೧೨೧

ಇದಕ್ಕಿಂತ ಬೇರೆ ಕಳಂಕವುಂಟೇ? ನನಗೆ ಆ ದೋಷವು ಆಗಬಾರದು' ಎಂದು ಸೂರ್ಯಪುತ್ರನಾದ ಕರ್ಣನು ರಭಸದಿಂದ ಹೊಡೆಯಲು ಹರಿತವಾದ ಬಾಣಗಳು ಪೂರ್ಣವಾಗಿ ಚಕ್ ಚಕ್ ಎಂದು ಕತ್ತರಿಸಲು ಶತ್ರುರಾಜರ ತಲೆಗಳು ಮೊಕ್‌ಮೊಕ್ ಎಂದು ಉರುಳಿದುವು. ವ|| ಆ ಸಮಯದಲ್ಲಿ ೧೨೦. ರಣಮಂತ್ರ ಪಠನದಲ್ಲಿ ಪ್ರವೀಣರಾದ ಅನೇಕ ಸೈನಿಕರ ಹುಂಕಾರವೇ ಮೊದಲಾದ ಮಂತ್ರವನ್ನುಳ್ಳುದೂ ಆಹ್ವಾನಿತರಾದ ಪಿಶಾಚಿಗಳ ಹಲ್ಲುಕಡಿಯುವುದರಿಂದ ಹುಟ್ಟಿ ವಿಕಾರವೂ ಭಯಂಕರವೂ ಆದ ಶಬ್ದವನ್ನುಳ್ಳುದೂ ಮದ್ದಾನೆಯ ಕರುಳುಗಳಿಂದ ಕಟ್ಟಲ್ಪಟ್ಟ ಕುದುರೆಯ ಹೆಣದ ಮಾಂಸದಲ್ಲಿ ಆಸಕ್ತವಾದ ಮದಿಸಿರುವ ಮರುಳುಗಳ ಸಮೂಹ ವನ್ನುಳ್ಳದ್ದೂ ಆಗಿ ಕರ್ಣನು ಗೆದ್ದ ಯುದ್ಧರಂಗವು ವಿಶೇಷ ಭಯಂಕರವಾಗಿತ್ತು. ವ|| ಅಷ್ಟರಲ್ಲಿ ಈ ಕಡೆ ಸಂಸಪ್ತಕರ ಸಮೂಹದಲ್ಲಿ ಒಬ್ಬರೂ ತಪ್ಪಿಸಿಕೊಳ್ಳಲು ಅವಕಾಶ ಕೊಡದಂತೆ ಪಾದರಸವನ್ನು ಮರ್ದಿಸುವ ಹಾಗೆ ಹೇಗೋ ಕೊಂದು ಕರ್ಣನಲ್ಲಿ ಯುದ್ಧಮಾಡಲು ಬರುತ್ತಿರುವ ಉತ್ತಮ ಪೌರುಷಶಾಲಿಯಾದ ಅರ್ಜುನನು ತನ್ನ ಸೈನ್ಯಮಧ್ಯದಲ್ಲಿ ಧ್ವಜದಿಂದ ವಿರಾಜಮಾನವಾಗಿ ಮೆರೆಯುವ ತಮ್ಮಣ್ಣನ ರಥವನ್ನು ಕಾಣದೆ ಕೌರವಸೇನಾಸಮುದ್ರದಲ್ಲಿ ವಿಶೇಷವಾಗಿ ಬೆಳೆದು ಹಚ್ಚಿದ ಕೆಂಪುಬಣ್ಣದ ಉರಿಯಂತೆ ತಳತಳಿಸಿ ಅಲುಗಾಡುವ ಸಿಂಹದ ಗುರುತಿನ ಬಾವುಟವನ್ನು ನೋಡಿ ಹತ್ತಿರಕ್ಕೆ ಬರುವಷ್ಟರಲ್ಲಿ ಧರ್ಮರಾಯನನ್ನು ಬೀಡಿಗೆ ಕಳುಹಿಸಿ ಹಿಂತಿರುಗಿ ಬಂದ ನಕುಳಸಹದೇವರಿಂದ ಕರ್ಣನ ಬಲವಾದ ಪೆಟ್ಟಿನಿಂದುಂಟಾದ ಧರ್ಮರಾಯನ ವ್ಯಥೆಯನ್ನೂ ತಮ್ಮ ಸೈನ್ಯದ ನಾಯಕರ ಸಾವನ್ನೂ ತಿಳಿದನು. ೧೨೧. ಭೀಮನಿಗೆ

ಕಂ॥ ತಾನುಂ ಹರಿಯುಂ ಭೂಪತಿ
ಗಾನತರಾಗಲೊಡಮೊಸೆದು ಪತಿ ಪರಸಿ ಯಮ ।
ಸ್ಥಾನಮನೆಂತೆಯ್ದಿಸಿದಿರೊ
ಕಾನೀನನ ದೊರೆಯ ಕಲಿಯನುಗ್ರಾಹವದೊಳ್ ॥ ೧೨೨

ನರ ನಾರಾಯಣರೆಂಬ
ರ್ವರುಮೊಡಗೂಡಿದೊಡೆ ಗೆಲ್ವರಾರುರ್ವರೆಯೊಳ್ ।
ನಿರುತಮೆನೆ ನೆಗಳ್ದ ನಿಮ್ಮಿ
ರ್ವರ ದೊರೆಗಂ ಬಗೆವೊಡಗ್ಗಳಂ ನರರೊಳರೇ ॥ ೧೨೩

ಎಂತೆನೆ ಮುಯ್ಯೇೞ್ ಸೂೞ್ಳಿ
ಯಂ ತಳದೊಳ್ ಪಿಡಿದನಾತನೆಂಬುದನಾಂ ಮು ।
ನ್ನೆಲತುಂ ನಂಬೆನೆ ನಂಬಿದೆ
ನಿಂತಿಂದಿನ ಗಂಡವಾತಿನೊಳ್ ಸೂತಜನಂ ॥ ೧೨೪

ಪೆತ್ತಳ್ ಕೊಂತಿಯೆ ಮಕ್ಕ
ಳ್ವೆತ್ತರೊಳೆಂಬವರೆ ಕೊಂತಿ ಮಾದೇವಿಗಮೊಂ ।
ದುತ್ತರಮಾದಳ್ ಕರ್ಣಂ
ಪೆತ್ತಕ್ಕನೆ ಎಂದು ಪೊಗೞ್ದುವೆರಡುಂ ಪಡೆಗಳ್ ॥ ೧೨೫

ಸರಿಸಮಾನರಾದ ಬಲಶಾಲಿಗಳಾರೂ ಇಲ್ಲ; ಆದುದರಿಂದ ಎದುರಿಸಿದ ಕೌರವಸೈನ್ಯದ ಅಹಂಕಾರವನ್ನು ಸ್ವಲ್ಪ ಕಡಿಮೆಮಾಡಿ ರಾಜನಲ್ಲಿಗೆ ಹೋಗೋಣ ಎಂದು ಶತ್ರುಸೈನ್ಯವನ್ನು ಬಗ್ಗಿಸಿದವನಾದ ಅರ್ಜುನನು ಶತ್ರುಸೈನ್ಯಸಾಗರವನ್ನು ಬಾಣಗಳೆಂಬ ಬಡಬಾನಲನಿಂದ ನಾಶಮಾಡಿ ಅಲ್ಲಿಯ ಯುದ್ಧಕ್ಕೆ ಭೀಮನನ್ನು ಇರಹೇಳಿ ಸಾವಕಾಶಮಾಡದೆ ಧರ್ಮರಾಜನನ್ನು ಸೇರಿದನು. ೧೨೨. ತಾನೂ ಕೃಷ್ಣನೂ ಧರ್ಮರಾಯನಿಗೆ ನಮಸ್ಕಾರಮಾಡಲು ಧರ್ಮರಾಯನು ಹರಸಿ ಈ ಭಯಂಕರವಾದ ಯುದ್ಧದಲ್ಲಿ ಕರ್ಣನಂತಹ ಸಾಮರ್ಥ್ಯವುಳ್ಳ ಶೂರನನ್ನು ಯಮಪಟ್ಟಣಕ್ಕೆ ಹೇಗೆ ಸೇರಿಸಿದಿರೋ? ೧೨೩. ನರನಾರಾಯಣರೆಂಬ ಇಬ್ಬರೂ ಒಟ್ಟುಗೂಡಿದರೆ ಈ ಭೂಮಿಯಲ್ಲಿ ನಿಮ್ಮನ್ನು ನಿಶ್ಚಯವಾಗಿ ಗೆಲ್ಲುವರಾರೂ ಇಲ್ಲ. ವಿಚಾರಮಾಡುವುದಾದರೆ ನಿಮ್ಮಿಬ್ಬರನ್ನು ಮೀರಿದ ಮನುಷ್ಯರು ಇಲ್ಲವೇ ಇಲ್ಲ. ೧೨೪. ಹಿಂದೆ ಕರ್ಣನು ಮೂರು ಏಳುಸಲ (ಇಪ್ಪತ್ತೊಂದು ಸಲ) ಭೂಮಿಯನ್ನು ಅಂಗೈಯಲ್ಲಿಯೇ ಹಿಂಡಿದವನು ಎಂಬುದನ್ನು ನಾನು ಮೊದಲು ಹೇಗೂ ನಂಬಿರಲಿಲ್ಲ. ೧೨೫. ಮಕ್ಕಳನ್ನು ಹೆತ್ತವರಲ್ಲಿ ಪಾಂಡವರನ್ನು ಹೆತ್ತ ಕುಂತೀದೇವಿಯೇ ಮಕ್ಕಳನ್ನು ಹೆತ್ತವಳು (ಉತ್ತಮಳಾದವಳು) ಎಂದು ಹೇಳುತ್ತಿದ್ದ ಎರಡು ಸೈನ್ಯಗಳೂ ಇಂದು ಕರ್ಣನನ್ನು ಹೆತ್ತವಳು ಕುಂತೀದೇವಿಗಿಂತ

ಕಂ|| ಇನ್ನುಂ ಕರ್ಣನ ರೂಪೆ ದ
ಲೆನ್ನೆರ್ದೆಯೊಳಮೆನ್ನ ಕಣ್ಗೊಳಂ ಸುಳಿದಪುದಾಂ ।
ತೆನ್ನೆಚ್ಚ ಶರಮುಮಂ ಗೆ
ಲ್ದೆನ್ನುಮನಂಜಸಿದನೆಂದೊಡಿನ್ನೇನೆಂಬೆಂ ॥ ೧೨೬

ಅಂತಪ್ಪದಟನನಾಜಿಯೊ
ಳೆಂತೆಂತಿದಿರಾಂತು ಗೆಲ್ದಿರೆನೆ ನೃಪನಂ ಕಂ ।
ಸಾಂತಕನೆಂದಂ ಕರ್ಣನು
ಮಾಂತಿರೆ ನೀಮಿಂದು ನೊಂದುದಂ ಕೇಳ್ದೀಗಳ್ ॥ ೧೨೭

ಆರಯ್ಯಲೆಂದು ಬಂದೆವ
ಪಾರ ಗುಣಾ ಕೊಂದೆವಿಲ್ಲವಿನ್ನುಂ ಬಳವ ।
ತ್ಕ್ರೂರಾರಾತಿಯನುಪಸಂ
ಹಾರಿಪೆವೇವಿರಿಯನಾದನೆಂಬುದುಮಾಗಳ್ ॥ ೧೨೮

ನರಕಾಂತಕನಂ ನುಡಿದಂ
ನರೇಂದ್ರನಾನರಸುಗೆಯ್ವ ಪಟುವಗೆಯನದಂ ।
ಪರಿಹರಿಸಿದೆನಾತನನೀ
ಕಿರೀಟ ಗೆಲ್ದೆನಗೆ ಪಟ್ಟವಂ ಮಾಡುವನೇ ॥ ೧೨೯

ಏಮ್ಮೊಗ್ಗೆ ಕರ್ಣನಿಂತೀ
ನಿಮ್ಮಂದಿಗರಿಜೆಯೆ ಸಾವನೇ ಸುಖಮಿರಿಮಿ ।
ನ್ನಮ್ಮ ಸುಯೋಧನನೊಳ್ ಪಗೆ
ಯಮ್ಮಳಿದಾನುಂ ತಪೋನಿಯೋಗದೊಳಿರ್ಪೆಂ ॥ ೧೩೦

ಉತ್ತಮಳಾದವಳು ಎಂದು ಹೊಗಳಿದುವು. ೧೨೬. ಇನ್ನೂ ನನ್ನ ಎದೆಯಲ್ಲಿಯೂ ಕಣ್ಣಿನಲ್ಲಿಯೂ ಕರ್ಣನ ಆಕಾರವೇ ಸುಳಿದಾಡುತ್ತಿದೆಯಲ್ಲ; ಎದುರಿಸಿ ನಾನು ಪ್ರಯೋಗಿಸಿದ ಬಾಣಗಳನ್ನು ಗೆದ್ದು ನನ್ನನ್ನೂ ಭಯಪಡಿಸಿದನೆಂದಾಗ ಇನ್ನೇನನ್ನು ಹೇಳಲಿ. ೧೨೭. 'ಅಂತಹ ಪರಾಕ್ರಮಶಾಲಿಯನ್ನು ಯುದ್ಧದಲ್ಲಿ ಹೇಗೆ ಎದುರಿಸಿ ಗೆದ್ದಿರಿ' ಎನ್ನಲು ಧರ್ಮರಾಯನನ್ನು ಕುರಿತು ಕೃಷ್ಣನು ಹೇಳಿದನು. ನೀವು ಇಂದು ಕರ್ಣನನ್ನು ಎದುರಿಸಿ ನೋವುಪಟ್ಟುದನ್ನು ಕೇಳಿ ಈಗ ೧೨೮. ವಿಚಾರಿಸುವುದಕ್ಕೆ ಬಂದೆವು; ಎಲ್ಲೆಯಿಲ್ಲದ ಗುಣಶಾಲಿಯಾದ ಧರ್ಮರಾಯನೇ ಬಲಿಷ್ಠನೂ ಕ್ರೂರನೂ ಆದ ಶತ್ರುವನ್ನು ನಾವು ಇನ್ನೂ ಕೊಂದಿಲ್ಲ; ನಾಶಪಡಿಸುತ್ತೇವೆ. ಅವನೇನು ಮಹಾದೊಡ್ಡವನು ಎನ್ನಲು ಆಗ ೧೨೯. ಕೃಷ್ಣನನ್ನು ಕುರಿತು ಧರ್ಮರಾಜನು ಹೇಳಿದನು- ಇನ್ನು ಮೇಲೆ ನಾನು ರಾಜ್ಯವಾಳುವ ವ್ಯರ್ಥವಾದ ಆಸೆಯನ್ನು ಬಿಟ್ಟಿದ್ದೇನೆ. ಅವನನ್ನು ಗೆದ್ದು ನಿಜವಾಗಿಯೂ ಅರ್ಜುನನು ನನಗೆ ಪಟ್ಟವನ್ನು ಕಟ್ಟುತ್ತಾನೆಯೇ? ೧೩೦. ಇಂತಹ ನಿಮ್ಮಂತಹವರು ಕರ್ಣನನ್ನು ಗೆಲ್ಲುವುದು ಸಾಧ್ಯವೇ? ಅಮ್ಮಗಳಿರಾ ಇನ್ನು ದುರ್ಯೋಧನನಲ್ಲಿ ಹಗೆತನವನ್ನು ಮರೆತು ಸುಖವಾಗಿರಿ. ನಾನೂ ತಪಸ್ಸಿನ

ವ॥ ಎಂದು ತನ್ನ ನೋಯೆ ನುಡಿದ ನಿಜಾಗ್ರಜನ ನುಡಿಗೆ ಮನದೊಳೇವೈಸಿಯುಮೇವೈ ಸದೆ ವಿನಯಮನೆ ಮುಂದಿಟ್ಟು ವಿನಯವಿಭೂಷಣನಿಂತೆಂದಂ-

ಕಂ॥ ಮುಳಿದಿಂತು ಬೆಸಸೆ ನಿಮ್ಮಡಿ
ಯೊಳೆ ಮಾರ್ಕೊಂಡೆಂತು ನುಡಿವೆನುಸಿರೆಂ ನಿಮ್ಮಂ ।
ಮುಳಿಯಿಸಿದ ಸುರಾಸುರರುಮ
ನೊಳರೆನಿಸೆಂ ಕರ್ಣನೆಂಬನೆನಗೇವಿರಿಯಂ ॥ ೧೩೧

ನರಸಿಂಗಂಗಂ ಜಾಕ
ಬ್ಬರಸಿಗಮಳವೊದವೆ ಪುಟ್ಟಿ ಪುಟ್ಟಿಯುಮರಿಕೇ ।
ಸರಿಯೆನೆ ನೆಗಳ್ದುಮರಾತಿಯ
ಸರಿದೊರೆಗಂ ಬಂದೆನಪ್ಪೊಡಾಗಳ್ ನಗಿರೇ ॥ ೧೩೨

ಪುಟ್ಟೆ ಮುಳಿಸೊಸಗೆಗಳೆ ಕಡು
ಗಟ್ಟಂ ಮುಳಿಸೊಸಗೆಯೆಂಬ ನೃಪತನಯನವಂ ।
ಮುಟ್ಟುಗಿಡೆ ಪಾರದರದೊಳ್
ಪುಟ್ಟಿದನರಸಂಗಮರಸಿಗಂ ಪುಟ್ಟಿದನೇ ॥ ೧೩೩

ಎಂದರಸ ನೇಸಱಿಂದೊಳ
ಗಾಂ ದಿನಕರಸುತನನಿಕ್ಕಿ ಬಂದಲ್ಲದೆ ಕಾ ।
ಣೆಂ ದಲ್ ಭವತ್ಪದಾಬ್ಜಮ
ನೆಂದೆಟ್ಟನುದಶ್ರುಜಳಲವಾರ್ದ್ರಕಪೋಳಂ ॥ ೧೩೪

ನಿಯಮದಲ್ಲಿ ಇರುತ್ತೇನೆ. ವ॥ ಎಂದು ತನಗೆ ನೋವಾಗುವ ಹಾಗೆ ನುಡಿದ ತನ್ನ ಅಣ್ಣನ ಮಾತಿಗೆ ಮನಸ್ಸಿನಲ್ಲಿ ಕೋಪಬಂದರೂ (ಹೊರಗೆ) ಕೋಪಿಸಿಕೊಳ್ಳದೆ ನಮ್ರತೆಯನ್ನೇ ಪ್ರದರ್ಶಿಸಿ ವಿನಯಭೂಷಣನಾದ ಅರ್ಜುನನು ಹೀಗೆಂದನು. ೧೩೧. ಕೋಪಿಸಿಕೊಂಡು ಹೀಗೆ ಹೇಳಿದ ನಿಮ್ಮ ಪಾದದಲ್ಲಿ ಪ್ರತಿಭಟಿಸಿ ಹೇಗೆ ನುಡಿಯಲಿ? ಮಾತಾನಾಡುವುದಿಲ್ಲ; ನಿಮಗೆ ಕೋಪವನ್ನುಂಟುಮಾಡಿದ ದೇವದಾನವರಿನ್ನೂ ಜೀವದಿಂದಿದ್ದಾರೆ ಎನ್ನಿಸುವುದಿಲ್ಲ (ಹಾಗಿರುವಾಗ) ಕರ್ಣನೆಂಬುವನು ನನಗೆಷ್ಟು ದೊಡ್ಡವನು? ೧೩೨. ನರಸಿಂಹನೆಂಬ ರಾಜನಿಗೂ ಜಾಕಬ್ಬೆಯೆಂಬ ರಾಣಿಗೂ ಪರಾಕ್ರಮವೇ ಹುಟ್ಟಿದೆಯೆಂಬ ರೀತಿಯಲ್ಲಿ ಹುಟ್ಟಿ ಹುಟ್ಟಿಯೂ ಕೂಡ ಅರಿಕೇಸರಿಯೆಂದು ಪ್ರಸಿದ್ಧನಾಗಿಯೂ ಶತ್ರುವಿನ ಸರಿಸಮಾನತೆಗೆ ಬಂದೆನಾದರೆ ನೀವೇ ತಿರಸ್ಕಾರದಿಂದ ಪರಿಹಾಸಮಾಡುವುದಿಲ್ಲವೇ? ೧೩೩. ಕೋಪಸಂತೋಷಗಳು ಹುಟ್ಟಲು ಅದು ನಿಜವಾಗಿಯೂ ಕಷ್ಟವೇ! ಆದರೆ ಆ ಕೋಪಪ್ರಸಾದಗಳನ್ನು ಪರಿಹರಿಸಲಾರದ ರಾಜಕುಮಾರನು ರಾಜ ರಾಣಿಯರಿಗೆ ಹುಟ್ಟಿದವನಲ್ಲ; ಹಾದರಕ್ಕೆ ಹುಟ್ಟಿದವನು. ೧೩೪. ಎಂಬುದಾಗಿ ಹೇಳಿ ರಾಜನೇ ಸೂರ್ಯಾಸ್ತಮಾನದೊಳಗೆ ನಾನು ಕರ್ಣನನ್ನು ಸಂಹರಿಸಿ ಬಂದಲ್ಲದೆ ನಿಮ್ಮ ಪಾದಕಮಲವನ್ನು ಕಾಣುವುದಿಲ್ಲವಲ್ಲ ಎಂದು ಚಿಮ್ಮುತ್ತಿರುವ ಕಣ್ಣೀರಿನ ಕಣಗಳಿಂದ ಒದ್ದೆಯಾದ ಕೆನ್ನೆಯನ್ನುಳ್ಳ ಅರ್ಜುನನು

ವ|| ಅಂತು ಭೂನಾಥಂ ತನ್ನಳವನಱಿದುಮಱಿಯದೆ ಕೆಡೆನುಡಿದು ತಪೋವನದೊಳಲ್ಲದೆ ನೀಗೆನೆಂದೆಟ್ಟು ನಿಂದಿರ್ದನನಸುರಾಂತಕನುಂ ತಾನುಮೆಂತಾನುಂ ಪಾರ್ಥಿಸಿದೊಡೊಡಂಬಟ್ಟಜಾತ ಶತ್ರುಗೆ ಪೊಡೆವಟ್ಟು ರಥಮನೇಱಿ ಕೌರವಧ್ವಜಿನಿಗೆ ಭಯಜ್ವರಂ ಬರ್ಪಂತೆ ಬಂದು ಪವನ ತನಯಂಗಂತಕತನಯನಸಮಾವಸ್ಥೆಯುಂ ಪೇೞ್ದಿಂದಿನನುವರಮೆಲ್ಲಮಂ ನಿಮ್ಮೊರ್ವರ ಮೇಲಿಕ್ಕಿ ಪಿರಿದುಂ ಪೊೞ್ತು ತಡೆದಿರ್ಪೆವೆನೆ ಹಿಡಿಂಬಾಂತಕನಿಂತೆಂದಂ-

ಮ|| ನರ ಮಾತಂಗ ತುರಂಗ ಸೈನ್ಯಮಿದಿರಾಂತೀರೆಂಟು ಲಕ್ಕಂಬರಂ
ಕರಗಿತ್ತೆನ್ನ ನಿಶಾತ ಹೇತಿ ಹತಿಯಿಂ ಮತ್ತಂತುಮೀ ತೋಳ ತೀನ್ ।
ಕರಗಲ್ಕಾರ್ತಪುದಿಲ್ಲದಕ್ಕರಿಗ ಪೇೞ್ ನೀಂ ಬೇೞ್ಪುದೇ ಸಂಗರಾ
ಜಿರದೊಳ್ ಕೌರವರೆಂಬ ಕಾಕಕುಳಕೆನ್ನೀಯೊಂದೆ ಬಿಲ್ ಸಾಲದೇ ॥ ೧೩೫

ವ|| ಎಂದ ಭೀಮನನಕಲಂಕರಾಮಂ ನಿಮ್ಮ ಭುಜಬಲಕ್ಕದೇವಿರಿದೆಂದು ನೀಮೆನ್ನ ಕಾಳೆಗಮಂ ಸುರಿಗೆಗಾಳೆಗಮಂ ನೋೞ್ಪಂತೆ ತೊಡೆಯಂ ಪೊಯ್ದಾರ್ದು ನೋಡುತ್ತುಮಿರಿಮೆಂದು ಪವನಜನನೊಡಗೊಂಡು ಪವನಜವದಿಂ ಕರ್ಣನ ರಥಮೆಲ್ಲಿತ್ತೆತ್ತ ಪೋದುದೆನುತುಂ ಬರ್ಪತಿರಥ ಮಥನನ ರಥದ ಬರವಂ ಕಂಡು ಕೌರವಬಲಮೆಲ್ಲಮೊಲ್ಲನುಲಿದೋಡಿ ವೈಕರ್ತನನ ಮಱೆಯಂ ಪುಗುವುದುಂ ಮದೀಯ ಮನೋರಥಮಿಂದು ದೊರೆಕೊಂಡುದೆಂದು ದಿನಕರತನೂಜನೆರಡು ಮುಯ್ಯುಮಂ ನೋಡಿ ಸಮರಾನಂದಂಬೆರಸು ಶಲ್ಯನಂ ರಥಮನೆಸಗಲ್ವೇೞ್ದು ದಿವ್ಯಾಸ್ತ್ರಂಗಳ

ಎದ್ದನು. ವ|| ಹೀಗೆ ರಾಜನಾದ ಧರ್ಮರಾಯನು ತನ್ನ ಪರಾಕ್ರಮವನ್ನು ಅರಿತೂ ಅರಿಯದೆ ಕೆಟ್ಟಮಾತುಗಳನ್ನಾಡಿ ತಪೋವನದಲ್ಲಲ್ಲದೆ (ತನ್ನ ಜೀವನವನ್ನು) ಬೇರೆ ಕಡೆಯಲ್ಲಿ ಕಳೆಯುವುದಿಲ್ಲವೆಂದು ಎದ್ದು ನಿಂತಿದ್ದವನನ್ನು ಕೃಷ್ಣನೂ ಅರ್ಜುನನೂ ಹೇಗೋ ಬೇಡಿಕೊಳ್ಳಲಾಗಿ ಒಪ್ಪಿಕೊಂಡ ಧರ್ಮರಾಜನಿಗೆ ನಮಸ್ಕಾರಮಾಡಿ ತೇರನ್ನು ಹತ್ತಿಕೊಂಡು ಕೌರವಸೈನ್ಯಕ್ಕೆ ಭಯಜ್ವರ ಬರುವ ಹಾಗೆ ಬಂದು ಭೀಮನಿಗೆ ಧರ್ಮರಾಯನ ಮನಃಸ್ಥಿತಿಯನ್ನು ಹೇಳಿ ಈ ದಿನದ ಯುದ್ಧಭಾರವೆಲ್ಲವನ್ನೂ ನಿಮ್ಮೊಬ್ಬರ ಮೇಲೆಯೇ ಹೇರಿ ಬಹಳ ಹೊತ್ತು ತಡೆದಿದ್ದೆವು ಎನ್ನಲು ಭೀಮನು ಓಗೆಂದನು - ೧೩೫. ನನ್ನನ್ನು ಎದುರಿಸಿದ ಸುಮಾರು ಹದಿನಾರುಲಕ್ಷದವರೆಗಿನ ಆನೆ ಕುದುರೆ ಪದಾತಿಗಳು ನನ್ನ ಹೊಡೆತಕ್ಕೆ ಸಿಕ್ಕಿ ಕರಗಿದುವು. ಅಷ್ಟಾದರೂ ಈ ನನ್ನ ತೋಳಿನ ನವೆಯು ಮಾತ್ರ ಕರಗುವುದಕ್ಕೆ ಸಮರ್ಥವಾಗಿಲ್ಲ. (ಆ ಸೈನ್ಯಕ್ಕೆ ನೀನು ಹೇಳಬೇಕೇ - ನಾನೊಬ್ಬನೇ ಸಾಕು) ಅರ್ಜುನ, ಅದಕ್ಕೆ ನೀನೂ ಬರಬೇಕೆ? ಯುದ್ಧದಲ್ಲಿ ಕೌರವರೆಂಬ ಕಾಗೆಯ ಗುಂಪಿಗೆ ನನ್ನ ಈ ಒಂದೇ ಬಿಲ್ಲು ಸಾಲದೇ? ವ|| ಎಂದು ಹೇಳಿದ ಭೀಮನನ್ನು ಕುರಿತು ಅರ್ಜುನನು ನಿಮ್ಮ ತೋಳಬಲಕ್ಕೆ ಅದೇನು ದೊಡ್ಡದು ಎಂದು ಹೇಳಿ ನೀವು ಕಾಳಗವನ್ನು ನೋಡುವಂತೆ ತೊಡೆಯನ್ನು ತಟ್ಟಿ ಆರ್ಭಟಮಾಡಿ ನೋಡುತ್ತಿರಿ ಎಂದನು. ಭೀಮನೊಡಗೂಡಿ ವಾಯುವೇಗದಿಂದ ಕರ್ಣನ ತೇರೆಲ್ಲಿದೆ ಯಾವಕಡೆ ಹೋಯಿತು ಎನ್ನುತ್ತ ಬರುತ್ತಿರುವ ಅತಿರಥಮಥನನಾದ ಅರ್ಜುನನ ಬರವನ್ನು ಕಂಡು ಕೌರವಸೈನ್ಯವೆಲ್ಲ ಮೆಲ್ಲಗೆ ಕೂಗಿಕೊಂಡು ಓಡಿಹೋಗಿ ಕರ್ಣನ

**ದೊಣೆಗಳನೆರಡುಂ ದೆಸೆಯೊಳಂ ಬಿಗಿದು ತಾಳವಟ್ಟದ ಬಿಲ್ಲಂ ಕೆಂದಳದೊಳಮರೆ ನೀವಿ ಜೇವೊಡೆದಾಗಳ್-**

**ಪೃಥ್ವಿ ॥ ಮಹಾ ಪ್ರಳಯ ಭೈರವ ಕ್ಷುಭಿತ ಪುಷ್ಕಳಾವರ್ತಮಾ**
**ಮಹೋಗ್ರ ರಿಪು ಭೂಭುಜ ಶ್ರವಣ ಭೈರವಾಡಂಬರಂ ।**
**ಗುಹಾ ಗಹನ ಗಹ್ವರೋದರ ವಿಶೀರ್ಣಮಾದಂದದೇಂ**
**ಮುಹುಃ ಪ್ರಕಟಮಾದುದಾ ರವಿತನೂಭವ ಜ್ಯಾರವಂ ॥** ೧೩೬

**ವ॥ ಅಂತು ಯುಗಾಂತ ವಾತಾಹತ ಕುಲಗಿರಿಯೆ ನೆಲೆಯಿಂ ತಳರ್ವಂತೆ ತಳರ್ದು ಧ್ವಾಂಕ್ಷಧ್ವಜಮಂಬರತಳದೊಳ್ ಮಿಳಿರೆ ತನಗಿದಿರಂ ಬರ್ಪ ಕರ್ಣನ ರಥಕ್ಕೆ ತನ್ನ ರಥಮನಾಸನ್ನಮಾಗೆ ಪರಿಯಿಸಿ ವಿಂಧ್ಯ ಮಳಯ ಮಹೀಧರಂಗಳೊಂದೊಂದಱೊಳ್ ತಾಗುವಂತೆ ತಾಗಿ ದೇವದತ್ತ ಶಂಖಮಂ ಪೂರೈಸಿ ಗಾಂಡೀವಮನೇಱಿಸಿ ನೀವಿ ಜೇವೊಡೆದಾಗಳ್-**

**ಮ॥ ಸ್ರ॥ ಎನಿತಾ ಬ್ರಹ್ಮಾಂಡದಿಂದಿತ್ತುದಧಿ ಕುಲ ನಗ ದ್ವೀಪ ಸಂಘಾತಮಂತಂ**
**ತನಿತುಂ ಬತ್ತಿತ್ತು ತೂಳ್ದತ್ತುಡುಗಿದುದೆನೆ ದಿಕ್ಪಾಲರಾ ದೇವದತ್ತ ।**
**ಧ್ವನಿ ಸಂಮಿಶ್ರಂ ಸಮುದ್ಯದ್ರಜತಗಿರಿತಟ ಸ್ಪಷ್ಟ ಸಂಶ್ಲಿಷ್ಟ ಮೌರ್ವೀ**
**ನಿನದಂ ಪರ್ವಿತ್ತಕಾಂಡ ಪ್ರಳಯ ಘನ ಘಟಾಟೋಪ ಗಂಭೀರನಾದಂ ॥** ೧೩೭

ಮರೆಯನ್ನು ಪ್ರವೇಶಿಸಿದುವು. ನನ್ನ ಇಷ್ಟಾರ್ಥವು ಈ ದಿನ ಪೂರ್ಣವಾಯಿತು ಎಂದು ಕರ್ಣನು ತನ್ನ ಎರಡು ಭುಜಗಳನ್ನೂ ನೋಡಿ ಯುದ್ಧಾನಂದದಿಂದ ಕೂಡಿ ಶಲ್ಯನನ್ನು ತೇರನ್ನು ನಡೆಸುವಂತೆ ಹೇಳಿ ದಿವ್ಯಾಸ್ತ್ರಗಳ ಬತ್ತಳಿಕೆಯನ್ನು ಎರಡು ಪಕ್ಕದಲ್ಲಿಯೂ ಬಿಗಿದುಕೊಂಡು ತಾಳವಟ್ಟವೆಂಬ ಬಿಲ್ಲು ಕೆಂಪಗಿರುವ ತನ್ನ ಅಂಗೈಯನ್ನು ಸೇರಿಕೊಂಡಿರಲು ಬಿಲ್ಲಿನ ಹದೆಯನ್ನು ಎಳೆದು ಮೀಟಿ (ಜೇವೊಡೆ)ದನು. ೧೩೬. ಪ್ರಳಯಕಾಲದ ಕಾಲಭೈರವನಿಂದ ಕಲಕಲ್ಪಟ್ಟ ಪುಷ್ಪಲಾವರ್ತ ಮೋಡದಂತೆ ಆ ಅತಿಭಯಂಕರವಾದ ಶತ್ರುರಾಜರ ಕಿವಿಗೆ ಭೈರವಾಡಂಬರವಾಗಿ ಗುಹೆಗಳ ಆಳವಾದ ಕಣಿವೆಗಳ ಒಳಭಾಗವನ್ನು ಭೇದಿಸಿದ ಕರ್ಣನ ಬಿಲ್ಲಿನ ಹೆದೆಯ ಶಬ್ದವು ಆ ದಿನ ಪುನಃ ಪುನಃ ಪ್ರಕಟವಾಯಿತು. ವ॥ ಪ್ರಳಯಕಾಲದ ಗಾಳಿಯಿಂದ ಹೊಡೆಯಲ್ಪಟ್ಟ ಕುಲಪರ್ವತಗಳು (ತಾವಿರುವ) ನೆಲೆಯಿಂದ ಚಲಿಸುವಂತೆ ಕರ್ಣನು ಚಲಿಸಿದನು. ಕಾಗೆಯ ಬಾವುಟವು ಆಕಾಶಪ್ರದೇಶದಲ್ಲಿ ಅಲುಗಾಡುತ್ತಿರಲು ತನಗೆ ಎದುರಾಗಿ ಬರುತ್ತಿರುವ ಕರ್ಣನ ತೇರಿಗೆ ತನ್ನ ತೇರನ್ನು ಸಮೀಪವಾಗುವ ಹಾಗೆ ಹರಿಯಿಸಿ ವಿಂಧ್ಯ ಮಲಯಪರ್ವತಗಳು ಒಂದರೊಡನೊಂದು ತಾಗುವಂತೆ ತಾಗಿ ಅರ್ಜುನನು ದೇವದತ್ತಶಂಖವನ್ನು ಊದಿ ಗಾಂಡೀವಕ್ಕೆ ಹೆದೆಯನ್ನೇರಿಸಿ ಚೆನ್ನಾಗಿ ಸೆಳೆದು ಶಬ್ದಮಾಡಿದನು. ೧೩೭. ಬ್ರಹ್ಮಾಂಡದಿಂದೀಕಡೆ ಎಷ್ಟು ಸಮುದ್ರ, ಕುಲಪರ್ವತದ್ವೀಪ ಸಮೂಹವಿದ್ದಿತೋ ಅವಷ್ಟೂ ಕ್ರಮವಾಗಿ ಬತ್ತಿತು, ತಳ್ಳಲ್ಪಟ್ಟಿತು ಮತ್ತು ಸುಕ್ಕಿಹೋಯಿತು ಎಂದು ದಿಕ್ಪಾಲಕರು ಹೇಳುತ್ತಿರಲು ದೇವದತ್ತವೆಂಬ ಶಂಖಧ್ವನಿಯಿಂದ ಕೂಡಿಕೊಂಡಿರುವುದೂ ಪ್ರಳಯಕಾಲದ ಮೋಡಗಳ ಸಮೂಹದ ಆಡಂಬರವುಳ್ಳದೂ ಆದ ಆ ಹೆದೆಯ ಟಂಕಾರಶಬ್ದವು ಎತ್ತರವಾದ ಕೈಲಾಸಪರ್ವತದ

ವ॥ ಆಗಳಾ ಧ್ವನಿಯಂ ಕೇಳ್ದು ದೇವೇಂದ್ರನಿಂದ್ರಲೋಕದೊಳ್ ಮಿಟ್ಟೆಂದು ಮಿಡುಕಲಪ್ಪೊಡಂ ದೇವರಿಲ್ಲದಂತು ದೇವನಿಕಾಯಂಬೆರಸು ತನ್ನ ಮಗನ ಕಾಳೆಗಮಂ ನೋಡಲೆಂದು ಚಿತ್ರಪಟಮಂ ಕೆದಱೆ ಗಗನತಳಮನಳಂಕರಿಸಿದಂತೆ ಷೋಡಶ ರಾಜರ್ವೆರಸು ಬಂದಿರ್ದನಾಗಳ್-

ಕಂ॥ ದೇವ ಬ್ರಹ್ಮ ಮುನೀಂದ್ರಾ
ಸೇವಿತನುತ್ತಪ್ತ ಕನಕವರ್ಣಂ ಹಂಸ ।
ಗ್ರೀವ ನಿಹಿತೈಕಪಾದನಿ
ಳಾವಂದ್ಯನನಿಂದ್ಯನಬ್ಜಗರ್ಭಂ ಬಂದಂ ॥ ೧೩೮

ವ॥ ಆಗಳ್-

ಕಂ॥ ಏಱೆಯೆ ನಂದಿಯನಾ ಪೆಱ
ಗೇಱೆದ ಗಿರಿಸುತೆಯ ಮೊಲೆಗಳಳ್ಳೇಱೆಂ ನೀ ।
ರೇಱೆಸುತಿರೆ ಕರ್ಣಾರ್ಜುನ
ರೇಱಂ ನೋಡಲ್ಕೆ ಭೂತನಾಥಂ ಬಂದಂ ॥ ೧೩೯

ಕಂ॥ ಆರನುವರದೊಳಮೆನಗಣ
ಮಾರದ ಕಣ್ಮಲರ್ಗಳಾರ್ಗುಮರಿಗನಿನೆನುತುಂ ।
ನೀರದಪಥದೊಳ್ ಮುತ್ತಿನ
ಹಾರದ ಬೆಳಗೆಸೆಯೆ ನಾರದಂ ಬಂದಿರ್ದಂ ॥ ೧೪೦

ರಸೆಯಿಂದಮೊಗೆದು ಪೆಡೆಗಳ
ಪೊಸ ಮಾಣಿಕದೆಳವಿಸಿಲ್ಗಳೊಳ್ ಪೊಸದಳಿರೊಳ್ ।
ಮುಸುಕಿದ ತೆಱದಿಂದೆಸೆದಿರೆ
ಪೊಸತೆನೆ ನಡೆ ನೋಡಲುರಗರಾಜಂ ಬಂದಂ ॥ ೧೪೧

ದಡದಲ್ಲಿಯೂ ಸ್ಪಷ್ಟವಾಗಿ ಸೇರಿಕೊಂಡು ಪ್ರಕಟವಾಯಿತು. ವ॥ ಆಗ ಆ ಧ್ವನಿಯನ್ನು ಕೇಳಿ ದೇವೇಂದ್ರನು ಇಂದ್ರಲೋಕದಲ್ಲಿ ಮಿಟ್ಟೆಂದು ಅಲುಗಾಡುವುದಕ್ಕೂ ದೇವತೆಯಿಲ್ಲದ ಹಾಗೆ ಎಲ್ಲ ದೇವತೆಗಳ ಸಮೂಹದೊಡನೆ ಕೂಡಿ ತನ್ನ ಮಗನ ಕಾಳಗವನ್ನು ನೋಡಬೇಕೆಂದು ಚಿತ್ರಪಟವನ್ನು ಹರಡಿ ಆಕಾಶಪ್ರದೇಶವನ್ನು ಅಲಂಕರಿಸುವ ಹಾಗೆ ಹದಿನಾರುರಾಜರುಗಳೊಡನೆ ಬಂದಿದ್ದನು. ೧೩೮. ಆಗ ದೇವತೆಗಳು, ಬ್ರಾಹ್ಮಣರು ಮತ್ತು ಋಷಿಶ್ರೇಷ್ಠರುಗಳಿಂದ ಸೇವಿಸಲ್ಪಟ್ಟವನೂ ಚೆನ್ನಾಗಿ ಕಾಸಿದ ಚಿನ್ನದ ಬಣ್ಣವುಳ್ಳವನೂ ಹಂಸದ ಕತ್ತಿನ ಮೇಲೆ ಇಡಲ್ಪಟ್ಟ ಒಂದು ಪಾದವುಳ್ಳವನೂ ಲೋಕಪೂಜ್ಯನೂ ಯಾರಿಂದಲೂ ನಿಂದಿಸಲ್ಪಡದವನೂ ಆದ ಬ್ರಹ್ಮನು ಬಂದನು. ವ॥ ಆಗ ೧೩೯. ನಂದಿಯನ್ನೇರಿಕೊಂಡು ಹಿಂದೆ ಹತ್ತಿ ಕುಳಿತಿರುವ ಪಾರ್ವತಿಯ ಮೊಲೆಗಳ ನಯವಾದ ತಿವಿತದಿಂದ ರಸವೇರುತ್ತಿರಲು ಕರ್ಣಾರ್ಜುನರ ಕಾಳಗವನ್ನು ನೋಡಲು ಈಶ್ವರನೂ ಬಂದನು. ೧೪೦. ಯಾರ ಯುದ್ಧದಲ್ಲಿಯೂ ಸ್ವಲ್ಪವೂ ತೃಪ್ತಿಯಾಗದ ನನ್ನ ನೇತ್ರಪುಷ್ಪಗಳು ಅರ್ಜುನನಿಂದ ತೃಪ್ತಿಹೊಂದುತ್ತವೆ ಎಂದು ಹೇಳುತ್ತಾ ಆಕಾಶಮಾರ್ಗದಲ್ಲಿ ಮುತ್ತಿನ ಹಾರದ ಕಾಂತಿಯು ಪ್ರಕಾಶಿಸುತ್ತಿರಲು ನಾರದನು ಬಂದಿದ್ದನು. ೧೪೧. ಪಾತಾಳಲೋಕದಿಂದ ಹುಟ್ಟಿ ಹೆಡೆಗಳ

ದಿನಕರನುಮಿಂದ್ರನುಂ ನಿಜ
ತನಯರ ದೆಸೆಗೆಱಗಿದೆಱಕದಿಂ ಗೆಲವಿನ ಮಾ ।
ತನೆ ನುಡಿಯೆ ನುಡಿದ ಜಗಳಮ
ದಿನಿಸಾನುಂ ತ್ರಿಪುರಹರನ ಕಿವಿಗೆಯ್ದುವುದುಂ ॥ ೧೪೨

ವ॥ ಆಗಳ್ ದೇವೇಂದ್ರಂಗಂ ದಿವಸೇಂದ್ರಂಗಂ ಬಟೆಯನಟ್ಟ ಬರಿಸಿ-

ಕಂ॥ ಜಗಳಮಿದೇಂ ದಿನಕರ ಪೊಣ
ರ್ದುಂ ಗೆಲ್ವನೇ ನಿಜತನೂಭವಂ ಹರಿಗನೊಳೇಂ ।
ಬಗೆಗೆಟ್ಟೆಯೊ ಧುರದೊಳವಂ
ಮಿಗಿಲೆನಗೆನೆ ನಿನಗೆ ಪಗಲೊಳೇಂ ಕಟ್ಟಲೆಯೇ ॥ ೧೪೩

ವ॥ ಎಂದು ದಿನಕರನ ಪುರಂದರನ ಜಗಳಮಂ ಪತ್ತುವಿಡೆ ನುಡಿದು-

ಕಂ॥ ಅಳವಿನೊಳೆನ್ನುಮನಿನಿಸ
ಗ್ಗಳಿಸಿದ ಹರಿಗನೊಳಿದಿರ್ಚೆ ಕರ್ಣಂ ಗೆಲಲು ।
ಮ್ಮಳಿಪಂ ಗಡಮೆಂದೋಪಳ
ತಳಮಂ ಪೊಯ್ದೀಶ್ವರಂ ಮುಗುಳ್ನಗೆ ನಕ್ಕಂ ॥ ೧೪೪

ವ॥ ಅಂತು ಮುಗಿಲೂಱಿದ ಮೂಱುಲೋಕಮುಂ ಕರ್ಣಾರ್ಜುನರ ಯುದ್ಧಮಂ ನೋಡಲ್ ನೆರೆದಲ್ಲಿ ನೆರವಿವಡೆದೆನ್ನ ಪ್ರತಿಜ್ಞೆಯಂ ನೆಱಪಲಿಂದವಸರಂಬಡೆದೆನೆಂದು ಕೌರವ ಕುಲಹಿಮಕರಾನಿಲಪ್ರಚಯವರ್ಷವಾರಿದನಪ್ಪ ಪವನತನಯಂ ಬದ್ಧವಪುವಾಗಿ ದುರ್ಯೋಧನಾ

ಹೊಸಮಾಣಿಕ್ಯಗಳು ಎಳೆಬಿಸಿಲಿನಲ್ಲಿ ಹೊಸಚಿಗುರುಗಳಿಂದ ಮುಚ್ಚಿಕೊಂಡಿರುವ ರೀತಿಯಿಂದ ಪ್ರಕಾಶಿಸುತ್ತಿರಲು ಸರ್ಪರಾಜನಾದ ವಾಸುಕಿಯೂ ಬಂದನು. ೧೪೨. ಸೂರ್ಯನೂ ಇಂದ್ರನೂ ತಮ್ಮ ಮಕ್ಕಳ ಕಡೆಗೆ ಉಂಟಾದ ಪಕ್ಷಪಾತದಿಂದ ಜಯದ ಮಾತನ್ನೇ ಆಡುತ್ತಿರಲು ಆಡಿದ ಜಗಳವು ಒಂದಿಷ್ಟು ಈಶ್ವರನ ಕಿವಿಗಳಿಗೂ ಮುಟ್ಟಿತು. ವ॥ ಆಗ ಇಂದ್ರನಿಗೂ ಸೂರ್ಯನಿಗೂ ದೂತರನ್ನು ಕಳುಹಿಸಿ ಬರಮಾಡಿ ೧೪೩. ಸೂರ್ಯನೇ ಇದೇನು ಜಗಳ, ನಿನ್ನ ಮಗನಾದ ಕರ್ಣನು ಹರಿಗನಲ್ಲಿ ಹೆಣಗಾಡಿ ಗೆಲ್ಲುತ್ತಾನೆಯೇ, ಬುದ್ಧಿಗೆಟ್ಟಿದ್ದೀಯೇನು? ಯುದ್ಧದಲ್ಲಿ ಅವನು ನನಗಿಂತಲೂ ಮೇಲಾದವನು ಎನ್ನುವಾಗ ನಿನಗೆ ಹಗಲಿನಲ್ಲಿಯೇ ಕತ್ತಲೆಯೇ? ವ॥ ಸೂರ್ಯ ಮತ್ತು ಇಂದ್ರರ ಜಗಳವನ್ನು ಕೊನೆಗಾಣುವಂತೆ ತೀರ್ಮಾನಿಸಿ - ೧೪೪. ಪರಾಕ್ರಮ ದಲ್ಲಿ ನನ್ನನ್ನೂ ಒಂದಿಷ್ಟು ಮೀರಿರುವ ಹರಿಗನನ್ನು ಎದುರಿಸಿ ಗೆಲ್ಲುವುದಕ್ಕೆ ಕರ್ಣನು ಕಾತರನಾಗಿದ್ದಾನೆಯಲ್ಲವೇ ಎಂದು ಈಶ್ವರನು ತನ್ನ ಪ್ರಿಯೆಯಾದ ಪಾರ್ವತಿಯ ಅಂಗೈಯನ್ನು ತಟ್ಟಿ ಹುಸಿನಗೆಯನ್ನು ನಕ್ಕನು. ವ॥ ಹಾಗೆ ಆಕಾಶದಲ್ಲಿ ನೆರೆದಿರುವ ಮೂರುಲೋಕವೂ ಕರ್ಣಾರ್ಜುನರ ಯುದ್ಧವನ್ನು ನೋಡಲು ನೆರೆದಿರುವಾಗಲೇ ನಾನೂ ನನ್ನ ಪ್ರತಿಜ್ಞೆಯನ್ನು ಪೂರ್ಣಮಾಡಲು ಅವಕಾಶಪಡೆದೆನೆಂದು ಕೌರವವಂಶವೆಂಬ ಚಂದ್ರನ ಕೊಳೆಯ ರಾಶಿಗೆ ಮಳೆಗಾಲದ ಮೋಡವಾಗಿರುವ ಭೀಮಸೇನನು ಉಬ್ಬಿ ಸಂತೋಷಪಟ್ಟನು. ದುರ್ಯೋಧನನ ತಮ್ಮಂದಿರೊಬ್ಬ

ನುಜರಂ ಪೆಸರ್ವೆಸರೊಳೆ ಕರೆದು ಮೂದಲಿಸಿದೊಡೆ ಮುನ್ನೆ ತಮ್ಮೊಡವುಟ್ಟಿದರ್ ಸತ್ತಱಲೊಳ ನಿಬರುಮೊಂದಾಗಿ ಬಂದು ತಾಗಿದಾಗಳ್-

ಮ॥ ಮಸಕಂಗುಂದದೆ ಪಾಯ್ವರಾತಿ ಶರಸಂಘಾತಂಗಳಂ ಕೂಡೆ ಖಂ
ಡಿಸಿ ಬಿಲ್ಲಂ ಮುಱಿಯೆಚ್ಚೊಡಂತನಿಬರುಂ ಬಾಳ್ಗಿಱ್ತು ಮೇಲ್ವಾಯ್ದೊಡ ।
ಬೞಸೆ ತಿಣ್ಣಂ ತೆಗೆದರ್ಧಚಂದ್ರಶರದಿಂ ಸೂೞ್ ಸೂೞೊಳೆಚ್ಚಾಗಳ
ರ್ಚಿಸಿದಂತಿರ್ದುದುರುಳ್ದ ಕೌರವಶಿರಃಪದ್ಮಂಗಳಿಂ ಕೊಳ್ಗುಳಂ ॥ ೧೪೫

ವ॥ ಅಂತು ದುರ್ಯೋಧನ ದುಶ್ಶಾಸನರಿರ್ವರುಮುೞಿಯುೞಿದ ಕೌರವರೆಲ್ಲರುಮಂ ಜೇರಗೆಯೊಕ್ಕಲ್ಮಾಡಿ ಕೆಡೆದ ಪೆಣಂಗಳನೆಡಗಲಿಸಿ ನಿಂದು-

ಮ॥ ಚಲದಿಂ ಕೃಷ್ಣೆಯ ಕೇಶಮಂ ಪಿಡಿದ ನಿನ್ನಿಂದಾದಱಲ್ ನಿನ್ನುರ
ಸ್ಥಲಮಂ ಪೋೞದೆ ಪೋಪುದಲ್ತೆನಗದೇಕಳ್ಕಿರ್ದಪೈ ಬಾೞ್ವ ಪಂ ।
ಬಲದೇನಿಂ ನಿನಗುಂಟೆ ನಿನ್ನನುಜರಂ ಕಂಡೆಂತುಮೇನೆನ್ನ ತೋ
ಳ್ವಲೆಯೊಳ್ ಸಿಲ್ಕಿದೆಯೆಂದು ಮೂದಲಿಪುದುಂ ದುಶ್ಶಾಸನಂ ತಾಗಿದಂ ॥ ೧೪೬

ವ॥ ಅಂತು ತಾಗಿದಾಗಳ್-

ಕಂ ॥ ಕಱುಪೆರ್ಚಿ ಪಗೆಯ ಬೇರ್ವರಿ
ದುಱುಮಿಕೆಯ ಪೊದೞ್ದಿ ಗಂಡಮಚ್ಚರದೊದವಿಂ ।
ನೆಱನನೆ ಮೂದಲಿಸುತ್ತುಂ
ನೆಱನನೆ ತೆಗೆದೆಚ್ಚರೊರ್ವರೊರ್ವರನಾಗಳ್ ॥ ೧೪೭

ರೊಬ್ಬರನ್ನೂ ಅವರ ಹೆಸರನ್ನು ಹಿಡಿದು ಮೂದಲಿಸಿ ಕರೆದನು. ಈಗಾಗಲೇ ತಮ್ಮ ಸಹೋದರರು ಸತ್ತ ದುಃಖದಿಂದ ದುಃಖಿತರಾದ ಆ ಅಷ್ಟು ಜನವೂ ಒಂದಾಗಿ ಸೇರಿ ತಾಗಿದರು. ೧೪೫. ಕಡಿಮೆಯಾಗದ ವೇಗದಿಂದ ಹಾದುಬರುತ್ತಿರುವ ಬಾಣಸಮೂಹಗಳನ್ನು ತಕ್ಷಣವೇ ಕತ್ತರಿಸಿ ಬಿಲ್ಲನ್ನೂ ಮುರಿದುಹೋಗುವ ಹಾಗೆ ಹೊಡೆದನು. ಅಷ್ಟು ಜನವೂ ಕತ್ತಿಯನ್ನು ಒರೆಯಿಂದ ಹೊರತೆಗೆದು - ಸೆಳೆದು ಮೇಲೆ ನುಗ್ಗಿ ಬಂದರು. ಭೀಮನು ರಭಸದಿಂದ ಅರ್ಧಚಂದ್ರಾಕಾರದ ಬಾಣವನ್ನು ತೆಗೆದು ಸಲಸಲಕ್ಕೂ ಹೊಡೆದಾಗ ಯುದ್ಧಭೂಮಿಯು ಉರುಳಿರುವ ಕೌರವರ ತಲೆಯೆಂಬ ಕಮಲಗಳಿಂದ ಪೂಜಿಸಲ್ಪಟ್ಟಂತೆ ಇದ್ದಿತು. ವ॥ ಹಾಗೆ ದುರ್ಯೋಧನ ದುಶ್ಶಾಸನರಿಬ್ಬರನ್ನು ಬಿಟ್ಟು ಉಳಿದ ಕೌರವರೆಲ್ಲರನ್ನೂ ಜೀರಿಗೆಯನ್ನು ಒಕ್ಕುವಂತೆ ಒಕ್ಕಿ ಕೆಡೆದಿರುವ ಹೆಣಗಳನ್ನು ದಾಟಿ ನಿಂತನು. ೧೪೬. 'ಛಲದಿಂದ ದ್ರೌಪದಿಯ ಕೂದಲನ್ನು ಹಿಡಿದೆಳೆದ ನಿನ್ನಿಂದಾಗಿರುವ ದುಃಖವು ನಿನ್ನ ಹೃದಯಪ್ರದೇಶವನ್ನು ಸೀಳದೇ ಹೋಗುವುದಿಲ್ಲ. ನನಗೆ ಏತಕ್ಕಾಗಿ ಹೆದರಿದ್ದೀಯೆ? ನಿನ್ನ ತಮ್ಮಂದಿರಾದುದನ್ನು ನೋಡಿಯೂ ಬದುಕಬೇಕೆಂಬ ಹಂಬಲ ನಿನಗೆ ಇನ್ನೂ ಇದೆಯೇ? ಹೇಗಾದರೇನು? ನನ್ನ ತೋಳಿನ ಬಲೆಯಲ್ಲಿ ಸಿಕ್ಕಿದ್ದೀಯೇ' ಎಂದು ಮೂದಲಿಸಲು ದುಶ್ಶಾಸನನು ತಾಗಿದನು. ವ॥ ಹಾಗೆ ತಾಗಿದಾಗ ೧೪೭. ಕೆರಳಿರುವ ಅಧಿಕವಾದ ದ್ವೇಷದಿಂದಲೂ ಬೇರುಬಿಟ್ಟಿರುವ ಗರ್ಜನೆಯಿಂದಲೂ, ವ್ಯಾಪ್ತವಾದ ಪೌರುಷ ಮತ್ತು ಮತ್ಸರದ

ಸುರಿಗಿಱಿವ ತೆಱದಿನೋರೊ
ರ್ವರನಿಸೆ ನಡೆ ನಟ್ಟ ಕೋಲ ಬಟೆವಿಡಿದೆತ್ತಂ ।
ಸುರಿದುವವಂದಿರ ಮುಳಿಸಿನ
ತೆರಳ್ದ ದಳ್ಳುರಿಯನಿಟೆಸಿ ನವರುಧಿರಂಗಳ್ ॥ ೧೪೮

ವ॥ ಅಂತು ನಿಜನಿಶಿತಮಾರ್ಗಣಂಗಳಿಂದಮಂಬು ತಪ್ಪ ಜಟ್ಟಿಗ ಬಿಲ್ಲಾಳಂತೆಚ್ಚು ಪಾಯ್ವರಾತಿಯ ಮೆಯ್ಯ ನೆತ್ತರಂ ಕಂಡು ಸೂಟೀಸಿನೊಳಿವನ ನೆತ್ತರೊಕ್ಕೊಡಂ ತನಗೆ ಬಸಿಱಾಱೆ ಕುಡಿಯಲುಂ ದ್ರೌಪದಿಯ ಕೇಶಪಾಶಮಂ ತೊಯ್ದು ಮುಡಿಯಲುಂ ನೆಱೆಯದೆಂದು-

ಕಂ॥ ಆವನಂ ಬಂಚಿಸಿ ಗದೆಗೊಂ
ಡವನ ವರೂಥಮನೆ ತಿಣ್ಣಮಿಟ್ಟೊಡೆ ಗದೆಗೊಂ ।
ಡವನೆಯ್ತರೆ ರಥದಿಂದಿಟಿ
ದವನಿಯೊಳವನುಮನುರುಳ್ಚಿದಂ ಪವನಸುತಂ ॥ ೧೪೯

ಮ॥ ಬಳೆ ಸುರ್ಗುತ್ತಿರೆ ಮೆಟ್ಟ ಗಂಟಲನಿವಂ ದುಶ್ಶಾಸನಂ ಭೀಮನಿಂ
ಬಳ ಸಂಪನ್ನನವುಂಕಿ ಕೊಂದಪನಿದಂ ಮಾರ್ಕೊಳ್ವ ಬಲ್ಲಾಳ್ಗಸುಂ ।
ಗೊಳೆ ಬಾಳೆತ್ತಿದೆನೇಕೆ ಕಣ್ಣ ಮಿಡುಕೈ ಪಿಂಗಾಕ್ಷ ನೀನೇಕೆ ಮಿ
ಳ್ಮಿಳ ನೋಡುತ್ತುಳನಿರ್ದೆಯೆಂದದಟರಂ ಭೀಮಂ ಪಳಂಚಲ್ಚಿದಂ ॥ ೧೫೦

ಸೇರುವಿಕೆಯಿಂದಲೂ ಮರ್ಮವನ್ನೇ ರಹಸ್ಯವಾದುದನ್ನೇ ಮೂದಲಿಸುತ್ತ ಒಬ್ಬೊಬ್ಬರೂ ಮರ್ಮಸ್ಥಳವನ್ನೇ ಗುರಿಮಾಡಿ ಹೊಡೆದರು. ೧೪೮. ಕೈಗತ್ತಿಯಿಂದ ಹೊಡೆದಾಡುವಂತೆ ಒಬ್ಬನು ಮತ್ತೊಬ್ಬನನ್ನು ಹೊಡೆಯಲು ಚೆನ್ನಾಗಿ ನಾಟಿಕೊಂಡ ಬಾಣದ ದಾರಿಯನ್ನೇ ಅನುಸರಿಸಿ ಹೊಸರಕ್ತವು ಅವರುಗಳ ಕೋಪದ ಒಟ್ಟುಗೂಡಿಸಿದ ದಳ್ಳುರಿಯನ್ನೂ ತಿರಸ್ಕರಿಸುತ್ತ ಎಲ್ಲಕಡೆಯಲ್ಲಿಯೂ ಸುರಿಯಿತು. ವ॥ ಭೀಮನು ಹರಿತವಾದ ಬಾಣಗಳಿಂದ ಆ ಬಾಣಗಳು ಮುಗಿದು ಹೋಗುವವರೆಗೂ ಶೂರನಾದ ಬಿಲ್ಲಾಳಿನಂತೆ ಹೊಡೆದು ದುಶ್ಶಾಸನನ ಮೆಯ್ಯಿಂದ ಹರಿದುಬರುತ್ತಿರುವ ರಕ್ತವನ್ನು ನೋಡಿ ಈ ಸರದಿಯ ಪೆಟ್ಟಿನಿಂದಲೇ ಇವನ ರಕ್ತವು ಸುರಿದುಹೋದರೆ ಮುಂದೆ ಅದು ತನ್ನ ಹೊಟ್ಟೆಯು ತೃಪ್ತಿಯಾಗುವ ಹಾಗೆ ಕುಡಿಯುವುದಕ್ಕೂ ದ್ರೌಪದಿಯ ಕೂದಲಿನರಾಶಿಯನ್ನು ಒದ್ದೆಮಾಡಿ ಮುಡಿಸುವುದಕ್ಕೂ ಸಾಲದೇ ಹೋಗಬಹುದು ಎಂದು ೧೪೯. ಅವನನ್ನು ವಂಚಿಸಿ ಗದೆಯನ್ನು ತೆಗೆದುಕೊಂಡು ಅವನ ತೇರನ್ನು ತೀಕ್ಷ್ಣವಾಗಿ ಹೊಡೆದನು. ಅವನು ಗದೆಯನ್ನು ತೆಗೆದುಕೊಂಡು ಬರಲು ಭೀಮನು ರಥದಿಂದಿಳಿದು ಅವನನ್ನು ಭೂಮಿಯಲ್ಲಿ ಉರುಳಿಸಿದನು. ೧೫೦. ಗಂಟಲಬಳೆಗಳು ಜಜ್ಜಿಹೋಗುವ ಹಾಗೆ ಕಾಲಿನಿಂದ ಮೆಟ್ಟಿ ತುಳಿದು ಇವನು ದುಶ್ಶಾಸನ, ಭೀಮನಿಗಿಂತ ಬಲಶಾಲಿಯಾದವನು, ಇವನನ್ನು ಅಮುಕಿ ಕೊಂದು ಹಾಕುತ್ತೇನೆ, ಇದನ್ನು ಪ್ರತಿಭಟಿಸುವ ಶೂರರ ಪ್ರಾಣಾಪಹಾರಮಾಡಲು ಕತ್ತಿಯನ್ನೆತ್ತಿದ್ದೇನೆ, ದುರ್ಯೋಧನ! ಯಾತಕ್ಕೋಸ್ಕರ ನೀನು ಕಣ್ಣನ್ನು ಮಿಟುಕಿಸುವುದಿಲ್ಲ? ಏತಕ್ಕೆ ಮಿಳಮಿಳನೆ ನೋಡುತ್ತ ಒಳಗೇ ಇದ್ದೀಯೆ ಎಂದು ಭೀಮನು ಶೂರರನ್ನು ಪ್ರತಿಭಟಿಸಿ ಆರ್ಭಟಿಸಿದನು.

ವ|| ಎಂದು ನುಡಿದು ನೀನುಂ ನಿನ್ನ ಪ್ರತಿಜ್ಞೆಯಂ ನೆಱಿಪಿದೆಯಾನುಮೆನ್ನ ಪ್ರತಿಜ್ಞೆಯಂ ನೆಱಿಪುವೆನೆಂದು ದ್ರೌಪದಿಯಂ ಪಿಡಿಯನೇಱಿಸಿ ಬೀಡಿಂಗೆ ಕಳಿಪಿ ರಾಕ್ಷಸಕ್ರೀಡೆಯನಾಡಲ್ ಬಗೆದು ಹಿಡಿಂಬೆಯಂ ನೆನೆದು ಬರಿಸಿ-

ಕಂ|| ಒಸರ್ವ ಬಿಸುನೆತ್ತರಂ ರ
ಕ್ಕಸನಂದದೆ ಕುಡಿದು ಕುಡಿದು ಕಂಡಂಗಳನ ।
ರ್ವಿಸೆ ಮೆಲ್ದು ಮೆಲ್ದು ಕರ್ಬಿನ
ರಸಕ್ಕಮಿನಿಸಿಂಪುಗಾಣೆನೆಂದನಿಲಸುತಂ ॥ ೧೫೭

ಸವಿ ಸವಿದು ಬಿಕ್ಕ ಬಿಕ್ಕನೆ
ಸವಿ ನೋಡೆನ್ನಾಣೆಯೆಂದು ರಕ್ಕಸಿಗಮದಂ ।
ಸವಿದೋಱಿ ನೆತ್ತರೆಲ್ಲಂ
ತವೆ ಮುಳಿಸಿಂದವನ ಕರುಳ ಪಿಣಿಲಂ ನೊಣೆದಂ ॥ ೧೫೮

ವ|| ಅಂತು ಕುಡಿದು ನಿಜವಿರೋಧಿ ರುಧಿರಾಸವದೊಳಳವಿಗಳಿಯೆ ಸೊಕ್ಕಿ ತಾನುಂ ಹಿಡಿಂಬೆಯುಮವನ ಬರಿಯ ನರವಿನಡುಗಿನಿಡುವಿನೆಡೆಯ ಕೆನ್ನೆತ್ತರೊಳೊರ್ವರೊರ್ವರಂ ತಳ್ಕಿಱಿದುಂ ಬೊಬ್ಬಿಱಿದುಂ ತ್ರಿಪುಂಡ್ರಮಿಟ್ಟುಂ ಕೂಕಿಱಿದುಂ ತೇಗಿಯುಂ ಪಸಿಗೆವರಿದುಂ ಬವಳಿವರಿದುಂ ಬಾಸಂಗುಟಿಗೆವಱಿದುಂ ಸೂಟ್ಭರಿದುಮಾಡುವಾಗಳುಭಯಬಲಂಗಳ್ ಬೆಕ್ಕಸಂಬಟ್ಟು ನೋಡಿ-

ಕಂ|| ಆದ ಮುಳಿಸಿಂದಮೆಲ್ವಂ
ತೇದುಂ ಕುಡಿಯಲ್ಕೆ ತಕ್ಕ ಪಗೆವನ ರುಧಿರಾ ।
ಚ್ಛೋದಮನೆ ಕುಡಿದು ಮಾಣ್ದ ವೃ
ಕೋದರನೇನಾವ ತೆಱದೊಳಂ ದೋಷಿಗನೇ ॥ ೧೫೯

ಹೇಳು." ವ|| ಎಂದು ಹೇಳಿ ನೀನು ನನ್ನ ಪ್ರತಿಜ್ಞೆಯನ್ನು ಪೂರ್ಣಮಾಡಿದೆ. ನಾನೂ ನನ್ನ ಪ್ರತಿಜ್ಞೆಯನ್ನು ಪೂರ್ಣಮಾಡುತ್ತೇನೆ ಎಂದು ದ್ರೌಪದಿಯನ್ನು ಹೆಣ್ಣಾನೆಯ ಮೇಲೆ ಕುಳ್ಳಿರಿಸಿ ಮನೆಗೆ ಕಳುಹಿಸಿ ರಾಕ್ಷಸಕ್ರೀಡೆಯನ್ನು ಆಡಲು ಯೋಚಿಸಿ ಹಿಡಿಂಬೆಯನ್ನು ಜ್ಞಾಪಿಸಿಕೊಂಡು ಬರಮಾಡಿ ೧೫೭. ಸ್ರವಿಸುತ್ತಿರುವ ಬಿಸಿರಕ್ತವನ್ನು ರಾಕ್ಷಸನ ಹಾಗೆ ಕುಡಿದು ಮಾಂಸಖಂಡಗಳನ್ನು ವಿಶೇಷವಾಗಿ ಅಗಿದು ಅಗಿದು ಕಬ್ಬಿನ ರಸದಲ್ಲಿಯೂ ಇಷ್ಟು ರುಚಿಯನ್ನು ಕಾಣೆನೆ ಎಂದು ಭೀಮನು ೧೫೮. ರುಚಿ ನೋಡಿ ನೋಡಿ ಬಿಕ್ಕಬಿಕ್ಕನೆ ರುಚಿನೋಡು ಎನ್ನಾಣೆ ಎಂದು ರಾಕ್ಷಸಿಗೂ ಅದರ ರುಚಿಯನ್ನು ತೋರಿಸಿ ರಕ್ತವೆಲ್ಲವೂ ಮುಗಿದು ಹೋಗಲು ಅವನ ಕರುಳುಗಳ ಕುಚ್ಚನ್ನು ಕೋಪದಿಂದ ಚಪ್ಪರಿಸಿದನು. ವ|| ಹಾಗೆ ಕುಡಿದು ತನ್ನ ಶತ್ರುವಿನ ರಕ್ತವೆಂಬ ಹೆಂಡದಲ್ಲಿ ಅಳತೆಮೀರಿ ಸೊಕ್ಕಿ ಹೋಗಿ ತಾನೂ ಹಿಡಿಂಬೆಯೂ ಅವನ ಪಕ್ಕಗಳ ನರಗಳ ಮಾಂಸಗಳ ಸಂದಿಗಳಲ್ಲಿದ್ದ ಕೆಂಪಾದ ರಕ್ತವನ್ನು ಮೈಗೆ ಬಳಿದುಕೊಂಡು ಹಣೆಯಲ್ಲಿ ಮೂರು ಎಳೆಗಳನ್ನು ಧರಿಸಿ ಘಟ್ಟಿಯಾಗಿ ತೇಗಿ ನೇರವಾಗಿ ಓಡಿ ಸುತ್ತಲೂ ತಿರುಗಿ ನಕ್ಷತ್ರಮಂಡಲಕ್ಕೆ ನೆಗೆದು ಸರದಿಯ ಮೇಲೆ ಆಡುವಾಗ ಎರಡು ಸೈನ್ಯಗಳೂ ಆಶ್ಚರ್ಯಪಟ್ಟು ನೋಡಿದವು. ೧೫೯. ವಿಶೇಷವಾಗಿ ಇವನಿಗೆ ಉಂಟಾದ

ಮ॥ ಮುನಿಸಂ ಮಾಡಿದರಾತಿನಾಥರಡಗಂ ಸುಪ್ಪಲ್ಗೆ ಕೆನ್ನೆತ್ತರಂ
ಕೆನೆಗೊಂಡಾಜಿದ ಪಾಲ್ಗೆ ದೊಂಡೆಗರುಳಂ ಕರ್ಬಿಂಗೆ ಲೆಕ್ಕಕ್ಕೆ ತಂ ।
ದಿನಿಸುಂ ಮಾಣದೆ ಪೀರ್ದು ಪೀರ್ದು ನೊಣೆದಂತೀ ಮಾಟ್ಕೆಯಿಂ ಭೀಮಸೇ
ನನವೋಲ್ ಪೂಣ್ದುದನೆಯ್ದೆ ಪೂಣ್ದ ಪಗೆಯಂ ಕೊಂಡಾಡದಂ ಗಂಡನೇ ॥ ೧೬೦

ವ॥ ಎಂದು ಜರಾಸಂಧಾರಿಯ ಗಂಡವಾತಂ ಕೊಂಡಾಡುತ್ತಿರೆ ಭೀಮಸೇನನಾ ನೆರೆದ ನೆರವಿಗಿಂತೆಂದಂ-

ಉ॥ ಪೊಲ್ಲದು ಪೂಣ್ದು ಪುಚ್ಚಟಿಯದುರ್ಕಿದ ಕೌರವರಂ ಪೊರಳ್ಚಿ ಕೊಂ
ದಿಲ್ಲಿಯೆ ವೈರಿ ಶೋಣಿತಮನೀಂಟಿ ತದಂತ್ರದೆ ಕೃಷ್ಣೆಗಿಂದು ಧ ।
ಮ್ಮಿಲ್ಲವನಿಂಬನಿಂ ಮುಡಿಸಿ ಕೌರವ ನಾಯಕನೂರುಭಂಗಮೊಂ
ದಲ್ಲದುದೆಲ್ಲಮಂ ನೆಱಪಿದೆಂ ಗಡಮೋಳಿಯೆ ಕೇಳಿಮೆಲ್ಲರುಂ ॥ ೧೬೧

ವ॥ ಎಂದು ನುಡಿದು ಗಜಱಿ ಗರ್ಜಿಸಿ ಕಾಲದಂಡಮಂ ಪೋಲ್ವ ತನ್ನ ಗದಾದಂಡಮಂ ಕೊಂಡು ತಿರಿಪಿ ಬೀಸುತ್ತುಂ ಬರ್ಪ ಭೀಮಸೇನನಂ ಕರ್ಣನ ಮಗಂ ವೃಷಸೇನಂ ಕಂಡು-

ಚಂ॥ ದಡಿಗನ ಮಿೞ್ತುವಂ ಮಿದಿದೊಡಲ್ಲದೆ ಮಾಣೆನಮೋಘಮೆಂದು ಕೂ
ರ್ಪುಡುಗದೆ ಬಂಡು ತಾಗೆ ಯಮಳರ್ ತಡೆಗೊಂಡೊಡೆ ತಾವುಮೆಮ್ಮೊಳಂ
ತೊಡರ್ದಪರೆಂದವಂದಿರ ರಥಂಗಳನಚ್ಚುಡಿಯೆಚ್ಚು ಭೀಮನಂ
ತಡೆಯದೆ ಮುಟ್ಟ ಪೆರ್ಚಿ ನುಡಿದಂ ಕಪಿಕೇತನನಂ ಮುರಾಂತಕಂ ॥೧೬೨

ಕೋಪದಿಂದ ಎಲುಬನ್ನೂ ತೇದು ಕುಡಿಯಬಹುದಾಗಿತ್ತು. ಆದರೆ ಶತ್ರುವಿನ ರಕ್ತವೆಂಬ ತಿಳಿನೀರನ್ನೇ ಕುಡಿದು ತೃಪ್ತನಾಗಿದ್ದಾನೆ. ಭೀಮನು ಯಾವರೀತಿಯಿಂದಲೂ ದೋಷಿಯಲ್ಲ. ೧೬೦. ಕೋಪವನ್ನುಂಟುಮಾಡಿದ ಶತ್ರುರಾಜರ ಮಾಂಸವನ್ನು ಉಪ್ಪುಹಾಕಿದ ಭಕ್ಷ್ಯವಿಶೇಷಕ್ಕೂ ಕೆಂಪುರಕ್ತವನ್ನು ಕೆನೆಗಟ್ಟಿ ಆರಿದ ಹಾಲಿಗೂ ದೊಂಡೆಗರುಳನ್ನು ಕಬ್ಬಿನ ಗಣನೆಗೂ ಸಮನಾಗಿ ಭಾವಿಸಿ ಸ್ವಲ್ಪವನ್ನೂ ಬಿಡದೆ ಕುಡಿದು ಚಪ್ಪರಿಸಿದ ಈ ಭೀಮಸೇನನ ಹಾಗೆ ಪ್ರತಿಜ್ಞೆ ಮಾಡಿದುದನ್ನು ಪೂರ್ಣಮಾಡಿದ ಶತ್ರುವನ್ನು ಹೊಗಳದಿರುವವನು ಶೂರನೇ? ವ॥ ಎಂದು ಭೀಮನ ಪೌರುಷದ ಮಾತನ್ನು ಕೊಂಡಾಡುತ್ತಿರಲು ಭೀಮಸೇನನು ಅಲ್ಲಿ ನೆರೆದಿದ್ದ ಗುಂಪಿಗೆ ಹೀಗೆಂದನು-೧೬೧. ಕೆಟ್ಟ ಪ್ರತಿಜ್ಞೆಯನ್ನು ಮಾಡಿ ಅದು ವ್ಯರ್ಥವಾಗದಂತೆ ಗರ್ವಿಷ್ಠರಾದ ಕೌರವರನ್ನು ಹೊರಳಿಸಿ ಕೊಂದು ಇಲ್ಲಿಯ ವೈರಿಯ ರಕ್ತವನ್ನು ಕುಡಿದು ಅವನ ಕರುಳಿನಿಂದ ದ್ರೌಪದಿಗೆ ತುರುಬನ್ನು ಮನೋಹರವಾಗಿರುವಂತೆ ಮುಡಿಸಿ ಕೌರವನಾಯಕನಾದ ದುರ್ಯೋಧನನ ತೊಡೆಯನ್ನು ಮುರಿಯುವುದೊಂದನ್ನುಳಿದು ಮತ್ತೆಲ್ಲವನ್ನೂ ಕ್ರಮವಾಗಿ ಪೂರ್ಣಮಾಡಿದೆನಲ್ಲವೇ ಎಲ್ಲರೂ ಕೇಳಿ! ವ॥ ಎಂದು ಹೇಳಿ ಆರ್ಭಟಮಾಡಿ ಯಮನ ದಂಡವನ್ನು ಹೋಲುವ ತನ್ನ ಗದಾದಂಡವನ್ನು ತೆಗೆದುಕೊಂಡು ತಿರುಗಿಸುತ್ತ ಬರುತ್ತಿರುವ ಭೀಮಸೇನನನ್ನು ಕರ್ಣನ ಮಗನಾದ ವೃಷಸೇನನು ನೋಡಿದನು. ೧೬೨. 'ದಾಂಡಿಗನಾದ ಭೀಮನೆಂಬ ಈ ಮೃತ್ಯುವನ್ನು ತುಳಿದುದಲ್ಲದೆ ಬಿಡುವುದಿಲ್ಲ' ಎಂದು ವೃಷಸೇನನು ತನ್ನ ಕ್ರೌರ್ಯವನ್ನು

ಕಂ॥ ಇವನ ಶರಕಲ್ಪಮಿವನದ
ಟವನಳವಿವನಣ್ಮು ನಿನಗಮಗ್ಗಳಮಿವನಂ ।
ಪವನಸುತಂ ಗೆಲ್ಲಂ ನೀ
ನಿವನೊಳ್ ಪೊಣರೆಂದೊಡವನೊಳರಿಗಂ ಪೊಣರ್ದಂ ॥ ೧೬೩

ಪೊಣರ್ದೊಡಮನುವರಮಿವನೊಳ್
ತೊಣೆವೆತ್ತಪುದೆನಗೆ ನರನೊಳೆಂದಱಿಕೆಯ ಕೂ ।
ರ್ಗಣೆಗಳೊಳೆ ಪೂಟ್ಟು ತನ್ನಳ
ವಣಿಯರಮೆನೆ ನಾಲ್ಕು ಶರದೆ ಪಾರ್ಥನನೆಚ್ಚಂ ॥ ೧೬೪

ಇಸೆ ಮುತ್ತಿ ಮುಸುಱಿ ಪರಿ ಬಂ
ಧಿಸಿದುವು ನರರಥತುರಂಗಮಂಗಳನಂತಾ ।
ರ್ದೆಸಗಲ್ ಪೊಣರಲ್ ಮಿಡುಕಲ್
ಮಿಸುಕಲ್ಪಣಮೀಯದಾದುವವನ ಸರಲ್ಗಳ್ ॥ ೧೬೫

ವ॥ ಆಗಳದಂ ಕಂಡು ಪರಸೈನ್ಯಭೈರವಂ ಮುಕುಂದನನಿಂತೆಂದಂ-

ಕಂ॥ ಸ್ಯಂದನಬಂಧನಮೆಂಬುದ
ನಿಂದೀ ವೃಷಸೇನನಿಂದಮಱಿದೆನಿದಂ ಮು ।
ನ್ನೆಂದುಂ ಕಂಡಱಿಯೆನಿನಿ
ರ್ಕಾಂ ದಲ್ ಬೆಱಗಾದೆನೆನಗೆ ಬೆಸಸು ಮುಕುಂದಾ॥ ೧೬೬

ಕಡಮೆಮಾಡದೆ ಬಂದು ತಾಗಿದನು. ನಕುಲಸಹದೇವರು ಬಂದು ಅವನನ್ನು ಅಡ್ಡಗಟ್ಟಿದರು. ಇವರೂ ನಮ್ಮಲ್ಲಿ ಯುದ್ಧಮಾಡುತ್ತಾರೆಯೇ ಎಂದು ಅವರ ತೇರುಗಳನ್ನು ಅಚ್ಚು ಮುರಿದುಹೋಗುವ ಹಾಗೆ ಹೊಡೆದು ತಡಮಾಡದೆ ಭೀಮನ ಹತ್ತಿರಕ್ಕೆ ಬಂದು ವಿಜೃಂಭಿಸಿದನು. ಆಗ ಕೃಷ್ಣನು ಅರ್ಜುನನಿಗೆ ಹೇಳಿದನು. ೧೬೩. ಇವನ ಬಾಣವಿದ್ಯೆ, ಇವನ ಪರಾಕ್ರಮ, ಇವನ ಪೌರುಷ, ಇವನ ಶಕ್ತಿ ಇವು ನಿನಗಿಂತಲೂ ಹೆಚ್ಚಿನವು. ಇವನನ್ನು ಭೀಮನು ಗೆಲ್ಲಲಾರ. ನೀನು ಇವನಲ್ಲಿ ಯುದ್ಧಮಾಡು ಎನ್ನಲು ಅರಿಗನು ಅವನಲ್ಲಿ ಕಾದಿದನು. ೧೬೪. ವೃಷಸೇನನು ಇವನೊಡನೆ ಕಾದಿದರೆ ನನಗೆ ಯುದ್ಧವು ಅನುರೂಪವಾಗುತ್ತದೆ (ಸರಿಸಮಾನವಾಗುತ್ತದೆ) ಎಂದು ಹೇಳಿ ಪ್ರಸಿದ್ಧವೂ ಹರಿತವೂ ಆದ ಬಾಣಗಳಿಂದಲೇ ಹೂಳಿ ತನ್ನ ಶಕ್ತಿಯು ಅತಿಶಯವಾದುದು ಎನ್ನುವ ಹಾಗೆ ನಾಲ್ಕುಬಾಣಗಳಿಂದ ಅರ್ಜುನನನ್ನು ಹೊಡೆದನು. ೧೬೫. ಆ ಬಾಣಗಳು ಅರ್ಜುನನ ತೇರು ಕುದುರೆಗಳನ್ನು ಮುತ್ತಿ ಆವರಿಸಿಕೊಂಡು ಕಟ್ಟಿ ಹಾಕಿದುವು. ಹಾಗೆಯೇ ಆ ಬಾಣಗಳು ಆರ್ಭಟಿಸಿ ಕಾರ್ಯಮಾಡುವುದಕ್ಕೂ ರಥವನ್ನು ನಡೆಸುವುದಕ್ಕೂ ಜಗಳವಾಡುವುದಕ್ಕೂ ಅಳ್ಳಾಡುವುದಕ್ಕೂ (ಚಲಿಸುವುದಕ್ಕೂ) ಸ್ವಲ್ಪವೂ ಅವಕಾಶ ಕೊಡದಂತಹುವಾದುವು. ವ॥ ಅದನ್ನು ನೋಡಿ ಪರಸೈನ್ಯಭೈರವನಾದ ಅರ್ಜುನನು ಕೃಷ್ಣನಿಗೆ ಹೀಗೆ ಹೇಳಿದನು. ೧೬೬. ತೇರನ್ನು ಕಟ್ಟಿಹಾಕುವುದೆಂಬುದನ್ನು ಈ ದಿನ ವೃಷಸೇನನಿಂದ ತಿಳಿದೆನು. ಇದಕ್ಕೆ ಮೊದಲು ಎಂದೂ ತಿಳಿದಿರಲಿಲ್ಲ. ಇದಕ್ಕೆ ನಾನು

ಎನೆ ಪರಶುರಾಮನಿಂ ಕ
ರ್ಣನೆ ಬಲ್ಲಂ ಚಾಪವಿದ್ಯೆಯಂ ಕರ್ಣನಿನೀ ।
ತನೆ ಬಲ್ಲನಿವನ ಸರಲೆನಿ
ತನಿತುಮನೆಡೆವಿಡದೆ ತಱಿದು ತಲೆಯಂ ತಱಿಯಾ ॥ ೧೬೭

ವ॥ ಎಂಬುದುಮಳವಿಗಟಿಯೆ ಬಳೆದು ಪುದುಂಗೊಳಿಸಿದ ಬದಿರ ಸಿಡುಂಬನೆಡೆಗೊಳೆ ಕಡಿವ ಪೋಡುಂಗಾಱನಂತೆ ಪರಶು ಚಕ್ರಾಸಿಧೇನುಗಳಿಂದಂ ತನ್ನ ತೋಡುಂ ಬೀಡಿಂಗಂ ರಥಮನೆಸಗುವ ಮುರಾಂತಕನ ಕೆಯ್ಗಮೆಡೆಮಾಡಿ-

ಚಂ॥ ತನಗೆ ವಿನಾಯಕಂ ದಯೆಯಿನಿತ್ತ ಜಯಾಸ್ತ್ರಮನುರ್ಚಿಕೊಂಡು ಭೋಂ
ಕೆನೆ ದೊಣೆಯಿಂ ಶರಾಸನದೊಳಂತದನಾಗಡೆ ಪೂಡಿ ಧಾತ್ರಿ ತಿ ।
ಱ್ರನೆ ತಿರಿವನ್ನೆಗಂ ತೆಗೆದು ಕಂಧರಸಂಧಿಯನೆಯ್ದೆ ನೋಡಿ ತೊ
ಟ್ಟನೆ ನರನೆಚ್ಚೊಡುಚ್ಚಳಿಸಿ ಬಿಬ್ದುದು ವೈರಿಶಿರಸ್ಸರೋರುಹಂ ॥ ೧೬೮

ಕಂ॥ ಅಂತತ್ತ ಪರಿದ ತಲೆಯನ
ದಂ ತಂದಟ್ಟೆಯೊಳಮರ್ಚಿ ಸುರ ಗಣಿಕೆಯರ ।
ಭ್ರಾಂತರದೊಳೆ ತಮ್ಮ ವಿಮಾ
ನಾಂತರದೊಳಗಿಟ್ಟು ಕರ್ಣತನಯನನುಯ್ದರ್ ॥ ೧೬೯

ವ॥ ಅಂತು ನೋಡಿ ನೋಡಿ ತನ್ನ ಪಿರಿಯ ಮಗನಪ್ಪ ವೃಷಸೇನನನಂತಕನಣಲೊಳಡಸಿ ತನ್ನುಮನಣಲೊಳಡಸಲೆಂದಿರ್ದ ವಿಕ್ರಮಾರ್ಜುನನಂ ನೋಡಿ-

ಬೆರಗಾಗಿದ್ದೇನೆ. ಮುಂದೇನು ಮಾಡಬೇಕೆಂಬುದನ್ನು ತಿಳಿಸು ಕೃಷ್ಣಾ. ೧೬೭. ಎನ್ನಲು ಬಿಲ್ವಿದ್ಯೆಯಲ್ಲಿ ಕರ್ಣನು ಪರಶುರಾಮನಿಗಿಂತ ಸಮರ್ಥನಾದವನು. ಇವನು ಕರ್ಣನಿಗಿಂತ ಸಮರ್ಥನು. ಇವನ ಬಾಣಗಳಷ್ಟನ್ನೂ ಒಂದೇಸಮನಾಗಿ ಕತ್ತರಿಸಿ ತಲೆಯನ್ನು ಕತ್ತರಿಸಯ್ಯ. ವ॥ ಎನ್ನಲು ಅಳತೆಮೀರಿ ಸೊಂಪಾಗಿಯೂ ದಟ್ಟವಾಗಿಯೂ ಬೆಳೆದಿರುವ ಬಿದುರಿನ ಮೆಳೆಯನ್ನು ದಾರಿಮಾಡುವುದಕ್ಕಾಗಿ (ಬಿಡಿಸುವ) ಕತ್ತರಿಸುವ ಕಾಡನ್ನು ತರಿಯುವವನ ಹಾಗೆ ಕೊಡಲಿಕತ್ತಿಗಳಿಂದ ತನ್ನ ಬಾಣಸಂಧಾನ ಮತ್ತು ಮೋಚನಗಳಿಗೆ ಹೊಂದಿಕೊಳ್ಳುವುದಕ್ಕೂ ರಥವನ್ನು ನಡೆಸುವ ಕೃಷ್ಣನ ಕೈಗಳನ್ನಾಡಿಸುವುದಕ್ಕೂ ಅನುಮಾಡಿಕೊಂಡು ೧೬೮. ವಿನಾಯಕನು ತನಗೆ ಕೃಪೆಯಿಂದ ಕೊಟ್ಟ ಜಯಾಸ್ತ್ರವನ್ನು ರಭಸದಿಂದ ಬತ್ತಳಿಕೆಯಿಂದ ಸೆಳೆದುಕೊಂಡು ಅದನ್ನು ಆಗಲೇ ಬಿಲ್ಲಿನಲ್ಲಿ ಹೂಡಿ ಭೂಮಿಯು ತಿರ್ರೆಂದು ತಿರುಗುವ ಹಾಗೆ ಹೆದೆಯನ್ನು ಸೆಳೆದು ಕತ್ತಿನ ಸಂಧಿಭಾಗವನ್ನೇ ಚೆನ್ನಾಗಿ ನೋಡಿ ಗುರಿಯಿಟ್ಟು ಬೇಗನೆ ಅರ್ಜುನನು ಹೊಡೆಯಲಾಗಿ ವೈರಿಯಾದ ವೃಷಸೇನನ ತಲೆಯೆಂಬ ಕಮಲವು ಮೇಲಕ್ಕೆ ಹಾರಿ ಬಿದ್ದಿತು. ೧೬೯. ಆ ಕಡೆ ಹಾರಿದ ತಲೆಯನ್ನು ತಂದು ಶರೀರದೊಡನೆ ಕೂಡಿಸಿ ಅಪ್ಸರೆಯರು ಮೋಡಗಳ ಮಧ್ಯದಲ್ಲಿ ತಮ್ಮ ವಿಮಾನದೊಳಗಡೆ ಇಟ್ಟು ಕರ್ಣನ ಮಗನನ್ನು ತೆಗೆದುಕೊಂಡು ಹೋದರು. ವ॥ ಹಾಗೆ ನೋಡಿ ನೋಡಿ ತನ್ನ ಹಿರಿಯಮಗನಾದ ವೃಷಸೇನನನ್ನು ಯಮನ ಗಂಟಲಿನಲ್ಲಿ ತುರುಕಿ ತನ್ನನ್ನು ಗಂಟಲಿನಲ್ಲಿ

ಚಂ॥ ಮಗನಟಲೊಂದು ಭೂಪತಿಯ ತಮ್ಮನೊಳಾದಟಲೊಂದು ನೊಂದು ಬಿ
ನ್ನಗೆ ಮೊಗದಿಂದೆ ಕುಂದಿ ಫಣಿಕೇತನನಿರ್ದಟಲೊಂದು ತನ್ನನಾ ।
ವಗೆಯುರಿಯಬ್ಬವೋಲಳುರೆ ತನ್ನ ನೆಗಟ್ಟೆಗೆ ಮುಯ್ವನಾಂತು ಮುಂ
ಪೊಗಟೆಸಿ ಬಟ್ದುದಂ ನೆನೆದು ಕರ್ಣನಸುಂಗೊಳೆ ಬಂದು ತಾಗಿದಂ ॥೧೬೦

ವ॥ ಅಂತು ಬಂದು ತಾಗಿದಾಗಳುಭಯಸೈನ್ಯಸಾಗರಂಗಳೊಳ್-

ಕಂ॥ ಬಧಿರಿತ ಸಮಸ್ತದಿಕ್ತಟ
ಮಧರಿತ ಸರ್ವೇಭ್ಯಗರ್ವಿತಂ ಕ್ಷುಭಿತಾಂಭೋ ।
ನಿಧಿ ಸಲಿಲಂ ಪರೆದುದು ಧುರ
ವಿಧಾನ ಪಟು ಪಟಹ ಕಹಳ ಭೇರೀ ರಭಸಂ ॥ ೧೬೧

ಆದಿತ್ಯನ ಸಾರಥಿ ಬೆಱ
ಗಾದಂ ಮಾತಾಳಿ ಮಾತುಗೆಟ್ಟಂ ಧುರದೊಳ್ ।
ಚೋದಿಸೆ ಹರಿಯುಂ ಶಲ್ಯನು
ಮಾದರದಿಂ ನರನ ದಿನಪತನಯನ ರಥಮಂ ॥ ೧೬೨

ವ॥ ಅಂತಿರ್ವರುಮೊರ್ವರೊರ್ವರಂ ಮುಟ್ಟೆವಂದಲ್ಲಿ ವಿಕ್ರಾಂತತುಂಗನಂಗಾಧಿರಾಜನ ನಿಂತೆಂದಂ-

ಹರಿಣೀಪ್ಲುತಂ ॥ ಪಿರಿದು ಪೊರೆದಂ ನಿನ್ನಂ ದುರ್ಯೋಧನಂ ನಿನಗೆನ್ನೊಳಂ
ಪಿರಿದು ಕಲುಷಂ ಕರ್ಣಂಗೊಡ್ಡಿತ್ತು ಭಾರತವೇಂ ಬೆಸಂ ।
ಪಿರಿದು ನಿನಗಂ ರಾಗಂ ಮಿಕ್ಕಿರ್ದಗುರ್ವಿನ ಸೂನು ನಿ
ನ್ನೆರಮಟೆಯೆಯುಂ ನೋಡುತ್ತಿಂತಿರ್ದೆಯಿರ್ಪುದು ಪಾಟಿಯೇ ॥ ೧೬೩

ತುರುಕಬೇಕೆಂದಿದ್ದ ವಿಕ್ರಮಾರ್ಜುನನನ್ನು ನೋಡಿ ೧೬೦. ಮಗನ ದುಃಖವೊಂದು, ರಾಜನ ತಮ್ಮನಾದ ದುಶ್ಶಾಸನನ ದುಃಖವೊಂದು, ಚಿಂತಾಸಕ್ತನಾಗಿ ದೀನಮುಖದಿಂದ ಕುಂದಿಹೋಗಿರುವ ದುರ್ಯೋಧನನಿರುವ ಸ್ಥಿತಿಯೊಂದು ಈ ಮೂರೂ ತನ್ನನ್ನು ಕುಂಬಾರರ ಆವಗೆಯ ಬೆಂಕಿಯ ಹಾಗೆ ಸುಡುತ್ತಿರಲು ಪೌರುಷಕ್ಕೆ ಆಶ್ರಯವಿತ್ತು ಮೊದಲು ಹೊಗಳಿಸಿಕೊಂಡು ತಾನು ಬಾಳಿದುದನ್ನು ಜ್ಞಾಪಿಸಿಕೊಂಡ ಕರ್ಣನು ಅರ್ಜುನನ ಪ್ರಾಣವನ್ನು ಸೆಳೆಯುವಂತೆ ಬಂದು ತಾಗಿದನು. ವ॥ ಹಾಗೆ ಬಂದು ತಾಗಿದಾಗ ಎರಡು ಸೇನಾಸಮುದ್ರದಲ್ಲಿಯೂ ೧೬೧. ಎಲ್ಲ ದಿಕ್ಪ್ರದೇಶಗಳೂ ಕಿವುಡಾಗುವಂತೆ ಆನೆಗಳ ಘೀಂಕಾರವನ್ನೂ ತಿರಸ್ಕರಿಸುವಂತೆ, ಕಲಕಿದ ಸಮುದ್ರದ ನೀರಿನಂತೆ, ಯುದ್ಧಕಾರ್ಯದಲ್ಲಿ ಸಮರ್ಥವಾದ ತಮಟೆ, ಕೊಂಬು ಮತ್ತು ನಗಾರಿಯ ಶಬ್ದಗಳ ರಭಸವು ಹರಡಿತು. ೧೬೨. ಯುದ್ಧದಲ್ಲಿ ಕೃಷ್ಣನೂ ಶಲ್ಯನೂ ಅರ್ಜುನ ಮತ್ತು ಕರ್ಣನ ತೇರುಗಳನ್ನು ಆದರದಿಂದ ನಡೆಸುತ್ತಿರಲು ಸೂರ್ಯನ ಸಾರಥಿಯಾದ ಅರುಣನು ಆಶ್ಚರ್ಯಚಕಿತನಾದನು. ಇಂದ್ರನ ಸಾರಥಿ ಮಾತಲಿಯೂ ಮೂಕನಾದನು. ವ॥ ಹಾಗೆ ಇಬ್ಬರೂ ಒಬ್ಬೊಬ್ಬರನ್ನು ಮುಟ್ಟುವಷ್ಟು ಸಮೀಪಕ್ಕೆ ಬಂದಾಗ ವಿಕ್ರಾಂತತುಂಗನಾದ ಅರ್ಜುನನು ಕರ್ಣನಿಗೆ ಹೀಗೆ ಹೇಳಿದನು. ೧೬೩. ನಿನ್ನನ್ನು ದುರ್ಯೋಧನನು ವಿಶೇಷಗೌರವದಿಂದ ಸಾಕಿದನು. ನಿನಗೆ ನನ್ನಲ್ಲಿಯೂ ವಿಶೇಷವಾದ

ಕಂ॥ ಎನ್ನ ಪೆಸರ್ಗೇಳ್ದು ಸೈರಿಸ
ದನ್ನಯದಿಂತೀಗಳೆನ್ನ ರೂಪಂ ಕಂಡುಂ ।
ನಿನ್ನರಸನಣುಗದಮ್ಮನ
ನಿನ್ನ ತನೂಭವನ ಸಾವುಗಂಡುಂ ಮಾಣ್ಬಾ ॥ ೧೭೪

ಮ॥ ಭಯಮೇಕಕ್ಕುಮದೆಂತುಟೆಂದದಟುಮಂ ಪೆರ್ಮಾತುಮಂ ಭೂತ ಧಾ
ತ್ರಿಯೊಳೋರಂತೆ ನೆಗಟ್ಟೆ ಮುನ್ನೆ ಬೞಿಯಂ ಕಾನೀನ ನೀನೀ ಮಹಾ ।
ಜಿಯೊಳಿಂತೇನೆನಗಂಜ ಮಾಣ್ಪೆ ಪೆಱತೇಂ ಪೋ ಮಾತು ಲೇಸಣ್ಣ ಸೆ
ಟ್ಟಿಯ ಬಳ್ಳಂ ಕಿಱಿದೆಂಬುದೊಂದು ನುಡಿಯಂ ನೀಂ ನಿಕ್ಕುವಂ ಮಾಡಿದ್ಯೆ ॥ ೧೭೫

ಕಂ॥ ಪೆಸರೆಸೆಯೆ ಬೀರಮಂ ಪಾ
ಡಿಸಿಯುಂ ಪೊಗೞಿಸಿಯುಮುರ್ಕಿ ಬಟ್ಟಾಹವದೊಳ್ ।
ಕುಸಿದು ಪೆಱಪಿಂಗಿ ಪೇೞ್ ಮಾ
ನಸರೇನಿನ್ನೂಱು ವರ್ಷಮಂ ಬಟ್ದಪರೇ ॥ ೧೭೬

ವ॥ ಎಂದು ನೃಪ ಪರಮಾತ್ಮನ ಪಾೞಿಯ ಪಸುಗೆಯ ನುಡಿಗೆ ಪರಮಾರ್ತನಾಗಿ ತನ್ನನುದ್ಘಾಟಿಸಿ ನುಡಿದೊಡುಮ್ಮಚ್ಚದೊಳ್ ಮೆಚ್ಚದೆ ದರಹಸಿತವದನಾರವಿಂದನಾಗಿ ದಶಶತಕರ ತನೂಜನಿಂತೆಂದಂ-

ದ್ವೇಷ, ಕರ್ಣನಿಗಾಗಿಯೇ ಭಾರತಯುದ್ಧವು ಪ್ರಾಪ್ತವಾದುದು. ಯುದ್ಧಕಾರ್ಯವು ನಿನಗೇನು ಮಹತ್ತಾದುದು? ನಿನಗೆ ವಿಶೇಷಪ್ರೀತಿಪಾತ್ರನೂ ಪ್ರಚಂಡನೂ ಆದ ಮಗನು ನಿಷ್ಕಾರಣವಾಗಿ ಸತ್ತರೂ ನೋಡುತ್ತ ಹೀಗೆ ಇದ್ದೀಯೇ? ಇರುವುದು ಕ್ರಮವೇ - ೧೭೪. ನನ್ನ ಹೆಸಿರನ್ನೂ ಕೇಳಿ ಅನ್ಯಾಯವಾಗಿ ಸೈರಿಸದ ನೀನು ಈಗ ನನ್ನ ರೂಪನ್ನು ಕಂಡೂ ನಿನ್ನ ರಾಜರ ಪ್ರೀತಿಯ ತಮ್ಮನ, ನಿನ್ನ ಮಗನ ಸಾವನ್ನು ನೋಡಿಯೂ ತಡಮಾಡುತ್ತೀಯಾ? ೧೭೫. ಭಯವೇಕಾಗುತ್ತದೆ, ಅದು ಎಂತಹುದು ಎಂದು ಪರಾಕ್ರಮವನ್ನೂ ದೊಡ್ಡ ಮಾತುಗಳನ್ನೂ ಮೊದಲು ಲೋಕದಲ್ಲೆಲ್ಲ ಆಡಿ ಜಂಭ ಕೊಚ್ಚಿದೆ ಕಾನೀನ, ಈಗ ಈ ಮಹದ್ಯುದ್ಧದಲ್ಲಿ ಹೀಗೆ ನನಗೆ ಹೆದರಿ ತಡಮಾಡುತ್ತಿದ್ದೀಯೆ. ಮತ್ತೇನು ಹೋಗಯ್ಯ ಮಾತನಾಡುವುದು ಸುಲಭ! 'ಸೆಟ್ಟಿಯ ಬಳ್ಳ ಕಿರಿದು' ಎಂಬ ಗಾದೆಯ ಮಾತನ್ನು ನೀನು ನಿಜವೆನಿಸಿಬಿಟ್ಟೆ. ೧೭೬. ಹೆಸರು ಪ್ರಖ್ಯಾತವಾಗುವಂತೆ ಶೌರ್ಯವನ್ನು ಹಾಡಿಸಿಯೂ ಹೊಗಳಿಸಿಯೂ ಉಬ್ಬಿ ಯುದ್ಧದಲ್ಲಿ ಸೋತು ಕುಸಿದು ಹಿಂಜರಿಯುವುದಕ್ಕೆ ಮನುಷ್ಯರು ಇನ್ನೂರು ವರ್ಷ ಬದುಕುತ್ತಾರೇನು? ವ॥ ಎಂಬುದಾಗಿ ಹೇಳಿದ ನೃಪಪರಮಾತ್ಮನಾದ ಅರ್ಜುನನ ಕ್ರಮಬದ್ಧವೂ ವಿವೇಕಯುತವೂ ಆದ ಮಾತಿಗೆ ಬಹಳ ದುಃಖಪಟ್ಟು ತನ್ನನ್ನು ಮರ್ಮಭೇದಕವಾದ ರೀತಿಯಲ್ಲಿ ಮಾತನಾಡಿಸಿದರೂ ಕೋಪಿಸಿಕೊಳ್ಳದೆ ಮುಗುಳ್ನಗೆಯಿಂದ ಕೂಡಿದ ಮುಖಕಮಲವುಳ್ಳವನಾಗಿ ಕರ್ಣನು ಹೀಗೆಂದನು-

ಕಂ॥ ಎಳೆಯಂ ಕೋಳ್ಪಟ್ಟುಂ ಮುಂ
ಬಳೆದೊಟ್ಟುಂ ಮುಟ್ಟುಗೆಟ್ಟುಮಿರ್ದೀಗಳ್ ಬ ।
ಳ್ವಳನೆ ನುಡಿದಪುದೆ ನುಡಿವಂ
ತಳವುಂ ಪೆರ್ಮೆಯುಮಾಯಮುಮುಂ ನಿನಗಾಯ್ತೇ ॥ ೧೭೭

ಕಂ॥ ಏಟ್ಟಿಟ್ಟನೆಟಿದು ನಿಮ್ಮಂ
ನಾಟ್ಯಡಿಗಳಿದೊಡೆ ಮದೀಯ ನಾಥಂ ಬೇರಂ ।
ಬಿಟ್ಕೆಯನೆ ತಿಂದ ದೆವಸದೊ
ಳಟ್ಮಾಡಿದ ಬೀರಮೀಗಳೇಂ ಪೊಸತಾಯ್ತೇ ॥ ೧೭೮

ಮತ್ತನಯನರಸನನುಜನ
ಸತ್ತಟಲಂ ನಿನ್ನೊಳಱಸಲೆಂದಿರ್ದೆಂ ಬೆ ।
ಳ್ಕುತ್ತಿರ್ದೆನಪ್ಪೊಡೇತೊದ
ಳಿತ್ತಣ ದಿನನಾಥನಿತ್ತ ಮೂಡುಗುಮಲ್ತೇ ॥ ೧೭೯

ಕಸವರದ ಸವಿಯುಮಂ ಭಯ
ರಸಕದ ಸವಿಯುಮನದೆಂತುಮಾನಱಿಯದುದಂ ।
ವಸುಮತಿಯಱಿವುದು ನೀಂ ಪುರು
ಡಿಸಿ ನುಡಿದೊಡೆ ನಿನ್ನ ನುಡಿದ ಮಾತೇಱುಗುಮೇ ॥ ೧೮೦

ಒಡಲುಂ ಪ್ರಾಣಮುಮೆಂಬಿವು
ಕಿಡಲಾದುವು ಜಸಮದೊಂದೆ ಕಿಡದದನಾಂ ಬ ।
ಲ್ವಿಡಿವಿಡಿದು ನೆಗಟ್ದೆನುಟಿದಟಿ
ವಡೆಮಾತಂ ಮಾಡಿ ನೀನೆ ಕೆಮ್ಮನೆ ನುಡಿವೈ ॥ ೧೮೧

೧೭೭. ರಾಜ್ಯವನ್ನು ಮೊದಲು ಪರಾಧೀನಮಾಡಿಯೂ ಬಳೆದೊಟ್ಟೂ ಆಯುಧ ರಹಿತವಾಗಿದ್ದೂ ಈಗ ಬಡಬಡನೆ ಮಾತನಾಡುವುದೇ? ಹಾಗೆ ಮಾತನಾಡುವ ನಿನಗೆ ಶಕ್ತಿಯೂ ಪ್ರೌಢಿಮೆಯೂ ಪರಾಕ್ರಮವೂ ಉಂಟೇ? ೧೭೮. ನನ್ನ ಸ್ವಾಮಿಯಾದ ದುರ್ಯೋಧನನು ವರ್ಷಗಳ ಅವಧಿಯ ಕಟ್ಟುಪಾಡಿನಿಂದ ನಿಮ್ಮನ್ನು ನಾಡಗಡಿಯಿಂದ ಹೊರದೂಡಿದಾಗ ಬೇರನ್ನೂ ಬಿಕ್ಕೆಯನ್ನೂ ತಿಂದ ದಿವಸಗಳಲ್ಲಿ ನಾಶವಾದ ಪೌರುಷವು ಈಗ ಹೊಸದಾಯಿತೇನು? ೧೭೯. ನನ್ನ ಮಗನೂ ರಾಜನ ತಮ್ಮನಾದ ದುಶ್ಯಾಸನನೂ ಸತ್ತ ದುಃಖವನ್ನು ನಿನ್ನಲ್ಲಿ ಹುಡುಕಬೇಕೆಂದಿದ್ದೆ. ಹೆದರಿದ್ದೇನೆ ಎಂದರೆ ಅದೆಂತಹ ಸುಳ್ಳು ಮಾತು! ಆ ಕಡೆಯ ಸೂರ್ಯ ಈ ಕಡೆಯೇ ಹುಟ್ಟುತ್ತಾನಲ್ಲವೇ? ೧೮೦. ಚಿನ್ನದ ರುಚಿಯನ್ನೂ ಭಯರಸದ ರುಚಿಯನ್ನೂ ನಾನು ಎಂದೂ ಅರಿಯದುದನ್ನು ಈ ಭೂಮಂಡಲವೇ ತಿಳಿದಿದೆ. ನೀನು ಸ್ಪರ್ಧಿಸಿ ನುಡಿದರೆ, ನೀನು ಆಡಿದ ಮಾತು ಪುಷ್ಟಿಯಾಗುತ್ತದೆಯೇ? ೧೮೧. ಶರೀರ ಪ್ರಾಣ ಎಂಬವು ನಾಶವಾಗತಕ್ಕವು. ಯಶಸ್ಸೊಂದೆ ಕೆಡದೆ ಇರತಕ್ಕದ್ದು; ಅದನ್ನು ನಾನು ಬಿಗಿಯಾಗಿ ಆಶ್ರಯಿಸಿ ಪ್ರಸಿದ್ಧನಾಗಿದ್ದೇನೆ. ಉಳಿದ ಹೀನವಾದ ಮಾತನ್ನಾಡಿ ನೀನು ನಿಷ್ಪ್ರಯೋಜಕವಾಗಿ

ಚಂ॥ ಬದಿ ವಸದಿಂದೆ ಪುಟ್ಟುವುದು ಪುಟ್ಟಸುವಂ ಬದಿ ಪುಟ್ಟದಂದಿವಂ
ಗಿದು ಬಿಯಮೊಳ್ಪಿವಂಗಿದು ವಿನೋದಮಿವಂಗಿದು ಸಾವ ಪಾಂಗಿವಂ ।
ಗಿದು ಪಡೆಮಾತಿವಂಗಿದು ಪರಾಕ್ರಮಮೆಂಬುದನೆಲ್ಲ ಮಾಱ್ಕೆಯಿಂ
ಬದಿ ಸಮಕಟ್ಟ ಕೊಟ್ಟೊಡೆಡೆಯೊಳ್ ಕಿಡಿಸಲ್ ಕುಡಿಸಲ್ ಸಮರ್ಥರಾರ್॥ ೧೮೨

ಕಂ॥ ಎಂದೀ ಬಾಯ್ವಾತಿನೊಳೇ
ವಂದಪುದಮ್ಮಣ್ಮಿ ಕಾದುಕೊಳ್ಳೆನುತುಂ ಭೋಂ ।
ರೆಂದಿಸೆ ಪೊಸ ಮಸೆಯಂಬಿನ
ತಂದಲ ಬೆಳ್ಸರಿಗಳಿರದೆ ಕವಿದುವು ನರನಂ ॥ ೧೮೩

ದೊಣೆಗಳಿನುರ್ಚುವ ತಿರುವಾ
ಯ್ಗೊಣರ್ಚೆ ತೆಗೆನೆಱಿವ ಬೇಗಮಂ ಕಾಣದೆ ಕೂ ।
ರ್ಗಣೆಗಳ ಪಂದರನೆ ನಭೋಂ
ಗಣದೊಳ್ ಕಂಡತ್ತು ದೇವಗಣಮಿನಸುತನಾ ॥ ೧೮೪

ಪಾತಂ ಲಕ್ಷ್ಮಂ ಶೀಘ್ರಂ
ಘಾತಂ ಬಹುವೇಗಮೆಂಬಿವಯ್ದೇಸಿನೊಳಂ ।
ತೀತನ ದೊರೆಯಿಲ್ಲೆನಿಸಿದು
ದಾತನ ಬಿಲ್ಬಲ್ಮೆ ಸುರರಿನಂಬರತಲದೊಳ್ ॥ ೧೮೫

ವ॥ ಆಗಳ್ ಪರಸೈನ್ಯಭೈರವಂ ಪ್ರಳಯಭೈರವಾಕಾರಮಂ ಕೆಯ್ಕೊಂಡು ಕಾದೆ-

ನುಡಿಯುತ್ತಿದ್ದೀಯೆ. ೧೮೨. (ಮನುಷ್ಯನು) ಹುಟ್ಟುವುದು ವಿಧಿಯ ವಶದಿಂದ; ಹುಟ್ಟಿಸುವವನೂ ವಿಧಿಯೇ; ಹುಟ್ಟಿದಾಗ ಇವನಿಗಿದು ಸಂಪತ್ತು, ಇವನಿಗೆ ಒಳ್ಳೆಯದಿದು, ಇವನಿಗೆ ಇದು ವಿನೋದ, ಇವನಿಗೆ ಇದು ಸಾಯುವ ರೀತಿ, ಇವನಿಗಿದು ಪ್ರಸಿದ್ಧಿ, ಇವನಿಗಿದು ಪರಾಕ್ರಮ ಎಂಬುದನ್ನು ಎಲ್ಲ ರೀತಿಯಲ್ಲಿಯೂ ವಿಧಿ ನಿಷ್ಕರ್ಷಿಸಿಕೊಟ್ಟಿರುವಾಗ ಮಧ್ಯದಲ್ಲಿ ಅದನ್ನು ಕೆಡಿಸುವುದಕ್ಕಾಗಲಿ ಕೊಡಿಸುವುದಕ್ಕಾಗಲಿ ಯಾರು ಸಮರ್ಥರು? ೧೮೩. ಅಪ್ಪಾ ಈ ಬಾಯಿ ಮಾತಿನಲ್ಲಿ ಏನು ಪ್ರಯೋಜನವಾಗುತ್ತದೆ? ಪೌರುಷಪ್ರದರ್ಶನಮಾಡಿ ನಿನ್ನನ್ನು ನೀನು ರಕ್ಷಿಸಿಕೊ ಎನ್ನುತ್ತ ರಭಸದಿಂದ ಹೊಡೆದನು. ಹೊಸದಾಗಿ ಮಸೆದ ಬಾಣಗಳ ತುಂತುರು ಮಳೆಯೂ ಜಡಿಮಳೆಯೂ ಅರ್ಜುನನನ್ನು ಮುಚ್ಚಿದುವು. ೧೮೪. ಬತ್ತಳಿಕೆಯಿಂದ ಬಾಣಗಳನ್ನು ಸೆಳೆದುಕೊಳ್ಳುವ, ಬಿಲ್ಲಿನ ಬಾಯಿಗೆ ಸೇರಿಸಿ ಕಿವಿಯವರೆಗೂ ಸೆಳೆಯುವ ವೇಗವನ್ನು ಕಾಣದೆ ಕರ್ಣನ ಹರಿತವಾದ ಬಾಣಗಳ ಚಪ್ಪರವನ್ನೇ ಆಕಾಶಪ್ರದೇಶದಲ್ಲಿ ದೇವತೆಗಳ ಸಮೂಹವು ನೋಡಿತು. ೧೮೫. ಪಾತ (ಬೀಳಿಸುವುದು) ಲಕ್ಷ್ಯ (ಗುರಿಯಿಡುವುದು) ಶೀಘ್ರ (ವೇಗದಿಂದ ಹೊಡೆಯುವುದು) ಘಾತ (ಘಟ್ಟಿಸುವುದು) ಬಹುವೇಗ (ಅತ್ಯಂತವೇಗ) ಎಂಬ ಈ ಅಯ್ದು ರೀತಿಯ ಬಾಣಪ್ರಯೋಗಗಳಲ್ಲಿಯೂ ಈತನಿಗೆ ಸಮಾನರಿಲ್ಲ ಎನ್ನಿಸಿತು ಆತನ ಬಿಲ್ವಿದ್ಯೆಯ ಶ್ರೇಷ್ಠತೆ, ಆಕಾಶದಲ್ಲಿರುವ ದೇವತೆಗಳಿಂದ. ವ॥ ಆಗ ಪರಸೈನ್ಯಭೈರವನಾದ ಅರ್ಜುನನು ಪ್ರಳಯಕಾಲದ ಭೈರವನ

ಕಂ|| ಶರಸಂಧಾನಾಕರ್ಷಣ
ಹರಣಾದಿ ವಿಶೇಷ ವಿವಿಧ ಸಂಕಲ್ಪ ಕಳಾ ।
ಪರಿಣತಿಯಂ ಮಱೆದುದು ತರ
ತರದೊಳೆ ಮುಳಿದರಿಗನಿಸುವ ಶರನಿಕರಂಗಳ್ ॥ ೧೮೬

ಮುನಿದಿಸುವಿನಜನ ಸರಲಂ
ಮೊನೆಯಿಂ ಗಱಿವರೆಗಮೆಯ್ದೆ ಸೀಳ್ದುವು ಕಣೆಗಳ್ ।
ಘನ ಪಥಮನಳುರ್ದು ಸುಟ್ಟಪು
ವೆನೆ ನೆಗೆದುವು ಕೋಲ ಪೊಗೆಯುಮಂಬಿನ ಕಿಡಿಯುಂ ॥ ೧೮೭

ಕೂಡೆ ಕಡಿವಂಬನಂಬೆಡೆ
ಮಾಡದೆ ಬಿಡದೊರಸೆ ಪುಟ್ಟಿದುರಿಗಳಗುರ್ವಂ ।
ಮಾಡೆ ಕವಿದಳುರ್ವ ಬೆಂಕೆಯೊ
ಳಾಡಿಸಿದರ್ ಮೊಗಮನಮರಸುಂದರಿಯರ್ಕಳ್ ॥ ೧೮೮

ಮೊನೆಯಂಬಿನ ತಂದಲೊಳ
ರ್ಜುನನಂ ಕರ್ಣನುಮನಿನಿಸು ಕಾಣದಣಂ ಮೆ ।
ಲ್ಲನೆ ಬಗಿದು ನೋಡಿ ಕುಡುಮಿಂ
ಚಿನಂತೆ ಮೇಗೊಗೆದು ನಾರದಂ ನರ್ತಿಸಿದಂ ॥ ೧೮೯

ಚಂ|| ಕವಿವ ಶರಾಳಿಯಂ ನಿಜ ಶರಾಳಿಗಳಟ್ಟೆ ತೆರಳ್ದೆ ತೂಳ್ದೆ ಮಾ
ರ್ಕವಿದು ಪಳಂಚೆ ಪಾಯ್ದೊರಸೆ ಪುಟ್ಟಿದ ಕಿರ್ಚುಳುರ್ದೆಬ್ಬಜಾಂಡದಂ ।
ತುವರಮಗುರ್ವು ಪರ್ವಿ ಕರಮರ್ವಿಸೆ ದಳ್ಳುರಿ ಪೆರ್ಚೆ ಕಂಡು ಖಾಂ
ಡವವನದಾಹಮಂ ನೆನೆಯಿಸಿತ್ತು ಗುಣಾರ್ಣವನಸ್ತ್ರಕೌಶಲಂ ॥ ೧೯೦

ಆಕಾರವನ್ನು ಅಂಗೀಕರಿಸಿ ಕಾದಿದನು. ೧೮೬. ಅರಿಗನು ಕೋಪದಿಂದ ಹೊಡೆಯುವ ಬಾಣಸಮೂಹಗಳು ಶರಸಂಧಾನ (ಬಾಣವನ್ನು ತೊಡುವುದು) ಆಕರ್ಷಣ (ಎಳೆಯುವುದು) ಹರಣ (ಸೆಳೆದುಕೊಳ್ಳುವುದು)ವೇ ಮೊದಲಾದ ನಾನಾ ರೀತಿಯ ಕಲಾಪ್ರೌಢಿಮೆಯನ್ನು ಕ್ರಮಕ್ರಮವಾಗಿ ಮೆರೆದುವು. ೧೮೭. ಕೋಪಿಸಿಕೊಂಡು ಕರ್ಣನು ಪ್ರಯೋಗಿಸುವ ಬಾಣವನ್ನು ಅರ್ಜುನನ ಬಾಣಗಳು ತುದಿಯಿಂದ ಗರಿಯವರೆಗೆ ಸೀಳಿದುವು. ಆಕಾಶಮಾರ್ಗವನ್ನೂ ವ್ಯಾಪಿಸಿ ಸುಡುತ್ತವೆ ಎನ್ನುವ ಹಾಗೆ ಬಾಣಗಳ ಹೊಗೆಯೂ ಕಿಡಿಯೂ ಮೇಲಕ್ಕೆ ನೆಗೆದುವು. ೧೮೮. ಕೂಡಲೆ ಕತ್ತರಿಸುವ ಬಾಣಗಳನ್ನು ಬಾಣಗಳು ಅವಕಾಶಕೊಡದೆ ತಪ್ಪದೆ ಉಜ್ಜಲು ಹುಟ್ಟಿದ ಉರಿಯ ಜ್ವಾಲೆಗಳು ಭಯುವನ್ನುಂಟುಮಾಡಲು ಆವರಿಸಿ ಸುಡುವ ಉರಿಯಲ್ಲಿ ದೇವಸುಂದರಿಯರು ತಮ್ಮ ಮುಖವನ್ನು ಅತ್ತ ಇತ್ತ ಅಲುಗಾಡಿಸಿದರು. ೧೮೯. ಮೊನಚಾದ ಬಾಣದ ತುಂತುರುಮಳೆಯಲ್ಲಿ ಅರ್ಜುನನೂ ಕರ್ಣನೂ ಸ್ವಲ್ಪವೂ ಕಾಣದಿರಲು ನಾರದನು ಸ್ವಲ್ಪವೂ ಸದ್ದಿಲ್ಲದೆ (ನಿಧಾನವಾಗಿ) ಭಾಗಮಾಡಿ ನೋಡಿ ಕುಡುಮಿಂಚಿನಂತೆ ಮೇಲಕ್ಕೆ ಹಾರಿ ಕುಣಿದಾಡಿದನು. ೧೯೦. ಕವಿಯುತ್ತಿರುವ ಬಾಣ ಸಮೂಹವನ್ನು ತನ್ನ ಬಾಣಸಮೂಹಗಳು ಆಕ್ರಮಿಸಿ ಓಡಿಸಿ ತಳ್ಳಿ ಪ್ರತಿಯಾಗಿ ಮುಚ್ಚಿ

ವ|| ಆಗಳ್ ಮದ್ರರಾಜರ್ನಂಗಾಧಿರಾಜನನಿಂತೆಂದನೀಯಂಬುಗಳೊಳೇಂ ತೀರ್ದಪುದು ದಿವ್ಯಾಸ್ತ್ರಂಗಳಿಂದೆಚ್ಚು ಪಗೆಯಂ ಸಾಧ್ಯಂ ಮಾಡೆಂಬುದುಂ ಕೊಂತಿಗೆ ತನ್ನ ನುಡಿದ ನುಡಿವಳಿಯಂ ನೆನೆದು ಪುರಿಗಣೆಯ ದೊಣೆಗೆ ಕೆಯ್ಯಂ ನೀಡದೆ ರೌದ್ರಶರದ ದೊಣೆಗೆ ಕೆಯ್ಯಂ ನೀಡಿದಾಗಳ್-

ಕಂ|| ಮುಳಿಸಂ ನೆಱಪಲ್ಕರ್ಧಾ
ವಳೀಕ ಶರರೂಪದಿಂದಸುಂಗೊಳೆ ದೊಣೆಯಿಂ ।
ಪೊಳೆದು ಬರೆ ಕೆಯ್ಗೆ ತಾಂ ವಿ
ಸ್ಫುಳಿಂಗ ಪಿಂಗಳಿತ ಭುವನ ಭವನಾಭೋಗಂ|| ೧೯೧

ತಿರಿಪಿದೊಡದನೆಳೆ ತಿಱ್ರನೆ
ತಿರಿದುದು ತಿರುವಾಯೊಳಿಡೆ ಸುರರ್ ಮೊಱೆಯಿಟ್ಟರ್ ।
ಭರದೆ ತೆಗೆನೆಱೆಯೆ ಮಯ್ದಗೆ
ದರವಿಂದೋದ್ಭವನಿನೊಗೆದುದಾ ಬ್ರಹ್ಮಾಂಡಂ || ೧೯೨

ಕಂ|| ತುಡೆ ಕರ್ಣನದಂ ನಡನಡ
ನಡುಗಿ ಸುಯೋಧನನ ಸಕಲ ರಾಜ್ಯಶ್ರೀಯುಂ ।
ಸಡಿಲಿಸಿದ ತೋಳನಾಗಳ್
ಸಡಿಲಿಸಲಣ್ಮಳೆ ದಲದಱಗುರ್ವೇಂ ಪಿರಿದೋ || ೧೯೩

ತಗುಲಿ ನುಗ್ಗಿ ಉಜ್ಜಲು ಅಲ್ಲಿ ಹುಟ್ಟಿದ ಬೆಂಕಿಯು ಎದ್ದು ಮೇಲಕ್ಕೆ ನೆಗೆದು ಬ್ರಹ್ಮಾಂಡದ ಕೊನೆಯವರೆಗೆ ಭಯವು ಹಬ್ಬುವ ಹಾಗೆ ವಿಶೇಷವಾಗಿ ವ್ಯಾಪಿಸಿ ಹೆಚ್ಚಾಗಿ ಸುಡಲು ಆ ದಳ್ಳುರಿಯನ್ನು ನೋಡಿ ಅರ್ಜುನನ ಅಸ್ತ್ರಕೌಶಲವು ಖಾಂಡವವನವನ್ನು ಸುಟ್ಟುದನ್ನು ಜ್ಞಾಪಕಮಾಡಿತು. ವ|| ಆಗ ಶಲ್ಯನು ಕರ್ಣನಿಗೆ ಹೀಗೆಂದನು - ಈ ಬಾಣಗಳಿಂದ ಏನು ತೀರುತ್ತದೆ? ದಿವ್ಯಾಸ್ತ್ರಗಳನ್ನು ಪ್ರಯೋಗಿಸಿ ಹಗೆಯನ್ನು ಅಧೀನಮಾಡು ಎನ್ನಲು ಕುಂತೀದೇವಿಗೆ ತಾನು ಕೊಟ್ಟ ವಾಗ್ದಾನವನ್ನು ನೆನೆದು ದಿವ್ಯಾಸ್ತ್ರಗಳ ಬತ್ತಳಿಕೆಗೆ ಕೈಯನ್ನು ಚಾಚದೆ ರೌದ್ರಬಾಣಗಳ ಬತ್ತಳಿಕೆಗೆ ಕೈಯನ್ನು ನೀಡಿದಾಗ ೧೯೧. ಹಿಂದಿನ ಕೋಪವನ್ನು ತೀರಿಸಿಕೊಳ್ಳುವುದಕ್ಕಾಗಿ ಕಿಡಿಗಳಿಂದಲೂ ಹಳದಿ ಕಪ್ಪು ಮತ್ತು ಕೆಂಪುಮಿಶ್ರವಾದ ಕಾಂತಿಯಿಂದಲೂ ಕೂಡಿದ ಪ್ರಪಂಚವೆಂಬ ಮನೆಯಷ್ಟು ವಿಸ್ತಾರವಾದ ಅರ್ಧಾವಲೀಕವೆಂಬ ಅರ್ಧ ಉಳಿದಿದ್ದ ಸರ್ಪವು ಬಾಣದ ಆಕಾರದಲ್ಲಿ ಬತ್ತಳಿಕೆಯಿಂದ ಹೊಳೆಯುತ್ತ ಪ್ರಾಣಾಪಹಾರಮಾಡಲು ಕೈಗೆ ಬಂದಿತು. ೧೯೨. ಅದನ್ನು ತಿರುಗಿಸಲು ಭೂಮಿಯು ತಿರ್‍ರೆಂದು ತಿರುಗಿತು. ಬಿಲ್ಲಿನ ಹೆದೆಗೇರಿಸಲು ದೇವತೆಗಳು ಗಟ್ಟಿಯಾಗಿ ಕೂಗಿಕೊಂಡರು. ವೇಗದಿಂದ ಹೆದೆಯನ್ನು ಕಿವಿಯವರೆಗೆ ಸೆಳೆಯಲು ಮೈಯಿಳಿದ (ಗರ್ಭಸ್ರಾವವಾದ) ಬ್ರಹ್ಮನಿಂದ ಬ್ರಹ್ಮಾಂಡವು ಹುಟ್ಟಿತು. ೧೯೩. ಅದನ್ನು ಕರ್ಣನು ಪ್ರಯೋಗಮಾಡಲು ದುರ್ಯೋಧನನ ಸಮಸ್ತ ರಾಜ್ಯಶ್ರೀಯು ಗಡಗಡನೆ ನಡುಗಿ ಸಡಿಲಿಸಿದ್ದ ತನ್ನ ತೋಳನ್ನು ಸಡಿಲಿಸಲು ಆಗ ಶಕ್ತಳಾಗಲಿಲ್ಲವಲ್ಲವೇ? ಅದರ ಭಯಂಕರತೆ ಅತ್ಯದ್ಭುತವಾಗಿತ್ತು.

ಆಕರ್ಣಾಂತಂ ತೆಗೆನೆಱೆ
ದಾ ಕರ್ಣನಿಸಲ್ಕೆ ಬಗೆದೊಡುಡುಗುಡುಗಿಸಲೀ ।
ಭೀಕರ ಬಾಣಮನಾದವಿ
ವೇಕದಿನುರದೆಡೆಗೆ ತುಡದೆ ತಲೆಗೆಯೆ ತುಡುವಾ ॥ ೧೯೪

ಉರದೆಡೆಗೆ ತುಡೆ ಜಯಶ್ರೀ
ಗಿರಲೆಡೆ ನಿನಗಪ್ಪುದಾ ಸುಯೋಧನನೊಳ್ ಶ್ರೀ ।
ಗಿರಲೆಡೆಯಪ್ಪುದು ಮೇಣ್ ದಿನ
ಕರಸುತ ತೊದಳುಂಟೆ ಬಗೆಯೆ ಸ್ಸಂದೆಯಮುಂಟೇ ॥ ೧೯೫

ವ॥ ಎಂಬುದುಂ ಶಲ್ಯನ ನುಡಿದ ನುಡಿಯುನವಧಾರಿಸಿ ತನ್ನ ಮನದೊಳೆ ಕರ್ಣನಿಂತೆಂದಂ-

ಮ॥ ಎನಿತುಂ ಶಲ್ಯನ ಪೇಟ್ದ ಪಾಂಗೆ ತೊದಳಿಲ್ಲಿಂತಾದೊಡಾ ಶಕ್ರಪು
ತ್ರನನಾಂ ಕೊಂದೊಡೆ ಧರ್ಮಪುತ್ರನಟೆಗುಂ ತಾಯೆಂದೆ ಮುಂ ಕೊಂತಿ ಬಂ ।
ದಿನಿಸಂ ಪ್ರಾರ್ಥಿಸಿ ಪೋದಳೆನ್ನನದನಾಂ ಮಾಣ್ದಿರ್ದೆನಿರ್ದಾಗಳೊ
ಳ್ಪಿನ ಪೆರ್ಮಾತಿನ ನನ್ನಿ ಬನ್ನದೊಳೊಡಂಬಟ್ಟಪ್ಪುದಂ ಮಾಟ್ಪೆನೇ ॥ ೧೯೬

ಚಂ॥ ತನಗುಱುವಂತುಟಾಗೆ ಕಡು ನನ್ನಿಯ ಪೆಂಪುಮನಾಂತು ಭೂಭುಜರ್
ತನಗಿನಿತೂನಮಾಗೆ ಮೆಱೆದಾ ಭುಜವೀರ್ಯಮನಾಂತು ಮಾಣ್ಬುದೇಂ ।
ತನಗುಱುವೊಂದು ನನ್ನಿಯನೆ ಪೂಣ್ದು ಕರಂ ಪಿರಿದುಂ ಬಲಸ್ಥನ
ಪ್ಪನನೆ ಕಱುತ್ತು ಕಾದಿ ನೆಗಟ್ದಾತನೆ ನನ್ನಿಯ ಬೀರದಾಗರಂ ॥ ೧೯೭

೧೯೪. ಕಿವಿಯುವರೆಗೂ ಪೂರ್ಣವಾಗಿ ಸೆಳೆದು ಕರ್ಣನು ಹೊಡೆಯಲು ಮನಸ್ಸು ಮಾಡುತ್ತಿದ್ದ ಹಾಗೆಯೇ ಹಿಂದಕ್ಕೆ ತೆಗೆ, ಹಿಂದಕ್ಕೆ ತೆಗೆ; ಹೊಡೆಯಬೇಡ; ಈ ಭಯಂಕರವಾದ ಬಾಣವನ್ನು ವಿವೇಕದಿಂದ ಎದೆಯ ಪ್ರದೇಶಕ್ಕೆ ಗುರಿಯಿಡದೆ ತಲೆಗೆ ಗುರಿಯಿಡುತ್ತೀಯಾ? ೧೯೫. ಎದೆಯ ಪ್ರದೇಶಕ್ಕೆ ಗುರಿಯಿಟ್ಟು ತೊಟ್ಟರೆ ಜಯಲಕ್ಷ್ಮಿಯು ನಿನ್ನಲ್ಲಿರಲು ಅವಕಾಶವಾಗುತ್ತದೆ. ಆ ದುರ್ಯೋಧನನಲ್ಲಿ ಜಯಲಕ್ಷ್ಮಿಯಿರಲೂ ಅವಕಾಶವಾಗುತ್ತದೆ. ಕರ್ಣಾ ಈ ಮಾತು ಸುಳ್ಳಲ್ಲ ಸಂಶಯಪಡಬೇಡ ವ॥ ಎನ್ನಲು, ಶಲ್ಯನು ನುಡಿದ ಮಾತನ್ನು ಕೇಳಿ ತನ್ನ ಮನಸ್ಸಿನಲ್ಲಿಯೇ ಕರ್ಣನು ಹೀಗೆಂದುಕೊಂಡನು. ೧೯೬. ಹೇಗೂ ಶಲ್ಯನು ಹೇಳಿದ ಹಾಗೆಯೇ (ಸರಿ) ಸುಳ್ಳಿಲ್ಲ. ಆದರೆ ಆ ಇಂದ್ರಪುತ್ರನಾದ ಅರ್ಜುನನನ್ನು ನಾನು ಕೊಂದರೆ ಧರ್ಮರಾಜನು ಸಾಯುತ್ತಾನೆ. ನನ್ನ ತಾಯಿಯೆಂದೇ ಕುಂತಿ ಬಂದು ನನ್ನಲ್ಲಿ ಇದನ್ನೇ ಬೇಡಿಹೋದಳು. ಅದನ್ನು ನಾನು ತಪ್ಪಿ ನಡೆಯುವುದಾದರೆ ಆ ಒಳ್ಳೆಯ ಸತ್ಯವಾಕ್ಕಿನ ಭಂಗವಾದುದನ್ನು ನಾನು ಮಾಡುವೆನೇ? (ಮಾಡಲೇ) ೧೯೭. ಸಾಮಾನ್ಯರಾಜರಾದವರು ತಮಗೆ ಸಾಧ್ಯವಾದಷ್ಟು ಸತ್ಯವನ್ನೂ ಪರಾಕ್ರಮವನ್ನೂ ತಾವು ಪ್ರದರ್ಶಿಸಬಹುದು. ಆದರೆ ಪೂರ್ಣವಾದ ಭುಜಶಕ್ತಿಯನ್ನು ಪಡೆದಿದ್ದೂ ಅದನ್ನು ತಪ್ಪುವುದೆಂದರೇನು? ತನಗೆ ಸಾಧ್ಯವಾದಷ್ಟು ಸತ್ಯಪ್ರತಿಜ್ಞೆಮಾಡಿ,

ಮ॥ ಅಱಿಯರ್ ಪಾಂಡವರೆನ್ನನಿನ್ನುಮಱಿಪಲ್ ನೀಮೆಂದದಂ ಚಕ್ರಿಗಾ
ನಱಿಪಿರ್ದೆಂ ಪೃಥೆಯುಂ ಮದೀಯ ಸುತರೊಳ್ ವೈಕರ್ತನಂ ನನ್ನಿಯಂ ।
ನಿಱಿಸಲ್ಕಾರ್ಕುಮಮೋಘಮೆಂದು ಮನದೊಳ್ ನಂಬಿರ್ದಳಿನ್ನಿಲ್ಲಿ ಪೆಂ
ಪೆಱಕಂಬೆತ್ತಿರೆ ಕಾವೆನೆನ್ನ ನುಡಿಯಂ ಕೆಯ್ಕೊಂಡ ಕಟ್ಟಾಯಮಮಂ ॥ ೧೯೮

ಕಂ॥ ಎಂಬುದನೆ ಬಗೆದು ಪೆಱತನ
ಣಂ ಬಗೆಯದೆ ಮದ್ರಪತಿಯನೆಂದಂ ಮುಂ ತೊ ।
ಟ್ಟಂಬನದನುಗಿದು ಕುಂದಿಸಿ
ದಂ ಭಯದಿಂ ಕರ್ಣನೆಂದು ಲೋಕಂ ನಗದೇ ॥ ೧೯೯

ಕಂ॥ ಉಡುಗುಡುಗುಡುಗೆಂದಿಸೆ ಬಱ
ಸಿಡಿಲೆಱಪಂತೆಱಪ ಸರಲ ಬರವಂ ಕಂಡಾ ।
ಗಡೆ ಚಕ್ರಿ ನೆಲನೊಳೆಣ್ಬೆರ
ಲಡಂಗೆ ನರರಥಮನೊತ್ತಿದಂ ನಿಪುಣತೆಯಿಂ ॥ ೨೦೦

ಒತ್ತುವುದುಂ ಶರಮಿರದೆ
ಯುದ್ವೃತ್ತ ಕಿರೀಟಿಯ ಕಿರೀಟಮಂ ಕೊಱೆದೊಡೆ ಪ ।
ರ್ವಿತ್ತು ಭಯಮಿಂದ್ರನಂ ಮು
ತ್ತಿತ್ತಲಲೀಶ್ವರನನಾಗಳಾ ಸಂಕಟದೊಳ್ ॥ ೨೦೧

ವಿಶೇಷ ಶೌರ್ಯಶಾಲಿಯಾದವನನ್ನೆ ಗುರಿಯಿಟ್ಟು ಕಾದಿ ಪ್ರಸಿದ್ಧಿಪಡೆದವನೇ ಸತ್ಯ ಮತ್ತು ಪರಾಕ್ರಮದ ಆವಾಸಸ್ಥಾನನಾಗುವನು. ೧೯೮. ಪಾಂಡವರು ನನ್ನನ್ನು ಇನ್ನೂ (ಯಾರೆಂದು) ತಿಳಿಯರು. ನೀವು ತಿಳಿಸಬೇಡಿ ಎಂದು ನಾನು ಕೃಷ್ಣನನ್ನು ಪ್ರಾರ್ಥಿಸಿದ್ದೆ. ಕುಂತಿಯೂ ನನ್ನ ಮಕ್ಕಳಲ್ಲಿ ಕರ್ಣನು ಸತ್ಯವನ್ನು ಸ್ಥಾಪಿಸುವುದಕ್ಕೆ ಪೂರ್ಣವಾಗಿ ಸಮರ್ಥನೆಂದು ಮನಸ್ಸಿನಲ್ಲಿ ನಂಬಿದ್ದಾಳೆ. ಇಂತಹ ವೈಭವವು ನನ್ನಲ್ಲಿ ಎರಕ ಹೊಯ್ದಿರಲು ನನ್ನ ಭಾಷೆಯನ್ನೂ ನಾನು ಅಂಗೀಕರಿಸಿರುವ ನನ್ನ ತೀವ್ರವಾದ ಶೌರ್ಯವನ್ನೂ ರಕ್ಷಿಸುತ್ತೇನೆ. ೧೯೯. ಎಂಬುದಾಗಿಯೇ ಯೋಚಿಸಿ ಬೇರೆ ಯಾವ ರೀತಿಯನ್ನೂ ಯಾವ ರೀತಿಯಲ್ಲಿಯೂ ಯೋಚಿಸದೆ ಶಲ್ಯನಿಗೆ ಹೇಳಿದನು. 'ಕರ್ಣನು ಮೊದಲು ಪ್ರಯೋಗಿಸಿದ ಬಾಣವನ್ನು ಭಯದಿಂದ ಹಿಂದಕ್ಕೆ ಸೆಳೆದು ಕುಗ್ಗಿಸಿದನು' ಎಂದು ಮುಂದೆ ಲೋಕವು ನಗುವುದಿಲ್ಲವೇ? ೨೦೦. ಎನ್ನುತ್ತ ಕುಗ್ಗಿಸು,ಕುಗ್ಗಿಸು, ಕುಗ್ಗಿಸು ಎಂದು ಹೊಡೆಯಲು ಬರಸಿಡಿಲೆರಗುವಂತೆ ಎರಗುವ ಬಾಣದ ಬರುವಿಕೆಯನ್ನು ಕಂಡು ಆಗಲೆ ಕೃಷ್ಣನು ಅರ್ಜುನನ ತೇರನ್ನು ಭೂಮಿಯಲ್ಲಿ ಎಂಟುಬೆರಳು ಆಳಕ್ಕೆ ಅಡಗುವ ಹಾಗೆ ಕೌಶಲದಿಂದ ಒತ್ತಿದನು. ೨೦೧. ಒತ್ತಟ್ಟಾಗಿ ಬಾಣವು ಸುಮ್ಮನಿರದೆ ಬರುತ್ತ ಅರ್ಜುನನ ಕಿರೀಟವನ್ನು ಕತ್ತರಿಸಲು ಆಗ ಇಂದ್ರನನ್ನು ಭಯವಾವರಿಸಿತು. ಆ ಸಂಕಟದಲ್ಲಿ ದುಃಖವು ಈಶ್ವರನನ್ನು ಆವರಿಸಿಕೊಂಡಿತು.

ಒಳಗಱಿಯದೆ ಕೌರವಬಳ
ಜಳನಿಧಿ ಬೊಬ್ಬಿಱಿದು ಮೇಲುದಂ ಬೀಸಿದೊಡು ।
ಚ್ಛಳಿಸಿದ ಮಕುಟದ ಮಣಿಗಳ
ಪೊಳೆಪುಗಳಿಂದುಳ್ಕಮೆಬ್ಬುವೆಂಟುಂ ದೆಸೆಯೊಳ್ ॥ ೨೦೨

ವ॥ ಅಂತು ರುಂದ್ರನೀಳಾದ್ರೀಂದ್ರ ರತ್ನಕೂಟಾಗ್ರಮುದಗ್ರ ವಜ್ರಘಾತದಿಂದುರುಳ್ವಂತೆ ರತ್ನಮಕುಟಮರಾತಿಶಾತಶರದಿನುರುಳ್ವುದುಮಳಿನೀಳೋಜ್ವಳ ಸಹಸ್ರಕುಂತಳಂಗಳ್ ಪರಕಲಿಸಿ ಬಂದು ಪೊಱಮುಯ್ವನಳ್ಳಿಱಿಯೆ ಪಚ್ಚುಗಂಟಿಕ್ಕಿ ಗಾಂಡೀವಧನ್ವಂ ಸನ್ನದ್ಧನಾಗಿರ್ಪನ್ನೆಗಂ–

ಚಂ॥ ಪುರಿಗಣೆಯಪ್ಪ ಕಾರಣದಿನಂತದು ತಪ್ಪಿದೆನೆಂದು ನೊಂದು ಪ
ಲ್ಮೊರೆದಹಿ ರೂಪದಿಂ ಮಗುಳ್ದು ಬಂದಿನನಂದನನಲ್ಲಿಗೆನ್ನನಂ ।
ತರಿಸದೆ ತೊಟ್ಟು ಬೇಗಮಿಸು ವೈರಿಯನೀಗಳೆ ಕೊಂದಪೆಂ ರಸಾಂ
ಬರ ಧರಣೀವಿಭಾಗದೊಳಗಾವೆಡೆವೊಕ್ಕೊಡಮಂಗನಾಯಕಾ ॥ ೨೦೩

ವ॥ ಎಂಬುದುಂ ನೀನಾರ್ಗೇನೆಂಬೆಯದಾವುದು ಕಾರಣದಿಂದಮೆನ್ನ ದೊಣೆಯಂ ಪೊಕ್ಕಿರ್ದೆಯೆಂದೊಡಾನಶ್ವಸೇನನೆಂಬ ಪನ್ನಗನೆನೆಂದು ತನ್ನ ವೈರ ಕಾರಣನಱಿಯೆ ಪೇೞ್ದೊಡೆ ದರಹಸಿತವದನಾರವಿಂದನಾಗಿ–

ಕಂ॥ ಶರರೂಪದೊಳಿರೆ ನಿನ್ನಂ
ಶರಮೆಂದಾಂ ತೊಟ್ಟೆನಱಿದು ತುಡುವೆನೆ ನಿನ್ನಂ ।
ನೆರದೊಳ್ ಕೊಲ್ವಂತೆನಗೇ
ನರಿಯನೆ ಗಾಂಡೀವಧನ್ವನೆಂಬುದುಮಾಗಳ್ ॥ ೨೦೪

೨೦೨. ಇದರ ರಹಸ್ಯವನ್ನರಿಯದೆ ಕೌರವಸೇನಾಸಮುದ್ರವು ಆರ್ಭಟಮಾಡಿ (ಸಂತೋಷದಿಂದ) ಉತ್ತರೀಯವನ್ನು ಬೀಸಲು ಚಿಮ್ಮಿದ ಕಿರೀಟದ ರತ್ನಗಳ ಹೊಳಪಿನಿಂದ ಎಂಟುದಿಕ್ಕುಗಳಲ್ಲಿಯೂ ಉಲ್ಕಾಪಾತಗಳು ಎದ್ದುವು. ವ॥ ಹಾಗೆ ವಿಸ್ತಾರವೂ ರತ್ನಮಯವೂ ಆದ ನೀಲಪರ್ವತದ ಶಿಖರಗಳ ತುದಿಯ ಭಾಗವು ಬಲವಾದ ವಜ್ರಾಯುಧದ ಪೆಟ್ಟಿನಿಂದ ಉರುಳುವ ಹಾಗೆ ರತ್ನಕಿರೀಟವು ಶತ್ರುವಿನ ಹರಿತವಾದ ಬಾಣದಿಂದ ಉರುಳಲು ದುಂಬಿಗಳ ಕಪ್ಪುಬಣ್ಣದಂತೆ ಪ್ರಕಾಶಮಾನ ವಾಗಿರುವ ಕೂದಲುಗಳು ಕೆದರಿ ಬಂದು ಹೆಗಲಿನ ಹೊರಭಾಗವನ್ನು ಮುಟ್ಟಲು ಅದನ್ನು ಎರಡು ಭಾಗವಾಗಿ ಗಂಟಿಕ್ಕಿ ಅರ್ಜುನನು ಸಿದ್ಧವಾಗುವಷ್ಟರಲ್ಲಿ ೨೦೩. ದಿವ್ಯಾಸ್ತ್ರವಾದ (ಪುರಿಗಣೆಯಾದ) ಕಾರಣದಿಂದ ಹಾಗೆ ತಪ್ಪುಮಾಡಿದೆನೆಂದು ವ್ಯಥೆಪಟ್ಟು ಹಲ್ಲುಕಡಿದು ಶಬ್ದಮಾಡಿ ಹಾವಿನ ರೂಪದಿಂದ ಪುನಃ ಕರ್ಣನ ಹತ್ತಿರಕ್ಕೆ ಬಂದು 'ಕರ್ಣಾ, ನನ್ನನ್ನು ಸಾವಕಾಶಮಾಡದೆ ಬಿಲ್ಲಿನಲ್ಲಿ ತೊಡಿಸಿ ಬೇಗ ಹೂಡು; ಸ್ವರ್ಗಮರ್ತ್ಯಪಾತಾಳವಿಭಾಗದಲ್ಲಿ ಯಾವಸ್ಥಳದಲ್ಲಿ ಪ್ರವೇಶಮಾಡಿದ್ದರೂ ಶತ್ರುವನ್ನು ಈಗಲೇ ಕೊಲ್ಲುತ್ತೇನೆ' ಎಂದಿತು. ವ॥ 'ನೀನು ಯಾರು? ನಿನ್ನ ಹೆಸರೇನು? ಯಾವ ಕಾರಣದಿಂದ ನನ್ನ ಬತ್ತಳಿಕೆಯನ್ನು ಪ್ರವೇಶಿಸಿದ್ದೆ' ಎನ್ನಲು 'ನಾವು ಅಶ್ವಸೇನನೆಂಬ ಹಾವು' ಎಂದು ತಿಳಿಸಿ ತನ್ನ ವೈರಕಾರಣವನ್ನು ಸ್ಪಷ್ಟವಾಗಿ ತಿಳಿಸಲು ಮುಗುಳುನಗೆಯಿಂದ ಕೂಡಿದ ಮುಖವುಳ್ಳವನಾಗಿ ೨೦೪. 'ಬಾಣಾಕಾರದಿಂದಿರಲು ನಿನ್ನನ್ನು ಬಾಣವೆಂದು

ನೀಂ ನಿನ್ನ ಪಗೆಯನಾರ್ಪೊಡ
ದಂ ನೆಱಪೆನೆ ನೆಗೆದು ಬರ್ಪ ವಿಷಪನ್ನಗನಂ ।
ಪನ್ನತನೆಡೆಯೊಳರಿಗಂ
ತನ್ನಯ ಗರುಡಾಸ್ತ್ರದಿಂದೆ ಕುಱಿದಱಿದಱಿದಂ ॥ ೨೦೫

ವ॥ ಆಗಳಂಗರಾಜಂಗೆ ಶಲ್ಯಂ ಕಿನಿಸಿ ಮುಳಿಸಿನೊಳೆ ಕಣ್ಣಾಗ್ಣದಿಂತಪ್ಪೇಕಗ್ರಾಹಿಗ ಮೊರಂಟಂಗಂ ರಥಮನೆಸಗೆನೆಂದು ವರೂಥದಿಂದಿೞಿದು ಪೋಗೆ-

ಚಂ॥ ಅರಿಗನ ಬಟ್ಟನಂಬುಗಳ ಬಲ್ಸರಿ ಸೋಂಕುಗುಮೇೞಿಮೆನ್ನ ತೋ
ಳ್ಗೆರಮೆನಗೆನ್ನ ಬಿಲ್ಲೆ ನೆರಮೆಂದು ವರೂಥತುರಂಗಮಂಗಳಂ ॥
ತುರಿಪದೆ ತಾನೆ ಚೋದಿಸುತುಮಾರ್ದಿಸುತುಂ ಕಡಿಕೆಯ್ದು ಕಾದೆ ಭೀ
ಕರ ರಥಚಕ್ರಮಂ ಪಿಡಿದು ನುಂಗಿದಳೊರ್ಮೆಯೆ ಧಾತ್ರಿ ಕೋಪದಿಂ ॥ ೨೦೬

ವ॥ ಅಂತು ತನ್ನಂ ಮುನ್ನೆ ಮುಯ್ಯೇೞ್ ಸೂಳ್ವರಮೊಲ್ಲಣಿಗೆಯಂ ಪಿಟಿವಂತೆ ಪಿಂಡಿ ಪಿಟಿದ ಪಗೆಗೆ ರಥಚಕ್ರಮಂ ನುಂಗುವುದುಂ ರಥದಿಂದಿೞಿದು ಗಾಲಿಯನೆತ್ತುವಾಗಳಿವನನೀ ಪದದೊಳ್ ಕಡಿದೊಟ್ಟದಾಗಳ್ ಗೆಲಲಾಱೆಯೆಂದು ನುಡಿದ ಮುಕುಂದನ ನುಡಿಗೆ ಕೊಕ್ಕರಿಸಿ ಜಗದೇಕಮಲ್ಲನಿಂತೆಂದಂ-

ಬಿಲ್ಲಿಗೆ ತೊಡಿಸಿದೆ. (ನೀನು ಯಾರೆಂದು) ತಿಳಿದೂ ನಿನ್ನ ಸಹಾಯದಿಂದ ಕೊಲ್ಲುವಷ್ಟು ಅರ್ಜುನನು ನನಗೆ ಅಸಾಧ್ಯನೆ?' ಎಂದನು -೨೦೫. ಸರ್ಪವು 'ಹಾಗಾದರೆ ಶತ್ರುತ್ವವನ್ನು ಸಮರ್ಥನಾದರೆ ನೀನು ಪೂರ್ಣಮಾಡು' ಎಂದು ಹೇಳಿ ಅರ್ಜುನನ ಕಡೆಗೆ ಹಾರಿ ಬರುತ್ತಿದ್ದ ವಿಷಸರ್ಪವನ್ನೂ ಶೂರನಾದ ಅರಿಗನು ಮಧ್ಯಮಾರ್ಗದಲ್ಲಿಯೇ ಗರುಡಬಾಣದಿಂದ ಕುರಿಯನ್ನು ಕತ್ತರಿಸುವಂತೆ ಕತ್ತರಿಸಿದನು. ವ॥ ಆಗ ಕರ್ಣನಿಗೆ ಶಲ್ಯನು ಕೋಪಿಸಿಕೊಂಡು ಕೋಪದಿಂದ ಕಣ್ಣಾಗ್ಗದೆ, ಇಂತಹ ಹಟಮಾರಿಗೂ ಒರಟನಿಗೂ ನಾನು ತೇರನ್ನು ನಡೆಸುವುದಿಲ್ಲವೆಂದು ತೇರಿನಿಂದ ಇಳಿದು ಹೋದನು. ೨೦೬. 'ಅರ್ಜುನನ ದುಂಡಾದ ಬಾಣಗಳ ದೊಡ್ಡ ಮಳೆಯು ತಗುಲುತ್ತಿದೆ ಏಳಿ, ನನ್ನ ತೋಳುಗಳು ನನಗೆ ಸಹಾಯ, ನನ್ನ ಬಿಲ್ಲೇ ಸಹಾಯ' ಎಂದು ರಥದ ಕುದುರೆಗಳನ್ನು ವೇಗವಾಗಿ ತಾನೇ ನಡೆಸುತ್ತ ಆರ್ಭಟಮಾಡಿ ಬಹಳವೇಗದಿಂದ ಯುದ್ಧಮಾಡಲು ಭಯಂಕರವಾದ ತೇರಿನ ಚಕ್ರವನ್ನು ಭೂಮಿಯು ಹಿಡಿದು ಇದ್ದಕ್ಕಿದ್ದ ಹಾಗೆ ನುಂಗಿದಳು (ಕರ್ಣನ ತೇರಿನ ಗಾಲಿಗಳು ಇದ್ದಕ್ಕಿದ್ದ ಹಾಗೆ ಭೂಮಿಯಲ್ಲಿ ಹೂತುಹೋದುವು) ವ॥ ಹಾಗೆ ತನ್ನನ್ನು ಮೊದಲು ಇಪ್ಪತ್ತೊಂದು ಸಲ ಒದ್ದೆಯ ಬಟ್ಟೆಯನ್ನು ಹಿಂಡುವಂತೆ ಹಿಂಡಿದ ದ್ವೇಷಕ್ಕೆ ರಥಚಕ್ರವನ್ನು ಭೂಮಿಯು ನುಂಗಲು ರಥದಿಂದಿಳಿದು ಕರ್ಣನು ಗಾಲಿಯನ್ನು ಎತ್ತುತ್ತಿದ್ದನು. ಇವನನ್ನು ಈ ಸ್ಥಿತಿಯಲ್ಲಿ (ಸನ್ನಿವೇಶದಲ್ಲಿ) ಕತ್ತರಿಸಿ ರಾಶಿಮಾಡದಿದ್ದರೆ ಗೆಲ್ಲಲಾರೆ ಎಂದು ಹೇಳಿದ ಕೃಷ್ಣನ

ಮ॥ ಬಱುವಂ ಸಾರಥಿಯಿಲ್ಲ ಮೆಯ್ಗೆ ಮಱೆಯುಂ ತಾನಿಲ್ಲದೆಂತೀಗಳಾ
ನಿಱಿವೆಂ ನೋಡಿರೆ ಮತ್ತಮೊಂದನಿಸಲುಂ ಕೆಯ್ಯೇಱದೇಕೆಂದುಮಾ ।
ನಱಿಯೆಂ ಕೂರ್ಮೆಯೆ ಮಿಕ್ಕು ಬಂದಪುದಿದರ್ಕೇಗೆಯ್ವೆನೇನೆಂಬೆನಾಂ ।
ಮಱೆದೆಂ ಮುನ್ನಿನದೊಂದು ವೈರಮನಿದಿಂತೇಕಾರಣಂ ಭೂಧರಾ ॥ ೨೦೭

ವ॥ ಎಂಬುದುಮೆನಿತಱಿಯದಿರ್ದೊಡಂ ಸೋದರಿಕೆಯೆ ಮಿಕ್ಕು ಬರ್ಕುಮಾಗದೆಯೆಂದು ತನ್ನಂತರ್ಗತದೊಳ್ ಬಗೆದಸುರಾಂತಕನಿಂತೆಂದಂ-

ಚಂ॥ ನೆಗಟ್ಟಭಿಮನ್ಯುವಂ ಚಲದಿನಂದಿಱಿದಿಂದು ನಿಜಾಗ್ರಜಾತನಂ
ಸುಗಿವಿನಮೆಚ್ಚು ಬೀರದೊಳೆ ಬೀಗುವ ಸೂತಸುತಂಗೆ ನೀನುಮಾ ॥
ಜಿಗೆ ಸೆಡೆದಿರ್ದೆಯಪ್ಪೊಡಿರು ಚಕ್ರನಿಘಾತದಿನಿಕ್ಕಿ ಬೀರಮು
ರ್ವಿಗೆ ಪಡಿಚಂದಮಾಗೆ ತಱಿದೊಟ್ಟಿ ಜಯಾಂಗನೆಗಾಣ್ಮನಾದಪೆಂ ॥ ೨೦೮

ವ॥ ಎಂಬನ್ನೆಗಂ ಧರಾತಳಮಳಱೆ ರಥದ ಗಾಲಿಯಂ ಕಿೞ್ತು ಮತ್ತಂ ರಥಮನಪ್ರತಿರಥ ನೇಱೆ ನಿಟ್ಟಾಲಿಯಾಗೆ ಮುಟ್ಟೆವಂದು ಕಿಡಿಗುಟ್ಟೆ ಮರ್ಮೋದ್ಘಾಟನಂಗೆಯ್ದು ಕಾದುವಾಗಳ್ ಕಪಿಧ್ವಜಂ ವನದಂತಿಯಂತೆ ಧ್ವಾಂಕ್ಷಧ್ವಜಮನುಡಿದು ಕೆಡೆವಿನಮೆಚ್ಚಾಗಳ್-

ಕಂ॥ ಪಟಿಯಿಗೆ ಬಿೞ್ದೊಡೆ ಬೀರದ
ಪಟವಿಗೆಯಂ ನಿಱಿಸಲೆಂದೆ ಹರಿ ವಕ್ಷಮನ
ಲ್ಲಟಿವೋಗೆಯೆಚ್ಚು ಮುಳಿಸವ
ಗಟಿಯಿಸುತಿರೆ ನರನ ಬಿಲ್ಲ ಗೊಣೆಯುಮನೆಚ್ಚಂ ॥ ೨೦೯

ಮಾತಿಗೆ ಅಸಹ್ಯಪಟ್ಟು ಅರ್ಜುನನು ಹೀಗೆ ಹೇಳಿದನು-೨೦೭. ಬರಿದಾದವನು (ನಿಸ್ಸಹಾಯಕನು), ಸಾರಥಿಯೂ ಇಲ್ಲ; ಶರೀರಕ್ಕೆ ಮರೆಯಾದ ಕವಚವೂ ಇಲ್ಲ; ಅದು ಹೇಗೆ ಈಗ ನಾನು ಹೊಡೆಯುಲಿ; ಪುನಃ ಒಂದು ಬಾಣವನ್ನು ಹೊಡೆಯುವುದಕ್ಕೂ ಕೈಗಳು ಏಳುವುದಿಲ್ಲ; ಏತಕ್ಕೆಂದು ನಾನು ತಿಳಿಯಲಾರೆ; ಪ್ರೀತಿಯೆ ಮೀರಿ ಬರುತ್ತಿದೆ. ಇದಕ್ಕೆ ಏನು ಮಾಡಲಿ, ಏನೆಂದು ಹೇಳಲಿ; ನಾನು ಹಿಂದಿನ ದ್ವೇಷವನ್ನು ಮರೆತೆನು; ಕೃಷ್ಣಾ ಇದಕ್ಕೇನು ಕಾರಣ? ವ॥ ಎನ್ನಲು ವಾಸ್ತವಾಂಶವು ತಿಳಿಯದಿದ್ದರೂ ಭ್ರಾತೃಭಾವವೇ ಮೀರಿ ಬರುತ್ತದೆಯಲ್ಲವೇ ಎಂದು ತನ್ನ ಮನಸ್ಸಿನಲ್ಲಿ ತಿಳಿದು ಕೃಷ್ಣನು ಹೀಗೆ ಹೇಳಿದನು-೨೦೮. ಅಂದು ಪ್ರಸಿದ್ಧನಾದ ಅಭಿಮನ್ಯುವನ್ನು ಹಟದಿಂದ ಕತ್ತರಿಸಿ ಇಂದು ನಿಮ್ಮಣ್ಣನಾದ ಧರ್ಮರಾಯನನ್ನು ಹೆದರುವಂತೆ ಹೊಡೆದು ವೀರ್ಯದಿಂದ ಅಹಂಕಾರಪಡುವ ಸೂತನ ಮಗನಿಗೆ ನೀನು ಯುದ್ಧದಲ್ಲಿ ಹೆದರು ವುದಾದರೆ ಇರು ನಾನೇ ಚಕ್ರಾಯುಧದ ಪೆಟ್ಟಿನಿಂದ ಹೊಡೆದು ಪರಾಕ್ರಮವು ಲೋಕಕ್ಕೆ ಮಾದರಿಯಾಗುವ ಹಾಗೆ ಕತ್ತರಿಸಿ ರಾಶಿ ಮಾಡಿ ಜಯಲಕ್ಷ್ಮಿಗೆ ಒಡೆಯನಾಗುತ್ತೇನೆ. ವ॥ ಎನ್ನುವಷ್ಟರಲ್ಲಿ ಭೂಮಿಯು ನಡುಗುವ ಹಾಗೆ ತೇರಿನ ಚಕ್ರವನ್ನು ಕಿತ್ತು ಪುನಃ ಪ್ರತಿರಥನಿಲ್ಲದ ಕರ್ಣನು ರಥವನ್ನು ಹತ್ತಿ ದೀರ್ಘದೃಷ್ಟಿಯಿಂದ ಸಮೀಪಕ್ಕೆ ಬಂದು ಕಿಡಿಗಳನ್ನು ಸುರಿಸಿ ಮರ್ಮಭೇದಕವಾದ ಮಾತುಗಳನ್ನಾಡಿ ಯುದ್ಧಮಾಡುವಾಗ ಕಪಿಧ್ವಜನಾದ ಅರ್ಜುನನು ಕಾಡಾನೆಯಂತೆ ಕಾಗೆಯ ಬಾವುಟವನ್ನು ಕತ್ತರಿಸಿ ಕೆಡೆಯುವ ಹಾಗೆ ಹೊಡೆದನು. ೨೦೯. ಬಾವುಟವು ಬೀಳಲು ಶೌರ್ಯದ ಧ್ವಜವನ್ನು

ಬೆಳಗುವ ಸೊಡರ್ಗಳ ಬೆಳಗ
ಗ್ಗಳಿಸುವವೋಲ್ ಪೋಪ ಪೊೞ್ತಿನೊಳ್ ತೇಜಂ ಪ ।
ಜ್ಜಳಿಸೆ ತಳಿತಳಿಸೆ ತೊಳ ತೊಳ
ತೊಳಗಿದನಸ್ತಮಯ ಸಮಯದೊಳ್ ದಿನಪಸುತಂ ॥ ೨೧೦

ವ॥ ಅಂತು ಕರ್ಣ ನಿಶಿತ ವಿಕರ್ಣಹತಿಯಿಂದಮಸುರಾಂತಕಂ ಕಟಿಯೆ ನೊಂದು-

ಕಂ॥ ಕಸೆಯಂ ಬಿಟ್ಟುಱದಭಿಮಂ
ತ್ರಿಸಿ ಚಕ್ರಮನಸುರವೈರಿಯಿಡುವಾಗಳ್ ಬಾ ।
ರಿಸಿ ಪೆಱತು ಗೊಣೆಯದಿಂದೇ
ಱಿಸಿ ಬಿಲ್ಲಂ ತ್ರಿಭುವನಂಗಳಳ್ಳಾಡುವಿನಂ ॥ ೨೧೧

ವ॥ ಮುನ್ನಮಿಂದ್ರಕೀಲನಗೇಂದ್ರದೊಳ್ ಪಶುಪತಿಯನಾರಾಧಿಸಿ ಪಾಶುಪತಾಸ್ತ್ರಂ ಬಡೆದಂದು ತೆಲ್ಲಟಿಯೆಂದು-

ಚಂ॥ ಗಿರಿಜೆಯ ಮೆಚ್ಚಿ ಕೊಟ್ಟ ನಿಶಿತಾಸ್ತ್ರಮನಂಜಲಿಕಾಸ್ತ್ರಮಂ ಭಯಂ
ಕರತರಮಾಗೆ ಕೊಂಡು ವಿಧಿಯಿಂಪಭಿಮಂತ್ರಿಸಿ ಪೂಡೆ ಬಿಲ್ಲೊಳು ।
ರ್ವರೆ ನಡುಗಿತ್ತಜಾಂಡಮೊಡೆದತ್ತು ನೆಲಂ ಪಿಡುಗಿತ್ತು ಸಪ್ತಸಾ ।
ಗರಮುಡುಗಿತ್ತು ಸಾಹಸಮದೇಂ ಪಿರಿದೋ ಕದನತ್ರಿಣೇತ್ರನಾ ॥ ೨೧೨

ನಿಲ್ಲಿಸಬೇಕೆಂದೇ ಕೃಷ್ಣನ ಎದೆಯನ್ನು ಸೀಳಿಹೋಗುವ ಹಾಗೆ ಹೊಡೆದು ಕೋಪವು ಅಧಿಕವಾಗುತ್ತಿರಲು ಅರ್ಜುನನ ಬಿಲ್ಲಿನ ಹೆದೆಯನ್ನು ಕತ್ತರಿಸಿದನು. ೨೧೦. ಪ್ರಕಾಶಮಾನವಾದ ದೀಪಗಳ ಕಾಂತಿಯು ಆರಿಹೋಗುವ ಕಾಲಪಲ್ಲಿ ಹೆಚ್ಚಾಗಿ ಜ್ವಲಿಸುವ ಹಾಗೆ ಸೂರ್ಯಪುತ್ರನಾದ ಕರ್ಣನು ಮುಳುಗುವ (ಸಾಯುವ) ಕಾಲದಲ್ಲಿ ತೇಜಸ್ಸು ಪ್ರಜ್ವಲಿಸಲು ತಳತಳನೆ ಪ್ರಕಾಶಿಸಿದನು. ವ॥ ಹಾಗೆ ಕರ್ಣನ ಹರಿತವಾದ ಬಾಣದ ಪೆಟ್ಟಿನಿಂದ ಕೃಷ್ಣನು ಸಾಯುವಷ್ಟು ನೊಂದು ೨೧೧. ಚಾವುಟಿಯನ್ನೆಸೆದು ಚಕ್ರಾಯುಧವನ್ನಭಿಮಂತ್ರಿಸಿ ಕೃಷ್ಣನು ಎಸೆಯುವಾಗ ಅರ್ಜುನನು ಅದನ್ನು ತಡೆದು ಬೇರೊಂದು ಹೆದೆಯಿಂದ ಬಿಲ್ಲನ್ನು ಕಟ್ಟಿ ಮೂರುಲೋಕಗಳು ನಡುಗುವ ಹಾಗೆ ವ॥ ಮೊದಲು ಇಂದ್ರಕೀಲಪರ್ವತದಲ್ಲಿ ಈಶ್ವರನನ್ನು ಪೂಜಿಸಿ ಪಾಶುಪತಾಸ್ತ್ರವನ್ನು ಪಡೆದ ದಿನ ಬಳುವಳಿಯೆಂದು ೨೧೨. ಪಾರ್ವತಿಯು ಪ್ರೀತಿಯಿಂದ ಕೊಟ್ಟ ಹರಿತವಾದ ಅಂಜಲಿಕಾಸ್ತ್ರವನ್ನು ಭಯವುಂಟಾಗುವ ಹಾಗೆ ಕೈಗೆ ತೆಗೆದುಕೊಂಡು ಶಾಸ್ತ್ರರೀತಿಯಿಂದ ಅಭಿಮಂತ್ರಣ ಮಾಡಿ (ಮಂತ್ರಾಧಿ ದೇವತೆಯನ್ನು ಆಹ್ವಾನಿಸಿ) ಬಿಲ್ಲಿನಲ್ಲಿ ಹೂಡಲು ಭೂಮಿಯು ಕಂಪಿಸಿತು, ಬ್ರಹ್ಮಾಂಡವು ಒಡೆಯಿತು, ನೆಲವು ಸಂಕೋಚವಾಯಿತು, ಏಳು ಸಮುದ್ರಗಳು ಬತ್ತಿಹೋದುವು. ಕದನತ್ರಿಣೇತ್ರನಾದ ಅರ್ಜುನನ ಸಾಹಸವು ಅತಿಮಹತ್ತರ ವಾದುದು. ವ॥ ಆಗ ಸಮಸ್ತಲೋಕವೆಂಬ ಮನೆಯನ್ನು ನಾಶಮಾಡುವ ಅಂಜಲಿಕಾಸ್ತ್ರವನ್ನು ಅಮೋಘಾಸ್ತ್ರ ಧನಂಜಯನಾದ ಅರ್ಜುನನು ಕರ್ಣನನ್ನು ಕೊಲ್ಲಲು ಯೋಚಿಸಿ ಕಿವಿಯವರೆಗೂ ಸೆಳೆದು ಕತ್ತಿನ ಸಂದಿಯನ್ನು ನಿರೀಕ್ಷಿಸಿ-

ವ॥ ಆಗಳಖಿಳಭುವನಭವನಸಂಹಾರಕಮಪ್ಪಂಜಲಿಕಾಸ್ತ್ರಮನಮೋಘಾಸ್ತ್ರ ಧನಂಜಯನಾಕರ್ಣಾಂತಂಬರಂ ತೆಗೆದಾಕರ್ಣಾಂತಂ ಮಾಡಲ್ ಬಗೆದು ಕಂಧರಸಂಧಿಯಂ ನಿಟ್ಟಿಸಿ-

ಮ॥ ಸ್ರ॥ ಮುಳಿದೆಚ್ಚಾಗಳ್ ಮಹೋಗ್ರಪ್ರಳಯಶಿಖಿ ಶಿಖಾನೀಕಮಂ ವಿಸ್ಫುಲಿಂಗಂ
ಗಳುಮಂ ಬೀಱುತ್ತುಮೌರ್ವಜ್ವಳನರುಚಿಯುಮಂ ತಾನೆ ತೋಱುತ್ತುಮಾಟಂ ।
ದಳುರುತ್ತುಂ ಬಂದು ಕೊಂಡಾಗಳೆ ಗಗನತಳಂ ಪಾಯ್ದು ಕೆನ್ನೆತ್ತರಿಂದು
ಚ್ಚಳಿಸುತ್ತಿರ್ಪನ್ನೆಗಂ ಬಿಟ್ಟುದು ಭರದೆ ಸಿಡಿಲ್ದತ್ತ ಕರ್ಣೋತ್ತಮಾಂಗಂ ॥ ೨೧೩

ವ॥ ಅಂತು ತಲೆ ನೆಲದೊಳುರುಳ್ದೊಡೆ ಲೋಕಕ್ಕೆಲ್ಲಮಗುಂದಲೆಯಾದ ಬೀರಮೆಸೆಯೆ ಪ್ರಾಣಮೊಡಲಿಂದಂ ತೊಲಗೆಯುಂ ತೊಲಗದ ನನ್ನಿಯನುದಾಹರಿಸುವಂತೆ ಪತ್ತೆಂಟು ಕೋಲ ನೆಟ್ಟಟ್ಟೆಯುಂ ನೆಲದೊಳಾಚಂದ್ರಸ್ಥಾಯಿಯಾಗೆ ಚತುರ್ದಶಭುವನಂಗಳಂ ಪಸರಿಸಿ ನಿಂದೊಡೆಸೆದುದಾಹರಣಮೊಳ್ಪಿನುದಾಹರಣಮುಮಾಗೆ ಗುಣಾರ್ಣವನ ಶರಪರಿಣತಿಯಿಂದೆ ಕುಲಶೈಲಂ ಬೀೞ್ವಂತೆ ನೆಲನದಿರೆ ಬಿೞ್ದಾಗಳ್-

ಕಂ॥ ಚಾಗದ ನನ್ನಿಯ ಕಲಿತನ
ದಾಗರಮೆನೆ ನೆಗಳ್ದ ಕರ್ಣನೊಡಲಿಂದೆಂತುಂ ।
ಪೋಗಲ್ಕಱಿಯದೆ ಸಿರಿ ಕರ
ಮಾಗಳ್ ಕರಿಕರ್ಣತಾಳ ಸಂಚಳೆಯಾದಳ್ ॥ ೨೧೪

೨೧೩. ಕೋಪದಿಂದ ಹೊಡೆಯಲು ಮಹಾಭಯಂಕರವಾದ ಪ್ರಳಯಕಾಲದ ಅಗ್ನಿಯ ಜ್ವಾಲಾಸಮೂಹವನ್ನೂ ಕಿಡಿಗಳನ್ನೂ ಕೆದರುತ್ತ ಬಡಬಾಗ್ನಿಯ ಕಾಂತಿಯನ್ನು ತಾನೇ ಪ್ರದರ್ಶಿಸುತ್ತ ಮೇಲೆಬಿದ್ದು ಹರಡುತ್ತ ಬಂದು ತಗಲಿದಾಗ ಚಿಮ್ಮಿದ ಕೆಂಪುರಕ್ತವು ಆಕಾಶಪ್ರದೇಶವನ್ನೂ ದಾಟಿ ಮೇಲಕ್ಕೆ ಹಾರುತ್ತಿರಲು ಕರ್ಣನ ತಲೆಯು ರಭಸದಿಂದ ಸಿಡಿದು ಆ ಕಡೆ ಬಿದ್ದಿತು. ವ॥ ಹಾಗೆ ತಲೆಯು ಭೂಮಿಯಲ್ಲಿ ಉರುಳಲು ಲೋಕಕ್ಕೆಲ್ಲ ವೀರ್ಯವು ಪ್ರಕಾಶಿಸಲು ಪ್ರಾಣವು ಶರೀರದಿಂದ ಹೋದರೂ ಸತ್ಯವು ಮಾತ್ರ ಹೋಗದಿರುವುದನ್ನು ಉದಹರಿಸುವಂತೆ ಅವನ ಕೀರ್ತಿಯು ಹದಿನಾಲ್ಕು ಲೋಕಗಳನ್ನೂ ಆವರಿಸಿ ಚಂದ್ರನಿರುವವರೆಗೂ ನಿಲ್ಲುವಂತೆ ಅವನ ಮುಂಡವು ಹತ್ತೆಂಟು ಬಾಣಗಳನ್ನು ಹೊಡೆದು ದೃಢವಾಗಿ ನಿಂತಿತು. ಪ್ರಕಾಶಮಾನವಾಗಿ ನಿಂತಿತು. ಪ್ರಕಾಶಮಾನವಾದ ಆ ತಲೆಯನ್ನು ಅಪಹರಣಮಾಡಿದುದು ಒಳ್ಳೆಯತನದ ಮಾರ್ಗದರ್ಶನವಾಗಲು ಅರ್ಜುನನ ಬಾಣಕೌಶಲ್ಯದಿಂದ ಮುಂಡವೂ ಕುಲಪರ್ವತವು ಬೀಳುವ ಹಾಗೆ ಭೂಮಿಯು ಕಂಪಿಸುವ ಹಾಗೆ ಬಿದ್ದಿತು. ೨೧೪. ತ್ಯಾಗ ಸತ್ಯ ಪರಾಕ್ರಮಗಳಿಗೆ ಆವಾಸಸ್ಥಾನವೆಂದು ಪ್ರಸಿದ್ಧವಾಗಿದ್ದ ಕರ್ಣನ ಶರೀರದಿಂದ ಹೇಗೂ ಬಿಟ್ಟು ಹೋಗುವುದಕ್ಕೆ ತಿಳಿಯದೆ ಲಕ್ಷ್ಮಿಯು ಆಗ ಆನೆಯ ಚಲಿಸುತ್ತಿರುವ ಕಿವಿಗಳಂತೆ

ಕುಡುಮಿಂಚಿನ ಸಿಡಿಲುರುಳಿಯೊ
ಳೊಡಂಬಡಂ ಪಡೆಯೆ ಕರ್ಣನೊಡಲಿಂದಾಗಳ್ ।
ನಡೆ ನೋಡೆ ನೋಡೆ ದಿನಪನೊ
ಳೊಡಗೂಡಿದುದೊಂದು ಮೂರ್ತಿ ತೇಜೋರೂಪಂ ॥ ೨೧೫

ಪಿಡಿದನೆ ಪುರಿಗಣೆಯನೆರ
ಬ್ನುಡಿದನೆ ಬಳ್ಕಿದನೆ ತಾನೆ ತನ್ನನೆ ಚಲಮಂ ।
ಪಿಡಿದಟಿದನೆಂದು ದೇವರ
ಪಡೆ ಗಡಣದೆ ಪೊಗಟ್ದುದಿನತನೂಜನ ಗಂಡಂ ॥ ೨೧೬

ಚಂ॥ ನೆನೆಯದಿರಣ್ಣ ಭಾರತದೊಳಿಂ ಪೆಱರಾರುಮನೊಂದೆ ಚಿತ್ತದಿಂ
ನೆನೆವೊಡೆ ಕರ್ಣನಂ ನೆನೆಯ ಕರ್ಣನೊಳಾರ್ ದೊರೆ ಕರ್ಣನೇಱು ಕ ।
ರ್ಣನ ಕಡು ನನ್ನಿ ಕರ್ಣನಳವಂಕದ ಕರ್ಣನ ಚಾಗಮೆಂದು ಕ
ರ್ಣನ ಪಡೆಮಾತಿನೊಳ್ ಪುದಿದು ಕರ್ಣರಸಾಯನಮಲ್ತೆ ಭಾರತಂ ॥ ೨೧೭

ವ॥ ಅಂತು ರಿಪುಕುರಂಗಕಂಠೀರವನ ಕೆಯ್ಯೊಳ್ ವೈಕರ್ತನಂ ಸಾಯಲೊಡಂ ಮೇಲುದಂ ಬೀಸಿ ಬೊಬ್ಬಿಱಿದಾರ್ವ ಪಾಂಡವಪತಾಕಿನಿಯೊಳ್-

ಕಂ॥ ಬದ್ದವಣದ ಪಱೆಗಳ್ ಕಿವಿ
ಸದ್ದಂಗಿಡೆ ಮೊಱಗೆ ದೇವದುಂದುಭರವದೊಂ ।
ದುದ್ದಾನಿ ನೆಗಱೆ ಮುಗುಳಲ
ರೊದ್ದೆ ಕರಂ ಸಿದ್ಧಮಾದುದಂಬರತಲದೊಳ್ ೨೧೮

ಚಂಚಲೆಯಾದಳು. ೨೧೫. ಕುಡಿಮಿಂಚಿನಿಂದ ಕೂಡಿದ ಸಿಡಿಲಿನ ಉಂಡೆಯ ತೇಜಸ್ಸಿನ ರೂಪವನ್ನು ಹೋಲುವ ಆಕಾರವೊಂದು ನೋಡುತ್ತಿರುವ ಹಾಗೆಯೇ ಕರ್ಣನ ಶರೀರದಿಂದ (ಹೊರಟು) ಸೂರ್ಯನಲ್ಲಿ ಐಕ್ಯವಾಯಿತು.' ೨೧೬. 'ದಿವ್ಯಾಸ್ತ್ರವನ್ನು ಹಿಡಿದನೆ? ಎರಡು ಮಾತನ್ನಾಡಿದನೇ? ಭಯಪಟ್ಟನೆ? ತಾನೆ ತನ್ನ ಹಟವನ್ನು ಬಿಗಿಯಾಗಿ ಹಿಡಿದು ಸತ್ತನು' ಎಂದು ದೇವತೆಗಳ ಸಮೂಹವು ಕರ್ಣನ ಪೌರುಷವನ್ನು ಹೊಗಳಿತು. ೨೧೭. ಅಣ್ಣಾ ಭಾರತದಲ್ಲಿ ಬೇರೆ ಯಾರನ್ನೂ ನೆನೆಯಬೇಡ; ಒಂದೇ ಮನಸ್ಸಿನಿಂದ ನೆನೆಯುವುದಾದರೆ ಕರ್ಣನನ್ನು ಜ್ಞಾಪಿಸಿಕೊಳ್ಳಪ್ಪ; ಕರ್ಣನಿಗೆ ಯಾರು ಸಮಾನ? ಕರ್ಣನ ಪರಾಕ್ರಮ, (ಯುದ್ಧ), ಕರ್ಣನ ವಿಶೇಷವಾದ ಸತ್ಯ, ಕರ್ಣನ ಪೌರುಷ, ಪ್ರಸಿದ್ಧವಾದ ಕರ್ಣನ ತ್ಯಾಗ ಎಂದು ಕರ್ಣನ ಮಾತಿನಿಂದಲೇ ತುಂಬಿ ಭಾರತವು ಕರ್ಣರಸಾಯನವಾಗಿದೆಯಲ್ಲವೇ? ವ॥ ಹಾಗೆ ರಿಪುಕುರಂಗಕಂಠೀರವನಾದ ಅರ್ಜುನನ ಕಯ್ಯಲ್ಲಿ ಕರ್ಣನು ಸಾಯಲು ಉತ್ತರೀಯವನ್ನು ಬೀಸಿ (ಸಂತೋಷಸೂಚಕವಾಗಿ) ಆರ್ಭಟಮಾಡಿ ಪಾಂಡವಸೈನ್ಯವು ಜಯಶಬ್ದಮಾಡಿತು. ೨೧೮. ಮಂಗಳವಾದ್ಯಗಳು ಭೋರ್ಗರೆದುವು. ಕಿವಿ ಕಿವುಡಾಗುವಂತೆ ಜಯಭೇರಿಗಳು ಮೊಳಗಿದುವು. ದೇವದುಂದುಭಿಯೊಡನೆ

ಚಂ॥ ಒದವಿದಲಂಪು ಕಣ್ಣೆವೆ ಕರುಳ್ ತನಗೆಂಬುದನುಂಟುಮಾಡೆ ನೋ
ಡಿದುದಱ ಕಣ್ಗಳಟ್ಟಮೆವಡುತ್ತಿರೆ ಪೋ ಪಸವೋಡಿತೆಂದು ನೀ ।
ರದಪಥದೊಳ್ ತಗುಳ್ದರಿಗನಂ ಪೊಗಟ್ದಾಡಿದನಂದು ದಂಡಕಾ
ಷ್ಠದ ತುದಿಯೊಳ್ ಪಳಂಚಲೆಯೆ ಕೋವಣವಂ ಗುಡಿಗಟ್ಟಿ ನಾರದಂ ॥ ೨೧೯

ವ ॥ ಆಗಳ್-

ಕಂ॥ ಪಟಿಯಿಗೆಯನುಡುಗಿ ರಥಮಂ
ಪೆಟವನನೆಸಗಲ್ಕೆವೇೞ್ದು ಸುತಶೋಕದ ಪೊಂ ।
ಪುಟಿಯೊಳ್ ಮೆಯ್ಯಱಿಯದೆ ನೀ
ರಿಟಿವಂತೆವೊಲಿೞಿದನಪರಜಳಧಿಗೆ ದಿನಪಂ ॥ ೨೨೦

ವ॥ ಆಗಳ್ ಕರ್ಣನ ಬಟಿವಟಿಯನೆ ತನ್ನ ಪೋಪುದನಭಿನಯಿಸುವಂತೆ ಶೋಕೋದ್ರೇಕದೊಳ್ ಮೆಯ್ಯಱಿಯದೆ ಕನಕರಥದೊಳ್ ಮೆಯ್ಯನೀಡಾಡಿ ನಾಡಾಡಿಯಲ್ಲದೆ ಮೂರ್ಛೆವೋದ ದುರ್ಯೋಧನನನಶ್ವತ್ಥಾಮ ಕೃಪ ಕೃತವರ್ಮ ಶಕುನಿಯರ್ ನಿಜ ನಿವಾಸಕ್ಕೊಡಗೊಂಡು ಪೋದರಾಗಳ್-

ಚಂ॥ ಸುರಿವಜರಪ್ರಸೂನರಜದಿಂ ಕವಿಲಾದ ಶಿರೋರುಹಂ ರಜಂ
ಬೊರೆದಳಿಮಾಲೆ ಮಾಲೆಯನೆ ಪೋಲೆ ಪಯೋಜಜ ಪಾರ್ವತೀಶರೊ ।
ಳ್ವರಕೆಯನಾಂತು ಕರ್ಣಹತಿಯೊಳ್ ತನಗಟ್ಟಜನೀಯೆ ಬಂದನಂ
ದರಮನೆಗಚ್ಯುತಂಬೆರಸಳುರ್ಕೆಯಿನಮನ ಗಂಧವಾರಣಂ ॥ ೨೨೧

ಪುಷ್ಪವೃಷ್ಟಿಗೆ ಹೂವಿನ ಮೊಗ್ಗುಗಳು ಸಿದ್ಧವಾದವು. ೨೧೯. ಕರ್ಣಾರ್ಜುನರ ಕಾಳಗವನ್ನು ನೋಡುವುದರಿಂದ ನನಗೆ ಕಣ್ಣೂ ಕರುಳೂ ಇದೆ ಎಂಬ ಭಾವವನ್ನುಂಟುಮಾಡಿ ಬಹಳ ಕಾಲದಿಂದ ನೋಡಬೇಕೆಂದಿದ್ದ ನನ್ನ ಕ್ಷಾಮವೂ ತೊಲಗಿತು, ಕರುಳಿಗೆ ಆನಂದವೂ ಉಂಟಾಯಿತು ಎಂದು ಆಕಾಶದಲ್ಲಿ ಅರ್ಜುನನನ್ನು ಹೊಗಳುತ್ತ ತನ್ನ ದಂಡದಂತಿರುವ ಕೋಲಿನ ತುದಿಗೆ ಕೋಪೀನವನ್ನು ಸೇರಿಸಿಕೊಂಡು ಬಾವುಟದಂತೆ ಅಲುಗಿಸುತ್ತ ನಾರದನು ಕುಣಿದಾಡಿದನು. ವ॥ ಆಗ ೨೨೦. ಬಾವುಟವನ್ನು ಇಳಿಸಿ ಹೆಳವನಾದ ಅರುಣನನ್ನು ತೇರನ್ನು ನಡೆಸುವಂತೆ ಹೇಳಿ ಪುತ್ರಶೋಕದ ಆಧಿಕ್ಯದಲ್ಲಿ ಸೂರ್ಯನು ಜ್ಞಾನಶೂನ್ಯನಾಗಿ (ಸತ್ತವರಿಗೆ) ಸ್ನಾನಮಾಡುವ ಹಾಗೆ ಪಶ್ಚಿಮಸಮುದ್ರಕ್ಕೆ ಇಳಿದನು. (ಅಸ್ತಮಯವಾದನು) ವ॥ ಆಗ ಕರ್ಣನ ದಾರಿಯಲ್ಲಿಯೇ ತಾನೂ ಹೋಗುವುದನ್ನು ಅಭಿನಯಿಸುವಂತೆ ದುಃಖದ ಆಧಿಕ್ಯದಿಂದ ಜ್ಞಾನಶೂನ್ಯನಾಗಿ ಚಿನ್ನದ ತೇರಿನಲ್ಲಿಯೇ ಶರೀರವನ್ನು ಚಾಚಿ ಅಸಾಧಾರಣ ರೀತಿಯಲ್ಲಿ ಮೂರ್ಛೆ ಹೋಗಿದ್ದ ದುರ್ಯೋಧನನನ್ನು ಅಶ್ವತ್ಥಾಮ, ಕೃಪ, ಕೃತವರ್ಮ, ಶಕುನಿಯರು ತಮ್ಮ ವಾಸಸ್ಥಳಕ್ಕೆ ಜೊತೆಯಲ್ಲಿ ಕರೆದುಕೊಂಡು ಹೋದರು. ಆಗ ೨೨೧. ದೇವತೆಗಳು ಸುರಿಯುತ್ತಿರುವ ಹೂವುಗಳ ಪರಾಗದಿಂದ ಕಪಿಲಬಣ್ಣವಾದ ಕೂದಲು, ಪರಾಗದಿಂದ ಮುಚ್ಚಲ್ಪಟ್ಟ

ಇದು ವಿವಿಧ ವಿಬುಧಜನವಿನುತ ಜಿನಪದಾಂಭೋಜ
ವರಪ್ರಸಾದೋತ್ಪನ್ನ ಪ್ರಸನ್ನ ಗಂಭೀರ ವಚನ ರಚನ
ಚತುರ ಕವಿತಾಗುಣಾರ್ಣವ ವಿರಚಿತಮಪ್ಪ
ವಿಕ್ರಮಾರ್ಜುನ ವಿಜಯದೊಳ್
ದ್ವಾದಶಾಶ್ವಾಸಂ

ದುಂಬಿಗಳ ಸಮೂಹದಿಂದ ಕೂಡಿದ ಹೂವಿನ ಮಾಲೆಯನ್ನೇ ಹೋಲುತ್ತಿರಲು, ಬ್ರಹ್ಮ ಮತ್ತು ರುದ್ರರ ಒಳ್ಳೆಯ ಆಶೀರ್ವಾದವನ್ನು ಪಡೆದು ಕರ್ಣನ ನಾಶವು ತನಗೆ ಆನಂದವನ್ನುಂಟುಮಾಡುತ್ತಿರಲು ಅಮ್ಮನ ಗಂಧವಾರಣನಾದ ಅರ್ಜುನನು ಕೃಷ್ಣನೊಡಗೂಡಿ ಆ ದಿನ ಅತಿಶಯದಿಂದ ಅರಮನೆಗೆ ಬಂದನು. ಇದು ಅನೇಕ ದೇವತೆಗಳಿಂದ ಸ್ತುತಿಸಲ್ಪಟ್ಟ ಜಿನಪಾದಕಮಲಗಳ ವರಪ್ರಸಾದದಿಂದ ಹುಟ್ಟಿದುದೂ ತಿಳಿಯೂ ಗಂಭೀರವೂ ಆದ ಮಾತುಗಳ ರಚನೆಯಲ್ಲಿ ಚಾತುರ್ಯವುಳ್ಳ ಕವಿತಾಗುಣಾರ್ಣವನಿಂದ ರಚಿತವಾದುದೂ ಆದ ವಿಕ್ರಮಾರ್ಜುನವಿಜಯದಲ್ಲಿ
ಹನ್ನೆರಡನೆಯ ಆಶ್ವಾಸ.

# ತ್ರಯೋದಶಾಶ್ವಾಸಂ

ಕಂ॥ ಶ್ರೀ ದಯಿತನ ಹರಿಗನ ಸಂ
ಪಾದಿತ ಭುಜವೀರ್ಯಮಟ್ಟಜಿಂ ತನಗೆರ್ದೆಯೊಳ್ ।
ಚೋದಿಸೆ ಪರಸಿದನಾಶೀ
ರ್ವಾದಪರಂಪರೆಯಿನಾಗಳಂತಕತನಯಂ ॥ ೧

ಪರಸಿ ಸಕಳಾವನೀತಳ
ಭರಮಿನಸುತನಟಿಯೆ ಹರಿಗನಿಂದೆನಗೀಗಳ್ ।
ದೊರೆಕೊಂಡುದೆಂದೊಡೇ ಬ
ತ್ತರಿಸಿದನೋ ರಿಪುಕುರಂಗಕಂಠೀರವನಂ ॥ ೨

ವ॥ ಅನ್ನೆಗಮತ್ತ ದುರ್ಯೋಧನನತಿ ಸಂಭ್ರಮಾಕುಳಿತ ಪರೀತ ಪರಿವಾರಜನೋಪನೀತ ಚಂದನಕರ್ಪೂರಮಿಶ್ರಿತ ಹಿಮಶಿಶಿರಧಾರಾಪರಿಷೇಕದಿಂದೆಂತಾನುಂ ಮೂರ್ಛೆಯಿಂದೆೞ್ಚತ್ತು ಕರ್ಣನಂ ನೆನೆದು ಸ್ಮರಣಮಾತ್ರದೊಳೆ ಶೋಕಸಾಗರಂ ಕರೆಗಣ್ಮೆ ಸೈರಿಸಲಾಱದೆ-

ಉ॥ ನೀನುಮಗಲ್ದೆಯಿನ್ನೆನಗೆ ಪೇೞ್ ಪೆಱರಾರೆನಗಾಪೆ ನಿನ್ನನಿ
ನ್ನಾನುಮಗಲ್ವೆನೇ ಕೆಳೆಯ ಬೆನ್ನನೆ ಬಂದಪೆನಾಂತರಂ ಯಮ ।
ಸ್ಥಾನಮನೆಯ್ದಿಸುತ್ತಿದುವೆ ದಂದುಗಮೆಂತೆರ್ದೆಮುಟ್ಟ ಕೂರ್ತು ಪೇೞ್
ಮಾನಸವಾಟಿನಂಗವಿಷಯಾಧಿಪ ನೀಂ ಪೊಱಗಾಗೆ ಬಾೞ್ವೆನೇ ॥ ೩

೧. ಜಯಲಕ್ಷ್ಮೀಪತಿಯಾದ ಅರ್ಜುನನು ಸಂಪಾದಿಸಿದ ಭುಜವೀರ್ಯವು ತನ್ನ ಹೃದಯದಲ್ಲಿ ಸಂತೋಷವನ್ನು ಹೆಚ್ಚಿಸುತ್ತಿರಲು ಧರ್ಮರಾಯನು ಆಗ ಅವನನ್ನು ಹರಕೆಯ ಪರಂಪರೆಯಿಂದ ಆಶೀರ್ವದಿಸಿದನು. ೨. ಅರ್ಜುನನಿಂದ ಕರ್ಣನು ಸಾಯಲು ಸಮಸ್ತ ಭೂಮಂಡಲದ ಆಧಿಪತ್ಯವು ತನಗೆ ಈಗ ದೊರೆಕೊಂಡಿತೆಂದು ಹೇಳಿ ಧರ್ಮರಾಯನು ಅರ್ಜುನನನ್ನು ವಿಶೇಷವಾಗಿ ಹೊಗಳಿದನು! ವ॥ ಅಷ್ಟರಲ್ಲಿ ಆ ಕಡೆ ದುರ್ಯೋಧನನು ತನ್ನನ್ನು ಸುತ್ತುವರಿದಿದ್ದು ಅತ್ಯಂತ ಸಂಭ್ರಮದಿಂದ ವ್ಯಾಕುಳಿತರಾದ ಸೇವಕಜನರಿಂದ ತರಲ್ಪಟ್ಟ ಶ್ರೀಗಂಧ ಮತ್ತು ಪಚ್ಚಕರ್ಪೂರ ಮಿಶ್ರಿತವಾದ ಮಂಜಿನಷ್ಟು ತಣ್ಣಗಿರುವ ನೀರಿನಿಂದ ಸಿಂಪಿಸಲ್ಪಟ್ಟು ಹೇಗೋ ಮೂರ್ಛೆಯಿಂದ ಎಚ್ಚೆತ್ತನು. ಕರ್ಣನನ್ನು ಜ್ಞಾಪಿಸಿಕೊಂಡು ನೆನೆಸಿದ ಮಾತ್ರಕ್ಕೆ ದುಃಖಸಮುದ್ರವು ದಡವನ್ನು ಮೀರಿ ಉಕ್ಕಲು ಸೈರಿಸಲಾರದೆ ೩. ನೀನು ಕೂಡ ನನ್ನನ್ನು ಅಗಲಿ ಹೋದೆ. ನನಗೆ ಆಸೆಯಾಗಿರುವವರು ಬೇರೆ ಯಾರು? ನಿನ್ನನ್ನು ಬಿಟ್ಟು ನಾನು ಇರಬಲ್ಲೆನೆ? ಸ್ನೇಹಿತನೇ ಪ್ರತಿಭಟಿಸಿದವರನ್ನು ಯಮನ ಮನೆಗೆ ಸೇರಿಸುತ್ತ ನಿನ್ನ ಬೆನ್ನಿನ ಹಿಂದೆಯೇ ಬರುತ್ತೇನೆ, ಇದೇ ನನಗಿರುವ ಕರ್ತವ್ಯ. ಹೃದಯದಂತರಾಳದಿಂದ ಪ್ರೀತಿಸಿದ ನೀನು ಅಗಲಿದ ಮೇಲೆ ಕರ್ಣ, ನಾನು ಮನುಷ್ಯ

ಚಂ॥ ಒಡಲೆರಡೊಂದೆ ಜೀವಮಿವರ್ಗೆಂಬುದನೆಂಬುದು ಲೋಕಮೀಗಳಾ
ನುಡಿ ಪುಸಿಯಾಯ್ತು ನಿನ್ನಸು ಕಿರೀಟಿಯ ಶಾತಶರಂಗಳಿಂದೆ ಪೋ ।
ಪೊಡಮೆನಗಿನ್ನುಮೀಯೊಡಲೊಳಿರ್ದುದು ನಾಣಿಲಿ ಜೀವಮೆಂದೊಡಾ
ವೆಡೆಯೊಳೆ ನಿನ್ನೊಳೆನ್ನ ಕಡುಗೂರ್ಮೆಯುಮಟ್ಕಱುಮಂಗವಲ್ಲಭಾ ॥ ೪

ಮ॥ ಅಱಿಯಂ ಸೋದರನೆಂದು ಧರ್ಮತನಯಂ ನಿರ್ವ್ಯಾಜದಿಂ ನಿನ್ನನಾ
ನಱಿವೆಂ ಮುನ್ನಱಿದಿರ್ದುಮೆನ್ನರಸನಾನೇಕಿತ್ತೆನಿಲ್ಲೇಕೆ ಪೇ
ೞಿಪಲ್ಕೊಲ್ದೆನುಮಿಲ್ಲ ಕಾರ್ಯವಶದಿಂ ಕೂರ್ಪಂತೆವೋಲ್ ನಿನ್ನನಾಂ
ನೆಱೆ ಕೊಂದೆಂ ಮುಳಿಸಿಂದಮಂಗನೃಪತೀ ಕೌಂತೇಯರೇಂ ಕೊಂದರೇ ॥೫

ಚಂ॥ ಉದಧಿತರಂಗತಾಟತಧರಾತಳಮಂ ನಿನಗಿತ್ತು ನಿನ್ನ ಕೊ
ಟ್ಟುದನೆ ಪಸಾದಮೆಂದು ಪೊಡೆವಟ್ಟು ಮನೋಮುದದಿಂದೆ ಕೊಂಡು ಬಾ ।
ೞ್ವದುವೆ ಬಯಕ್ಕೆ ಮುಂ ನಿನಗದಂ ಕಿಡಿಪಂದೆಲೆ ಕರ್ಣ ಕೇತುವಾ
ದುದು ನಿನಗಾ ವೃಕೋದರನ ಕಾಯ್ಪನೆ ಪೊತ್ತಿಸಿದೆನ್ನ ಕಾಳೆಗಂ ೬

ವ॥ ಎಂದು ಕರ್ಣನೊಳಾದ ಶೋಕಾನಲನೊಳ್ ಬಾಯುಟಿದು ಮೆಯ್ಮಱೆದು ಪಳಯಿಸುವ ನಿಜತನೂಜನ ಶೋಕಮನಾಱಿಸಲೆಂದು ಧೃತರಾಷ್ಟ್ರನುಂ ಗಾಂಧಾರಿಯುಂ ಬರೆವರೆ ಬರವಂ ಗೆಂಟಱೊಳ್ ಕಂಡು ದುಶ್ಶಾಸನನ ಸಾವಂ ನೆನೆದು ತಾಯ್ತಂದೆಯ ಮೊಗಮಂ ನೋಡಲ್ ನಾಣ್ಚಿ-

ಜೀವನವನ್ನು ಬಾಳಬಲ್ಲೆನೆ? ೪. ದುರ್ಯೋಧನ ಕರ್ಣರಲ್ಲಿ ಎರಡು ಶರೀರ ಒಂದು ಪ್ರಾಣ ಎಂದು ಲೋಕವು ಹೇಳುತ್ತಿದ್ದಿತು. ಈಗ ಆ ಮಾತು ಸುಳ್ಳಾಯಿತು, ನಿನ್ನ ಪ್ರಾಣವು ಅರ್ಜುನನ ಹರಿತವಾದ ಬಾಣಗಳಿಂದ ಹೋದರೂ ನನ್ನ ನಾಚಿಕೆಯಿಲ್ಲದ ಜೀವವು ಇನ್ನೂ ಶರೀರದಲ್ಲಿದೆ ಎಂದರೆ ಕರ್ಣ ನಿನ್ನ ನನ್ನ ಅತಿಶಯವಾದ ಪ್ರೀತಿಯೂ ಸ್ನೇಹವೂ ಆವೆಡೆಯಲ್ಲಿದೆ? ೫. ಧರ್ಮರಾಯನು ನೀನು ಅವನ ಜೊತೆಯಲ್ಲಿ ಹುಟ್ಟಿದವನೆಂಬುದನ್ನು ತಿಳಿಯನು. ಸಹಜವಾಗಿಯೇ ನೀನು ಯಾರೆಂಬುದನ್ನು ನಾನು ಬಲ್ಲೆ; ಮೊದಲು ತಿಳಿದಿದ್ದರೂ ನನ್ನ ದೊರೆತನವನ್ನು ನಾನು ನಿನಗೇಕೆ ಕೊಡಲಿಲ್ಲ? ನಿನಗೆ ತಿಳಿಯಪಡಿಸುವುದಕ್ಕೂ ಇಷ್ಟಪಡಲಿಲ್ಲ? ಸ್ವಕಾರ್ಯಸಾಧನೆಗಾಗಿ ಪ್ರೀತಿಸುವ ಹಾಗೆ (ನಟಿಸಿ) ಪಾಂಡವರ ಮೇಲಿನ ಕೋಪದಿಂದ ನಿನ್ನನ್ನು ನಾನೇ ಕೊಂದೆನು. ಪಾಂಡವರು ನಿನ್ನನ್ನು ಕೊಂದರೇನು? ೬. ಸಮುದ್ರದ ಅಲೆಗಳ ಹೊಡೆತವುಳ್ಳ ಈ ಭೂಮಂಡಲವನ್ನು ನಿನಗೆ ಕೊಟ್ಟು ನೀನು ಕೊಟ್ಟುದನ್ನೇ ಪ್ರಸಾದವೆಂದು ನಮಸ್ಕರಿಸಿ ಮನಸ್ಸಂತೋಷದಿಂದ ಸ್ವೀಕರಿಸಿ ಬಾಳಬೇಕೆಂಬುದೇ ನನ್ನ ಮೊದಲಿನ ಆಸೆ. ನನಗೆ ಅದನ್ನು ಕೆಡಿಸಬೇಕೆಂದೇ ಭೀಮನ ಕೋಪವನ್ನು ಹೆಚ್ಚಿಸಿದ ನನ್ನ ಯುದ್ಧವು ನಿನಗೆ (ನಾಶಮಾಡುವ) ಧೂಮಕೇತುವಾಯಿತು. ವ॥ ಹೀಗೆ ದುಃಖ ಪಡುತ್ತಿದ್ದ ಮಗನ ದುಃಖವನ್ನು ಸಮಾಧಾನಪಡಿಸಬೇಕೆಂಬದು ಧೃತರಾಷ್ಟ್ರನೂ ಗಾಂಧಾರಿಯೂ ಬರುತ್ತಿರುವುದನ್ನು ದೂರದಿಂದಲೇ ತಿಳಿದು ದುಶ್ಶಾಸನನ ಸಾವನ್ನು ನೆನೆದು ತಾಯಿತಂದೆಗಳ ಬರವನ್ನು ನೋಡಲು ನಾಚಿ

ಕಂ॥ ಆನುಂ ದುಶ್ಶಾಸನನುಂ
ಕಾನೀನನುಮೊಡನೆ ಪೋಗಿ ಬೀೞ್ಕೊಂಡು ರಣ ।
ಸ್ಥಾನಕ್ಕೆ ಪೋದೆವಿಮ್ಮಗು
ೞ್ದೇನೆಂದಾಂ ನಾಣ್ಚದಿವರ ಮೊಗಮಂ ನೋೞ್ಪೆಂ ॥ ೭

ಚಂ॥ ಪವನಜನಂತು ಪೂಣ್ದು ಯುವರಾಜನ ನೆತ್ತರನಾರ್ದು ಪೀರ್ದನಿಂ
ತವಗಡದಿಂ ದಿನೇಶಜನನಂಕದ ಗಾಂಡಿವಿ ಕೊಂದನೆಂತು ಪಾಂ ।
ಡವರನಿದಿರ್ಚಿ ಸಾಧಿಸುವೆ ಸಂಧಿಯನೊಲ್ವುದೆ ಕಜ್ಜಮೀಗಳೆಂ
ಬವರ್ಗಳ ಮಾತುಗೇಳ್ವನಿತನಿನ್ನೆನಗಂ ಬದಿ ಮಾಡಿತಾಗದೇ ॥ ೮

ವ॥ ಎಂಬೆನ್ನಗಮೆಯ್ದೆ ವಂದ ಪಿತೃದ್ವಂದ್ವ ಚರಣಕ್ಕೆ ವಿನಯವಿನಮಿತೋತ್ತಮಾಂಗನಾದನನಿರ್ವರುಂ ಪರಸಿ ತಡವರಿಸಿಯುಂ ತೆಬ್ಬರಿಸಿಯುಮಪ್ಪಿಕೊಳಪ್ಪಿಕೊಂಡಮೃತವರ್ಷಿ ಕರ ಪರಿಷೇಕದಿಂದೆ ಪುತ್ರಸ್ಪರ್ಶನಮಾಪ್ಯಾಯನಕೋಟಿಯಾಗೆ ಪುಳಕಿತಗಾತ್ರರುಮಾನಂದ ಬಾಷ್ಪವಾರಿ ಧಾರಾಪರಿಕಲಿತನೇತ್ರರುಮಾಗಿ ಕಿಱಿದಾನುಂ ಬೇಗಮಿರ್ದಲ್ಲಿ ಕಾರ್ಯವ್ಯಗ್ರ ಪಾಪಿಪಾಶಾಶ್ರಿತರೆಲ್ಲರುಂ ಕೇಳಲೆಂದು ಮಹೀಭುಜನಿಂತೆಂದಂ–

ಮ॥ ಎನಗಂ ಪಾಂಡುಗಮಿಲ್ಲ ಭೇದಮೆಳೆಯಂ ಪಚ್ಚಾಳ್ವಮಾ ಪಾಂಡುನಂ
ದನರುಂ ಸೈದರೆ ನಿನ್ನೊಳೀ ಕಲಹಮುಂ ನಿನ್ನಿಂದಮಾಯ್ತೆಂದೊಡಿಂ ।
ಮುನಿವೈ ಗಂಗೆಯ ಪೆರ್ಮಗಂಗೆ ಘಟಸಂಭೂತಂಗೆ ಕರ್ಣಂಗಸಾ
ಧ್ಯನೊಳಾ ಗಾಂಡಿವಿಯೊಳ್ ಕಱುತ್ತಿಜೆವರಾರಿಂ ಮಾಡುವಂ ಸಂಧಿಯಂ ॥೯

೭. ನಾನೂ ದುಶ್ಶಾಸನನೂ ಕರ್ಣನೂ ಜೊತೆಯಲ್ಲಿ ಹೋಗಿ ಅಪ್ಪಣೆ ಪಡೆದು ಯುದ್ಧರಂಗಕ್ಕೆ ಹೋದೆವು. ಈಗ ನಾನು ಇನ್ನೇನೆಂದು ಹೇಳಿ ನಾಚದೆ ಇವರ ಮುಖವನ್ನು ನೋಡಲಿ? ೮. ಭೀಮನು ಹಾಗೆ ಪ್ರತಿಜ್ಞೆ ಮಾಡಿ ಯುವರಾಜನ ರಕ್ತವನ್ನು ಆರ್ಭಟಮಾಡಿ ಕುಡಿದನು. ಹೀಗೆ ಸಾಹಸದಿಂದ ಕರ್ಣನನ್ನು ಶೂರನಾದ ಅರ್ಜುನನು ಕೊಂದನು. ಪಾಂಡವರನ್ನು ಹೇಗೆ ಎದುರಿಸಿ ಗೆಲ್ಲುತ್ತೀಯೇ? ಈಗ ಸಂಧಿಗೆ ಒಪ್ಪುವುದೇ (ಸರಿಯಾದ) ಕಾರ್ಯವೆಂದು ಹೇಳುವವರ ಮಾತನ್ನು ಕೇಳುವಷ್ಟನ್ನು ಇನ್ನು ನನಗೆ ವಿಧಿ ಮಾಡಿದೆಯಲ್ಲವೇ? ವ॥ ಎನ್ನುವಷ್ಟರಲ್ಲಿ ಸಮೀಪಕ್ಕೆ ಬಂದ ತಾಯಿ ತಂದೆಗಳ ಪಾದಕ್ಕೆ ವಿನಯದಿಂದ ತಲೆಬಗ್ಗಿಸಿ ನಮಸ್ಕಾರಮಾಡಿದವನನ್ನು ಇಬ್ಬರೂ ಹರಸಿದರು. ಮೈಯನ್ನು ಮುಟ್ಟಿನೋಡಿಯೂ ಸಮಾಧಾನಮಾಡಿಯೂ ಪ್ರೀತಿಯಿಂದ ಆಲಿಂಗನಮಾಡಿಕೊಂಡರು. ಅಮೃತವನ್ನು ಸುರಿಸುವ ಅಭಿಷೇಕಕ್ಕಿಂತ ಮಗನ ಸ್ಪರ್ಶವು ಹೆಚ್ಚಿನ ಸಂತೋಷವನ್ನುಂಟುಮಾಡಿತು. ರೋಮಾಂಚಿತವಾದ ಶರೀರವುಳ್ಳವರೂ ಸಂತೋಷದ ಕಣ್ಣೀರಿನ ಪ್ರವಾಹದಿಂದ ತುಂಬಿದ ಕಣ್ಣುಳ್ಳವರೂ ಆದರೂ ಸ್ವಲ್ಪ ಕಾಲವಿದ್ದು ಮುಂದಿನ ಕಾರ್ಯದಲ್ಲಿ ಆಸಕ್ತನಾದ ಪಾಪಿ ದುರ್ಯೋಧನನ ಪಾಶಕ್ಕೆ ಒಳಗಾದವರೆಲ್ಲರೂ ಕೇಳಲೆಂದು ಧೃತರಾಷ್ಟ್ರನು ಹೀಗೆಂದನು. ೯. ನನಗೂ ಪಾಂಡುವಿಗೂ ಭೇದವಿಲ್ಲ; ರಾಜ್ಯವನ್ನು ಭಾಗಮಾಡಿಕೊಂಡು ಆಳೋಣ. ಆ ಪಾಂಡುಪುತ್ರರೂ ನಿನ್ನಲ್ಲಿ ಸರಿಯಾಗಿ ನಡೆದುಕೊಳ್ಳುವವರೇ ಆಗಿದ್ದಾರೆ. ಈ ಜಗಳವೂ ನಿನ್ನಿಂದ ಆಯಿತು ಎಂದರೆ ಇನ್ನು ನೀನು ಕೋಪಿಸಿಕೊಳ್ಳುತ್ತೀಯೆ. ಭೀಷ್ಮದ್ರೋಣ

ಹರಿಣಿ ॥ ಪಗೆಗೆ ಕಣಿಯೊಂದುಂಟೇ ನಣ್ಪಿಂಗಮಾಗರಮುಂಟೆ ನೀಂ
ಬಗೆಯ ಪಗೆಯುಂ ನಣ್ಪುಂ ಕೆಯ್ಕೊಂಡ ಕಜ್ಜದಿನಲ್ತೆ ಪು ।
ಟ್ಟುಗುಮರಸುಗಳ್ಗಿಂದೀ ಸಂದರ್ಥಶಾಸ್ತ್ರದೊಳೇಕೆ ಪೇೞ್
ಮಗನೆ ನೆಗೞ್ಚೈ ಕಾರ್ಯಂ ಮಿತ್ರಾದಿ ಕಾರಕಮೆಂಬುದಂ ॥ ೧೦

ಕಂ॥ ನೀನುಳ್ಳೊಡೆಲ್ಲರೊಳರೆಮ
ಗೇನುಮಟಲ್ ಮನದೊಳಿಲ್ಲದಂತೆನೆ ಮಗನೇ ।
ಭಾನುವೆ ಸಾಲದೆ ಪಗಲೆನಿ
ತಾನುಂ ದೀವಿಗೆಗಳುರಿದೊಡೇಂ ನಂದಿದೊಡೇಂ ॥ ೧೧

ವ॥ ಅದಲ್ಲದೆಯುಂ ಪಾಂಡವರಪ್ಪೊಡೆನಗೆ ಪಾಂಡುರಾಜಂಗೆ ಬೆಸಕೆಯ್ವುದುದನೆ ಬೆಸಕೆಯ್ವರೆಂದುದಂ ಮೀಱುವರಲ್ಲರವರನಾನೆಂತುಮೊಡಂಬಡಿಸಿ ನೀನೆಂದುದನೆನಿಸುವೆನಿದರ್ಕೆ ಮಾರ್ಕೊಳ್ಳದೊಡಂಬಡು ನಿನ್ನಂ ಕೆಯ್ಯನೊಡ್ಡಿ ಬೇಡಿದಪ್ಪೆನೆಂದ ಧೃತರಾಷ್ಟ್ರನ ನುಡಿಗನುಬಲಮಾಗಿ ಗಾಂಧಾರಿಯಿಂತೆಂದಳ್-

ಚಂ॥ ಕುರುಕುಳನಂದನಂ ಪವನನಂದನನೆಂಬ ಮದಾಂಧಗಂಧಸಿಂ
ಧುರಮೆ ಕ್ಱುತ್ತು ಪಾಯೆ ಪಡಲಿಟ್ಟವೊಲಾದುದು ಪುಣ್ಯದೊಂದು ಪೆ ।
ರ್ಮರನುಟಿವಂತೆ ನೀನುಟಿದೆಯಿನ್ನಿಱಿವನ್ನರುಮಿಲ್ಲ ಮುತ್ತರುಂ
ಕುರುಡರುಮೆನ್ನದೆಮ್ಮ ನುಡಿಗೇಳ್ ಮಗನೇ ಬಗೆ ತಂದೆಗಿಂಬುಕೆಯ್ ॥೧೨

ಕರ್ಣರಿಗೆ ಅಸಾಧ್ಯವಾದ ಆ ಅರ್ಜುನನನ್ನು ಕೋಪದಿಂದ ಎದುರಿಸಿ ಯುದ್ಧ ಮಾಡುವವರಾರಿದ್ದಾರೆ? ಇನ್ನು ಸಂಧಿಯನ್ನು ಅವರೊಂದಿಗೆ ಮಾಡಿಕೊಳ್ಳೋಣ. ೧೦. ಹಗೆತನಕ್ಕೆ ಒಂದು ಗಣಿಯಿದೆಯೇನು? ಸ್ನೇಹಕ್ಕೆ ಒಂದು ಮನೆಯಿದೆಯೇನು? ನೀನು ಯೋಚಿಸಪ್ಪ; ರಾಗದ್ವೇಷಗಳೆರಡೂ ಅವರು ಅಂಗೀಕರಿಸುವ ಕಾರ್ಯ ದಿಂದಲ್ಲವೇ ಹುಟ್ಟುವುದು? ರಾಜರಿಗೆ ವಿಶೇಷ ಸತ್ಯವಾಗಿರುವ ಅರ್ಥಶಾಸ್ತ್ರದಲ್ಲಿ ಹೇಳಿರುವ 'ಕಾರ್ಯವೇ ಸ್ನೇಹದ್ವೇಷಗಳಿಗೆ ಕಾರಣವಾದುದು' ಎಂಬ ಈ ನೀತಿವಾಕ್ಯದಂತೇಕೆ ಮಾಡುವುದಿಲ್ಲ? ೧೧. ಮಗನೆ ನಮಗೆ ನೀನಿದ್ದರೆ ಎಲ್ಲರೂ ಇದ್ದಂತೆಯೇ. ಮಗನೆ ನಮಗೆ ಮನಸ್ಸಿನಲ್ಲಿ ಯಾವ ದುಃಖವೂ ಇಲ್ಲ; ಹೇಗೆಂದರೆ ಹಗಲಿನಲ್ಲಿ ಒಬ್ಬ ಸೂರ್ಯನಿದ್ದರೆ ಸಾಲದೇ? ಎಷ್ಟೋ ದೀವಿಗೆಗಳು ಉರಿದರೇನು, ಆರಿಹೋದರೇನು? ವ॥ ಹಾಗಲ್ಲದೆಯೂ ಪಾಂಡವರಾದರೆ ಪಾಂಡುರಾಜನಿಗೆ ವಿಧೇಯರಾಗಿದ್ದಂತೆಯೇ ನನ್ನಲ್ಲಿಯೂ ವಿಧೇಯರಾಗಿದ್ದಾರೆ. ನಾನು ಹೇಳಿದುದನ್ನು ಮೀರುವವರಲ್ಲ. ಅವರನ್ನು ನಾನು ಹೇಗೊ ಒಪ್ಪಿಸಿ ನೀನು ಹೇಳಿದುದಕ್ಕೆ ಒಪ್ಪಿಕೊಳ್ಳುವ ಹಾಗೆ ಮಾಡುತ್ತೇನೆ. ಇದಕ್ಕೆ ನೀನು ಪ್ರತಿಯಾಡದೆ ಒಪ್ಪಿಕೊ; ನಿನ್ನನ್ನು ಕೈಯೊಡ್ಡಿ ಬೇಡಿಕೊಳ್ಳುತ್ತೇನೆ ಎಂದು ಹೇಳಿದ ಧೃತರಾಷ್ಟ್ರನ ಮಾತಿಗೆ ಸಹಾಯಕವಾಗಿ (ಬೆಂಬಲವಾಗಿ) ಗಾಂಧಾರಿ ಹೀಗೆಂದಳು. ೧೨. ಕುರುಕುಲವೆಂಬ ನಂದನವನವು ಭೀಮನೆಂಬ ಮದ್ದಾನೆಯು ಕೋಪದಿಂದ ನುಗ್ಗಲು ಧ್ವಂಸವಾಯಿತು. ನಮ್ಮ ಪುಣ್ಯದಿಂದ ಒಂದು ದೊಡ್ಡ ಮರವು ಉಳಿಯುವ ಹಾಗೆ ನೀನು ಉಳಿದಿದ್ದೀಯೆ. ಇನ್ನು ಯುದ್ಧಮಾಡುವವರಾರೂ ಇಲ್ಲ. ಮುದುಕರು ಕುರುಡರು ಎನ್ನದೆ ನಮ್ಮ ಮಾತನ್ನು

ಕಂ॥ ಪೋಕನಿತಱಿೊಳಸವಸದಿಂ
ದೀ ಕಲಹಂ ಧರ್ಮಸುತನನಾಂ ನಿನಗೆ ನಿರಾ ।
ಪೇಕಮೊಡಂಬಡಿಸುವೆನಿಂ
ತೀ ಕಜ್ಜಂ ಕೂರ್ಪೊಡೆನಗೆ ಕೆಯ್ಕೊಳ್ ಮಗನೇ ॥ ೧೩

ವ॥ ಎಂದನುಬಂಧಿಸಿದ ಮೋಹಪಾಶದೊಳ್ ತಾಯ್ತಂದೆಯ ನುಡಿದ ನುಡಿಯಂ ಕೇಳ್ದಭಿಮಾನಧನಂ ಸುಯೋಧನನಿಂತೆಂದಂ-

ಉ॥ ದೋಷಮೆ ನಿಮ್ಮ ಪೇೞ್ದುದೆನಗೆಂತುಮೊಡಂಬಡಲಪ್ಪುದೊಂದೆ ದು
ಶ್ಶಾಸನ ರಕ್ತಪಾನದೊಳೆ ಸೊರ್ಕಿದ ಪಾತಕನಂ ಪೊರಳ್ಚಿ ಕೊಂ ।
ದೀ ಸಮರಾವನೀತಳದೊಳಿಂ ಬಲಿಗೆಯ್ವಿನಮೊಲ್ಲೆನಲ್ತೆ ನಿ
ರ್ದೋಷಿಗಳೊಳ್ ಪೃಥಾಸುತರೊಳಿಂ ಮುಗುೞ್ದುಂ ಪುದುವಾೞ್ವೆನೆಂಬೆನೇ ॥ ೧೪

ವ॥ ಎಂಬುದುಮಂಧಮಹೀಪತಿ ನೀನಿದಾವುದು ಮಾತಾಗಿ ನುಡಿವೈ-

ಕಂ॥ ಅನುಜರ್ ನಾಲ್ವರುಮಂ ಧ
ರ್ಮನಂದನಂ ವೇಳೆಗೊಂಡು ಕಾವಂ ಪೊಣರ್ದಾ ।
ವನುವರದೊಳಮನೆ ಪೇೞ್ ಪವ
ನನಂದನಂಗೞಿವು ಪೊಣರೆ ತಾಂ ಬಲ್ದಪನೇ ॥ ೧೫

ಎನೆ ನೃಪನೆಂದಂ ಧರ್ಮಜ
ನನುಜರ್ಕಳೊಳೊರ್ವನೞಿದೊಡೊಡನೞಿವ ಸುಯೋ ।
ಧನನಲ್ಲಿ ನೂರ್ವರುಂ ತ
ನ್ನನುಜರ್ಕಳ್ ಸಾಯೆ ಬಾೞ್ವುದಂ ನಂಬಿದಿರೇ ॥ ೧೬

ಕೇಳು; ಯೋಚಿಸು; ತಂದೆಯು ಹೇಳುವುದಕ್ಕೆ ಒಪ್ಪು. ೧೩. ಈ ಜಗಳವು ಇಷ್ಟಕ್ಕೇ ಬೇಗ ನಿಲ್ಲಲಿ. ಧರ್ಮರಾಜನನ್ನು ಆಕ್ಷೇಪಣೆಯೇ ಇಲ್ಲದೆ ಒಡಂಬಡುವ ಹಾಗೆ ಮಾಡುತ್ತೇನೆ. ನನ್ನನ್ನು ನೀನು ಪ್ರೀತಿಸುವುದಾದರೆ ಈ ಕಾರ್ಯವನ್ನು ನೀನು ಅಂಗೀಕಾರಮಾಡು ವ॥ ಎಂದು ಮೋಹಪಾಶದಿಂದ ಬಂಧಿತರಾದ ತಾಯಿತಂದೆಯರು ನುಡಿದ ನುಡಿಯನ್ನು ಕೇಳಿ ಅಭಿಮಾನಧನನಾದ ದುರ್ಯೋಧನನು ಹೀಗೆಂದನು-೧೪. ನೀವು ಹೇಳಿದುದು ನನಗೆ ದೋಷವೇನಲ್ಲ ಹೇಗೂ ಒಡಂಬಡತಕ್ಕುದೇ ಆದರೆ ಒಂದು ವಿಚಾರ ಮಾತ್ರ. ದುಶ್ಶಾಸನ ರಕ್ತಪಾನದಿಂದ ಸೊಕ್ಕಿರುವ ಪಾಪಿಯಾದ ಭೀಮನನ್ನು ಹೊರಳಿಸಿ ಕೊಂದು ಈ ಯುದ್ಧರಂಗದಲ್ಲಿ ಬಲಿಯಿಕ್ಕುವವರೆಗೆ ಒಪ್ಪಲಾರೆ. ನಿರ್ದೋಷಿಗಳಾದ ಪೃಥೆಯ ಮಕ್ಕಳಲ್ಲಿ ಪುನಃ ಕೂಡಿ ಬದುಕುವುದಿಲ್ಲವೆನ್ನುತ್ತೇನೆಯೇ ವ॥ ಎನ್ನಲು ಕುರುಡುರಾಜನಾದ ಧೃತರಾಷ್ಟ್ರನು (ದುರ್ಯೋಧನನನ್ನು ಕುರಿತು) ಇದು ಯಾವ ಮಾತೆಂದು ನುಡಿಯುತ್ತಿದ್ದೀಯೆ? ೧೫. ಧರ್ಮರಾಜನು ತನ್ನ ನಾಲ್ಕು ಜನ ತಮ್ಮಂದಿರಲ್ಲಿ ಯಾವ ಯುದ್ಧದಲ್ಲಾದರೂ ಯಾರೊಬ್ಬರು ಸತ್ತರೂ ತಾನೂ ಸಾಯುತ್ತೇನೆಂದು ಪ್ರತಿಜ್ಞೆಮಾಡಿ ರಕ್ಷಿಸುತ್ತಿರುವಾಗ ಭೀಮನಿಗೆ ನಾಶವುಂಟಾದರೆ ತಾನು ಬದುಕುತ್ತಾನೆಯೇ? ೧೬. ಎನ್ನಲು ದುರ್ಯೋಧನನೆಂದನು. ತಮ್ಮಂದಿರು ನಾಲ್ವರಲ್ಲಿ ಒಬ್ಬನು ಸತ್ತರೂ ಜೊತೆಯಲ್ಲಿಯೇ

ವ॥ ಎಂದು ಮತ್ತಂ ಸುಯೋಧನನಿಂತೆಂದಂ-

ಮ॥ ತಲೆದೋಱಲ್ಕಣಮಳ್ಕಿ ವೈರಿ ನೆಲನಂ ಪೋ ಪೊಕ್ಕನೆಂಬನ್ನೆಗಂ
ಚಲದಿಂದೆಯ್ದುವ ಕರ್ಣನುಗ್ರರಥಮಂ ಮುಂ ನುಂಗಿದೀ ದ್ರೋಹಿಯೊಳ್ ।
ನೆಲದೊಳ್ ಪಂಬಲೆ ಮತ್ತಮೆನ್ನ ಮುಳಿಸಿಂಗಾಂ ಕಾದುವೆಂ ಪೇಸಿದೆಂ
ನೆಲೆಗಂಡಂತೆ ನೆಲಕ್ಕೆ ಗೆಲ್ದೊಡಮದಂ ಚಿಃ ಮತ್ತಮಾನಾಳ್ವೆನೇ ॥ ೧೭

ವ॥ ಅಂತುಮಲ್ಲದೆಯುಂ-

ಚಂ॥ ತೊಡರದೆ ನೀಮುಮಾ ನೆಗಲ್ದ ಪಾಂಡುವುಮೊಂದಿಯೆ ಬಟ್ಟಿರೊಂದೊಡಂ
ಬಡು ನಿಮಗಿಲ್ಲ ಜೂದೆ ನೆವಮಾಗಿರೆ ಮೂಲಿಗನಾದೆನಾನೆ ಪೂ ।
ಣ್ದಿಡುವಗೆಗೆನ್ನೊಳಾದ ಕಿಸುರೆನ್ನೊಡವೋಪುದಿದೊಳ್ಳಿತೆನ್ನ ಪಿಂ
ಬದಿನೊಳೆ ನಣ್ಬೆನಯ್ಯ ನಿಮಗಂ ಮಗನಲ್ಲನೆ ಧರ್ಮನಂದನಂ ॥ ೧೮

ಉ॥ ತಪ್ಪದು ಕರ್ಣನಿಂ ಬೞಿಕೆ ಸಂಧಿಯ ಮಾತೆನಗಾತನಿಲ್ಲದಂ
ತಪ್ಪುದೊ ರಾಜ್ಯಮೀ ಗದೆಯುಮೀ ಭುಜದಂಡಮುಮುಳ್ಳಿನಂ ಕೊನ ।
ರ್ತಪ್ಪುದೆ ಪೇಟಿಮೆನ್ನ ಪಗೆ ನೋವಜೆದಂಜುವುದೇಕೆ ನಿಂದರೇಂ
ತಪ್ಪುದೊ ಪೇಟಿಮಯ್ಯ ನೊಸಲೊಳ್ ಬರೆದಕ್ಕರಮಾ ವಿಧಾತ್ರನಾ ॥ ೧೯

ಧರ್ಮರಾಯನು ಸಾಯುತ್ತಾನೆ. ದುರ್ಯೋಧನನು ಮಾತ್ರ ತನ್ನ ತಮ್ಮಂದಿರು ನೂರುಜನವೂ ಸತ್ತಿರುವಾಗ ಅವನು ಬದುಕುತ್ತಾನೆಂದು ನಂಬಿದಿರೇನು? ವ॥ ಎಂದು ಪುನಃ ದುರ್ಯೋಧನನು ಹೀಗೆಂದನು - ೧೭. ವೈರಿಯು ಕಾಣಿಸಿಕೊಂಡು ಎದುರಾಗುವುದಕ್ಕೆ ಹೆದರಿ ತನ್ನ ನೆಲವನ್ನು, ಛೀ ಹೋಗಿ ಹೊಕ್ಕನು ಎಂದು ಹೇಳುವಷ್ಟರಲ್ಲಿಯೇ ಛಲದಿಂದ ಬರುತ್ತಿದ್ದ ಕರ್ಣನ ಭಯಂಕರವಾದ ತೇರನ್ನು ಮೊದಲೇ ನುಂಗಿದ ಈ ದ್ರೋಹಿಯಾದ ಭೂಮಿಯಲ್ಲಿ ಪುನಃ ಹಂಬಲೇ? ನನ್ನ ಕೋಪಕ್ಕಾಗಿ ನಾನು ಕಾದುತ್ತಿದ್ದೇನೆ. (ಇದು ಅಶಾಶ್ವತ ಎಂಬ) ವಾಸ್ತವಾಂಶವನ್ನು ತಿಳಿದೇ ಈ ನೆಲಕ್ಕೆ ಹೇಸಿದ್ದೇನೆ. ಗೆದ್ದರೂ ಛೀ ಪುನಃ ನಾನು ಅದನ್ನು ಆಳುತ್ತೇನೆಯೇ? - ವ॥ ಹಾಗಲ್ಲದೆಯೂ ೧೮. ನೀವೂ ಆ ಪಾಂಡವರೂ ಯಾವ ವೈಮನಸ್ಯವೂ ಇಲ್ಲದೆ ಹೊಂದಿಕೊಂಡೆ ಬಾಳಿದಿರಿ. ನಿಮಗೆ ಒಂದು ಅಸಮಾಧಾನವೂ ಇಲ್ಲ. ಜೂಜೇ ಕಾರಣವಾಗಲು ಈ ಪ್ರತಿಜ್ಞೆಮಾಡಿದ ಬದ್ಧದ್ವೇಷಕ್ಕೆ ನಾನೇ ಮೊದಲಿಗನಾದೆ. ನನ್ನಲ್ಲಿ ಹುಟ್ಟಿದ ಈ ಜಗಳವು ನನ್ನ ಜೊತೆಯಲ್ಲಿಯೇ ಹೋಗುವುದು ಒಳ್ಳೆಯದು. ನನ್ನ ಹಿಂದುಗಡೆ (ನಾನು ಸತ್ತ ಬಳಿಕ) ಅಪ್ಪಾ ಧರ್ಮರಾಯನೂ ನಿಮಗೆ ಮಗನಲ್ಲವೇ? (ನೀವು ಅವನೊಡನೆ ಸುಖವಾಗಿ ಬಾಳಬಹುದು) ೧೯. ಕರ್ಣನಾಗಿ ಹೋದಮೇಲೆ ಸಂಧಿಯ ಮಾತು ತಪ್ಪು (ನನಗೆ ದೋಷಯುಕ್ತವಾದುದು). ಅವನಿಲ್ಲದೆ ನನಗೆ ರಾಜ್ಯವು ಹೇಗಾಗುತ್ತದೆ? ಈ ಗದೆಯೂ ಬಾಹುದಂಡವೂ ಇರುವವರೆಗೆ ನನ್ನ ಶತ್ರುವು ಚಿಗುರಿಕೊಳ್ಳುತ್ತಾನೆಯೇ, ದುಃಖವನ್ನು ಅನುಭವಿಸಿಯಾದ ಮೇಲೆಯೂ ಹೆದರುವುದೇಕೆ? ಅಪ್ಪಾ ಯುದ್ಧವನ್ನು ನಿಲ್ಲಿಸಿದರೂ ಬ್ರಹ್ಮನು ಹಣೆಯಲ್ಲಿ ಬರೆದ

ಮ॥ ಸ್ರ ॥ ನರನಂ ಮುಂ ಕೊಲ್ವೆನಾಂ ಕರ್ಣನನಟಿದುದಱಿಂ ಕೊಲ್ವೆನಾ ಭೀಮನಂ ಸಂ
ಗರದೊಳ್ ಸೀಳ್ದೊಟ್ಟಿ ದುಶ್ಶಾಸನನಬಲನದಂ ನೀಗುವೆಂ ಪೋಕುಮಂತಿ ।
ರ್ವರುಮಂ ಕೊಂದಂದು ಮೇಣಾನವರಿದಿರಿದಿರೊಳ್ ಕಾದಿ ಸತ್ತಂದು ಮೇಣ್ ವಿ
ಸ್ಫುರಿತಂ ಮತ್ಕೋಪಮುಂ ನಿಮ್ಮಡಿಯುಮನಿದೆ ಬೀಳ್ಕೊಂಡೆನಿಂ ಪೋಗಿ
ಮೇಟಿಂ ॥ ೨೦

ವ॥ ಎಂದು ತಾಯ್ಗಂ ತಂದೆಗಮೆಱಗಿ ಪೊಡೆವಟ್ಟು ಪೋಗಲ್ವೇಟ್ಟು ಸಂಸಾರಾಸಾರತೆಯ ನಱಿದನುಂ ಮಹಾಸತ್ವನುಮಪ್ಪುದಱಿಂ ತನ್ನಂ ತಾನೆ ಸಂತೈಸಿಯುಂ ಚೇತರಿಸಿಯುಂ ಮಜ್ಜನ ಭೋಜನಾನುಲೇಪನ ತಾಂಬೂಲಾದಿಗಳೊಳ್ ಮಹಾಹವ ಖೇದಮುಮಂ ಮನಃಖೇದಮುಮ ನಾಱಿಸಿ ಮಂತ್ರಶಾಲಾಂತಸ್ಥಿತ ಕನಕವಿಷ್ಟರಾರೂಢನಾಗಿ ಶಲ್ಯ ಶಕುನಿ ಕೃಪ ಕೃತವರ್ಮಾಶ್ವತ್ಥಾಮ ಪ್ರಧಾನ ವೀರಪುರುಷರಂ ಬರಿಸಿ ಯಥೋಚಿತಪ್ರತಿಪತ್ತಿಗಳೊಳಿರಿಸಿ ಪೇಟಿಮಿನ್ನೆಮಗೆಯ್ವ ನಿಯೋಗಮೇನೆನೆ ಶಾರದ್ವತನಿಂತೆಂದಂ-

ಉ॥ ಸಂಗತ ನೀತಿಶಾಸ್ತ್ರವಿದರಪ್ಪರವಂದಿರ ತಮ್ಮ ತಮ್ಮ ಕ
ಜ್ಜಂಗಳ ಮೆಯ್ಗಳೊಳ್ ಪುಸಿದದಂ ಕಡುನನ್ನಿಯೆ ಮಾಡಿ ತೋರ್ಪರು ।
ತ್ತುಂಗ ಸುಸೂಕ್ಷ್ಮ ಪಾರ್ಶ್ವಕೃಶ ಕೋಮಳ ನಿಮ್ನ ಘನೋನ್ನತ ಪ್ರದೇ
ಶಂಗಳನಾ ಸಮಾನತಳದಲ್ಲಿಯೆ ಚಿತ್ರಕನೆಯ್ದೆ ತೋರ್ಪವೋಲ್ ॥ ೨೧

ಅಕ್ಷರ ತಪ್ಪುತ್ತದೆಯೇ ಏನು? ೨೦. ಕರ್ಣನನ್ನು ಸಾಯಿಸಿದುದರಿಂದ ಅರ್ಜುನನನ್ನು ಮೊದಲು ಕೊಲ್ಲುತ್ತೇನೆ. ಆ ಭೀಮನನ್ನು ಯುದ್ಧದಲ್ಲಿ ಸೀಳಿ ರಾಶಿ ಹಾಕಿ ದುಶ್ಶಾಸನನ ದುಃಖವನ್ನು ಪರಿಹಾರಮಾಡಿಕೊಳ್ಳುತ್ತೇನೆ. ಹಾಗೆ ಅವರಿಬ್ಬರನ್ನು ಕೊಂದ ದಿನ ಅಥವಾ ನಾನು ಅವರೆದುರಿಗೆ ಕಾದಿ ಸತ್ತ ದಿನ ನನ್ನ ಉರಿಯುತ್ತಿರುವ ಕೋಪವು ಶಮನವಾಗುತ್ತದೆ. ನಿಮ್ಮ ಪಾದಗಳನ್ನು ಬೀಳ್ಕೊಂಡೆನು (ದಯಮಾಡಿ) ಇನ್ನು ನೀವು ಹೋಗಿ ಏಳಿ. ವ॥ ಎಂದು ತಾಯಿಗೂ ತಂದೆಗೂ ನಮಸ್ಕಾರ ಮಾಡಿ ಹೋಗಹೇಳಿ ಸಂಸಾರದ ಅಸಾರತೆಯನ್ನು ತಿಳಿದವನೂ ಮಹಾಸತ್ವನೂ ಆದುದರಿಂದ ತಾನೇ ತನ್ನನ್ನು ಸಮಾಧಾನಮಾಡಿಕೊಂಡೂ ಚೇತರಿಸಿಕೊಂಡು. ಸ್ನಾನ, ಊಟ, ಗಂಧ, ತಾಂಬೂಲ ಮೊದಲಾದವುಗಳಿಂದ ಮಹಾಯುದ್ಧದ ಆಯಾಸವನ್ನೂ ಮನಸ್ಸಿನ ದುಃಖವನ್ನೂ ಹೋಗಲಾಡಿಸಿಕೊಂಡನು. ಮಂತ್ರಶಾಲೆಯ ಒಳಗಿರುವ ಚಿನ್ನದ ಪೀಠದ ಮೇಲೆ ಕುಳಿತು ಶಲ್ಯ, ಶಕುನಿ, ಕೃಪ, ಕೃತವರ್ಮ, ಅಶ್ವತ್ಥಾಮರೇ ಮೊದಲಾದ ಮುಖ್ಯ ವೀರಪುರುಷರನ್ನು ಬರಮಾಡಿ ಯಥೋಚಿತವಾದ ಸತ್ಕಾರಗಳನ್ನು ಮಾಡಿ 'ನಾವು ಇನ್ನು ಮಾಡಬೇಕಾದ ಕಾರ್ಯವೇನೆಂದು ಹೇಳಿ' ಎನ್ನಲು ಕೃಪನು ಹೀಗೆಂದು ಹೇಳಿದನು. ೨೧. ಚಿತ್ರವನ್ನು ಬರೆಯುವವನು ಅತಿ ಎತ್ತರವಾದ, ಅತಿಸೂಕ್ಷ್ಮವಾದ, ಪಕ್ಕದಲ್ಲಿರುವ ತೆಳ್ಳಗಿರುವ, ಕೋಮಲವಾಗಿರುವ, ತಗ್ಗಾಗಿರುವ, ದಪ್ಪವಾಗಿರುವ, ಉನ್ನತವಾಗಿರುವ ಪ್ರದೇಶಗಳನ್ನು (ತಾವು ಬರೆಯುವ) ಪಟದ (ಚಿತ್ರದ) ಸಮ ಪ್ರದೇಶದಲ್ಲಿಯೇ ತೋರಿಸುವ ಹಾಗೆ ಚೆನ್ನಾಗಿ ನೀತಿಶಾಸ್ತ್ರವನ್ನು ತಿಳಿದವರು ತಮ್ಮ ತಮ್ಮ ಕಾರ್ಯಗಳ ವಿಷಯದಲ್ಲಿ ಸುಳ್ಳಾದುದನ್ನೂ ಪೂರ್ಣ ಸತ್ಯವನ್ನಾಗಿಯೇ ಮಾಡಿ

ವ॥ ಆದಱಿನೆಂತಪ್ಪ ಬುದ್ಧಿಯೊಡೆಯರ ಪೇೞ್ದಸಾಮಾನ್ಯಮಪ್ಪುಪಾಯಂಗಳುಂ ನಿನಗೆ ದೈವಂ ವಿಮುಖಮಪ್ಪುವಱಿಂದಪಾಯ ಬಹುಳಮಾಗಿ ಬಂದುದಾಱುಂ ಗುಣಂಗಳನೆ ತಂದುವು ಮೌಲ ಭೃತ್ಯ ಸುಹೃತ್ ಶ್ರೇಣಿ ಮಿತ್ರಾಟವಿಕತಂತ್ರಂಗಳ್ ಪಣ್ಣಿದ ಜಂತ್ರಂಗಳಂತೆ ಕಲಕುಲ ಮಾದುವಾರ್ಗಮಭೇದ್ಯರುಮಸಾಧ್ಯರುಮಪ್ಪಯೋನಿಸಂಭವರೆ ಹೇಳಾಸಾಧ್ಯರಾದರದು ಕಾರಣದಿಂ-

ಹರಿಣಿ॥ ಅಟೆದರಧಿಕರ್ ಭೀಷ್ಮದ್ರೋಣಾಂಗನಾಯಕರೀಗಳಿ
ನ್ನುೞಿದರವರಿಂ ಮೇಲೆಂಬನ್ನರ್ ಮಹಾರಥರಲ್ತೆ ಮುಂ ।
ಕಟೆದುದಱಿಳೇಂ ನಷ್ಟಂ ನಷ್ಟಂ ಮೃತಂ ಮೃತಮೆಂಬುದಿ
ನ್ನಟಲದಿರಿದೇಕಿಲ್ಲಿಂ ಮೇಲಪ್ಪುದಂ ಬಗೆ ಭೂಪತೀ ॥ ೨೨

ಕಂ॥ ನೆಱೆವೊಡೆ ನೆರವೊಳಿಮಿನಿಬರು
ಮಿಱೆ ಕಲಹಮಪಾಯ ಬಹುಳಮಿನ್ನುಂ ನಯದ ।
ತ್ರೆಱಗುವೊಡೆ ಸಂಧಿ ಹರಿಗನೊ
ಳುಱುಗುಂ ನಿನಗಿಂತಿವೆರಡೆ ಕಜ್ಜಂ ನೃಪತೀ ॥ ೨೩

ವ॥ ಎಂಬುದುಂ ಬಟೆಕ್ಕಿನ ನುಡಿಗೆ ಸೈರಿಸಲಾಱದೆ ಫಣಿಕೇತನನಿಂತೆಂದಂ-

ಮ॥ ಪಟವಾಡಯ್ದನೆ ಬೇಡೆಯುಂ ಕುಡದ ನಾನೇನೆಂದು ಸಂಧಾನಮಂ
ಗಟೆಯಿಪ್ಪಂ ಗಟೆಯಿಪ್ಪನಂಗನೃಪನಂ ನೀನೆತ್ತಿ ತಂದೆನ್ನ ಮುಂ ।
ದಿಟೆಪಲ್ಕಾರ್ಪೊಡಮಾವುದಾಗಿ ಕೃಪ ನೀಂ ಪೇೞ್ದಪ್ಪೆಯಿಾ ಮಾತನಿ
ನ್ನುಟೆ ದುರ್ಯೋಧನನಲ್ಲನೇ ಕಳದೊಳಂ ಕಾಣ್ಬಂತು ಕೌಂತೇಯರಂ ॥ ೨೪

ತೋರಿಸುವರು. ವ॥ ಆದುದರಿಂದ ಎಂತಹ ಬುದ್ಧಿವಂತರಾದವರೂ ಹೇಳುವ ಸಾಮಾನ್ಯವಾದ ಉಪಾಯಗಳೂ ನಿನಗೆ ದೈವ ವ್ಯತ್ಯಾಸವಾಗಿರುವುದರಿಂದ ವಿಶೇಷ ಅಪಾಯಕಾರಿಯಾದ ರಾಜ ಸಂಧಿ ವಿಗ್ರಹಯಾನ, ಆಸನ, ಸಂಶಯ, ದ್ವೈಧೀಭಾವ ಎಂಬ ಆರು ಗುಣಗಳನ್ನೇ ಉಂಟುಮಾಡಿದುವು. ಮೌಲ, ಭೃತ್ಯ, ಸಹೃತ್, ಶ್ರೇಣಿ, ಮಿತ್ರ, ಆಟವಿಕ ತಂತ್ರಗಳು ಸಿದ್ಧಪಡಿಸಿದ ಕೃತಕಯಂತ್ರಗಳಂತೆ ಚೆಲ್ಲಾಪಿಲ್ಲಿಯಾದವು. ಯಾರೂ ಭೇದಿಸುವುದಕ್ಕಾಗದವರೂ, ಅಸಾಧ್ಯರೂ ಅಯೋನಿಜರೂ ಆದ ದ್ರೋಣಾಚಾರ್ಯರೇ ಆಟದಲ್ಲಿ ಗೆಲ್ಲುವಂತೆ ಸುಲಭವಾಗಿ ಜಯಿಸಲ್ಪಟ್ಟರು. ಆ ಕಾರಣದಿಂದ ೨೨. ಅಧಿಕರಾದ ಭೀಷ್ಮದ್ರೋಣ ಕರ್ಣರು ಸತ್ತರು. ಇನ್ನುಳಿದವರು ಮಹಾರಥರು ಅವರಿಗಿಂತ ಮೇಲೆನ್ನುವರಲ್ಲವೇ? ಮೊದಲು ಕಳೆದುಹೋದುದನ್ನು ಚಿಂತಿಸುವುದರಲ್ಲಿ ಏನು ಪ್ರಯೋಜನ? ನಷ್ಟವಾದುದು ನಷ್ಟವಾಯಿತು, ಸತ್ತದ್ದು ಸತ್ತುಹೋಯಿತು ಎಂದುಕೊಳ್ಳುವುದು. ಇನ್ನು ದುಃಖಿಸಬೇಡ, ಮಹಾರಾಜನೇ ಇಲ್ಲಿಂದ ಮುಂದಾಗಬೇಕಾದುದನ್ನು ಯೋಚಿಸು. ೨೩. ಯುದ್ಧಮಾಡುವುದಾದರೆ ನಾವಿಷ್ಟು ಜನವೂ ಸಹಾಯಕ್ಕೆ ಇದ್ದೇವೆ. ಯುದ್ಧಮಾಡು. ಯುದ್ಧವು ಹೆಚ್ಚಿನ ಅಪಾಯವುಳ್ಳದ್ದು ಎಂದು ಸಂಧಿಯ ಕಡೆ ಒಲಿಯುವ ಪಕ್ಷದಲ್ಲಿ ಅರ್ಜುನನಲ್ಲಿ ಸಂಧಿಯಾಗುತ್ತದೆ. ರಾಜನೇ ನಿನಗಿವೆರಡೇ (ಮಾಡಬೇಕಾದ) ಕಾರ್ಯಗಳು. ವ॥ ಎನ್ನಲು ಆಮೇಲೆ (ಎರಡನೆಯ ಸಲ) ಹೇಳಿದ ಮಾತಿಗೆ ಸೈರಿಸಲಾರದೆ ದುರ್ಯೋಧನನು ಹೀಗೆಂದನು. ೨೪. ಹಳೆಯ ಗ್ರಾಮಗಳೈದನ್ನು ಬೇಡಿದರೂ ಕೊಡದ

ವ॥ ಎಂಬುದುಂ ಜಳಧರಧ್ವನಿಯಿನಶ್ವತ್ಥಾಮನಿಂತೆಂದಂ-

ಚಂ॥ ಕುಳಬಳಶೌರ್ಯಧೈರ್ಯಯುತರೆಲ್ಲರುಮಂ ಪೞಗಿಕ್ಕಿ ಕರ್ಣನಂ
ಪಳಯಿಸುತಿರ್ಪೆಯೇಸೊ ಗಳ ನಿನ್ನಯ ತಮ್ಮನ ನೆತ್ತರಂ ಭಯಂ ।
ಗೊಳೆ ಪವಮಾನಸೂನು ತವೆ ಪೀರ್ದೆಡೆಯೊಳ್ ಕಲಿ ಕರ್ಣನೇಕೆ ಪೇೞ್
ಮಿಳ ಮಿಳ ನೋಡುತಿರ್ದನವನುರ್ಕನಿಳಾಧಿಪರುಂಟೆ ನಿನ್ನವೊಲ್ ॥ ೨೫

ಕಂ॥ ಅಂಬಿಗನೊಳಾದುದಿದು ಋಣ
ಸಂಬಂಧಂ ನಿನಗಮೋಘಮಿದನುೞಿದವರಾ ।
ರ್ಗಂ ಬಿಸುಡಲ್ಕೇಂ ಬರ್ಕುಮೆ
ನೀಂ ಬೆಸಸುವುದೆನ್ನನಾಂತರಂ ತವೆ ಕೊಲ್ವೆಂ ॥ ೨೬

ವ॥ ಎಂದಶ್ವತ್ಥಾಮಂ ಕರ್ಣನಂ ಪೞಿದು ನುಡಿದೊಡಾ ನುಡಿಗೆ ಮುನಿದು ಕೊಲ್ವನಿತು ವರಂ ಬಗೆದು ದುರ್ಯೋಧನನಿಂತೆಂದಂ-

ಕಂ॥ ನಿನ್ನಿಂದಂ ತ್ರಿಭುವನ ರಾ
ಜ್ಯೋನ್ನತಿ ಬಂದೆನಗೆ ಸಾರ್ಗುಮಪ್ಪೊಡಮೊಲ್ಲೆಂ ।
ನೀನ್ನುಡಿದು ಬರ್ದುಕಿದ್ದೈ ಪೆಱ
ರೆನ್ನಿದಿರೊಳ್ ನುಡಿದು ಕರ್ಣನಂ ಬರ್ದುಕುವರೇ ॥ ೨೭

ನಾನು ಏನೆಂಬುದಾಗಿ ಸಂಧಿಯನ್ನುಂಟುಮಾಡಲಿ? ಕರ್ಣನನ್ನು ನನ್ನ ಮುಂದೆ ತಂದು ಇಳಿಸುವುದಕ್ಕೆ ಸಮರ್ಥನಾದರೆ (ಆಗ ಸಂಧಿಯನ್ನು) ಗಳಿಯಿಸುತ್ತೇನೆ. ಕೃಪನೇ ನೀನು ಈ ಮಾತನ್ನು ಏನೆಂದು ಹೇಳುತ್ತೀಯೆ. ಇನ್ನು ಮಾತನ್ನು ಬಿಡು. ಯುದ್ಧಭೂಮಿಯಲ್ಲಿ ಪಾಂಡವರನ್ನು ಕಾಣುವ ದುರ್ಯೋಧನನೆಂಬ (ಆಶ್ಚರ್ಯವಾದ) ಹೆಸರುಳ್ಳವನಲ್ಲವೇ ನಾನು? ವ॥ ಎನ್ನಲು ಗುಡುಗಿನ ಶಬ್ದದಿಂದ ಅಶ್ವತ್ಥಾಮನು ಹೀಗೆಂದನು-೨೫. ಕುಲ, ಬಲ, ಶೌರ್ಯ ಧೈರ್ಯದಿಂದ ಕೂಡಿದವರೆಲ್ಲರನ್ನೂ ಬಿಟ್ಟು ಕರ್ಣನನ್ನು ಕುರಿತು ಪ್ರಲಾಪಮಾಡುತ್ತಿದ್ದೀಯೆ. ನಿಜ. ನಿನ್ನ ತಮ್ಮನಾದ ದುಶ್ಶಾಸನನ ರಕ್ತವನ್ನು ಭಯವನ್ನುಟುಮಾಡುತ್ತಿರುವ ಹಾಗೆ ಭೀಮನು ಪೂರ್ಣವಾಗಿ ಕುಡಿದ ಸಂದರ್ಭದಲ್ಲಿ ಶೂರನಾದ ಕರ್ಣನೇಕೆ ಹೇಳು ಮಿಟಮಿಟನೆ ನೋಡುತ್ತಿದ್ದ? ನಿನ್ನ ಹಾಗಿರುವ ರಾಜರೂ ಉಂಟೇ? ೨೬. ನಿನಗೆ ಅಂಬಿಗರವನಲ್ಲಿ ವಿಶೇಷ ಋಣಸಂಬಂಧವಾಯಿತು. ಇದನ್ನು ಬಿಡಿಸಲು ಉಳಿದವರಿಗೆ ಸಾಧ್ಯವೇ? ನೀನು ಅಪ್ಪಣೆ ಕೊಡು; ಪ್ರತಿಭಟಿಸಿದವರನ್ನು ಪೂರ್ಣವಾಗಿ ಕೊಲ್ಲುತ್ತೇನೆ. ವ॥ ಎಂದು ಅಶ್ವತ್ಥಾಮನು ಕರ್ಣನನ್ನು ನಿಂದಿಸಿ ಮಾತನಾಡಲು ಆ ಮಾತಿಗೆ ಕೋಪಿಸಿಕೊಂಡು ಅವನನ್ನು ಕೊಂದು ಹಾಕುವವರೆಗೂ ಯೋಚಿಸಿ ದುರ್ಯೋಧನನು ಹೀಗೆಂದನು. ೨೭. ನಿನ್ನಿಂದ ಮೂರುಲೋಕದ ರಾಜ್ಯಾಧಿಪತ್ಯದ ವೈಭವವು ಬಂದು ನನಗೆ ಸೇರುವುದಾದರೂ ನನಗೆ ಬೇಡ. ಕರ್ಣನ ವಿಷಯವಾಗಿ (ಕೆಟ್ಟುದನ್ನು) ಆಡಿ ನೀನಾಗುವ ಹೊತ್ತಿಗೆ ಬದುಕಿದ್ದೀಯೆ. ಇತರರು

ಚಂ॥ ನುಡಿ ನಿನಗಂ ದಿನೇಶತನಯಂಗಮದೆನ್ನಯ ಪಕ್ಕದಾದೊಡಂ
ಮಿಡುಕದೆ ಕೇಳ್ವೆನಲ್ಲಿ ಸಮನಿರ್ವರುಮಾತನತೀತನಾದ ಪಿಂ ।
ಬಡಿನೊಳದೆಂತು ಪೇಟ್ ಪಟೆಯೆ ಕೇಳ್ವೆನೊ ಕೇಳ್ದೊಡೆ ಚಿಃ ಪೆಜಂ ಪೆಜಂ
ನುಡಿದೊಡೆ ಕೇಳ್ದನೆಂದೆನಗೆ ನೋಯನೆ ಸಗ್ಗದೊಳಿರ್ದಿನಾತ್ಮಜಂ ॥ ೨೮

ವ॥ ಎಂಬುದುಮೀ ನುಡಿಯೆ ನಿನ್ನ ಕೂರ್ಮೆಗಂ ತಕ್ಕೂರ್ಮೆಗಂ ದೊರೆಯಪ್ಪು ದಾದೊಡಮರಾತಿಸೈನ್ಯಮಂ ತವೆ ಕೊಂದಲ್ಲದೆ ನಿನ್ನ ಮೊಗಮಂ ನೋಡೆನೆಂದಶ್ವತ್ಥಾಮ ನಾಸ್ಥಾನದಿಂದೆಟ್ದು ಪೋದನಾಗಳ್ ಭೂನಾಥಂ ಮದ್ರರಾಜನನಿಂತೆಂದಂ-

ಚಂ॥ ಇನತನಯಂಗೆ ಸಾವುಮೆನಗಿಂತಿನಿತೊಂದಲಲುಂ ದಿನೇಶ ಪು
ತ್ರನೆ ನಿಮಗಿಂಬುಕೆಯ್ದುದಜಿಂ ದೊರೆಕೊಂಡುದು ವೀರ ಲಕ್ಷ್ಮಿ ನಿ ।
ಮ್ಮನುಬಲದಿಂದಮಲ್ಲದೆನಗಾಗದು ದಲ್ ಸಲೆ ಪಟ್ಟಮಂ ಸಮಂ
ತೆನಗೆಯೆ ಮಾಟ್ಪೊಡೇ ತೊಡಲೊ ನೀಮೆ ದಲಾಂಪುದು ಬೀರವಟ್ಟಮಂ ॥೨೯

ವ॥ ಎಂಬುದುಂ ಶಲ್ಯನಿಂತಿರ್ದಿನಿಬರೊಳಮಾನಾವಾಳ ದೊರೆಯೆಂ ಬೆಸಸಂ ನೀಮೆನಗೆ ದಯೆಗೆಯ್ವರೆಂಬುದೆಲ್ಲಮೆನಗೆ ಸೈಪುಂ ಸ್ವಾಮಿ ಸಂಪತ್ತುಮಂತೆಗೆಯ್ವೆನೆಂದು ಷೋಡಶ ರಾಜಭರಮಂ ತಾಳ್ದುವಂತೆ ಸೇನಾಧಿಪತ್ಯಭಾರಮಂ ಮದ್ರರಾಜಂ ತಾಳ್ದಿ-

ನನ್ನೆದುರಿನಲ್ಲಿ ಕರ್ಣನನ್ನು ನಿಂದಿಸಿ ಬದುಕುತ್ತಿದ್ದರೆ? ೨೮. ನಿನಗೂ ಕರ್ಣನಿಗೂ ನನ್ನ ಸಮಕ್ಷಮದಲ್ಲಿ ವಾಗ್ವಾದವಾದರೆ ಚಲಿಸದೆ ಕೇಳುತ್ತೇನೆ. ಅಲ್ಲಿ ಇಬ್ಬರೂ ಸಮ. ಅವನು ಸತ್ತುಹೋದ ಬಳಿಕ ಅದು ಹೇಗೆ ಅವನ ವಿಷಯವಾದ ನಿಂದೆಯನ್ನು ಕೇಳುವೆನು ಹೇಳು. ಹಾಗೆ ಕೇಳಿದರೆ ಸ್ವರ್ಗದಲ್ಲಿರುವ ಕರ್ಣನು ಚೀಃ, ಇತರರು ನನ್ನನ್ನು ಬಯ್ದರೆ (ದುರ್ಯೋಧನನು) ಇದನ್ನು ಕೇಳಿದನು ಎಂದು ನನ್ನ ವಿಷಯದಲ್ಲಿ ನೊಂದುಕೊಳ್ಳುವುದಿಲ್ಲವೇ? ವ॥ ಎನ್ನಲು ಈ ಮಾತೇ ನಿನ್ನ ಸ್ನೇಹಕ್ಕೂ ಯೋಗ್ಯವಾದ ನಡತೆಗೂ ಸಮಾನವಾಗಿದೆ (ಯೋಗ್ಯವಾಗಿದೆ). ಆದರೂ ಶತ್ರುಸೈನ್ಯವನ್ನು ಪೂರ್ಣವಾಗಿ ಕೊಂದಲ್ಲದೆ ನಿನ್ನ ಮುಖವನ್ನು ನೋಡುವುದಿಲ್ಲ ಎಂದು ಅಶ್ವತ್ಥಾಮನು ಅಲ್ಲಿಂದ ಎದ್ದುಹೋದನು. ಆಗ ರಾಜನಾದ ದುರ್ಯೋಧನನು ಶಲ್ಯನನ್ನು ಕುರಿತು ಹೀಗೆಂದನು - ೨೯. ಕರ್ಣನಿಗೆ ಸಾವೂ ನನಗೆ ಇಷ್ಟೊಂದು ದುಃಖವೂ ಕರ್ಣನು ನೀವು ಹೇಳಿದ ಹಾಗೆ ಕೇಳದುದರಿಂದುಂಟಾಯಿತು. ವೀರಲಕ್ಷ್ಮಿಯೂ ನಿಮ್ಮ ಸಹಾಯವಿಲ್ಲದೆ ನನಗೆ ಆಗುವುದಿಲ್ಲ ಅಲ್ಲವೇ? ನಿಜವಾಗಿಯೂ ನನಗೆ ರಾಜ್ಯಾಭಿಷೇಕಮಾಡಬೇಕಾದರೆ (ನಾನು ಗೆಲ್ಲಬೇಕಾದರೆ) ನೀವೇ ವೀರಪಟ್ಟವನ್ನು ಸ್ವೀಕರಿಸಬೇಕು. ಇದು ಸುಳ್ಳೇ? ವ॥ ಎನ್ನಲಾಗಿ “ಇಲ್ಲಿರುವ ಇಷ್ಟು ಜನರಲ್ಲಿ (ಲೆಕ್ಕದವನು) ನಾನು ಯಾವ ವೀರಪುರುಷನಿಗೆ ಸಮಾನಾಗುತ್ತೇನೆ. ನೀವು ನನಗೆ ಕಾರ್ಯವನ್ನು ದಯೆಗೈದಿರುವದೆಲ್ಲ ನನ್ನ ಅದೃಷ್ಟವೂ ಸ್ವಾಮಿಸಂಪತ್ತೂ ಆಗಿರುತ್ತದೆ. ನೀವು ಹೇಳಿದ ಹಾಗೆಯೇ ಮಾಡುತ್ತೇನೆ’ ಎಂದು ಹದಿನಾರು ರಾಜರ ಭಾರವನ್ನೂ ತಾಳುವಂತೆ ಶಲ್ಯನು ಸೇನಾಧಿಪತ್ಯ ಭಾರವನ್ನು

ಕಂ॥ ಮುಟ್ಟುಗಿಡೆ ತಾನೆ ತನ್ನಂ
ಕಟ್ಟಿಸಿಕೊಳ್ವಂತೆ ಬೀರವಟ್ಟಮನಾಗಳ್ ।
ಕಟ್ಟಿಸಿಕೊಂಡಂ ಶಲ್ಯಂ
ಕಟ್ಟಿದುದಂ ಕಳೆಯಲಾರ್ಗಮೇಂ ತೀರ್ದಪುದೇ ॥ ೩೦

ವ॥ ಅನ್ನೆಗಮಿತ್ತ ತದ್ವೃತ್ತಾಂತಮಂ ಸಂಚಳಿತ ಚಾರ ಚಕ್ಷುಗ್ಗಳಿಂದಂ ಧರ್ಮಪುತ್ರನಱಿದು ನರಕಾಂತಕಂಗೆ ಬೞಿಯನಟ್ಟಿ ಬರಿಸಿ ಪೇೞ್ದೊಡೆ ನಿಶಾಟ ರಾಜ ಕಿರೀಟ ಕೋಟಿ ತಾಟಿತ ಭುಜಂ ಚತುರ್ಭುಜನಿಂತೆಂದಂ-

ಮ॥ ಅದಟುಂ ಕಾರ್ಮುಕವಿದ್ಯೆಯುಂ ಭುಜಬಳಾವಷ್ಟಂಭಮುಂ ಸಂದು ನಿಂ
ದುದು ಶಲ್ಯಂಗವನೊರ್ವನಲ್ತೆ ನಮಗಂ ಹೃಚ್ಛಲ್ಯನಾತಂಗೆ ಕ ।
ಟ್ಟಿದಿರೊಳ್ ನಿಲ್ವೊಡೆ ನೀನೆ ನಿಲ್ವೆಯದಱಿಂ ನಿಶ್ಶಲ್ಯಮಪ್ಪಂತು ನಿ
ನ್ನೊದವಿಂ ಮಾಱ್ಪುದಗಾಧಸಾಗರಪರೀತಾಶೇಷ ಭೂಭಾಗಮಂ ॥ ೩೧

ವ॥ ಅದಲ್ಲದೆಯುಂ ಸಿದ್ಧಿತ್ರಯಂಗಳ್ ನಿನಗಾತ್ಮೀಯಾಯತ್ತ ಸಿದ್ಧಿಯಾಗಿ ನಿಂದುದಱಿಂ ನೀನೆ ಬೀರವಟ್ಟಮಂ ತಾಳ್ದಿ ನಿಲ್ವುದೆನೆ-

ಉ॥ ಆಂ ದಿಟಮಾಗಿ ಶಲ್ಯನಳವಂ ನೆಱೆ ಮುನ್ನಱಿದಿರ್ದುಮೆನ್ನ ತ
ಮ್ಮಂದಿರನೇಕೆ ಕಾದಿಸುವೆನಾನೆ ಮಹಾಜಿಯೊಳಾಂಪೆನಂತಗೆ ।
ಯ್ಯೆಂದು ಮುಕುಂದ ಕಟ್ಟೆನಗೆ ಪಟ್ಟಮನೆಂದು ಮುಕುಂದವೃಂದಮೊಂ
ದೊಂದಱೊಳೊಂದಿ ಮಿಕ್ಕೆಸೆಯೆ ತಾಳ್ದಿದನಾ ವಿಭು ಬೀರವಟ್ಟಮಂ ॥ ೩೨

ಧರಿಸಿದನು. ೩೦. ಇತರ ಸಲಕರಣಗಳೆಲ್ಲ ನಾಶವಾಗಿರಲು ತನಗೆ ತಾನೇ ಕಟ್ಟಿಸಿಕೊಳ್ಳುವ ಹಾಗೆ ಶಲ್ಯನು ವೀರಪಟ್ಟವನ್ನು ಕಟ್ಟಿಸಿಕೊಂಡನು. ವಿಧಿಯ ನಿಯಮವನ್ನು ಕಳೆಯಲು ಯಾರಿಗಾದರೂ ಸಾಧ್ಯವಾಗುತ್ತದೆ ವ॥ ಅಷ್ಟರಲ್ಲಿ ಆ ಸಮಾಚಾರವನ್ನು ಸಂಚಾರಮಾಡುತ್ತಿರುವ ಗೂಢಚಾರರಿಂದ ಧರ್ಮರಾಯನು ತಿಳಿದು ಕೃಷ್ಣನಿಗೆ ದೂತರನ್ನು ಕಳುಹಿಸಿ ಬರಮಾಡಿಕೊಂಡು ಹೇಳಲು ರಾಕ್ಷಸರಾಜರ ಅನೇಕ ಕಿರೀಟಗ್ರಾದಿಂದ ಹೊಡೆಯಲ್ಪಟ್ಟ ತೋಳನ್ನುಳ್ಳ ಚತುರ್ಭುಜನಾದ ಕೃಷ್ಣನು ಹೀಗೆಂದನು. ೩೧. ಪರಾಕ್ರಮವೂ ಚಾಪವಿದ್ಯೆಯೂ ಬಾಹುಬಲದ ಅಹಂಕಾರವೂ ಶಲ್ಯನಲ್ಲಿ ಸೇರಿ ನಿಂತಿವೆ. ನಮಗೂ ಅವನೊಬ್ಬನೇ ಎದೆಗೆ ನಾಟಿದ ಈಟಿಯಂತಿರುವವನಲ್ಲವೇ? ಅವನಿಗೆ ಸರಿಸಮನಾಗಿ ನಿಲ್ಲುವುದಾದರೆ ನೀನೊಬ್ಬನೇ ನಿಲ್ಲುವೆ. ಆದುದರಿಂದ ನೀನು ಆಳವಾದ ಸಾಗರಗಳಿಂದ ಸುತ್ತುವರಿಯಲ್ಪಟ್ಟ ಸಮಸ್ತಭೂಮಂಡಲವನ್ನೂ ನಿನ್ನ ಸಹಾಯದಿಂದ ಕಂಟಕವಿಲ್ಲದಂತೆ ಮಾಡುವುದು. ವ॥ ಅಷ್ಟೇ ಅಲ್ಲದೆ ಸಿದ್ಧಿತ್ರಯಗಳಾದ ಪ್ರಭುಸಿದ್ಧಿ ಮಂತ್ರಸಿದ್ಧಿ ಮತ್ತು ಉತ್ಸಾಹ ಸಿದ್ಧಿಗಳು ನಿನಗೆ ಅಧೀನವಾದ ಸಿದ್ಧಿಯಾಗಿ ನಿಂತಿರುವುದರಿಂದ ನೀನೇ ಪಟ್ಟವನ್ನು ಧರಿಸಿ ನಿಲ್ಲುವುದು ಎನ್ನಲು ೩೨. ನಾನು ನಿಶ್ಚಯವಾಗಿಯೂ ಶಲ್ಯನ ಪರಾಕ್ರಮವನ್ನು ಸಂಪೂರ್ಣವಾಗಿ ಮೊದಲೇ ತಿಳಿದಿದ್ದೂ ನನ್ನ ತಮ್ಮಂದಿರನ್ನೇಕೆ ಕಾದಿಸಲಿ; ಮಹಾಯುದ್ಧದಲ್ಲಿ ನಾನೆ ಎದುರಿಸುತ್ತೇನೆ. ಕೃಷ್ಣನೇ ಹಾಗೆ ಮಾಡೆಂದು ನನಗೆ ಪಟ್ಟವನ್ನು

ವ|| ಅಂತು ಯುಧಿಷ್ಠಿರಂ ನಿಶ್ಚಿತಾಹವವ್ಯಾಪಾರನಾಗಿ ಮಧುಕೈಟಭಾರಾತಿಯಂ ಬೀಡಿಂಗೆ ಪೋಗಲ್ವೇಳ್ದಗ್ನಿಹೋತ್ರಶಾಲೆಗೆ ವಂದು ದರ್ಭಶಯನತಳದೊಳೊಱಗಿ ಬೆಳಗಪ್ಪ ಜಾವದೊಳ್-

ಚಂ|| ಕಡಲುರಿಯಂತಕಾಲ ಘನ ಗರ್ಜನೆಯಂತೆ ಸಮಸ್ತ ದಿಕ್ತಟಂ
ಪಿಡುಗುವಿನಂ ರಣಾನಕರವಂಗಳಸುಂಗೊಳೆ ಪರ್ವೆ ಬೇಗದಿಂ ।
ಸಡಗರದೇಳ್ಗೆಯುಂ ಕಳಕಳಧ್ವನಿಯುಂಬೆರಸಾಡುವಂತೆರ
ಟ್ಟಡೆಯೊಳಮಾಗಳೊರ್ಮೊದಲೆ ಪಲ್ಲಣಮಿಕ್ಕಿಪುದಲ್ಲಕಲ್ಲೊಳಂ ॥ ೩೩

ವ|| ಆಗಳಂತಕತನಯನುಂ ಧೃತರಾಷ್ಟ್ರತನಯನುಮಾರೂಢಮದಗಜರುಮುಪಾರೂಢ ವಿಶೇಷಕರುಮಾಗಿ ತಂತಮ್ಮ ಶಿಬಿರಂಗಳಿಂ ಚತುರ್ಬಲಂಗಳ್ ಪೊಱಮಟ್ಟು ಸಂಗ್ರಾಮರಂಗಕ್ಕವತರಿಸೆ ಕುರುಬಲಮಂ ಮದ್ರರಾಜನಭಿನವವ್ಯೂಹಮನೊಡ್ಡುವುದುಂ ವಿಬುಧವನಜವನಕಳಹಂಸನುಂ ಹಂಸವ್ಯೂಹಮನೊಡ್ಡಿ ಮಾರ್ವಲಕ್ಕೆ ಯಮಪಾಶಮಂ ಬೀಸುವಂತೆ ಕೆಯ್ವೀಸಿದಾಗಳ್-

ಕಂ|| ಚಯ್ ಚಯ್ಯೆಂಬಾಗಳ್ ಮೆಯ್
ಮೆಯ್ ಚಲದಿಂ ಮುಟ್ಟಿ ಪೊಣರ್ದು ತಳ್ತಿಱಿವುರ್ಕಿಂ ।
ಕೆಯ್ ಚೆಚ್ಚರಿಕೆಯ ಚಲದಿಂ
ಕೆಯ್ ಚಳಿವಿನಮಿಱಿದರೆರಡು ಬಲದೊಳಮದಟರ್ ॥ ೩೪

ಕಟ್ಟು ಎಂದು ಮುಕುಂದವೆಂಬ ಮಂಗಳವಾದ್ಯ ಸಮೂಹವು ಒಂದರಲ್ಲೊಂದು ಸಮನ್ವಯವಾಗಿ ಕೂಡಿಕೊಂಡು ವಿಶೇಷವಾಗಿ ಪ್ರಕಾಶಿಸಲು ಆ ದೊರೆಯು ವೀರಪಟ್ಟವನ್ನು ತಾಳಿದನು. ವ|| ಹಾಗೆ ಧರ್ಮರಾಯನು ನಿಶ್ಚಿತವಾದ ಯುದ್ಧ ವ್ಯಾಪಾರೋದ್ಯೋಗವುಳ್ಳವನಾಗಿ ಕೃಷ್ಣನನ್ನು ಬೀಡಿಗೆ ಹೋಗ ಹೇಳಿ ತಾನು ಅಗ್ನಿಹೋತ್ರಶಾಲೆಗೆ (ಯಾಗಶಾಲೆಗೆ) ಬಂದು ದರ್ಭೆಯಿಂದ ಮಾಡಲ್ಪಟ್ಟ ಹಾಸಿಗೆಯಲ್ಲಿ ಮಲಗಿ ಬೆಳಗಾಗುವ ಜಾವದಲ್ಲಿ ೩೩. ಬಡಬಾನಲದಂತೆ ಅಕಾಲದ ಗುಡುಗಿನಂತೆ ಸಮಸ್ತ ದಿಕ್ಕುಗಳ ದಡಗಳೂ ಸಿಡಿಯುವಂತೆ ಯುದ್ಧವಾದ್ಯಗಳು ಭೋರ್ಗರೆಯುತ್ತಿರಲು ವೇಗದ ಸಂಭ್ರಮಾತಿಶಯವೂ ಕಳಕಳಧ್ವನಿಯೂ ಬೆರಸಿ ಆಡುವಂತೆ ಎರಡು ಸೈನ್ಯಗಳಲ್ಲಿಯೂ ಒಟ್ಟಿಗೆ ಅಲ್ಲಕಲ್ಲೋಲವಾಗಲು ಕುದುರೆಗಳಿಗೆ ಜೀನನ್ನು ಹಾಕಿದರು. ವ|| ಆಗ ಧರ್ಮರಾಯನೂ ದುರ್ಯೋಧನನೂ ಮದ್ದಾನೆಗಳನ್ನು ಹತ್ತಿ ಪಾಳೆಯಗಳಿಂದ ಹೊರಟು ಚತುರಂಗಸೇನಾಸಮೇತರಾಗಿ ಯುದ್ಧರಂಗದಲ್ಲಿ ಬಂದಿಳಿದರು. ಶಲ್ಯನು ಕೌರವಸೈನ್ಯವನ್ನು ಹೊಸದಾದ ರಚನಾವಿಧಾನದಿಂದ ಮುಂದೊಡ್ಡಲು ವಿದ್ವಾಂಸರೆಂಬ ಕಮಲದ ತೋಟಕ್ಕೆ ರಾಜಹಂಸದಂತಿರುವ ಧರ್ಮರಾಯನೂ ಹಂಸವ್ಯೂಹವನ್ನು ಚಾಚಿ ಪ್ರತಿ ಸೈನ್ಯಕ್ಕೆ ಯಮಪಾಶವನ್ನು ಬೀಸುವಂತೆ ಕೈಬೀಸಿದನು. ೩೪. ಶರೀರ ಶರೀರಗಳ ಚಯ್‌ಚಯ್ ಎಂದು ಘರ್ಷಣೆಮಾಡುತ್ತ ಸ್ಪರ್ಧೆಯಿಂದ ಹತ್ತಿರಕ್ಕೆ ಬಂದು ರಣೋತ್ಸಾಹದ ಕೈಚಟುವಟಿಕೆಯ ರಭಸದಿಂದ ಜೊತೆಜೊತೆಯಾಗಿ ಹೆಣಗಾಡಿ ಕೈಸೋತುಹೋಗುವವರೆಗೂ ಉಭಯ

ಕರಿ ಮಕರಾಹತಹತಿಯಿಂ
ಬರಿದಳಱುವ ಬೈತ್ರದಂತೆ ವಿವಿಧಾಯುಧ ದಂ ।
ತುರಿತಂಗಳಲೆದುವಾ ಸಂ
ಗರ ಜಳನಿಧಿಯೊಳ್ ವರೂಥಕರಿನಿಕರಂಗಳ್ ॥ ೩೫

ಒಂದಕ್ಷೋಹಿಣಿಬಲಮೆರ
ಡುಂ ದೆಸೆಯೊಳಮುಳಿದುವನಿತೆ ಭಾರತಮೆಮ ।
ಗಿನ್ನಿಂದುಜ್ಜವಣೆ ದಲೆಂದದ
ಟೊಂದುತ್ತರಮಾಗೆ ಕಾದಿದರ್ ಕಟ್ಟಾಳ್ಗಳ್ ॥ ೩೬

ಸ್ಫುರಿತಶರನಿಕರಪಾತಿತ
ನರೋತ್ತಮಾಂಗಂ ಕಬಂಧ ನಾಟಕರಂಗಂ ।
ಸ್ಫುರಿತನವರುಧಿರರಂಗ
ತ್ತರಂಗಮೊಪ್ಪಿದುದು ವೀರಭಟರಣರಂಗಂ ॥ ೩೭

ವ॥ ಅಂತು ಮುಂಬಗಲ್ವರಂ ತುಮುಳಿ ಕಾದುವ ಸಮರಭರಂ ಮನೋರಾಗಮಂ ಮಾಡೆಯುಂ ಮುಮ್ಮಳಿಸಿ ಪಾಂಡವ ಕೌರವ ಬಲದ ಕಲಿಕೆಯ ಪ್ರಧಾನನಾಯಕರ್ಕಳ್-

ಮ॥ ಸ॥ ಕದಿಕೆಯ್ದೊಂದೊರ್ವರೊಳ್ ತಳ್ತಿಱಿವ ಬಯಕೆಯಿಂ ದಿವ್ಯ ಬಾಣಾದಿಗಳ್ಗಂ
ಪೊಡೆವಟ್ಟುಂ ಸೂತರಂ ಚೋದಿಸಿಮೆನುತುಮಗುರ್ವುರ್ವೆ ಕೆಯ್ಮಿಕ್ಕು ಕಾದಲ್ ।
ನಡೆತರ್ಪಾವೇಗದೊಳ್ ಮುಮ್ಮಳಿಸಿದ ಪಲವುಂ ರಾಜಚಿಹ್ನಂಗಳಂ ಬೆ
ಳ್ಗೊಡೆಗಳ್ ತಳ್ಪೊಯ್ದದೇಂ ಕಣ್ಗೊಳಿಸಿದುದೊ ವಿನಕ್ಷತ್ರಕಚ್ಛತ್ರಪಿಂಡಂ ॥ ೩೮

ಸೈನ್ಯದ ಶೂರರೂ ಪರಸ್ಪರ ಕತ್ತರಿಸಿದರು. ೩೫. ನೀರಾನೆ ಮತ್ತು ಮೊಸಳೆಗಳ ಹೊಡೆತದಿಂದ ಬಿರಿದು ನಾಶವಾಗುವ ಹಡಗಿನಂತೆ ನಾನಾ ಆಯುಧಗಳು ವಿಶೇಷವಾಗಿ ನಾಟಿಕೊಂಡಿರುವ ರಥ ಮತ್ತು ಆನೆಗಳ ಸಮೂಹಗಳು ಯುದ್ಧಸಮುದ್ರದಲ್ಲಿ ನಾಶವಾದವು. ೩೬. ಉಭಯಪಕ್ಷದಲ್ಲಿಯೂ ಒಂದಕ್ಷೋಹಿಣೀ ಸೈನ್ಯವು ಉಳಿಯಿತು. ಭಾರತಯುದ್ಧವು ಇದಿಷ್ಟೇ ಸಂಖ್ಯೆಯುಳ್ಳದು; ಈ ದಿನ ನಮಗೆ ಉದ್ಯಾಪನೆ (ಮುಗಿಯುವುದೇ)ಯಿಲ್ಲವೇ ಎಂದು ಹೇಳುತ್ತ ಅಪಾರ ಪರಾಕ್ರಮದಿಂದ ವೀರಪುರುಷರು ಕಾದಾಡಿದರು. ೩೭. ಹೊಳೆಯುತ್ತಿರುವ ಬಾಣಗಳ ಸಮೂಹಕ್ಕೆ ಸಿಕ್ಕಿಬೀಳುತ್ತಿರುವ ಮನುಷ್ಯರ ತೆಲಗಳನ್ನುಳ್ಳದೂ, ಮುಂಡಗಳು ಕುಣಿದಾಡುವ ರಂಗಸ್ಥಳವಾದುದೂ ಹೊಸ, ರಕ್ತದ ಚಂಚಲವಾದ ಅಲೆಗಳನ್ನುಳ್ಳುದೂ ಆದ ವೀರಭಟರ ರಣರಂಗವು ಪ್ರಕಾಶಮಾನವಾಯಿತು. ವ॥ ಹಾಗೆ ಮುಂಬಗಲವರೆಗೆ (ಮಧ್ಯಾಹ್ನದವರೆಗೆ) ತುಮುಲಯುದ್ಧವನ್ನು ಮಾಡುವ ಯುದ್ಧಕಾರ್ಯವು ಮನಸ್ಸಿಗೆ ಸಂತೋಷವನ್ನುಂಟುಮಾಡುತ್ತಿರಲು ಪಾಂಡವಕೌರವಬಲಪ್ರವೀಣರಾದ ಮುಖ್ಯ ನಾಯಕರುಗಳು ಕಾದಿದರು. ೩೮. ಬಹುವೇಗದಿಂದ ಕೂಡಿ ಪರಸ್ಪರ ತಗುಲಿ ಯುದ್ಧಮಾಡುವ ಅಪೇಕ್ಷೆಯಿಂದ ದಿವ್ಯಾಸ್ತ್ರಗಳಿಗೆ ನಮಸ್ಕಾರಮಾಡಿ ಸಾರಥಿಗಳಿಗೆ ರಥವನ್ನು ನಡೆಸಿ ಎಂದು ಹೇಳಿ ಭಯವು ಹೆಚ್ಚುತ್ತಿರಲು ಶಕ್ತಿಮೀರಿ ಯುದ್ಧಮಾಡಲು

ವ|| ಅಂತು ಮುಟ್ಟೆವಂದೋರೊರ್ವರೆ ರಥದ ಕುದುರೆಯ ಪಟವಿಗೆಯ ಕುಱುಪುಗಳಿನಿವರವರೆಂದಱಿದು ಸಾತ್ಯಕಿ ಕೃತವರ್ಮನೊಳ್ ನಕುಳಂ ಶತಬಿಂದುವಿನ ಮಕ್ಕಳಯ್ವರೊಳ್ ಸಹದೇವಂ ಶಕುನಿಯೊಳ್ ಯುಧಾಮನ್ಯೂತ್ತಮೌಜಸರ್ ಕೃಪನೊಳ್ ಭೀಮಸೇನಂ ಪರ್ವತರಾಜರೊಳ್ ವಿಕ್ರಮಾರ್ಜುನನಶ್ವತ್ಥಾಮನೊಳ್ ಪೆಣೆದು ಮಂಡಳ ಭ್ರಾಂತೋದ್ಭ್ರಾಂತಸ್ಥಿತಚಕ್ರಮೆಂಬ ರಥಯುದ್ಧದೊಳಮಾಲೀಢ ಪ್ರತ್ಯಾಲೀಢ ಸಮಪಾದಂ ಗಳೆಂಬಾಸನಂಗಳೊಳಂ ಪೆಱವುಂ ಶರಾಸನವಿದ್ಯೆಗಳೊಳತಿ ಪ್ರವೀಣರುಂ ಜಾಣರುಮಾಗಿ-

ಅಕ್ಕರ || ನೆಱೆದು ನಿರ್ವಾಯಂ ನರುವಾಯಂ ಮುಂ ಮೊನೆ ನೆರಕೆ ನಾರಾಚಂ ತಗರ್ತಲೆಯಂ
ನೆಱನರಿವ ಕಣೆ ಗೆಲೆಯಂಬು ಕಕ್ಕಂಬು ಕೆಲ್ಲಂಬು ಮೊನೆಯಂಬು ತೀವೆ ಕಣ್ಣಂ ।
ಪೆಱೆಯ ಮುಱೆಗಂ ಕಣಕೆನೆ ಪೋಪಂಬು ಕವಲಂಬುವೆಂಬಂಕದಂಬೆತ್ತಲುಂ
ತುಱುಗಿ ನಡುವಿನಂ ಸಾರ್ದು ಸಾರ್ದೆಚ್ಚೆಚ್ಚು ಕಾದಿದರತಿರಥರೊಂದುಜಾವಂ || ೩೯

ವ|| ಅಂತು ಕಾದುವಾಗಳೇಕಾದಶರುದ್ರರೊಳಗೆ ತುತ್ತತುದಿಯ ರುದ್ರನುಂ ರೌದ್ರನು ಮಪ್ಪಶ್ವತ್ಥಾಮನೇಪವೊಳ್ ಕಣ್ಗಾಣದೆ ಮಾರ್ಕೊಂಡು ವಿಕ್ರಮಾರ್ಜುನನಂ ದಿವ್ಯಾಸ್ತ್ರಂಗಳಿಂದ ಮೆಚ್ಚು ಕಾದಿ ಗೆಲಲಾಱದೆ-

ಬರುತ್ತಿರುವ ವೇಗದಲ್ಲಿ ಮುಂದಕ್ಕೆ ಚಾಚಿದ ಹಲವು ರಾಜಚಿಹ್ನೆಗಳನ್ನು ಶ್ವೇತಚ್ಛತ್ರಗಳು ಸಂಘಟ್ಟಿಸಿ ಚಂಚಲವಾದ ನವಿಲುಗಳನ್ನುಳ್ಳ ಛತ್ರಿಗಳ ಸಮೂಹದಂತೆ ವಿಶೇಷ ಆಕರ್ಷಣೀಯವಾಗಿದ್ದುವು. ವ|| ಹಾಗೆ ಸಮೀಪಕ್ಕೆ ಬಂದು ಒಬ್ಬೊಬ್ಬರ ರಥದ ಕುದುರೆಯ ಬಾವುಟದ ಗುರುತುಗಳಿಂದ ಇವರು ಅವರು ಎಂದು ಗುರುತಿಸಿ ಸಾತ್ಯಕಿ ಕೃತವರ್ಮನಲ್ಲಿಯೂ ನಕುಳನು ಶತಬಿಂದುವಿನ ಅಯ್ದು ಮಕ್ಕಳಲ್ಲಿಯೂ ಸಹದೇವನು ಶಕುನಿಯಲ್ಲಿಯೂ ಯುಧಾಮನ್ಯೂತ್ತಮೌಜಸರು ಕೃಪನಲ್ಲಿಯೂ ಭೀಮಸೇನನು ಪರ್ವತರಾಜರಲ್ಲಿಯೂ ವಿಕ್ರಮಾರ್ಜುನನು ಅಶ್ವತ್ಥಾಮನಲ್ಲಿಯೂ ಹೆಣೆದುಕೊಂಡು ಭ್ರಾಂತ, ಉದ್ಭ್ರಾಂತ, ಸ್ಥಿತ, ಚಕ್ರ ಎಂಬ ರಥಯುದ್ಧದಲ್ಲಿಯೂ ಆಲೀಢ, ಪ್ರತ್ಯಾಲೀಢ, ಸಮಪಾದ ಎಂಬ ಆಸನಗಳಲ್ಲಿಯೂ ಇತರ ಅನೇಕ ಬಿಲ್ವಿದ್ಯೆಗಳಲ್ಲಿಯೂ ಅತಿ ಪ್ರವೀಣರೂ ಜಾಣರೂ ಆಗಿ ೩೯. ಕೂಡಿಕೊಂಡು ನಿರ್ವಾಯ, ನರುವಾಯ, ಮುಮ್ಮೊನೆ, ನೆರಕೆ, ನಾರಾಚ, ತಗರ್ತಲೆ, ಮರ್ಮಸ್ಥಾನವನ್ನು ಭೇದಿಸುವ ಕಣೆಗೆಲೆಯಂಬು, ಕಕ್ಕಂಬು, ಕೆಲ್ಲಂಬು, ಮೊನೆಯಂಬು, ಇವುಗಳು ಕಣ್ಣನ್ನು ತುಂಬಿಕೊಳ್ಳಲು, ಪೆಱೆಯಮುಱೆಗಂ, ಕಣಕೆನೆ, ಪೋಪಂಬು, ಕವಲಂಬು ಎಂಬ ಪ್ರಸಿದ್ಧವಾದ ಬಾಣಗಳು ಎಲ್ಲಕಡೆಯಲ್ಲಿಯೂ ನುಗ್ಗಿ ಹೋಗಿ ನಾಟಿಕೊಳ್ಳುವ ಹಾಗೆ ನೋಡಿನೋಡಿ ಹೊಡೆದು ಹೊಡೆದು ಅತಿರಥರು ಒಂದು ಜಾವದ ಕಾಲ ಕಾದಿದರು. ವ|| ಹಾಗೆ ಯುದ್ಧ ಮಾಡುವಾಗ ಹನ್ನೊಂದು ಜನ ರುದ್ರರೊಳಗೆ ಕಟ್ಟಕಡೆಯವನೂ ಭಯಂಕರನೂ ಆದ ಅಶ್ವತ್ಥಾಮನು ಕೋಪದಿಂದ ಕುರುಡನಾಗಿ ಪ್ರತಿಭಟಿಸಿ

ಕಂ॥ ತನ್ನ ದೊಣೆಯಂಬುಗಳ್ ತವು
ವನ್ನೆಗಮಚ್ಚಂಬು ತಪ್ಪೊಡಭಿವಾದಯೆನ ।
ಲ್ಕಿನ್ನೆನಗೆ ಪದನಿದೆಂದು ಕ
ರಂ ನಗೆ ಸುರರರಿಗನಿದಿರ್ಗೆ ತೊಲಗಿದನಾಗಳ್ ॥ ೪೦

ದಾವಶಿಖಿ ಶಿಖಿಯನಿಟಿಪುದಿ
ದಾವ ಸರಲ್ ಪೇಟಿಮೆನಿಪ ಸರಲಿಂ ತಱಿದಂ ।
ದೇವರ ಪಡೆ ರಾಗಿಸೆ ಮನ
ದೇವದಿನವಯವದೆ ಶಕುನಿಯಂ ಸಹದೇವಂ ॥ ೪೧

ವ॥ ಅಂತು ಶಕುನಿಯಂ ತಱಿವುದುಮಿತ್ತತಿರಭುಕ್ತಿ ವಿಷಯಾಧೀಶರಪ್ಪ ಶತಬಿಂದುವಿನ ಮಕ್ಕಳಪ್ಪಯ್ವರಂ ಗಾಳಿಗೊಡ್ಡಿದ ಪುಲ್ಲ ಬಿಂದುಗಳಂತೆ ನಕುಲಂ ನೆಲಕ್ಕೆ ಸೋವತಂ ಮಾಡಿದನಿತ್ತ ವಿಂಧ್ಯ ಮಳಯ ಹಿಮವನ್ನಿವಾಸಿಗಳಪ್ಪ ಪರ್ವತರಾಜರುಮಂ ಭೀಮಸೇನನಂತಕಾನನಮನೆಯ್ದಿಸಿದಂ ಯುಧಾಮನ್ಯೂತ್ತಮೌಜಸರ್ ಗೆಲೆ ಕಾದಿ ಕೃಪನನುಪಗತಪರಿಶ್ರಮನಂ ಮಾಡಿದರಾಗಳ್ ಮೆಯ್ವೆರ್ಚಿ ಬಂದು ಪೆಣೆದ ಭೀಮ ನಕುಳ ಸಹದೇವರುಮಂ ಶಲ್ಯಂ ವಿರಥರ್ಮಾಡಿ ಪಿಡಿದು ಕೊಂಡು ಪುಲ್ಲ ಸೂಡನೀಡಾಡುವಂತೆ ತನ್ನಳಿಯಂದಿರಿರ್ವರುಮನೀಡಾಡಿ ಭೀಮನಂ ಪೊಣರ್ದು ನೆಲಕ್ಕಿಕ್ಕಿ ಬೆನ್ನಂ ಮೆಟ್ಟಿ ದಾಂಟುವ ಮದಗಜದಂತೆ ಕೊಲಲೊಲ್ಲದೆ ದಾಂಟದಾಗಳ್ ದುರ್ಯೋಧನನಟಲ್ದು ಕರ್ಣ್ಣಾಗಣದೆಯ್ದವಂದಶ್ವತ್ಥಾಮ ಮದ್ರರಾಜ ಕೃಪಕೃತವರ್ಮರನಿಂತೆಂದಂ-

ವಿಕ್ರಮಾರ್ಜುನನನ್ನು ದಿವ್ಯಾಸ್ತ್ರಗಳಿಂದ ಹೊಡೆದು ಕಾದಿ ಗೆಲ್ಲಲಾರದೆ -೪೦. ತನ್ನ ಬತ್ತಳಿಕೆಯ ಬಾಣಗಳು ಮುಗಿಯುವವರೆಗೂ ಹೊಡೆದು ತೀರಿಹೋಗಲು ಇನ್ನು ಅಭಿವಾದಯೆ (ನಮಸ್ಕರಿಸುತ್ತೇನೆ) ಎನ್ನಲು ಇದು ಸಮಯವೆಂದು - ದೇವತೆಗಳೆಲ್ಲ ನಗುತ್ತಿರಲು ಅರ್ಜುನನೆದುರಿಗೆ ಆಗ ಹೊರಟು ಹೋದನು. ೪೧. ದಾವಾಗ್ನಿಯನ್ನೂ ಕೀಳುಮಾಡುತ್ತಿರುವ ಈ ಬಾಣವು ಯಾವುದು ಹೇಳಿ ಎನ್ನುವ ಬಾಣದಿಂದ ದೇವರ ಸಮೂಹವು ಸಂತೋಷಪಡುತ್ತಿರಲು ಮನಸ್ಸಿನ ಕೋಪದಿಂದ ಸಹದೇವನು ಶಕುನಿಯನ್ನು ಕತ್ತರಿಸಿದನು. ವ॥ ಈ ಕಡೆ ಅತಿರಭುಕ್ತಿಯೆಂಬ ದೇಶದ ರಾಜರಾದ ಶತಬಿಂದುವಿನ ಅಯ್ದುಮಕ್ಕಳನ್ನೂ ನಕುಲನು ಗಾಳಿಗೆ ಒಡ್ಡಿದ ಹುಲ್ಲಿನ ಮೇಲಿನ ಜಲಬಿಂದುಗಳಂತೆ ಭೂಮಿಗೆ ಬಲಿಕೊಟ್ಟನು. ಈ ಕಡೆ ವಿಂಧ್ಯ, ಮಳಯ, ಹಿಮವತ್ಪರ್ವತನಿವಾಸಿಗಳಾದ ಪರ್ವತರಾಜರುಗಳನ್ನು ಭೀಮನು ಯಮನ ಬಾಯನ್ನು ಸೇರಿಸಿದನು. ಯುಧಾಮನ್ಯೂತ್ತಮೌಜಸರು ಗೆಲ್ಲುವ ಹಾಗೆ ಯುದ್ಧಮಾಡಿ ಕೃಪನನ್ನು ನಷ್ಟಪರಾಕ್ರಮವನ್ನಾಗಿ ಮಾಡಿದರು. ಆಗ ಮೆಯ್ಯುಬ್ಬಿ ಹೆಣೆದುಕೊಂಡು ಒಟ್ಟಾಗಿ ಬಂದ ಭೀಮನಕುಳಸಹದೇವರನ್ನು ಶಲ್ಯನು ರಥವಿಲ್ಲದವರನ್ನಾಗಿ ಮಾಡಿ ಹಿಡಿದುಕೊಂಡು ಹುಲ್ಲಿನ ಕಂತೆಯನ್ನು ಎಸೆಯುವಂತೆ ತನ್ನಳಿಯಂದಿರನ್ನು ಎಸೆದು ಭೀಮನೊಡನೆ ಹೆಣಗಿ ಅವನನ್ನು ನೆಲಕ್ಕಿಕ್ಕಿ ಬೆನ್ನನ್ನು ತುಳಿದು ದಾಟುವ ಮದ್ದಾನೆಯಂತೆ ಕೊಲ್ಲಲು ಇಷ್ಟಪಡದೆ ದಾಟಿದನು. ಆಗ ದುರ್ಯೋಧನನು ದುಃಖಪಟ್ಟು ಕರ್ಣ್ಣಾಗಣದ ಸಮೀಪಕ್ಕೆ ಬಂದ ಅಶ್ವತ್ಥಾಮ ಕೃಪ ಕೃತವರ್ಮರನ್ನು ಕುರಿತು ಹೀಗೆಂದನು.

ತರಳ ॥ ನಿಜಕುಲೋಚಿತವೃತ್ತಿಯಂ ಬಗೆಯಿಂ ಮಹಾರಥರಿರ್ ಮಹೀ
ಭುಜರ ಮಕ್ಕಳಿರೆಂದು ನಂಬಿದೆನಿಂತು ನಣ್ಪನೆ ವೈರಿ ಭೂ ।
ಭುಜರೊಳುಂಟೊಡತಾಗಿ ಮಾಳ್ಪುದನೀಗಳಾನಱಿದೆಂ ಫಣಿ
ಧ್ವಜನೆನಪ್ಪನೆ ನಿಮ್ಮನಿನ್ನೆಗೆಂದೊಡೀ ರಣರಂಗದೊಳ್ ॥ ೪೨

ಉ॥ ಕಾದುವ ಮಾಳ್ಕೆಯಲ್ಲವಿದು ಕೆಮ್ಮನೆ ನಣ್ಪನೆ ಮೇಳಗಾಳೆಗಂ
ಗಾದುವ ಮಾಳ್ಕೆ ಸಿಂಧು ಘಟ ಸೂತ ಸುತರ್ಕಳಿನಾಗದೊಂದು ರಾ ।
ಜ್ಯೋದಯವಮ್ಮ ನಿಮ್ಮ ಬಲದಿಂದೆನಗಪ್ಪುದೆ ಮದ್ವಿರೋಧಿಯಂ
ಭೇದಿಸಲಾನೆ ಸಾಲ್ವೆನಿರಿಮನ್ನೆಗಮೀ ರಣರಂಗಭೂಮಿಯೊಳ್ ॥ ೪೩

ವ॥ ಎಂದು ದುರ್ಯೋಧನನವರ ಕಾಳೆಗಮಂ ಮಾತಿನೊಳ್ ಕಳೆದು ವರೂಥದಿಂ ಬೀಡಿಂಗೆ ಪೋದನಾಗಳ್ ಶಲ್ಯಂ ರಾಜರಾಜಂ ತನ್ನಂ ಮೂದಲಿಸಿ ನುಡಿದುದರ್ಕೆ ಮನದೊಳೇವಯಿಸಿ–

ಚಂ॥ ಇನಿತುವರಂ ಪರಾಭವಮಿಳೇಶನಿನಿನ್ನೆನಗಾದುದಿಂ ಸಿಡಿ
ಲ್ವೆನೆ ರಿಪುಸೇನೆಯಂ ತುಱಿದು ತೊಱ್ತುಱಿಮಾಡುವೆನೆಂದಗುರ್ವಿನು ।
ರ್ವಿನ ಶರಸಂಕುಲಂಗಳೊಳೆ ಪೂಱಿಱ್ದೆಡೆ ಪಾಂಡವಸೈನ್ಯಮಾತನಂ
ಬಿನ ಮೊನೆಯೊಳ್ ಸುರುಳ್ದುರುಳಿಗೊಂಡುದು ಶಲ್ಯನಿದೇಂ ಪ್ರತಾಪಿಯೋ ॥೪೪

ವ॥ ಅಂತು ಮದ್ರರಾಜಂ ಪಾಂಡವಪತಾಕಿನಿಯೊಳೊಂದಕ್ಷೋಹಿಣೀಬಲಮಂ ಕೊಂದು ದ್ರುಪದನ ಮಕ್ಕಳಯ್ವರುಮನಾತನ ತಮ್ಮಂದಿರಿರ್ಪತ್ತಯ್ವರುಮಂ ಶಕಟ ವಿಕಟರ್ ಮೊದಲಾಗೆ

೪೨. ನಿಮ್ಮ ಕುಲಕ್ಕೆ ಯೋಗ್ಯವಾದ ವರ್ತನೆಯನ್ನು ಯೋಚಿಸಿ ಮಹಾರಥರಾಗಿದ್ದೀರಿ ರಾಜರ ಮಕ್ಕಳಾಗಿದ್ದೀರಿ ಎಂದು ನಿಮ್ಮನ್ನು ನಂಬಿದೆನು ಶತ್ರುರಾಜರುಗಳಲ್ಲಿ ಸ್ನೇಹವುಳ್ಳವರಾಗಿ ನಡೆದುಕೊಳ್ಳುವುದನ್ನು ಈಗ ನಾನು ತಿಳಿದೆನು. ಇನ್ನು ಮೇಲೆ ಯುದ್ಧರಂಗದಲ್ಲಿ ನಿಮ್ಮನ್ನು ನನ್ನವರೆಂದು ಭಾವಿಸಿದರೆ ಫಣಿ (ಸರ್ಪ)ಧ್ವಜನೇ ಅಲ್ಲ. (ದುರ್ಯೋಧನನೆನಿಸಿಕೊಳ್ಳುತ್ತೇನೆಯೇ?) ೪೩. ಇದು ಯುದ್ಧಮಾಡುವ ರೀತಿಯಲ್ಲ; ಇದು ಸ್ನೇಹದಿಂದ ಪ್ರೇಮಕಲಹವಾಡುವ ರೀತಿ. ಭೀಷ್ಮ ದ್ರೋಣ ಕರ್ಣರಿಂದ ಆಗದ ಒಂದು ರಾಜ್ಯಲಾಭ ನಿಮ್ಮ ಬಲದಿಂದ ನನಗಾಗುತ್ತದೆಯೇ. ನನ್ನ ವಿರೋಧಿಯನ್ನು ಮುರಿಯಲು ನಾನೇ ಶಕ್ತನಾಗಿದ್ದೇನೆ. ಅಲ್ಲಿಯವರೆಗೆ ಈ ಯುದ್ಧಭೂಮಿಯಲ್ಲಿ ಇರಿ. ವ॥ ಎಂದು ದುರ್ಯೋಧನನು ಅವರ ಕಾಳಗವನ್ನು ಮಾತಿನಿಂದಲೇ ಜರೆದು ತೇರಿನಲ್ಲಿ ಬೀಡಿಗೆ ಹೋದನು. ಆಗ ಶಲ್ಯನು ಚಕ್ರವರ್ತಿಯಾದ ದುರ್ಯೋಧನನು ತನ್ನನ್ನು ಮೂದಲಿಸಿ ನುಡಿದುದಕ್ಕೆ ಮನಸ್ಸಿನಲ್ಲಿ ದುಃಖಪಟ್ಟು-೪೪. ರಾಜನಾದ ದುರ್ಯೋಧನನಿಂದ ಇಷ್ಟರ ಮಟ್ಟಿಗೆ ಅವಮಾನವು ನನಗಾಯಿತು. ಇನ್ನು ಸಿಡಿದುಹೋಗುತ್ತೇನೆ, ಶತ್ರುಸೈನ್ಯವನ್ನು ತುಳಿದು ಅಜ್ಜಿಗುಜ್ಜಿಮಾಡುತ್ತೇನೆ ಎಂದು ಅತ್ಯಂತ ಭಯಂಕರವಾದ ಬಾಣಸಮೂಹದಿಂದಲೇ ಅವರನ್ನು ಹೂಳಲು ಪಾಂಡವಸೈನ್ಯವು ಆತನ ಬಾಣಗಳ ತುದಿಯಲ್ಲಿ ಸುರುಟಿಕೊಂಡು ರಾಶಿಯಾಗಿ ಹೋಯಿತು. ಶಲ್ಯನು ಇನ್ನೆಷ್ಟು ಪ್ರತಾಪಶಾಲಿಯೋ! ವ॥ ಹಾಗೆ ಶಲ್ಯನು

ಪನ್ನಿರ್ಛಾಸಿರ ಮಕುಟಬದ್ಧರಂ ಕೊಂದು ಮುಂದಾಂಪರಾರುಮಂ ಕಾಣದೆ ಮೇಗಿಲ್ಲದೆ ನಿಂದಾಗಳ್ ಧರ್ಮಪುತ್ರಂ ತ್ರಿಭುವನಂಗಳಾಕಂಪಂಗೊಳೆ ಮುರಜಕೇತನವಿರಾಜಿತಮಪ್ಪ ತನ್ನ ರಥಮನದಿರದಿದಿರಂ ಪರಿಯಿಸಿ-

ಮಲ್ಲಿಕಾಮಾಲೆ ॥ ಬೀರವಟ್ಟಮನಾಂತ ಬೀರರುಮಿರ್ವರುಂ ಸುರ ರಾಜಿ ಕೈ
ವಾರದಿಂ ಬಟಿವಿಟ್ಟು ನಮ್ಮನೆ ನೋಡ ನೋಡುವರೀಗಳೀ ।
ಭಾರತಂ ಸಮೆದಪ್ಪುದಳ್ಕದೆ ನಿಂದು ಕಾದೆನುತುಂ ಶರಾ
ಸಾರಮಂ ಸುರಿದಂತಕಾತ್ಮಜನಂತಸುಂಗೊಳೆ ಕಾದಿದಂ ॥ ೪೫

ಕಂ॥ ಕಾದೆ ರಥ ತುರಗ ಕೇತನ
ಕೋದಂಡಂಗಳುಮನುಱದೆ ಖಂಡಿಸಿ ಪ್ರಳಯಾಂ ।
ಭೋದನಿನಾದದೆ ಮದ್ರ ಮ
ಹೀದಯಿತಂ ತೊಟ್ಟನಾರ್ವುದುಂ ಧರ್ಮಸುತಂ ॥ ೪೬

ಮುಳಿದು ತಳಮಳಿಸಿ ತಳರದೆ
ತೊಳಗುವ ಕರವಾಳನುರ್ಚಿ ಮೆಯ್ವೆರ್ಚಿ ಪೊದ ।
ಟ್ವಳವಮರೆ ಪಿಡಿದು ರಥದಿಂ
ದಿಳಿಗಿಟಿದವನವನಿಪತಿಯನಣುಗಿಟಿವೊಯ್ದಂ ॥ ೪೭

ವ॥ ಪೊಯ್ದೊಡೆ ಮದಾಂಧಗಂಧಸಿಂಧುರಂ ಪೊಯ್ದು ಪೆರ್ಮರದಂತೆ ನೆಲನದಿರೆ ಕೆಡೆದ ತನ್ನಳಿಯನಂ ಮದ್ರರಾಜಂ ಕಂಡು ಕರುಣಿಸಿ-

ಪಾಂಡವಸೈನ್ಯದಲ್ಲಿ ಒಂದಕ್ಷೋಹಿಣೀ ಸೈನ್ಯವನ್ನು ಕೊಂದು ದ್ರುಪದನ ಅಯ್ದುಜನ ಮಕ್ಕಳನ್ನೂ ಅವನ ಇಪ್ಪತ್ತೈದು ತಮ್ಮಂದಿರನ್ನೂ ಶಕಟವಿಕಟರೇ ಮೊದಲಾದ ಹನ್ನೆರಡುಸಾವಿರ ರಾಜರನ್ನೂ ಕೊಂದು ಮುಂದೆ ಪ್ರತಿಭಟಿಸುವವರಾರನ್ನೂ ಕಾಣದೆ ತನಗಿಂತ ಉತ್ತಮರಾದವರಾರೂ ಇಲ್ಲದೆ ನಿಂತನು. ಧರ್ಮರಾಜನು ಮೂರುಲೋಕಗಳೂ ಪೂರ್ಣವಾಗಿ ನಡುಗಿಸುವಂತೆ ಮದ್ದಲೆಯ ಗುರುತಿನ ಬಾವುಟದಿಂದ ಮೆರೆಯುತ್ತಿರುವ ತನ್ನ ತೇರನ್ನು ಹೆದರದೆ ಎದುರಾಗಿ ಹರಿಯಿಸಿದನು. ೪೫. ನಾವಿಬ್ಬರೂ ಸೇನಾಧಿಪತ್ಯವನ್ನು ವಹಿಸಿರುವ ವೀರರೇ ಆಗಿದ್ದೇವೆ. ದೇವತೆಗಳ ಸಮೂಹವು ಪೊಗಳುತ್ತಾ ದಾರಿಮಾಡಿಕೊಂಡು ನಮ್ಮನ್ನೇ ನೋಡುತ್ತಿದ್ದಾರೆ. ನೋಡು ಈಗ ಈ ಭಾರತಯುದ್ಧ ಪರಿಸಮಾಪ್ತಿಯಾಗುತ್ತಿದೆ. ಹೆದರದೆ ನಿಂತು ಯದ್ಧಮಾಡು ಎನ್ನುತ್ತ ಬಾಣದ ಮಳೆಯನ್ನು ಸುರಿದು ಧರ್ಮರಾಯನು ಪ್ರಾಣವನ್ನು ಸೆಳೆದುಕೊಳ್ಳುವಂತೆ ಕಾದಿದನು. ೪೬. ತೇರು, ಕುದುರೆ, ಬಾವುಟ, ಬಿಲ್ಲುಗಳನ್ನು ವೇಗವಾಗಿ ಖಂಡಿಸಿ ಪ್ರಳಯಕಾಲದ ಗುಡುಗಿನ ಶಬ್ದದಿಂದ ಶಲ್ಯಮಹಾರಾಜನು ಗರ್ಜಿಸಿದನು. ಧರ್ಮರಾಯನು ೪೭. ಕೋಪದಿಂದ ತಲ್ಲಣಗೊಂಡು ಹೊಳೆಯುವ ಕತ್ತಿಯನ್ನು ಒರೆಯಿಂದ ಸೆಳೆದು ರಥದಿಂದ ಇಳಿದು ಉಬ್ಬಿ ಆವರಿಸಿದ ಶಕ್ತಿಯಿಂದ ಹೊಡೆಯಲು ಶಲ್ಯನ ಸಮೀಪಕ್ಕೆ ಬರಲು ಶಲ್ಯನೂ ತೇರಿನಿಂದ ಇಳಿದು ಧರ್ಮರಾಜನನ್ನು ಸಮೀಪಿಸಿ ಹೊಡೆದನು. ವ॥ ಮದ್ದಾನೆಯು ಅಪ್ಪಳಿಸಿದ ದೊಡ್ಡ ಮರದಂತೆ ನೆಲವು ಅಳ್ಳಾಡುವ ಹಾಗೆ ಕೆಳಗೆ ಬಿದ್ದ ತನ್ನಳಿಯನಾದ ಧರ್ಮರಾಜನನ್ನು

ಚಂ॥ ಮುಳಿಯಿಸದನ್ನಮಿಾ ನೃಪನಿನಾಗದು ಸಾವೆನಗೆಂತುಮಿಾತನಂ
ಮುಳಿಯಿಪೆನೆಂದುರಃಸ್ಥಳಮನಂತೊದೆದಾಗಡೆ ಕಂತುಗೀಶ್ವರಂ ।
ಮುಳಿದವೊಲಾ ನೃಪಂ ಮುಳಿದು ನೋಡೆ ವಿಲೋಚನಪಾವಕಂ ತಗು
ಳ್ದಳುರ್ದೊಡೆ ಬೂದಿಯಾದುದೊಡಲಾಗಳೆ ಮದ್ರ ಮಹಾಮಹೀಶನಾ ॥ ೪೮

ವ॥ ಅಂತಜಾತಶತ್ರು ನೇತ್ರೋದ್ಭೂತಾನಳಂ ತ್ರಿಣೇತ್ರಲಲಾಟಾನಳನಂತಳವಲ್ಲದಳುರೆ ಮದ್ರನಾಥಂ ಭಸ್ಮೀಭೂತನಾದ ಮಾತನಹಿಕೇತನಂ ಕೇಳ್ದು-

ಉ॥ ಆ ದೊರೆಯರ್ ನದೀಜ ಘಟಸಂಭವ ಸೂರ್ಯತನೂಜ ಮದ್ರ ರಾ
ಜಾದಿ ಮಹೀಭುಜರ್ ಧುರದೊಳೆನ್ನಯ ದೂಸಱಿನಟ್ಗಿ ಮಟ್ಗಿದಂ ।
ತಾದರಿದೊಂದೆ ಮೆಯ್ಯುಟಿದುದಿನ್ನೆನಗಾವುದೊ ಮೆಳ್ವಡೆಯ್ದೆ ಮುಂ
ದಾದ ವಿರೋಧಿಸಾಧನಮನೆನ್ನ ಗದಾಶನಿಯಿಂದುರುಳ್ಚುವೆಂ ॥ ೪೯

ವ॥ ಎಂದು ನಿಜಭುಜ ವಿಕ್ರಮೈಕಸಾಹಯನಾಗಿ ಗದೆಯಂ ಕೊಂಡು ಸಂಗ್ರಾಮ ರಂಗಕ್ಕೆ ನಡೆಯಲೆಂದಿರ್ದ ಕುರುಕುಳಚೂಡಾಮಣಿಯ ದಕ್ಷಿಣಕರಾಗ್ರಮಂ ಪಿಡಿದು ಸಂಜಯನಿಂತೆಂದಂ-

ಮ॥ ಬೆವಸಾಯಂಗೆಯಲಿನ್ನುಮುಂಟೆಡೆ ಕೃಪಾಶ್ವತ್ಥಾಮರುಳ್ಳಂತೆ ಪಾಂ
ಡವರಂ ಗೆಲ್ವುದಸಾಧ್ಯಮಾಯ್ತೆ ನಿಜ ದೋರ್ದಂಡಂಬರಂ ಗಂಡರಾ ।
ಹವರಂಗಕ್ಕೊಳರೇ ಸಮಂತು ಪಗೆಯಂ ಕೊಲ್ವಂತು ಗೆಲ್ವಂತು ಕಾ
ದುವುದೇಕಾಕಿಯೆ ಆಗಿ ದೇವರಿಪುಭೂಪಾಳರ್ಕಳೊಳ್ ಕಾದುವೈ ॥ ೫೦

ಶಲ್ಯನು ನೋಡಿ (ಕರುಣದಿಂದ ನೋಡಿ) ಕರುಣಿಸಿ, ೪೮. ಕೋಪವನ್ನುಂಟು ಮಾಡುವವರೆಗೂ ಈ ರಾಜನಿಂದ ಸಾವು ಹೇಗೂ ನನಗಾಗುವುದಿಲ್ಲ. ಹೇಗೂ ಈತನನ್ನು ರೇಗಿಸುತ್ತೇನೆ ಎಂದು ಎದೆಯನ್ನು ಒದ್ದನು. ತಕ್ಷಣವೇ ಮನ್ಮಥನಿಗೆ ಈಶ್ವರನು ಕೋಪಿಸಿಕೊಂಡ ಹಾಗೆ ಆ ರಾಜನು ಕೋಪಿಸಿ ನೋಡಿದನು. ಕಣ್ಣಿನ ಬೆಂಕಿಯು ಅಟ್ಟಿಕೊಂಡು ಬಂದು ಆಗಲೆ ಸುಡಲು ಶಲ್ಯಮಹಾರಾಜನ ಶರೀರವು ಬೂದಿಯಾಯಿತು. ವ॥ ಹಾಗೆ ಧರ್ಮರಾಯನ ಕಣ್ಣಿನಲ್ಲಿ ಹುಟ್ಟಿದ ಬೆಂಕಿಯು ಮುಕ್ಕಣ್ಣನ ಹಣೆಗಣ್ಣಿನ ಬೆಂಕಿಯಂತೆ ಅಳತೆಯಿಲ್ಲದಷ್ಟು ಸುಡಲು ಶಲ್ಯನು ಬೂದಿಯಾದ ಮಾತನ್ನು ದುರ್ಯೋಧನನು ಕೇಳಿದನು. ೪೯. ಅಂತಹ ಅದ್ಭುತಶಕ್ತಿಯುಳ್ಳ ಭೀಷ್ಮ, ದ್ರೋಣ, ಕರ್ಣ, ಮದ್ರರಾಜನೇ ಮೊದಲಾದ ರಾಜರುಗಳು ಯುದ್ಧದಲ್ಲಿ ನನ್ನ ಕಾರಣದಿಂದ ಸತ್ತು ನಿರ್ನಾಮವಾದರು. ಈ ನನ್ನದೊಂದೆ ಶರೀರ ಉಳಿದಿದೆ. ಇನ್ನು ನನಗೆ ಮಾಡುವ ಕಾರ್ಯವಾವುದು? ಸಂಪೂರ್ಣವಾಗಿ ನನ್ನನ್ನು ಎದುರಿಸುವ ಶತ್ರುಸೈನ್ಯವನ್ನು ನನ್ನ ಗದೆಯೆಂಬ ಸಿಡಿಲಿನಿಂದ ಉರುಳಿಸುವೆನು ವ॥ ಎಂದು ತನ್ನ ಬಾಹುಬಲವೊಂದನ್ನೇ ಸಹಾಯವನ್ನಾಗಿ ಹೊಂದಿ ಗದೆಯನ್ನು ತೆಗೆದುಕೊಂಡು ಯುದ್ಧರಂಗಕ್ಕೆ ಹೋಗಬೇಕೆಂದಿದ್ದ ಕುರುಕುಲಚೂಡಾಮಣಿಯಾದ ದುರ್ಯೋಧನನ ಬಲಗೈಯ್ಯ ತುದಿಯನ್ನು ಹಿಡಿದುಕೊಂಡು ಸಂಜಯನು ಹೀಗೆಂದನು.-೫೦. ಕೃಪಾಶ್ವತ್ಥಾಮರಿರಲು ಕಾರ್ಯಭಾರಮಾಡುವುದಕ್ಕೆ ಇನ್ನೂ ಅವಕಾಶವುಂಟು. ಪಾಂಡವರನ್ನು ಗೆಲ್ಲುವುದು

ವ|| ಎಂಬುದುಮೆನ್ನುಮನೇಕಾಕಿಯೆಂದೇಳಿಸಿ ನುಡಿದೆಯೆಂದು ಸಂಜಯನ ಮೊಗಮಂ ಮುನಿದು ನೋಡಿ-

ಚಂ|| ವನ ಕರಿ ಕುಂಭ ಪಾಟನ ಪಟಿಷ್ಠ ಕಠೋರ ನಖ ಪ್ರಹಾರ ಭೇ ।
ದನ ಗಳಿತಾಸ್ತ್ರ ರಕ್ತ ನವ ಮೌಕ್ತಿಕ ಪಜ್ತೆವಿಳಾಸ ಭಾಸುರಾ ।
ನನನೆನೆ ಸಂದುದಗ್ರ ಮೃಗರಾಜನುಮಂ ಮದವದ್ವಿರೋಧಿ ಭೇ
ದನಕರನಪ್ಪ ಶೌರ್ಯಮದದೆನ್ನುಮನೊಂದೊಡಲೆಂಬ ಸಂಜಯಾ || ೫೧

ವ|| ಎಂಬುದುಂ ದೇವರ ಬಾಹುಬಳಮಜೇಯಮುಮಸಹಾಯಮುಮಪ್ಪುದಾದ ದೊಡಂ ದೇಶ ಕಾಲ ವಿಭಾಗಮುಮನಾಪತ್ಪ್ರತೀಕಾರಮುಮನಱಿಯದ ವಿವೇಕಿಗಳಂತೆ ದೇವರ್ ನೆಗಟಲಾಗದೇನಂ ನೆಗಟ್ವೊಡಂ ಕುರುಪಿತಾಮಹನೊಳಾಳೋಚಿಸಿ ನೆಗಟ್ವುದೆಂದು ಮುಟಿಸಾಱೆ ನುಡಿದು ಕಾಲವಂಚನೆಗೆಯ್ಯಲ್ ಬಗೆದು ಸಂಗ್ರಾಮರಂಗದೊಳಗನೆ ಮುಂದಿಟ್ಟೊಡಗೊಂಡನೇಕ ನೃಪಶಿರಃ ಕಪಾಳಶಕಳಜರ್ಜರಿತಮುಂ ಪರಸ್ಪರ ಸಮರರಭಸ ಸಮುತ್ಸಾರಿತಮುಂ ಸಕಲ ಸಾಮಂತಮಕುಟಬದ್ಧಮೌಳಿಮಾಳಾವಿಗಳಿತಮಕುಟಕೋಟಿ ಸಂಘಟ್ಟನೋಚ್ಚಳಿತ ಮಣಿಶಲಾಕಾ ಸಂಕುಳಮುಂ ಸಮರಭರ ನಿರ್ಭರ ಭೀಮಸೇನ ಘನಗದಾಪ್ರಹರಣನಿಸ್ಸಹಮದವದನೇಕ ಮತ್ತ

ಸಾಧ್ಯವಾಗಿದೆಯೆ? ನಿನ್ನ ಬಾಹುದಂಡದವರೆವಿಗೂ - ಅದಕ್ಕೆ ಸಮಾನರಾದ ಪೌರುಷಶಾಲಿಗಳು ಯುದ್ಧರಂಗದಲ್ಲಿದ್ದಾರೆಯೇ? ಶತ್ರುವನ್ನು ಕೊಲ್ಲುವ ಹಾಗೂ ಗೆಲ್ಲುವ ಹಾಗೆ ಕಾದಬೇಕು. ಸ್ವಾಮಿ; ಶತ್ರುರಾಜರುಗಳಲ್ಲಿ ಒಬ್ಬಂಟಿಗನೇ ಆಗಿ ಕಾದುತ್ತೀಯಾ? ವ|| ಎನ್ನಲು ನನ್ನನ್ನು ಏಕಾಕಿಯೆಂದು ಅಪಹಾಸ್ಯಮಾಡಿ ನುಡಿದೆಯಾ ಎಂದು ಸಂಜಯನ ಮುಖವನ್ನು ನೋಡಿ ಕೋಪಿಸಿಕೊಂಡು ೫೧. ಕಾಡಾನೆಯ ಕುಂಭಸ್ಥಳವನ್ನು ಭೇದಿಸುವುದರಲ್ಲಿ ಸಮರ್ಥವೂ ಕಠಿಣವೂ ಆದ ಉಗುರುಗಳ ಪೆಟ್ಟಿನಿಂದ ಬಿರಿದು ಅಲ್ಲಿಂದ ಸುರಿಯುತ್ತಿರುವ ಕೆಂಪಾದ ಹೊಸಮುತ್ತುಗಳ ಸಾಲುಗಳ ಶೋಭೆಯಿಂದ ಪ್ರಕಾಶಮಾನವಾದ ಮುಖವುಳ್ಳ ಮೃಗರಾಜನಾದ ಸಿಂಹವನ್ನೂ ಮದಿಸಿರುವ ಶತ್ರುಗಳನ್ನು ಸೀಳುವ ಪ್ರತಾಪದ ಸೊಕ್ಕಿನಿಂದ ಕೂಡಿದ ನನ್ನನ್ನು ಸಂಜಯಾ, ಏಕಾಕಿ ಎನ್ನುವೆಯಾ? ವ|| ಸ್ವಾಮಿಯವರ ತೋಳಿನ ಬಲವು ಜಯಿಸುವುದಕ್ಕೆ ಆಗದುದೂ ಸಹಾಯವನ್ನಪೇಕ್ಷಿಸದುದೂ ಆಗಿದೆ. ಆದರೂ ದೇಶಕಾಲವಿಭಾಗವನ್ನು ಆಪತ್ತಿಗೆ ತಿಳಿಯದಿರುವ ವಿವೇಕಶೂನ್ಯರಾದವರ ಹಾಗೆ ಸ್ವಾಮಿಯವರು ಮಾಡಕೂಡದು. ಏನು ಮಾಡಬೇಕಾದರೂ ಕುರುಪಿತಾಮಹನಾದ ಭೀಷ್ಮರಲ್ಲಿ ಆಲೋಚಿಸಿ ಮಾಡತಕ್ಕದ್ದು ಎಂದು (ದುರ್ಯೋಧನನ) ಕೋಪವು ಕಡಿಮೆಯಾಗುವ ಹಾಗೆ ಮಾತನಾಡಿ ಸಮಾಧಾನಪಡಿಸಿದನು. ಕಾಲವಂಚನೆಮಾಡಲು ಯೋಚಿಸಿ ಯುದ್ಧರಂಗದಲ್ಲಿ ಒಳಭಾಗದಲ್ಲಿಯೇ ದುರ್ಯೋಧನನನ್ನು ಮುಂದಿಟ್ಟು ಕೊಂಡು ಅವನೊಡನೆ ಅನೇಕರಾಜರ ತಲೆ ಮತ್ತು ಕಪಾಲಗಳ ತಲೆಯೋಡು ಗಳಿಂದ ಕಿಕ್ಕಿರಿದಿದ್ದು ಒಬ್ಬೊಬ್ಬರ ಯುದ್ಧರಭಸದಿಂದ ಹೊರಡಿಸಲ್ಪಟ್ಟುದೂ ಸಕಲ ಸಾಮಂತರಾಜರ ತಲೆಗಳ ಸಾಲುಗಳಿಂದ ಜಾರಿದ ಕಿರೀಟಗಳ ತುದಿಯ ತಗುಲುವಿಕೆ ಯಿಂದ ಮೇಲೆದ್ದ ರತ್ನಸಲಾಕಿಗಳ ಸಮೂಹವನ್ನುಳ್ಳುದೂ ಯುದ್ಧಭಾರವನ್ನು

**ಮಾತಂಗ ಪದನಖಖರ್ವಿತೋರ್ವೀತಳಮುಂ ಪ್ರಚಂಡಮಾರ್ತಂಡಮರೀಚಿತೀವ್ರಜ್ವಳನಾಸ್ಫಾರ ಕರಾಳಕರವಾಳಭಾಮಂಡಳಪರೀತೋದ್ಧೃತದೋರ್ದಂಡಚಂಡಪ್ರಚಂಡಸುಭಟಾರೂಢತುರಂಗಮ ವೇಗಬಲಪತಿತಖರಖುರಟಂಕಪರಿಸ್ಫಲನಕಳಿತವಿಷಮಸಮರಭೇರೀ ನಿಸ್ವನಮುಮಾಕರ್ಣಕೃಷ್ಣ ವಿಕ್ರಮಾರ್ಜುನಕಾರ್ಮುಕವಿಮುಕ್ತನಿಶಿತಸಾಯಕಸಂಕುಳಶಲ್ಯನಿಪತಿತಾನೇಕಕಳಕಳಾಕಳಿತಮುಂ ಪ್ರಕುಪಿಸೂತಹೂಂಕಾರ ಕಾತರಿತತರಳತರತುರಂಗದ್ರುತವೇಗಾಕೃಷ್ಟ ಧನಂಜಯರಥಚಟುಳ ಚಕ್ರನೇಮಿಧಾರಾಪರಿವೃತಸಂಘಟ್ಟನಸಮುಚ್ಚಳಿತ ಪಾಂಸು ಪಟಳಾಂಧಕಾರದುರ್ಲಕ್ಷ್ಯಾಂತರಿಕ್ಷ ಕ್ಷಿತಿ ದಿಗಂತರಾಳಾಂತರಮುಮನವರತನಿಹತನರಕರಿತುರಗನಿಕುರುಂಬಕೀಲಾಲಕಲ್ಲೋಲಪ್ರವರ್ತನಾನೇಕ ನದನದೀಪ್ರವಾಹಬಾಹುಳ್ಯದುಸ್ತರಾವತರಣಮಾರ್ಗಮುಂನಿಶಿತಾಸಿಪತ್ರಪತಿತಪ್ರಚಂಡ ಸುಭಟಮಸ್ತಕೋಚ್ಚಳಿತಚಟಾಚ್ಛಾಟನದುರ್ನಿರೀಕ್ಷ್ಯನರ್ತಿತಾನೇಕಕಬಂಧಬಂಧುರಮುಮಪ್ಪ ವಿಷಮ ಪ್ರದೇಶಂಗಳೊಳ್ ತೊಲಗಿ ತೊಲಗಿ ಪೋಗೆ ಸಂಜಯಂ ದುರ್ಯೋಧನನ ಮೊಗಮಂ ನೋಡಿ–**

ವಹಿಸಿರುವ ಭೀಮಸೇನನ ದೊಡ್ಡದಾದ ಗದೆಯ ಪೆಟ್ಟನ್ನು ಸಹಿಸಲಾಗದ ಮದ್ದಾನೆಗಳ ಕಾಲಿನುಗುರಿನಿಂದ ತೋಡಿದ ಭೂಭಾಗವನ್ನುಳ್ಳದೂ ಬಹಳ ಕಾಂತಿಯಿಂದ ಕೂಡಿದ ಸೂರ್ಯನ ತೀವ್ರವಾದ ಕಿರಣಗಳಂತೆಯೂ ತೀವ್ರಾಗ್ನಿಯಂತೆಯೂ ಹೊಳೆಯುವ ಭಯಂಕರವಾದ ಕತ್ತಿಗಳ ಕಾಂತಿಯ ಪರಿವೇಷದಿಂದ ಸುತ್ತುವರಿಯಲ್ಪಟ್ಟು ಎತ್ತರವಾದ ಬಾಹುಗಳಿಂದ ಪ್ರಚಂಡವಾದ ಸುಭಟರು ಹತ್ತಿರುವ ಕುದುರೆಗಳ ಸೈನ್ಯದ ವೇಗದಿಂದ ಬೀಳಿಸಲ್ಪಟ್ಟ ಹೇಸರಗತ್ತೆಗಳ ತೀಕ್ಷ್ಣವಾದ ಗೊರಸಿನ ಲಾಳಗಳ ಜಾರುವಿಕೆಯಿಂದ ಉಂಟಾದ ಶಬ್ದವುಳ್ಳದ್ದೂ ಕಿವಿಯವರೆಗೂ ಸೆಳೆಯಲ್ಪಟ್ಟ ಅರ್ಜುನನ ಬಾಣದಿಂದ ಬಿಡಲ್ಪಟ್ಟ ಹರಿತವಾದ ಬಾಣಗಳ ಶಲ್ಯದಿಂದ (ಚೂರು) ಬೀಳಿಸಲ್ಪಟ್ಟ ಅನೇಕ ಕಳಕಳಶಬ್ದಗಳಿಂದ (ಕೂಡಿದುದೂ) ತುಂಬಿದುದೂ ಕೋಪಗೊಂಡ ಸಾರಥಿಗಳ ಗರ್ಜನೆಗಳಿಂದ ಸಂಭ್ರಮಗೊಂಡ ಚಂಚಲವಾದ ಕುದುರೆಯ ಓಟದ ವೇಗದಿಂದ ಸೆಳೆಯಲ್ಪಟ್ಟ ಅರ್ಜುನನ ಬಲಿಷ್ಠವಾದ ಚಕ್ರಗಳ ಸುತ್ತಲಿರುವ ಕಬ್ಬಿಣದ ಪಟ್ಟಿಗಳು ಹೊರಳಿದ ಹೊಡೆತದಿಂದ ಮೇಲಕ್ಕೆದ್ದ ಧೂಳುಗಳ ಪದರದಿಂದ ಕಾಣಲಾಗದ ಭೂಮ್ಯಾಕಾಶ ದಿಗ್ಭಾಗಗಳ ಒಳಭಾಗವನ್ನುಳ್ಳದೂ ಯಾವಾಗಲೂ ಹೊಡೆಯಲ್ಪಟ್ಟ ಮನುಷ್ಯ, ಆನೆ, ಕುದುರೆಗಳ ಸಮೂಹದ ರಕ್ತಗಳ ಅಲೆಗಳ ಹೊರಳುವಿಕೆಯಿಂದ ಆದ ಅನೇಕ ನದನದೀಪ್ರವಾಹಗಳನ್ನು ದಾಟಲಸಾಧ್ಯವಾದ ದಾರಿಗಳನ್ನುಳ್ಳದೂ, ಹರಿತವಾದ ಕತ್ತಿಯಿಂದ ಬೀಳಿಸಲ್ಪಟ್ಟ ಭಯಂಕರವಾದ ಸುಭಟರ ತಲೆಯಿಂದ ಮೇಲಕ್ಕೆದ್ದ ಜುಟ್ಟುಗಳ ಚಲನೆಯಿಂದ ಮರೆಯಾಗಿರುವ ಅನೇಕ ಅಟ್ಟೆಗಳ ನೃತ್ಯದಿಂದ ಮನೋಹರವಾಗಿರುವುದೂ ಆಗಿರುವ ಹಳ್ಳಕೊಳ್ಳಗಳ ಪ್ರದೇಶದಲ್ಲಿ ನಡೆದು ಹೋಗುತ್ತಿರುವ ದುರ್ಯೋಧನನ ಮುಖವನ್ನು ಸಂಜಯನು ನೋಡಿ

ಚಂ॥ ಎಱಗುವನೇಕ ವಂಶ ನರಪಾಲಕರತ್ನಕಿರೀಟಕೋಟಿಯೊಳ್
ಮಿಱುಗುವ ಪದ್ಮರಾಗದ ಬಿಸಿಲ್ಗಗಿವೀ ನಿಜ ಪಾದಪದ್ಮಮೀ ।
ಯಿಱಿದು ಸಿಡಿಲ್ದ ಬಾಳ ಮೊನೆಯಂಬಿನ ತಿಂತಿಣಿಯೊಳ್ ತಗುಳ್ದು ಕಿ
ಕ್ಕಿಱಿಗಿಱಿದಿರ್ದ ಕೊಳ್ಗುಳದೊಳಂ ನಡೆವೀ ನಡೆಗೆಂತು ನೋಂತೆಯೋ ॥೫೨

ವ॥ ಎನುತುಂ ಕಿಱಿದಂತರಮಂ ಬಂದು-

ಚಂ॥ ಇವು ಪವನಾತ್ಮಜಂ ಗದೆಯಿನೆಲ್ವಡಗಾಗಿರೆ ಮೋದೆ ಮೊಟ್ಟೆ ಬಿ
ಬ್ದುವು ಮದವಾರಣಂಗಳಿವು ನೋಡ ಗುಣಾರ್ಣವನಂಬಿನಿಂದುರು ।
ಳ್ದುವು ಮನುಜೇಂದ್ರ ರುಂದ್ರ ಮಕುಟಾಳಿಗಳೋಳಿಗಳಿಂತಿವಲ್ತೆ ಗಾಂ
ಡಿವಿಯ ವರೂಥಘಾತದೊಳೆ ನುರ್ಗಿದ ತುಂಗತುರಂಗಕೋಟಿಗಳ್ ॥ ೫೩

ವ॥ ಎಂದು ನೆಣದ ಪಳ್ಳಂಗಳಂ ಪಾಯ್ದುಂ ನೆತ್ತರ ತೊಱೆಗಳಂ ಬಂಜಿಸಿಯುಮಡಗಿನಿಡುವುಗಳಂ ದಾಂಟಿಯುಂ ಪೆಣದ ತಿಂತಿಣಿಯಂ ನೂಂಕಿಯುಂ ರಥದ ಘಟ್ಟಣೆಗಳನೇಱಿ ಪಾಯ್ದುಂ ತೇರ ಪಲಗೆಯಂ ಮೆಟ್ಟಿಯುಂ ಪೋಗಿವೋಗಿ ಭೂತ ಪ್ರೇತ ಪಿಶಾಚ ನಿಶಾಚರನಿಚಯನಿಚಿತಭೂಭಾಗಮನೆಯ್ದೆ ವಂದಾಗಳ್-

ಉ॥ ಬೇಡ ವಿರೋಧಮೆಂತುಮರಿಕೇಸರಿಯೊಳ್ ಸಮಸಂದು ಸಂಧಿಯಂ
ಮಾಡೆನೆ ಮಾಡಲೊಲ್ಲದೆ ಸುಹೃದ್ಬಲಮೆಲ್ಲಮನಿಕ್ಕಿ ಯುದ್ಧಮಂ ।
ಮಾಡಿದ ಜಾತಿಬೆಳ್ ನಿನಗದೇವಿರಿದೀಯೆಡಱಿಂದು ಮುಂದೆ ಬಂ
ದೇಡಿಸುವಂತಿರಾಡಿದುದದೊಂದು ಮರುಳ್ ಫಣಿರಾಜಕೇತುವಂ ॥ ೫೪

೫೨. ನಮಸ್ಕಾರಮಾಡುವ ಅನೇಕ ಮನೆತನಗಳ ರಾಜರ ಕಿರೀಟದ ತುದಿಯಲ್ಲಿ ಪ್ರಕಾಶಿಸುತ್ತಿರುವ ಪದ್ಮರಾಗದ ಕಾಂತಿಗೂ ರತ್ನಗಳ ಪ್ರಕಾಶಕ್ಕೂ ಅಂಜುತ್ತಿದ್ದ ಈ ನಿನ್ನ ಪಾದಕಮಲಗಳು ಈಗತಾನೇ ಕತ್ತರಿಸಲ್ಪಟ್ಟು ಸಿಡಿದು ಬಿದ್ದಿರುವ ಮೊನಚಾದ ಬಾಣಗಳ ಸಮೂಹದಲ್ಲಿ ಸೇರಿಕೊಂಡು ಒತ್ತಾಗಿ ಸೇರಿರುವ ಯುದ್ಧರಂಗದಲ್ಲಿಯೂ ನಡೆಯುವ ಈ ನಡೆಗೆ ಎಷ್ಟು ವ್ರತಮಾಡಿದ್ದೆಯೋ?- ವ॥ ಎನ್ನುತ್ತ ಸ್ವಲ್ಪದೂರ ಬಂದು ೫೩. ಇವು ಭೀಮನು ಗದೆಯಿಂದ ಮೂಳೆ ಮಾಂಸಗಳಾಗುವಂತೆ ಹೊಡೆಯಲು ಕುಸಿದು ಬಿದ್ದ ಮದ್ದಾನೆಗಳು. ಇವು ನೋಡಪ್ಪ, ಅರ್ಜುನನ ಬಾಣದಿಂದ ಉರುಳಿಬಿದ್ದ ರಾಜರ ರಾಶಿಯಾದ ಕಿರೀಟಗಳ ಸಮೂಹಗಳು. ಇವು ಅರ್ಜುನನ ತೇರಿನ ಪೆಟ್ಟಿನಿಂದ ಜಜ್ಜಿಹೋದ ಎತ್ತರವಾದ ಕುದುರೆಗಳ ಸಮೂಹಗಳು ವ॥ ಎಂಬುವಾಗಿ ಕೊಬ್ಬುಗಳ ಹಳ್ಳವನ್ನು ಹಾಯ್ದೂ ರಕ್ತಪ್ರವಾಹಗಳನ್ನು ತಪ್ಪಿಸಿಯೂ ಮಾಂಸದ ರಾಶಿಗಳನ್ನು ದಾಟಿಯೂ ನರಗಳ ಸಮೂಹವನ್ನು ತಳ್ಳಿಯೂ ತೇರಿನ ಸಂಘಟ್ಟಣೆಗಳಿಂದಾದ ದಿಣ್ಣೆಹಳ್ಳಗಳನ್ನು ಹತ್ತಿ ಇಳಿದೂ ತೇರಿನ ಹಲಗೆಗಳನ್ನು ತುಳಿದೂ ನಡೆದು ಹೋಗಿ ಭೂತಪ್ರೇತಪಿಶಾಚರಾಕ್ಷಸಸಮೂಹದಿಂದ ತುಂಬಿದ ಪ್ರದೇಶವನ್ನು ಸೇರಿದರು. ೫೪. ಅರಿಕೇಸರಿಯಲ್ಲಿ ಹೇಗೂ ವಿರೋಧವು ಬೇಡ, ಸಮಾನವಾಗಿ ಕೂಡಿ ಸಂಧಿಯನ್ನು ಮಾಡು ಎಂದರೂ ಒಪ್ಪದೆ ಸ್ನೇಹಿತರನ್ನು ನಾಶಮಾಡಿ ಯುದ್ಧವನ್ನು ಮಾಡಿದ ಜಾತಿಮರುಳಾದ ನಿನಗೆ ಈ ಕಷ್ಟಗಳು ಏನು ದೊಡ್ಡದು ಎಂದು ಮುಂದೆ

ಚಂ॥ ಮರುಳಿನೆ ಲೋಕದೊಳ್ ನೆಗಟ್ದು ಕೊಳ್ಗುಳದೊಳ್ ಮರುಳಾಟವಾಡುವಾಂ-
ಮರುಳೆನೊ ವಿಕ್ರಮಾರ್ಜುನನೊಳೊಲ್ಲದೆ ಸಂಧಿಯನುರ್ಕಿ ಕೆಟ್ಟ ನೀಂ ।
ಮರುಳಯೊ ಪೇಟ ಪೇಟದೊಡೆ ಪೋಗದಿರೀಶ್ವರನಾಣೆಯೆಂದು ಪು
ಲ್ಮರುಳಿನಿಸಾನುಮಂ ತೆಗೆದು ಕಾಡಿದುದಲ್ಲಿ ಫಣೀಂದ್ರಕೇತುವಂ ॥ ೫೫

ವ॥ ಆಗಳಾ ಮರುಳ ಕೆಯ್ತಕ್ಕೆ ದುರ್ಯೋಧನಂ ಮುಗುಳ್ನಗೆ ನಕ್ಕೆನ್ನಂ ವಿಧಾತ್ರಂ ಮರುಳ್ಮಾಡಿದ ಕಾರಣದಿಂದೀ ಮರುಳ ಕಣ್ಗಾಂ ಮರುಳಾಗಿ ತೋಱಿದೆನೆಂದಲ್ಲಿಂ ತಳರ್ದು ಕಿಱಿದಂತರಮಂ ನಡೆದೊಂದೆಡೆಯೊಳನೇಕ ಕರಿ ತುರಗ ನರ ಕಳೇವರ ಸಂಕೀರ್ಣಮುಮುಭಯ ಪಕ್ಷಸ್ಥಿತೋಭಯಕುಲಶುದ್ಧನೃಪತಿಮಣಿಮಕುಟಮರೀಚಿಮೇಚಕಿತಮುಮಪ್ಪ ಸಂಗ್ರಾಮಭೂಮಿಯ ನಡುವೆ ಧೃಷ್ಟದ್ಯುಮ್ನಕಚಗ್ರಹವಿಲುಳಿತಮೌಳಿಯುಂ ತದೀಯ ಕೌಕ್ಷೇಯಕಧಾರಾವಿದಾರಿತ ಶರೀರನುಮಾಗಿ ಬಿರ್ದ್ದಿರ್ದ ಶರಾಚಾರ್ಯರಂ ಕಂಡು-

ಚಂ॥ ನೆಗಟ್ದುದು ಬಿಲ್ಲ ಬಿನ್ನಣಮಿಳಾವಳಯಕ್ಕೆ ಸಮಸ್ತ ಧಾತ್ರಿ ಕೆ
ಯ್ಮುಗಿವುದು ನಿಮ್ಮದೊಂದೆ ಪೆಸರ್ಗೇಳ್ದೊಡೆ ನಿಮ್ಮ ಸರಲ್ಗೆ ದೇವರುಂ ।
ಸುಗಿವರಯೋನಿಸಂಭವರಿರೆನ್ನಯ ದೂಸಱಿನೆನ್ನ ಕರ್ಮದಿಂ
ಪಗೆವರಿನಕ್ಕಟಾ ನಿಮಗಮಿಾಯಿರವಾದುದೆ ಕುಂಭಸಂಭವಾ ॥ ೫೬

ಬಂದು ದುರ್ಯೋಧನನನ್ನು ಅಪಹಾಸ್ಯಮಾಡುವಂತೆ ಒಂದು ಮರುಳು ಮಾತನಾಡಿತು. ೫೫. ಲೋಕದಲ್ಲಿ ಮರುಳುಗಳು ಎನ್ನಿಸಿಕೊಂಡು ಪ್ರಸಿದ್ಧರಾಗಿ ಯುದ್ಧರಂಗದಲ್ಲಿ ಮರುಳುಗಳ ಆಟವನ್ನಾಡುವ ನಾವುಗಳು ಮರುಳುಗಳೋ (ಬುದ್ಧಿಗೇಡಿಗಳೋ) ವಿಕ್ರಮಾರ್ಜುನನಲ್ಲಿ ಸಂಧಿಯನ್ನೊಲ್ಲದೆ ಉಬ್ಬಿ ಕೆಟ್ಟ ನೀನು ದಡ್ಡನೋ ಹೇಳು. ಹೇಳದಿದ್ದರೆ ಹೋಗಬೇಡ; ಈಶ್ವರನಾಣೆ ಎಂದು ಹುಲ್ಲಿನಂತೆ ಬಹು ಲಘುವಾದ ಒಂದು ಮರುಳು ಒಂದಿಷ್ಟು ತಡೆದು ದುರ್ಯೋಧನನನ್ನು ಹಿಂಸೆ ಮಾಡಿತು. ವ॥ ಆಗ ಆ ಪಿಶಾಚಿಯ ಕೆಲಸಕ್ಕೆ ದುರ್ಯೋಧನನು ಮುಗುಳ್ನಗೆ ನಕ್ಕು ನನ್ನನ್ನು ಬ್ರಹ್ಮನು ಮರುಳುಮಾಡಿದ ಕಾರಣದಿಂದ ಈ ಪಿಶಾಚದ ಕಣ್ಣಿಗೆ ನಾನು ಹುಚ್ಚನಾಗಿ ತೋರಿದೆನು ಎಂದು ಅಲ್ಲಿಂದ ಹೊರಟು ಸ್ವಲ್ಪ ದೂರ ನಡೆದು ಒಂದು ಕಡೆಯಲ್ಲಿ ಅನೇಕ ಆನೆ, ಕುದುರೆ ಮನುಷ್ಯರ ದೇಹಗಳಿಂದ ತುಂಬಿದುದೂ ಎರಡು ವಂಶದ ಪಕ್ಷಗಳಲ್ಲಿಯೂ (ತಂದೆತಾಯಿಗಳ ಎರಡು ಕುಲದಲ್ಲಿಯೂ) ಶುದ್ಧರಾದವರ ರತ್ನಕಿರೀಟಗಳ ಕಾಂತಿಯಿಂದ ಕೂಡಿಕೊಂಡಿರುವ ಆ ಯುದ್ಧಭೂಮಿಯ ಮಧ್ಯಭಾಗದಲ್ಲಿ ಧೃಷ್ಟದ್ಯುಮ್ನನು ಜುಟ್ಟನ್ನು ಹಿಡಿದುದರಿಂದ ತಿರುಗಿಕೊಂಡಿರುವ ತಲೆಯುಳ್ಳವನೂ ಅವನ ಕತ್ತಿಯ ಅಲಗುಗಳಿಂದ ಸೀಳಲ್ಪಟ್ಟ ಶರೀರವುಳ್ಳವನೂ ಆಗಿ ಬಿದ್ದಿದ್ದ ದ್ರೋಣಾಚಾರ್ಯನನ್ನು ನೋಡಿದನು. ೫೬. ನಿಮ್ಮ ಚಾಪವಿದ್ಯಾಕೌಶಲವು ಭೂಮಂಡಲದಲ್ಲೆಲ್ಲ ಪ್ರಸಿದ್ಧವಾದುದು. ನಿಮ್ಮ ಒಂದು ಹೆಸರನ್ನು ಕೇಳಿದರೆ ಸಮಸ್ತ ಲೋಕವೂ ಕೈಮುಗಿಯುವುದು. ನಿಮ್ಮ ಬಾಣಗಳಿಗೆ ದೇವತೆಗಳೂ ಭಯಪಡುವರು. ನೀವು ಅಯೋನಿಜರಾಗಿದ್ದೀರಿ; ನನ್ನ ಕಾರಣದಿಂದ ನನ್ನ ದುಷ್ಕರ್ಮದಿಂದ ಅಯ್ಯೋ ದ್ರೋಣಾಚಾರ್ಯರೇ ಶತ್ರುಗಳಿಂದ ನಿಮಗೂ ಈ ದುಃಸ್ಥಿತಿಯುಂಟಾಯಿತೇ?

ವ॥ ಎಂದು ಗುರುವಿನ ಪಾದಕಮಲಂಗಳಂ ತಲೆಯ ಮೇಲಿಟ್ಟು ಪೊಡೆವಟ್ಟಂತೆ ನಡೆತಂದು ವೃಕೋದರನಿಂ ನಿಶ್ಶೇಷ ಪೀತರುಧಿರನಪ್ಪ ದುಶ್ಶಾಸನನಂ ಕಂಡಾತನಂ ಮುತ್ತಿ ಸುತ್ತಿಱಿದ ಮುದುವರ್ದುಗಳುಮನಗಲೆ ಮೆಟ್ಟಿ ಪೋಲ್ಟು ಭೀಮಸೇನಂ ಮುನ್ನಂ ಕುಡಿದುದಱಿಂ ನೆತ್ತರಂ ಪಡೆಯದಾಕಾಶಕ್ಕೆ ಬಾಯಂ ತೆಱೆದೂಳ್ವ ಬಳ್ಳುಗಳುಮಂ ನರವುಮಂ ಬರಿಯುಮಂ ಪತ್ತಿ ತೆಗೆದು ಪೆಡಸಾರ್ವ ನರಿಗಳುಮಂ ತಾನೆ ಸೋದು ಸೋದರನಬಿಲೊಳ್ ಕಣ್ಣ ನೀರ್ಗಳಂ ಸುರಿದು-

ಕಂ॥ ನಿನ್ನಂ ಕೊಂದನ ಬಸಿಱಿಂ
ನಿನ್ನಂ ತೆಗೆಯದೆಯುಮವನ ಕರುಳಂ ಪರ್ದಿಂ ।
ಮುನ್ನುಂಗಿಸಿ ನೋಡದೆಯುಂ
ಮುನ್ನಮೆ ಯುವರಾಜ ನಿನ್ನನಾಂ ನೋಡಿದೆನೇ ॥ ೫೭

ವ॥ ಎಂಬುದುಂ ಸಂಜಯನಿಂತಪ್ಪ ವಿಪ್ರಳಾಪಂಗಳ್ ಶೌರ್ಯಶಾಲಿಗಳ್ಗನುಚಿತ ಮತ್ತಮೆಟ್ಟರ್ಪುದೆಂದು ತಳರ್ದು ಬಂದಮೋಘಾಸ್ತ್ರ ಧನಂಜಯ ಕರಪರಿಚ್ಯುತವಿಕರ್ಣ ವಿಶೀರ್ಣನಾಗಿರ್ದ ಕರ್ಣಸೂನುವಂ ವೃಷಸೇನನಂ ಕಂಡು ಕರ್ಣನಂ ನೆನೆದೆರ್ದೆದೆಱೆದು ದುರ್ಯೋಧನನ ಕೆಳೆಯನಪ್ಪ ನಿಮ್ಮಮ್ಮಂ ಕರ್ಣನೆಲ್ಲಿದನೆಂದು ತೆಕ್ಕನೆ ತೀವಿದ ಕಣ್ಣ ನೀರೊಳ್ ದೆಸೆಗಾಣದೆ ನಿಂದಿರ್ದ ಸುಯೋಧನನಂ ಸಂಜಯನಿಂತೆಂದಂ-

ವ॥ ಎಂದು ಗುರುವಿನ ಪಾದಕಮಲಗಳನ್ನು ತಲೆಯ ಮೇಲಿಟ್ಟು ನಮಸ್ಕಾರಮಾಡಿ ಹಾಗೆಯೇ ಮುಂದೆ ನಡೆದು ಬಂದು ಭೀಮಸೇನನಿಂದ ಸ್ವಲ್ಪವೂ ಉಳಿಯದಂತೆ ಕುಡಿಯಲ್ಪಟ್ಟ ರಕ್ತವನ್ನುಳ್ಳ ದುಶ್ಶಾಸನನನ್ನು ನೋಡಿ ಮುತ್ತಿ ಬಳಸಿಕೊಂಡಿದ್ದ ಮುದಿಹದ್ದುಗಳನ್ನು ಬಿಟ್ಟು ದೂರಹೋಗುವಂತೆ ಕಾಲಿನಿಂದ ಶಬ್ದಮಾಡಿ ಸೀಳಿ ಭೀಮನು ಮೊದಲೇ ಕುಡಿದುಬಿಟ್ಟಿದ್ದುದರಿಂದ ರಕ್ತವನ್ನು ಪಡೆಯದೆ ಆಕಾಶದ ಕಡೆ ಬಾಯಿಬಿಟ್ಟು ಕೂಗುತ್ತಿರುವ ಗುಳ್ಳೆನರಿಗಳನ್ನೂ ನರಗಳನ್ನೂ ಪಕ್ಕಗಳನ್ನೂ ಕಿತ್ತೆಳೆದು ಓಂದಕ್ಕೆ ಹೋಗುವ ನರಿಗಳನ್ನೂ ತಾನೇ ಅಟ್ಟಿ ತಮ್ಮನ ದುಃಖದಿಂದ ಕಣ್ಣೀರನ್ನು ಸುರಿಸಿದನು. ೫೭. ನಿನ್ನನ್ನು ಕೊಂದವನ ಹೊಟ್ಟೆಯಿಂದ ನಿನ್ನನ್ನು ತೆಗೆಯದೆಯೂ ಅವನ ಕರುಳನ್ನು ಹದ್ದಿಗೆ ಮೊದಲು ನುಂಗಿಸಿ ನೋಡದೆಯೂ ಅದಕ್ಕೆ ಮುಂಚೆಯೇ ಯುವರಾಜನಾದ ದುಶ್ಶಾಸನನೇ ನಿನ್ನನ್ನು ನಾನು ನೋಡಿದೆನೇ? ವ॥ ಸಂಜಯನು ಇಂತಹ ವಿಶೇಷವಾದ ಅಳುವಿಕೆಯು ಶೌರ್ಯಶಾಲಿಗಳಿಗೆ ಯೋಗ್ಯವಲ್ಲ. ಆ ಕಡೆ ಬರಬೇಕು ಎಂದು ಹೇಳಲು ಅಲ್ಲಿಂದ ಹೊರಟುಬಂದು ಅಮೋಘಾಸ್ತ್ರಧನಂಜಯನಾದ ಅರ್ಜುನನ ಕಯ್ಯಿಂದ ಬಿಡಲ್ಪಟ್ಟ ಬಾಣದಿಂದ ಸೀಳಲ್ಪಟ್ಟಿದ ಕರ್ಣನ ಮಗನಾದ ವೃಷಸೇನನನ್ನು ನೋಡಿ ಕರ್ಣನನ್ನು ಜ್ಞಾಪಿಸಿಕೊಂಡು ಎದೆಬಿರಿದು 'ದುರ್ಯೋಧನನ ಸ್ನೇಹಿತನಾದ ನಿಮ್ಮ ತಂದೆ ಕರ್ಣನೆಲ್ಲಿದ್ದಾನೆ ಎಂದು ಥಟಕ್ಕನೆ ತುಂಬಿದ ಕಣ್ಣೀರಿನಿಂದ ದಿಕ್ಕು ಕಾಣದೆ ನಿಂತಿದ್ದ ದುರ್ಯೋಧನನನ್ನು ಕುರಿತು ಸಂಜಯನು ಹೀಗೆಂದನು-

ಚಂ॥ ನರಶರಘಾತದಿಂ ಪಱಿದು ಪತ್ತಿಸಿದಂತೆವೊಲಿರ್ದ ಮೆಯ್ ಭಯಂ
ಕರತರಮಾಗೆ ಮುಯ್ಯುವರೆಗಂ ತೆಗೆದಂಬಿನ ಮುಷ್ಟಿ ಬಿನ್ನಣಂ ।
ಬೆರಸಿರೆ ಪೋದ ಪಂದಲೆಯೊಳಾದ ಮುಗುಳ್ನಗೆ ಭೀತರಾದರೆ
ಲ್ಲರುಮನಳುರ್ಕೆಯಿಂ ನಗುವವೋಲ್ ರವಿನಂದನನಿತ್ತಲಿರ್ದಪಂ ॥ ೫೮

ವ॥ ಎಂಬುದುಮಾಗಳ್ ತೆಪ್ಪತ್ತುಮೆಲ್ಲಿದನೆತ್ತಣನೆಂದು ಕರ್ಣನ ಕಳೇವರಮಂ ನೋಡಿ ನೋಡಲಾಱದೆ ಕಣ್ಗಳಂ ಮುಚ್ಚಿ ಮೂರ್ಛೆವೋಗಲ್ ಬಗೆದನಂ ಸಂಜಯ ತಬ್ಬಿಸಿಕೊಂಡಾಗಳ್ ಚೇತರಿಸಿ ಕೂರ್ಮೆ ಕೆಯ್ಮಿಕ್ಕು ಬರೆ ಸೈರಿಸಲಾಱದೆ-

ಚಂ॥ ಬೆಸನೆಡೆಗಳ್ಗೆ ತೊಟ್ಟುಬೆಸನಂಗಳವುಂಕಿದೊಡಾಗದೆಂದು ಬ
ಗ್ಗಿಸುವೆಡೆಗಾಳ್ದನಿಂತು ನೆಗೞೆಂಬೆಡೆಯೊಳ್ ಗುರು ಪೆರ್ಚಿದೊಂದು ಬೇ ।
ವಸದೆಡೆಗಾಶ್ರಯಂ ಮನಮನೊಪ್ಪಿಸುವೀಯೆಡೆಯೊಳ್ ಮನಂ ವಿಚಾ
ರಿಸುವೊಡೆ ಕರ್ಣನಲ್ಲದೆನಗಾವೆಡೆಗಂ ಪೆಱನೊರ್ವನಾವನೋ ॥ ೫೯

ಮ॥ ನೆಲನಂ ಕೊಟ್ಟನಿನಾತ್ಮಜಾತನೆನಗಾಂ ತಕ್ಕೂರ್ಮೆಯಿಂದಂ ಜಳಾಂ
ಜಲಿಯಂ ಕೊಟ್ಟೆನುಮಿಲ್ಲ ಸೂರ್ಯತನಯಂ ತೇಜೋಗ್ನಿಯಿಂದಂ ದ್ವಿಷ ।
ದ್ಬಲಮಂ ಸುಟ್ಟನುದಾತ್ತಪುಣ್ಯನವನಂ ಚೈತಾಗ್ನಿಯಿಂ ಸುಟ್ಟೆನಿ
ಲ್ಲೊಲವಿಂದಿಂತೆರ್ದೆಮುಟ್ಟೆ ಕೂರ್ತನೊಳನೇ ಕರ್ಣಂಗೆ ದುರ್ಯೋಧನಂ ॥ ೬೦

೫೮. ಅರ್ಜುನನ ಬಾಣದ ಪೆಟ್ಟಿನಿಂದ ಹರಿದು ಹಂಚಿದ ಹಾಗಿರುವ ಶರೀರ, ಅತ್ಯಂತ ಭಯಂಕರವಾಗಿರಲು ಹೆಗಲ ತುದಿಯವರೆಗೂ ಸೆಳೆದ ಬಾಣ ಹಿಡಿದ ಮುಷ್ಟಿ, ಕೌಶಲದಿಂದ ಕೂಡಿರಲು ಕತ್ತರಿಸಿಹೋದ ಹಸಿಯ ತಲೆಯಲ್ಲಿ ಕಾಣಿಸುತ್ತಿರುವ ಮುಗುಳ್ನಗೆ, ಇವುಗಳಿಂದ ಕೂಡಿ ಹೆದರಿ ಕೊಂಡಿರುವವರನ್ನೆಲ್ಲ ಅತಿಶಯವಾದ ರೀತಿಯಲ್ಲಿ ನಗುತ್ತಿರುವ ಹಾಗೆ ಸೂರ್ಯಪುತ್ರನಾದ ಕರ್ಣನು ಈ ಕಡೆ ಇದ್ದಾನೆ. ವ॥ ಎನ್ನಲು ಆಗಲೆ ಚೇತರಿಸಿಕೊಂಡು ಎಲ್ಲಿದ್ದಾನೆ ಯಾವ ಕಡೆ ಎಂದು ಕರ್ಣನ ಶರೀರವನ್ನು ನೋಡಿ ನೋಡಲಾರದೆ ಕಣ್ಣುಗಳನ್ನು ಮುಚ್ಚಿಕೊಂಡು ಮೂರ್ಛಿತನಾದವನನ್ನು ಸಂಜಯನು ತಬ್ಬಿಕೊಳ್ಳಲು ಚೇತರಿಸಿಕೊಂಡು ಪ್ರೀತಿಯು (ಸ್ನೇಹವು) ಕೈಮೀರಿ ಬರುತ್ತಿರಲು ಅದನ್ನು ಸೈರಿಸಲಾರದವನಾದನು. ೫೯. ಕಾರ್ಯಮಾಡುವ ಸಂದರ್ಭದಲ್ಲಿ ಸೇವಕನಂತೆಯೂ ವ್ಯಸನಗಳು ಮೇಲೆ ಮೇಲೆ ಒತ್ತಿ ಬರುತ್ತಿರಲು ಇದಾಗುವುದಿಲ್ಲ ಎಂದು ಬೆದರಿಸುವ ಸಮಯದಲ್ಲಿ ಯಜಮಾನನಂತೆಯೂ (ಸ್ವಾಮಿ-ಒಡೆಯ) ಹೀಗೆ ಮಾಡು ಎನ್ನುವ ಸಮಯದಲ್ಲಿ ಗುರುವಿನಂತೆಯೂ; ಅಧಿಕವಾದ ವ್ಯಥೆಯುಂಟಾದಾಗ ಅವಲಂಬನದಂತೆಯೂ ಮನಸ್ಸನ್ನೊಪ್ಪಿಸುವ ಸಂದರ್ಭದಲ್ಲಿ ಮನಸ್ಸೇ ಆಗಿಯೂ ಇದ್ದಂಥ ಕರ್ಣನನ್ನು ಬಿಟ್ಟು ನನಗೆ ಎಲ್ಲ ಸಮಯಕ್ಕೂ ಸಹಾಯಕನಾಗುವ ಮತ್ತೊಬ್ಬನಾವನಿದ್ದಾನೆ? ೬೦. ಕರ್ಣನು ನನಗೆ (ಭೂಮಿಯನ್ನು) ರಾಜ್ಯವನ್ನೇ ಸಂಪಾದಿಸಿ ಕೊಟ್ಟನು. ನಾನು ಅದಕ್ಕನುಗುಣವಾಗಿ ಪ್ರೀತಿಯಿಂದ ಅವನಿಗೆ ತರ್ಪಣವನ್ನು ಕೊಟ್ಟಿಲ್ಲ. ಸೂರ್ಯನ ಮಗನಾದ ಕರ್ಣನು ತನ್ನ ತೇಜಸ್ಸೆಂಬ ಅಗ್ನಿಯಿಂದ ವೈರಿಸೈನ್ಯವನ್ನು ಸುಟ್ಟನು. ಬಹಳ ಪುಣ್ಯಶಾಲಿಯಾದ

ವ॥ ಎಂದು ನೊಂದು ನುಡಿದ ದುರ್ಯೋಧನನಂ ಸಂಜಯನಿಂತೆಂದಂ-

ಶಾ॥ ಕೊಟ್ಟೈ ಕಿರ್ಚನುದಗ್ರಶೋಕಶಿಖಿಯಿಂ ಕಣ್ಣೀರ್ಗಳಿಂದೆಯ್ದೆ ನೀ
ಗೊರ್ಟ್ಟೈ ಸೂರ್ಯಸುತಂಗೆ ಲೌಕಿಕಮನೇನಿಂ ದಾಂಟಿದ್ದೈ ಪೋೞ್ದು ಸೀ ।
ಳ್ಕೊಟ್ಟಂ ವೈರಿಯನೊಡ್ಡಿ ತತ್ಪಿಶಿತದಿಂದಾತಂಗೆ ನೀಂ ಕೂರ್ಪೊಡೇ
ಗೆಟ್ಟತ್ತಿನ್ನಡೆ ಮಾಡು ತದ್ದ್ವಿಜಗಣಕ್ಕಾಹಾರಮಂ ಭೂಪತೀ ॥ ೬೧

ವ॥ ಎಂದು ಪೆರ್ಚಿದ ಶೋಕರಸಮಂ ಕೋಪರಸದ ಮೇಲಿಕ್ಕಿ ಭೀಷ್ಮಂ ಶರಶಯನ ತಳವಿಗತನಾಗಿರ್ದಲ್ಲಿವರಮೆಂತಾನುಮೊಡಗೊಂಡು ಬಂದಾಗಳ್-

ಚಂ॥ ಇಡಿದಿರೆ ರೋಮ ಕೂಪದೊಳಗುರ್ಚಿದ ಸಾಲ ಸರಲ್ಗಳುಂ ತೆಱಂ
ಬಡಿದರೆ ಬೆಟ್ಟುವೋಗುರ್ಡಿಸಿದಂತೆ ನೆಱಿಲ್ದಿರೆ ಸುಯ್ಯ ಪುಣ್ಗಳಿಂ ।
ಬಡನಡುವಂ ಶರಾಳಿಭಯದಿಂ ನಡುಪಂತಿರೆ ಚಿತ್ತದೊಳ್ ಮೃಡಂ
ತೊಡರ್ದಿರೆ ಬಿಬ್ದಿದೇನೆಸೆದನೋ ಶರಶಯ್ಯೆಯೊಳಂದು ಸಿಂಧುಜಂ ॥ ೬೨

ಹರನೊಳೆ ಪತ್ತಿ ತೆತ್ತಿಸಿದ ಚಿತ್ತಮನಿರ್ಬಗಿಯಾಗೆ ಮೋಹಮೊ
ತ್ತರಿಸೆ ಸುಯೋಧನಂಗೆ ರಣಭೂಮಿಯೊಳಿಂತುಟವಸ್ಥೆಯೋ ಕಸ ।
ಲ್ದುರಿದಪುದೆನ್ನ ಮೆಯ್ಯೆನುತುಮತ್ತಣ ಪಂಬಲ ಬಂಬಲೊಳ್ ತೆಱಂ
ದಿರಿದುದು ಚಿತ್ತಮಾ ದೊರೆಯ ಯೋಗಿಗಮಿಂತುಂಟೆ ಮೋಹಮಾಗದೇ ॥೬೩

ಅವನನ್ನು ಚಿತೆಯ ಬೆಂಕಿಯಿಂದ ಸುಟ್ಟಿಲ್ಲ; ಹೀಗೆ ಕರ್ಣನಲ್ಲಿ ಎದೆಸೋಂಕಿ ಪ್ರೀತಿಯಿಂದ ಇರುವವನು ದುರ್ಯೋಧನನ ಹಾಗೆ ಬೇರೆಯಾದವನು ಉಂಟೆ? ವ॥ ಎಂದು ದುಃಖಿಸಿ ಆಡಿದ ದುರ್ಯೋಧನನಿಗೆ ಸಂಜಯನು ಹೀಗೆ ಹೇಳಿದನು - ೬೧. ತೀವ್ರವಾದ ಶೋಕಾಗ್ನಿಯಿಂದ ಚಿತಾಗ್ನಿಯನ್ನು ಕೊಟ್ಟಿದ್ದೀಯೆ. ಕಣ್ಣೀರುಗಳಿಂದ ಸಂಪೂರ್ಣವಾಗಿ ತರ್ಪಣವನ್ನು ಕೊಟ್ಟಿದ್ದೀಯೆ. ಲೋಕವ್ಯವಹಾರದಲ್ಲಿ ಏನನ್ನು ದಾಟಿದ್ದೀಯೆ? ಶತ್ರುವನ್ನು ಹೋಳುಮಾಡಿ ಸೀಳಿ ರಾಶಿಹಾಕಿ ಆ ಮಾಂಸದಿಂದ-ಕರ್ಣನನ್ನು ನೀನು ಪ್ರೀತಿಸುವುದಾದರೆ ಆ ಪಕ್ಷಿಸಮೂಹಕ್ಕೆ (ಹದ್ದುಗಳಿಗೆ) ಆಹಾರವನ್ನು ಮಾಡು. ನಷ್ಟವಾದುದೇನು? ಇನ್ನು ಮುಂದೆ ನಡೆ. ವ॥ ಎಂದು ಹೇಳಿ ಹೆಚ್ಚಾದ ಶೋಕರಸವನ್ನೂ ಮೀರಿ ಕೋಪರಸವು ಹೆಚ್ಚುತ್ತಿರಲು ಭೀಷ್ಮನು ಬಾಣದ ಹಾಸಿಗೆಯಲ್ಲಿ ಮಲಗಿದ್ದ ಸ್ಥಳದವರೆಗೆ ಹೇಗೋ ಜೊತೆಯಲ್ಲಿ ಕರೆದುಕೊಂಡು ಹೋದನು. ೬೨. ಕೂದಲಿನ ಒಂದೊಂದು ಹಳ್ಳ(ಕುಳಿ)ಗಳಲ್ಲಿಯೂ ಸಾಲವೃಕ್ಷದಿಂದ ಮಾಡಿದ ಬಾಣಗಳು ನಾಟಿಕೊಂಡು ದಟ್ಟವಾಗಿ ತುಂಬಿರಲು ನಾನಾರೀತಿಯಾಗಿ ಪರ್ವತಗಳುರುಳಿದಂತೆ ಬಿದ್ದು ನಿಶ್ಚೇಷ್ಟನಾಗಿ ಸ್ಪಂದನವಾಗುತ್ತಿರುವ (ದುಡಿಯುತ್ತಿರುವ) ಹುಣ್ಣುಗಳಿಂದಲೂ ಬಾಣಗಳ ನೋವಿನಿಂದಲೂ ಬಡವಾಗಿರುವ ಸೊಂಟವನ್ನು ನಡುಗಿಸುತ್ತ ಮನಸ್ಸಿನಲ್ಲಿ ಶಿವನನ್ನು ಧ್ಯಾನಿಸುತ್ತ ಭೀಷ್ಮನು ಬಾಣದ ಹಾಸಿಗೆಯಲ್ಲಿ ಮಲಗಿ ಅತ್ಯಂತ ಶೋಭಾಯಮಾನನಾಗಿದ್ದನು. ೬೩. ಈಶ್ವರನಲ್ಲಿ ಸೇರಿಕೊಂಡಂತಿದ್ದ ಮನಸ್ಸನ್ನು ಮೋಹವು ಎರಡು ಭಾಗವಾಗಿ ಮಾಡಲು ದುರ್ಯೋಧನನಿಗೆ ಯುದ್ಧ ರಂಗದಲ್ಲಿ ಇಂತಹ ಅವಸ್ಥೆಯಾಯಿತೇ! ನನ್ನ ಶರೀರವು ಕೆಂಡದಂತೆ ಹೊಳೆದು

ವ|| ಎಂಬನ್ನೆಗಮವರಿರ್ವರ ಕಾಲ ಸೊಪ್ಪುಳನಾಲಿಸಿ ಸುರನದೀನಂದನಂ ಪೇಱಿಮಾ ಬಂದರಾರೆಂದನೇಕ ವ್ರಣವೇದನಾಪರವಶಶರೀರಂ ಬೆಸಗೊಳ್ವುದುಂ ಸಂಜಯಂ ಕುರುಪಿತಾಮಹನ ಕರ್ಣೋಪಾಂತಮಂ ಸಾರ್ದು ಕುರುಕುಳಗಗನಮೃಗಧರಂ ಬಂದನೆಂದು ಬಿನ್ನಪಂಗೆಯ್ವುದುಂ ಯೋಗಾಭ್ಯಾಸದೊಳರೆಮುಗುಳ್ದ ರಕ್ತಾಂಭೋಜದಳ ವಿಳಾಸೋಪಹಾಸಿಗಳಪ್ಪ ಕಣ್ಗಳನೊತ್ತಂಬದಿಂ ತೆಱೆದು-

ಚಂ|| ಎಱಗಿದ ಕೌರವೇಶ್ವರನೊಳಾದಮಿದಿರ್ಚಿದಲಂಪೆಲರ್ಚಿದ
ಟ್ಟಱಿನೊಳಕೊಳ್ವಿನಂ ಪರಸಿ ಮೆಯ್ಯೊಳೆ ಬಂದ ತೆಱಕ್ಕೆ ಮೆಯ್ ಕರಂ ।
ಮಱುಗಿಪುದಿಂತು ಪೇೞ್ ಮಗನೆ ಬೆಳ್ಗೊಡೆಯೆಲ್ಲಿದುದೆತ್ತ ಪೋಯ್ತು ಸು
ತ್ತಿಱಿದ ಚತುರ್ಬಲಂ ನಿನಗಮಿಾಯಿರವಾದುದೆ ವೈರಿಭೂಪರಿಂ ॥ ೬೪

ವ|| ಎಂದು ಕಣ್ಣ ನೀರಂ ನೆಗಪಿ ನಿನ್ನ ಬಂದ ಬರವೇ ಸಮರವೃತ್ತಾಂತಮನಱಿಪಿದಪ್ಪುದಿಂ ನಿನ್ನ ಗೆಯ್ವ ನಿಯೋಗಮಾವುದೇಗೆಯ್ಯಲ್ ಬಗೆದಪೆಯೆನೆ-

ಚಂ|| ಬಗೆ ಪೆಱತುಂಟೆ ವೈರಿನೃಪರಂ ತಱಿದೊಟ್ಟುವುದಲ್ಲದೆಂತುಮಿ ।
ಲ್ಲಿಗೆ ಬರವಂ ಭವತ್ಪದಸರೋಜವನಾಂ ಬಲಗೊಂಡು ಮತ್ತಮಾ ॥
ಜಿಗೆ ನಡೆಯಲ್ಕೆ ಬಂದೆನೆನೆ ದೇವನದೀಸುತನಾತ್ಮಚಿತ್ತದೊಳ್ ।
ಬಗೆದನಿದೇನಖಂಡಿತಮೊ ಶೌರ್ಯಗುಣೋನ್ನತಿ ರಾಜರಾಜನಾ ॥ ೬೫

ಉರಿಯುತ್ತಿದೆಯಲ್ಲಾ ಎಂದು ಹೇಳುತ್ತ ಆ ಕಡೆಯ ಹಂಬಲದ ಆಧಿಕ್ಯದಿಂದ ಮನಸ್ಸು ನಾನಾ ರೀತಿಯಾಗಿ ಅಲೆದಾಡಿತು. ಅಂತಹ ಯೋಗ್ಯತೆಯನ್ನುಳ್ಳ ಯೋಗಿಗೂ ಹೀಗೆಯೇ ಮಮತೆ ಉಂಟಾಗುವುದಿಲ್ಲವೇ? ವ|| ಎನ್ನುವಷ್ಟರಲ್ಲಿ ಇಬ್ಬರ ಹೆಜ್ಜೆಯ ಶಬ್ದವನ್ನು ಕೇಳಿ ಅನೇಕ ಗಾಯಗಳ ನೋವಿನಿಂದ ಪರವಶವಾಗಿದ್ದ ಶರೀರವನ್ನುಳ್ಳ ಭೀಷ್ಮನು 'ಈಗ ಬಂದವರು ಯಾರು ಹೇಳಿ' ಎಂದು ಕೇಳಿದನು. ಸಂಜಯನು ಕುರುಪಿತಾಮಹನಾದ ಭೀಷ್ಮನ ಕಿವಿಯ ಹತ್ತಿರಕ್ಕೆ ಹೋಗಿ 'ಕುರುವಂಶವೆಂಬ ಆಕಾಶದ ಚಂದ್ರನಾದ ದುರ್ಯೋಧನನು ಬಂದಿದ್ದಾನೆ' ಎಂದು ವಿಜ್ಞಾಪನೆ ಮಾಡಿದನು. ಭೀಷ್ಮನು ಯೋಗಾಭ್ಯಾಸದಲ್ಲಿ ಅರ್ಧಮುಚ್ಚಿಕೊಂಡಿದ್ದ ಕನ್ನೈದಿಲೆಯ ದಳದ ಕಾಂತಿಯನ್ನು ಹಾಸ್ಯಮಾಡುವ ಹಾಗಿದ್ದ ತನ್ನ ಕಣ್ಣುಗಳನ್ನು ಬಲಾತ್ಕಾರದಿಂದ ತೆಗೆದು-೬೪. ತನಗೆ ನಮಸ್ಕಾರ ಮಾಡಿದ ಕೌರವೇಶ್ವರನನ್ನು ಎದುರಿನಲ್ಲಿ ಕಂಡ ಸಂತೋಷವು ಪ್ರೀತಿಯನ್ನು ಅಧಿಕಗೊಳಿಸಲು ಆಶೀರ್ವಾದಮಾಡಿ ನೀನು ಏಕಾಕಿಯಾಗಿ ಬಂದ ಸ್ಥಿತಿಯನ್ನು ನೋಡಿ ನನ್ನ ಮನಸ್ಸು ವಿಶೇಷದುಃಖಪಡುತ್ತಿದೆ. ಮಗು, ಶ್ವೇತಛತ್ರಿ ಎಲ್ಲಿ? ಸುತ್ತಲೂ ಬಳಸಿ ಬರುತ್ತಿದ್ದ ಚತುರಂಗಸೈನ್ಯವೆಲ್ಲಿ? ಯಾವ ಕಡೆಗೆ ಹೋಯಿತು. ಶತ್ರುರಾಜರಿಂದ ನಿನಗೂ ಈ ಸ್ಥಿತಿಯುಂಟಾಯಿತೆ? ವ|| ಎಂದು ಕಣ್ಣೀರನ್ನು ತುಂಬಿಕೊಂಡು ನೀನು ಬಂದಿರುವ ಬರುವಿಕೆಯೇ ಯುದ್ಧಸಮಾಚಾರವನ್ನು ತಿಳಿಸುತ್ತದೆ. ಇನ್ನು ಮುಂದೇನು ಮಾಡುತ್ತೀಯೆ? ಹೇಗೆ ಯೋಚಿಸಿದ್ದೀಯೆ ಎಂದು ಕೇಳಿದರು. ೬೫. ದುರ್ಯೋಧನನು ಮತ್ತೇನಜ್ಜ; ಶತ್ರುರಾಜರನ್ನು ಕತ್ತರಿಸಿ ರಾಶಿಹಾಕುವುದಲ್ಲದೆ ಬೇರೆ ಯೋಚನೆಯುಂಟೇ? ನಿಮ್ಮ ಪಾದಕಮಲಗಳನ್ನು ಪ್ರದಕ್ಷಿಣೆಮಾಡಿ ಪುನಃ ಯುದ್ಧಕ್ಕೆ ಹೋಗೋಣವೆಂದು

ವ॥ ಎಂದಾದಿ ಮಧ್ಯಾವಸಾನದೊಳೆಲ್ಲಿಯುಮೆಡಲದ ಕಲಿತನದಳವಿಂಗೆ ಮನಂಗೊಂಡು ಮಗನೆ ನಿನಗಪ್ಪೊಡೆ ದೆಯ್ವಂ ಪ್ರತಿಕೂಲಮೆಂತುಂ ಕಾದಿ ಗೆಲಲಾರ್ಪೆಯಲ್ಲೆ ಸೂಜಿಯ ಕೂರ್ಪು ಕುಂಬಳದೊಳಡಂಗುವಂತೆ ನಿನ್ನೊಂದೆ ಮೆಯ್ಯೊಳಾದ ಕೂರ್ಪು ಪಗೆವರ ದರ್ಪಮನದಿರ್ಪದಲ್ತೆ ನಿನಗಂ ಮೈತ್ರೇಯರ್ ಕೊಟ್ಟೂರುಭಂಗಶಾಪಮನಿವಾರಿತಮೆನ್ನೀ ಪ್ರಾಣಮುಳ್ಳಂತೆ ಸಂಧಿಯಂ ಮಾಡಿ ವಸುಂಧರೆಯಂ ಕೊಂಡು ಕಾಲಮಂ ಕಜ್ಜಮುಮನಱಿದು ಬೞಿಯಂ ನಿನ್ನ ನೆಗಳ್ವುದಂ ನೆಗಳ್ವುದೆಂದು-

ಚಂ॥ ಪರಿಕಿಪುದೊಂದಱಿಂದೆರಡನೋತೊಳಕೊಳ್ವುದು ಮೂಱಱಿಂದೆ ನಾ
ಲ್ಕರಿದಱಿದಯ್ದಱಿಂದೆ ನೆಱೆ ಕಲ್ವುದು ನಿರ್ಣಯಮಾಗಿರಾಱಱೊಳ್ ।
ಪರಿಣತನಪ್ಪುದೇೞಱೊಳಮೊಂದದೆ ನಿಲ್ವುದು ದುರ್ವಿಮಂತ್ರಮಂ
ಪರೆಪ ಟಮಾಳಮಂ ಪಿರಿದನೋದಿದೊಡಪ್ಪ ಪದಾರ್ಥಮಾವುದೋ ॥ ೬೬

ಕಂ॥ ಪೆರ್ಚುಗೆ ಭರತಕುಲಂ ನೆಲೆ
ವೆರ್ಚುಗೆ ನಿಮ್ಮೆರಡು ತಂಡಮೊದವಿದ ನಣ್ಪಂ ।
ಕರ್ಚುಗೆ ಕಲುಷಂ ನೀಂ ತಲೆ
ಯುರ್ಚದಿರೆನ್ನೆಂದ ನುಡಿಗೆ ಕುರುಕುಳತಿಳಕಾ ॥ ೬೭

ಬಂದೆ ಎಂದನು. ಭೀಷ್ಮನು ಚಕ್ರವರ್ತಿಯಾದ ದುರ್ಯೋಧನನ ಶೌರ್ಯಗುಣದ ಔನ್ನತ್ಯವು ಏನು ಅಖಂಡಿತವೋ ಎಂದು ತನ್ನ ಮನಸ್ಸಿನಲ್ಲಿ ಸಂತೋಷಿಸಿದನು. ವ॥ ಮೊದಲಿಂದ ಕೊನೆಯವರೆಗೆ ಎಲ್ಲಿಯೂ ಸಡಿಲವಾಗದ ಅವನ ಶೌರ್ಯದ ಪ್ರಮಾಣಕ್ಕೆ ಸಂತೋಷಪಟ್ಟು (ದುರ್ಯೋಧನನನ್ನು ಕುರಿತು) 'ಮಗು ನಿನಗಾದರೆ ದೈವವು ಪ್ರತಿಕೂಲವಾಗಿದೆ. ಕಾದಿ ಗೆಲ್ಲಲಾರೆ; ಸೂಜಿಯ ಹರಿತವಾದ ತುದಿಯು ಕುಂಬಳಕಾಯಲ್ಲಿ ಅಡಗಿಹೋಗುವ ಹಾಗೆ ನಿನ್ನ ಒಂದೇ ಶರೀರದಲ್ಲಿರುವ ಹರಿತವಾದ ಶಕ್ತಿ ಶತ್ರುಗಳ ದರ್ಪವನ್ನು ನಡುಗಿಸಲಾರದು. ನಿನಗೂ ಮೈತ್ರೇಯರು ಕೊಟ್ಟಿರುವ ಊರುಭಂಗ ಶಾಪವು ತಪ್ಪಿಸುವುದಕ್ಕಾಗದು. ನನ್ನ ಪ್ರಾಣವು ಇರುವಾಗಲೇ ಸಂಧಿಯನ್ನು ಮಾಡಿಕೊಂಡು ಭೂಮಿಯನ್ನು ಸ್ವೀಕರಿಸಿ ಮುಂದೆ ಕಾಲವನ್ನೂ ಕಾರ್ಯವನ್ನೂ ತಿಳಿದು ಬಳಿಕ ನೀನು ಮಾಡುವುದನ್ನು ಮಾಡು ಎಂದರು. ೬೬. ಒಂದಾದ ಬುದ್ಧಿಯಿಂದ ಎರಡಾದ ಕಾರ್ಯಾಕಾರ್ಯಗಳನ್ನು ಅಥವಾ ಪುಣ್ಯಪಾಪಗಳನ್ನು ಪರೀಕ್ಷಿಸಬೇಕು. ಶತ್ರುಮಿತ್ರಬಾಂಧವ (ಉದಾಸೀನ)ರೆಂಬ ಮೂವರನ್ನು ಒಲಿಸಿ ಕಷ್ಟವಾದ ಸಾಮ ದಾನ ಭೇದ ದಂಡಗಳೆಂಬ ಉಪಾಯಚತುಷ್ಟಯಗಳನ್ನು ಒಳಪಡಿಸಿಕೊಳ್ಳಬೇಕು. ಅಯ್ದು ಜ್ಞಾನೇಂದ್ರಿಯಗಳಿಂದ ಪೂರ್ಣವಾಗಿ ವಿವೇಕವನ್ನು ಕಲಿತುಕೊಳ್ಳಬೇಕು. ರಾಜಯೋಗ್ಯವಾದ ಸಂಧಿ, ವಿಗ್ರಹ, ಯಾನ, ಆಸನ, ಸಂಶ್ರಯ, ದ್ವೈಧೀಭಾವ ಎಂಬ ಆರು ಗುಣಗಳಲ್ಲಿ ಪಂಡಿತನಾಗಬೇಕು. ದ್ಯೂತಸ್ತ್ರೀಪಾನಾದಿ ಸಪ್ತವ್ಯಸನಗಳಲ್ಲಿ ಸೇರಿಕೊಳ್ಳದಿರಬೇಕು. ದುಷ್ಟ ಮಂತ್ರಾಲೋಚನೆಯಿಂದ ಕೂಡಿದ ಮೋಸದ ಮಾತುಗಳನ್ನು ವಿಶೇಷವಾಗಿ ಕೇಳುವುದರಿಂದ ಆಗುವ ಪ್ರಯೋಜನವೇನು? ೬೭. ಭರತಕುಲ (ವಂಶ) ಅಭಿವೃದ್ಧಿಯಾಗಲಿ; ನಿಮ್ಮ ಎರಡು ಗುಂಪಿನ ಸ್ನೇಹವು ಈಗಿರುವುದಕ್ಕಿಂತ ಉತ್ಕೃಷ್ಟವಾಗಲಿ, ನಿಮ್ಮ ದ್ವೇಷವು ತೊಳೆದುಹೋಗಲಿ;

ಉ॥ ದೋಷಮುಮೇವಮುಂ ಶಕುನಿಯಿಂ ಯುವರಾಜನಿನಾಯ್ತು ಪೋಯ್ತು ನಿ
ರ್ದೋಷಿಗಳಪ್ಪ ನಿಮ್ಮೆರಡು ತಂಡಮುಮಿಂ ಪುದುವಾಳ್ವುದಂತದೇಂ ।
ದೋಷಮೊ ಮೇಣ್ ವೃಕೋದರನಿನಾ ರಣರಂಗದೊಳಾದ ದುಷ್ಟ ದು
ಶ್ಶಾಸನರಕ್ತಮೋಕ್ಷದೊಳೆ ದೋಷವಿಮೋಕ್ಷಮದೇಕೆ ಕೊಂಡಪೈ ॥ ೬೮

ವ॥ ಎಂದು ನುಡಿದ ಪಿತಾಮಹನ ನುಡಿಗಳ್ಗೆ ಕುರುರಾಜನಿಂತೆಂದಂ-

ಮ॥ ಶರಶಯ್ಯಾಗ್ರದೊಳಿಂತು ನೀಮಿರೆ ಘಟಪ್ರೋದ್ಭೂತನಂತಾಗೆ ವಾ
ಸರನಾಥಾತ್ಮಜನಂತು ಸಾಯೆ ರಣದೊಳ್ ದುಶ್ಶಾಸನಂ ತದ್ವೃಕೋ ।
ದರನಿಂದಂತಳಿದಟ್ಗೆ ಸೈರಿಸಿಯುಮಾಂ ಸಂಧಾನಮಂ ವೈರಿ ಭೂಪ
ರೊಳಿಂ ಸಂಧಿಸಿ ಪೇಟಿಮಾರ್ಗೆ ಮೆಱೆವೆಂ ಸಂಪತ್ತುಮಂ ಶ್ರೀಯುಮಂ॥ ೬೯

ಕಂ॥ ಬಿಡಿಮೆನ್ನ ನುಡಿಗೆ ಬೀಟ್ಕೊಳೆ
ನುಡಿಯದಿರಿಂ ಪೆಱತನಜ್ಜ ಮುಂ ನುಡಿದೆರಡಂ ।
ನುಡಿವೆನೆ ಚಲಮಂ ಬಲ್ವಿಡಿ
ವಿಡಿದೆಂ ತನ್ನಪ್ಪುದಕ್ಕೆ ಸಂಗರ ಧರೆಯೊಳ್ ॥ ೭೦

ವ॥ ಎಂಬುದುಂ ನೀನುಮೆಂತುಂ ಕಾದಿಯಲ್ಲದಿರೆಯಪ್ಪೊಡಿಂದಿನೊಂದಿವಸಮನೆನ್ನ ಪೇಟ್ವ ಜಳಮಂತ್ರೋಪದೇಶಮಂ ಕೆಯ್ಕೊಂಡು ಕುರುಕ್ಷೇತ್ರದುತ್ತರದಿಗ್ಭಾಗದ ವೈಶಂಪಾಯನ

ಕುರುಕುಲಶ್ರೇಷ್ಠನಾದ ದುರ್ಯೋಧನನೇ ನೀನು ನಾನು ಹೇಳಿದ ಮಾತಿಗೆ ತಲೆಯಾಡಿಸಬೇಡ. ೬೮. ನಿಮ್ಮ ತಪ್ಪೂ ಕೋಪವೂ ಶಕುನಿಯಿಂದಲೂ ದುಶ್ಶಾಸನನಿಂದಲೂ ಪ್ರಾರಂಭವಾಯಿತು, ಹೋಯಿತು; ನಿರ್ದೋಷಿಗಳಾದ ನಿಮ್ಮ ಎರಡು ಗುಂಪೂ ಇನ್ನು ಕೂಡಿ ಬಾಳಿರಿ; ಹಾಗೆ ಮಾಡುವುದು ದೋಷವೇನಲ್ಲ. ಭೀಮನು ರಣರಂಗದಲ್ಲಿ ಬಿಡುಗಡೆಮಾಡಿದ ದುಷ್ಟ ದುಶ್ಶಾಸನನ ರಕ್ತದಿಂದಲೇ ದೋಷವಿಮೋಚನೆಯೂ ಆಯಿತು. ನೀನು ಅದನ್ನೇ ಪುನಃ ಏಕೆ ಅಂಗೀಕರಿಸುತ್ತೀಯೆ? ವ॥ ಎಂದು ಹೇಳಿದ ಭೀಷ್ಮನ ಮಾತುಗಳಿಗೆ ದುರ್ಯೋಧನನು ಹೀಗೆಂದನು-೬೯. ಬಾಣದ ಹಾಸಿಗೆಯ ತುದಿಯಲ್ಲಿ ನೀವು ಹೀಗಿರುವಾಗ ದ್ರೋಣಾಚಾರ್ಯರು ಹಾಗಿರುವಾಗ, ಕರ್ಣನು ಸತ್ತು ಯುದ್ಧದಲ್ಲಿ ದುಶ್ಶಾಸನನು ಭೀಮನಿಂದ ಹಾಗೆ ಸತ್ತು ನಾಶವಾಗಿರುವಾಗ (ಇವೆಲ್ಲವನ್ನೂ) ನಾನು ಸಹಿಸಿಕೊಂಡು ಶತ್ರುರಾಜರಲ್ಲಿ ಸಂಧಿಯನ್ನುಂಟುಮಾಡಿಕೊಂಡು ಯಾರಿಗೆ ನನ್ನ ಐಶ್ವರ್ಯವನ್ನೂ ವೈಭವವನ್ನೂ ಪ್ರದರ್ಶಿಸಬೇಕು. ೭೦. ನನ್ನ ಮಾತಿಗೆ (ಸಿದ್ಧಾಂತಕ್ಕೆ) ನನ್ನನ್ನು ಬಿಡಿ. ಅಜ್ಜ, ತಮ್ಮ ಅಪ್ಪಣೆಯನ್ನು ಪಡೆದು ಹೋಗುವುದಕ್ಕಾಗಿ ಬಂದ ನನಗೆ ಬೇರೆ ಯಾವುದನ್ನೂ ಹೇಳಬೇಡಿ. ಮೊದಲು ಒಂದು ರೀತಿ ಪುನಃ ಬೇರೆ ರೀತಿಯಲ್ಲಿ ಹೇಳುತ್ತೇನೆಯೇ? ಛಲವನ್ನು ಬಿಗಿಯಾಗಿ ಹಿಡಿದಿದ್ದೇನೆ. ಯುದ್ಧದಲ್ಲಿ ತಾನಾದುದಾಗಲಿ' ಎಂದನು. ವ॥ "ನೀನು ಹೇಗೂ ಯುದ್ಧ ಮಾಡದೇ ಇರುವುದಿಲ್ಲವಾದರೆ ಈ ಒಂದು ದಿವಸವನ್ನು ನಾನು ಹೇಳುವ ಜಲಮಂತ್ರೋಪದೇಶವನ್ನು ಅಂಗೀಕರಿಸಿ ಕುರುಕ್ಷೇತ್ರದ ಉತ್ತರ

ಸರೋವರದೊಳ್ ಮುಳುಗಿ ಕಾಲಾಗ್ನಿರುದ್ರಂ ರಸಾತಳದೊಳಡಂಗಿರ್ಪಂತಿರ್ದು ನಿನ್ನವಸರಕ್ಕೆ ಬಂದು ಕೂಡುವ ಬಲದೇವನುಮಂ ನಿನ್ನಿರ್ದೆಡೆಯನಱಿಯದಱಸುವಶ್ವತ್ಥಾಮ ಕೃಪ ಕೃತವರ್ಮರುಮಂ ಕೂಡಿಕೊಂಡು ಪಗೆವರಂ ನಾಳೆ ಕಾದಿ ಗೆಲ್ವುದೆಂದು ಹಿತೋಪದೇಶಂಬೆರಸು ಜಳಮಂತ್ರೋಪದೇಶಮಂ ಕಿವಿಯೊಳ್ ಪರ್ಚಿ ಪೇೞ್ದು ಕುರುಪಿತಾಮಹಂ ಸಂಜಯನಂ ಧೃತರಾಷ್ಟ್ರನಲ್ಲಿಗೆ ಸಂಧಾನವಾರ್ತೆಯಂ ಸಮಕೊಳಿಸುವಂತಾನಾಗತಬಾಧಾಪ್ರತಿಷೇಧಂ ಮಾಡುವಂತಟ್ಟಿ ಸಕಳ ಕುರುಕುಳಾವಲಂಬನಕಲ್ಪವೃಕ್ಷಮಂ ಪರಸಿ ಪೋಗಲ್ವೇೞೆ ದೇವನದೀಪ್ರಿಯಪುತ್ರನಂ ಧೃತರಾಷ್ಟ್ರಪುತ್ರಂ ಬೀೞ್ಕೊಂಡು ಕನಕಪತ್ರಲತಾಲಾಂಛಿತಗದಾದಂಡಮಂ ಕೊಂಡೊರ್ವನೆ ವೈಶಂಪಾಯನಸರೋವರದ ಬಟ್ಟೆಯಂ ನಡೆಗೊಂಡು –

ಶಾ॥ ಕ್ರಂದತ್ಸ್ಯಂದನಜಾತನಿರ್ಗತಶಿಖಿಜ್ವಾಳಾಸಹಸ್ರಂಗಳಾ
ಟಂದೆತ್ತಂ ಕವಿದಟ್ಟೆ ಬೇವ ಶವಸಂಘಾತಂಗಳಂ ಚಕ್ಕಮೊ ।
ಕ್ಕೆಂದಾಗಳ್ ಕಡಿದುಗ್ರಭೂತನಿಕರಂ ಕೆಯ್ ಬೇಯೆ ಬಾಯ್ ಬೇಯೆ ತಿಂ
ಬಂದಂ ತನ್ನ ಮನಕ್ಕೆಗುರ್ವಿಸುವಿನಂ ದುರ್ಯೋಧನಂ ನೋಡಿದಂ ॥ ೭೧

ವ॥ ನೋಡಿ ಕನಲ್ವ ಕೆಂಡದ ಮೇಲೆ ಪೞೆಯ ಬೇವಿನೆಣ್ಣೆಯೊಳ್ ತೊಯ್ದಿಕ್ಕಿದ ಬೆಳ್ಳುಳ್ಳಿಯ ಕಂಪಿನಂತೆ ಬಳ್ಳುವಿನ ಬಾಯೊಳಳುರ್ವ ಕೆಂಡಂಗಳೊಳ್ ಸುೞಿದು ಬೇವ

ದಿಗ್ಭಾಗದಲ್ಲಿರುವ ವೈಶಂಪಾಯನಸರೋವರದಲ್ಲಿ ಮುಳುಗಿದ್ದು ಕಾಲಾಗ್ನಿರುದ್ರನು ಪಾತಾಳಲೋಕದಲ್ಲಡಗಿರುವ ಹಾಗೆ ಇರು. ನಿನ್ನ ಸಹಾಯಕ್ಕೆ ಬಂದು ಸೇರುವ ಬಲರಾಮನನ್ನೂ ನೀನು ಇರುವ ಸ್ಥಳವನ್ನು ತಿಳಿಯದೇ ಹುಡುಕುತ್ತಿರುವ ಅಶ್ವತ್ಥಾಮ ಕೃಪ ಕೃತವರ್ಮರನ್ನು ಕೂಡಿಕೊಂಡು ಶತ್ರುಗಳನ್ನು ನಾಳೆ ಜಯಿಸು" ಎಂದು ಭೀಷ್ಮನು ಹಿತೋಪದೇಶದಿಂದ ಕೂಡಿದ ಜಳಮಂತ್ರೋದೇಶವನ್ನು ದುರ್ಯೋಧನನ ಕಿವಿಯಲ್ಲಿ ರಹಸ್ಯವಾಗಿ ಉಪದೇಶಿಸಿದನು. ಸಂಜಯನನ್ನು ಧೃತರಾಷ್ಟ್ರನ ಬಳಿಗೆ ಸಂಧಾನದ ಮಾತನ್ನು ಸಿದ್ಧಗೊಳಿಸುವುದಕ್ಕಾಗಿ ಕಳುಹಿಸಿದನು. ಮುಂದೆ ಬರುವ ತೊಂದರೆಗೆ ಪ್ರತೀಕಾರವನ್ನು ಮಾಡುವಂತೆ ಹೇಳಿ ಸಕಲ ಕುರುವಂಶದ ಆಶ್ರಯಕ್ಕೆ ಕಲ್ಪವೃಕ್ಷದ ಹಾಗಿರುವ ದುರ್ಯೋಧನನನ್ನು ಆಶೀರ್ವದಿಸಿ ಬೀಳ್ಕೊಟ್ಟನು. ದುರ್ಯೋಧನನು ಭೀಷ್ಮನ ಅಪ್ಪಣೆಯನ್ನು ಪಡೆದು ಹೊರಟು ಕನಕಪತ್ರಲತೆಯಿಂದ ಗುರುತುಮಾಡಲ್ಪಟ್ಟ ಗದಾದಂಡವನ್ನು ತೆಗೆದುಕೊಂಡು ಏಕಾಕಿಯಾಗಿ ವೈಶಂಪಾಯನಸರೋವರದ ಮಾರ್ಗವನ್ನು ನಡೆದುಹೋದನು. ೭೧. ಶಬ್ದಮಾಡುತ್ತಿರುವ ರಥದಿಂದ ಹುಟ್ಟಿ ಹೊರಹೊರಟ ಸಾವಿರಾರು ಅಗ್ನಿಜ್ವಾಲೆಗಳು ಮೇಲೆ ಹಾಯ್ದು ಎಲ್ಲಕಡೆಯೂ ಸುಡುತ್ತಿರಲು ಬೇಯುತ್ತಿರುವ ಹೆಣಗಳ ರಾಶಿಗಳನ್ನು ಆಗ ಭಯಂಕರವಾದ ಪಿಶಾಚಿಗಳ ಸಮೂಹಗಳು ಚಕ್ಕುಮೊಕ್ಕೆಂದು ಕತ್ತರಿಸಿ ಕೈಬಾಯಿಗಳು ಬೇಯುತ್ತಿರುವಂತೆಯೇ ತಿನ್ನುವುದನ್ನು ನೋಡಿದಾಗ ದುರ್ಯೋಧನನ ಮನಸ್ಸಿಗೆ ವಿಶೇಷ ಭಯವುಂಟಾಯಿತು. ವ॥ ಹೊಳೆಯುತ್ತಿರುವ ಕೆಂಡದ ಮೇಲೆ ಹಳೆಯ ಬೇವಿನೆಣ್ಣೆಯಲ್ಲಿ ನೆನೆಯಿಕ್ಕಿದ ಬೆಳ್ಳುಳ್ಳಿಯ ವಾಸನೆಯ ಹಾಗೆ ಗುಳ್ಳೇನರಿಯ ಬಾಯಲ್ಲಿ ಸುಡುತ್ತ ಕಾಣಿಸಿಕೊಂಡು

ಪೆಣಂಗಳ ಕಂಪು ನಾಱುವುದರ್ಕೆ ಸೈರಿಸಲಾಱದೆ ಕೋಲ್ದಾಂಟನೊಳ್ ಕೊಲುಗುಳವಂ ಕಳಿದು ಪೋಗಿ ವಿಳಯಕಾಳವಿಘಟ್ಟಿತಾಷ್ಟದಿಗ್ಭಾಗಸಂಧಿಬಂಧನಗಗನತಳಮೆ ಧರಾತಳಕ್ಕೆ ಪಱಿದು ಬಿಳ್ದಂತಾನುಮಾದಿವರಾಹಂ ಸಮುದ್ರಮುದ್ರಿತಧರಾಮಂಡಳಮಂ ರಸಾತಳದಿಂದೆತ್ತಿ ಬಂದಂದು ನಭೋಮಂಡಳಸ್ಥಾನಮೆ ಸಲಿಲಪರಿಪೂರಿತಮಾದಂತಾನುಮಾಗಿ-

ಮ॥ ಇದು ಪಾತಾಳಬಿಲಕ್ಕೆ ಬಾಗಿಲಿದು ದಲ್ ಘೋರಾಂಧಕಾರಕ್ಕೆ ಮಾ
ಡಿದ ಕೂಪಂ ಪೆಱತಲ್ತಿದುಗ್ರಲಯಕಾಳಾಂಭೋಧರಚ್ಛಾಯೆ ತಾ ।
ನೆ ದಲೆಂಬಂತಿರೆ ಕಾಚ ಮೇಚಕಚಯಚ್ಛಾಯಾಂಬುವಿಂ ಗುಣ್ಪಿನಿಂ
ಪುದಿದಿರ್ದತ್ತು ಸರೋವರಂ ಬಕ ಬಳಾಕಾನೀಕ ರಾವಾಕುಳಂ । ೭೨

ಚಂ॥ ಅದಟನ ವಿಕ್ರಮಾರ್ಜುನನ ಸಾಹಸ ಭೀಮನ ಕೋಪ ಪಾವಕಂ
ಪುದಿದಳುರ್ದಟ್ಟಿ ಕೊಳ್ಳದಿರದಿಲ್ಲಿಯುಮೆಮ್ಮುಮನಿಲ್ಲಿ ಬಾಳ್ವರಂ ।
ಕದಡದಿರಿತ್ತ ಬಾರದಿರು ಸಾರದಿರೆಂಬವೊಲಾದುದೆತ್ತಮು
ನ್ಮದಕಳಹಂಸಕೋಕನಿಕರಧ್ವನಿರುಂದ್ರಫಣೀಂದ್ರಕೇತುವಂ ॥ ೭೩

ಬೇಯುತ್ತಿರುವ ಹೆಣಗಳ ದುರ್ವಾಸನೆಯನ್ನು ಸಹಿಸಲಾರದೆ ದೂರದೂರ ಹೆಜ್ಜೆಯಿಟ್ಟು (ದಾಟುಹೆಜ್ಜೆಯಿಟ್ಟು) ದಾಟುತ್ತ ಯುದ್ಧಭೂಮಿಯನ್ನು ಕಳೆದುಹೋದನು. ಪ್ರಳಯಕಾಲದಲ್ಲಿ ಅಪ್ಪಳಿಸಲ್ಪಟ್ಟ ಪೆಟ್ಟಿನಿಂದ ಎಂಟು ದಿಕ್ಪ್ರದೇಶಗಳ ಕೀಲುಗಳೂ ಕಳಚಿಹೋಗಲು ಆಕಾಶಪ್ರದೇಶವೇ ನೆಲಕ್ಕೆ ಬಿದ್ದುಹೋಗಿದೆಯೊ ಎಂಬಂತೆಯೂ ಆದಿವರಾಹನಾದ ವಿಷ್ಣುವು ಸಮುದ್ರದಿಂದ ಸುತ್ತುವರಿಯಲ್ಪಟ್ಟ ಭೂಮಂಡಳವನ್ನು ಪಾತಾಳಲೋಕದಿಂದ ಎತ್ತಿಕೊಂಡು ಬಂದ ದಿನ ಆಕಾಶಪ್ರದೇಶವೇ ನೀರಿನಿಂದ ತುಂಬಿಹೋಯಿತೋ ಎಂಬಂತೆಯೂ ಇರುವ ಸರೋವರವನ್ನು ಕಂಡನು-೭೨. ಇದು ಪಾತಾಳವೆಂಬ ಬಿಲದ ಬಾಗಿಲು; ನಿಜವಾಗಿಯೂ ಇದು ಭಯಂಕರವಾದ ಕತ್ತಲೆಯಿಂದ ತುಂಬಿದ ಬಾವಿ, ಬೇರೆಯಲ್ಲ. ಇದು ಉಗ್ರವಾಗಿರುವ ಪ್ರಳಯಕಾಲದ ಮೋಡದ ನೆರಳೇ ಸರಿ ಎನ್ನುವ ಹಾಗಿರುವ ಕಾಚದಂತೆ ಕಪ್ಪುನೀಲಿ ಬಣ್ಣ ಮಿಶ್ರಿತವಾದ ಬಣ್ಣದ ನೀರಿನಿಂದ ತುಂಬಿ (ಆಳವಾಗಿ) ಬಕಬಲಾಕಾಪಕ್ಷಿಗಳ ಶಬ್ದದಿಂದ ಮೊರೆಯುತ್ತಿರುವ ವೈಶಂಪಾಯನ ಸರೋವರವು ಆಳದಿಂದಲೂ - ಗಾಂಭೀರ್ಯದಿಂದಲೂ - ಭಯಂಕರತೆಯಿಂದಲೂ ಕೂಡಿದ್ದಿತು. ೭೩. ಪರಾಕ್ರಮ ಶಾಲಿಯಾದ ಅರ್ಜುನನ ಮತ್ತು ಸಾಹಸಭೀಮನ ಕೋಪಾಗ್ನಿಯು ಇಲ್ಲಿಗೂ ಕೂಡ ಪ್ರವೇಶಿಸಿ ವ್ಯಾಪಿಸಿ ಸುಟ್ಟು ನಾಶಮಾಡಿ ಕೊಲ್ಲದೆ ಬಿಡುವುದಿಲ್ಲ; ಇಲ್ಲಿ ಬಾಳುತ್ತಿರುವ ನಮ್ಮನ್ನು ಕದಡಬೇಡ; ಈ ಕಡೆ ಬರಬೇಡ; ಹತ್ತಿರ ಬರಬೇಡ ಎನ್ನುವ ಹಾಗೆ ಎಲ್ಲ ಕಡೆಗೂ ವಿಸ್ತಾರವಾಗಿ ಹರಡಿರುವ ಹಾವಿನ ಹಳವಿಗೆಯನ್ನುಳ್ಳ ದುರ್ಯೋಧನನನ್ನು ಮುದಿಸಿದ ರಾಜಹಂಸ ಕೋಕಸಮೂಹಗಳ ಧ್ವನಿಯು ಸಾರುವಂತಿದ್ದಿತು.

ವII ಅಂತೆಸೆವ ಪುಂಡರೀಕಷಂಡೋಪಾಂತಮನೆಯ್ದುವಂದನೇಕವ್ರಣಗಳಿತನವರುಧಿರ ಮಾಗಿರ್ದ ತನ್ನ ಮೆಯ್ಯನೊರಸಿ ಕರ್ಚಿ ಮುಕ್ಕುಳಿಸಿಯುಗುಳ್ದಾಚಮಿಸಿ ಜಳದೇವತೆಗಳ್ಗೆ ಪೊಡೆವಟ್ಟು ಜಳಮಂತ್ರಾಕ್ಷರಂಗಳಿಂ ಸರೋವರಮನಭಿಮಂತ್ರಿಸಿ-

ಚಂII ಬೆಳಗಿ ಸಮಸ್ತಭೂವಳಯಮಂ ನಿಜ ತೇಜದಿನಾಂತ ದೈತ್ಯರಂ
ತಳವೆಳಗಾಗೆ ಕಾದಿ ಚಳಿತೆಯ್ದಿ ಬಟಲ್ದಪರಾಂಬುರಾಶಿಯೊಳ್ ।
ಮುಳುಗುವ ತೀವ್ರದೀಧಿತಿವೊಲಾ ಕೊಳದೊಳ್ ಫಣಿರಾಜಕೇತನಂ
ಮುಳುಗಿದನಾರ್ಗಮೇಂ ಬಿದಿಯ ಕಟ್ಟಿದುದಂ ಕಳೆಯಲ್ಕೆ ತೀರ್ಗುಮೇ ॥ ೭೪

ವII ಅಂತು ವಜ್ರಿಯ ವಜ್ರಹತಿಗಳ್ಕಿ ಕುಲಗಿರಿಜಳಧಿಯಂ ಪುಗುವಂತೆ ದುರ್ಯೋಧನಂ ಕೊಳನಂ ಪೊಕ್ಕಿರ್ದನನ್ನೆಗಮಿತ್ತ ಧರ್ಮಪುತ್ರಂ ಶಲ್ಯವಧೆಯಿಂ ಬಟಿಯಂ ರಾಜರಾಜನಂ ಕೊಳುಗುಳದೊಳಱಸಿಯುಂ ಕಾಣದೆ ನಮ್ಮ ಮಾಡುವ ಕರ್ತವ್ಯಮಾವುದೇಗೆಯ್ವಂ ಪೇಟಿಮೆಂದು ನಾರಾಯಣನಂ ಬೆಸಗೊಳೆ ಮಧುವನಿತಾವದನಕಮಳಹಿಮಕರನಿಂತೆಂದಂ -

ಉII ಇಂದಿನ ನೇಸಱೆಂದೊಳಗರಾತಿಯನಿಕ್ಕದೆ ಮಾಣ್ದೆಮಪ್ಪೊಡಿ
ನ್ನೆಂದುಮಸಾಧ್ಯನಿಂದೆ ಹಳಿಯುಂ ಗಡ ಕೂಡುವನಾತನಂ ಗೆಲಲ್ ।
ಬಂದಪುದೇ ಬಟಿಕ್ಕದುವೆ ಕಾರಣಮಾಗುಳಿದಿರ್ದನಂಧರಾ
ಣ್ನಂದನನಲ್ಲದುಂತು ತಲೆಯುರ್ಚುಗುಮೇ ರಣರಂಗಭೂಮಿಯೊಳ್ ॥ ೭೫

ವII ಹಾಗೆ ಪ್ರಕಾಶಮಾನವಾಗಿರುವ ಸರೋವರದ ಸಮೀಪಕ್ಕೆ ಬಂದು ಅನೇಕ ಗಾಯಗಳಿಂದ ಜಿನುಗಿದ ಹೊಸ ರಕ್ತದಿಂದ ಕೂಡಿದ್ದ ತನ್ನ ಶರೀರವನ್ನು ಉಜ್ಜಿ ತೊಳೆದು ಮುಕ್ಕುಳಿಸಿ ಉಗುಳಿ ಆಚಮನಮಾಡಿ ಜಲದೇವತೆಗಳಿಗೆ ನಮಸ್ಕರಿಸಿ ಜಲಮಂತ್ರಾಕ್ಷರಗಳಿಂದ ಸರೋವರವನ್ನು ಮುಟ್ಟಿ ಅಭಿಮಂತ್ರಿಸಿದನು. ೭೪. ಸಮಸ್ತ ಭೂಮಂಡಲವನ್ನೂ ತನ್ನ ತೇಜಸ್ಸಿನಿಂದ ಪ್ರಕಾಶಗೊಳಿಸಿ ತನಗೆ ಪ್ರತಿಭಟಿಸಿದ ರಾಕ್ಷಸರನ್ನು ತಲೆಕೀಳಾಗುವಂತೆ ಮಾಡಿ (ಕೊನೆಗೆ ತಾನು) ಕಾಂತಿಹೀನನಾಗಿ ಪೂರ್ಣವಾಗಿ ಬಳಲಿ ಪಶ್ಚಿಮಸಮುದ್ರದಲ್ಲಿ ಮುಳುಗುವ ಸೂರ್ಯನ ಹಾಗೆ ದುರ್ಯೋಧನನು ಆ ಸರೋವರದಲ್ಲಿ ಮುಳುಗಿದನು. ಎಂದ ಮೇಲೆ ಯಾರಿಗಾದರೇನು? ವಿಧಿಯು ಕಟ್ಟಿಟ್ಟಿರುವುದನ್ನು ಕಳೆಯುವುದಕ್ಕೆ ತೀರುತ್ತದೆಯೇ (ಸಾಧ್ಯವೇ)? ವII ಹಾಗೆ ಇಂದ್ರನ ವಜ್ರಾಯುಧಕ್ಕೆ ಹೆದರಿ ಕುಲಪರ್ವತಗಳು ಸಮುದ್ರವನ್ನು ಪ್ರವೇಶಿಸುವ ಹಾಗೆ ದುರ್ಯೋಧನನು ಕೊಳವನ್ನು ಪ್ರವೇಶಿಸಿದನು. ಅಷ್ಟರಲ್ಲಿ ಈ ಕಡೆ ಧರ್ಮರಾಯನು ಶಲ್ಯವಧೆಯಾದ ಮೇಲೆ ಚಕ್ರವರ್ತಿಯಾದ ದುರ್ಯೋಧನನನ್ನು ಯುದ್ಧಭೂಮಿಯಲ್ಲಿ ಹುಡುಕಿಯೂ ಕಾಣದೆ ನಾವು ಮಾಡಬೇಕಾದ ಕರ್ತವ್ಯವಾವುದು? ಏನು ಮಾಡೋಣ ಹೇಳಿ ಎಂದು ಕೃಷ್ಣನನ್ನು (ಮಧುವೆಂಬ ರಾಕ್ಷಸನ ಸ್ತ್ರೀಯರ ಮುಖವೆಂಬ ಕಮಲಕ್ಕೆ ಚಂದ್ರನ ಹಾಗಿರುವ ಕೇಳಲು ಅವನು ಹೀಗೆಂದನು. ೭೫. ಇಂದಿನ ಸಾಯಂಕಾಲದೊಳಗೆ ಶತ್ರುವನ್ನು ಕೊಲ್ಲದೆ ತಪ್ಪಿದೆವಾದರೆ ಇನ್ನಾವಾಗಲೂ ಅವನು ಅಸಾಧ್ಯನಾಗುತ್ತಾನೆ. ಈ ದಿನವೇ ಬಲರಾಮನೂ ಅವನನ್ನು ಕೂಡಿಕೊಳ್ಳುತ್ತಾನೆ. ಬಳಿಕ ಆತನನ್ನು ಕೊಲ್ಲುವುದಕ್ಕೆ

ವ॥ ಎಂಬುದುಂ ಜಳಧರಸಮಯನಿಶಾಸಂಚಲಿತವಿದ್ಯುತ್ಪಿಂಗಳಾಕ್ಷಪಾತಂಗಳಿಂ ದೆಸೆಗಳಂ ನುಂಗುವಂತೆ ಮುಳಿದು ನೋಡಿ ಜರಾಸಂಧಸಂಧಿಬಂಧವಿಘಟನನಿಂತೆಂದಂ-

ಮ॥ ಕಡಲಂ ಪೊಕ್ಕೊಡೆ ಪೀರ್ದಪೆಂ ಕಡಲನಾ ಪಾತಾಳಮಂ ಪೊಕ್ಕನ
ಪ್ಪೊಡೆ ಶೇಷಾಹಿಯ ಪಲ್ಗಳಂ ಮುಱಿದಪೆಂ ಬ್ರಹ್ಮಾಂಡಮಂ ಪೊಕ್ಕನ ।
ಪ್ಪೊಡಮಾ ಬ್ರಹ್ಮನ ಗಂಟಲಂ ಮುಱಿದಪೆಂ ದುರ್ಯೋಧನಂಗಿಂ ಪುಗ
ಲ್ಕೆಡೆ ತ್ರೈಭೂಭುವನಂಗಳಿಂ ಪೊಱಗೆ ಮತ್ತೆಲ್ಲಿತ್ತೊ ಬಾಣಾಂತಕಾ ॥ ೭೬

ವ॥ ಎಂಬನ್ನೆಗಂ ವೃಕೋದರನಟ್ಟಿದ ಕಿರಾತಂ ವಿಂಧ್ಯಕನೆಂಬಂ ಬಂದು ದುರ್ಯೋಧನನ ನೆಲ್ಲಿಯುಮಱಸಿ ಕಾಣದೆ ವೈಶಂಪಾಯನಸರೋವರಕ್ಕೆ ನೀರ್ಗುಡಿಯಲೆಂದು ಪೋಗಿ ಕೊಳದ ತಡಿಯೊಳ್ ಹಳಕುಳಿಶಶಂಖಚಕ್ರಲಾಂಛಿತಮಪ್ಪಡಿವಜ್ಜೆಯಂ ಕಂಡು ಬಂದೆನೆಂದು ಪೇಳ್ವುದುಮಂಬುಜನಾಭನವನ ಮಾತಿನೊಳ್ ಯುಕ್ತಿಯುಂಟೆಂತೆಂದೊಡಮರನದೀ ನಂದನೋಪದೇಶದಿಂದಾತಂ ಕೊಳನಂ ಪೊಕ್ಕು ಕಾಲವಂಚನೆಗೆಯ್ಯಲಿರ್ದನಕ್ಕುಮೆಂದಾ ಕೊಳನಂ ಮುಟ್ಟೆವಂದದಱ ತಡಿಯೊಳ್ ಶಂಖಚಕ್ರಹಳಕುಳಿಶಲಾಂಛಿತಮಾಗಿರ್ದಡಿವಜ್ಜೆಯಂ ನೋಡಿ ದುರ್ಯೋಧನನ ಪಜ್ಜೆಯಪ್ಪುದೇನುಂ ತಪ್ಪಿಲ್ಲೆಂದು ಕಳಕಳನಿನಾದಂಗಳಿಂದಾರ್ದು ಶಂಖಂಗಳಂ

ಸಾಧ್ಯವಾಗುವುದಿಲ್ಲ. ಆ ಕಾರಣದಿಂದಲೇ ಧೃತರಾಷ್ಟ್ರನ ಮಗನಾದ ದುರ್ಯೋಧನನು ಮರೆಯಾಗಿ ಉಳಿದಿದ್ದಾನೆ. ಅಲ್ಲದಿದ್ದರೆ ಹಾಗೆ ರಣರಂಗದಲ್ಲಿ ತಲೆಯನ್ನು ಮರೆಸಿಕೊಳ್ಳುತ್ತಿದ್ದನೆ? ವ॥ ಎನ್ನಲು ವರ್ಷಾಕಾಲದ ರಾತ್ರಿಯಲ್ಲಿ ನಡುಗಿಸುತ್ತಿರುವ ಮಿಂಚಿನಂತೆ ಹೊಂಬಣ್ಣದಂತಿರುವ ತನ್ನ ಕಣ್ಣುಗಳ ನೋಟದಿಂದ ದಿಕ್ಕುಗಳನ್ನೆಲ್ಲ ನುಂಗುವಂತೆ ಕೋಪಿಸಿಕೊಂಡು ಜರಾಸಂಧನ ಕೀಲುಕಟ್ಟುಗಳನ್ನು ಸಡಿಲಿಸಿದವನಾದ ಭೀಮಸೇನನು ೭೬. ದುರ್ಯೋಧನನು ಸಮುದ್ರವನ್ನು ಪ್ರವೇಶಮಾಡಿದರೆ ಆ ಸಮುದ್ರವನ್ನೇ ಕುಡಿದು ಹಾಕುತ್ತೇನೆ. ಆ ಪಾತಾಳವನ್ನು ಹೊಕ್ಕನಾದರೆ ಆದಿಶೇಷನ ಹಲ್ಲುಗಳನ್ನು ಮುರಿಯುತ್ತೇನೆ. ಬ್ರಹ್ಮಾಂಡವನ್ನು ಹೊಕ್ಕನಾದರೂ ಆ ಬ್ರಹ್ಮನ ಗಂಟಲನ್ನೂ ಮುರಿಯುತ್ತೇನೆ. ಕೃಷ್ಣಾ, ದುರ್ಯೋಧನನಿಗೆ ಇನ್ನು ಪ್ರವೇಶಮಾಡುವುದಕ್ಕೆ ಮೂರುಲೋಕಗಳಿಂದ ಹೊರಗೆ ಸ್ಥಳವೆಲ್ಲಿದೆ? ವ॥ ಎನ್ನುವಷ್ಟರಲ್ಲಿ ಭೀಮನು ಕಳುಹಿಸಿದ ಬೇಡನಾದ ವಿಂಧ್ಯಕನೆಂಬುವನು ಬಂದು ದುರ್ಯೋಧನನನ್ನು ಎಲ್ಲಿ ಹುಡುಕಿದರೂ ಕಾಣದೆ ವೈಶಂಪಾಯನಸರೋವರಕ್ಕೆ ನೀರು ಕುಡಿಯಬೇಕೆಂದು ಹೋದೆವು. ಕೊಳದ ದಡದಲ್ಲಿ ನೇಗಿಲು, ವಜ್ರ, ಶಂಖ, ಚಕ್ರ ಇವುಗಳ ಗುರುತನ್ನುಳ್ಳ ಹೆಜ್ಜೆಯನ್ನು ಕಂಡುಬಂದೆನೆಂದು ಹೇಳಿದನು. ಕೃಷ್ಣನು ಅವನ ಮಾತಿನಲ್ಲಿ ಯುಕ್ತಿಯುಂಟು, ಹೀಗೆಂದರೆ ಭೀಷ್ಮನ ಉಪದೇಶದಿಂದವನು ಸರೋವರವನ್ನು ಪ್ರವೇಶಿಸಿ ಕಾಲವಂಚನೆಯನ್ನು ಮಾಡಬೇಕೆಂದಿರಬಹುದು ಎಂದನು. ಕೊಳದ ಸಮೀಪಕ್ಕೆ ಬಂದು ಅದರ ದಡದಲ್ಲಿ ಶಂಖ ಚಕ್ರ ನೇಗಿಲು ವಜ್ರ ಇವುಗಳ ಗುರುತಿನಿಂದ ಕೂಡಿದ್ದ ಕಾಲಿನ ಹೆಜ್ಜೆಯನ್ನು ನೋಡಿ ದುರ್ಯೋಧನನ ಹೆಜ್ಜೆಯೇ ಆಗಿದೆ.

ಪೂರಿಸಿಯುಂ ಭೇರಿಯಂ ತಾಡಿಸಿಯುಮೇಗೆಯ್ದುಂ ಪೊಱಮಡದಿರೆ ಭೀಮಸೇನನೆನ್ನ ಸರಂಗೇಳ್ದಲ್ಲದೀ ಬೂತು ಪೊಱಮಡುವನಲ್ಲನೀತುಂಗಾನೆ ಬಲ್ಲೆನುಸಿರದಿರಿಮೆಂದು ಸಕಳ ದಿಗ್ವಳಯ ಭರಿತ ಮಹಾಸಿಂಹನಾದದಿಂದಲ್ಲಿಯ ಜಳಚರಂಗಳೆರ್ದೆ ಪೌವನೆ ಪಾಱುವನ್ನೆಗಮಾರ್ದು-

ಮ॥ ಸ್ರ॥ ಕಿಱಿಯಂದಿಂದಿತ್ತ ದುರ್ಯೋಧನನೆನಿಸಿದ ವಿಕ್ರಾಂತಮೇನಾದುದೆಟ್ಟಿಂ
ದಿಱಿವುರ್ಕೆಲ್ಲಿತ್ತೊ ಪಾಂಚಾಳಿಯನೆೞೆವದಟೇನಾದುದೋ ಗಂಡ ಪೇೞ್ ಪೊ ।
ಚ್ಚಱಿನಂತಾಮಾತುಮಿಂತೀಯಿರವೆನೆ ನಗೆಯಂ ಮಾಡಿದ್ಪೈ ಬಂದನೀತಂ
ಪೆಱನಲ್ಲಂ ದುರ್ಜಯಂ ಕೌರವಕುಳನಳಿನೀಕುಂಜರಂ ಭೀಮಸೇನಂ ॥ ೭೭

ಕುಡಿದೆಂ ದುಶ್ಶಾಸನೋರಸ್ಥಳ ವಿಗಳದಸೃಗ್ವಾರಿಯಂ ಕಂಡದಂ ಮು
ನ್ನಡೆ ನೋಡುತ್ತಳ್ಕಿ ಮಾಣ್ದೈ ನಿನಗಿಱಿವದಟಂ ಕೊಟ್ಟರಾರಿಂದು ಮಾಣ ।
ಲ್ಕೆಡೆಯುಂಟೇ ಸಿಲ್ಕಿದ್ದೈ ಪೋ ಪೊಱಮಡು ಕೊಳದಿಂ ಸತ್ತೊಡಂ ಪುಟ್ಟ ನೀನೀ
ಗಡೆ ದಲ್ ಕೊಂದಪ್ಪೆನೆನ್ನಂ ಮುಳಿಯಿಸಿ ನಿನಗಿಂ ದ್ರೋಹ ಬಾೞ್ವಾಸೆಯುಂಟೇ ॥ ೭೮

ಅದರಲ್ಲೇನೂ ತಪ್ಪಿಲ್ಲ, ಎಂದು ಕಳಕಳಶಬ್ದದಿಂದ ಆರ್ಭಟಮಾಡಿದರು. ಶಂಖಗಳನ್ನು ಪೂರೈಸಿದರು. ನಗಾರಿಗಳನ್ನೂ ಹೊಡೆಯಿಸಿದರು. ಏನೂ ಮಾಡಿದರೂ ಹೊರಗೆ ಹೊರಡದಿರಲು ಭೀಮಸೇನನು ಈ ಭೂತವು ನನ್ನ ಧ್ವನಿ ಕೇಳಿದಲ್ಲದೆ ಹೊರಟುಬರುವವನಲ್ಲ; ಇವನಿಗೇನು ಮಾಡಬೇಕೆಂಬದನ್ನು ನಾನು ಬಲ್ಲೆ. ನೀವು ಮಾತನಾಡಬೇಡಿ ಎಂದು ಸಕಲದಿಕ್ಕುಗಳ ಸಮೂಹದಲ್ಲಿ ವ್ಯಾಪಿಸಿರುವ ಮಹಾಸಿಂಹನಾದದಿಂದ ಅಲ್ಲಿಯ ಜಲಚರಗಳ ಎದೆಯು ಪವ್ವನೆ ಹಾರಿಹೋಗುವ ಹಾಗೆ ಆರ್ಭಟಮಾಡಿದನು. ೭೭. ಬಾಲ್ಯದಿಂದಲೂ ದುರ್ಯೋಧನನೆನಿಸಿಕೊಂಡ ನಿನ್ನ ಪೌರುಷವೇನಾಯಿತು? ಮೇಲೆ ಬಿದ್ದು ಯುದ್ಧಮಾಡುವ ಗರ್ವವು ಎಲ್ಲಿ ಹೋಯಿತು? ದ್ರೌಪದಿಯನ್ನು ಎಳೆಯುವ ಶೌರ್ಯವೇನಾಯಿತು? ಪೌರುಷಶಾಲಿಯೇ ಹೇಳು. ಆಗ ಆ ಗರ್ವದ ಮಾತನ್ನಾಡಿ ಈಗ ಈ ದುಃಸ್ಥಿತಿಯಲ್ಲಿದ್ದು ನಗುವನ್ನುಂಟುಮಾಡಿದೆಯಲ್ಲ; ಈಗ ಬಂದಿರುವವನು ಬೇರೆ ಯಾರೂ ಅಲ್ಲ; ಜಯಿಸುವುದಕ್ಕೆ ಅಸಾಧ್ಯನಾದ ಕೌರವಕುಲವೆಂಬ ಕಮಲಕ್ಕೆ ಆನೆಯಂತಿರುವ ಭೀಮಸೇನ. ೭೮. ದುಶ್ಶಾಸನನ ಹೃದಯಪ್ರದೇಶದಿಂದ ಹರಿಯುತ್ತಿದ್ದ ರಕ್ತವನ್ನು ಕುಡಿದೆನು. ಅದನ್ನು ಮೊದಲು ನೋಡಿ ಹೆದರಿ ನಿಂತೆಯಾ? ನನಗೆ ಯುದ್ಧ ಮಾಡುವ ಪರಾಕ್ರಮವನ್ನು ಕೊಟ್ಟವರಾರು? ಈ ದಿನ ಇದನ್ನು ತಪ್ಪಿಸಿಕೊಳ್ಳುವುದಕ್ಕೆ ಅವಕಾಶವುಂಟೆ? ಸಿಕ್ಕಿದೆ, ಚೀ ಕೊಳದಿಂದ ಹೊರಡು; ಸತ್ತರೂ ಹುಟ್ಟದೇ ಹೋಗುತ್ತೀಯಾ? ಈಗ ಕೊಂದುಹಾಕುತ್ತೇನಲ್ಲವೇ. ನನ್ನನ್ನು ರೇಗಿಸಿಯೂ ದ್ರೋಹ, ನಿನಗೆ ಬಾಳುವಾಸೆಯುಂಟೆ!

ಕಂ॥ ಮಾನಸಿಕೆಯ ದೊರೆಗಿಡೆ ನೀಂ
ಮಾನಸನೆನೆ ನೀರೊಳೆಲವೊ ನೀನುಂ ಮೀನೆಂ ।
ಬೀ ನೆವದಿರ್ದೆಯಿದೇನಭಿ
ಮಾನದ ಕಲಿತನದ ಪರಮಪದಮೆಯ್ದಿದೆಯೋ ॥ ೭೯

ಚಂ॥ ಅದಟಿನಳುರ್ಕೆಯಂ ನಿಱಿಸಿ ನಿನ್ನ ನಿಸೇಕದ ಪೊೞ್ತು ತಪ್ಪಲೀ
ಯದೆ ಪೊಱಮಟ್ಟು ಬಾ ತಡೆಯದೀಗಳೆ ನೀನಿನಿಸಿರ್ದೆಯಪ್ಪೊಡೇ ।
ತೊದಳೊ ಸರೋವರಾಂಬುವನಿತಂ ತವೆ ತುಳ್ಕಿ ರಸಾತಳಂಬರಂ
ಬೆದಕಿಯುಮೆಂತುಮಪ್ಪಳಿಸಿ ಕೊಂದಪೆನೇೞ್ವುದಿದೇಂ ಸುಯೋಧನಾ ॥ ೮೦

ವ॥ ಎಂದು ಪ್ರಳಯಕಾಳಜಳಧರನಿನಾದದಿಂ ಗಜಱಿ ಗರ್ಜಿಸಿದ ಜಟಾಸುರಾರಾತಿಯ ಗಳಗರ್ಜನೆಗೆ ಕರಿಕಳಭಗರ್ಜನೆಗೇಳ್ವ ಮೃಗರಾಜನಂತೆ ರಾಜರಾಜಂ ಸೈರಿಸದೆ ಚಿತ್ತಸ್ಖಲನೆಯಾಗೆ ಜಳಸ್ತಂಭಮಂತ್ರಮೆಲ್ಲಂ ಮಾಯಾಮಂತ್ರಮಾಗೆ-

ಮ॥ ಪಗೆವಂ ಬಂದುಱಿದಿಂತು ಮೂದಲಿಸೆಯುಂ ಮಾತಂ ಕಿವುೞ್ಗೇಳ್ದು ಕೆ
ಮ್ಮಗೆ ನೀರೊಳ್ ಮುೞುಗಿರ್ದೊಡಟ್ಟು ಕಿಡುಗುಂ ಮಚ್ಛೌರ್ಯಮೆಂದುದ್ಧತಂ ।
ನೆಗೆದಾಗಳ್ ವಿಲಸತ್ಕಿರೀಟತಟರತ್ನಾಂಶುಪ್ರಭಾರಾಜಿ ತೊ
ಟ್ಟಗೆ ಕೆಯ್ಗಣ್ಮೆ ಸುರೇಂದ್ರಚಾಪರುಚಿಯಂ ಕೆಯ್ಕೊಂಡುದಾ ಪೂಗೊಳಂ ॥ ೮೧

ಚಂ॥ ನೆಗೆಯೆ ಪೊದಟ್ಟ ಬೊಬ್ಬುಳಿಕೆಗಳ್ ನೆಗೆದಂತೆರಡುಂ ಕೆಲಕ್ಕೆ ನೀ
ರುಗಿಯೆ ಗದಾಭಿಘಾತಪರಿಪೂರಿತತೋಯಜ ಷಂಡಮಲ್ಲಿಗ ।
ಲ್ಲಿಗೆ ಕದಡೇೞೆ ಭೀಮಭುಜಮಂದರಘಟ್ಟನೆಯಿಂದಮಲ್ಲಿ ತೊ
ಟ್ಟಗೆ ಕೊಳೆ ಕಾಳಕೂಟಮೊಗೆವಂತೊಗೆದಂ ಫಣಿರಾಜಕೇತನಂ ॥ ೮೨

೭೯. ಮನುಷ್ಯತ್ವದ ಯೋಗ್ಯತೆಯನ್ನು ಕಳೆದುಕೊಂಡ ಮೇಲೆ ನೀನು ಮನುಷ್ಯನೇ? ನೀನು ಮೀನಿನ ನೆವದಿಂದ ನೀರಿನಲ್ಲಿದ್ದೀಯೆ; ಆಹಾ! ಎಂತಹ ಆತ್ಮಗೌರವದ ಪರಾಕ್ರಮದ ಪರಮೋಚ್ಚ ಸ್ಥಾನವನ್ನು ಏರಿದ್ದೀಯೆ! ೮೦. ನಿನ್ನ ಪರಾಕ್ರಮಾತಿಶಯವನ್ನು ಸ್ಥಾಪಿಸಿ ನಿನ್ನ ಶಾಸ್ತ್ರೀಯ ಹೊತ್ತು ತಪ್ಪಿಹೋಗುವುದಕ್ಕೆ ಬಿಡದೆ ಸಾವಕಾಶಮಾಡದೇ ಈಗಲೇ ಹೊರಟು ಬಾ. ನೀನು ಸ್ವಲ್ಪ ತಡಮಾಡಿದರೆ ಸರೋವರದ ನೀರನ್ನೆಲ್ಲ ತುಳುಕಿ ಪಾತಾಳದವರೆಗೂ ಹುಡುಕಿ ಹೇಗೂ ಅಪ್ಪಳಿಸಿ ಕೊಂದುಹಾಕುತ್ತೇನೆ. ಏಳು ಸುಯೋಧನ ಇದೇನಿದು? ವ॥ ಎಂದು ಪ್ರಳಯಕಾಲದ ಗುಡುಗಿನ ಶಬ್ದದಿಂದ ಕೂಗಿ ಗರ್ಜನೆ ಮಾಡಿದ ಭೀಮನ ಆರ್ಭಟಕ್ಕೆ ಆನೆಯ ಮರಿಯ ಗರ್ಜನೆಯನ್ನು ಕೇಳಿದ ಸಿಂಹದ ಹಾಗೆ ಚಕ್ರವರ್ತಿಯಾದ ದುರ್ಯೋಧನನಿಗೆ ಮನಸ್ಥೈರ್ಯವು ಜಾರಿತು. ಜಲಸ್ಥಂಭ ಮಂತ್ರವೆಲ್ಲ ಮಾಯಾಮಂತ್ರವಾಯಿತು. ೮೧. ಶತ್ರುವು ಸುಮ್ಮನೆ ಹೀಗೆ ಹಿಯ್ಯಾಳಿಸಿದರೂ ಆ ಮಾತನ್ನು ಕಿವುಡರಂತೆ ಕಿವಿಗೆ ಹಾಕಿಕೊಳ್ಳದೆ ಸುಮ್ಮನೆ ನೀರಿನಲ್ಲಿ ಮುಳುಗಿದ್ದರೆ ನನ್ನ ಶೌರ್ಯವು ಮುಳುಗಿ ಹಾಳಾಗುತ್ತದೆ ಎಂದು (ಆತ್ಮಾಭಿಮಾನಿಯಾದ) ದುರ್ಯೋಧನನು ನೀರಿನಿಂದ ಮೇಲಕ್ಕೆ ನೆಗೆಯಲು ಪ್ರಕಾಶಮಾನವಾದ ಕಿರೀಟ ಪ್ರದೇಶದಲ್ಲಿರುವ ರತ್ನಗಳ ಕಾಂತಿಸಮೂಹವು ಇದ್ದಕ್ಕಿದ್ದ ಹಾಗೆ ಅಧಿಕವಾಗಲು ಆ ಸರೋವರವು ಕಾಮನ ಬಿಲ್ಲಿನ ಕಾಂತಿಯನ್ನು ಹೊಂದಿತು. ೮೨. ವ್ಯಾಪಿಸಿದ ನೀರು ಗುಳ್ಳೆಗಳು ಮೇಲಕ್ಕೆದ್ದವು. ಅವು ಬಂದ ಹಾಗೆ ಎರಡು

ವ॥ ಅಂತೊಗೆದು ದಿಕ್ಕರಿಕರಾನುಕಾರಿ ಕರಪರಿಘೋತ್ತಂಸಿತ ತೋರಣೀಕೃತ ರೌದ್ರಗದಾದಂಡನುಂ ಪ್ರಚಂಡನುಮಾಗಿ ಸೆರಗಿಲ್ಲದೆ ಕೊಳದಿಂ ಪೊಱಮಟ್ಟು ಬರ್ಪ ದುರ್ಯೋಧನನಂ ಧರ್ಮಪುತ್ರಂ ನೋಡಿ-

ಚಂ॥ ನಡಪಿದ ನಂಟರೆಯ್ದೆ ಪೊರೆದಾಳ್ ರಣರಂಗದೊಳುಳ್ಳರೆಲ್ಲರುಂ
ಮಡಿದೊಡಮುರ್ಕುಗುಂದದುಗುರಂತೆರಡುಂ ಕಡೆ ತಪ್ಪ ಕೂರ್ಪನೋ ।
ಗಡಿಸದೆ ತಾಳ್ದಿ ಮೆಯ್ಯೊಳೆ ವೃಕೋದರನೊಂದೆ ಸರಕ್ಕೆ ಕಾಯ್ದೊಡಂ
ಬಡೆ ಸಿಡಿಲೇಟಿಗಿಯಿಂ ಮಸಗಿ ಬಂದನಿದೇಂ ಕಲಿಯೋ ಸುಯೋಧನಂ ॥ ೮೩

ವ॥ ಎಂಬನ್ನೆಗಮೆಯ್ದೆವಂದು ದುರ್ಯೋಧನಂ ಪಾಂಡುತನೂಜರನಿಂತೆಂದಂ-

ಮ॥ಎಳೆ ಮುಂ ದೈತ್ಯನ ಕೆಯ್ಗೆ ಪೋಗೆ ತರಲೆಂದೀ ಚಕ್ರಿ ಮುನ್ನಂ ರಸಾ
ತಳಮಂ ಪೊಕ್ಕುದಮಿಾ ಮಹೋಗ್ರ ರಣದೊಳ್ ನಿಮ್ಮೊಂದು ಕೆಯ್ವಟ್ಟ ಭೂ ।
ತಳಮಂ ಮತ್ತೆ ತರಲ್ ವಿಶುದ್ಧ ನಿಯಮ ಪ್ರಾರಂಭದಿಂದಾನುಮಿಾ
ಕೊಳನಂ ಪೊಕ್ಕುದುಮಾವ ದೋಷಮೆನಗಿಂ ಮಾಱಾಂಪರಾರ್ ತೋಱಿರೇ ॥ ೮೪

ವ॥ ಎಂಬುದುಂ ಧರ್ಮಪುತ್ರನಿಂತೆಂದಂ-

ಪಕ್ಕಗಳಿಗೂ ನೀರು ವಿಭಾಗವಾಯಿತು. ಗದೆಯ ಹೊಡೆತದಿಂದ ತುಳುಕಿದ ಸರೋವರವು ಅಲ್ಲಲ್ಲಿ ಬಗ್ಗಡವಾಯಿತು. ಭೀಮನ ಮಂದರಪರ್ವತದಂತಿರುವ ಬಾಹುಗಳ ಹೊಡೆತದಿಂದ ಬೇಗನೆ ಆಕ್ರಮಿಸಲು ಕಾಳಕೂಟವಿಷವು ಹುಟ್ಟುವಂತೆ ದುರ್ಯೋಧನನು ಹುಟ್ಟಿದನು. ವ॥ ಹಾಗೆ ಹುಟ್ಟಿ ದಿಗ್ಗಜದ ಸೊಂಡಿಲನ್ನು ಹೋಲುವ ಪರಿಘದಂತಿರುವ ಕೈಗೆ ಆಭರಣಪ್ರಾಯವಾಗಿ ತೋರಣವಾಗಿ ಮಾಡಲ್ಪಟ್ಟ ಭಯಂಕರವಾದ ಗದಾ ದಂಡವನ್ನುಳ್ಳವನೂ ಬಹಳ ಕಾಂತಿಯುಕ್ತನೂ ಆಗಿ ಭಯವಿಲ್ಲದೆ ಕೊಳದಿಂದ ಹೊರಗೆ ಹೊರಟು ಬರುತ್ತಿರುವ ದುರ್ಯೋಧನನನ್ನು ಧರ್ಮರಾಜನು ನೋಡಿ ಹೀಗೆಂದನು. ೮೩. ತನ್ನನ್ನು ಸಾಕಿ ಸಲಹಿದ ಬಂಧುಗಳೂ ತಾನು ಚೆನ್ನಾಗಿ ಸಾಕಿದ ಆಳುಗಳೂ ಉಳಿದವರೆಲ್ಲರೂ ರಣರಂಗದಲ್ಲಿ ಸತ್ತರೂ ಉತ್ಸಾಹಶೂನ್ಯನಾಗದೆ ಉಗುರಿನ ಹಾಗೆ ಎರಡು ಕಡೆಯೂ ನಾಶಮಾಡುವ ತೀಕ್ಷ್ಣತೆಯನ್ನೂ ಹೋಗಲಾಡಿಸಿಕೊಳ್ಳದೆ ತನ್ನ ಮೆಯ್ಯಲ್ಲಿ ಧರಿಸಿ ಭೀಮನ ಒಂದೇ ಗರ್ಜನೆಗೆ ಕೋಪವುಂಟಾಗಲು ಸಿಡಿಲಿನಂತೆ ರೇಗಿ ಬಂದಿದ್ದಾನೆ. ದುರ್ಯೋಧನನು ಎಂತಹ ಶೂರನೋ! ವ॥ ಎನ್ನುವಷ್ಟರಲ್ಲಿ ದುರ್ಯೋಧನನು ಸಮೀಪಕ್ಕೆ ಬಂದು ಪಾಂಡವರಿಗೆ ಹೀಗೆಂದನು - ೮೪. ಹಿಂದೆ ಭೂಮಿಯು ರಾಕ್ಷಸನಾದ ಹಿರಣ್ಯಾಕ್ಷನ ಕೈಸೇರಲು ಈ ಕೃಷ್ಣನೇ ಮೊದಲು ಪಾತಾಳಲೋಕವನ್ನು ಪ್ರವೇಶ ಮಾಡಿದುದೂ ಈ ಮಹಾಭಯಂಕರವಾದ ಯುದ್ಧದಲ್ಲಿ ನಿಮ್ಮ ಕೈಗೆ ಬಿದ್ದ ಭೂಮಂಡಲವನ್ನು ಪುನಃ ತರಲು ಶಾಸ್ತ್ರೋಕ್ತವಾಗಿ ನಾನು ಈ ಕೊಳವನ್ನು ಪ್ರವೇಶಿಸಿದುದೂ ಯಾವ ತಪ್ಪು? ಇನ್ನು ನನಗೆದುರಾಗುವವರು ಯಾರು ತೋರಿಕೊಡಿ ಎಂದನು. ವ॥ ಧರ್ಮರಾಯನು ಹೀಗೆಂದನು :

ಮ॥ ಬಿಸುಡಿನ್ನಪ್ಪೊಡಮೇವಮಂ ಧರಣಿಯಂ ಪಚ್ಚಾಳ್ವಮೇನಪ್ಪುದೀ
ಕಿಸುರೊಳ್ ಕೆಮ್ಮನೆ ಪಾಪಕರ್ಮ ಚಲಮಂ ಕೊಂಡಾಡದೆಮ್ಮಯ್ವರುಂ ।
ಬೆಸಕೆಯ್ಯುತ್ತಿರೆ ನೀನೆ ಮೇಣರಸುಗೆಯ್ ಸೋದರ್ಯದಿಂದೊಳ್ಪಿತೇ
ವಸುಧಾಮಂಡಳಮಿಂಬುಕೆಯ್ವುದಿದನಾಂ ಕೆಯ್ಯೊಡ್ಡಿದೆಂ ಬೇಡಿದೆಂ ॥ ೮೫

ವ॥ ಎಂಬುದುಮಂಬುಜೋದರನಿಂತೆಂದಂ-

ಅನವದ್ಯ ॥ ಅಯ್ದುಪಿವಾಡದೊಳಯ್ವರುಮಂ ನೀಂ ಕೂರ್ತಿರಿಸೆಂದೊಡಮೆಂತುಮೇ
ಗೆಯ್ದುಮದೊಲ್ಲದ ಕಾರಣದಿಂದಂ ನೋಡಿನಿತಾದುದು ನಿನ್ನೊಳೇಂ ।
ಸಯ್ದವನಲ್ಲನೆ ಧರ್ಮತನೂಜಂ ಪೇಳ್ದುದೆನಿನ್ನೆಮಗಿಂಬುಕೆಯ್
ಸಯ್ದನೆ ಆಗುಟಿದಾರೊಳಮೇವಂಗೊಳ್ಳದಿರಿಂ ಫಣಿಕೇತನಾ ॥ ೮೬

ವ॥ ಎಂಬುದುಮಾ ಮಾತಂ ಕಿವಿಗಿವಿಗೆಯ್ದು ತನ್ನ ಗದಾದಂಡಮಂ ಭುಜಾ ದಂಡದೊಳಳವಡಿಸಿ ನೋಡಿ ದುರ್ಯೋಧನನಿಂತೆಂದಂ-

ಕಂ॥ ಮುನ್ನಿಮ್ಮ ಪೇಳ್ದು ಗೆಯ್ಯದ
ನಿನ್ನೀ ಪದದಲ್ಲಿ ಪೇಳ್ದು ಗೆಯ್ವಂತುಂತೇಂ ।
ಪನ್ನಗಪತಾಕನಲ್ಲೆನೆ
ಬನ್ನಣವಡೆಮಾತನೆನ್ನೊಳಿಂ ನುಡಿಯದಿರಿಂ ॥ ೮೭

೮೫. ದುರ್ಯೋಧನ ಇನ್ನು ಮೇಲಾದರೂ ಕೋಪವನ್ನು ಬಿಸಾಡು, ಭೂಮಿಯನ್ನು ಭಾಗಮಾಡಿ ಆಳೋಣ. ಈ ದ್ವೇಷದಿಂದ ಏನು ಪ್ರಯೋಜನ? ನಿಷ್ಪ್ರಯೋಜನವಾಗಿ ಪಾಪಕರ್ಮವಾದ ಹಟವನ್ನು ಆಶ್ರಯಿಸದೆ ನಾವು ಅಯ್ದು ಜನವೂ ನಿನಗೆ ಸೇವೆ ಮಾಡುವ ಹಾಗೆ ನೀನೇ ರಾಜ್ಯಭಾರಮಾಡು. ಸಹೋದರಬಾಂಧವ್ಯಕ್ಕಿಂತ ಈ ಭೂಮಂಡಲ ಮೇಲಾದುದೇ? ಇದನ್ನು ಅಂಗೀಕರಿಸು. ನಾನು ಕೈಯೊಡ್ಡಿ ಬೇಡಿದ್ದೇನೆ". ವ॥ ಕಮಲನಾಭನಾದ ಕೃಷ್ಣನು ಹೀಗೆಂದನು - ೮೬. ಅಯ್ದು (ಸಾಮಾನ್ಯವಾದ) ಹಳ್ಳಿಗಳಲ್ಲಿ ಅಯ್ದು ಜನವನ್ನು ನೀನು ಪ್ರೀತಿಯಿಂದ ಇರಿಸು ಎಂದು ಹೇಳಿದರೂ ಹೇಗೊ ಏನು ಮಾಡಿಯೂ ಅದಕ್ಕೆ ಒಪ್ಪದ ಕಾರಣದಿಂದ ಇಷ್ಟಾಯಿತು ನೋಡು. ನಿನ್ನಲ್ಲಿ ಧರ್ಮರಾಜನು ನೇರವಾಗಿ ಸ್ನೇಹದಿಂದ ನಡೆದುಕೊಂಡಿದ್ದಾನೆ. ಧರ್ಮರಾಯನು ಹೇಳಿದುದನ್ನು ಇನ್ನು ನಮಗಾಗಿ ಅಂಗೀಕಾರ ಮಾಡು; ದುರ್ಯೋಧನ, ಸ್ನೇಹಿತನಾದವನಾಗಿಯೇ ಉಳಿ; ಯಾರಲ್ಲಿಯೂ ಕೋಪಿಸಿಕೊಳ್ಳಬೇಡ. ವ॥ ಎನ್ನಲು ಆ ಮಾತನ್ನು ಕಿವಿಗೆ ಹಾಕಿಕೊಳ್ಳದೆ ತನ್ನ ಗದಾದಂಡವನ್ನು ಭುಜಾದಂಡದಲ್ಲಿ ಸೇರಿಸಿಕೊಂಡು ನೋಡಿ ದುರ್ಯೋಧನನು ಹೀಗೆ ಹೇಳಿದನು.. ೮೭. ಮೊದಲು ನೀವು ಹೇಳಿದ್ದನ್ನು ಮಾಡದವನು ಇನ್ನು ಈ ಸಂದರ್ಭದಲ್ಲಿ ನೀವು ಹೇಳಿದುದನ್ನು ಮಾಡುವುದಕ್ಕೆ ನಾನು (ಅಭಿಮಾನಧನನಾದ) ದುರ್ಯೋಧನನಲ್ಲವೆ? ವೃಥಾ ಬಿನ್ನಣದ

ಶಾ|| ಆ ದುಶ್ಶಾಸನನಂ ಪೊರಳ್ಚಿ ರಣದೊಳ್ ಕೊಂದೀ ಮರುತ್ಪುತ್ರನಿಂ
ತಾದಂ ದಳ್ಳಿಸೆ ನೋಡಿ ನೋಡಿ ಪುದುವಾಳ್ವಿಂತಕ್ಕುಮಿಂತೀಗಳಾ |
ನಾದೆಂ ಮೇಣಿವನಾದನೇಕೆ ತಡೆವಿರ್ ಕೆಯ್ದೊವ್ವೆವಿನ್ನೀಂ ಕರಂ
ಸೋದರ್ಯಕ್ಕೆ ಕನಲ್ದೊಡೆಂತಿನಿಬರುಂ ಕಾದಿಂ ಭರಂಗೆಯ್ದಪೆಂ || ೮೮

ವ|| ಎಂಬನ್ನೆಗಂ ತೀರ್ಥಯಾತ್ರೆಯೊಳ್ ತೊಡರ್ದು ತಡೆದ ಬಲದೇವಂ ದುರ್ಯೋಧನಂಗಾಯು ಬರ್ಪಂತೆ ಪೆಗಲೊಳ್ ಹಲಾಯುಧಮನಿಕ್ಕಿಕೊಂಡು ಜಂಗಮಪರ್ವತಮೆ ಬರ್ಪಂತೆ ಬಂದು ತನಗೆ ಪೊಡೆವಟ್ಟ ದುರ್ಯೋಧನನಂ ಪರಸಿ ಪಿರಿದುಮಪ್ಪುಕೆಯ್ಂದಪ್ಪಿ ಕೊಂಡಾತಂಗಾದವಸ್ಥೆಯುಂ ಕಂಡು ಮನ್ಯುಗದ್ಗದಕಂಠನಾಗಿ ತನಗೆಱಗಿದ ಮುರಾಂತಕನುಮಂ ಪಾಂಡುಪುತ್ರರುಮಂ ಪರಸಲೊಲ್ಲದಿದೇನಂ ಮಾಡಿದಿರೆಂದೊಡೆ ಮಧುಮಥನನಣ್ಣನ ಮುನಿದ ಮೊಗಮನಱಿದಿಂತೆಂದಂ-

ಚಂ|| ಮುಳಿವೊಡಮೆಯ್ದೆ ಕೇಳ್ದು ಮುಳಿ ಪಾಂಡುತನೂಜರ ಮುನ್ನಿನಾಳ್ದ ಭೂ
ತಳಮನದೆಂತುಮೀಯದೆ ಸುಯೋಧನನುದ್ಧತನ ವೃತ್ತಿಯಿಂ ಸುಹೃ |
ದ್ಬಳಮಟೆವಟ್ಟಿಗ್ಗೆ ಕಾದಿ ಪುದುವಾಳ್ಕೆಗೊಡಂಬಡಲೊಲ್ಲದಿನ್ನುಮು
ಮ್ಮಳಿಸುವನೀಗಳಾತನನೆ ನೀಂ ಬೆಸಗೊಳ್ ಪುಸಿಯಂ ಸುಯೋಧನಂ || ೮೯

ವ|| ಎನೆ ನೀಂ ಮರುಳ್ತನಮನೇಕೆ ಮಾಡಿದೆಯೆಂದು ತನ್ನ ಮೊಗಮಂ ನೋಡಿದ ಹಲಾಯುಧಂಗೆ ದುರ್ಯೋಧನನಿಂತೆಂದಂ-

ಲೋಕೋಕ್ತಿಯನ್ನು ನನ್ನಲ್ಲಿ ಇನ್ನು ಮೇಲೆ ಆಡಬೇಡಿ. ೮೮. ದುಶ್ಶಾಸನನನ್ನು ಯುದ್ಧದಲ್ಲಿ ಹೊರಳಿಸಿ ಕೊಂದು ಈ ಭೀಮನೂ ಹೀಗೆ ವಿಶೇಷವಾಗಿ ಉರಿಯುತ್ತಿರುವುದನ್ನು ನೋಡಿ ನೋಡಿಯೂ ಜೊತೆಯಲ್ಲಿ ಕೂಡಿ ಬಾಳುವುದು ಹೇಗೆ ಸಾಧ್ಯವಾಗುತ್ತದೆ? ಈಗ ನಾನಾದೆನು ಮತ್ತು ಇವನಾದನು, ಏಕೆ ತಡೆಯುತ್ತಿದ್ದೀರಿ; ಕೈತಟ್ಟಿದ್ದೇನೆ. ಇನ್ನು ನೀವು ಸೋದರತನಕ್ಕೇ ಕೋಪಿಸಿಕೊಳ್ಳುವುದಾದರೆ ನೀವಿಷ್ಟು ಜನವೂ ಯುದ್ಧಮಾಡಿ; ನಾನು ಎದುರಿಸುತ್ತೇನೆ. ವ|| ಎನ್ನುವಷ್ಟರಲ್ಲಿ ತೀರ್ಥಯಾತ್ರೆಯಲ್ಲಿ ಸಿಕ್ಕಿ ತಡ ಮಾಡಿದ ಬಲರಾಮನು ದುರ್ಯೋಧನನಿಗೆ ಆಯಸ್ಸು ಬರುವಂತೆ ಹೆಗಲಲ್ಲಿ ನೇಗಿಲನ್ನು ಧರಿಸಿ ಚಲಿಸುವ ಬೆಟ್ಟವೇ ಬರುವ ಹಾಗೆ ಬಂದನು. ತನಗೆ ನಮಸ್ಕಾರಮಾಡಿದ ದುರ್ಯೋಧನನನ್ನು ಆಶೀರ್ವದಿಸಿ ಹಿರಿದಾಗಿ ಆಲಂಗಿಸಿಕೊಂಡು ಆತನಿಗಾದ ಅವಸ್ಥೆಯನ್ನು ಕಂಡು ದುಃಖದಿಂದ ಗದಗದಿಕೆಯಿಂದ ಧ್ವನಿ ಹೊರಡದ ಕಂಠವುಳ್ಳವನಾದನು. ತನಗೆ ನಮಸ್ಕಾರ ಮಾಡಿದ ಕೃಷ್ಣನಿಗೂ ಪಾಂಡವರಿಗೂ ಹರಸಲು ಇಷ್ಟ ಪಡದೆ ಇದೇನನ್ನು ಮಾಡಿದಿರಿ ಎಂದನು. ಕೃಷ್ಣನು ಅಣ್ಣನ ಕೋಪದಿಂದ ಕೂಡಿದ ಮುಖವನ್ನು ಅರ್ಥಮಾಡಿಕೊಂಡು ಹೀಗೆಂದನು. ೮೯. ಕೋಪಿಸಿ ಕೊಳ್ಳುವುದಾದರೆ ಚೆನ್ನಾಗಿ ಕೇಳಿ ವಿಚಾರ ಮಾಡಿ ಕೋಪಿಸಿಕೊ. ಪಾಂಡವರು ಮೊದಲು ಆಳಿದ ಭೂಮಿಯನ್ನು ಏನುಮಾಡಿದರೂ ಕೊಡದೆ ದುರ್ಯೋಧನನು ಗರ್ವದಿಂದ ಮಿತ್ರಸೈನ್ಯಗಳೆಲ್ಲ ಸತ್ತು ನಾಶವಾಗುವ ಹಾಗೆ ಕಾದಿ ಕೂಡಿ ಬಾಳುವುದಕ್ಕೆ ಒಪ್ಪಿಕೊಳ್ಳದೆ ಇನ್ನೂ ಮೇಲೆ ಬೀಳುತ್ತಿದ್ದಾನೆ. ಈಗ ಅವನನ್ನೇ ನೀನು ಕೇಳು; ದುರ್ಯೋಧನನು ಹುಸಿಯಾಡುವುದಿಲ್ಲ. ವ|| ಎನ್ನಲು ನೀನು ದಡ್ಡತನವನ್ನೇಕೆ ಮಾಡಿದೆ ಎಂದು ತನ್ನ

ಮ॥ ಹರಿಯೆಂದಂದಮದಂತೆ ಪಾಂಡುತನಯರ್ ನಿರ್ದೋಷಿಗಳ್ ತಥ್ಯಮಿಂ
ತು ರಣಸ್ಥಾನದೊಳಿನ್ನೆರಬ್ಬುಡಿವೆನೇ ಮದ್ಬಂಧು ಶೋಕಾಗ್ನಿಯಿಂ ।
ದುರಿದಪ್ಪೆಂ ತೊಡರ್ದೆನ್ನನಿಂ ಬಿಡು ವಿರೋಧಿಕ್ಷ್ಮಾಪರೆನ್ನೀ ಗದಾ
ಪರಿಘಾಘಾತದಿನಟ್ಟೆ ತಟ್ಟೆ ಮಡಿದಿನ್ನೆಬ್ಬಾಡದರೇಂ ಪೋಪರೇ ॥ ೯೦

ವ॥ ಎಂಬುದುಂ ಸಂಕರ್ಷಣನಾತನ ಮನದುತ್ಕರ್ಷತೆಯನಱಿದು ಪೆಱತನಿನ್ನೆನಗೆ ನುಡಿಯಲೆಡೆಯಿಲ್ಲ ಧರ್ಮಯುದ್ಧಮಂ ನೋಡಲ್ವೇಳ್ಕುಮೆಂದು ಧರ್ಮಪುತ್ರನನಿಂತೆಂದಂ ನಿಮ್ಮಯ್ವರೊಳೊರ್ವನೀತನೊಳ್ ಕಾದುವುದು ಕಾದಿ ಸೋಲ್ತಿಂ ಬಳಿಯಂ ದುರ್ಯೋಧನಂ ನೆಲನನಾಳ್ವನುೞಿದ ನಾಲ್ವರುಮಾತಂಗೆ ಬೆಸಕೆಯ್ವುದಾರ್ ಕಾದಿದಪಿರೆನೆ ಭೀಮಸೇನನಿಂತೆಂದಂ-

ಚಂ॥ ತೊಡರ್ದು ಬಿಡಿಂ ಸುಯೋಧನನನೆನ್ನುಮನಾನಿರೆ ಕೌರವಾಧಿಪಂ
ಗಿಡುವಗೆ ಪೇೞಿಮಿಂ ಪೆಱರೊಳಂ ಮುಳಿಸುಂಟೆ ಮಹಾ ಪ್ರತಿಜ್ಞೆಯೊಳ್ ॥
ತೊಡರ್ದನುಮಾನೆ ಭೂತಮಳಮದಿರ್ಕೆಡೆಗೆಯ್ ಗೆಲಲಾರ್ತರಾರ್ಗೆರ
ಬ್ಬುಡಿಯದಿರೆಂದೊಡಂಬಡಿಸಿದಂ ಹಳಿಯಂ ನಯದಿಂ ವೃಕೋದರಂ ॥೯೧

ಮುಖವನ್ನು ನೋಡಿದ ಬಲರಾಮನಿಗೆ ದುರ್ಯೋಧನನು ಹೀಗೆಂದನು. ೯೦. ಕೃಷ್ಣನು ಹೇಳಿದ ರೀತಿ ಹೇಗೋ ಹಾಗೆಯೇ, (ಅವನೆಂದುದು ನಿಜ) ಪಾಂಡುಪುತ್ರರು ನಿರ್ದೋಷಿಗಳು, ಅದು ನಿಜ. ಯುದ್ಧರಂಗದಲ್ಲಿ ಇನ್ನು ಮೇಲೆ ಎರಡು ಮಾತನ್ನಾಡುತ್ತೇನೆಯೇ? ನನ್ನ ಬಾಂಧವರ ಮರಣದಿಂದುಂಟಾದ ದುಃಖದ ಬೆಂಕಿಯಿಂದ ಉರಿಯುತ್ತಿದ್ದೇನೆ. ಸಿಕ್ಕಿಕೊಂಡಿರುವ ನನ್ನನ್ನು ನೀನು ಬಿಟ್ಟುಬಿಡು. ವೈರಿರಾಜರು ಪರಿಘದಂತಿರುವ ಈ ಗದೆಯ ಪೆಟ್ಟಿನಿಂದ ನಾಶವಾಗಿ ತಗ್ಗಿ ಹಾಳಾಗದೆ ಇರುತ್ತಾರೆಯೆ ಎಂದನು. ವ॥ ಬಲರಾಮನು ಆತನ ಮನಸ್ಸಿನ ಉದಾತ್ತತೆಯನ್ನು ತಿಳಿದು ಇನ್ನು ಬೇರೆಯದನ್ನು ನುಡಿಯಲು ಅವಕಾಶವಿಲ್ಲ. ಧರ್ಮಯುದ್ಧವನ್ನು ನೋಡಬೇಕೆಂದು ಧರ್ಮಪುತ್ರನನ್ನು ಕುರಿತು ಹೀಗೆಂದನು, ನಿಮ್ಮ ಅಯ್ದು ಜನರಲ್ಲಿ ಒಬ್ಬನು ಈತನೊಡನೆ ಕಾದುವುದು; ಕಾದಿ ಸೋತ ಬಳಿಕ ದುರ್ಯೋಧನನು ಭೂಮಿಯನ್ನು ಆಳುವನು, ಉಳಿದ ನಾಲ್ಕು ಜನವೂ ಆತನಿಗೆ ಸೇವೆಮಾಡತಕ್ಕದ್ದು, ಯಾರು ಕಾದುತ್ತೀರಿ ಎನ್ನಲು ಭೀಮಸೇನನು ೯೧. ನನ್ನನ್ನೂ ದುರ್ಯೋಧನನನ್ನೂ ಒಟ್ಟುಗೂಡಿಸಿ ಬಿಡಿ. ಕೌರವೇಶ್ವರನಿಗೆ ಬದ್ಧದ್ವೇಷಿಯಾಗಿ ನಾನಿರುವಾಗ ಇನ್ನಿತರರಲ್ಲಿ ಕೋಪವುಂಟೆ? ಮಹಾ ಪ್ರತಿಜ್ಞಾರೂಢನಾಗಿರುವವನೂ ನಾನೇ! ಭೂಮಿಯ ವಿಷಯ ಅದು ಹಾಗಿರಲಿ, ಕಾಳಗಮಾಡುವುದಕ್ಕೆ ಸ್ಥಳವನ್ನು ಸಿದ್ಧಪಡಿಸು. ಗೆಲ್ಲಲು ಸಮರ್ಥ ರಾದವರು ಯಾರು? ಎರಡು ಮಾತನ್ನಾಡಬೇಡ ಎಂದು ಭೀಮನು ಬಲರಾಮನನ್ನು ನಯದಿಂದ ಒಪ್ಪಿಸಿದನು. ವ॥ ಯುದ್ಧರಂಗಕ್ಕೆ ಎಲ್ಲರನ್ನು ಕೂಡಿಕೊಂಡು ಬಂದರು.

ವ|| ಅಂತೊಡಂಬಡಿಸಿ ಸಂಗ್ರಾಮರಂಗಕ್ಕನಿಬರುಮನೊಡಗೊಂಡು ಬಂದು-

ಕಂ|| ಕರಿ ತುರಗ ನರ ಕಳೇವರ
ಪರಿಚಿತ ರಣದಲ್ಲಿ ಮಹೀತಳಂ ಕಾದಲ್ಕಿಂ ।
ತರಿದಪ್ಪುದೆಂತಿದೆಂದಣ
ಮಿರದೆ ಮರುತ್ಸೂನು ಸಮಜಿದಂ ಕೊಳುಗುಳಮಂ|| ೬೨

ವ|| ಅಂತು ಸಮಜಿದ ಸಂಗ್ರಾಮರಂಗದೊಳ್ ಪರಸ್ಪರ ವಿರೋಧ ಕ್ರೋಧವಿಕ್ಷೇಪ ಹರ್ಷಿತ ಮಾರ್ಗ ಪ್ರಹಸ್ತ ಪ್ರಸಾಧಿತ ಘೋರ ಸಂಗ್ರಾಮರುಮತ್ಯುಗ್ರ ಗದಾ ಪರಿಘ ಭಾಸುರ ಭುಜಪರಿಘರುಮಪ್ಪ ಭೀಮ ದುರ್ಯೋಧನರಿರ್ವರುಮೊರ್ವರೊರ್ವರಂ ಮೂದಲಿಸಿ ಸವ್ಯಾಪಸವ್ಯ ಭ್ರಾಂತೋದ್ಭ್ರಾಂತ ಕರ್ಷಣ ಮಂಡಳವರ್ತನಾದಿಗಳಪ್ಪ ಮೂವತ್ತೆರಡು ಗದಾ ವಿಕ್ಷೇಪದೊಳಮತಿ ಪರಿಚಿತರಾಗಿ ಕಾದುವಾಗಳ್-

ಮ|| ಮೊದಲಿಂ ಕಿಟ್ಟು ಕುಳಾಚಳಪ್ರತತಿಗಳ್ ಪ್ರೋದ್ಯದ್ಗದಾಘಾತವಾ
ತದಿನಾಕಾಶಮನೆಯ್ದೆ ತೂಳ್ದಿ ಕವಿತಂದಂಭೋಧಿಯೊಳ್ ಸೂಱು ಸೂ ।
ಱದೆ ಬೀೞ್ಗುಂದುವು ಬತ್ತಲಾಟಿಸಿದುವಾ ವಾರಾಶಿಗಳ್ ಸುರ್ಕಿ ಬಿ
ಕ್ಕಿದ ಬಾಯಂತೆ ಸುರುಳ್ದುದಂಬರಮಿದೇಂ ಪೆಂಪೋ ಗದಾಯುದ್ಧದಾ ||೬೩

ಗದೆಯೊಳ್ ಘಟ್ಟಿಸೆ ಪುಟ್ಟಿದುಳ್ಕತತಿ ನೀಳ್ದಾಕಾಶಮಂ ತಾಪಿನಂ
ಪುದಿದಾ ದೇವರ ಕಣ್ಗೊಳುಳ್ಕಿ ವಿಳಯೋಲ್ಕಾಶಂಕೆಯಂ ಮಾಡೆ ಮೆ ।
ಟ್ಟಿದ ಸೂಟಿಟ್ಟುಗಳಿಂದೆ ಬೆಟ್ಟು ಕಟಿಲಲ್ಕಳ್ಳಾಡೆ ಭೂಭಾಗಮಾ
ದುದು ದುರ್ಯೋಧನ ಭೀಮಸೇನರ ಗದಾಯುದ್ಧಂ ಮಹಾಭೈರವಂ || ೬೪

೬೨. ಆನೆ ಕುದುರೆ ಕಾಲಾಳಿನ ಶರೀರಗಳಿಂದ ಕಿಕ್ಕಿರಿದ ಯುದ್ಧಭೂಮಿಯಲ್ಲಿ ನೆಲವು ಕಾದುವುದಕ್ಕೆ ಕಷ್ಟವಾಗುತ್ತದೆ ಎಂದು ಸ್ವಲ್ಪವೂ ಸಾವಕಾಶ ಮಾಡದೆ ಭೀಮನು ಯುದ್ಧಭೂಮಿಯನ್ನು ಗುಡಿಸಿದನು, ವ|| ಹಾಗೆ ಗುಡಿಸಿದ ಯುದ್ಧರಂಗದಲ್ಲಿ ಒಬ್ಬರಿಗೊಬ್ಬರು ವಿರೋಧ, ಕ್ರೋಧ, ವಿಕ್ಷೇಪ, ಹರ್ಷಿತ, ಮಾರ್ಗ, ಪ್ರಹಸ್ತ, ಪ್ರಸಾದಿತಗಳೆಂಬ ಗದಾಯುಧ್ಧದ ಪರಿಕರಗಳಿಂದ ಕೂಡಿದ ಭಯಂಕರವಾದ ಯುದ್ಧವುಳ್ಳವರೂ ಅತಿ ಭಯಂಕರವಾದ ಪರಿಘದಂತಿರುವ ಗದೆಯಿಂದ ಪ್ರಕಾಶಿತವಾದ ಭುಜಾದಂಡವುಳ್ಳವರೂ ಆದ ಭೀಮದುರ್ಯೋಧನರಿಬ್ಬರೂ ಒಬ್ಬರನ್ನೊಬ್ಬರು ಹಿಯ್ಯಾಳಿಸಿ, ಸವ್ಯ, ಅಪಸವ್ಯ, ಭ್ರಾಂತ, ಉದ್ಭ್ರಾಂತ, ಕರ್ಷಣ, ಮಂಡಳಾವರ್ತನ - ಇವೇ ಮೊದಲಾದ ಮೂವತ್ತೆರಡು ಗದಾಪ್ರಯೋಗದಲ್ಲಿಯೂ ವಿಶೇಷ ಪರಿಣತರಾಗಿ ಕಾದಿದರು. ೬೩. ಮೇಲೆತ್ತಿದ ಗದೆಯ ಪೆಟ್ಟನಿಂದ ಹುಟ್ಟಿದ ಗಾಳಿಯಿಂದ ಕುಲಪರ್ವತಗಳ ಸಮೂಹಗಳು ಮೂಲದಿಂದ ಕಿತ್ತು ಆಕಾಶವನ್ನು ಪೂರ್ಣವಾಗಿ ಮುಚ್ಚಿ ಬಂದು ಕ್ರಮವಾಗಿ ಸಮುದ್ರದಲ್ಲಿ ಬೀಳಲಾರಂಭಿಸಿದುವು. ಆ ಸಮುದ್ರಗಳೂ ಒಣಗಿ ಹೋಗಲು ಆಶಿಸಿದುವು. ಆಕಾಶವು ಸುಕ್ಕಿ ಬಿಕ್ಕಿದ ಬಾಯಂತೆ ಸುರುಳಿಯಾಯಿತು. ಗದಾಯುದ್ಧದ ವೈಭವವು ಅದ್ಭುತವಾಗಿತ್ತು. ೬೪. ಇಬ್ಬರೂ ಗದೆಗಳಲ್ಲಿ ಪರಸ್ಪರ ಘಟ್ಟಿಸಲು ಹುಟ್ಟಿದ ಉಲ್ಕೆಗಳ ಸಮೂಹವು ವಿಸ್ತರಿಸಿ ಆಕಾಶವನ್ನು

ವ|| ಅಂತಿರ್ವರುಮೊರ್ವರೊರ್ವರೊಳ್ ಬೀರಮಂ ಬಿನ್ನಣಮುಮಂ ಮೆಱೆದು ಕಾದೆ ದುರ್ಯೋಧನಂ ವಿದ್ಯಾಧರ ರಣದೊಳತಿಪರಿಚಿತನಪ್ಪುದಱಿಂದಾಕಾಶಕ್ಕೆ ನೆಗೆದು-

ಕಂ|| ಸಿಡಿಲೆಱಗುವಂತೆ ಭೋರೆಂ
ದೊಡನೆಱಗಿ ಮಹೋಗ್ರ ಘನ ಗದಾಪರಿಘದಿನಾ ।
ರ್ದೆಡೆಗಿಡೆ ಪೊಯ್ದೊಡೆ ಭೀಮಂ
ಕೆಡೆದಂ ಧರೆ ನಡುಗೆ ನೀಳ ಕುತ್ಕೀಳಂಬೊಲ್ ॥ ೯೫

ವ|| ಅಂತು ದುರ್ಯೋಧನ ಗದಾಪ್ರಹರಣದಿಂದಚೇತನನಾಗಿರ್ದೊಡೆ ಬಿೞ್ದನನಿಱಿಯೆನೆಂದು ಪವಮಾನಮಾರ್ಗದೊಳಲ್ಪಾಂತರದೊಳ್ ಗದೆಯಂ ಬೀಸುವಾಗಳ್ ಸುಯೋಧನನ ಗದೆಯ ಗಾಳಿಯೊಳ್ ಮೂರ್ಛೆಯಿಂದೆೞ್ಚತ್ತು ಧರಾತಳದೊಳ್ ಸೂಸಿದ ತನ್ನ ಗದಾದಂಡಮಂ ಭುಜದಂಡದೊಳಳವಡಿಸಿಕೊಂಡ ವೃಕೋದರನನಂಬುಜೋದರಂ ಬಿಚ್ಚಟಿಸುವ ನೆವದೊಳೆಮ್ಮಮ್ಮಂಗಕ್ಕುಮೆಂದು ತೊಡೆಯಂ ಪೊಯ್ವಾರ್ಪುದುಂ ದುರ್ಯೋಧನನ ನೆಱನದೆಂದಱಿದು-

ಮ|| ಸ್ರ || ನೆಱನೀತಂಗೂರುಯುಗ್ಮಂ ನೆಱನನಱಿಯದಾನಿನ್ನೆಗಂ ಮಾಣ್ದೆನಿಂ ಪೋ
ತೆಱಪಂ ಪಾರ್ದಿರ್ಪೆನೆಂದೊಯ್ಯನೆ ಗದೆಯನಣಂ ಪಾಡುಗೆಯ್ದಿರ್ದು ಭೋರೆಂ ।
ದೆಱಪುಗ್ರಾರಾತಿಯೂರುದ್ವಯಮನಿಡೆ ಗದಾಘಾತದಿಂದೂರುಯುಗ್ಮಂ
ಮುಱಿದೆತ್ತಂ ನುಚ್ಚುನೂಱಾಗಿರೆ ಕೆಡೆದನಿಳಾಭಾಗದೊಳ್ ಧಾರ್ತರಾಷ್ಟ್ರಂ ॥ ೯೬

ವ್ಯಾಪಿಸಿ ದೇವತೆಗಳ ಕಣ್ಣಲ್ಲಿ ತುಂಬಿ ತೊಳಗಲು ಅವರಿಗೆ ಅವು ಪ್ರಳಯಕಾಲದ ಉಲ್ಕಾಪಾತದ ಸಂದೇಹವನ್ನುಂಟುಮಾಡಿದವು. ಅವರ ಕ್ರಮ ಕ್ರಮವಾದ ತುಳಿತದಿಂದ ಬೆಟ್ಟಗಳು ಸಡಿಲವಾಗಿ ಕಳಚಿ ಬಿದ್ದವು. ಭೂಭಾಗವು ಅಲ್ಲಾಡಿದುವು. ಭೀಮ, ದುರ್ಯೋಧನರ ಗದಾಯುದ್ಧವು ಮಹಾಭಯಂಕರವಾಯಿತು. ವ|| ಇಬ್ಬರೂ ಒಬ್ಬೊಬ್ಬರಲ್ಲಿ ವೀರ್ಯವನ್ನು ಕೌಶಲವನ್ನೂ ಪ್ರದರ್ಶಿಸಿ ಕಾದಲು ದುರ್ಯೋಧನನು ವಿದ್ಯಾಧರಕರಣದಲ್ಲಿ (ಮೇಲಕ್ಕೆ ಹಾರುವ ಒಂದು ವರಸೆ ಅಥವಾ ಪಟ್ಟು) ವಿಶೇಷ ಪರಿಚಿತನಾದುದರಿಂದ ಆಕಾಶಕ್ಕೆ ನೆಗೆದು -೯೫. ಸಿಡಿಲು ಬೀಳುವಂತೆ ಭೋರೆಂದು ತಕ್ಷಣವೇ ಎರಗಿ ಮಹಾಭಯಂಕರವಾದ ದಪ್ಪನಾದ ಪರಿಘದಂತಿರುವ ಗದೆಯಿಂದ ಘರ್ಜನೆಮಾಡಿ ಇದ್ದ ಸ್ಥಳದಿಂದ ಕದಲುವಂತೆ ಹೊಡೆಯಲು ಭೂಮಿ ನಡುಗಿತು, ಭೀಮನು ನೀಲಪರ್ವತದಂತೆ ಕೆಳಗೆ ಬಿದ್ದನು; ವ|| ಹಾಗೆ ದುರ್ಯೋಧನನ ಗದೆಯ ಹೊಡೆತದಿಂದ ಮೂರ್ಛಿತನಾಗಿರಲು ದುರ್ಯೋಧನನು 'ಬಿದ್ದವನನ್ನು ಹೊಡೆಯುವುದಿಲ್ಲ' ಎಂದು ವಾಯುಮಾರ್ಗದಲ್ಲಿ ಸ್ವಲ್ಪದೂರದಲ್ಲಿಯೇ ಗದೆಯನ್ನು ಬೀಸಿದನು. ಭೀಮನು ಆ ಗದೆಯ ಗಾಳಿಯಿಂದ ಮೂರ್ಛೆಯಿಂದೆಚ್ಚತ್ತು ಭೂಮಿಯ ಮೇಲೆ ಬಿದ್ದಿದ್ದ ತನ್ನ ಗದೆಯನ್ನು ಭುಜಾದಂಡದಲ್ಲಿ ಅಳವಡಿಸಿಕೊಂಡನು. ಭೀಮನನ್ನು ಕೃಷ್ಣನು ಹೊಗಳುವ ನೆಪದಿಂದ ನಮ್ಮಪ್ಪನಿಗೆ ಜಯವಾಗುತ್ತದೆ ಎಂದು ತೊಡೆಯನ್ನು ತಟ್ಟಿ ಆರ್ಭಟಿಸಿದನು, ಭೀಮನು ಅದೇ (ಆ ತೊಡೆಯೇ) ದುರ್ಯೋಧನನ ಮರ್ಮಸ್ಥಳವೆಂದು ತಿಳಿದನು. ೯೬. ಈ ಎರಡು ತೊಡೆಗಳು ಈತನಿಗೆ ಮರ್ಮಸ್ಥಾನ.

ಚಂ॥ ನುಡಿದುದನೆಯ್ದೆ ತುತ್ತ ತುದಿಯೆಯ್ದುವಿನಂ ನುಡಿದಂ ವಲಂ ಚಲಂ
ಬಡಿದುದನೆಯ್ದೆ ಮುಂ ಪಿಡಿದುದಂ ಪಿಡಿದಂ ಸಲೆ ಪೂಣ್ದ ಪೂಣ್ಕೆ ನೇ ।
ರ್ಪಡೆ ನಡೆವನ್ನೆಗಂ ನಡೆದನಳ್ಕದೆ ಬಳ್ಕದೆ ತನ್ನೊಡಲ್ ಪಡ
ಲ್ವಡುವಿನಮಣ್ಮುಗುಂದನೆ ದಲೇನಭಿಮಾನಧನಂ ಸುಯೋಧನಂ ॥ ೯೭

ವ॥ ಅಂತು ಸತ್ತುಂ ನೆಲನಂ ಪತ್ತುವಿಡೆನೆಂಬಂತೆ ನೆಲನಂ ಪತ್ತಿ ಮೂರ್ಛಾಗತನಾಗಿರ್ದ ಕುರುಕುಳಚೂಡಾಮಣಿಯನೇನುಂ ಮಾಣದೆ ಕಿಮ್ಮೀರವೈರಿ ಮುಟ್ಟೆವಂದಾಗಳೇಕಾದಶಾಕ್ಷೋಹಿಣೀಪತಿಯಪ್ಪ ರಾಜಾಧಿರಾಜನಂ ಪರಾಭವಂಬಡಿಸದಿರೆಂದು ಬಲದೇವಂ ಬಾರಿಸೆವಾರಿಸೆ-

ಮ॥ ಸ್ರ॥ ಇದಱಿಂದಲ್ ಮೂರ್ಧಾಭಿಷೇಕಂ ತನಗೆ ಗಡ ಸಮಂತಾಯ್ತು ಪಿಂಛಾತಪತ್ರಂ
ಪುದಿದೆತ್ತಂ ತಣ್ಣೆಲಲ್ಮಾಡುವುದು ಗಡಮಿದೆಂತೆಂದುಮಾರ್ಗಪ್ಪೊಡಂ ಪ ।
ರ್ವಿದ ಗರ್ವೋದ್ರೇಕದಿಂ ಬಾಗದು ಗಡಮೆನುತುಂ ಮಾಣಿಕಂ ಸೂಸೆ ಬಲ್ಪಿಂ
ದೊದೆದಂ ಸಾರ್ತಂದು ದುರ್ಯೋಧನನ ಮಕುಟಮಂ ಕೋಪದಿಂ
ಭೀಮಸೇನಂ ॥ ೯೮

ವ॥ ಒದೆವುದುಂ ದುರ್ಯೋಧನಂಗಾದವಸ್ಥೆಯುಂ ನೋಡಲಾಱದೆಯುಂ ತನ್ನ ತಮ್ಮನ ಮನಮಂ ನೋಯಿಸಲಾಱದೆಯುಂ ಬಲದೇವಂ ಭಗ್ನಮನೋರಥನಾಗಿ ದ್ವಾರಾವತಿಗೆ

ಮರ್ಮವನ್ನು ತಿಳಿಯದೆ ನಾನು ಇಲ್ಲಿಯವರೆಗೆ ತಪ್ಪಿದೆನು. ಇನ್ನು ಬಿಡು, ಅವಕಾಶವನ್ನು ನಿರೀಕ್ಷಿಸುತ್ತಿದ್ದೇನೆ-ಎಂದು ನಿಧಾನವಾಗಿ ಹಗೆಯನ್ನು ಹೊಂಚುಹಾಕುತ್ತಿದ್ದು (ಗದೆಯನ್ನು ಸ್ವಲ್ಪ ಸರಿಮಾಡಿಕೊಂಡು) ಭೋರೆಂದು ಮೇಲೆ ಬೀಳುವ ಶತ್ರುವಿನ ಎರಡು ತೊಡೆಗಳನ್ನು ಹೊಡೆಯಲು ಗದೆಯ ಪೆಟ್ಟಿನಿಂದ ಆ ಎರಡು ತೊಡೆಗಳೂ ಮುರಿದು ಎಲ್ಲ ಕಡೆಯಲ್ಲಿಯೂ ಪುಡಿಪುಡಿಯಾಗಿರಲು ದುರ್ಯೋಧನನು ನೆಲದ ಮೇಲೆ ಬಿದ್ದನು. ೯೭. ಆಡಿದ ಮಾತನ್ನು ತುತ್ತತುದಿ ಮುಟ್ಟುವವರೆಗೂ ಆಡಿದನು. ಮೊದಲು ಹಿಡಿದ ಹಟವನ್ನು ಕೊನೆಯವರೆಗೂ ಸಾಧಿಸಿದನು. ಮಾಡಿದ ಪ್ರತಿಜ್ಞೆಯು ನೇರವಾಗಿ ನಡೆಯುವವರೆಗೂ ನಡೆದು ಹೆದರದೆ ಅಳ್ಳಾಡದೆ ತನ್ನ ಶರೀರವು ಕೆಳಗೆ ಬೀಳುವವರೆಗೂ ತನ್ನ ಪರಾಕ್ರಮವನ್ನು ಕಡಿಮೆಮಾಡಿಕೊಳ್ಳಲಿಲ್ಲವಲ್ಲಾ, ದುರ್ಯೋಧನನು ಎಷ್ಟು ಆತ್ಮಗೌರವನ್ನುಳ್ಳವನು! ವ॥ ಹಾಗೆ ಸತ್ತೂ ನೆಲವನ್ನು (ಅಂಟಿಕೊಂಡಿರುವುದನ್ನು) ಬಿಡುವುದಿಲ್ಲ ಎನ್ನುವ ಹಾಗೆ ನೆಲವನ್ನು ತಬ್ಬಿಕೊಂಡು ಮೂರ್ಛಾಗತನಾಗಿದ್ದ ಕುರುಕುಲಚೂಡಾಮಣಿಯಾದ ದುರ್ಯೋಧನನನ್ನು ಭೀಮನು ಸ್ವಲ್ಪವೂ ಬಿಡದೆ ಸಮೀಪಕ್ಕೆ ಬಂದಾಗ ಬಲರಾಮನು, ಹನ್ನೊಂದಕ್ಷೋಹಿಣೀ ಪತಿಯಾದ ಚಕ್ರವರ್ತಿಯನ್ನು ಅವಮಾನಪಡಿಸಬೇಡವೆಂದು ತಡೆದನು. ೯೮. 'ಇದರಿಂದಲ್ಲವೇ ಇವನಿಗೆ ಪಟ್ಟಾಭಿಷೇಕವು ಪೂರ್ಣವಾಗುವುದು. ನವಿಲುಗರಿಯ ಕೊಡೆಯು ಎಲ್ಲ ಕಡೆಯೂ ಪ್ರಸರಿಸಿ ಇದಕ್ಕಲ್ಲವೇ ತಂಪಾದ ನೆರಳನ್ನುಂಟು ಮಾಡುವುದು. ಇದು ಎಂದೂ ಯಾರಿಗೂ ಹೆಚ್ಚಾದ ಗರ್ವದಿಂದ ಬಾಗುವುದಿಲ್ಲ ವಲ್ಲವೇ' ಎನ್ನುತ್ತ ಮಾಣಿಕ್ಯರತ್ನಗಳು ಚೆಲ್ಲುತ್ತಿರಲು ಭೀಮಸೇನನು ಹತ್ತಿರಬಂದು ಕೋಪದಿಂದ ದುರ್ಯೋಧನನ ಕಿರೀಟವನ್ನು ಬಲವಾಗಿ ಒದೆದನು. ವ॥ ಬಲರಾಮನು ದುರ್ಯೋಧನನಿಗಾದ ಅವಸ್ಥೆಯನ್ನು ನೋಡಲಾರದೆಯೂ ತನ್ನ

ಪೋದನನ್ನೆಗಂ ವೇಣೀಸಂಹಾರೋರುಭಂಗ ಮಕುಟಭಂಗಂಗಳೆಂಬ ತನ್ನ ಮಹಾ ಪ್ರತಿಜ್ಞೆಯಂ ನೆಱಪಿದ ಭೀಮಸೇನನಳವನಳವಲ್ಲದೆ ಪೊಗಟ್ಟು ಚಕ್ರಿ ಕಾಲ ಕುಶಲನಪ್ಪುದಱಿನಶ್ವತ್ಥಾಮನಿನಪ್ಪನಾಗತ ಬಾಧಾವಿಘಾತಮಂ ಮಾಡಲೆಂದಯ್ವರುಮಂ ನೀಲಗಿರಿಗೊಡಗೊಂಡು ಪೋಗುತುಮಲ್ಲಿರ್ದ ಬೀಡುಮನಾ ಬೀಡಿಂಗೆ ಕಾಪಾಗಿ ಧೃಷ್ಟದ್ಯುಮ್ನ ಶಿಖಂಡಿ ಚೇಕಿತಾನ ಯುಧಾಮನ್ಯೂತ್ತ ಮೌಜಸರುಮಂ ಶ್ರುತ ಸೋಮಕ ಪ್ರಮುಖರಪ್ಪ ಪಂಚ ಪಾಂಡವರುಮಂ ಪೇೞ್ದು ಹಸ್ತಿನಪುರಕ್ಕೆ ಕಳಿಪಿದನನ್ನೆಗಮಿತ್ತ ಕೃಪ ಕೃತವರ್ಮ ಸಮೇತನಶ್ವತ್ಥಾಮಂ ದುರ್ಯೋಧನನಿರ್ದೆಡೆಯಱಿಯದೆ ಗಾಂಗೇಯರಿಂದಮಿರ್ದೆಡೆಯನಱಿದು ಕೊಳಕ್ಕೆವಂದಲ್ಲಿಯುಂ ಕಾಣದೆ ಕೊಳುಗುಳದೊಳಱಸುತ್ತುಂ ಬರ್ಪಂ ತೊಟ್ಟನೆ ಕಟ್ಟಿದಿರೊಳ್-

ಚಂ॥ ಪಿಡಿದೆಡಗೆಯ್ಯ ಚಾಮರದ ದಕ್ಷಿಣಹಸ್ತದ ಪದ್ಮದೊಳ್ಪೊದಂ
ಬಡೆ ನಸು ಮಾಸಿ ಪಾಡೞಿದ ರೂಪಿನೊಳುಣ್ಮುವ ಗಾಡಿ ಸಾಡೆ ಕ ।
ಣ್ಗೆಡಱೆ ತೊಡಂಕಿ ಪೀಱಿದ ಕುರುಳ್ಗಳೆ ಚಿತ್ತದೊಳಾದ ಬೇಸಱಂ
ನುಡಿವವೊಲಾಗೆ ಬರ್ಪ ಕಮಳಾಯತನೇತ್ರೆಯನಿಂದುವಕ್ತ್ರೆಯಂ ॥ ೯೯

ವ॥ ಕಂಡು ನೀನಾರ್ಗೇನೆಂಬೆಯೆಲ್ಲಿಗೆ ಪೋದಪೆಯೆನೆ-

ತಮ್ಮನಾದ ಕೃಷ್ಣನ ಮನಸ್ಸನ್ನು ನೋಯಿಸಲಾರದೆಯೂ ಭಗ್ನಮನೋರಥನಾಗಿ ದ್ವಾರಾವತಿಗೆ ಹೋದನು. ಅಷ್ಟರಲ್ಲಿ ವೇಣೀಸಂಹಾರ (ಮುಡಿಯನ್ನು ಕಟ್ಟುವುದು) ಊರುಭಂಗ (ತೊಡೆಯನ್ನು ಮುರಿಯುವುದು) ಮಕುಟಭಂಗ (ಕಿರೀಟವನ್ನು ಒಡೆಯುವುದು) ಎಂಬ ತನ್ನ ಮಹಾಪ್ರತಿಜ್ಞೆಗಳನ್ನು ಪೂರ್ಣಮಾಡಿದ ಭೀಮಸೇನನ ಶಕ್ತಿಯನ್ನು ಅಳತೆಮೀರಿ ಕೃಷ್ಣನು ಹೊಗಳಿದನು. ಕಾಲಕುಶಲನಾದುದರಿಂದ ಅಶ್ವತ್ಥಾಮನಿಂದ ಮುಂದೆ ಬರುವ ವಿಪತ್ತಿಗೆ ಪರಿಹಾರಮಾಡುವುದಕ್ಕೆಂದು ಅಯ್ದು ಜನ ಪಾಂಡವರನ್ನು ನೀಲಗಿರಿಗೆ ತನ್ನ ಜೊತೆಯಲ್ಲಿ ಕರೆದುಕೊಂಡು ಹೋದನು. ಆ ಬೀಡಿಗೆ ರಕ್ಷಕರಾಗಿ ಧೃಷ್ಟದ್ಯುಮ್ನ, ಶಿಖಂಡಿ, ಚೇಕಿತಾನ, ಯುಧಾಮನ್ಯೂತ್ತಮೌಜಸರನ್ನೂ ಶ್ರುತಸೋಮಕರೇ ಮುಖ್ಯರಾದ ಪಂಚಪಾಂಡವರನ್ನೂ ಗೊತ್ತು ಮಾಡಿ (ಇರಹೇಳಿ) ಪಾಂಡವರನ್ನು ಹಸ್ತಿನಾಪಟ್ಟಣಕ್ಕೆ ಕಳುಹಿಸಿದನು. ಅಷ್ಟರಲ್ಲಿ ಈ ಕಡೆ ಕೃಪಕೃತವರ್ಮರೊಡಗೂಡಿದ ಅಶ್ವತ್ಥಾಮನು ದುರ್ಯೋಧನನಿದ್ದ ಸ್ಥಳವನ್ನು ತಿಳಿಯದೆ ಭೀಷ್ಮರಿಂದ ದುರ್ಯೋಧನನಿದ್ದ ಸ್ಥಳವನ್ನು ತಿಳಿದು ಕೊಳಕ್ಕೆ ಬಂದು ಅಲ್ಲಿಯೂ ಕಾಣದೆ ಯುದ್ಧಭೂಮಿಯಲ್ಲಿ ಹುಡುಕುತ್ತ ಬರುತ್ತಿದ್ದವನು ಥಟಕ್ಕನೆ ಎದುರುಗಡೆಯಲ್ಲಿ ೯೯. ಎಡಗೈಯಲ್ಲಿ ಚಾಮರವೂ ಬಲಗೈಯಲ್ಲಿ ಕಮಲದ ಹೂವೂ ಮನೋಹರವಾಗಿರಲು ಸ್ವಲ್ಪ ತೇಜೋಹೀನವಾಗಿ ಸ್ವಭಾವಸ್ಥಿತಿ ಕೆಟ್ಟು ಆಕಾರವನ್ನು ಹೊರಹೊಮ್ಮುತ್ತಿರುವ ಸೌಂದರ್ಯವು ವಿಶೇಷವಾಗಿ ಕಣ್ಣನ್ನು ಆಕರ್ಷಿಸಲು ಸಿಕ್ಕಾಗಿ ಕೆದರಿರುವ ಕುರುಳುಗಳು ಮನಸ್ಸಿನ ಬೇಸರನ್ನು ನುಡಿಯುವ ಹಾಗಿರಲು (ಎದುರಿಗೆ) ಬರುತ್ತಿದ್ದ ಕಮಳದಂತೆ ವಿಸ್ತಾರವಾದ ಕಣ್ಣುಳ್ಳ ಚಂದ್ರಮುಖಿಯನ್ನು ನೋಡಿದನು. ವ॥ ನೀನಾರು? ನಿನ್ನ ಹೆಸರೇನು? ಎಲ್ಲಿಗೆ ಹೋಗುತ್ತಿದ್ದೀಯೆ ಎನ್ನಲು

ಮ॥ ಪೆಸರೊಳ್ ಲಕ್ಷ್ಮಿಯೆನಿನ್ನೆಗಂ ನೆಲಸಿ ತಾಂ ದುರ್ಯೋಧನೋರಸ್ಥಳಾ
ವಸಥಂ ದ್ರೋಣ ನದೀಜ ಕರ್ಣ ಭುಜವೀರ್ಯಾವೇಷ್ಟಿತಂ ಮಾಡೆ ಸಂ ।
ತಸದಿರ್ದೆಂ ಬಿಸುಟಾ ಧರಾಧಿಪತಿಯಂ ನಾರಾಯಣಾದೇಶಮೊ
ಡ್ಡಿಸೆ ಪಾಂಡುಪ್ರಿಯಪುತ್ರರೊಳ್ ನೆರೆಯಲೆಂದಿಂತೀಗಳಾಂ ಪೋದಪೆಂ॥ ೧೦೦

ವ॥ ಎಂಬುದುಮಶ್ವತ್ಥಾಮನಿಂತೆಂದಂ-

ಚಂ॥ ಪೊಸತಲರ್ದಂಬುಜಂಗಳೆಸಲೊಳ್ ನಡೆಪಾಡುವಳೇಂ ಪಯೋಧಿಯಂ
ಪೊಸೆದೊಡೆ ಪುಟ್ಟಿದೈ ಮುರವಿರೋಧಿಯ ಪತ್ನಿಯೆ ಮಿಂಚುತಿರ್ಪ ಕೂ ।
ರಸಿಗಳ ಮೇಲೆ ಸಂಚರಿಪೆ ವೈರಿನರಾಧಿಪಸೈನ್ಯವಾರ್ಧಿಯಂ
ಪೊಸೆದೊಡೆ ಪುಟ್ಟಿದೀ ನಿನಗೆ ಪಕ್ರಸಲೆನ್ನನದೆಂತು ತೀರ್ಗುಮೋ ॥ ೧೦೧

ಮ॥ ಕುರುವಂಶಾಂಬರಭಾನುವಂ ಬಿಸುಡಿಸಲ್ಕಾನುಳ್ಳಿನಂ ತೀರದಾ
ನಿರೆ ನಾರಾಯಣನೆಂಬನುಂ ಪ್ರಭುವೆ ಪೇಟ್ ನೀನೀ ಮರುಳ್ಮಾತನಂ ।
ಬುರುಹಾಕ್ಷೀ ಬಿಸುಡಂಜದಿರ್ ನಡೆ ಕುರುಕ್ಷ್ಮಾಪಾಳನಿರ್ದಲ್ಲಿಗೆಂ
ದರವಿಂದಾಲಯೆಯಂ ಮಗುಳ್ಚಿದನದೇನಾ ದ್ರೌಣಿ ಶೌರ್ಯಾರ್ಥಿಯೋ ॥ ೧೦೨

ವ॥ ಅಂತು ವಿಕಸಿತಕಮಳದಳನಯನೆಯಂ ಕಮಳೆಯನಶ್ವತ್ಥಾಮಂ ಮುಂದಿಟ್ಟು ಕುರುಕುಟುಂಬಘಟಚೇಟಿಕೆಯಂ ತರ್ಪಂತೆ ತಂದು ವೃಕೋದರ ಗದಾಸಂಚೂರ್ಣಿತೋರು ಯುಗಳನುಂ ಭೀಮಸೇನಚರಣಪ್ರಹರಣಗಳಿತಶೋಣಿತಾರ್ದ್ರಮೌಳಿಯುಮಾಗಿ ಕೋಟಲೆಗೊಳ್ವ ಕೌರವೇಶ್ವರನನೆಯ್ದೆ ಪೋಗಿ ಹಸ್ತಪ್ರಹಸ್ತಮಂಡಲಾಗ್ರನುಂ ಶೋಕವ್ಯಗ್ರನುಮಾಗಿ-

೧೦೦. ನನ್ನ ಹೆಸರು ಲಕ್ಷ್ಮಿಯೆಂದು. ದ್ರೋಣ ಭೀಷ್ಮ ಕರ್ಣರ ಬಾಹುಬಲದಿಂದ ರಕ್ಷಿತನಾದ ದುರ್ಯೋಧನನ ಎದೆಯು ಮನೆಯಾಗಿರಲು ಇಲ್ಲಿಯವರೆಗೆ ಅಲ್ಲಿ ಸಂತೋಷದಿಂದಿದ್ದೆನು. ಕೃಷ್ಣನ ಅಪ್ಪಣೆಯ ಪ್ರಕಾರ ಆ ರಾಜನನ್ನು ಬಿಸುಟು ಪಾಂಡುಪ್ರಿಯಪುತ್ರರಲ್ಲಿ ಸೇರಬೇಕಂದು ಈಗ ನಾನು ಹೋಗುತ್ತಿದ್ದೇನೆ. ವ॥ ಎನ್ನಲು ಅಶ್ವತ್ಥಾಮನು ಹೀಗೆ ಹೇಳಿದನು. ೧೦೧. ಹೊಸದಾಗಿ ಅರಳಿರುವ ಕಮಲದಳಗಳ ಮೇಲೆ ಓಡಾಡುವವಳು ಸಮುದ್ರವನ್ನು ಕಡೆಯಲು ಹುಟ್ಟಿದವಳೆ, ವಿಷ್ಣುವಿನ ಹೆಂಡತಿಯೇ, ಮಿಂಚಿನಂತಿರುವ ಹರಿತವಾದ ಕತ್ತಿಗಳ ಮೇಲೆ ಸಂಚರಿಸುತ್ತೀಯೆ; ಶತ್ರುರಾಜಸೇನಾಸಮುದ್ರವನ್ನು ತಡೆಯಲು ಹುಟ್ಟಿದ ಈ ನಿನಗೆ ನನ್ನನ್ನು ಪ್ರತಿಭಟಿಸಲು ಸಾಧ್ಯವೇ, ೧೦೨. ಕುರುವಂಶವೆಂಬ ಆಕಾಶಕ್ಕೆ ಸೂರ್ಯನಾದ ದುರ್ಯೋಧನನನ್ನು ನಾನಿರುವಾಗ ನೀನು ಬಿಸಾಡಲು ಸಾಧ್ಯವಿಲ್ಲ; ನಾನಿರುವಾಗ ನಾರಾಯಣನೆಂಬುವನು ನಿನಗೆ ಯಜಮಾನನೇ ಹೇಳು, ಹೇ ಕಮಲಮುಖಿ ಈ ಹುಚ್ಚುಮಾತನ್ನು ಬಿಸಾಡು; ಹೆದರಬೇಡ; ನಡೆ, ಕೌರವಚಕ್ರವರ್ತಿಯಿರುವ ಸ್ಥಳಕ್ಕೆ ಎಂದು ಲಕ್ಷ್ಮಿಯನ್ನು ಹಿಂತಿರುಗಿಸಿದನು. ಅಶ್ವತ್ಥಾಮನ ಅಹಂಕಾರವೆಷ್ಟು? ವ॥ ಅರಳಿದ ಕಮಲದಳದಂತೆ ಕಣ್ಣುಳ್ಳ ಲಕ್ಷ್ಮಿಯನ್ನು ಅಶ್ವತ್ಥಾಮನು ಮುಂದಿಟ್ಟುಕೊಂಡು ಕೌರವಕುಟುಂಬ ಘಟಚೇಟಿಕೆಯನ್ನು ಕರೆದುತರುವಂತೆ ತಂದನು. ಭೀಮನ ಗದೆಯಿಂದ ಪುಡಿಮಾಡಲ್ಪಟ್ಟ ಎರಡು ತೊಡೆಯುಳ್ಳವನೂ ಭೀಮಸೇನನ ಪಾದಗಳ ಒದೆತದಿಂದ ಸುರಿದ ರಕ್ತದಿಂದ ಒದ್ದೆಯಾಗಿರುವ ತಲೆಯುಳ್ಳವನೂ ಆಗಿ ವ್ಯಥೆಪಡುತ್ತಿರುವ ದುರ್ಯೋಧನನ

ಚಂ॥ ನೆಗಟ್ದ ನೆಗಟ್ತೆಗಾವೆಡೆಯೊಳಂ ಪಟೆಯಿಲ್ಲದೆ ಪೂಣ್ದು ಸಂದ ವೈ
ರಿಗಳನೆ ಕೊಂದು ವಾರಿಧಿಪರೀತಮಹೀತಳಮಂ ನಿಮಿರ್ಚಿ ಜೆ ।
ಟ್ಟಿಗರನಯೋನಿಸಂಭವರನಾಳ್ದರಿವರ್ಗದೊಳಾಂತು ಕಾದೆಯುಂ
ಬಗೆ ದೊರೆಕೊಂಡುದಿಲ್ಲಿದು ವಿಧಾತ್ರನ ದೋಷಮೊ ನಿನ್ನ ದೋಷಮೋ ॥೧೦೩

ಕಂ॥ ಆದೊಡಮೆನ್ನಂ ಬಂಚಿಸಿ
ಪೋದುದಱಿಂ ನಿನಗೆ ಪಗೆವರಿಂದಿನಿತೆಡಱಾ ।
ಯ್ತಾದಿತ್ಯತೇಜ ಬೆಸಸಿದಿ
ರಾದ ಪೃಥಾಸುತರನುಟಿಯಲೀಯದೆ ಕೊಲ್ವೆಂ ॥ ೧೦೪

ವ॥ ಎಂಬುದುಂ ಫಣಿಕೇತನಂ ನೆತ್ತಿಯಿಂದೊಱೆದುಗುವ ನೆತ್ತರ ಧಾರೆಯಿಂ ಮೆತ್ತಿದ ಕಣ್ಗಳನೊತ್ತಂಬದಿಂ ತೆಱೆದಶ್ವತ್ಥಾಮನ ಮೊಗಮಂ ನೋಡಿ-

ಚಂ॥ ಎನಗಿನಿತೊಂದವಸ್ಥೆ ವಿಧಿಯೋಗದಿನಾದುದಿದರ್ಕೆ ನೀನಟ
ಲ್ದಿನಿತು ಮನಃಕ್ಷತಂಬಡದಿರಾಗದು ಪಾಂಡವರಂ ಗೆಲಲ್ ಪುರಾ ।
ತನಪುರುಷಂ ಮುರಾರಿ ಕೆಲದೊಳ್ ನಿಲೆ ನೀಂ ಕೊಲಲಾರ್ಪೊಡಾಗದೆಂ
ಬೆನೆ ತಱಿದೊಟ್ಟ ವೈರಿಗಳನೆನ್ನಸುವುಳ್ಳಿನಮೆಯ್ದೆವಾ ಗಡಾ ॥ ೧೦೫

ವ॥ ಎಂಬುದುಂ ಪಾಂಡವರನಿಕ್ಕಿದೊಸಗೆವಾತನೀಗಳೆ ಕೇಳಿಸುವೆನೆಂದು ಸರೋಜ ನಿಳಯೆಯುನೆನ್ನ ಬರ್ಪನ್ನಮರಸನನಗಲದೆ ವಿಕಸಿತಶತಪತ್ರಾತಪತ್ರದ ತಣ್ಣೆಟಲುಮಂ ಕುಂದಲೀಯದಿರೆಂದು ನಿಯಮಿಸಿ ರುದ್ರಾವತಾರಂ ಕೃಪ ಕೃತವರ್ಮ ಸಮೇತನರಸನಂ ಬೀಟ್ಕೊಂಡು ಪೋದನಾಗಳ್-

ಹತ್ತಿರಕ್ಕೆ ಬಂದು ನೋಡಿದನು. ಕೈಯಿಂದ ಕತ್ತಿಯು ಕಳಚಿಕೊಂಡಿತು, ದುಃಖದಿಂದ ವಿಶೇಷಖಿನ್ನನಾದನು. ೧೦೩. ದುರ್ಯೋಧನ ಮಾಡಿದ ಕಾರ್ಯದಲ್ಲಿ ಎಲ್ಲಿಯೂ ನಿಂದೆಯಿಲ್ಲದೆ ನಿರ್ವಹಿಸಿ, ಪ್ರಸಿದ್ಧರಾದ ಶತ್ರುಗಳನ್ನು ಕೊಂದು, ಸಮುದ್ರದಿಂದ ಸುತ್ತುವರಿಯಲ್ಪಟ್ಟ ಭೂಮಿಯನ್ನು ವಿಸ್ತರಿಸಿ, ಶೂರರಾದ ಅಯೋನಿಜರಾದವರಿಗೆ ಸ್ವಾಮಿ (ಒಡೆಯ)ಯಾಗಿದ್ದು, ಶತ್ರುವರ್ಗವನ್ನು ಎದುರಿಸಿ ಯುದ್ಧಮಾಡಿದರೂ ನಿನಗೆ ಇಷ್ಟಾರ್ಥವು ಲಭಿಸಲಿಲ್ಲವಲ್ಲಾ. ಇದು ವಿಧಿಯ ದೋಷವೋ ನಿನ್ನ ದೋಷವೋ? ೧೦೪. ನನ್ನನ್ನು ವಂಚಿಸಿ ಹೋದುದರಿಂದ ನಿನಗೆ ಶತ್ರುಗಳಿಂದ ಇಷ್ಟು ಅವಮಾನವಾಯಿತು. ಸೂರ್ಯತೇಜಸ್ಸುಳ್ಳವನೇ ಆಜ್ಞೆಮಾಡು, ಪ್ರತಿಭಟಿಸಿದ ಪಾಂಡವರನ್ನು ಉಳಿಯುವುದಕ್ಕೆ ಅವಕಾಶವಿಲ್ಲದಂತೆ ಕೊಲ್ಲುತ್ತೇನೆ ಎಂದನು. ವ॥ ಸರ್ಪಧ್ವಜನಾದ ದುರ್ಯೋಧನನು ತಲೆಯಿಂದ ಜಿನುಗಿ ಹರಿಯುತ್ತಿರುವ ರಕ್ತಪ್ರವಾಹದಿಂದ ಅಂಟಿಕೊಂಡಿದ್ದ ಕಣ್ಣುಗಳನ್ನು ಬಲಾತ್ಕಾರದಿಂದ ತೆರೆದು ಅಶ್ವತ್ಥಾಮನ ಮುಖವನ್ನು ನೋಡಿ ಹೇಳಿದನು ೧೦೫. ನನಗೆ ಇಷ್ಟೊಂದು ಕಷ್ಟದ ಸ್ಥಿತಿ ವಿಧಿಯ ಕಟ್ಟಳೆಯಿಂದ ಆಯಿತು. ಇದಕ್ಕೆ ನೀನು ದುಃಖಪಟ್ಟು ಮನಸ್ಸಿನಲ್ಲಿ ನೋಯಬೇಡ. ಆದಿಪುರುಷನಾದ ಕೃಷ್ಣನು ಅವರ ಪಕ್ಕದಲ್ಲಿರುವಾಗ ನೀನು ಪಾಂಡವರನ್ನು ಗೆಲ್ಲಲಾಗುವುದಿಲ್ಲ. ಹಾಗೆ ನೀನು ಅವರನ್ನು ಕೊಲ್ಲಲು ಸಮರ್ಥನಾದರೆ ನಾನು ಬೇಡವೆನ್ನುತ್ತೇನೆಯೇ? ನನ್ನ ಪ್ರಾಣಗಳಿರುವಾಗಲೇ ಶತ್ರುಗಳನ್ನು

ಚಂ॥ ಮಗನೞಲೊಳ್ ಕರಂ ಮಱುಗುತಿರ್ಪಿನಮೆನ್ನ ತನೂಜನಾಳ್ವ ಸಾ
  ಮಿಗಮೞಿವಾಗೆ ಶೋಕರಸಮಿರ್ಮಡಿಸಿತ್ತು ಜಳಪ್ರವೇಶಮಿ ।
  ಲ್ಲಿಗೆ ಪದನೆಂದು ನಿಶ್ಚಯಿಸಿ ವಾರಿಜನಾಥನನಾಥನಾಗಿ ತೊ
  ಟ್ಟಗೆ ಮುೞುಪಂತೆವೋಲ್ ಮುೞುಗಿದಂ ಕಡುಕೆಯ್ದಪರಾಂಬುರಾಶಿಯೊಳ್ ॥ ೧೦೬

ವ॥ ಆ ಪ್ರಸ್ತಾವದೊಳಶ್ವತ್ಥಾಮಂ ಕೃಪ ಕೃತವರ್ಮರುಂಬೆರಸು ಹಸ್ತಿನಪುರದೊಳ್ ಪಾಂಡವರಿರ್ದರೆಗೆತ್ತುಮಲ್ಲಿಗೆ ನಿಟ್ಟಾಲಿಯಾಗಿ ದಾೞಿಯನಿಟ್ಟು ಮುಟ್ಟೆವಂದು ಬಾಯ್ಮಾಡಿ ಧೃಷ್ಟದ್ಯುಮ್ನ ಶಿಖಂಡಿ ಚೇಕಿತಾನ ಯುಧಾಮನ್ಯೂತ್ತಮೌಜಸರಂ ಕೊಂದು ಶ್ರುತ ಸೋಮಕ ಪ್ರಮುಖರಪ್ಪ ಪಂಚ ಪಾಂಡವರಂ ಪಾಂಡವರೆಗೆತ್ತು ಕೊಂದು ತದುತ್ತಮಾಂಗಂಗಳಂ ಕೊಂಡು ತೞತೞನೆ ನೇಸಱೊಮ್ಮೂಡುವಾಗಳೆಯ್ದೆ ವಂದು ದುರ್ಯೋಧನನಂ ಕಂಡು ಕೊಳ್ ನಿನ್ನ ನಚ್ಚಿನ ಪಾಂಡವರ ತಲೆಗಳನೆಂದು ಮುಂದಿಕ್ಕಿದಾಗಳ್ ದುರ್ಯೋಧನಂ ನೋಡಿ-

ಕಂ॥ ಬಾಲಕಮಳಂಗಳಂ ಕಮ
ಳಾಲಯದಿಂ ತಿೞಿದು ತರ್ಪವೋಲ್ ತಂದೈ ನೀಂ ।
ಬಾಲಕರ ತಲೆಗಳಕ್ಕಟ
ಬಾಲಕವಧದೋಷಮೆಂತು ನೀಂ ನೀಗಿದಪಯ್ ॥ ೧೦೭

ತರಿದು ರಾಶಿಹಾಕಿ ಬರುತ್ತಿಯಾ? ಏನು. ವ॥ ಎನ್ನಲು 'ಪಾಂಡವರನ್ನು ಇಕ್ಕಿ ಕೊಂದ ಶುಭವಾರ್ತೆಯನ್ನು ಈಗಲೇ ಕೇಳಿಸುತ್ತೇನೆ' ಎಂದು ಕಮಲಾಸನೆಯಾದ ಲಕ್ಷ್ಮಿಯನ್ನು ನಾನು ಬರುವವರೆಗೂ ರಾಜನನ್ನು ಅಗಲದೆ ಅರಳಿವ ಕಮಲದ ಕೊಡೆಯ ತಂಪಾದ ನೆರಳನ್ನು ಕಡಿಮೆಮಾಡಬೇಡವೆಂದು ಕಟ್ಟಳೆಯಿಟ್ಟು ರುದ್ರಾವತಾರನಾದ ಅಶ್ವತ್ಥಾಮನು ಕೃಪಕೃತವರ್ಮರೊಡನೆ ರಾಜನನ್ನು ಬೀಳ್ಕೊಂಡು ಹೋದನು-ಆಗ ೧೦೬. ನಾನು ನನ್ನ ಮಗನ ಮರಣದುಃಖದಿಂದಲೇ ವಿಶೇಷ ದುಃಖಪಡುತ್ತಿರಲು ನನ್ನ ಮಗನನ್ನು ಆಳುವ ಸ್ವಾಮಿಯೂ ನಾಶವಾಗಲು ಶೋಕರಸವಿಮ್ಮಡಿಯಾಗಿದೆ. ನೀರಿನಲ್ಲಿ ಮುಳುಗಿಕೊಳ್ಳುವುದೇ ಇಲ್ಲಿಗೆ ಯೋಗ್ಯವಾದುದು ಎಂದು ನಿಶ್ಚಯಿಸಿ ಸೂರ್ಯನು ಅನಾಥನಾಗಿ (ದಿಕ್ಕಿಲ್ಲದವನಾಗಿ) ತೊಟ್ಟನೆ ಮುಳುಗುವ ಹಾಗೆ ಪಶ್ಚಿಮ ಸಮುದ್ರದಲ್ಲಿ ಶೀಘ್ರವಾಗಿ ಮುಳುಗಿದನು. (ಸೂರ್ಯಾಸ್ತಮಾನವಾಯಿತು) ವ॥ ಆ ಸಮಯದಲ್ಲಿ ಅಶ್ವತ್ಥಾಮನು ಕೃಪಕೃತವರ್ಮರೊಡಗೂಡಿ ಹಸ್ತಿನಾಪಟ್ಟಣದಲ್ಲಿ ಪಾಂಡವರಿರುವರೆಂದು ಭ್ರಾಂತಿಸಿ ಅಲ್ಲಿಗೆ ಎಚ್ಚರದಿಂದ ದಾಳಿಯಿಟ್ಟು (ಮುತ್ತಿಗೆ ಹಾಕಿ) ಸಮೀಪಕ್ಕೆ ಬಂದು ಕೂಗಿ ಧೃಷ್ಟದ್ಯುಮ್ನ ಶಿಖಂಡಿ ಚೇಕಿತಾನ ಯುಧಾಮನ್ಯೂತ್ತಮೌಜಸರನ್ನು ಕೊಂದು ಶ್ರುತಸೋಮಕರೇ ಮೊದಲಾದ ಉಪಪಾಂಡವರನ್ನು ಪಾಂಡವರೆಂದು ಭ್ರಮಿಸಿಕೊಂಡು ಅವರ ತಲೆಗಳನ್ನು ತೆಗೆದುಕೊಂಡು ಪ್ರಕಾಶಮಾನವಾಗಿ ಸೂರ್ಯನು ಹುಟ್ಟುವ ಹೊತ್ತಿಗೆ ಸರಿಯಾಗಿ ಸಮೀಪಕ್ಕೆ ಬಂದು, ದುರ್ಯೋಧನನನ್ನು ಕುರಿತು ತೆಗೆದುಕೊ ನಿನಗೆ ಪ್ರಿಯರಾದ ಪಾಂಡವರ ತಲೆಗಳನ್ನು ಎಂದು ಮುಂದಿಟ್ಟನು. ಅದನ್ನು ದುರ್ಯೋಧನನು ನೋಡಿ ೧೦೭. ಸರೋವರದಿಂದ ಎಳೆಯ ಕಮಲಗಳನ್ನು ಕಿತ್ತು ತರುವ ಹಾಗೆ ಅಯ್ಯೋ! ನೀನು ಬಾಲಕರ ತಲೆಗಳನ್ನು ತಂದಿರುವೆ, ಬಾಲವಧಾದೋಷವನ್ನು ನೀನು ಹೇಗೆ ಕಳೆಯುತ್ತೀಯೋ? ಎಂದನು.

ವ॥ ಎಂಬುದುಮಶ್ವತ್ಥಾಮನಂತೆಂಬುದೇನೆನೆ ದುರ್ಯೋಧನನೆಂದಂ ಪಾಂಡವರ ತಲೆಗಳಲ್ಲಮಿವು ಪಾಂಡವರ ಸೂನುಗಳಪ್ಪ ಪಂಚಪಾಂಡವರ ತಲೆಗಳೆಂಬುದುಮಿದರ್ಕೆ ಕರ್ತವ್ಯಮಾವುದೆಂದೊಡೆ ಹಿಮವತ್ಪರ್ವತದೊಳ್ ತಪಶ್ಚರಣಪರಾಯಣರಾಗಿ ಮೆನಗಮಂತ್ಯಕಾಲಮೆಂದು ದುರ್ಯೋಧನಂ ಪ್ರಾಣಪರಿತ್ಯಾಗಂಗೆಯ್ದನಾಗಳಶ್ವತ್ಥಾಮನುಂ ಕೃಪನುಂ ಸಿಗ್ಗಾಗಿ ಹಿಮವತ್ಪರ್ವತಕ್ಕೆ ನಡೆಗೊಂಡರಿತ್ತ ಕೃತವರ್ಮನುಂ ದ್ವಾರಾವತಿಗೆ ಪೋದನಾಗಳ್-

ಪಿರಿಯಕ್ಕರ ॥ ಬಿಳಿಯ ತಾವರೆಯೆಸಟಿಳಿಳ್ ಮಾಡಿದ ಬೆಳ್ಗೊಡೆ ರಯ್ಯಮಾಗೆದದ ಕೆಯ್ಯೊಳ್
ಪೊಳೆವ ಚೆಂಬೊನ್ನ ಕಾವಿನ ಚಾಮರಮಮರ್ದಿರೆ ಭೇರಿ ಸಿಂಹಾಸನಮುಂ
ಬಟಿಯೊಳ್ ಜವಂ ಮಿಳಿರೆ ರಾಜ್ಯಚಿಹ್ನಂಗಳ್ವೆರಸಿಂತು ನಡೆತಂದು ರಾಜ್ಯಲಕ್ಷ್ಮಿ
ಬಳೆದ ಸಂತೋಷದಂತಮನೆಯ್ದೆ ಪತ್ತಿದಳ್ ಸಹಜಮನೋಜನಂ
ನಾಡೋಜನಂ ॥ ೧೦೮

ಇದು ವಿವಿಧ ವಿಬುಧಜನವಿನುತ ಜಿನಪದಾಂಭೋಜ
ವರಪ್ರಸಾದೋತ್ಪನ್ನ ಪ್ರಸನ್ನಗಂಭೀರವಚನರಚನ
ಚತುರ ಕವಿತಾಗುಣಾರ್ಣವವಿರಚಿತಮಪ್ಪ
ವಿಕ್ರಮಾರ್ಜುನವಿಜಯದೊಳ್
ತ್ರಯೋದಶಾಶ್ವಾಸಂ

ವ॥ ಅಶ್ವತ್ಥಾಮನು ಹಾಗೆಂದರೇನು? ಎನ್ನಲು ದುರ್ಯೋಧನನು ಹೀಗೆ ಹೇಳಿದನು. 'ಇವು ಪಾಂಡವರ ತಲೆಗಳಲ್ಲ. ಪಾಂಡವರ ಮಕ್ಕಳಾದ ಪಂಚಪಾಂಡವರ ತಲೆಗಳು ಎನ್ನಲು ಇದರ ಪರಿಹಾರಕ್ಕೆ ಮಾಡಬೇಕಾದ ಕರ್ತವ್ಯವೇನು ಎಂದನು ಅಶ್ವತ್ಥಾಮ; ಹಿಮವತ್ಪರ್ವತದಲ್ಲಿ ತಪಸ್ಸುಮಾಡುವುದರಲ್ಲಿ ಆಸಕ್ತರಾಗಿ', ನನಗೂ ಅಂತ್ಯಕಾಲವು ಬಂದಿದೆ' ಎಂದು ದುರ್ಯೋಧನನು ಪ್ರಾಣವನ್ನು ನೀಗಿದನು. ಆಗ ಅಶ್ವತ್ಥಾಮನೂ ಕೃಪನೂ ಅವಮಾನಿತರಾಗಿ ಹಿಮವತ್ಪರ್ವತಕ್ಕೆ ನಡೆದರು. ಈ ಕಡೆ ಕೃತವರ್ಮನೂ ದ್ವಾರಾವತಿಗೆ ಹೋದನು. ೧೦೮. ಬಿಳಿಯ ತಾವರೆಯ ದಳದಲ್ಲಿ ಮಾಡಿದ ಬಿಳಿಯ ಕೊಡೆಯು ಬಲದ ಕಯ್ಯಲ್ಲಿ ರಮ್ಯವಾಗಿರಲು ಹೊಳೆದ ಹೊಂಬಣ್ಣದ ಚಿನ್ನದ ಕಾವುಳ್ಳ ಚಾಮರವು ಎಡಗಯ್ಯಲ್ಲಿ ಸೇರಿಕೊಂಡಿರಲು, ಭೇರಿ ಸಿಂಹಾಸನಾದಿಗಳು ಪಕ್ಕದಲ್ಲಿ ವೇಗವಾಗಿ ಚಲಿಸುತ್ತಿರಲು ರಾಜ್ಯಚಿಹ್ನೆಗಳೊಡಗೂಡಿ ಅಬಿವೃದ್ಧಿಯಾಗುತ್ತಿದ್ದ ಸಂತೋಷವು ಸಂಪೂರ್ಣವಾಗಲು ರಾಜ್ಯಲಕ್ಷ್ಮಿಯು ಸಹಜಮನೋಜನೂ ನಾಡೋಜನೂ ಆದ ಅರ್ಜುನನನ್ನು ಸೇರಿದಳು. ವ॥ ಇದು ಅನೇಕ ದೇವತೆಗಳಿಂದ ಸ್ತುತಿಸಲ್ಪಟ್ಟ ಜಿನಪಾದಕಮಲಗಳ ವರಪ್ರಸಾದದಿಂದ ಹುಟ್ಟಿದುದೂ ತಿಳಿಯೂ ಗಂಭೀರವೂ ಆದ ಮಾತುಗಳ ರಚನೆಯಲ್ಲಿ ಚಾತುರ್ಯವುಳ್ಳ ಕವಿತಾಗುಣಾರ್ಣವನಿಂದ ರಚಿತವಾದುದೂ ಆದ ವಿಕ್ರಮಾರ್ಜುನ ವಿಜಯದಲ್ಲಿ ಹದಿಮೂರನೆಯ ಆಶ್ವಾಸವು.

# ಚತುರ್ದಶಾಶ್ವಾಸಂ

ಕಂ॥ ಶ್ರೀ ರಾಮಾಲಿಂಗಿತ ವಿಪು
ಳೋರಸ್ಕಂ ಭಾಸ್ಕರಪ್ರತಾಪಂ ನಿಜ ದೋ ।
ರ್ಮೇರು ಮಥಿತಾರಿ ಬಳ ಕೂ
ಪಾರಂ ಸಂಹಾರಿತಾರಿ ಶೌರ್ಯಂ ಹರಿಗಂ ॥ ೧

ತನ್ನಿಱಿದು ಗೆಲ್ದ ಕೊಳುಗುಳ
ವನ್ನೋಡಲ್ ಚಕ್ರಪಾಣಿಯುಂ ತನ್ನ ಸಹೋ ।
ತ್ಥನ್ನರುಮೊಡವರೆ ಬಂದು ವಿ
ಪನ್ನೋಗ್ರಾರಾತಿವರ್ಗನಾಹವಧರೆಯಂ । ೨

ವ॥ ಎಯ್ದಿ ತನ್ನಿಂದಮಂತಕಾನನಮನೆಯ್ದಿದ ಮಹಾ ಪ್ರಚಂಡಮಂಡಳಿಕಮಕುಟಬದ್ಧಸಾಮಂತಮಹಾಸಾಮಂತಸಂಹತಿಯುಮನೆಣಿಕೆಗಟಿದ ಕರಿತುರಗವರೂಥ ಪದಾತಿಗಳುಮಂ ನೋಡಿ ಮುರಾರಿಯ ಮೊಗಮಂ ನೋಡೆಯಧೋಕ್ಷಜನಜಾತಶತ್ರುವನಿಂತೆಂದಂ-

ಉ॥ ಶಾತ ಶರಾಗ್ನಿ ಭಗ್ನ ಭಟ ಕೋಟಿ ವಿಭೀಷಣಮುಗ್ರವೈರಿಸಂ
ಘಾತಕರೀಂದ್ರರುಂದ್ರಕಟಕೂಟಪರಿಚ್ಯುತಭೃಂಗಮಾಳಿಕಾ ।
ಪೀತಮದಾಂಬುಕಂ ಪ್ರಕೃತಿರಕ್ತಜಳಾಸವಮತ್ತಯೋಗಿನೀ
ವ್ರಾತಪರೀತಭೂತಸದನಂ ಕದನಂ ಕದನತ್ರಿಣೇತ್ರನಾ ॥ ೩

೧. ಸಂಪಲ್ಲಕ್ಷ್ಮಿಯಿಂದ ಆಲಿಂಗಿಸಲ್ಪಟ್ಟ ವಿಸ್ತಾರವಾದ ಎದೆಯುಳ್ಳವನೂ ಸೂರ್ಯನ ತೇಜಸ್ಸುಳ್ಳವನೂ ತನ್ನ ಭುಜವೆಂಬ ಮೇರುಪರ್ವತದಿಂದ ಕಡೆದ ಶತ್ರುಸೇನಾಸಮುದ್ರವುಳ್ಳವನೂ ಶತ್ರುಗಳನ್ನು ಕೊಂದ ಶೌರ್ಯವುಳ್ಳವನೂ ಆದ ಅರಿಕೇಸರಿಯು (ಅರ್ಜುನನು) ೨. ತಾನು ಯುದ್ಧಮಾಡಿ ಗೆದ್ದ ಯುದ್ಧಭೂಮಿಯನ್ನು ನೋಡಲು ಕೃಷ್ಣನೂ ತನ್ನ ಸಹೋದರರೂ ಜೊತೆಯಲ್ಲಿ ಬರಲು ನಾಶಮಾಡಲ್ಪಟ್ಟ ಭಯಂಕರವಾದ ಶತ್ರುಗಳನ್ನುಳ್ಳ ಧರ್ಮರಾಯನೂ ಯುದ್ಧಭೂಮಿಯನ್ನು ಬಂದು ಸೇರಿದನು. ವ॥ ತನ್ನಿಂದ ಯಮನ ಬಾಯನ್ನು ಸೇರಿದ ಮಹಾಶೂರರಾದ ಮಂಡಳಿಕ, ಮಕುಟಬದ್ಧ ಸಾಮಂತಮಹಾಸಾಮಂತಸಮೂಹವನ್ನು ಎಣಿಕೆಯನ್ನು ಮೀರಿದ ಅಸಂಖ್ಯಾತವಾದ ಆನೆ, ಕುದುರೆ, ತೇರು, ಕಾಲಾಳು ಸೈನ್ಯವನ್ನು ನೋಡಿ ಕೃಷ್ಣನ ಮುಖವನ್ನು ನೋಡಲು ಕೃಷ್ಣನು ಧರ್ಮರಾಯನನ್ನು ಕುರಿತು ಹೀಗೆಂದನು. ೩. ಹರಿತವಾದ ಬಾಣಗಳ ಬೆಂಕಿಯಿಂದ ಹಾಳಾದ ಅನೇಕ ಯೋಧರಿಂದ ಭಯಂಕರವಾದುದೂ ಭಯಂಕರವಾದ ಶತ್ರುಗಳ ಸಮೂಹಗಳಿಂದಲೂ ಆನೆಗಳ ವಿಸ್ತಾರವಾದ ಕಪೋಲದ ಕಡೆಯಿಂದ ಹರಿಯುತ್ತಿರುವ ಮದೋದಕವನ್ನು ಕುಡಿಯುತ್ತಿರುವ ದುಂಬಿಗಳ ಸಮೂಹಗಳಿಂದಲೂ, ಸಹಜವಾಗಿ ರಕ್ತಜಲವೆಂಬ ಮದ್ಯದಿಂದ ಸೊಕ್ಕಿರುವ ಯೋಗಿನೀಜನಗಳ ಗುಂಪಿನಿಂದಲೂ ಸುತ್ತುವರಿಯಲ್ಪಟ್ಟು

ಚಂ॥ ಸ್ಫುರಿತ ವರೂಥ ಚಕ್ರ ಹತಿಯಿಂ ಧರಣೀತಳಮತ್ತಮಿತ್ತಮು
ಬ್ಬರಿಯೆ ವಿಯತ್ತಳಂ ಬಗೆದು ನೋಟಿಸ್ತೊಡೆ ನಾಡೆ ಪತತ್ಪತತ್ರಿ ಜ ।
ರ್ಝರಿತಮೆ ದಿಕ್ತಟಂ ರಿಪು ನರಾಧಿಪ ರಕ್ತ ಧುನೀ ಪ್ರವಾಹ ಪಿಂ
ಜರಿತಮೆ ಬೀರಮಂ ಪೊಗಟ್ವನೇವೊಗಟ್ವಂ ಕದನತ್ರಿಣೇತ್ರನಾ ॥ ೪

ವ॥ ಎಂಬನ್ನೆಗಂ ಧೃತರಾಷ್ಟ್ರನುಂ ಗಾಂಧಾರಿಯುಮೊಂದಾಗಿ ಬರೆ ದುರ್ಯೋಧನನ ಪೆಂಡಿರಪ್ಪ ಭಾನುಮತಿಯುಂ ಚಂದ್ರಮತಿಯುಂ ಮೊದಲಾಗೆ ಸಮಸ್ತಾಂತಃಪುರಮುಂ ದುಶ್ಶಾಸನ ಲಕ್ಷಣ ಭೂರಿಶ್ರವಸ್ಸೋಮದತ್ತ ಭಗದತ್ತ ಬಾಹ್ಲೀಕ ಶಲ್ಯ ಶಕುನಿ ಸೈಂಧವ ಕರ್ಣ ಪ್ರಮುಖರಪ್ಪ ನಾಯಕರ ಪೆಂದಿರುಂ ತಮ್ಮ ಗಂಡರಂ ಕೊಳುಗುಳದೊಳಱಸಿ ಕಾಣದೆ ಬಾಯಟಿದು ಪಳಯಿಸುತ್ತುಂ ಯೂಥಪತಿ ಕೆಡೆಯೆ ದೆಸೆದಪ್ಪಿದ ವನಕರಿಕರೇಣುಗಳುಮನಡರ್ಪಿಲ್ಲದೆ ಕಲ್ಪವೃಕ್ಷಮುಡಿದು ಕೆಡೆಯೆ ಬಂಬಲ ಬಾಡಿದ ವನಲತೆಗಳುಮಂ ಪೋಲ್ತು-

ಚಂ॥ ಇಜಿವ ಪಿಣಿಲ್ ತೆರಲ್ದೊಱಿವ ಕಣ್ಬನಿ ಮಾಣದೆ ಮೋದೆ ಶೋಕದ
ಚ್ಚಱಿದವೊಲಿರ್ದ ಬಾಸುಟಿನೊಳಟ್ಟು ಕನಲ್ದು ಬಟಲ್ದು ಜೋಲ್ದ ಮೆಯ್ ।
ಮಱುಗುವ ಬೇಗದೊಳ್ಮೊಗಮಣಂ ದೆಸೆಗಾಣದ ನೋಟಮಾರುಮಂ
ಮಱುಗಿಸೆ ಬಂದುದಂದು ಕರುಣಂ ಬರೆ ವೈರಿನೃಪಾಂಗನಾಜನಂ ॥ ೫

ವ॥ ಆಗಳ್ ಧರ್ಮಪುತ್ರಂ ಧೃತರಾಷ್ಟ್ರಂಗಂ ಗಾಂಧಾರಿಗಮೆಱಗಿ ಪೊಡೆವಟ್ಟು-

ಅರ್ಜುನನ ಯುದ್ಧರಂಗವು ಪಿಶಾಚಿಗಳ ಆವಾಸಸ್ಥಾನವಾಗಿದೆ. ೪. ಪ್ರಕಾಶಮಾನವಾದ ತೇರಿನ ಗಾಲಿಗಳ ಹೊಡೆತದಿಂದ ಭೂಪ್ರದೇಶವು ಅಲ್ಲಲ್ಲಿ ಹಳ್ಳತಗ್ಗುಗಳಿಂದ ಕೂಡಿದೆ. ಆಕಾಶಪ್ರದೇಶವು ಬೀಳುತ್ತಿರುವ ಬಾಣಗಳ ಚೂರುಗಳಿಂದ ಜರ್ಝರಿತವಾಗಿ ಹೋಗಿದೆ. ದಿಗ್ಭಾಗಗಳು ಶತ್ರುರಾಜರ ರಕ್ತದ ನದಿಯ ಪ್ರವಾಹದಿಂದ ಕೆಂಪು ಹಳದಿ ಮಿಶ್ರವಾದ ಬಣ್ಣದಿಂದ ಕೂಡಿದೆ. ಅರ್ಜುನನ ಪ್ರತಾಪವನ್ನು ವರ್ಣಿಸುವುದು ಹೇಗೆ ಸಾಧ್ಯ. ವ॥ ಎನ್ನುವಷ್ಟರಲ್ಲಿ ಧೃತರಾಷ್ಟ್ರನೂ ಗಾಂಧಾರಿಯೂ ಒಟ್ಟುಗೂಡಿ ಬಂದರು. ದುರ್ಯೋಧನನ ಹೆಂಡತಿಯರಾದ ಭಾನುಮತಿಯೂ ಚಂದ್ರಮತಿಯೂ ಸಮಸ್ತ ರಾಣಿವಾಸವೂ ಲಕ್ಷಣ ಭೂರಿಶ್ರವ ಸೋಮದತ್ತ ಭಗದತ್ತ ಬಾಹ್ಲಿಕ ಶಲ್ಯಶಕುನಿ ಸೈಂಧವ ಕರ್ಣನೇ ಮೊದಲಾದ ಪ್ರಮುಖನಾಯಕರ ಹೆಂಡತಿಯರೂ ಗಟ್ಟಿಯಾಗಿ ಅಳುತ್ತಾ ಸಲಗನು ಕೆಡೆಯಲು ದಿಕ್ಕುಕಾಣದ ಕಾಡಿನ ಹೆಣ್ಣಾನೆಗಳನ್ನೂ ಕಲ್ಪವೃಕ್ಷವು ಮುರಿದು ಬೀಳಲು ಅವಲಂಬನವಿಲ್ಲದೆ ಸುಟ್ಟು ಬಾಡಿದ ಕಾಡುಬಳ್ಳಿಗಳನ್ನೂ ಹೋಲುತ್ತಾ ೫. ಸಡಿಲವಾಗಿರುವ ಜಡೆ, ಪ್ರವಾಹವಾಗಿ ಸುರಿಯುವ ಕಣ್ಣೀರು, ಬಿಡದೆ ಹೊಡೆದುಕೊಳ್ಳುತ್ತಿರಲು ದುಃಖದ ಅಚ್ಚೊತ್ತಿದ ಹಾಗೆ ಇದ್ದ ಬಾಸುಂಡೆಗಳಲ್ಲಿ ತಗ್ಗಾಗಿ ಕೆರಳಿ ಆಯಾಸಗೊಂಡು ಜೋಲುತ್ತಿರುವ ಮೈ, ವ್ಯಥೆಪಡುವ ಹೊತ್ತಿನಲ್ಲಿ ದಿಕ್ಕುಕಾಣದೆ (ಕಣ್ಣುಗಳಲ್ಲಿ ನೀರು ತುಂಬಿಕೊಂಡಿರುವುದರಿಂದ) ನೋಟ ಇವು ಯಾರನ್ನಾದರೂ ದುಃಖಿಸುವಂತೆ ಮಾಡಲು ಶತ್ರುರಾಜರ ರಾಣಿಯರು ಕರುಣೆಯೇ ಮೂರ್ತಿಮತ್ತಾಗಿ ಬಂದಂತೆ ಅಲ್ಲಿಗೆ ಬಂದರು. ವ॥ ಆಗ ಧರ್ಮರಾಜನು

ಕಂ|| ಏಗೆಯ್ದುಮೆನ್ನ ಧರೆಯೊ
ರ್ವಾಗಮುಮಂ ನೀಮೆ ಬೆಸಸೆಯುಂ ಕುಡದಿನಿತಂ |
ಮೇಗಿಲ್ಲದೆ ನೆಗಟ್ಟಿದಿಂ
ನಾಗಧ್ವಜನಯ್ಕೆ ನೀಮದರ್ಕಟಲದಿರಿಂ || ೬

ಆತನೊಡವೋಯ್ತು ಪಗೆ ನಿಮ
ಗಾತನಿನಗ್ಗಳದ ಮಗನೆನಾಂ ನಖ ಮಾಂಸ |
ಪ್ರೀತಿಯೊಳೆ ನೆಗಟ್ವೆನಿಂ ಪಡೆ
ಮಾತೇಂ ಪಂಬಲಿಸದೆನ್ನ ಪೇಟ್ದುದುಗೆಯ್ಯಿಂ || ೭

ವ|| ಎಂಬುದುಂ ಧೃತರಾಷ್ಟ್ರನಿಂತೆಂದಂ-

ಕಂ|| ತನಯಶತಮಾದುದಲ್ತೆನ
ಗನಿವಾರಿತ ದುಃಖಶತಮೆ ತಾನಾದುದವಂ |
ನೆನೆಯೆಂ ಸಂಸ್ಕಾರಿಸಲೀ
ವನಿತೆಯರ್ಗವರವರ ಪುರುಷರಂ ಕುಡವೇಟ್ಕುಂ || ೮

ವ|| ಎಂಬುದುಮದಾವುದು ದೋಷಮವರ್ಗೆಲ್ಲಂ ಸಂಸ್ಕಾರವಿಧಿಯಂ ನಾನೆ ಪಕ್ಕದೊಳಿರ್ದು ಮಾಡಿಸುವೆನೆಂಬನ್ನೆಗಂ ಕೊಂತಿ ಬಂದು ಕರ್ಣನ ಕಳೇವರಮಂ ತಟ್ಕೈಸಿ ಕೊಂಡು ಪಾಂಡವರಯ್ವರುಮನಲ್ಲಿಗೆ ಬರಿಸಿ-

ಕಂ|| ನಿಮ್ಮಣ್ಣನೆನ್ನ ಪಿರಿಯ ಮ
ಗಮ್ಮಾತೇಂ ಕರ್ಣನಾಂ ಮಹಾಪಾತಕಿಯೆಂ |
ನಿಮ್ಮಯ ಮೋಹದಿನೀತಂ
ಗಾಮ್ಮಾಡಿದೆನಿನಿತನೆಂದು ಶೋಕಂಗೆಯ್ದಳ್ || ೯

ಧೃತರಾಷ್ಟ್ರನಿಗೂ ಗಾಂಧಾರಿಗೂ ಬಗ್ಗಿ ನಮಸ್ಕಾರಮಾಡಿ ೬. ಏನು ಮಾಡಿದರೂ ನನ್ನ ರಾಜ್ಯದ ಒಂದು ಭಾಗವನ್ನು ನೀವೆ ಹೇಳಿದರೂ ಕೊಡದೆ ಸ್ವಲ್ಪವೂ ಉತ್ತಮ ವಾಗಿಲ್ಲದ ರೀತಿಯಲ್ಲಿ ಇಷ್ಟನ್ನೂ ಮಾಡಿ ಸರ್ಪಧ್ವಜನಾದ ದುರ್ಯೋಧನನು ಸತ್ತನು. ನೀವು ಅದಕ್ಕಾಗಿ ದುಃಖಪಡಬೇಡಿ. ೭.ದ್ವೇಷವು ಆತನೊಡನೆಯೇ ಹೋಯಿತು. ನಾನು ಆತನಿಗಿಂತ ಉತ್ತಮನಾದ ಮಗನಾಗಿದ್ದೇನೆ. ಉಗುರುಮಾಂಸಗಳಿಗಿರುವಷ್ಟು ಬಹು ಅನ್ಯೋನ್ಯವಾದ ಪ್ರೀತಿಯಿಂದಲೇ ನಡೆದುಕೊಳ್ಳುತ್ತೇನೆ. ಬೇರೆ ಮಾತೇನು? ಹಂಬಲಿಸದೆ ನಾನು ಹೇಳಿದುದನ್ನು ಮಾಡಿ ವ|| ಎನ್ನಲು ಧೃತರಾಷ್ಟ್ರನು ಹೀಗೆಂದನು. ೮. ನನಗೆ ನೂರುಮಕ್ಕಳಾಗಲಿಲ್ಲ. ತಡೆಯಲಾಗದ ನೂರು ದುಃಖಗಳೇ ತಾನಾದುವು. ಅವುಗಳನ್ನು ನೆನೆಯುವುದಿಲ್ಲ; ಈ ಸ್ತ್ರೀಯರು ಅವರವರ ಪತಿದೇಹಗಳನ್ನು ಶವಸಂಸ್ಕಾರ ಮಾಡಲು ಅವರಿಗೆ ಕೊಡಬೇಕು. ವ|| ಎನ್ನುವಷ್ಟರಲ್ಲಿ ದೋಷವೇನಿದೆ? ಅವರುಗಳ ಸಂಸ್ಕಾರವಿಧಿಯನ್ನೆಲ್ಲ ನಾನೇ ಪಕ್ಕದಲ್ಲಿದ್ದು ಮಾಡಿಸುತ್ತೇನೆ ಎನ್ನುವಷ್ಟರಲ್ಲಿ ಕುಂತೀದೇವಿಯು ಬಂದು ಕರ್ಣನ ಹೆಣವನ್ನು ತಬ್ಬಿಕೊಂಡು ಪಾಂಡವರೈದುಜನವನ್ನೂ ಅಲ್ಲಿಗೆ ಬರಮಾಡಿದಳು. ೯. ಕರ್ಣನು ನಿಮ್ಮಣ್ಣ, ನನ್ನ ಹಿರಿಯ ಮಗ, ಹೇಳುವುದೇನು? ನಾನು ಮಹಾಪಾತಕಿ, ನಿಮ್ಮ ಮೇಲಿನ (ಮೋಹದಿಂದ) ಈತನಿಗೆ ಇಷ್ಟನ್ನೂ ನಾನೇ ಮಾಡಿದೆನು ಎಂದು ದುಃಖಿಸಿದಳು-

ವ|| ಆಗಳಯ್ವರುಮಾ ಮಾತಂ ಕೇಳ್ದು ಭೋಂಕನೆರ್ದೆದೆಱೆಯೆ ಸಹೋದರ ಶೋಕದೊಳ್ ಮನ್ಯುಮಿಕ್ಕು ಸೈರಿಸಲಾಱದೆ-

ಚಂ|| ಅಱೆಪಿದರಾರುಮಿಲ್ಲೆಮಗೆ ನೀನೆಮಗಣ್ಣನೆಯೆಂದು ಮುನ್ನಮಾ
ಮಱೆದೊಡೆ ಪಟಮಂ ನೆಲನುಮಂ ನಿನಗಿತ್ತು ಕುರುಪ್ರಧಾನನೊಳ್ ।
ಕಱುಪನೆ ನಿಚ್ಚಟಂ ಬಿಸುಟು ನಿನ್ನಯ ಪೇೞ್ದುದುಗೆಯ್ದು ಪಾೞೆಯಂ ।
ಮೆಱೆಯೆವೆ ಬಾಯ ತಂಬುಲದೊಳಂ ಮಡುಗೂೞೊಳಮಂಗವಲ್ಲಭಾ ॥ ೧೦

ವ|| ಎಂದು ಶೋಕಾಕ್ರಾಂತರಾದರಂ ನಾರಾಯಣಂ ಸಂತೈಸಿ ಕೊಂದರ್ ಕೊಲೆ ಸಾವರೆಂಬುದು ಜಗದ್ವ್ಯಾಪಾರಮೀಶ್ವರನಿಚ್ಚೆಯಿಂದ ನೆಗೞ್ಗುಮೆಂದು ದುಃಖೋಪಶಮನಂ ಮಾಡಿದೊಡೆ ಸಮಾಹಿತಚಿತ್ತರಾಗಿ ಕೊಳುಗುಳನಂ ವಿಧಿವಿಧಾನದಿಂ ಬಳಸಿ ದುರ್ಯೋಧನಂ ಮೊದಲಾಗೆ ಕುರುಕ್ಷೇತ್ರದೊಳ್ ಸತ್ತರಸುಮಕ್ಕಳೆಲ್ಲರುಮನೊಂದಾಗಿ ತಂದು ಬೆಟ್ಟಾಗೊಟ್ಟಿ ಕರ್ಣನ ಕಳೇವರಮನನಿಬರಿಂ ಮಿಗೆ ಮಹಾಬ್ರಾಹ್ಮಣರಿಂದಂ ಮಂತ್ರವಿಧಿಯಿಂದಿರಿಸಿ ಹರಿಚಂದನ ಕರ್ಪೂರ ಕಾಳಾಗರುಕಾಷ್ಠಂಗಳಿಂದಂ ಯಥೋಕ್ತ ವಿಧಿಯಿಂ ಸಂಸ್ಕಾರಿಸಿ ಕರ್ಣಂಗೆ ಕರ್ಣಸ್ಥಳಿಯೆಂಬ ತೀರ್ಥಮಂ ಮಾಡಿ ಜಳದಾನಾದಿ ಕ್ರಿಯೆಗಳಂ ನಿರ್ವರ್ತಿಸೆ ತದನಂತರದೊಳ್ ಧೃತರಾಷ್ಟ್ರನುಂ ಗಾಂಧಾರಿಯುಂ ಪುತ್ರವಿಯೋಗದುಃಖದಿಂ ಮುನಿವನಮನಾಶ್ರಯಿಸಿದರ್ ಕೊಂತಿಯುಂ ಕರ್ಣನ ಶೋಕದೊಳ್ ಧರ್ಮಪುತ್ರನಂ ಬೀೞ್ಕೊಂಡವರೊಡನೆ ತಪಶ್ಚರಣಪರಾಯಣೆಯಾದಳಿತ್ತ ಧರ್ಮನಂದನಂ ದೇವಕೀನಂದನನನಿಂತೆಂದಂ-

ವ|| ಆಗ ಅಯ್ವರು ಸಹೋದರರು ಆ ಮಾತನ್ನು ಕೇಳಿ ವಿಶೇಷವಾಗಿ ದುಃಖಿಸಿ ಸಹಿಸಲಾರದೆ - ೧೦. "ನೀನು ನಮಗಣ್ಣನೆಂದು ನಮಗೆ ಯಾರೂ ತಿಳಿಸಲಿಲ್ಲ. ಮೊದಲು ತಿಳಿದಿದ್ದರೆ ಪಟ್ಟವನ್ನೂ ರಾಜ್ಯವನ್ನೂ ನಿನಗೆ ಕೊಟ್ಟು ಕೌರವಮುಖ್ಯಸ್ಥನಾದ ದುರ್ಯೋಧನನಲ್ಲಿ ದ್ವೇಷವನ್ನು ಶಾಶ್ವತವಾಗಿ ಬಿಸಾಡಿ ನೀನು ಹೇಳಿದುದನ್ನು ಮಾಡಿಕೊಂಡು ನಿನ್ನ ಬಾಯಿದಂಬುಲದಲ್ಲಿಯೂ ಇಟ್ಟ ತಂಗಳು ಅನ್ನದಲ್ಲಿಯೂ ಸಂಪ್ರದಾಯವನ್ನು ಪಾಲಿಸುತ್ತಿರುತ್ತಿದ್ದೆವಲ್ಲವೆ? ವ|| ಎಂದು ದುಃಖದಿಂದ ಕೂಡಿದ್ದವರನ್ನು ಕೃಷ್ಣನು ಸಮಾಧಾನಪಡಿಸಿ ಕೊಂದವರು ಕೊಲೆಗೆ ಈಡಾಗಿ ಸಾಯುತ್ತಾರೆ ಎಂಬುದು ಲೋಕೋಕ್ತಿ. ಈಶ್ವರನ ಇಚ್ಛೆಯಿಂದಲೇ ನಡೆಯುತ್ತದೆ ಎಂದು ದುಃಖವನ್ನು ಹೋಗಲಾಡಿಸಿದನು. ಯುದ್ಧರಂಗವನ್ನು ಶಾಸ್ತ್ರರೀತಿಯಲ್ಲಿ ಸುತ್ತಿನೋಡಿ ದುರ್ಯೋಧನನೇ ಮೊದಲಾಗಿ ಕುರುಕ್ಷೇತ್ರದಲ್ಲಿ ಸತ್ತ ಎಲ್ಲ ರಾಜಕುಮಾರರನ್ನೂ ತಂದು ಒಟ್ಟಿಗೆ ಬೆಟ್ಟದಂತೆ ರಾಶಿಮಾಡಿದರು. ಕರ್ಣನ ಶರೀರವನ್ನು ಅಷ್ಟು ಜನವನ್ನೂ ಮೀರುವ ರೀತಿಯಲ್ಲಿ ಬ್ರಾಹ್ಮಣರಿಂದ ವಿಧಿಪೂರ್ವಕವಾಗಿ ಇರಿಸಿ ಶ್ರೀಗಂಧ, ಕರ್ಪೂರ, ಕರಿಯ ಅಗರು ಸೌದೆಯಿಂದ ಶಾಸ್ತ್ರದಲ್ಲಿ ಹೇಳಿರುವಂತೆ ಸಂಸ್ಕಾರಮಾಡಿದರು. ಕರ್ಣನ ಜ್ಞಾಪಕಾರ್ಥವಾಗಿ ಕರ್ಣಸ್ಥಳಿ ಯೆಂಬ ಕ್ಷೇತ್ರವನ್ನು ನಿರ್ಮಿಸಿದರು. ತರ್ಪಣವೇ ಮೊದಲಾದ ಕ್ರಿಯೆಗಳನ್ನು ಮಾಡಿ ಮುಗಿಸಿದರು. ಧೃತರಾಷ್ಟ್ರನೂ ಗಾಂಧಾರಿಯೂ ಮಕ್ಕಳನ್ನು ಅಗಲಿದ ದುಃಖದಿಂದ ಋಷಿಗಳ ತಪೋವನವನ್ನು ಆಶ್ರಯಿಸಿದರು. ಕುಂತೀದೇವಿಯೂ ಕರ್ಣನ ದುಃಖದಿಂದ ಧರ್ಮರಾಯನ ಅಪ್ಪಣೆಯನ್ನು ಪಡೆದು ಹೊರಟು ತಪಸ್ಸಿನಲ್ಲಿ ನಿರತಳಾದಳು. ಈ

ಮ|| ಇನಿತೊಂದುಗ್ರರಣಪ್ರಘಟ್ಟಕದೊಳೀ ಭಾರಾವತಾರಂ ಧರಾಂ
ಗನೆಗೀಯಿರ್ವರಿನಾದುದಾಯ್ತೆನಗೆ ನಿರ್ದಾಯಾದ್ಯಮೀ ಪೆಂಪೆ ಸಾ ।
ಲ್ಗೆನಗಿಂ ರಾಜ್ಯಮೆ ಬಾಟ್ಟೆಯಲ್ತು ಹರಿಗಂಗುತ್ಸಾಹದಿಂ ಪಟ್ಟ ಬಂ
ಧನಮಂ ಮಾಡುವಮಿಂದೆ ಹಸ್ತಿನಪುರಪ್ರಸ್ಥಾನಮಂ ಮಾಡುವಂ ॥ ೧೧

ವ|| ಎಂಬುದುಮಶೇಷ ಧರಾಭಾರಮಂ ಶೇಷಂ ತಾಳ್ದುವಂತೆ ವಿಕ್ರಮಾರ್ಜುನಂಗಲ್ಲದೆ ಪೆಱಂಗೆ ತಾಳ್ದಲರಿದಿದರ್ಕಾನುಮೊಡಂಬಡುವೆನೆಂದು ಮುಕುಂದನನೇಕ ಮುಕುಂದಬೃಂದಂಗಳ್ ಮೊಱಗೆ ಶುಭಮೂಹೂರ್ತದೊಳರಿಕೇಸರಿಯಂ ಮುಂದಿಟ್ಟು ಹಸ್ತಿನಪುರೋಪವನಮನೆಯ್ದೆ ವಂದಾಗಳ್-

ಚಂ|| ಮೃದುಮಧುರಸ್ವನಂ ನೆಗೞೆ ಬಂದೆಳಮಾವಿನೊಳಿರ್ದು ಕೂಡೆ ಪಾ
ಡಿದುದು ಮದಾಳಿಮಾಲೆ ಪುಗಲೆನ್ನದೆ ದಲ್ ಪುಗಿಮೆಂದು ಮೆಲ್ಲುಗುಂ ।
ದದ ದನಿಯಿಂ ತಳಿರ್ತಸುಗೆಯೊಳ್ ನೆಲಸಿರ್ದ ಪಿಕಾಳಿ ಮೆಲ್ಲನೂ
ಲ್ದುದು ಮನಮಾೞೆ ತೀಡಿದುದು ತೆಂಕಣ ತಂಬೆಲರಪ್ಪಿಕೊಳ್ವವೋಲ್ ॥ ೧೨

ಚಂ|| ಪಸರಿಸಿ ಬಂದ ಮಾಮರನೆ ಬೆಳ್ಗೊಡೆ ರಾಗದ ಪುಂಜದನ್ನವ
ಪ್ಪಸುಗೆಯ ನೀಳ್ದ ಕೆಂದಳಿರೆ ಪಾಳಿಮಹಾಧ್ವಜಮೆತ್ತಮಿಂಪನಾ ।
ಳ್ದಿಸೆವಳಿಗೀತಿ ತಾನೆ ಜಯಗೀತಿಗಳಾಗಿರೆ ವಿಕ್ರಮಾರ್ಜುನಂ
ಗೊಸೆದಿದಿರ್ವರ್ಪವೋಲ್ ಬನವದೊಪ್ಪಿದುದಿಂತು ಬಸಂತರಾಜನಾ ॥ ೧೩

ಕಡೆ ಧರ್ಮರಾಯನು ಕೃಷ್ಣನಿಗೆ ಹೀಗೆಂದನು-೧೧. ಇಷ್ಟು ಭಯಂಕರವಾದ ಈ ಯುದ್ಧಸಮಾರಂಭದಲ್ಲಿ ಈ ಭೀಮಾರ್ಜುನರಿಬ್ಬರಿಂದ ಭೂದೇವಿಗೆ ಈ ಭಾರದ ಇಳಿಯುವಿಕೆ ಆಯಿತು. ನನಗೆ ದಾಯಾದಿಗಳಿಲ್ಲದಿರುವುದೂ ಆಯಿತು. ಈ ವೈಭವವೇ ನನಗೆ ಸಾಕು. ನನಗೆ ಇನ್ನು ರಾಜ್ಯದಿಂದ ಪ್ರಯೋಜನವಿಲ್ಲ. ಹರಿಗನಾದ ಅರ್ಜುನನಿಗೆ ಇಂದೇ ಪಟ್ಟಾಭಿಷೇಕವನ್ನು ಮಾಡೋಣ, ಈ ದಿನವೇ ಹಸ್ತಿನಾಪುರಕ್ಕೆ ಪ್ರಯಾಣ ಮಾಡೋಣ. ವ|| ಎನ್ನಲು "ಸಮಸ್ತಭೂಭಾರವನ್ನೂ ಆದಿಶೇಷನು ಧರಿಸುವ ಹಾಗೆ ವಿಕ್ರಮಾರ್ಜುನನಲ್ಲದೆ ಬೇರೆಯವರಿಗೆ ಧರಿಸಲಸಾಧ್ಯ; ಇದಕ್ಕೆ ನಾನೂ ಒಪ್ಪುತ್ತೇನೆ". ಎಂದು ಕೃಷ್ಣನು ಅನೇಕ ಮಂಗಳವಾದ್ಯಗಳ ಸಮೂಹವು ಭೋರ್ಗರೆಯುತ್ತಿರಲು ಶುಭಮುಹೂರ್ತದಲ್ಲಿ ಅರಿಕೇಸರಿಯನ್ನು ಮುಂದಿಟ್ಟು ಹಸ್ತಿನಾಪಟ್ಟಣದ ಸಮೀಪದಲ್ಲಿರುವ ತೋಟವನ್ನು ಸಮೀಪಿಸಿದನು. ೧೨. ಮೃದುಮಧುರವಾದ ಧ್ವನಿಯಿಂದ ಫಲಿತ ಎಳಮಾವಿನ ಮರದಲ್ಲಿದ್ದುಕೊಂಡು ಮದಿಸಿದ ದುಂಬಿಯ ಸಮೂಹವು ಕೂಡಲೆ ಹಾಡಿತು. ಪ್ರವೇಶಮಾಡಬೇಡ ಎನ್ನದೆ ಪ್ರವೇಶಮಾಡಿ ಎಂದು ಕಡಿಮೆಯಾಗದ ಧ್ವನಿಯಿಂದ ಚಿಗುರಿದ ಅಶೋಕಮರದಲ್ಲಿ ನೆಲಸಿದ್ದ ಕೋಗಿಲೆಗಳ ಗುಂಪು ನಿಧಾನವಾಗಿ ಕೂಗಿತು. ಮನಸ್ಸಿಗೆ ತೃಪ್ತಿಯಾಗುವಂತೆ ಆಲಿಂಗನ ಮಾಡಿಕೊಳ್ಳುವ ಹಾಗೆ ದಕ್ಷಿಣದಿಕ್ಕಿನ ತಂಗಾಳಿಯು ಬೀಸಿತು. ೧೩. ಚಿಗುರಿ ಹೂವಾದ ಮಾವಿನಮರವೇ ಶ್ವೇತಛತ್ರಿ; ಕೆಂಪುಬಣ್ಣದ ರಾಶಿಯಂತಿರುವ ಅಶೋಕವೃಕ್ಷದ ಕೆಂಪುಚಿಗುರೇ ಪಾಳಿಧ್ವಜಗಳು. ಎಲ್ಲ ಕಡೆಯಲ್ಲಿಯೂ ಸೌಂದರ್ಯದಿಂದ ಕೂಡಿ ಪ್ರಕಾಶಿಸುವ

ವ।। ಆಗಳ್ ನಗರಪ್ರವೇಶಂಗೆಯ್ಯಲೆಂದು ಕಿಱಿದಾನುಂ ಬೇಗಮಾ ಪುರೋಪವನದೊಳ್ ವಿಶ್ರಮಿಸಿ ಪಂಚರತ್ನಮಯ ಮಂಡನಾಯೋಗಮಂಡಿತವಿಜಯಗಜಾರೂಢನಾದ ವಿಜಯನಂ ಮುಂದಿಟ್ಟು ಮಹಾವಿಭೂತಿಯಿಂದಯ್ವರುಂ ನಿಜಾನ್ವಯ ರಾಜದ್ರಾಜಧಾನಿಯಂ ಪುಗೆ-

ಮ।। ನವಕಾಳಾಗರುಧೂಪಧೂಮತತಿಸೌಗಂಧಂಗಳಿಂ ಸಯ್ತು ನೀ
ಳ್ದು ವಿಯಚ್ಚಕ್ರದೊಳಲ್ಲಿ ಮಂದಮರುತವ್ಯಾಘಾತದಿಂದೆಯ್ದೆ ತೋ ।
ರ್ಪವೊಲಾಗಿರ್ದುದು ಕಣ್ಗೆ ವಂದುದು ಪುರಸ್ತ್ರೀ ಪಾಂಡುಪುತ್ರಂಗಮು
ತ್ಸವದಿಂ ಮುನ್ನರಿದಿರ್ದ ತನ್ನ ಜಿಣಿಲಂ ಕೂರ್ತಂದು ಬಿಟ್ಟಂತೆವೋಲ್ ।। ೧೪

ಮಲ್ಲಿಕಮಾಲೆ ।। ಓಳಿದೋರಣಮಾಯ್ತು ಹಾರದ ಪಚ್ಚೆಸಾರದ ಮಾಲೆ ಸೌ
ಧಾಳಿಯೊಳ್ಗುಡಿಯಾಯ್ತು ಚೀನದ ಸುಯ್ಯತಾಣದ ಪಟ್ಟೆ ಹ ।
ರ್ಮ್ಯಾಳಿದಪ್ಪದೆ ರಯ್ಯಮಾಯ್ತೆಸೆವಾಟ ಪಾಟದ ಗೀತಿ ಕ
ಣ್ಗೋಳಿವಟ್ಟುದದೊಂದು ಚೆಲ್ವು ದಲಾಯ್ತು ತತ್ಪುರಮಧ್ಯದೊಳ್ ।। ೧೫

ಮಾಲಿನಿ ।। ಪ್ರವರತರ ಪುರಂಧ್ರೀನೂಪುರಾರಾವಮೆತ್ತಂ
ಕಿವಿಗೆ ವರೆ ವಿಳಾಸಂ ಕಣ್ಗೆ ಶೇಷಾಕ್ಷತೌಘ ।
ದ್ರವಮೆ ತಮಗಮಿತ್ತತ್ತಿಂಬನೆಂಬನ್ನೆಗಂ ಪಾಂ
ಡವರೆ ಪುಗೆ ಪೊಲಲ್ಗಂದೊಟ್ಟಿ ಚೆಟ್ಟಾಯ್ತು ರಾಗಂ ।। ೧೬

ದುಂಬಿಯ ಹಾಡೇ ಜಯಗೀತೆಗಳಾಗಿರಲು ವಿಕ್ರಮಾರ್ಜುನನನ್ನು ಪ್ರೀತಿಯಿಂದ ಸ್ವಾಗತಿಸುವ ಹಾಗೆ ವಸಂತರಾಜನ ವನವು ಪ್ರಕಾಶಮಾನವಾಗಿತ್ತು. ವ।। ಆಗ ನಗರಪ್ರವೇಶಮಾಡಬೇಕೆಂದು ಸ್ವಲ್ಪ ಕಾಲ ಆ ಪಟ್ಟಣದ ಸಮೀಪದ ತೋಟದಲ್ಲಿದ್ದು ವಿಶ್ರಾಂತಿ ಹೊಂದಿ ಪಂಚರತ್ನದಿಂದ ಕೂಡಿದ ಆಭರಣಗಳ ಸಮೂಹದಿಂದ ಅಲಂಕರಿಸಲ್ಪಟ್ಟ ವಿಜಯಗಜವನ್ನು ಹತ್ತಿರುವ ಅರ್ಜುನನನ್ನು ಮುಂದುಮಾಡಿಕೊಂಡು ಮಹಾವೈಭವದಿಂದ ಅಯ್ದುಜನವೂ ತಮ್ಮ ವಂಶಪಾರಂಪರ್ಯವಾಗಿ ಬಂದು ಪ್ರಕಾಶಿಸುತ್ತಿರುವ ರಾಜಧಾನಿಯನ್ನು ಪ್ರವೇಶಿಸಿದರು. ೧೪. ಹೊಸದಾದ ಕರಿಯ ಅಗರುಧೂಪದ ಹೊಗೆಯ ಸಮೂಹವು ಸುವಾಸನೆಗಳಿಂದ ಕೂಡಿ ನೇರವಾಗಿ ಆಕಾಶದಲ್ಲಿ ಉದ್ದವಾಗಿ ಹರಡಿ ಅಲ್ಲಿ ನಿಧಾನವಾಗಿ ಬೀಸುವ ಗಾಳಿಯಿಂದ ಹೊಡೆಯಲ್ಪಟ್ಟು ಆಕರ್ಷಕವಾಗುವ ಹಾಗೆ ಆಯಿತು. ಪಟ್ಟಣವೆಂಬ ಹೆಂಗಸು ಪಾಂಡುಪುತ್ರನಾದ ಅರ್ಜುನನಿಗಾಗಿ ಸಂತೋಷದಿಂದ ಮೊದಲು ಕತ್ತರಿಸಿದ್ದ ತನ್ನ ಜಡೆಯನ್ನು ಈಗ ಪ್ರೀತಿಯಿಂದ ಇಳಿಯಬಿಟ್ಟ ಹಾಗೆ ಕಣ್ಣಿಗೆ ಮನೋಹರವಾಗಿ ಕಂಡಿತು. ೧೫. ಆ ಪಟ್ಟಣದ ಮಧ್ಯದಲ್ಲಿ ಹಾರವಾಗಿ ಮಾಡಿರುವ ಹಸಿರುವಾಣೆಯ ಸಾರವತ್ತಾದ ತೋರಣಗಳು ಸಾಲಾಗಿ ರಂಜಿಸಿದುವು. ಉಪ್ಪರಿಗೆಗಳ ಸಾಲಿನಲ್ಲಿ ರೇಷ್ಮೆಯ ಕಸೂತಿ ಕೆಲಸಮಾಡಿದ ನವುರಾದ ಬಟ್ಟೆಗಳಿಂದ ಕೂಡಿದ ಒಳ್ಳೆಯ ಬಾವುಟಗಳು ಎಲ್ಲ ಉಪ್ಪರಿಗೆಗಳಲ್ಲಿಯೂ ಪ್ರಕಾಶಿಸಿದುವು. ನೃತ್ಯ ಸಂಗೀತ ಹಾಡುಗಳು ಮನೋಹರವಾದುವು. ಅದು ಕಣ್ಣಿಗೆ ಸೌಂದರ್ಯರಾಶಿಯಾಗಿ ಕಂಡಿತು. ೧೬. ಅತಿಶ್ರೇಷ್ಠರಾದ ಅಂತಃಪುರಸ್ತ್ರೀಯರ ಕಾಲಂದಿಗೆಯ ಧ್ವನಿಯು ಎಲ್ಲ

ವ॥ ಅಂತು ಪುರಜನಜನಿತಾಶೀರ್ವಾದಸಹಸ್ರಂಗಳೊಡನೆ ಸೂಸುವ ಶೇಷಾಕ್ಷತಂಗಳ ನಾನುತ್ತುಂ ಬಂದು ತತ್ಪುರಾಂಗನೆಯ ಮುಖಸರಸಿಜಮಲರ್ದಂತೆಸೆದೊಪ್ಪುವ ರಾಜಮಂದಿರಮಂ ಪೊಕ್ಕು ಧರ್ಮನಂದನಂ ದೇವಕೀನಂದನನೊಳ್ ಪರಮಾನಂದಂ ಬೆರಸು ಸಾಮಂತ ಚೂಡಾಮಣಿಯ ಪಟ್ಟಬಂಧನ ಮಹೋತ್ಸವಮಂ ಸಮಕೊಳಿಸಿ ವಿಕ್ರಮಾರ್ಜುನನನಿಂತೆಂದಂ-

ಉ॥ ಪ್ರಾಯದ ಪೆಂಪೆ ಪೆಂಪೆಮಗೆ ಮಿಾಜಿದರಂ ತವೆ ಕೊಂದ ಪೆಂಪು ಕ
ಟ್ಟಾಯದ ಪೆಂಪು ಶಕ್ರನೊಡನೇಜಿದ ಪೆಂಪಿವು ಪೆಂಪುವೆತ್ತು ನಿ ।
ಟ್ಟಾಯುಗಳಾಗಿ ನಿನ್ನೊಳಮರ್ದಿರ್ದುವು ನೀಂ ತಲೆವೀಸದುರ್ವರಾ
ಶ್ರೀಯನಿದಾಗದೆನ್ನದೊಳಕೊಳ್ ಪರಮೋತ್ಸವದಿಂ ಗುಣಾರ್ಣವಾ ॥ ೧೭

ವ॥ ಎಂದು ಧರ್ಮಪುತ್ರನುಂ ದೇವಕೀಪುತ್ರನುಂ ಮರುತ್ಪುತ್ರನುಮಮರೇಂದ್ರ ಪುತ್ರನನೆಂತಾನುಮೊಡಂಬಡಿಸಿ ನಾಳೆ ಪಟ್ಟಬದ್ಧೋತ್ಸವಮೆಂದು ಮುನ್ನಿನ ದಿವಸಂ ಮಯನಿಂ ಪಂಚರತ್ನಮಯಮಾದ ಸಭಾಮಂಟಪಮಂ ತರಿಸಿ ವಸಿಷ್ಠ ಕಶ್ಯಪ ವ್ಯಾಸ ವಿಶ್ವಾಮಿತ್ರ ಭರದ್ವಾಜಾದಿ ಮುನಿಪತಿಗಳಂ ಬರಿಸಿ ಮಾತಳಿಯ ಕೆಯ್ಯೊಳ್ ದೇವೇಂದ್ರನಟ್ಟಿದ ಕಲ್ಪವೃಕ್ಷದ ತಳಿರ್ಗಳನೈರಾವತದ ಹರವೃಷಭದ ಕೋಡ ಮಣ್ಣುಮನಾಕಾಶಗಂಗೆಯ ನೀರುಮಂ ಮಂದಾರಪಾರಿಜಾತದ

ಕಡೆಯಲ್ಲಿಯೂ ಕೇಳಿಸುತ್ತಿರಲು ಕಣ್ಣುಗಳಿಗೆ ವೈಭವವು ತೋರಿ ಬರಲು, ಆಶೀರ್ವಾದದ ಅಕ್ಷತೆಗಳ ಸಮೂಹವು ತಮಗೂ ಸಂತೋಷವನ್ನು ಕೊಟ್ಟಿತು ಎನ್ನುತ್ತಿರಲು ಪಾಂಡವರು ಪುರಪ್ರವೇಶಮಾಡುವ ಸಂತೋಷವು ಅತ್ಯತಿಶಯವಾಯಿತು. ವ॥ ಹಾಗೆ ಪಟ್ಟಣದ ಜನಗಳಿಂದ ಉದ್ಭವವಾದ ಆಶೀರ್ವಾದ ಸಹಸ್ರಗಳನ್ನೂ ಅವರು ಚೆಲ್ಲುವ ಮಂತ್ರಾಕ್ಷತೆಗಳನ್ನೂ ತಲೆಯಲ್ಲಿ ಧರಿಸುತ್ತ ಬಂದು ಆ ಪುರಸ್ತ್ರೀಯ ಮುಖಕಮಲವು ಅರಳಿದಂತೆ ಪ್ರಕಾಶಿಸುತ್ತಿರುವ ಅರಮನೆಯನ್ನು ಪ್ರವೇಶಿಸಿದರು. ಧರ್ಮರಾಜನು ಕೃಷ್ಣನೊಡನೆ ವಿಶೇಷ ಸಂತೋಷದಿಂದ ಕೂಡಿ ಸಾಮಂತಚೂಡಾಮಣಿಯಾದ ಅರ್ಜುನನ ಪಟ್ಟಾಭಿಷೇಕಮಹೋತ್ಸವವನ್ನೇರ್ಪಡಿಸಿ ಅರ್ಜುನನನ್ನು ಕುರಿತು ಹೀಗೆಂದನು-೧೭. ಗುಣಾರ್ಣವಾ ಪ್ರಾಯದ ವೈಭವ; ನಮ್ಮನ್ನು ಅತಿಕ್ರಮಿಸಿದವರನ್ನು ನಾಶವಾಗುವಂತೆ ಕೊಂದ ವೈಭವ; ಅತ್ಯಧಿಕವಾದ ಪರಾಕ್ರಮದ ವೈಭವ; ಇಂದ್ರನೊಡನೆ ಅವನ ಅರ್ಧಾಸನವನ್ನು ಹತ್ತಿದ ವೈಭವ ಇವು ಆಧಿಕ್ಯವನ್ನು ಹೊಂದಿ ದೀರ್ಘಾಯುವಾಗಿ ನಿನ್ನಲ್ಲಿ ಸೇರಿಕೊಂಡು ಪ್ರಕಾಶವಾಗಿವೆ. ಅರ್ಜುನ, ನೀನು ತಲೆಬೀಸದೆ (ಅಸಮ್ಮತಿಯನ್ನು ಪ್ರದರ್ಶಿಸದೆ) ಇದು ನನ್ನಿಂದಾಗುವುದಿಲ್ಲ ಎನ್ನದೆ ಈ ರಾಜ್ಯಸಂಪತ್ತನ್ನು ಅತ್ಯಂತ ಸಂತೋಷದಿಂದ ನೀನು ಅಂಗೀಕರಾಮಾಡು. ವ॥ ಎಂದು ಧರ್ಮರಾಯನೂ ಕೃಷ್ಣನೂ ಭೀಮನೂ ಅರ್ಜುನನನ್ನು ಹೇಗೂ ಒಪ್ಪಿಸಿದರು. ನಾಳೆಯೇ ಪಟ್ಟವನ್ನು ಕಟ್ಟುವ ದಿವಸವೆಂದು ದೇವಲೋಕದ ಶಿಲ್ಪಿಯಾದ ಮಯನೆಂಬುವನಿಂದ ಪಂಚರತ್ನಮಯವಾದ ಸಭಾಮಂಟಪವನ್ನು ತರಿಸಿದರು. ವಸಿಷ್ಠ, ಕಶ್ಯಪ, ವ್ಯಾಸ, ವಿಶ್ವಾಮಿತ್ರ, ಭಾರದ್ವಾಜರೇ ಮೊದಲಾದ ಋಷಿಶ್ರೇಷ್ಠರನ್ನು ಬರಮಾಡಿದರು. ಮಾತಲಿಯ ಕಯ್ಯಲ್ಲಿ ದೇವೇಂದ್ರನು ಕಲ್ಪವೃಕ್ಷದ ಚಿಗುರುಗಳನ್ನೂ ಐರಾವತವೆಂಬಾನೆಯೂ ಈಶ್ವರನ ನಂದಿಯೂ ಕೊಂಬಿನಿಂದ ಎಬ್ಬಿಸಿದ ಮಣ್ಣನ್ನೂ

ಪೂಮಾಲೆಗಳುಮಂ ವರುಣದೇವನಟ್ಟಿದ ಕ್ಷಾರಕ್ಷೀರೇಕ್ಷುದಧಿಮಧುಘೃತಸ್ವಾದೂದಕಂಗಳೆಂಬೇೞುಂ ಸಮುದ್ರಂಗಳ ಚತುರ್ದಶ ಮಹಾನದಿಗಳ ನೀರುಮಂ ತಟತಟ ತೊಳಗುವ ಕಳಧೌತ ಕಳಶಂಗಳೊಳ್ ತೆಕ್ಕನೆ ತೀವಿ ತಂದ ವಾರವನಿತಾಜನಕ್ಕಂ ಸಾಮಂತಚಕ್ರಕ್ಕಮುಡಲಿಕ್ಕಿ ಧವಳಚ್ಛತ್ರ ಚಾಮರಸಿಂಹಾಸನ ಪಟ್ಟವರ್ಧನಕುಲಧನಾದಿ ರಾಜ್ಯಚಿಹ್ನಂಗಳಂ ವಿವಿಧ ವಿಧಾನದಿಂದಮಧಿವಾಸಿಸಿ ಗಂಗಾಜಳಪವಿತ್ರೀಕೃತಗಾತ್ರನುಂ ಕೌಶೇಯ ಪರಿಧಾನನುಮಾಗಿರ್ದ ಮಾನನಿಧಾನನಂ ತಂದು ಪೊಡೆವಡಿಸಿ ಮಂಗಳಪಟಹಂಗಳುಂ ಮಂಗಳಗೀತಿಗಳುಮೆಸೆಯೆ ಕಳಕಳಾವರ್ತಮಾಗೆ ಜಾಗರಮಿರ್ದು ಮಱುದಿವಸಂ ಪ್ರಶಸ್ತ ಮೌಹೂರ್ತಿಕ ನಿರೂಪಿತ ಶುಭ ಲಗ್ನೋದಯ ದಿಂದಷ್ಟೋತ್ತರಶತ ಪೂರ್ಣಕುಂಭಂಗಳಂ ಚತುರ್ವೇದ ಪಾರಗರಪ್ಪ ಧರಾಮ ರರೆತ್ತಿಕೊಂಡು ಮಂತ್ರಪೂತ ಜಲಂಗಳಿಂ ಮಿಾಯಿಸಿ-

ಮ॥ ಸ್ರ॥ ವನಧಿಪ್ರಧ್ವಾನದಿಂ ಮಂಗಳಪಟಹರವಂ ಪೆರ್ಚೆ ಮಾಂಗಲ್ಯಗೇಯ
ಧ್ವನಿಯಿಂದಾಶಾಂತರಂ ಘೂರ್ಣಿಸಿ ಸೊಗಯಿಸೆ ಕೆಯ್ಗೆಯ್ದು ಸಾಮಂತ ಸೀಮಂ ।
ತಿನಿಯರ್ ಮುಂದಾಡೆ ಭೋರೆಂದೆಸೆಯೆ ಜಯಜಯಧ್ವಾನಮೋರಂತೆ ವಾರಾಂ
ಗನೆಯರ್ ವಂದಾಡೆ ಸಂದೀ ವಿಭವದೊಳರಿಗಂಗಾಯ್ತು ರಾಜ್ಯಾಭಿಷೇಕಂ ॥ ೧೮

ಆಕಾಶಗಂಗೆಯ ನೀರನ್ನೂ ನಮೇರು ಮಂದಾರ ಪಾರಿಜಾತಗಳೆಂಬ ದೇವಲೋಕದ ಮರಗಳ ಹೂವುಗಳಿಂದ ಕೂಡಿದ ನೀರುಗಳನ್ನೂ ಕಳುಹಿಸಿಕೊಟ್ಟನು. ವರುಣದೇವನು ಉಪ್ಪು, ಹಾಲು,ಕಬ್ಬಿನ ರಸ, ಮೊಸರು, ಜೇನು, ತುಪ್ಪ, ಸಿಹಿನೀರುಗಳ ಏಳು ಸಮುದ್ರಗಳ ಮತ್ತು ಹದಿನಾಲ್ಕು ಮಹಾನದಿಗಳ ಪುಣ್ಯತೀರ್ಥವನ್ನು ಕಳುಹಿಸಿಕೊಟ್ಟನು. ಅವನ್ನು ಥಳಥಳನೆ ಹೊಳೆಯುವ ಸ್ವಚ್ಛವಾದ ಬಿಳಿಯ ಕೊಡಗಳಲ್ಲಿ ತುಂಬಿ ತಂದಿರುವ ವೇಶ್ಯಾಸ್ತ್ರೀಯರಿಗೂ ಸಾಮಂತರಾಜಸಮೂಹಕ್ಕೂ ಉಡುಗೊರೆಯನ್ನು ಕೊಟ್ಟನು. ಶ್ವೇತಚ್ಛತ್ರ (ಬಿಳಿಯ ಕೊಡೆ) ಚಾಮರ, ಸಿಂಹಾಸನ, ಪಟ್ಟದಾನೆ, ಕುಲಧನವೇ ಮೊದಲಾದ ರಾಜ್ಯಚಿಹ್ನೆಗಳನ್ನು ಬೇರೆ ಬೇರೆ ರೀತಿಯಿಂದ ಪ್ರತಿಷ್ಠೆ ಮಾಡಿಸಿದನು. ಗಂಗಾಜಲದಿಂದ ಪವಿತ್ರವನ್ನಾಗಿ ಮಾಡಲ್ಪಟ್ಟ ಶರೀರವುಳ್ಳವನೂ ರೇಷ್ಮೆಯ ವಸ್ತ್ರದ ಹೊದಿಕೆಯುಳ್ಳವನೂ ಆದ ಅರ್ಜುನನನ್ನು ನಮಸ್ಕಾರಮಾಡಿಸಿ ಮಂಗಳವಾದ್ಯಗಳೂ ಮಂಗಳಗೀತೆಗಳೂ ಪ್ರಕಾಶಿಸುತ್ತಿರಲು ಕಳಕಳಧ್ವನಿಯಿಂದ ಆವರಿಸಲ್ಪಟ್ಟು ಜಾಗರಣೆಯಿರಿಸಿದನು. ಮಾರನೆಯ ದಿವಸ ಪ್ರಶಸ್ತವಾದ ಜೋಯಿಸರಿಂದ ನಿಷ್ಕರ್ಷಿಸಲ್ಪಟ್ಟ ಶುಭಮುಹೂರ್ತದಲ್ಲಿ ನೂರೆಂಟು ಪೂರ್ಣಕುಂಭಗಳನ್ನು ನಾಲ್ಕು ವೇದಗಳಲ್ಲಿಯೂ ಪಂಡಿತರಾದ ಬ್ರಾಹ್ಮಣರು ಎತ್ತಿಕೊಂಡು ಮಂತ್ರಪೂತವಾದ ನೀರಿನಿಂದ ಸ್ನಾನಮಾಡಿಸಿದರು. ೧೮. ಸಮುದ್ರಘೋಷದಂತೆ ಮಂಗಳವಾದ್ಯಧ್ವನಿಯು ಹೆಚ್ಚಿದುವು. ಮಂಗಳಗೀತೆಗಳ ಧ್ವನಿಯಿಂದ ದಿಕ್ಕುಗಳ ಒಳಭಾಗವೆಲ್ಲ ಶಬ್ದಮಾಡಿ ಸೊಗಯಿಸಿದುವು. ಅಲಂಕಾರಮಾಡಿಕೊಂಡಿರುವ ಸಾಮಂತರಾಜರ ಸ್ತ್ರೀಯರು ಮುಂಭಾಗದಲ್ಲಿ ನೃತ್ಯವಾಡಿದರು. ಜಯಜಯಧ್ವನಿಯು ಒಂದೇ ಸಮನಾಗಿ ಭೋರೆಂದು ಧ್ವನಿಮಾಡುತ್ತಿರಲು ವೇಶ್ಯಾಸ್ತ್ರೀಯರು ಬಂದು ನೃತ್ಯವಾಡಿದರು. ಇಂತು ಈ ವೈಭವದಲ್ಲಿ ಅರಿಗನಿಗೆ (ಅರ್ಜುನನಿಗೆ) ರಾಜ್ಯಾಭಿಷೇಕವಾಯಿತು.

ವ॥ ಆಗಳ್ ರಾಜ್ಯಾಭಿಷೇಕದ ನಂತರದೊಳ್ ಧರ್ಮನಂದನಂ ವಾಯುನಂದನಂ ದೇವಕೀನಂದನನಶ್ವಿನೀನಂದನರಯ್ವರುಮನೇಕ ಮಂಗಳಾಭರಣಾಳಂಕೃತಶರೀರರರಿಕೇಸರಿಯಂ ಕೇಸರಿವಿಷ್ಟರದೊಳ್ ಕುಳ್ಳಿರಿಸಿ ಪಂಚರತ್ನಶಿಖಾವಿರಾಜಮಾನಮಪ್ಪ ಪಟ್ಟಮನೆತ್ತಿ ಯಾದವ ವಂಶಸಂಭೂತೆಯುಮನೇಕಲಕ್ಷಣೋಪೇತೆಯುಮಪ್ಪ ಸುಭದ್ರೆಗೆ ಮಹಾದೇವಿವಟ್ಟಮಂ ಕಟ್ಟಿದಾಗಳ್-

ಚಂ॥ ನೆಗಱ್ದುದು ದೇವದುಂದುಭಿರವಂ ಸುರನಂದನದಿಂ ಪೊದಳ್ದ ಬ
ಲ್ಮುಗುಳ್ಗಳ ತಂದಲಂದು ಕವಿತಂದುದದಂ ತನಿಸೋಂಕು ಸೋಂಕಿ ಮೆ ।
ಲ್ಲಗೆ ಮಲಯಾನಿಳಂ ಸುಟಿದೊಡಂದು ಜಗಂ ಪೊಸತಾದುದೆಂದೊಡೇ
ವೊಗಟ್ಟುದೊ ಪಟ್ಟಬಂಧನಮಹೋತ್ಸವಮಂ ಜಗದೇಕಮಲ್ಲನಾ ॥ ೧೯

ಮುತ್ತಿನ ಪಚ್ಚೆ ಮಾಣಿಕದ ವಜ್ರದ ಕೇಟಿಯೊಳೊಂದಿ ಸಾಂದಿನೊಳ್
ಕತ್ತುರಿಯೊಂದು ಕೋಳ್ಗೆಸಱಿನೊಳೋಕುಳಿ ಚಂದನಗಂಧವಾರಿಯೊಳ್ ।
ಸುತ್ತಲುಮಟ್ಟಿಱಿಂ ಪಡೆವ ಗೇಯದ ಪೆಂಪಿಸಲಂಪನಾರ್ಗಮಾ
ರ್ತಿತ್ತುದು ಪಟ್ಟಬಂಧನಮಹೋತ್ಸವಮಾ ಪಡೆಮೆಚ್ಚೆ ಗಂಡನಾ ॥ ೨೦

ವ॥ ಮತ್ತಮೈರಾವಣಾನ್ವಯನುಂ ಸುರಭಿನಿಶ್ವಾಸನುಂ ಸೂಕ್ಷ್ಮಬಿಂದುರುಚಿರನುಂ ಕಾಳಿಂಗ ವನಸಂಭೂತನುಮನೇಕಲಕ್ಷಣೋಪೇತನುಮಪ್ಪ ತ್ರಿಭುವನಾಭರಣಮೆಂಬಾನೆಗಮುಭಯಕುಲ

ವ॥ ರಾಜ್ಯಾಭಿಷೇಕವಾದ ಮೇಲೆ ಧರ್ಮರಾಯನೂ ಭೀಮ ಕೃಷ್ಣ ನಕುಲಸಹದೇವರೇ ಮೊದಲಾದ ಅಯ್ದುಜನರೂ ಅನೇಕ ಒಡವೆಗಳಿಂದ ಅಲಂಕಾರಮಾಡಲ್ಪಟ್ಟ ಶರೀರರಾಗಿ ಅರಿಕೇಸರಿಯನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ ಅಯ್ದು ರತ್ನಗಳಿಂದ ಖಚಿತವಾದ ತಲೆಯ ಪಟ್ಟ (ಶಿರಪೇಷ್)ದಿಂದ ಪ್ರಕಾಶಮಾನವಾದ ಪಟ್ಟವಸ್ತ್ರವನ್ನು ಕಟ್ಟಿ ಯಾದವವಂಶದಲ್ಲಿ ಹುಟ್ಟಿದವಳೂ ಅನೇಕ ಲಕ್ಷಣಗಳಿಂದ ಕೂಡಿದವಳೂ ಆದ ಸುಭದ್ರೆಗೆ ಮಹಾರಾಣಿಯ ಪಟ್ಟವನ್ನು ಕಟ್ಟಿದರು. ೧೯. ದೇವದುಂದುಭಿ ಯಾಯ್ತು. ದೇವತೆಗಳ ತೋಟದಿಂದ ವ್ಯಾಪಿಸಿದ ದೊಡ್ಡ ಹೂಗಳ ತುಂತುರುಮಳೆಯಾಯಿತು. (ಪುಷ್ಪವೃಷ್ಟಿಯಾಯಿತು) ಅದರ ಇಂಪಾದ ಸ್ಪರ್ಶದಿಂದ ನಿಧಾನವಾಗಿ ಮಲಯಮಾರುತವು ಸುಳಿದಾಡಿತು. ಆ ದಿನ ಲೋಕವೇ ಹೊಸತಾಯಿತು ಎಂದರೆ ಜಗದೇಕಮಲ್ಲನಾದ ಅರ್ಜುನನ ಪಟ್ಟಬಂಧ ಮಹೋತ್ಸವವನ್ನು ಏನೆಂದು ಹೊಗಳುವುದು ೨೦. ಮುತ್ತು ಪಚ್ಚೆ ರತ್ನ ಮತ್ತು ವಜ್ರಗಳ ಸಾಲುಗಳಲ್ಲಿ ಸೇರಿ ಶ್ರೀಗಂಧ ಕಸ್ತೂರಿ ಮೊದಲಾದುವುಗಳ ಒಳ್ಳೆಯ ಕೆಸರಿನಲ್ಲಿಯೂ ಶ್ರೀಗಂಧದ ಪರಿಮಳಯುಕ್ತವಾದ ನೀರಿನಲ್ಲಿಯೂ ಓಕುಳಿಯಾಡಿಸುತ್ತ ಎಲ್ಲೆಡೆಯಲ್ಲಿಯೂ ಪ್ರೀತಿಯನ್ನುಂಟುಮಾಡುವ ಸಂಗೀತದ ವೈಭವದಿಂದ ಕೂಡಿದ ಅರ್ಜುನನ ಪಟ್ಟಬಂಧನಮಹೋತ್ಸವವು ಎಂತಹವರಿಗೂ ಸಾಕಷ್ಟು ಸಂತೋಷವನ್ನು ಕೊಟ್ಟಿತು. ವ॥ ಮತ್ತು ಐರಾವತದ ವಂಶದಲ್ಲಿ ಹುಟ್ಟಿದುದೂ ಸುಗಂಧಯುಕ್ತವಾದ ಉಸಿರುಳ್ಳುದೂ ಸೂಕ್ಷ್ಮವಾದುದೂ ಸಣ್ಣ ಸಣ್ಣ ಬಿಳಿಯ ಮಚ್ಚೆಗಳಿಂದ ರಮ್ಯವಾದುದೂ ಕಳಿಂಗದೇಶದ ಅರಣ್ಯದಲ್ಲಿ ಹುಟ್ಟಿದುದೂ ಅನೇಕ ಲಕ್ಷಣಗಳಿಂದ ಕೂಡಿದುದೂ

ಶುದ್ಧನುಂ ಗುಣಶುದ್ಧನುಂ ಗುಣಸಮುದ್ರನುಮಪ್ಪ ಮಹಾಮಂತ್ರಿಯಭವನುಮುಚ್ಛೈಶ್ರವಾನ್ವಯ ಸಂಭವನುಂ ಪ್ರಶಸ್ತ ಲಕ್ಷಣ ಲಕ್ಷಿತನುಮಪ್ಪ ತ್ರಿಭುವನತಿಲಕಮೆಂಬ ಕುದುರೆಗಂ ಪಟ್ಟಂಗಟ್ಟಿ ಪುರುಷೋತ್ತಮನ ತಂಗೆಯುಂ ತಾನುಂ ತುಳಾಪುರುಷಮನಿರ್ದು ಲೋಕಕ್ಕೆಲ್ಲಂ ಬಿಯಮಂ ಮೆಱೆದು-

ಚಂ॥ ತೊರೆದುದು ಕಾಮಧೇನು ತುಱುಗಲ್ಗೊನೆವಣ್ತುದು ಕಲ್ಪವೃಕ್ಷಮೀ
ಶ್ವರನ ವರಪ್ರಸಾದಮಿದಿರ್ಗೊಂಡುದು ಸುತ್ತಿಱಿದೊಂದು ಮುತ್ತಿನಾ ।
ಗರಮೆ ತೆರಳ್ದುದೆಯ್ದೆ ರಸ ಸಿದ್ಧಿಯುಮಾಯ್ತೆನೆ ತನ್ನನಾಸೆವ
ಟ್ಟೆರೆದವರ್ಗಿತ್ತು ಪೊಮ್ಮಯದೆ ಮಾಡಿದನೀ ನೆಲನಂ ಗುಣಾರ್ಣವಂ ॥ ೨೧

ವ॥ ಅಂತು ಚಾಗಂಗೆಯ್ದು ಸಿಂಹಾಸನಮಸ್ತಕಸ್ಥಿತನುಂ ವಿರಾಜಮಾನ ಧವಳಚ್ಛತ್ರಚಾಮರ ಸಹಸ್ರಸಂಛಾದಿತನುಮಾಗಿ ವಿಕ್ರಾಂತತುಂಗನೊಡ್ಡೋಲಗಂಗೊಟ್ಟರೆ-

ಕಂ॥ ಎಡೆಗೊಂಡಿರಿಮುತ್ಸಂಚಂ
ನುಡಿಯದಿರಿಂ ನೃಪತಿ ನುಡಿಯಿಂ ನೀಮಿ ।
ರ್ಪೆಡೆಯೊಳಿರಿಂ ನೀವಱಿವಿರ್
ಮಿಡುಕಿದೊಡನೆ ಚಿತ್ರವೇತ್ರದಂಡಧರರ್ಕಳ್ ॥ ೨೨

ಆಗಿರುವ ತ್ರಿಭುವನಾಭರಣವೆಂಬ ಆನೆಗೂ ಉಭಯಕುಲಶುದ್ಧನೂ ಗುಣಸಮುದ್ರನೂ ಆಗಿರುವ ಮಹಾಮಂತ್ರಿಯ ಮನೆಯಲ್ಲಿಯೇ ಬೆಳೆದ (?) ಉಚ್ಚೈಶ್ರವದ ವಂಶದಲ್ಲಿಯೇ ಜನಿಸಿರುವ ಪ್ರಶಸ್ತವಾದ ಲಕ್ಷಣಗಳಿಂದ ಗುರುತುಮಾಡಲ್ಪಟ್ಟ ತ್ರಿಭುವನತಿಲಕವೆಂಬ ಕುದುರೆಗೂ ಪಟ್ಟವನ್ನು ಕಟ್ಟಿದರು. ಕೃಷ್ಣನ ತಂಗಿಯಾದ ಸುಭದ್ರೆಯೂ ಅರ್ಜುನನೂ ತುಲಾಪುರುಷಭಾರವಿದ್ದು (ತನ್ನ ತೂಕದಷ್ಟು ಚಿನ್ನವನ್ನು ತೂಕಮಾಡಿ ದಾನಮಾಡುವುದು) ಲೋಕಕ್ಕೆಲ್ಲ ತಮ್ಮ ದಾನದ ವೈಭವವನ್ನು ಮೆರೆದರು. ೨೧. ಕಾಮಧೇನುವೆಂಬ ದೇವಲೋಕದ ಹಸುವು ಹಾಲನ್ನು ಸುರಿಸಿತು. ಕಲ್ಪವೃಕ್ಷವು ಕಿಕ್ಕಿರಿದು ತುಂಬಿದ ಹಣ್ಣುಗಳಿಂದ ಕೂಡಿದ ಗೊನೆಯನ್ನುಳ್ಳುದಾಯಿತು. ಈಶ್ವರನ ವರಪ್ರಸಾದವು ಎದಿರುಗೊಂಡಿತು. ಸುತ್ತಲೂ ಒಂದು ಮುತ್ತಿನ ಭಂಡಾರವೇ ಆವರಿಸಿಕೊಂಡು ಚಲಿಸಿತು. ಸಂಪೂರ್ಣವಾಗಿ ರಸಸಿದ್ಧಿ ಆಯಿತು ಎನ್ನುವ ಹಾಗೆ ತನ್ನಲ್ಲಿ ಆಸೆಯಿಂದ ಬಂದು ಬೇಡಿದವರಿಗೆ ಅವರ ತೃಪ್ತ್ಯನುಸಾರವಾಗಿ ದಾನಮಾಡಿ ಲೋಕವನ್ನೆಲ್ಲ ಸುವರ್ಣಮಯವನ್ನಾಗಿ ಮಾಡಿದನು. ವ॥ ಹಾಗೆ ದಾನಮಾಡಿ ಸಿಂಹಾಸನದ ಮೇಲುಭಾಗದಲ್ಲಿ ಕುಳಿತವನೂ ಹೊಳೆಯುತ್ತಿರುವ ಸಾವಿರಾರು ಬೆಳುಗೊಡೆ ಮತ್ತು ಚಾಮರಗಳಿಂದ ಮುಸುಕಲ್ಪಟ್ಟವನೂ ವಿಶೇಷ ಪರಾಕ್ರಮಿಯೂ ಆದ ಅರ್ಜುನನು ಸಭಾಮಧ್ಯದಲ್ಲಿ ಓಲಗಗೊಟ್ಟನು. ೨೨. ನಿಮ್ಮ ನಿಮ್ಮ ಸ್ಥಳದಲ್ಲಿರಿ; ಗಟ್ಟಿಯಾಗಿ ಮಾತನಾಡಬೇಡಿ; ರಾಜನು ಮಾತನಾಡಿದ ಮೇಲೆ ನೀವು ಮಾತನಾಡಿ; ನೀವು ಇರುವ ಸ್ಥಳದಲ್ಲಿಯೇ ಇರಿ; ಅಲುಗಾಡಿದರೆ ತಕ್ಷಣವೇ ಬಗೆಬಗೆಯಾದ ಬೆತ್ತವನ್ನು ಹಿಡಿದಿರುವ ಕಟ್ಟಿಗೆಕಾರರ ಅನುಭವವು ನಿಮಗಾಗುತ್ತದೆ. (ಅವರ ದಂಡದ

ಒಳಿಕೊಳೆ ಪೊಳೆವ ಕಣ್ಗಳ್
ನೀಳಿಮದನಜಂಗಳೋಳಿ ಕೊಳ್ವದುವುಂ ತಾ ।
ಮೋಳಿಕೊಳಲಂತೆ ಗಣಿಕೆಯ
ರೋಳಿಯೊಳೆ ಮಡಲ್ತ ಲತೆಗಳಿರ್ಪಂತಿರ್ದರ್ ॥ ೨೩

ಕಂ॥ ಸಾರ್ಚಿದ ಲೋಹಾಸನದೊಳ
ಪುರ್ಚಿದ ಬೊಂದರಿಗೆ ಪಟಿಯ ಬತ್ತರಿಗೆ ಕರಂ ।
ಪೆರ್ಚುವ ಮಹಿಮೆಯನೆಯ್ದೆ ನಿ
ಮಿರ್ಚೆ ಮಹಾಮಕುಟಬದ್ಧರೋಳಿಯೊಳಿರ್ದರ್ ॥ ೨೪

ಮಗ ಮಗ ಮಗಿಸುವ ಮೃಗಮದ
ದಗರುವ ಕಪ್ಪುರದ ಕಂಪುಮಂ ಸೂಡಿದ ಬಾ ।
ಸಿಗದ ಪೊಸಗಂಪಸಿಂಬಾ
ಗೊಗೆದಿರೆ ಮಾಡಿದುದು ಚಾಮರರುಹಗಂಧವಹಂ ॥ ೨೫

ಪಸರಿಸಿದ ತಾರಹಾರದ
ಪೊಸವೆಳ್ದಿಂಗಳುಮನಮರ್ದ ಪೆರ್ಮಡುಗೆಗಳೊಳ್ ।
ಮಿಸುಗುವ ಪೊಸ ಮಾಣಿಕದಳ
ವಿಸಿಲುಮನೊಡಗಾಣಲಾದುದರಿಗನ ಸಭೆಯೊಳ್ ॥ ೨೬

ವ॥ ಅಂತು ದೇವೇಂದ್ರನಾಸ್ಥಾನಮನೆ ಪೋಲ್ತು ಸೊಗಯಿಸುವ ಸಂಸಾರಸಾರೋದಯನಾಸ್ಥಾನದೊಳೊರ್ವ ವೈತಾಳಿಕಂ ನಿಂದಿರ್ದು ಮೃದುಮಧುರಗಂಭೀರಧ್ವನಿಯಿನಿಂತೆಂದಂ-

ಏಟುಗಳ ರುಚಿ ನಿಮಗೆ ಅನುಭವವಾಗುತ್ತದೆ ಎಂದಭಿಪ್ರಾಯ). ೨೩. ಎಂದು ಹೇಳುತ್ತಿರುವ ಕಾವಲವರ ಹೊಳೆಯುವ ಕಣ್ಣುಗಳು ಸಾಲಾಗಿರಲು ಕನ್ನೈದಿಲೆಯ ತೋಟದಲ್ಲಿ ಒಪ್ಪುವ ಕನ್ನೈದಿಲೆಯ ಹೂವುಗಳು ಕ್ರಮಬದ್ಧವಾಗಿ ಸಾಲಾಗಿರುವಂತೆ ವೇಶ್ಯಾಸ್ತ್ರೀಯರು ಸಾಲಾಗಿ ಚಿಗುರಿದ ಬಳ್ಳಿಗಳಂತೆ ಕಂಡರು. ೨೪. ಹತ್ತಿರವಿಟ್ಟಿರುವ ಲೋಹಾಸನಗಳಲ್ಲಿ (ಚಿನ್ನ, ಬೆಳ್ಳಿ ಮೊದಲಾದ ಲೋಹಗಳಿಂದ ಕೂಡಿದ ಕುರ್ಚಿಗಳಲ್ಲಿ) ಸೇರಿರುವ ಮೆತ್ತೆಗಳು (ಪಟಿಯ?) ಸಣ್ಣ ಪೀಠಗಳೂ ವಿಶೇಷ ವೈಭವವನ್ನತಿಶಯವಾಗಿ ಉಂಟು ಮಾಡಲು ಮಹಾರಾಜರುಗಳು ಸಾಲಾಗಿದ್ದರು. ೨೫. ಸುಗಂಧವನ್ನು ಬೀರುತ್ತಿರುವ ಕಸ್ತೂರಿ ಅಗರು ಮತ್ತು ಪಚ್ಚಕರ್ಪೂರದ ವಾಸನೆಯನ್ನು ಅಲ್ಲಿ ನೆರೆದವರು ಮುಡಿದು ಕೊಂಡಿರುವ ಬಾಸಿಗದ ಹೊಸ ವಾಸನೆಯನ್ನು ಚಾಮರ ಬೀಸುವುದರಿಂದ ಎದ್ದ ಗಾಳಿಯು ಎಬ್ಬಿಸುತ್ತಿರಲು ಅದು ಸಂತೋಷದಾಯಕವೇ ಆಯಿತು. ೨೬. ಪ್ರಸರಿಸಿ ರುವ ಮುತ್ತಿನ ಹಾರಗಳ ಹೊಸಬೆಳ್ದಿಂಗಳುಗಳನ್ನು ಧರಿಸಿರುವ ಬೆಲೆಯ [illegible] ಆಭರಣಗಳಲ್ಲಿ ಪ್ರಕಾಶಿಸುವ ಹೊಸ ಮಾಣಿಕ್ಯಗಳ ಎಳೆಯ ಬಿಸಿಲನ್ನೂ, ಅರಿಕೇಸರಿಯ ಆಸ್ಥಾನದಲ್ಲಿ ಒಟ್ಟಿಗೆ ಕಾಣಲು ಸಾಧ್ಯವಾಯಿತು. ವ॥ ಹಾಗೆ ದೇವೇಂದ್ರನ ಸಭೆಯನ್ನೇ ಹೋಲುತ್ತ ಸೊಗಯಿಸುವ ಸಂಸಾರಸಾರೋದಯನಾದ ಅರ್ಜುನನ ಆಸ್ಥಾನದಲ್ಲಿದ್ದ ವಿವಿಧತಾಳಗಳನ್ನು ಉಪಯೋಗಿಸಿ ಹಾಡುವ ಗಾಯಕನಾದ ವೈತಾಳಿಕನು ಎದ್ದು

ಸ್ರ ॥ ಆಸೇತೋ ರಾಮ ಚಾಪಾಟನಿ ತಟಯುಗ ಟಂಕಾಂಕಿತಾಖಂಡ ಖಂಡಾ
ದಾ ಪೀಯೂಷಾಬ್ಧಿ ದುಗ್ಧಪ್ಲವ ಧವಳ ಕನತ್ಕಂದರಾನ್ಮಂದರಾದ್ರೇಃ ।
ಆಚಂದ್ರಾರ್ಕ ಪ್ರತೀತೋಭಯ ಗಿರಿಶಿಖರಾತ್ ಸ್ವೋದಯಸ್ಯೈಕ ಹೇತೋಃ
ಶೈಲೇಳಾಕಲ್ಪಕಾಳಂ ಕ್ಷಿತಿವಲಯಮಿದಂ ಪಾತು ವಿಕ್ರಾಂತತುಂಗಃ ॥ ೨೭

ಶಾ॥ ಶೌರ್ಯಂ ಯಸ್ಯ ಗುಣಾರ್ಣವ ಕ್ಷಿತಿಪತೇಸ್ಸವ್ಯಾಪಸವ್ಯಕ್ರಮಾತ್
ಗರ್ವಾಕೃಷ್ಟವಿಕರ್ಣಟಂಕನಿಕರೋತ್ಕೀರ್ಣಪ್ರಭಾವಾಕ್ಷರೈಃ ।
ಮತ್ತಾರಿದ್ವಿಪಮಸ್ತಕಸ್ಥಿತಶಿಲಾಪಟ್ಟಂ ಸದಾಖ್ಯಾಯತೇ
ತಸ್ಯಾಯಂ ಪುನರುಕ್ತ ಏವ ಸಮರ ಶ್ಲಾಘ್ಯಪ್ರಶಸ್ತಿಕ್ರಮಃ ॥ ೨೮

ಏತತ್ಕಂಪಿತ ಪರ್ವತಾಸ್ಸು ಚಕಿತಾ ಏತುಂ ಸಮುದ್ರಂ ಪುನಃ
ಸಪ್ತದ್ವೀಪ ಜಿಗೀಷಯಾ ವಿಜಯಿನಾ ಕೇನಾಪಿ ಪುಂಜೀಕೃತಂ ।
ಯಜ್ಜಾತಂ ಶರ ಶಂಕು ಶಲ್ಯ ಶತಕೈಸ್ಸಂತಾಪ್ಯ ಶತ್ರುದ್ವಿಪಾನ್
ನಿಶ್ವಾಸೋಪರತಾನ್ ಗುಣಾರ್ಣವಮಹೀಪಾಲೇನ ಯುದ್ಧಾಥನೌ ॥ ೨೯

ಪೃಥ್ವಿ ॥ ಪರಸ್ಪರ ವಿರುದ್ಧಯೋರ್ವಿನಯ ಯೌವನಾರಂಭಯೋಃ
ಪ್ರಭೂತ ಸಹಜೇರ್ಷ್ಯಯೋರಪಿ ಸರಸ್ವತೀ ಶ್ರೀಸ್ತ್ರಿಯೋಃ ॥
ತಥಾಚ ಪರಿಹಾರಿಣೋರಪಿ ಮಹಾ ಕ್ಷಮಾ ಶೌರ್ಯಯೋಃ
ಚಿರಂ ಪ್ರಥಮ ಸಂಗಮೋ ಹರಿಗ ಭೂಪತೌ ದೃಶ್ಯತೇ । ೩೦

ನಿಂತು ಮೃದುಮಧುರಗಂಭೀರಧ್ವನಿಯಿಂದ ಹಾಡಿದನು. ೨೭. ಶ್ರೀರಾಮನ ಬಿಲ್ಲಿನ ಕೊಪ್ಪಿನ ಎರಡು ಕಡೆಗಳೆಂಬ ಉಳಿಯಿಂದ ಗುರುತು ಮಾಡಲ್ಪಟ್ಟ ಸಮಗ್ರವಾದ ಭರತಖಂಡದಲ್ಲಿ ರಾಮಸೇತುವಿನವರೆಗೂ ಹಾಲಿನ ಪ್ರವಾಹದಂತೆ ಬೆಳ್ಳಗೆ ಪ್ರಕಾಶಿಸುತ್ತಿರುವ ಕ್ಷೀರಸಾಗರದಂತೆ ಮಂದರಪರ್ವತಕಣಿವೆಯವರೆಗೂ ತನ್ನ ಅಭಿವೃದ್ಧಿಗೆ ಒಂದೇ ಕಾರಣವಾಗಿರುವ ಚಂದ್ರ ಸೂರ್ಯರ ಪರ್ಯಂತ ಪ್ರಸಿದ್ಧರಾಗಿರುವ ಪೂರ್ವ ಪಶ್ಚಿಮ ಪರ್ವತಗಳ ಪರ್ವತಭೂಮಿಗಳಿರುವ ಶಿಖರಗಳವರೆಗೂ ಕಾಲದವರೆಗೂ ವಿಕ್ರಾಂತತುಂಗನಾದ ಅರ್ಜುನನು ಈ ಭೂಮಂಡಲವನ್ನು ರಕ್ಷಿಸಲಿ. ೨೮. ಯಾವ ಗುಣಾರ್ಣವನೆಂಬ ಬಿರುದುಳ್ಳ ಅರಿಕೇಸರಿರಾಜನ (ಅರ್ಜುನನ) ಪರಾಕ್ರಮವು ಬಲ ಮತ್ತು ಎಡಗೈಗಳಿಂದ ಪ್ರಯೋಗಮಾಡುವ ಕ್ರಮವಾದ ಗರ್ವದಿಂದ ಕೂಡಿ ಕಿವಿಯವರೆಗೂ ಸೆಳೆಯುವ ಬಾಣಗಳೆಂಬ ಶತ್ರುರಾಜರ ಮದ್ದಾನೆಗಳ ಕುಂಭಸ್ಥಳದಲ್ಲಿ ಶಕ್ತಿಯುತವಾದ ಉಳಿಗಳ ಸಮೂಹದಿಂದ ಅಕ್ಷರಗಳಿಂದ ಕೊರೆಯಲ್ಪಟ್ಟಿರುವ ಶಾಸನಫಲಕಗಳು ಪ್ರಕಾಶ ಪಡಿಸುತ್ತಿರುವ ಆ ಅರಿಕೇಸರಿಯ ಯುದ್ಧಪ್ರಶಸ್ತಿಯು ಪುನರುಕ್ತವಾಗುತ್ತಿರಲಿ. ೨೯. ಗುಣಾರ್ಣವಮಹೀಪಾಲನ ಯುದ್ಧಭೂಮಿಯಲ್ಲಿ ಅವನ ಹರಿತವಾದ ನೂರಾರು ಬಾಣಗಳಿಂದ ಹತವಾದ ಶತ್ರುರಾಜರ ಆನೆಗಳು ಸಪ್ತ ದ್ವೀಪಗಳನ್ನೂ ಗೆಲ್ಲಬೇಕೆಂಬ ಆಶೆಯುಳ್ಳ ಇಂದ್ರನಿಗೆ ಹೆದರಿ ನಡುಗುತ್ತ ಸಮುದ್ರಪ್ರವೇಶಮಾಡುತ್ತಿರುವ ಕುಲಪರ್ವತಗಳ ರಾಜಿಯ ಹಾಗಿವೆ. ೩೦. ಪರಸ್ಪರ ವಿರೋಧಿಗಳಾದ ವಿನಯ ಮತ್ತು ಯವ್ವನಗಳನ್ನೂ ಸಹಜವಾಗಿಯೇ ಹುಟ್ಟಿರುವ ಅಸೂಯೆಯಿಂದ ಕೂಡಿದ

ವ॥ ಅಂತಾತಂ ಪೊಗೞ್ದು ಮಾಣ್ದ ನಂತರದೊಳೆತ್ತಿಕೊಂಡ ಶ್ರುತಿಯಂ ಪಲ್ಲಟಿಸದೆಯುಂ ಮತ್ತಂ ಪರಿಚ್ಛೇದಂಗಳನಱಿದುಮೊಟ್ಟಜೆಯ ರಾಜೆಯಿಂ ಕಣ್ಗಳಿಂಚರದೊಳಂ ಪೊಂಪುಳಿವೋಗೆ ಮಂಗಳಪಾಠಕರಿರ್ವರೊಂದೆ ಕೊರಲೊಳಿಂತೆಂದು ಮಂಗಳವೃತ್ತಂಗಳನೋದಿದರ್-

ಶಾ॥ ರಂಗತ್ತುಂಗತರಂಗಭಂಗುರಲಸದ್ಗಂಗಾಜಳಂ ನರ್ಮದಾ
ಸಂಗ ಸ್ವಚ್ಛವನಂ ಪ್ರಸಿದ್ಧ ವರದಾ ಪುಣ್ಯಾಂಬು ಗೋದಾವರೀ ।
ಸಂಗತ್ಯೂರ್ಜಿತವಾರಿಸಾರ ಯಮುನಾ ನೀಳೋರ್ಮಿ ನೀರಂ ಭುಜೋ
ತ್ತುಂಗಂಗೀಗರಿಗಂಗೆ ಮಂಗಳಮಹಾಶ್ರೀಯಂ ಜಯಶ್ರೀಯುಮಂ ॥ ೩೧

ಮ॥ ಶ್ರುತದೇವೀವಚನಾಮೃತಂ ಶ್ರುತಕಥಾಳಾಪಂ ಶ್ರುತಸ್ಕಂಧ ಸಂ
ತತಿ ಶಶ್ವಚ್ಛ್ರುತಪಾರಗ ಶ್ರುತಿ ಮಹೋರ್ಮ್ಯುಲ್ಲಾಸಿವಾರಾಶಿವಾ ।
ರಿತಧಾತ್ರೀತಳಗೀತಿ ನಿರ್ಮಳಯಶಂಗಾರೂಢಸರ್ವಜ್ಞ ಭೂ
ಪತಿಗೊಲ್ದಾಗಳುಮೀಗೆ ಮಂಗಳಮಹಾಶ್ರೀಯಂ ಜಯಶ್ರೀಯುಮಂ ॥ ೩೨

ಸರಸ್ವತಿ ಮತ್ತು ಲಕ್ಷ್ಮಿಗಳನ್ನೂ ಹಾಗೆಯೇ ಪರಸ್ಪರ ನಾಶಕಾರಿಗಳಾದ ದಯೆ ಮತ್ತು ಶೌರ್ಯಗಳನ್ನೂ ಬಹುಕಾಲವಾದ ಮೇಲೆ ಮೊತ್ತ ಮೊದಲನೆಯ ಸಲ ಅರಿಕೇಸರಿ ರಾಜನಲ್ಲಿ ಮಾತ್ರ ಒಟ್ಟಿಗೆ ನೋಡಬಹುದಾಗಿದೆ. ವ॥ ಹಾಗೆ ಅವನು ಹೊಗಳಿ ನಿಲ್ಲಿಸಿಯಾದ ಮೇಲೆ ಶಾಸ್ತ್ರವನ್ನು (ವೇದಾಕ್ಷರಗಳನ್ನು) ವ್ಯತ್ಯಾಸಮಾಡದೆಯೂ (ಸುಸ್ವರವಾಗಿ) ನಿಲ್ಲಿಸಬೇಕಾದ ಸ್ಥಳಗಳನ್ನೂ ತಿಳಿದೂ ಸಂಪೂರ್ಣಾರ್ಥ ದ್ಯೋತಕವಾಗುವ ಹಾಗೂ ಕಂಡಂತೆ ಇನಿದಾದ ಸ್ವರಗಳಿಂದ ಕೂಡಿ ರೋಮಾಂಚ ವಾಗುವ ಹಾಗೂ ಇಬ್ಬರು ಮಂಗಳಪಾಠಕರು ಒಕ್ಕೊರಲಿನಿಂದ ಮಂಗಳಸ್ತೋತ್ರವನ್ನು ಪಠಿಸಿದರು. ೩೧. ನರ್ತನ ಮಾಡುತ್ತಿರುವ ಅಲೆಗಳಿಂದ ವಿಭಾಗವಾಗುತ್ತಿರುವ (ಘರ್ಷಣೆಯನ್ನು ಹೊಂದುತ್ತಿರುವ) ಪ್ರಕಾಶಮಾನವಾದ ಗಂಗಾಜಲವೂ, ಸ್ವಚ್ಛವಾಗಿರುವ ನರ್ಮದಾನದಿಯ ನೀರೂ ಪ್ರಸಿದ್ಧವೂ ಪವಿತ್ರವೂ ಆದ ವರದಾನದಿಯ ನೀರೂ ಶ್ರೇಷ್ಠವಾದ ಗೋದಾವರಿಯ ನೀರೂ ಸಾರವತ್ತಾದ ಯಮುನಾನದಿಯ ನೀಲಿಯ ಬಣ್ಣದ ಅಲೆಗಳಿಂದ ಕೂಡಿದ ನೀರೂ ಇವೆಲ್ಲವೂ ಎತ್ತರವಾದ ಭುಜಗಳುಳ್ಳ ಅರಿಗನಿಗೆ (ಅರ್ಜುನನಿಗೆ) ಮಂಗಳಕರವಾದ ಸಂಪತ್ತನ್ನೂ ಜಯಲಕ್ಷ್ಮಿಯನ್ನೂ ಕೊಡಲಿ. ೩೨. ಸರಸ್ವತಿ ವಚನಗಳೆಂಬ ಅಮೃತವೂ ಪುರಾಣಸಿದ್ಧವೂ ಆದ ಕಥಾಸಮೂಹಗಳೂ ಜಿನಾಗಮಗಳೂ ಜಪ ವೇದ ಸಮೂಹಗಳೂ ಅನಂತವಾದ ವೇದಗಳಲ್ಲಿ ಪಂಡಿತರಾದವರ ಜ್ಞಾನಗಳೆಂಬ ದೊಡ್ಡ ಅಲೆಗಳಿಂದ ಸಮುದ್ರದಿಂದ ಪರಿವೃತರಾದ ಭೂಮಿಯ ಸಮುದ್ರಗೀತೆಗಳೂ ಇವೆಲ್ಲವೂ ನಿರ್ಮಲ ಕೀರ್ತಿಯುಳ್ಳ ಆರೂಢಸರ್ವಜ್ಞನೆಂಬ ಬಿರುದುಳ್ಳ ಅರಿಕೇಸರಿ ರಾಜನಿಗೆ (ಅರ್ಜುನನಿಗೆ) ಪ್ರೀತಿಯಿಂದ ಮಂಗಳಮಹಾಶ್ರೀಯನ್ನೂ ಜಯಶ್ರೀಯನ್ನೂ

ಶಾ॥ ಕೈಳಾಸಂ ನಿಷಧಾಧಿಪಾಂಗ ನಿಕಟಕ್ಷೋಣೀಧರಂ ನೀಳ ಕು
ತ್ಕೀಳಂ ಕಂದಮಹೀಧರಂ ಶಿಖರನಾಮೋದ್ಯನ್ನಗಂ ಪ್ರಸ್ಫುರ ।
ತ್ಪ್ರಾಳೇಯಾಚಲಮಿಾತನೆಮ್ಮವೊಲಿಳಾಭೃನ್ನಾಥನೆಂದಿಂತಿಳಾ
ಪಾಳಂಗೀಗರಿಗಂಗೆ ಮಂಗಳಮಹಾಶ್ರೀಯಂ ಜಯಶ್ರೀಯುಮಂ ॥ ೩೩

ಮ॥ ಜಳಧಿ ದ್ವೀಪ ರಸಾತಳಾಂಬರ ಕುಲಾದ್ರೀಂದ್ರಂಗಳೋರಂತೆ ತ
ನ್ನೊಳಮುದ್ಯತ್ಕಟಕಂಗಳಾವಹ ಮಹಾದ್ರವ್ಯಂಗಳೋರಂತೆ ಮಂ ।
ಗಳಕಾರ್ಯಂಗಳನಿತ್ತು ಮತ್ತೆ ಮಣಿಭೂಷಾತುಂಗರತ್ನಾಂಶು ಪಾ
ಟಳಿತಂಗೀಗರಿಗಂಗೆ ಮಂಗಳ ಮಹಾಶ್ರೀಯಂ ಜಯಶ್ರೀಯುಮಂ ॥ ೩೪

ನಯನಾನಂದ ಮೃಗಾಂಕಬಿಂಬಮುದಯಂಗೆಯ್ವರ್ಕಬಿಂಬಂ ಮನಃ
ಪ್ರಿಯಲಕ್ಷ್ಮೀ ವದನೇಂದು ಬಿಂಬಮಖಿಲ ಕ್ಷ್ಮಾದ್ವೀಪವಾರ್ಧಿಪ್ರಮೋ ।
ದ ಯಶೋಬಿಂಬಮುದಗ್ರದಿಕ್ಕರಿಕರಾಕಾರೋಲ್ಲಸದ್ಬಾಹುಗೀ
ಪ್ರಿಯಗಳ್ಳಂಗೊಸೆದೀಗೆ ಮಂಗಳಮಹಾಶ್ರೀಯಂ ಜಯಶ್ರೀಯುಮಂ ॥ ೩೫

ವ॥ ಎಂದು ಪೊಗಳ್ದು ಮಾಣ್ದ ನಂತರದೊಳ್ ವ್ಯಾಸ ಕಶ್ಯಪ ವಿಶ್ವಾಮಿತ್ರ ಭರದ್ವಾಜಾದಿ ಮಹಾಮುನಿಪ್ರತತಿಗಳ್ ಬಂದು ನಿಜಕಮಂಡಲುಜಲಂಗಳೊಳ್ ಬೆರಸಿದ ಧವಳಾಕ್ಷತಂಗಳಂ ತಳಿದು-

ಸರ್ವದಾ ಕೊಡಲಿ-೩೩. ಕೈಲಾಸ ಪರ್ವತ, ನಿಷಧಪರ್ವತ ಮತ್ತು ಅಂಗದೇಶಕ್ಕೆ ಸಮೀಪವಾದ ಪರ್ವತ, ನೀಲಗಿರಿಯೆಂಬ ಪರ್ವತ, ಕಂದವೆಂಬ ಪರ್ವತ, ಶಿಖರವೆಂಬ ಪರ್ವತ ಎತ್ತರವೂ ಪ್ರಕಾಶವೂ ಆದ ಹಿಮವತ್ಪರ್ವತ ಇವೆಲ್ಲ ಅರಿಕೇಸರಿಯೂ ನಮ್ಮ ಹಾಗೆಯೇ ರಾಜಾಧಿರಾಜ, ಚಕ್ರವರ್ತಿ (ಇಳೆಯನ್ನು ಧರಿಸಿರುವವನು) ಎಂದು ಭೂಪಾಲನಾದ ಅರಿಕೇಸರಿಗೆ (ಅರ್ಜುನನಿಗೆ) ಮಂಗಳ ಮಹಾಶ್ರೀಯನ್ನೂ ಜಯಶ್ರೀಯನ್ನೂ ಅನುಗ್ರಹಿಸಲಿ. ೩೪. ಸಮುದ್ರ, ದ್ವೀಪ, ಪಾತಾಳ, ಆಕಾಶ ಮತ್ತು ಕುಲಪರ್ವತಗಳು ತಮ್ಮಲ್ಲಿರುವ ಅಮೂಲ್ಯವಾದ ವಸ್ತುಗಳನ್ನು ಒಂದೇ ಸಮನಾದ ಮಂಗಳಕಾರ್ಯಗಳನ್ನು ಪಾಟಳಕಾಂತಿಯಿಂದ ಪ್ರಕಾಶಮಾನವಾದ ಅರಿಗಂಗೆ ಕೊಟ್ಟು ಮಂಗಳಕಾರ್ಯಗಳನ್ನೂ ಜಯಶ್ರೀಯನ್ನೂ ದಯಪಾಲಿಸಲಿ. ೩೫. ಕಣ್ಣುಗಳಿಗಾನಂದವನ್ನುಂಟುಮಾಡುವ ಚಂದ್ರಬಿಂಬವೂ ಬಾಲಸೂರ್ಯನ ಬಿಂಬವೂ ಮನಸ್ಸಿಗೆ ಪ್ರಿಯಳಾದ ಲಕ್ಷ್ಮೀದೇವಿಯ ಮುಖಚಂದ್ರಬಿಂಬವೂ ಸಮಸ್ತವಾದ ಭೂಮಿ, ದ್ವೀಪ, ಮತ್ತು ಸಮುದ್ರಗಳಿಗೆ ಸಂತೋಷವನ್ನುಂಟುಮಾಡುವ ಯಶೋಬಿಂಬವೂ (ಕೀರ್ತಿಸಮೂಹವೂ) ದೀರ್ಘವಾದ ದಿಗ್ಗಜಗಳ ಸೊಂಡಿಲುಗಳ ಆಕಾರವನ್ನುಳ್ಳ ಪ್ರಕಾಶಮಾನವಾದ ಬಾಹುಗಳನ್ನುಳ್ಳ ಪ್ರಿಯಗಳ್ಳನೆಂಬ ಬಿರುದಾಂಕಿತನಾದ ಅರಿಕೇಸರಿಗೆ (ಅರ್ಜುನನಿಗೆ) ಸಂತೋಷಿಸಿ ಮಂಗಳಮಹಾಶ್ರೀ ಯನ್ನೂ ಜಯಶ್ರೀಯನ್ನೂ ಕೊಡಲಿ ವ॥ ಎಂದು ಹೊಗಳಿ ನಿಲ್ಲಿಸಿಯಾದಮೇಲೆ ವ್ಯಾಸ ಕಶ್ಯಪ ವಿಶ್ವಾಮಿತ್ರ ಭಾರದ್ವಾಜರೇ ಮೊದಲಾದ ಮಹಾಮುನಿಗಳ ಸಮೂಹಗಳು ಬಂದು ತಮ್ಮ ಕಮಂಡಲುಗಳ ನೀರಿನಿಂದ ಬೆರಸಿದ ಬಿಳಿಯ

ಮ॥ ಅರಿ ಭೂಪಾಳ ದವಾನಳಂ ಹರಿಗ ನಿನ್ನುಗ್ರಾಸಿ ಧಾರಾಂಬು ಶೀ
ಕರದಿಂ ಮಚ್ಚುಗೆ ದಾನವರ್ಷ ಸಲಿಲಂ ಕೊಳ್ಗರ್ಥಿ ಸಸ್ಯಕ್ಕೆ ಕಿ ।
ನ್ನರಿಯರ್ ಪಾಡುಗೆ ನಿನ್ನದೊಂದು ಪಲವುಂ ಬಣ್ಣಂಗಳಂ ಮೇರು ಮಂ
ದರ ಕೈಳಾಸ ಮಹೇಂದ್ರ ನೀಳ ನಿಷಧಾದ್ರೀಂದ್ರೋಪಕಂಠಂಗಳೊಳ್ ॥ ೩೬

ವ॥ ಎಂದು ಪರಸಿ ತಮ್ಮ ನಿವಾಸಂಗಳ್ಗೆ ಪೋದರಾಗಳ್ ಧರ್ಮನಂದನನೆನಗೆ ನಿನ್ನ ರಾಜ್ಯಾಭಿವೃದ್ಧಿಯುಂ ನೋಡುತಿರ್ಪುದುಂ ಮುಮುಕ್ಷು ವೃತ್ತಿಯೊಳಿರ್ಪುದುಮಲ್ಲದೆ ಪೆಱತೇನುಂ ಬಾಟಿತ್ತಿಯಲ್ಲೆಂದು ಭೀಮ ನಕುಳ ಸಹದೇವರ್ಕಳ್ಗೆ ದುರ್ಯೋಧನನ ತಮ್ಮನಪ್ಪ ಯುಯುತ್ಸುಗಮವರ್ ಬೇಡಿದ ನಾಡುಗಳನೆ ಕುಡಿಸಿ ಸಂತಸಂಬಡಿಸೆ ಪುರುಷೋತ್ತಮನಂ ವಿಬುಧವನಜವನಕಳಹಂಸನುಮಿಂತೆಂದಂ—

ಕಂ॥ ನಿನ್ನ ದಯೆಯಿಂದಮರಿ ನೃಪ
ರನ್ನಱ ಕೊಂದೆಮಗೆ ಸಕಳ ರಾಜ್ಯಶ್ರೀಯುಂ ।
ನಿನ್ನ ಬಲದಿಂದೆ ಸಾರ್ದುದು
ನಿನ್ನುಪಕಾರಮನದೇತಱೊಳ್ ನೀಗುವೆನೋ ॥ ೩೭

ವ॥ ಎಂದು ಮುಕುಂದನನನುನಯ ವಚನ ರಚನಾ ಪರಂಪರೆಗಳಿಂ ಸಂತಸಂ ಬಡೆ ನುಡಿದು ಸಾತ್ಯಕಿವೆರಸನರ್ಘ್ಯವಸ್ತುವಾಹನ ಸಹಿತಂ ದ್ವಾರಾವತಿಗೆ ಕಳಿಪಿ ಸಕಳಭುವನತಳ ಭಾರಮನವಯುವದಿಂ ತಾಳ್ದಿರ್ದುದಾತ್ತವೃತ್ತಿಯೊಳುದಾತ್ತನಾರಾಯಣನುಂ ಭುವನ

ಅಕ್ಷತೆಗಳನ್ನು ಚೆಲ್ಲಿ (ಆಶೀರ್ವಾದಪೂರ್ವಕ ತಲೆಯ ಮೇಲೆ ಎರಚಿ) ಹರಸಿದರು. ೩೬. ಎಲೈ ಅರ್ಜುನನೇ ಶತ್ರುರಾಜರೆಂಬ ಕಾಡುಕಿಚ್ಚು ನಿನ್ನ ಭಯಂಕರವಾದ ಕತ್ತಿಯ ಅಲಗೆಂಬ ನೀರಿನ ಹನಿಗಳಿಂದ (ಅಸಿಧಾರೆಯ ಹನಿಗಳಿಂದ) ಅಳಿದುಹೋಗಲಿ. ಯಾಚಕರೆಂಬ ವೃಕ್ಷಕ್ಕೆ ನಿನ್ನ ದಾನವೆಂಬ ಮಳೆಯು ಸುರಿಯಲಿ. ನಿನ್ನ ಸ್ತುತಿರೂಪವಾದ ಅನೇಕ ಹಾಡುಗಳನ್ನು ಕಿನ್ನರಿಯರು ಮೇರು, ಮಂದರ, ಕೈಲಾಸ, ಮಹೇಂದ್ರ, ನಿಷಧ ಪರ್ವತಗಳ ಸಮೀಪ ಪ್ರದೇಶಗಳಲ್ಲಿ (ತಪ್ಪಲಿನಲ್ಲಿ) ಹಾಡಲಿ. ವ॥ ಎಂಬುದಾಗಿ ಆಶೀರ್ವಾದಮಾಡಿ ತಮ್ಮ ಮನೆಗಳಿಗೆ ಹೋದರು. ಆಗ ಧರ್ಮರಾಯನು ಅರ್ಜುನ! ನಿನ್ನ ರಾಜ್ಯಾಭಿವೃದ್ಧಿಯನ್ನು ನೋಡುತ್ತಿರುವುದೂ ಮೋಕ್ಷೇಚ್ಛುಗಳಾದ ತಪಸ್ವಿಗಳ ವೃತ್ತಿಯಲ್ಲಿರುವುದೂ ಅಲ್ಲದೆ ನನಗೆ ಬೇರೆ ಯಾವ ಪ್ರಯೋಜನವೂ ಇಲ್ಲ ಎಂದು ಹೇಳಿ ಹಾಗೆಯೇ ಭೀಮ ನಕುಲ ಸಹದೇವರುಗಳಿಗೂ ದುರ್ಯೋಧನನ ತಮ್ಮನಾದ ಯುಯುತ್ಸುವಿಗೂ ಅವರು ಕೇಳಿದ ನಾಡುಗಳನ್ನು ಕೊಡಿಸಿ ಸಂತೋಷಪಡಿಸಿದನು. ಅರ್ಜುನನು ಕೃಷ್ಣನನ್ನು ಕುರಿತು ಹೀಗೆಂದನು, ೩೭. ನನ್ನ ಕೃಪೆಯಿಂದ ಶತ್ರುರಾಜರನ್ನು ಸಂಪೂರ್ಣವಾಗಿ ಕೊಂದ ನಮಗೆ ಸಕಳ ರಾಜ್ಯಸಂಪತ್ತೂ ನಿನ್ನ ಶಕ್ತಿಯಿಂದಲೇ ಕೈಸೇರಿತು. ನಿನ್ನ ಸಹಾಯವನ್ನು ಯಾವುದರಲ್ಲಿ ತೀರಿಸಲಿ ವ॥ ಎಂದು ಕೃಷ್ಣನನ್ನು ಪ್ರೀತಿಯುಕ್ತವಾದ ಮಾತುಗಳ ಸಮೂಹದಿಂದ ಸಂತೋಷಪಡುವ ಹಾಗೆ ಮಾತನಾಡಿ ಸಾತ್ಯಕಿಯೊಡನೆ ಬೆಲೆಯೇ ಇಲ್ಲದ ಅನೇಕ ವಸ್ತುವಾಹನಗಳ ಸಹಿತವಾಗಿ ದ್ವಾರಾವತಿಗೆ ಕಳುಹಿಸಿದನು. ಸಮಸ್ತವಾದ ಭೂಮಂಡಲದ ಭಾರವನ್ನೂ ಸುಲಭವಾಗಿ ಧರಿಸಿ

**ಭವನೋದರದೊಳ್ ಪಸರಿಸಿದ ತೇಜದೊಳ್ ಪ್ರಚಂಡ ಮಾರ್ತಂಡನುಂ ಆವೆಡೆಯೊಳಮಸಮಾನನೆನಿಸಿದ ಮಹಾಮಹಿಮೆಯೊಳುದಾರಮಹೇಶ್ವರನುಂ ನಳ ನಹುಷ ಮಾಂಧಾತರಂ ಮಸುಳಿವಂಧ ನೆಗಳ್ತೆಯೊಳ್ ಮನುಜಮಾಂಧಾತನುಂ ತ್ರಿಣೇತ್ರನುಮನಸುಂಗೊಳಿಸಿದ ಸಾಹಸದೊಳ್ ಕದನತ್ರಿಣೇತ್ರನುಂ ಅಚಳಿತ ಪ್ರತಿಜ್ಞೆಯೊಳ್ ಪ್ರತಿಜ್ಞಾ ಗಾಂಗೇಯನುಂ ರಾಮನುಮನೇಟೆಸಿದ ಸಾಹಸದೊಳಕಳಂಕರಾಮನುಂ ಬೇಡಿದರ ಬೇಡಿದುದಂ ಮಾರ್ಕೊಳ್ಳದೀವುದಱಿಂ ಪ್ರತ್ಯಕ್ಷಜೀಮೂತವಾಹನನುಂ ಚತುರ್ದಶ ಭುವನಂಗಳೊಳ್ ತನಗೆ ಮಾರ್ಮಲೆವರಿಲ್ಲಪ್ಪುದಱಿಂ ಜಗದೇಕಮಲ್ಲನುಂ ಉರ್ಕಿ ಬಂದು ಮೇಲ್ವಾಯ್ವ ಮಾರ್ವಲಂಗಳಂ ತನ್ನ ಬಾಳ ಬಾಯೊಳಟ್ಟಾಡಿದುದಱಿಂ ಪರಸೈನ್ಯಭೈರವನುಂ ಅರಾತಿ ಗಜಘಟೆಗಳೆನಿತು ಬಂದೊಡ್ಡೆಯುಂ ತನ್ನೊಂದಮಂದಧ್ವನಿಗೊಡ್ಡೊಡೆ ದೋಡುವುದಱಿಂ ವೈರಿಗಜಘಟಾವಿಘಟನನುಂ ತನಗಿದಿರನದಿರದೊಡ್ಡಿದ ವಿದ್ವಿಷ್ಟ ಬಲಂ ನೋಡೆ ನೋಡೆ ಕರಗುವುದಱಿಂ ವಿದ್ವಿಷ್ಟ ವಿದ್ರಾವಣನುಂ ಅರಾತಿ ವನ ಗಹನಮನಳುರ್ದು ಕೊಳ್ವುದಱಿಂದಮರಾತಿ ಕಾಳಾನಳನುಂ ಪಗೆವರೆಂಬ ಕುರಂಗಂಗಳನೊಂದೊಂದಱೊಳೊಂದಲೀ ಯದೆಟ್ಟಟ್ಟುವುದಱಿಂ ರಿಪುಕುರಂಗಕಂಠೀರವನುಂ ವಿಕ್ರಾಂತದೊಳ್ ತನ್ನಿರ್ದಲ್ಲಿ ತಾನೆ ಪಿರಿಯನಪ್ಪುದಱಿಂ ವಿಕ್ರಾಂತ ತುಂಗನುಂ ಆವೆಡೆಯೊಳಂ ವಿಕ್ರಮಂ ಕ್ರಮಮೆನಿಸಿದುದಱಿಂ ಪರಾಕ್ರಮಧವಳನುಂ ಎಂತಪ್ಪ ಸಂಗ್ರಾಮದೊಳಂ ಪೋಗದೆ**

ಉದಾತ್ತ ವೃತ್ತಿಯಲ್ಲಿದ್ದು ಉದಾತ್ತನಾರಾಯಣನೂ ಭುವನೋದರದಲ್ಲಿ (ಪ್ರಪಂಚವೆಂಬ ಮನೆಯ ಒಳಭಾಗದಲ್ಲಿ) ಪ್ರಸರಿಸಿದ ತೇಜಸ್ಸಿನಿಂದ ಪ್ರಚಂಡಮಾರ್ತಂಡನೂ (ಅತ್ಯಂತ ಕಾಂತಿಯುಕ್ತವಾದ ಸೂರ್ಯ) ಯಾವ ಕಡೆಯಲ್ಲಿಯೂ ಸಮಾನವೇ ಇಲ್ಲದವನು ಎಂಬ ಮಹಿಮೆಯಿಂದ ಉದಾರಮಹೇಶ್ವರನೂ ನಳನಹುಷಮಾಂಧಾತರನ್ನು ಕಾಂತಿಹೀನಮಾಡಿದ ಪ್ರಸಿದ್ಧಿಯಿಂದ ಮನುಜಮಾಂಧಾತನೂ ಮುಕ್ಕಣ್ಣನನ್ನೂ ಆಶ್ಚರ್ಯಪಡಿಸಿದ ಸಾಹಸದಿಂದ ಕದನತ್ರಿಣೇತ್ರನೂ ಚಲಿಸದೇ ಇದ್ದ ಪ್ರತಿಜ್ಞೆಯಿಂದ ಪ್ರತಿಜ್ಞಾಗಾಂಗೇಯನೂ ರಾಮನನ್ನೂ ಹಿಯ್ಯಾಳಿಸಿದ ಸಾಹಸದಿಂದ ಅಕಳಂಕ ರಾಮನೂ ಬೇಡಿದವರಿಗೆ ಅವರು ಬೇಡಿದುದನ್ನು ಪ್ರತಿಮಾತನಾಡದೆ ಕೊಡುವುದರಿಂದ ಪ್ರತ್ಯಕ್ಷ ಜೀಮೂತವಾಹನನೂ ಹದಿನಾಲ್ಕು ಲೋಕಗಳಲ್ಲಿಯೂ ತನಗೆ ಪ್ರತಿಭಟಿಸುವವರಿಲ್ಲದುದರಿಂದ ಜಗದೇಕಮಲ್ಲನೂ ಕೊಬ್ಬಿ ಬಂದು ಮೇಲೆ ಬೀಳುವ ಪ್ರತಿಸೈನ್ಯವನ್ನು ತನ್ನ ಕತ್ತಿಯ ಮೊನೆಯಿಂದ ನಾಶಪಡಿಸಿದುದರಿಂದ ಪರಸೈನ್ಯ ಭೈರವನೂ ಶತ್ರುಪಕ್ಷಗಳ ಆನೆಯ ಸಮೂಹವು ಎಷ್ಟು ಬಂದು ಚಾಚಿದರೂ ತನ್ನ ಒಂದು ಗರ್ಜನೆಗೆ ಗುಂಪು ಚೆದುರಿ ಓಡುವುದರಿಂದ ವೈರಿಗಜಘಟಾವಿಘಟನನೂ ತನಗೆ ಇದಿರಾಗಿ ಹೆದರದೆ ಬಂದು ಒಡ್ಡಿದ ಶತ್ರುಸೈನ್ಯವು ನೋಡುನೋಡುತ್ತಿರುವಾಗಲೇ ಕರಗುವುದರಿಂದ ವಿದ್ವಿಷ್ಟ ವಿದ್ರಾವಣನೂ ಶತ್ರುಗಳೆಂಬ ಕಾಡಿನ ಒಳಭಾಗವನ್ನು ವ್ಯಾಪಿಸಿ ಸುಡುವುದರಿಂದ ಅರಾತಿ ಕಾಳಾನಳನೂ ಹಗೆಗಳೆಂಬ ಜಿಂಕೆಗಳನ್ನು ಒಂದೂ ಬಿಡದಂತೆ ಬೆನ್ನಟ್ಟಿ ಕೊಲ್ಲುವುದರಿಂದ ಅವಕಾಶವಿಲ್ಲದೆ ಓಡಿಸುವುದರಿಂದ ರಿಪು ಕುರಂಗಕಂಠೀರವನೂ ಪರಾಕ್ರಮದಲ್ಲಿ ತಾನಿದ್ದ ಜಾಗದಲ್ಲಿಯೇ ಹಿರಿಯನಾದುದರಿಂದ ವಿಕ್ರಾಂತತುಂಗನೂ, ಎಲ್ಲ ಕಡೆಯಲ್ಲಿಯೂ ಪರಾಕ್ರಮವೇ ತನಗೆ ಯೋಗ್ಯವಾದುದೆಂದು

**ನಟ್ಟು ನಿಲ್ವುದಱಿಂ ಸಮರೈಕಮೇರುವುಂ ಗೊಜ್ಜಿಗನೆಂಬ ಸಕಳ ಚಕ್ರವರ್ತಿ ಮುಳಿಯೆ ತನಗೆ ಶರಣಾಗತನಾದ ವಿಜಯಾದಿತ್ಯನಂ ಕಾದ ಬಲ್ಲಾಳ್ತನದೊಳ್ ಶರಣಾಗತ ಜಳನಿಧಿಯುಂ ವಿನಯಮೇ ತನಗೆ ಭೂಷಣಮಾಗೆ ಮಾಡುವುದಱಿಂ ವಿನಯ ಭೂಷಣನುಂ ಲೋಕಕ್ಕೆಲ್ಲಮಸಾಧಾರಣಮಪ್ಪ ದಾನಗುಣದೊಳ್ ಲೋಕೈಕಕಲ್ಪದ್ರುಮನುಂ ಎನಿತಾನುಂ ಗಜಗಮನಂಗಳಂ ತಾನೆ ಸಮೆದನಪ್ಪುದಱಿಂ ಗಜಗಮನರಾಜಪುತ್ರನುಂ ಎಂತಪ್ಪ ಗರ್ವವ್ಯಾಳಿಯುಮನತಿವರ್ತಿಗಳುಮನಾರೂಢದೊಳ್ ತನಗಳವಡುವುದಱಿಂದಾರೂಢ ಸರ್ವಜ್ಞನುಂ ಪರಮಾತ್ಮನಂತೆ ಲೋಕಾಲೋಕದ ವಸ್ತುಗಳುಮಂ ಕರತಳಾಮಳಕಮಾಗಱಿವುದರಿಂ ನೃಪ ಪರಮಾತ್ಮನುಂ ಎಂತಪ್ಪ ಪಂಡಿತರ ಗೋಷ್ಠಿಯೊಳಂ ತಾನೆ ಸೊಗಯಿಸುವುದಱಿಂ ವಿಬುಧ ವನಜವನಕಳಹಂಸನುಂ ಕೆಯ್ಗೆಯ್ಯದೆ ಸೊಗಯಿಸುವನಪ್ಪುದಱಿಂ ಸಹಜಮನೋಜನುಂ ಎಂತಪ್ಪ ಬರ್ದೆಯರುಮಂ ಬಗೆಗೆ ವರಿಸುವ ತಕ್ಕಿನೊಳ್ ಸುರತಮಕರಧ್ವಜನುಂ ಕೂರ್ಪ ಕೂರದರ ಪಡೆಗಳೆರಡುಂ ತನ್ನನೆ ಮೆಚ್ಚುವುದಱಿಂ ಪಡೆಮೆಚ್ಚೆಗಂಡನುಂ ಎಂತಪ್ಪ ಮಾರ್ವಲಂಗಳುಮಂ ನೋಡುತ್ತೆ ಗೆಲ್ವುದಱಿಂ ನೋಡುತ್ತೆ ಗೆಲ್ವನುಂ ಮಹಾ ಭಾರಾವತಾರದೊಳತಿರಥ ಮಹಾರಥ ಸಮರರ್ಥಾರ್ಧರಥರ್ಕಳಂ ಪಡಲ್ವಡಿಸುವುದಱಿಂ ಸಾಹಸಾರ್ಜುನನುಮಮರೇಂದ್ರನೊಳರ್ಧಾಸನಮೇಱಿದ ಮಹಾ ಮಹಿಮೆಯೊಳ್ ಮಹಿಮಾರ್ಣವನುಮರಿಕರಿಗಳಂ ಪಡಲ್ವಡಿಸುವ ಬೀರದೊಳರಿ ಕೇಸರಿಯುಮಾಗಿ–**

ಅಂಗೀಕರಿಸುವುದರಿಂದ ಪರಾಕ್ರಮಧವಳನೂ ಎಂತಹ ಯುದ್ಧದಲ್ಲಿಯೂ ಬಿಟ್ಟುಹೋಗದೆ ಸ್ಥಿರವಾಗಿ ನಿಲ್ಲುವುದರಿಂದ ಸಮರೈಕಮೇರುವೂ ಗೊಜ್ಜಿಗನೆಂಬ ಸಕಳಚಕ್ರವರ್ತಿಯ ಕೋಪಕ್ಕೆ ಪಾತ್ರನಾದ ವಿಜಯಾದಿತ್ಯನನ್ನು ರಕ್ಷಿಸಿದ ಪರಾಕ್ರಮದಿಂದ (ರಕ್ಷಿಸಿದುದರಿಂದ) ಶರಣಾಗತಜಳನಿಧಿಯೂ ವಿನಯವನ್ನೇ ತನಗೆ ಒಡವೆಯನ್ನಾಗಿ ಮಾಡಿಕೊಂಡಿರುವುದರಿಂದ ವಿನಯಭೂಷಣನೂ ಲೋಕಕ್ಕೆಲ್ಲ ಅಸಾಧಾರಣ ರೀತಿಯದಾಗಿರುವ ದಾನಗುಣದಿಂದ ಲೋಕೈಕ ಕಲ್ಪದ್ರುಮನೂ ಎಷ್ಟೋ ಗಜಶಾಸ್ತ್ರಗಳನ್ನು ತಾನೆ ರಚಿಸಿರುವುದರಿಂದ ಗಜಾಗಮ ರಾಜಪುತ್ರನೂ ಎಂತಹ ಮದ್ದಾನೆಯನ್ನೂ ವಶಕ್ಕೆ ಬರದೇ ಇರುವ ತುಂಟಾನೆಗಳನ್ನೂ ಹತ್ತುವುದರಲ್ಲಿ ಸಮರ್ಥನಾಗಿರುವುದರಿಂದ ಆರೂಢಸರ್ವಜ್ಞನೂ ಪರಮಾತ್ಮನ ಹಾಗೆ ಲೋಕಾಲೋಕ ವಸ್ತುಗಳನ್ನು ಕಯ್ಯಲ್ಲಿರುವ ನೆಲ್ಲಿಯಕಾಯಿನಂತೆ ತಿಳಿದಿರುವುದರಿಂದ ನೃಪಪರಮಾತ್ಮನೂ ಎಂತಹ ವಿದ್ವಾಂಸರ ಸಮೂಹದಲ್ಲಿಯೂ ತಾನೇ ಪ್ರಕಾಶಮಾನವಾಗಿರುವುದರಿಂದ ವಿಬುಧವನಜವನಕಳಹಂಸನೂ ಅಲಂಕಾರಮಾಡಿಕೊಳ್ಳದೆಯೇ ಸುಂದರ ನಾಗಿರುವುದರಿಂದ ಸಹಜಮನೋಜನೂ ಎಂತಹ ಪ್ರೌಢಸ್ತ್ರೀಯರನ್ನೂ ತನ್ನಲ್ಲಿ ಪ್ರೀತಿಮಾಡುವ ಹಾಗೆ ಮಾಡುವ ಯೋಗ್ಯತೆಯಿಂದ ಸುರತಮಕರಧ್ವಜನೂ ಪ್ರೀತಿಸುವ ಮತ್ತು ಪ್ರೀತಿಸದಿರುವ ಎರಡುಸೈನ್ಯಗಳೂ ತನ್ನನ್ನು ಮೆಚ್ಚುವುದರಿಂದ ಪಡೆಮೆಚ್ಚೆಗಂಡನೂ ಎಂತಹ ಪ್ರತಿಸೈನ್ಯವನ್ನೂ ನೋಡುವುದರಿಂದಲೇ ಗೆಲ್ಲುವುದರಿಂದ ನೋಡುತ್ತೆ ಗೆಲ್ವನೂ ಮಹಾಭಾರತ ಯುದ್ಧದಲ್ಲಿ ಅತಿರಥ ಸಮರಥ ಅರ್ಧರಥರುಗಳನ್ನೂ ಕೆಳಗೆ ಬೀಳುವ ಹಾಗೆ ಮಾಡುವುದರಿಂದ ಸಾಹಸಾರ್ಜುನನೂ ದೇವೇಂದ್ರನೊಡನೆ ಅರ್ಧಾಸನವನ್ನು ಹತ್ತಿದ ಮಹಾಮಹಿಮೆಯಿಂದ ಮಹಿಮಾರ್ಣವನೂ ಶತ್ರುಗಳ ಆನೆಗಳನ್ನು

ಚಂ॥ ಪಸದನಮಾವುದಾವ ಋತುವಿಂಗಮದರ್ೊಪ್ಪುಗುಮಾವ ಪೊಟ್ತಿದಾ
ವೆಸಕದೊಳೊಂದುಗುಂ ವಿನಯಮಾವೆಡೆಗಾವುದು ಚೆಲ್ವುವೆತ್ತು ರಂ ।
ಜಿಸುಗುಮದರ್ಕದಂ ಸಮಜೆ ನಿಚ್ಚಲುಮಾ ಬಿಯಮಾ ವಿನೋದಮಾ
ಪಸದನಮಾ ವಿಳಾಸದೊಳೊಡಂಬಡೆ ಭೋಗಿಸಿದಂ ಗುಣಾರ್ಣವಂ ॥ ೩೮

ಪಸರಿಸಿ ನೀಳ್ದ ತನ್ನ ಜಸದೊಳ್ ಪೆಱರ್ನೊರ್ವನ ಕೀರ್ತಿ ತಳ್ತು ರಂ
ಜಿಸೆ ನೆಗಳ್ದಾತನೇಂ ನೆಗಳ್ದನೆಂಬ ಚಲಂ ಮಿಗೆ ತನ್ನ ಪೆಂಪು ತ ।
ನ್ನೆಸಕಮೆ ತನ್ನ ವಿಕ್ರಮಮೆ ತನ್ನ ನೆಗಟ್ತೆಯೆ ತನ್ನ ಮಾತೆ ತಾ
ನೆಸೆವ ಜಗತ್ರಯಕ್ಕೆನಿಸಿ ಪಾಲಿಸಿದಂ ನೆಲನಂ ಗುಣಾರ್ಣವಂ ॥ ೩೯

ಕಂ॥ ಆ ಮಳಯಾಚಳ ಹಿಮಗಿರಿ
ಸೀಮಾವನಿತಳಕೆ ಬೆಂಗಿಮಂಡಳದೊಳ್ ಚೆ ।
ಲ್ವಾವಗಮೆ ತನಗದೊಂದೂರ್
ನಾಮದೊಳಂ ವೆಂಗಿಪೞು ಕರಂ ಸೊಗಯಿಸುಗುಂ ॥ ೪೦

ಆದುವೆ ವಸಂತಂ ಕೊಟ್ಟೂ
ರೊದವಿದ ನಿಡುಗುಂದಿ ಮಿಕ್ಕ ವಿಕ್ರಮ ಪುರವೆಂ ।
ಬುದುಮಗ್ರಹಾರ ಸಂಪ
ತ್ಪದವಿಗಳೊಳಮಗ್ರಗಣ್ಯನೂರ್ಜಿತಪುಣ್ಯಂ ॥ ೪೧

ಕೆಳಗುರುಳಿಸುವುದರಿಂದ ಅರಿಕೇಸರಿಯೂ ಆಗಿ ೩೮. ಯಾವ ಋತುವಿಗೆ ಯಾವ ಅಲಂಕಾರವೊಪ್ಪುವುದು, ಯಾವ ಹೊತ್ತು ಯಾವ ಕಾರ್ಯಕ್ಕೆ ಒಪ್ಪುತ್ತದೆ ಯಾವ ಸ್ಥಳಕ್ಕೆ ಯಾವ ವಿನಯ (ನೀತಿ) ಸೊಗಸಾಗಿದೆ ಅದಕ್ಕೆ ಅದನ್ನು ಸರಿಯಾಗಿ ಸೇರಿಸಿ (ಹೊಂದಿಸಿಕೊಂಡು) ಪ್ರತಿದಿನವೂ ಆ ವೆಚ್ಚ, ಆ ಸಂತೋಷ, ಆ ಅಲಂಕಾರ, ಆ ವಿಲಾಸಗಳಲ್ಲಿ ಸೇರಿ ಮನೋಹರವಾಗುವ ರೀತಿಯಲ್ಲಿ (ಅರಿಕೇಸರಿಯು) ಗುಣಾರ್ಣವನು ಸುಖವಾಗಿದ್ದನು. ೩೯. ಪ್ರಸರಿಸಿ ಬೆಳೆದ ತನ್ನ ಯಶಸ್ಸಿನೊಡನೆ ಇನ್ನೊಬ್ಬನ ಕೀರ್ತಿ ಸಮಾನವಾಗಿ ಸೇರಿ ಪ್ರಕಾಶಿಸಿದರೆ ಅವನು ಪ್ರಸಿದ್ಧನೆ ಎಂಬ ಛಲವು ಹೆಚ್ಚಾಗಿರಲು ತನ್ನ ವೈಭವ, ತನ್ನ ಪರಾಕ್ರಮ, ತನ್ನ ಪ್ರಸಿದ್ಧಿ, ತನ್ನ ಮಾತು - ಇವುಗಳೇ ಪ್ರಸಿದ್ಧವಾಗಿರುವ ಮೂರು ಲೋಕಗಳಿಗೂ ತಾನೇ ಎನಿಸಿ ಗುಣಾರ್ಣವನು ರಾಜ್ಯವನ್ನು ಪಾಲಿಸಿದನು. ೪೦. ಮಲಯಪರ್ವತದಿಂದ ಹಿಡಿದು ಹಿಮವತ್ಪರ್ವತ ವನ್ನು ಮೇರೆಯಾಗಿ ಉಳ್ಳ ಭೂಭಾಗದಲ್ಲಿ ವೆಂಗಿದೇಶವೇ ಯಾವಾಗಲೂ ಸುಂದರವಾಗಿರುವುದು. ಅದರಲ್ಲಿ ವೆಂಗಿಪಳು ಎಂಬುದು ವಿಶೇಷವಾಗಿ ಶೋಭಿಸುವುದು. ೪೧. ಆ ವೆಂಗಿಪಳುವಿನಲ್ಲಿ ವಸಂತ ಕೊಟ್ಟೂರು ನಿಡುಗುಂದಿ ಅತ್ಯತಿಶಯವಾದ ವಿಕ್ರಮಪುರ ಎಂಬುವ ಅಗ್ರಹಾರಗಳು ಶೋಭಾಯಮಾನವಾಗಿವೆ. ಅಲ್ಲಿಯ ಸಂಪತ್ಪದವಿಗಳಲ್ಲಿ ಅಗ್ರಗಣ್ಯನಾದವನೂ ಅಭಿವೃದ್ಧಿಯಾಗುತ್ತಿರುವ

ನಯಶಾಲಿ ವತ್ಸ ಗೋತ್ರ
ಶ್ರಯಣೀಯನನೇಕ ಸಕಳ ಶಾಸ್ತ್ರಾರ್ಥ ವಿನಿ ।
ಶ್ಚಯ ಮತಿ ಕೃತಿ ಮಾಧವ ಸೋ
ಮಯಾಜಿ ಸಲೆ ನೆಗೞ್ದನಾಸಮುದ್ರಂಬರೆಗಂ ॥ ೪೨

ಉ॥ ಶಕ್ರ ಶಶಾಂಕ ಸೂರ್ಯ ಪವಮಾನರುಮಾತನ ಹೋಮ ಮಂತ್ರ ಚ
ಕ್ರ ಕ್ರಮಕಕ್ಕಣಂ ಮಿಡುಕಲಾಗಡೆ ಶಾಪಮನೀಗುಮೆಂದೆ ದಿ ।
ಕ್ಚಕ್ರಮುಮಂಜಿ ಬೆರ್ಚಿ ಬೆಸಕೆಯ್ವುದದಲ್ಲದಗುರ್ವು ಪರ್ವೆ ಸ
ರ್ವಕ್ರತುಯಾಜಿಯಾದನಳವಿಂತುಟು ಮಾಧವಸೋಮಯಾಜಿಯಾ ॥ ೪೩

ಕಂ॥ ವರ ದಿಗ್ವನಿತೆಗೆ ಮಾಟದ
ಕುರುಳಾ ತ್ರೈಭುವನಕಾಂತೆಗಂ ದಲ್ ಕಂಠಾ ।
ಭರಣಮೆನೆ ಪರೆದ ತನ್ನ
ಧ್ವರ ಧೂಮದೆ ಕರಿದು ಮಾಡಿದಂ ನಿಜಯಶಮಂ ॥ ೪೪

ತತ್ತನಯನಖಿಳ ಕರಿ ತುರ
ಗೋತ್ತಮ ಮಣಿ ಕನಕ ಸಾರ ವಸ್ತುವನೆರೆದ ।
ರ್ಗಿತ್ತು ಸಲೆ ನೆಗೞ್ದನತಿ ಪುರು
ಷೋತ್ತಮನಭಿಮಾನಚಂದ್ರನೆನಿಪಂ ಪೆಸರಿಂ ॥ ೪೫

ಕಂ॥ ಆತಂಗೆ ಭುವನ ಭವನ
ಖ್ಯಾತಂಗೆ ಸಮಸ್ತ ವೇದ ವೇದಾಂಗ ಸಮು ।
ದ್ದ್ಯೋತಿತ ಮತಿಯುತನುಚಿತ ಪು
ರಾತನ ಚರಿತಂ ತನೂಭವಂ ಕೊಮರಯ್ಯಂ । ೪೬

ಪುಣ್ಯವುಳ್ಳವನೂ ಆದ ೪೨. ವಿನಯಶಾಲಿಯೂ ವತ್ಸಗೋತ್ರವನ್ನು ಆಶ್ರಯಿಸಿದವನೂ ಸಕಲ ಶಾಸ್ತ್ರಾರ್ಥಗಳಲ್ಲಿ ಸ್ಥಿರವಾದ ಪಾಂಡಿತ್ಯವುಳ್ಳವನೂ ಆದ ಮಾಧವ ಸೋಮಯಾಜಿಯೆಂಬುವನು ಸಮುದ್ರ ಕಡೆಯವರೆಗೂ ಬಹುಪ್ರಸಿದ್ಧನಾಗಿದ್ದನು. ೪೩. ಇಂದ್ರಚಂದ್ರ ಸೂರ್ಯವಾಯುದೇವತೆಗಳೂ ಆತನ ಹೋಮ ಮಂತ್ರ ಸಮೂಹಕ್ಕೆ ಸ್ವಲ್ಪವೂ ಅಡ್ಡಿ ಮಾಡುತ್ತಿರಲಿಲ್ಲ. ಮಾಡಿದರೆ ಶಾಪವನ್ನು ಕೊಡುತ್ತಾನೆಂದೇ ದಿಙ್ಮಂಡಲಗಳೂ ಹೆದರಿ ಸೇವೆ ಮಾಡುತ್ತವೆ. ಅಲ್ಲದೆ ಅವನು ಸರ್ವಕ್ರತುಯೆಂಬ ಯಜ್ಞವನ್ನು ಮಾಡಿದವನು. ಮಾಧವ ಸೋಮಯಾಜಿಯ ಶಕ್ತಿಯಂತಹುದು. ೪೪. ಶ್ರೇಷ್ಠವಾದ ದಿಕ್ಕೆಂಬ ಸ್ತ್ರೀಗೆ ಕತ್ತಿನ ಆಭರಣವು ಎನ್ನುವ ಹಾಗೆ ವ್ಯಾಪಿಸಿರುವ ತನ್ನ ಯಜ್ಞಧೂಮದಿಂದ (ಹೊಗೆಯಿಂದ) ತನ್ನ ಯಶಸ್ಸನ್ನೂ ಕಪ್ಪಾಗಿ ಮಾಡಿಕೊಂಡನು. ೪೫. ಪುರುಷರಲ್ಲಿ ಅತಿಶ್ರೇಷ್ಠನಾದ ಅವನ ಮಗನಾದ ಅಭಿಮಾನಚಂದ್ರನೆಂಬ ಹೆಸರುಳ್ಳವನು ಬೇಡಿದವರಿಗೆ ತನ್ನ ಸಮಸ್ತ ಆನೆ ಕುದುರೆ ಉತ್ತಮ ರತ್ನ ಚಿನ್ನ ಮೊದಲಾದ ಉತ್ತಮ ವಸ್ತುಗಳನ್ನು ದಾನಮಾಡಿ ವಿಶೇಷ ಪ್ರಸಿದ್ಧನಾದನು. ೪೬. ಭೂಮಂಡಲದಲ್ಲಿ ಪ್ರಸಿದ್ಧನಾದ ಆತನಿಗೆ ಸಕಲ ವೇದಶಾಸ್ತ್ರಗಳಿಂದ ಪ್ರಕಾಶಿಸಲ್ಪಟ್ಟ ಬುದ್ಧಿಯುಳ್ಳವನೂ ಉಚಿತವಾದ ಪ್ರಾಚೀನ ಆಚಾರಸಂಪನ್ನನಾದವನೂ

ಆ ಕೊಮರಯ್ಯಂಗವನಿತ
ಳಾಕಾಶ ವ್ಯಾಪ್ತ ನಿಜ ಗುಣ ಮಣಿ ರ ।
ತ್ನಾಕರನಜ್ಞಾನತಮೋ
ನೀಕರನಭಿರಾಮ ದೇವರಾಯಂ ತನಯಂ ॥ ೪೭

ಉ॥ ಜಾತಿಯೊಳೆಲ್ಲಮುತ್ತಮದ ಜಾತಿಯ ವಿಪ್ರಕುಲಂಗೆ ನಂಬಲೇ
ಮಾತೊ ಜಿನೇಂದ್ರ ಧರ್ಮಮೆ ವಲಂ ದೊರೆ ಧರ್ಮದೊಳೆಂದು ನಂಬಿ ತ ।
ಜ್ಜಾತಿಯನುತ್ತರೋತ್ತರಮೆ ಮಾಡಿ ನೆಗಟ್ಟಿದನಿಂತಿರಾತ್ಮ ವಿ
ಖ್ಯಾತಿಯನಾತನಾತನ ಮಗಂ ನೆಗಟ್ಟಂ ಕವಿತಾಗುಣಾರ್ಣವಂ ॥ ೪೮

ಕಂ ॥ ಪಂಪಂ ಧಾತ್ರೀವಳಯ ನಿ
ಳಿಂಪಂ ಚತುರಂಗ ಬಳ ಭಯಂಕರಣಂ ನಿ ।
ಷ್ಕಂಪಂ ಲಲಿತಾಲಂಕರ
ಣಂ ಪಂಚಶರೈಕರೂಪನಪಗತಪಾಪಂ ॥ ೪೯

ಚಂ॥ ಕವಿತೆ ನೆಗಟ್ತಿಯಂ ನಿಜಿಸೆ ಜೋಳದ ಪಾಟಿ ನಿಜಾಧಿನಾಥನಾ
ಹವದೊಳರಾತಿನಾಯಕರ ಪಟ್ಟನೆ ಪಾಜಿಸೆ ಸಂದ ಪೆಂಪು ಭೂ ।
ಭುವನದೊಳಾಗಳುಂ ಬೆಳಗೆ ಮಿಕ್ಕಭಿಮಾನದ ಮಾತು ಕೀರ್ತಿಯಂ
ವಿವರಿಸೆ ಸಂದನೇಂ ಕಲಿಯೊ ಸತ್ಕವಿಯೋ ಕವಿತಾಗುಣಾರ್ಣವಂ ॥ ೫೦

ಆದ ಮಗನು ಕೊಮರಯ್ಯನೆಂಬುವನು. ಆ ಕೊಮರಯ್ಯನಿಗೆ ಭೂಮ್ಯಾಕಾಶಗಳಲ್ಲಿ ಹರಡಿರುವ ತನ್ನ ಗುಣವೆಂಬ ಮಣಿಗಳಿಗೆ ಸಮುದ್ರದಂತಿರುವವನೂ ಅಜ್ಞಾನವೆಂಬ ಕತ್ತಲನ್ನು ಪರಿಹರಿಸುವವನೂ ಆದ ಅಭಿರಾಮದೇವರಾಯನೆಂಬುವನು ಮಗನು. ೪೮. ಜಾತಿಯಲ್ಲೆಲ್ಲ ಉತ್ತಮ ಜಾತಿಯ ಬ್ರಾಹ್ಮಣಕುಲದವನಿಗೆ ಧರ್ಮದಲ್ಲೆಲ್ಲ ಜೈನಧರ್ಮವೇ ಉತ್ತಮವಾದುದೆಂದು (ಯೋಗ್ಯವಾದುದು) ಆ ಜಾತಿಯನ್ನು ಅಭಿವೃದ್ಧಿಮಾಡಿ ತನ್ನ ಖ್ಯಾತಿಯನ್ನು ಈ ರೀತಿಯಲ್ಲಿ ಹೆಚ್ಚಿಸಿಕೊಂಡನು. ಅವನ ಮಗನೇ ಪ್ರಸಿದ್ಧನಾದ ಕವಿತಾಗುಣಾರ್ಣವ ಎಂಬ ಬಿರುದಿನ ಪಂಪ. ೪೯. ಪಂಪನು ಭೂಮಂಡಲದ ಶ್ರೇಷ್ಠದೇವತೆ. ಚತುರಂಗಸೈನ್ಯಗಳಿಗೆ ಭಯವನ್ನುಂಟುಮಾಡುವವನು. ಧೈರ್ಯಶಾಲಿ (ನಡುಗದವನು) ಸುಂದರವಾದ ಅಲಂಕಾರವುಳ್ಳವನು. ಮನ್ಮಥನ ಹಾಗೆಯೇ ಇರುವ ರೂಪವುಳ್ಳವನು, ಪಾಪರಹಿತನಾದವನು - ೫೦. ತನ್ನ ಕವಿತ್ವವು ಖ್ಯಾತಿಯನ್ನು ಸ್ಥಾಪಿಸಿತು. ಅನ್ನದಾತನಲ್ಲಿದ್ದ ಉಪ್ಪಿನ ಋಣವು ತನ್ನ ರಾಜನ ಯುದ್ಧದಲ್ಲಿ ಶತ್ರುನಾಯಕರ ವೀರಪಟ್ಟಗಳನ್ನು ಹಾರಿಸುವಂತಹ ಹಿರಿಮೆಯನ್ನೂ ತನ್ನ ಯಶಸನ್ನೂ ವಿವರಿಸಿತು. ಕವಿತಾಗುಣಾರ್ಣವನು ಬಹು ಪ್ರಸಿದ್ಧನಾದನು. ಪಂಪಕವಿ ಎಂತಹ ಶೂರನೋ

ಕಂ॥ ಆತಂಗರಿಕೇಸರಿ ಸಂ
ಪ್ರೀತಿಯೆ ಬಟೆಯಟ್ಟಿ ಪಿರಿದನಿತ್ತು ನಿಜಾಭಿ ।
ಖ್ಯಾತಿಯನಿಳೆಯೊಳ್ ನಿಱಿಸ
ಲ್ಕೀ ತೆಱದಿತಿಹಾಸ ಕಥೆಯನೊಪ್ಪಿಸೆ ಕುಱಿತಂ ॥ ೫೧

ಶ್ರೌತಮಿದು ತನಗೆ ಗಂಗಾ
ಸ್ರೋತದವೊಲಳುಂಬಮಾಗಿ ಗೆಡೆಗೊಳ್ಳದೆ ವಿ ।
ಖ್ಯಾತ ಕವಿ ವೃಷಭ ವಂಶೋ
ದ್ಭೂತಮೆನಲ್ ಬರಿಸದೊಳಗೆ ಸಮೆವಿನೆಗಮಿದಂ ॥ ೫೨

ವ॥ ಅದೆಂತೆನೆ ಆದಿವಂಶಾವತಾರಸಂಭವಂ ರಂಗಪ್ರವೇಶಂ ಜತುಗೃಹದಾಹಂ ಹಿಡಿಂಬ ವಧೆಬಕಾಸುರವಧೆ ದ್ರೌಪದೀಸ್ವಯಂವರಂ ವೈವಾಹಂ ಯುಧಿಷ್ಠಿರಪಟ್ಟಬಂಧನಂ ಇಂದ್ರಪ್ರಸ್ಥ ಪ್ರವೇಶಂ ಅರ್ಜುನದಿಗ್ವಿಜಯಂ ದ್ವಾರಾವತೀಪ್ರವೇಶಂ ಸುಭದ್ರಾಹರಣಂ ಸುಭದ್ರಾ ವಿವಾಹಂ ಖಾಂಡವವನ ದಹನಂ ಮಯ ದರ್ಶನಂ ನಾರದಾಗಮನಂ ಜರಾಸಂಧ ವಧೆ ರಾಜಸೂಯಂ ಶಿಶುಪಾಲವಧೆ ದ್ಯೂತವ್ಯತಿಕರಂ ವನ ಪ್ರವೇಶಂ ಕಿಮ್ಮೀರ ವಧೆ ಕಾಮ್ಯಕವನದರ್ಶನಂ ದ್ವೈತವನ ಪ್ರವೇಶಂ ಸೈಂಧವಬಂಧನಂ ಚಿತ್ರಾಂಗದಯುದ್ಧಂ ಕಿರಾತದೂತಾಗಮನಂ ದ್ರೌಪದೀ ವಾಕ್ಯಂ ಪಾರಾಶರ ವೀಕ್ಷಣಂ ಇಂದ್ರಕೀಲಾಭಿಗಮನಂ ಈಶ್ವರಾರ್ಜುನ ಯುದ್ಧಂ ದಿವ್ಯಾಸ್ತ್ರ ಲಾಭಂ ಇಂದ್ರಲೋಕಾಲೋಕನಂ ನಿವಾತಕವಚಾಸುರವಧೆ ಕಾಳಕೇಯ ಪೌಳೋಮವಧೆ ಸೌಗಂಧಿಕಕಮಲಾಹರಣಂ ಜಟಾಸುರವಧೆ ಮಾಯಾಮತ್ತಹಸ್ತಿ ವ್ಯಾಜಂ ವಿರಾಟಪುರ

ಎಂತಹ ಸತ್ಕವಿಯೋ? ೫೧. ಆತನಿಗೆ (ಆ ಪಂಪನಿಗೆ) ಅರಿಕೇಸರಿರಾಜನು ಅತ್ಯಂತ ಪ್ರೀತಿಯಿಂದ ಹೇಳಿಕಳುಹಿಸಿ ವಿಶೇಷವಾಗಿ ದಾನಮಾಡಿ ತನ್ನ ಕೀರ್ತಿಯನ್ನು ಭೂಮಿಯಲ್ಲಿ ಸ್ಥಾಪಿಸೆಂದು ಹೇಳಲು ಈ ರೀತಿಯಾದ ಇತಿಹಾಸ ಕಥೆಯನ್ನು ರಚಿಸಿ ಒಪ್ಪಿಸಲು ನಿಶ್ಚಯಿಸಿದನು. ೫೨. ವೇದಸದೃಶವಾದ ಈ ಕೃತಿಯು ತನಗೆ ಗಂಗಾಪ್ರವಾಹದಂತೆ ಅತ್ಯತಿಶಯವಾಗಿ ಪರರ ಸಹಾಯವನ್ನಪೇಕ್ಷಿಸದೆ ಪ್ರಸಿದ್ಧರಾದ ಕವಿಶ್ರೇಷ್ಠರ ಪರಂಪರೆಯಲ್ಲಿಯೇ ಹುಟ್ಟಿತು ಎನ್ನುವ ಹಾಗೆ ಒಂದು ವರ್ಷದಲ್ಲಿ ರಚಿತವಾಯಿತು. ವ॥ ಅದು ಹೇಗೆಂದರೆ ಆದಿವಂಶಾವತಾರಸಂಭವ, ರಂಗಪ್ರವೇಶ, ಅರಗಿನಮನೆಯ ದಾಹ, ಹಿಡಿಂಬವಧೆ, ಬಕಾಸುರವಧೆ, ದ್ರೌಪದೀಸ್ವಯಂವರ, ವಿವಾಹ, ಧರ್ಮರಾಯಪಟ್ಟಾಭಿಷೇಕ, ಇಂದ್ರಪ್ರಸ್ಥಪ್ರವೇಶ, ಅರ್ಜುನ ದಿಗ್ವಿಜಯ, ದ್ವಾರಾವತೀ ಪ್ರವೇಶ, ಸುಭದ್ರಾಹರಣ, ಸುಭದ್ರಾವಿವಾಹ, ಖಾಂಡವವನ ದಹನ, ಮಯದರ್ಶನ, ನಾರದಾಗಮನ, ಜರಾಸಂಧವಧೆ, ರಾಜಸೂಯ, ಶಿಶುಪಾಲವಧೆ, ದ್ಯೂತವ್ಯತಿಕರ, ವನಪ್ರವೇಶ, ಕೀಚಕವಧೆ, ಕಾಮ್ಯಕವನದರ್ಶನ, ದ್ವೈತವನಪ್ರವೇಶ, ಸೈಂಧವಬಂಧನ, ಚಿತ್ರಾಂಗದಯುದ್ಧ, ಕಿರಾತದೂತಾಗಮನ, ದ್ರೌಪದೀವಾಕ್ಯ, ವ್ಯಾಸರ ದರ್ಶನ, ಇಂದ್ರಕೀಲಾಭಿಗಮನ, ಈಶ್ವರಾರ್ಜುನಯುದ್ಧ, ದಿವ್ಯಾಸ್ತ್ರಲಾಭ, ಇಂದ್ರಲೋಕಾಲೋಕನ, ನಿವಾತಕವಚಾಸುರವಧೆ, ಕಾಳಕೇಯಪೌಳೋಮವಧೆ, ಸೌಗಂಧಿಕಕಮಲಾಪಹರಣ, ಜಟಾಸುರವಧೆ, ಮತ್ತಗಜದ ವೃತ್ತಾಂತ,

ಪ್ರವೇಶಂ ಕೀಚಕವಧೆ ದಕ್ಷಿಣೋತ್ತರ ಗೋಗ್ರಹಣಂ ಅಭಿಮನ್ಯು ವಿವಾಹಂ ಮಂತ್ರಾಳೋಚನಂ ದೂತಕಾರ್ಯಂ ಕುರುಕ್ಷೇತ್ರಪ್ರಯಾಣಂ ಭೀಷ್ಮ ಕರ್ಣ ವಿವಾದಂ ಯುದ್ಧೋದ್ಯೋಗಂ ಶ್ವೇತ ವಧೆ ಭೀಷ್ಮಶರ ಶಯನಂ ದ್ರೋಣಾಭಿಷೇಕಂ ಅಭಿಮನ್ಯು ವಧೆ ಸೈಂಧವ ವಧೆ ಘಟೋತ್ಕಚ ವಧೆ ದ್ರೋಣಚಾಪ ಮೋಕ್ಷಂ ದ್ರೋಣ ವಧೆ ಅಶ್ವತ್ಥಾಮ ಕರ್ಣ ವಿವಾದಂ ಕರ್ಣಾಭಿಷೇಕಂ ಸಂಸಪ್ತಕ ವಧೆ ದುಶ್ಶಾಸನ ವಧೆ ವೇಣೀಸಂಹನನಂ ಕರ್ಣಾರ್ಜುನ ಯುದ್ಧಂ ಕರ್ಣ ಸೂರ್ಯಲೋಕಪ್ರಾಪ್ತಿ ಶಲ್ಯಾಭಿಷೇಕಂ ಶಲ್ಯನಿಪಾತನಂ ಭೀಮ ದುರ್ಯೋಧನ ಗದಾಯುದ್ಧಂ ದುರ್ಯೋಧನ ವಧೆ ಪಂಚಪಾಂಡವಹರಣಂ ಸ್ತ್ರೀಪರ್ವಂ ಅರ್ಜುನಾಭಿಷೇಕಂ ಪೆಱವುಮುಪಾ ಖ್ಯಾನ ಕಥೆಗಳೊಳಮೊಂದುಂ ಕುಂದಲೀಯದೆ ಪೇೞ್ದಿಂ-

ಚಂ॥ ಎಸೆಯೆ ಸಮಸ್ತ ಭಾರತಮನಾವ ನರೇಂದ್ರರುಮಾರ್ತುಱ ಕೊರ್ತುಱ ಪೇ
ೞಿಸರೆ ಕವೀಂದ್ರರುಂ ನೆಱೆಯೆ ಪೇೞರೆ ಪೇೞೆಪೊಡೆಯ್ದೆ ನೀನೆ ಪೇ ।
ೞಿಸುವೆಯುದಾತ್ತ ಕೀರ್ತಿ ನಿಲೆ ಪೇೞ್ವೊಡೆ ಪಂಪನೆ ಪೇೞ್ಗುಮಿಂತು ಪೇ
ೞಿಸಿದ ನರೇಂದ್ರರುಂ ನೆಱೆಯೆ ಪೇೞ್ದ ಕವೀಂದ್ರರುಮಾರ್ ಧರಿತ್ರಿಯೊಳ್ ॥೫೩

ಎನೆ ಸಕಲಾವನೀತಳ ಜನಂ ಪಿರಿದುಂ ದಯೆಗೆಯ್ದು ಸಾರ್ಚೆ ಮೆ
ಲ್ಲನೆ ಪಿರಿದಪ್ಪ ಗೌರವದ ಮ್ಮೆಮೆಯ ಮನ್ನಣೆಯೋೞಿಗಳ್ ಕರಂ ।
ಮನಮನಲರ್ಚೆ ಕೀರ್ತಿ ಜಗದೊಳ್ ನಿಲೆ ಪೇೞೆಸಿದಂ ಜಗಕ್ಕೆ ನ
ಚ್ಚನ ಕವಿತಾ ಗುಣಾರ್ಣವನಿನೀ ಕೃತಿ ಬಂಧನಮಂ ಗುಣಾರ್ಣವಂ ॥ ೫೪

ವಿರಾಟಪುರಪ್ರವೇಶ, ಕೀಚಕವಧೆ, ದಕ್ಷಿಣೋತ್ತರ ಗೋಗ್ರಹಣ, ಅಭಿಮನ್ಯುವಿವಾಹ, ಮಂತ್ರಾಲೋಚನೆ, ದೂತಕಾರ್ಯ, ಕುರುಕ್ಷೇತ್ರ ಪ್ರಯಾಣ, ಭೀಷ್ಮಕರ್ಣವಿವಾದ, ಯುದ್ಧೋದ್ಯೋಗ, ಶ್ವೇತವಧೆ, ಭೀಷ್ಮಶರಶಯನ, ದ್ರೋಣಾಭಿಷೇಕ, ಅಭಿಮನ್ಯುವಧೆ, ಸೈಂಧವವಧೆ, ಘಟೋತ್ಕಚವಧೆ, ದ್ರೋಣಚಾಪಮೋಕ್ಷ, ದ್ರೋಣವಧೆ, ಅಶ್ವತ್ಥಾಮಕರ್ಣ ವಿವಾದ, ಕರ್ಣಾಭಿಷೇಕ, ಸಂಸಪ್ತಕವಧೆ, ದುಶ್ಶಾಸನವಧೆ, ಮುಡಿಯನ್ನು ಕಟ್ಟುವುದು, ಕರ್ಣಾರ್ಜುನರ ಯುದ್ಧ, ಕರ್ಣನ ಸೂರ್ಯಲೋಕಪ್ರಾಪ್ತಿ, ಶಲ್ಯಾಭಿಷೇಕ, ಶಲ್ಯನಿಪಾತನ, ಭೀಮದುರ್ಯೋಧನ ಗದಾಯುದ್ಧ, ದುರ್ಯೋಧನವಧೆ, ಪಂಚಪಾಂಡವಹರಣ, ಸ್ತ್ರೀಪರ್ವ, ಅರ್ಜುನಾಭಿಷೇಕ ಮೊದಲಾದ ಇತರ ಅನೇಕ ಉಪಾಖ್ಯಾನ ಕತೆಗಳಲ್ಲಿ ಒಂದೂ ತಪ್ಪದೆ ಹೇಳಿದೆನು. ೫೩. ಇದುವರೆಗೆ ಯಾವ ರಾಜರೂ ಸಮರ್ಥರಾಗಿ ಪ್ರೀತಿಯಿಂದ ಪ್ರಸಿದ್ಧವಾದ ಸಮಗ್ರಭಾರತವನ್ನು ಹೇಳಿಸಿಲ್ಲ. ಕವಿಶ್ರೇಷ್ಠರೂ ಪೂರ್ಣವಾಗಿ ಹೇಳಿಲ್ಲ. ಹೇಳಿಸುವುದಾದರೆ ನೀನೆ ಚೆನ್ನಾಗಿ ಹೇಳಿಸುತ್ತೀಯೆ; ಉನ್ನತವಾದ ಕೀರ್ತಿ ನಿಲ್ಲುವ ಹಾಗೆ ಹೇಳುವ ಪಕ್ಷದಲ್ಲಿ ಪಂಪನೆ ಹೇಳುತ್ತಾನೆ. ಹೀಗೆ ಹೇಳಿಸಿದ ರಾಜರೂ ಪೂರ್ಣವಾಗಿ ಹೇಳಿದ ಕವಿಶ್ರೇಷ್ಠರೂ ಲೋಕದಲ್ಲಿ ಯಾರಿದ್ದಾರೆ? ೫೪. ಎಂದು ಸಮಸ್ತ ಭೂಮಂಡಲದ ಜನವೂ ಹೇಳಲು ಗುಣಾರ್ಣವನಾದ ಅರಿಕೇಸರಿಯು ವಿಶೇಷವಾದ ಕೃಪೆಮಾಡಿ ಹಿರಿದಾದ ಮಹಿಮೆಯ ಸತ್ಕಾರಸಮೂಹಗಳನ್ನು ಸದ್ದಿಲ್ಲದೆ ಮಾಡಿ ವಿಶೇಷವಾಗಿ ಮನಸ್ಸನ್ನು ಅರಳಿಸಲು (ತೃಪ್ತಿಪಡಿಸಲು) ಅವನ ಕೀರ್ತಿ

ಪಿರಿಯಕ್ಕರ ॥ ತುಡುಗೆ ನಿಚ್ಚಲುಂ ಪಂಚರತ್ನಂಗಳುಂ ಪೊಱಮಡೆ ತನ್ನುಡುವುಪ್ಪಟಂಗಳ್
ಮಡಿಯೊಳಾಗೆಯುಮಬ್ಬಜಿಂ ಕಂಡಾಗಳ್ ಪಿರಿಯ ಬತ್ತರಿಗೆಯಂ ಕೆಲದೊಳಿಕ್ಕಿ ।
ಕೊಡುವ ಬಾಡಕ್ಕಂ ಜೀವಧನಂಗಳ್ಗಂ ಬಡುವೆಣ್ಗಂ ಲೆಕ್ಕಮಿಲ್ಲೆನಿಸಿ ರಾಗಂ
ಗಿಡದೆ ಕೊಂಡಾಡಿದಂ ಬಲ್ಲಹನಜೆಯೆ ಗುಣಾರ್ಣವಂ ಕವಿತಾಗುಣಾರ್ಣವನಂ॥ ೫೫

ಬೀರದಳವಿಯ ನನ್ನಿಯ ಚಾಗದ ಶಾಸನಂ ಚಂದ್ರಾರ್ಕತಾರಂಬರಂ
ಮೇರು ನಿಲ್ವಿನಂ ನಿಲವೇಳ್ಕುಂ ಕಾವ್ಯಕ್ಕೆ ತಾನಿತ್ತಂ ಶಾಸನದಗ್ರಹಾರಂ ।
ಸಾರಮೆಂಬನಂ ಪೆಸರಿಟ್ಟು ತಾನೀಯೆ ಹರಿಗನ ಧರ್ಮ ಭಂಡಾರದಂತೆ
ಸಾರಮಾದುದು ಬಿಟ್ಟಗ್ರಹಾರಮಾ ಬಚ್ಚೆಸಾಸಿರದೊಳು ಧರ್ಮವುರಂ ॥ ೫೬

ಚಂ॥ ದೆಸೆ ಮಖಧೂಮದಿಂ ದ್ವಿಜರ ಹೋಮದಿನೊಳ್ಗೆಱೆ ಹಂಸ ಕೋಕ ಸಾ
ರಸ ಕಳ ನಾದದಿಂದೊಳಗೆ ವೇದನಿನಾದದಿನೆತ್ತಮೆಯ್ದೆ ಶೋ ।
ಭಿಸೆ ಸುರಮಥ್ಯಮಾನ ವನಧಿ ಕ್ಷುಭಿತಾರ್ಣ ಘೋಷದಂತೆ ಘೂ
ರ್ಣಿಸುತಿರಲೀ ಗುಣಾರ್ಣವನ ಧರ್ಮದ ಧರ್ಮವುರಂ ಮನೋಹರಂ ॥ ೫೭

ನಿಲ್ಲುವಂತೆ ಲೋಕದಲ್ಲಿ ಪ್ರಸಿದ್ಧನಾದ ಕವಿತಾಗುಣಾರ್ಣವನಾದ ಪಂಪನಿಂದ ಈ ಕಾವ್ಯಪ್ರಬಂಧವನ್ನು ಗುಣಾರ್ಣವನು ಹೇಳಿಸಿದನು. ೫೫. ಪ್ರತಿನಿತ್ಯವೂ ಆಭರಣಗಳನ್ನೂ ಪಂಚರತ್ನಗಳನ್ನೂ ಹೊರಗೆ ಹೊರಡಬೇಕಾದರೆ ತಾನು ಸ್ವಂತವಾಗಿ ಧರಿಸುವ ಶ್ರೇಷ್ಠವಾದ ವಸ್ತ್ರಗಳನ್ನೂ ಒಳ್ಳೆಯ ಮಡಿಯಾಗಿರುವ ಸ್ಥಿತಿಯಲ್ಲಿ ಪ್ರೀತಿಯಿಂದ ಕೊಡುವನು. ಉನ್ನತವಾದ ಆಸನಗಳನ್ನೂ ತನ್ನ ಪಕ್ಕದಲ್ಲಿಯೇ ಹಾಸಿ ಕುಳ್ಳಿರಿಸಿಕೊಂಡು ಗೌರವಿಸುವನು. ಅವನು ದಾನಮಾಡುವ ಹಳ್ಳಿಗಳಿಗೂ ಗೋವುಗಳೇ ಮೊದಲಾದ ಪ್ರಾಣಿಗಳಿಗೂ ದಾಸಿಯರಿಗೂ ಲೆಕ್ಕವೇ ಇಲ್ಲ. ಪ್ರೀತಿಯು ಕಡಿಮೆಯಾಗದಂತೆ ರಾಷ್ಟ್ರಕೂಟರ ರಾಜನಾದ ವಲ್ಲಭದೇವನಾದ ಮೂರನೆಯ ಕೃಷ್ಣನು ತಿಳಿಯುವಂತೆ ಕವಿತಾಗುಣಾರ್ಣವನಾದ ಪಂಪಕವಿಯನ್ನು ಸತ್ಕರಿಸಿದನು. ೫೬. ತನ್ನ ವೀರ್ಯದ ಪರಾಕ್ರಮದ ಶಕ್ತಿಯ ಸತ್ಯದ ದಾನದ (ಪ್ರತೀಕಾರವಾಗಿರುವ) ಶಾಸನವು ಚಂದ್ರಸೂರ್ಯ ನಕ್ಷತ್ರಗಳಿರುವವರೆಗೆ ಮೇರುಪರ್ವತ ನಿಲ್ಲುವಂತೆ ಕಾವ್ಯಕ್ಕೆ ಬಹುಮಾನವಾಗಿ (ಸಂಭಾವನೆಯಾಗಿ) ತಾನು ಕೊಟ್ಟ ಶಾಸನದಗ್ರಹಾರವು ಸಾರವತ್ತಾಗಿ ನಿಲ್ಲಬೇಕು ಎಂದು ಹೊಸದಾಗಿ ನಾಮಕರಣಮಾಡಿ ಕೊಡಲು ಆ ಬಚ್ಚೆಸಾಸಿರವೆಂಬ ನಾಡಿನಲ್ಲಿ ಧರ್ಮಪುರವೆಂಬ ಅಗ್ರಹಾರವು ಅರಿಕೇಸರಿಯ ಧರ್ಮಭಂಡಾರದಂತೆ (ಧರ್ಮವು ಕೂಡಿಟ್ಟಿರುವ ಉಗ್ರಾಣದಂತೆ) ಸಾರವತ್ತಾದುದು ಆಯಿತು. ೫೭. ದಿಕ್ಕುಗಳು ಯಜ್ಞಯಾಗಗಳ ಹೊರೆಯಿಂದಲೂ ಬ್ರಾಹ್ಮಣರು ಮಾಡುವ ಹೋಮದಿಂದಲೂ ಒಳ್ಳೆಯ ಕೆರೆಗಳು ಹಂಸ ಚಕ್ರವಾಕ ಸಾರಸಪಕ್ಷಿಗಳ ಮಧುರವಾದ ಧ್ವನಿಯಿಂದಲೂ ಊರಿನ ಒಳಭಾಗವು ವೇದಘೋಷದಿಂದಲೂ ತುಂಬಿರಲು ದೇವತೆಗಳಿಂದ ಕಡೆಯಲ್ಪಟ್ಟ ಸಮುದ್ರದ ಘೋಷದಂತೆ ಅರಿಕೇಸರಿಯು ಧರ್ಮವಾಗಿ ಕೊಟ್ಟ ಧರ್ಮಪುರವು ಶಬ್ದಮಾಡುತ್ತ ಯಾವಾಗಲೂ ಬಹು ರಮಣೀಯವಾಗಿತ್ತು.

ಕಂ|| ರಾಜದ್ರಾಜಕಮೆನಿಸಿದ
ಸಾಜದ ಪುಲಿಗೆಱೆಯ ತಿರುಳ ಕನ್ನಡದೊಳ್ ನಿ ।
ರ್ವ್ಯಾಜದೆಸಕದೊಳೆ ಪುದಿದೊಂ
ದೋಜೆಯ ಬಲದಿನಿಯ ಕವಿತೆ ಪಂಪನ ಕವಿತೇ ॥ ೫೮

ಚಂ|| ಪುದಿದ ಜಸಂ ಪೊದಲ್ದ ಚೆಳಮೊಂದಿದಳಂಕೃತಿ ಕೈತ ದೇಸಿಯಿಂ
ಬುದನೆನೆ ವಸ್ತು ವಿದ್ಯೆಯೆನೆ ಕಬ್ಬಮೆ ಮುನ್ನಮವಂತಿವಲ್ಲದ ।
ಲ್ಲದೆ ಪೆಱವಿಲ್ಲ ಕಬ್ಬಮನೆ ಮುನ್ನಿನ ಕಬ್ಬಮನೆಲ್ಲಮಿಕ್ಕಿ ಮೆ
ಟ್ಟಿದುವು ಸಮಸ್ತಭಾರತಮುಮಾದಿಪುರಾಣಮಹಾಪ್ರಬಂಧಮುಂ ॥ ೫೯

ಬೆಳಗುವೆನಿಲ್ಲಿ ಲೌಕಿಕಮನಲ್ಲಿ ಜಿನಾಗಮಮಂ ಸಮಸ್ತ ಭೂ
ತಳಕೆ ಸಮಸ್ತ ಭಾರತಮುಮಾದಿಪುರಾಣಮುಮೆಂದು ಮೆಯ್ಯಸುಂ ।
ಗೊಳುತಿರೆ ಪೂಣ್ದು ಪೂಣ್ದ ತೆಱದೊಂದಱುದಿಂಗಳೊಳೊಂದು ಮೂಱು ತಿಂ
ಗಳೊಳೆ ಸಮಾಪ್ತಿಯಾದುದೆನೆ ಬಣ್ಣಿಸಿದಂ ಕವಿತಾಗುಣಾರ್ಣವಂ ॥ ೬೦

ಕ್ಷಿತಿಗೆ ಸಮಸ್ತ ಭಾರತಮುಮಾದಿಪುರಾಣಮುಮಿಾಗಳೊಂದಳಂ
ಕೃತಿಯವೊಲಿರ್ದುವೇಕಱೆಯ ಪೋದವರಾದವರೊಳ್ ಸರಸ್ವತೀ ।
ಮತಿ ಕವಿತಾಗುಣಕ್ಕೆ ಪದೆದೆಯ್ದುವರಲ್ಲೆ ಕವೀಂದ್ರರಾರ್ ಸರ
ಸ್ವತಿಗೆ ವಿಳಾಸಮಂ ಪೊಸತು ಮಾಡುವ ಪಂಪನ ವಾಗ್ವಿಲಾಸಮಂ ॥ ೬೧

೫೮. ಪಂಪನ ಕವಿತ್ವವು ಪ್ರಕಾಶಮಾನವಾದ ರಾಜನುಳ್ಳದ್ದು ಎಂದೆನಿಸಿದ ಪುಲಿಗೆರೆಯ ಸಹಜವಾದ ತಿರುಳುಕನ್ನಡದಲ್ಲಿ ಋಜುವಾದ ಕಾವ್ಯಮಾರ್ಗದಲ್ಲಿ ಶಕ್ತಿಯುಕ್ತವಾಗಿಯೂ ಇಂಪಾಗಿಯೂ ಇರುವಂತೆ ರಚಿತವಾಗಿದೆ. ೫೯. ಕೂಡಿಕೊಂಡಿರುವ ಯಶಸ್ಸು ವ್ಯಾಪ್ತವಾದ ಓಜಸ್ಸು ಅಥವಾ ಕಾಂತಿ, ಸೇರಿಕೊಂಡಿರುವ ಅಲಂಕಾರ, ದೇಸಿ ರಚನೆಯೆಂಬುದನ್ನೇ ಪ್ರಧಾನವಸ್ತುಗಳನ್ನಾಗಿ ಉಳ್ಳ ಕಾವ್ಯಗಳು ವಿದ್ಯೆಗಿಂತ ಮಾನ್ಯವಾದುವು. ಅವಲ್ಲದವು ಕಾವ್ಯವೇ ಅಲ್ಲ. ಈ ಭಾರತವೂ ಆದಿಪುರಾಣವೂ ಅವುಗಳ ಹಾಗಿರದೆ ಮೇಲೆ ಹೇಳಿದ ಗುಣಗಳಲ್ಲದೆ ಬೇರೆಯಲ್ಲ ಎಂದೆನಿಸಿಕೊಂಡು ಪ್ರಾಚೀನಕಾವ್ಯಗಳನ್ನೆಲ್ಲ ಪರಾಜಿತವನ್ನಾಗಿ (ಹೊಡೆದು ಹಾಕಿದುವು) ಮಾಡಿದುವು. ೬೦. ಇಲ್ಲಿ ವಿಕ್ರಮಾರ್ಜುನವಿಜಯ ಅಥವಾ ಭಾರತದಲ್ಲಿ ಸಮಸ್ತಭೂಮಂಡಲಕ್ಕೆ ಲೋಕವ್ಯವಹಾರವನ್ನೂ ಅಲ್ಲಿ ಆ ಆದಿಪುರಾಣದಲ್ಲಿ ಜಿನಾಗಮವನ್ನೂ ಪ್ರಕಾಶಪಡಿಸುತ್ತೇನೆ. ಸಮಸ್ತಭಾರತವೂ ಆದಿಪುರಾಣವೂ ನನ್ನ ಶರೀರವನ್ನೂ ಪ್ರಾಣವನ್ನೂ ಆಕ್ರಮಿಸಿಕೊಂಡಿರಲು ಪ್ರತಿಜ್ಞೆಮಾಡಿ ಆ ಪ್ರತಿಜ್ಞೆ ಮಾಡಿದ ರೀತಿಯಲ್ಲಿಯೇ ಒಂದು (ಭಾರತವು) ಆರು ತಿಂಗಳಲ್ಲಿಯೂ ಮತ್ತೊಂದು (ಆದಿಪುರಾಣವು) ಮೂರುತಿಂಗಳಲ್ಲಿಯೂ ಪೂರ್ಣವಾಯಿತು ಎನ್ನುವ ಹಾಗೆ ಕವಿತಾಗುಣಾರ್ಣವನಾದ ಪಂಪನು ವರ್ಣಿಸಿದನು. ೬೧. ಸಮಸ್ತ ಭಾರತವೂ ಆದಿಪುರಾಣವೂ ಲೋಕಕ್ಕೆ ಈಗ ಒಂದು ಅಲಂಕಾರದಂತಿದೆ. ಏಕೆ ಗೊತ್ತಿದೆಯೇ? ಹಿಂದೆ ಆಗಿಹೋದವರಲ್ಲಿಯೂ ಈಗ ಆಗಿರುವವರಲ್ಲಿಯೂ ಸರಸ್ವತೀಮತಿಯಾಗಿ

ಉ॥ ವ್ಯಾಸಮುನಿ ಪ್ರಣೂತ ಕೃತಿಯಂ ಸಲೆ ಪೇೞ್ದು ಸತ್ಕವಿ
ವ್ಯಾಸ ಸಮಾಗಮಾನ್ವಿತಮನಾದಿಪುರಾಣಮನೆಯ್ದೆ ಪೇೞ್ದು ವಾ ।
ಕ್ಶ್ರೀ ಸುಭಗಂ ಪುರಾಣಕವಿಯುಂ ಧರೆಗಾಗಿರೆಯುನ್ನೆ ಪೊಣ್ಮುವೀ
ದೇಸಿಗಳುಂತೆ ನಾಡೊವಜನಾದನೊ ಪೇೞ್ ಕವಿತಾಗುಣಾರ್ಣವಂ ॥ ೬೨

ಚಂ॥ ಪುದಿದಿರೆ ರಾಗಮುರ್ಕೆ ಪೊಸವೇಟದಲಂಪುಗಳೆಲ್ಲಮೋದಿದ
ರ್ಗಿದಱಿನುಯಾಯಿಗರ್ಗ್ಗೆಸೆವುದಾರ ಗುಣಂ ಸಕಳಾವನೀಶ್ವರ ।
ರ್ಗದಟನಳುರ್ಕೆ ಭೃತ್ಯನಿವಹಕ್ಕೆ ಚದುರ್ ಗಣಿಕಾಜನಕ್ಕೆ ಕುಂ
ದದೆ ನೆಲಸಿರ್ಕೆಯೀ ಮಹಿತಳಕ್ಕೆ ಮದೀಯ ಕೃತಿಪ್ರಬಂಧದಿಂ ॥ ೬೩

ಮ॥ ಸ್ರ ॥ ಚಲದೊಳ್ ದುರ್ಯೋಧನಂ ನನ್ನಿಯೊಳಿನತನಯಂ ಗಂಡಿನೊಳ್ ಭೀಮಸೇನಂ
ಬಲದೊಳ್ ಮದ್ರೇಶನತ್ಯುನ್ನತಿಯೊಳಮರಸಿಂಧೂದ್ಭವಂ ಚಾಪವಿದ್ಯಾ ।
ಬಲದೊಳ್ ಕುಂಭೋದ್ಭವಂ ಸಾಹಸದ ಮಹಿಮೆಯೊಳ್ ಫಲ್ಗುಣಂ ಧರ್ಮದೊಳ್ ನಿ
ರ್ಮಲ ಚಿತ್ತಂ ಧರ್ಮಪುತ್ರಂ ಮಿಗಿಲಿವರ್ಗಳಿನೀ ಭಾರತಂ ಲೋಕಪೂಜ್ಯಂ ॥ ೬೪

ಪಂಪನ ಕವಿತಾಗುಣಕ್ಕೆ ಆಸೆಪಟ್ಟು ಅವನ ಮೇಲ್ಮೆಯ ಹತ್ತಿರಕ್ಕೆ ಬರುವವರೂ ಸರಸ್ವತಿಗೆ ವಿಳಾಸವನ್ನು ಹೊಸದುಮಾಡುವ ಅವನ ಮಾತಿನ ವೈಭವವನ್ನು ಮೀರುವವರೂ ಯಾರೂ ಇಲ್ಲ. ೬೨. ವ್ಯಾಸಮಹರ್ಷಿಗಳಿಂದ ಹೊಗಳಲ್ಪಟ್ಟ ಕೃತಿಯಾದ ಭಾರತವನ್ನು ಚೆನ್ನಾಗಿ ಹೇಳಿಯೂ ಪ್ರಸಿದ್ಧರಾದ ಸತ್ಕವಿಗಳ ವ್ಯಾಖ್ಯಾನ ಮತ್ತು ಸಹವಾಸಗಳಿಂದ ಕೂಡಿರುವ ಆದಿಪುರಾಣವನ್ನು ಚೆನ್ನಾಗಿ ಹೇಳಿಯೂ ಪಂಪನು ವಾಕ್ಸಂಪತ್ತಿನ ಸೌಂದರ್ಯವುಳ್ಳವನೂ ಪುರಾಣರಚನೆ ಮಾಡಿದ ಕವಿಯೂ ಭೂಮಿಗೆ ಆಗಿರಲು ಹಾಗೆಯೆ; ದೇಸಿಗುಣಗಳೂ ಉನ್ನತವಾಗಿ ಅಭಿವೃದ್ಧಿ ಯಾಗುತ್ತಿರಲು ಕವಿತಾಗುಣಾರ್ಣವನು 'ನಾಡ ಒವಜ' - ನಾಡಿನ ಓಜ ಎಂದರೆ ನಾಡಿಗೇ ಆಚಾರ್ಯನೂ ಆದನು. ೬೩. ಭೂಮಂಡಲದಲ್ಲಿ ಈ ನನ್ನ ಕೃತಿಬಂಧವನ್ನು ಓದಿದವರಿಗೆ ವ್ಯಾಪ್ತವಾದ ಸಂತೋಷವೂ ಇದರಂತೆ ನಡೆದುಕೊಂಡವರಿಗೆ ಅಭಿವೃದ್ಧಿಯಾಗುತ್ತಿರುವ ಪ್ರಣಯ ವೈಭವವೂ ಸಮಸ್ತರಾಜಮಂಡಲಕ್ಕೆ ಪ್ರಕಾಶವಾದ ಔದಾರ್ಯಗುಣವೂ ಸೇವಕವರ್ಗಕ್ಕೆ ಪರಾಕ್ರಮಾತಿಶಯವೂ ವೇಶ್ಯಾಜನಕ್ಕೆ ಚಾತುರ್ಯವೂ ಕಡಿಮೆಯಾಗದೆ ನೆಲಸಿರಲಿ. ೬೪. ಚಲದಲ್ಲಿ ದುರ್ಯೋಧನನೂ ಸತ್ಯದಲ್ಲಿ ಕರ್ಣನೂ ಪೌರುಷದಲ್ಲಿ ಭೀಮಸೇನನೂ ಬಲದಲ್ಲಿ ಶಲ್ಯನೂ ಗುಣೌನ್ನತಿಯಲ್ಲಿ ಭೀಷ್ಮನೂ ಚಾಪವಿದ್ಯಾಕೌಶಲದಲ್ಲಿ ದ್ರೋಣಾಚಾರ್ಯನೂ ಸಾಹಸದ ಮಹಿಮೆಯಲ್ಲಿ ಅರ್ಜುನನೂ ಧರ್ಮದಲ್ಲಿ ಪರಿಶುದ್ಧಮನಸ್ಸುಳ್ಳ ಧರ್ಮರಾಯನೂ ಶ್ರೇಷ್ಠರಾದವರು. ಇವರಿಂದ ಭಾರತವು ಲೋಕಪೂಜ್ಯವಾಗಿದೆ.

ಮ॥ ಕರಮಱ್ಕರ್ತು ಸಮಸ್ತ ಭಾರತ ಕಥಾ ಸಂಬಂಧಮಂ ಬಾಜಿಸಲ್
ಬರೆಯಲ್ ಕೇಳಲೊಡರ್ಚುವಂಗಮಿದಱೊಳ್ ತನ್ನಿಷ್ಟವಪ್ಪನ್ನಮು ।
ತ್ತರಮಕ್ಕುಂ ಧೃತಿ ತುಷ್ಟಿ ಪುಷ್ಟಿ ವಿಭವಂ ಸೌಭಾಗ್ಯಮಿಷ್ಟಾಂಗನಾ
ಸುರತಂ ಕಾಂತಿಯಗುಂತಿ ಶಾಂತಿ ವಿಭವಂ ಭದ್ರಂ ಶುಭಂ ಮಂಗಳಂ ॥ ೬೫

ಇದು ವಿವಿಧ ವಿಬುಧಜನವಿನುತ ಜಿನಪದಾಂಭೋಜ
ವರ ಪ್ರಸಾದೋತ್ಪನ್ನ ಪ್ರಸನ್ನ ಗಂಭೀರ ವಚನ ರಚನ
ಚತುರ ಕವಿತಾಗುಣಾರ್ಣವ ವಿರಚಿತಮಪ್ಪ
ವಿಕ್ರಮಾರ್ಜುನ ವಿಜಯದೊಳ್
ಚತುರ್ದಶಾಶ್ವಾಸಂ

೬೫. ಸಮಸ್ತಭಾರತಕಥಾಪ್ರಬಂಧವನ್ನು ಪ್ರೀತಿಸಿ ವಾಚಿಸಲು (ಓದಲು) ಕೇಳಲು ಬರೆಯಲು ಪ್ರಾರಂಭಮಾಡುವವನಿಗೆ ಬೇಕಾದಷ್ಟು ಅಭಿವೃದ್ಧಿಯಾಗುತ್ತದೆ. ಧೈರ್ಯ, ತೃಪ್ತಿ, ಬಲ, ವೈಭವ, ಸೌಭಾಗ್ಯ, ತನ್ನ ಇಷ್ಟಳಾದ ಸ್ತ್ರೀಯ ಸಂಭೋಗ, ಶಾಂತಿ, ವೃದ್ಧಿ, ವೈಭವ, ಭದ್ರ, ಶುಭ, ಮಂಗಳ ಇವೆಲ್ಲವೂ ಆಗುತ್ತವೆ. ವ॥ ಇದು ಅನೇಕ ದೇವತೆಗಳಿಂದ ಸ್ತುತಿಸಲ್ಪಟ್ಟ ಜಿನಪಾದಕಮಲಗಳ ವರಪ್ರಸಾದದಿಂದ ಹುಟ್ಟಿದುದೂ ತಿಳಿಯೂ ಗಂಭೀರವೂ ಆದ ಮಾತುಗಳ ರಚನೆಯಲ್ಲಿ ಚಾತುರ್ಯವುಳ್ಳವನೂ ಆದ ಕವಿತಾಗುಣಾರ್ಣವನಿಂದ ರಚಿತವಾದುದೂ ಆದ ವಿಕ್ರಮಾರ್ಜುನ ವಿಜಯದಲ್ಲಿ ಹದಿನಾಲ್ಕನೆಯ ಆಶ್ವಾಸವು.

# ಅನುಬಂಧ-೧

ಪಂಪನು ತನ್ನ ಭಾರತದ ಪ್ರಾರಂಭದಲ್ಲಿ ತನ್ನ ಪೋಷಕನಾದ ಅರಿಕೇಸರಿಯ ವಂಶವೃಕ್ಷವನ್ನು ವಿಸ್ತಾರವಾಗಿ ಕೊಟ್ಟಿದ್ದಾನೆ. ಇದು ಐತಿಹಾಸಿಕ ದೃಷ್ಟಿಯಿಂದ ಬಹು ಉಪಯುಕ್ತವಾಗಿದೆ. ಅದರ ವಿವರ ಈ ರೀತಿ ಇದೆ.

ಶ್ರೀಮಚ್ಚಾಳುಕ್ಯವಂಶವೆಂಬ ಆಕಾಶಕ್ಕೆ ಚಂದ್ರನೆಂಬಂತೆ ಕಾಂತಿಯಿಂದ ಕೂಡಿ ಈ ಭೂಮಿಯಲ್ಲಿ ತನ್ನ ಕುಲಕ್ಕೆ ಶಿಖಾಮಣಿಯಾದ ಯುದ್ಧಮಲ್ಲನು ಪ್ರಸಿದ್ಧನಾದನು. ಪ್ರಬಲನಾದ ಆತನು ತೋಳಬಲದ ಖ್ಯಾತಿಯನ್ನು ಪಡೆದು ಅನೇಕ ರಾಜರ ರತ್ನಕಿರೀಟಗಳ ಕಾಂತಿಯಿಂದ ತನ್ನ ಪಾದಗಳು ಬೆಳಗುವಂತೆ ಮಾಡಿ ಸಪಾದ ಲಕ್ಷ ಕ್ಷಿತಿಯನ್ನು ಆಳಿದನು. ಇವನು ಬೋದನವೆಂಬ ತನ್ನ ರಾಜಧಾನಿಯಲ್ಲಿ ಪ್ರತಿದಿನವೂ ಬಾವಿಗಳಲ್ಲಿ ಎಣ್ಣೆಯನ್ನು ತುಂಬಿ ಐನೂರು ಆನೆಗಳನ್ನು ಸ್ನಾನಮಾಡಿಸುವನು. ಈ ಯುದ್ಧಮಲ್ಲ ಮಹೀಪತಿಗೆ ಸುಂದರಾಂಗನಾದ ಅರಿಕೇಸರಿಯು ರಾಜನಿಗೆ ಕೀರ್ತಿ ಹುಟ್ಟುವಂತೆ ಹುಟ್ಟಿ ಮಂತ್ರಿಗಳಿಂದ ಕೂಡಿ ತನ್ನ ಕಿತ್ತ ಕತ್ತಿಯಿಂದ ವಿರೋಧಿರಾಜರ ಅಮೂಲ್ಯವಾದ ವಸ್ತುಗಳನ್ನೂ ಆನೆ ಕುದುರೆಗಳನ್ನೂ ಗೆದ್ದು ನಿರುಪಮನೆಂಬ ರಾಜನ ಆಳ್ವಿಕೆಯಲ್ಲಿ ಮೂರು ಕಳಿಂಗ ದೇಶಗಳೊಡನೆ ವೆಂಗಿಮಂಡಲವನ್ನೂ ಗೆದ್ದು ದಿಗ್ಭಿತ್ತಿಗಳಲ್ಲಿ ಗರ್ವದಿಂದ ತನ್ನ ಹೆಸರನ್ನು ಬರೆಯಿಸಿದನು. ಕ್ಷತ್ರಿಯ ಗುಣಗಳು ಆ ಕುಲದಲ್ಲಿ ಈತನಿಂದಲೇ ನೆಲಸಿ ನಿಂದುವು, ಅಲ್ಲದೆ ಅರಿಕೇಸರಿಯು ಮಾಡಿದ ಕಾರ್ಯಗಳು ಮೂರು ಲೋಕದಲ್ಲಿಯೂ ಪ್ರಖ್ಯಾತರಾದ ಆದಿ ಕ್ಷತ್ರಿಯರಲ್ಲಿಯೂ ಇಲ್ಲವೆನ್ನುವಷ್ಟು ಪ್ರಸಿದ್ಧಿಯಾದುವು. ಅರಿಕೇಸರಿಗೆ ನರಸಿಂಹ, ಭದ್ರದೇವ ಎಂಬಿಬ್ಬರು ಮಕ್ಕಳಾದರು. ಶತ್ರುರಾಜರ ತಲೆಗಳನ್ನು ಸೀಳುವಷ್ಟು ಭಯಂಕರವಾದ ಕತ್ತಿಗಳನ್ನುಳ್ಳ ಬಾಹುಬಲವುಳ್ಳವರವರು ಅವರಲ್ಲಿ ಹಿರಿಯನಾದ ನರಸಿಂಹನಿಗೆ ಯುದ್ಧಮಲ್ಲನೆಂಬುವನು ಹಿರಿಯ ಮಗ, ಭುವನಪ್ರದೀಪನೂ ಅಪಾರ್ಯವೀರ್ಯನೂ ಆದ ಯುದ್ಧಮಲ್ಲನಿಗೆ ಬದ್ದೆಗನು ಹಿರಿಯ ಮಗ. ಇವನು ಹುಟ್ಟಿದೊಡನೆಯೇ ಜ್ಞಾನವೂ ಜ್ಞಾನದೊಡನೆ ಐಶ್ವರ್ಯವೂ ಅದರೊಡನೆ ಅತ್ಯತಿಶಯವಾದ ಪರಾಕ್ರಮವೂ ಹುಟ್ಟಿದುವು. ತನ್ನ ವಿಶೇಷ ಶಕ್ತಿಯಿಂದ ಶತ್ರುರಾಜರನ್ನು ಚದುರಿಸಿ ರಣರಂಗದಲ್ಲಿ ತನ್ನ ಪರಾಕ್ರಮವನ್ನು ಕೊಂಡಾಡುವ ಹಾಗೆ ನಲವತ್ತೆರಡು ಕಾಳಗಗಳಲ್ಲಿ ಜಯವನ್ನು ಸಂಪಾದಿಸಿದನು. ಸಮುದ್ರ ಮುದ್ರಿತವಾದ ಈ ಭೂಮಂಡಲದಲ್ಲಿ ಯಾರಿಗೂ ಸೋಲದವನು ಇವನೇ ಎಂಬ ಖ್ಯಾತಿಯನ್ನು ಸಂಪಾದಿಸಿದುದಲ್ಲದೆ ಬದ್ದೆಗನು ಭೀಮನೆಂಬ ರಾಜನನ್ನು ಬಹಳ ಗರ್ವದಿಂದ ನೀರಿನಲ್ಲಿ ಮೊಸಳೆಯನ್ನು ಹಿಡಿಯುವಂತೆ ಒತ್ತಿ ಹಿಡಿದನು, ಮುಗಿಲನ್ನು ಮುಟ್ಟಿದ ಪೆಂಪು, ಪೆಂಪನ್ನು ಒಳಕೊಂಡ ಉದ್ಯೋಗ, ಉದ್ಯೋಗದ ಫಲವಾದ ಆಜ್ಞಾಫಲ, ಆಜ್ಞೆಯಿಂದ ಭಯಪಟ್ಟು ಬಾಗಿ ನಿಂತ ಶತ್ರುರಾಜರ ಸಮೂಹ ಇವು ತನ್ನ ಕೀರ್ತಿ ಯಶಸ್ಸಿಗೆ ಆಶ್ರಯವಾಗಿರಲು ಬದ್ದೆಗನು ತನ್ನ ಹುಬ್ಬನ್ನು ಹಾರಿಸುವುದರಿಂದಲೇ ಕೋಟ್ಯಂತರ ಜನವನ್ನು ಅಧೀನಮಾಡಿಕೊಳ್ಳುವನು. ಅವನ ಭಂಡಾರದಲ್ಲಿ ಮೇರುಪರ್ವತದ ಚಿನ್ನವಿದೆ. ಕಲ್ಪವೃಕ್ಷಗಳ ತೋಟವಿದೆ, ಸಿದ್ಧರಸದ ಒರತೆಯಿದೆ, ಸ್ಪರ್ಶಶಿಲೆಯ ಗಣಿಯಿದೆ, ತಡೆಯಿಲ್ಲದೆ ದಾನಮಾಡುವವರಲ್ಲಿ ಬದ್ದೆಗನನ್ನು ಹೋಲುವವರಾರಿದ್ದಾರೆ ! ಆ ಭದ್ರದೇವನ ತ್ಯಾಗಕ್ಕೆ ಹೊರಗಾದುದಾವುದೂ ಇರಲಿಲ್ಲ.

ಆ ಬದ್ದೆಗನಿಗೆ ವೈರಿಗಳೆಂಬ ಕತ್ತಲೆಗೆ ಸೂರ್ಯನೂ ಭೂಮಿಯನ್ನು ಗೆಲ್ಲಲು ಸಮರ್ಥವಾದ ವಿಜಯ ಭುಜಬಲವುಳ್ಳವನೂ ಆದ ಯುದ್ಧಮಲ್ಲನು ಮಗ. ಇವನ ಮಗ ನರಸಿಂಹನು ನಹುಷ, ಪೃಥು, ಭಗೀರಥ, ನಳರೆಂಬ ಮಹಾಪುರುಷರನ್ನು ಕಡೆಗಾಣಿಸಿದ ಮಹಿಮೆಯುಳ್ಳವನೂ ಜ್ಞಾನದಲ್ಲಿ ಪರಮಾತ್ಮನಂತಿದ್ದವನೂ ಆಗಿ ಹಿರಿಯರ ಆಜ್ಞೆಯನ್ನು ಉಲ್ಲಂಘನೆ ಮಾಡದೆ ಶತ್ರುಸೈನ್ಯವನ್ನು ಅಡಗಿಸಿಕೊಳ್ಳುವುದರಲ್ಲಿ ಅವನ ಕೋಪವು ತಡೆಯಿಲ್ಲದುದಾಗಿದ್ದಿತು. ನರಸಿಂಹನು ಲಾಟದೇಶದ ಮೇಲೆ ನುಗ್ಗಿ ಯುದ್ಧಮಾಡಿದ ವಿಷಯವನ್ನು ಕೇಳಿ ಆ ದೇಶದವರು ಆಗ ಸತ್ತವರಿಗೆ ಈಗಲೂ ತರ್ಪಣವನ್ನು ಕೊಡುತ್ತಿರುವರು. ಸಿಂಹದಂತೆ ಕೆರಳಿ ನರಸಿಂಹನು ಯುದ್ಧಮಾಡಿದಾಗ ಚಿಮ್ಮಿದ ರಕ್ತವು ಈಗಲೂ ಆಕಾಶದಲ್ಲಿ ಕೆಂಗುಡಿಯು ಮುಸುಕಿದಂತಿದೆ, ಸಪ್ತ ಮಾಲವಗಳನ್ನು ಸುಟ್ಟು ಕರಿಕೇರಿಸಿದ ಜ್ವಾಲೆಗಳು ಅವನ ತೇಜಸ್ಸಿನ ಬೆಳಲುಗಳನ್ನು ಅನುಕರಿಸಿದವು. ವಿಜಯಗಜಗಳೊಡನೆ ಘೂರ್ಜರ ರಾಜ್ಯವನ್ನು ಮುತ್ತಿ ಅದನ್ನು ಗೆದ್ದು ವಿಜಯನನ್ನು ತಿರಸ್ಕರಿಸಿದ್ದಾನೆ. ಸಿಡಿಲೆರಗುವಂತೆ ಹಾಗೆ ಎರಗಿದ ನರಸಿಂಹನ ಸೈನ್ಯಕ್ಕೆ ಹೆದರಿ ಮಹಿಪಾಲನೆಂಬ ರಾಜನು ಉಂಡೆಡೆಯಲ್ಲಿ ಉಣ್ಣದೆ ಕೆಡೆದೆಡೆಯಲ್ಲಿ ಕೆಡೆಯದೆ ಓಡಿಹೋದನು. ಅಲ್ಲದೆ ನರಸಿಂಹನು ತನ್ನ ಕುದುರೆಯನ್ನು ಗಂಗಾನದಿಯಲ್ಲಿ ಮೀಯಿಸಿ ಕಾಳಪ್ರಿಯದಲ್ಲಿ ತನ್ನ ಭುಜವಿಜಯಗರ್ವದಿಂದ ವಿಜಯಸ್ತಂಭವನ್ನು ಸ್ಥಾಪಿಸಿದನು.

ಈ ನರಸಿಂಹ ಮನೋನಯನಪ್ರಿಯೆ ಜಾಕವ್ವೆ, ಚಂಚಲವಾದ ಕರಿಯ ಮುಂಗುರುಳುಳ್ಳವಳೂ ಚಂದ್ರನಂತೆ ಮುಖವುಳ್ಳವಳೂ ಆದ ಇವಳು ಕುಲದಲ್ಲಿಯೂ ಶೀಲದಲ್ಲಿಯೂ ಸೀತಾದೇವಿಗಿಂತ ಅಗ್ಗಳವಾದವಳು. ಹೊಸದಾಗಿ ಅರಳಿದ ತಾವರೆಯೆಸಳ ಮೇಲಿರುವ ಲಕ್ಷ್ಮಿಯೂ ಈ ಜಾಕವ್ವೆಯ ಪಕ್ಕದಲ್ಲಿ ಕಾಂತಿಹೀನಳಾಗುತ್ತಾಳೆ ಎಂದ ಮೇಲೆ ಉಳಿದ ಸಾಮಾನ್ಯಸ್ತ್ರೀಯರು ಈಕೆಗೆ ಸಮನಾಗುತ್ತಾರೆಯೇ.

ಆ ಜಾಕವ್ವೆಗೂ ಆ ಭೂವಲ್ಲಭ ನರಸಿಂಹನಿಗೂ ಅತಿವಿಶದ ಯಶೋವಿತಾನನಾದ ಅರಿಕೇಸರಿ ತನ್ನ ತೇಜೋಗ್ನಿಯಲ್ಲಿ ಮಗ್ನರಾದ ರಿಪುಶಲಭವನ್ನುಳ್ಳವನಾಗಿ ಮಗನಾಗಿ ಹುಟ್ಟಿದನು. ಅವನು ಹುಟ್ಟಿದಾಗ ಆನೆಯ ಮದೋದಕವನ್ನೇ ಬೆಚ್ಚುನೀರಾಗಿ ತಳಿದರು. ಆನೆಯ ಅಂಕುಶದಿಂದ ಹೊಕ್ಕುಳ ಬಳ್ಳಿಯನ್ನು ಕತ್ತರಿಸಿದರು, ಆನೆಯ ದಂತದ ತೊಟ್ಟಿಲಿನಲ್ಲಿಟ್ಟು ತೂಗಿದರು. ಆದುದರಿಂದ ಈ ಬಾಲ್ಯದಿಂದಲೇ ಅರಿಕೇಸರಿಯು ಗಜಪ್ರಿಯನೆಂಬುದನ್ನು ತೋರಿಸಿದನು. ತಾನೇ ಪ್ರತ್ಯಕ್ಷ ಇಂದ್ರನೆಂಬಂತೆ ಪ್ರಕಾಶಿಸಿದ ಇಂದ್ರನ ತೋಳೇ ತೊಟ್ಟಿಲಾಗಿ ಬೆಳೆದನು, ಅಮೇಯ ಬಲಶಾಲಿಯೂ ಮನುಜಮಾರ್ತಾಂಡನೂ ಆದ ಇವನಿಗೆ ಬುದ್ಧಿಶಕ್ತಿಯಿಂದಲೂ ಪೌರುಷ ಶಕ್ತಿಯಿಂದಲೂ ಶಾಸ್ತ್ರಪಾರವೂ ಶತ್ರುಸೈನ್ಯಪಾರವೂ ಜೊತೆಯಲ್ಲಿಯೇ ಸಿದ್ಧಿಸಿದುವು. (ನಡುವಿನ) ಉಡುವಣಿ ಹರಿಯುವುದಕ್ಕೆ ಮುಂಚೆಯೇ ಛಲದಿಂದ ಶತ್ರುಸೈನ್ಯವನ್ನು ಚದುರಿಸಿ ಶತ್ರುಸೈನ್ಯದ ರಕ್ತ ಸಮುದ್ರದಲ್ಲಿ ಜಿಗುಳೆ ಬೆಳೆಯುವ ತೆರದಲ್ಲಿ ಬೆಳೆದನು. ಪ್ರತಿಭಟಿಸಿದ ಸೈನ್ಯವು ಕೋಟಿಸಂಖ್ಯೆಯನ್ನು ಮೀರಿರಲು ಪರಸ್ತ್ರೀಯು ಊರ್ವಶಿಗಿಂತ ಮೇಲಾಗಿದ್ದರೂ ಎಂದೂ ಅವನ ಕಣ್ಣು ಸೋಲುವುದಿಲ್ಲ. ಯುದ್ಧದಲ್ಲಿ ಮೂರುಲೋಕವು ನಿಂತಿದ್ದರೂ ದಾನಮಾಡುವಾಗ

ಮೇರುಪರ್ವತವೇ ಎದುರಿಗಿದ್ದರೂ ತನ್ನ ಶೌರ್ಯಕ್ಕೂ ಔದಾರ್ಯಕ್ಕೂ ಇದು ಸಾಲದೆಂದು ಪ್ರಿಯಗಳ್ಳನು ಚಿಂತಿಸುವನು. ಇತರ ಮಹಾಸಾಮಂತರು ಸ್ವಸ್ತ್ಯಾದಿ ಬಿರುದುಗಳನ್ನು ಹೊಗಳಿಸಿಕೊಳ್ಳುವುದರಲ್ಲಿ ಸಮಾನರಾಗುತ್ತಾರೆಯೇ ವಿನಾ ಗುಣದಲ್ಲಿ ಸಮಾನರಾಗಲಾರರು.

ಈ ಗುಣಾರ್ಣವನು ತ್ಯಾಗದ ಕಂಭವನ್ನು ನಿಲ್ಲಿಸಿ ವೀರದ ಶಾಸನವನ್ನು ಸ್ಥಾಪಿಸಿ ಅಧೀನರಾಗದ ರಾಜರನ್ನು ವಶಪಡಿಸಿಕೊಂಡು ಮೂರು ಲೋಕಗಳಲ್ಲಿ ಯಶಸ್ಸಿಗೆ ಆಕರರಾಗಿದ್ದ ಬದ್ದೆಗದೇವ ಮತ್ತು ನರಸಿಂಹರಿಗಿಂತ ತ್ಯಾಗದಲ್ಲಿಯೂ ವೀರದಲ್ಲಿಯೂ ನಾಲ್ಕು ಬೆರಳಷ್ಟು ಉನ್ನತನಾಗಿದ್ದಾನೆ. ಪಂಪನ ಪ್ರಕಾರ ಚಾಳುಕ್ಯ ವಂಶವೃಕ್ಷವನ್ನು ಈ ರೀತಿ ಗುರುತಿಸಬಹುದು.

೧. ಯುದ್ಧಮಲ್ಲ-ಸಪಾದ ಲಕ್ಷ ರಾಜ್ಯವನ್ನು ಆಳುತ್ತಿದ್ದನು, ಪ್ರತಿದಿನವೂ ಐನೂರು ಆನೆಗಳನ್ನು ಎಣ್ಣೆಯಲ್ಲಿ ಮೀಯಿಸುತ್ತಿದ್ದನು.

೨. ಅರಿಕೇಸರಿ, ವೆಂಗಿಯ ಪ್ರಧಾನನೊಡನೆ ನಿರುಪಮರಾಜ್ಯವನ್ನು ಮುತ್ತಿದನು.

೩. ನರಸಿಂಹ ೪. ಭದ್ರದೇವ

೫. ದುಗ್ಧಮಲ್ಲ - ಯುದ್ಧಮಲ್ಲ

೬. ಬದ್ದೆಗ-ಭದ್ರದೇವ

೧. ೪೨ ಕಾಳಗಗಳನ್ನು ಜಯಿಸಿದನು.
೨. ಸೋಲದ ಗಂಡನೆಂಬ ಬಿರುದನ್ನುಳ್ಳವನು.
೩. ಭೀಮನನ್ನು ನೀರಿನಲ್ಲಿ ನುಗ್ಗಿ ಹಿಡಿದನು.

೭. ಮುಗ್ಧಮಲ್ಲ (ಯುದ್ಧಮಲ್ಲ.)

೮. ನರಸಿಂಹ-ಕಲಿನರಸಿಂಪ-ನರಸಿಂಪ-ನರಗ.

೧. ಸುಭದ್ರ ಮುನಿಯ ಪ್ರತಿಬಿಂಬ
೨. ಲಾಳನನ್ನು ಅಡಿಗೆರಗಿಸಿದನು
೩. ಸಪ್ತಮಾಲವ ಮುಖ್ಯರನ್ನು ಸೋಲಿಸಿದನು
೪. ಘೂರ್ಜರ ರಾಜ ಸೈನ್ಯವನ್ನು ಸೋಲಿಸಿ ಗಂಗಾ ಜಲದಲ್ಲಿ ಕುದುರೆಯನ್ನು ಮೀಯಿಸಿದನು.
೫. ಮಹೀಪಾಲನನ್ನು ಓಡಿಸಿದನು
೬. ಇವನ ಮಿತ್ರನಾದ ಸಂಗನನ್ನು ನಾಶಪಡಿಸಿದನು.
೭. ಇವನ ಹೆಂಡತಿ ಜಾಕವ್ವೆ

೯. ಅರಿಕೇಸರಿ-ಅರಿಗ-ಗೊಜ್ಜಿಗನಿಂದ ವಿಜಯಾದಿತ್ಯನನ್ನು ರಕ್ಷಿಸಿದ

೧೦. ಬದ್ದೆಗ-ಅರಿಕೇಸರಿಯ ಹಿರಿಯ ಮಗ, ರಾಜಧಾನಿ ಗಂಗಾಧಾರಾ (ಯಶಸ್ತಿಲಕದಿಂದ) ಫ್ಲೀಟರು ಇದರಲ್ಲಿ ಉಕ್ತವಾಗಿರುವ ಕೆಲವು ಸಂಗತಿಗಳಲ್ಲಿ ತಮ್ಮ ಭಿನ್ನಾಭಿಪ್ರಾಯಗಳನ್ನು ಸೂಚಿಸಿದ್ದಾರೆ. (Dynasties of the Canarese Districts) ಎಂಬ ಗ್ರಂಥದಲ್ಲಿ. ಅವುಗಳನ್ನು ಹೀಗೆ ಸಂಗ್ರಹಿಸಬಹುದು : ನರಸಿಂಹ ಭದ್ರದೇವರು ಏಕವ್ಯಕ್ತಿಗಳು - (ಮುಂದಿನ ಸಂಶೋಧನೆಯಿಂದ ಇದು ಸರಿಯಲ್ಲವೆಂದು ಸಿದ್ಧಾಂತವಾಗಿದೆ) ವಂಶವೃಕ್ಷದಲ್ಲಿ ಬರುವ ನರಸಿಂಹನು ಲಾಳನನ್ನು ಸೋಲಿಸಿದುದನ್ನು ಅವರು ಹೇಳಿಲ್ಲ. ಸಂಗನನ್ನು ಸೋಲಿಸಿದುದೂ ಅವರಿಂದ ಉಕ್ತವಾಗಿಲ್ಲ. ಆದರೆ ರೈಸರು ತಮ್ಮ ಪಂಪಭಾರತದ ಪೀಠಿಕೆಯ ನಾಲ್ಕನೆಯ ಪುಟದ ಅಡಿಟಿಪ್ಪಣಿಯಲ್ಲಿ ಇದನ್ನು ನಮೂದಿಸಿದ್ದಾರೆ. ಫ್ಲೀಟರು ಇವನ ಹೆಂಡತಿಯು 'ಚಂದ್ರಾನನೆ' ಎಂದು ಹೇಳುತ್ತಾರೆ. ರೈಸರು 'ಜಾತವ್ವೆ' ಎಂದಿದ್ದಾರೆ (ಪಂ.ಭಾ.ಪೀಠಿಕೆ). ರಾ. ನರಸಿಂಹಾಚಾರ್ಯರು ಜಾಕವ್ವೆ ಎಂದೇ ಹೇಳಿದ್ದಾರೆ. ಮೂಲದಲ್ಲಿ ಆ ಭಾಗವು ಉಕ್ತವಾಗಿದೆ. ಚಂದ್ರಾನನಾ ಎಂಬುದು ವಿಶೇಷಣವಿರಬಹುದು. ಅರಿಕೇಸರಿಯ ತಂದೆಯ ಹೆಸರು ಯುದ್ಧಮಲ್ಲನೆಂದು ಫ್ಲೀಟರು ಹೇಳುತ್ತಾರೆ. ಇದು ಸರಿಯಲ್ಲ. ಏಕೆಂದರೆ ಪಂಪಭಾರತ, ಪರಭಣಿ ತಾಮ್ರಶಾಸನ ವೇಮಲುವಾಡಶಾಸನಗಳಲ್ಲಿ 'ನರಸಿಂಹ' ಎಂದೇ ಹೇಳಿದೆ - ಬದ್ದೆಗನು ಅರಿಕೇಸರಿಯ ಮೊದಲನೆಯ ಮಗನೆಂದು ಸೋಮದೇವನು ತನ್ನ 'ಯಶಸ್ತಿಲಕಚಂಪು'ವಿನಲ್ಲಿ ತಿಳಿಸಿದ್ದಾನೆ. ಆದುದರಿಂದ ಇವನಿಗೆ ಇನ್ನೂ ಇತರ ಮಕ್ಕಳಿದ್ದಿರಬಹುದೆಂದು ಊಹಿಸಲು ಅವಕಾಶವಿದೆ. ಆದರೆ ಪರಭಣಿಯ ತಾಮ್ರ ಶಾಸನದಲ್ಲಿ ಭದ್ರದೇವನು ಅರಿಕೇಸರಿಯ ಒಬ್ಬನೇ ಮಗನೆಂದು ಉಕ್ತವಾಗಿದೆ.

ಪಂಪಭಾರತದಲ್ಲಿ ಬರುವ ಚಾಳುಕ್ಯವಂಶವೃಕ್ಷಕ್ಕೆ ಒಂದನೇ ಅರಿಕೇಸರಿಯ ಕೊಲ್ಲೇಪಾರಾ ದಾನಪತ್ರವೂ ಎರಡನೆಯ ಅರಿಕೇಸರಿಯ ವೇಮಲವಾಡ ಶಿಲಾ ಲೇಖನವೂ ಮೂರನೆಯ ಅರಿಕೇಸರಿಯ ಪರಭಣಿ ತಾಮ್ರಶಾಸನವೂ ಉಪಷ್ಟಂಭಕವಾಗಿವೆ. ಇವುಗಳಲ್ಲಿರುವ ಈ ಭಾಗವನ್ನು ಮುಂದಿನ ರೀತಿಯಲ್ಲಿ ಚಿತ್ರಿಸಬಹುದು.

## ಪರಭಣಿಯ ತಾಮ್ರಶಾಸನ

### ಚಾಳುಕ್ಯವಂಶ (ಆದಿತ್ಯಭವ)



೫. ಯುದ್ಧಮಲ್ಲ

೬. ಬದ್ದೆಗ — ೧. ಸಂಗಮನಿಗೆ ತೊಂದರೆ ಕೊಟ್ಟನು
೨. ಭೀಮನನ್ನು ಜಲಯುದ್ಧದಲ್ಲಿ ಸೋಲಿಸಿದನು

೭. ಯುದ್ಧಮಲ್ಲ

೮. ನರಸಿಂಗ

೯. ಅರಿಕೇಸರಿ-ಇವನ ಹೆಂಡತಿ ಪ್ರಖ್ಯಾತ ರಾಷ್ಟ್ರಕೂಟರ ಲೋಕಾಂಬಿಕೆ

೧೦. ಭದ್ರದೇವ-ಬದ್ದೆಗ-ಶುಭಧಾಮ ಜಿನಾಲಯವನ್ನು ಕಟ್ಟಿಸಿದನು

೧೧. ಅರಿಕೇಸರಿ — ೧. ರಾಜಧಾನಿ ಲೆಂಬುಳಪಾಟಕ
೨. ಸೋಮದೇವಸೂರಿಗೆ ದಾನ ಕೊಟ್ಟನು

## ವೇಮಲವಾಡ ಶಿಲಾಶಾಸನ

### ಚಾಲುಕ್ಯಕುಲ

೧. ವಿನಯಾದಿತ್ಯ ಅಥವಾ ಯುದ್ಧಮಲ್ಲ

೧. ಸಪಾದ ಲಕ್ಷ ರಾಜ್ಯವನ್ನು ಆಳುತ್ತಿದ್ದನು.
೨. ಆನೆಗಳನ್ನು ಎಣ್ಣೆಯಲ್ಲಿ ಮೀಯಿಸುತ್ತಿದ್ದನು.
೩. ಚಿತ್ರಕೂಟವನ್ನು ವಶಮಾಡಿಕೊಂಡನು.

೨. ಅರಿಕೇಸರೀಶ-ಬಲದಿಂದ ವೆಂಗಿ ದೇಶವನ್ನು ತೆಗೆದುಕೊಂಡನು

೩. ನರಸಿಂಹವರ್ಮ-ಅಥವಾ ರಾಜಾದಿತ್ಯ (?)

೪. ಯುದ್ಧಮಲ್ಲ

೫. ನರಸಿಂಹ ದೇವ-ಗುರ್ಜರಾಜ ಸೈನ್ಯವನ್ನು ಜಯಿಸಿದನು, ಏಳು ರಾಜರನ್ನು ಜಯಿಸಿದನು

೬. ಅರಿಕೇಸರಿ-ಗೋವಿಂದ (ಗೊಜ್ಜಿಗ) ನಿಂದ ಬಿಜ್ಜನನ್ನು ರಕ್ಷಿಸಿದನು. ಹೆಂಡತಿ ರೇವಕ್ಕ (?)

# ಕೊಲ್ಲೇಪಾರಾ ದಾನಪತ್ರ

ಚಾಳುಕ್ಯ ವಂಶ

|

ರಣವಿಕ್ರಮಸತ್ಯಾಶ್ರಯ ಪೃಥ್ವೀಪತಿ ಮಹಾರಾಜ ವಿನಯಾದಿತ್ಯ ಯುದ್ಧಮಲ್ಲ

|

ಅರಿಕೇಸರಿ

ಮಧ್ಯಯುಗದ ಇತಿಹಾಸದಲ್ಲಿ ನಾಲ್ಕು ಚಾಲುಕ್ಯ ಕುಲಗಳಿದ್ದವು. ಒಂದನೆಯದು ಬಾದಾಮಿಯದು. ಎರಡನೆಯದು ಕಲ್ಯಾಣಿಯದು. ಮೂರನೆಯದು ವೆಂಗಿಯದು. ನಾಲ್ಕನೆಯದು ಪಂಪ ಮತ್ತು ಸೋಮದೇವರಿಂದ ಉಕ್ತವಾದುದು. ಇವುಗಳಲ್ಲಿ ಬಾದಾಮಿಯ ಚಾಳುಕ್ಯಕುಲದಿಂದ ವೆಂಗಿಯ ಚಾಳುಕ್ಯಕುಲವು ಉತ್ಪನ್ನವಾಯಿತು. ಕಲ್ಯಾಣಿಯ ಚಾಲುಕ್ಯರು ಬಾದಾಮಿಯ ಚಾಲುಕ್ಯರ ವಂಶಜರೆಂದು ತಾವೇ ಹೇಳಿಕೊಂಡಿದ್ದಾರ. ಬಾದಾಮಿಯ ಚಾಲುಕ್ಯರ ಕಾಲ ಮತ್ತು ಕಲ್ಯಾಣಿಯ ಚಾಲುಕ್ಯರ ಕಾಲಗಳಿಗೆ ಮಧ್ಯೆ ರಾಷ್ಟ್ರಕೂಟರು ಆಳಿದರು. ಈ ಎರಡು ಕುಲಗಳನ್ನು ಜೋಡಿಸಿದವನು ಯಾರು ಎಂಬುದು ನಿಶ್ಚಿತವಾಗಿ ತಿಳಿಯದಿದ್ದರೂ ಈ ಎರಡು ಕುಲಗಳಿಗೂ ಸಂಬಂಧವಿತ್ತೆಂದು ಹೇಳುವುದಕ್ಕೆ ಆಧಾರ ಸಿಗುತ್ತದೆ. ವೆಂಗಿಯೂ ಇವುಗಳ ಶಾಖೆಗೇ ಸೇರಿರಬಹುದು. ಇವರ ಸ್ಥಳವೂ ಲಕ್ಷ್ಮೇಶ್ವರಕ್ಕೆ ಅಕ್ಕಪಕ್ಕದಲ್ಲಿದ್ದಿರಬಹುದು.

## ಅನುಬಂಧ-೨

### ಪಂಪಭಾರತದ ಅಧ್ಯಯನಕ್ಕೆ ಸಹಾಯಕವಾಗಿರುವ ಗ್ರಂಥಗಳು ಹಾಗೂ ಲೇಖನಗಳು*

೧. ಆದಿಪುರಾಣ ಸಂಗ್ರಹ (ಉಪೋದ್ಘಾತ) - ಸಂ. ಎಲ್. ಗುಂಡಪ್ಪ (೧೯೫೫)
೨. ಕರ್ಣನ ಮೂರು ಚಿತ್ರಗಳು-ಶಂ.ಬಾ.ಜೋಶಿ (೧೯೪೯)
೩. ಕನ್ನಡ ಕಾವ್ಯಗಳಲ್ಲಿ ಕಿರಾತರ್ಜುನ ಪ್ರಸಂಗ-ದೇವೇಂದ್ರಕುಮಾರ ಹಕಾರಿ (೧೯೬೩)
೪. ಕನ್ನಡ ರತ್ನತ್ರಯ-ಎನ್. ಅನಂತರಂಗಾಚಾರ್ (೧೯೫೯)
೫. ನಾಡೋಜ ಪಂಪ- ಮುಳಿಯ ತಿಮ್ಮಪ್ಪಯ್ಯ (೧೯೩೮)
೬. ಪಂಪ-ತೀ.ನಂ.ಶ್ರೀಕಂಠಯ್ಯ (೧೯೪೨)
೭. ಪಂಪ-ಒಂದು ಅಧ್ಯಯನ - ಬೆಂಗಳೂರು ವಿಶ್ವವಿದ್ಯಾಲಯ
೮. ಪಂಪಕವಿ ವಿರಚಿತ ಆದಿಪುರಾಣಂ (ಪಂಪಕವಿವಿರಚಿತಂ) - ಸಂ. ಎಸ್.ಜಿ. ನರಸಿಂಹಾಚಾರ್ (೧೯೦೦)
೯. ಪಂಪನ ಕರ್ಣರಸಾಯನ - ಸಂಕ್ಷಿಪ್ತ ಸರಳಗದ್ಯಾನುವಾದ - ಶ್ರೀಧರ (೧೯೫೯)
೧೦. ಪಂಪನ ಕಲಿಕರ್ಣ - ಜಿ. ಬ್ರಹ್ಮಪ್ಪ (೧೯೫೨)
೧೧. ಪಂಪ-ಸನ್ನಯ - ಒಂದು ಸಮೀಕ್ಷೆ - ಕೆ. ವೆಂಕಟರಾಮಪ್ಪ
೧೨. ಪಂಪಭಾರತ- ಉಪೋದ್ಘಾತ ಸಂ.ಬೆ. ವೆಂಕಟನಾರಣಪ್ಪ (೧೯೩೦)
೧೩. ಪಂಪನ ಭರತ-ಬಾಹುಬಲಿ - ಜಿ. ಬ್ರಹ್ಮಪ್ಪ, ಕೃಷ್ಣರಾವ್, ಕೆ.ಎಂ. (೧೯೫೨)
೧೪. ಪಂಪ ಭಾರತ ದೀಪಿಕೆ - ಡಾ. ಡಿ.ಎಲ್. ನರಸಿಂಹಾಚಾರ್ (೧೯೭೨)
೧೫. ಪಂಪ ಮಹಾಕವಿ - ಸಂ.ರಂ. ಶ್ರೀ. ಮುಗಳಿ (೧೯೭೦)
೧೬. ಪಂಪಮಹಾಕವಿ ವಿರಚಿತಂ ಆದಿಪುರಾಣಂ ಉಪೋದ್ಘಾತ ಸಂ : ಕೆ.ಜಿ. ಕುಂದಣಗಾರ, ಎ.ಪಿ. ಚೌಗುಲೆ (೧೯೫೩)
೧೭. ಭರತೇಶನ ನಾಲ್ಕು ಚಿತ್ರಗಳು - ಮಿರ್ಜಿ ಅಣ್ಣಾರಾಯ (೧೯೫೪)
೧೮. ಮಹಾಕವಿ ಪಂಪ ಹಾಗೂ ಅವನ ಕೃತಿಗಳು (ಕ.ವಿ.ವಿ.) (೧೯೬೬)
೧೯. ಯುಗಾಂತ - ಇರಾವತಿಕರ್ವೆ
೨೦. ವಚನಭಾರತ- ಎ.ಆರ್. ಕೃಷ್ಣಶಾಸ್ತ್ರಿ
೨೧. ವ್ಯಾಸ, ಪಂಪ, ನಾರಣಪ್ಪ - ಇವರ ಮಹಾಭಾರತಗಳು (ಒಂದು ತೌಲನಿಕ ವಿಮರ್ಶೆ) ನ. ಸುಬ್ರಹ್ಮಣ್ಯಂ (ಮೈಸೂರು ವಿಶ್ವವಿದ್ಯಾಲಯದ ಮಹಾಪ್ರಬಂಧ) (೧೯೫೧)

---

* ಡಾ. ಮುಗಳಿಯವರ 'ಕನ್ನಡ ಸಾಹಿತ್ಯ ಚರಿತ್ರೆ'ಯನ್ನು ಈ ಸಂದರ್ಭದಲ್ಲಿ ಉಪಯೋಗಿಸಿಕೊಳ್ಳಲಾಗಿದೆ.

೨೨. ಶ್ರೀ ಕವಿ ಪಂಪ-ಜಿ.ಪಿ. ರಾಜರತ್ನಂ (೧೯೫೧)

೨೩. ತಪೋನಂದನ - ಕುವೆಂಪು

೨೪. ಪರಿಶೀಲನ - ಜಿ.ಎಸ್. ಶಿವರುದ್ರಪ್ಪ

೨೫. Discriptive Grammer pf Pampa Bharata-(Osmania- University Doctorate Thesis) - B. Ramachandra Rao

೨೬. Mahakavi Pampa - V. Sitaramaiah - ೧೯೬೭

೨೭. ಪಂಪಭಾರತ ಕಥಾಲೋಕ - ಆರ್.ಎಲ್. ಅನಂತರಾಮಯ್ಯ

೨೮. ಕನ್ನಡ ಸಾಹಿತ್ಯ ಚರಿತ್ರೆ - ಬಿ.ಎಂ. ಶ್ರೀಕಂಠಯ್ಯ, ಕನ್ನಡ ಕೈಪಿಡಿ ಭಾಗ-೨

೨೯. ಕನ್ನಡ ಕವಿ ಚರಿತೆ - ಆರ್.ನರಸಿಂಹಾಚಾರ್ಯ.

೩೦. ಸಂಕ್ಷಿಪ್ತ ಕನ್ನಡ ಸಾಹಿತ್ಯ ಚರಿತ್ರೆ - ಮರಿಯಪ್ಪ ಭಟ್ಟ, ಎಂ.

೩೧. ಜನಪ್ರಿಯ ಕನ್ನಡ ಸಾಹಿತ್ಯ ಚರಿತ್ರೆ - ಶ್ರೀ ಟಿ.ಎಸ್. ಶಾಮರಾವ್ ಮತ್ತು ಗಾ. ಮೇ. ರಾಜೇಶ್ವರಯ್ಯ

೩೨. ಕನ್ನಡ ಸಾಹಿತ್ಯ ಚರಿತ್ರೆ - ಎನ್.ಕೆ. ಕುಲಕರ್ಣಿ

೩೩. ಕನ್ನಡ ಸಾಹಿತ್ಯ ಚರಿತ್ರೆ - ಕೆ. ವೆಂಕಟರಾಮಪ್ಪ, ಪ್ರಚಾರ ಪುಸ್ತಕಮಾಲೆ ಮೈಸೂರು ವಿಶ್ವವಿದ್ಯಾನಿಲಯ

೩೪. History of Kannada Literature - R. Narasimhacharya

೩೫. History of Kannada Literature E.P. Rice (Heritage of India Series)

೩೬. History of Kannada Literature - Dr. R.S. Mugali

## ಲೇಖನಗಳು

೧. ಅಕ್ಷಯವಸ್ತ್ರ - ಜಿ.ಎಸ್. ಶಿವರುದ್ರಪ್ಪ (ಪ್ರ.ಕ. ೪೨.-೨,೩)

೨. ಅಬ್ಬಣಬ್ಬೆ - ಮಗಳಲ್ಲ, ಮೊಮ್ಮಗಳು- ಎಂ.ಎಂ. ಕಲಬುರ್ಗಿ (ಕ.ನು. ೩೨-೨)

೩. ಅರಿಕೇಸರಿ ಪಂಪರು - ದೇ. ಪಾಂಡುರಂಗರಾಯರು (ಪ್ರಾಚೀನ ಕರ್ನಾಟಕ ೨-೧)

೪. ಅರಿಕೇಸರಿಯೂ ಪಂಪನ ಯುಗವೂ - ರಾ.ಸ್ವಾ. ಪಂಚಮುಖಿ (ಕ.ಸಾ.ಪ. ೩೧-೨)

೫. ಅಸಗ, ಪೊನ್ನ, ಪಂಪ-ಚಂದ್ರಕಾಂತ ನಿಂಗರಾಜ ಪಾಟೀಲ (ಕ.ಸಾ.ಪ. ೧೭-೩)

೬. ಆದಿಕವಿ ಪಂಪ - ಕೆ.ಜಿ. ಕುಂದಣಗಾರ (ಸರ್ವಧರ್ಮ ಸಮ್ಮೇಳನ ರಜತ ಮಹೋತ್ಸವ ಸಂಚಿಕೆ)

೭. ಆದಿಕವಿಯನ್ನು ಕುರಿತು - ಜೈ (ಕನ್ನಡ ನುಡಿ ೨-೯)

೮. ಆದಿಕವಿ ಪಂಪನ ಜೀವನ ಚರಿತ್ರೆಯಲ್ಲಿಯ ಕೆಲವು ಅಂಶಗಳು-ವಿ.ಜಿ. ಕುಲಕರ್ಣಿ (J.K.U. XI-VI)
೯. ಆದಿಪಂಪನ ಜೀವನವಿಚಾರ - ವಿ.ಜಿ. ಕುಲಕರ್ಣಿ (ಕರ್ಮವೀರ ೪೧-೫೧)
೧೦. ಆದಿಪಂಪನ ವಿಕ್ರಮಾರ್ಜುನ ವಿಜಯ - ಬಸವಲಿಂಗಯ್ಯ ಇಟಗಿ (ತಾವರೆ ೧೦-೧)
೧೧. ಆದಿಪಂಪನು - ಅಚ್ಚಗನ್ನಡಿಗನೇ - ಪಾಂ. ಭೀ. ದೇಸಾಯಿ, (ಜ.ಕ. ೧೧-೧೨)
೧೨. ಆದಿಪಂಪನೂ ಸಮುದಾಯದ ಮಾಘಣಂದಿಯೂ - ಕೆ.ಜಿ.ಕುಂದಣಗಾರ (ಜ.ಕ. ೪-೧೨)
೧೩. ಆದಿಪಂಪ ಮಹಾಕವಿಯ ವಿಷಯವು - ಎಸ್. ತಿಮ್ಮಪ್ಪಯ್ಯಶಾಸ್ತ್ರೀ (ಕ.ಸಾ.ಪ. ೨-೨)
೧೪. ಆದಿಪುರಾಣ -ಎಚ್ ಶೇಷಯ್ಯಂಗಾರ್ (ಜನವಾಣಿ ೧೪-೩).
೧೫. ಆದಿಪುರಾಣದ ನಾಯಕನು - ಕೆ. ಭುಜಬಲಿಶಾಸ್ತ್ರಿ (ಶ.ಸಾ. ೫-೧೦)
೧೬. ಆದಿಪುರಾಣದ ರಚನಾಕೌಶಲವನ್ನು ಕುರಿತೊಂದು ಅಪಪಾತ - ಎಂ. ಗೋವಿಂದ ಪೈ (ವಾಗ್ಭೂಷಣ ೧-೧)
೧೭. ಆದಿಪುರಾಣದ ರಮ್ಯತೆ - ಶೇಷ. ಭೀ. ಪಾರಿಶವಾಡ (ಕ.ಸಾ.ಪ. ೮-೩)
೧೮. ಆದಿಪುರಾಣದಲ್ಲಿ ಧರ್ಮ - ಕಾವ್ಯಧರ್ಮಗಳ ಸಮನ್ವಯ - ವಿ. ಅಮೃತಾ (ಸವಿನೆನಪು. ಪು. ೨೪೬)
೧೯. ಆದಿಪುರಾಣದಲ್ಲಿ ವೈರಾಗ್ಯ ನಿರೂಪಣೆ - ಸಿ.ಪಿ.ಕೆ. (ಕನ್ನಡ ಚತುರ್ಮುಖ ಪು.೧)
೨೦. ಆದಿಪುರಾಣವು - ಶೇಷ. ಭೀ. ಪಾರಿಶವಾಡ (ಪ್ರಬೋಧ ೨-೫, ೬)
೨೧. 'ಈ ಸಭೆಯೊಳ್ ಅಗ್ರಪೂಜೆಗಾರ್ ತಕ್ಕರ್' - ಪಂಪಭಾರತದ ಒಂದು ಪ್ರಸಂಗ - ಎಂ. ಎಸ್. ಸ್ವಾಮಿ (ಕ.ನು. ೩೧-೧೦)
೨೨. ಒಂದು ವಿವೇಚನೆ : ರಕ್ಕಸಿಯರು (ರು?) ಕಂಡ ಕುಂಬಳ - 'ಕುಶಲಾನುಜ' (ಕ.ನು. ೩೨-೩)
೨೩. ಒಂದೆ ಗರಡಿಯೊಳೋದಿದ ಮಾನಸರ್ - ಸಿ.ಪಿ.ಕೆ. (ಕಾವ್ಯಾರಾಧನ ಪು.೧೦)
೨೪. ಕರ್ಣನ ಒಂದು ಚಿತ್ರ - (ಕಾವ್ಯಪಾತ್ರಪರಿಚಯ)- ಎಂ.ವಿ. ಸೀತಾರಾಮಯ್ಯ (ಬಾಳಿನ ಬುತ್ತಿ ಪು. ೧೦೫)
೨೫. ಕರ್ಣನ ನಾಮಾಂತರಗಳು - ಕೆ. ವೆಂಕಟರಾಯಾಚಾರ್ಯ (ಪ್ರ.ಕ. ೪೪-೧)
೨೬. ಕರ್ಣನ ವಿನಯಶ್ರೀ - ಪ್ರಭುಶಂಕರ (ಪ್ರ.ಕ. ೩೦-೨)
೨೭. ಕರ್ಣನ ಸ್ವಾಮಿನಿಷ್ಠೆ - ಪುಟ್ಟಬಸವೇಗೌಡ (ಕ.ನು. ೩೨-೧)
೨೮. ಕರ್ಣಪಾತ್ರದ ತೊಡಕು - ಎಸ್.ವಿ.ರಂಗಣ್ಣ (ಹೊನ್ನ ಶೂಲ - ಪು. ೬೪)

೨೯. ಕರ್ನಾಟಕ ಕವಿಕುಲಾಗ್ರಣಿಯಾದ ಪಂಪಮಹಾಕವಿ -ಎನ್. ಅನಂತರಂಗಾಚಾರ್ - (ಕ.ಸಾ.ಪ. ೧೫-೪)
೩೦. ಕನಕನ ಬೇಳ್ವೆ - ಒಂದು ಸಮಾಲೋಚನೆ - ನ. ಸುಬ್ರಹ್ಮಣ್ಯಂ (ಪ್ರ.ಕ. ೪೪-೪)
೩೧. ಕನ್ನಡ ಸಾಹಿತ್ಯದಲ್ಲಿ ಬಾಹುಬಲಿಯ ಕಲ್ಪನೆ - 'ಶಮನ' (ಪ್ರ.ಕ. ೩೦-೪)
೩೨. ಕವಿ ಕಂಡು ನಾಡು - ಬಿ.ಎಂ. ಶ್ರೀಕಂಠಯ್ಯ (ಕ.ನು. ೧-೫)
೩೩. ಕಳಶಜನಿಂ ಬಳಿಕ್ಕ ಕರ್ಣಂಗೆ - ಕೆ. ವೆಂಕಟರಾಮಪ್ಪ (ಪ್ರ.ಕ. ೪೯-೨)
೩೪. "ಕಾವ್ಯಧರ್ಮಮಂ - ಧರ್ಮಮುಮಂ" - ಎಂ. ರಾಮಕೃಷ್ಣ, (ಪ್ರ.ಕ. ೫೧-೩)
೩೫. ಕುಲವೆಂಬುದುಂಟೆ ಬೀರಮೆ ಕುಲಮಲ್ಲದೆ - ತಿ.ತಾ. ಶರ್ಮ (ಕ.ನು. ೧೧-೪)
೩೬. ಕೆಲವು ನುಡಿಮುತ್ತುಗಳು - ಕೆ. ವೆಂಕಟರಾಯಾಚಾರ್ಯ (ಸಾಹಿತ್ಯದ ಹಿನ್ನೆಲೆ ಪು. ೮೫)
೩೭. ಗದಾಯುದ್ಧದಲ್ಲಿ ಪಂಪನು ಚಿತ್ರಿಸಿರುವ ದುರ್ಯೋಧನ - ಯು. ಕೆ. ಸುಬ್ಬರಾಯಾಚಾರ್ (ಪ್ರ.ಕ. ೧೨೯-೪)
೩೮. ಗಂಗಾಧರ ಶಾಸನ - ಒಂದು ಉತ್ತರ- ಎಂ.ಎಂ. ಕಲಬುರ್ಗಿ (ಕ.ನು. ೩೨-೬,೭)
೩೯. ಗಂಗಾಧರ ಶಾಸನ - ಕೈಗೆ ಕನ್ನಡಿ - ಪಾಂ. ಭೀ. ದೇಸಾಯಿ (ಕ.ನು. ೩೨-೪,೫)
೪೦. ಗಂಗಾಧರಂ ಶಾಸನ - ಕೆಲವು ಹೊಸ ವಿಚಾರಗಳು - ಎಂ.ಎಂ. ಕಲಬುರ್ಗಿ (ಕ.ನು. ೩೨-೧೧)
೪೧. ಚಿತ್ರಗಾರ ಪಂಪ-ಶಾಂತಿ (ಪ್ರ.ಕ. ೩೪-೧)
೪೨. ಚಿತ್ರಗಾರ ಪಂಪ - ಎಸ್.ಜಿ. ಪ್ರಭಾಚಂದ್ರ (ಗುರುದೇವ ೨-೫, ೬-೭)
೪೩. ಜಿನವಲ್ಲಭನ ಗಂಗಾಧರದ ಶಿಲಾಶಾಸನ - ಅನು: ಸೀತಾರಾಮ ಜಾಗೀರದಾರ್ (ಪ್ರ.ಕ. ೫೦-೩)
೪೪. ಜಿನವಲ್ಲಭನ ಗಂಗಾಧರ ಶಾಸನವನ್ನು ಕುರಿತು ಓದುಗನೊಬ್ಬನ ಪ್ರಶ್ನೆಗಳು- ಸೀತಾರಾಮ ಜಾಗೀರದಾರ್ - ಕ.ನು. (೩೨-೪,೫)
೪೫. ಜಿನವಲ್ಲಭನ ಗಿರಿಶಾಸನ - ಪಾಂ. ಭೀ.ದೇಸಾಯಿ (ಕ.ನು. ೩೧-೩, ೪, ೫)
೪೬. ಜೈನ ಮನ್ವಂತರಗಳಲ್ಲಿ ಸಮಾಜವಿಕಾಸದ ಚಿತ್ರ (ಆದಿಪುರಾಣದಲ್ಲಿ ರೇಖಿಸಿದಂತೆ) - ದ.ರಾ. ಬೇಂದ್ರೆ (ಜೀವನ - ೧-೧)
೪೭. ತಿದ್ದುಪಡಿಯ ಗಡಿಬಿಡಿ - ಗಂಗಾಧರಂ ಶಾಸನ - ಪಾಂ.ಭೀ.ದೇಸಾಯಿ (ಕ.ನು. ೩೧-೮)
೪೮. ದ್ಯೂತಪ್ರಸಂಗ - ಬಸವಲಿಂಗಯ್ಯ ಮಲ್ಲಾಪುರ (ಪ್ರ.ಕ. ೪೪-೪)
೪೯. ದ್ರೌಪದಿಯ ಶ್ರೀಮುಡಿ - ಕುವೆಂಪು (ದ್ರೌಪದಿಯ ಶ್ರೀಮುಡಿ ಪು.೧)
೫೦. ನನ್ನ ಮೆಚ್ಚಿನ ಮಹಾಕವಿ ಪಂಪ - ತ.ಸು. ಶಾಮರಾಯ (ಮಧುರ ಕರ್ನಾಟಕ- ವಿಶೇಷ ಸಂಚಿಕೆ - ಸಂ: ನಂಜುಂಡಶಾಸ್ತ್ರಿ)

೫೧. ನಮ್ಮ ರತ್ನತ್ರಯರ ವಿನಯ - ಜಿ.ಪಿ.ರಾಜರತ್ನಂ (ಕ.ಸಾ.ಪ. ೨೯-೧)
೫೨. ನೀಲಾಂಜನೆ - ಪಾ.ಶ. ಶ್ರೀನಿವಾಸ (ಉತ್ಥಾನ ೪-೧)
೫೩. ನೀಲಾಂಜನೆಯ ನೃತ್ಯದಿಂದ ಪುರುದೇವನ ವೈರಾಗ್ಯ- (ಪಂಪನ ಆದಿಪುರಾಣದಿಂದ) - ತಿರುಮಲರಾವ್ ದೇಸಾಯಿ ( ತಾವರೆ ೧೦-೧)
೫೪. (ನೆತ್ತಮನಾಡಿ....) ಶೇಷ. ಭೀ. ಪಾರಿಶವಾಡ (ಜಿನವಾಣಿ Before ೧೯೩೬)
೫೫. ನೆತ್ತಮನಾಡಿದರಾರು (ಉತ್ತರಕ್ಕೆ ತಮಿಳು ಭಾರತದ ನೆರವು) - ಕ.ವೆಂ. ರಾಘವಾಚಾರ್ (ಕ.ನು. ೨-೪)
೫೬. ನೆತ್ತವನ್ನಾಡಿದವನಾರು - ಮು. ತಿಮ್ಮಪ್ಪಯ್ಯ (ಜ.ಕ. ೧೪-೧)
೫೭. ನೆತ್ತವನ್ನಾಡಿದವರಾರು - ಡಿ. ರೇಣುಕಾಚಾರ್ಯ (ಜ.ಕ. ೧೪-೬)
೫೮. ನೆತ್ತವನ್ನಾಡಿದುದು ಯಾರೊಡನೆ - ಮುಳಿಯ ತಿಮ್ಮಪ್ಪಯ್ಯ (ಜ.ಕ. ೧೪-೫)
೫೯. ಪರಭಣಿಯ ತಾಮ್ರಶಾಸನ ಮತ್ತು ಪಂಪಭಾರತ - ಸಂಗ್ರಾ: ಎ.ಆರ್. ಕೃಷ್ಣಶಾಸ್ತ್ರೀ. ಬಿ.ವೆಂ. (ಪ್ರ.ಕ. ೧೫-೧)
೬೦. ಪಂಪ - ದೊ.ಲ. ನರಸಿಂಹಾಚಾರ್ (ಕ.ನು. ೧೦-೩೪)
೬೧. ಪಂಪಕವಿ ಮತ್ತು ಮೌಲ್ಯ ಪ್ರಸಾರ - ಡಾ. ಎಂ. ಚಿದಾನಂದಮೂರ್ತಿ (ಪ್ರ.ಕ. ೪೨-೧)
೬೨. ಪಂಪಕವಿಯ ಇತಿವೃತ್ತದ ವಿಚಾರ - ಸೀತಾರಾಮ ಜಾಗೀರ್‌ದಾರ್ (ಕ.ಸಾ.ಪ. ೫೪-೧)
೬೩. ಪಂಪಕವಿಯ ಎರಡು ಪದ್ಯಗಳು - ಹಂಪ ನಾಗರಾಜಯ್ಯ (ಪ್ರ.ಕ. ೪೬-೧)
೬೪. ಪಂಪಕವಿಯೂ ಚಾಳುಕ್ಯರೂ - ಕೆ. ವೆಂಕಟರಾಯಾಚಾರ್ಯ (ಸುಬೋಧ ೨೮-೬)
೬೫. ಪಂಪ ಕುಮಾರವ್ಯಾಸರಲ್ಲಿ ಕೃಷ್ಣ ದ್ರೌಪದಿಯರ ಚಿತ್ರ - ಜಿ. ವೆಂಕಟಸುಬ್ಬಯ್ಯ (ಶ್ರದ್ಧಾಂಜಲಿ ಪು. ೧೧೮)
೬೬. ಪಂಪ-ಕುಮಾರವ್ಯಾಸರಲ್ಲಿ ಸುಪ್ರತೀಕ ಪ್ರಸಂಗ - ಸಿ.ಪಿ.ಕೆ. (ಸವಿನೆನಪು ಪು. ೩೭೦)
೬೭. ಪಂಪನ ಅರಿಕೇಸರಿ - ಕೆ. ವೆಂಕಟರಾಮಪ್ಪ (ಪ್ರ.ಕ. ೪೮-೧)
೬೮. ಪಂಪನ ಆದಿಪುರಾಣ - ಓ.ಎಸ್. ಲಿಂಗಣ್ಣಯ್ಯ (ಶ.ಸಾ. ೨-೧೦)
೬೯. ಪಂಪನ ಆದಿಪುರಾಣ - ಎಸ್. ಆರ್. ಮಳಗಿ (ಪ್ರದೀಪ ೧-೩)
೭೦. ಪಂಪನ ಆದಿಪುರಾಣ ರಚನಾಕಾಲ - ಎಂ. ಗೋವಿಂದ ಪೈ (ಶ.ಸಾ.೩-೭)
೭೧. ಪಂಪನ ಆಶ್ರಯದಾತನಾದ ಅರಿಕೇಸರಿ (೩)ಯ ಕಾಲದ ಶಾಸನಗಳು (ಸಾರಾಂಶ) ಮೂಲ: J.A.H.R.S.VI - ೩, ೪, (ಕ.ಸಾ.ಪ. ೧೮-೪)

೭೨. ಪಂಪನ ಆಶ್ರಯದಾತನಾದ ಅರಿಕೇಸರಿಯ ವಂಶ - ಎನ್. ಲಕ್ಷ್ಮೀನಾರಾಯಣ ರಾವ್ (ಅಭಿವಂದನೆ ಪು. ೪೬೫)

೭೩. ಪಂಪನ ಆಶ್ರಯದಾತ ಯಾರು ? - ಕೆ. ವೆಂಕಟಾಚಾರ್ಯ (ಜಯಂತಿ ೧೬-೪)

೭೪. ಪಂಪನ ಎರಡು ಪದಗಳು - ಹಂಪನಾ (ಮುಕ್ತಿ ಶ್ರೀ ಪು. ೬೦) (೧೯೬೪)

೭೫. ಪಂಪನ ಕರ್ಣ - ವಿ. ಶ್ರೀರಂಗಾಚಾರ್ (ಪ್ರ.ಕ. ೨೩-೪)

೭೬. ಪಂಪನ ಕರ್ಣ - ಕೆ.ವಿ. ಪುಟ್ಟಪ್ಪ (ಅಭಿವಂದನೆ ಪು. ೩೫೫)

೭೭. ಪಂಪನ ಕರ್ಣ - ಮ. ಮಲ್ಲಪ್ಪ (ಜಿ.ಕ. ೩೨-೧೧)

೭೮. ಪಂಪನ ಕಾಲ, ದೇಶ ಹಾಗೂ ವ್ಯಕ್ತಿತ್ವ - ಬಿ.ಎಸ್. ಕುಲಕರ್ಣಿ (ಮಹಾಕವಿ ಪಂಪ ಹಾಗೂ ಅವನ ಕೃತಿಗಳು - ಪು ೧)

೭೯. ಪಂಪನ ಕಾವ್ಯಗಳ ಮಹಿಮೆ - ಪಾರಿಶವಾಡ ಶೇಷಗಿರಿರಾಯ (ಜ.ಕ. ೮-೧)

೮೦. ಪಂಪನ ಕೆಚ್ಚು - ಕೆ. ವೆಂಕಟರಾಮಪ್ಪ (ಸವಿನೆನಪು ಪು. ೩೫೬)

೮೧. ಪಂಪನ ಕೆಲವು ಉಪಮೆಗಳು - ಕೆ. ವೆಂಕಟರಾಯಾಚಾರ್ಯ (ಜೀವನ ೨೯-೭)

೮೨. ಪಂಪನ ಜ್ವಾಲಾಮುಖಿ - ಜಿ. ಬ್ರಹ್ಮಪ್ಪ (ಶ್ರದ್ಧಾಂಜಲಿ ಪು. ೮೭)

೮೩. ಪಂಪನ ತಮ್ಮ ಜಿನವಲ್ಲಭನ ಶಿಲಾಶಾಸನ - ಜಿ.ಎಸ್. ಗಾಯಿ (ಪ್ರ.ಕ. ೫೦-೪)

೮೪. ಪಂಪನ ದುರ್ಯೋಧನ - ರಾ. ಲಕ್ಷ್ಮೀನಾರಾಯಣ (ಜೀವನ ೩೦-೯)

೮೫. ಪಂಪನ ದುರ್ಯೋಧನ - ಸಂಗಮನಾಥ ಜಿ. ಹಂಡಿ (ಸಹೃದಯ ಸ್ಫುರಣ ಪು. ೩೨)

೮೬. ಪಂಪನ ದೃಷ್ಟಿಯಲ್ಲಿ ಕರ್ಣ - ಕಮಲಾ ಹಂಪನಾ (ದೇವಗಂಗೆ ಪು.೧)

೮೭. ಪಂಪನ ದೃಷ್ಟಿಯಲ್ಲಿ ಭರತ ಬಾಹುಬಲಿ - ರಂ.ಶ್ರೀ. ಮುಗಳಿ (ವಿಮರ್ಶೆಯ ವ್ರತ ಪು. ೧೦೪)

೮೮. ಪಂಪನ ದೃಷ್ಟಿಯಲ್ಲಿ ಸೂರ್ಯೋದಯ ಸೂರ್ಯಾಸ್ತ - ಬಸವರಾಜ ಶಿರೂರ - (ಜ.ಕ. ೪೪-೧)

೮೯. ಪಂಪನ ದೇಶಕಾಲಗಳ ವಿಚಾರ - ಎಂ. ಗೋವಿಂದ ಪೈ (ಭಾರತಿ ಅಕ್ಟೋ. ನವಂ. ೧೯೩೩)

೯೦. ಪಂಪನ ದೇಶಾಭಿಮಾನ - ಮ. ಮಲ್ಲಪ್ಪ (ಜ.ಕ. ೩೭-೧೨)

೯೧. ಪಂಪನ ದೇಸಿ - ಡಾ. ರಂ.ಶ್ರೀ. ಮುಗಳಿ (ಕ.ಸಾ.ಪ. ೩೦-೨)

೯೨. ಪಂಪನ ನಾಡಾವುದು - ಪಾಂ. ಭೀ. ದೇಸಾಯಿ (ಜ. ಕ. ೧೨-೫)

೯೩. ಪಂಪನ ನಾಲ್ಕು ಪದ್ಯಗಳು - ಹಂಪನಾ (ಗುರುದೇವ ೯-೧)

೯೪. ಪಂಪನನ್ನು ಕುರಿತ ಒಂದು ಅಪೂರ್ವ ಶಾಸನ - ಆರ್.ಸಿ. ಹಿರೇಮಠ J.K.U XI-II

೯೫. ಪಂಪನನ್ನು ಕುರಿತ ಗಂಗಾಧರಂ ಶಾಸನ - ಒಂದು ತಿದ್ದುಪಡಿ. ಎಂ.ಎಂ. ಕಲಬುರ್ಗಿ (ಕ.ನು. ೩೧-೪, ೫)

೯೬. ಪಂಪನ ಪುಷ್ಪೋದ್ಯಾನ - ಜಿ.ಎಸ್. ಶಿವರುದ್ರಪ್ಪ (ಪರಿಶೀಲನ ಪು.೧)

೯೭. ಪಂಪನ ಬನಸಿರಿಯಲ್ಲಿ ಬೆಡಗು - ಜಿ. ಬ್ರಹ್ಮಪ್ಪ (ಗುರುದೇವ - ೪-೯)

೯೮. ಪಂಪನ ಇಲ್ಲಿ ಮತ್ತು ಅಲ್ಲಿ (ಜೀವನ ೩೦ - ೨, ೩, ೬, ೭ ರಿಂದ ೧೧)

೯೯. ಪಂಪನ ಬಾಹುಬಲಿ - ಸಾ.ಶಿ. ಮರುಳಯ್ಯ (ಅಭಿಷೇಕ ಪು. ೫೭)

೧೦೦. ಪಂಪನಲ್ಲಿ ದರ್ಶನ ವಿಚಾರ - ಬಿ.ಎಸ್. ಕುಲಕರ್ಣಿ (J.K.U.V - II)

೧೦೧. ಪಂಪನಲ್ಲಿ ಭಗವದ್ಗೀತೆ - ಜಿ.ಎಸ್. ಶಿವರುದ್ರಪ್ಪ - (ಪ್ರ.ಕ. ೪೬-೩)

೧೦೨. ಪಂಪನಲ್ಲಿ ಭವ್ಯತೆ - ಕೆ.ವಿ. ಪುಟ್ಟಪ್ಪ (ಪಂಪಮಹಾಕವಿ. ಪು. ೧೫೪)

೧೦೩. ಪಂಪನ 'ಶಫರೋಚ್ಚಲಿತ ತರತ್ತರಂಗೆ' - ಎ.ಎಸ್. ಜಯರಾಂ (ಪ್ರಸಾದ ೧-೧)

೧೦೪. ಪಂಪನ ಶೈಲಿ - ಎಸ್.ವಿ. ರಂಗಣ್ಣ (ಶೈಲಿ ಭಾಗ -೧)

೧೦೫. ಪಂಪನ ಸಮರಸದೃಷ್ಟಿ - ಜಿ.ಎಸ್. ಶಿವರುದ್ರಪ್ಪ (ಪ್ರ.ಕ. ೩೮-೧)

೧೦೬. ಪಂಪನ ಹಿನ್ನೆಲೆ - ಕೆ.ಜಿ. ಕುಂದಣಗಾರ (ಕುಂದಣ. ಪು. ೭೦)

೧೦೭. ಪಂಪ ನಾಗವರ್ಮರ ಮೂಲದೇಶ - ಹ. ನಾರಾಯಣರಾವ್ (ವಾಗ್ಭೂಷಣ ೨೪-೧)

೧೦೮. ಪಂಪನು ಜಿನಸೇನಾಚಾರ್ಯರನ್ನು ಅನುಸರಿಸಿದ್ದಾನೆ. - ಕೆ.ಜಿ. ಕುಂದಣಗಾರ (ವಿವೇಕಾಭ್ಯುದಯ ೧೬-೪)

೧೦೯. ಪಂಪನು ಬೆಳಗಿರುವ ಲೌಕಿಕದ ಒಂದು ಚಿತ್ರ - ಎಸ್. ವಿ. ಪರಮೇಶ್ವರ ಭಟ್ಟ (ಸೀಳುನೋಟ. ಪು. ೧)

೧೧೦. ಪಂಪನು ಹೇಳಿದ ಭಗವದ್ಗೀತೆ - ಕೆ. ವೆಂಕಟರಾಯಾಚಾರ್ಯ (ಗುರುದೇವ ೧೦-೨)

೧೧೧. ಪಂಪನೂ ಡಂಬಳವೂ - ಕೆ. ವೆಂಕಟರಾಯಾಚಾರ್ಯ (ಶ.ಸಾ. ೧೫-೧೨)

೧೧೨. ಪಂಪನೂ ಸ್ತ್ರೀಶಿಕ್ಷಣವೂ - ಕೆ. ಭುಜಬಲಿಶಾಸ್ತ್ರಿ (ಕ.ಸಾ.ಪ. ೧೪-೩)

೧೧೩. ಪಂಪ ಪೊನ್ನ ನಾಗವರ್ಮರ ಅರಸರು - ಹ. ನಾರಾಯಣರಾಯರು (ಕ.ಸಾ.ಪ. ೩ - ೧,೨)

೧೧೪. ಪಂಪಭಾರತ - ಎಸ್.ವಿ. ರಂಗಣ್ಣ (ಕ.ಸಾ.ಪ. ೧೫-೩)

೧೧೫. ಪಂಪಭಾರತ - ತಿ.ಶ್ರೀ. ಶ್ರೀನಿವಾಸಾಚಾರ್ಯ (ಜ.ಕ. ೫-೧, ೨)

೧೧೬. ಪಂಪಭಾರತ - ತ.ಸು. ವೆಂಕಣ್ಣಯ್ಯ (ಪ್ರ.ಕ. ೧೫-೪)

೧೧೭. ಪಂಪಭಾರತ (ಹೊಸ ಪ್ರತಿ) (ಕ.ಸಾ.ಪ. ೯-೨)

೧೧೮. ಪಂಪಭಾರತ ಅಥವಾ ವಿಕ್ರಮಾರ್ಜುನ ವಿಜಯ - ರಂ.ಶ್ರೀ. ಮುಗಳಿ (ಜೀವನ, ೧-೬, ೮)

೧೧೯. ಪಂಪಭಾರತ (ಕರ್ಣನ ಪಾತ್ರ) - ಡಿ. ವಿ. ಶೇಷಗಿರಿರಾವ್ (ಜ.ಕ. ೧೩-೯, ೧೧)

೧೨೦. ಪಂಪಭಾರತ (ದುರ್ಯೋಧನನ ಪಾತ್ರ). ಡಿ.ವಿ.ಎಸ್. (ಜ.ಕ. ೧೩-೮)

೧೨೧. ಪಂಪಭಾರತ - ಗದಾಯುದ್ಧಗಳ ತುಲನೆ - ಶೇಷ, ಭೀ. ಪಾರಿಶವಾಡ (ಕ.ಸಾ.ಪ. ೧೦-೪)

೧೨೨. ಪಂಪಭಾರತ ಎರಡು ರಸಮಯ ಸನ್ನಿವೇಶಗಳು - ನ. ಸುಬ್ರಹ್ಮಣ್ಯಂ (ಸವಿನೆನಪು, ಪು. ೩೪೦)

೧೨೩. ಪಂಪಭಾರತದ ಒಂದು ಪದ್ಯದ ಸಮಸ್ಯೆ - ಆರ್. ರಾಜಪ್ಪ (ಸಿದ್ಧಗಂಗಾ ಜಾತ್ರಾ ವಿಶೇಷಾಂಕ. ಪು. ೯೫, ೧೯೭೦)

೧೨೪. ಪಂಪಭಾರತದ ಕರ್ಣ : ಒಂದೂಹೆ - ಕೆ. ವೆಂಕಟರಾಯಾಚಾರ್ (ಜಯಂತಿ. ೧೫-೬)

೧೨೫. ಪಂಪಭಾರತದ ಕೃಷ್ಣ : ಒಂದು ಚಿಕ್ಕ ಟಿಪ್ಪಣಿ - ತೀ.ನಂ. ಶ್ರೀಕಂಠಯ್ಯ (ಸಮಾಲೋಕನ, ಪು. ೯೬)

೧೨೬. ಪಂಪಭಾರತದ ಕೆಲವು ಪದಪಾಠಗಳು - ಟಿ.ವಿ. ವೆಂಕಟಾಚಲಶಾಸ್ತ್ರೀ (ಪ್ರ.ಕ. ೫೦-೨)

೧೨೭. ಪಂಪಭಾರತದ ಕೆಲವು ಪಾಠಾಂತರಗಳು - ಹಂಪ ನಾಗರಾಜಯ್ಯ (ಕ.ನು. ೨೭-೮)

೧೨೮. ಪಂಪಭಾರತದ ಚಾಲುಕ್ಯರು ಯಾರು? - ಕೆ. ವೆಂಕಟರಾಯಾಚಾರ್ಯ (ಸಾಹಿತ್ಯದ ಹಿನ್ನೆಲೆ-ಪು. ೧)

೧೨೯. ಪಂಪಭಾರತದ ದ್ರೌಪದೀವಿಚಾರ - ಕೆ. ವೆಂಕಟರಾಯಾಚಾರ್ (ಕ.ನು. ೧-೨)

೧೩೦. ಪಂಪಭಾರತದ ನಿರ್ಮಾಣ ಕಾಲ - ಕೆ. ವೆಂಕಟರಾಯಾಚಾರ್ (ಕ.ನು. ೧-೨)

೧೩೧. ಪಂಪಭಾರತದ ಮಂಗಲಪದ್ಯ - ಎಂ.ಎಂ. ಕಲಬುರ್ಗಿ (ಕ.ಭಾ. ೩-೨)

೧೩೨. ಪಂಪಭಾರತದ ಯುದ್ಧ ಚಮತ್ಕಾರ - ಶೇಷ. ಭೀ. ಪಾರಿಶವಾಡ (ವಾಗ್ಭೂಷಣ ೩೦-೫)

೧೩೩. ಪಂಪಭಾರತದಲ್ಲಿ ಕರ್ಣನ ಪಾತ್ರಚಿತ್ರಣ - ಎನ್. ತಿರುಮಲೇಶ್ವರಭಟ್ (ಪ್ರದೀಪ ೧೧-೧೨)

೧೩೪. ಪಂಪಭಾರತದಲ್ಲಿ ದ್ರೌಪದಿಯ ಸ್ವಯಂವರ - ಡಿ.ಕೆ. ಭೀಮಸೇನರಾವ್ (ತಾವರೆ-ಉಸ್ಮಾನಿಯಾ ವಿ.ವಿ. ಪತ್ರಿಕೆ)

೧೩೫. ಪಂಪಭಾರತದಲ್ಲಿ ಬಂದ ನಾಣ್ಣುಡಿಗಳು - ಶಂ.ಭಾ. ಜೋಶಿ (ಜ.ಕ. ೮-೨)

೧೩೬. ಪಂಪಭಾರತದಲ್ಲಿಯ ಕೆಲವು ಸಮಸ್ಯೆಗಳು - ವೆಂ.ಭೀ. ಲೋಕಾಪುರ (ಜಯಂತಿ ೨೦-೫)

೧೩೭. ಪಂಪಭಾರತದಲ್ಲಿಯ ಸೂರ್ಯೋದಯ ಸೂರ್ಯಾಸ್ತಗಳು - ಸಂಗಮನಾಥ ಜಿ. ಹಂಡಿ (ಸಹೃದಯ ಸ್ಫುರಣ ಪು-೧)
೧೩೮. ಪಂಪಭಾರತದಲ್ಲಿಯುಗಧರ್ಮ - ಒಂದು ನಿದರ್ಶನ - ಸಿ.ಪಿ.ಕೆ. (ಕಾವ್ಯಾರಾಧನ - ಪು. ೧)
೧೩೯. ಪಂಪಭಾರತದ ಶ್ರೀಕೃಷ್ಣ - ಬಿ.ಎ. ಶ್ರೀಕಂಠೇಗೌಡ (ಪ್ರ.ಕ. ೪೩-೨)
೧೪೦. ಪಂಪಭಾರತದೊಳಗಿನ ಉಪಮೆಗಳು - ಹೆಚ್.ಜಿ. ಬೆಂಗೇರಿ (ವಾಗ್ಭೂಷಣ ೪-೭)
೧೪೧. ಪಂಪಭಾರತ ಪ್ರಶಂಸೆ - ಶೇಷ. ಭೀ. ಪಾರಿಶವಾಡ (ಜ.ಕ. ೨-೪)
೧೪೨. ಪಂಪ - ಭಾರವಿ - ಕೆ.ಎಸ್. ಕೃಷ್ಣಮೂರ್ತಿ (ಅಭಿವಂದನೆ. ಪು. ೧೨೭)
೧೪೩. ಪಂಪ ಮತ್ತು ರತ್ನಾಕರ ಪರಿಣಯ ಪ್ರಪಂಚ - ಜಿ. ಬ್ರಹ್ಮಪ್ಪ (ಗುರುದೇವ ೫-೩)
೧೪೪. ಪಂಪ ಮಹಾಕವಿ - ಮುಳಿಯ ತಿಮ್ಮಪ್ಪಯ್ಯ (ಕನ್ನಡ ಸಾಹಿತ್ಯ ಮತ್ತು ಇತರ ಉಪನ್ಯಾಸಗಳು) ಪು. ೨೭
೧೪೫. ಪಂಪ ಮಹಾಕವಿ - ಮಲ್ಲಪ್ಪ (ಜ.ಕ. ೩೫ - ೧೨)
೧೪೬. ಪಂಪ ಮಹಾಕವಿಯ ಕೆಲವು ಪದಗಳು - ಹಂ.ಪ.ನಾ. (ಕ.ನು. ೨೭-೭)
೧೪೭. ಪಂಪ ಮಹಾಕವಿಯ ಬಾಹುಬಲಿ - ಟಿ.ಎನ್. ಮಹದೇವಯ್ಯ (ಕ.ನು. ೩೨-೪, ೫)
೧೪೮. ಪಂಪ ಮಹಾಕವಿ ವಿರಚಿತ ಆದಿಪುರಾಣಂ (ಕಾ.ಲೋ.) ಎನ್. ಅನಂತ ರಂಗಾಚಾರ್ (ಪ್ರ.ಕ. ೩೪-೪)
೧೪೯. ಪಂಪ-ರನ್ನರ ದುರ್ಯೋಧನರು - ಶೇಷ. ಭೀ. ಪಾರಿಶವಾಡ (ಜ.ಕ. ೧-೩)
೧೫೦. ಪಂಪ-ರನ್ನರ ಶ್ರೀಕೃಷ್ಣನು - ಶೇಷ. ಭೀ. ಪಾರಿಶವಾಡ (ಜ.ಕ. ೩-೬)
೧೫೧. ಪಂಪ ವೀರನಾದರೆ ರತ್ನಾಕರ ಭಕ್ತ - ಜಿ. ಬ್ರಹ್ಮಪ್ಪ (ಗುರುದೇವ ೫-೪)
೧೫೨. ಪಂಪಾದಿ ಕರ್ಣಾಟಕ ಪ್ರಾಚೀನ ಮಹಾಕವಿಗಳ ಕಾವ್ಯಗಳಲ್ಲಿ ಕಂಡುಬರುವ ಕೆಲವು ವಿಶೇಷ ಪದಾರ್ಥಗಳ ಸ್ವರೂಪನಿರ್ಣಯ ವಿಚಾರ - ಎಚ್. ಶೇಷಯ್ಯಂಗಾರ್ (A.O.R Vol. ೧-೨)
೧೫೩. ಪುರಾಣ ಕವಿಪುಂಗವ ಪಂಪ - ಎಲ್.ಆರ್. ಹೆಗಡೆ - (ಕಾವ್ಯವ್ಯಾಸಂಗ, ಪು-೩೪)
೧೫೪. ಪೊಸ ಪೊಟ್ಟಜಿಕೊಳಾದ ಕರ್ಚು - ವೆಂಕಟರಾಮಪ್ಪ (ಪ್ರ.ಕ. ೪೯-೪)
೧೫೫. ಬಾಹುಬಲಿ - ಬಿ.ಎಸ್. ಕುಲಕರ್ಣಿ - ಸನ್ಮತಿ, (ಫೆಬ್ರ, ಮಾರ್ಚಿ, ೧೯೬೭)
೧೫೬. ಬಾಹುಬಲಿಯ ನಾಲ್ಕು ಚಿತ್ರಗಳು - ಬಿ.ಎಸ್. ಕುಲಕರ್ಣಿ (ಅಭಿಷೇಕ ಪು. ೨೫)
೧೫೭. ಬೆಳಗುವೆನಿಲ್ಲಿ ಲೌಕಿಕಮನಲ್ಲಿ ಜಿನಾಗಮಮಂ - ನ. ಸುಬ್ರಹ್ಮಣ್ಯಂ (ಶ್ರದ್ಧಾಂಜಲಿ ಪು. ೧೧೧)

೧೫೮. ಭಗವತಿಯೇಱುವೇಟ್ವಿ ತೇಜದಿಂ ಕಥೆಯಾಯ್ತಿವರೇಱು - (ವಸ್ತುಕೋಶ)- ಡಿ.ಎಲ್.ಎನ್. (ಪ್ರ.ಕ. ೪೪-೨)

೧೫೯. ಭಾನುಮತಿಯೊಡನೆ ನೆತ್ತವನ್ನಾಡಿದವರಾರು? - ಎ.ಆರ್.ಕೃಷ್ಣಶಾಸ್ತ್ರಿ (ಜ.ಕ. ೧೪-೩)

೧೬೦. ಭಾರತಗಳ ಶ್ರೀಕೃಷ್ಣ - ವಿ.ಸೀ. (ಕವಿಕಾವ್ಯ ದೃಷ್ಟಿ. ಪು. ೮೯)

೧೬೧. ಭಾರತದ ಶಿಶುಪಾಲವಧೆ - ತ.ಸು. ಶಾಮರಾಯ (ಕ.ಸಾ.ಪ. ೨೫-೨)

೧೬೨. ಮದನ ಮದಭಂಗ - ಜಿ.ಪಿ.ರಾಜರತ್ನಂ (ಕ.ನು. ೩-೩೮)

೧೬೩. ಮಹಾಕವಿ ಪಂಪನ ಆದಿಪುರಾಣ - ಮಾಸ್ತಿ ವೆಂಕಟೇಶ ಅಯ್ಯಂಗಾರ್ (ಜೀವನ - ೨೫-೭)

೧೬೪. ಮಹಾಕವಿ ಪಂಪನ ಶ್ರೀಕೃಷ್ಣ - ಕಮಲಾಹಂಪನಾ (ಜೀವನ ೨೯-೯)

೧೬೫. ಮಹಾಕವಿ ಪಂಪನು ಅಧ್ವರ ದ್ವೇಷಿಯೇ - ಕುಶಲಾನುಜ (ಜೀವನ ೨೯-೯)

೧೬೬. ಮಹಾಕವಿ ಶ್ರೀ ಪಂಪನು - ಮ.ಪ್ರ. ಪೂಜಾರ (ವಾಗ್ಭೂ ೧೯-೨, ೩)

೧೬೭. ವಿಕ್ರಮಾರ್ಜುನನ ರಾಣಿಯರು - ಕೆ. ವೆಂಕಟರಾಯಾಚಾರ್ಯ (ಸಾಹಿತ್ಯದ ಹಿನ್ನೆಲೆ)

೧೬೮. ವಿಕ್ರಮಾರ್ಜುನ ವಿಜಯ - ದ.ರಾ. ಬೇಂದ್ರೆ (ಮಹಾಕವಿ ಪಂಪ ಹಾಗೂ ಅವನ ಕೃತಿಗಳು ಪು. ೨೯)

೧೬೯. ವಿಕ್ರಮಾರ್ಜುನ ವಿಜಯ (ಪಂಪ ಭಾರತ) ರಂ.ಶ್ರೀ. ಮುಗಳಿ (ವಿಮರ್ಶೆಯ ವ್ರತ. ಪು. ೯೯)

೧೭೦. ಶಫರೋಚ್ಚಳಿತ ತರತ್ತರಂಗೆಯೇ ಉಚ್ಚಸ್ತನಿ (ಒಂದು ವಿವರಣೆ) - ಎ.ಎಸ್. ಜಯರಾಂ (ಪ್ರಸಾದ ೧-೪)

೧೭೧. ಶಾಸನದಲ್ಲಿ ಪಂಪನ ಆದಿಪುರಾಣದ ಒಂದು ಪದ್ಯ. - ಎಂ.ಎಂ. ಕಲುಬುರ್ಗಿ (ಕ.ನು. ೩೨-೧)

೧೭೨. ಸಂಧಾನದ ಸಂವಿಧಾನ (ಪೂರ್ವಭಾಗ)- ಶ್ರೀ ಪಂಚ

A Kannada Poet's sense of value - V. Sitaramaiah (Karnataka Darshana p. 167)

On Pampa's Work-H. Sheshayyangar. (A.O.R. VI.-I, II)

Pampa - the morning star of Karnataka Literature - K. Krishnayyangar (The Literary Half Yearly III-I P. 96)

Pampa's influence in Telugu Literature - M.M. Bhat, (A.O.I.C. Proceedings 1951)

The Family of Arikesarin, the patron of Pampa - N. Lakshminarayana Rao (M Y T XL V, No. 4)

---

# ಶಬ್ದಕೋಶ*

## ಅ

ಅಂಕ-ಗುರುತು, ಪ್ರಸಿದ್ಧ ೧-೭೪ ೨ ೩೯ವ

ಅಂಕಕಾಜಿ-ಶೂರ ೧೨-೭೩ವ

ಅಂಕದಂಬು-ಪ್ರಸಿದ್ಧವಾದ ಬಾಣ ೧೩-೩೬

ಅಂಕವಣೆ-ಕುದುರೆಯ ಮೇಲಿನ ತಡಿ ೮-೧೩೭

ಅಂಕುರ-ಮೊಳಕೆ, ಚಿಗುರು, ೧-೧೩೦, ೫-೧೧

ಅಕ್ಕರ ವಿದ್ಯೆ ೪-೨೯

ಅಕ್ಕರಗೊಟ್ಟಿ-ಮಿತ್ರಮೇಳ, ಕಲಾವಿಷಯಕವಾದ ಚರ್ಚೆ ನಡೆಯುವ ಸ್ಥಳ ೪-೨೯

ಅಕ್ಷಕ್ರೀಡೆ-ಪಗಡೆಯಾಟ ೬-೬೯

ಅಕ್ಷಮಾಲಿಕೆ-ಜಪಸರ ೬-೮

ಅಕ್ಷೂಣ-ಕಡಿಮೆಯಿಲ್ಲದ, ೧-೧೩೪

ಅಖಂಡಿತ-ಕತ್ತರಿಸಿಲ್ಲದುದು, ಪೂರ್ಣವಾದುದು ೧೩-೬೫

ಅಗಪಡು-ಸೆರೆಸಿಕ್ಕು, ಕೈವಶವಾಗು ೧೨-೯೮, (ಅಗಂ-ಒಳಗು)

ಅಗರು-ಅಗಿಲು, ಸುಗಂಧದ ಮರ ೫-೩೦

ಅಗೞ್-ಕಂದಕ ೩-೨೨, ೪-೧೦

ಅಗ್ಗಲಿಸು-ಹೆಚ್ಚು, ಅಧಿಕವಾಗು ೯-೩೦, ೧೦-೨೦

ಅಗ್ಗಳ-ಅಧಿಕ, ಶ್ರೇಷ್ಠ, ಅತಿಶಯ, ೧-೧೦, ೬-೬೬

ಅಗ್ಗಳಿಕೆ ೬-೧೯, ೪೬

ಅಗ್ಗಳಿಕ್ಕೆ ೬-೬೬

ಅಗ್ಗಳಿಸು-ಅಧಿಕವಾಗು, ಹೆಚ್ಚು ೫-೩೦ ೧೨-೧೦, ೨೦, ೧೨,-೨೧೦

ಅಂಗಣ-ಅಂಗಳ ೪-೧೦

ಅಂಗರಾಗ-ಅನುಲೇಪನ, ಮೈಗೆ ಹಚ್ಚಿಕೊಳ್ಳುವ ಸುಗಂಧದ್ರವ್ಯ ೮-೭೩.

ಅಗಿ-ಹೆದರು, ೨-೨೭, ೧೦-೭೫, ೧೩-೧೨

ಅಗುಂತಿ-ಆಧಿಕ್ಯ, ಅತಿಶಯ ೧-೧೯.

ಅಗುಂದಲೆ-ಹೆಚ್ಚಳ, ಅಧಿಕ ಗೌರವ ೯-೩೩ ಅತಿಶಯ ೯-೨

ಅಗುರ್ಬು-ಭಯಂಕರ ೧-೧೩೧ ವ ೧-೨೬, ೪-೮೭

ಅಗುರ್ವಿಸು ೧-೬, ೧೦೦, ೭-೨೬, ೯-೯೯

ಅಗುರ್ವು-ಭಯಂಕರ ೧-೨೬, ೭-೨೬,

ಅಗುಳ್-ಅನ್ನದ ಅಗಳು, ೧೧-೧೫೩

ಅಗುೞ್-ಅಗೆ, ೯-೯೫ವ

ಅಗ್ನೀಧ್ರ-ಯಾಗದ ಬೆಂಕಿಯನ್ನು ಉರಿಯುವ ಹಾಗೆ ಮಾಡುವುದು ೬-೩೩ವ.

ಅಘಮರ್ಷಣ-ಪಾಪವನ್ನು ತೊಳೆಯುವುದು ಸ್ನಾನಮಾಡುವಾಗ ಪಠಿಸುವ ಮಂತ್ರ. ೯-೭೨ವ

ಅರ್ಘ್ಯ-ಕೈತೊಳೆದುಕೊಳ್ಳುವುದಕ್ಕಾಗಿ ಕೊಡುವ ನೀರು, ಪೂಜಾದ್ರವ್ಯ ೧-೭೭ವ, ೨-೪ ವ ಶ್ರೇಷ್ಠ, ಬೆಲೆಯುಳ್ಳ, ೬-೧೧ ವ

ಅಚಲ-ಪರ್ವತ, ೪-೧೪.

ಅಚ್ಚರಸೆ-ಅಪ್ಸರಸ್ತ್ರೀ ೧-೧೪೮, ೨-೩ವ, ೪-೨೦ವ

ಅಚ್ಚಿಗ-ದುಃಖ, ವ್ಯಥೆ ೪-೯೯, ೭-೯೪ವ,

ಅಚ್ಚಿಗಂಗೊಳ್-ದುಃಖಪಡು, ೭-೬೪ವ

ಅಚ್ಚಿಜೆ-ಅಚ್ಚೊತ್ತು, ಮುದ್ರೆಹಾಕು, ೪-೫೦, ೫-೧೭, ೭-೫೭, ೧೪-೫

ಅರ್ಚಿ-ಜ್ವಾಲೆ, ೫-೮೬, ೯೮

ಅಚ್ಚು-ರಥದ ಅಚ್ಚು ೧೧-೩೮

ಅಚ್ಚೊತ್ತು-ಮುದ್ರಿಸು, ೫-೧೭, ೬-೪೧ವ

ಅಂಚೆ-ವಸ್ತ್ರ ೮-೬೬ - ಹಂಸಪಕ್ಷಿ (೪-೮೨ವ)

---

* ಈ ಕೋಶವನ್ನು ಸಿದ್ಧಪಡಿಸುವುದರಲ್ಲಿ ನಾನು ಪರಿಷತ್ ಮುದ್ರಣದ ಪಂಪಭಾರತ ಕೋಶಕ್ಕೆ ಬಹುಮಟ್ಟಿಗೆ ಋಣಿಯಾಗಿದ್ದೇನೆ.

ಅಚ್ಛೋದ-ತಿಳಿನೀರು ೧೨-೧೫೯

ಅಜನಿಸು-ತಿರಸ್ಕರಿಸು ೯-೨೧

ಅಜರ-(ಮುಪ್ಪಿಲ್ಲದ ದೇವತೆಗಳು) ಕೃಷ್ಣ ೧೧-೭೭

ಅಂಜನ-ಕಾಡಿಗೆ ೮-೪೨ವ

ಅಜಾತ-ಹುಟ್ಟಿಲ್ಲದವನು, ಕೃಷ್ಣ ೯-೨೧

ಅಜಾನೇಯ-ಶ್ರೇಷ್ಠವಂಶದ ಕುದುರೆ ೨-೬೩ವ

ಅಜಿತ-ಜಯಿಸಲಾಗದವನು. ಕೃಷ್ಣ ೯-೨೬ವ

ಅಜಿರ-(ಅಂಗಳ) ರಂಗ೧೨-೧೩೫

ಅರ್ಜುನ-ಮತ್ತಿಯ ಗಿಡ ೫-೮೦

ಅಟನ-ಬಿಲ್ಲಿನ ತುದಿ ೧೪-೭೨

ಅಟಳ-(ಅತಲ-ಸಂ) ಪಾತಾಳ ೧೦-೬೭

ಅಟ್ಟಟ್ಟಿ-ದೌತ್ಯ, ದೂತ, ೭-೨೭ವ; ೯-೮೯, ೯೫ವ

ಅಟ್ಟವಣಿಕೋಲ್-ಪುಸ್ತಕವನ್ನಿಡುವ ಪೀಠ - ವ್ಯಾಸಪೀಠ, ೧೧-೪೬

ಅಟ್ಟುವುಟ್ಟು-ಅಟ್ಟಿಸಿಕೊಂಡುಹೋಗು ೧-೯೯

ಅಟ್ಟುಂಬರಿ-ಅಟ್ಟಿ ಓಡಿಸು, ಅಟ್ಟಿಕೊಂಡು ಹೋಗು ೬-೯, ೧೧-೪೦೦

ಅಟ್ಟೆ -ಶರೀರ, ಮುಂಡ, ೭-೧೪, ೧೦-೪೨

ಅಂಟು-ತಾಕು, ತಗಲು, ಸೋಕು, ೬-೭೭

ಅಡಂಗು-ಅವಿತುಕೊಳ್ಳು ೭-೫೦

ಅಡಕು-ತುಂಬು, ೯-೧೮ ವ

ಅಡಪ-ಅಡಕೆ ಎಲೆಯ ಚೀಲ, ೩-೪೮ ವ, ೪-೬೬ ವ

ಅಡರ್-ಏರು, ಹತ್ತು ೯-೨

ಅಡರ್ಪು-ಆಶ್ರಯ, ೧-೨೭, ೯-೩೫, ೧೪-೪ ವ

ಅಡಸು - ತುರುಕು, ತುಂಬು, ೨-೩೨, ೩-೧೫, ೪-೮೭, ೬-೩೦ವ, ೧೨-೧೬೯ವ

ಅಡ್ಡಣ-ಗುರಾಣಿ ೨-೩೯

ಅಡುರ್ತು-ಕೂಡಿಸು, ವ್ಯಾಪಿಸು, ೧-೬

ಅಂಡುಗೊಳ್-ಸಮೀಪಕ್ಕೆ ಹೋಗು ೯-೩೬ವ

ಅಡೆವೊತ್ತು-ಅರ್ಥಹತ್ತಿಕೊಳ್ಳು ೩-೫

ಅಣಂ-ಸ್ವಲ್ಪವೂ ೧-೩೨, ೨-೧೩

ಅಣಕ-ಹಿಂಸೆ, ಕಾಟ,ಹಾಸ್ಯ ೯-೯೯

ಅಣಮ-ಕೊಂಚವೂ ೩-೫೯

ಅರ್ಣಃ-ನೀರು ೧೪-೫೭

ಅಣಲ್-ಗಂಟಲು, ದವಡೆ, ೧೨-೧೬೯ವ

ಅಣಿ-ಪದಾತಿಸೈನ್ಯ ೩-೬೭, ೮-೯೯, ೧೦-೫೧, ೧೦-೫೭ವ, ೧೨-೧೭

ಅಣಿಯರಂ-ಅತಿಶಯವಾಗಿ ೨-೬೧, ೭-೯೫

ಅಣುಗದಮ್ಮ ೧೨-೧೭೪

ಅಣುಗಾಳ್ ೬-೭೨ವ

ಅಣುಗಿಜೆವೊಯ್-ಹತ್ತಿರಹೋಗಿ ಹೊಡೆ ೧೩-೪೭

ಅಣುಗು-ಪ್ರೀತಿ, ೨-೬೧

ಅಣುವ-ಹನುಮಾನ್ ೮-೩೩

ಅಣ್ಮು-ಸಾಹಸ, ಪರಾಕ್ರಮ, ಪೌರುಷ ೨-೨೬ ವ, ೧೧-೧೮೩, ೧೧-೧೬೩

ಅಣ್ಮುಗುಂದು-ಶಕ್ತಿಹೀನವಾಗು ೧೩-೬೭

ಅಣೆ-ತಿವಿ ೧೨-೮೬

ಅತನು-ಮನ್ಮಥ ೧-೭೧ ವ

ಅತರ್ಕ್ಯ-ಚರ್ಚೆಮಾಡುವುದಕ್ಕಾಗದ ೧-೮೦

ಅತ್ತಪರ-ಗುರಾಣಿ ೩-೩೨ ವ, ೮-೧೭, ೨೫, ೧೧-೮೮

ಅತ್ತಳಗ-ವ್ಯಥೆ, ಕಳವಳ ೪-೭೯, ೧೦೦ ೭-೨೫ ೧೧-೮೮

ಅತ್ತಿಗೆ-ಪ್ರೀತಿಪಾತ್ರಳಾದವಳು ೧-೩೫

ಅತ್ಯಂತ-ಬಹಳ ಹೆಚ್ಚಿನ, ಶ್ರೇಷ್ಠ ೧-೧೯

ಅಂತರ-ದೂರ, ಅವಧಿ, ವ್ಯತ್ಯಾಸ ೧-೪೮ ೨-೯೫ ವ, ೧೦-೭

ಅಂತ್ರ-ಕರುಳು ೧೨-೧೨೦

ಅರ್ಥಿ-ಅಪೇಕ್ಷಿಸುವವನು, ಯಾಚಕ ೧-೧೧೭, ೨-೪೬

ಅದಟಂ-ಪರಾಕ್ರಮಶಾಲಿ, ೫-೨೯

ಅಂಬುವಿಡು-ಬಾಣವನ್ನು ಬಿಡುವುದು ೩-೧೩ ವ
ಅಂಬೇಱು-ಬಾಣದ ಪೆಟ್ಟು, ಗಾಯ ೨-೬೨
ಅಭವ-ಹುಟ್ಟಿಲ್ಲದವನು, ಈಶ್ವರ ೮-೧೩
ಅಂಭಃ-ನೀರು ೬-೪೦
ಅಭ್ರಂಕಷ-ಆಕಾಶವನ್ನು ಮುಟ್ಟುವ ೪-೨೨
ಅರ್ಭಕ-ಮಗು ೧-೧೨೦
ಅಭಿಘಾತ-ಭಂಗ, ಅಡ್ಡಿ ೧-೧೦ವ
ಅಭಿಚಾರ-ಶೂನ್ಯ, ಮಾಟ ೮-೪೨
ಅಭಿಜಾತ-ಉತ್ತಮಕುಲದವನು ೧೦-೫೫
ಅಭಿಧಾನ-ಪೆಸರು ೩-೩೯
ಅಭಿಭವಿಸು-ಶಕ್ತಿಗುಂದಿಸು ೧೧-೧೦೬
ಅಭಿರಾಮ-ಮನೋಹರ ೧-೧೪೧
ಅಭಿವಾದಯೇ-ನಮಸ್ಕರಿಸುತ್ತೇನೆ ೧೩-೪೦
ಅಭಿಸಾರಿಕೆ-ಸಂಕೇತಸ್ಥಾನದಲ್ಲಿ ಪ್ರಿಯನನ್ನು ನಿರೀಕ್ಷಿಸುವವಳು ೪-೮೩
ಅಭ್ಯುದಯ-ಅಭಿವೃದ್ಧಿ ೮-೪
ಅಮಂದ-ಗಟ್ಟಿಯಾದ, ಬಲವಾದ ೧೪-೩೭ವ
ಅಮರ್, ಅಮರ್ಚು-ಸೇರು, ಒಟ್ಟುಗೂಡು ೧-೯೫
ಅಮರಾಪಗಾನಂದನ-ದೇವಗಂಗೆಯ ಮಗನಾದ ಭೀಷ್ಮ ೧-೮೧ ವ
ಅಮಳರ್-ಯಮಳರು (ಸಂ) ಅವಳಿಗಳು ನಕುಲಸಹದೇವರು ೨-೩
ಅಮ್ಮ-ತಂದೆ ೯-೬೪, ೧೦-೭೩
ಅಮುಂಕು-ಅಮುಕು, ಅದುಮು, ಒತ್ತು ೫-೫೩
ಅಮೃತಕಿರಣ-ಚಂದ್ರ ೧-೧೫
ಅಮೇಯ-ಅಳೆಯಲಾಗದ ೧-೪೫
ಅಮೋಘ-ವ್ಯರ್ಥವಲ್ಲದ ೧-೧೧೮ ವ
ಅಯ-ಶುಭಕರವಾದ ವಿಧಿ ೯-೧೩, ೩೫
ಅಯಸ್ಕಾಂತ-ಸೂಜಿಗಲ್ಲು ೧೧-೨ ವ
ಅಯ್ದೆ-ಸುಮಂಗಲಿ, ಮುತ್ತೈದೆ
ಅಯ್ದೆಮಿನುಗು-ಮಾಂಗಲ್ಯ, ತಾಳಿ ೬-೩೨ ವ
ಅರಣಿ-ಬೆಂಕಿಯನ್ನು ಕಡೆಯುವ ಮರದ ಕೋಲು ೮-೩೭ ವ
ಅರಬೊಜಂಗ-ರಾಜವಿಟ, ೪-೮೭
ಅರಲ್-ಹೂವು ೧-೫೮
ಅರವರಿಸು-ವಿಚಾರಮಾಡದೆ ೨-೩೭
ಅರಸು-ರಾಜ್ಯ, ದೊರೆತನ ೯-೮೩
ಅರಸಿಕೆ-ದೊರೆತನ, ರಾಜ್ಯಭಾರ ೧೧-೪೮
ಅರಳೆಲೆ-ಮಕ್ಕಳಿಗೆ ಉಪಯೋಗಿಸುವ ಒಂದು ತೆರನಾದ ಒಡವೆ ೨-೪
ಅರಾತಿ-ಶತ್ರು ೧-೧
ಅರಿ-ಕತ್ತರಿಸು ೧-೧೦೧
ಅರಿದು-ಅಸಾಧ್ಯ ೧-೫
ಅರಿಯ-ಅಸಾಧ್ಯನಾದವನು ೧೨-೨೦೪
ಅರೆಪೊರಿಕೆ-ಅರ್ಧವ್ಯಾಪಿಸಿದುದು ೧೧-೭೦
ಅಱಮಗ-ಧರ್ಮಪುತ್ರ, ೬-೩,
ಅಱವರಗಾದ-ಮಳೆಯಿಲ್ಲದೆ ಒಣಗಿದ ೧೨-೭
ಅಱಕೆ-ಪ್ರಸಿದ್ಧಿ, ಶ್ರೇಷ್ಠ ೧-೨೫, ೧೩೫
ಅಱಯಮಿಕೆ-ಅಜ್ಞಾನ ೬-೫೮
ಅಲಕ್ತಕ-ಅರಗು ೪-೬೦
ಅಲಪು-ಹಿಂಸೆ, ತೊಂದರೆ ೪-೧೦
ಅಲಂಪು-ಸಂತೋಷ ೧-೧೦೧, ೨-೫೫, ೪-೨೯, ೧೦೨, ೧೦೯
ಅಲರ್-ಹೂವು ೮-೩೭
ಅಲ್ಲಕಲ್ಲೋಲ-ಹಿಂದುಮುಂದು; ತಲೆಕೆಳಗು ೧೩-೩೩
ಅಲ್ಲದಲ್ಲಣಿಗೆ-ಹಸಿಶುಂಠಿಯ ಮಿಶ್ರಣ ವನ್ನುಳ್ಳದ್ದು ೪-೮೭
ಅಲರೊದ್ದೆ-ಹೂಗಳ ರಾಶಿ ೧೨-೨೧೮
ಅಲಱು-ನಾಶಮಾಡು ೧೨-೨೬
ಅಲ್ಲಳಿಗಾಳೆಗ-ವಿನೋದದ ಯುದ್ಧ ೧೧-೪೩ವ

ಅಲ್ಲಟೆವೋಗು-ಅಟ್ಟುಅಟೆವೋಗು ಸೀಳು ನಾಟಿ ಸುರಿಯುವಂತೆ ಮಾಡು ೧೨-೨೦೫

ಅಲೆ-ಪೀಡಿಸು ೨-೩೯ ವ, ೪-೨೮, ೪-೬೪

ಅಲೆಪು-ಅಲೆದಾಟ ೪-೧೦

ಅಲ್ಲು-ಅಳ್ಳಾಡಿಸು ೨-೩೪

ಅಲ್ಲೆ-ಅಲ್ಲಯ್ ೧೩-೧೦೦

ಅವಕರ್ಣಿಸು-ಕೇಳು ೧೦-೧೫ ವ

ಅವಗಡ-ಸಾಹಸ ೧೩-೮

ಅವಗಟೆಯಿಸು-ಮೇಲೆಮೇಲೆ ಬರುವುದು ೧೨-೨೦೯

ಅವಗಾಹ-ಮುಳುಗುವಿಕೆ ೧-೧೭

ಅವತಾರ-ಇಳಿದುಬರುವುದು ೧೪-೩೭

(ವಂಶಾವತಾರ-ವಂಶಾನುಕ್ರಮ ೧-೪೮ ವ)

ಅವಧಾರಿಸು-ಕೇಳು, ಸಹಿಸು, ೧೨-೪೨

ಅವನತ-ಬಗ್ಗಿದ, ನಮ್ರವಾದ ೧-೧೧೦

ಅವಯವ-ಅಲಕ್ಷ್ಯ ೩-೧೬ವ, ೧೪-೩೭ ವ

ಅವಷ್ಟಂಭ-ದರ್ಪ, ಅಹಂಕಾರ ೨-೬೨, ೬-೪೨

ಅವಸರ-ಅವಕಾಶ ೧-೭೫

ಅವಸ್ತುಭೂತ-ಅಪ್ರಯೋಜಕ ೯-೧೮

ಅವ್ಯವಚ್ಛಿನ್ನ-ಒಂದೇಸಮನಾದ, ಎಡೆಬಿಡದೆ ೧-೭, ೧-೬೦ ವ

ಅವ್ವಳಿಸು-ವ್ಯಾಪಿಸು, ಹರಡು, ಮೇಲೆ ಬೀಳು, ೩-೫೩, ೬-೫೯, ೧-೮೬ ವ

ಅವಿ-ಝರಿ, ಬೆಟ್ಟದ ಹೊಳೆ ೭-೨೬

ಅವಿಕಳ-ಕಡಿಮೆಯಿಲ್ಲದ ೮-೧

ಅವಿನ್ನಾಣ-ಅಭಿಜ್ಞಾನ, ಗುರುತು ೩-೪ ವ

ಅರ್ವಿಸು-ವ್ಯಾಪಿಸು ೫-೪೫

ಅವುಂಕು-ಅಮುಕು, ಒತ್ತು, ೧೩-೫೯

ಅವುಂಡು-ಔಡು-ಕೆಳದುಟಿ ೭-೮೦

ಅಶನಿ-ಸಿಡಿಲು ೨-೯೮, ೬-೯೧

ಅಶ್ವತ್ಥಾಮ-ಕುದುರೆಯ ಶಕ್ತಿ ೨-೪೪

ಅಶಿವ-ಅಮಂಗಳ ೩-೧೧

ಅಶಿಶಿರಕರ-ಸೂರ್ಯ ೪-೧೮ ವ

ಅಂಶು-ಕಿರಣ ೪-೨೨

ಅಂಶುಕ-ಬಟ್ಟೆ ೭-೭೩

ಅಶ್ರು-ಕಣ್ಣೀರು ೪-೧೨

ಅಷ್ಟಶೋಭೆ-ಅಲಂಕಾರ, ೩-೨ ೫, ೨೨ ವ

ಅಸಗವೊಯ್ಲು-ಅಗಸನ ಒಗೆತ ೩-೩೦

ಅಸದಳ-ಅಸಾಧ್ಯ ೧-೯೭

ಅಸವಸ-ವೇಗ, ತ್ವರೆ, ಕ್ಷಿಪ್ರ, ೧೩-೧೩

ಅಂಸ-ಹೆಗಲು, ಭುಜ, ಶಿರಸ್ಸು ೩-೯, ೧೨-೧೧೦

ಅಸ್ರ-ರಕ್ತ ೧-೧೦೫

ಅಸಿ-ಕತ್ತಿ ೧-೬, ಸಣ್ಣ, ಸೂಕ್ಷ್ಮ ೧-೧೪೧ ವ ೫-೬ ವ

ಅಸಿಧೇನು-ಚೂರಿ,ಕತ್ತಿ ೮-೭೪, ೧೨-೧೬೭

ಅಸಿಪತ್ರ-ಕತ್ತಿ ೧೩-೫೧ ವ

ಅಸಿಯರ್-ಕೃಶರಾಗಿರುವವರು

ಅಸಿಯಳ್-ಕೃಶಾಂಗಿ ೧-೬

ಅಸುಹೃತ್-ಶತ್ರು ೧೦-೧೯

ಅಸುಂಗೊಳ್-ಪ್ರಾಣಾಪಹಾರಮಾಡು, ಶಕ್ತಿಗುಂದಿಸು ೧-೩೮ ೨-೪ ವ, ೪-೪೮ವ, ೬-೩೧, ೧೨-೯, ೧೨-೧೭೦

ಅಸೃಕ್-ರಕ್ತ ೩-೧

ಅಹರ್ಪತಿ-ಸೂರ್ಯ ೯-೬೪

ಅಂಹಃ-ಪಾಪ ೪-೧೫

ಅಹಿಕಟಕ-ಹಾವನ್ನು ಬಳೆಯಾಗುಳ್ಳವನು, ಈಶ್ವರ ೧-೪

ಅಹೀಂದ್ರ-ಆದಿಶೇಷ ೬-೭೫

ಅಳಕ-ಆಲೇಖ (ಸಂ) ಬರೆಯುವ ಓಲೆ ೧-೧೨

ಅಳಱು-ನಾಶವಾಗು ೧೦-೬೫, ೧೩-೩೫ ಭಯಪಡು ೧೧-೧೦ ವ

ಅಳವಡು-ಸೇರು, ಕೂಡು, ಸಮನ್ವಯವಾಗು ೬-೩೦

ಅಳವಿ-ಪ್ರಮಾಣ ೨-೫೮, ೫-೬೨ ೧೨-೧೫೮ ವ

ಅಳವು-ಶಕ್ತಿ ೧-೨೪, ೨-೩೭ ವ
ಅಳಜ್-ಭಯಪಡು ೧೦-೬೨
ಅಳಸಗಾಮಿನಿ-ಮೆಲ್ಲಗೆ ನಡೆಯುವವಳು ೩-೮೫
ಅಳ್ಕಜ-ಆಶ್ಚರ್ಯ ಪ್ರೀತಿ, ೪-೬೦
ಅಳ್ಳವಿಳ್ಳಿಯಾಗು-ಅತ್ಯಾಯಾಸ ಹೊಂದು ೧೨-೪
ಅಳ್ಕಾಡು-ನಾಶವಾಗು ೫-೮೫ ೧೩-೯೦೦
ಅಳಿಕ-ಹಣೆ ೪-೧೮
ಅಳಿನೀ-ಹೆಣ್ಣುದುಂಬಿ ೭-೨೯
ಅಳ್ಕಿವೊಳ್ಕು-ನಾಶವಾಗು ೫-೧೦೦, ೧೦-೯೧ ವ
ಅಳ್ಕಿಜೆ-ತಿವಿ, ತುಂಬು, ಚುಚ್ಚು ೧೦-೫೭೦ ೮೬
ಅಳುಂಬಂ-ಅತಿಶಯ, ವಿಶೇಷ
ಅಳುರ್-ವ್ಯಾಪಿಸು ೫-೮೬, ೮೯
ಅಳುರ್ಕೆ ೧-೫೨, ೨-೧೮
ಅಳ್ಕು-ಹೆದರು, ಶಕ್ತಿಗುಂದು-ಭಯಪಡು ೧೧-೫೦
ಅಳ್ಕೇಜು-ಅಳ್ಕಾಟದ ಏಟು, ೫-೬೨ ವ
ಅಟ್ಕಮೆ-ಅಜೀರ್ಣ ೧-೫೬, ೧೨-೨೧೯
ಅಟ್ಕಜ್-ಪ್ರೀತಿ ೧-೬೮ (ವ)
ಅಟೆಗಾಳೆಗ-ತುಚ್ಛವಾದ ಯುದ್ಧ ೮-೯೪ ವ
ಅಟೆಪು-ಪ್ರೀತಿಸು ೭-೯೪ ವ
ಅಟೆಯೂರು-ಕುಗ್ರಾಮ ೨-೪೫
ಅಟೆವಾಡ-ಹಾಳುಹಳ್ಳಿ ೧೨-೮೬
ಅಟೆವೆಸನ-ತುಚ್ಛವಾದ ಆಸೆ ೮-೫೭
ಅಟ್ಕೆಮೆಟ್ಕೆ-ಹಾಳಾಗಿಸು ೮-೮೦
ಅಟ್ಗೆತಟ್ಗೆ-ನಾಶವಾಗಲು ೫-೧೦೪
ಅಟ್ಗೆಮಟ್ಗೆ-ನಾಶವಾಗಲು ೬-೨೪ ವ, ೧೦-೭೫ ವ ಅಟ್ಗು-ನಾಶವಾಗು
ಅಟ್ತೆ-ಪ್ರೀತಿ ೧-೧೩, ೫-೨೦
ಅಟ್ಕು-ಹೆದರು ೫-೧೦೦ವ
ಅಟ್ಗು-ನಾಶವಾಗು ೩-೭೦, ೧೧-೬೪
ಅಟ್ಗಿ-ಅಡಿಗೆ ೧೧-೬೪
ಅಟ್ದು-ಅದ್ದು, ಮುಳುಗಿಸು ೭-೮೫
ಅಟ್ವು-ಸುಡು ೫-೭೮, ೮-೯೮, ೧೨-೧೭೦, ೧೨-೧೯೦, ೧೩-೭೧

ಆ

ಆಕೃಷ್ಣ-ಸೆಳೆಯಲ್ಪಟ್ಟ ೫-೧೦ ವ
ಆಕ್ರಂದನ-ಅಳುವಿಕೆ ೩-೨೪
ಆಂಕೆಗೊಳ್-ಪ್ರತಿಭಟಿಸು ೧೦-೭೦ ವ ೧೧-೪೪, ೭೬
ಆಖಂಡಳ-ಇಂದ್ರ ೫-೯೯ ವ
ಆಖೇಟ-ಬೇಟೆ ೬-೭೧
ಆಗ-ಆಗದು ೭-೩೭
ಆಗಡುಂ-ಯಾವಾಗಲೂ ೧೨-೩೩
ಆಗಮ-ಶಾಸ್ತ್ರ ೧೦-೮೩
ಆಗರ-ಆಕರ (ಸಂ) ಗಣಿ ೧-೫೭
ಆಗ್ರಹ-ಕೋಪ, ಹಟ, ೧-೬೬
ಆಗಾಮಿಕ-ಮುಂದೆ ಬರುವ ೧-೫೯
ಆಘಾತ-ಪೆಟ್ಟು ೧-೧೫
ಆಚಕ್ಷತೇ-ಹೇಳುತ್ತವೆ ೯-೯೭
ಆಜಾನೇಯ-ಶ್ರೇಷ್ಠವಾದ ಕುದುರೆ ೬-೪೦, ೭೨ ವ
ಆಜಿ-ಯುದ್ಧ ೩-೭೩
ಆಟಂದು-ಮೇಲೆ ಬಿದ್ದು ೪-೧೧, ೫-೫೦, ೮-೩೫
ಆಟರ್-ಮೇಲೆಬೀಳು ೫-೫, ೫-೮೧, ೬-೨೯ ವ
ಆಟವಿಕ-ಕಾಡುಜನರ ಸೈನ್ಯ ೭-೨೭ ವ ೧೩-೨೧
ಆಟಿಸು-ಬಯಸು ಅಪೇಕ್ಷೆಪಡು ೧-೧೨, ೫-೩೨, ೭-೬೮, ೮-೩೨, ೯-೪೯, ೧೧-೧೦೦
ಆಡು-ಹೇಳು ೪-೮೩ ವ
ಆಣತಿ-ಆಜ್ಞಪ್ತಿ (ಸಂ) ಅಪ್ಪಣೆ, ೫-೩೫
ಆಣ್ಮ-ಒಡೆಯ ೭-೩೯

ಆವಲಿಕ-ಒಂದು ಬಗೆಯ ಬಾಣ ೫-೧೦೦
ಆವಳೀಕ ೧೨-೧೯೧
ಆವಸಥ-ವಾಸಸ್ಥಾನ ೧-೭೫
ಆವ್ಯಾನ-ಮುಚ್ಚಿದ ೮-೨೫
ಆವಿಲ (ಳ)-ಬಗ್ಗಡವಾದ ೪-೨೫ ಕಲ್ಮಷ ೧೨-೧೧೪ವ
ಆವುತಿ-ಹವಿಸ್ಸು ೬-೩೪ (ಆವುತಿಧೂಮ) (ಆವುತಿಯೆಂಬ ಆಯುಧ ೧೦-೫೦ ೭೬)
ಆವೃತ-ಸುತ್ತಲ್ಪಟ್ಟ ೨-೪೫
ಆವೆ-ಆಮೆ ೭-೫೭
ಆಶು-ಜಾಗ್ರತೆಯಾಗಿ ೪-೨೩, ೧-೬೨
ಆಶುಶಿಕ್ಷಣಿ-ಅಗ್ನಿ ೧೧-೯೪
ಆಸತ್ತು-ದಣಿದು ೧೨-೧೫೨
ಆಸನಂದೋಱು-ಉಪೇಕ್ಷೆಯನ್ನು ತೋರು ೮-೨೦
ಆಸನ್ನ-ಹತ್ತಿರ ೭-೬೪
ಆಸನ-ಆರು ಗುಣಗಳಲ್ಲಿ ಒಂದು
ಆಸವ-ಮಧ್ಯ ೪-೬೫
ಆಸ್ತರಣ-ಚಾಪೆ, ಹಾಸಿಗೆ ೧೨-೫೨ ವ
ಆಸಾರ-ಸುರಿಮಳೆ ೧೦-೮೬
ಆಸ್ಫಾಳನ-ತಟ್ಟುವುದು ೨-೩೯ ವ
ಆಸುಕರ-ತೀವ್ರತೆ ೧-೬೨ ಅತಿಶಯ, ೧೧-೫೭
ಆಸ್ಫೋಟಿಸು-ತೋಳನ್ನು ತಟ್ಟಿ ಶಬ್ದಮಾಡು ೯-೯೦ ವ
ಆಹತಿ-ಹೊಡೆತ, ಪೆಟ್ಟು ೧-೧೪೬
ಆಹುತಿ-ಹವಿಸ್ಸು ೬-೩೫
ಆಹ್ವಾನ-ಕರೆಯುವಿಕೆ ೧-೮೯
ಆಳಂ-ಹೆಚ್ಚಾಗಿ ೫-೩೮
ಆಳಜಾಳ-ಮಿಥ್ಯಾಜಾಲ, ನಿಸ್ಸಾರ, ಸುಳ್ಳು ಬಲೆ, ೧೨-೬೮
ಆಳವಾಳ-ಗಿಡಗಳ ಪಾತಿ ೨-೧೬
ಆಳಾಪ-ಸಂಭಾಷಣೆ ೯-೬ ವ
ಆಳೆಸು-ಮುಳುಗಿಸು ೪-೧೭
ಆಳ್ವೆಸ-ಸೇವಾವೃತ್ತಿ ೯-೭, ೧೧-೫
ಆಳ್ವೇಲಿ-ಮನುಷ್ಯರೇ ಬೇಲಿ ೫-೮೧

ಇ

ಇಕ್ಕು-ಬೀಸು ೪-೮೫ ಬೀಳಿಸು ೮-೨೨
ಇಕ್ಕುಂಗೂಳ್-ಹಾಕುವ ಅನ್ನ ೮-೭೧
ಇಕ್ಷುಪುಷ್ಪ-ಕಬ್ಬಿನ ಹೂವು, ಸೂಲಂಗಿ ೧-೧೧೭
ಇಂಚರ-ಇನಿದಾದ ಸ್ವರ ೧೪-೩೦ವ
ಇಂಚೆ-ಹಿಂಸೆ ೮-೫೧
ಇಟ್ಟಳ-ಮನೋಹರ ೬-೯, ೭-೧೧
ಇಟ್ಟಿ-ಈಟಿ ೧೦-೯೪
ಇಟ್ಟೆಡೆ-ಒತ್ತಾದ ಸ್ಥಳ ೭-೮೬
ಇಡಿ-ತುರುಕು ೨-೩೯ ವ
ಇಡುಮುಡುಕು-ವಿಶೇಷ ಶಬ್ದಮಾಡು ೧೨-೮೨
ಇಡುವಗೆ-ಬದ್ಧವೈರ ೧೩-೧೮
ಇಡುವಿಟ್ಟಿ-ಇಡುವ ಈಟಿ ೧೨-೬೦ ವ
ಇಡುವು-ರಾಶಿ ೧೨-೧೫೮ ವ, ೧೩-೫೩ವ
ಇಂಡೆ-ರಾಶಿ ೧೧-೫೮, ೮೯, ೧೨-೧೭
ಇಂದ್ರಗೋಪ-ಮಿಣುಕುಹುಳು ೭-೨೪
ಇಂದ್ರಾಣಿ-ಶಚಿ ೩-೬೯
ಇಂದಿಂದಿರ-ದುಂಬಿ ೯-೯೭
ಇದಿರ್ಚು-ಎದುರಿಸು ೧೦-೬೪, ೧೩-೯೪
ಇಂದೋಳ-ದುಂಬಿ ೫-೧೯
ಇಧ್ಮ-ಸಮಿತ್ತು, ಸೌದೆ ೪-೫೯
ಇನ-ಸೂರ್ಯ ೧-೯೧
ಇನಜ-ಯಮ ೧-೧೨೧
ಇನ್ನವು-ಇಂಥವು ೬-೫೩
ಇನಿಸು-ಇಷ್ಟು ೮-೧೩
ಇನ್ನುಣಿಸು-ರುಚಿಯಾದ ಊಟ ೫-೭೧
ಇಂಬು- ಆಶ್ರಯ ೧೨-೨
ಇಂಬೆಳಸು - ಇಂಪಾದ ಬೆಳೆ ೧-೫೪
ಇಭ್ಯ-ಆನೆಗಳ ಗುಂಪು ೧-೧೭೧
ಇಮ್ಮಾವು-ರುಚಿಯಾದ ಮಾವು ೪-೭೫

ಈ



ಉ

ಉಣಿಸು-ಊಟ ೩-೨೬ ವ
ಉಣ್ಮು-ಉಬ್ಬು ೨-೧೨
ಉಣ್ಮುಪೊಣ್ಮು ೪-೧೦೮
ಉತ್ಕಚ-ಮೇಲಕ್ಕೆದ್ದಿರುವ ಕೂದಲುಳ್ಳ ೧೧-೮
ಉತ್ಕಂಠ-ಗಟ್ಟಿಯಾದ ಧ್ವನಿ
ಉತ್ಕಂಠಿತ-ಕುತೂಹಲದಿಂದ ಕೂಡಿದ ೭-೭೧ ವ
ಉತ್ಕರ್ಷತೆ-ಉತ್ಸಾಹ ೧೩-೯೦ ವ
ಉತ್ತ-ಬೇರೊಂದು ಕಡೆ ೧-೭೫
ಉತ್ತಮಾಂಗ-ತಲೆ ೭-೫೯ ವ
ಉತ್ತರ-ಅಭಿವೃದ್ಧಿ ೩-೨ ವ ಉತ್ತರೋತ್ತರ ೧-೮೬ ೬-೩೮
ಉತ್ತರಾಪಥ-ಉತ್ತರದೇಶ ೧-೬೦ ವ, ೩-೩೧ ವ
ಉತ್ತರಿಸು-ದಾಟು, ಪೂರ್ಣಮಾಡು ೮-೪೭
ಉತ್ತಂಸಿತ-ಒಡವೆಯಾದ೧೩-೮೨ ವ
ಉತ್ತಂಚ-ಗಟ್ಟಿಯಾಗಿ ೧೪-೨೨
ಉತ್ತಾಯಕನಾಗು-ಪ್ರತಿಭಟಿಸು ೧೧-೪ ವ ೧೨-೧೧೮ ವ
ಉತ್ಪಾತ-ಅಪಶಕುನ, ಪ್ರಳಯ, ೧-೧೩೨ ವ ೧೧-೧೧೭ ವ
ಉತ್ಪಾದಯತಿ-ಹುಟ್ಟಿಸುತ್ತದೆ ೩-೪ ವ
ಉತ್ಥಿತ-ಎದ್ದ ೧-೧೦೫, ೩-೫೭,
ಉತ್ತುಂಗ-ಎತ್ತರವಾದ, ೩-೧೮ ವ
ಉಂತೆ-ನಿಷ್ಪ್ರಯೋಜನವಾಗಿ, ವ್ಯರ್ಥವಾಗಿ ೨-೮೬
ಉತ್ಪ್ರೇಂಖತ್-ಮೇಲೆ ತೇಲಾಡುತ್ತಿರುವ ೪-೨೪
ಉತ್ಸೇಧ-ಎತ್ತರವಾದ ೧೧-೧೧೭ ವ
ಉದಗ್ರ-ಎತ್ತರ, ಶ್ರೇಷ್ಠ ೧-೫೮, ೧೩೧
ಉದಧಿ-ಸಮುದ್ರ ೧-೫೧ ವ
ಉದಬಿಂದು-ನೀರಿನ ಹನಿ ೧-೧೩೯ ವ
ಉದಯ-ಅಭಿವೃದ್ಧಿ ೨-೯೩
ಉದಶ್ರು-ಉಕ್ಕಿಬರುವ ಕಣ್ಣೀರು ೧೨-೧೩೪
ಉದ್ಘ-ಪ್ರಶಸ್ತವಾದ ೪-೭೧
ಉದ್ದಳನ-ಸೀಳುವಿಕೆ ೧-೫೧
ಉದ್ಧತ-ಶ್ರೇಷ್ಠ ೬-೩೦ ವ, ೧೦-೨೦
ಉದ್ಯತ್-ಮೇಲಕ್ಕೆ ಎದ್ದಿರುವ ೧-೧೧೫
ಉದ್ಯತ-ಪ್ರಯತ್ನಶಾಲಿ ೧೦-೧೦
ಉದ್ಯಮ-ಪ್ರಯತ್ನ-ಉದ್ಯೋಗ ೧೨-೪೭
ಉದಾತ್ತ-ಶ್ರೇಷ್ಠ ೧-೧,೯
ಉದ್ಗಾತೃ-ಸಾಮವೇದವನ್ನು ಗಾನಮಾಡುವ ಋತ್ವಿಕ್ ೬-೩೩ ವ
ಉದ್ಘಾಸಿ-ಉತ್ತಮವಾದ ಕತ್ತಿ ೧-೫೧
ಉದ್ದಾನಿ-ಅತಿಶಯ, ಆಧಿಕ್ಯ ೧-೧೭, ೪-೫೮
ಉದ್ಭ್ರಾಂತ-ತೇರನ್ನು ನಡೆಸುವ ಒಂದು ರೀತಿ ೧೩-೩೦ ವ
ಉದಿತೋದಿತ-ಅಭಿವೃದ್ಧಿಯುಳ್ಳವನು ೧-೧೪೧, ೨-೯೩
ಉದಿರ್ಪು-ನಡುಗಿಸು, ಉದುರಿಸು ೬-೩೨ವ
ಉದ್ಧಿತಾಪ್ರತಿಮಹಿತರ್ ಮಾಡಿ-? ೬-೩೦ವ
(ಅಪಪಾಠ) ಉದ್ಧತಪ್ರತಿರೋಪಿತರ್?
ಉತ್ಪಾತ ಪ್ರತಿರೋಪಿತರ್ ?
ಉದೀರ್ಣ-ಹೆಚ್ಚಾದ ೧೨-೧೧೬ ವ
ಉರ್ದು-ಉಜ್ಜು, ತಿಕ್ಕು ೮-೧೫
ಉದ್ದೃಪ್ತ-ಗರ್ವದಿಂದ ಕೂಡಿದ ೧-೧೪೯
ಉದ್ವೃತ್ತ-ದುರುಳ, ತುಂಟ, ೧-೧೪೬, ೪-೧೮ ಗುಂಡಾಗಿರುವ ೪-೭೪
ಉದ್ಭೇದ-ಒಡೆಯುವಿಕೆ ೪-೨೨
ಉನ್ಮೀಲಿತ-ಅರಳಿರುವ, ತೆರೆದ ೧-೬೮, ೨-೯೩ ವ
ಉಪಕಂಠ-ಸಮೀಪ, ತಪ್ಪಲು ೧-೧೯೫ವ
ಉಪಚಿತ-ಹೆಚ್ಚಾದ ೧೧-೬೯
ಉಪನೀತ-ತರಲ್ಪಟ್ಟ ೧೩-೨ ವ
ಉಪರೋಧ-ಬಲಾತ್ಕಾರ, ಹಿಂಸೆ ೪-೯೯ ವ, ೮-೬೫ ವ

ಉಪಲಕ್ಷಿತ-ಗುರುತುಮಾಡಲ್ಪಟ್ಟ ೧೨-೩೦ವ
ಉಪ್ಪಟ-ಬಟ್ಟೆ, ವಸ್ತ್ರ ೧೪-೫೫
ಉಪ್ಪವಡಿಸು-ನಿದ್ರೆಯಿಂದ ಏಳು ೯-೧೧
ಉಪಾಂತ-ಸಮೀಪ ೧-೯೮
ಉಪಾರೂಢ-ಹತ್ತಿದ ೧೦-೫೨ ವ
ಉಪಾಲಂಭ-ತಿರಸ್ಕಾರ ೩-೭
ಉಪಾಂಶುವಧೆ-ರಹಸ್ಯವಾಗಿ ಕೊಲ್ಲುವುದು ೨-೯೦ ವ
ಉಪಾಶ್ರಯ-ಅವಲಂಬನ ೯-೩೫
ಉಬ್ಬದಿಗಂ-ಅತಿಶಯ ೫-೧೫
ಉಮ್ಮನೆ-ಸುಮ್ಮನೆ ೨-೮೨ ವ, ೭-೫ ವ, ೪-೩೪ ವ, ೧೨-೯೧ ವ
ಉಮ್ಮಚ್ಚ-ಕೋಪ ೧೧-೧೫೦ ವ, ೧೨-೫೪, ೧೨-೯೧ ವ, ೧೨-೧೭೬ ವ
ಉಮ್ಮಳ-ದುಃಖ ೧-೩೭
ಉಮ್ಮಳಿಕೆ ೪-೬೪ ವ, ೪-೬೯ ವ
ಉಮ್ಮಳಿಸು ೩-೬೪, ೧೦-೬೫, ೧೨-೧೪೨ ವ
ಉರ್ಮೆ-ಆಧಿಕ್ಯ ೧-೧೦೬
ಉಯ್-ಕರೆದುಕೊಂಡು ಹೋಗು ೭-೬೯
ಉಯ್ಯಲ್-ಉಯ್ಯಾಲೆ ೨-೧೨
ಉರಸ್ಕಂ-ಎದೆಯುಳ್ಳವನು ೧೪-೧
ಉರಿಗೇಸಂ-ಉರಿಯದಾಗಿರುವ ಕೂದಲು ೩-೨೦
ಉರಿವುರಿ-ಉರಿಯ ಹುರಿ ೧-೭೫
ಉರುಳ್-ಉರುಳುವುದು ೯-೫೭
ಉರುಳಿ-ಉಂಡೆ ೨-೩೯ ವ, ೫-೩, ೫-೭೦, ೬-೩ ವ, ೬, ೮-೪೨, ೧೨-೩೧ ವ, ೧೩-೮೪
ಉರ್ಕು-ಉಕ್ಕು, ಉಬ್ಬು ೭-೯, ೧೨-೧೭೬
ಉರ್ಚು-ತಿವಿ, ೧-೧೪೨, ೫-೪೪, ೭-೧೪, ೮-೨, ೧೦-೮೦
ಉರೋದಘ್ನ-ಎಡೆಮುಳುಗುವುದು ೫-೬೨
ಉರ್ವು-ಉಬ್ಬು ೧೨-೧೫೬
ಉಱದೆ-ಲಕ್ಷ್ಯಮಾಡದೆ ೨-೭೮, ೫-೨೧ ೬-೩೦, ೧೨-೧
ಉಱದವರ್-ಲಕ್ಷ್ಯವಿಲ್ಲದವರು ೧೦-೧೧
ಉಱಿಮಿಕೆ-ಆಧಿಕ್ಯ ೧೨-೧೪೭
ಉಱು-ಹೆಚ್ಚಾಗು ೬-೭೧ವ ಹೊಂದಿಕೆಯಾಗು ೧೨-೧೯೭, ೧೩-೨೩
ಉಱುಗು-೬-೭೩
ಉಲ್ಕ-ಕೊಳ್ಳಿ ೭-೧೨
ಉಲಿ-ಶಬ್ದ ೫-೪೭ ವ
ಉಲ್ಲುಳಿತ-ಚಲಿಸುತ್ತಿರುವ ೧-೫೯
ಉಷ್ಣೀಷ-ಪಾಗು, ತಲೆಯ ರುಮಾಲು ೧೧-೩೯
ಉಳ್-ಒಳಗು ೯-೨೪
ಉಳ್ಕ ೧-೧೧೧ವ
ಉಳಿ-ಅಡಗಿಕೊಳ್ ೧೩-೭೫
ಉಳಿಸೆಂಡು-ಬಚ್ಚಿಟ್ಟ ಚೆಂಡಿನ ಆಟ ೨-೩೦
ಉಳ್ಳಿಮುಳ್ಳು-ಮುಳುಗು ೭-೬೧
ಉಳ್ಳು-ಪ್ರಕಾಶಿಸು ೬-೫೯
ಉಳ್ಳುಡೆ-ಒಳಉಡುಪು ೨-೪೧
ಉಟುಗಿಸು-ಒಲಿಸು ೩-೭೩
ಉಟ್ಗು-ಪ್ರೀತಿಮಾಡು, ಸ್ನೇಹಮಾಡು ೪-೪೦ ವ
ಉಳ್ಳೊಳ-ಗದ್ದಲ, ಶಬ್ದ ೫-೪೭ ವ

ಊ

ಊಡು-ಊಟಮಾಡಿಸು ೩-೪ ವ, ೫-೧೬ ವ, ೫-೭೪, ೫-೭೮
ಊನತ್ವ-ನ್ಯೂನತೆ ೬-೧೭
ಊರು-ತೊಡೆ ೧-೧೦೫
ಊರ್ಮಿ-ತೆರೆ, ಅಲೆ, ೪-೨೪
ಊರ್ಧ್ವಗಾಂಶು-ಮೇಲಕ್ಕೆ ಏಳುವ ಕಿರಣ ೪-೨೨
ಊಳ್-ಕೂಗಿಕೊಳ್ಳು, ಶಬ್ದಮಾಡು ೩-೯, ೧೩-೫೬ ವ

## ಋ

ಋಚ-ಮಂತ್ರ, ಋಕ್ಕು, ೫-೩೦ ವ
ಋಚ-೩-೭೬ ವ
ಋತ-ಸತ್ಯ ೧೨-೯೩
ಋತ್ವಿಜ-ಯಜ್ಞದಲ್ಲಿ ಯಜಮಾನನಿಗೆ ಸಹಾಯ ಮಾಡುವವನು ೬-೩೩ವ
ಋದ್ಧ-ವೃದ್ಧಿಹೊಂದಿದ, ದೊಡ್ಡದಾದ ೪-೮೦

## ಎ

ಎಕ್ಕತುಳ-ಸಮಾನತೆ ೧೨-೭೬ ವ
ಎಕ್ಕಭಾಗಾ-ಏಕಭಾಗಾ (ಸಂ) ಒಂದೇ ಸಾಲು ೯-೪೬
ಎಕ್ಕಮದ್ದಳೆ-ಒಂದು ಜಾತಿಯ ತಮಟೆ ೪-೮೭
ಎಕ್ಕವಡ-ಎಕ್ಕಡ, ಪಾದರಕ್ಷೆ ೫-೩೬ರ
ಎಕ್ಕಸಕ್ಕತನ-ಅಪಹಾಸ್ಯ ೧೧-೧೩೭ ವ
ಎಕ್ಕಸರ-ಒಂದೆಳೆಯ ಹಾರ ೪-೮೬
ಎಕ್ಕೆ-ಒಟ್ಟಿಗೆ, ಗುಂಪು ೨-೩೭, ೬-೩೨ ವ ೭-೬, ೧೦-೮೦ ವ
ಎಕ್ಕೆಕ್ಕೆ-ಮೇಲೆಮೇಲೆ ೮-೧೦೮
ಎಕ್ಕೆವಾಱುವಾಜೆ-ಒಂದು ಹಾರು ಹಾರಿ ೧೦-೮೦ವ
ಎಗ್ಗ-ಮೂಢ ೯-೯೪ ವ, ಎಗ್ಗು ೬-೪೬
ಎಚ್ಚು-ಹೊಡೆದು ೮-೧೦೭
ಎಚ್ಚುಪಾಯ್-ಚಿಮ್ಮಿಹರಿ ೪-೧೦೮
ಎಡಂಬಡ-ಎಡವಟ್ಟಾದ ಮಾತು, ೪-೯೩, ೭-೩೫, ೯-೧೭ ವ ೧೧-೪೯
ಎಡಗಲಿಸು-ಮೀರು, ದಾಟು, ೮-೯೪ ವ ೧೨-೬೫ ವ, ೧-೪೫ ವ,
ಎಡಱ್-ಬಡತನ ೧-೯೯, ೨-೯೮, ೬-೪೦, ೯-೫, ೧೪-೧೦೪
ಎಡೆ-ಸ್ಥಳ ಸಂದರ್ಭ, ೨-೭೩, ೧೧-೧೫೧
ಎಡೆಗೊಳ್-ಮಧ್ಯೆ ಪ್ರವೇಶಿಸು ೧೧-೧೩, ೧೨-೪೩
ಎಡೆಗೋ-ನಡುವೆ ಪ್ರವೇಶಿಸು ೯-೮೭
ಎಡೆಮಡಗು-ತಡಮಾಡು ೯-೮೧
ಎಡೆವಱ-ಮಧ್ಯೆ ಶೂನ್ಯವಾಗುವುದು, ಮಧ್ಯೆ ಒಣಗಿಹೋಗುವುದು (ಎಡೆವಱಿ-ಇದರ ಕ್ರಿಯಾರೂಪ ೧೨-೮೧, ೮೨)
ಎಡೆವಱೆ-ಮಧ್ಯೆ ಹರಿದುಹೋಗು, ವಿಚ್ಛಿನ್ನವಾಗು ೧-೪೪ವ
ಎಡೆವೇೞ್ಕುಂ-ಅವಕಾಶಬೇಕು, ೩-೫೨
ಎಡೆವೋಗು-ಮಧ್ಯೆ ಪ್ರವೇಶಿಸು, ೧೧-೨೩
ಎಣೆ-ಸಮಾನ, ೧೨-೧೦೦
ಎಣ್ಬೆರಲ ಪಟ್ಟ-ಎಂಟು ಬೆರಲಷ್ಟು ಅಗಲವಾಗಿರುವ ಹಣೆಗೆ ಕಟ್ಟಿದ ಪಟ್ಟ ೧೨-೫೧ವ
ಎರ್ದೆಯಿಕ್ಕು-ಉತ್ಸಾಹಶೂನ್ಯವಾಗು, ಧೈರ್ಯಕುಗ್ಗು ೨-೩೨ ವ
ಎಮೆ-ರೆಪ್ಪೆ, ಎವೆ ೫-೯, ೪-೪೩
ಎಯ್-ಮುಳ್ಳುಹಂದಿ ೫-೪೮ ವ
ಎಯ್ತರ್-ಬರು ೪-೩೨
ಎಯ್ದೆ-ಸಂಪೂರ್ಣವಾಗಿ ೧೨-೪೮ ವ ಸುಮಂಗಲಿ ೧-೧೦೭
ಎರಡಱಿಯದ-ಮೋಸವಿಲ್ಲದ- ಕಪಟವನ್ನು ತಿಳಿಯದ ೫-೧೭ವ
ಎರಲೆ-ಜಿಂಕೆ ೩-೭
ಎರಡ್ನುಡಿ-ಎರಡು ಮಾತು, (ಬೇರೆ ಮಾತು) ೧೩-೯೧
ಎರೆ-ಯಾಚಿಸು ಬೇಡು ೨-೪೬, ೭-೯೩, ೫-೨೪
ಎಱೆ-ಆಧಿಪತ್ಯ ೪-೪೨ (ಎಱೆಯ ಒಡೆಯ) ೮-೧೮-ಸುರಿ ೫-೨೫
ಎಱಕಂಬೆತ್ತು-ಎರಕಹೊಂದಿ ೧೨-೧೯೮
ಎಱಕ-ಪ್ರೀತಿ, ೭-೭೩ ವ, ೧೨-೧೯೮
ಎಱಂಕೆ-ರೆಕ್ಕೆ ೧೦-೫೧ ವ

ಎಲರ್ಚು-ಚೇತನಗೊಳ್ಳು ೫-೧೦
ಎಲ್ವಡಗು-ಎಲಬುಮಾಂಸ ೨-೫,
೧೦-೧೦೪, ೧೧-೬೮
ಎಲೆಯಿಕ್ಕು-ಚಿಗುರು ೫-೩೭
ಎಸಕ-ಕಾರ್ಯ ೧೨೧-೭೮, ೯೮,
ಪ್ರಭಾವ ೧೧-೮೩
ಎಸಗು-ಮಾಡು ೧-೭೮
ಎಳಸು-ಆಶೆಪಡು ೧-೧೧೧, ೨-೩೦
ಎಱಲ್-ಜೋತುಬೀಳು ೩-೪೦ ವ
ಎಱ್ತರವು-ಬರುವಿಕೆ ೧೨-೮೪
ಎಳೆ-ಇಳಾ(ಸಂ) ಭೂಮಿ ೬-೧೧;
೮-೫೪;
ಎಳೆ(ಱ್ತೆ)ಗೋಣ-ಬಲಿಗಾಗಿ
ಎಳೆದುಕೊಂಡು ಬರುವ ಕೋಣ,
೧೨-೩೦
ಎಳೆವಾಱೆ-ಎಳೆಯ ಬಾಳೆ ೫-೬೧
ಎಱ್ವೋಗು-ಎದ್ದುಹೋಗು ೯-೫೮
ಎಱ್ಬಿಟ್ಟು-ಹಿಂದಟ್ಟಿ ಹೋಗು ೮-೧೦
೧೧-೭ ವ

ಏ

ಏಕಗ್ರಾಹಿ-ಒಂದೇ ಹಟ ಹಿಡಿಯುವವನು
೧೨-೨೦೫
ಏಡಿಸು-ಹೀಯಾಳಿಸು ೧೩-೫೪
ಏತೊದಳ್-ಏನುಸುಳ್ಳು ೧೩-೮೦
ಏದೊರೆ-ಯಾವುದಕ್ಕೆ ಸಮಾನ ೭-೬೫
ಏದೊರೆತು-ಯಾವ ಬಗೆಯಾದುದು
೬-೧೫
ಏಬಂಡಂ-ಏನು ಬೆಲೆ, ಏನು ಲೆಕ್ಕ ೬-೩೩
ಏಱು-ಏಟು, ಪೆಟ್ಟು, ಹೊಡೆತ, ೧-೩೩,
೨-೬೨
-ಆರೋಹಣ, ಹತ್ತುವಿಕೆ ೧೦-೧೬,
- ಗಾಯ.
ಏರ್ವೆಸನ-ಯುದ್ಧಕಾರ್ಯ ೧೧-೪೧
೧೨-೫ ವ

ಏವ-ವ್ಯಥೆ, ದುಃಖ, ೨-೮೨, ೪-೯೨
ವ, ೯-೬೯, ೧೩-೩೯ ವ, ೪೧
- ಮತ್ಸರ ೧೩-೨೯ ವ,
(ಏವಯಿಸು ೬-೭೧ ವ, ೭೪, ೮-೧೪,
೧೩-೪೩ ವ
ಏವೈಸು ೧೨-೬೧ ವ)
ಏವರ್-ಏನ್ಗೈವರ್, ಏನುಮಾಡುವರು
೫-೯೪
ಏವಾಱ್ತೆ-ಏನುಪ್ರಯೋಜನ ೧-೯೨
ಏವಿರಿದು-ಎಷ್ಟು ದೊಡ್ಡದು ೭-೩೨ ವ
ಏವೋದುದು-ಏನು ಹೋಯಿತು ೯-೫೬
ಏಸಾಡು ೪-೧೮ವ, ೧೧-೫೯
ಏಸು-ಬಾಣಪ್ರಯೋಗಮಾಡು, ಹೊಡಿ
೧೨-೧೮೫
ಏಳಾ-ಏಲಕ್ಕಿ ೪-೨೩
ಏಳಿದ-ತಿರಸ್ಕಾರ ೧-೮೩, ೧೦-೧೦೧
(ಏಳಿದಿಕ್ಕೆ ೭-೩೮
ಏಳಿಪಂತು ೧-೫೮)
ಏಱ್ಕಟ್ಟು-ವರ್ಷಗಳ ಅವಧಿಯ ಕಟ್ಟುಪಾಡು
೧೨-೧೭೮
ಏಱ್ಗೆವಾಡಿವ-ಶುದ್ಧ ಪಾಡ್ಯ, ಶುಕ್ಲ ಪ್ರಥಮೆ
೨-೩ವ, ೫-೧೫ ವ

ಒ

ಒಂದು-ಬೆರಸು ೨-೩೮, ೮-೯,
೧೩-೧೮ - ಉಂಟಾಗು ೪-೬೦
ಒಂದೆವಿಂದೆ-ಒಂದೇ ಗುಂಪು ೧೧-೧೪೬
ವ
ಒಂದೊರ್ವರ್-ಒಬ್ಬೊಬ್ಬರೂ ೯-೮ವ
ಒಕ್ಕಲ್-ಸಂಸಾರ, ಕುಟುಂಬ ೬-೭೧ ವ
೭-೩, ೯-೧೦
ಒಕ್ಕಲಿಕ್ಕು-ಬಡಿದುಹಾಕು, ನಾಶಪಡಿಸು
೮-೭೮, ೧೨-೨೧ ವ
ಒಕ್ಕು-ಹೊರಕ್ಕೆಸೆದು ೧-೬
ಒಗಸುಗಂ-ಅತಿಶಯ, ಆಶ್ಚರ್ಯ ೮-೬೭,
೧೨-೪೯

ಒಗು-ಸುರಿ, ಸ್ರವಿಸು, ೧೨-೧೧೭
ಒಗೆ-ಹುಟ್ಟು ೧-೬೦, ೨-೬೯, ೧೨-೫೨ವ
ಒಗೆತರ್ ೧-೯೪, ೨-೯
ಒಟ್ಟಜೆ-ಪರಾಕ್ರಮ ೧-೨೪, ೫-೨೯
ಒಟ್ಟೆ-ಪ್ರತಿಜ್ಞೆಮಾಡಿ ೧-೭೬ ವ
ಒಟ್ಟೆ-ಉಷ್ಟ್ರ (ಸಂ) ಒಂಟೆ ೧೦-೪
ಒಡಂಬಡಂ-ಒಪ್ಪಿಗೆ ೧-೧೩೯,
    ೩-೧೮ವ, ೮-೯೪
(ಒಡಂಬಡು ೧೦-೭೭)
ಒಡನಾಡಿ-ಜೊತೆಗಾರ ೨-೪೭ ವ
ಒಡನೋಡು-ಜೊತೆಯಲ್ಲಿಯೇ ನೋಡು
    ೪-೭೮
ಒಡಮೆ-ಪದಾರ್ಥ, ವಸ್ತು ೨-೪೬,
    ೪-೧೮ ೧-೯೫, ೩-೫೯
ಒಡರಿಸು-ಪ್ರಯತ್ನಪಡು, ೯-೭೮,
    ೯-೪೬
ಒಡ್ಡಣ-ಸೈನ್ಯ ೧೦-೫೩ ಯುದ್ಧರಂಗ
    ೧೧-೬
ಒಡ್ಡಳಿ-ಕೆದರಿಹೋಗು ೩-೧೬
ಒಡ್ಡು-ಸೈನ್ಯ, ೨-೬೦, ೬-೩೧ ವ
    ೧೦-೭೪, ೧೨-೧೭೩
ಒಡೆಯ-ಯಜಮಾನ ೧೩-೨೧
ಒಡ್ಡೋಲಗ-ಸಭೆ ೧೪-೨೧ ವ
ಒಣರ್-ಭಾವಿಸು ೧೨-೨೭
(ಒಣರ ೬-೫೧)
ಒತ್ತಂಬ-ಬಲಾತ್ಕಾರ ೨-೪೭ ವ, ೧೧-೭೯,
    ೧೩-೬೩ ವ, ೧೦-೪ವ
ಒತ್ತರಿಸು-ತಳ್ಳು, ಮೀರು ೧೦-೨೮
(ಒತ್ತರ-೫-೪೬ವ ೮-೯೯ವ)
ಒತ್ತೆ-ಪ್ರಣದ್ರವ್ಯ ೭-೩ವ
(ಒತ್ತೆಹೋಗು ೮-೫)
ಒದವು-ಆಧಿಕ್ಯ ೫-೧೧
ಒನಲ್-ಕೋಪ ೮-೨೧
ಒನಲಿಸು ೪-೬೨, ೬೭ ವ, ೭೪ ವ,
    ೬-೭೨ವ, ೭-೨೫ ವ, ೪೬

ಒರ್ಮೊದಲ್-ತಟ್ಟನೆ ೨-೨೪
ಒಯ್ಯಗೆ-ಸಾವಕಾಶವಾಗಿ ೮-೧೬
(ಒಯ್ಯನೆ ೩-೧೮)
ಒಯ್ಯನಾಗು-ಕಾಂತಿಹೀನನಾಗು ೪-೧೧೦
ಒರಂಟು-ಒರಟುತನ ೧-೮೧
(ಒರಂಟಂ ೧೨-೨೦೫ ವ)
ಒಲಿಲ್-ಪ್ರೀತಿಸು ೧-೩, ೧೧೨,
    ೪-೧೦೧
ಒಲಿವು-ಒರತೆ, ಸ್ರವಿಸುವಿಕೆ ೧-೨೮
ಒಲಿ-ಸ್ರವಿಸು ೧-೧೦೫, ೨-೨೯
ಕತ್ತಿಯ ಹೊದಿಕೆ-ಲೋಹದ ಚೀಲ
ಒಲವರ-ಪ್ರೀತಿ ೫-೪೨, ೬-೪೪, ೪೫
ಒಲ್ಲಣಿಗೆ-ಒದ್ದೆಯ ಬಟ್ಟೆ ೧೨-೪೮ ವ,
    ೨೪೬ ವ
ಒಲಿ-ಪ್ರೀತಿಸು ಆಶೆಪಡು, ೧೨-೪೭, ೫೯ವ
ಒವಜ-ಉಪಾಧ್ಯಾಯ (ಸಂ) ೨-೫೩
    ೧೧-೬೧
(ಒವಜುಗೆಯ್ ೧೨-೩)
ಒರ್ವಾಗ-ಒಂದು ಭಾಗ ೧೨-೩
ಒಸಗೆ-ಸಂತೋಷ ೧-೧೩೯
ಒಸಗೆವಾತು-ಶುಭವಾರ್ತೆ ೧೩-೧೦೫ ವ
    ೧೪-೩೫
ಒಸೆ-ಸಂತೋಷಪಡು, ೧-೯೬, ೬-೨೬,
ಒಳಕೊಳ್-ಸೇರಿಸಿಕೊ ೨-೧೭
ಒಳಗು-ಮನಸ್ಸು ೧೨-೨೮
ಒಳಜು-ಅರಚು-ಕಿರಚು, ೫-೯೧, ೯೨,
    ೧-೧೩೨
ಒಳಸೋರ್-ಧೈರ್ಯಗುಂದು ೮೦-೯೮
ಒಳ್ಳಿ-ನೀರುಹಾವು ೧೦-೪, ೧೨-೪೧
ಒಳ್ಮಾಡ ೪-೧೦
ಒಳ್ಗುಡಿ-ಒಳ್ಳೆಯ ಬಾವುಟ ೧೪-೧೫
ಒಳ್ಗೆಸಜು ೭-೪೧
ಒಟ್ಟು-ಪ್ರವಹಿಸು ೧-೫೨
    ಪ್ರವಾಹ ೧-೯೨, ೨-೨೮

## ಓ

ಓಕುಳಿ-ವಸಂತೋತ್ಸವ ೧೨-೪೭
ಓಗಡಿಸು-ಜುಗುಪ್ಸೆಪಡು ೨-೨೮
ಕಳೆದುಹೋಗು ೭-೬೯, ೧೧-೪೭
ಓಗರ-ಅನ್ನ ೫-೩೦ (ಓಗರಗಂಪು)
ಓಗರವೂ-ಮಿಶ್ರಪುಷ್ಪ ೧೧-೮೧
ಓಜ-ಉಪಾಧ್ಯಾಯ ೧-೪, ೨-೩೪
ಓಜೆ-ರೀತಿ, ಕ್ರಮ ೩-೪೮ ವ ೩-೭೫ ವ
ಓಪ-ರಕ್ಷಕ, ಒಡೆಯ, ಪತಿ ೨-೨೦, ೪-೧೦೨
ಓಪಳ್-ಪ್ರಿಯೆ, ಹೆಂಡತಿ, ೪-೩೬, ೭೮
ಓಡ-ದೋಣಿ, ತೆಪ್ಪ, ೧-೬೮
ಓಡು-ಹೋಳು, ಭಾಗ ೧೧-೨
ಓತು-ಪ್ರೀತಿಸಿ ೧-೧೧೨
ಓರಂತೆ-ಏಕಪ್ರಕಾರವಾಗಿ ೧-೬೫, ೯೮
ಓರನ್ನರ್-ಒಬ್ಬೊಬ್ಬರೂ ೯-೧೨ ೧೦-೧೨
ಓರೊಂದೆ-ಒಂದೊಂದೆ ೧೧-೬೨
ಓಲಗ-ಸಭೆ ೩-೮೦
ಓಲೆವಾಗ್ಯ-ಓಲೆಯ ಭಾಗ್ಯ, ಮುತ್ತೈದೆತನ, ಸೌಮಂಗಲ್ಯ ೧೦-೪೫
ಓವರಿ-ಕೋಣೆ ೩-೪ ವ
ಓವು-ಕಾಪಾಡು ೧-೫೫
ಓಸರಿಸು-ಓರೆಮಾಡು ೨-೧೭
- ಓರೆಯಾಗು ೩-೨೯ ವ
ಓಳಿ-ಸಾಲು, ಗುಂಪು ೧-೧೦, ೩-೨೨, ೪೦, ೪೩, ೫-೧೯, ೧೧-೧೫೫
(ಓಳಿಕೊಳ್ ೧೪-೨೩
ಓಳಿವಡು ೧೪-೧೫)

## ಔ

ಔರ್ವಾನಳಂ-ಬಡಬಾಗ್ನಿ ೧೨-೩೫

## ಕ

ಕಕ್ಕಡೆ-ಮುಳ್ಳುಗೋಲು ೧೦-೭೬, ೯೪ ೧೧-೨
ಕಕ್ಕಂಬು-ಒಂದು ಬಾಣವಿಶೇಷ ೧೩-೩೯
ಕಕ್ಕರ-ಒಂದು ಜಾತಿಯ ಮದ್ಯ (ಹೆಂಡ) ೪-೮೮ವ
ಕಕ್ಕರಸಂಜೆ (ಕಕ್ಕಸರಂಜೆ?) > ಕಕ್ಕ-ಅರಸರ್ + ಅಂಜೆ ಕಕ್ಕರರ್ + ಅಂಜೆ = ಕರ್ಕರರಾದವರು (ಕಠಿಣರಾದವರು) ಹೆದರಲು ೧೧-೮೫
ಕಕ್ಕರಗೆಯ್ತ-ಕರ್ಕಶಕಾರ್ಯ-ಕಠಿಣವಾದ ಕೆಲಸ ೪-೮೮ವ
ಕರ್ಕಡೆ>ಕಕ್ಕಡೆ-ಮುಳ್ಳುಗೋಲು ೫-೫೧
ಕಕ್ಷ-ಪಕ್ಕ ೧೨-೧೦೯ ವ
ಕಂಕಣ-ಬಳೆ ೨-೧೬
ಕಕುಭ-ಮತ್ತಿಯ ಗಿಡ ೫-೮೦
ಕಕ್ಕುಂಬ-ಬೇಟೆಯ ಸಾಮಗ್ರಿ? ೫-೪, ೪೭ವ
ಕರ್ಕೇತನ-ಒಂದು ಜಾತಿಯ ರತ್ನ ೩-೭೪ಪ
ಕರ್ಗು-ಕಪ್ಪಾಗು ೪-೭೪
ಕಚ-ಕೂದಲು ೧೩-೫೫ವ
ಕರ್ಚರ-ದೇಶದ ಒಂದು ಭಾಗ ೧೧-೧೩೬
ಕರ್ಚು-ತೊಳೆ, ಶುದ್ಧಿಮಾಡು ೬-೧೧ ವ ೭-೭೧, ೧೧-೫೧
ಕಚ್ಚೆಯೊಳಿಡು-ಅಧೀನಮಾಡಿಕೊ ೪-೩೮
ಕಂಜ-ಕಮಲ ೮-೩೮
ಕಟ-ಕಪೋಲ, ಕೆನ್ನೆ ೧-೫೭ ವ, ೯-೯೭
ಕಟಕ-ಬೆಟ್ಟದ ತಪ್ಪಲು ೪-೪೯ವ, ೧೪-೩೪
-ಪಾಳೆಯ ೧೦-೪೯
- ಸೈನ್ಯ ೧೧-೧೦೯ ವ
ಕಟ್ಟಳೆ-ತೂಕದ ಬೊಟ್ಟು ೬-೩೯
ಕಂಟಕ-ಮುಳ್ಳು, ತೊಂದರೆಯನ್ನುಂಟು ಮಾಡುವವನು ೪-೧೯
ಕಟಾಕ್ಷ-ಕಡೆಗಣ್ಣಿನ ನೋಟ ೭-೮ ವ
ಕಟ್ಟಾಯ-ಹೆಚ್ಚಿನ ಪರಾಕ್ರಮ ೧೨-೩೮
ಕಟಿ-ಸೊಂಟ, ನಡು ೨-೩೯ ವ ೩-೩೧ವ

ಕಟಿಸೂತ್ರ-ಉಡಿದಾರ ೩-೪೫
ಕಟು-ಖಾರ ೪-೮೮
ಕಟುಸೀಧು-ಒಂದುಜಾತಿಯ ಮದ್ಯ
೪-೮೮
ಕಟ್ಟೆಗಟ್ಟು- ಏರಿಯನ್ನು ಹಾಕು ೩-೭೦
ಕಂಠಿಕಾ-ಹಾರ ೧-೬೮ ವ
ಕಡಕು-ಕಲ್ಲಿನ ಚೂರು ೩-೯
ಕಡವು-ಒಂದು ಜಾತಿಯ ಜಿಂಕೆ ೧-೪೮ವ
ಕದಂಬ(ಸಂ) ಕಡಹದ ಹೂವು
೭-೬೯
ಕಡಂಗು-ಉತ್ಸಾಹಪಡು ೬-೩೨, ೮-೩೫
೮-೯೦, ೯-೧೬, ೪೯, ೫೪
೧೧-೩೭
ಕಡ್ಡ-ಮತ್ಸರ, ದ್ವೇಷ ೧೨-೧೦೩ವ
ಕಡ್ಡವಣೆ-ಬರಸೆಳೆದು ? ೪-೧೭
ಕಡ್ಡವಾರ ೩-೨೬ ವ
ಕಂಡಪಟ-ಕಾಂಡಪಟ (ಸಂ) ತೆರೆ, ಪರದೆ
೫-೪೭ ವ
ಕಂಡರಿಸು-ಕೊರೆ, ಕೆತ್ತನೆಯ ಕೆಲಸ ಮಾಡು
೫-೧೬
ಕಡಿತಲೆ-ಕತ್ತಿ ೩-೫೫ ವ ೧೦-೮೦ ವ
ಕಡುಕೆಯ್-ತೀವ್ರವಾಗು, ದುಡುಕು,
೯-೫೦, ೧೨-೪೦
ಕಡುಪು-ಪರಾಕ್ರಮ, ಶೌರ್ಯ, ೩-೧೮,
೧೦-೧೨೩
ಕಡುವತ್ತೆಗ-ಅತಿಶಯವಾದ
ಸಾಮರ್ಥ್ಯವುಳ್ಳವನು ೧೦-೭೩
ಕಡುವಿಲ್ಲರ್-ಉತ್ತಮ ಬಿಲ್ಗಾರರು
೧೦-೭೨
ಕಡ್ಡುವಂದ-ಗಡ್ಡಬಂದ, ಉತ್ಸಾಹಗೊಂಡ
೩-೩೧ ವ, ೩-೬೧
ಕಡೆಗಣಿಸು-ಅಲಕ್ಷ್ಯಮಾಡು ೭-೩೭
ಕಣಯ-ಆಯುಧವಿಶೇಷ ೧೨-೧೧೮
ಕಣ್ಣಪಾಪೆ-ಕಣ್ಣಿನ ಬೊಂಬೆ ೪-೬೯ ವ
ಕಣ್ಬದಿಗರ್-ಮೋಸಗಾರರು ೮-೭೬, ೮೫
ಕಣ್ಮಲೆ-ಮನಸ್ಸಿಗೆ ಹೊಳೆಯುವುದು
೭-೫೫, ೯-೩೯
ಕರ್ಣಧಾರ-ಹಡಗು ನಡಸುವವನು
೧೨-೫೦
ಕಣ್ಕಾಪು-ಕಣ್ಣಿನ ಕಾವಲು, ೯-೪ವ
ಕಣೆ-ಗಣೆ ೧-೨೮
ಕಣ್ಗೆಡು-ಭಯಪಡು, ಹೆದರು ೭-೪ ವ
ಕಣ್ಗೆಡಱು-ಕಣ್ಣಿಗೆ ಅಡ್ಡವಾಗು ೧೩-೯೯
ಕಣ್ಗೆತ್ತು-ಕಣ್ಣಿನಿಂದ ಸನ್ನೆಮಾಡು ೪-೬೧ ವ
ಕಣ್ಗೆವರು-ದೃಷ್ಟಿಗೆ ಬೀಳು ೪-೩೭
ಕಣ್ಬೇಟ-ನೋಡುವುದರಿಂದಲೇ ಉಂಟಾದ
ಪ್ರೇಮ, ೪-೧೫ ವ, ೫-೨೫
ಕತಿಪಯ-ಕೆಲವು ೪-೪ ವ, ೫-೩೨ ವ
ಕತ್ತಿಗೆ-ಕರ್ತಿಕಾ (ಸಂ) ಕ್ಷುತ್ರಿ ೮-೪೧ ವ
ಕಂತು-ಮನ್ಮಥ ೧-೬೬
ಕಥಕ-ಕಥೆ ಹೇಳುವವನು ೧೨-೧೦೬
ಕಥಾಭಿತ್ತಿ-ಕಥೆಯ ವಸ್ತು ೧-೫೧
ಕಥಿತ-ಹೇಳಲ್ಪಟ್ಟ, ಸೂಚಿತವಾದ
೧೨-೩೦ವ
ಕದಡು-ಕಲಕು, ಕೆಸರು, ಬದಿ, ಬಗ್ಗಡ
೫-೬೦ ವ
ಕದಳಿಕೆ-ಬಾವುಟ, ೫-೪೭ ವ
ಕದಳೀಗರ್ಭ-ಬಾಳೆಯಹೂವಿನ ಮೋತೆ
೩-೩೯ ವ
ಕದಂಪು-ಕೆನ್ನೆ ೨-೬೨ ವ
ಕದಂಬ-ಕಡಹದ ಮರ ೫-೮೦
ಕದಂಬದಂಬುಲ-ಮುದ್ದೆಯಾಗಿ
(ಉಂಡೆಯಾಗಿ) ಅಗಿದ ತಾಂಬೂಲ
೪-೧೦೭
ಕದ್ದರಣೆ-ಕದ್ದವಣೆ? ೪-೧೭ ವ
ಕಂದರ-ಗುಹೆ ೬-೩೨
ಕಂದಲ್-ಮೊಳಕೆ, ಚಿಗುರು, ೧-೭೩ ವ
ಕದುಷ್ಣ-ಸ್ವಲ್ಪ ಬಿಸಿ ೪-೬೮
ಕಂದು-ಮಾಸಲಾಗು, ಕಾಂತಿಹೀನತೆ ೪-೬೯
ಕಂದುಕ-ಚೆಂಡು ೬-೬೯ ವ

ಕೀಲಿಸು-ತಗುಲಿಕೊಳ್ಳು ೧೦-೯೯
ಕೀಟ್-ಕುದುರೆಯ ಕಡಿವಾಣ ೮-೯೪,
    ೧೦-೧೧೬ ವ
ಕೀಟಿಲ್-ಸೇವಕರಿರುವ ಸ್ಥಳ ೮-೭೧
ಕುಕಿಲ್-ಕೋಗಿಲೆಯ ಶಬ್ದ ೧-೫೮
ಕುಂಚ-ಸಣ್ಣ ಚಾಮರ,ಹುಲ್ಲಿನಿಂದ
    ಮಾಡಿದುದು ೩-೪೮ ವ ೪-೬೬ವ
ಕುಜ-ಮರ ೫-೯೧
ಕುಂಟಣಿ-ತಲೆಹಿಡುಕಿ ೪-೯೮, ೯೯ವ
ಕುಟೀರಕ-ಸಣ್ಣ ಗುಡಿಸಲು ೪-೪೭
ಕುಂಡಲ-ಕಿವಿಯ ಆಭರಣ ೧-೧
ಕುಡಲಾದ ಕೂಸು-ಕನ್ಯೆ ೩-೨೫
ಕುಡಲಿರ್ದಡಕೂಸು-ಕನ್ಯೆ ೫-೨೧
ಕುಡು-ದಾನಮಾಡು ೧-೧೧೭
ಕುಡುದಾಡೆ-ಕೋರೆಹಲ್ಲು ೬-೫೯
ಕುಂತಳ-ತಲೆಗೂದಲು ೧-೫೩, ೪-೬೯
ಕುಂತಳಿಕೆ-ಒಂದು ಜಾತಿಯ ಹಕ್ಕಿ ೪-೮೭ವ
ಕುತ್ಕೀಲ-ಪರ್ವತ ೭-೭೬, ೧೩-೯೫
ಕುದಿಪ-ಕುದಿಯುವಿಕೆ, ಮನಸ್ತಾಪ
    ೧೨-೧೫೨
ಕುದುಗುಳಿ-ಆತುರಗಾರ ೧೨-೮
ಕುನ್ನಗೆಯ್-ಮೋಟುಗೈ ೧೧-೧೦೩
ಕುನುಂಗು-ಕುಗ್ಗು ೧-೧೦೯
ಕುಪ್ಪೆ-ತಿಪ್ಪೆ, ಕಸದ ರಾಶಿ ೨-೫೦
ಕುಂಭಧ್ವಜ-ದ್ರೋಣ ೧೧-೧, ೫೬-
ಕುಂಭಸಂಭವ-ದ್ರೋಣ ೨-೪೪
ಕುಮ್ಮರಿಗಡಿ-ಕಾಡನ್ನು ಕತ್ತರಿಸು (ತಾತ್ಕಾಲದ
    ಬೇಸಾಯಕ್ಕಾಗಿ) ೧೦-೮೮
ಕುಮ್ಮು-ಗುಮ್ಮು ೪-೧೦೦
ಕುರಂಗ-ಜಿಂಕೆ ೩-೧೭
ಕುಱಿತಂ-ಅಪೇಕ್ಷಿಸಿದವನು ೧೪-೫೧
ಕುಱಿಪ-೪-೬೩ ವ
ಕುಱಿದರಿ-ಕುರಿಯನ್ನು ತರಿಯುವಂತೆ
    ಕತ್ತರಿಸು ೧೨-೨೦೫
ಕುಱಿಪು-ಗುರುತು ೧೦-೮೭
ಕುಱುಂಬ-ಕುರುಬ ೨-೯೦
ಕುಱುವಡಿ-ಸಣ್ಣಮಡಿಬಟ್ಟೆ ೫-೫೭, ೬೭
ಕುಲಧನ-ಪಿತ್ರಾರ್ಜಿತ ೬-೭೨
ಕುಲಾಲ-ಕುಂಬಾರ ೪-೨೭
ಕುಲಪಾಂಸುಲ-ಕುಲಗೇಡಿ ೭-೫೭
ಕುವಲಯ-ಕನ್ನೈದಿಲೆ ೫-೬೩, ೯-೩೭
    ಭೂಮಂಡಲ ೯-೩೭
ಕುಶಾಗ್ರ-ದರ್ಭೆಯ ತುದಿ, ಸೂಕ್ಷ್ಮ ೨-೩೪
ಕುಶೇಶಯ-ಕಮಲ ೪-೪೭
ಕುಸುರಿ-ಬೆಡಗು, ಚಾತುರ್ಯ ೪-೭೨
ಕುಹರ-ಬಿಲ, ಗುಹೆ ೪-೪೯ ವ
ಕುಳಮಂದಿರ-ತವರುಮನೆ ೨-೩೭
ಕುಳಿಕೆ-ಕುಣಿಕೆ, ಗಂಟು, ೧-೧೪೩
ಕುಳಿರ್-ತಂಪು ೫-೬ ವ
ಕುಳಿರ್ ಕೋಟ್ಟಿ-ತಣ್ಣಗೆ ಕೊರೆಯುತ್ತಿರುವ
    ೫-೬ ವ
ಕುಟೆಗೊಳ್-ಭದ್ರವಾಗು ೭-೨೩
ಕುಳುಂಪೆ-ನೀರು ನಿಂತಿರುವ ಹಳ್ಳ
    ೧೧-೧೩ ವ, ೧೩೬ ವ
ಕ್ಷುಭಿತ-ಕಲಕಿದ ೪-೨೫
ಕೂಕಿಡು-ಮೇಲಕ್ಕೆ ನೆಗೆ ೪-೯೦
ಕೂಕಿಱಿ-ಆರ್ಭಟಿಸು ೮-೯೩, ೧೦-೭೩,
    ೧೨-೫೮ ವ
ಕೂಂಕು-ತಳ್ಳು ೧-೧೦೫ ವ
ಕೂಜತ್-ಧ್ವನಿಮಾಡುತ್ತಿರುವ ೮-೩೭ ವ
ಕೂಟ-ಶಿಖರ, ತುದಿ ೪-೧೩, ೧೪-೩
ಕೂಟಕುಳಿ-ಸೋಮಾರಿಗಳ ಗುಂಪು ೩-೬೫
ಕೂಪ-ಬಾವಿ ೨-೫೧
ಕೂಪಾರ-ಸಮುದ್ರ ೮-೯೭, ೧೪-೧
ಕೂರ್ಪು-ಹರಿತ ೨-೨೩ ವ
ಕೂರ್ಮ-ಆಮೆ ೨-೩೯ ವ
ಕೂರ್ಮಸೆ - ಹರಿತವಾಗಿ ಮಸೆ ೨-೪೭
ಕೂರ್ಮೆ-ಪ್ರೀತಿ ೧೦-೨೮ ವ

